

ಪ್ರೊ. ಎಂ.ವಿ. ಸೀತಾರಾಮಯ್ಯ ಸಮಗ್ರ ಸಾಹಿತ್ಯ

ಸಂಪುಟ – ೬

# ಗ್ರಂಥಸಂಪಾದನೆ–ಹಸ್ತಪ್ರತಿಶಾಸ್ತ್ರ ಮತ್ತು ಶಾಸ್ತ್ರಸಾಹಿತ್ಯ ಸಂಪುಟ


ಸಂಪಾದಕರು

**ಡಾ॥ ನಾ. ಗೀತಾಚಾರ್ಯ**





ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

ಕನ್ನಡ ಭವನ, ಜೆ.ಸಿ.ರಸ್ತೆ

ಬೆಂಗಳೂರು – ೫೬೦ ೦೦೨

# ಪ್ರಕಾಶಕರ ಮಾತು

ಕನ್ನಡ ಓದುಗರಿಗೆ ಸುಲಭ ಬೆಲೆಯಲ್ಲಿ ಉತ್ತಮ ಕೃತಿಗಳು ಲಭ್ಯವಾಗಬೇಕೆನ್ನುವ ಉದ್ದೇಶದಿಂದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಜನಪ್ರಿಯ ಸಾಹಿತ್ಯ ಪ್ರಕಾಶನದಡಿ ಹಲವಾರು ಪ್ರಕಟಣಾ ಯೋಜನೆಗಳನ್ನು ಹಮ್ಮಿಕೊಂಡು ಕಾರ್ಯರೂಪಕ್ಕೆ ತರಲಾಗುತ್ತಿದೆ. ಈಗಾಗಲೇ ಇಲಾಖೆಯು ಎಂ.ಗೋಪಾಲಕೃಷ್ಣ ಅಡಿಗ, ಹುಯಿಲಗೋಳನಾರಾಯಣರಾಯ, ನಾಡೋಜ ಚೆನ್ನವೀರ ಕಣವಿ, ಕೆ.ಎಸ್.ನರಸಿಂಹಸ್ವಾಮಿ ಹೀಗೆ ಪ್ರಮುಖ ಸಾಹಿತಿಗಳ ಸಮಗ್ರ ಸಾಹಿತ್ಯ ಪ್ರಕಟಣೆಗಳನ್ನು ಹೊರತಂದಿರುತ್ತದೆ. ಪ್ರಸಕ್ತ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಪ್ರೊ.ಎಂ.ವಿ.ಸೀತಾರಾಮಯ್ಯನವರ ಜನ್ಮಶತಮಾನೋತ್ಸವದ ಅಂಗವಾಗಿ ಹಂತ ಹಂತವಾಗಿ ಅವರ ಸಮಗ್ರ ಸಾಹಿತ್ಯವನ್ನು ಪ್ರಕಟಿಸಲು ಉದ್ದೇಶಿಸಿದೆ. ಅದರಲ್ಲಿ ಈಗಾಗಲೇ ನಾಲ್ಕು ಸಂಪುಟಗಳನ್ನು ಹೊರತರಲಾಗಿದೆ. ಒಬ್ಬ ಲೇಖಕರ ಸಮಗ್ರ ಅಧ್ಯಯನ ಮಾಡಲು ಅನುಕೂಲವಾಗಬೇಕೆಂಬುದು ಈ ಯೋಜನೆಯ ಆಶಯ.

'ರಾಘವ' ಎಂಬ ಕಾವ್ಯನಾಮದಿಂದ ಖ್ಯಾತರಾಗಿದ್ದ ಪ್ರೊ. ಎಂ.ವಿ. ಸೀತಾರಾಮಯ್ಯ ಅವರು ಕವನ, ಕಥೆ, ಕಾದಂಬರಿ, ಮಕ್ಕಳ ಸಾಹಿತ್ಯ, ಗ್ರಂಥ ಸಂಪಾದನೆ, ಕಾವ್ಯಮೀಮಾಂಸೆ, ಸಂಶೋಧನೆ ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ಕೃಷಿ ಮಾಡಿದವರು. ಐದು ದಶಕಗಳ ಕಾಲ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸುವುದರ ಜೊತೆಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಸಂಸ್ಥೆಯನ್ನು ಸ್ಥಾಪಿಸಿ, ಅದರ ಮೂಲಕ ಹಸ್ತಪ್ರತಿಶಾಸ್ತ್ರ ಎಂಬ ನೂತನ ಸಂಶೋಧನಾ ಕ್ಷೇತ್ರವನ್ನು ಆರಂಭಿಸಿ ಅಳಿಸಿ ಹೋಗುತ್ತಿದ್ದ ಪ್ರಾಚೀನ ಸಾಹಿತ್ಯದ ಸಂಗ್ರಹ, ಸಂರಕ್ಷಣೆಯತ್ತ ನಾಡಿನ ಗಮನವನ್ನು ಸೆಳೆದ ಅಚ್ಚುಕಟ್ಟಾದ ಬರವಣಿಗೆಗೆ ಹೆಸರಾದ ಪ್ರೊ.ಎಂ.ವಿ.ಸೀತಾರಾಮಯ್ಯ ಅವರು ಅನನ್ಯ ಸಾಧಕರು.

ಕನ್ನಡ ಸಾಹಿತ್ಯದ ನವೋದಯ ಕಾಲದಲ್ಲಿ ಸಾಹಿತ್ಯ ರಚನೆಯನ್ನು ಆರಂಭಿಸಿ, ಹಳಗನ್ನಡ ಪರಂಪರೆ ಮತ್ತು ಆಧುನಿಕ ಕನ್ನಡ ಹಾಗೂ ಇಂಗ್ಲಿಷ್ ಸಾಹಿತ್ಯದ ಹೊಸತನಗಳನ್ನು ಮೈಗೂಡಿಸಿಕೊಂಡು ಸಾಹಿತ್ಯ ಸೃಷ್ಟಿಗೆ ತೊಡಗಿದ ಎರಡೂ ಪರಂಪರೆಗಳ ಭವ್ಯ ಸೇತು ಪ್ರೊ. ಎಂ.ವಿ.ಸೀತಾರಾಮಯ್ಯನವರು. ಸೃಜನಶೀಲ ಸಾಹಿತ್ಯದ ಜೊತೆಜೊತೆಗೆ ಸಂಶೋಧನಾತ್ಮಕ ಸಾಹಿತ್ಯವನ್ನು ಬೆಳೆಸಿದ ಅವರದು ಬಹುಮುಖ ಪ್ರತಿಭೆ. ಅಧ್ಯಯನ–ಅಧ್ಯಾಪನಗಳಲ್ಲಿ ಅಪಾರ ಅನುಭವ ಪಡೆದಿದ್ದ ಪ್ರೊ. ಎಂ.ವಿ.ಸೀತಾರಾಮಯ್ಯನವರು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಗಳಾಗಿ ಕನ್ನಡ ಭಾಷೆಯ ಸರ್ವಾಂಗೀಣ ಬೆಳವಣಿಗೆಗೆ ಗಣನೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಅವರ ಸಾಹಿತ್ಯ ಸೇವೆಯನ್ನು ಗುರುತಿಸಿ,

**Prof. M.V. Seetharamaiah Samagra Sahithya - Vol 6, Granthasampaadane-Hasthaprathishaasthra-shaasthra Saahithya** (Collection of critical nots & research Articles of prof. M.V. Seetharamaiah on the Field of Textual critisisam, Manuscriptologe and the Hole Book of Shasthra Saahithya); Edited by **Prof Na. Geethacharya** Published by **K.R. Ramakrishna**, Commissioner, Department of Kannada and Culture, Kannada Bhavan, J.C.Road, Bengaluru - 560 002.



ಮುದ್ರಿತ ವರ್ಷ : ೨೦೧೩
ಪ್ರತಿಗಳು : ೧೦೦೦
ಪುಟಗಳು : liv + ೮೭೨
ಬೆಲೆ : ರೂ. ೧೮೦.೦೦

ರಕ್ಷಾಪುಟ ವಿನ್ಯಾಸ : **ಮಯೂರ ಪ್ರಿಂಟ್ ಆ್ಯಡ್ಸ್**

ಮುದ್ರಕರು :
**ಮೆ॥ ಮಯೂರ ಪ್ರಿಂಟ್ ಆ್ಯಡ್ಸ್**
ನಂ. ೬೯, ಸುಬೇದಾರ್ ಛತ್ರಂ ರೋಡ್
ಬೆಂಗಳೂರು – ೫೬೦ ೦೨೦ ದೂ : ೨೩೩೪೨೭೨೪



# 'ಯೋಜನೆಯನ್ನು ಕುರಿತು'

## ಎಂ.ವಿ.ಸೀ. ಜನ್ಮಶತಮಾನೋತ್ಸವ–ಹಸ್ತಪ್ರತಿ ಅಧ್ಯಯನವರ್ಷ

ಪ್ರೊ. ಎಂ.ವಿ. ಸೀತಾರಾಮಯ್ಯನವರು ಕನ್ನಡ ಸಾಹಿತ್ಯದಲ್ಲಿ ಮರೆಯಲಾಗದ ಸೇವೆಯನ್ನು ಸಲ್ಲಿಸಿ 'ರಾಘವ' ಕಾವ್ಯನಾಮದ ಕವಿ, ಕಲಾವಿದ, ವಿದ್ವಾಂಸರಾಗಿ ಹೆಸರು ಮಾಡಿದ್ದಾರೆ. ಕಥೆ, ಕಾದಂಬರಿ, ಕವನ, ಲಲಿತಪ್ರಬಂಧ, ನಾಟಕ, ಮಕ್ಕಳ ಸಾಹಿತ್ಯದಂಥ ಸೃಜನಶೀಲ ಸಾಹಿತ್ಯ ಪ್ರಕಾರದಲ್ಲಿ ಪ್ರಮುಖರಾಗಿದ್ದಾರೆ. ಪಾಂಡಿತ್ಯ ಕ್ಷೇತ್ರದಲ್ಲೂ ಅಪಾರವಾದ ವಿದ್ವತ್ತನ್ನು ದಾಖಲಿಸಿರುವ ಶ್ರೇಷ್ಠದರ್ಜೆಯ ವಿದ್ವಾಂಸರಾಗಿದ್ದಾರೆ. ಕನ್ನಡದ ಮೊಟ್ಟಮೊದಲು ಕೃತಿ 'ಕವಿರಾಜಮಾರ್ಗ'ವನ್ನು ಶೀವಿಜಯಕೃತವೆಂದು ನಿರ್ಣಯಿಸಿದ ಕೀರ್ತಿ ಇವರದು, ತಿಮ್ಮಪ್ಪದಾಸರ ಕೃತಿಗಳ ಮೂಲಕ ಅದ್ವೈತ ಕೀರ್ತನ ಸಾಹಿತ್ಯವನ್ನು ಪರಿಚಯಿಸಿದ್ದಾರೆ. ಪ್ರಾಚೀನ ಕನ್ನಡ ವ್ಯಾಕರಣ, ಕನ್ನಡ ಕಾವ್ಯಮೀಮಾಂಸೆಯಂತಹ 'ಶಾಸ್ತ್ರಸಾಹಿತ್ಯ'ವನ್ನು ತಲಸ್ಪರ್ಶಿಶೋಧಿಸಿದ್ದಾರೆ.

ನಾಡು–ನುಡಿ, ಹೋರಾಟ–ಸಂಘಟನಾ ಕ್ಷೇತ್ರದಲ್ಲೂ ಎಂ.ವಿ.ಸೀ.ಯವರು ಸಾಧಕರಾಗಿದ್ದಾರೆ. ಇಳಿವಯಸ್ಸಿನಲ್ಲೂ ಅನಾರೋಗ್ಯದ ನಡುವೆಯೂ ಕನ್ನಡಪರ ಹೋರಾಟಗಳಲ್ಲಿ ಮುಂಚೂಣಿಯಲ್ಲಿರುತ್ತ ಕಾರ್ಯಕರ್ತರನ್ನು ಪ್ರೋತ್ಸಾಹಿಸುತ್ತಿದ್ದರು. ಆಚಾರ್ಯ ಬಿ.ಎಂ.ಶ್ರೀ ಅವರ ಹೆಸರಿನಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಸ್ಥಾಪಿಸಿ ನಾಡಿನ ಹೆಮ್ಮೆಯ ಸಂಶೋಧನ ಸಂಸ್ಥೆಯಾಗಿ ಕಟ್ಟಿದರು.

ಇಂತಹ ಹಲವು ಸಾಧನೆಗಳ ನೇತಾರರಾದ ಎಂ.ವಿ. ಸೀತಾರಾಮಯ್ಯನವರು ಪ್ರತಿಷ್ಠಾನದ ಮೂಲಕ 'ಹಸ್ತಪ್ರತಿಶಾಸ್ತ್ರ' ಎಂಬ ನೂತನ ಸಂಶೋಧನ ಕ್ಷೇತ್ರವನ್ನೇ ತೆರೆದು, ಅಳಿಸಿಹೋಗುತ್ತಿದ್ದ ಪ್ರಾಚೀನ ಓಲೆಗರಿ–ಕಾಗದದ ಹಸ್ತಪ್ರತಿಗಳ ಸಂಗ್ರಹ–ಸಂರಕ್ಷಣೆಯತ್ತ ನಾಡಿನ ಗಮನ ಸೆಳೆದು ಹೊಸಪಡೆ ನಿರ್ಮಾಣವಾಗಲು ಪ್ರೇರಕರಾದರು. ಇದೀಗ ಈ ಕ್ಷೇತ್ರ ಸುಪುಷ್ಟವಾಗಿ ಬೆಳೆದು 'ಹಸ್ತಪ್ರತಿ ಅಧ್ಯಯನ' ಎಂಬ ಇನ್ನೊಂದು ಸಂಶೋಧನ ಕ್ಷೇತ್ರವನ್ನು ರೂಪಿಸುತ್ತಿದೆ. ಇದನ್ನು ಇನ್ನಷ್ಟು ವ್ಯಾಪಕವಾಗಿಸುವ ಉದ್ದೇಶದಿಂದ ಎಂ.ವಿ.ಸೀ. ಅವರ ಶತಮಾನೋತ್ಸವ ವರ್ಷವನ್ನು 'ಹಸ್ತಪ್ರತಿ ಅಧ್ಯಯನ ವರ್ಷ' ಎಂದು ಘೋಷಿಸಿ ನಾಡಿನಾದ್ಯಂತ ಕಾರ್ಯಕ್ರಮಗಳನ್ನು ರೂಪಿಸಲಾಯಿತು. ಎಂ.ವಿ.ಸೀ. ಸಮಗ್ರ ಸಾಹಿತ್ಯ, ಸಂಸ್ಮರಣ ಸಂಪುಟ ಮತ್ತು ಇನ್ನೂ ಕೆಲವು ಕೃತಿಗಳ ಪ್ರಕಟಣೆ, ರಾಜ್ಯಾದ್ಯಂತ ವಿಚಾರಗೋಷ್ಠಿ, ನಾಡು–ನುಡಿ ಜಾಗೃತಿ ಕಾರ್ಯಕ್ರಮಗಳನ್ನು, ಕಮ್ಮಟಗಳನ್ನು ನಡೆಸುವುದು ಇತ್ಯಾದಿ ಹಲವು ಯೋಜನೆಗಳನ್ನು ಹಮ್ಮಿಕೊಳ್ಳಲಾಗಿತ್ತು.

ಈ ಯೋಜನೆಗಳಲ್ಲಿ ಬಹಳ ಮುಖ್ಯವಾದದ್ದು ಸಮಗ್ರ ಸಾಹಿತ್ಯ ಸಂಪುಟ ಪ್ರಕಟನೆ. ಇದನ್ನು ಕನ್ನಡ ಸಂಸ್ಕೃತಿ ಇಲಾಖೆ ಪೂರ್ತಿಯಾಗಿ ವಹಿಸಿಕೊಂಡು ನಮ್ಮ ಬಹುದೊಡ್ಡಭಾರವನ್ನು ಇಳಿಸಿರುವುದಕ್ಕಾಗಿ ಪ್ರತಿಷ್ಠಾನ ಇಲಾಖೆಯ

'ಮುಗಿಯದ ಮಾಯೆ' ಕವನ ಸಂಕಲನಕ್ಕೆ ದೇವರಾಜ್ ಬಹದ್ದೂರ್ ಬಹುಮಾನ, 'ತೊಟ್ಟಿಲು ತೂಗುವ ಕೈ' ನಾಟಕಕ್ಕೆ, 'ಜೀವನ ನಾಟಕ' ಕಾದಂಬರಿಗೆ ರಾಜ್ಯ ಸರ್ಕಾರದ ಬಹುಮಾನ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಆಸ್ವಾದ ಅಭಿನಂದನ ಗ್ರಂಥ ಹೀಗೆ ಹಲವಾರು ಪ್ರಶಸ್ತಿ ಪುರಸ್ಕಾರಗಳು ಸಂದಿವೆ.

ಪ್ರೊ. ಎಂ.ವಿ.ಸೀತಾರಾಮಯ್ಯ ಅವರ ಸಮಗ್ರ ಸಾಹಿತ್ಯವನ್ನು ಇಲಾಖಾ ವತಿಯಿಂದ ಪ್ರಕಟಿಸಲು ಸಹಕರಿಸಿದ ಬಿ.ಎಂ.ಶ್ರೀ ಪ್ರತಿಷ್ಠಾನದ ಡಾ॥ ನಾ.ಗೀತಾಚಾರ್ಯ ಅವರಿಗೂ ಈ ಸಂಪುಟವನ್ನು ಸಂಪಾದಿಸಿಕೊಟ್ಟ ಡಾ॥ ನಾ.ಗೀತಾಚಾರ್ಯ ರವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತದೆ.

ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಸಮಗ್ರ ಸಾಹಿತ್ಯ ಪ್ರಕಟಣೆಯನ್ನು ಹೊರತರಲು ಸಹಕರಿಸಿದ ಶ್ರೀಮತಿ ದುರ್ಗಾ ಸಿ. ಆವರ್ತಿ, ಜಂಟಿ ನಿರ್ದೇಶಕರು (ಕಾರ್ಯಕ್ರಮ), ಶ್ರೀಮತಿ ಎನ್, ಶಾಂತಮ್ಮ, ಕಾರ್ಯಕ್ರಮ ಅಧಿಕಾರಿ, ಪ್ರಕಟಣಾ ಶಾಖೆ ಹಾಗೂ ಸಿಬ್ಬಂದಿ ವರ್ಗದವರಿಗೆ ನನ್ನ ಕೃತಜ್ಞತೆಗಳು. ಈ ಸಂಪುಟವನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಮಯೂರ ಪ್ರಿಂಟ್ ಆ್ಯಡ್ಸ್‌ನ ಮಾಲೀಕರು ಮತ್ತು ಸಿಬ್ಬಂದಿ ವರ್ಗದವರಿಗೆ ಕೃತಜ್ಞತೆಗಳು.

ನಾಡಿನ ಸಂಶೋಧನಾ ಕ್ಷೇತ್ರಕ್ಕೆ ಅಪಾರ ಕೊಡುಗೆ ನೀಡಿರುವ ಪ್ರೊ.ಎಂ.ವಿ.ಸೀತಾರಾಮಯ್ಯ ಅವರ ಕೃತಿಗಳನ್ನು ಸುಲಭ ಬೆಲೆಯಲ್ಲಿ ಓದುಗರಿಗೆ ಒದಗಿಸುವುದು ನಮ್ಮ ಆಶಯವಾಗಿರುತ್ತದೆ. ವಿದ್ವಾಂಸರಾದ ಪ್ರೊ. ಎಂ.ವಿ. ಸೀತಾರಾಮಯ್ಯನವರ ಸಮಗ್ರ ಸಾಹಿತ್ಯ ಸಂಪುಟಗಳನ್ನು ಸಾಹಿತ್ಯಾಸಕ್ತರು ಪ್ರೀತಿಯಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇವೆ. ಈ ಕೃತಿಗಳ ಪ್ರಯೋಜನವನ್ನು ಕನ್ನಡ ಜನತೆ ಪಡೆದುಕೊಂಡರೆ ನಮ್ಮ ಶ್ರಮ ಸಾರ್ಥಕ.

ಬೆಂಗಳೂರು
೨೬.೦೮.೨೦೧೩

**(ಕೆ.ಆರ್. ರಾಮಕೃಷ್ಣ)**
ಆಯುಕ್ತರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಸಂಪಾದಕರ ಮಾತು

ಎಂ.ವಿ.ಸೀ. ಸಂಸ್ಮರಣ ಸಮಿತಿಯ ಪರವಾಗಿ ಪ್ರತಿಷ್ಠಾನ ೧೯೯೦ರಲ್ಲಿ ಪ್ರಕಟಿಸಿದ 'ಕದಂಬ' – ಎಂ.ವಿ.ಸೀ. ಅವರ ಸಮಗ್ರ ಸಂಶೋಧನ ಲೇಖನಗಳ ಸಂಪುಟದ ಪ್ರಕಟನೆ ಒಳ್ಳೆಯ ಆರಂಭವೇ ಆಯಿತು. 'ಎಂ.ವಿ.ಸೀ. ಸಮಗ್ರ ಸಾಹಿತ್ಯ ಮಾಲೆ'ಯ ಯೋಜನೆಗಾಗಿ ಪೂಜ್ಯ ಎಂ.ವಿ.ಸೀ. ಅವರ ಪುತ್ರರನ್ನು ಒಪ್ಪಿಸಿ ಸೀತಾರಾಮಯ್ಯನವರ ಸ್ವಂತ ಪ್ರಕಾಶನ ಸಂಸ್ಥೆಯಾದ 'ರಾಘವ ಪ್ರಕಾಶನ'ದ ಹೆಸರಿನಲ್ಲಿ 'ರಾಘವ ಪ್ರಕಾಶನ ದತ್ತಿ ನಿಧಿ'ಯನ್ನು ಪ್ರತಿಷ್ಠಾನದಲ್ಲಿ ಸ್ಥಾಪಿಸಲಾಯಿತು. ಇದರ ಉದ್ದೇಶ ಎಂ.ವಿ.ಸೀ. ಅವರ ಸಮಗ್ರ ಸಾಹಿತ್ಯ ಸಂಪುಟಗಳನ್ನು ಪ್ರಕಟಿಸುವುದು; ಈ ಸಂಪುಟಗಳ ಮತ್ತು ಎಂ.ವಿ.ಸೀ. ಅವರ ಬಿಡಿ ಕೃತಿಗಳ ಮಾರಾಟದಿಂದಲೇ ಮುಂದಿನ ಸಂಪುಟಗಳಿಗೆ ಸಂಪನ್ಮೂಲವನ್ನು ರೂಪಿಸಿಕೊಳ್ಳುವುದು ; ಎಂ.ವಿ.ಸೀ. ಅವರ ಸಾಹಿತ್ಯ ಎಲ್ಲ ಕಾಲದಲ್ಲೂ ಸಾಹಿತ್ಯಾಸಕ್ತರಿಗೆ ದೊರಕುವಂತೆ, ಮುದ್ರಿಸುತ್ತ–ಪುನರ್ಮುದ್ರಿಸುತ್ತ ಹೋಗುವುದು. ಪ್ರತಿಷ್ಠಾನದ ಸಂಸ್ಥಾಪಕರಾದ ಪೂಜ್ಯರನ್ನು ಪ್ರತಿಷ್ಠಾನ ಸದಾ ಸ್ಮರಿಸಿಕೊಳ್ಳಲು ಇದು ಸದವಕಾಶವಾಯಿತು.

ಈ 'ಕದಂಬ'ವನ್ನೆ ಎಂವಿಸೀ ಸಮಾಗ್ರ ಸಾಹಿತ್ಯಮಾಲೆಯ ಪ್ರಥಮ ಸಂಪುಟವೆಂದು ಪರಿಗಣಿಸಲಾಯಿತು. ಈ ಮಾಲೆಯಲ್ಲಿ ಸಂಪನ್ಮೂಲ ಸಂಗ್ರಹವಾದಂತೆ ಆರು ಸಂಪುಟಗಳನ್ನು ಪ್ರಕಟಿಸಲಾಯಿತು. ಮೊದಲ ಸಂಪುಟ ೧೯೯೦ರಲ್ಲಿ ಪ್ರಕಟವಾದರೆ ಆರನೇ ಸಂಪುಟ ೨೦೦೪ರಲ್ಲಿ ಬಂದಿತು. ಏಳನೇ ಸಂಪುಟ ಸಿದ್ದತೆ ಮಾಡಿಕೊಳ್ಳುವ ವೇಳೆಗೆ ಎಂವಿಸೀ ಶತಮಾನೋತ್ಸವ ಬಂದದ್ದರಿಂದ ಪ್ರತಿಷ್ಠಾನದ ಆರ್ಥಿಕ ಸ್ಥಿತಿಯ ಹಿನ್ನೆಲೆಯನ್ನು ಗ್ರಹಿಸಿ ಇದರ ಪ್ರಕಟನೆಯನ್ನೂ ಉತ್ಸವ ಸಮಿತಿಯ ಯೋಜನೆಯಲ್ಲಿ ಸೇರಿಸಿ ಸರ್ಕಾರವನ್ನು ವಿನಂತಿಸಿದಾಗ ಸರ್ಕಾರವೇ ಇದರ ಪ್ರಕಟನೆಯ ಜವಾಬ್ದಾರಿಯನ್ನು ವಹಿಸಿಕೊಂಡಿತು. ಅದರ ಫಲವೆ ಪ್ರಸ್ತುತ ಎಂ.ವಿ.ಸೀ ಸಮಗ್ರ ಸಾಹಿತ್ಯ ಮಾಲೆಯ ೯ನೇ ಸಂಪುಟ.

ಈ ಸಂಪುಟದಲ್ಲಿ ಎಂವಿಸೀ ಅವರ ಗ್ರಂಥಸಂಪಾದನೆ, ಹಸ್ತಪ್ರತಿಶಾಸ್ತ್ರ ಗ್ರಂಥಗಳ ಪೀಠಿಕೆಗಳು ಮತ್ತು ಈ ಕುರಿತ ಬಿಡಿ ಲೇಖನಗಳನ್ನು ಹಾಗೂ ಶಾಸ್ತ್ರಸಾಹಿತ್ಯ ಗ್ರಂಥವನ್ನು ಅಳವಡಿಸಲಾಗಿದೆ. ಗ್ರಂಥಸಂಪಾದನ ಕ್ಷೇತ್ರದಲ್ಲಿ ಕವಿರಾಜಮಾರ್ಗ ಎಂವಿಸೀ ಅವರ ಆಚಾರ್ಯ ಕೃತಿ. ಕನ್ನಡದ ಈ ಆದ್ಯಕೃತಿಯ ಕರ್ತೃ ಯಾರು ಎಂಬ ಗೊಂದಲವನ್ನು ನಿವಾರಿಸಿ ಶ್ರೀವಿಜಯ ಎಂದು ಸ್ಥಾಪಿಸಿದ ಕೃತಿ ಇದು. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಈ ಕೃತಿಗೆ ವಿಶೇಷವಾದ ಸ್ಥಾನವಿದೆ. ಇದು ಸೀತಾರಾಮಯ್ಯನವರ ಪ್ರಸಿದ್ಧ ಸಂಪಾದಿತ ಕೃತಿ. ಅವರಿಗೆ ಸಂಶೋಧಕರೆಂದು ಹೆಸರು ತಂದುಕೊಟ್ಟ ಕೃತಿಯೂ ಹೌದು. ಅವರ ಪಾಂಡಿತ್ಯ ಬಹುಶ್ರುತತ್ವ, ಪ್ರತಿಭೆ,

ಕಾರ್ಯದರ್ಶಿಗಳಿಗೂ, ನಿರ್ದೇಶಕರಿಗೂ ಕರ್ನಾಟಕ ಸರ್ಕಾರಕ್ಕೂ ಆಭಾರಿಯಾಗಿದೆ. ಇದರ ಫಲವಾಗಿ ಇದೀಗ ನಿಮ್ಮ ಮುಂದೆ ಈ ಸಂಪುಟಗಳಿವೆ.

ಈ ಸಂಪುಟಗಳ ಸಿದ್ಧತೆಗೆ ಉತ್ಸವ ಸಮಿತಿ ಒಂದೊಂದು ಸಂಪುಟಕ್ಕೆ ಒಬ್ಬೊಬ್ಬ ಸಂಪಾದಕರನ್ನು ನಿಯೋಜಿಸಲು ತೀರ್ಮಾನಿಸಿ ಇಲಾಖೆಗೆ ಸೂಚಿಸಿತು. ಇಲಾಖೆ ನಮ್ಮ ಸೂಚನೆಯನ್ನು ಅಂಗೀಕರಿಸಿ ಅವರುಗಳಿಗೇ ಆಯಾ ಸಂಪುಟಗಳ ಸಂಪಾದನೆಯ ಹೊಣೆಯನ್ನು ವಹಿಸಿದೆ. ಆಯಾ ಸಂಪಾದಕರು ತಮ್ಮ ಜವಾಬ್ದಾರಿಯನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಅವರುಗಳಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ಎಂ.ವಿ.ಸೀತಾರಾಮಯ್ಯನವರು ೧೦೦ ಗ್ರಂಥಗಳನ್ನೂ, ನೂರಾರು ಲೇಖನಗಳನ್ನೂ ಬರೆದಿದ್ದು, ಅವುಗಳನ್ನೆಲ್ಲ ೧೨ ಸಂಪುಟಗಳಲ್ಲಿ ಅಡಕಗೊಳಿಸಿ ಯಾವ ಯಾವ ಸಂಪುಟಗಳಲ್ಲಿ ಯಾವ ಯಾವ ಕೃತಿ–ಲೇಖನಗಳಿರಬೇಕೆಂಬ ಸಂಯೋಜನೆಯ ಜವಾಬ್ದಾರಿಯನ್ನು ಕಾರ್ಯದರ್ಶಿಗಳಾದ ಡಾ. ನಾ. ಗೀತಾಚಾರ್ಯ ಅವರು ನಿರ್ವಹಿಸಿದ್ದಾರೆ ಅವರೊಂದಿಗೆ ಇನ್ನೊಬ್ಬ ಕಾರ್ಯದರ್ಶಿಗಳಾದ ಎಸ್.ವಿ. ಶ್ರೀನಿವಾಸರಾವ್ ಸಹಕರಿಸಿದ್ದಾರೆ. ಅವರಿಗೆ ಸಮಿತಿ ಕೃತಜ್ಞವಾಗಿದೆ. ಅದರಂತೆಯೇ ಈ ಸಂಪುಟಗಳು ಸಿದ್ಧವಾಗಿದ್ದು, ಈ ರೀತಿ ವಿಂಗಡಿಸಲಾಗಿದೆ.

೧) ಎಂ.ವಿ.ಸೀ. ಕಾವ್ಯ ಸಂಪುಟ
೨) ಎಂ.ವಿ.ಸೀ. ಸಣ್ಣಕಥೆಗಳ ಸಂಪುಟ
೩) ಎಂ.ವಿ.ಸೀ. ಪ್ರಬಂಧಗಳು, ವ್ಯಕ್ತಿಚಿತ್ರಗಳ ಸಂಪುಟ
೪) ಎಂ.ವಿ.ಸೀ. ಕಾವ್ಯಮೀಮಾಂಸೆ – ಸಾಹಿತ್ಯ ವಿಮರ್ಶೆ ಸಂಪುಟ
೫) ಎಂ.ವಿ.ಸೀ. ಅವರ ಮಕ್ಕಳ ಸಾಹಿತ್ಯ ಮತ್ತು ನಾಟಕ ಸಂಪುಟ
೬) ಎಂ.ವಿ.ಸೀ. ಅವರ ಗ್ರಂಥಸಂಪಾದನೆ – ಹಸ್ತಪ್ರತಿಶಾಸ್ತ್ರ ಸಂಪುಟ
೭) ಎಂ.ವಿ.ಸೀ. ಅವರ ಮುನ್ನುಡಿ – ಲೇಖನ – ಭಾಷಣ ಸಂಪುಟ
೮) ಎಂ.ವಿ.ಸೀ. ಜೀವನ ಚರಿತ್ರೆ – ಅನುವಾದ ಸಂಪುಟ
೯) ಎಂ.ವಿ.ಸೀ. ಅವರ ಇಂಗ್ಲೀಷ್ ಲೇಖನ ಸಂಪುಟ
೧೦) ಎಂ.ವಿ.ಸೀ. ಅವರ ವ್ಯಾಕರಣ, ಛಂದಸ್ಸಂಪುಟ
೧೧) ಎಂ.ವಿ.ಸೀ. ಅವರ ವಿಚಾರ ಸಾಹಿತ್ಯ ಸಂಪುಟ
೧೨) ಎಂ.ವಿ.ಸೀ. ಅವರ ಕಾದಂಬರಿ ಸಂಪುಟ

ತಮ್ಮ ಕೃತಿಗಳ ಹಕ್ಕನ್ನು ಎಂ.ವಿ.ಸೀ. ಅವರೇ ಉಯಿಲಿನ ಮೂಲಕ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ನೀಡಿದ್ದಾರೆ. ಅದನ್ನು ಅವರ ಮಕ್ಕಳಾದ ಎಂ.ಎಸ್. ಭಾಸ್ಕರ್, ಎಂ.ಎಸ್. ರಾಮಪ್ರಸಾದ್, ಎಸ್.ಟಿ. ರಾಧಾಕೃಷ್ಣ, ಎಂ.ಎಸ್. ಶೇಷಾದ್ರಿನಾಥ್ ಮತ್ತು ಶಾರದಾನಾಗರಾಜ್ ಅವರುಗಳು ಸಮ್ಮತಿಸಿ ಸಂತೋಷವಾಗಿ ಪ್ರತಿಷ್ಠಾನದೊಂದಿಗೆ, ಕನ್ನಡ ಸಂಸ್ಕೃತಿ ಇಲಾಖೆಗೆ ಕೈಜೋಡಿಸುವ ಮೂಲಕ ಕನ್ನಡದ ಧೀಮಂತಸಾಹಿತಿ – ವಿದ್ವಾಂಸ – ಸಂಘಟಕ ಪ್ರೊ. ಎಂ.ವಿ. ಸೀತಾರಾಮಯ್ಯನವರ ಸಮಗ್ರ ಸಾಹಿತ್ಯ ಈ ಶತಮಾನೋತ್ಸವ ಸಂದರ್ಭದಲ್ಲಿ ಕನ್ನಡಿಗರಿಗೆ ದೊರಕುವಂತಾಗಿರುವುದಕ್ಕೆ ನಮಗೆ ಸಂತಸವಾಗಿದೆ.

**ಡಾ. ಪಿ.ವಿ. ನಾರಾಯಣ**
ಅಧ್ಯಕ್ಷರು
ಎಂ.ವಿ.ಸೀ. ಶತಮಾನೋತ್ಸವ ಸಮಿತಿ

**ಪ್ರೊ. ಎಂ.ಎಚ್. ಕೃಷ್ಣಯ್ಯ**
ಗೌರವಾಧ್ಯಕ್ಷರು
ಎಂ.ವಿ.ಸೀ. ಶತಮಾನೋತ್ಸವ ಸಮಿತಿ

# ಪರಿವಿಡಿ



## ೧. ಗ್ರಂಥಸಂಪಾದನೆ ವಿಭಾಗ

### ಅ) ಪ್ರಾಚೀನ ಸಂಪಾದಿತ ಗ್ರಂಥಗಳು



### ಆ) ಅದ್ವೈತ ಹರಿದಾಸ ಕೃತಿಗಳ ಸಂಪಾದನೆ



### ಇ) ಬಿಡಿ ಲೇಖನಗಳು

ವಿದ್ವತ್ತುಗಳಿಗೆ ಈ ಕೃತಿ ಸಾಕ್ಷಿಯಾಗಿದೆ. ಎಂವಿಸೀ ಅವರೇ ಇದರ ಎರಡು ಅವೃತ್ತಿಗಳನ್ನು ಹೊರತಂದಿದ್ದರು. ನಂತರ ಪ್ರತಿಷ್ಠಾನ ಇವುಗಳ ಸಂಯೋಜಕ ಆವೃತ್ತಿಯನ್ನು ಪ್ರಕಟಿಸಿತ್ತು. ಈ ಮೂರೂ ಆವೃತ್ತಿಗಳ ಪೀಠಿಕೆಗಳನ್ನು ಮತ್ತು ಇತರ ಸಂಪಾದಿತ ಕೃತಿಗಳ ಪ್ರಸ್ತಾವನೆಗಳನ್ನು ಇಲ್ಲಿ ಬಳಸಿದೆ.

ಇದರೊಂದಿಗೆ ಇವರ ಇನ್ನೊಂದು ಪ್ರಮುಖ ಸಂಪಾದನಕ್ಷೇತ್ರ ಹರಿದಾಸ ಸಾಹಿತ್ಯ. 'ಅರ್ಚನ' ಮತ್ತು 'ಶ್ರೀಕೃಷ್ಣ ಬಾಲಲೀಲೆ'ಗಳ ಮೂಲಕ ಕನ್ನಡದಲ್ಲಿ ಅದ್ವೈತ ಹರಿದಾಸ ಸಾಹಿತ್ಯವನ್ನು ಮೊದಲ ಬಾರಿಗೆ ಪರಿಚಯಿಸಿದ ಕೀರ್ತಿ ಎಂ.ವಿ.ಸೀ. ಅವರದು. ಇವುಗಳ ಮಹತ್ವದ ಪ್ರಸ್ತಾವನೆ ಮತ್ತು ಟಿಪ್ಪಣಿಗಳನ್ನು ಇಲ್ಲಿ ಅಳವಡಿಸಿದೆ.

ಎಂ.ವಿ.ಸೀ. ಅವರ ಇನ್ನೊಂದು ಪ್ರಮುಖ ಕಾರ್ಯಕ್ಷೇತ್ರವೆಂದರೆ ಹಸ್ತಪ್ರತಿ ಶಾಸ್ತ್ರದ ಆವಿಷ್ಕಾರ. ಇಂದು "ಹಸ್ತಪ್ರತಿ ಅಧ್ಯಯನಶಾಸ್ತ್ರ"ವಾಗಿ ರೂಪಗೊಳ್ಳಲು ಪ್ರೇರಕವಾದ ಹಸ್ತಪ್ರತಿಶಾಸ್ತ್ರವನ್ನು ಗ್ರಂಥಸಂಪಾದನೆಯಿಂದ ಪ್ರತ್ಯೇಕಗೊಳಿಸಿ ನಾಡಿನಾದ್ಯಂತ ಹಸ್ತಪ್ರತಿಗಳ ಜಾಗೃತಿ ಮೂಡಿಸಿ ಇದರ ಪ್ರಮುಖ ಶಾಸ್ತ್ರಗ್ರಂಥಗಳನ್ನೂ ಪ್ರಕಟಿಸಿ ನೂತನಶಾಸ್ತ್ರವನ್ನು ಹುಟ್ಟುಹಾಕಿದರು. ಈ ವಿಚಾರದ ಲೇಖನಗಳು ಮತ್ತು ಬಿಡಿಬರಹಗಳು ಹಾಗೂ ಎಂವಿಸೀ ಅವರ ಪಾಂಡಿತ್ಯಪೂರ್ಣ ಕೃತಿ 'ಶಾಸ್ತ್ರಸಾಹಿತ್ಯ'ವನ್ನೂ ಈ ಸಂಪುಟ ಒಳಗೊಂಡಿದೆ. ಪರಿಶಿಷ್ಟದಲ್ಲಿ ಈ ಕೃತಿಗಳ ಮೊದಲ ಮಾತುಗಳನ್ನೂ ಅನುಬಂಧದಲ್ಲಿ ಎಂ.ವಿ.ಸೀಯವರ ಜೀವನಪಥ, ಗ್ರಂಥಗಳು ಮತ್ತು ಸಮಗ್ರ ಲೇಖನಗಳ ಸೂಚಿಯನ್ನು ನೀಡಿದೆ.

ಸಮಗ್ರ ಸಂಪುಟ ಮಾಲೆಯ ನಿರ್ವಹಣೆ ಮತ್ತು ಈ ಪುಸ್ತಕದ ಸಂಪಾದನೆಯ ಜವಾಬ್ದಾರಿಯನ್ನು ನನಗೆ ಒಪ್ಪಿಸಿದುದಕ್ಕಾಗಿ ನಾನು ಪ್ರತಿಷ್ಠಾನದ ಅಧ್ಯಕ್ಷರಿಗೂ ಕನ್ನಡ ಸಂಸ್ಕೃತಿ ಇಲಾಖೆಯ ಆಯುಕ್ತರಾದ ಶ್ರೀ ಕೆ.ಆರ್. ರಾಮಕೃಷ್ಣ ಅವರಿಗೂ ಎಂ.ವಿ.ಸೀ ಶತಮಾನೋತ್ಸವ ಸಮಿತಿಯ ಗೌರವಾಧ್ಯಕ್ಷರಾದ ನಾಡೋಜ ಜಿ ವೆಂಕಟಸುಬ್ಬಯ್ಯ ಅವರಿಗೂ ಸಮಿತಿಯ ಸದಸ್ಯರಿಗೂ ಋಣಿಯಾಗಿದ್ದೇನೆ. ಬದುಕನ್ನು ರೂಪಿಸಿಕೊಟ್ಟ ಪೂಜ್ಯ ಸೀತಾರಾಮಯ್ಯನವರ ಸಾಹಿತ್ಯ ಸೇವೆ ನನ್ನ ಪಾಲಿನ ಶ್ರದ್ಧಾಪೂರ್ಣ ಕರ್ತವ್ಯವಾಗಿದೆ. ಅವರೇ ಕಲಿಸಿಕೊಟ್ಟ ಅಚ್ಚುಕಟ್ಟುತನ ಈ ಕರ್ತವ್ಯಪಾಲನೆಯಲ್ಲಿ ಎಲ್ಲಿಯಾದರೂ ಕಾಣದೆ ಹೋದಲ್ಲಿ ಸಹೃದಯರು ದಯಮಾಡಿ ಮನ್ನಿಸಬೇಕಾಗಿ ವಿನಂತಿ.

ಗೌ॥ ಕಾರ್ಯದರ್ಶಿ ಮತ್ತು ಅಧ್ಯಯನ ನಿರ್ದೇಶಕ **ಡಾ॥ ನಾ. ಗೀತಾಚಾರ್ಯ**
ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಸಂಪಾದಕ
ಎಂ.ವಿ.ಸೀ. ಸಂಶೋಧನ ಕೇಂದ್ರ ಮೊ. : ೯೪೪೪೮೬೭೧೧೪೯
ಬಿ.ಎಂ.ಶ್ರೀ ಕಲಾಭವನ
೩ನೇ ಕ್ರಾಸ್, ನರಸಿಂಹರಾಜ ಕಾಲೋನಿ
ಬೆಂಗಳೂರು – ೫೬೦ ೦೧೯




# ಪ್ರಸ್ತಾವನೆ

ಎಂ.ವಿ.ಸೀತಾರಾಮಯ್ಯನವರ ಸಮಾಗ್ರ ಸಾಹಿತ್ಯ ಮಾಲೆಯ ಪ್ರಸ್ತುತ ಸಂಪುಟವು ಗ್ರಂಥಸಂಪಾನೆ, ಹಸ್ತಪ್ರತಿಶಾಸ್ತ್ರ ಮತ್ತು ಶಾಸ್ತ್ರಸಾಹಿತ್ಯ ಸಂಪುಟವಾಗಿದ್ದು ಇದರಲ್ಲಿ ಈ ಮೂರೂ ಕ್ಷೇತ್ರಗಳನ್ನು ಕುರಿತ ಎಂವಿಸೀ ಅವರ, ಬಿಡಿಲೇಖನಗಳು ಮತ್ತು ಇಡೀ ಗ್ರಂಥಗಳು ಹಾಗೂ ಸಂಪಾದಿತ ಗ್ರಂಥಗಳ ಪ್ರಸ್ತಾವನೆ–ಪೀಠಿಕೆಗಳನ್ನು ಸಂಗ್ರಹಿಸಲಾಗಿದೆ. ಎಂ.ವಿ.ಸೀತಾರಾಮಯ್ಯನವರದ್ದು ಬಹುಶ್ರುತ ಪಾಂಡಿತ್ಯವಾಗಿದ್ದು ಸೃಜನಶೀಲತೆ ಮತ್ತು ಪಾಂಡಿತ್ಯ ಎರಡೂ ಕ್ಷೇತ್ರಗಳಲ್ಲಿ ಗಣನೀಯ ಕೊಡುಗೆಸಲ್ಲಿಸಿದ್ದಾರೆ. ಅದರಲ್ಲೂ ಗ್ರಂಥಸಂಪಾದನೆ ಮತ್ತು ಶಾಸ್ತ್ರ ಸಾಹಿತ್ಯ ಕ್ಷೇತ್ರದಲ್ಲಿ ಆಳವಾದ ಅಧ್ಯಯನ ಮಾಡಿದ್ದ ಶ್ರೇಷ್ಠ ದರ್ಜೆಯ ವಿದ್ವಾಂಸರಾಗಿಸಿದ್ದಾರೆ. ಕಾವ್ಯಮೀಮಾಂಸೆ ಛಂದಸ್ಸು, ವ್ಯಾಕರಣ ಮತ್ತು ಗ್ರಂಥಸಾದನೆ ಕ್ಷೇತ್ರದಲ್ಲಿ ಪ್ರಥಮ ದರ್ಜೆಯ ವಿದ್ಯಾಂಸರೆನಿಸಿದ್ದಾರೆ. ಹಸ್ತಪ್ರತಿಶಾಸ್ತ್ರದ ನಿರ್ಮಾತೃವಾಗಿದ್ದಾರೆ. ಇವರು ರೂಪಿಸಿಕೊಟ್ಟ ಹಸ್ತಪ್ರತಿಶಾಸ್ತ್ರವೇ ಇಂದು ಹಸ್ತಪ್ರತಿ ಅಧ್ಯಯನಶಾಸ್ತ್ರವಾಗಿ ಬೆಳೆದಿದೆ. ಕನ್ನಡ ಹರಿದಾಸ ಸಾಹಿತ್ಯಕ್ಕೆ ಅದ್ವೈತಪರಂಪರೆಯನ್ನು ಗುರುತಿಸಿಕೊಟ್ಟದ್ದೂ ಎಂವಿಸೀ. ಅವರ ಇನ್ನೊಂದು ಸಾಧನೆಯಾಗಿದೆ. ಈ ಶೋಧದಿಂದ ಅನೇಕ ಜನ ಅದ್ವೈತ ಹರಿದಾಸರು ಕನ್ನಡಕ್ಕೆ ಪರಿಚಿತರಾಗಿದ್ದಷ್ಟೇ ಅಲ್ಲದೆ ಇದರಿಂದ ಪ್ರೇರಣೆಗೊಂಡು ಪ್ರಸ್ತುತ ಸಂಪಾದಕ ನಡೆಸಿದ ಸಂಶೋಧನೆಯಿಂದ ವಿಶಿಷ್ಟಾದ್ವೈತ ಹರಿದಾಸ ಸಾಹಿತ್ಯವೂ ಗೋಚರವಾಗಿದ್ದು, ಇಂದು ಹರಿದಾಸ ಸಾಹಿತ್ಯವನ್ನು ದ್ವೈತ ಅದ್ವೈತ ವಿಶಿಷ್ಟಾದ್ವೈತತಗಳಿಂದ ಕೂಡಿದ ತ್ರಿವೇಣಿ ಸಂಗಮವನ್ನಾಗಿ ಸಾಹಿತ್ಯವಲಯ ಅಧ್ಯಯನ ಮಾಡುವಂತಾಗಿದೆ.

ಹೀಗೆ ಹಲವು ಮೌಲಿಕ ಚರ್ಚೆಗಳಿಗೆ ಪ್ರೇರಿತವಾಗಿರುವ ಸೀತಾರಾಮಯ್ಯನವರ ವಿದ್ವತ್‌ವಿಚಾರಗಳನ್ನು ಈ ಸಂಪುಟದಲ್ಲಿ ನೋಡಬಹುದು. ಇಲ್ಲಿಯ ಲೇಖನಗಳನ್ನು ಅಳವಡಿಸಿರುವ ಕ್ರಮದಲ್ಲೇ (ಗ್ರಂಥಸಂಪಾದನೆ, ಹಸ್ತಪ್ರತಿಶಾಸ್ತ್ರ, ಶಾಸ್ತ್ರಸಾಹಿತ್ಯ) ಆಯಾಭಾಗಗಳ ಬಗೆಗಿನ ಕೆಲವು ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ. ಮುಖ್ಯವಾಗಿ ಹರಿದಾಸ ಸಾಹಿತ್ಯದ ಕೃತಿಗಳನ್ನು ವಿವರವಾಗಿ ವಿಶ್ಲೇಷಿಸಲಾಗಿದೆ. ಕಾರಣ ಹರಿದಾಸ ಸಾಹಿತ್ಯಕ್ಕೆ ಅದ್ವೈತ ಆಯಾಮವನ್ನು ನೀಡಿದ ಕೃತಿಗಳಾಗಿರುವುದು ಎಂಬುದನ್ನು ಎತ್ತಿಹೇಳಬೇಕಾಗಿಲ್ಲ.

## ಗ್ರಂಥಸಂಪಾದನೆ

**(ಅ) ಪ್ರಾಚೀನ ಕೃತಿಗಳ ಸಂಪಾದನೆ : ೧. ಶ್ರೀವಿಜಯಕೃತ ಕವಿರಾಜಮಾರ್ಗ :**

ಗ್ರಂಥಸಂಪಾದನೆ ಎಂವಿಸೀತಾರಾಮಯ್ಯನವರ ಮೆಚ್ಚಿನ ಕಾರ್‍ಯಕ್ಷೇತ್ರ. ನಿವೃತ್ತಿಯ ಹಂತದಲ್ಲಿ ಈ ಕ್ಷೇತ್ರಕ್ಕೆ ಇಳಿದವರು ಕೊನೆಯವರೆಗೂ ಹಲವಾರು ಮೌಲಿಕ

## ೨. ಹಸ್ತಪ್ರತಿಶಾಸ್ತ್ರ ವಿಭಾಗ



## ೩. ಶಾಸ್ತ್ರಸಾಹಿತ್ಯ ವಿಭಾಗ



## ೪. ಪರಿಶಿಷ್ಟ



## ೫. ಅನುಬಂಧಗಳು

ಬರೆದು ಸೇರಿಸಿದ್ದಾರೆ. ಈ ಎಲ್ಲ ಸಿದ್ಧತೆ – ಚಿಂತನೆಗಳನ್ನು ಗಮನಿಸಿದರೆ ಅವರ 'ಪಂಡಿತ ಆವೃತ್ತಿ' ಎಷ್ಟು ಪಾಂಡಿತ್ಯಪೂರ್ಣವಾಗಿರುತ್ತಿತ್ತು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಈ ಸಂಪುಟದಲ್ಲಿ ಸೇರಿರುವ ಕವಿರಾಜಮಾರ್ಗದ ಪೀಠಿಕೆಗಳು ವಿದ್ಯಾರ್ಥಿ ಆವೃತ್ತಿ ಮತ್ತು ಕಿರಿಯ ಆವೃತ್ತಿಗಳವು ಮತ್ತು ಈ ಅಂಶಗಳನ್ನು ಅಳವಡಿಸಿಕೊಂಡಿರುವ 'ತಿದ್ದಿದ ಸಂಯೋಜಕ ಆವೃತ್ತಿ'ಯದಾಗಿವೆ. ಸಂಯೋಜಕ ಆವೃತ್ತಿಯಲ್ಲಿ ಮೊದಲ ಮುದ್ರಣದ ಪೀಠಿಕೆ ಮತ್ತು ಟಿಪ್ಪಣಿಯ ಭಾಗಗಳನ್ನೂ ಎರಡನೆಯ ಮುದ್ರಣದ ಪಾಠಭಾಗವನ್ನು ಅಳವಡಿಸಿಕೊಳ್ಳಲಾಗಿದೆ. ಈ ಪಾಠಭಾಗದಲ್ಲಿ ಕಂಡು ಬಂದ ತಿದ್ದಿದ ಪಾಠಗಳನ್ನು ಅನುಬಂಧದ ಸ್ವೀಕೃತ ಪಾಠಗಳ ಪಟ್ಟಿಯಲ್ಲೂ ತಿದ್ದಲಾಗಿದೆ. ಹೀಗಾಗಿ ಈ ಕೃತಿ ಸೀತಾರಾಮಯ್ಯನವರ ಆಶಯದಂತೆ ಪರಿಷ್ಕೃತ ಪಂಡಿತ ಆವೃತ್ತಿಯಾಗದೆ ಇದ್ದರೂ ಅವರು ಎರಡನೇ ಮುದ್ರಣದಲ್ಲಿ ಅಳವಡಿಸಿದ್ದ ಎಲ್ಲಾ 'ಮೇಲ್ಪಾಟು' ಮಾಡಿದ ಪಾಠಗಳನ್ನು ಒಳಗೊಂಡ ತಿದ್ದಿದ ಆವೃತ್ತಿಯಾಗುವಂತೆ ಮಾಡಲಾಗಿದ್ದು ಪ್ರಸ್ತುತ ಸಂಪಾದಕನೇ ಈ ತಿದ್ದುಪಾಟುಗಳನ್ನು ಅಳವಡಿಸಿದ್ದು ಬಿಎಂಶ್ರೀ ಪ್ರತಿಷ್ಠಾನ ೧೯೯೪ ರಲ್ಲಿ ಪ್ರಕಟಿಸಿದೆ. ಕಿರಿಯ ಆವೃತ್ತಿಯ ಪೀಠಿಕೆಯು, ವಿದ್ಯಾರ್ಥಿ ಆವೃತ್ತಿಯ ೧೦೦ ಪುಟಗಳ ಪೀಠಿಕೆಯ ಸಂಗ್ರಹ ರೂಪವಾದರೂ ಕೆಲವು ಹೊಸ ಅಂಶಗಳ ಸೇರ್ಪಡೆ, ಚರ್ಚೆಗಳಿಂದ Up-to-date ಆಗಿರುವುದರಿಂದ ಈ ಎರಡೂ ಆವೃತ್ತಿಗಳ ಪೀಠಿಕೆಗಳನ್ನೂ ಇಲ್ಲಿ ಕೊಡಲಾಗಿದೆ.

'ಶ್ರೀವಿಜಯಕೃತ ಕವಿರಾಜಮಾರ್ಗ' ಎಂಬ ಈ ಗ್ರಂಥ ಎಂ.ವಿ.ಸೀಯವರಿಂದ ಸಂಪಾದಿತವಾದ ಕೃತಿಗಳಲ್ಲೆಲ್ಲ ಉತ್ತಮ ಸ್ಥಾನವನ್ನು ಪಡೆಯುತ್ತದೆ. ಇದಕ್ಕೆ ಕಾರಣ ಇದರ ಸಂಪಾದನಾ ಕಾರ್ಯದಲ್ಲಿ ಪ್ರೊ|| ಎಂ.ವಿ.ಸೀ. ಯವರು ಅನುಸರಿಸಿರುವ ರೀತಿ ಹಾಗೂ ಬಳಸಿಕೊಂಡ ಪಾಂಡಿತ್ಯ. ಸುಮಾರು ಒಂದು ನೂರು ವರ್ಷಗಳಿಗಿಂತಲೂ ಹೆಚ್ಚಾಗಿ ಚರ್ಚಿತವಾಗಿ ಗೊಂದಲಮಯವಾಗಿದ್ದ ಕರ್ತೃತ್ವದ ಬಗೆಗೆ ಈ ಸಂಪಾದಕರು ತೆರೆ ಎಳೆದರು. ಶ್ರೀ ಬಿ.ಎಲ್. ರೈಸ್, ಕೆ.ಬಿ. ಪಾಠಕ್, ನಾ.ಶ್ರೀ. ರಾಜಪುರೋಹಿತ್ ಮೊದಲಾದವರು ನೃಪತುಂಗನ ಪಕ್ಷವನ್ನೂ, ಡಾ|| ಫ್ಲೀಟ್, ಆರ್. ನರಸಿಂಹಾಚಾರ್ ಟಿ.ಎಸ್. ವೆಂಕಣ್ಣಯ್ಯ, ಎ.ಆರ್. ಕೃಷ್ಣಶಾಸ್ತ್ರಿ, ಬಿ.ಎಂ.ಶ್ರೀ. ಮೊದಲಾದವರು ಶ್ರೀವಿಜಯನ ಪಕ್ಷವನ್ನೂ ವಹಿಸಿ ಚರ್ಚೆಗಳನ್ನು ನಡೆಸಿದ್ದಾರೆ. ಅಲ್ಲದೆ ತಮ್ಮ ಸಂಪಾದಿತ ಕೃತಿಗೆ 'ಶ್ರೀ ನೃಪತುಂಗದೇವಾನುಮತಮಪ್ಪ ಶ್ರೀವಿಜಯಕೃತ ಕವಿರಾಜಮಾರ್ಗ' ಎಂದೇ ಹೆಸರಿಸಿದ್ದಾರೆ. ಈ ಕೃತಿಯ ಕರ್ತೃ ಶ್ರೀವಿಜಯನೇ ಎಂದು ಸಾಧಿಸಲು ಎಂ.ವಿ.ಸೀ. ಅವರು ಅನುಸರಿಸಿರುವ ಮಾರ್ಗ ಗ್ರಂಥಸಂಪಾದನಾ ಕ್ಷೇತ್ರಕ್ಕೆ ಅಮೂಲ್ಯವಾದ ಮಾದರಿಯಾಗಿದೆ. ಖಚಿತ ಆಧಾರಗಳೊಂದಿಗೆ ವಿಮರ್ಶಿಸುವ ರೀತಿ, ನಿಷ್ಪಕ್ಷಪಾತ ದೃಷ್ಟಿ, ಚಾರಿತ್ರಿಕ ಹಿನ್ನೆಲೆ, ನೃಪತುಂಗನ ವ್ಯಕ್ತಿತ್ವ, ಮತ, ಕವಿರಾಜಮಾರ್ಗದ ಕರ್ತೃ ವಿಚಾರ, ಗ್ರಂಥವಿಚಾರ, ನೃಪತುಂಗ ಪಕ್ಷ, ಕವೀಶ್ವರ ಪಕ್ಷ, ಶ್ರೀವಿಜಯನೇ ಕವಿರಾಜಮಾರ್ಗದ ಕರ್ತೃ, ವಿಷಯವ್ಯಾಪ್ತಿ, ಐತಿಹಾಕ ಮಹತ್ವ ಮೊದಲಾದ ವಿಚಾರಗಳಲ್ಲಿ ಸಂಪಾದಕರ

ಕೃತಿಗಳನ್ನು ಅಚ್ಚುಕಟ್ಟಾಗಿ ಸಂಪಾದಿಸಿ ಕೊಟ್ಟಿದ್ದಾರೆ. ಕವಿರಾಜಮಾರ್ಗ ಇವರ ಶ್ರೇಷ್ಠ ಸಂಪಾದಿತ ಕೃತಿ. ಈ ಕೃತಿಯನ್ನು ಸೀತಾರಾಮಯ್ಯನವರು ಮೊದಲು ಪ್ರಕಟಿಸಿದ್ದು ೧೯೬೮ರಲ್ಲಿ, ಬೆಂಗಳೂರಿನ ಸರ್ಕಾರಿ ಕಾಲೇಜಿನ ಕರ್ನಾಟಕ ಸಂಘದ ಮೂಲಕ, ಅನಂತರ ಆರು ವರ್ಷಗಳ ಅಂತರದಲ್ಲಿ ೧೯೭೫ರಲ್ಲಿ ಮೈಸೂರಿನ ಡಿ.ವಿ.ಕೆ. ಮೂರ್ತಿ ಅವರ ಮೂಲಕ 'ಕಿರಿಯ ಆವೃತ್ತಿ'ಯಾಗಿ ಪ್ರಕಟಿಸಿದರು. ಈ ಎರಡೂ ಆವೃತ್ತಿಗಳಿಗೆ ಸಾಕಷ್ಟು ವ್ಯತ್ಯಾಸಗಳಿವೆ. ಮೊದಲ ಆವೃತ್ತಿಯ ನಂತರ ಐದಾರು ವರ್ಷಗಳ ಅವಧಿಯಲ್ಲಿ ಬಂದ ಎಲ್ಲ ಅಧ್ಯಯನ ಸಾಮಗ್ರಿಗಳನ್ನೂ ಹೊಸ ವಿಚಾರಗಳನ್ನೂ ಅಳವಡಿಸಿಕೊಂಡು ಕಿರಿಯ ಆವೃತ್ತಿಯನ್ನು ಪರಿಷ್ಕರಿಸಿದ್ದಾರೆ. ಆದರೆ ಕಿರಿಯ ಆವೃತ್ತಿ ಹೆಸರಿಗೆ ತಕ್ಕಂತೆ ಕಿರಿಯ ಆವೃತ್ತಿಯಾಗಿರುವುದರಿಂದ ಮೊದಲ ಆವೃತ್ತಿಯಲ್ಲಿರುವಷ್ಟು ಸವಿವರವಾದ ಕವಿಕಾವ್ಯ ವಿಚಾರವಾಗಲಿ, ಪೀಠಿಕೆಯಾಗಲಿ, ಸಂಪಾದಕೀಯ ಟಿಪ್ಪಣಿಗಳಾಗಲಿ ಇಲ್ಲ. ೫೫೦ ಪುಟಗಳ ಮೊದಲ ಆವೃತ್ತಿಯನ್ನು ಸೀತಾರಾಮಯ್ಯನವರು 'ವಿದ್ಯಾರ್ಥಿ ಮುದ್ರಣ' ಎಂದು ಕರೆದಿದ್ದಾರೆ! ವಿಸ್ತೃತ 'ಪಂಡಿತ ಆವೃತ್ತಿ'ಯನ್ನು ಮರುಮುದ್ರಣದಲ್ಲಿ (ಅವಕಾಶ ಒದಗಿದರೆ) ಸಿದ್ಧಪಡಿಸಲಾಗುವುದು ಎಂದು ಹೇಳಿದ್ದಾರೆ. ಆ ಅವಕಾಶ ೧೯೭೫ರಲ್ಲಿ ಒದಗಿದರೂ ಅದು ಕಿರಿಯ ಆವೃತ್ತಿಯ ಸೀಮಿತ ಉದ್ದೇಶದಲ್ಲಿದ್ದುದರಿಂದ ಪಾಠಾಂತರಗಳನ್ನಷ್ಟೇ 'ಮೇಲ್ಪಾಟು' ಮಾಡಿದ್ದಾರೆ. 'ಹಲ ಕೆಲವು ದೋಷಗಳನ್ನು' ಪರಿಹರಿಸಿದ್ದಾರೆ. ಪೀಠಿಕೆಯಲ್ಲಿ "ವಿದ್ವಾಂಸರು–ಮುಖ್ಯವಾಗಿ ಕರ್ತೃತ್ವ ವಿಚಾರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಗಮನಿಸಿ ವಿಮರ್ಶಿಸಿ, ಗಮನಕ್ಕೆ ಬಂದ ಒಂದೆರಡು ಹೊಸ ಅಂಶಗಳನ್ನೂ ಸೇರಿಸಿ, ಒಟ್ಟಿನ ಮೇಲೆ ವಿಷಯ ವಿವೇಚನೆಯನ್ನು ಕೂಡಿದ ಮಟ್ಟಿಗೂ ಇಂದಿನವರೆಗಿನ (Up-to-date) ವಿಚಾರ ಸೀಮೆಗೆ ತಂದು ನಿಲ್ಲಿಸಿದೆ" ಎಂದು ಹೇಳಿರುವ ಕಿರಿಯ ಆವೃತ್ತಿಯ ಬಿನ್ನಹದ ಮಾತುಗಳಲ್ಲಿನ ಅಂಶಗಳಿಗೆ ಮಾತ್ರ ಸೀಮಿತವಾಗಿದೆ. ಪಂಡಿತ ಆವೃತ್ತಿಯ ಅವಕಾಶ ಒದಗದೇ ಹೋದದ್ದು ಒಂದು ನಷ್ಟವೇ ಆಗಿದೆ. ಪ್ರಾಯಶಃ ಮೊದಲ ಆವೃತ್ತಿಯೇನಾದರೂ ಅವರ ಜೀವಿತ ಅವಧಿಯಲ್ಲಿ ಪುನರ್ಮುದ್ರಣದ ಅವಕಾಶವನ್ನು ಪಡೆದಿದ್ದಲ್ಲಿ ಈ ಕೃತಿ ಇನ್ನಷ್ಟು ಶೋಭೆಯನ್ನು ಪಡೆದುಕೊಳ್ಳುತ್ತಿತ್ತು ಎಂದು ನಿಸ್ಸಂಶಯವಾಗಿ ಹೇಳಬಹುದು.

ಏಕೆಂದರೆ ಸೀತಾರಾಮಯ್ಯನವರು ಕೊನೆಯ ದಿನಗಳವರೆಗೂ ನೃಪತುಂಗ–ಶ್ರೀವಿಜಯ – ಕವಿರಾಜಮಾರ್ಗಗಳ ಸತತ ಅಭ್ಯಾಸ – ಅಧ್ಯಯನ – ಚಿಂತನೆಗಳನ್ನು ನಡೆಸುತ್ತಲೇ ಇದ್ದರು. ಕವಿರಾಜಮಾರ್ಗದ ಮೇಲೆ ಅವರು ಬರೆದಿರುವಷ್ಟು ಲೇಖನಗಳನ್ನು ಈವರೆಗೆ ಬೇರೆಯಾರೂ ಬರೆದಿರುವುದು ನನ್ನ ಗಮನಕ್ಕೆ ಬಂದಿಲ್ಲ. ಜೊತೆಗೆ ನೃಪತುಂಗನನ್ನು ಕುರಿತಂತೆ ಒಂದು ಕಾದಂಬರಿಯನ್ನು ಬರೆಯುವ ಆಲೋಚನೆಯೂ ಅವರಿಗೆ ಸ್ಪಷ್ಟವಾಗಿ ಇತ್ತು. ಅದಕ್ಕಾಗಿ ಎಲ್ಲಾ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಲೇ ಇದ್ದರು. ಅಷ್ಟೇ ಅಲ್ಲದೆ ಕವಿರಾಜಮಾರ್ಗದ ಅವರ ಸ್ವಂತ ಪ್ರತಿಯ ಟಿಪ್ಪಣೆಗಳ ಕೊನೆಯಲ್ಲಿ ಹೆಚ್ಚುವರಿ ಹಾಳೆಗಳನ್ನು ಸೇರಿಸಿ ವಿಶೇಷವಾಗಿ ಬೈಂಡ್ ಮಾಡಿಸಿ ಇಟ್ಟುಕೊಂಡಿದ್ದ ಪುಸ್ತಕದಲ್ಲಿ ಆಗಾಗ್ಗೆ 'ವಿಶೇಷ ಟಿಪ್ಪಣಿ'ಗಳನ್ನು

ಅವರನ್ನು ಕೊಂಡೊಯ್ದು ಮುಖ್ಯಕೊರತೆಯನ್ನು ಉಳಿಸಿದೆ. ಆದರೂ ಈ ಕೊರತೆಯನ್ನು ಡಾ॥ ಟಿ.ವಿ. ವೆಂಕಟಾಚಲ ಶಾಸ್ತ್ರಿಗಳು ಸಮರ್ಥವಾಗಿ ನೀಗಿಸಿದ್ದಾರೆ. ೭೮ ಪುಟದ ಉಪೋದ್ಘಾತದಲ್ಲಿ ಶಾಸ್ತ್ರಿಗಳು ಇದುವರೆವಿಗೂ ಪ್ರಕಟವಾಗಿರುವ ಕುಮಾರವ್ಯಾಸ ಭಾರತದ ಎಲ್ಲ ಆವೃತ್ತಿಗಳನ್ನು ಸಮೀಕ್ಷಿಸಿ, ಕುಮಾರ ವ್ಯಾಸನ ಅನುಕರಣೆ, ಪ್ರಭಾವ, ಕವಿಯ ಚರಿತ್ರೆ. ಗ್ರಂಥಭಾಷೆ, ಶೈಲಿಗಳು ಹಾಗೂ ವಿಸ್ತಾರವಾದ ಕಾವ್ಯಸಮೀಕ್ಷೆ, ಛಂದಸ್ಸುಗಳ ಬಗ್ಗೆ ಚರ್ಚಿಸಿ ಅವುಗಳ ಜೊತೆಗೆ ಈ ಸಂಪಾದಿತ ಕೃತಿಯ ಸಂಪಾದನಾ ಮೌಲ್ಯವನ್ನು ವಿವೇಚಿಸಿದ್ದಾರೆ. ಈ ಸಂಗ್ರಹದ ಮೌಲ್ಯವನ್ನು ಹೆಚ್ಚಿಸಲು ಈ ಉಪೋದ್ಘಾತ ನೆರವಾಗಿದೆ. ಬಹಳ ಅಚ್ಚುಕಟ್ಟಾಗಿ ಸೂಕ್ತ ಉದಾಹರಣೆಗಳೊಂದಿಗೆ ಕುಮಾರವ್ಯಾಸವನ್ನು ಪುನಃ ಪರಿಶೀಲಿಸಿದ್ದಾರೆ. ಕುಮಾರವ್ಯಾಸನ ಅಭಿಮಾನಿಗಳಿಗೆ ಇದೊಂದು ಅತ್ಯುತ್ತಮ ಸಂಗ್ರಾಹ್ಯ ಸಂಪುಟವಾಗಿದೆ. ಈ ಕಾರಣದಿಂದಲೇ ಎಂ.ವಿ.ಸೀ. ಅವರ ಸಂಪಾದನೆಯನ್ನು ಕುರಿತ ಟಿ.ವಿ.ವಿ ಅವರ ಅಭಿಪ್ರಾಯದ ಭಾಗವನ್ನು ಮತ್ತು ಸಹಾಯಕ ಸಂಪಾದಕರ ಮಾತನ್ನೇ ಇಲ್ಲಿ ಅಳವಡಿಸಿದೆ.

೩. ಎಂ.ವಿ.ಸೀ. ಅವರ ಇನ್ನೊಂದು ಸಂಪಾದಿತ ಕೃತಿ **'ಚಂದ್ರಚೂಡಾಮಣಿ ಶತಕ'**ದ ಬಗೆಗೆ ಹೇಳಲೇಬೇಕಾದ ಒಂದು ವಿಚಾರವಿದೆ. ಈಕೃತಿ ಕನ್ನಡದ ಮೊದಲ ಲಭ್ಯ ಶತಕವಾಗಿದ್ದು ಶ್ರೇಷ್ಠ ಸಂಪಾದನೆಗೆ ಮಾದರಿಯಾಗಿದೆ. ಕೃತಿ ಚಿಕ್ಕದಾದರು ಗ್ರಂಥಸಂಪಾದನೆಯ ವಿಧಾನ ದೊಡ್ಡದಾಗಿದೆ. ಏಕೈಕ ಪ್ರತಿಯ ಸಹಾಯದಿಂದ ಸಂಪಾದಿಸಿದ್ದರೂ ಪಾಠಪರಿಷ್ಕರಣವನ್ನೂ ಗ್ರಂಥಸಂಪಾದನೆಯ ವಿಧಾನಗಳನ್ನೂ ಗರಿಷ್ಠ ಪ್ರಮಾಣದಲ್ಲಿ ಬಳಸಿಕೊಂಡು ಉತ್ಕೃಷ್ಟಗೊಳಿಸಿದ್ದಾರೆ. ನಾಗವರ್ಮನ ಕಾಲ–ದೇಶ–ಮತದ ವಿಚಾರವನ್ನೂ ಪ್ರಸ್ತಾವನೆಯಲ್ಲಿ ವಿವರವಾಗಿ ಚರ್ಚಿಸಿದ್ದಾರೆ. ಈಚೆಗೆ ಪ್ರೊ॥ ಸಿ. ಮಹದೇವಪ್ಪನವರು ತಮ್ಮಲ್ಲಿದ್ದ ಹಸ್ತಪ್ರತಿಯ ಆಧಾರದಿಂದ ಈಕೃತಿಯನ್ನು ಪುನಾಸಂಪಾದಿಸಿದ್ದು ಸೀತಾರಾಮಯ್ಯನವರ ಕವಿ ಕಾಲ ಧರ್ಮದ ವಿಚಾರಗಳನ್ನು ಒಪ್ಪದೆ ನಾಗವರ್ಮ ಒಬ್ಬನೇ ಎಂದೂ ಅವನು ವೀರಶೈವನೆಂದೂ ಪ್ರತಿಪಾದಿಸುತ್ತಾರೆ. ಈ ನೂತನ ಚಿಂತನೆಯ ನಂತರವೂ ಸೀತಾರಾಮಯ್ಯನವರ ಪ್ರಸ್ತಾವನೆ ತನ್ನ ಮೌಲಿಕತೆಯನ್ನು ಕಳೆದುಕೊಳ್ಳದಷ್ಟು ನಿರ್ದುಷ್ಟವಾಗಿರುವುದೇ ಅವರ ಶ್ರೇಷ್ಠ ಗ್ರಂಥ ಸಂಪಾದನಾ ಮಾದರಿಗೆ ನಿದರ್ಶನವಾಗಿದೆ.

**೪. 'ಸರ್ವಜ್ಞ ವಚನಗಳ'** ಸಂಪಾದನೆ ಎಂವಿಸೀ ಅವರ ಇನ್ನೊಂದು ಸಾಧನೆ. ಇದು ಸರ್ವಜ್ಞನ ವಚನಗಳ ಸಮಗ್ರ ಸಂಕಲನವಲ್ಲದಿದ್ದರೂ ಇವರ ಸಂಪಾದನೆಯ ಕಾರಣದಿಂದ ಇದೊಂದು ಮುಖ್ಯ ಕೃತಿಯಾಗಿರುತ್ತದೆ. ಸರ್ವಜ್ಞನ ವಚನಗಳನ್ನು ಪುನಾಸಂಪಾದಿಸುವವರು ಈ ಕೃತಿಯನ್ನ ಕಡೆಗಣಿಸಲು ಸಾಧ್ಯವಿಲ್ಲದಂತೆ ಇದರ ಪ್ರಾಮುಖ್ಯತೆ ಇದೆ. ಈ ಕೃತಿಗೆ ಎಂವಿಸೀ ಅವರು ಪ್ರಧಾನವಾಗಿ ಕಿಟಲ್ ಕೋಶದ ಉದಾಹೃತ ತ್ರಿಪದಿಗಳು ಮತ್ತು ಕೆಳದಿ ವಸ್ತುಸಂಗ್ರಹಾಲಯದ ಹಸ್ತಪ್ರತಿಯಲ್ಲಿ ದೊರಕಿತ ತ್ರಿಪದಿಗಳನ್ನು ಮಾತ್ರ ಬಳಸಿದ್ದರೂ ಒಟ್ಟಾರೆ ಸರ್ವಜ್ಞನ ತ್ರಿಪದಿಗಳ ಬಗೆಗೆ ಮೌಲಿಕ ಚರ್ಚೆಯನ್ನು ಮಾಡಿದ್ದಾರೆ. ಎಲ್. ಬಸವರಾಜು ಅವರ ಪರಮಾರ್ಥ

ಪ್ರೌಢವಾದ ಪಾಂಡಿತ್ಯವನ್ನು ಗವಾನಿಸಬಹುದಾಗಿದೆ.

ವ್ಯಾಕರಣದಲ್ಲಿ, ಕಾವ್ಯಮೀಮಾಂಸೆಯಲ್ಲಿ, ಛಂದಸ್ಸಿನಲ್ಲಿ ಸ್ವತಃ ಪರಿಶ್ರಮವನ್ನು ಪಡೆದಿದ್ದ ಸಂಪಾದಕರು ಆಂತರಿಕ ಆಧಾರಗಳಿಂದ ಕವಿರಾಜಮಾರ್ಗವನ್ನು ಬಹಳ ಪರಿಶ್ರಮದಿಂದ ಸಂಪಾದಿಸಿ ನಮಗೆ ಅಮೂಲ್ಯ ಕೊಡುಗೆಯನ್ನಾಗಿ ನೀಡಿದ್ದಾರೆ. ಈ ಕೃತಿಯ ಸಂಪಾದನಾ ಕಾರ್ಯಕ್ಕೆ ಬಾಹ್ಯ ಆಧಾರವಾಗಿ ಐತಿಹಾಸಿಕ ಅಂಶಗಳನ್ನು, ಶಾಸನಗಳನ್ನು ಬಳಸಿರುವರಲ್ಲದೆ ಕೃತಿಯ ಕೊನೆಯ ಭಾಗದಲ್ಲಿ ರಾಷ್ಟ್ರಕೂಟದ ವಂಶಾವಳಿಯನ್ನೂ ಆವರೆಗಿನ ಗ್ರಂಥ–ಲೇಖನಗಳ ಪಟ್ಟಿಯನ್ನೂ ನೀಡಿದ್ದಾರೆ. ಈ ಅಂಶ ಸಂಪಾದನಾ ಕಾರ್ಯದ ಸೂಕ್ಷ್ಮತೆಯನ್ನು ತೋರಿಸುತ್ತದೆ.

೨. ಪ್ರೊ॥ ಎಂ.ವಿ.ಸೀ. ಅವರಿಂದ ಸಂಪಾದಿತವಾದ ಇನ್ನೊಂದು ಪ್ರಮುಖ ಗ್ರಂಥ **'ಕುಮಾರವ್ಯಾಸ ಭಾರತ ಸಂಗ್ರಹ'** ಅವರ ನಿಧನಾನಂತರ ಪ್ರಕಟಗೊಂಡಿದೆ. ಸುಮಾರು ಮೂರು ವರ್ಷಗಳಷ್ಟು ಕಾಲ ಸಿದ್ಧತೆ ನಡೆಸಿ ಪಾಠಾಂತರಗಳನ್ನು ನಿಷ್ಕರ್ಷಿಸಿ ಅತ್ಯಂತ ಪಾಂಡಿತ್ಯಪೂರ್ಣವಾಗಿ ಈ ಗ್ರಂಥವನ್ನು ಸಂಪಾದಿಸಲಾಗಿದೆ. ಹತ್ತುಸಾವಿರ ಪದ್ಯಗಳಷ್ಟು ದೀರ್ಘಕಾವ್ಯವನ್ನು ಕೇವಲ ೨೦೩೯ ಪದ್ಯಗಳಲ್ಲಿ ಸಂಗ್ರಹಿಸಿರುವುದರಿಂದ ಎಷ್ಟು ಜಾಗರೂಕತೆಯಿಂದ ಸಂಪಾದನಾ ಕಾರ್ಯದಲ್ಲಿ ತೊಡಗಿದ್ದರೂ ಹಲವಾರು ಪಾಠಾಂತರ ಸಮಸ್ಯೆಗಳು ಸಂಪಾದಕರಿಗೆ ಎದುರಾಗಿರುವುದು ಸಹಜವಾಗಿದೆ. ಈ ಸಮಸ್ಯೆಗಳನ್ನೆಲ್ಲ ಸಂಪಾದಕರು ಗುರುತಿಸಿ, ತಕ್ಕಮಟ್ಟಿಗೆ,ತಮ್ಮ ದೃಷ್ಟಿಯಲ್ಲಿ ಪರಿಹಾರ ಸೂಚಿಸಿರುವ ಸಂಪಾದನಾ ಜಾಣ್ಮೆಯನ್ನು ಕಾಣಬಹುದಾಗಿದೆ. ಗ್ರಂಥಪಾಠಗಳನ್ನು ಆಯ್ಕೆ ಮಾಡಿರುವುದನ್ನು ಗಮನಿಸಿದರೆ ಈವರೆಗಿನ ಹಲವಾರು ಊಹಾತ್ಮಕ, ವಿವಾದಾತ್ಮಕ ಪಾಠಗಳು ಇಲ್ಲಿ ಖಚಿತತೆಯನ್ನು ಪಡೆಯುವಷ್ಟು ಸಮರ್ಪಕವಾಗಿವೆ ಎನಿಸುತ್ತದೆ. ಪದ್ಯಗಳ ಆಯ್ಕೆಯಲ್ಲಿ ಹಲವರಿಗೆ ಹಲವು ದೃಷ್ಟಿಯಲ್ಲಿ ಕೊರತೆಗಳು ಕಾಣಬಹುದಾದರೂ ಕುಮಾರವ್ಯಾಸನಂಥ ಪ್ರತಿಭಾನ್ವಿತ ಕವಿಯ ಪದ್ಯಗಳನ್ನು ಯಾರೇ ಆಯ್ಕೆ ಮಾಡಿದರೂ ಕೊರತೆ ಸಹಜವೇ. ಈ ಕೃತಿಯಿಂದ ಕುಮಾರವ್ಯಾಸ ಭಾರತದ ಶಾಸ್ತ್ರೀಯ ಸಂಪಾದಿತಕೃತಿಯೊಂದರ ಕೊರತೆಯನ್ನು ಸ್ವಲ್ಪಮಟ್ಟಿಗೆ ನೀಗುತ್ತಾದರೂ ಸಮಗ್ರಕೃತಿಯ ಕೊರತೆ ಇದ್ದೇಇದೆ. ಭಾಗಶಃ ಸಂಪಾದಿತವಾಗಿದ್ದ ಅಪೂರ್ವ ಹಸ್ತಪ್ರತಿಯೊಂದು ಈ ಕೃತಿಗೆ ಆಧಾರ ಪ್ರತಿಯಾಗಿರುವುದರಿಂದ ಇದರ ಮೌಲ್ಯ ಇಮ್ಮಡಿಸಿದೆ. ಆಚಾರ್ಯ ಬಿ.ಎಂ.ಶ್ರೀ, ಎ.ಆರ್.ಕೃ., ಡಿ.ಎಲ್.ಎನ್., ಟಿ.ಎಸ್. ವೆಂಕಣ್ಣಯ್ಯ ಮುಂತಾದ ಘನ ವಿದ್ವಾಂಸರು ಪಾಠಾಂತರಗಳನ್ನು ಗುರುತಿಸಿದ್ದ, ಸಂಪಾದಕೀಯ ಸೂಚನೆಗಳನ್ನು ಹಾಕಿದ್ದ ಕಾಗದದ ಹಸ್ತಪ್ರತಿಯಾದ ಅದು ಮೈಸೂರಿನ ಶಾರದಾ ಮಂದಿರದ ಎಚ್.ಎಂ. ಶಂಕರ ನಾರಾಯಣ ರಾವ್ ಅವರಿಂದ ಬಂದಿದ್ದು, ಅದನ್ನು ಸೀತಾರಾಮಯ್ಯನವರೊಂದಿಗೆ ಪ್ರಸ್ತುತ ಸಂಪುಟದ ಸಂಪಾದಕನೂ ಅವರ ಮನೆಗೆ ಹೋಗಿ ತರಲಾಗಿತ್ತು.

ಈ ಪಾಂಡಿತ್ಯಪೂರ್ಣ ಸಂಪಾದಿತ ಕೃತಿಗೆ ಸಂಪಾದಕರದೇ ಪಾಂಡಿತ್ಯಪೂರ್ಣ ಪ್ರಸ್ತಾವನೆ ಇಲ್ಲದೇ ಹೋದದ್ದು ದೊಡ್ಡ ದೌರ್ಭಾಗ್ಯ. ಪ್ರಸ್ತಾವನೆ ಬರೆಯಲು ಎಲ್ಲ ಸಿದ್ಧತೆ ಮಾಡಿಕೊಂಡು ಅಧ್ಯಯನದಲ್ಲಿ ತೊಡಗಿರುವಾಗಲೇ ವಿಧಿ ಎಂ.ವಿ.ಸೀ.

ಆ ಸಂಸ್ಥೆಯ ಸಂಸ್ಥಾಪಕರೂ ಗೌ॥ ಕಾರ್ಯದರ್ಶಿಗಳೂ ಆದ ಕೆಳದಿ ಗುಂಡಾಜೋಯಿಸ್‌ರೊಂದಿಗೆ ಸೇರಿ ಈ ಕೃತಿಯನ್ನು ಸಂಪಾದಿಸಿದ್ದಾರೆ. ಕೆಳದಿ ಗುಂಡಾಜೋಯಿಸರು ವೆಂಕಣ್ಣ ಕವಿಯ ವಂಶಸ್ಥರೂ ಆಗಿದ್ದು ಈ ಕೃತಿಯ ಕವಿಕಾವ್ಯ ವಿಚಾರ ಮತ್ತು ಅನುಬಂಧಗಳ ಜೋಡಣೆ, ಹಸ್ತಪ್ರತಿ ಸಂಪ್ರತಿಕಾರ್ಯ ಹಾಗೂ ಪಾಠಾಂತರಗಳ ಪಟ್ಟಿಯನ್ನು ಸಿದ್ಧಪಡಿಸಿದ್ದು ಎಂ.ವಿ. ಸೀತಾರಾಮಯ್ಯನವರು ಪಾಠಪರಿಷ್ಕರಣ ಮಾಡಿ ಕೃತಿಯನ್ನು ಮೌಲಿಕವಾಗಿ ಸಂಪಾದಿಸಿದ್ದಾರೆ.

ಈ ಕೃತಿಯಲ್ಲಿ ಪಾರ್ವತಿವಲ್ಲಭ ಶತಕ, ಗಣಸಹಸ್ರನಾಮ ಮತ್ತು ನರಹರಿವಿಜಯ ಎಂಬ ಮೂರು ಕೃತಿಗಳಿದ್ದು, ಈ ಮೂರು ಕೃತಿಗಳ ಹಸ್ತಪ್ರತಿಗಳು ಕೆಳದಿ ವಸ್ತು ಸಂಗ್ರಹಾಲಯದವೇ ಆಗಿವೆ. ಪಾರ್ವತಿವಲ್ಲಭ ಶತಕ ಮತ್ತು ನರಹರಿ ವಿಜಯದ ಹಸ್ತಪ್ರತಿಗಳು ಶುದ್ಧ ಪ್ರತಿಗಳಾಗಿದ್ದರೂ ಲಿಪಿಕಾರರ ದೋಷಗಳನ್ನು ಸ್ಖಾಲಿತ್ಯಗಳನ್ನು ತಿದ್ದಿ ಕೆಲವು ಪಾಠಗಳನ್ನು ಪರಿಷ್ಕರಿಸಿರುವುದಾಗಿಯೂ ಹಾಗೆ ನೀಡಿರುವ ಪರಿಷ್ಕೃತ ಪಾಠಗಳನ್ನು ಚೌಕಕಂಸದಲ್ಲಿ ಕೊಟ್ಟಿದೆಯೆಂದೂ ಸೀತಾರಾಮಯ್ಯನವರು ಸೂಚಿಸುವ ಮೂಲಕ ಗ್ರಂಥಸಂಪಾದನೆಯ ಶಿಸ್ತನ್ನು ಶ್ರದ್ಧೆಯಿಂದ ಪಾಲಿಸಿರುವ ಶ್ರೇಷ್ಠ ಗ್ರಂಥಸಂಪಾದನಾ ತಜ್ಞರೆನಿಸಿದ್ದಾರೆ. ಗಣ ಸಹಸ್ರನಾಮಕ್ಕೆ ಇತರ ಕಡೆಗಳಿಂದಲೂ ಗುಂಡಾಜೋಯಿಸರು ಸಂಗ್ರಹಿಸಿದ್ದ ಆಕರಗಳ ಹಿನ್ನೆಲೆಯಲ್ಲಿ ಮುಖ್ಯವಾಗಿ 'ಗಣಸಹಸ್ರನಾಮ ಸ್ತೋತ್ರ' ಎಂಬ ಸಂಸ್ಕೃತ ಕೃತಿಯ ಆಧಾರದ ಮೇಲೆ ಹಸ್ತಪ್ರತಿಯಲ್ಲಿದ್ದ ಅನೇಕ ಬಗೆಯ ಸ್ಖಾಲಿತ್ಯಗಳನ್ನು ಪರಿಷ್ಕರಿಸಿ ಗಣಗಳ ಹೆಸರುಗಳ ಶುದ್ಧರೂಪವನ್ನು ಕೊಡುವಲ್ಲಿ ಪರಿಶ್ರಮವಹಿಸಿದ್ದಾರೆ.

ಈ ಕೃತಿಗೆ ಗುಂಡಾಜೋಯಿಸರ ಮೌಲಿಕವಾದ ಉಪೋದ್ಘಾತ, ಅತ್ಯುತ್ತಮ ಸಂಪಾದಿತ ಕೃತಿಯನ್ನಾಗಿಸಿರುವ ಸೀತರಾಮಯ್ಯನವರ ಗ್ರಂಥ ಸಂಪಾದನಾ ಕ್ರಮ ಶ್ಲಾಘನೀಯವಾಗಿದೆ. ಇವರ 'ಪರಾಮರ್ಶೆ' ಈ ಕೃತಿಗೆ ಅತ್ಯುತ್ತಮ ಉನ್ನತ ವಿಮರ್ಶೆಯಾಗಿದೆ.

**೭. ಶ್ರೀ ಕೃಷ್ಣದೇವರಾಯ ದಿನಚರಿ :** ಈ ಕೃತಿಯ ಪ್ರಕಟಣೆ ಎಂ.ವಿ. ಸೀತಾರಾಮಯ್ಯನವರು ಬಿ.ಎಂ.ಶ್ರೀ. ಪ್ರತಿಷ್ಠಾನದ ಮೂಲಕ ಕನ್ನಡಕ್ಕೆ ನೀಡಿದ ಅಮೂಲ್ಯ ಕೊಡುಗೆಯಾಗಿದೆ. ಇದೊಂದು ಐತಿಹಾಸಿಕ ಕೃತಿ. ಇದೊಂದು 'ಬಖೈರು' 'ನಾಮೆ' ಮಾದರಿಯ ದಾಖಲೆಯ ಗ್ರಂಥ. ಕೈಫಿಯತ್ತು, ನಾಮೆ, ಕಡತ, ಬಖೈರು, ಸ್ಥಳಮಹಾತ್ಮೆ ಮುಂತಾದ ದಾಖಲೆಗಳನ್ನೆಲ್ಲ ಈಚೆಗೆ 'ದಾಖಲು ಸಾಹಿತ್ಯ' ಎಂದು ಕರೆಯಲಾಗುತ್ತಿದೆ. ಈ ದಾಖಲು ಸಾಹಿತ್ಯಕ್ಕೆ 'ದಿನಚರಿಯು' ಹೊಸದಾಗಿ ಈ ಕೃತಿಯ ಮೂಲಕ ಸೇರ್ಪಡೆಯಾಗುತ್ತದೆ. ಇಂದಿನವರೆಗೆ ಈ ಬಗೆಯ ಇನ್ನೊಂದು ಕೃತಿ ಲಭ್ಯವಾಗಿಲ್ಲ. 'ದಿನಚರಿ' ಎಂಬುದೂ ಇವುಗಳಂತೆಯೇ ಇನ್ನೊಂದು ಬಗೆಯ ಇತಿಹಾಸದ ಸಂಗತಿಗಳನ್ನು ದಾಖಲಿಸುವ ಕೃತಿ. ಇದು ಓಲೆಗರಿಯಲ್ಲಿರುವುದು ವಿಶೇಷ. ಇಂತಹ ದಾಖಲು ಸಾಹಿತ್ಯದ ಕೃತಿಗಳೆಲ್ಲ

ಕೃತಿಯುನ್ನು ವಿವರವಾಗಿ ಚರ್ಚಿಸಿ ಸರ್ವಜ್ಞನ ಹೆಸರು 'ಪರವಾರ್ಥ' ವಾಗುವುದಿಲ್ಲವೆಂದು ಸಾಧಾರವಾಗಿ ನಿರೂಪಿಸಿದ್ದಾರೆ. ಮುಖ್ಯವಾಗಿ ಅಂಶಲಯದ ಜಾಡನ್ನು ಹಿಡಿದು ತ್ರಿಪದಿಯ ಪಾಠಗಳನ್ನು ಪರಿಷ್ಕರಿಸಿರುವುದು ಇಲ್ಲಿಯ ವೈಶಿಷ್ಟ್ಯವಾಗಿದೆ. ಉತ್ಕೃಷ್ಟವಾದ ಪಾಠಪರಿಷ್ಕರಣ, ವಿಸ್ತಾರವಾದ ಪ್ರಸ್ತಾವನೆ ಮತ್ತು ಸಮಗ್ರವಾದ ಸರ್ವಜ್ಞನನ್ನು ಕುರಿತ ಗ್ರಂಥ-ಲೇಖನ ಸೂಚಿಗಳಿಂದ ಇದೊಂದು ಉತ್ತಮ ಸಂಪಾದಿತ ಕೃತಿಯಾಗಿ ಗಮನಸೆಳೆಯುತ್ತದೆ. ಈ ಕೃತಿಗೆ ಡಾ॥ ಕೆ.ಆರ್. ಗಣೇಶ್, ವಿ. ವೆಂಕಟರಾವ್ ಅವರು ಸಂಪಾದಕರಾಗಿದ್ದರೂ, ಪ್ರಧಾನ ಸಂಪಾದಕರಾದ ಎಂ.ವಿ.ಸೀ. ಅವರೇ ಪ್ರಮುಖ ಸಂಪಾದಕರಾಗಿದ್ದು ತಮ್ಮ ಮತ್ತು ಸಂಪಾದಕರ ಹೊಣೆಗಳನ್ನು ಉಪೋದ್ಘಾತದಲ್ಲಿ ಸ್ಪಷ್ಟಪಡಿಸಿದ್ದಾರೆ.

**೫. ಶ್ರೀನಿವಾಸ ಕಲ್ಯಾಣ** : ಏರಿ ಶೇಷಾಚಾರ್ಯರ ಕೃತಿಯಾದ 'ಶ್ರೀನಿವಾಸ ಕಲ್ಯಾಣ' ಹರಿಕಥಾ ಕೃತಿ, ತಮ್ಮ ಬಂಧುಗಳಾದ ಶ್ರೀ ಕೆ. ಶ್ರೀಕಂಠಯ್ಯ ಅವರ ಮೂಲಕ ಬಂದಿದ್ದ ಕಾಗದದ ಹಸ್ತಪ್ರತಿಯನ್ನು ಡಾ॥ ಕೆ.ಎಂ. ಕೃಷ್ಣರಾವ್ ಅವರು ಸಂಪಾದಿಸಿದ್ದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಮೂಲಕ ಪ್ರಕಟಿಸಲಾಗಿದೆ. ಸಂಪಾದನಾಕಾರ್ಯವನ್ನು ಕೃಷ್ಣರಾಯರೇ ಪೂರ್ಣವಾಗಿ ನಿರ್ವಹಿಸಿದ್ದಾರೆ. ಬಿ.ಎಂ. ಶ್ರೀ ಪ್ರತಿಷ್ಠಾನದ ಹಸ್ತಪ್ರತಿಯೊಂದಿಗೆ ತಮ್ಮಲ್ಲಿದ್ದ ಇನ್ನೊಂದು ಹಸ್ತಪ್ರತಿ ಮತ್ತು ಮುದ್ರಿತ ಪ್ರತಿಗಳನ್ನು ಸೇರಿಸಿಕೊಂಡು ಒಟ್ಟು ಐದು ಪ್ರತಿಗಳ ಸಹಾಯದಿಂದ ಈ ಕೃತಿಯನ್ನು ಸಂಪಾದಿಸಲಾಗಿದೆ. ಈ ಕೃತಿಯ ಕರ್ತೃ ಏರಿ ಶೇಷಾಚಾರ್ಯರ ವಂಶಸ್ಥರು ಈ ಕೃತಿಯನ್ನು ನಕಲು ಮಾಡಿ ಹಂಚುತ್ತಿದ್ದರೆಂದು ಸಂಪಾದಕರು ಒಂದು ಮೌಲಿಕ ಮಾಹಿತಿಯನ್ನು ಉಲ್ಲೇಖಿಸಿದ್ದರೂ ಕರ್ತೃವಿನ ಕಾಲದ ಬಗ್ಗೆ ಖಚಿತ ಮಾಹಿತಿ ನೀಡಲಾಗಿಲ್ಲ. ದಿವಾನ್ ಪೂರ್ಣಯ್ಯನವರ ಕಾಲದಲ್ಲಿದ್ದವರು ಎಂದಷ್ಟೇ ಹೇಳಿದ್ದಾರಾದರೂ ಏರಿ ಶೇಷಾಚಾರ್ಯರ ಕಾಲ ದೇಶ ಇತಿವೃತ್ತಗಳನ್ನು ಸಾಕಷ್ಟು ಶ್ರಮವಹಿಸಿ ಸಂಗ್ರಹಿಸಿರುವುದು ಅತಿಮುಖ್ಯ ದಾಖಲೆಯಾಗಿದೆ. ಇವರು ನೀಡುವ ಅಂತ್ಯಕಾಲದ ಪಂಚಾಂಗ ವಿವರಕ್ಕೆ ಎಂ.ವಿ.ಸೀ.ಯವರು ಮೈಸೂರಿನ ಖ್ಯಾತ ಪಂಚಾಗ ಕರ್ತರಾದ ವಿದ್ವಾನ್ ಕೃಷ್ಣಜೋಯಿಸರಿಂದ ದಿನಾಂಕ ಪತ್ತೆ ಹಚ್ಚಿ ೧೮೪೧ ಮೇ ೨೮ ಶುಕ್ರವಾರಕ್ಕೆ ಹೊಂದಿಸಿದ್ದಾರೆ. ಸಂಪಾದಕರಾದ ಕೃಷ್ಣರಾವ್ ಇದನ್ನು ಯಕ್ಷಗಾನ ಕೃತಿ ಎಂದು ಹೇಳಿದ್ದರೂ ಎಂ.ವಿ.ಸೀ.ಯವರು ಹರಿಕಥಾ ಕೃತಿಯೆಂದು ನಿರೂಪಿಸಿದ್ದಾರೆ. ತಿರುಪತಿ ವೆಂಕಟೇಶನನ್ನು ಕುರಿತದ್ದಾಗಿ ಜನಪ್ರಿಯವಾಗಿದ್ದ ಹರಿಕಥೆಯಾದ ಇದನ್ನು ಪರಿಷ್ಕರಿಸಿ ಉತ್ತಮ. ಪಾಠ ನೀಡುವ ಉದ್ದೇಶದಿಂದ ಪ್ರತಿಷ್ಠಾನದಿಂದ ಪ್ರಕಟಿಸಿರುವುದು ಅತ್ಯಂತ ಉಪಯುಕ್ತ ಕಾರ್ಯವಾಗಿದೆ.

**೬. ಕೆಳದಿ ವೆಂಕಣ್ಣ ಕವಿಯ ಕೃತಿಗಳು :** ಈ ಕೃತಿಯು ಕೆಳದಿ ವಸ್ತು ಸಂಗ್ರಹಾಲಯದ ಪ್ರಕಟಣೆಯಾಗಿದ್ದು, ಆ ಸಂಸ್ಥೆಯು ನಿರ್ದೇಶಕರಲ್ಲಿ ಒಬ್ಬರೂ ಆಗಿದ್ದ ಎಂ.ವಿ.ಸೀತಾರಾಮಯ್ಯನವರು ಆ ಮಂಡಲಿಯ ನಿರ್ದೇಶನದ ಮೇರೆಗೆ

ಪರಿಷ್ಕೃತ ಸಂಪಾದನೆಯನ್ನು ಕೈಗೆತ್ತಿಕೊಳ್ಳಲಾಗಿದೆ) ವಿ.ಎಸ್. ಎಸ್. ಆಚಾರ್ಯರು ಮೂಲ ಹಸ್ತಪ್ರತಿಯನ್ನು ಮತ್ತು ನಕಲು ಪ್ರತಿಯನ್ನು, ಕನ್ನಡ ಮತ್ತು ಇಂಗ್ಲಿಷ್‌ಗಳಲ್ಲಿ ಸಂಪಾದಕರ ನುಡಿಗಳನ್ನು ಬರೆದು ಕಳುಹಿಸಿದ್ದುದ್ದನ್ನು ಎಂ.ವಿ. ಸೀತಾರಾಮಯ್ಯನವರು ಗ್ರಂಥಸಂಪಾದನೆಯ ಶಿಸ್ತಿಗೆ ಅಳವಡಿಸಿ ಒಂದು ಉತ್ತಮ ಸಂಪಾದಿತ ಕೃತಿಯನ್ನಾಗಿ ಹೊರತರುವ ಮೂಲಕ ಈ ಕೃತಿಯ ಪ್ರಧಾನ ಸಂಪಾದಕನ ಹೊಣೆಗಾರಿಕೆಯನ್ನು ಜವಾಬ್ದಾರಿಯುತವಾಗಿ ನಿರ್ವಹಿಸಿದ್ದಾರೆ. ಈ ಕೃತಿಯ ಮಹತ್ವವನ್ನು ಮನಗಾಣಿಸುವ ಮೌಲಿಕವಾದ ಹದಿನಾಲ್ಕು ಪುಟಗಳ ದೀರ್ಘ ಪ್ರಸ್ತಾವನೆಯನ್ನು ಬರೆದು ಶ್ರೇಷ್ಠ ಗ್ರಂಥಸಂಪಾದನೆಗೆ ಮಾದರಿಯಾಗಿದ್ದಾರೆ. ಈ ಕೃತಿಯಲ್ಲಿ ವ್ಯಕ್ತವಾಗುವ ಐತಿಹಾಸಿಕ ಸಂಗತಿಗಳನ್ನು ವಾಸ್ತವದಲ್ಲಿ ಪ್ರಚಲಿತದಲ್ಲಿರುವ ಐತಿಹಾಸಿಕ ಸಂಗತಿಗಳೊಂದಿಗೆ ತುಲನೆಮಾಡಿ ಕಂಡುಬರುವ ವ್ಯತ್ಯಾಸವನ್ನು ವಿಶ್ಲೇಷಿಸುವ ಮೂಲಕ ಕೃತಿಯ ಐತಿಹಾಸಿಕ ಮಹತ್ವವನ್ನು ಎತ್ತಿ ಹಿಡಿದ್ದಿದ್ದಾರೆ. 'ಆಮುಕ್ತ ಮಾಲ್ಯದ' ಮೂಲಕ ವ್ಯಕ್ತವಾಗುವ ಕೃಷ್ಣದೇವರಾಯನ ವ್ಯಕ್ತಿತ್ವಕ್ಕೆ ಈ ಕೃತಿ ನಿದರ್ಶನಗಳನ್ನು ಒದಗಿಸುವುದನ್ನು ಉಲ್ಲೇಖಿಸುವ ಮೂಲಕ ಕೃಷ್ಣದೇವರಾಯನ ವ್ಯಕ್ತಿತ್ವವನ್ನು ವಿಸ್ತರಿಸಿದ್ದಾರೆ. 'ಯಾವ ದೃಷ್ಟಿಯಿಂದ ನೋಡದರೂ ಇದೊಂದೆ ಅಮೂಲ್ಯ ಐತಿಹಾಸಿಕ ದಾಖಲೆ' ಎಂಬ ಸೀತಾರಾಮಯ್ಯನವರ ಮಾತು ಇಂದು ನಿಜವಾಗಿದೆ. ಕೃಷ್ಣದೇವರಾಯನ ಇತಿಹಾಸದ ಪುನಾರಚನೆಯಲ್ಲಿ ಇದು ಮಹತ್ವದ ಪಾತ್ರ ವಹಿಸಿರುವುದನ್ನು ವಿದ್ವಾಂಸರು ಸಾಬೀತು ಪಡಿಸಿದ್ದಾರೆ.

ಈ ಕೃತಿಯ ಪ್ರಕಟಣೆಯ ಮೂಲಕ ಎಂ.ವಿ.ಸೀ.ಯವರು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವನ್ನು ಒಂದು ಮಹತ್ವದ ಸಂಸ್ಥೆಯನ್ನಾಗಿ ದಾಖಲಿಸಿದರು ಎಂದರೆ ತಪ್ಪಾಗಲಾರದು. ಅದರಲ್ಲೂ ಹಸ್ತಪ್ರತಿ ಕ್ಷೇತ್ರದಲ್ಲಿ ದಾಖಲು ಸಾಹಿತ್ಯದ ಚರ್ಚೆಗೆ ನಾಂದಿ ಹಾಕಿದರು. ಅಪರೂಪದ ಓಲೆಗರಿಯಲ್ಲಿರುವ ಏಕೈಕ ಐತಿಹಾಸಿಕ ದಾಖಲೆಯನ್ನು ಪ್ರಕಟಿಸುವ ಮೂಲಕ ಇಂತಹ ದಾಖಲೆಗಳೂ ಇತಿಹಾಸ ಪುನಾರಚನೆಯಲ್ಲಿ ಮಹತ್ವದ ಸ್ಥಾನ ಪಡೆಯಬಲ್ಲವು ಎಂಬ ನೂತನ ಚಿಂತನೆಗೂ ನಾಂದಿ ಹಾಡಿದರು. ಇತಿಹಾಸಕಾರರು ನಿರ್ಲಕ್ಷಿಸಿದ್ದ ಐತಿಹಾಸಿಕ ಹಸ್ತಪ್ರತಿಗಳ ಅಧ್ಯಯನಕ್ಕೆ ಈ ಕೃತಿ ಓಂಕಾರ ಹಾಕಿತು. ಎಂ.ವಿ.ಸೀ ಅವರೇ ಆರಂಭಿಸಿದ್ದ 'ಹಸ್ತಪ್ರತಿಶಾಸ್ತ್ರ'ದ ಚಿಂತನಗೆ ಇದು ಮಹತ್ವದ ತಿರುವನ್ನು ನೀಡಿತು. ಹೀಗೆ ಹಲವು ದೃಷ್ಟಿಕೋನಗಳಿಂದ ಶ್ರೀಕೃಷ್ಣದೇವರಾಯ ದಿನಚರಿ ವಿದ್ವಾಂಸರಲ್ಲಿ, ಇತಿಹಾಸಕಾರರಲ್ಲಿ ಸಂಸ್ಕೃತಿ ಚಿಂತಕರಲ್ಲಿ ಒಂದು ರೀತಿಯಲ್ಲಿ ವಿದ್ಯುತ್ ಸಂಚಾರವನ್ನುಂಟು ಮಾಡಿತೆನ್ನಬಹುದು.

## (ಆ) ಅದ್ವೈತಹರಿದಾಸ ಸಾಹಿತ್ಯ ಸಂಪಾದನೆ

ಎಂ.ವಿ.ಸೀತಾರಾಮಯ್ಯನವರು ಮೂರು ಕೀರ್ತನಕೃತಿಗಳನ್ನು ಸಂಪಾದಿಸಿದ್ದು ಅವೆಲ್ಲ ಕನ್ನಡ ಸಾಹಿತ್ಯಕ್ಕೆ ಮೊದಲಬಾರಿಗೆ ಪರಿಚಿತವಾದ ಅದ್ವೈತ ಹರಿದಾಸ ಕೃತಿಗಳಾಗಿವೆ. ಈ ಮೂಲಕ ಕನ್ನಡ ಹರಿದಾಸ ಸಾಹಿತ್ಯದಲ್ಲಿ ಅದ್ವೈತ ಪರಂಪರೆಗೆ

ಸಾಮಾನ್ಯವಾಗಿ ಕಾಗದದಲ್ಲಿ ದಾಖಲಾಗಿರುತ್ತವೆ. ಈವರೆಗೆ ದೊರೆತಿರುವವುಗಳೆಲ್ಲ ಕಾಗದದ ದಾಖಲೆಗಳೇ ಆಗಿವೆ. ಅಪವಾದವೆಂಬಂತೆ ಈ ದಿನಚರಿ ಮಾತ್ರ ಓಲೆಗರಿಗಳಲ್ಲಿ ದಾಖಲೆಯಾಗಿದೆ. ಹೀಗಾಗಿ ಲಭ್ಯವಿರುವ ದಾಖಲು ಸಾಹಿತ್ಯ ಕೃತಿಗಳಲ್ಲಿ ಇದೇ ಅತ್ಯಂತ ಪ್ರಾಚೀನವಾಗಿರಬಹುದೆಂಬ ಪ್ರಧಾನ ಸಂಪಾದಕ ಎಂ.ವಿ.ಸೀತಾರಾಮಯ್ಯನವರ ಪ್ರಸ್ತಾವನೆಯ ಅಭಿಪ್ರಾಯ ಸಾಧುವಾಗಿದೆ. ಈ ಕೃತಿಯನ್ನು ವಿ.ಎಸ್.ಎಸ್. ಆಚಾರ್ಯರು ಸಂಪಾದಿಸಿದ್ದಾರೆ.

ಕೃಷ್ಣದೇವರಾಯನ ಇತಿವೃತ್ತ ಮತ್ತು ಘಟನಾವಳಿಗಳ ಬಗೆಗೆ ಈ ಕೃತಿ ಅನೇಕ ಮೌಲಿಕ ಮಾಹಿತಿಗಳನ್ನು ಒದಗಿಸುತ್ತಿದ್ದು ಅವುಗಳನ್ನು ಬಳಸಿಕೊಂಡು ಕೃಷ್ಣದೇವರಾಯನ ಜೀವನ ಚರಿತ್ರೆಯನ್ನು ವಿದ್ವಾಂಸರು ಈಗಾಗಲೇ ಪುನಾ ರಚಿಸಿದ್ದಾರೆ. (ನೋಡಿ: ಕೃಷ್ಣದೇವರಾಯನ ಜೀವನ ವ್ಯಕ್ತಿತ್ವ ಸಂ: ಪ್ರೊ॥ ಬಿ. ರಾಮಸ್ವಾಮಿ, ಡಾ॥ ಜಿ. ಎಸ್. ದೀಕ್ಷಿತ್, ಕರ್ನಾಟಕ ಪುರಾತತ್ವ ಇಲಾಖೆ, ಮೈಸೂರು) ಪ್ರೊ॥ ಬಿ. ರಾಮಸ್ವಾಮಿಯವರು ಈ ಕೃತಿಯನ್ನು ವಿಸ್ತಾರವಾಗಿ ಚರ್ಚಿಸಿ ಇದರ ಐತಿಹಾಸಿಕ ಮಹತ್ವವನ್ನು ದಾಖಲಿಸಿದ್ದಾರೆ. ಈ ಕೃತಿಯ ಪಡಿಯಚ್ಚಂತಿರುವ ತೆಲುಗಿನ 'ರಾಯವಾಚಕಮು' ಕೃತಿಯೊಂದಿಗೆ ತೌಲನಿಕ ಅಧ್ಯಯನ ನಡೆಸಿ ಈ ಎರಡೂ ಕೃತಿಗಳು ಪರಸ್ಪರ ಅನುವಾದಗಳಲ್ಲ, ಇವೆರಡಕ್ಕೂ ಮೂಲವಾಗಿರುವ ತೆಲುಗಿನ ಇನ್ನೊಂದು ಕೃತಿಯ ರೂಪಾಂತರಗಳಾಗಿ ಇವು, ಸ್ವತಂತ್ರ ಕೃತಿಗಳು ಎನ್ನುತ್ತಾರೆ. ಡಾ॥ ಆರ್.ವಿ. ಎಸ್. ಸುಂದರಂ, ರಾಮಾಂಜನೇಯ ಮುಂತಾದ ವಿದ್ವಾಂಸರು ಪ್ರತಿಪಾದಿಸಿದ್ದ ಕೃಷ್ಣದೇವರಾಯನ ದಿನಚರಿಯು ತೆಲುಗಿನ ರಾಯವಾಚಕದ ಅನುವಾದ ಎಂಬುದನ್ನು ಇವರು ಸಾಧಾರವಾಗಿ ನಿರಾಕರಿಸಿ ಅದಕ್ಕಿಂತ ಇದು ಭಿನ್ನವಾದದ್ದೂ ಮತ್ತು ಪ್ರಾಚೀನವಾದದ್ದೂ ಎಂಬುದನ್ನು ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಹೀಗಾಗಿ ಈ ದಿನಚರಿ ಕೃಷ್ಣದೇವರಾಯನ ಇತಿಹಾಸ ರಚನೆಯಲ್ಲಿ ಮಹತ್ವದ ದಾಖಲೆ ಎನಿಸಿದೆ. ರಾಯವಾಚಕದ ವಿಚಾರ ಸಂಪಾದಕದ್ವಯರಿಗೆ ಈ ಕೃತಿಯು ಸಂಪಾದನೆಯ ಕಾಲದಲ್ಲಿ ಅರಿವಿಗೆ ಬಾರದಿದ್ದುದರಿಂದಲೋ ಏನೋ ಇಬ್ಬರೂ ತೆಲುಗು ಕೃತಿಯನ್ನು ಪ್ರಸ್ತಾಪಿಸಿಲ್ಲ.

ಮೈಸೂರಿನ ವಿ.ಎಸ್.ಎಸ್. ಆಚಾರ್ಯರ ಸಂಗ್ರಹದಲ್ಲಿದ್ದ ಓಲೆಗರಿ ಹಸ್ತಪ್ರತಿಯನ್ನು ಆಚಾರ್ಯದ ಸಂಪಾದಕತ್ವದಲ್ಲೇ ೧೯೮೨ರಲ್ಲಿ ಪ್ರಕಟಿಸಿದ್ದರೂ ಅದರ ಪಾಠಾಂತರ ಸೂಚನೆ, ಪಾಠ ಸ್ವರೂಪದ ಪರಿಷ್ಕರಣೆ, ಸ್ಥಳನಾಮ–ವ್ಯಕ್ತಿನಾಮ ಕಠಿಣ ಪದ, ವಿಶಿಷ್ಟಪದ ಇತ್ಯಾದಿ ಅನುಬಂಧಗಳ ಸಿದ್ಧತೆ ಮುಂತಾದ ಗ್ರಂಥಸಂಪಾದನೆಯ ಕಾರ್ಯಗಳನ್ನು ಪ್ರಸ್ತುತ ಗ್ರಂಥದ ಸಂಪಾದಕರೂ ಆದ ನಾ. ಗೀತಾಚಾರ್ಯರು ನಿರ್ವಹಿಸಿದ್ದು ಇದನ್ನು ಎಂ. ವಿ.ಸೀ. ಯವರು ತಮ್ಮ ಮಾತಿನಲ್ಲಿ ಉಲ್ಲೇಖಿಸುವ ಮೂಲಕ ತಮಗೆ ನೆರವು ನೀಡುವ ಕಿರಿಯ ಸಹಾಯಕರನ್ನು ಪ್ರೋತ್ಸಾಹಿಸುವ ಉದಾತ್ತ ಗುಣವನ್ನು ಮೆರೆದಿದ್ದಾರೆ. ವಾಸ್ತವವಾಗಿ ಈ ಕೃತಿಯ ಕನ್ನಡದ ಅನುವಾದವನ್ನೂ ಮಾಡಲಾಗಿತ್ತಾದರೂ ಪುಟವಿಸ್ತಾರದ ಕಾರಣದಿಂದ ಪ್ರಕಟಿಸಿರಲಿಲ್ಲ. (ಪ್ರಸ್ತುತ ಸಂಪಾದಕನಿಂದ ಈ ಅನುವಾದದೊಂದಿಗೆ

ಮಾಧ್ವ ಸಂಪ್ರದಾಯದೊಂದಿಗೆ ಸ್ಮಾರ್ತಸಂಪ್ರದಾಯವೂ ಇದೆ ಎಂಬುದನ್ನು ಈಚೀನ ವಿದ್ವಾಂಸರು ಗುರುತಿಸತೊಡಗಿದುದರ ಫಲವಾಗಿ ಈವರೆಗೆ ೨೦೦೦ಕ್ಕೂ ಅಧಿಕ ಅದ್ವೈತ ಕೀರ್ತನೆಗಳು ಪ್ರಕಟಗೊಂಡಿವೆ.

ಹಿಂದೂಧರ್ಮದ ಇನ್ನೊಂದು ಮುಖ್ಯವಾಹಿನಿಯಾದ ವಿಶಿಷ್ಟಾದ್ವೈತ ತತ್ವದಲ್ಲಿಯೂ ಈ ಕೀರ್ತನ ಪರಂಪರೆ ಏಕಿರಬಾರದು ಎಂಬ ಪ್ರಶ್ನೆಗೆ ಉತ್ತರವಾಗಿ ಪ್ರಸ್ತುತ ಸಂಪಾದಕನ ಸಂಶೋಧನೆಯಿಂದ ೧೯೯೦ರ ದಶಕದಲ್ಲಿ ಶ್ರೀವೈಷ್ಣವ ಕೀರ್ತನಕಾರರೂ ಕನ್ನಡ ಸಾಹಿತ್ಯಕ್ಕೆ ಪರಿಚಿತರಾದರು. ಪುರಂದರದಾಸ–ಕನಕದಾಸರ ಹಿರಿಯ ಸಮಕಾಲೀನರಾದ ಬೇಲೂರು ವೈಕುಂಠದಾಸರನ್ನೇ ಆದ್ಯ ಶ್ರೀವೈಷ್ಣವ ಕೀರ್ತನಕಾರರೆಂದು ಗುರುತಿಸಲಾಗಿದ್ದು ಅಲ್ಲಿಂದ ಇಲ್ಲಿಯವರೆಗೆ (೨೦ನೇ ಶತಮಾನದ ವರೆಗೆ) ೧೫ಕ್ಕೂ ಹೆಚ್ಚು ಜನ ಶ್ರೀವೈಷ್ಣವ ಹರಿದಾಸರು ಕಾಣಿಸಿಕೊಂಡಿದ್ದು ೧೫೦೦ಕ್ಕೂ ಅಧಿಕ ಕೀರ್ತನೆಗಳು ಶೋಧನೆಯಾಗಿವೆ.

ವಾಸ್ತವವಾಗಿ ದ್ವೈತ–ಅದ್ವೈತ–ವಿಶಿಷ್ಟಾದ್ವೈತ – ಈ ಮೂರು ತತ್ವಗಳು 'ಜೀವ', 'ಜಡ' ಮತ್ತು 'ದೇವ' – ಈ ಮೂರು ವಸ್ತುಗಳ ಮೇಲೆ ತಮ್ಮ ಚಿಂತನೆಯನ್ನು ಬೆಳೆಸಿವೆ. ಜೀವ, ಜಡಗಳು ಮತ್ತು ದೇವರು ಬೇರೆ ಬೇರೆ ಎಂದು ಹೇಳುವುದು ದ್ವೈತ. ಅವು ಬೇರೆ ಬೇರೆಯಾದರೂ ಒಂದಕ್ಕೇ ಸಂಬಂಧಿಸಿದ್ದು, ದೇವರಿಂದ ಪ್ರೇರಿತವಾದವು ಎನ್ನುವುದು ವಿಶಿಷ್ಟಾದ್ವೈತ, ಇವು ಬೇರೆ ಬೇರೆಯಲ್ಲ ಒಂದೇ ಎನ್ನವುದು ಅದ್ವೈತ. ಈ ಅದ್ವೈತಕ್ಕೆ ಹರಿ–ಹರ ಭಿನ್ನರಲ್ಲ. ಇಬ್ಬರಲ್ಲೂ ಸಮಾನಭಕ್ತಿ. ದ್ವೈತಕ್ಕೆ ಹರನಲ್ಲಿ ಭಕ್ತಿಯಿದ್ದರೂ ಹರಿಪಾರಮ್ಯ ಮತ್ತು ದೇವರುಗಳಲ್ಲಿ ತಾರತಮ್ಯವಿದೆ. ವಿಶಿಷ್ಟಾದ್ವೈತಕ್ಕೆ ಹರಿಏಕನಿಷ್ಠೆಯಿದ್ದು. ಹರನಿರಾಕರಣೆಯೊಂದಿಗೆ ಹರಿಯೊಬ್ಬನಲ್ಲೇ ಎಲ್ಲರನ್ನೂ ಕಾಣುವ ಏಕೋಭಾವವಿದೆ.

ಅದ್ವೈತವು 'ದೇವ'ನಾದ 'ಬ್ರಹ್ಮ' ಒಂದೇ ಸತ್ಯ. ಉಳಿದದ್ದು ಮಿಥ್ಯೆ, ಈ ಬ್ರಹ್ಮನು ಹರನೂ ಆಗಬಹುದು ಹರಿಯೂ ಆಗಬಹುದು, ಇವನು ನಿರ್ಗುಣ, ನಿರಾಕಾರ ಎಂದರೆ; ದ್ವೈತವು ಬ್ರಹ್ಮನೂ ಸತ್ಯ, ಜೀವನೂ ಸತ್ಯ. ಈ ಬ್ರಹ್ಮ 'ಹರಿ'ಯಾಗಿದ್ದಾನೆ. ಇವನಿಗೆ ಹಲವು ಗುಣಗಳು, ರೂಪಗಳಿವೆ. ಆದ್ದರಿಂದ ಇವನು ಸಗುಣ, ಇವನೇ ಸರ್ವೋತ್ತಮ ಎನ್ನುತ್ತದೆ. ವಿಶಿಷ್ಟಾದ್ವೈತವು ಈ ಮೂರೂ ಸತ್ಯ. ಹರಿಯೊಬ್ಬನೇ ಬ್ರಹ್ಮ, ಉಳಿದವರೆಲ್ಲ ಇವನ ನಿಯಮಾಕರು, ದೇವ–ಜೀವರ ನಡುವೆ ಶರೀರ–ಶರೀರಿ ಸಂಬಂಧವಿದೆ. ಜೀವನು ದೇವನಿಂದ ನಿಯಾಮಕವಾದವನು ಅವನಿಗೇ ಸೇರಿದವನು. ಅನವಲ್ಲಿರುವ ಆತ್ಮವೇ ದೇವ. ಈ ದೇವನು ಸಗುಣನೂ ಹೌದು ನಿಗುರ್ಣನೂ ಹೌದು. ಇವನು ಲಕ್ಷ್ಮೀಸಮೇತನಾಗಿರುತ್ತಾನೆ ಎಂದು ಹೇಳುತ್ತದೆ.

ಈ ಭಿನ್ನತೆಗಳ ನಡುವೆಯೂ ಈ ಮೂರು ಪಂಥಗಳು ಪರಮಾತ್ಮನನ್ನು ಕಾಣಲು ಭಕ್ತಿಮಾರ್ಗವನ್ನು ಕಂಡುಕೊಂಡು ಅದರ ಒಂದು ಮಾಧ್ಯಮವಾಗಿ ಕೀರ್ತನೆಗಳನ್ನು ರೂಪಿಸಿವೆ. ಈ ತತ್ವಗಳಾಚೆಗೆ ನಿಲ್ಲುವ ವೈದಿಕಧರ್ಮದ ಮಾನವಪ್ರೇಮ, ಜೀವಕಾರುಣ್ಯ. 'ವಸುದೈವಕುಟುಂಬಕ' ಪ್ರಜ್ಞೆಗಳು ಇಲ್ಲಿಯ

ನಾಂದಿಯಾಗಿವೆ. ಕನ್ನಡದಲ್ಲಿ ಈವರೆಗೆ ನಡೆದಿರುವ ಹರಿದಾಸ ಸಾಹಿತ್ಯ ಕುರಿತ ಚರ್ಚೆಯ ಹಿನ್ನೆಲೆಯಲ್ಲಿ ಈ ಕೃತಿಗಳ ಮಹತ್ವವನ್ನು ಮನಗಾಣಬೇಕಿದೆ.

**(i) ಹರಿದಾಸ ಸಾಹಿತ್ಯದ ತ್ರಿವೇಣಿ ಸಂಗಮ**

ಕನ್ನಡ ಹರಿದಾಸ ಸಾಹಿತ್ಯವನ್ನು ಮುಖ್ಯವಾಗಿ ಮಾಧ್ವ ಸಂಪ್ರದಾಯದಲ್ಲೇ ಗುರುತಿಸುವುದು ವಾಡಿಕೆ. ೧೪ನೇ ಶತಮಾನದಿಂದ ಇದರ ಇತಿಹಾಸವನ್ನು ಗುರುತಿಸುತ್ತೇವೆ. ಈ ವೇಳೆಗಾಗಲೆ ಕರ್ನಾಟಕದಲ್ಲಿ ಸ್ಮಾರ್ತ, ಮಾಧ್ವ ಮತ್ತು ಶ್ರೀವೈಷ್ಣವ ಈ ಮೂರೂ ತತ್ವಗಳು ಆಳವಾಗಿ ಬೇರೂರಿ ಜನಜನಿತವಾಗಿದ್ದವು. ೧೨ನೆ ಶತಮಾನದಲ್ಲಿ ವ್ಯಾಪಕವಾಗಿ ಬೆಳೆದ ಜನಪರಸಾಹಿತ್ಯವಾದ ವಚನಸಾಹಿತ್ಯದ ನಂತರ ಕನ್ನಡ ಸಾಹಿತ್ಯ ತನ್ನ ಅಸ್ತಿತ್ವವನ್ನು ಜನಗಳ ನಡುವೆಯೇ ಗುರುತಿಸಿಕೊಳ್ಳುವ ಅನಿವಾರ್ಯತೆಗೆ ಬದ್ಧವಾಯಿತು. ವೈದಿಕಧರ್ಮ, ಸಂಪೂರ್ಣವಾಗಿ ಸಂಸ್ಕೃತ ಭೂಯಿಷ್ಟವಾಗಿದ್ದು ಧಾರ್ಮಿಕ ವಿಧಿವಿಧಾನಗಳೆಲ್ಲ ಸಂಸ್ಕೃತಭಾಷೆಯಲ್ಲೇ ನಡೆಯುತ್ತಿತ್ತು. ವಚನಧರ್ಮದ ಪ್ರಚಂಡ ಜನಪ್ರಿಯತೆಯ ಹಿನ್ನೆಲೆಯಲ್ಲಿ ವೈದಿಕಧರ್ಮದ ಉಳಿವಿಗೆ ಈ ಮಡಿವಂತಿಕೆ ಸಾಧ್ಯವಿಲ್ಲ ಎಂದು ಮನವರಿಕೆಯಾದ ಮಾಧ್ವಯತಿಗಳಿಂದ ಕನ್ನಡದಲ್ಲಿ ಹರಿದಾಸಸಾಹಿತ್ಯ ಮೂಡಿಬಂದಿತು. ಆದ್ದರಿಂದಲೇ ಸಹಜವಾಗಿ ಮಾಧ್ವಧರ್ಮದ ಮುಖವಾಣಿಯಾಗಿ ಈ ಸಾಹಿತ್ಯ ಪ್ರವಹಿಸಿತು. ಇದರಲ್ಲಿ ಪ್ರತಿರೋಧ ಕಂಡುಬಂದು, ಸಂಸ್ಕೃತಪ್ರಿಯರು 'ವ್ಯಾಸಕೂಟ'ವನ್ನು ಮಾಡಿಕೊಂಡು ಕನ್ನಡ ಪರವಾದ 'ದಾಸಕೂಟ'ದಿಂದ ಪ್ರತ್ಯೇಕವಾಗಿ ಉಳಿದರೂ ದಾಸಕೂಟ ಅವಿಚ್ಛಿನ್ನ ಜಯಭೇರಿಯನ್ನು ಸಾಧಿಸಿತು. ಜನಸಾಮಾನ್ಯರು ಇದರ ಅಧ್ವರ್ಯುಗಳಾಗಿ ಕನಕ, ಪುರಂದರ, ಇತ್ಯಾದಿ ದಾಸರು ಜನಮನದಲ್ಲಿ ವೈದಿಕ ಧರ್ಮವನ್ನು, ಅದು ಸಾರುವ ಮಾನವಧರ್ಮವನ್ನು ಕೀರ್ತನೆಗಳ ಮೂಲಕ ಸ್ಥಿರಗೊಳಿಸಿದರು.

ಈ ಸಾಮಾಜಿಕ ಕಾರ್ಯಕ್ಕೆ ವಾಸ್ತವವಾಗಿ ಧರ್ಮದ ಕಟ್ಟುಪಾಡು ಇರಲಿಲ್ಲ. ದಾಸಸಾಹಿತ್ಯ ಕಾಣಿಸಿಕೊಂಡ ಆರಂಭಕಾಲದಲ್ಲೇ ಅದ್ವೈತ ತತ್ವ ಪ್ರತಿಪಾದಕರಾದ ಮಹೀಪತಿದಾಸರೂ ವಿಶಿಷ್ಟಾದ್ವೈತಿಗಳಾದ ಬೇಲೂರು ವೈಕುಂಠದಾಸರುಗಳೂ ಕಾಣಸಿಗುತ್ತಾರೆ. ಇವರು ಆಯಾ ಧರ್ಮದ ತತ್ವಗಳನ್ನು ಇದೇ ಕೀರ್ತನೆಗಳ ಮೂಲಕ ಪ್ರವಹಿಸಿದ್ದಾರೆ. ಆದರೆ ಮುಖ್ಯ ಪ್ರವೇಶ ಮಾಧ್ವಮತವಾದ್ದರಿಂದ ಮಾಧ್ವಪೀಠಗಳ ಮೂಲಕವೇ ಇದರ ಮುಂದುವರಿಕೆಯಿದ್ದುದರಿಂದ ಇವರ ಮತಗಳು ಇಲ್ಲಿ ಗೌಣವಾಗಿ ಇವರನ್ನೂ ಮುಖ್ಯವಾಹಿನಿಯಲ್ಲೇ ಗುರುತಿಸತೊಡಗಿದುದರಿಂದ ಹರಿದಾಸಸಾಹಿತ್ಯ ಎಂದರೆ ಮಾಧ್ವಪರಂಪರೆ ಎಂಬ ಅಭಿಪ್ರಾಯವೇ ಮೂಡಿತ್ತು.

೧೯೭೦ರ ದಶಕದಲ್ಲಿ ಪ್ರೊ॥ ಎಂ.ವಿ.ಸೀತಾರಾಮಯ್ಯನವರು ತಮ್ಮ ವಂಶಸ್ಥರೇ ಆದ ತಿಮ್ಮಪ್ಪದಾಸರ ಕೀರ್ತನೆಗಳನ್ನು ಪ್ರಕಟಿಸುವುದರ ಮೂಲಕ ಈ ಹರಿದಾಸ ಸಾಹಿತ್ಯದಲ್ಲಿ ಅದ್ವೈತ ಪರಂಪರೆಯೂ ಬೆಳೆದುಬಂದಿದೆ ಎಂಬುದನ್ನು ಕನ್ನಡ ಸಾಹಿತ್ಯಕ್ಕೆ ಪರಿಚಯಿಸಿಕೊಟ್ಟರು. ಅಂದಿನಿಂದ ಕನ್ನಡ ಹರಿದಾಸ ಸಾಹಿತ್ಯದಲ್ಲಿ

ಈಚೆಗೆ ವಿಶಿಷ್ಟಾದ್ವೈತದಲ್ಲೂ ಇಂಥ ಪ್ರಯತ್ನ ಆಗಿದೆ. ಕನ್ನಡಕ್ಕೆ ವಿಶಿಷ್ಟಾದ್ವೈತ ಹರಿದಾಸ ಸಾಹಿತ್ಯವನ್ನು ಪರಿಚಯಿಸಿದ 'ನಾರಾಯಣಶರ್ಮ ಸಂಸ್ಕೃತಿ ಕೇಂದ್ರವು ವಿಶಿಷ್ಟಾದ್ವೈತ ಹರಿದಾಸರಾದ ತುಳಸಿರಾಮದಾಸರ ಮೃತಶತಮಾನೋತ್ಸವದ ಅಂಗವಾಗಿ 'ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ' ವಿಚಾರಗೋಷ್ಠಿವನ್ನು ಬಿ.ಎಂ.ಶ್ರೀ. ಪ್ರತಿಷ್ಠಾನದ ಸಹಯೋಗದಲ್ಲಿ ನಡೆಸಿದ್ದು, ಉಪನ್ಯಾಸಗಳನ್ನೂ ಅದೇ ಹೆಸರಿನಲ್ಲಿ ಪುಸ್ತರರೂಪದಲ್ಲಿ ಪ್ರತಿಷ್ಠಾನ ೨೦೧೯ರಲ್ಲಿ ಪ್ರಕಟಿಸಿದೆ.

ವಾಸ್ತವವಾಗಿ ಸಾಹಿತ್ಯಕ್ಕೆ ಈ ರೀತಿ ಧರ್ಮದ ಚೌಕಟ್ಟನ್ನು ತೊಡಿಸಬಾರದು, ಸಾಹಿತ್ಯ ಯಾವಾಗಲೂ ಧರ್ಮವನ್ನು ಮೀರಿದ್ದು ಎಂಬ ಪ್ರಬಲ ವಿಮರ್ಶನಪ್ರಜ್ಞೆ ಪ್ರಚಲಿತವಾಗಿದ್ದರೂ ಇತಿಹಾಸ ಮತ್ತು ಸಂಶೋಧನೆಯ ದೃಷ್ಟಿಯಿಂದ ಸಾಹಿತ್ಯದ ಈ ವೈಶಿಷ್ಟ್ಯಕ್ಕೆ ಕಾರಣವಾದ ಮೂಲ ಪ್ರೇರಣೆಯೂ ಮುಖ್ಯವಾಗುತ್ತದೆ. ಯಾವುದೇ ಕವಿ ಹುಟ್ಟುತ್ತಲೇ ಧರ್ಮಾತೀತನಾಗಿರುವುದಿಲ್ಲ. ಯಾವುದಾದರೂ ಒಂದು ಧರ್ಮಕ್ಕೆ ಅಂಟಿಕೊಂಡೇ ಇರುತ್ತಾನೆ ಮತ್ತು ಆ ಧರ್ಮದ ತತ್ವಗಳ ಪ್ರಭಾವದಿಂದಲೇ ಬೆಳೆದಿರುತ್ತಾನೆ. ಆನಂತರ ಅವನ ವಿಮರ್ಶನ ಮನೋಧರ್ಮ ಧರ್ಮವನ್ನು ಮೀರಿ ಬೆಳೆಯುತ್ತದೆ. ಹೀಗೆ ಅವನನ್ನು ಬೆಳೆಸಿದ ಮೂಲಧರ್ಮದ ಕೊಡುಗೆ ಇಲ್ಲಿ ಮುಖ್ಯವಾಗುತ್ತದೆ. ಈ ಸತ್ಯವನ್ನು ಕಡೆಗಣಿಸುವುದು ಒಂದು ರೀತಿಯಲ್ಲಿ ಸಾಹಿತ್ಯಕ್ಕಾಗಲಿ ಇತಿಹಾಸಕ್ಕಾಗಲಿ ಅಪಚಾರ ಮಾಡಿದಂತೆಯೇ ಸರಿ. ಆದ್ದರಿಂದ ಈ ಸತ್ಯವನ್ನು ದಾಖಲಿಸುವುದು ಒಬ್ಬ ನಿಜವಾದ ಇತಿಹಾಸಜ್ಞನ, ಸಂಶೋಧಕನ ಕರ್ತವ್ಯವಾಗುತ್ತದೆ. ಈ ದೃಷ್ಟಿಯಲ್ಲಿ ಸಾಹಿತ್ಯದ ಅಧ್ಯಯನ ಧರ್ಮದ ದೃಷ್ಟಿಯಲ್ಲಿ ನಡೆದರೆ ಅದಕ್ಕೆ ಹಿಂಜರಿಯುವಿಕೆಯಾಗಲಿ ಮೂಗೆಳೆಯುವಿಕೆಯಾಗಲಿ ಅಗತ್ಯವಿಲ್ಲ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕ್ರಿ.ಶ. ೧೦೭೧ರ ಶಾಸನೋಕ್ತ ಮುನಿ 'ಗುಣಗಳ್ಳ'ನಿಂದ ಅದ್ವೈತ ಪರಂಪರೆ ಪ್ರಾರಂಭವಾಯಿತೆಂದು ಸೀತಾರಾಮಯ್ಯನವರು ನಿರೂಪಿಸುತ್ತ; ಆಧುನಿಕ ಪೂರ್ವ ಕನ್ನಡ ಸಾಹಿತ್ಯದಲ್ಲಿ ಅಂದರೆ ಹೊಸಗನ್ನಡದ ಅರುಣೋದಯ ಕಾಲವಾದ ೧೭-೧೮ನೇ ಶತಮಾನದಿಂದ ಕನ್ನಡ ಸಾಹಿತ್ಯದಲ್ಲಿ ಅದ್ವೈತದ ಪ್ರಭಾವ ಸ್ಪಷ್ಟವಾಗಿ ಗೋಚರವಾಗುತ್ತದೆಂದೂ ಚಿಕ್ಕನಾಯಕನಹಳ್ಳಿಯ ವಾಸುದೇವಾರ್ಯರೂ ಶಿಷ್ಯರಾದ ಕೃಷ್ಣಯೋಗೀಂದ್ರ ಹಾಗೂ ಗೋಪಾಲಾರ್ಯರೂ ಇದರ ಪ್ರವರ್ತಕರಾಗಿರಬಹುದೆಂದೂ ಊಹಿಸುತ್ತಾರೆ. ಡಾ॥ ತಾರಾನಾಥ್ ಅವರು ಅವಧೂತ ಪಂಥದಿಂದ ಇದರ ಆರಂಭವಾಯಿತೆಂದೂ 'ಸಚ್ಚಿದಾನಂದ' ಎಂಬುವವನು ಇದರ ಮೊದಲಿಗನೆಂದೂ ಹೇಳುತ್ತಾರೆ. ಈ ಸಚ್ಚಿದಾನಂದ ಯಾರು ಎಂಬುದು ಇನ್ನೂ ನಿರ್ಧಾರವಾಗಬೇಕಾಗಿದೆ. (ಕೆಲವರು ೧೬೨೨-೧೬೮೮ರ ಅವಧಿಯಲ್ಲಿದ್ದ ಶೃಂಗೇರಿ ಮಠಾಧಿಪತಿಗಳಾದ 'ಸಚ್ಚಿದಾನಂದ ಭಾರತಿ' ಎಂದು ಸಮೀಕರಿಸಿದರೂ ಅವರು ಅವಧೂತರಾಗಿದ್ದವರಲ್ಲ) ನಂತರ ಇವರ ಶಿಷ್ಯ 'ಮಹಲಿಂಗರಂಗ'ನಿಂದ ಇದು ಹೆಚ್ಚು ಪ್ರಾಚುರ್ಯವನ್ನು ಪಡೆದಂತೆ ತೋರುತ್ತದೆ, ಮಹಲಿಂಗರಂಗನ 'ಅನುಭವಾಮೃತ'ವೇ ಆಧುನಿಕ ಕನ್ನಡ ಸಾಹಿತ್ಯದ ಅದ್ವೈತ ತತ್ವ ಪ್ರತಿಪಾದನೆಗೆ ಮುಖ್ಯಪ್ರೇರಣೆ ಎಂದು ಎಲ್ಲ ವಿದ್ವಾಂಸರೂ ಉಲ್ಲೇಖಿಸುತ್ತಾರೆ.

ಮುಖ್ಯ ದರ್ಶನಳಾಗಿವೆ. ಈ ಮೂರು ತತ್ವಗಳಲ್ಲಿ ಕೇವಲ ಈ ಮತಾನುಯಾಯಿಗಳಷ್ಟೇ ಅಲ್ಲದೆ ಅನ್ಯಮತೀಯರೂ ಸಮಾಜದ ಸಾಮಾನ್ಯಸ್ತರದ ಇತರ ಮತೀಯರೂ ಇದರಲ್ಲಿ ತೊಡಗಿಕೊಂಡು ಮಾನವಧರ್ಮವನ್ನು ಕೀರ್ತನೆಗಳ ಮೂಲಕ ಸಾರಿರುವುದೇ ಈ ಧರ್ಮಗಳು ಕೇವಲ 'ಧರ್ಮನಿಷ್ಠವಾಗಿರಲಿಲ್ಲ ಬದಲಿಗೆ ಸಮಾಜನಿಷ್ಠವಾಗಿದ್ದವು' ಎಂಬುದಕ್ಕೆ ಸಾಕ್ಷಿಯಾಗಿದೆ.

ಹೀಗೆ ದ್ವೈತ, ಅದ್ವೈತ, ವಿಶಿಷ್ಟಾದ್ವೈತ – ಈ ಮೂರೂ ಪರಂಪರೆಗಳಲ್ಲಿ ಕನ್ನಡ ಕೀರ್ತನ ಸಾಹಿತ್ಯ ವಿಪುಲವಾಗಿ ಬೆಳೆದಿದೆ. ಈಚೆಗೆ ಕರ್ನಾಟಕ ಸರ್ಕಾರ 'ಸಮಗ್ರ ದಾಸಸಾಹಿತ್ಯ ಮಾಲೆ'ಯೊಂದನ್ನು ಹೊರತಂದಿದ್ದು, ಇದರಲ್ಲಿ ೩೫ ಸಂಪುಟಗಳು ಇವೆ. ಪ್ರತಿ ಸಂಪುಟದಲ್ಲಿ ಕನಿಷ್ಟ ೫೦೦ ಕೀರ್ತನೆಗಳೆಂದರೂ ೧೬ ಸಾವಿರ ಕೀರ್ತನೆಗಳ ಸಂಗ್ರಹ ಇದರಿಂದಾಗುತ್ತದೆ. ಇದರಲ್ಲಿ ಈವರೆಗೆ ಪ್ರಕಟವಾಗಿರುವ ಕೀರ್ತನೆಗಳೊಂದಿಗೆ ಅಪ್ರಕಟಿತ ಕೀರ್ತನೆಗಳೂ ನೂತನ ಸಂಶೋಧನೆಯ ಕೀರ್ತನಕಾರರೂ ಸೇರ್ಪಡೆಯಾಗಿದ್ದರೂ ಇದರಾಚೆಗೂ ಸಂಶೋಧನೆಯ ಮೂಲಕ ಬೆಳಕು ಕಾಣಬೇಕಾದ ಕಿರ್ತನಕಾರರು ಇನ್ನೂ ಉಳಿದಿರುತ್ತಾರೆ. ಇದರಲ್ಲಿ ೩–೪ ಸಂಪುಟಗಳಲ್ಲಿ ಅದ್ವೈತ ಕೀರ್ತನೆಗಳೂ ಅಷ್ಟೇ ಸಂಪುಟಗಳಲ್ಲಿ ವಿಶಿಷ್ಟಾದ್ವೈತ ಕೀರ್ತನೆಗಳೂ ಪ್ರಕಟವಾಗುವುದರ ಮೂಲಕ ಕನ್ನಡ ಕೀರ್ತನ ಸಾಹಿತ್ಯ ಕೇವಲ ಮಾಧ್ವ ಸಂಪ್ರದಾಯದ್ದು ಎಂಬ ಧೋರಣೆ ಬದಲಾಗಿ ಮೂರೂ ಸಂಪ್ರದಾಯಗಳಿಂದ ಕೂಡಿದ ಒಟ್ಟು ವೈದಿಕ ಧರ್ಮದ ಕೊಡುಗೆ ಎಂಬ ಅಭಿಪ್ರಾಯ ಸ್ಥಿರವಾಗಿದ್ದು ವಿದ್ವಾಂಸರು 'ತ್ರಿವೇಣಿ ಸಂಗಮ'ವೆಂದಿದ್ದಾರೆ. ಈ ಆಲೋಚನೆಯ ಹಿನ್ನೆಲೆಯಲ್ಲಿ ಇಡೀ ಕೀರ್ತನ ಸಾಹಿತ್ಯಕ್ಕೆ ಹೊಸ ವ್ಯಾಖ್ಯಾನದ, ಪುನರ್‌ಮೌಲ್ಯವಿವೇಚನೆಯ ಅಗತ್ಯವಿದ್ದು ಹೊಸ ಸಹಸ್ರಮಾನದ ಹೊಸ ಶತಮಾನ ಇತ್ತ ಗಮನಹರಿಸಬೇಕಾಗಿದೆ.

## (ii) ಕನ್ನಡ ಸಾಹಿತ್ಯದಲ್ಲಿ ಅದ್ವೈತ

ಸಾಹಿತ್ಯದಲ್ಲಿನ ಧಾರ್ಮಿಕತತ್ವಗಳನ್ನು ಕುರಿತು ಕನ್ನಡದಲ್ಲಿ ಹೆಚ್ಚು ಚರ್ಚೆಯಾಗಿಲ್ಲ. ನಾಗವರ್ಮ, ಬಸವಣ್ಣ, ದುರ್ಗಸಿಂಹ, ಜನ್ನ, ರುದ್ರಭಟ್ಟ ಮೊದಲಾದ ಕವಿಗಳನ್ನು ವಿದ್ವಾಂಸರು ಸ್ಮಾರ್ತಮತೀಯರು ಎಂದು ಪ್ರಾಚೀನ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಹೆಸರಿಸಿದ್ದಾರೆ. ಮತೀಯವಾಗಿ ಇವರು ಅದ್ವೈತಿಗಳಾದರೂ ಇವರ ಕೃತಿಗಳು ಮತಾತೀತವಾಗಿ ಮಾನವಧರ್ಮವನ್ನು ಪ್ರತಿಪಾದನೆ ಮಾಡುತ್ತವೆ ಮತು ಧರ್ಮಕ್ಕಿಂತ ಇವು ಸಾಹಿತ್ಯಕೃತಿಗಳಾಗಿ ಮುಖ್ಯವಾಗುತ್ತವೆ. ಇವನ್ನು ಬಿಟ್ಟರೆ ಅದ್ವೈತಧರ್ಮವನ್ನೇ ನೇರವಾಗಿ ಪ್ರತಿಪಾದಿಸುವ ಕೆಲವು ಕೃತಿಗಳನ್ನು ಒಂದೆಡೆ ಸಮೀಕ್ಷಿಸಲಾಗಿದೆ. ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ೧೯೯೮ರಲ್ಲಿ 'ಕನ್ನಡ ಸಾಹಿತ್ಯದಲ್ಲಿ ಅದ್ವೈತ' ಎಂಬ ವಿಚಾರ ಗೋಷ್ಠಿಯೊಂದನ್ನು ಏರ್ಪಡಿಸಿ ಅದರಲ್ಲಿ ಮಂಡಿತವಾದ ಪ್ರಬಂಧಗಳನ್ನು ಅದೇ ವರ್ಷ ಅದೇ ಹೆಸರಿನಲ್ಲಿ ಪುಸ್ತಕರೂಪದಲ್ಲಿ ಪ್ರಕಟಿಸಿದೆ. ಇದೊಂದು ಪ್ರಯತ್ನವನ್ನು ಬಿಟ್ಟರೆ ಬೇರೆ ಪ್ರಯತ್ನ ನಡೆದಂತೆ ಕಂಡುಬರುವುದಿಲ್ಲ. ಕೆಲವು ಸಂಶೋಧನ ಗ್ರಂಥಗಳಲ್ಲಿ ಪ್ರಾಸಂಗಿಕವಾಗಿ ಸ್ವಲ್ಪ ವಿಚಾರ ಬಂದಿರಬಹುದಷ್ಟೇ.

ಚಿದಾನಂದಾವಧೂತರಿಗಿಂತ ಹಿಂದಿನವರಾಗುತ್ತಾರೆ. ಈ ಬಗ್ಗೆ ಹೆಚ್ಚಿನ ಶೋಧ ಆಗಬೇಕಾಗಿದೆ. ಇವರ ನಂತರ ಕನ್ನಡ ಸಾಹಿತ್ಯದಲ್ಲಿ ಅನೇಕ ಜನ ಅದ್ವೈತ ಕೀರ್ತನಕಾರರು ಕಾಣಿಸಿಕೊಂಡಿದ್ದಾರೆ.

ಇದೇ ಕಾಲದಲ್ಲಿ ವಾಸುದೇವಾರ್ಯರ ಶಿಷ್ಯರಾದ ವೆಂಕಟದಾಸಾರ್ಯರು, ರಾಮಕೃಷ್ಣಾರ್ಯರು ಮತ್ತು ನರಸಾರ್ಯರು ಹಲವು ಹಾಡುಗಳನ್ನು ರಚಿಸಿರುವುದಾಗಿ ಕಂಡುಬರುತ್ತದೆ. ಇವರ ಶಿಷ್ಯ ತಿಮ್ಮಪ್ಪದಾಸರು ಒಬ್ಬ ಮುಖ್ಯ ಅದ್ವೈತ ಕೀರ್ತನಕಾರರಾಗಿ ಕಾಣಿಸಿಕೊಂಡಿದ್ದರೆ (೧೭೭೦-೧೮೬೦). ಇವರ ಶಿಷ್ಯ-ಮಗ ನಾರಾಯಣದಾಸರೂ (೧೮೨೩-೧೯೦೨) ಹಲವು ಕೀರ್ತನೆಗಳನ್ನ ರಚಿಸಿದ್ದಾರೆ, ತಿಮ್ಮಪ್ಪದಾಸರ ಸಮಕಾಲೀನದವರೇ ಆಗುವ ಅರಸೀಕೆರೆ ತಿಮ್ಮಪ್ಪದಾಸರು 'ಸುರಗಿರೀಶ', ಅಂಕಿತದಲ್ಲಿ ನೂರಾರೂ ಕೀರ್ತನೆ ರಚಿಸಿದ್ದಾರೆ. ಇವು ಆ ಕಾಲಕ್ಕೇ ಅದ್ವೈತ ಕೀರ್ತನಕಾರರು ಆದ ಹೊಸಕೆರೆ ಚಿದಂಬರಯ್ಯನವರ 'ಕೀರ್ತನ ಕಂಠಾಭರಣ'ದಲ್ಲಿ ಸೇರಿ ಜನಪ್ರಿಯವಾಗಿವೆ. ಕೆಳದಿ ವೆಂಕಣ್ಣ ಕವಿಯೂ ಅದ್ವೇತ ಕೀರ್ತನಕಾರನಾಗಿ ಕಾಣಿಸಿಕೊಳ್ಳುತ್ತಾನೆ. ಇದಕ್ಕೂ ಮುಂಚೆ ತುರಂಗಭಾರತದ ಕವಿ ಪರಮದೇವನನ್ನು ಉಲ್ಲೇಖಿಸಬೇಕಾಗುತ್ತದೆ. ಈತನ ಕಾಲ ಕ್ರಿ.ಶ.೧೭೨೧-೧೮೦೫, ಚಿದಾನಂದನಿಂದ ಈತ ಪ್ರಭಾವಿತನಾಗಿದ್ದಾನೋ ಇಲ್ಲವೋ ತಿಳಿಯದು. ಚಿದಾನಂದನ ಊರು ಆಂಧ್ರದ ಆದವಾನಿಯ ದೊಡ್ಡ ಹರಿವಾಣ. ಇವನ ಊರು ಶಿವಮೊಗ್ಗದ ಸುಳಿಗೋಡು. ಇವರ ಕೃತಿಗಳನ್ನು ವಿವರವಾಗಿ ಪರಿಶೀಲಿಸದ ಹೊರತು ಈ ಬಗ್ಗೆ ನಿರ್ಧರಿಸಲಾಗುವುದಿಲ್ಲ. ಈತನ ಹೆಸರಿನಲ್ಲಿ ೮೦ ಕೀರ್ತನೆಗಳಿವೆ.

೧೯೨೦ನೇ ಶತಮಾನದಲ್ಲಿ ಬರುವ ಆನಂದ ಪಂಥದ ಗಗನಾನಂದ, ನಿರಂಜನಾನಂದ, ಶಿವಾನಂದ ಇವರುಗಳೂ ಅದ್ವೈತ ಕೀರ್ತನ ಪರಂಪರೆಯನ್ನು ಮುಂದುವರಿಸಿದ್ದಾರೆ. ಈ ಪರಂಪರೆಯಲ್ಲೇಬರುವ ಅರಕಲುಗೂಡು ಕೃಷ್ಣಪ್ಪ, ವೇದಾಂತ ಶಿವರಾಮಶಾಸ್ತ್ರಿಗಳ ಶಿಷ್ಯ (೧೮೨೬-೧೯೦೬) ಅನೇಕ ಹಾಡುಗಳನ್ನು ರಚಿಸಿದ್ದಾನೆ. ಭಗವದ್ಗೀತಾರ್ಥಸಾರ ಇವನ ಕೃತಿ. ಏಕೈಕ ಮಹಿಳಾ ಕೀರ್ತನಕಾರ್ತಿ ಹೆಳವನಕಟ್ಟೆ ಗಿರಿಯಮ್ಮ (೧೮ನೇ ಶತಮಾನದ ಪೂರ್ವಾರ್ಧ) ಅದ್ವೈತ ತತ್ವ ಪ್ರತಿಪಾದಕಳಾಗಿ ಕಂಡುಬರುತ್ತಾಳೆ. ಈಚೆಗೆ ವೆಂಕಟದಾಸರ ವಂಶಪರಂಪರೆಯಲ್ಲಿ ಡಾ॥ ನಳಿನಿರಾವ್ (೧೯೩೯-೨೦೦೯) ಅವರೂ ಕೀರ್ತನಕಾರ್ತಿಯಾಗಿ ಗುರುತಿಸಿಕೊಂಡಿದ್ದು ಶಂಕ್ಕೂ ಹೆಚ್ಚು ಕೀರ್ತನೆಗಳನ್ನು ರಚಿಸಿರುವುದು ಬೆಳಕಿಗೆಬಂದಿದೆ. ಇದೇ ಕಾಲದ ರಾಮದಾಸ (ಬಡೇಸಾಹೇಬ) ಹಾಗೂ ಶಿಶುನಾಳ ಶರೀಫರು (೧೮೮೯) ಮುಸ್ಲಿಂ ಮತೀಯರಾದರೂ ಅದ್ವೈತ ತತ್ವವನ್ನು ಪ್ರತಿಪಾದಿಸಿದ ಕೀರ್ತನಕಾರರಾಗಿ ಕಾಣಿಸಿಕೊಂಡಿರುವುದು ಅದ್ವೈತ ತತ್ವದ ಜನಪ್ರಿಯತೆಯನ್ನು ಸಾರುತ್ತದೆ. ರಾಮದಾಸರ ಹೆಸರಿನಲ್ಲಿ ೭೮೧ ಕೃತಿಗಳಿರುವುದಾಗಿ ತಿಳಿದುಬಂದಿದೆ. ಶರೀಫರದು ಸುಮಾರು ೪೦೦ ಕೀರ್ತನೆಗಳಿವೆ.

ಇಂತಹ ಇನ್ನೂ ಅನೇಕ ತತ್ವಪದಕಾರರಿದ್ದಾರೆ. ಇವರ ಹಾಡುಗಳು ಅದ್ವೈತವನ್ನೇ ಪ್ರತಿಪಾದಿಸುತ್ತಿದ್ದರೂ ಇವರನ್ನು ಕೀರ್ತನಕಾರೆಂದು ನೋಡದೆ

ಮುಂದೆ ಇವನ ಶಿಷ್ಯರಾದ ಬ್ರಹ್ಮಾನಂದ, ನಿಜಾನಂದ ಮತ್ತು ಮುಖ್ಯವಾಗಿ 'ಚಿದಾನಂದ'ರು ಈ ಪರಂಪರೆಯನ್ನು ಬೆಳೆಸಿದುದರ ಪರಿಣಾಮವಾಗಿ ವಿಪುಲವಾಗಿ ಅದ್ವೈತ ಚಿಂತನೆ ಕಾಣಿಸಿಕೊಂಡಿದೆ. ಈ ಚಿದಾನಂದವಧೂತರೇ ಅದ್ವೈತ ಕೀರ್ತನ ಸಾಹಿತ್ಯದ ಆದ್ಯರು ಎಂದು ಒಂದು ಅಭಿಪ್ರಾಯವಿದೆ. ಇವರ ಸಮಕಾಲೀನರಾದ ಚಿಕ್ಕನಾಯ್ಕನಹಳ್ಳಿಯ ವಾಸುದೇವಯತಿಗಳು ಮತ್ತು ಇವರ ಶಿಷ್ಯಪರಂಪರೆ ಹಾಗೂ ಆನಂದಪಂಥದ ಪರಂಪರೆ ಇವೆಲ್ಲ ದಕ್ಷಿಣ ಕರ್ನಾಟಕದ ಭಾಗದಲ್ಲಿ ಅದ್ವೈತ ತತ್ವವನ್ನು ಬೆಳೆಸಿದರೆ ಉತ್ತರ ಕರ್ನಾಟಕದಲ್ಲಿ ಕವಿ ಹರಿದಾಸ, ಕವಿ ಪರಮದೇವ ಮುಂತಾದವರೂ ಅದ್ವೈತ ತತ್ವ ಪರಂಪರೆಯನ್ನು ಮುಂದುವರಿಸಿದ್ದಾರೆ ಎನ್ನಬಹುದು. ಈ ಅವಧಿಯಲ್ಲಿ ನೇರವಾಗಿ ಅದ್ವೈತ ತತ್ವವನ್ನೇ ಪ್ರತಿಪಾದಿಸುವ ಹಲವು ಗ್ರಂಥಗಳು ರಚನೆಯಾಗಿದ್ದು ಅವುಗಳಲ್ಲಿ ಚಿದಾನಂದಾವಧೂತರ 'ಜ್ಞಾನಸಿಂಧು' ವಾಸುದೇವಾರ್ಯರ 'ವಾಸುದೇವಮನನ' ಮುಂತಾದ ಕೃತಿಗಳು ಅನೇಕ ಪ್ರತಿಗಳನ್ನು ಕಂಡಿದ್ದವಲ್ಲದೆ ತೆಲುಗು, ಸಂಸ್ಕೃತಾದಿ ಅನ್ಯಭಾಷೆಗಳಿಗೂ ಅನುವಾದವಾಗುವಷ್ಟು ಜನಪ್ರಿಯವಾಗಿದ್ದವು.

ಈ ಅದ್ವೈತ ತತ್ವಚಿಂತಕರು ತತ್ವಪ್ರತಿಪಾದಕ ಕೃತಿಗಳನ್ನಷ್ಟೇ ಬರೆಯದೆ ಅವುಗಳ ಜೊತೆಗೇ ಸರಳವಾದ ಹಾಡುಗಳನ್ನು ರಚಿಸುವ ಮೂಲಕ ಅದ್ವೈತ ಕೀರ್ತನ ಪರಂಪರೆಗೆ ನಾಂದಿ ಹಾಡಿದ್ದಾರೆನ್ನಬಹುದು. ಹೀಗೆ ೧೭-೧೮ನೇ ಶತಮಾನದಲ್ಲಿ ವಿಪುಲವಾಗಿ ಬೆಳೆದ ಅದ್ವೈತ ಚಿಂತನೆಯ ಪರಿಣಾಮವಾಗಿ ಅದು ಸರಳವಾದ ಮತ್ತು ಜನಪ್ರಿಯವಾಗಿದ್ದ ಹಾಗೂ ಜನಸಾಮಾನ್ಯರ ಹತ್ತಿರಕ್ಕೆ ಸುಲಭವಾಗಿ ಹೋಗಬಹುದಾದ ಕೀರ್ತನೆಗಳಲ್ಲೂ ಕಾಣಿಸಿಕೊಳ್ಳುವ ಮೂಲಕ ಕನ್ನಡ ಕೀರ್ತನ ಸಾಹಿತ್ಯದಲ್ಲಿ ಅದ್ವೈತದ ಪ್ರವೇಶವಾಯಿತು ಎನ್ನಬಹುದು.

### (iii) ಕೀರ್ತನ ಸಾಹಿತ್ಯದಲ್ಲಿ ಅದ್ವೈತ

ಕನ್ನಡ ಹರಿದಾಸ ಸಾಹಿತ್ಯದ ಎರಡನೇ ಘಟ್ಟದಲ್ಲಿ ಕಂಡುಬರುವ ಮಹಿಪತಿದಾಸರ ಕೀರ್ತನೆಗಳಲ್ಲಿ ಅದ್ವೈತ ಚಿಂತನೆಯಿದೆ ಎಂದು ಹಲವು ವಿದ್ವಾಂಸರು ಹೆಸರಿಸಿದರೂ ಅವರು ಜನ್ಮತಃ ಮಾಧ್ವ ಸಂಪ್ರದಾಯದವರು. (ಅವರ ಊರು ಬಿಜಾಪುರ ಜಿಲ್ಲೆಯ ಕಾಖಂಡಕಿ) ಆದ್ದರಿಂದ ಅವರ ಕೀರ್ತನೆಗಳಲ್ಲಿ ಮಾಧ್ವ ಪರಂಪರೆಯೇ ಮುಖ್ಯತತ್ವವಾಗಿದ್ದು ಶಾಂಕರ ಅದ್ವೈತಕ್ಕೂ ಒಲಿದಿದ್ದರೆನ್ನಬಹುದೇ ವಿನಾ ಅವರನ್ನು ಅದ್ವೈತ ಕೀರ್ತನಕಾರರೆಂದು ಗುರುತಿಸಲು ಬರುವುದಿಲ್ಲವೆಂದು ಕೆಲವರ ಅಭಿಪ್ರಾಯ. ಇವರ ಶಿಷ್ಯಪರಂಪರೆಯಾಗಲಿ ಇತರ ಅದ್ವೈತ ಕೀರ್ತನಕಾರರಾಗಲಿ ಚಿದಾನಂದಾವಧೂತರವರೆಗೆ ಕಂಡುಬರುವುದಿಲ್ಲ. ಆದ್ದರಿಂದ ಚಿದಾನಂದಾವಧೂತರನ್ನೇ (೧೭೦೦-೧೭೪೧) ಅದ್ವೈತ ಕೀರ್ತನ ಪರಂಪರೆಯ ಆದ್ಯರು ಎನ್ನಬೇಕಾಗುತ್ತದೆ. ಆದರೆ ಎಂ.ವಿ.ಸೀ. ಅವರು ಸಂಪಾದಿಸಿರುವ ಅದ್ವೈತ ಹರಿದಾಸ ತಿಮ್ಮಪ್ಪದಾಸರ 'ಅರ್ಚನ'ದಲ್ಲಿ ಉಲ್ಲೇಖವಾಗಿರುವ ಗೋಪಾಲಾರ್ಯರು ಎಂ.ವಿ.ಸೀಯವರು ರಚಿಸಿರುವ ವಂಶಾವಳಿಯ ಹಿನ್ನಲೆಯಲ್ಲಿ ಲೆಕ್ಕಹಾಕಿದರೆ

ಶತಮಾನದಿಂದೀಚೆಗೆ ನಿರಂತರವಾಗಿ ಮುಂದುವರಿಯುತ್ತ ಶಿಷ್ಯಪರಂಪರೆಯನ್ನು ಬೆಳೆಸುತ್ತ ೨೦-೨೧ನೇ ಶತಮಾನದಲ್ಲೂ ಮುಂದುವರಿಯುತ್ತಿರುವುದು ವಿಶೇಷವಾಗಿದೆ. ಈ ಚರಿತ್ರೆಯ ಚರ್ಚೆಗೆ ನಾಂದಿಹಾಡಿದ ಸೀತಾರಾಮಯ್ಯನವರು ಸಂಪಾದಿಸಿದ ಅದ್ವೈತ ಹರಿದಾಸರ ಕೃತಿಗಳ ಸಮೀಕ್ಷೆಯನ್ನು ಇಲ್ಲಿ ಸ್ವಲ್ಪ ದೀರ್ಘವಾಗಿಯೇ ಮಾಡಲಾಗಿದೆ.

### ೧. ತಿಮ್ಮಪ್ಪದಾಸರ 'ಅರ್ಚನ'

ಕರ್ನಾಟಕದ ಕೀರ್ತನ ಸಾಹಿತ್ಯದಲ್ಲಿ ಅದ್ವೈತ ತತ್ತ್ವ ಪ್ರತಿಪಾದನೆಯ ಪ್ರಧಾನ ಹರಿದಾಸರೆನಿಸಿರುವ ತಿಮ್ಮಪ್ಪದಾಸರು ಕೀರ್ತನ ಸಾಹಿತ್ಯದಲ್ಲಿ ಅದ್ವೈತ ಪರಂಪರೆಯನ್ನಲ್ಲದೆ 'ಕೀರ್ತನಕಾವ್ಯ' ಪರಂಪರೆಗೂ ಅಗ್ರಗಣ್ಯರೆನಿಸಿದ್ದಾರೆ. ಇವರ ಪಿತಾಮಹರೂ ಗುರುಗಳೂ ಆಗಿದ್ದ ವಾಸುದೇವಯತಿಗಳು ತಪಗೈದ, ಸಮಾಧಿಸ್ಥರಾದ ಪುಣ್ಯಭೂಮಿಯಾದ ಚಿಕ್ಕನಾಯ್ಕನಹಳ್ಳಿಯಲ್ಲಿ ೧೭-೧೮ನೇ ಶತಮಾನದಲ್ಲಿ ಒಂದು ಪ್ರಭಾವಿ ಅದ್ವೈತಪೀಠ ಆಗಿಹೋಗಿದ್ದು, ಅನೇಕ ಯತಿಗಳು ಮತ್ತು ಅದ್ವೈತ ಕೀರ್ತನಕಾರರ ಪರಂಪರೆಯನ್ನೇ ಇಲ್ಲಿ ಕಾಣಬಹುದು. ತಿಮ್ಮಪ್ಪದಾಸರು ಈ ಪರಂಪರೆಯವರೆ ಆಗಿದ್ದು ಇವರ ಕೀರ್ತನೆಗಳನ್ನು ಎಂ.ವಿ. ಸೀತರಾಮಯ್ಯನವರು 'ಅರ್ಚನ' ಹೆಸರಿನಲ್ಲಿ ಪ್ರಕಟಿಸಿದ್ದಾರೆ. ಅದರಲ್ಲಿ ಬಿಡಿಸಿಕೊಟ್ಟಿರುವ ತಿಮ್ಮಪ್ಪದಾಸರ ಜೀವನಚಿತ್ರವನ್ನು ಹೀಗೆ ಹೇಳಬಹುದು.

ತಿಮ್ಮಪ್ಪದಾಸರ ಪೂರ್ವದ ಹೆಸರು 'ತಿಮ್ಮಪ್ಪಯ್ಯ'. ತಂದೆ ನಾರಾಯಣಾರ್ಯ, ತಾಯಿ ಚೆನ್ನಾಂಬೆ, ತಾತ ವಾಸುದೇವಾರ್ಯ, ಸೋದರಮಾವ ವೆಂಕಟದಾಸಾರ್ಯ, ಹೆಂಡತಿ ವೆಂಕಮ್ಮ, ಮಕ್ಕಳು ನಾರಾಯಣದಾಸ, ವೆಂಕಟರಮಣದಾಸ, ಸುಬ್ಬಯ್ಯ ಹಾಗೂ ಇಬ್ಬರು ಹೆಣ್ಣುಮಕ್ಕಳು ಎಂಬ ವಿಷಯವನ್ನು ದಾಸರೇ ತಮ್ಮ ಹಸ್ತಪ್ರತಿಗಳಲ್ಲಿ ಹೇಳಿರುವ ಹಲವು ಆಧಾರಗಳ ಮೂಲಕ ಖಚಿತಪಡಿಸಿದ್ದಾರೆ. ಸೀತಾರಾಮಯ್ಯನವರೂ ಈ ವಂಶೋದ್ಭವರೇ ಆಗಿರುವುದರಿಂದ (ತಿಮ್ಮಪ್ಪದಾಸರ ಎರಡನೇ ಮಗ ವೆಂಕಟರಮಣದಾಸರ ಮೊಮ್ಮಕ್ಕಳು) ಇವರ ಬಳಿ ನಿರ್ದಿಷ್ಟವಾದ ದಾಖಲೆಗಳು ಇರುವುದರಿಂದ; ದಾಸರುಗಳ ಸ್ವಹಸ್ತಾಕ್ಷರ ಹಸ್ತಪ್ರತಿಗಳೇ ಇವರಿಗೆ ಲಭ್ಯವಿರುವುದರಿಂದ ಈ ವಿಚಾರದಲ್ಲಿ ಚರ್ಚೆಗೆ ಅವಕಾಶವಿಲ್ಲದೆ ಇದಮಿತ್ಥಂ ಎಂದು ಹೇಳಿದ್ದಾರೆ. ತಿಮ್ಮಪ್ಪದಾಸರು ಶಂಕರಾಚಾರ್ಯರಿಂದ ಪ್ರಣೀತವಾದ ಅದ್ವೈತ ಮತಾವಲಂಬಿಗಳಾಗಿದ್ದವರು ಎಂಬುದೂ ಇಷ್ಟೇ ಖಚಿತವಾದ ವಿಚಾರ. ತಿಮ್ಮಪ್ಪದಾಸರು ಹರಿತ್ಸಗೋತ್ರದ ಬಬ್ಬೂರುಕಮ್ಮೆ ಕುಲದವರು.

ದಾಸರು ತಮ್ಮ ಕಾಲವನ್ನು ಎಲ್ಲಿಯೂ ನಿರ್ದಿಷ್ಟವಾಗಿ ಸೂಚಿಸಿಲ್ಲದೇ ಇರುವುದರಿಂದ ಸೀತಾರಾಮಯ್ಯನವರು ಹಲವಾರು ಬಾಹ್ಯ ಮತ್ತು ಆಂತರಿಕ ಪ್ರಮಾಣಗಳಿಂದ ತಿಮ್ಮಪ್ಪದಾಸರ ಕಾಲವನ್ನು ಕ್ರಿ.ಶ. ೧೭೭೦ ರಿಂದ ೧೮೯೦ ಎಂದು ನಿರ್ದಿಷ್ಟ ಪಡಿಸಿದ್ದಾರೆ. ತಿಮ್ಮಪ್ಪದಾಸರ ಮಗ ನಾರಾಯಣದಾಸರ ಜನ್ಮ ದಿನಾಂಕವಿರುವ ಜಾತಕವನ್ನು ತಿಮ್ಮಪ್ಪದಾಸರ ತಂದೆಯವರು ಬರೆದಿರುವ ದಾಖಲೆಯ ಆಧಾರದಿಂದ ನಾರಾಯಣದಾಸರ ಜನ್ಮದಿನ ಕ್ರಿ.ಶ. ೧೧-೨-

ಪ್ರತ್ಯೇಕವಾಗಿ ಗುರುತಿಸಲಾಗುತ್ತಿದೆ. ಆದರೆ ವಾಸ್ತವವಾಗಿ ಇವರೂ ಕೀರ್ತನಕಾರರೇ ಆಗುತ್ತಾರೆ. ಮೈಸೂರಿನ ವೇದಾಂತ ಶಿವರಾಮಶಾಸ್ತ್ರಿಗಳು ೧೯ನೇ ಶತಮಾನದ ಆರಂಭದಲ್ಲಿ ಕಾಣಿಸಿಕೊಂಡಿರುವ ಪ್ರಮುಖ ಅದ್ವೈತ ಕೀರ್ತನಕಾರರು. ಆ ಕಾಲದಲ್ಲೇ ೧೫ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿ ಕೆಲವು ಮರುಮುದ್ರಣಗಳಾಗಿ ಜನಪ್ರಿಯವಾಗಿದ್ದವು. 'ಶಂಕರಾನಂದ' 'ಶಂಕರದಾಸ' ಹೆಸರಿನಲ್ಲಿ ಇವರ ನೂರಾರು ಹಾಡುಗಳಿದ್ದು, ವಿಶಿಷ್ಟಾದ್ವೈತ ಕೀರ್ತನಕಾರರಾದ ತುಳಸಿರಾಮದಾಸರಿಂದ ಇವರು ಪ್ರಭಾವಿತರಾಗಿದ್ದಾರೆ.

ಪಾವಂಜೆ ಲಕ್ಷ್ಮೀನಾರಣಪ್ಪ ೧೮೧೪ರಲ್ಲಿ ದ.ಕ.ದ ಮೂಲ್ಕಿಯ ಸಮೀಪದ ಆತ್ತೂರಿನಲ್ಲಿ ಜನಿಸಿದವರು. ಮೂಲತಃ ಹರಿಕಥಾ ವಿದ್ವಾಂಸರು. ಸುಮಾರು ೨ ಸಾವಿರ ಕೃತಿ ರಚನೆಯಿದೆಯೆಂದು ಪ್ರತೀತಿಯಿದೆಯಾದರೂ ೨೩೭ ಮಾತ್ರ ಪ್ರಕಟವಾಗಿರುವ ಕೀರ್ತನೆಗಳು, ತುಮಕೂರು ಜಿಲ್ಲೆ ತುರುವೇಕೆರೆಯ ಬೇಟೆರಾಯ ದೀಕ್ಷಿತರು ೧೦೦ಕ್ಕೂ ಅಧಿಕ ಕೀರ್ತನೆಗಳನ್ನು ರಚಿಸಿದ್ದಾರೆ. ಇವರೂ ಹರಿಕಥಾ ವಿದ್ವಾಂಸರು. 'ಧೇನುಪುರೀಶ' ಇವರ ಅಂಕಿತ, ಇವರು ಕೆಲವು ನಾಟಕಗಳನ್ನೂ ರಚಿಸಿದ್ದಾರೆ. 'ಗುರು ಕೃಷ್ಣ' ಅಂಕಿತದ ಕೀರ್ತನಕಾರರೊಬ್ಬರು ಮುಮ್ಮಡಿ ಕೃಷ್ಣರಾಜ ಒಡೆಯರ ಕಿರಿಯ ಸಮಕಾಲೀನ ಎನ್ನುತ್ತಾರೆ (೧೯ನೇ ಶ.) ೧೦೦೦ಕ್ಕೂ ಅಧಿಕ ಹಾಡುಗಳಿವೆ ಎಂಬ ಅಭಿಪ್ರಾಯವಿದೆ. ಆದರೆ ಲಭ್ಯವಿಲ್ಲ. ಹೊಸಕೆರೆ ಚಿದಂಬರಯ್ಯನವರೂ ಇನ್ನೊಬ್ಬ ಪ್ರಮುಖ ಅದ್ವೈತ ಹರಿದಾಸರು (೧೮೭೦–೧೯೩೮) ಮೂಲತಃ ಹರಿಕಥಾ ವಿದ್ವಾಂಸರು. 'ಭಕ್ತಬಂಧು' ಮಾಸಪತ್ರಿಕೆಯ ಮೂಲಕ ಆಧ್ಯಾತ್ಮಿಕ ಸೇವೆ ಮಾಡುತ್ತಾ ಹಲವು ಹಾಡುಗಳನ್ನು ರಚಿಸಿದ್ದಾರೆ. 'ಕೀರ್ತನ ಕಂಠಾಭರಣ'ದ ರಚನಾಕಾರರೂ ಆಗಿದ್ದಾರೆ. 'ಭಕ್ತಿಗೀತಾವಳಿ' ಎಂಬ ಕೀರ್ತನೆಗಳ ಸಂಕಲನವೇ ಪ್ರಕಟವಾಗಿದೆ. ಅನೇಕ ಹರಿದಾಸರ ಹಾಡುಗಳನ್ನು ಪ್ರಚಾರ ಮಾಡಿದ ಪ್ರಮುಖ ಹರಿದಾಸರಾಗಿದ್ದೂ ಸು.೮೦ಕ್ಕೂ ಹೆಚ್ಚಿನ ಗ್ರಂಥಗಳನ್ನು ರಚಿಸಿದ್ದಾರೆ. ಎಲ್ಲಂಬಳಸೆ ಸುಬ್ರಹ್ಮಣ್ಯ ಶರ್ಮ (೧೮೮೧–೧೯೭೦) ಇವರು ಹೊಳೆನರಸೀಪುರದ ಆಧ್ಯಾತ್ಮಪ್ರಕಾಶ ಕಾರ್ಯಾಲಯದ ಸಚ್ಚಿದಾನಂದ ಸರಸ್ವತಿ ಸ್ವಾಮೀಜಿಯಾಗಿದ್ದು, ಇವರ ನೂರಾರು ಕೃತಿಗಳಿವೆ ಎಂದು ಹೇಳುತ್ತಾರೆ.

ಸರಿಸುಮಾರು ಇಪ್ಪತ್ತು ಜನ ಅದ್ವೈತ ಕೀರ್ತನಕಾರರು ಈವರೆಗೆ ದಾಖಲೆಯಾಗಿರುವವರು. ಇವರಲ್ಲಿ ಅನೇಕರ ಕೀರ್ತನೆಗಳು, ಸಮಗ್ರ ದಾಸ ಸಾಹಿತ್ಯಮಾಲೆಯ ವಿವಿಧ ಸಂಪುಟಗಳಲ್ಲಿ ಬೆಳಕಿಗೆ ಬಂದಿವೆ. ದಾಖಲೆಗೆ ಬಾರದ ಇನ್ನೂ ಎಷ್ಟೋ ಅದ್ವೈತ ಕೀರ್ತನಕಾರರು ಇದ್ದಾರೆ. ಶೃಂಗೇರಿ ಪರಂಪರೆಯಲ್ಲಿ ಕೆಲವರು ಕೀರ್ತನೆಗಳನ್ನು ಬರೆದಿರುವ ಸಾಧ್ಯತೆಯಿದೆ. ಈವರೆಗಿನ ದಾಖಲೆಯ ಕೀರ್ತನೆಗಳೇ ೨೦೦೦ ದಾಟಿದ್ದು ದಾಖಲೆಯಾಗದ ಕೀರ್ತನ ಸಾಹಿತ್ಯವೂ ಅಷ್ಟೇ ಸಂಖ್ಯೆಯಲ್ಲಿರುವ ಸಾಧ್ಯತೆಯಿದೆ. ತತ್ವಪದಗಳು ಇದರಲ್ಲಿ ಸೇರಿಸಿಲ್ಲ. ತತ್ವಪದಗಳೇ ಸು. ೩೦೦೦ ಇವೆ. ಇವನ್ನು ಪ್ರತ್ಯೇಕಗೊಳಿಸದೆ ಕೀರ್ತನ ಸಾಹಿತ್ಯ ಪ್ರಕಾರದಲ್ಲೇ ಸೇರಿಸಿ ಚರ್ಚಿಸಬೇಕಾಗಿದೆ. ಹೀಗೆ ಅದ್ವೈತ ಕೀರ್ತನ ಸಾಹಿತ್ಯ ೧೮ನೇ

ಉಳಿದಿತ್ತು" ಎಂಬ ಮಾತುಗಳಲ್ಲಿ ದಾಸರಿಗೆ ರಾಜಾಶ್ರಯವಿದ್ದರೂ ಜೀವನ ದುರ್ಭರವಾಗಿತ್ತು ಎಂಬ ಅಂಶ ವ್ಯಕ್ತವಾಗುತ್ತದೆ. ಇದಕ್ಕೆ ಹಿನ್ನೆಲೆ ಸ್ಪಷ್ಟವಾಗುವುದಿಲ್ಲ. ಅಂತೂ ದಾಸರು ಪಾರಮಾರ್ಥಿಕವಾಗಿ ಸಂತೃಪ್ತರಾಗಿದ್ದರೂ ಲೌಕಿಕವಾಗಿ ಅತೃಪ್ತರೇ ಆಗಿದ್ದರು. ಈ ಲೌಕಿಕ ಅತೃಪ್ತಿಯೇ ಆಧ್ಯಾತ್ಮಿಕ ಹಸಿವಿನ ಪ್ರೇರಣೆಯೂ ಆಗಿರುತ್ತದೆ ಎಂಬ ಅಂಶವನ್ನು ಮನಗಂಡರೆ ದಾಸರ ಶ್ರೇಷ್ಠ ಸಾಹಿತ್ಯ ರಚನೆಗೆ ಬದುಕಿನ ಅನಿಶ್ಚತತೆಯೂ ಒಂದು ಕಾರಣವಾಗಿದೆ ಎನ್ನಬಹುದು. ಲೌಕಿಕದಲ್ಲಿ ಪಡೆಯಲಾಗದ್ದನ್ನು ಪರಮಾತ್ಮನಲ್ಲಿ ಕಾಣುವ ಧನ್ಯತೆ ದಾಸರ ಕೀರ್ತನೆಗಳ ಪ್ರಧಾನ ಆಶಯವೂ ಆಗಿದೆ.

ತಿಮ್ಮಪ್ಪದಾಸರು ಆ ಕಾಲದಲ್ಲಿ, ಅದ್ವೈತ ಪ್ರಮಾಣ ಪುರುಷರೂ ಸಾಧಕರೂ ಯತಿಗಳೂ ತಮ್ಮ ಪಿತಾಮಹರೂ ಆಗಿದ್ದ ವಾಸುದೇವಾರ್ಯರನ್ನೇ ತಮ್ಮ ಆದ್ಯಗುರುವೆಂದು ಸ್ವೀಕರಿಸಿದ್ದಾರೆ. ತಂದೆ ನಾರಾಯಣಾರ್ಯ ಮತ್ತು ಮಾತುಲ ವೆಂಕಟದಾಸಾರ್ಯರನ್ನು ಗುರುಪರಂಪರೆಯಲ್ಲಿ ಬಹಳ ಮುಖ್ಯವಾಗಿ ಸ್ತುತಿಸಿದ್ದಾರೆ. ಕೃಷ್ಣಯೋಗೀಂದ್ರ, ರಾಮಕೃಷ್ಣಾರ್ಯ, ನೀಲಕಂಠಾರ್ಯ ಮುಂತಾದವರನ್ನೂ ಸ್ಮರಿಸಿದ್ದಾರೆ. ಇವರೆಲ್ಲರೂ ತಿಮ್ಮಪ್ಪದಾಸರ ಮೇಲೆ ಒಂದಿಲ್ಲೊಂದು ರೀತಿಯಲ್ಲಿ ಪ್ರಭಾವ ಬೀರಿ, ಜ್ಞಾನ ಬಿತ್ತಿ, ದಾರಿ ತೋರಿಸಿ ದಾಸವರ್ಯರನ್ನು ಬೆಳೆಸುವಲ್ಲಿ ನೆರವಾಗಿದ್ದಾರೆ. ಈ ಯತಿವರ್ಯರೊಂದಿಗೆ ತಂದೆ ನಾರಾಯಣಾರ್ಯರು ಇವರ ದಾಸದೀಕ್ಷೆಗೆ ಪ್ರೇರಕರಾಗಿದ್ದರೆ, ರಾಮಕೃಷ್ಣಾರ್ಯ, ನೀಲಕಂಠಾರ್ಯರೂ ವಿದ್ಯಾಗುರುಗಳಾಗಿರುವಂತೆ ತೋರುತ್ತದೆ. "ಇವರ ಬಳಿ ಶಿಷ್ಯವೃತ್ತಿ ಮಾಡಿ ತಿಮ್ಮಪ್ಪದಾಸರು ಅಪಾರ ಜ್ಞಾನ ಸಂಪಾದನೆ ಮಾಡಿರುವುದರಲ್ಲಿ ಸಂದೇಹವಿಲ್ಲ. ಆದರೂ ಇವರ ಕೃತಿಗಳಲ್ಲಿ ಗುರು ವಾಸುದೇವಾರ್ಯರ ಪ್ರಭಾವ ಮುದ್ರೆ ಮೂಡಿರುವಂತೆ ಉಳಿದಿಬ್ಬರ ಪ್ರಭಾವ ಎದ್ದು ಕಾಣುವುದಿಲ್ಲ. ಆದರೆ, ಕೀರ್ತನೆಕಾವ್ಯ ಮುಂತಾದ ಕೃತಿ ರಚನೆಗೆ ಅಗತ್ಯವಾದ ವ್ಯುತ್ಪತ್ತಿ ಈ ಇಬ್ಬರು ಮಹನೀಯರ ಬೋಧನೆಯಿಂದ ದಾಸರ ವಶವಾಗಿದೆ ಎಂಬಲ್ಲಿ ಸಂದೇಹವಿಲ್ಲ" ಎಂಬ ಮಾತು ಈ ಅಭಿಪ್ರಾಯವನ್ನು ಅಧಿಕೃತವಾಗಿಸುತ್ತದೆ.

ರಾಮಕೃಷ್ಣಾರ್ಯರು ತಿಮ್ಮಪ್ಪದಾಸರ ಸಮಕಾಲೀನರೂ ಪ್ರಖ್ಯಾತ ವಾಗ್ಗೇಯಕಾರರೂ ಆಗಿದ್ದ ತ್ಯಾಗರಾಜರಿಗೆ 'ಸ್ವರಾರ್ಣವ' ಎಂಬ ಸಂಗೀತಶಾಸ್ತ್ರ ಗ್ರಂಥವನ್ನು ಕೊಟ್ಟ; ಆ ಮೂಲಕ ತ್ಯಾಗರಾಜರ ಕೃತಿಗಳಿಗೆ ಸಂಗೀತ ಜ್ಞಾನದ ತಳಹದಿ ದೊರಕುವಂತೆ ಮಾಡಿದ ಶ್ರೀ ರಾಮಕೃಷ್ಣಾನಂದ ಯತಿಗಳೇ ಇರಬೇಕು. ತಾಳ ನಿರ್ದೇಶನಗಳಲ್ಲದೆ ಹರಿದಾಸರ ಕೀರ್ತನೆಗಳ 'ವರ್ಣ'ದ ಧಾಟಿಯಲ್ಲಿ ಹಾಡುತ್ತಿದ್ದ ತಿಮ್ಮಪ್ಪದಾಸರ ಕೃತಿಗಳಲ್ಲಿ ಬರುಬರುತ್ತ ಸಂಗೀತಜ್ಞಾನದ ಸ್ಪಷ್ಟ ನಿರ್ದೇಶನವಿರುವುದನ್ನು ನೋಡಿದರೆ ಯತಿಗಳೇ ತಿಮ್ಮಪ್ಪದಾಸರಿಗೂ ಸಂಗೀತ ಶಾಸ್ತ್ರದ ಪರಿಚಯ ಮಾಡಿಸಿರಬೇಕೆಂದು ಊಹಿಸಲಾಗಿದೆ. ಇವರು 'ಶತಸಹಸ್ರ' ಶಿಷ್ಯರಿಗೆ ಕಾವ್ಯಪಾಠ ಬೋಧಿಸಿದವರೆಂದರೂ ದಾಸರ ವಂಶಸ್ಥ ಗುರುಗಳನ್ನು ಬಿಟ್ಟರೆ ಉಳಿದವರೆಲ್ಲ ವಾಸುದೇವಾರ್ಯರ ಸಮಕಾಲೀನರೋ ಅಥವಾ ಹಿಂದಿನ ಗುರು ಪರಂಪರೆಗೆ ಸೇರಿದವರೋ ಆಗಿದ್ದಾರೆ. ಗೋಪಾಲದಾಸಾರ್ಯರನ್ನು ಸ್ತುತಿಸಿರುವ

೧೮೨೩ ಆಗುತ್ತದೆ. ಇವರು ಜೇಷ್ಠಪುತ್ರ. ಅಂದರೆ ತಿಮ್ಮಪ್ಪದಾಸರಿಗೆ ತಮ್ಮ ೫೩ನೇ ವಯಸ್ಸಿನಲ್ಲಿ ಮೊದಲ ಮಗನ ಜನನ (!) ವೆಂದಾಗುತ್ತದೆ. ತಡವಾದ ಪುತ್ರಜನನಕ್ಕೆ ಎಲ್ಲಿಯೂ ಸುಳಿವುಗಳಿಲ್ಲದಿರುವುದನ್ನು ಗಮನಿಸಿದರೆ ತಿಮ್ಮಪ್ಪದಾಸರ ಕಾಲದ ವಿಚಾರದಲ್ಲಿ ಪುನರಾಲೋಚಿಸಬೇಕೆನಿಸುತ್ತದೆ. ಇದು ದೀರ್ಘವಾದ ಚರ್ಚೆಯನ್ನು ಅಪೇಕ್ಷಿಸುವುದರಿಂದ ಇಲ್ಲಿ ಈ ಅನುಮಾನವನ್ನು ಮಾತ್ರ ಸೂಚಿಸಲಾಗಿದೆ. ಆದರೂ ಸದ್ಯದ ಪರಿಸ್ಥಿತಿಯಲ್ಲಿ ಸೀತಾರಾಮಯ್ಯನವರು ನಿರ್ಧರಿಸಿರುವ ಕಾಲವನ್ನೇ ದಾಸರ ಕಾಲವೆಂದು ಸ್ವೀಕರಿಸಬಹುದಾಗಿದೆ.

ತಿಮ್ಮಪ್ಪದಾಸರು ತಮ್ಮ ಜೀವನದ ಅರ್ಧಭಾಗವನ್ನು ಜನ್ಮಸ್ಥಳವಾದ ಚಿಕ್ಕನಾಯ್ಕನಹಳ್ಳಿಯಲ್ಲೇ ಕಳೆದಿರುವಂತೆ ತೋರುತ್ತದ. "ತಿಮ್ಮಪ್ಪದಾಸರರ ಜೀವನ ವೃತ್ತಾಂತ ವಿವರವಾಗಿ ತಿಳಿದುಬಂದಿಲ್ಲ. ಅವರ ಕೀರ್ತನೆಗಳ ಮೂಲಕ ಅವರ ಅಂತರಂಗ ವ್ಯಕ್ತಿತ್ವವೇನೋ ಚೆನ್ನಾಗಿ ಮೂಡಿ ನಿಂತು, ಭಕ್ತಿಜ್ಞಾನ ವೈರಾಗ್ಯಗಳಲ್ಲಿ ಸಿದ್ಧತೆಪಡೆಯಲು ನಿರಂತರವೂ ಹೋರಾಟ ನಡೆಸಿದ ಒಬ್ಬ ಮಹಾನ್ ಸಾಧಕರಾಗಿ ಕಂಡುಬರುತ್ತಾರೆ". ಎಂದು ಸೀತಾರಾಮಯ್ಯನವರು ಹೇಳಿದ್ದರೂ ಅವರ ಕೀರ್ತನೆಗಳ ಮೂಲಕ ಅಪ್ರಯತ್ನಪೂರ್ವಕವಾಗಿ ಕಂಡುಬಂದಿರುವ ಕೆಲವು ಸಂಗತಿಗಳು ಮತ್ತು ತಮ್ಮ ಮನೆತನದಲ್ಲಿ ಪ್ರಚಲಿತವಿದ್ದ ಐತಿಹ್ಯಗಳ ಆಧಾರದಿಂದ ಅವರ ಜೀವನದ ಬಗ್ಗೆ ಒಂದು ಚಿತ್ರವನ್ನು ಮೂಡಿಸಿದ್ದಾರೆ. ಅದರಂತೆ ದಾಸರು ಉದ್ಯೋಗಾರ್ಥಿಯಾಗಿ ಶ್ರೀರಂಗಪಟ್ಟಣಕ್ಕೆ ಹೋಗಿ, ಅಲ್ಲಿ ಅರಸರ ಬಳಿ ರಾಯಸದ ವೃತ್ತಿಯನ್ನು ನಡೆಸುತ್ತಿದ್ದರು. ಆ ಸಂದರ್ಭದಲ್ಲೇ ಗುರು ವಾಸುದೇವಾರ್ಯರನ್ನು ಸಂದರ್ಶಿಸಿ ಮಂತ್ರೋಪದೇಶ ಪಡೆದರು. ಶ್ರೀರಂಗಪಟ್ಟಣದ ಪತನಾನಂತರ ಮತ್ತೆ ಹುಟ್ಟೂರಿಗೆ ಹಿಂತಿರುಗಿದರು. ಈ ರಾಜಕೀಯ ಅಸ್ತಿರತೆಯ ಪರಿಸ್ಥಿತಿಯು ಮೈಸೂರಿನ ರಾಜಮನೆತನಕ್ಕೆ ಒಂದು ವಿಶೇಷವಾದ ಉಪಕಾರವನ್ನು ಮಾಡುವ ಅವಕಾಶ ದಾಸರಿಗೆ ಪ್ರಾಪ್ತವಾಗಿತ್ತು. ಮುಮ್ಮುಡಿ ಕೃಷ್ಣರಾಜ ಒಡೆಯರು ಪಟ್ಟಕ್ಕೆ ಬಂದ ಮೇಲೆ ಅವರನ್ನು ಭೇಟಿಮಾಡಿದ ಒಂದು ಸಂದರ್ಭದಲ್ಲಿ ದಾಸರು ಆ ಉಪಕಾರದ ವಿಚಾರವನ್ನು ರಾಜರ ಸ್ಮರಣೆಗೆ ತರಲಾಗಿ, ಅರಸರು ಸಂಪ್ರೀತಗೊಂಡು ದಾಸರಿಗೆ ಅನುಕೂಲ ಕಲ್ಪಿಸುವುದಕ್ಕಾಗಿ ಅವರನ್ನು ಅರಮನೆಗೇ ಕರಿಸಿಕೊಂಡರಲ್ಲದೆ ಉಪಕಾರ ಸ್ಮರಣೆಗಾಗಿ ಹಾಸನ ಜಿಲ್ಲೆಯ ಅರಕಲಗೂಡು ಸಮೀಪ 'ಭಟಮಾನ್ಯ'ವನ್ನು ಕೊಟ್ಟಿದ್ದರು. ಬದುಕಿನ ಕೊನೆಯ ಕಾಲದಲ್ಲಿ ಮೈಸೂರಿನಲ್ಲಿದ್ದು ಅರಮನೆಯ ತ್ರಿನಯನೇಶ್ವರ ದೇವಾಲಯದ ಆವರಣದಲ್ಲೇ ತಮ್ಮ ಕುಲದೈವವಾದ ಶ್ರೀವೆಂಕಟರಮಣಸ್ವಾಮಿಯನ್ನು ಆರಾಧಿಸುತ್ತ, ಆಶ್ರಯದಾತರಾದ ಅರಸರ ಶ್ರೇಯಃಪ್ರಾರ್ಥನೆ ಮಾಡುತ್ತ, ದೇವತಾರಾಧನೆ, ಭಜನೆ ಮುಂತಾದ ಪಾರಮಾರ್ಥಿಕ ಕಾರ್ಯಗಳಲ್ಲಿ ನಿರತರಾಗಿದ್ದವರು. ಆದರೆ ನೆಮ್ಮದಿಯಾಗಿ ಬದುಕುವುದು ದಾಸರ ಹಣೆಯಲ್ಲಿ ಬರೆದಿರಲಿಲ್ಲ. ಋಣಭಾರದಿಂದ ಕೊರಗಿ ಕೊರಗಿ ಸತ್ತರು. ದಾಸರು ಮಾಡಿದ್ದ ಋಣವನ್ನು ತೀರಿಸುವಷ್ಟು ತೀರಿಸಿ ತೀರಿಸಲಾರದೆ ಬಿಟ್ಟ ಋಣಶೇಷ "ದ್ವಿಸಹಸ್ರಶತಾಧಿಕ ಋಣ" (೨,೧೦೦ ರೂ.) ಪುತ್ರ ನಾರಾಯಣದಾಸರ ಪಾಲಿಗೆ

೫೦ ಕೀರ್ತನೆಗಳು ಪ್ರಸ್ತುತ ಸಂಪಾದಕನಿಂದ ಪ್ರತಿಷ್ಠಾನದ ಮೂಲಕ ೨೦೦೪ದಲ್ಲಿ ಪ್ರಕಟವಾಗಿದೆ. ಇದನ್ನೂ ಒಳಗೊಂಡಂತೆ ಅರ್ಚನದ ಕೀರ್ತನೆಗಳ ಬಗ್ಗೆ ಎಂ.ವಿ.ಸೀ. ಅವರು ಗುರುತಿಸಿರುವ ವೈಶಿಷ್ಟ್ಯಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

(೧) ದೇವತಾ ಸ್ತುತಿಗಳು : ಅದ್ವೈತ ತತ್ವಕ್ಕೆ ಅನುಸಾರವಾಗಿ ಹರಿ–ಹರ ಇಬ್ಬರನ್ನು ಸ್ತುತಿಸಿರುವ ದಾಸರು ವಿಶೇಷವಾಗಿ ಹರಿಯನ್ನು ಅದರಲ್ಲೂ ಕೃಷ್ಣ – ವೆಂಕಟೇಶ್ವರರನ್ನು ಅಧಿಕವಾಗಿ ಸ್ತುತಿಸಿದ್ದಾರೆ. ಮೊದಲಿಗೆ ಸಂಪ್ರದಾಯದಂತೆ ಗಣೇಶ ಮತ್ತು ಶಾರದಾಸ್ತುತಿಗಳನ್ನು ಅಳವಡಿಸಿದೆ.

'ಕೊಡು ಮತಿಯ ಗಣನಾಥ' ಎಂಬ ಕೀರ್ತನೆಯಲ್ಲಿ ಗುರುಸ್ತುತಿಯನ್ನು ಪರಂಪರೆಯಂತೆ ಗಣೇಶ–ಶಾರದೆ–ತಂದೆ–ತಾಯಿ–ಗುರುಗಳು ಹೀಗೆ ಎಲ್ಲರನ್ನು ಸ್ಮರಿಸಲಾಗಿದೆ. 'ರಕ್ಷಿಸೆನ್ನನು ಶಾರದಾಂಬ' ಎಂದು ಆರಂಭವಾಗುವ ಶಾರದಾ ಕೃತಿ ಸುಂದರವಾಗಿ ಮೂಡಿಬಂದಿದೆ.

ಸ್ತ್ರೀದೇವತಾಸ್ತುತಿಗಳಲ್ಲಿ 'ಗಂಗಾಸ್ತುತಿ' ವಿಶೇಷವಾಗಿದೆ. ೨೫ ನುಡಿಗಳ ದೀರ್ಘಕೃತಿಯಾಗಿರುವ ಇದರಲ್ಲಿ 'ಭಾಗವತ ಗಂಗೆ'ಯನ್ನಾಗಿ ಗಂಗಾನದಿಯನ್ನು ವಿಶೇಷೀಕರಿಸಿದೆ. ಗಂಗಾನದಿಯ ಚರಿತ್ರೆಯ ಜೊತೆಜೊತೆಗೇ ಗಂಗೆಯಿಂದ ಪುನೀತರಾದ ಭಾಗವತ ಭಕ್ತರ ಸಂಗತಿಗಳನ್ನೂ ಎಂವಿಸೀ ಟಿಪ್ಪಣಿಗಳಲ್ಲಿ ವಿವರಿಸಿದ್ದಾರೆ.

(೨) ಗುರುಸ್ತುತಿಗಳು : ಇಲ್ಲಿ ೮ ಕೀರ್ತನೆಗಳಿದ್ದು ಮೊದಲೆರಡು ವಾಸುದೇವಾರ್ಯರನ್ನು ಕುರಿತವಾಗಿವೆ. 'ಗುರುಚರಣ ಪೂಜೆಯನು.........' ಎಂಬ ಕೀರ್ತನೆಯಲ್ಲಿ 'ತಿರುಪತಿ ವೆಂಕಟ' ಅಂಕಿತವಿದ್ದು ಇದು ತಿಮ್ಮಪ್ಪದಾಸರ ಅಂಕಿತವಾಗಿದೆ. ಕೆಲವುಗಳಲ್ಲಿ 'ಚಿಕನಾಗಪುರವಾಸ' ಎಂಬ ಅಂಕಿತ ಮಾತ್ರವಿದೆ. ಹೀಗೆ ಇದೊಂದೇ ಅಂಕಿತವಿರುವ ಕೀರ್ತನೆಗಳನ್ನು ವೆಂಕಟದಾಸಾರ್ಯರದ್ದೆಂದು ಸದ್ಯಕ್ಕೆ ಪರಿಗಣಿಸಿರುವ ಹಿನ್ನೆಲೆಯಲ್ಲಿ ಇದೂ ವೆಂಕಟದಾಸರದ್ದಿರಬಹುದು. ಆದರೆ ಎಂ.ವಿ.ಸೀ ಈ ಕುರಿತ ಅಲೋಚಿಸದೆ ಇದ್ದುದರಿಂದ ತಿಮ್ಮಪ್ಪದಾಸರದ್ದನ್ನಾಗಿ ಪರಿಗಣಿಸಿದ್ದಾರೆ. ಪ್ರಸ್ತುತ ಸಂಪಾದಕನಿಂದ ಇವುಗಳನ್ನೆಲ್ಲ ಬೇರ್ಪಡಿಸಿ 'ವೆಂಕಟದಾಸರು ಮತ್ತು ಇತರ ಅದ್ವೈತ ದಾಸರ ಕೀರ್ತನೆಗಳು' ಎಂಬ ಗ್ರಂಥವನ್ನು ಬಿಎಂಶ್ರೀ ಪ್ರತಿಷ್ಠಾನ ೨೦೦೭ರಲ್ಲಿ ಪ್ರಕಟಿಸಿದೆ. ಇದರಲ್ಲಿ ಗೋಪಾಲಾರ್ಯರು ಕೃಷ್ಣಯೋಗೀಂದ್ರರು, ನೀಲಕಂಠಾರ್ಯರು, ರಾಮಕೃಷ್ಣಾರ್ಯರು ಮತ್ತು ವೆಂಕಟದಾಸಾರ್ಯರ ಕೃತಿಗಳಿವೆ. ಈ ಎಲ್ಲರನ್ನು ತಿಮ್ಮಪ್ಪದಾಸರು 'ವಾಸುದೇವಾರ್ಯರ' ರೂಪದಲ್ಲೇ ಗ್ರಹಿಸಿರುವುದು ವಿಶೇಷವಾಗಿದೆ ಎಂದು ಎಂವಿಸೀ ಹೇಳುತ್ತಾರೆ. ಅರ್ಚನದಲ್ಲಿ ಇವರನ್ನೇ ಕುರಿತ ತಿಮ್ಮಪ್ಪದಾಸರ ಕೃತಿಗಳಿವೆ.

ಕೃಷ್ಣಯೋಗೀಂದ್ರರ ಕೃತಿ ಆತ್ಮನಿವೇದನೆಯ ರೂಪದಲ್ಲಿದ್ದು ಕೊನೆಯಲ್ಲಿ ಮರೆಯೊಕ್ಕೆ ಎಂಬ ಕೋರಿಕೆಯಿದೆ. ಇವರಿಗೆ 'ರಾಮದಾಸ' 'ನರಸಾರ್ಯ' ಎಂಬ ಪರ್ಯಾಯನಾಮಗಳೂ ಇರುವುದನ್ನು ಈ ಕೀರ್ತನೆಗಳು ದಾಖಲಿಸುತ್ತಿದ್ದು, ಇವು 'ಅಂಕಿತ'ವಾಗಿರುವಂತೆ ತೋರುತ್ತದೆ. ಈ ಅಂಕಿತದಲ್ಲಿ ಹಲವು ಸಂಸ್ಕೃತ ಕೃತಿಗಳು ಲಭ್ಯವಿದೆ. ರಾಮಕೃಷ್ಣಾರ್ಯರ ಸ್ತುತಿಯಲ್ಲಿಯೂ 'ಮಂಗಳಗಿರಿನಿಲಯ ರೂಪ'

ಹಲವಾರು ತೆಲುಗು ಕೃತಿಗಳೂ ತಿಮ್ಮಪ್ಪದಾಸರವೆಂದು ಹೇಳಲಾಗುತ್ತಿದೆ. ಈ ಮಾತು ನಿಜವೇ ಆದಲ್ಲಿ ತಿಮ್ಮಪ್ಪದಾಸರು ಪಂಡಿತರೆನಿಸುತ್ತಾರೆ. ಈ ಬಗ್ಗೆ ವಿವರವಾದ ಅಧ್ಯಯನದ ಅಗತ್ಯವಿದೆ. ನೀಲಕಂಠಾರ್ಯರು ದಾಸರಿಗೆ ವೇದಾಂತ ಶಾಸ್ತ್ರಗಳನ್ನು ಬೋಧಿಸಿದವರೆಂದು ಊಹಿಸಲಾಗಿದೆ. ಈ ಎಲ್ಲ ಆಚಾರ್ಯರ ಬಗ್ಗೆ ದಾಸರ ಕೀರ್ತನೆಗಳಲ್ಲಿ ಸಿಗುವ ಸುಳುಹುಗಳನ್ನು ಹಿಡಿದು ಇತರ ಆಧಾರಗಳನ್ನು ಹುಡುಕಿ ಸಂಶೋಧನೆಯನ್ನು ಮಾಡಲು ಅವಕಾಶವಿದೆ.

ಒಟ್ಟಾರೆಯಾಗಿ 'ಅರ್ಚನ' ಕೃತಿಯನ್ನು ೧೯೭೧ರಲ್ಲಿ ಪ್ರೊ॥ ಎಂ.ವಿ.ಸೀ. ಅವರು ಸಂಪಾದಿಸುವ ಮೂಲಕ ಹರಿದಾಸ ಪರಂಪರೆಗೆ ಅದ್ವೈತ ದಾಸರನ್ನು ಪರಿಚಯಿಸಿರುವಲ್ಲಿ ಶ್ರದ್ಧೆ ಮತ್ತು ನಿಷ್ಠೆ ಎರಡನ್ನೂ ಕಾಣಬಹುದು. ೧೦೮ ಕೀರ್ತನೆಗಳಿಂದ ಕೂಡಿದ ಈ ಕೃತಿಯು ಅರ್ಚನಾ ವಿಧಾನದಲ್ಲಿದ್ದು ಸಂಪಾದಕರೇ ತಿಳಿಸಿರುವಂತೆ ಇಲ್ಲಿಯ ಕೀರ್ತನೆಗಳು ಶಿವ–ವಿಷ್ಣುವಿನ ಬೇರೆಬೇರೆ ಅವತಾರಗಳನ್ನು ಕೀರ್ತಿಸುತ್ತವೆ. ಸಂಪಾದನಾ ಕಾರ್ಯಕ್ಕೆ ಕವಿಯ ಸ್ವಹಸ್ತಾಕ್ಷರ ಪ್ರತಿಯೇ ದೊರಕಿರುವುದರಿಂದ ಪಾಠನಿಷ್ಕರ್ಷೆ ಸುಲಭವಾಗಿದೆ. ಪೀಠಿಕಾ ಭಾಗದಲ್ಲಿ ಕವಿಯ ಕಾಲ, ಮತ, ಪರಂಪರೆ ಇತ್ಯಾದಿಗಳ ಬಗ್ಗೆ ವಿವರವಾಗಿ ಚರ್ಚಿಸಿದ್ದಾರೆ. ಅಲ್ಲದೆ ಇಲ್ಲಿನ ಕೀರ್ತನೆಗಳ ಮೌಲ್ಯವನ್ನು ಪೂಜಾಕ್ರಮ. ತತ್ವ ಪ್ರತಿಪಾದನೆ, ಗೇಯಸ್ವರೂಪ, ಸಾಹಿತ್ಯದೃಷ್ಟಿ, ಕವಿಯ ವ್ಯಕ್ತಿತ್ವ ಹೀಗೆ ವಿವಿಧ ದೃಷ್ಟಿಗಳಿಂದಲೂ ಅಳೆಯಲಾಗಿದೆ. ಇದು ಸಂಪಾದಕರ ವಿಮರ್ಶನದೃಷ್ಟಿಗೆ ನಿದರ್ಶನವಾಗಿದೆ ಎಂದು ಹೇಳಬಹುದು.

ಅರ್ಚನದಲ್ಲಿ ೧೦೮ ಪೂಜಾವಿಧಾನದ ಕೀರ್ತನೆಗಳಿವೆ. ತಿಮ್ಮಪ್ಪದಾಸರವೆಂದು ಸೀತಾರಾಮಯ್ಯನವರು ಪಟ್ಟಿಮಾಡಿರುವ (೧) ಗುರುಸ್ತುತಿಪರ ಕೀರ್ತನೆಗಳು (೨) ಸದ್ಗುರು ಬೋಧಾನುವಾದ ಸುಧೆ (೩) ಆತ್ಮನಿವೇದನೆ ಮುಂತಾದ ಸಂಕೀರ್ಣ ಕೀರ್ತನೆಗಳು (೪) 'ಕಾಯ–ಜೀವ ಸಂವಾದ' ವಿಷಯದ ಕೀರ್ತನೆಗಳಲ್ಲಿ ಕೆಲವು ಮಾತ್ರ ಇದರಲ್ಲಿ ಸೇರಿವೆ. ಈ ರೀತಿ ವಿಷಯವಾರು ವಿಭಾಗ ಮಾಡಿ ಬರೆದಿರುವ ಹಸ್ತಪ್ರತಿಗಳೇ ಲಭ್ಯವಿದೆ. ಸ್ವತಃ ಕೀರ್ತನಕಾರರೇ ಹೀಗೆ ವಿಂಗಡಿಸಿದ್ದಾರೆ ಎಂದು ನಂಬಲಾಗಿದೆ. ಈವರೆಗೆ ದೊರೆತಿರುವ ಎಲ್ಲ ಹಸ್ತಪ್ರತಿಗಳೂ ಸ್ವಹಸ್ತಾಕ್ಷರ ಪ್ರತಿಗಳೇ ಎಂದು ತೀರ್ಮಾನವಾಗಿದೆ. ತಿಮ್ಮಪ್ಪದಾಸರು ಸೀತಾರಾಮಯ್ಯನವರ ವಶಸ್ಥರೇ ಆಗಿದ್ದು ಅವರ ತಂದೆ, ತಾತರ ಕಾಲದ ಹಸ್ತಪ್ರತಿಗಳೆಲ್ಲ ಈ ವಂಶದವರಲ್ಲೇ ಉಳಿದು ಬಂದಿರುವುದರಿಂದ ಇರುವ ಹಸ್ತಪ್ರತಿಗಳೆಲ್ಲ ಸಾಮಾನ್ಯವಾಗಿ ಆಯಾ ಕವಿಗಳ ಸ್ವಹಸ್ತಾಕ್ಷರ ಪ್ರತಿಗಳೇ ಆಗಿರುತ್ತವೆ. ಈ ಯಾವ ಕೃತಿಗಳೂ ಲಿಪಿಕಾರನಿಂದ ನಕಲಾಗಿರುವ ಬಗ್ಗೆ ಪ್ರತ್ಯೇಕ ಪುಷ್ಪಿಕೆಯಾಗಲಿ, ಲಿಪಿಕಾರರ ವಿವರಣೆಗಳಾಗಲಿ ಕಾಣಸಿಗದಿರುವುದರಿಂದ ಸಹಜವಾಗಿ ಇವು ಕವಿಪ್ರತಿಗಳೇ ಎನಿಸುತ್ತವೆ. ಆದರೂ ಹಸ್ತಪ್ರತಿಗಳೆಲ್ಲ ಬಿಡಿಬಿಡಿಯಾಗಿದ್ದು, ಯಾವ ಹಸ್ತಪ್ರತಿಯೂ ಇದೇ ಶೀರ್ಷಿಕೆಗಳಲ್ಲಿ ಪ್ರತ್ಯೇಕವಾಗಿ ಲಭ್ಯವಾಗಿಲ್ಲ. ಕಾಯ–ಜೀವ ಸಂವಾದದ ಕೀರ್ತನೆಗಳು ಮಾತ್ರ ಪ್ರತ್ಯೇಕವಾಗಿ ದೊರಕಿದ್ದರೂ ಅಸಮಗ್ರವಾಗಿದೆ. ಸದ್ಯಕ್ಕೆ ಲಭ್ಯವಿರುವ ಕೀರ್ತನೆಗಳ ಹಸ್ತಪ್ರತಿಗಳು ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿವೆ. ತಿಮ್ಮಪ್ಪದಾಸರ ಇನ್ನೂ ಸುಮಾರು

ಸರಿಪಡಿಸಿ ಒಂದು ಕ್ರಮಕ್ಕೆ ಅಳವಡಿಸಿ ಅಂಕಿತ ಸಮಸ್ಯೆ ಸರಿಪಡಿಸುವ ಕಾರ್ಯ ಆಗಬೇಕಾಗಿದೆ. ಇವುಗಳನ್ನೆಲ್ಲ ಸಂಗ್ರಹಿಸಿ ಅಧ್ಯಯನ ಮಾಡಿದ ಮೇಲಷ್ಟೆ "ಗುರುವಿನ ವ್ಯಕ್ತಿತ್ವ ಈಗ ತಿಳಿದುಬಂದಿರುವುದಕ್ಕಿಂತ ಹೆಚ್ಚು ಸ್ಪಷ್ಟರೇಖೆಗಳಿಂದ ಮೂಡಿನಿಲ್ಲುವ ಸಂಭವವಿದೆ" ಎಂಬ ಸೀತಾರಾಮಯ್ಯನವರ ಮಾತಿನಂತೆ ತಿಮ್ಮಪ್ಪದಾಸರ ಗುರುಪರಂಪರೆಯ ಮಹತ್ವದ ಅರಿವಾಗುತ್ತದೆ. ಪ್ರಸ್ತುತ ಸಂಪಾದಕನಿಂದ ಈ ಕಾರ್ಯ ಈಚೆಗೆ ಸ್ವಲ್ಪಮಟ್ಟಿಗೆ ಆಗಿದೆ. ಇನ್ನೂ ಅಧ್ಯಯನ ಆಗಬೇಕಾಗಿದೆ.

(೩) ಆತ್ಮನಿವೇದನೆ : ಈ ವಿಭಾಗದಲ್ಲಿ ಕೀರ್ತನೆಗಳು ಪ್ರತ್ಯೇಕವಾಗಿಲ್ಲ. ಇರುವವೆಲ್ಲ ಅರ್ಚನೆಯ ಕ್ರಮದಲ್ಲಿ ಅಳವಟ್ಟಿವೆ. ಇವರ ಬಹಳಷ್ಟು ಆತ್ಮನಿವೇದನೆಯ ಹಾಡುಗಳು ವಾಸುದೇವಾರ್ಯರು ಮತ್ತು ವೆಂಕಟದಾಸರಲ್ಲಿ ಮೊರೆಹೋಗಿರುವ ಗುರುಸ್ತುತಿಗಳಾಗಿಯೂ ನಿಲ್ಲುತ್ತವೆ. ಇರುವ ಕೆಲವೇ ಕೀರ್ತನೆಗಳಲ್ಲಿ ತಿಮ್ಮಪ್ಪದಾಸರು ಆರ್ತಭಾವವನ್ನು ಔಚಿತ್ಯಪೂರ್ಣವಾಗಿ ತಂದಿರುವುದುನ್ನು ಎಂ.ವಿ.ಸೀ. ಗುರುತಿಸಿದ್ದಾರೆ.

(೪) ಋಣ ಕೀರ್ತನೆಗಳು : ಆತ್ಮನಿವೇದನೆ ವಿಭಾಗದಲ್ಲೇ ಗುರುತಿಸಬಹುದಾದ "ಋಣ ಕೀರ್ತನೆಗಳು" ಎಂಬ ವಿಶೇಷ ಬಗೆಯ ಕೀರ್ತನೆಗಳನ್ನು ದಾಸರು ರಚಿಸಿದ್ದಾರೆ. 'ಋಣ'ದ ಬಗೆಗೆ ತೊಳಲಾಡಿರುವ ಭಾವ ಇಲ್ಲಿ ಮುಖ್ಯವಾಗಿ ಮೂಡಿಬಂದಿದೆ. ತಾವು ಮಾಡಿರುವ ಸಾಲ; ಅದನ್ನು ತೀರಿಸುವುದಕ್ಕೆ ಪಟ್ಟಿರುವ ಬವಣೆ; ತೀರಿಸಲಾಗದುದಕ್ಕೆ ಅನುಭವಿಸಿರುವ ಯಾತನೆ, ಪಾಪಭೀತಿ, ಪ್ರಾಯಶ್ಚಿತ್ತ, ಇತ್ಯಾದಿಗಳನ್ನು ಮನಮುಟ್ಟುವಂತೆ ಹಿಡಿದಿಟ್ಟಿದ್ದಾರೆ. ಸಾಮಾನ್ಯವಾಗಿ ಹರಿದಾಸರು ವಿರಕ್ತರಾಗಿದ್ದು ಸಂಸಾರದಿಂದ ವಿಮುಖರಾಗಿರುತ್ತಾರೆ. ಅವರ ಬೇಡಿಕೆ ಏನಿದ್ದರೂ ಮೋಕ್ಷ–ಭಕ್ತಿ–ಭಗವದ್ದರ್ಶನ ಮಾತ್ರವಾಗಿರುತ್ತದೆ. ಆದರೆ ತಿಮ್ಮಪ್ಪದಾಸರಲ್ಲಿ ಅವುಗಳೊಂದಿಗೆ ಹಣದ ಬೇಡಿಕೆಯಿರುವುದು ವಿಶಿಷ್ಟವಾಗಿದೆ.

'ಹಣ ಹೊನ್ನು ಕೊಡು ಹೊನ್ನಾಂಬಾ'

'ಧನವಕೊಡಿಸಿ ಸಲಹೋ ಭಕ್ತರ ಪ್ರೇಮಾ'

ಮುಂತಾದ ಸಾಲುಗಳನ್ನಷ್ಟೆ ಪರಿಗಣಿಸಿ ದಾಸರಲ್ಲಿ ಲೌಕಿಕ ಆಸಕ್ತಿಯಿತ್ತೆಂದು ಅಭಿಪ್ರಾಯಪಟ್ಟರೆ ತಪ್ಪಾಗುತ್ತದೆ. ದಾಸರ ಈ ಹಣದ ಬೇಡಿಕೆ ಏನಿದ್ದರೂ ತಾವು ಮಾಡಿದ್ದ ಸಾಲದಿಂದ ಮುಕ್ತರಾಗುವುದಕ್ಕಷ್ಟೆ; ಋಣಬಾಧೆ ತೀರಿಸುವುದಕ್ಕೆ ಮಾತ್ರ ಎಂಬುದನ್ನು ಗ್ರಹಿಸಿದಾಗ ದಾಸರು ವಿರಕ್ತ ಜೀವನವನ್ನೇ ಹೊಂದಿದ್ದರೆಂಬುದು ಸ್ಪಷ್ಟವಾಗುತ್ತದೆ.

'ತಿಮ್ಮಪ್ಪದಾಸರು ಆರ್ತರಾಗಿ, ಜ್ಞಾನಿಯಾಗಿ, ಜಿಜ್ಞಾಸುವಾಗಿ 'ಅರ್ಥಾರ್ಥಿ'ಯಾಗಿ ಭಗವಂತನನ್ನು ಭಜಿಸಿದ್ದಾರೆ' ಎಂದಿರುವ ಸೀತಾರಾಮಯ್ಯನವರು ಈ 'ಅರ್ಥಾರ್ಥಿ'ಗೆ 'ಸಾಲಮಾಡಿ ಭಜನೆ ಗೋಷ್ಠಿ ಅನ್ನಸಂತರ್ಪಣೆ ಮುಂತಾದುವನ್ನು ಮಾಡುವುದರಲ್ಲಿ ನಿರತರಾಗಿರಬೇಕು' ಎಂದು ಊಹಿಸುತ್ತಾರೆ. ದಾಸರ ಈ 'ಸಾಲ'ಕ್ಕೆ ಕೀರ್ತನೆಗಳಲ್ಲಿ ಸ್ಪಷ್ಟಕಾರಣ ದೊರೆಯುವುದಿಲ್ಲವಾದರೂ 'ಋಣಗೈದು ಸ್ವೋಪಕಾರಿಗೆ ಕೊಟ್ಟು

ಎಂಬ ಉಲ್ಲೇಖ ಬಂದಿದ್ದು ಈ 'ಮಂಗಳಗಿರಿ' ಅಂಕಿತದಲ್ಲೂ ಹಲವು ಸಂಸ್ಕೃತ ಕೀರ್ತನೆಗಳು ಲಭ್ಯವಿದೆ. ಈ ಇಬ್ಬರು ಗುರುಗಳನ್ನು ತಿಮ್ಮಪ್ಪದಾಸರು ತಮಗೆ ಮಾರ್ಗದರ್ಶನ ಮಾಡಿರುವವರನ್ನಾಗಿ ಕಂಡಿದ್ದು, ಅತ್ಯಂತ ಭಕ್ತಿ–ಗೌರವಗಳಿಂದ ಸ್ಮರಿಸುತ್ತಾರೆ. ಆದರೆ ಇವರುಗಳ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಾಗುತ್ತಿಲ್ಲ ಎನ್ನುತ್ತಾರೆ ಎಂ.ವಿ.ಸೀ. ಈ ಬಗ್ಗೆ ಪರಿಶೀಲನೆಯ – ಸಂಶೋಧನೆಯ ಅಗತ್ಯವಿದೆ. ಇದರಿಂದ ತಿಮ್ಮಪ್ಪದಾಸರು ಉಲ್ಲೇಖಿಸಿರುವ ಈ ಇಬ್ಬರು ಗುರುಗಳ ಅಂಕಿತಗಳಲ್ಲೇ ಅನೇಕ ರಚನೆಗಳು ಲಭ್ಯವಿದ್ದು ಅವುಗಳ ಕರ್ತೃತ್ವದ ಗೊಂದಲವೂ ಪರಿಹಾರವಾಗುತ್ತದೆ. ಪ್ರಸ್ತುತ 'ಮಂಗಳಂ ರಾಮಕೃಷ್ಣಾರ್ಯ' ಕೀರ್ತನೆಯಲ್ಲಿ 'ತಿರುಪತಿವೆಂಕಟ' ಅಂಕಿತ ಇದ್ದು ಗುರುಸ್ತುತಿಯ ರೂಪದಲ್ಲಿರುವುದರಿಂದ ತಿಮ್ಮಪ್ಪದಾಸರದ್ದೆಂದು ಗ್ರಹಿಸಿದೆ. (ಇದು ರಾಮಕೃಷ್ಣಾರ್ಯರದ್ದೇ ಆಗಿರಲೂ ಸಾಧ್ಯವಿದೆ.) ವೆಂಕಟದಾಸಾರ್ಯರನ್ನು ಕುರಿತ ನಾಲ್ಕು ಕೀರ್ತನೆಗಳಲ್ಲಿ,

'ನೆರೆಧನ್ಯರಾದೆವಾವಿಲ್ಲ ಸಂದೇಹ ಗುರು
ವರ ವಾಸುದೇವಾರ್ಯ ಚಿಕನಾಗಪುರದಿ
ಪರತತ್ವವರುಪಿ ವೆಂಕಟದಾಸವೇಶದಿಂ
ಮರಳಿ ನಿಜದೋಳುನಿದೆ ಕರುಣಾಸಮುದ್ರ'

ಎಂಬ ಭಾವವನ್ನೇ ತಂದಿದ್ದಾರೆ. ಸೀತಾರಾಮಯ್ಯನವರು ಈಗಾಗಲೇ ನಿರ್ಧರಿಸಿರುವಂತೆ ವೆಂಕಟದಾಸರು ತಿಮ್ಮಪ್ಪದಾಸರ ಮಾತುಳ–ಸೋದರಮಾವ– ಹಾಗೂ ಗುರುವಾಗಿದ್ದಾರೆ. ಇವರ ಆಶ್ರಯದಲ್ಲೇ ತಿಮ್ಮಪ್ಪದಾಸರು ಬೆಳೆದಿರುವುದೂ ಈ ಕೀರ್ತನೆಯಿಂದ ತಿಳಿದುಬರುತ್ತದೆ.

'ಜನಿಸಿದ ಮೂರು ವರುಷಕೇ ನಿನ್ನಯ ದಾಸ
ನೆನುತ ಮಾತುಳನಿಂದ ನುಡಿಸಿದೆ'

ಹಾಗಾಗಿ ತಿಮ್ಮಪ್ಪದಾಸರು ಅತ್ಯಂತ ಭಕ್ತಿ–ಭಾವ–ತನ್ಮಯತೆ–ಕೃತಜ್ಞತೆಯಿಂದ ಇವರನ್ನು ಸ್ತುತಿಸುತ್ತಾರೆ.

'ಶರಣು ಮಾತೆಯ ಸುತನೆ ಶರಣು ಹಿತಬೋಧಕನೆ
ಶರಣು ಬುದ್ಧಿಪ್ರದನೆ ಶರಣು ಸುಖಕರನೆ
ಶರಣು ವೇದಾಂತೋಪವೇಶನೆ ಪೋಷಕನೆ'

ಎಂದು ತಮ್ಮ ಸರ್ವತೋಮುಖ ಬೆಳವಣಿಗೆಯ ದಾತಾರರನ್ನಾಗಿಸಿ ಕೃತಕೃತ್ಯತೆಯನ್ನು ತೋರುತ್ತಾರೆ. ಕೆಲವು ಕೀರ್ತನೆಗಳಲ್ಲಿ 'ತಿರುಪತಿವೆಂಕಟ' ಅಂಕಿತವಿಲ್ಲದಿದ್ದರೂ ತಿಮ್ಮಪ್ಪದಾಸರ ಕೀರ್ತನೆಗಳ ನಡುವೆ ಇವು ಬರುವುದರಿಂದ, ಗುರುಸ್ತುತಿಯ ಭಾವದಲ್ಲಿರುವುದರಿಂದ ಮತ್ತು ಕೆಲವೆಡೆ ಸ್ವನಾಮವೇ ಇರುವುದರಿಂದ ತಿಮ್ಮಪ್ಪದಾಸರದ್ದೆಂದು ಪರಿಗಣಿಸಿದೆ.

ಆದರೆ ಗುರುಸ್ತುತಿಪರ ಕೀರ್ತನೆಗಳು ಇನ್ನೂ ಹಲವು ಇದ್ದು ಕೆಲವು ಅಸಮಗ್ರವಾಗಿವೆ. ಬಿಡಿಬಿಡಿ ಗರಿಗಳಲ್ಲಿ ಚೆದುರಿಹೋಗುವೆ. ಒಟ್ಟಾಗಿ ಒಂದು ಹಸ್ತಪ್ರತಿಯಾಗಿ ದೊರಕುತ್ತಿಲ್ಲ. ಜೊತೆಗೆ ಅಂಕಿತಗಳ ಗೊಂದಲವೂ ಇದೆ. ಇವುಗಳನ್ನೆಲ್ಲ

ದೀರ್ಘವಾಗಿದೆ. ಒಬ್ಬಟ್ಟಿನ ಮಿಶ್ರಣಗಳಾದ ಗೋಧಿಹಿಟ್ಟು, ತೊಗರಿಬೇಳೆ, ಬೆಲ್ಲ, ತುಪ್ಪ, ಎಣ್ಣೆಗಳು ತಮ್ಮ ತಮ್ಮ ಘನತೆಯನ್ನು ಹೇಳಿಕೊಂಡು ತಾವೇ ಹೆಚ್ಚೆನ್ನುವ ಹಮ್ಮಿನಿಂದು ಬೀಗಿದ್ದು, ಕೊನೆಗೆ 'ಚಿಕನಾಗಪುರವಾಸ'ನಲ್ಲಿ ಮೊರೆಯಿಟ್ಟು ಎಲ್ಲರೂ ಸಮನಾಗಿ ಒಂದಾಗಿ ಇದ್ದಾಗ ಮಾತ್ರ ಸೌಖ್ಯವೆಂಬ ತೀರ್ಪಿಗೆ ಬದ್ಧರಾಗುವ ಸಂಭಾಷಣೆಯ ಶೈಲಿಯಲ್ಲಿ ಈ ಕೀರ್ತನೆಯಿದೆ.

ಬೆಲ್ಲವು ಗೋಧಿಯು ತೊಗರಿಯು
ಒಳ್ಳೆಣ್ಣೆಯ ತುಪ್ಪವೆಂಬೀಯೈದ ನುತಿಸಲು
ಎಲ್ಲಾ ಲೋಕವ ನಿರ್ಮಿಸಿ
ಚಲ್ಲಿದ ಭೂತಗಳು ತತ್ವಾರ್ಥಕ್ಕಾಸ್ಪದವಿಲ್ಲ

ಹರುಷದಲಿದರೊಳು ಬೆರೆದಿಹ
ಪರಮನು ವಿಂಗಡಿಸಿ ದೂಷಿಸಿ ಮತ್ತೊಡಗೂಡಿಸಿ
ಕರಗುತ ಪ್ರಮದರಿದರೊಳು
ನೆರೆಪೊಂದುವನೀಗ ಜೀವನಿದು ತತ್ವಾರ್ಥವು

ಎಂಬ ಕಂದಪದ್ಯಗಳಲ್ಲಿ ಈ ಒಬ್ಬಟ್ಟಿನ ವಿಶೇಷವನ್ನು ಅದರ ಮೂಲಕ ಕಾಣಬಹುದಾದ ತತ್ವವನ್ನು ಸಂಗ್ರಹಿಸಿದ್ದಾರೆ.

'ಜಯಮಂಗಳಂ ಶುಭೋದಯ ಮಂಗಳಂ
ನಯವಿದರಿಗೊಪ್ಪಾದ ಒಬ್ಬಟ್ಟಿಗೆ'

ಎಂಬ ಮಂಗಳದಿಂದ ಈ ಪ್ರಕರಣವನ್ನು ಸೊಗಸುಗೊಳಿಸಿದ್ದಾರೆ.

ಇದು 'ತಿಮ್ಮಪ್ಪದಾಸರ ಕೀರ್ತನೆಗಳು' ಪುಸ್ತಕದಲ್ಲಿದ್ದು ವಿಶೇಷ ಕೀರ್ತನೆಯಾದುದರಿಂದ ದಾಸರ ಕೀರ್ತನೆಗಳ ವೈಶಿಷ್ಟ್ಯ ನಿರೂಪಣೆಗಾಗಿ ಇಲ್ಲಿ ಉಲ್ಲೇಖಿಸಿದೆ. ಇದರ ವೈಶಿಷ್ಟ್ಯದ ಬಗ್ಗೆ ಹಿರಿಯ ವಿದ್ವಾಂಸರಾದ ಪ್ರೊ॥ ಜಿ. ವೆಂಕಟಸುಬ್ಬಯ್ಯನವರೂ ಆ ಗ್ರಂಥದ ಮುನ್ನುಡಿಯಲ್ಲಿ ಓದುಗರ ಗಮನಸೆಳೆದಿದ್ದು, ಇನ್ನೂ ಹೆಚ್ಚಿನ ನಿಷ್ಕರ್ಷೆಯಾಗಬೇಕಾಗಿದೆ. ಇದೇ ರೀತಿ ಇನ್ನೂ ಹಲವು ರಚನೆಗಳೂ ದೊರಕುತ್ತಿದ್ದು ಇವನ್ನೆಲ್ಲ ಪರಿಶೀಲಿಸುವ ಅಗತ್ಯವಿದೆ.

(೬) ಗುರುಕರುಣೆ ಕೀರ್ತನೆ : ಇದು ಒಂದು ವಿಶೇಷ ಸಂದರ್ಭದ ಕೀರ್ತನೆಯಾಗಿದ್ದು ಇದರಲ್ಲಿ ೫ ಹಾಡುಗಳಿವೆ. ಇದರಲ್ಲಿ 'ಬಂದೊದಗಿತು ಪುಣ್ಯಫಲವು' ಎಂಬುದು ಪೂಜಾವಿಧಾನದ ಕೀರ್ತನೆಯಾಗಿ ಸೇರಿದೆ. ಉಳಿದ ನಾಲ್ಕು ಹಾಡುಗಳನ್ನು ಅನುಬಂಧದಲ್ಲಿ ಕೊಟ್ಟಿದೆ. ಇವು ಒಂದಕ್ಕೊಂದು ಸಂಬಂಧವನ್ನು ಬೆಸೆದುಕೊಂಡು ಇಡೀ ಒಂದು ಪ್ರಸಂಗವನ್ನಾಗಿ ಚಿತ್ರಿಸುತ್ತವೆ. ದಾಸರಿಗೆ ಶ್ರೀರಂಗಪಟ್ಟಣದ ಸಮೀಪವಿರುವ 'ಲಿಂಗಾಭಟ್ಟರಗ್ರಹಾರ' ದಲ್ಲಿ ವಾಸುದೇವಾರ್ಯರು ದರ್ಶನ ಕೊಟ್ಟ, ಪಾದುಕೆಗಳನ್ನು ಬಿಟ್ಟ, ಆಧ್ಯಾತ್ಮಬೋಧೆಯನ್ನು ಕರುಣಿಸಿದ ಸಂದರ್ಭದ ಘಟನೆಯಾಗಿ ಈ ಕೀರ್ತನೆ ಕಂಡುಬರುತ್ತದೆ. ಇದರಲ್ಲಿ ಎರಡು ಹಾಡುಗಳು ಭಾಮಿನಿಷಟ್ಪದಿಯ ಲಯದಲ್ಲಿವೆ. ಒಂದರಲ್ಲಿ ೨೧ ಷಟ್ಪದಿಗಳೂ

ಹರಿಯಾರಾಧನೆಯನು' ಎಂಬ ಉಲ್ಲೇಖ ಮಾತ್ರ ಸ್ವಲ್ಪ ಬೆಂಬಲವಾಗಿ ತೋರುತ್ತದೆ. ಇನ್ನೊಂದೆಡೆ 'ದಾನಶುದ್ಧಿಯಿಲ್ಲದ ದಾನವ್ಯರ್ಥ ಎಂಬುದನು ಕೇಳಿ ಸ್ವಯಾರ್ಜಿತದಲಿ ಮಾಡಿದೆ' ಎಂಬ ಮಾತಿದ್ದು ಇವರು ಮಾಡುತ್ತಿದ್ದ 'ದಾನಶುದ್ಧಿ'ಯನ್ನು ಸ್ವಯಾರ್ಜಿತದ ಆಸ್ತಿಯನ್ನೇ 'ಹರಿಯಾರಾಧನೆ'ಗೆ ಬಳಸಿರುವುದನ್ನು ಗ್ರಹಿಸಬಹುದಾಗಿದೆ. ಈ 'ಹರಿಯಾರಾಧನೆಯ' ಜೊತೆಗೆ 'ಬಿಟ್ಟ ಬಾಯಿಗೆಲ್ಲ ತುತ್ತು ನೀಡಹೋಗಿರಬೇಕು ಜೊತೆಗೆ ಬಂಧು-ಬಳಗ ಮಕ್ಕಳು, ಮದುವೆ, ಮುಂಜಿ-ಔತಣ-ಉಡುಗೊರೆ, ಅಂತೂ ತುಂಬ ಋಣಭಾರದಿಂದ ನಲುಗಿದಂತೆ ಕಾಣುತ್ತದೆ ದಾಸರು". (ಅರ್ಚನ, ಪೀಠಿಕೆ. xxviii) ಎಂಬ ಅಭಿಪ್ರಾಯದಂತೆ ಸಂಸಾರಭಾರವನ್ನು ಊಹಿಸಬಹುದಾದರೂ 'ಹರಿಯಾರಾಧನೆ'ಗಳ ಖರ್ಚಿಗಾಗಿಯೇ ಸಾಲದ ಹೊರೆ ಅಧಿಕವಾಗಿರುವಂತೆ ತೋರುತ್ತದೆ.

ಈ ಋಣವನ್ನು ತೀರಿಸಲಾಗದುದಕ್ಕೆ, ಅದರಿಂದ ಮುಕ್ತನಾಗದೆ ಮೋಕ್ಷ ಪ್ರಾಪ್ತವಾಗದುದಕ್ಕೆ ದಾಸರಲ್ಲಿ ಅಪರಿಮಿತ ಪರಿತಾಪ ಉಂಟಾಗಿರುವುದು ಹಲವು ಕೀರ್ತನೆಗಳಲ್ಲಿ ಪಡಿಮೂಡಿದೆ.

'ಋಣವ ಮಾಡಿದ ಪತಿತನು ನಾನು
ಋಣವ ಮಾಡಿದ ಪಾಮರನಾಗಲೀಸದು
ನರಳಿಪರ ಋಣಿಯ ಚಿಕನಾಗಪುರಿ ನಿಲಯ'
'ಋಣವ ಮಾಡ್ದಧಮಗುಸುರಲ್ಲುಲ್ಲ ನೀತಿಯ
ಮನು ಮುಖ್ಯ ಸ್ಮೃತಿಕರ್ತರು'
'ಋಣವ ಮಾಡಿದ ಪಾಪ ರುಜುವಾಗಲೀಸದು
ಹಣ ಹೊನ್ನು ಕೂಡಿ ಪುಣ್ಯ ಹೃದಯರು ಒಲಿದು'

ಮುಂತಾಗಿ ಋಣಭಾದೆ ನೀಗಿಕೊಳ್ಳಲು ಪರಿಪರಿಯಾಗಿ ಬಿನ್ನವಿಸಿರುವ ದಾಸರ 'ಋಣಕೀರ್ತನೆಗಳು' ಕನ್ನಡ ಹರಿದಾಸ ಸಾಹಿತ್ಯದಲ್ಲಿಯೇ ವಿಶಿಷ್ಟವಾಗಿ ನಿಲ್ಲುವಂತಾಗಿದೆ. ಇಂತಹ ಋಣಕೀರ್ತನೆಗಳು ಇನ್ನೂ ಕೆಲವು ಇದ್ದಿರಬಹುದಾಗಿದ್ದು ಅವುಗಳನ್ನೆಲ್ಲ ಪರಿಶೋಧಿಸಿ ಪ್ರಕಟಿಸುವ ಅಗತ್ಯವಿದೆ.

ಇದರ ಕಾರಣದಿಂದ, ಇವರ ಪುತ್ರರಾದ ನಾರಾಯಣದಾಸರೂ ಈ ಬಾಧೆಯಲ್ಲಿ ತೊಳಲಿರುವ, ತಮ್ಮ ಮೇಲೆ ೨೧೦೦ ರೂ.ಗಳ ಸಾಲದ ಬಾಧೆ ತಂದೆಯವರಿಂದ ಬಂದಿರುವ ಸಂಗತಿಯನ್ನು ತಮ್ಮ ಕೀರ್ತನೆಯಲ್ಲಿ ಉಲ್ಲೇಖಿಸಿದ್ದಾರೆ. ಹರಿದಾಸ ಸಾಹಿತ್ಯದಲ್ಲೇ ವಿಶೇಷವಾಗಿರುವ ಈ ಋಣಕೀರ್ತನೆಗಳನ್ನು ಹೆಚ್ಚಿನ ಅಧ್ಯಯನಕ್ಕೆ ಒಳಪಡಿಸಬೇಕಾದ ಅಗತ್ಯವಿದೆ.

(ಣ) ಒಬ್ಬಟ್ಟಿನ ಕೀರ್ತನೆಗಳು : ತಿಮ್ಮಪ್ಪದಾಸರು ಕನ್ನಡದ ಹರಿದಾಸ ಸಾಹಿತ್ಯದಲ್ಲೇ ಹೊಸ ಬಗೆಯದೆನ್ನುವಂತೆ ಒಬ್ಬಟ್ಟಿನ ಮೇಲೆ ಕೀರ್ತನೆ ರಚಿಸಿದ್ದಾರೆ. ಏಳು ನುಡಿಗಳಲ್ಲಿರುವ ಈ ಕೀರ್ತನೆಗೆ ಮೊದಲು ಮೂರು ಕಂದಪದ್ಯಗಳೂ ಕೊನೆಯಲ್ಲಿ ಒಂದು ಮಂಗಳವೂ ಇದೆ. ಈ ನುಡಿಗಳೂ ೧೮-೨೦ ಸಾಲುಗಳದ್ದಾಗಿದ್ದು ಒಂದೊಂದು ನುಡಿಗಳೇ ಒಂದೊಂದು ಕೀರ್ತನೆಯಷ್ಟು

ನಿರೂಪಣೆ, ನಾಮಪೂಜೆ ಧೂಪ-ದೀಪ, ನೈವೇದ್ಯ, ತಾಂಬೂಲ, ಮಂಗಳ, ವೇದ-ಪುರಾಣ-ಪಚಾಂಗ, ವಿವಿಧ ವಾದ್ಯಘೋಷ, ಉಯ್ಯಾಲೆ, ನೃತ್ಯ, ಪ್ರಾರ್ಥನೆ ವಿವಿಧ ದೇವತಾಸ್ತುತಿ, ಶರಣಾಗತಿ, ರಾಜೋಪಚಾರ, ತಿರ್ಥಪ್ರಸಾದ, ಶಯನ, ಬಿನ್ನಹ ಹೀಗೆ ಎಲ್ಲ ಪೂಜಾವಿಧಗಳಿಗೂ ಒಂದೊಂದು ಕೀರ್ತನೆಯದ್ದು ಆಯಾ ಕೀರ್ತನೆಯ ಕೊನೆಯಲ್ಲಿ ಒಂದೊಂದು ಶತನಾಮಾವಳಿಯ ಉಲ್ಲೇಖದ ಕ್ರಮವಿದೆ.

(೮) ಕಾಯ-ಜೀವ ಸಂವಾದ ಕೀರ್ತನೆಗಳು : ಇದು ತಿಮ್ಮಪ್ಪದಾಸರ ಇನ್ನೊಂದು ಸ್ವತಂತ್ರ ಕೃತಿಯೆನಿಸುವಷ್ಟರ ಮಟ್ಟಿಗೆ ಪ್ರತ್ಯೇಕ ಕೀರ್ತನಗುಚ್ಛವಾಗಿದೆ. ಪ್ರಸ್ತುತ ೧೫ ಕೀರ್ತನೆಗಳಿದ್ದು, ಅಸಮಗ್ರವಾಗಿದೆ. ಅರ್ಚನದಲ್ಲಿ ಒಂದೆರಡು ಕೀರ್ತನೆಗಳನ್ನು ಮಾತ್ರ ದಾಸರು ಅಳವಡಿಸಿದ್ದಾರೆ. ತಿಮ್ಮಪ್ಪದಾಸರ ಕೀರ್ತನೆಗಳು ಪುಸ್ತಕದಲ್ಲಿ ಇವೆಲ್ಲ ಇವೆ. ಇನ್ನೂ ಕೆಲವು ಇದ್ದಿರುವ ಸಾಧ್ಯತೆಯಿದೆ. ಇರುವ ಕೀರ್ತನೆಗಳಲ್ಲಿ ಕಾಯ-ಜೀವಗಳು ಪರಸ್ಪರ ಸಂಭಾಷಿಸುವ ಶೈಲಿಯಲ್ಲಿ ಜೋಡಣೆಯಿದೆ. ಪ್ರತಿಯೊಂದು ಕೀರ್ತನೆಯ ಕೊನೆಯಲ್ಲಿ ಒಂದು ಕಂದಪದ್ಯದ ರಚನೆಯಿದೆ. ಅದರಲ್ಲಿ ಎರಡೂ ಕೀರ್ತನೆಗಳ ಭಾವ-ಸಂಬಧಗಳ ಜೋಡಣೆಯಿದೆ.

ಕಾಯವಿದು ನಿತ್ಯವೆಂದು ನೆಚ್ಚವೇಡ
ಮಾಯಾಕಾರನಾಗಿ ಮೆರೆವುದಿದ ತಿಳಿದುನೋಡ
ಕಾಯವಳಿವ ಮುನ್ನ ಹರಿಯ ಕೃಪೆಯ ಜೋಡ ತೊಡು
ನಾಯಬಾಯತುತ್ತ ನಂಬಿ ಬೆರೆಯಬೇಡ

ಎಂಬ ಧಾಟಿಯಲ್ಲಿ ನುಡಿಗಳೂ

ಕಂ॥ ಜೀವನು ವಿರತಿ ಸಾಧಿಪ
ಭಾವದಿ ಮನದೊಡನೆ ಕಾಯವ ನೆಚ್ಚದಿರೆನ್ನುತ
ಕೈವಲ್ಯದ ಪಥವ ಪೇಳಲು
ಜೀವನೋಳಾಡಿದುದು ಕಾಯವಚ್ಚರಿಯೆನಲು

ಎಂಬಂತೆ ಕಂದಪದ್ಯಗಳೂ ಈ ಕೃತಿಯ ಕೀರ್ತನೆಗಳಲ್ಲಿ ಸಾಗುತ್ತವೆ. ಕಾಯವನ್ನು ದೇಹವನ್ನಾಗಿ ಜೀವವನ್ನು ಆತ್ಮ-ಪ್ರಾಣವನ್ನಾಗಿಯೂ ಕಲ್ಪಿಸಿದ್ದು ದೇಹ-ಆತ್ಮಗಳ ಸಂಬಂಧವನ್ನು ಆಧ್ಯಾತ್ಮಿಕವಾಗಿ ವಿಶ್ಲೇಷಿಸಿರುವುದು ಈ ಕೀರ್ತನೆಗಳ ವೈಶಿಷ್ಟವಾಗಿದೆ. ಇದು ತಾತ್ವಿಕ ನೆಲೆಗಟ್ಟಿನ ಮೇಲೆ ನಿಲ್ಲುವಂತಿದ್ದು ಅದ್ವೈತ ತತ್ವಗಳ ಹಿನ್ನೆಲೆಯಲ್ಲಿ ಈ ಕಾಯ-ಜೀವಗಳ ಸಂಬಂಧವನ್ನು ದಾಸರು ತುಂಬ ಸೊಗಸಾಗಿ ನಿರೂಪಿಸಿದ್ದಾರೆ. ಇದರ ಉಳಿದ ಕೀರ್ತನೆಗಳೂ ಲಭ್ಯವಾದಲ್ಲಿ ಕನ್ನಡ ಸಾಹಿತ್ಯಕ್ಕೆ ಕೀರ್ತನ ಪ್ರಕಾರದಲ್ಲಿ ರಚನೆಯಾಗಿರುವ ಇನ್ನೊಂದು ಅದ್ವೈತ ಕೃತಿ ಲಭ್ಯವಾದಂತಾಗುತ್ತದೆ ಮತ್ತು ವಿಶಿಷ್ಟಕೃತಿಯೊಂದು ದಾಖಲೆಯೂ ಆಗುತ್ತದೆ. ಇದು ಏಕಕಾಲಕ್ಕೆ ತಾತ್ವಿಕವಾಗಿಯೂ ಸಾಮಾಜಿಕವಾಗಿಯೂ ಮನುಷ್ಯನ ಮನಸ್ಸು ಮತ್ತು ದೇಹಗಳ ಸಂಬಂಧವನ್ನು ಮನವರಿಕೆ ಮಾಡಿಕೊಡುವ ಮುಖ್ಯ ಕೃತಿ ಎನಿಸುತ್ತದೆ.

"ವಿದ್ಯೆಯಲಿ ನಿಬಂಧವಾಯಿತು", 'ವಿದ್ಯವಿಸ್ತರವಾದರದ್ದುವುದು ಗರ್ವದಲಿ',

ಇನ್ನೊಂದರಲ್ಲಿ ೭ ಷಟ್ಪದಿಗಳೂ ಇವೆ. ಇವುಗಳಿಗೆ ಪಲ್ಲವಿ, ರಾಗ ತಾಳಗಳ ಸೂಚನೆಯಿಲ್ಲ.

ಎಂ.ವಿ.ಸೀ. ಅವರು 'ಅರ್ಚನ'ವನ್ನು ಸಂಪಾದಿಸುವ ಸಂದರ್ಭದಲ್ಲಿ ನಡೆಸಿದ ಕ್ಷೇತ್ರಕಾರ್ಯದ ಸಂದರ್ಭದಲ್ಲಾಗಲಿ, ಪ್ರಸ್ತುತ ಸಂಪಾದಕ ಪ್ರಕಟಿಸಿದ 'ತಿಮ್ಮಪ್ಪದಾಸರ ಕೀರ್ತನೆಗಳು' ಸಂಕಲನದ ಸಂದರ್ಭದಲ್ಲಿ ನಡೆಸಿದ ಸಂದರ್ಶನಗಳಲ್ಲಾಗಲಿ ಯಾವ ವ್ಯಕ್ತಿಗಳಿಂದಲೂ ಈ ಪ್ರಕರಣಕ್ಕೆ ಪೋಷಕವಾಗುವ ಅಂಶಗಳು ವ್ಯಕ್ತವಾಗಿಲ್ಲ. ಇದು ತಿಮ್ಮಪ್ಪದಾಸರನ್ನು ಹರಿದಾಸರನ್ನಾಗಿಸಿದ; ಅವರಲ್ಲಿ ಜ್ಞಾನೋದಯವನ್ನು ರೂಪಿಸಿದ ವಿಶೇಷ ಘಟನೆಯಂತೆ ಕೀರ್ತನೆಯಲ್ಲಿ ವ್ಯಕ್ತವಾಗಿದ್ದರೂ ಇವರ ಬಂಧುವಲಯದಲ್ಲಿ ಗುರುಪರಂಪರೆಯ ಸಂಪ್ರದಾಯಗಳು ಆಚರಣೆಯಲ್ಲಿದ್ದರೂ ಇಂತಹ ವಿಶೇಷ ಘಟನೆಯು ದಾಸರ ಬದುಕಿನ ವಿಶೇಷ ಸಂಗತಿಯಾಗಿ ಉಳಿದಬಂದಿಲ್ಲದಿರುವುದು ಕುತೂಹಲಕರವಾಗಿದೆ. ಇದರಿಂದ ಈ ಘಟನೆ ತಿಮ್ಮಪ್ಪದಾಸರಿಗೆ ಸಂಬಂಧಿಸಿದ್ದೇ ಎಂಬ ಅನುಮಾನವನ್ನುಂಟು ಮಾಡುತ್ತದೆಯಾದರೂ ಎಂ.ವಿ.ಸೀ. ಅವರು ಅವರ ಜೀವನ ಚರಿತ್ರೆಯಲ್ಲಿ ಇದಕ್ಕೆ ಪೂರಕವಾದ ಸಂಗತಿಯನ್ನು ದಾಖಲಿಸಿದ್ದಾರೆ. ಅವರು ಸ್ಥಳಪರಿಶೀಲನೆ ಮಾಡಿ ಉಲ್ಲೇಖಿತ ವ್ಯಕ್ತಿಗಳ ಜಾಡುಹಿಡಿದು ಕ್ಷೇತ್ರಕಾರ್ಯ ನಡೆಸಿದಲ್ಲಿ ದಾಸರ ಜೀವನದ ಮೇಲೆ ಇನ್ನೂ ಹೆಚ್ಚಿನ ಬೆಳಕು ಚೆಲ್ಲಬಹುದಾಗಿದೆ.

(೭) ಪೂಜಾ ವಿಧಾನದ ಕೀರ್ತನೆಗಳು : ಇವು 'ಅರ್ಚನ'ದ ೧೦೮ ಕೀರ್ತನಗುಚ್ಛವಾಗಿದೆ. ಅರ್ಚನ ಹೆಸರೇ ತಿಳಿಸುವಂತೆ ಇವು ಪೂಜಾ ವಿಧಾನದ ವಿಧಿ-ವಿಧಾನಗಳನ್ನು ಅಳವಡಿಸಿಕೊಂಡು ಮಾಡುವ ಸ್ವಾಮಿಯ ಧ್ಯಾನ, ಸೇವೆ. ಕೀರ್ತನ ಸಾಹಿತ್ಯದಲ್ಲಿ ಈ ಬಗೆಯ ಪ್ರಯತ್ನಗಳಿರುವ ಪುರದರದಾಸರ, ತ್ಯಾಗರಾಜರ ಮತ್ತು ಇನ್ನೂ ಕೆಲವು ದಾಸರ ಬಿಡಿ ಕೃತಿಗಳಿದ್ದರೂ ಅವುಗಳಿಗಿಂತ ಇವು ಭಿನ್ನವಾಗಿವೆ. ಕ್ರಮಬದ್ಧವಾದ 'ಇಷ್ಟದೇವತೆಗೆ ಅರ್ಪಿಸಲೆಂದು ಭಕ್ತಿಸೂತ್ರದಿಂದ ಕೋದ ಅಷ್ಟೋತ್ತರಶತನಾಮ ವಾಕ್‌ಪುಷ್ಪಮಾಲಿಕೆ' ಎಂಬ ಹೆಗ್ಗಳಿಕೆಗೆ ಈ ಕೀರ್ತನೆಗಳು ಪಾತ್ರವಾಗಿವೆ. 'ಜಡ ಪ್ರಕೃತಿಯ ಪಾದವೆಂಟರ ಪೀಠವು' 'ಪೂಜಿಸುವೆನನವರತ ಪರಮಪುರುಷನನು', ಮಾನಸ ಪೂಜೆಯ ವಿರಚಿಸಿ' ಮುಂತಾದ ಕೀರ್ತನೆಗಳೆಲ್ಲ ವಿಶಿಷ್ಟವಾದ ಅದ್ವೈತ ತತ್ವದ ಧ್ವನಿಗಳನ್ನು ಹೇಗೋ ಹಾಗೆಯೇ ಸಾಮಾನ್ಯ ಭಕ್ತನೊಬ್ಬನ ಅಂತರಂಗ ನಿವೇದನೆಯನ್ನೂ ಸಮರ್ಥವಾಗಿ ಹೊರಗೆಡಹುತ್ತವೆ. ಇಲ್ಲಿನ ನೂರಾ ಎಂಟು ಕೀರ್ತನೆಗಳು ದೇವರಿಗರ್ಪಿಸಿದ ಬಿಡಿ ಹೂಗಳಾಗಿದ್ದರೂ ಇವುಗಳನ್ನೇ ಸುಂದರವಾಗಿ ಕಟ್ಟಿ ಅಣಿಗೊಳಿಸಿದ ಒಂದು ಮಾಲೆಯಂತೆ ಕಂಗೊಳಿಸುತ್ತವೆ. ಇದನ್ನು ಒಂದು ಗೇಯ ಪ್ರಬಂಧ ಎಂದು ಕರೆಯಲಾಗಿದೆ.

ಮೇಲೆ ಹೇಳಿದ ದೇವತಾಸ್ತುತಿಗಳು, ಗುರುಸ್ತುತಿಗಳು ಮತ್ತು ಆತ್ಮನಿವೇದ ಮತ್ತು ಕೆಲವು ಋಣಕೀರ್ತನೆಯ ಕೃತಿಗಳನ್ನು ಪೂಜಾ ವಿಧಾನದ ಕ್ರಮದಲ್ಲಿ ಜೋಡಿಸಲ್ಪಟ್ಟಿವೆ. ಗಣೇಶ-ಶಾರದಸ್ತುತಿಯಿಂದ ಆರಂಭ ಮಾಡಿ ಹರಿ-ಹರ ಇಬ್ಬರನ್ನು ಸಮಾನವಾಗಿ ಸ್ತುತಿ ಮಾಡಲಾಗಿದೆ. ಷೋಡಶೋಪಚಾರ ಕ್ರಮದಲ್ಲಿ ಆವಾಹನೆ,

ಉಲ್ಬಣಿಸಿ ಅನಿರೀಕ್ಷಿತವಾಗಿ ವಿಧಿವಶರನ್ನಾಗಿಸಿದ ಕಾರಣದಿಂದ ಅವರ ಪ್ರಿಯ ಶಿಷ್ಯರಾಗಿದ್ದ ಶ್ರೀ ಎನ್.ಎಸ್. ರಾಮಸ್ವಾಮಿಅಯ್ಯರ್ ಅವರು ಅದನ್ನು ಮುಂದುವರೆಸಿ ಟಿಪ್ಪಣಿಗಳನ್ನು ಪೂರ್ಣಗೊಳಿಸಿದ್ದಾರೆ. ಈ ಸಂಪುಟ ೧೯೬೭ರಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನದಿಂದ ಪ್ರಕಟವಾಗಿದೆ.

**೩. ನಾರಾಯಣದಾಸರ 'ಕೀರ್ತನ ಕುಸುಮಾಂಜಲಿ'**

ಪ್ರೊ॥ ಎಂ.ವಿ.ಸೀ. ಯವರು ೧೯೮೦ರಲ್ಲಿ **'ಕೀರ್ತನ ಕುಸುಮಾಂಜಲಿ'** ಎಂಬ ಹೆಸರಿನಲ್ಲಿ ತಿಮ್ಮಪದಾಸರ ಪುತ್ರ ನಾರಾಯಣದಾಸರಿಂದ ರಚಿತವಾದ ೩೭ ಕೀರ್ತನೆಗಳನ್ನು ಬಿ.ಎಂ.ಶ್ರೀ. ಪ್ರತಿಷ್ಠಾನದಿಂದ ಪ್ರಕಟಿಸಿದರು. 'ಅರ್ಚನ'ವನ್ನು ಸಂಪಾದಿಸಿರುವ ರೀತಿಯಲ್ಲೇ ರಾಗ, ತಾಳ ನಿರ್ದೇಶಗಳಿಂದ ಇಲ್ಲಿನ ಕೀರ್ತನೆಗಳನ್ನು ಸಂಪಾದಿಸಲಾಗಿದೆ. ಈ ಕೀರ್ತನೆಗಳ ಬಗೆಗೆ ಪ್ರಸಿದ್ಧ ಸಂಗೀತಜ್ಞರಾದ ಶ್ರೀ ಎಲ್. ರಾಜಾರಾವ್‌ರವರ ಮೌಲಿಕ ಅಭಿಪ್ರಾಯವನ್ನು ಪುಸ್ತಕದಲ್ಲಿ ಸೇರಿಸಲಾಗಿದೆ. ಇದೊಂದು ಸ್ತುತ್ಯವಾದ ಪ್ರಯತ್ನ, ಇಲ್ಲಿನ ಕೀರ್ತನೆಗಳನ್ನು ರಾಗ, ತಾಳಗಳೊಡನೆ ಹಾಡಿಕೊಂಡೇ ರಚಿಸಿರಬೇಕೆಂದು ಅವರು ಅಭಿಪ್ರಾಯ ಪಡುತ್ತಾರೆ. ಇಲ್ಲಿನ ಕೀರ್ತನೆಗಳಲ್ಲಿ 'ಸೀತಾರಾಮಾಗಮನ' ಎಂಬುದು ತೆಲುಗು ರಚನೆಯಾಗಿದ್ದು ನಾರಾಯಣದಾಸರಿಗೆ ತೆಲುಗಿನಲ್ಲೂ ಜ್ಞಾನವಿತ್ತು ಎಂದು ತಿಳಿಯುತ್ತದೆ ಎಂದು ಎಂ.ವಿ.ಸೀ ಅಭಿಪ್ರಾಯಪಡುತ್ತಾರೆ. ಕವಿಯ ಕಾಲ, ವಂಶ, ಇತರೆ ವಿಚಾರವಾಗಿ ಮುನ್ನುಡಿಯಲ್ಲಿ ಸೂಕ್ತವಾಗಿ ಪ್ರಸ್ತಾಪಿಸಿದ್ದಾರೆ. ಈ ಕವಿಯ ತಂದೆ ತಿಮ್ಮಪ್ಪದಾಸರ 'ಅರ್ಚನ' ಕೃತಿಯ ಪ್ರಸ್ತಾವನೆಯಲ್ಲೇ ವಿವರವಾಗಿ ಈ ಅಂಶಗಳನ್ನು ಚರ್ಚಿಸಿರುವುದನ್ನು ಕಾಣಬಹುದು. ಗ್ರಂಥದ ಕೊನೆಯಲ್ಲಿ ನಾರಾಯಣದಾಸರ ಜನ್ಮಕುಂಡಲಿ ಹಾಗೂ ಶೃಂಗೇರಿ ಗುರುಗಳ ಪರಂಪರೆಯ ಪಟ್ಟಿಯನ್ನು ನೀಡಿರುವುದು ಅತ್ಯಂತ ಉಪಯುಕ್ತವಾಗಿದೆ.

ಸೀತಾರಾಮಯ್ಯನವರು ಸಂಪಾದಿಸಿರುವ 'ಕೀರ್ತನ ಕುಸುಮಾಂಜಲಿ'ಯ ಮೂಲಕ ನಾರಾಯಣದಾಸರು ಇನ್ನೊಬ್ಬ ಅದ್ವೈತ ಕೀರ್ತನಕಾರರಾಗಿ ಕನ್ನಡ ಹರಿದಾಸ ಸಾಹಿತ್ಯದಲ್ಲಿ ತಿಮ್ಮಪ್ಪದಾಸರ ಶಿಷ್ಯ–ಪುತ್ರರಾಗಿ ದಾಖಲಾಗಿದ್ದಾರೆ. ನಾರಾಯಣದಾಸರ ಜನನ ದಿನಾಂಕ ನಿರ್ಧಾರವಾಗಿದ್ದರೂ ಮರಣ ಹೊಂದಿದ್ದು ಯಾವಾಗ ಎಂಬುದರ ಉಲ್ಲೇಖ ಲಭ್ಯವಿಲ್ಲ. ಆದರೂ ಸೀತಾರಾಮಯ್ಯನವರು ಚಾಮರಾಜಒಡೆಯರ ನಂತರ ೧೮೯೪ ರಿಂದ ೧೯೦೨ರ ವರೆಗೆ ನಾಲ್ವಡಿ ಕೃಷ್ಣರಾಜ ಒಡೆಯರ ಮಾತೃಶ್ರೀ ವಾಣಿವಿಲಾಸ ಅಂಬಾ ರಿಜೆಂಟರಾಗಿದ್ದು ನಂತರ ನಾಲ್ವಡಿಯವರು ಪಟ್ಟಕ್ಕೆ ಬಂದಿರುವ ಇತಿಹಾಸದ ಜಾಡನ್ನು ಹಿಡಿದು ಇವರ ೩೭ ಕೀರ್ತನೆಗಳಿರುವ ಹಸ್ತಪ್ರತಿಯ ಕೊನೆಯ ಮಂಗಳದಲ್ಲಿ 'ಕೃಷ್ಣನೃಪತಿ'ಯಾದ ನಾಲ್ವಡಿ ಕೃಷ್ಣರಾಜ ಒಡೆಯರನ್ನು ಉಲ್ಲೇಖಿಸಿರುವುದರ ಹಿನ್ನೆಲೆಯಲ್ಲಿ ಕ್ರಿ.ಶ. ೧೯೦೨ರ ವರೆಗೆ ಸು. ೮೦ ವರ್ಷಗಳ ತುಂಬು ಜೀವನವನ್ನು ದಾಸರು ಅನುಭವಿಸಿರಬಹುದೆಂದು ಹೇಳಿದ್ದಾರೆ. ಇವರಿಗೆ ಇಬ್ಬರು ತಮ್ಮಂದಿರೂ ಇಬ್ಬರು

ಪಂಡಿತತ್ವಭಿಮಾನ' ಮುಂತಾದ ಕೀರ್ತನೆಗಳು ತಿಮ್ಮಪ್ಪದಾಸರ ಪಾಂಡಿತ್ಯ ಜ್ಞಾನದತ್ತ ದೃಷ್ಟಿ ಹರಿಸುತ್ತವೆ. ಸಂಸ್ಕೃತ ಕೃತಿ ರಚನೆ ಸಾಮರ್ಥ್ಯವೂ ಇವರಲ್ಲಿತ್ತು. ತೆಲುಗಿನಲ್ಲಿಯೂ ಕೃತಿ ರಚನೆಯ ಸುಳಿವು ಇದ್ದು, ಇದು ನಿಜವಾದಲ್ಲಿ ತೆಲುಗು ಭಾಷಾಜ್ಞಾನವನ್ನೂ ಹೇಳುತ್ತದೆ". ಎಂಬ ಎಂ.ವಿ.ಸೀ. ಅಭಿಪ್ರಾಯವಿದ್ದರೂ ಇವರ ಕೀರ್ತನೆಗಳ ಹೆಚ್ಚಿನ ಅಧ್ಯಯದವಾಗದ ಹೊರತು ಏನನ್ನೂ ಖಚಿತವಾಗಿ ಹೇಳಲಾಗುವುದಿಲ್ಲ.

ಸೀತಾರಾಮಯ್ಯನವರು ಹೇಳುವಂತೆ ಕೆಲವು ಕೃತಿಗಳಲ್ಲಿನ ಭಾಷಾ ಪ್ರೌಢಿಮೆ, ತತ್ವವಿಚಾರಗಳ ನಿರ್ವಹಣೆ ನೋಡಿದರೆ ತಿಮ್ಮಪ್ಪದಾಸರು ಪಂಡತರೂ, ವಿದ್ವಾಂಸರೂ, ಪ್ರತಿಭಾನ್ವಿತ ಕವಿಗಳೂ, ಶ್ರೇಷ್ಠ ಹರಿದಾಸರೂ ಆಗಿದ್ದರೆಂದು ಹೇಳಬಹುದು. ಪೂಜಾವಿಧಾನದ ಕೀರ್ತನೆಗಳು, ಗುರುಸ್ತುತಿಯ ಕೀರ್ತನೆಗಳು, ಋಣ ಕೀರ್ತನೆಗಳು, ಒಬ್ಬಟ್ಟಿನ ಕೀರ್ತನೆ, ಕಾಯ-ಜೀವ ಸಂವಾದ ಕೀರ್ತನೆಗಳಂತಹ ವಿಶೇಷ ಕೀರ್ತನೆಗಳನ್ನು ರಚಿಸಿರುವ ತಿಮ್ಮಪ್ಪದಾಸರು ಕನ್ನಡ ಹರಿದಾಸ ಸಾಹಿತ್ಯದಲ್ಲಿ ವಿಶೇಷ ಸ್ಥಾನವನ್ನು ಪಡೆಯುತ್ತಾರೆ.

### ೨. ಶ್ರೀಕೃಷ್ಣ ಬಾಲಲೀಲೆ 'ಕೀರ್ತಕ ಕಾವ್ಯದ' ಸಂಪಾದನೆ :

ಪ್ರಮುಖ ಅದ್ವೈತ ಕವಿ ತಿಮ್ಮಪ್ಪದಾಸರ ಮತ್ತೊಂದು ಕೃತಿ 'ಶ್ರೀಕೃಷ್ಣ ಬಾಲಲೀಲೆ'ಯನ್ನು ಪ್ರೊ॥ ಎಂ.ವಿ.ಸೀ. ಯವರು ೧೯೮೬ರಲ್ಲಿ ಸಂಪಾದಿಸಿರುವರು. ಇದು ತಿಮ್ಮಪ್ಪದಾಸರ ಬೃಹತ್ ಕೀರ್ತನ ಕಾವ್ಯ, ಎರಡು ಸಂಪುಟಗಳಲ್ಲಿದೆ. ಇದು 'ಶ್ರೀ ಮದ್ಭಾಗವತದ ದಶಮಸ್ಕಂಧ'ದ ರೂಪಾಂತರವಾಗಿದೆ. ರಾಗ-ತಾಳದಿಂದ ಕೂಡಿದ ದೀರ್ಘವಾದ ಕೀರ್ತನೆಗಳ ಗುಚ್ಛವಾದ 'ಶ್ರೀಕೃಷ್ಣ ಬಾಲಲೀಲೆ'ಯಲ್ಲಿ ಭಾಗವತದ ಕಥೆಯನ್ನು ಕೀರ್ತನೆಗಳಲ್ಲಿಯೇ ಹೇಳಿದೆ. ಒಂದೊಂದು ಪ್ರಸಂಗಕ್ಕೆ ಒಂದೊಂದು ಕೀರ್ತನೆಯಂತೆ ಒಟ್ಟು ಕೀರ್ತನೆಗಳಿವೆ. ಭಾಷಾಪ್ರೌಢಿಮೆ, ವಿಷಯ ವೈವಿಧ್ಯ, ಕಥಾ ನಿರೂಪಣೆ, ಸಾಹಿತ್ಯದೃಷ್ಟಿ, ಭಕ್ತಿಯ ಅನನ್ಯತೆಗಳನ್ನು ಚರ್ಚಿಸಿರುವ ಮಾರಿ ಪೀಠಿಕೆಯಲ್ಲಿ 'ಶೈಲಿಯ ವೈಲಕ್ಷಣ್ಯ'ಗಳು ಎಂಬ ಭಾಗದಲ್ಲಿ ಸಂಪಾದಕರ ನಿಷ್ಪಕ್ಷಪಾತ ದೃಷ್ಟಿಯನ್ನು ಕಾಣಬಹುದು. ಉದ್ದಾಲಕನ ಪ್ರಸಂಗ, ಭ್ರಮರಗೀತೆ ಪ್ರಸಂಗಗಳಂತಹ ಕಡೆ ಉತ್ತಮ ಕಾವ್ಯಗುಣವಿರುವಂತೆ ನಾಟಕೀಯತೆಯ ಶೈಲಿಯಿದೆ. ಮೊದಲ ಸಂಪುಟದಲ್ಲಿ ಆಯಾ ಕೀರ್ತನೆಗಳ ಪಾಠಾಂತರಗಳನ್ನು ಹಾಗೂ ಟಿಪ್ಪಣಿಗಳನ್ನು ಆಯಾ ಪುಟದಲ್ಲೇ ನಮೂದಿಸಿರುವುದರಿಂದ ಓದುಗರಿಗೆ ಬಹಳ ಅನುಕೂಲವಾಗಿದೆ. ೧೯೮೬ರ ಕರ್ನಾಟಕ ಸಾಹಿತ್ಯ ಅಕಾಡಮಿಯ ಬಹುಮಾನ ದೊರಕಿರುವುದೆ ಈ ಕೃತಿಯ ಅಚ್ಚುಕಟ್ಟಾದ ಸಂಪಾದನಾ ರೀತಿಗೆ ನಿದರ್ಶನವಾಗಿದೆ.

ಎರಡನೆಯ ಸಂಪುಟದಲ್ಲಿ ಕೀರ್ತನೆಗಳ ಭಾಗವನ್ನು ಮಾತ್ರ ಎಂ.ವಿ.ಸೀ. ಅವರೇ ಪೂರ್ಣ ಸಂಪಾದಿಸಿದ್ದು ಟಿಪ್ಪಣಿಗಳನ್ನು ಬರೆಯುವ ಸುಯೋಗ ಲಭಿಸಿಲ್ಲ. ಕೀರ್ತನೆಗಳನ್ನು ಮೊದಲು ಮುದ್ರಿಸಿದ ನಂತರ ಟಿಪ್ಪಣಿಗಳನ್ನು ಬರೆಯುತ್ತ ಮುದ್ರಣಕ್ಕೆ ನೀಡುವ ಪದ್ಧತಿಯನ್ನು ಇಲ್ಲಿ ಅನುಸರಿಸಲಾಗಿದೆ. ಟಿಪ್ಪಣಿಗಳನ್ನು ಬರೆಯುವುದಕ್ಕೆ ಮೊದಲೆ ಎಂ.ವಿ.ಸೀ. ಅವರನ್ನು ಕಾಡುತ್ತಿದ್ದ ಆಸ್ತಮಾ ರೋಗ

'ನವರಾತ್ರಿಯು ಬಂತೆನ್ನುವ ಜನನಗಳು....,'
'ನಿನ್ನ ಸನ್ನಿಧಿಗೆ ನಾಬಂದು ಪ್ರಾರ್ಥಿಸೆ,'
'ಪ್ರಸನ್ನಳಾಗಿ ನೃಪನ ರನ್ನದ ಸಿಂಹಾಸನವೇರಿಸಿ'

ಮುಂತಾದ ಕೃತಿಗಳಲ್ಲಿ ಧನ್ಯತೆಯ ಭಾವ, ಭಗವಂತವಲ್ಲಿ ತನ್ಮಯತೆ ಕಾಣುವಂತೆಯೇ ಅರಸೊತ್ತಿಗೆಯನ್ನೂ ಆನಂದದಿಂದ ಸ್ತುತಿಸಿದ್ದಾರೆ. ಅರಮನೆಯಲ್ಲಿ ನಡೆಯುವ ವಿಶೇಷ ಸಂಗತಿಗಳನ್ನು (ದಸರಾ, ಪೂಜೆ ಮುಂತಾದ ಧಾರ್ಮಿಕ ಸಂಗತಿಗಳಾಗಲಿ, ಆಡಳಿತ ಬದಲಾವಣೆಯ ರಾಜಕೀಯ ಸಂಗತಿಗಳಾಗಲಿ) ನಾರಾಯಣದಾಸರು ತಾವು ಕಂಡಂತೆ, ಅನುಭವಿಸಿದಂತೆ ಸುಂದರವಾಗಿ ಚಿತ್ರಿಸಿದ್ದಾರೆ. ಈ ಮೂಲಕ ಇವರ ಕೀರ್ತನೆಗಳನ್ನು ಐತಿಹಾಸಿಕವಾಗಿಯೂ ಗುರುತಿಸುವಂತೆ ಮಾಡಿದ್ದಾರೆ. ತಂದೆಯ ಋಣಭಾರವನ್ನು ತೀರಿಸುವ ಕರ್ತವ್ಯಪ್ರಜ್ಞೆ, ಅದಕ್ಕಾಗಿ ದೈವಸಹಾಯದ ಯಾಚನೆ, ಹೇಗೋ ಒದಗಿಬಂದ ಸಹಾಯಕ್ಕಾಗಿ ದೇವರಿಗೆ ಕೃತಜ್ಞತೆಯ ಸಮರ್ಪಣೆ ಮುಂತಾದ ಜೀವನ ಸಂಗತಿಗಳನ್ನು ಇವರ ಕೀರ್ತನೆಗಳಲ್ಲಿ ವಿಶೇಷವಾಗಿ ಗುರುತಿಸಬಹುದಾಗಿದೆ ಎಂದು ಎಂವಿಸೀ ಅಭಿಪ್ರಾಯಪಡುತ್ತಾರೆ.

'ದ್ವಿಸಹಸ್ರಾಧಿಕ ತಾಪದ ಋಣವಿದು
ಸಮುಗುತಲಿದೆ ಎನ್ನ ಹೃದಯದೋಳು ಬಲಿದು'

ಎಂಬಂತಹ ಋಣ ಕೀರ್ತನೆಗಳ ಮೂಲಕ ತಂದೆಯವರ ಋಣವನ್ನು ಮಗನಾದರೂ ತೀರಿಸಿ ಮುಕ್ತರಾಗಬೇಕೆಂಬ ಭಾರತೀಯ ಜೀವನಮೌಲ್ಯದ ಪ್ರತೀಕದಂತಿರುವ ನಾರಾಯಣದಾಸರು ಕನ್ನಡ ಹರಿದಾಸ ಸಾಹಿತ್ಯದಲ್ಲಿಯೇ ವಿಶಿಷ್ಟ ಸೇರ್ಪಡೆಯಾದ 'ಋಣಕೀರ್ತನೆಕಾರ'ರಾಗಿ ತಿಮ್ಮಪ್ಪದಾಸರೊಂದಿಗೆ ದಾಖಲಾಗುತ್ತಾರೆ.

ನಾರಾಯಣದಾಸರ ಕೀರ್ತನೆಗಳಲ್ಲಿ ವಿಷಯವೈವಿಧ್ಯತೆಯಿದೆ. ಇವರ ಕೀರ್ತನೆ ಸಂಗೀತ ಪ್ರಜ್ಞೆಯ ತಳಹದಿಯಿಂದಲೇ ರಚನೆಯಾಗಿರುವಂತೆ ತೋರುತ್ತದೆಂಬ ತಮ್ಮ ಮಾತಿಗೆ ಸಂಗೀತ ವಿದ್ವಾಂಸರಾದ ಎಲ್. ರಾಜಾರಾಯರ ಮುನ್ನುಡಿಯ ಮಾತುಗಳಿಂದ ಅಧಿಕೃತತೆಯನ್ನು ಒತ್ತುತ್ತಾರೆ. "ಕೀರ್ತನೆಗಳು ಸಂಗೀತ ಶಾಸ್ತ್ರದ ರಾಗ–ತಾಳಗಳಿಗೆ ಮುದ್ದಾಗಿ ಹೊಂದಿಕೊಂಡಿದೆ. ಕೀರ್ತನೆಗಳ ಸಾಹಿತ್ಯ ಭಾಗವತ ಧರ್ಮದ ಭಕ್ತನೊಬ್ಬನ ಹೃದಯಾಂತರಾಳದಿಂದ ಉಕ್ಕಿ ಹರಿದ ಸರ್ವಸಮರ್ಪಣ ಭಾವದ ಹೊನಲಾಗಿದೆ."

ತಿಮ್ಮಪ್ಪದಾಸರ ಅದ್ವೈತ ದೃಷ್ಟಿಯ, ಭಾಗವತ ಧರ್ಮದ ಮುಂದುವರಿದ ರೂಪದಂತಿರುವ ನಾರಾಯಣದಾಸರ ಕೀರ್ತನೆಗಳು ಇನ್ನೂ ಹೆಚ್ಚಿನ ಸಂಶೋಧನೆಗೆ ಎಡೆಮಾಡಿ ಕೊಡುವಂತಿವೆ ಎಂಬುದನ್ನು ಸೀತಾರಾಮಯ್ಯನವರ ಟಿಪ್ಪಣಿಗಳಿಂದ ತಿಳಿಯಬಹುದಾಗಿದೆ.

ತಂಗಿಯರೂ ಇದ್ದರು. ಇವರು ಹರಿತಸಗೋತ್ರದ ಸ್ಮಾರ್ತ ಬ್ರಾಹ್ಮಣರ ಕಮ್ಮೆಕುಲದ ಬಬ್ಬೂರುಕುಮ್ಮೆ ಗುಂಪಿನವರು ಎಂಬುದು ತಿಮ್ಮಪ್ಪದಾಸರ ಜೀವನ ವಿವರದಲ್ಲೇ ಕಂಡುಬರುತ್ತದೆ.

ತಮ್ಮಂದಿರಾದ ವೆಂಕಟರಮಣದಾಸರು, ತಂದೆಯವರ ನಂತರ ಅವರು ಸೇವೆ ಸಲ್ಲಿಸುತ್ತಿದ್ದ ಮೈಸೂರಿನ ಅರಮನೆ ಆವರಣದ ತ್ರಿನಯನೇಶ್ವರ ದೇವಾಲಯದ ಭಾಗವಾದ ವೆಂಕಟರಮಣ ದೇವಾಲಯದ ಉಸ್ತುವಾರಿ ವಹಿಸಿಕೊಂಡರೆಂದೂ ನಾರಾಯಣದಾಸರೂ ಇವರ ಜೊತೆಯಲ್ಲೇ ಇದ್ದು ಭಗವದಾರಾಧನೆ, ಧ್ಯಾನ, ಭಜನೆ, ಕೀರ್ತನೆ ಮುಂತಾದ ದಾಸಕೈಂಕರ್ಯದಲ್ಲಿ ನಿರತರಾಗಿದ್ದರೆಂದೂ ತಂದೆಯವರು ಬಿಟ್ಟು ಹೋಗಿದ್ದ ದ್ವಿಸಹಸ್ರ ಶತಾಧಿಕ (೨೧೦೦ ರೂ.) ಋಣಭಾರವನ್ನು ತೀರಿಸುವ ಜವಾಬ್ದಾರಿ ಹೊತ್ತು ಅದಕ್ಕಾಗಿ ತುಂಬ ಕಷ್ಟಪಟ್ಟರೆಂದೂ ಇವರಿಗೆ ಸಂತಾನಪ್ರಾಪ್ತಿ ಇರಲಿಲ್ಲವೆಂದೂ ಇವರ ವಂಶಸ್ಥರೂ (ಇವರ ಹೆಂಡತಿ, ಮಕ್ಕಳು ಅವರ ಸಂತತಿಯವರು) ಯಾರು ಇಲ್ಲವೆಂದೂ ಸೀತಾರಾಮಯ್ಯನವರೇ ಸ್ಪಷ್ಟಪಡಿಸಿದ್ದಾರೆ. 'ಸೂನು ಮನೆ ಮೊದಲಾದ ಮಮಕಾರವ ಬಿಟ್ಟು' ಕೀರ್ತನೆಯ ಹಿನ್ನೆಲೆಯಲ್ಲಿ ಅವರಿಗೆ ಪುತ್ರನೊಬ್ಬನಿದ್ದು ಅಕಾಲ ಮರಣಕ್ಕೆ ತುತ್ತಾಗಿರಬಹುದೆಂದೂ ಊಹಿಸಿದ್ದಾರೆ. (ಇದೇ ಕೀರ್ತನೆಯಿಂದ ಇವರು ಮದುವೆಯಾಗಿದ್ದರ ಬಗ್ಗೆಯೇ ಅನುಮಾನವನ್ನು ವ್ಯಕ್ತಪಡಿಸಬಹುದಾಗಿದೆ. ಈ ಬಗ್ಗೆ ವಿವರವಾಗಿ ಪರಿಶೀಲಿಸುವ ಅಗತ್ಯವಿದೆ.) ಕೀರ್ತನೆಗಳ ಮೂಲಕ ಇವರು ಋಣ ಪರಿಹಾರಕ್ಕಾಗಿ ಕಷ್ಟಪಟ್ಟುದರ, ಅದನ್ನು ನಿವಾರಿಸಿದ ದೈವ ಸಹಾಯಕ್ಕಾಗಿ ಧನ್ಯರಾದುದರ ಚಿತ್ರವನ್ನೂ ಬಿಡಿಸಿಕೊಟ್ಟಿದ್ದಾರೆ. ಇದರ ಹೊರತಾಗಿ ನಾರಾಯಣದಾಸರ ಜೀವನ ವೃತ್ತಾಂತವನ್ನು ಇನ್ನೇನನ್ನೂ ಹೇಳಲು ಸಾಧ್ಯವಿಲ್ಲ. ತಿಮ್ಮಪ್ಪದಾಸರ ಬಗ್ಗೆ ಹೆಚ್ಚಿನ ಸಂಶೋಧನೆ ನಡೆದಾಗ ಇವರ ಬಗೆಗಿನ ಹೆಚ್ಚಿನ ವಿವರಗಳೂ ಗೋಚರವಾಗಬಹುದು.

೩೭ ಕೀರ್ತನೆಗಳ ಸಂಕಲನವಾದ 'ಕೀರ್ತನ ಕುಸುಮಾಂಜಲಿ' ಒಂದೇ ಇವರ ಕೃತಿ ಎಂದು ಹೇಳಲಾಗಿದೆ. ಇವರ ಕೃತಿಗಳಲ್ಲಿ ವೈರಾಗ್ಯ ಜೀವನವೇ ವಿಶೇಷವಾಗಿ ಕಂಡುಬರುತ್ತದೆ. ಲೋಕನೀತಿ-ಆತ್ಮನಿವೇದನೆ ಕೃತಿಗಳಿಗಿಂತ ದೈವಸ್ತುತಿಯ ಕೀರ್ತನೆಗಳೆ ಅಧಿಕವಾಗಿವೆ.

ದೈವಸ್ತುತಿಗಳಲ್ಲಿ ರಾಮ, ವೆಂಕಟೇಶ್ವರ ಮತ್ತು ಚಾಮುಂಡೇಶ್ವರಿಯ ಸ್ತುತಿಗಳು ಅಧಿಕವಾಗಿವೆ. ಚಾಮುಂಡೇಶ್ವರಿಯನ್ನು ಕುರಿತು ೮ ಕೃತಿಗಳಿರುವುದು ವಿಶೇಷವಾಗಿದೆ. ಗುರುಸ್ತುತಿಯಲ್ಲಿ ಶೃಂಗೇರಿ ಗುರು ಪರಂಪರೆಯನ್ನು ಸ್ತುತಿಸಿರುವುದು ವಿಶೇಷವಾಗಿದೆ. ಇವರು ಹರಿದಾಸರಾಗಲು ಮೂಲಪ್ರೇರಕರಾದ ನಿಜವಾಗಿ ಗುರುಗಳೂ ಆಗಿರುವ ತಮ್ಮ ತಂದೆ ತಿಮ್ಮಪ್ಪದಾಸರನ್ನಾಗಲಿ ಅಥವ ತಿಮ್ಮಪ್ಪದಾಸರು ಅಷ್ಟು ತನ್ಮಯತೆಯಿಂದ ಸ್ತುತಿಸುವ ಅವರ ಗುರುಪರಂಪರೆಯನ್ನಾಗಲಿ ನಾರಾಯಣದಾಸರ ಗುರುಸ್ತುತಿಗಳಲ್ಲಿ ಕಾಣಿಸದಿರುವುದು ಸೋಜಿಗವೆನಿಸಿದೆ. (ಇದ್ದಿರಬಹುದಾದ ಅಪ್ರಕಟಿತ ಕೃತಿಗಳಲ್ಲಿ ಇರಲೂಬಹುದು)

ತಿಮ್ಮಪ್ಪ ದಾಸರು, ಪಾವಂಜೆ ಲಕ್ಷ್ಮೀನಾರಾಣಪ್ಪ, ಶಿವರಾಮ ಶಾಸ್ತ್ರಿಗಳನ್ನು ಅದ್ವೈತ ಹರಿದಾಸರನ್ನಾಗಿ ಪರಿಚಯಿಸಿರುವ ಈ ಲೇಖನದಲ್ಲಿ ಅನುಭವಸಾಹಿತ್ಯವನ್ನು ಶಿಶುನಾಳಶರೀಪರ ಪರಿಚಯದೊಂದಿಗೆ ಚರ್ಚಿಸಿದ್ದಾರೆ. ಅನುಭವಸಾಹಿತ್ಯ, ಅದ್ವೈತ ಹರಿದಾಸರುಗಳನ್ನು ಒಳಗೊಂಡಂತೆ ಕನ್ನಡ ಹರಿದಾಸ ಸಾಹಿತ್ಯ ಪುನರಧ್ಯಯನವಾಗಬೇಕೆಂಬುದನ್ನು ಮೊದಲ ಬಾರಿಗೆ ದಾಖಲಿಸುವ ಮೂಲಕ ಅದ್ವೈತ ಹರಿದಾಸ ಸಾಹಿತ್ಯದ ಚರ್ಚೆಗೆ ಓಂಕಾರ ಹಾಕಿರುವ ಪ್ರಮುಖ ಲೇಖನ ಇದಾಗಿದೆ. ಈ ಚಿಂತನೆಯ ನಂತರವೇ ಕನ್ನಡದಲ್ಲಿ ಕವಿ ಪರಮದೇವ, ಬೇಟೆರಾಯದೀಕ್ಷಿತ, ಕೆಳದಿ ವೆಂಕಣ್ಣ ಮುಂತಾದ ಅನೇಕ ಅದ್ವೈತ ಹರಿದಾಸರ ಕೀರ್ತನೆಗಳು ಪ್ರಕಟವಾಗಿ ಅದ್ವೈತ ಹರಿದಾಸರ ಚರ್ಚೆಯೂ ಸೇರಿಕೊಂಡಿತು. ಅಷ್ಟೇ ಅಲ್ಲ. ಇದರ ಪ್ರೇರಣೆಯಿಂದಲೇ ಪ್ರಸ್ತುತ ಸಂಪಟದ ಸಂಪಾದಕನಿಂದ ವಿಶಿಷ್ಟಾದ್ವೈತ ಹರಿದಾಸರೂ ಬೆಳಕು ಕಾಣುವಂತಾಗಿ ಕನ್ನಡ ಹರಿದಾಸ ಸಾಹಿತ್ಯ 'ತ್ರಿವೇಣಿ ಸಂಗಮ'ವೆಂದು ವಿದ್ವಾಂಸರಿಂದ ಗುರುತಿಸುವಂತಾಯಿತು. ಆದರೂ ಈ ಚರ್ಚೆ ಇನ್ನೂ ವ್ಯಾಪಕವಾಗಿ ಕನ್ನಡ ಸಾಹಿತ್ಯದಲ್ಲಿ ಆಗಬೇಕಾಗಿದೆ.

'ಹರಿದಾಸ ಪರಂಪರೆ' ಲೇಖನವೂ ಇದೇ ಅಂಶಗಳನ್ನು ಸಂಕ್ಷಿಪ್ತವಾಗಿ ನಿರೂಪಿಸುವುದಾಗಿದ್ದು ಈ ಎರಡು ಲೇಖನಗಳು ಮತ್ತು ತಿಮ್ಮಪ್ಪದಾಸರು ನಾರಾಯಣದಾಸರ ಕೀರ್ತನೆಗಳ ಪ್ರಕಟಣೆಯಿಂದ ಸೀತಾರಾಮಯ್ಯನವರು ಕನ್ನಡಕ್ಕೆ ಅದ್ವೈತ ಕೀರ್ತನೆಗಳ ಧಾರೆಯನ್ನು ಪರಿಚಯಿಸಿದ ಮೊದಲಿಗರಾಗಿ ದಾಖಲಾಗುತ್ತಾರೆ.

## ಹಸ್ತಪ್ರತಿಶಾಸ್ತ್ರ

ಹಸ್ತಪ್ರತಿಶಾಸ್ತ್ರ ಎಂಬುದು ಗ್ರಂಥಸಂಪಾದನಾ ಕ್ಷೇತ್ರದಲ್ಲಿ ನೂತನ ಅಧ್ಯಯನ ಶಿಸ್ತು. ಇದು ರೂಪಗೊಂಡದ್ದೇ ಎಂ.ವಿ. ಸೀತಾರಾಮಯ್ಯನವರಿಂದ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಮೂಲಕ. ಸೀತಾರಾಮಯ್ಯನವರು ಬಿ.ಎಂ.ಶ್ರೀ. ಪ್ರತಿಷ್ಠಾನವನ್ನು ಸ್ಥಾಪಿಸಿದ್ದೇ ಪ್ರಾಚೀನ ಹಸ್ತಪ್ರತಿಗಳ ಸಂಗ್ರಹ-ಸಂರಕ್ಷಣೆ-ಸಂಶೋಧನೆಗಾಗಿ. ಇವರ ಮನೆಯಲ್ಲೇ ಇದ್ದ ಇವರ ಪೂರ್ವಿಕರಿಂದ ಬಂದಿದ್ದ ಹಸ್ತಪ್ರತಿಗಳನ್ನು ಶೋಧಿಸಿ 'ಅರ್ಚನ' ಕೃತಿಯನ್ನು ಸಂಪಾದಿಸಿ ಪ್ರಕಟಿಸುವ ಮೂಲಕ ಕನ್ನಡ ಹರಿದಾಸ ಸಾಹಿತ್ಯಕ್ಕೆ ಅದ್ವೈತಧಾರೆಯನ್ನು ದಾಖಲಿಸಿದ ಮೇಲೆ ಪ್ರಾಚೀನ ಹಸ್ತಪ್ರತಿಗಳ ಸಂರಕ್ಷಣೆಯತ್ತ ಹೆಚ್ಚು ಗಮನ ಹರಿಸಿದುದರ ಫಲವಾಗಿ ಬಿ.ಎಂ.ಶ್ರೀ.ಯವರ "ದೇಶದಲ್ಲಿ ಹುಳು ತಿಂದುಹೋಗದೆ ಇರುವ ಗ್ರಂಥಗಳನ್ನೆಲ್ಲ ಶೇಖರಿಸಿ ಒಂದನ್ನು ಬಿಡದಂತೆ ಅಚ್ಚು ಹಾಕುವುದು. ಅಚ್ಚಾದ ಮೇಲೆ ಎಲ್ಲವನ್ನು ಕೊನೆಮುಟ್ಟಿ ಶೋಧಿಸಿ ಹೊಸದಾಗಿ ಲಕ್ಷಣಗ್ರಂಥಗಳನ್ನು ಕಾಲಕ್ಕೆ ತಕ್ಕಂತೆ ರಚಿಸುವುದು" ಎಂಬ ಮಾತನ್ನು ಧ್ಯೇಯವಾಕ್ಯವಾಗಿಟ್ಟುಕೊಂಡು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವನ್ನು ಸ್ಥಾಪಿಸಿದರು. ಅದುವರೆಗೆ ಶ್ರೀಯವರು ಹಾಕಿಕೊಟ್ಟಿದ್ದ ಹಲವು ಅಧ್ಯಯನ ಕ್ಷೇತ್ರಗಳಲ್ಲಿ ಅಧ್ಯಯನ ಮಾಡಿದ್ದ ಶಿಷ್ಯರ ಸಾಲಿಗೆ ಈ ಮೂಲಕ ಎಂ. ವಿ. ಸೀ. ಅವರೂ ಸೇರಿದರು.

### ೧. ಹಸ್ತಪ್ರತಿಶಾಸ್ತ್ರದ ನಿರ್ಮಾತೃ

## ಇ. ಬಿಡಿ ಲೇಖನಗಳು

ಈ ಸಂಪುಟದ ಗ್ರಂಥ ಸಂಪಾದನೆಯ ವಿಭಾಗದಲ್ಲಿ ನಾಲ್ಕು ಬಿಡಿ ಲೇಖನಗಳನ್ನು ಅಳವಡಿಸಲಾಗಿದೆ. ಕನ್ನಡ ಗ್ರಂಥ ಸಂಪಾದನೆಗೆ ತೀ.ನಂ.ಶ್ರೀಯವರ ಕೊಡುಗೆ' ಮತ್ತು 'ಸರ್ವಜ್ಞನ ತ್ರಿಪದಿಗಳು; ಪುನಃ ಪರಿಷ್ಕರಣದ ಅಗತ್ಯ' ಲೇಖನಗಳು ಗ್ರಂಥ ಸಂಪಾದನೆಗೆ ಸಂಬಂಧಿಸಿದ್ದರೆ 'ಉತ್ತರೋತ್ತರ ಕಾಲೀನ ಹರಿದಾಸರು ಮತ್ತು ಅನುಭವ ಕವಿಗಳು' ಹಾಗೂ 'ಹರಿದಾಸ ಪರಂಪರೆ' ಹರಿದಾಸ ಸಾಹಿತ್ಯಕ್ಕೆ ಸಂಬಂಧಪಟ್ಟಿವೆ. ತಮ್ಮ ಗುರುಗಳೂ ಆಗಿದ್ದ ಆಚಾರ್ಯ ತೀ.ನಂ.ಶ್ರೀ. ಅವರನ್ನು ಕುರಿತ ಲೇಖನದಲ್ಲಿ ಅವರ ಶ್ರೇಷ್ಠ ಸಂಪಾದನಾ ಸ್ವರೂಪವನ್ನು ವಿಶದವಾಗಿ ವಿವೇಚಿಸಿದ್ದಾರೆ. ಮುಖ್ಯವಾಗಿ ಗದಾಯುದ್ಧ ಸಂಗ್ರಹದ ಸಂಪಾದನೆಯನ್ನು ತೋರಿಸಿರುವ ಪಾಠ ನಿಷ್ಕರ್ಶನ ಮತ್ತು ನಂಬಿಯಣ್ಣನ ರಗಳೆಯಲ್ಲಿ ಸೂಚಿಸಿರುವ ಪಾಠಾಂತರಗಳು ಕನ್ನಡ ಗ್ರಂಥ ಸಂಪಾದನೆಗೆ ಮಾದರಿಗಳಾಗಿವೆ ಎನ್ನುತ್ತಲೇ ಆವರು ಹೊಸಗನ್ನಡದ ಪ್ರಮುಖ ಶಾಸ್ತ್ರಕಾರರು ಎಂಬುದನ್ನು ಸಮರ್ಥವಾಗಿ ನಿರೂಪಿಸಿದ್ದಾರೆ.

ತಾವು ಸರ್ವಜ್ಞನ ವಚನಗಳನ್ನು ಸಂಪಾದಿಸುವುದಕ್ಕೆ ಮೊದಲೇ ೧೯೭೫ರಲ್ಲಿ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಸರ್ವಜ್ಞನ ವಚನಗಳ ಪರಿಷ್ಕರಣದ ಅಗತ್ಯವಿದೆಯೆಂದ ನಿರೂಪಿಸಿದ್ದ ಲೇಖನವನ್ನು ಪ್ರಕಟಿಸಿದ್ದು ವಾಸ್ತವವಾಗಿ ಅದು ಪರಿಷತ್ತಿನಲ್ಲೇ ಮಾಡಿದ್ದ ವಿಶೇಷ ಉಪನ್ಯಾಸವಾಗಿದೆ. ಚನ್ನಪ್ಪ ಉತ್ತಂಗಿ ಅವರ ಕೃತಿಯ ಹಿನ್ನೆಲೆಯಲ್ಲಿ ಎಲ್. ಬಸವರಾಜು ಅವರ 'ಪರಮಾರ್ಥ' ಕೃತಿಯನ್ನು ಗಮನದಲ್ಲಿಟ್ಟುಕೊಂಡು ಎಂ. ವಿ. ಸೀ ಅವರು ಬೆಳೆಸಿರುವ ಚರ್ಚೆ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಅವರೇ ಸಂಪಾದಿಸುವವರೆಗೂ ಹಾಗೇ ಉಳಿದು ಬಂದಿರುವುದನ್ನು ಗಮನಿಸಿದರೆ ಪ್ರಾಚೀನ ಸಾಹಿತ್ಯ ಅಧ್ಯಯನ ಹೇಗೆ ಹಿಂದೆ ಬಿದ್ದಿದೆ ಎಂಬುದನ್ನು ತಿಳಿಸುತ್ತದೆ. ವಾಸ್ತವವಾಗಿ ಎಂವಿಸೀ ಅವರ ಸಂಪಾದಿತ ಕೃತಿ ಕೇವಲ ಸಂಗ್ರಹ ಮಾತ್ರ. ಇನ್ನೂ ಸರ್ವಜ್ಞ ವಚನಗಳನ್ನು ಇಡಿಯಾಗಿ ಪೂರ್ಣ ಪ್ರಮಾಣದಲ್ಲಿ ಪುನಾ ಪರಿಷ್ಕರಿಸಿ ಸಂಪಾದಿಸುವ ಕಾರ್ಯ ಉಳಿದೇ ಇದೆ ಎಂಬುದನ್ನೂ ಗಮನಿಸಲೇಬೇಕಾಗಿದೆ: ಇದೀಗ ಶಾಸ್ತ್ರೀಯ ಭಾಷೆಯ ಸ್ಥಾನ ಲಭಿಸಿರುವ ಸನ್ನಿವೇಶದ್ಲಲಾದರೂ ಪ್ರಾಚೀನ ಸಾಹಿತ್ಯಾಧ್ಯಯನಕ್ಕೆ ಕಾಲ ಕೂಡಿ ಬರುತ್ತದೆಯೋ ಕಾದು ನೋಡಬೇಕಾಗಿದೆ.

'ಉತ್ತರೋತ್ತರ ಕಾಲೀನ ಹರಿದಾಸರು ಮತ್ತು ಅನುಭವ ಕವಿಗಳು' ಬೆಂಗಳೂರು ವಿಶ್ವವಿದ್ಯಾನಿಲಯದ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಗೆ ಬರೆದ ಲೇಖನವಾದಾರೂ ಮುಂದೆ ಅದನ್ನೇ ತಮ್ಮ ರಾಘವ ಪ್ರಕಾಶನದ ಮೂಲಕ ಪ್ರತ್ಯೇಕ ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ ಮೊದಲ ಬಾರಿಗೆ ಮಧ್ವೇತರ ಹರಿದಾಸ ಸಾಹಿತ್ಯವನ್ನು ಕುರಿತು ಚರ್ಚಿಸಿದ್ದಾರೆ. ಹರಿದಾಸ ಸಾಹಿತ್ಯದ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯದಲ್ಲಿ ನಡೆದಿರುವ ಅದ್ವೈತ ಚಿಂತನೆಯ ಮೂಲಕ ಹರಿದಾಸ ಸಾಹಿತ್ಯದಲ್ಲಿ ಅದ್ವೈತ ಗುರುತಿಸಿಕೊಂಡ ಪರಿಯನ್ನು ವಿವರವಾಗಿ ಚರ್ಚಿಸಿದ್ದು

ಕುರಿತಂತೆ ಪ್ರಮುಖವಾಗಿ ಎರಡು ಕೃತಿಗಳು ಈ ಅವಧಿಯಲ್ಲಿ ಪ್ರಕಟವಾದವು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರಕಟಣೆಗಳಾದ 'ಮಣಿಹ' ಮತ್ತು 'ಹಸ್ತಪ್ರತಿಶಾಸ್ತ್ರ' ಎಂಬ ಈ ಎರಡು ಕೃತಿಗಳಲ್ಲಿ ಹಸ್ತಪ್ರತಿಶಾಸ್ತ್ರದ ಎಲ್ಲ ಮುಖಗಳ ಪರಿಚಯ-ವಿಶ್ಲೇಷಣೆಯನ್ನೊಳಗೊಂಡ ವಿವಿಧ ವಿದ್ವಾಂಸರ ಲೇಖನಗಳಿವೆ. ಇಂದು ಈ ಕ್ಷೇತ್ರವನ್ನು ಕುರಿತಂತೆ ಪಿಎಚ್‌ಡಿ., ಎಂ.ಫಿಲ್ ಅಧ್ಯಯನ, ತರಬೇತಿ ತರಗತಿಗಳು, ಗ್ರಂಥ ಪ್ರಕಟಣೆ ಮುಂತಾದ ಅಧ್ಯಯನ ಕಾರ್ಯಗಳು ನಡೆಯುತ್ತಿವೆ. ಈ ಅಧ್ಯಯನ ಶಾಖೆಯ ಶಿಸ್ತುಬದ್ಧ ಅಧ್ಯಯನಕ್ಕೆ ಬಿ.ಎಂ.ಶ್ರೀ ಪ್ರತಿಷ್ಠಾನ ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು ಸಲ್ಲಿಸಿದೆ. ಹಸ್ತಪ್ರತಿಶಾಸ್ತ್ರದಲ್ಲಿ ೪ ತಿಂಗಳ ಅಲ್ಪಾವಧಿ ತರಬೇತಿ ಶಾಲೆಯನ್ನು ೧೯೯೦ ರಿಂದ ನಡೆಸುತ್ತಿದ್ದು ಅನೇಕ ಆಸಕ್ತರನ್ನು ಈ ಕ್ಷೇತ್ರದತ್ತ ಬರಮಾಡುತ್ತಿದೆ. 'ಹಸ್ತಪ್ರತಿಶಾಸ್ತ್ರ ಪರಿಚಯ'- (ಬಿ.ಎಸ್. ಸಣ್ಣಯ್ಯನವರಿಂದ ಬರೆಸಿ) ಎಂಬ ಪುಸ್ತಕವನ್ನು ಪ್ರಕಟಿಸಿದೆ. ಇದೇ ವಿದ್ವಾಂಸರ 'ಗ್ರಂಥ ಸಂರಕ್ಷಣೆ' ಮತ್ತು ಎಚ್. ದೇವಿರಪ್ಪನವರ 'ಹಸ್ತಪ್ರತಿಗಳ ಇತಿಹಾಸ' ಕೃತಿಗಳು ಹಸ್ತಪ್ರತಿಶಾಸ್ತ್ರಕ್ಕೆ ಪೂರಕವಾಗಿವೆ. ಡಾ|| ಎಂ.ಎಂ. ಕಲಬುರ್ಗಿ ಅವರು 'ಕನ್ನಡ ಹಸ್ತಪ್ರತಿಶಾಸ್ತ್ರ' ಎಂಬ ಪುಸ್ತಕವನ್ನು ಪ್ರಕಟಿಸುವ ಮೂಲಕ ಈ ಶಿಸ್ತಿಗೆ ಒಂದು ಅಧಿಕೃತತೆಯನ್ನು ಕೊಟ್ಟರೆ, ಹಂಪಿ ಕನ್ನಡ ವಿಶ್ವವಿದ್ಯಾಲಯ 'ಹಸ್ತಪ್ರತಿಶಾಸ್ತ್ರ ವಿಭಾಗ'ವನ್ನೇ ತೆರೆದು ವ್ಯಾಪಕ ಅಧ್ಯಯನಕ್ಕೆ ದಾರಿ ಮಾಡಿಕೊಟ್ಟಿದೆ. ಈ ನಿಟ್ಟಿನಲ್ಲಿ ಪ್ರಸ್ತುತ ಲೇಖಕ ನಾ. ಗೀತಾಚಾರ್ಯರ 'ಹಸ್ತಪ್ರತಿಶಾಸ್ತ್ರ ವಿವೇಚನೆ'(೨೦೦೦) ಈ ಶಾಸ್ತ್ರಕ್ಕೊಂದು ನಿರ್ದಿಷ್ಟ ಸ್ವರೂಪವನ್ನು ಕೊಡುವ ಗ್ರಂಥವಾಗಿದೆ.

ಈ ಆವಧಿಯಲ್ಲಿ ಹಸ್ತಪ್ರತಿಗಳ ಸಂಗ್ರಹಣ ಕಾರ್ಯವೂ ಭರದಿಂದ ನಡೆಯಿತು. ಗ್ರಂಥಸಂಪಾದನಾ ಶಾಸ್ತ್ರದ ತಿಳುವಳಿಕೆ ಹೆಚ್ಚು ವಿಸ್ತಾರವಾಗುತ್ತಿದ್ದಂತಯೇ ಹಸ್ತಪ್ರತಿಗಳೂ ಹೆಚ್ಚು ಹೆಚ್ಚು ಸಂಗ್ರಹವಾಗತೊಡಗಿದವು. ವಿಶ್ವವಿದ್ಯಾನಿಲಯಗಳು, ಸಂಘಸಂಸ್ಥೆಗಳು ಮತ್ತು ಆಸಕ್ತ ವ್ಯಕ್ತಿಗಳು ತಮ್ಮ ತಮ್ಮ ಮಿತಿಯಲ್ಲಿ ಸಂಗ್ರಹಕಾರ್ಯದಲ್ಲಿ ತೊಡಗಿ ಹೊಸ ಹೊಸ ಹಸ್ತಪ್ರತಿಗಳನ್ನು ಕಲೆ ಹಾಕಿದರು. ವಿಶ್ವವಿದ್ಯಾನಿಲಯಗಳ ಕನ್ನಡ ವಿಭಾಗಗಳು ಪ್ರತ್ಯೇಕವಾದ ಸಂಪಾದನಾ ವಿಭಾಗಗಳನ್ನು ತೆರೆದವು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನಾ ವಿಭಾಗಕ್ಕೆ ಪ್ರಾಚ್ಯ ವಸ್ತುಸಂಗ್ರಹಾಲಯದ ಕನ್ನಡ ಹಸ್ತಪ್ರತಿಗಳು ಸೇರಿದವು. ಮತ್ತು ಮದರಾಸು ಓರಿಯೆಂಟಲ್ ಲೈಬ್ರರಿಯ ಕೆಲವು ಹಸ್ತಪ್ರತಿಗಳೂ ಸೇರ್ಪಡೆಯಾದವು; ಇನ್ನೂ ಕೆಲವು ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ವಿಭಾಗಕ್ಕೆ ಸೇರಿವೆ. ಈ ವಿಭಾಗಕ್ಕೆ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ಸಂಗ್ರಹವೂ ಸೇರಿದೆ. ಬೆಂಗಳೂರು, ಮಂಗಳೂರು, ಶಿವಮೊಗ್ಗೆ, ಗುಲಬರ್ಗ ವಿಶ್ವವಿದ್ಯಾನಿಲಯಗಳಲ್ಲಿರುವ ಕನ್ನಡ ವಿಭಾಗಗಳೂ ಹಸ್ತಪ್ರತಿ ಸಂಗ್ರಹಾಲಯಗಳನ್ನು ಹೊಂದಿವೆ. ಜೊತೆಗೆ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು, ಬಿ.ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ, ಧರ್ಮಸ್ಥಳದ ಶ್ರೀ ಮಂಜುನಾಥೇಶ್ವರ ಸಂಸ್ಕೃತಿ ಸಂಶೋಧನಾ ಸಂಸ್ಥೆ, ಶ್ರವಣಬೆಳಗೊಳದ ಪ್ರಕೃತ ಅಧ್ಯಯನ ಸಂಸ್ಥೆ, ಕೆಳದಿ ವಸ್ತು ಸಂಗ್ರಹಾಲಯ

ಆ ವೇಳೆಗೆ ಗ್ರಂಥಸಂಪಾದನಾ ಶಾಸ್ತ್ರದ ಮೇಲಿನ ಆಸಕ್ತಿ ಕಡಿಮೆಯಾಗಿ ತಮ್ಮ ಮನೆಯಲ್ಲೇ ಇದ್ದ ಅಮೂಲ್ಯ ಹಸ್ತಪ್ರತಿಗಳು ಅವಜ್ಞೆಗೆ ನಿರ್ಲಕ್ಷ್ಯಕ್ಕೆ ಒಳಗಾಗಿ ನಾಶವಾಗುತ್ತಿದ್ದಂತೆ ನಾಡಿನ ಮೂಲೆಮೂಲೆಗಳಲ್ಲಿರುವ ಇನ್ನೂ ಎಷ್ಟು ಹಸ್ತಪ್ರತಿಗಳು ಹೀಗೇ ನಾಶವಾಗುತ್ತಿವೆಯೋ ಎಂಬ ಆತಂಕದಿಂದ ಆದಷ್ಟೂ ಶೀಘ್ರವಾಗಿ ಅವನ್ನೆಲ್ಲ ಸಂಗ್ರಹಿಸಿ ಸಂರಕ್ಷಿಸಿ ಅವುಗಳಲ್ಲಿ ಅಡಗಿರುವ ಅಮೂಲ್ಯ ಮಾಹಿತಿಗಳನ್ನು ಹೊರಗಡಹುವ ಉದ್ದೇಶದಿಂದ ಆರಂಭವಾದ ಈ ಸಂಸ್ಥೆಯ ತರುಣದಲ್ಲೇ ಬಂದ ವಚನ ಪಿತಾಮಹ ಫ.ಗು. ಹಳಕಟ್ಟಿ ಜನ್ಮಶತಮಾನೋತ್ಸವವನ್ನು 'ಹಸ್ತಪ್ರತಿವರ್ಷ' ಎಂದು ಘೋಷಿಸಿ ನಾಡಿನಾದ್ಯಂತ ಹಸ್ತಪ್ರತಿ ಜಾಗೃತಿ ಕಾರ್ಯಕ್ರಮಗಳನ್ನು ನಡೆಸಿದರು. ಹಸ್ತಪ್ರತಿ ಸಂಗ್ರಹ ಸಂರಕ್ಷಣೆ ಸಂಪ್ರತಿ ದಾಖಲೆಯನ್ನೇ ಕೇಂದ್ರವಾಗಿರುವ 'ಹಸ್ತಪ್ರತಿಶಾಸ್ತ್ರ' ಎಂಬ ಅಧ್ಯಯನಶಾಸ್ತ್ರದ ಪರಿಕಲ್ಪನೆಯನ್ನು ಆರಂಭಿಸಿ ವಿದ್ವಾಂಸರ ಗಮನ ಸೆಳೆದರು. ಬೆಂಗಳೂರಿನಲ್ಲಿ ಮೂರು ದಿನಗಳ 'ಹಸ್ತಪ್ರತಿಶಾಸ್ತ್ರ' ಎಂಬ ರಾಜ್ಯಮಟ್ಟದ ವಿಚಾರಗೋಷ್ಠಿಯನ್ನು ಸಂಘಟಿಸಿ ನಾಡಿನ ಎಲ್ಲ ಪ್ರಮುಖ ಗ್ರಂಥಸಂಪಾದನಾ ವಿದ್ವಾಂಸರನ್ನು ಒಂದೆಡೆ ಸೇರಿಸಿ ಈ ಶಾಸ್ತ್ರದ ಬಗೆಗೆ ವಿಸ್ತೃತವಾದ ಚರ್ಚೆಯನ್ನು ನಡೆಸಿದರು. ವಿಶ್ವವಿದ್ಯಾನಿಲಯಗಳಲ್ಲಿ ಫ.ಗು. ಹಳಕಟ್ಟಿ ಶತಮಾನೋತ್ಸವ ಉಪನ್ಯಾಸಗಳನ್ನೇರ್ಪಡಿಸಿ ಹಸ್ತಪ್ರತಿಪ್ರದರ್ಶನ ಮತ್ತು ಜಾಗೃತಿ ಕಾರ್ಯಕ್ರಮಗಳ ಮೂಲಕ ಅರಿವು ಮೂಡಿಸಿದುದರ ಪರಿಣಾಮವಾಗಿ 'ಹಸ್ತಪ್ರತಿಶಾಸ್ತ್ರ'ದ ಅಧ್ಯಯನ ಆರಂಭವಾಯಿತು. ವಿ.ವಿ.ಗಳು ತಮ್ಮ ಪಠ್ಯಗಳಲ್ಲಿ ಈ ವಿಷಯವನ್ನು ಬೋಧನೆಯ ವಸ್ತುವನ್ನಾಗಿ ಅಳವಡಿಸಿದವು. ಅನೇಕ ಮಠಗಳು ತಮ್ಮಲ್ಲಿದ್ದ ಹಸ್ತಪ್ರತಿಗಳ ಧೂಳು ಕೊಡವಿ ಅವುಗಳ ಸಂರಕ್ಷಣೆ ಪ್ರಕಟಣೆ–ದಾಖಲೀಕರಣದತ್ತ ವಾಲಿದರು. ಹಲವು ಹಸ್ತಪ್ರತಿ ಸಂರಕ್ಷಣ ಸಂಸ್ಥೆಗಳು ಆರಂಭವಾದವು.

ವಿದ್ವಾಂಸರು ಸಂಘ ಸಂಸ್ಥೆಗಳು ಈ ಕ್ಷೇತ್ರದಲ್ಲಿ ವಿಶೇಷ ಆಸಕ್ತಿ ತೋರಿದುದರ ಪರಿಣಾಮವಾಗಿ ಗ್ರಂಥ ಸಂಪಾದನಾ ಶಾಖೆ ಇನ್ನೂ ವಿಸ್ತಾರಗೊಂಡು ವಿಶಾಲವಾದ ಅಧ್ಯಯನ ವ್ಯಾಪ್ತಿಯನ್ನು ಒಳಗೊಂಡು ೮೦ ರ ದಶಕದಲ್ಲಿ ಇನ್ನೊಂದು ಶಾಖೆಯ ಹುಟ್ಟಿಗೆ ಕಾರಣವಾಗಿದೆ. ಆವರೆಗೆ ಹಸ್ತಪ್ರತಿಗಳನ್ನು ಬಳಸಿಕೊಂಡು ಗ್ರಂಥಗಳ ಸಂಪಾದನೆಗೆ ಮಹತ್ವ ನೀಡಲಾಗುತ್ತಿತ್ತೇ ವಿನಾ ಅವುಗಳ ಸಂಗ್ರಹ – ಸಂರಂಕ್ಷಣೆಗೆ ಅಷ್ಟು ಮಹತ್ವ ಇರಲಿಲ್ಲ. ಈ ಬಗ್ಗೆ ವಿಶೇಷ ಗಮನ ಹರಿಸಿದ ವಿದ್ವಾಂಸವರ್ಗ ಮತ್ತು ಸಂಘ ಸಂಸ್ಥೆಗಳ ಕಾರ್ಯಶೀಲತೆಯ ಫಲವಾಗಿ ಗ್ರಂಥ ಸಂಪಾದನೆಗೆ ಪೂರ್ವಭಾವಿಯಾದ ಹಸ್ತಪ್ರತಿಗಳ ಸಂಗ್ರಹಣ–ಸಂರಕ್ಷಣ–ಸಂಪ್ರತಿ ವಿಧಾನವನ್ನೇ ಮುಖ್ಯವಾಗಿ ಒಳಗೊಂಡ 'ಹಸ್ತಪ್ರತಿಶಾಸ್ತ್ರ'ದ ನಿರ್ಮಾಣವಾಯಿತು. ೧೯೮೧ರಲ್ಲಿ ನಡೆದ 'ವಚನ ಸಾಹಿತ್ಯ ಪಿತಾಮಹ' ಫ.ಗು. ಹಳಕಟ್ಟಿ ಅವರ ಶತಮಾನೋತ್ಸವ ಸಂದರ್ಭದಲ್ಲಿ ಈ ಬಗ್ಗೆ ವ್ಯಾಪಕ ಚರ್ಚೆ ನಡೆದು ಈ ಶಾಖೆಯ ಉದಯಕ್ಕೆ ನಾಂದಿ ಹಾಕಲಾಯಿತು. ಇಂಗ್ಲಿಷ್ ನಿಘಂಟಿಗೆ 'ಹಸ್ತಪ್ರತಿಶಾಸ್ತ್ರ' ಎಂಬ ನೂತನ ಪದದ ಸೃಷ್ಟಿಯಲ್ಲಿಯೂ ಕರ್ನಾಟಕದ ಕೊಡುಗೆಯಾಯಿತು. ಈ ಶಾಸ್ತ್ರವನ್ನು

ಅಧ್ಯಯನ ಇದಾಗಿದೆ.

ಹಸ್ತಪ್ರತಿಗಳ ಅಧ್ಯಯನ ಎಂಬುದು 'ಹಸ್ತಪ್ರತಿ ಶಾಸ್ತ್ರದ' ಮುಂದುವರೆದ ಭಾಗ. ಹಸ್ತಪ್ರತಿಶಾಸ್ತ್ರದಲ್ಲಿ ಹಸ್ತಪ್ರತಿಗಳ – ಸಂಗ್ರಹ– ಸಂರಕ್ಷಣೆ – ಸಂಪ್ರತಿ ಮತ್ತು ದಾಖಲೀಕರಣ ಹಾಗೂ ಹಸ್ತಪ್ರತಿಗಳ ಮಹತ್ವಗಳು ಮಾತ್ರ ಮನವರಿಕೆಯಾಗಲಿದ್ದು ಹಸ್ತಪ್ರತಿ ಅಧ್ಯಯನವು ಇದರ ತಿಳುವಳಿಕೆಯ ಆಧಾರದ ಮೇಲೆ ನಡೆಯುವ ಹಸ್ತಪ್ರತಿಗಳ ವಿವಿಧ ದೃಷ್ಟಿಕೋನಗಳ ಅಧ್ಯಯನ ವಸ್ತುವನ್ನು ಒಳಗೊಂಡಿರುತ್ತದೆ. ೮೦ರ ದಶಕದಿಂದ ಹಸ್ತಪ್ರತಿಶಾಸ್ತ್ರದಲ್ಲಿ ಪರಿಣಿತರಾಗಿರುವ ಯುವ ವಿದ್ವಾಂಸರ ಪಡೆಯೊಂದು ಈ ಕ್ಷೇತ್ರದಲ್ಲಿ ತಯಾರಾಗಿದ್ದು ಅವರೆಲ್ಲರ ದೃಷ್ಟಿ ಈಗ ಹಸ್ತಪ್ರತಿಗಳ ಅಧ್ಯಯನದತ್ತ ಮುಖ ಮಾಡಿದೆ. ಅವರುಗಳು ಪ್ರಕಟಿಸುತ್ತಿರುವ ಗ್ರಂಥಗಳು ಹಸ್ತಪ್ರತಿಗಳ ಅಧ್ಯಯನದ ವಸ್ತುವನ್ನೇ ಒಳಗೊಂಡಿವೆ.

ಈ ಹಸ್ತಪ್ರತಿ ಅಧ್ಯಯನವನ್ನು ನೂತನ ಶಾಸ್ತ್ರದ ಶಿಸ್ತಿಗೆ ಅಳವಡಿಸಿ 'ಹಸ್ತ ಪ್ರತಿ ಅಧ್ಯಯನ ಶಾಸ್ತ್ರ' ಎಂದು ಘೋಷಿಸಿದ್ದೂ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವೇ ಆಗಿದೆ. ಅದೂ 'ಹಸ್ತಪ್ರತಿಶಾಸ್ತ್ರದ ಹುಟ್ಟಿಗೆ ಕಾರಣರಾದ ಎಂ.ವಿ. ಸೀತಾರಾಮಯ್ಯನವರ ಜನ್ಮಶತಮಾನೋತ್ಸವ ವರ್ಷದಲ್ಲೇ. ಬಿ.ಎಂ. ಶ್ರೀ ಪ್ರತಿಷ್ಠಾನ ಈ ೨೦೦೯–೧೦ ಅನ್ನು 'ಹಸ್ತಪ್ರತಿ ಅಧ್ಯಯನ ವರ್ಷ' ಎಂದು ಕರೆದು ನಾಡಿನಾದ್ಯಂತ ಪ್ರಮುಖ ವಿಶ್ವವಿದ್ಯಾಲಯಗಳಲ್ಲಿ, ಸಂಘ ಸಂಸ್ಥೆಗಳಲ್ಲಿ ಶಾಲೆ ಕಾಲೇಜುಗಳಲ್ಲಿ ಎಂ. ವಿ. ಸೀ. ಶತಮಾನೋತ್ಸವವನ್ನು ಹಸ್ತಪ್ರತಿಪ್ರದರ್ಶನ ಮತ್ತು ಅಧ್ಯಯನದ ಜಾಗೃತಿ ಕಾರ್ಯಕ್ರಮಗಳ ಮೂಲಕ ನಡೆಸಿ 'ಹಸ್ತಪ್ರತಿ ಅಧ್ಯಯನ ಶಾಸ್ತ್ರ'ದ ಬಗೆಗೆ ವಿದ್ವಾಂಸರಲ್ಲಿ ಚರ್ಚೆ–ಅರಿವು ಮೂಡಿಸಿದೆ. ಸೀತಾರಾಮಯ್ಯನವರೊಂದಿಗೆ ಬಿ.ಎಂ.ಶ್ರೀ. ಪ್ರತಿಷ್ಠಾನದ ಸ್ಥಾಪನೆಯ ಕಾಲದಿಂದಲೂ ಈ ಹಸ್ತಪ್ರತಿ ಜಾಗೃತಿಯಲ್ಲಿ ಕೈ ಜೋಡಿಸಿದ್ದ, ಅವರ ನಿಧನಾ ನಂತರ (೧೯೯೦) ಅವರ ಆಶಯಗಳಿಗನುಗುಣವಾಗಿ ಪ್ರತಿಷ್ಠಾನದಲ್ಲಿ ಆ ಚಟುವಟಿಕೆಗಳನ್ನು ವಿಸ್ತರಿಸಿದ್ದ, ಹಸ್ತಪ್ರತಿಶಾಸ್ತ್ರ ತರಗತಿಯನ್ನು ಆರಂಭಿಸಿ ನಿರಂತರವಾಗಿ ನಡೆಸಿಕೊಂಡು ಬಂದಿರುವ ಡಾ॥ ನಾ. ಗೀತಾಚಾರ್ಯರೇ ಈ ನೂತನ ಶಿಸ್ತಿಗೆ ಚಾಲನೆ ನೀಡಿದ್ದು ಅವರೇ ರಚಿಸಿರುವ 'ಹಸ್ತಪ್ರತಿ ಅಧ್ಯಯನ ಶಾಸ್ತ್ರ' ಎಂಬ ಪುಸ್ತಕವನ್ನು ಬಿ.ಎಂ.ಶ್ರೀ ಪ್ರತಿಷ್ಠಾನ ಎಂ.ವಿ. ಸೀ ಶತಮಾನೋತ್ಸವದ ಈ ಹಸ್ತಪ್ರತಿ ಅಭಿಯಾನದ ಭಾಗವಾಗಿ ಪ್ರಕಟಿಸಿ ನಾಡಿನಾದ್ಯಂತ ಈ ಅರಿವನ್ನು ವಿಸ್ತರಿಸಿದೆ. ೯–೯–೨೦೧೦ ರಂದು ಬೆಂಗಳೂರಿನ 'ಹಸ್ತಪ್ರತಿ ಅಧ್ಯಯನ ಶಾಸ್ತ್ರ' ಕುರಿತು ರಾಷ್ಟ್ರೀಯ ವಿಚಾರಗೋಷ್ಠಿಯನ್ನು ನಡೆಸಿ ನಾಡಿನ ಪ್ರಮುಖ ವಿದ್ವಾಂಸರನ್ನೆಲ್ಲ ಸೇರಿಸಿ ಈ ನೂತನ ಶಿಸ್ತಿನ ಬಗ್ಗೆ ಚಿಂತನ–ಮಂಥನ ನಡೆಸಿರುವ ಈ ಗೋಷ್ಠಿಯ ನಿರ್ದೇಶಕರೂ ಆಗಿದ್ದ ಡಾ॥ ಗೀತಾಚಾರ್ಯರು ಈ ಶಾಸ್ತ್ರಕ್ಕೊಂದು ಅಧಿಕೃತತೆಯನ್ನು ತಂದು ಕೊಟ್ಟಿದ್ದಾರೆ. ಈ ಪರಿಕಲ್ಪನೆಯ ವಿಸ್ತರಣೆಗೆ ಪೂರಕವಾಗಿ ಮುಕ್ತ ಅಧಿವೇಶನನಾಗಿ 'ಹಸ್ತಪ್ರತಿ ಅಧ್ಯಯನ ಸಮಾವೇಶ'ವನ್ನು ಪ್ರತಿಷ್ಠಾನದ 'ಸಿರಿಕಂಟ– ಹಸ್ತಪ್ರತಿ ವಿದ್ಯಾರ್ಥಿಗಳ ವೇದಿಕೆ' ಮೂಲಕ ವಾರ್ಷಿಕ ಕಾರ್ಯಕ್ರಮವಾಗಿ

ಸಂಸ್ಥೆ, ಮೇಲುಕೋಟೆಯ ಸಂಸ್ಕೃತ ಸಂಶೋಧನ ಸಂಸತ್ ಮುಂತಾದ ಸಂಸ್ಥೆಗಳು ಹಸ್ತಪ್ರತಿಗಳ ಸಂಗ್ರಹ ಸಂರಕ್ಷಣೆ ಮತ್ತು ಅಧ್ಯಯನಕ್ಕೆ ವ್ಯವಸ್ಥಿತ ಸಂಸ್ಥೆಯ ರೂಪವನ್ನು ನೀಡಿದವು. ಇದರೊಂದಿಗೆ ಕೆಲವು ಧಾರ್ಮಿಕ ಮಠಗಳು, ಕೆಲವರು ವ್ಯಕ್ತಿಗಳೂ ಹಸ್ತಪ್ರತಿಗಳನ್ನು ಸಂಗ್ರಹಿಸುವ ಯೋಜನೆಗಳಲ್ಲಿ ತೊಡಗಿರುವುದು ಕಂಡು ಬರುತ್ತದೆ. ಒಟ್ಟಾರೆ ಅಧಿಕ ಸಂಖ್ಯೆಯ ಹಸ್ತಪ್ರತಿಗಳನ್ನು ಕರ್ನಾಟಕದಲ್ಲಿ ಸಂಗ್ರಹಿಸಲಾಗಿದೆ.

ಕರ್ನಾಟಕದಲ್ಲಿ ಇಂದು ಸುಮಾರು ಹದಿನೈದು ಸಂಸ್ಥೆಗಳು ಹಸ್ತಪ್ರತಿ ಸಂಗ್ರಹ–ಸಂರಕ್ಷಣೆ – ಸಂಪಾದನೆಯ ಕಾರ್ಯದಲ್ಲಿ ತೊಡಗಿದ್ದು ಗ್ರಂಥಸಂಪಾದನೆ ಮತ್ತು ಹಸ್ತಪ್ರತಿಶಾಸ್ತ್ರಗಳ ಬೆಳವಣಿಗೆಯಲ್ಲಿ ಗಣನೀಯ ಪಾತ್ರ ವಹಿಸುತ್ತಿವೆ. ಈ ಎಲ್ಲ ಸಂಸ್ಥೆಗಳಲ್ಲಿ ಮತ್ತು ಕೆಲವು ವ್ಯಕ್ತಿಗಳಲ್ಲಿ ಒಟ್ಟು ಸುಮಾರು ೫೦,೦೦೦ ಹಸ್ತಪ್ರತಿಗಳ ಸಂಗ್ರಹವಿದೆ. ಇವುಗಳಲ್ಲಿ ಇನ್ನೂ ಪ್ರಕಟವಾಗಬೇಕಿರುವ ಹಲವಾರು ಗ್ರಂಥಗಳು ಇವೆ. ಹಸ್ತಪ್ರತಿಗಳನ್ನು ವ್ಯವಸ್ಥಿತವಾಗಿ ಮತ್ತು ವೈಜ್ಞಾನಿಕವಾಗಿ ಸಂರಕ್ಷಿಸುವ, ಸೂಚಿ ತಯಾರಿಸುವ ಕಾರ್ಯ ಆಗಬೇಕಾಗಿದೆ. ಹೆಚ್ಚು ಕಡಿಮೆ ಈಗ ಸಂಗ್ರಹವಾಗಿರುವಷ್ಟೇ ಸಂಖ್ಯೆಯ ಹಸ್ತಪ್ರತಿಗಳು ನಾಡಿನ ಮೂಲೆ ಮೂಲೆಗಳಲ್ಲಿ ಮಠ–ಮಾನ್ಯ–ಮನೆಗಳಲ್ಲಿದ್ದು ಜನರ ಅನಾದರಕ್ಕೆ ಒಳಗಾಗಿ ನಶಿಸುತ್ತಿವೆ. ಇವುಗಳ ಸಂಗ್ರಹ ಕಾರ್ಯ ಆಗಬೇಕಾಗಿದೆ. ಇವುಗಳೆಲ್ಲ ಆಗಬೇಕಾದರೆ ರಾಜ್ಯದಲ್ಲಿ ಈಗ ಬೇರೆ ಇಲಾಖೆಗಳು ಇರುವಂತೆ (ಶಾಸನ, ಇಲಾಖೆ, ಪ್ರಾಚ್ಯವಸ್ತು ಇಲಾಖೆ, ಪತ್ರಾಗಾರ ಇಲಾಖೆ, ಗ್ರಂಥಾಲಯ ಇಲಾಖೆ) ಹಸ್ತಪ್ರತಿ ಇಲಾಖೆಯೂ ರೂಪುಗೊಳ್ಳಬೇಕಾದ ಅಗತ್ಯ ಇದೆ. ಇಂಥದೊಂದು ವ್ಯವಸ್ಥಿತ ಇಲಾಖೆಯು ಅಸ್ತಿತ್ವಕ್ಕೆ ಬಾರದೆ ಈ ಕಾರ್ಯ ಕೇವಲ ಆಸಕ್ತ ಸಂಸ್ಥೆ– ವ್ಯಕ್ತಿಗಳ ವೈಯಕ್ತಿಕ ಶ್ರಮ ಮಾತ್ರದಿಂದ ಸಾಧ್ಯವಾಗುವುದಿಲ್ಲ. ಈಚೆಗೆ ಕೇಂದ್ರ ಸರ್ಕಾರದಿಂದ 'ರಾಷ್ಟ್ರೀಯ ಹಸ್ತಪ್ರತಿ ಮಿಷನ್' ಎಂಬ ಐದು ವರ್ಷಗಳ ಒಂದು ಯೋಜನೆ ಆರಂಭವಾಗಿರುವುದು ಶುಭ ಸೂಚನೆಯಾಗಿದೆ. ಅದರ ಚಟುವಟಿಕೆಗಳು ಮತ್ತು ಅವಧಿ ಸೀಮಿತವಾಗಿದೆ. ಇದು ಉದ್ದೇಶಿತ ಅಗತ್ಯಕ್ಕೆ ಪೂರಕವಾಗಿಲ್ಲವಾದರೂ ಇದಕ್ಕೆ ಶಾಶ್ವತ ಸಂಸ್ಥೆಯ ರೂಪವನ್ನು ಕೊಟ್ಟು ಈಗಾಗಲೇ ಕಾರ್ಯ ನಿರ್ವಹಿಸುತ್ತಿರುವ ವಿ.ವಿ. ಗಳು ಹಾಗೂ ಹಸ್ತಪ್ರತಿ ಸಂಸ್ಥೆಗಳನ್ನು ಒಳಗೊಂಡು ಕಾರ್ಯ ನಿರ್ವಹಿಸುವಂತಹ ಕೇಂದ್ರವನ್ನಾಗಿ ರೂಪಿಸಬೇಕಾಗಿದೆ.

**೨. ಹಸ್ತಪ್ರತಿ ಅಧ್ಯಯನಶಾಸ್ತ್ರ – ಎಂ. ವಿ. ಸೀ. ಶತಮಾನೋತ್ಸವ**

ಈಚೆಗೆ ಹಸ್ತಪ್ರತಿಶಾಸ್ತ್ರವು 'ಹಸ್ತಪ್ರತಿ ಅಧ್ಯಯನ' ಎಂಬ ಇನ್ನೊಂದು ಶಿಸ್ತನ್ನು ಹುಟ್ಟುಹಾಕುತ್ತಿದೆ. ಈ ನಿಟ್ಟಿನಲ್ಲಿ ಈಗಾಗಲೆ ಹಲವು ಲೇಖನಗಳು ಪ್ರಕಟವಾಗಿವೆ. ನೇರವಾಗಿ ಹಸ್ತಪ್ರತಿಗಳನ್ನೇ ಅಧ್ಯಯನ ವಸ್ತುಗಳನ್ನಾಗಿಸಿ ಭಾಷೆ, ಸಾಹಿತ್ಯ, ಸಂಸ್ಕೃತಿ, ಸಮಾಜ, ಕಲೆ, ಇತಿಹಾಸ, ಧರ್ಮ, ಶಾಸ್ತ್ರ, ವೈದ್ಯ, ವಿಜ್ಞಾನ, ತಂತ್ರಜ್ಞಾನ ಹೀಗೆ ಹಲವು ದೃಷ್ಟಿಕೋನಗಳಿಂದ ಅಧ್ಯಯನಕ್ಕೆ ಒಳಪಡಿಸುವ ಪ್ರಯತ್ನಗಳು ನಡೆಯುತ್ತಿವೆ. ಇವುಗಳ ಅಧ್ಯಯನವನ್ನು ಹಸ್ತಪ್ರತಿಗಳ ಮೂಲಕವೇ ನಡೆಸುವ ಬಹುಶಿಸ್ತೀಯ

ಎಂ.ವಿ.ಸೀ.ಯವರು ಸೂಚಿಸಿರುವುದು ಈ ಶಾಸ್ತ್ರದ ಬೆಳವಣಿಗೆಯ ಅವರ ದೂರ ಗಾಮಿತ್ವದ ಸೂಚಕವಾಗಿದೆ. ಮುಂದೆ ಈ ವೈಜ್ಞಾನಿಕ ವಿಧಾನಗಳನ್ನು ಹಸ್ತಪ್ರತಿಸಂಸ್ಥೆಗಳು ಅಳವಡಿಸಿಕೊಂಡು ಪ್ರಾಚೀನ ಹಸ್ತಪ್ರತಿಗಳನ್ನು ಹೆಚ್ಚು ವೈಜ್ಞಾನಿಕವಾಗಿಯೂ ಸಂರಕ್ಷಿಸಿರುವುದನ್ನು ಕಾಣಬಹುದಾಗಿದೆ.

ಹಸ್ತಪ್ರತಿಶಾಸ್ತ್ರದ ಇನ್ನೊಂದು ಪ್ರಧಾನ ಕ್ಷೇತ್ರ ಸೂಚಿರಚನೆ. ವಿಶ್ವವಿದ್ಯಾನಿಲಯಗಳು ತಮ್ಮಲ್ಲಿರುವ ಹಸ್ತಪ್ರತಿಗಳ ಸೂಚಿಗಳನ್ನು ರಚಿಸಿ ಪ್ರಕಟಿಸಿದ್ದರೂ ಇದು ಸಮಗ್ರವಾಗಿ ಆಗಿಲ್ಲದಿರುವುದರಿಂದ ಈ ಕಾರ್ಯ ಇನ್ನೂ ಆಗಬೇಕಾಗಿದೆಯೆಂದು ಹೇಳುತ್ತಲೇ ಈ ಎಲ್ಲ ಸೂಚಿಗಳ ಸೂಚಿಯ ಪ್ರಕಟಣೆಯ ಅಗತ್ಯವನ್ನೂ ಒತ್ತಿ ಹೇಳಿದ್ದಾರೆ. ರಾಜ್ಯಾದ್ಯಂತ ವಿವಿಧ ಸಂಸ್ಥೆ–ವ್ಯಕ್ತಿ–ವಿ.ವಿಗಳಲ್ಲಿರುವ ಎಲ್ಲ ಹಸ್ತಪ್ರತಿಗಳ ವಿವರವೂ ಒಂದೇ ಕಡೆ ದೊರಕುವಂತೆ ಮಾಡುವ ಮುಂದಾಲೋಚನೆಯನ್ನೂ ಎಂ.ವಿ.ಸೀ ಮಾಡಿದ್ದರೆಂಬುದಕ್ಕೆ ಈ ಲೇಖನಗಳಲ್ಲಿ ಅವರು ಪ್ರತಿಪಾದಿಸಿರುವ 'ಕೇದ್ರ ಹಸ್ತಪ್ರತಿ ಭಂಡಾರ'ದ ಚಿಂತನೆಯನ್ನು ಗಮನಿಸಬಹುದು. ಆದರೆ ಇಂದಿಗೂ ಅದು ಸಾಧ್ಯವಾಗಿಲ್ಲದಿರುವುದು ನಮ್ಮ ಸಂಶೋಧನಾ ಕೊರತೆಗೆ ಸಾಕ್ಷಿಯಾಗಿವೆ. ಹಸ್ತಪ್ರತಿ ಕ್ಷೇತ್ರದಲ್ಲಿ ಆಗಬೇಕಾದ ಕೆಲಸ ಇನ್ನೂ ಸಾಕಷ್ಟಿವೆ ಎಂಬುದನ್ನು ಇದು ತೋರಿಸುತ್ತದೆ. ವಿ.ವಿ. ಗಳು. ಹಲವು ಹಸ್ತಪ್ರತಿ ಸಂಸ್ಥೆಗಳು, ಮಠಗಳು ಮೈಕೊಡವಿ ಜಾಗೃತರಾದರೂ ಇನ್ನೂ ಆ ಸಂಸ್ಥೆಗಳಲ್ಲಿರುವ ಎಲ್ಲ ಹಸ್ತಪ್ರತಿಗಳೂ ಸೂಚಿಗಳಾಗಿಲ್ಲ. ಆಗಿರುವ ಸೂಚಿಗಳೂ ಪೂರ್ಣವಾಗಿ ಪ್ರಕಟವಾಗಿಲ್ಲ. ಈ ಕಾರ್ಯ ಪೂರ್ಣವಾದ ಮೇಲಷ್ಟೇ ಕೇಂದ್ರಹಸ್ತ ಪ್ರತಿಭಂಡಾರದ ಯೋಜನೆ ಕಾರ್ಯರೂಪಕ್ಕೆ ಬರುವಂತಹುದು. ಹಾಗೆ ಪ್ರಕಟವಾದ ಸೂಚಿಗಳ ಸಂಗ್ರಹ ಕೇಂದ್ರವೇ ಎಂ.ವಿ.ಸೀ.ಯವರ ಕೇಂದ್ರ ಹಸ್ತಪ್ರತಿ ಭಂಡಾರದ ಯೋಜನೆಯಾಗಿದೆ.

ಎಂ.ವಿ.ಸೀಯವರ ಈ ಎರಡು ಲೇಖನಗಳಲ್ಲಿ ಒಂದು ಬಿ.ಎಂ.ಶ್ರೀ ಪ್ರತಿಷ್ಠಾನದಿಂದ ಸಂಘಟಿಸಿದ್ದ ರಾಷ್ಟ್ರೀಯ ಹಸ್ತಪ್ರತಿ ಶಾಸ್ತ್ರ ವಿಚಾರ ಗೋಷ್ಠಿಯ ಭೂಮಿಕಾ ಭಾಷಣ ಎಂಬುದು ವಿಶೇಷ. ಈ ಲೇಖನದ ಆಶಯಗಳಿಗೆ ಅನುಗುಣವಾಗಿಯೇ ಈ ಗೋಷ್ಠಿಯ ಲೇಖನಗಳೂ ಇರುವುದನ್ನು ಈ ಪುಸ್ತಕದಿಂದ ಗಮನಿಸಬಹುದಾಗಿದ್ದು ಒಂದು ನೂತನ ಅಧ್ಯಯನ ಶಿಸ್ತಿಗೆ ಎಂ.ವಿಸೀ.ಯುವರು ಹೇಗೆ ಪರಿಕರಗಳನ್ನು ಕೂಡಿಸುತ್ತಿದ್ದರು ಎಂಬ ವಿಶಾಲದೃಷ್ಟಿಯನ್ನು ಇಲ್ಲಿ ಕಾಣಬಹುದು.

ಇದೇ ಬಗೆಯ ತಳಹದಿಯ ಮೇಲೆ ರೂಪುಗೊಂಡ ಗ್ರಂಥ 'ಮಣಿಹ'. ಇದಕ್ಕೆ ಎಂ.ವಿ.ಸೀ. ಅವರು ರೂಪಿಸದ್ದ ಕಾರ್ಯಯೋಜನೆ 'ಹಸ್ತಪ್ರತಿ ಶಾಸ್ತ್ರ'ಕ್ಕೆ ಹೇಗೆ ದಿಕ್ಸೂಚಿಯಾಯಿತು ಎಂಬುದಕ್ಕೆ ಅವರ 'ನಮ್ಮ ಮಾತು' ಗಳೇ ಸಾಕ್ಷಿಯಾಗಿವೆ. ಇಂದಿಗೂ ಈ ಶಾಸ್ತ್ರಕ್ಕೆ ಇದು ಪ್ರಮಾಣಗ್ರಂಥವಾಗಿ ಉಳಿಯುವ ಮಟ್ಟಿಗೆ ಮೌಲಿಕವಾಗಿದೆ. ಎಂ.ವಿ.ಸೀ. ಅವರು ಈ ಶಾಸ್ತ್ರವನ್ನು ಕುರಿತು ಸಮಗ್ರವಾಗಿ ಚಿಂತಿಸುತ್ತಿದ್ದು ಅದರ ಪ್ರತಿಫಲವಾಗಿ ಮೂಡಿದ ಚಿಂತನೆಗಳನ್ನು ಈ ಕೃತಿಯಲ್ಲಿ

ಆರಂಭಿಸಿದ್ದು ಈಗಾಗಲೇ ಎರಡು ಸಮಾವೇಶಗಳನ್ನು ಸಂಘಟಿಸಿದ್ದಾರೆ. ಎಂ.ವಿ.ಸೀ. ಶತಮಾನೋತ್ಸವ ನೆನಪಿನ ಹಸ್ತಪ್ರತಿ ಸಂಪುಟವಾಗಿ 'ಸಿರಿಕಂಟ'ವನ್ನೂ ಸಂಪಾದಿಸಿದ್ದಾರೆ.

ಇದು ಎಂ.ವಿ. ಸೀತಾರಾಮಯ್ಯನವರು, ಫ.ಗು. ಹಳಕಟ್ಟಿ ಶತಮಾನೋತ್ಸವದ 'ಹಸ್ತಪ್ರತಿ ವರ್ಷ'ದ ನೆನಪಿಗಾಗಿ ಪ್ರಕಟಿಸಿದ್ದ 'ಮಣಿಹ'ದ ವಿಸ್ತೃತ ರೂಪವಾಗಿದೆ. ಮಣಿಹದಲ್ಲಿ ಆವರೆಗಿನ ಹಸ್ತಪ್ರತಿ ವಿದ್ವಾಂಸರ ಅನುಭವ ಲೇಖನಗಳು, ಗ್ರಂಥ ಸಂಪಾದನೆಯಲ್ಲಿ ತೊಡಗಿದ್ದ ವಿದ್ವಾಂಸರ ಸಾಧನೆಯ ಲೇಖನಗಳು, ವಿವಿಧ ಲಿಪಿಗಳು ಮತ್ತು ಹಸ್ತಪ್ರತಿಗಳನ್ನು ಕುರಿಯ ಲೇಖನಗಳನ್ನು ಅಳವಡಿಸಿ ಹಸ್ತಪ್ರತಿ ಶಾಸ್ತ್ರದ ವ್ಯಾಪಕತೆಯನ್ನ ಎಂ.ವಿ.ಸೀ ದಾಖಲಿಸಿದ್ದರು. ಹಸ್ತಪ್ರತಿ ಶಾಸ್ತ್ರದ ಅಧ್ಯಯನಕ್ಕೆ ಈ ಗ್ರಂಥ ಒಂದು ಪ್ರಮಾಣ ಗ್ರಂಥವಾಯಿತು. ಮುಂದಿನ ದಿನಗಳಲ್ಲಿ ಹಸ್ತಪ್ರತಿಶಾಸ್ತ್ರವು ಹಸ್ತಪ್ರತಿಗಳ ಸಂಗ್ರಹ–ಸಂರಕ್ಷಣೆ–ಸಂಪ್ರತಿ– ದಾಖಲೀಕರಣಕ್ಕೆ ಸೀಮಿತವಾಗಿ ಹಸ್ತಪ್ರತಿ ಕುರಿತ ಅಧ್ಯಯನಗಳೆಲ್ಲ ಇದೀಗ ಚಾಲ್ತಿಗೆ ಬಂದಿರುವ ಹಸ್ತಪ್ರತಿ ಅಧ್ಯಯನದ ಶಿಸ್ತಿಗೆ ಅಳವಡುವುದರಿಂದ ಮಣಿಹದ ಬಹಳಷ್ಟು ಲೇಖನಗಳನ್ನೆಲ್ಲ 'ಸಿರಿಕಂಟ'ದಲ್ಲಿ ಉಳಿಸಿಕೊಂಡು ಇನ್ನೂ ಕೆಲವು ವಿಭಿನ್ನ ಕ್ಷೇತ್ರದ ಅಧ್ಯಯನವನ್ನು ದಾಖಲಿಸುವ ನೂತನ ಲೇಖನಗಳನ್ನು ಸೇರಿಸಿ 'ಹಸ್ತಪ್ರತಿ ಅಧ್ಯಯನಶಾಸ್ತ್ರ'ದ ಪ್ರಮಾಣ ಗ್ರಂಥವಾಗಿಸಲು ಪ್ರಯತ್ನಿಸಿರುವುದು ಈ ಶಿಸ್ತಿನ ವಿಸ್ತಾರಣೆಯ ಭಾಗವೇ ಆಗಿದೆ.

**೩. ಎಂ.ವಿ.ಸೀ. ಅವರ 'ಹಸ್ತಪ್ರತಿಶಾಸ್ತ್ರ' ವಿಚಾರಗಳು**

ಪ್ರಸ್ತುತ ಸಂಪುಟದಲ್ಲಿ ಹಸ್ತಪ್ರತಿ ಶಾಸ್ತ್ರ ವಿಭಾಗದಲ್ಲಿ ಎಂ.ವಿ. ಸೀತಾರಾಮಯ್ಯನವರ ಹಸ್ತಪ್ರತಿ ಶಾಸ್ತ್ರ ಕುರಿತ ಚಿಂತನೆಗಳನ್ನು ಒಂದೆಡೆ ತರಲಾಗಿದೆ. ಈ ಶಾಸ್ತ್ರ ನಿರ್ಮಾಣದ ಭಾಗವಾಗಿ ಅವರು ಪ್ರತಿಷ್ಠಾನದ ಮೂಲಕ ಪ್ರಕಟಿಸಿದ ಪ್ರಮುಖ ಪ್ರಮಾಣಗ್ರಂಥಗಳಾದ 'ಹಸ್ತಪ್ರತಿಶಾಸ್ತ್ರ' ಮತ್ತು 'ಮಣಿಹ' ಗ್ರಂಥಗಳಲ್ಲಿ ಪ್ರಕಟವಾಗಿರುವ ಅವರ ಎರಡು ಲೇಖನಗಳು, ಮುನ್ನುಡಿಗಳು ಮತ್ತು ಕೆಲವು ಟಿಪ್ಪಣಿಗಳನ್ನು ಇಲ್ಲಿ ಸಂಗ್ರಹಿಸಿದೆ.

ಎರಡು ಲೇಖನಗಳಲ್ಲೂ ಹಸ್ತಪ್ರತಿಗಳ ಸಂಗ್ರಹ ಮತ್ತು ಸಂರಕ್ಷಣ ಕಾರ್ಯದ ಮಹತ್ವ ಮತ್ತು ಅಗತ್ಯತೆಗಳನ್ನು ಚರ್ಚಿಸಿದ್ದಾರೆ. ಹಸ್ತಪ್ರತಿ ಶಾಸ್ತ್ರದ ಎರಡು ಪ್ರಮುಖ ಅಧ್ಯಯನಗಳೆಂದೂ ಕಾರ್ಯಾಂಗಗಳೆಂದೂ ಇವುಗಳನ್ನು ಗುರುತಿಸಿದ್ದಾರೆ. ಹಸ್ತಪ್ರತಿಶಾಸ್ತ್ರಕ್ಕೆ Manuscripto logy ಎಂಬ ಪಾರಿಭಾಷಿಕ ಪದವನ್ನು ಮೊದಲ ಬಾರಿಗೆ ಟಂಕಿಸಿದ್ದು ಇದು ಈವರೆಗೆ ಯಾವ ಆಂಗ್ಲ ನಿಘಂಟುಗಳಲ್ಲೂ ಉಲ್ಲೇಖವಾಗಿಲ್ಲವೆಂಬುದನ್ನು ಸೂಚಿಸುತ್ತ ನಿಘಂಟಿಗೆ ಈ ಪಾರಿಭಾಷಿಕ ಪದವನ್ನು ನೀಡಿದ್ದಾರೆ. ಮುಂದೆ ಈ ಪದ ವ್ಯಾಪಕವಾಗಿ ಚರ್ಚಿತವಾಗಿ ಬಂದು ಅಧ್ಯಯನ ಶಿಸ್ತಾಗಿ ರೂಪುಗೊಳ್ಳಲು ಪ್ರೇರಣೆಯಾಗಿದೆ. ದೇಸೀ ವಿಧಾನದ ಸಂರಕ್ಷಣೆಯ ಜೊತೆಗೆ ವೈಜ್ಞಾನಿಕ ವಿಧಾನಗಳನ್ನು ಅಳವಡಿಸಿಕೊಳ್ಳುವ ಅಗತ್ಯವನ್ನು

ಈ ಗ್ರಂಥದ ಮೂಲಕ ಅದನ್ನು ಇನ್ನಷ್ಟು ಖಚಿತಪಡಿಸಿದ್ದಾರೆ. ಒಬ್ಬ ಪ್ರಮುಖ ಆಲಂಕಾರಿಕರಾಗಿ ಕನ್ನಡ ಶಾಸ್ತ್ರಸಾಹಿತ್ಯ ಕ್ಷೇತ್ರದಲ್ಲಿ ಶಾಶ್ವತ ಸ್ಥಾನಪಡೆಯುವಲ್ಲಿ ಈ ಎರಡು ಕೃತಿಗಳ ಸಂಪಾದನಮಾರ್ಗ ಪ್ರಾಧಾನವಾಗಿದೆ. ಕವಿರಾಜಮಾರ್ಗದ ಸಂಪಾದನೆಯಿಂದ ಅದರ ಕರ್ತೃತ್ವವನ್ನು ನಿಷ್ಕರ್ಷೆಗೊಳಿಸಿದಂತೆ ಉದಯಾದಿತ್ಯಾಲಂಕಾರದಿಂದಲೂ ಆದರ ಕರ್ತೃತ್ವವನ್ನು ಇದಮಿತ್ಥಂ ಎಂದು ನಿಷ್ಕರ್ಷಿಸಿದ್ದಾರೆ. ಇದನ್ನು ರಚಿಸಿದವನು ನಾಗವರ್ಮನೆಂದೂ ಆವರೆಗೆ ವಿದ್ವಾಂಸರು ಕರ್ತೃವೆಂದೇ ನಂಬಿದ್ದ ಉದಯಾದಿತ್ಯ ಈ ಕವಿಯ ಆಶ್ರಿತ ದೊರೆಯೆಂದೂ ಸಾಧಾರವಾಗಿ ನಿರೂಪಿಸಿದ್ದಾರೆ. ಇದೊಂದು ಪುಟ್ಟಕೃತಿಯಾದರೂ ಇದಕ್ಕೆ ಬರೆದಿರುವ ೨೫ ಪುಟಗಳ ದೀರ್ಘ ಪ್ರಸ್ತಾವನೆ ಅತ್ಯುತ್ತಮ ಸಂಪಾದಿತ ಕೃತಿಯ ಮಾದರಿಯೆನಿಸಿದೆ. ಆವರೆಗೆ ಬಂದಿದ್ದ ಸಂಶೋಧನ ಲೇಖನಗಳು ದೊರಕಿದ್ದ, ಹಸ್ತಪ್ರತಿ–ಮುದ್ರಿತ ಪ್ರತಿಗಳು ಮತ್ತು ಸಂಬಂಧಿಸಿದ ಶಾಸನಗಳನ್ನೆಲ್ಲ ತಲಸ್ಪರ್ಷಿ ಅಧ್ಯಯನ ನಡೆಸಿ ಕವಿ ಕಾವ್ಯ ವಿಚಾರವನ್ನು ಉನ್ನತಮಟ್ಟದಲ್ಲಿ ವಿಮರ್ಶಿಸಿದ್ದಾರೆ. ಹಾಗೆಯೇ ಕೇವಲ ೭೬ ಕಂದ ಪದ್ಯಗಳ ಈ ಕೃತಿಗೆ ಸು. ೪೦ ಪುಟಗಳ ದೀರ್ಘ ಮೌಲಿಕ ಟಿಪ್ಪಣಿಗಳನ್ನು ಬರೆದು ಪ್ರತಿಯೊಂದು ಪದ್ಯದ ಪಾಠಗಳನ್ನೂ ಅವುಗಳಿಂದ ವ್ಯಕ್ತವಾಗುವ ಕವಿ–ಕಾವ್ಯವಿಚಾರವನ್ನೂ ವಿಮರ್ಶೆಗೊಳಪಡಿಸಿದ್ದಾರೆ. ಇದು ಎಂ.ವಿ.ಸೀ.ಯವರ ಗ್ರಂಥಸಂಪಾದನಾ ಶೈಲಿಯೇ ಆಗಿದೆ. ಇವರ ಯಾವುದೇ ಸಂಪಾದಿತ ಕೃತಿಯಲ್ಲಿ ಈ ಬಗೆಯ ದೀರ್ಘವಾದ ವಿಮರ್ಶಾತ್ಮಕ ಟಿಪ್ಪಣಿಗಳಿರುವುದನ್ನು ಕಾಣಬಹುದು. ಲಭ್ಯವಿರುವ ಕನ್ನಡದ ಪ್ರಾಚೀನ ಅಲಂಕಾರ ಗ್ರಂಥಗಳು ಕೇವಲ ಮೂರಾಗಿದ್ದು ಅವುಗಳಲ್ಲಿ ಒಂದಾದ ಈ ಗ್ರಂಥ ಪುಟ್ಟದಾದರೂ ವಿವರವಾಗಿ ವಿಶ್ಲೇಷಿಸಿ ಕರ್ತೃವಿಚಾರ ಮತ್ತು ಕೃತಿ ವಿಚಾರದಲ್ಲಿ ನಿರ್ದುಷ್ಟವಾದ ತೀರ್ಮಾನಗಳನ್ನು ನೀಡುವ ಮೂಲಕ ಇದರ ಮಹತ್ವದ ಸ್ಥಾನವನ್ನು ನಿರ್ಧರಿಸಿದ್ದಾರೆ.

ಇವನ ಮತದ ವಿಚಾರವಾದ ಮತ್ತು ಎಂವಿಸೀ ಅವರ ಕೆಲವು ತೀರ್ಮಾನಗಳ ಬಗ್ಗೆ ಈಚೆಗೆ ಈ ಕೃತಿಯನ್ನು ಪುನಾಸಂಪಾದಿಸಿರುವ ಪ್ರೊ॥ ಸಿ. ಮಹದೇವಪ್ಪನವರು ಕೆಲವು ಆಕ್ಷೇಪಣೆಗಳನ್ನು ಎತ್ತಿದರೂ ವಿದ್ವಾಂಸವಲಯದಲ್ಲಿ ಆ ಬಗ್ಗೆ ಇನ್ನೂ ಗಂಭೀರ ಚರ್ಚೆಯಾಗಿಲ್ಲದಿರುವುದುರಿಂದ ಸದ್ಯಕ್ಕೆ ಎಂ.ವಿ.ಸೀ. ಯವರ ನಿರ್ಣಯಗಳೇ ಒಪ್ಪಿತ ಅಭಿಪ್ರಾಯಗಳಾಗಿರುವಷ್ಟರ ಮಟ್ಟಿಗೆ ಎಂ.ವಿ.ಸೀ. ಅವರ ಗ್ರಂಥ ಸಂಪಾದನೆ ಮಹತ್ವದ ಸ್ಥಾನವನ್ನು ಪಡೆದಿದೆ. ಈ ಸಂಪುಟದಲ್ಲಿ ಈಕೃತಿಯ ಪ್ರಸ್ತಾವನೆ ಮತ್ತು ಈ ಕವಿಯ ವಿಚಾರವಾಗಿ ಬರೆದಿರುವ ಎಂವಿಸೀ ಅವರ ಎರಡು ಬಿಡಿಲೇಖನಗಳನ್ನು ಕೊಡಲಾಗಿದೆ. ಈ ಲೇಖನಗಳಲ್ಲಿ ಪುಸ್ತಕ ಪ್ರಕಟಣೆಯ ನಂತರ ಬಂದ ಪ್ರತಿಕ್ರಿಯೆಗಳಿಗೆ ಉತ್ತರ ರೂಪದ ಪುನಃಪರಿಶೀಲನೆಯಿದೆ. ಈ ಪ್ರತಿಕ್ರಿಯೆಯ ನಂತರವೂ ಎಂ.ವಿ.ಸೀ. ಅಭಿಪ್ರಾಯಗಳೇ ಅಂತಿಮವಾಗಿ ಮಾನ್ಯವಾಗಿರುವುದು ಎಂ.ವಿ.ಸೀ. ಅವರ ಗ್ರಂಥ ಸಂಪಾದನೆಯ ಪ್ರಾಮುಖ್ಯವಾಗಿದೆ.

ಒಟ್ಟಾರೆ ಎಂ.ವಿ.ಸೀತಾರಾಮಯ್ಯ ನವರು ಶ್ರೇಷ್ಠ ಗ್ರಂಥಸಂಪಾದನಾ ವಿದ್ವಾಂಸರಾಗಿ, ಹಸ್ತಪ್ರತಿಶಾಸ್ತ್ರ ಮತ್ತು ಅದ್ವೈತ ಹರಿದಾಸ ಸಾಹಿತ್ಯದ ಅಧ್ವರ್ಯುವಾಗಿ

ಟಿಪ್ಪಣಿಗಳಾಗಿ ದಾಖಲಿಸಿದ್ದಾರೆ. ಅವುಗಳಲ್ಲಿ ಕುವೆಂಪು ಕವಿತೆಯ ಪಾಠವ್ಯತ್ಯಾಸವನ್ನೂ ಉಲ್ಲೇಖಿಸುತ್ತ ಗ್ರಂಥಸಂಪಾದನೆಯು ಕೇವಲ ಪ್ರಾಚೀನ ಕೃತಿಗಳಿಗಷ್ಟೇ ಸೀಮಿತವಾಗದೆ ಆಧುನಿಕ ಕೃತಿಗಳಿಗೂ ಅನ್ವಯವಾಗುತ್ತದೆಂಬುದನ್ನು ಗುರುತಿಸಿದುದು ಗಮನಾರ್ಹವಾಗಿದೆ.

ಬಿ.ಎಂ.ಶ್ರೀ. ಪ್ರತಿಷ್ಠಾನ ಪ್ರಕಟಿಸಿದ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯ 'ಮುನ್ನುಡಿ'ಯ ಮಾತಿನಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನವನ್ನು ಹಸ್ತಪ್ರತಿ ಸಂಸ್ಥೆಯನ್ನಾಗಿ ಸ್ಥಾಪಿಸಿರುವ ಹಿನ್ನೆಲೆಯ ಸಂಗತಿಗಳನ್ನು ಪ್ರಸ್ತಾಪಿಸಿ ಸೂಚಿಗಳ ಮಹತ್ವವನ್ನು ಸೂಚಿಸಿ ಪ್ರತಿಷ್ಠಾನದಂತಹ ಸಂಸ್ಥೆಗಳು ಈ ಕಾರ್ಯದಲ್ಲಿ ಹೊಂದಿರಬೇಕಾದ ಹೊಣೆಗಾರಿಕೆಯನ್ನೂ ಹೇಳುತ್ತಲೇ ಹಸ್ತಪ್ರತಿಶಾಸ್ತ್ರದ ವಿವಿಧ ಮುಖಗಳಿಗೆ ಸಕಾರಾತ್ಮಕವಾಗಿ ಸ್ಪಂದಿಸುತ್ತ ಈ ನೂತನ ಶಾಸ್ತ್ರದ ಅಧ್ಯಯನವಾಗಿ ಹೊರಹೊಮ್ಮಿಸಿದ್ದಾರೆ.

## ಶಾಸ್ತ್ರಸಾಹಿತ್ಯ

೧೯೭೫ರಲ್ಲಿ 'ಶಾಸ್ತ್ರ ಸಾಹಿತ್ಯ', ಎಂಬ ಕೃತಿ ಬೆಂ.ವಿ.ವಿ.ಯಿಂದ ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ಮಾಲೆಯಲ್ಲಿ ಪ್ರಕಟವಾಯಿತು. ಈ ಕೃತಿ ಶಾಸ್ತ್ರಸಾಹಿತ್ಯದ ಬಗ್ಗೆ ಬರೆದ ಮೊದಲ ಕೃತಿಯಾಗಿದೆ. ಇಲ್ಲಿನ ವಿಷಯಗಳನ್ನು ಸಾಮಾನ್ಯನಿಗೆ ಎಂದು ಬರೆದಿದ್ದರೂ ವಾಸ್ತವವಾಗಿ ವಿದ್ವಾಂಸರಿಗೇ ಹೆಚ್ಚು ಉಪಯುಕ್ತವಾಗಿದೆ. ಈ ಕೃತಿಯಲ್ಲಿ ಶಾಸ್ತ್ರ ಮತ್ತು ಸಾಹಿತ್ಯಕ್ಕೆ ಇರುವ ಸಂಬಂಧ, ವ್ಯತ್ಯಾಸ, ಅರ್ಥಗಳನ್ನು ಕುರಿತು ಎಂ.ವಿ.ಸೀ. ಚರ್ಚಿಸಿದ್ದಾರೆ, ಅಲಂಕಾರ ಶಾಸ್ತ್ರ, ಛಂದಸ್ಸು, ವ್ಯಾಕರಣ, ನಿಘಂಟು, ಜ್ಞಾನಕೋಶ, ಧಾರ್ಮಿಕ ಶಾಸ್ತ್ರಗ್ರಂಥ, ಲೌಕಿಕ ಶಾಸ್ತ್ರಗ್ರಂಥಗಳೆಂಬ ಅಧ್ಯಾಯಗಳನ್ನೊಳಗೊಂಡಿರುವ ಈ ಕೃತಿಯ. ಪ್ರತಿಯೊಂದು ಅಧ್ಯಾಯದಲ್ಲಿಯೂ ಆಯಾಗ್ರಂಥಗಳ ಲೇಖಕರಮಾಹಿತಿ ಸಂಗ್ರಹಣೆ ಹಾಗೂ ವಿಶ್ಲೇಷಣೆ ಇದೆ. ಕನ್ನಡ ಶಾಸ್ತ್ರಸಾಹಿತ್ಯದ ವ್ಯಾಪಕತೆ, ಮಹತ್ವ ಮತ್ತು ವೈಶಿಷ್ಟಗಳನ್ನು ಎಂವಿಸೀ ವಿವರಿಸಿದ್ದಾರೆ. ಆವರೆಗೆ ಕನ್ನಡದಲ್ಲಿ ಬಂದಿರುವ ಎಲ್ಲ ಪ್ರಮುಖ ಶಾಸ್ತ್ರಗ್ರಂಥಗಳನ್ನು ಇಲ್ಲಿ ತಲಸ್ಪರ್ಷಿಯಾಗಿ ವಿಶ್ಲೇಷಿಸಿರುವುದು ಮಹತ್ವಪೂರ್ಣವಾಗಿದ್ದು ಈ ಗ್ರಂಥ ಎಂವಿಸೀ ಅವರ ಬಹುಶ್ರುತಪಾಂಡಿತ್ಯಕ್ಕೆ ಸಾಕ್ಷಿಯಾಗಿದೆ, ಪುಸ್ತಕದ ಕೊನೆಯಲ್ಲಿ ನೀಡಿರುವ ಗ್ರಂಥಸೂಚಿ ಸಂಶೋಧಕರಿಗೆ ಹಾಗೂ ಅಭ್ಯಾಸಿಗಳಿಗೆ ಬಹಳ ಒಳ್ಳೆಯ ಭಾಗವಾಗಿದೆ. ಈ ಇಡೀ ಗ್ರಂಥವನ್ನು ಇಲ್ಲಿ ಅಳವಡಿಸಲಾಗಿದೆ.

ಈ ಸಂಪುಟದಲ್ಲಿ ಅಳವಡಿಸಿರುವ ಇತರ ಕೃತಿಗಳ ಮೊದಲ ಮಾತುಗಳನ್ನು ಪರಿಶಿಷ್ಟದಲ್ಲಿ ನೀಡಿದೆ.

### ಉದಯಾದಿತ್ಯಾಲಂಕಾರ

ಉದಯಾದಿತ್ಯಾಲಂಕಾರ ಎಂ.ವಿ.ಸೀತಾರಾಮಯ್ಯನವರ ಪ್ರಮುಖ ಅಲಂಕಾರ ಗ್ರಂಥ. ಕವಿರಾಜಮಾರ್ಗದ ಮೂಲಕ ತಾವೊಬ್ಬ ಶ್ರೇಷ್ಠ ಕಾವ್ಯಮೀಮಾಂಸಕಾರರು ಎಂಬುದನ್ನು ಸಾಬೀತುಪಡಿಸಿದ್ದ ಎಂ.ವಿ.ಸೀ ಅವರು

ಕನ್ನಡ ಸಾಹಿತ್ಯಲೋಕದಲ್ಲಿ ದಾಖಲಾಗಿರುವುದಕ್ಕೆ ಕಾರಣವಾದ ಅಮೂಲ್ಯ ಗ್ರಂಥ–ಲೇಖನಗಳ ಸಂಕಲನವಾಗಿ ಈ ಸಂಪುಟ ಪ್ರಾತಿನಿಧಿಕವಾಗಿದೆ.

**ಡಾ॥ ನಾ. ಗೀತಾಚಾರ್ಯ**

ಪ್ರಾಧ್ಯಾಪಕ ಮತ್ತು ಮುಖ್ಯಸ್ಥ
ಕನ್ನಡ ವಿಭಾಗ
ಶೇಷಾದ್ರಿಪುರಂ ಕಾಲೇಜು
ಬೆಂಗಳೂರು – ೨೦
ದೂ. : ೯೪೪೪೮೬೭೧೦೪೯



# ೧. ಕವಿರಾಜಮಾರ್ಗ

## ಪೀಠಿಕೆ

**ಚಾರಿತ್ರಿಕ ಹಿನ್ನೆಲೆ :** ಕವಿರಾಜಮಾರ್ಗವು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿಶಿಷ್ಟವೂ ಮಹತ್ತ್ವಪೂರ್ಣವೂ ಆದ ಸ್ಥಾನವನ್ನು ಪಡೆದಿದೆ. ಈ ವರೆಗೆ ಉಪಲಬ್ಧವಾಗಿರುವ ಕನ್ನಡ ಗ್ರಂಥಗಳಲ್ಲಿ ಕವಿರಾಜಮಾರ್ಗವು ಮೊತ್ತಮೊದಲನೆಯದು. ಇದು ಅಲಂಕಾರಶಾಸ್ತ್ರಕ್ಕೆ ಸಂಬಂಧಪಟ್ಟ ಲಕ್ಷಣ ಗ್ರಂಥ; ಕನ್ನಡದಲ್ಲಿ ಕಾವ್ಯಮೀಮಾಂಸೆಯ ಪರಂಪರೆಗೆ ತಲಕಾವೇರಿ. ಹೀಗೆ, ಅನೇಕ ದೃಷ್ಟಿಗಳಿಂದ ಅಮೂಲ್ಯವೆನಿಸಿರುವ ಈ ಗ್ರಂಥವನ್ನು ರಚಿಸಿದವನು ಕರ್ಣಾಟಕದ ರಾಷ್ಟ್ರಕೂಟ ವಂಶದ ದೊರೆ ನೃಪತುಂಗನೆಂದು ಕೆಲವು ವಿದ್ವಾಂಸರ ಅಭಿಪ್ರಾಯ; ಆತನ ಸಭಾಸದನಾಗಿದ್ದ ಕವಿಯೊಬ್ಬನು ಇದರ ಕರ್ತೃ ಎಂದು ಬೇರೆ ಹಲವು ಮಂದಿ ವಿದ್ವಾಂಸರ ಅಭಿಮತ. ನೃಪತುಂಗ ಸಭಾಸದನಾದ ಆ ಕವಿ ಶ್ರೀವಿಜಯನೆಂದು ಕೆಲವರೂ, ಕವೀಶ್ವರನೆಂದು ಇನ್ನೂ ಕೆಲವರೂ ವಾದಿಸಿದ್ದಾರೆ. ಕವಿ ಯಾರೇ ಆಗಿದ್ದರೂ, ಗ್ರಂಥವು ನೃಪತುಂಗನ ಆಳ್ವಿಕೆಯಲ್ಲಿ (ಕ್ರಿ.ಶ.೮೧೪–೮೭೭) ರಚಿತವಾಗಿರುವುದು ನಿರ್ವಿವಾದವಾಗಿರುವುದರಿಂದಲೂ, ಆತನೆ (ಅದರ ಕರ್ತೃವಲ್ಲದಿದ್ದರೂ) ಅದರ ನಿರ್ಮಾಣ ಕಾರ್ಯದಲ್ಲಿ ಪ್ರಮುಖ ಪಾತ್ರವಹಿಸಿರುವ ಪ್ರೇರಕಶಕ್ತಿಯೂ ಕವಿಯ ಆಶ್ರಯದಾತನೂ ಆಗಿರುವುದರಿಂದಲೂ, ನೃಪತುಂಗನ ಮತ, ವ್ಯಕ್ತಿತ್ವ ಮುಂತಾದ ಸಂಗತಿಗಳ ವಿವೇಚನೆಯಿಂದ ಗ್ರಂಥದ ಕರ್ತೃತ್ವ ವಿಚಾರದ ಗೋಜನ್ನು ಬಿಡಿಸಿ, ಆ ಸಂಬಂಧದ ವಿವಾದವನ್ನು ಕೊನೆಮುಟ್ಟಿಸುವ ಮಾತು ಎಂದು ಹೇಳುವುದು ಸಾಹಸವಾಗಬಹುದಾದರೂ ನಾವು ವಹಿಸಿರುವ ಪಕ್ಷದ ನಿಲುವನ್ನು ಇನ್ನಷ್ಟು ಬಲಪಡಿಸುವ ನಮ್ಮ ಕೊನೆಯ ಮಾತನ್ನು ಜಿಜ್ಞಾಸುಗಳ ಮುಂದಿಡಲು ತಕ್ಕಮಟ್ಟಿನ ನೆರವು ದೊರೆಯುವುದರಿಂದಲೂ, ನೃಪತುಂಗನ ವಿಚಾರವನ್ನು ಸಂಕ್ಷೇಪವಾಗಿಯಾದರೂ ಪ್ರಸ್ತಾವಿಸಬೇಕಾದದ್ದು ಅಗತ್ಯ.

**ರಾಷ್ಟ್ರಕೂಟ ವಂಶ** : ರಾಷ್ಟ್ರಕೂಟವಂಶವು ಕರ್ನಾಟಕ ಮತ್ತು ಮಹಾರಾಷ್ಟ್ರ ಪ್ರದೇಶಗಳನ್ನು ಸುಮಾರು ಎರಡು ಶತಮಾನಗಳಿಗಿಂತ ಹೆಚ್ಚು ಕಾಲ ತನ್ನ ಆಳ್ವಿಕೆಯಲ್ಲಿ ಇಟ್ಟುಕೊಂಡಿದ್ದಿತು. ಈ ವಂಶದ ಹೆಸರಿನ ಬಗೆಗೆ ಬೇರೆ ಬೇರೆ

ಗೋವಿಂದನೇ ಉತ್ತರಾಧಿಕಾರಿಯಾಗಲು ಸಮರ್ಥನೆಂದು ಅರಿತಿದ್ದ ಧ್ರುವನು, ಅವನಿಗೆ ಯುವರಾಜ ಪಟ್ಟವನ್ನು ಕಟ್ಟಿದನು. ಧೃವನ ಕಾಲದಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯವು ರಾಜಕೀಯ ದೃಷ್ಟಿಯಿಂದ ಅಖಂಡ ಭಾರತದಲ್ಲಿ ಅತ್ಯಂತ ಪ್ರಬಲವಾಗಿತ್ತು. ಧ್ರುವನ ಮರಣಾನಂತರ, ಅವನ ಹಿರಿಯ ಮಗನಾದ ಕಂಭನ ಪ್ರತಿಭಟನೆಯನ್ನು ಯುವರಾಜ ಗೋವಿಂದನು ಎದುರಿಸಬೇಕಾಯಿತು. ಕಂಭನಿಗೆ ಗಂಗರಾಜರ ಬೆಂಬಲವಿತ್ತು; ಏಕೆಂದರೆ, ಅವನು ಗಂಗವಾಡಿಯಲ್ಲಿ ರಾಷ್ಟ್ರಕೂಟ ಪ್ರತಿನಿಧಿಯಾಗಿದ್ದನು. ಕಂಭನನ್ನೂ ಅವನ ಪಕ್ಷದವರನ್ನೂ ಅಡಗಿಸಿ, ಸಿಂಹಾಸನವನ್ನೇರುವುದು ಗೋವಿಂದನಿಗೆ ಕಷ್ಟವಾಗಲಿಲ್ಲ.[೩] ಪಟ್ಟಕ್ಕೆ ಬಂದ ಮೇಲೆ ಅವನು ಕಂಭನನ್ನು ಮತ್ತೆ ಗಂಗವಾಡಿಯ ಪ್ರತಿನಿಧಿಯಾಗಿ ನೇಮಿಸಿ, ಕೃತಘ್ನರಾಗಿ ವರ್ತಿಸಿದ್ದ ಸಾಮಂತರನ್ನು ಅವರವರ ರಾಜ್ಯಗಳಲ್ಲಿ ನೆಲೆಗೊಳಿಸಿದನು. ಈ ಮುನ್ನವೇ ಗೋವಿಂದನು ತನ್ನ ತಮ್ಮಂದಿರಾದ ಕರ್ಕ(**II**) ಇಂದ್ರ(**III**) ರನ್ನು ಗುರ್ಜರ (ಗುಜರಾತ್) ಪ್ರಾಂತದಲ್ಲಿ ನೆಲೆಗೊಳಿಸಿದ್ದನು. ರಾಷ್ಟ್ರಕೂಟವಂಶದ ಗುಜರಾತ್ ಶಾಖೆ ಅವರಿಂದ ಮೊದಲಾಯಿತು. ೩ನೆಯ ಗೋವಿಂದನೂ ತನ್ನ ತಂದೆಯಂತೆಯೇ ಉತ್ತರ ದಿಗ್ವಿಜಯಕ್ಕೆ ಹೊರಟು, ಹಿಮವತ್ಪರ್ವತದವರೆಗೂ ದಂಡಯಾತ್ರೆಗೈದು, ಮತ್ತೆ ತಲೆಯೆತ್ತಿದ್ದ ಗುರ್ಜರರಾಜನನ್ನು ಅಂಕೆಯಲ್ಲಿಟ್ಟು, ಕನೂಜದ ಚಕ್ರಾಯುಧನನ್ನೂ ವಂಗದೇಶದ ಧರ್ಮಪಾಲನನ್ನೂ ಬಾಯ್ಕೇಳಿಸಿ, ರಾಜ್ಯಕ್ಕೆ ಹಿಂತಿರುಗಿದನು. ಆಗ, ಮಾರ್ಗಮಧ್ಯದಲ್ಲಿ ನರ್ಮದಾ ತೀರದಲ್ಲಿ 'ಶ್ರೀಭುವನ' (ಶ್ರೀಭವನ?) ಎಂಬಲ್ಲಿ ಕೆಲಕಾಲ ತಂಗಿದ್ದನೆಂದೂ, ಅಲ್ಲಿಯೇ ಅವನ ಮಗನಾದ ನೃಪತುಂಗನು ಜನಿಸಿದುದಾಗಿಯೂ ಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ.[೪] ಅದು ಹೇಗಾದರೂ ಇರಲಿ. ಉತ್ತರ ದಿಗ್ವಿಜಯದಿಂದ ಹಿಂದಿರುಗುತ್ತಿದ್ದಾಗಲೇ, ದಕ್ಷಿಣದ ಅರಸರು ರಾಷ್ಟ್ರಕೂಟ ರಾಜ್ಯದ ಮೇಲೆ ಒಟ್ಟಾಗಿ ಆಕ್ರಮಣ ಮಾಡುವ ಹವಣಿಕೆ ಮಾಡಿದಂತೆ ಕಂಡು ಬರುತ್ತದೆ. ಇದನ್ನರಿತ ಗೋವಿಂದನು ತನ್ನ ದೃಷ್ಟಿಯನ್ನು ದಕ್ಷಿಣಕ್ಕೆ ತಿರುಗಿಸಿ, ದಕ್ಷಿಣಾಪಥದ ಮೇಲೆ ದಂಡೆತ್ತಿ ಬಂದನು. ಕೇರಳದ ರಾಜರು, ಚೋಳರು, ಪಲ್ಲವರು, ಪಾಂಡ್ಯರು – ಇವರೆಲ್ಲ ಗೋವಿಂದನ ಸಾರ್ವಭೌಮತ್ವವನ್ನು ಒಪ್ಪಿಕೊಂಡರು. ಸಿಂಹಳದ ದೊರೆಯೂ ಇವನಿಗೆ ಶರಣಾಗತನಾದನು. ಹೀಗೆ ೩ನೆಯ ಗೋವಿಂದನು ಅಖಂಡ ಭಾರತದ ಮೇಲೆ ತನ್ನ ಪ್ರತಾಪಾಂಕಿತವನ್ನು ಒತ್ತಿ, ಬಹುಮಟ್ಟಿಗೆ ಸಮಗ್ರ ಭಾರತದ ಪ್ರಥಮ ಸಾಮ್ರಾಟನೆನಿಸಿಕೊಂಡು, **ಜಗತ್ತುಂಗ, ಪ್ರಭೂತವರ್ಷ, ಶ್ರೀವಲ್ಲಭ, ಪೃಥ್ವೀವಲ್ಲಭ, ಕೀರ್ತಿನಾರಾಯಣ** ಎಂಬ ಬಿರುದುಗಳಿಂದ ಮೆರೆದನು.

ವಿದ್ವಾಂಸರು ಬೇರೆ ಬೇರೆ ನಿರ್ವಚನಗಳನ್ನು ನೀಡಿದ್ದಾರೆ,[೧] ರಾಷ್ಟ್ರಕೂಟರು ಕನ್ನಡಿಗರು ಎಂಬುದಿಷ್ಟನ್ನು ನಾವು ನೆನಪಿಟ್ಟರೆ ಸಾಕು. ಈ ವಂಶದ ಮೂಲ ಪುರುಷ ಯದು ಎಂದು ಶಾಸನದ ಉಲ್ಲೇಖವಿದ್ದರೂ ಮೊದಲ ದೊರೆ ದಂತಿದುರ್ಗ. (ಇವನ ಹೆಸರು ದಂತಿವರ್ಮ, ದಂತಿಗ ಎಂದೂ ಉಲ್ಲೇಖಗಳಿವೆ.)[೨] ಬಾದಾಮಿಯ ಚಾಲುಕ್ಯರ ಸಾಮಂತನಾಗಿದ್ದ ಅವನು ಕ್ರಿ.ಶ.೭೫೩ರಲ್ಲಿ ಚಾಲುಕ್ಯರನ್ನು ಸೋಲಿಸಿ, ತಾನೇ ಪ್ರಭುವಾದನು; 'ರಾಜಪರಮೇಶ್ವರ' ಎಂಬ ಸಾರ್ವಭೌಮಾಂಕಿತವನ್ನು ಇರಿಸಿಕೊಂಡನು. ಅವನಿಗೆ ಪೃಥ್ವೀವಲ್ಲಭ, ಖಡ್ಗಾವಲೋಕ ಎಂಬ ಬಿರುದುಗಳೂ ಇದ್ದುವು. (ಇವನಿಗೂ ಹಿಂದಿನ ರಾಷ್ಟ್ರಕೂಟ ಸಾಮಂತರಾಜರ ಹೆಸರುಗಳನ್ನು ರಾಷ್ಟ್ರಕೂಟ ವಂಶವೃಕ್ಷದಲ್ಲಿ ಕೊಟ್ಟಿದೆ. ನೋಡಿ: ಅನುಬಂಧ). ಅವನು ತಾನು ಸಂಪಾದಿಸಿದ ಹೊಸ ರಾಜ್ಯವನ್ನು ಉತ್ತರದಲ್ಲಿ ಮಾಳವದವರೆಗೂ ವಿಸ್ತರಿಸಿ, ಕ್ರಿ.ಶ.೭೫೮ರಲ್ಲಿ ಮರಣ ಹೊಂದಿದನು. ದಂತಿದುರ್ಗನ ತರುವಾಯ ಸಿಂಹಾಸನವನ್ನೇರಿದ (ಅವನ ಚಿಕ್ಕಪ್ಪ) ೧ನೇಯ ಕೃಷ್ಣನ ಕಾಲದಲ್ಲಿ (ಕ್ರಿ.ಶ.೭೫೮–೭೭೨) ರಾಷ್ಟ್ರಕೂಟ ಸಾಮ್ರಾಜ್ಯವು ದಕ್ಷಿಣದಲ್ಲಿ ಗಂಗವಾಡಿಯನ್ನು ಬೇಧಿಸಿ, ವಿಸ್ತಾರಗೊಂಡಿತು. ರಾಜ್ಯವಿಸ್ತರಣೆಯ ಕಾರ್ಯದಲ್ಲಿ ಯುವರಾಜ ಗೋವಿಂದನ ನೆರವೂ ಇದ್ದಿತು. ಕೃಷ್ಣನ್ಜ೧೦್ಬ = ಹೆಸರು ನಿಂತಿರುವುದು ಅವನು ಎಲ್ಲೋರದಲ್ಲಿ ಅಖಂಡ ಶಿಲೆಯಲ್ಲಿ ಕೊರೆಯಿಸಿ ಕಟ್ಟಿರುವ **ಶಿವದೇವಾಲಯ**ದಿಂದ. (ಕೃಷ್ಣನಿಗೆ **ಅಕಾಲವರ್ಷ, ಶುಭತುಂಗ** ಎಂಬ ಬಿರುದುಗಳಿದ್ದವು.) ತಂದೆಯ ಕಾಲದಲ್ಲಿ ಪರಾಕ್ರಮಿಯೆನಿಸಿದ್ದ ಯುವರಾಜ ಗೋವಿಂದನು (೨ನೆಯ ಗೋವಿಂದ: ಕ್ರಿ.ಶ.೭೭೨–೭೭೯) ಪಟ್ಟಕ್ಕೆ ಬಂದಮೇಲೆ ವಿಷಯಲೋಲುಪನಾಗಿ ರಾಜ್ಯಭಾರವಿಚಾರಗಳಲ್ಲಿ ಉದಾಸೀನನಾಗಿದ್ದನು. ಗೋವಿಂದನಿಗೂ ಅವನ ತಮ್ಮ ಧ್ರುವನಿಗೂ ಯಾದವೀ ಕಲಹ ನಡೆದು, ಗಂಗರಸರು ಗೋವಿಂದನ ಪಕ್ಷವನ್ನು ವಹಿಸಿದ್ದರು. ಇದೇ ನೆವವಾಗಿ, ಪ್ರಬಲನಾದ ಧ್ರುವನು ಸಿಂಹಾಸನವನ್ನು ಆಕ್ರಮಿಸಿಕೊಂಡು ಗಂಗರಾಜ್ಯವನ್ನೆಲ್ಲ ಸ್ವಾಧೀನಪಡಿಸಿಕೊಂಡನು. ಹೀಗೆ, **ಧ್ರುವನ ಕಾಲದಲ್ಲಿ** (ಕ್ರಿ.ಶ.೭೭೯–೭೯೩), **ರಾಷ್ಟ್ರಕೂಟ ಸಾಮ್ರಾಜ್ಯವು ದಕ್ಷಿಣದಲ್ಲಿ ಕಾವೇರಿಯವರೆಗೂ ಹಬ್ಬಿತು**. ಇಷ್ಟರಿಂದ ತೃಪ್ತನಾಗದೆ, ವೆಂಗಿಯ ಚಾಲುಕ್ಯರನ್ನೂ, ಪಲ್ಲವರನ್ನೂ ಸೋಲಿಸಿ, ಉತ್ತರ ದಿಗ್ವಿಜಯದತ್ತ ದೃಷ್ಟಿ ಹರಿಸಿದನು. ಉತ್ತರದಲ್ಲಿ ಗುಜರಾತಿನ ವತ್ಸರಾಜನನ್ನೂ ಗೌಡದೇಶದ (ಬಂಗಾಳದ) ಧರ್ಮಪಾಲನನ್ನೂ ಸೋಲಿಸಿದನು. (ಧ್ರುವನಿಗೆ **ನಿರುಪಮ, ಧಾರಾವರ್ಷ, ಕಲಿವಲ್ಲಭ** ಎಂಬ ಬಿರುದುಗಳಿದ್ದವು). ತನ್ನ ಮಕ್ಕಳಲ್ಲೆಲ್ಲಾ

ಉಪಯೋಗಿಸಿಕೊಂಡರು. ಜಗತ್ತುಂಗ ಗೋವಿಂದನೊಡನೆ ಅನೇಕವೇಳೆ ಹೋರಾಡಿ ಸೋತಿದ್ದ ವೆಂಗಿಯ ಅಥವಾ ಮೂಡಣ ಚಾಲುಕ್ಯವಂಶದ ಎರಡನೆಯ ವಿಜಯಾದಿತ್ಯನು (ಸು.ಕ್ರಿ.ಶ.೭೯೩–೮೪೧) ಗೋವಿಂದನು 'ಅಸ್ತಂಗತ'ನಾದ ಕೂಡಲೆ, ರಾಷ್ಟ್ರಕೂಟ ರಾಜಧಾನಿಯುನ್ನಾಕ್ರಮಿಸಿ, 'ರಾಜಾಧಿರಾಜ', 'ರಾಜಪರಮೇಶ್ವರ' ಮುಂತಾದ ರಾಷ್ಟ್ರಕೂಟ ಪರಮಾಧಿಕಾರ ಸೂಚಕ ಬಿರುದುಗಳನ್ನು ತಾನು ವಹಿಸಿಕೊಂಡನೆಂದು ಚರಿತ್ರಕಾರರು ತಿಳಿಸಿದ್ದಾರೆ.[೫] ವಿಜಯಾದಿತ್ಯನ ಈ ದ್ರೋಹಕಾರ್ಯವಲ್ಲದೆ, ಇನ್ನೂ ಅನೇಕ ಆಘಾತಗಳನ್ನು ನೃಪತುಂಗನು ಎದುರಿಸಬೇಕಾಗಿ ಬಂದದ್ದನ್ನು ಕೆಲವು ಶಾಸನಗಳು ಉಲ್ಲೇಖಿಸಿವೆ. ಸ್ವಭಾವತಃ ಶಾಂತಿಪ್ರಿಯನಾದ ನೃಪತುಂಗನು ಏಕಕಾಲದಲ್ಲಿ 'ಒಳಹಗೆ'ಗಳನ್ನೂ 'ಹೊರಹಗೆ'ಗಳನ್ನೂ ಎದುರಿಸಬೇಕಾಗಿ ಬಂದು, ಯುದ್ಧಗಳು ಅನಿವಾರ್ಯವಾದುವು. ಸಾಮಂತರು, ಮಂತ್ರಿಗಳು, ಬಾಂಧವರು ಮುಂತಾದವರೆಲ್ಲ ವಿರೋಧಿಗಳಾದಂತೆ ಕಾಣುತ್ತದೆ; ಇತ್ತ ದಕ್ಷಿಣದಲ್ಲಿ, ಸಾಮಂತರಾಗಿದ್ದ ಗಂಗರು ಮತ್ತೆ ತಲೆಯೆತ್ತಿಕೊಂಡು ರಾಷ್ಟ್ರಕೂಟರ ಪ್ರಬಲವೈರಿಗಳಾಗಿದ್ದರು. ನೃಪತುಂಗನು ಸುಮಾರು ೨೦ ವರ್ಷಕಾಲ ಒಂದೇ ಸಮನಾಗಿ ಅವರೊಂದಿಗೆ ಹೋರಾಡಬೇಕಾಯಿತು. ಸಾಲದುದಕ್ಕೆ, ಅವರು ಅವನ ಏಕಮಾತ್ರ ಪುತ್ರ ಯುವರಾಜ ಕೃಷ್ಣನನ್ನು ಪ್ರಲೋಭನಗೊಳಿಸಿ ತಮ್ಮ ಬಲೆಗೆ ಹಾಕಿಕೊಂಡಿದ್ದರು. ದಂಡನಾಯಕ ವೀರಬಂಕೆಯನು ಗಂಗರ ಮೇಲೆ ದಂಡೆತ್ತಿ ಹೋಗಿ ಕಡೆಗೊಮ್ಮೆ ಅವರನ್ನು ಪರಾಭವಗೊಳಿಸಿ, ದಕ್ಷಿಣದಲ್ಲಿ ನೃಪತುಂಗನ ಸಾರ್ವಭೌಮತ್ವ ಮತ್ತೆ ನೆಲೆಗೊಳ್ಳಲು ವಿಶೇಷವಾಗಿ ನೆರವಾದನು. ನೃಪತುಂಗನು ತನ್ನ ಇಬ್ಬರು ಪುತ್ರಿಯರಲ್ಲಿ (ಚಂದ್ರೋಬಲಬ್ಬೆ ಮತ್ತು ಶಂಖಾದೇವಿ) ಹಿರಿಯಳನ್ನು ಗಂಗರಾಜಕುಮಾರ ೧ನೆಯ ಬೂತುಗನಿಗೆ ವಿವಾಹ ಮಾಡಿಕೊಟ್ಟು, ಗಂಗರೊಂದಿಗೆ ಮೈತ್ರಿಯನ್ನು ಬಲಪಡಿಸಿಕೊಂಡನು. (ಕಿರಿಯ ಮಗಳನ್ನು ಪಲ್ಲವ ರಾಜಕುಮಾರನಿಗೆ ಮದುವೆ ಮಾಡಿಕೊಟ್ಟಂತೆ ತಿಳಿದುಬರುತ್ತದೆ). ಅತ್ತ ಉತ್ತರದಲ್ಲಿ ವಂಗದೇಶ ಮತ್ತು ಮಗಧರಾಜ್ಯಗಳೊಂದಿಗೆ ಘರ್ಷಣೆಯೊದಗಿತು. ಈ ಎಲ್ಲ ಕಾಳಗಗಳಲ್ಲಿ ವೀರ ಬಂಕೆಯನ ನೆರವು ನೃಪತುಂಗನಿಗೆ ವಿಶೇಷವಾಗಿತ್ತು; ಜೊತೆಗೆ, ಗುಜರಾತಿನಲ್ಲಿ ರಾಷ್ಟ್ರಕೂಟ ಪ್ರತಿನಿಧಿಯಾಗಿ ಆಳುತ್ತಿದ್ದ ಅವನ ಚಿಕ್ಕಪ್ಪ ಕರ್ಕನ ನೆರವೂ ಇದ್ದಿತು. ಅಂತೂ, ನೃಪತುಂಗನು ಸಿಂಹಾಸನವೇರಿದ ಮೇಲೆ ತಂದೆ ಗೋವಿಂದನು ಕಟ್ಟಿದ್ದ ವಿಸ್ತಾರವಾದ ರಾಜ್ಯವನ್ನು – ಬೆಳೆಸುವ ಮಾತಿರಲಿ – ಉಳಿಸಿಕೊಳ್ಳಲು ಬಹಳ ಪ್ರಯಾಸಪಟ್ಟಂತೆ ಕಂಡುಬರುತ್ತದೆ; ರಾಜ್ಯದಲ್ಲಿ ಶಾಂತಿ ನೆಲೆಗೊಂಡ ಮೇಲೆ, ಪ್ರಜೆಗಳ ಮನಸ್ಸನ್ನು ಒಲಿಸಿಕೊಂಡು ರಾಜ್ಯವನ್ನು

ಇವನ ಆಳ್ವಿಕೆಯಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯ ರಾಜಕೀಯ ದೃಷ್ಟಿಯಿಂದ ತನ್ನ ವೈಭವದ ಶಿಖರವನ್ನು ಮುಟ್ಟಿತು.

**ನೃಪತುಂಗನ ಸಾಧನೆ, ವ್ಯಕ್ತಿತ್ವ :** ನೃಪತುಂಗನು ೩ನೆಯ ಗೋವಿಂದನ ಏಕಮಾತ್ರ ಪುತ್ರ. ಅವನಿಗೆ ತಂದೆ ಇಟ್ಟ ಹೆಸರು **ಶರ್ವ** (ಕ್ರಿ.ಶ. ೮೬೭ ರ ಶಾಸನವೊಂದರಲ್ಲಿ 'ಶರ್ವ ಎಂಬ ಹೆಸರೇ ಕಂಡುಬರುತ್ತದೆ). ಅವನು ಪಟ್ಟಕ್ಕೆ ಬಂದಾಗ **ಅಮೋಘವರ್ಷ** ಎಂಬ ಹೆಸರನ್ನು ತಳೆದು, ತಂದೆ 'ಜಗತ್ತುಂಗ'ನೆಂದು ಪ್ರಸಿದ್ಧನಾಗಿದ್ದಂತೆ ಇವನು **ನೃಪತುಂಗ**ನೆಂದು ಪ್ರಸಿದ್ಧನಾದನು. ಸಮಕಾಲೀನ ಶಾಸನಗಳಲ್ಲಿ **ಅತಿಶಯಧವಳ, ಲಕ್ಷ್ಮೀವಲ್ಲಭ,** ಮಹಾರಾಜ ಶರ್ವ, ನೃಪತುಂಗ, **ಪೃಥ್ವೀವಲ್ಲಭ** ಎಂದೂ, ತರುವಾಯದ ಶಾಸನಗಳಲ್ಲಿ ಮಹಾರಾಜಷಂಡ, **ಶ್ರೀವಲ್ಲಭ, ವೀರನಾರಾಯಣ** ಎಂದೂ ನೃಪತುಂಗನ ಬಿರುದುಗಳು ಉಲ್ಲೇಖಗೊಂಡಿವೆ. ಕವಿರಾಜಮಾರ್ಗದಲ್ಲಿ ಕಂಡು ಬರುವ ಬಿರುದುಗಳೆಂದರೆ – **ನೀತಿನಿರಂತರ, ಕೃತಕೃತ್ಯಮಲ್ಲ (ವಲ್ಲಭ),** ವೀರನಾರಾಯಣ, **ನಿತ್ಯಮಲ್ಲವಲ್ಲಭ, ನರಲೋಕಚಂದ್ರ.** ಕವಿರಾಜಮಾರ್ಗದಲ್ಲಿ ಮೇಲಿಂದ ಮೇಲೆ ಉಕ್ತವಾಗಿರುವವು ಅತಿಶಯಧವಳ, ನೃಪತುಂಗ, ಅಮೋಘವರ್ಷ ಎಂಬ ಬಿರುದುಗಳು. ರಾಷ್ಟ್ರಕೂಟ ವಂಶದ ದೊರೆಗಳಲ್ಲಿ ಅನೇಕ ಮಂದಿಗೆ ಅಮೋಘವರ್ಷ ಎಂಬ ಬಿರುದಿರುವುದೂ, ನೃಪತುಂಗನೊಬ್ಬನಿಗೆ ಮಾತ್ರ ಅತಿಶಯಧವಳ ಎಂಬ ಬಿರುದಿರುವುದೂ ಗಮನಾರ್ಹ. (ನೋಡಿ ಅನುಬಂಧ: ರಾಷ್ಟ್ರಕೂಟ ವಂಶಾವಳಿ) ಈ ಬಿರುದುಗಳಲ್ಲಿ ಹಲವನ್ನು ನೃಪತುಂಗನು ರಾಜ್ಯಭಾರವಹಿಸಿಕೊಂಡು ಬಹುಕಾಲವಾದ ಮೇಲೆ ತಳೆದಿರಬೇಕು; ಏಕೆಂದರೆ, ರಾಜ್ಯವನ್ನು ರೂಢಿಸಿಕೊಳ್ಳುವುದಕ್ಕೇ ಅವನಿಗೆ ಬಹುಕಾಲ ಹಿಡಿಯಿತು.

ತಂದೆ ಗೋವಿಂದನು ಅವಸಾನಹೊಂದಿದ ಮೇಲೆ ಕ್ರಿ.ಶ.೮೧೪ ರಲ್ಲಿ ನೃಪತುಂಗನು ಸಿಂಹಾಸನವನ್ನೇರಿ, ಸುಮಾರು ೬೫ ವರ್ಷಗಳಷ್ಟು ದೀರ್ಘಕಾಲ ರಾಜ್ಯಭಾರ ಮಾಡಿದನು. (ಗೋವಿಂದನ ಅವಸಾನ ವಿಚಾರವು ಕ.ರಾ.ಮಾರ್ಗದ ಒಂದು ಪದ್ಯದಲ್ಲಿ ಸೂಚಿತವಾಗಿದೆಯೆಂದು ಊಹಿಸಲಾಗಿದೆ. ನೋಡಿ: III–೩೦ ಟಿಪ್ಪಣಿ; ಪು.೨೬೮). ನೃಪತುಂಗನು ರಾಜ್ಯಾಧಿಕಾರವನ್ನು ವಹಿಸಿಕೊಂಡ ಮೇಲೆ, ತನ್ನ ತಂದೆ ಕಟ್ಟಿದ ವಿಸ್ತಾರವಾದ ರಾಜ್ಯವನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಅವನಿಗೆ ಸಹಜವಾಗಿಯೆ ಕಷ್ಟವಾಗಿ ಪರಿಣಮಿಸಿತು. ಪಟ್ಟಕ್ಕೆ ಬಂದಾಗ ನೃಪತುಂಗನು ಸುಮಾರು ೧೫–೧೬ರ ಹರೆಯದವನು. ಈ ಸುಸಂಧಿಯನ್ನು ರಾಜ್ಯದ ಪೂರ್ವವೈರಿಗಳು

ಈ ಎರಡು ಗ್ರಂಥಗಳಲ್ಲದೆ, ನೃಪತುಂಗನ ಕಾಲದಲ್ಲಿ ಬೇರೆಯ ಗ್ರಂಥಗಳೂ ರಚಿತವಾಗಿದ್ದವು ಎನ್ನುವುದಕ್ಕೆ ಸ್ಪಷ್ಟಸಾಕ್ಷ್ಯಗಳು ಯಾವುವೂ ದೊರೆತಿಲ್ಲ. 'ಅಮೋಘವರ್ಷ' ರಚಿತ ಎಂದಿರುವ 'ಪ್ರಶ್ನೋತ್ತರ ಮಾಲಿಕೆ' ಎಂಬ ಚಿಕ್ಕ ಸಂಸ್ಕೃತ ಗ್ರಂಥವನ್ನು ಬಿಟ್ಟರೆ, ಭಟ್ಟಾಕಳಂಕನ 'ಶಬ್ದಾನುಶಾಸನ'ದಲ್ಲಿ ಕವಿರಾಜಮಾರ್ಗವನ್ನು 'ನೃಪತುಂಗಗ್ರಂಥ' ಎಂದಿರುವ ಉಲ್ಲೇಖವನ್ನು ಹೊರತುಪಡಿಸಿದರೆ, ಶಾಸನಗಳಲ್ಲಿಯಾಗಲಿ, ನೃಪತುಂಗನಿಗಿಂತ ಈಚಿನ ಗ್ರಂಥಸ್ಥ ಉಲ್ಲೇಖಗಳಲ್ಲಿ ನಿರೂಪಣೆಯಾಗಿರುವ ಅವನ ಶೌರ್ಯಾದಿ ಗುಣವರ್ಣನೆಗಳಲ್ಲಿ ಆಗಲಿ (ಟಿಪ್ಪಣಿ ೭) ಅವನ ಪಾಂಡಿತ್ಯ ಕವಿತ್ವಗಳ ಪ್ರಸ್ತಾವವಿಲ್ಲ. ನೃಪತುಂಗನು ಸ್ವತಃ ವಿದ್ವಾಂಸನೂ ವಿದ್ವಜ್ಜನರ ಹಾಗೂ ಕವಿಗಳ ಆಶ್ರಯದಾತನೂ ಆಗಿದ್ದನೆಂಬುದಕ್ಕೆ ಕವಿರಾಜಮಾರ್ಗವೊಂದೇ ಬಲವಾದ ಆಧಾರ. (ಕವಿರಾಜಮಾರ್ಗದಲ್ಲಿ ಮೂಡಿರುವ ನೃಪತುಂಗ ವ್ಯಕ್ತಿತ್ವ ಚಿತ್ರಣ ಗ್ರಂಥಕರ್ತೃತ್ವ ನಿರ್ಣಯಕ್ಕೆ ಹೇಗೆ ನೆರವಾಗಿದೆ ಎಂಬ ಅಂಶವನ್ನು ಆ ಪ್ರಕರಣದಲ್ಲಿ ಮತ್ತೆ ಗಮನಿಸಲಾಗುವುದು.)

**ನೃಪತುಂಗನ ಮತ** : ನೃಪತುಂಗನ ಮತವು ಅವನ ವ್ಯಕ್ತಿತ್ವದ ಒಂದು ಭಾಗವೇ ಆಗಿದೆ. ಕವಿರಾಜಮಾರ್ಗ ಕರ್ತೃತ್ವ ನಿರ್ಣಯ ವಿಚಾರದಲ್ಲಿ ಅದಕ್ಕೆ ಪ್ರಾಮುಖ್ಯವಿರುವುದರಿಂದ ಆ ಪ್ರಕರಣವನ್ನು ವಿವೇಚಿಸುವ ಮುನ್ನ ನೃಪತುಂಗನ ಮತ ಯಾವುದೆಂಬುದನ್ನು ಖಚಿತಪಡಿಸಿಕೊಳ್ಳಬೇಕಾದದ್ದು ಅಗತ್ಯ. ಅವನು ವಿಷ್ಣುಭಕ್ತನಾದ ವೈದಿಕಮತಾನುಯಾಯಿಯೆಂದೂ ಕೆಲವು ವಿದ್ವಾಂಸರೂ, ಜೈನಮತಾವಲಂಬಿಯೆಂದು ಇನ್ನು ಕೆಲವರೂ ವಾದಿಸಿದ್ದಾರೆ. ಅವನ ಮತವನ್ನು ನಿರ್ಣಯಿಸುವಲ್ಲಿ ಗಮನಿಸಬೇಕಾದ ಮುಖ್ಯ ಸಾಕ್ಷ್ಯಗಳೆಂದರೆ: (೧)ಶಾಸನಗಳು (೨)ಕವಿರಾಜಮಾರ್ಗ (೩)ನೃಪತುಂಗನು ರಚಿಸಿದ್ದೆಂದು ಹೇಳಲಾದ 'ಪ್ರಶ್ನೋತ್ತರ ಮಾಲಿಕಾ' ಮತ್ತು ಇತರ ಜೈನಧರ್ಮಗ್ರಂಥಗಳು.

(೧) ಶಾಸನಗಳು: ಗ್ರಂಥಾಧಾರಗಳು ಲಿಪಿಕಾರಜನ್ಯಸ್ಖಾಲಿತ್ಯಗಳಿಂದಲೂ ಪ್ರಕ್ಷೇಪಾದಿ ಇತರ ಕಾರಣಗಳಿಂದಲೂ ಎಷ್ಟೋ ವೇಳೆ ಅವಿಶ್ವಾಸನೀಯವಾಗುತ್ತವೆ. ಶಾಸನಗಳು ಹಾಗಲ್ಲ; ಶಾಶ್ವತನಾಗಿರಬೇಕೆಂಬ ಉದ್ದೇಶದಿಂದಲೇ ಅವು ಲೇಖನಗೊಳ್ಳತಕ್ಕವು; ಯಾವ ಮಾರ್ಪಾಟಿಗೂ ಒಳಗಾಗದವು. ಆದ್ದರಿಂದ ಪ್ರಬಲ ಪ್ರಮಾಣಗಳಾದ ಶಾಸನಾಧಾರಗಳು ಗ್ರಂಥಾಧಾರಗಳಿಗಿಂತ ಹೆಚ್ಚು ವಿಶ್ವಾಸಾರ್ಹವಾದವು.

ನೃಪತುಂಗನು ಬೇರೆ ಬೇರೆ ಮತದವರಿಗೆ ಬಿಟ್ಟ ದಾನ ಶಾಸನಗಳು ದೊರಕಿವೆ.

ಸುಭದ್ರಗೊಳಿಸುವ ಕಾರ್ಯಕ್ಕೆ ಅವನು ಮನಸ್ಸು ಕೊಟ್ಟಿರಬೇಕು. ನೃಪತುಂಗನ ಆಳ್ವಿಕೆಯ ಮುಖ್ಯ ಚಾರಿತ್ರಿಕ ಘಟನೆಗಳನ್ನು ಸಂಕ್ಷೇಪವಾಗಿಯಾದರೂ ಇಲ್ಲಿ ಉಲ್ಲೇಖಿಸಿರುವ ಉದ್ದೇಶ ಇಷ್ಟೆ: ಕವಿರಾಜಮಾರ್ಗದ ಹಲವಾರು ಲಕ್ಷ್ಯಪದ್ಯಗಳಲ್ಲಿ, ಕೆಲವು, ಆ ಘಟನೆಗಳ ಹಿನ್ನೆಲೆಯನ್ನು ಪ್ರತಿಧ್ವನಿಸುವಂತಿರುವ 'ರಾಜಕೀಯ ಧ್ವನಿ'ಯನ್ನು ಒಳಗೊಂಡಿವೆ; ಇನ್ನು ಕೆಲವು, ಒಳಹೊರಗಿನ 'ಅರಾತಿಸಮಿತಿ'ಯನ್ನು ಕೊಂದಮೇಲೆ ರಾಜ್ಯದ ಆಡಳಿತಕ್ಕೂ, ಕಾವ್ಯ, ಶಾಸ್ತ್ರ, ಧರ್ಮ ಮುಂತಾದ ಶಾಂತಿಕಾಲದ ಸಾಂಸ್ಕೃತಿಕ ಕಾರ್ಯಕ್ರಮಗಳಿಗೂ ಗಮನವೀಯುತ್ತಿದ್ದ ಉದಾರ ನೀತಿಯ ನೃಪತುಂಗನ ವ್ಯಕ್ತಿತ್ವವನ್ನು ಬಣ್ಣಿಸುವಂತಿವೆ.[೬] ೩ನೆಯ ಪರಿಚ್ಛೇದದ ೧೮೦–೧೮೧ನೆಯ ಲಕ್ಷ್ಯ ಪದ್ಯಗಳಲ್ಲಿ 'ಪ್ರಣತಾರಿ'ಯಾದ ರಾಜ್ಯದಲ್ಲಿ ಸುಪ್ರತಿಷ್ಠಿತನಾಗಿ ಸಿಂಹಾಸನಾರೂಢನಾದ 'ವೀರನಾರಾಯಣ' ನೃಪತುಂಗನ ವರ್ಣನೆಯಿರುವುದು ನಿಸ್ಸಂದಿಗ್ಧ. ಕವಿರಾಜಮಾರ್ಗದಲ್ಲಿ ಉಕ್ತವಾಗಿರುವ ಬಿರುದುಗಳೆಲ್ಲ ಅವನ ಈ ವ್ಯಕ್ತಿತ್ವದ ರೂಪರೇಖೆಯನ್ನೇ ನಿಚ್ಚಳವಾಗಿ ಚಿತ್ರಿಸುತ್ತಿವೆ. ಕವಿರಾಜಮಾರ್ಗವು 'ನೃಪತುಂಗದೇವಾನುಮತ'ವಾಗಿದ್ದು ಅವನ ಆಳ್ವಿಕೆಯಲ್ಲಿ ರಚಿತವಾಗಿರುವುದು ಸುನಿಶ್ಚಿತವಷ್ಟೆ. ರಾಜ್ಯವು ಯುದ್ಧಜ್ವಾಲೆಗೂ ಅಂತಃಕ್ಷೋಭೆಗೂ ಸಿಲುಕಿರುವ ಕಾಲದಲ್ಲಿ ರಾಜನು ಒಂದು ಲಕ್ಷಣಗ್ರಂಥ ರಚನೆಯ ಕಡೆಗೆ ಗಮನ ಹರಿಸಿದ್ದಾನೆ ಎಂಬುದು ಅಸಂಭವ ಎಂಬ ಮಾತು ಹಾಗಿರಲಿ, ಹಾಸ್ಯಾಸ್ಪದ ಎನಿಸೀತು. ನೃಪತುಂಗನಿಗಿಂತ ಬಹು ಈಚಿನ ಗ್ರಂಥಗಳಾದ 'ಶಬ್ದಮಣಿದರ್ಪಣ' ಮತ್ತು 'ಕಾವ್ಯಾವಲೋಕನಗಳಲ್ಲಿ ಪ್ರಯುಕ್ತಗಳಾದ ಲಕ್ಷ್ಯಪದ್ಯಗಳೂ 'ಕೈದುವೊತ್ತರ ದೇವ' ನೃಪತುಂಗನ ಪರಾಕ್ರಮದ ಚಿತ್ರವನ್ನೇ ಮುಂದಿಡುತ್ತಿವೆ.[೭] ನೃಪತುಂಗನ ಆಸ್ಥಾನದ ಮಹಾಪಂಡಿತನೆನಿಸಿದ್ದ ವೈಯಾಕರಣಿ ಶಾಕಟಾಯನನು ತನ್ನ ಸಂಸ್ಕೃತ ವ್ಯಾಕರಣಕ್ಕೆ ಆಶ್ರಯದಾತನಾದ ಅಮೋಘವರ್ಷನ ಅಂಕಿತವಿಟ್ಟು ಬರೆದ 'ಅಮೋಘವೃತ್ತಿ'ಯಲ್ಲಿ ಅನದ್ಯತನ ಭೂತ ಕಾಲಕ್ಕೆ ದೃಷ್ಟಾಂತವನ್ನುಕೊಡುವಾಗ, ಪಾಂಡ್ಯರನ್ನು ಗೆದ್ದು ಅವರನ್ನು ಭಸ್ಮ ಮಾಡಿದನೆಂದು ಬರೆದಿದ್ದಾನೆ.[೮] ಹೀಗೆ, ಅಮೋಘವರ್ಷ ನೃಪತುಂಗನು ಅಪ್ರತಿಹತ ಪರಾಕ್ರಮಿ ಎನಿಸಿದ ಮೇಲೆಯೇ 'ವೀರನಾರಾಯಣ'ನೆಂದು ಕವಿ ಕೃತಿಗಳಲ್ಲಿಯೂ ಶಾಸನಗಳಲ್ಲಿಯೂ ಕೀರ್ತಿತನಾಗಿರಬೇಕು. ಕ್ರಿ.ಶ.೮೧೪ರಲ್ಲಿ ಪಟ್ಟಕ್ಕೆ ಬಂದ ನೃಪತುಂಗನು ಈ ಕೀರ್ತಿಗೆ ಭಾಜನನಾಗಲು ಕನಿಷ್ಠ ಪಕ್ಷ ೨೫–೩೦ ವರ್ಷಗಳಾದರೂ ಸಂದಿರಬೇಕು ಎಂದಮೇಲೆ, **ಕವಿರಾಜಮಾರ್ಗವು ಕ್ರಿ.ಶ. ೮೪೦–೮೭೭ರ ನಡುವಣ ಅವಧಿಯಲ್ಲಿ, ಕ್ರಿ.ಶ.೮೬೦ರ ಸುಮಾರಿನಲ್ಲಿ, ರಚಿತವಾಗಿರಬೇಕು** ಎಂದು ಊಹಿಸಬಹುದು. ೬.

ಬಂಕೆಯನೇ ನಿರ್ಮಾಪಿಸಿದ ಜಿನಾಲಯದ ಪರಿಪಾಲನೆಗೆಂದು ದೇವೇಂದ್ರ ಮುನೀಂದ್ರನಿಗೆ ದತ್ತಿ ಬಿಟ್ಟ ಉಲ್ಲೇಖವಿದೆ; ಈವೊಂದು ಶಾಸನದ ಆದಿಯಲ್ಲಿ ಮಾತ್ರ ಜಿನಸ್ತುತಿಯಿದೆ.[೯] ಈ ಶಾಸನಾಧಾರದಿಂದ ನೃಪತುಂಗನನ್ನು ಜೈನನೆನ್ನಲಾಗದು. ಏಕೆಂದರೆ, ಕ್ರಿ.ಶ.೮೭೧ರ ಸಂಜನ ಶಾಸನದಲ್ಲಿ ವೈದಿಕ ಬ್ರಾಹ್ಮಣರಿಗೆ ಗ್ರಾಮದಾನ ಮಾಡಿದ್ದರ ಉಲ್ಲೇಖವಿದೆ.[೧೦] ಈ ದಾನಗಳಿಂದ ಮತವನ್ನು ನಿರ್ಣಯಿಸುವುದಾದರೆ, ನೃಪತುಂಗನು ಜೈನನಾಗಿದ್ದು ೧೦ ವರ್ಷಗಳಾದ ಮೇಲೆ ವೈದಿಕ ಮತಾನುಯಾಯಿಯಾದನೆನ್ನಬೇಕಾಗುತ್ತದೆ! ಜಿನಾಲಯಕ್ಕೆ ದತ್ತಿಕೊಟ್ಟ ಮೇಲಿನ ಕ್ರಿ.ಶ.೮೬೬ರ ಶಾಸನದಲ್ಲಿನ ಗರುಡಲಾಂಛನ, ಹರಿಹರಸ್ತುತಿ ಇತ್ಯಾದಿ ಅಂಶಗಳು ನೃಪತುಂಗನ ವೈಷ್ಣವ ನಿಷ್ಠೆಯನ್ನೇ ಸಾರಿಹೇಳುತ್ತಿವೆ.

(೨) ಕವಿರಾಜಮಾರ್ಗ : ನೃಪತುಂಗನ ಮತವನ್ನು ಗೊತ್ತುಹಿಡಿಯುವಲ್ಲಿ, ಶಾಸನಗಳನ್ನು ಬಿಟ್ಟರೆ, ಕವಿರಾಜಮಾರ್ಗವು ಅತ್ಯಂತ ಪ್ರಬಲವಾದ ಆಧಾರ. ಪ್ರಥಮ ಪರಿಚ್ಛೇದದ ೧–೨ ನೆಯ ಪದ್ಯಗಳು ವಿಷ್ಣುಸ್ತುತಿಯ ಪದ್ಯಗಳೆಂಬಲ್ಲಿ ಸಂದೇಹವಿಲ್ಲವಷ್ಟೆ. ಮೂಲದಿಂದ ಭಿನ್ನವಾದ ಕೆಲವು ಲಕ್ಷ್ಯಪದ್ಯಗಳು ವಿಷ್ಣುಪರವೋ, ಲಕ್ಷ್ಮೀಪರವೋ ಆಗಿವೆ. (ಉದಾ: **III**–೮೧; ೧೬೧, ೧೬೨) ಕವಿರಾಜಮಾರ್ಗದಲ್ಲಿ ಜಿನಸ್ತುತಿಯ ಪದ್ಯವೂ, ಜೈನಧರ್ಮಪರವಾದ ಉಲ್ಲೇಖಗಳೂ ಗ್ರಂಥಕರ್ತನ (ಅರ್ಥಾತ್ ನೃಪತುಂಗನ) ಮತಧರ್ಮವನ್ನು ಸೂಚಿಸುತ್ತವೆ ಎಂದು ಕೆ.ಬಿ.ಪಾಠಕರು ಅಭಿಪ್ರಾಯಪಡುತ್ತಾರೆ. (**I**-೯೧, **III**–೧೮) (**"These two verses reflect the religious opinions of the author"**) "ಸಕಲ ಧರ್ಮದಲ್ಲಿ ಸಮದೃಷ್ಟಿಯುಳ್ಳ ಈತನು ಅದನ್ನು ರಚಿಸಿರುವುದರಿಂದ, ಅದರಿಂದಲೇ ಈತ ಜೈನನೆನ್ನಲಾಗದು...... ಅಲ್ಲದೆ, ಇಷ್ಟದೇವತೆಯನ್ನು ಸ್ತುತಿಸುವುದು ಗ್ರಂಥಾವತಾರದಲ್ಲಿಯೇ ಹೊರತು, ದೃಷ್ಟಾಂತ ಪದ್ಯಗಳಲ್ಲಿಯಲ್ಲ" ಎಂಬ ಗೋವಿಂದ ಪೈ ಅವರ ಅಭಿಪ್ರಾಯವನ್ನೂ ಗಮನಿಸಬೇಕು. ಕವಿರಾಜಮಾರ್ಗವನ್ನು ರಚಿಸಿದವನು ನೃಪತುಂಗ ಎಂದು ಗ್ರಹಿಸಿದರೆ – ಗ್ರಹಿಸಿದರೂ ಕೂಡ – ಗ್ರಂಥಸ್ಥವಾದ ಜೈನಧರ್ಮ ಪರವಾದ ಉಕ್ತಿಗಳು ಆತನ ವೈಷ್ಣವಧರ್ಮ ನಿಷ್ಠೆಗೆ ಭಂಗತರಲಾರವು. ಪದ್ಯ **I**-೧೦೫ರಲ್ಲಿ ಪ್ರಸಕ್ತವಾದ ಸಮಯ ವಿರುದ್ಧ ದೋಷವಿವರಣೆಯಿಂದ ನೃಪತುಂಗನ ಕಾಲದಲ್ಲಿ ಜೈನಧರ್ಮ ಮಾತ್ರವಲ್ಲದೆ, ಸಾಂಖ್ಯ ಬೌದ್ಧ ವೈಶೇಷಿಕ ದರ್ಶನಗಳೂ ಪ್ರಚಲಿತವಾಗಿದ್ದವು ಎಂದು ಊಹಿಸಲು ಅವಕಾಶವಿದೆ. ಆದರೆ, ಆಗ

ಇವುಗಳಿಂದ ಅವನು ಯಾವ ಮತಕ್ಕೇ ಸೇರಿರಲಿ, ಎಲ್ಲ ಮತಗಳನ್ನೂ ಸಮದೃಷ್ಟಿಯಿಂದ ಕಾಣುತ್ತಿದ್ದನೆಂಬುದನ್ನು ನಾವು ಮೊದಲು ಗಮನಿಸಬೇಕು.

ನೃಪತುಂಗನ ಪೂರ್ವದ ರಾಷ್ಟ್ರಕೂಟವಂಶದ ದೊರೆಗಳೆಲ್ಲ ಪರಮ ವಿಷ್ಣುಭಕ್ತರು – ಲಕ್ಷ್ಮೀಭಕ್ತರು; ಮಾತ್ರವಲ್ಲ, ಶಿವನ ಆರಾಧಕರು ಕೂಡ. "ಇವರ ಯಾವೊಂದು ಲೇಖನವಾಗಲಿ ಶಾಸನವಾಗಲಿ ಜಿನಸ್ತುತಿಪರವಾದ ಶಿರೋಲೇಖನದಿಂದ ಕೂಡಿಲ್ಲ." ರಾಷ್ಟ್ರಕೂಟ ವಂಶಿಕರ ಶಾಸನ ಹಾಗೂ ತಾಮ್ರಪಟ್ಟಗಳಲ್ಲಿ ಶಿವ ಮತ್ತು ಶಿವ ಸಂಬಂಧವಾದ ಲಾಂಛನಗಳಿವೆ. ನೃಪತುಂಗನ ಕಾಲದ ಶಾಸನವೊಂದರಲ್ಲಿ (ಕ್ರಿ.ಶ.೮೬೬, ಎಂದರೆ ಅವನ ಆಳಿಕೆಯ ೫೨ನೆಯ ವರ್ಷ) ಗರುಡಲಾಂಛನವುಂಟು. ನೃಪತುಂಗನು ಪಟ್ಟಕ್ಕೆ ಬಂದಾಗ ಸು. ೧೬ರ ಪ್ರಾಯದವನು ಇರಬಹುದೆಂದು ಚರಿತ್ರಕಾರರು ಊಹಿಸಿರುವುದರಿಂದ, ಈ ಶಾಸನ ಕಾಲದ ವೇಳೆಗೆ ನೃಪತುಂಗನ ವಯಸ್ಸು ಸು.೭೦ ವರ್ಷ ಎಂದು ಇಟ್ಟುಕೊಳ್ಳಬಹುದು. ಈ ಶಾಸನದ ಪ್ರಾರಂಭದಲ್ಲಿ ಹರಿಹರಸ್ತುತಿಯಿರುವದರಿಂದಲೂ ಇದರಲ್ಲಿ 'ಶ್ರೀನೃಪತುಂಗ ನಾಮಾಂಕಿತ ಲಕ್ಷ್ಯವಲ್ಲಭೇಂದ್ರಂ... ಮಹಾ ವಿಷ್ಣುವ ರಾಜ್ಯಂಬೋಲ್' ರಾಜ್ಯವಾಳುತ್ತಿದ್ದ ಪ್ರಸಕ್ತಿಯಿರುವುದರಿಂದಲೂ ಈ ಶಾಸನದ ಕಾಲದವರೆಗೆ ಎಂದರೆ ನೃಪತುಂಗನ ೭೦ನೆಯ ವಯಸ್ಸಿನವರೆಗೆ, ಆತನು ಜೈನಮತಾವಲಂಬಿಯಾಗಿರಲಿಲ್ಲವೆಂಬುದು ಖಂಡಿತ. ಕವಿರಾಜಮಾರ್ಗದ ಮಂಗಳಾಚರಣ ಪದ್ಯಗಳು ಅವನ ಲಕ್ಷ್ಮೀ–ನಾರಾಯಣಭಕ್ತಿಯನ್ನು ದ್ಯೋತಿಸುವ ಲಕ್ಷ್ಯಪದ್ಯಗಳು (**I**–೧, ೨; **III**–೪೦; ೮೧; ೧೬೧, ೧೬೨) ನೃಪತುಂಗನು ಲಕ್ಷ್ಮೀಭಕ್ತನಾದ, ವೀರನಾರಾಯಣ ಬಿರುದಾಂತ ವೈಷ್ಣವನೆಂದು ಸಾರುತ್ತಿವೆ. ಇದರಿಂದ ಹೊರಪಡುವ ನಿಸ್ಸಂದಿಗ್ಧವಾದ ಸತ್ಯಾಂಶವೆಂದರೆ, ಕವಿರಾಜಮಾರ್ಗವು ನೃಪತುಂಗನ ೭೦ರ ವಯಸ್ಸಿಗೆ ಮುಂಚೆ ರಚಿತವಾಗಿದ್ದಿರಬೇಕು ಎಂಬುದು. ಬೇರೆಯ ಕಾರಣಕ್ಕಾಗಿ ಸು. ಕ್ರಿ.ಶ. ೮೬೦ ರ ಸುಮಾರಿನಲ್ಲಿ ರಚಿತವಾಗಿರಬೇಕು ಎಂದು ಹಿಂದೆಯೆ ಸೂಚಿಸಿದ್ದೇವೆ. ಅದರ ರಚನಾ ಕಾಲವನ್ನು ಇನ್ನು ೮–೧೦ ವರ್ಷ ಈಚೆಗೆ ತಳ್ಳಿಕೊಂಡರೂ ಬಾಧಕವಿರದು.

ಸರ್ವಸಮತಾದೃಷ್ಟಿ ಅಮೋಘವರ್ಷ ನೃಪತುಂಗನಿಗೆ ಬಳುವಳಿಯಾಗಿ ಬಂದ ವಂಶಗುಣ. ರಾಷ್ಟ್ರಕೂಟ ರಾಜರಲ್ಲಿ ಅನೇಕರು ಜಿನಾಲಯಗಳಿಗೆ ದತ್ತಿ ಬಿಟ್ಟಿರುವುದುಂಟು. ಇದು ಅವರ ವಿಶಾಲ ಮನಸ್ಸಿನ ಕುರುಹು. ನೃಪತುಂಗನೂ ಅದೇ ಸಂಪ್ರದಾಯವನ್ನು ನಡೆಸಿಕೊಂಡು ಬಂದನು. ಉದಾಹರಣೆಗೆ, ಕೊಣ್ಣೂರ ದಾನಶಾಸನದಲ್ಲಿ (ಕ್ರಿ.ಶ.೮೬೧) ತನ್ನ ಇಷ್ಟಭೃತ್ಯನಾದ ಬಂಕೆಯನ ಪ್ರಾರ್ಥನೆಯಂತೆ,

ಹೇಳಬಹುದು. ಇಷ್ಟರ ಜೊತೆಗೆ 'ಉತ್ತರ ಪುರಾಣ' ಮತ್ತು 'ಜಯಧವಲಾಟೀಕೆ'ಗಳಲ್ಲಿ 'ಅಮೋಘವರ್ಷ'ಎಂದಿಷ್ಟೆ ಇದೆಯಲ್ಲದೆ ಆತನ 'ನಿಜನಾಮ'ವಾದ 'ಶರ್ವ' ಎಂದಾಗಲಿ 'ಅಮೋಘವರ್ಷ ನೃಪತುಂಗ' ಇಲ್ಲವೆ 'ನೃಪತುಂಗ' ಎಂದಾಗಲಿ ಉಲ್ಲೇಖವಿಲ್ಲ. (ಆ)ಜಿನಸೇನರ ಪಾರ್ಶ್ವಾಭ್ಯುದಯ ಕಾವ್ಯದಲ್ಲಿನ 'ಅಮೋಘವರ್ಷ' ಪರವಾದ ಉಲ್ಲೇಖದಿಂದ ನೃಪತುಂಗನು ಅವರ ಶಿಷ್ಯನಾಗಿದ್ದನೆಂದು ಹೇಳಬರುವಂತಿಲ್ಲ. (ನೋಡಿ: ಟಿಪ್ಪಣಿ ೧೨).

**(ii)** 'ಗಣಿತಸಾರಸಂಗ್ರಹ': ಇದರ ಕರ್ತೃ 'ವೀರಚಾರ್ಯ' (ಅಥವಾ ಮಹಾವೀರಾಚಾರ್ಯ). ಈತ ಒಬ್ಬ ಜೈನ ಗಣಿತ ಶಾಸ್ತ್ರಜ್ಞ. (ಈತನು ತನ್ನ ಗ್ರಂಥದಲ್ಲಿ ಎಲ್ಲಿಯೂ ಗ್ರಂಥ ರಚನಾಕಾಲವನ್ನು ಸೂಚಿಸದಿರುವುದು ಸೋಜಿಗದ ಸಂಗತಿ). ಇದರ ಪ್ರಾರಂಭದ ಪ್ರಶಸ್ತಿ ಪದ್ಯಗಳಲ್ಲಿ 'ಅಮೋಘವರ್ಷ ನೃಪತುಂಗನ' ಉಲ್ಲೇಖವೇನೋ ಇದೆ. ಮಾತ್ರವಲ್ಲ. 'ಆತನು ಏಕಾಂತ ಪಕ್ಷವನ್ನು (=ಅದ್ವೈತ ನಿಷ್ಠವಾದ ಭಾಗವತ ವೈಷ್ಣವ ಧರ್ಮವನ್ನು ಧ್ವಂಸ ಮಾಡಿದವನು, ಸ್ಯಾದ್ವಾದನ್ಯಾಯವಾದಿ (=ಜೈನಧರ್ಮವನ್ನು ಎತ್ತಿ ಹಿಡಿದನು) ಎಂದೂ ಹೇಳಿದೆ![೧೩] ಜಿನಸೇನ ಗುಣಭದ್ರರ ಕೃತಿಗಳಲ್ಲಿ ಕೂಡ ಈ ಸಂಗತಿ ಉಲ್ಲೇಖಗೊಂಡಿಲ್ಲ; ಇದಕ್ಕೆ ಶಾಸನಾಧಾರ ವ್ಯತಿರಿಕ್ತವಾಗಿಯೆ ಇದೆ. ಆದ್ದರಿಂದ 'ಗಣಿತಸಾರ ಸಂಗ್ರಹ'ದ ಹೇಳಿಕೆ ಖಂಡಿತ ವಿಶ್ವಸನೀಯವಲ್ಲ. ಒಂದು ವೇಳೆ ಅದು ನಿಜವಿದ್ದರೂ ಈ ಗ್ರಂಥದಲ್ಲಿ ಉಕ್ತನಾದ 'ಅಮೋಘವರ್ಷ ನೃಪತುಂಗನು' ಕವಿರಾಜಮಾರ್ಗಪ್ರೋಕ್ತನಾದ ನೃಪತುಂಗ ಎಂದು ಹೇಳಬರುವಂತಿಲ್ಲ. ಕಾರಣ, ರಾಷ್ಟ್ರಕೂಟ ದೊರೆ ೨ನೆಯ ಕರ್ಕನಿಗೂ 'ಅಮೋಘವರ್ಷ ನೃಪತುಂಗ'ನೆಂಬ ಹೆಸರುಗಳುಂಟು.

**(iii)** 'ಪ್ರಶ್ನೋತ್ತರ ರತ್ನಮಾಲಿಕಾ' : ಇದೊಂದು ನೀತಿಬೋಧಕವಾದ, ಜೈನಧರ್ಮಕ್ಕೆ ಸಂಬಂಧಪಟ್ಟ, ಚಿಕ್ಕ ಕಾವ್ಯ. ಇದನ್ನು ರಚಿಸಿದವರು ಶಂಕರಾಚಾರ್ಯರು, ಶಂಕರಾನಂದ ಗುರು, ಶ್ವೇತಾಂಬರ ಜೈನ ಲೇಖಕನಾದ ವಿಮಲ ಎಂದು ಬಗೆಬಗೆಯಾಗಿ ಪ್ರತೀತಿಗಳಿವೆ. ಇದರ ಕರ್ತೃತ್ವದ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಇದರ ಮುದ್ರಿತ ಪ್ರತಿಯಲ್ಲಿ ೨೯ ಪದ್ಯಗಳಿದ್ದು, ಇಂಡಿಯನ್ ಆಂಟಿಕ್ವೆರಿಯಲ್ಲಿ (ಸಂ. **XII,** ಪು. ೨೧೮) ೩೦ ಪದ್ಯಗಳು ಎಂದು ಹೇಳಲಾಗಿದೆ. ಈ ಕಾವ್ಯವನ್ನು ಮೊದಲು ಬೆಳಕಿಗೆ ತಂದವರೂ, ಕವಿರಾಜ ಮಾರ್ಗವನ್ನು ಮೊದಲು ಸಂಪಾದಿಸಿ ಪ್ರಕಟಿಸಿದವರೂ ಆದ ಕೆ.ಬಿ.ಪಾಠಕರು ಇದು ನೃಪತುಂಗ ಕೃತವೆಂದೇ ಅಭಿಪ್ರಾಯಪಟ್ಟಿದ್ದಾರೆ.[೧೪]

ಜನಜೀವನದಲ್ಲಿ ಪ್ರಭಾವಶಾಲಿಯಾಗಿದ್ದುದು ಜೈನ ಧರ್ಮ. ನೃಪತುಂಗನೂ ಜೈನಧರ್ಮದಿಂದ ವಿಶೇಷವಾಗಿ ಪ್ರಭಾವಿತನಾಗಿದ್ದರೆ ಅದರಲ್ಲಿ ಆಶ್ಚರ್ಯವಿಲ್ಲ. ಆದ್ದರಿಂದ, ಜೈನಧರ್ಮ ಪರವಾದ ಗ್ರಂಥೋಕ್ತಿಗಳು ಆ ಧರ್ಮದಲ್ಲಿ ತನ್ನ ಪ್ರಜಾಕೋಟಿಯ ಒಂದು ಪ್ರಮುಖ ವರ್ಗದ ಜನರ ಧರ್ಮದಲ್ಲಿ ಆತನು ಇಟ್ಟಿದ್ದ ಗೌರವಕ್ಕೆ ನಿದರ್ಶನಗಳಾಗಿವೆ. ಕವಿರಾಜಮಾರ್ಗವು ರಚನೆಯಾದ ಕಾಲದಲ್ಲಿಯಂತೂ ಆತ ಖಂಡಿತವಾಗಿಯೂ ಜೈನಮತಾವಲಂಬಿಯಾಗಿದ್ದಿರಲಾರ ಎಂದು ಮೇಲೆ ಶಾಸನಾಧಾರದಿಂದ ದೃಢಪಟ್ಟಿದೆ. ಕವಿರಾಜಮಾರ್ಗವು ಅನ್ಯಕರ್ತೃಕ ಎಂದು ಗ್ರಹಿಸಿದರಂತೂ, ನೃಪತುಂಗನು ವೈಷ್ಣವನೆಂದೇ ಗ್ರಂಥವು ನಿಸ್ಸಂದಿಗ್ಧ ಸಾಕ್ಷ್ಯವನ್ನು ನೀಡುತ್ತಿದೆ. ಹೇಗೆ ವಿಚಾರಮಾಡಿದರೂ, ಕವಿರಾಜಮಾರ್ಗದ ಆಧಾರದ ಮೇಲೆ ಹೇಳುವುದಾದರೆ, ನೃಪತುಂಗನು ಜೈನನೆನ್ನುವುದಕ್ಕಿಂತ ವೈಷ್ಣವನೆನ್ನುವುದಕ್ಕೆ ಹೆಚ್ಚು ಪ್ರಬಲವಾದ ಆಧಾರವಿದೆ.

(೩) ಇತರ ಗ್ರಂಥಾಧಾರಗಳು: **(i)**ಜಿನಸೇನ, ಗುಣಭದ್ರರ ಕಾವ್ಯಗಳಲ್ಲಿಯ ಉಲ್ಲೇಖಗಳು: (ಅ)ಗುಣಭದ್ರರ 'ಉತ್ತರಪುರಾಣ'ದ ವೃತ್ತವೊಂದರಲ್ಲಿ, 'ಅಮೋಘವರ್ಷನು ಜಿನಸೇನನನ್ನು ವಂದಿಸಿ ತಾನು ಇಂದು (=ಅದ್ಯ) ಧನ್ಯನಾದನೆಂದು ಭಾವಿಸಿಕೊಂಡನು' ಎಂದು ಉಕ್ತವಾಗಿದೆ.[೧೧] ಇಷ್ಟರಿಂದ, ಆತ ಸ್ವಧರ್ಮವನ್ನು ತ್ಯಜಿಸಿ, ಜಿನಸೇನನ ಶಿಷ್ಯನಾಗಿ, ಜೈನಮತ ಸ್ವೀಕಾರಮಾಡಿದನು ಎಂಬ ಅರ್ಥವನ್ನು ಸೆಳೆಯುವುದು ಸಾಧ್ಯವಿಲ್ಲ. ಅಲ್ಲದೆ ನೃಪತುಂಗನು ಜಿನಸೇನನ ಶಿಷ್ಯನಾಗಿದ್ದರೆ, ಜಿನಸೇನನು ತನ್ನ 'ಜಯಧವಲಾಟೀಕೆ'ಯಲ್ಲಿ[೧೨] (ಇದರ ಸಮಾಪ್ತಿ ಕಾಲ ಕ್ರಿ.ಶ.೮೩೭) ಈ ಸಂಗತಿಯನ್ನು ಸ್ಪಷ್ಟವಾಗಿ ತಿಳಿಸುವ ಸಂಭವವಿರುತ್ತಿತ್ತು. ಹಾಗೆ ಮಾಡದೆ, 'ಅಮೋಘವರ್ಷ ರಾಜೇಂದ್ರ ಪ್ರಾಜ್ಯರಾಜ್ಯಗುಣೋದಯಾ' ಎಂದಿಷ್ಟೇ ಉಲ್ಲೇಖಿತವಾಗಿದೆ. ಮಾತ್ರವಲ್ಲ; ಜಿನಸೇನನು ತನ್ನ ಗ್ರಂಥವನ್ನು ತನ್ನ ಶಿಷ್ಯನ ರಾಜದಲ್ಲಿಯೋ ಇಲ್ಲವೇ ರಾಜಧಾನಿಯಲ್ಲಿಯೋ ಬರೆಯದೆ 'ಗುರ್ಜರಾರ್ಯಾನುಪಾಲಿತ' ಮಟಗ್ರಾಮದಲ್ಲಿ ಏಕೆ ಬರೆದನು? ಅದೇ ರೀತಿ ಅಮೋಘವರ್ಷ ನೃಪತುಂಗನು ತನ್ನ ಗುರುವಿನ ಶಿಷ್ಯನಾಗಿದ್ದರೆ, ಗುಣಭದ್ರನು ತನ್ನ 'ಉತ್ತರ ಪುರಾಣ'ವನ್ನು ಅಮೋಘವರ್ಷ ನೃಪತುಂಗ ಪುತ್ರ ಅಕಾಲವರ್ಷನ (ಕ್ರಿ.ಶ.೮೭೭–೯೧೩) ಆಸ್ಥಾನದಲ್ಲಿಯೋ ಇಲ್ಲವೆ ರಾಜಧಾನಿಯಲ್ಲಿಯೋ ಬರೆಯದೆ ಲೋಕಾದಿತ್ಯನ ರಾಜಧಾನಿಯಲ್ಲಿ ಬರೆದನೇಕೆ? ಎಂದು ಗೋವಿಂದ ಪೈ ಎತ್ತಿರುವ ಆಕ್ಷೇಪಗಳಿಗೆ ಉತ್ತರ ಹೇಳುವುದು ಕಷ್ಟ. ಮೇಲ್ಕಂಡ ಉಲ್ಲೇಖಗಳಿಂದ, ನೃಪತುಂಗನು ಜಿನಸೇನರಲ್ಲಿ ಗುರುಭಾವನೆಯನ್ನು ಇರಿಸಿದ್ದನೆಂದು ಬೇಕಾದರೆ

ನೋಡುವ ಸಮದರ್ಶಿಯಾಗಿದ್ದನೆಂದೂ, ಎಲ್ಲ ಧರ್ಮಗಳ ಪಂಡಿತರಿಗೂ ಕವಿಗಳಿಗೂ ಸಮಾನವಾಗಿ ಆಶ್ರಯದಾತನಾಗಿದ್ದನೆಂದೂ, ಅನ್ಯಸಮಯಗಳವರ ಪ್ರಶಂಸೆಗೂ ಪಾತ್ರನಾಗುವ ಮಟ್ಟಿಗೆ ಅನ್ಯಮತಾಚಾರ್ಯರಲ್ಲಿ ಗುರುಭಾವನೆಯನ್ನು ಇಟ್ಟಿದ್ದನೆಂದೂ ವ್ಯಕ್ತಪಡುತ್ತದೆ. ಇದರಿಂದ, **ಕವಿರಾಜಮಾರ್ಗರಚನೆಯ ಕಾಲದಲ್ಲಿಯಂತೂ ಆತನು ಖಂಡಿತ ಜೈನಧರ್ಮವನ್ನು ಸ್ವೀಕಾರ ಮಾಡಿರಲಿಲ್ಲ ಎಂದು ಸುನಿಶ್ಚಿತವಾಗಿ ಹೇಳಬಹುದು.**

**ಕವಿರಾಜಮಾರ್ಗದ ಕರ್ತೃ** : ಕವಿರಾಜಮಾರ್ಗವನ್ನು ಮೊತ್ತ ಮೊದಲು[೧೭] ಸಂಪಾದನೆ ಮಾಡಿ ಪ್ರಕಟಿಸಿದ (೧೮೯೮) ಕೆ.ಬಿ.ಪಾಠಕರು ಗ್ರಂಥದ ಮುನ್ನುಡಿಯಲ್ಲಿ ನೃಪತುಂಗನೇ ಅದರ ಕರ್ತೃ ಎಂಬ ತಮ್ಮ ನಿರ್ಣಯವನ್ನು ಮುಂದಿಟ್ಟರು. ಡಾ॥ ಜೆ.ಎಫ್.ಫ್ಲೀಟ್‌ರವರು ಈ ಮುದ್ರಣದ ಮೇಲಿನ ತಮ್ಮ ವಿಮರ್ಶಾತ್ಮಕ ಲೇಖನವನ್ನು ೧೯೦೪ರಲ್ಲಿ ಇಂಡಿಯನ್ ಆಂಟಿಕ್ವೆರಿಯಲ್ಲಿ **(Indian Antiquary, Vol.XXXIII, October** ೧೯೦೪; **pp.** ೨೫೮–೨೭೦) ಪ್ರಕಟಿಸಿದರು. 'ಕವೀಶ್ವರನ ಕವಿರಾಜಮಾರ್ಗ' ಎಂದು ಅವರು ತಮ್ಮ ಲೇಖನಕ್ಕೆ ಕೊಟ್ಟಿರುವ ಹೆಸರೇ ಕೃತಿಯ ಕರ್ತೃತ್ವದ ಬಗೆಗೆ ಅವರ ನಿಲುವನ್ನು ಸಾರಿ ಹೇಳುತ್ತದೆ. ತರುವಾಯ, ೧೯೦೭ರಲ್ಲಿ, ದಿವಂಗತ ಆರ್.ನರಸಿಂಹಾಚಾರ್ಯರು ತಮ್ಮ ಕವಿ ಚರಿತೆಯ ಪ್ರಥಮ ಸಂಪುಟದಲ್ಲಿ (ತಿದ್ದಿದ ಮುದ್ರಣ: ೧೯೨೪; ಪು.೧೯–೨೦), 'ಯದ್ಯಪಿ ಈ ಗ್ರಂಥವು ನೃಪತುಂಗಕೃತವೆಂದು ಪ್ರತೀತಿಯಿದ್ದರೂ ಶ್ರೀವಿಜಯಕೃತವೋ ಎಂದು ಸಂದೇಹ ಪಡುವುದಕ್ಕೆ ಅವಕಾಶವಿದೆ" ಎಂದು ಹೇಳಿ ಹಾಗೆ ಹೇಳಲು ಸಾಧಕಗಳಾದ ಕೆಲವು ಗ್ರಂಥಸ್ಥ ಪ್ರಮಾಣಗಳನ್ನೂ ಬಾಹ್ಯ ಪ್ರಮಾಣಗಳನ್ನೂ ಸೂಚಿಸಿದರು. "ಆದರೆ ಈ ವಿಷಯದಲ್ಲಿ ಹೀಗೆಯೇ ಸರಿ ಎಂದು ನಿಶ್ಚಯಿಸಲಾಗುವುದಿಲ್ಲ. ಒಂದು ವೇಳೆ ನೃಪತುಂಗನಿಗೆ ಶ್ರೀವಿಜಯ ಎಂಬ ಬಿರುದೂ ಇದ್ದಿರಬಹುದು. ಎಂದರೆ ಅದಕ್ಕೆ ಶಾಸನಗಳಲ್ಲಿಯಾಗಲೀ ಈ ಗ್ರಂಥದಲ್ಲಿಯಾಗಲಿ ಯಾವ ಆಧಾರವೂ ಸಿಕ್ಕುವುದಿಲ್ಲ" ಎಂದು ಕರ್ತೃತ್ವ ವಿಚಾರವನ್ನು ಅನಿಶ್ಚಯದಲ್ಲಿಯೇ ತೇಲಿಬಿಟ್ಟರು. ದಿ॥ ಟಿ.ಎಸ್. ವೆಂಕಣ್ಣಯ್ಯನವರು ಪ್ರಬುದ್ಧ ಕರ್ಣಾಟಕದ ರೌದ್ರಿ ಸಂವತ್ಸರದ ದೀಪಾವಳಿ ಸಂಚಿಕೆಯಲ್ಲಿ ('ಕನ್ನಡದಲ್ಲಿ ಬೌದ್ಧರು ಗ್ರಂಥಗಳನ್ನು ಬರೆದಿದ್ದರೆ? ಎಂಬ ಲೇಖನದಲ್ಲಿ') 'ಕವಿರಾಜಮಾರ್ಗವನ್ನು ನೃಪತುಂಗನೇ ಬರೆದನೋ ಅಥವಾ ಆಸ್ಥಾನ ಕವಿಯಾದ ಶ್ರೀವಿಜಯನೇ ಬರೆದನೋ ನಿಶ್ಚಯಿಸುವುದು ಕಷ್ಟ" ಎಂದು ಅನಿಶ್ಚಯ ಸ್ಥಿತಿಯನ್ನೇ ಮುಂದುವರಿಸಿದರು.

ಕವಿಚರಿತ್ರಕಾರರಾದ ಆರ್.ನರಸಿಂಹಾಚಾರ್ಯರೂ ಅದೇ ಅಭಿಪ್ರಾಯವುಳ್ಳವರಾಗಿದ್ದಾರೆ.[೧೫] ಹಾಗೆ ಅಭಿಪ್ರಾಯ ಪಡಲು ಆಧಾರಭೂತವಾದ ಶ್ಲೋಕ:

ವಿವೇಕಾತ್ತ್ಯಕ್ತರಾಜ್ಯೇನ ರಾಜ್ಞೇಯಂ ರತ್ನಮಾಲಿಕಾ।
ರಚಿತಾಮೋಘವರ್ಷೇಣ ಸುಧಿಯಾ ಸದಲಂಕೃತಿ: ॥೨೯॥

ನೃಪತುಂಗನು ಜೈನಮತೀಯನೆಂದು ವಾದಿಸುವವರಿಗೆ, ಇದೂ ಒಂದು ಪ್ರಮಾಣವಾಗಿದೆ. ನೃಪತುಂಗನು ಜೈನಮತೀಯನಾಗಿದ್ದನೆಂದೂ, ತನ್ನ ಆಳಿಕೆಯ ಕಡೆಯ ಭಾಗದಲ್ಲಿ ಮಗನಿಗೆ ಪಟ್ಟಕಟ್ಟಿ, ತಾನು ರಾಜ್ಯವನ್ನು ತ್ಯಾಗಮಾಡಿದನೆಂದೂ, ಈ ಗ್ರಂಥದ ಆಧಾರದ ಮೇಲೆ ವಾದಿಸುತ್ತಾರೆ. ನೃಪತುಂಗನು ಈ ಗ್ರಂಥದ ಕರ್ತೃವೆಂಬುದು ಸ್ಥಾಪಿತವಾದರೆ ಅವನು ಜೈನಮತೀಯನೆಂಬುದೂ ಸಿದ್ಧಾಂತವಾಗಬಹುದು. ಈ ಗ್ರಂಥದ ೨೯ ಪದ್ಯಗಳಲ್ಲಿ, ಒಂದು ಹಸ್ತಪ್ರತಿಯ ಪಾಠಾನುಸಾರವಾಗಿ ೨೯ ಪದ್ಯಗಳೂ ಆರ್ಯಾವೃತ್ತಗಳೂ; ಇನ್ನೊಂದು ಪ್ರತಿಯ ಪಾಠದ ಮೇರೆಗೆ ಕೊನೆಯ ೨೯ನೆಯದಾದ ಮೇಲಿನ ಶ್ಲೋಕವು ಅನುಷ್ಟುಪ್ ಶ್ಲೋಕದಲ್ಲಿದೆ. ಈ ಕಾರಣದಿಂದಲೂ ಇನ್ನಿತರ ಆಂತರಿಕ ಪ್ರಮಾಣಗಳಿಂದಲೂ ಈ ಪ್ರಸಕ್ತ ಶ್ಲೋಕವು ಪ್ರಕ್ಷಿಪ್ತವಾದುದೆಂದೂ, ಆದ್ದರಿಂದ ಈ ಗ್ರಂಥವು ನೃಪತುಂಗ ಕೃತವಲ್ಲವೆಂದೂ ಗೋವಿಂದ ಪೈ ಅವರು ಸಹೇತುಕವಾಗಿ ವಾದಿಸಿದ್ದಾರೆ. ನೃಪತುಂಗನು ಕ್ರಿ.ಶ.೮೭೭ ರವರೆಗೂ ಸಿಂಹಾಸನಾರೂಢನಾಗಿದ್ದನೆಂದೂ, ರಾಜ್ಯವನ್ನು ತ್ಯಾಗಮಾಡಿರಲಿಲ್ಲವೆಂದೂ, ಆ ಕಾಲದಲ್ಲಿ ಪುತ್ರ ಅಕಾಲವರ್ಷನು ಇನ್ನೂ ಯುವರಾಜನೆನಿಸಿಕೊಂಡು, ದಕ್ಷಿಣದ ಪ್ರತಿನಿಧಿಯಾಗಿದ್ದನೆಂದೂ ಶಾಸನಾಧಾರಗಳಿಂದ ವ್ಯಕ್ತಪಡುತ್ತದೆ. ನಿಸ್ಸಂದಿಗ್ಧವಾದ ಈ ಶಾಸನಾಧಾರಗಳು ಮೇಲ್ಕಂಡ ಶ್ಲೋಕವು ಪ್ರಕ್ಷಿಪ್ತವೆಂಬ ತೀರ್ಮಾನಕ್ಕೆ ಅಲ್ಲಗಳೆಯಲಾಗದ ಪುಷ್ಟಿಕೊಡುತ್ತವೆ. ಮುಳಿಯ ತಿಮ್ಮಪ್ಪಯ್ಯನವರೂ ಇದೇ ತೀರ್ಮಾನಕ್ಕೆ ಬಂದಿದ್ದಾರೆ. (ಕ.ರಾ.ಮಾರ್ಗವಿವೇಕ–೧, ಪುಟ ೭೧–೭೨).[೧೬]

ಹೀಗೆ ಶಾಸನಗಳು, ಕವಿರಾಜಮಾರ್ಗ, ಇನ್ನಿತರ ಜೈನಧರ್ಮ ಗ್ರಂಥಗಳು – ಈ ಎಲ್ಲವುಗಳಲ್ಲಿ ದೊರಕುವ ಸಂಬಂಧಪಟ್ಟ ಸಾಕ್ಷ್ಯಗಳನ್ನೆಲ್ಲ ಸಮಗ್ರವಾಗಿ ಸಮನ್ವಯ ಮಾಡಿ ವಿವೇಚಿಸಲಾಗಿ, ನೃಪತುಂಗನು ಕ್ರಿ.ಶ.೮೭೭ ರವರೆಗಂತೂ ಜೈನಮತೀಯನಾಗಿರಲಿಲ್ಲವೆಂದೂ, ಸರ್ವಮತಗಳನ್ನೂ ಸಮದೃಷ್ಟಿಯಿಂದ

ಚರಿತ್ರೆಯ ವಿಭಾಗದಲ್ಲಿ 'ಈತನ (ನೃಪತುಂಗನ) ಕವಿರಾಜಮಾರ್ಗವು ಅಲಂಕಾರ ಗ್ರಂಥ' ಎಂದು ಸ್ಪಷ್ಟವಾಗಿ ಹೇಳಿರುವುದರಿಂದ, ಅವರ ನಿಲುವು ಖಚಿತವಾಗಿಲ್ಲ. (ಕನ್ನಡ ಕೈಪಿಡಿ, ಸಂ.೨: ೧೯೪೭). ತರುವಾಯದ ಹೊಸ ಊಹೆ ಎಂದರೆ, ಶ್ರೀ ದ.ರಾ.ಬೇಂದ್ರೆ ಅವರದ್ದು: ಸಮಂತಭದ್ರನೇ ಶ್ರೀ ವಿಜಯನಿರಬಹುದು ಎಂಬುದೇ ಆ ಊಹೆ. ಅದು ನಿಜವಾದರೆ, ಆತ ಕವಿರಾಜಮಾರ್ಗದ ಕರ್ತೃ ಎಂದಾಗುವುದಿಲ್ಲ; ಆದ್ದರಿಂದ, ಆ ಊಹೆ ಇಲ್ಲಿ ಪ್ರಸಕ್ತವೆನಿಸದು. ದಿ॥ ಮುಳಿಯ ತಿಮ್ಮಪ್ಪಯ್ಯನವರು ಗ್ರಂಥದಲ್ಲಿನ ಚಕ್ರಬಂಧ ಶ್ಲೋಕ (II – ೧೪೨)ವೊಂದರ ಆಧಾರದ ಮೇಲೆ, ಗ್ರಂಥಕಾರನ ಹೆಸರು 'ಜಯಾಱ್ವ' ಎಂದೂ, 'ಜಯ–ಜಯಾಱ–ಶ್ರೀ ವಿಜಯ ಎಂಬವುಗಳು ಗ್ರಂಥಕಾರನ ಒಂದೇ ಹೆಸರಿನ ರೂಪಭೇದಗಳು' ಎಂದೂ ಇತ್ಯರ್ಥ ಮಾಡಿದ್ದಾರೆ. (ಕ.ರಾ.ಮಾರ್ಗ ವಿವೇಕ, ಪುಟ ೧೦೪, ೧೯೪೮). ಅಂತೂ ಕವಿರಾಜಮಾರ್ಗಕಾರ ಶ್ರೀ ವಿಜಯನೆಂಬ ಬಗೆಗೆ ಅವರ ನಿಲುವು ಖಚಿತ. ಪ್ರೊ॥ ಡಿ.ಕೆ.ಭೀಮಸೇನರಾಯರು ತಮಗೆ ದೊರೆತ ವ್ಯಾಖ್ಯಾನ ಸಹಿತ ಶಬ್ದಮಣಿದರ್ಪಣದ ಪ್ರತಿಯಲ್ಲಿ ಉದ್ಧೃತವಾಗಿರುವ ಕವಿರಾಜ ಮಾರ್ಗದ ಪದ್ಯಗಳ ಸಂಬಂಧವಾಗಿ ವ್ಯಾಖ್ಯಾನಕಾರನು 'ನೃಪತುಂಗದೇವಮತ', 'ಶ್ರೀವಿಜಯ ಪ್ರಯೋಗ' ಎಂದು ಮಾಡಿರುವ ಉಲ್ಲೇಖಗಳನ್ನು ಸಮೀಕರಿಸಿ, ನೃಪತುಂಗ ಎಂದರೆ ಶ್ರೀವಿಜಯ ಎಂದು ಸಿದ್ಧಾಂತಿಸಿದ್ದಾರೆ. ಇದೊಂದು ಹೊಸ ಸಂಗತಿ. ದಿ॥ ತೀ.ನಂ.ಶ್ರೀ ಯವರು 'ಭಾರತೀಯ ಕಾವ್ಯಮೀಮಾಂಸೆ'ಯಲ್ಲಿ (೧೯೫೩) ಕವಿರಾಜಮಾರ್ಗದ ವಿಚಾರವಾಗಿ ಬರೆಯುತ್ತಾ (ಪು.೪೩೮) ಪ್ರಾಸಂಗಿಕವಾಗಿ, "ನೃಪತುಂಗನ ಕೃತಿ ಇದೆಂದು ಆಪಾತತಃ ತೋರಿದರೂ ಒಳಹೊಕ್ಕು ನೋಡಿದರೆ, ಇದು ನಿಜವಾಗಿ 'ನೃಪತುಂಗದೇವಾನುಮತ' ಮಾತ್ರ; ಇದನ್ನು ವಿರಚಿಸಿದವನು ನೃಪತುಂಗನ ಆಸ್ಥಾನದ ಸಭಾಸದರಲ್ಲಿ ಒಬ್ಬನು –ಬಹುಶಃ ಶ್ರೀವಿಜಯನೆಂಬ ಕವಿ – ಎಂಬ ನೆಲೆಗೆ ಅಭಿಪ್ರಾಯ ಮುಟ್ಟುತ್ತದೆ" ಎಂದು ಎಚ್ಚರಿಕೆಯ ಮಾತನ್ನೇ ಆಡಿದ್ದಾರೆ. (ಗ್ರಂಥಾಂತ್ಯದಲ್ಲಿ 'ಲಾಕ್ಷಣಿಕರು ಮತ್ತು ಲಕ್ಷಣ ಗ್ರಂಥಗಳ' ಹೆಸರುಗಳ ಪಟ್ಟಿಯಲ್ಲಿ 'ಶ್ರೀವಿಜಯ(?) – ಕವಿರಾಜಮಾರ್ಗ' ಎಂದು ಉಲ್ಲೇಖಿಸಿದ್ದಾರೆ). ಕವಿರಾಜಮಾರ್ಗ ಕರ್ತೃತ್ವ ವಿಚಾರದಲ್ಲಿ ಉಪಲಬ್ಧವಿರುವ ಎಲ್ಲ ಸಾಹಿತ್ಯವನ್ನೂ ಕೂಲಂಕಷವಾಗಿ ಸಮಾಲೋಕನ ಮಾಡಿರುವ ಡಾ॥ ರಂ.ಶ್ರೀ.ಮುಗಳಿಯವರು ತಮ್ಮ 'ಕನ್ನಡ ಸಾಹಿತ್ಯ ಚರಿತ್ರೆ'ಯಲ್ಲಿ–"ಇದು ನೃಪತುಂಗ ರಚಿತವಾದ ಗ್ರಂಥವಲ್ಲ ಎಂಬುದು ಮೊದಲನೆಯ ಗಟ್ಟಿಮಾತು... ಎರಡನೆಯ ಗಟ್ಟಿ ಮಾತೆಂದರೆ

ಈ ಭಿನ್ನಾಭಿಪ್ರಾಯಗಳನ್ನು ಗಮನಿಸಿ, ದಿ॥ ನಾ.ಶ್ರೀ. ರಾಜಪುರೋಹಿತರು 'ಕನ್ನಡ ಪಂಡಿತರಲ್ಲುಂಟಾದ ಬುದ್ಧಿಭೇದವನ್ನು ಹೋಗಲಾಡಿಸುವುದಕ್ಕಾಗಿ' ಕವೀಶ್ವರ–ಶ್ರೀವಿಜಯ–ಕರ್ತೃತ್ವಗಳನ್ನು ನಿರಾಕರಿಸಿ, ನೃಪತುಂಗನೇ ಕವಿರಾಜಮಾರ್ಗದ ಕರ್ತೃ ಎಂಬ ಪಾಠಕರ ನಿಲುವಿಗೆ 'ಸಿದ್ಧಾಂತ ಸ್ವರೂಪ"ವನ್ನು ಕೊಡಲು ಪ್ರಯತ್ನಿಸಿ, ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ (೬/೧; ಜುಲೈ ೧೯೨೧) ಸುದೀರ್ಘವಾದ ಲೇಖನವನ್ನು ಬರೆದರು. ನೃಪತುಂಗ ಕರ್ತೃತ್ವವನ್ನು ಪ್ರಸ್ತಾಪಿಸಲು ಅವರು ಮುಂದಿಟ್ಟ ಮುಖ್ಯವಾದ ಹೊಸ ವಾದಾಂಶ ಎಂದರೆ, ನೃಪತುಂಗನಿಗೇ ಶ್ರೀವಿಜಯ ಎಂಬ ಬಿರುದೂ ಇದ್ದಿತೆಂಬುದು. ಇಲ್ಲಿಂದ ತೊಡಗಿತು, ಪರಿಷತ್ಪತ್ರಿಕೆಯಲ್ಲಿ ರಾಜಪುರೋಹಿತರಿಗೂ ವೆಂಕಣ್ಣಯ್ಯನವರಿಗೂ ವಾದ ಪ್ರತಿವಾದಗಳ ಪತ್ರ ವ್ಯವಹಾರ. ಪ್ರೊ॥ ಎ.ಆರ್.ಕೃಷ್ಣಶಾಸ್ತ್ರಿಗಳು ಪ್ರ.ಕರ್ಣಾಟಕದ ಮೂಲಕ ವೆಂಕಣ್ಣಯ್ಯನವರ ಶ್ರೀವಿಜಯ ಪಕ್ಷಕ್ಕೆ ಬೆಂಬಲವಿತ್ತರು. ಇದರ ಪರಿಣಾಮವಾಗಿ ತಾತ್ಕಾಲಿಕವಾಗಿ ಕವೀಶ್ವರ ಪಕ್ಷ ಹಿನ್ನೆಲೆಗೆ ಸರಿದು, ನೃಪತುಂಗ ಶ್ರೀವಿಜಯ ಪಕ್ಷಗಳು ಮುನ್ನೆಲೆಗೆ ಬಂದುವು. ವಿದ್ವತ್ ಪ್ರಪಂಚದಲ್ಲಿ ಶ್ರೀವಿಜಯ ಪಕ್ಷದ ವಾದಕ್ಕೆ ಹೆಚ್ಚು ಮನ್ನಣೆ ದೊರಕುತ್ತ ಬಂದಿತು. ಆರ್.ನರಸಿಂಹಚಾರ್ಯರು ಕವಿಚರಿತೆಯ ತಿದ್ದಿದ ಮುದ್ರಣದ (೧೯೨೪) ಅವತರಣಿಕೆಯಲ್ಲಿ ರಾಜಪುರೋಹಿತರ ವಾದಕ್ಕೆ ಬುಡವಿಲ್ಲವೆಂದು ತೋರಿಸಿದ್ದರೂ,[೧೮] ಯಾವ ಪಕ್ಷವನ್ನೂ ಖಚಿತವಾಗಿ ಎತ್ತಿ ಹಿಡಿದಿಲ್ಲ. ಆದರೆ, ೧೯೪೦ರಲ್ಲಿ ಪ್ರಕಟಿಸಿದ ತಮ್ಮ **History of Kannada Literature** ಎಂಬ ಇಂಗ್ಲೀಷ್ ಉಪನ್ಯಾಸ ಮಾಲೆಯಲ್ಲಿ 'ನೃಪತುಂಗನ ಕವಿರಾಜಮಾರ್ಗ' ಎಂದೇ ಸ್ಪಷ್ಟವಾಗಿ ಹೇಳಿದ್ದಾರೆ. ಇದಕ್ಕೂ ಮೊದಲೇ ೧೯೩೦ರಲ್ಲಿ, ಮದರಾಸು ವಿಶ್ವವಿದ್ಯಾನಿಲಯದ ಪರವಾಗಿ ಕವಿರಾಜಮಾರ್ಗವನ್ನು ಸಂಪಾದನೆ ಮಾಡಿ ಪ್ರಕಟಿಸಿದ ಎ.ವೆಂಕಟರಾವ್ ಮತ್ತು ಪಂಡಿತ ಎಚ್.ಶೇಷಯ್ಯಂಗಾರ್ ಅವರು ಗ್ರಂಥದ ಅವತರಣಿಕೆಯಲ್ಲಿ ಡಾ॥ ಫ್ಲೀಟರ್ ಕವೀಶ್ವರ ಪಕ್ಷವನ್ನು ತಮ್ಮದೇ ಆದ ಹೊಸ ವಾದಸರಣಿಯಲ್ಲಿ ಮುಂದಿಟ್ಟರು. ಈ ಮುದ್ರಣವನ್ನು ವಿಮರ್ಶೆ ಮಾಡುತ್ತ (**Q.J.M.S., Jan.** ೧೯೩೩, **pp.** ೪೩೬–೪೪೨) ದಿ॥ ಬಿ.ಎಂ.ಶ್ರೀ ಯವರು ಕವೀಶ್ವರ ವಾದವನ್ನು ಸಂಪೂರ್ಣವಾಗಿ ನಿರಾಧಾರವಾದದ್ದೆಂದು ತಿರಸ್ಕರಿಸಿ ಶ್ರೀ ವಿಜಯಪಕ್ಷದ ಕಡೆಗೇ ಬಹುಮಟ್ಟಿಗೆ ವಾಲಿದ್ದಾರೆ ಎಂದು ಹೇಳಬಹುದು. (ಈ ಮುದ್ರಣದ ಸಂಪಾದಕನೂ ಮದರಾಸು ಮುದ್ರಣವನ್ನು ಪ್ರಜಾಮತ ವಾರ ಪತ್ರಿಕೆಯಲ್ಲಿ – ೧೯೩೨ – ವಿಮರ್ಶೆ ಮಾಡಿ, ಶ್ರೀವಿಜಯ ಪಕ್ಷವನ್ನೇ ಸಮರ್ಥಿಸಿದ್ದನು) ಆದರೆ, 'ಕನ್ನಡ ಕೈಪಿಡಿ'ಯ ಸಾಹಿತ್ಯ

ಅತಿಶಯಧವಳೋಕ್ತಕ್ರಮದಿನ**ಱಿ**ಪುವೆಂ(ಪ.೫೫); ನೃಪತುಂಗದೇವ ಮಾರ್ಗೋತ್ಸವಂ (ಪ.೧೦೦); ಮಹಾನೃಪತುಂಗದೇವನಾದರದೊಳೆ ಪೇ**ೞ್ದ** ಮಾರ್ಗ ಗತಿಯಿಂ (ಪ.೧೦೭); ಅತಿಶಯಧವಳೋರ್ವಿಪೋಕ್ತ ಮಾರ್ಗೋಚಿತಗತಿ (ಪ.೧೫೩)

ಪರಿಚ್ಛೇದ **III**ರ ಉಕ್ತಿಗಳು: ಬೆಸಸಿದನಖಿಳಧರಾವಲ್ಲಭನಿಂತಮೋಘವರ್ಷ ನೃಪೇಂದ್ರಂ (ಪ.೧); ಅತಿಶಯಧವಳಧರಾಧಿಪಮತದಿಂ (ಪ.೧೧); ನೃಪತುಂಗ ದೇವಮತದಿಂ (ಪ.೯೮); ನೃಪತುಂಗದೇವ ಮಾರ್ಗದೊಳ್ (ಪ.೧೦೭); ನುತಸರಸ್ವತೀ ತೀರ್ಥಾವತಾರ ಮಾರ್ಗನೆಸತಂ (ಪ.೨೨೫); ನೃಪತುಂಗದೇವ ಮಾರ್ಗಾಂತರ ಗತ ಬೋಧ ವಿಶೇಷಯಾನಪಾತ್ರಂ (ಪ.೨೩೦)

**(iii)** ಪ್ರತಿಪರಿಚ್ಛೇದಾಂತ ಗದ್ಯದಲ್ಲಿ ಬರುವ "ಶ್ರೀ ಪರಮಶ್ರೀನೃಪತುಂಗ ದೇವಾನುಮತಮಪ್ಪ ಕವಿರಾಜ ಮಾರ್ಗದೊಳ್...." ಎಂಬ ಮಾತು.

ಕವಿರಾಜಮಾರ್ಗವು ನೃಪತುಂಗ ಕೃತವೆಂದು ಸಾಧಿಸಲು ಮೇಲ್ಕಂಡ ಆಂತರಿಕ ಪ್ರಮಾಣಗಳನ್ನು ನೃಪತುಂಗ ಪಕ್ಷದವರು (ವಿಶೇಷತಃ ಪಾಠಕರು ಮತ್ತು ರಾಜಪುರೋಹಿತರು) ಬಳಸಿಕೊಂಡಿದ್ದಾರೆ. ಪ್ರತಿಪಕ್ಷಗಳವರು ನೃಪತುಂಗ ಕರ್ತೃತ್ವ ಸ್ಥಾಪನೆಗೆ ಅವು ಸಾಧಕಗಳಾಗಲಾರವು ಎಂದು ವಾದಿಸಿದ್ದಾರೆ. ಮೊದಲು, ಮಂಗಳ ಶ್ಲೋಕಗಳನ್ನು ಪರಿಶೀಲಿಸೋಣ.

ಈ ಮಂಗಳ ಶ್ಲೋಕಗಳು ವಿಷ್ಣುಸ್ತುತಿ ಎಂಬುದು ಸ್ಪಷ್ಟ. ನೃಪತುಂಗನು ಜೈನನೆಂದು ಪಾಠಕರು ಭಾವಿಸಿದ್ದಾರೆ. ಜೈನರು ವಿಷ್ಣು ಸ್ತುತಿಯನ್ನು ಮಾಡುವ ಸಂಭವ ಹೇಗೆ ಎಂಬ ಸಂದೇಹ ಅವರನ್ನು ಬಾಧಿಸಿದಂತೆ ಕಾಣಲಿಲ್ಲ. ನೃಪತುಂಗನು ಜೈನ ಎಂದು ಇಟ್ಟುಕೊಂಡರೆ, ಅವನು ಕರ್ತೃ ಎಂದು ವಾದಿಸಲು ಈ ಪದ್ಯಗಳು ವಿರುದ್ಧ ಸಾಕ್ಷ್ಯಗಳಾಗಿ ಪರಿಣಮಿಸುತ್ತವೆ. ಮಂಗಳಾಚರಣೆಯ ಪದ್ಯಗಳಲ್ಲಿ ಕೆಲವು ವೇಳೆ ಕವಿಗಳು ತಮ್ಮ ಬಿರುದುಗಳನ್ನು ತಾವು ಸ್ತುತಿಸುವ ದೇವರಿಗೆ ಆರೋಪಿಸುತ್ತಾರೆಂದು ಹೇಳಿ, ಈ ಹೇಳಿಕೆಯ ಸಮರ್ಥನೆಗೆ ಅಭಿನವಪಂಪನ ಮಂಗಳ ಶ್ಲೋಕವನ್ನು ಉದಾಹರಿಸಿ, ಗ್ರಂಥಾರಂಭದ ಎರಡು ಪದ್ಯಗಳಲ್ಲಿ ನೃಪತುಂಗನು ತನ್ನ ಬಿರುದುಗಳನ್ನೇ ವಿಷ್ಣುವಿಗೂ ಅನ್ವಯಿಸಿದ್ದಾನೆ ಎಂದು ಪಾಠಕರು ಹೇಳುತ್ತಾರೆ. ಎಂದಮೇಲೆ, ಈ ಎರಡು ಪದ್ಯಗಳಿಂದ ನೃಪತುಂಗನು ವಿಷ್ಣುಭಕ್ತನೆಂದೂ ಗ್ರಂಥದ ಉಳಿದೆಡೆಗಳಲ್ಲಿ ಕಂಡು ಬರುವ ಜೈನ ಧರ್ಮ ದ್ಯೋತಕಗಳಾದ ಉಲ್ಲೇಖಗಳಿಂದ ಅವನು ಜೈನನೆಂದೂ ಹೇಳಬೇಕಾಗುತ್ತದೆ. ತಮ್ಮ ಹೇಳಿಕೆಯಿಂದ ಉದ್ಭವಿಸುವ ಈ ಪೂರ್ವಾಪರ ವಿರೋಧವನ್ನು ಪಾಠಕರು

ಕವಿರಾಜಮಾರ್ಗಕಾರನು ನೃಪತುಂಗ ಸಭಾಸದನಾಗಿದ್ದು ಅವನಲ್ಲಿ ಅತ್ಯಂತ ಆದರವುಳ್ಳವನು... ಮೂರನೆಯದಾಗಿ, ಕವಿರಾಜಮಾರ್ಗಕಾರನು ಜೈನಮತೀಯನೆಂಬುದು ಗಟ್ಟಿಮಾತು' ಎಂದು ಸ್ಪಷ್ಟವಾಗಿ ಹೇಳಿದ್ದರೂ 'ಎಲ್ಲ ಪ್ರಮಾಣಗಳನ್ನು ಮನದಂದು ತೂಗಿದರೆ, ಶ್ರೀವಿಜಯನು ಕವಿರಾಜಮಾರ್ಗಕಾರನಾಗಿರಬಹುದೆಂದು ನಮ್ಮ ತೋರಿಕೆ' ಎಂದೇ ನುಡಿದಿದ್ದಾರೆ.

ಇದಿಷ್ಟು ಕವಿರಾಜಮಾರ್ಗದ ಕರ್ತೃತ್ವದ ವಿಚಾರದಲ್ಲಿ ಈ ವರೆಗೆ ನಡೆದಿರುವ ಚರ್ಚೆಗಳ ಹೊಲಬಿನ ಸ್ಥೂಲ ಪರಿಚಯ. 'ಹೊಲಬು' ಎನ್ನುವುದಕ್ಕಿಂತ ವಾದಪ್ರತಿವಾದಗಳ, ಊಹಾಪೋಹಗಳ, ಹೊಲಬು ತಪ್ಪಿಸುವ ಹೆಗ್ಗಾಡು ಎಂದರೂ ಸಲ್ಲುತ್ತದೆ. ಈ ಎಲ್ಲ ಚರ್ಚೆಗಳ ಸಾರಾಂಶವನ್ನು ಮಾತ್ರ ಪರಿಚಯ ಮಾಡಿಕೊಡಬೇಕೆಂದರೂ ಒಂದು ಸುದೀರ್ಘ ಲೇಖನವನ್ನು ಬರೆಯಬೇಕಾದೀತು. ಅಷ್ಟಕ್ಕೆ ಇಲ್ಲಿ ಅವಕಾಶವಿಲ್ಲ. ಆದ್ದರಿಂದ ವಾದವಿವಾದಗಳ ಫಲವಾಗಿ ಈಗ ಸ್ಪಷ್ಟನಾಗಿ ರೂಪುಗೊಂಡಿರುವ ನೃಪತುಂಗಪಕ್ಷ, ಕವೀಶ್ವರಪಕ್ಷ, ಶ್ರೀವಿಜಯಪಕ್ಷ – ಈ ಮೂರು ಪಕ್ಷಗಳಲ್ಲಿ ಪ್ರತಿಯೊಂದು ಪಕ್ಷದವರೂ ತಮ್ಮ ನಿಲುವಿನ ಸಮರ್ಥನೆಗಾಗಿ ಮುಂದಿಟ್ಟಿರುವ ಬಾಹ್ಯಾಂತರ ಪ್ರಮಾಣಗಳಲ್ಲಿ ಅತ್ಯಂತ ಮುಖ್ಯವಾದುವನ್ನು ಮಾತ್ರ ಉಲ್ಲೇಖಿಸಿ, ಅವುಗಳ ಸಾಧುತ್ವ, ಅಸಾಧುತ್ವಗಳನ್ನು ವಿವೇಚಿಸಿ, ನಮ್ಮ ಗಮನಕ್ಕೆ ಬಂದ ಹೊಸ ಪ್ರಮಾಣಗಳು ಯಾವುವಾದರೂ ಇದ್ದರೆ ಅವನ್ನೂ ಕೊಟ್ಟು – ನಮ್ಮ ಅಭಿಪ್ರಾಯದಲ್ಲಿ ಯಾವ ಪಕ್ಷ ನಿಸ್ಸಂದಿಗ್ಧವಾಗಿ ಪರಿಗ್ರಾಹ್ಯ ಎಂಬುದನ್ನು ತಿಳಿಸುವುದಷ್ಟೆ ನಮ್ಮ ಕೆಲಸ.

**ನೃಪತುಂಗ ಪಕ್ಷ :**

(೧) **ಆಂತರಿಕ ಪ್ರಮಾಣಗಳು: (i)** ಮೊದಲ ಪರಿಚ್ಛೇದದ ಮೂರು ಮಂಗಳ ಶ್ಲೋಕಗಳು; **(ii)** ಪರಿಚ್ಛೇದ ೧ರ ಕೆಲವು ಉಕ್ತಿಗಳು: ನರಲೋಕಚಂದ್ರ ಮತದಿಂದ (ಪದ್ಯ ೨೩); ಅತಿಶಯಧವಳೊಕ್ತ ಕ್ರಮದೆ (ಪ.೨೪); ಉದಾರ ನೃಪತುಂಗದೇವವಿದಿತ ಕ್ರಮದಿಂ (ಪ.೪೪); ಕೃತಕೃತ್ಯಮಲ್ಲ ವಲ್ಲಭ ಮತದಿಂ (ಪ.೬೨); ನೃಪತುಂಗ ದೇವ ಮಾರ್ಗ ಕ್ರಮ (೧೪೭); ಅತಿಶಯಧ ವಳೋರ್ವಿಪೋದಿತಾಳಂಕೃತಿ (ಪ.೧೪೮); ನೀತಿ ನಿರಂತರ ಕ್ರಮಂ (೧೪೯)

ಪರಿಚ್ಛೇದ **II**ರ ಕೆಲವು ಉಕ್ತಿಗಳು: ನೃಪತುಂಗ ವಿಚಾರಕ್ರಮಗಣನ ಮಾರ್ಗದೊಳ್ (ಪ.೨); ಮಾರ್ಗಂ ನಿತ್ಯಮಲ್ಲವಲ್ಲಭಮತದಿಂ (ಪ.೧೧); ಎಂದನತಿಶಯಧವಳಂ (ಪ.೨೯); ಕೃತಕೃತ್ಯಮಲ್ಲವಲ್ಲಭಮತದಿಂ (ಪ.೩೦); ಭಾಸುರನೃಪತುಂಗದೇವ ವಿದಿತ ಕ್ರಮದಿಂದ (ಪ.೪೫);

ಇದರಿಂದ ಕರ್ತೃ ನೃಪತುಂಗನಲ್ಲವೆಂದು ಹೇಳಬಹುದೆಂದು ಪ್ರತಿವಾದವನ್ನು ಹೂಡಿದ್ದಾರೆ. ಇದಕ್ಕೆ ನೃಪತುಂಗ ಪಕ್ಷದ ಸಮಾಧಾನ ಎಂದರೆ, ಗ್ರಂಥಕರ್ತೃತ್ವ ಸ್ಪಷ್ಟಗೋಚರವಾಗಿರುವ ನಾಗವರ್ಮಾದಿಗಳ 'ಛಂದೋಂಬುಧಿ' ಮುಂತಾದ ಗ್ರಂಥಗಳಲ್ಲಿಯೂ ಗ್ರಂಥಕಾರರು ಉತ್ತಮ ಪುರುಷಾರ್ಥದಲ್ಲಿ ಪ್ರಥಮ ಪುರುಷ ಪ್ರಯೋಗ ಮಾಡಿರುವ ಸಂಪ್ರದಾಯ ಕಂಡು ಬರುತ್ತದೆ ಎಂಬುದು. ಮುಂದಿನ ಕವಿಗಳ ಸಂಪ್ರದಾಯವನ್ನು ಹಿಂದಿನ ಕವಿಯೊಬ್ಬನಿಗೆ ಅನ್ವಯಿಸುವುದು ಸಲ್ಲದು ಎಂಬ ಪ್ರತಿಪಕ್ಷದವರ ಆಕ್ಷೇಪಣೆಯೂ ಇದೆ. ಅಲ್ಲದೆ ಈ ಪ್ರಥಮ ಪುರುಷ ಪ್ರಯೋಗಗಳೊಂದಿಗೆ ಜೊತೆಜೊತೆಯಲ್ಲಿಯೇ ಉತ್ತಮ ಪುರುಷ ಪ್ರಯೋಗಗಳೂ ಇರುವುದು ನೃಪತುಂಗ ಪಕ್ಷದವರ ಗಮನಕ್ಕೆ ಬಾರದೆ ಹೋಗಲಿಲ್ಲ. "ಸವಿಶೇಷ ಗುಣಮನತಿಶಯಧವಳೋಕ್ತಿ ಕ್ರಮದಿನಟಿಪುವೆಂ ತದ್ಭವದೊಳ್" ಎಂಬೀ ವಾಕ್ಯವನ್ನು ಎತ್ತಿ ಹೇಳಿ "ಕೃತಿಕಾರನು ನೃಪತುಂಗನಿಗಿಂತ ಭಿನ್ನನು ಎಂಬ ಅಭಿಪ್ರಾಯ ಇದರಿಂದ ಉಂಟಾಗುತ್ತದೆ. ಆದರೆ ಇದು ಒಂದೇ ಒಂದಾದ ನಿದರ್ಶನ" ಎಂದು ಪಾಠಕರು ಸಮಾಧಾನಪಟ್ಟುಕೊಂಡಿದ್ದಾರೆ. ಮಾತ್ರವಲ್ಲ; "ನೃಪತುಂಗನೇ ಗ್ರಂಥಕರ್ತನೆಂಬ ತಮ್ಮ ಸಿದ್ಧಾಂತಕ್ಕೆ ವಿರೋಧವಾಗದಂತೆ ಅದಕ್ಕೆ ತೃಪ್ತಿಕರವಾದ ವ್ಯಾಖ್ಯಾನವನ್ನು ಬರೆಯುವುದು ಸುಲಭಸಾಧ್ಯವಲ್ಲ" ಎಂದು ಒಪ್ಪಿಕೊಂಡಿದ್ದಾರೆ. ಆದರೆ, ಇಂಥ ಉತ್ತಮ ಪುರುಷ ಪ್ರಯೋಗಗಳು ಇನ್ನೂ ಕೆಲವಿವೆ ಎಂಬುದು ಅವರ ಗಮನಕ್ಕೆ ಬರಲಿಲ್ಲ. ಉದಾ: 'ಅತಿಶಯಧವಳಧರಾಧಿಪ **ಮತದಿಂದಂ... ತೋರ್ಪೆಂ** (II–೧೧) **'ಬೆಸಸಿದ**ನಖಿಳಧರಾವಲ್ಲಭನಿಂತಮೋಘವರ್ಷ ನೃಪೇಂದ್ರಂ' (III–೧), **'ತದನು ಮತ'** (?) ಲಕ್ಷ್ಯಲಕ್ಷಣ ನಿದರ್ಶನಂಗಳನನುಕ್ರಮೋಕ್ತಿಯೆ **'ಪೇೞ್ವೆಂ'** (III–೫) 'ಅನ್ನೆಗಂ ನಿಶ್ಚಿತಮಕ್ಕೆ.... ಪೇೞ್ವೆ' ಮಾೞ್ಕೆ'ಯೊಳೆನ್ನಾ' (II–೩). ಈ ಪ್ರಯೋಗಗಳನ್ನು ಗಮನಿಸಿದ ಮೇಲೆ, ಕವಿಕಾಮನ 'ಶೃಂಗಾರರತ್ನಾಕರ'ದಿಂದಲೂ ನಾಗವರ್ಮನ ಛಂದೋಂಬುಧಿಯಿಂದಲೂ ಪ್ರಥಮ ಪುರುಷ ಪ್ರಯೋಗಗಳೂ ಉತ್ತಮ ಪುರುಷ ಪ್ರಯೋಗಗಳೂ ಜೊತೆ ಜೊತೆಯಾಗಿ ಪ್ರಯೋಗವಾಗಿರುವುದನ್ನು ನೃಪತುಂಗ ಪಕ್ಷದವರು ಮುಂದಿಟ್ಟು, ನೃಪತುಂಗನೇ ಗ್ರಂಥಕರ್ತನೆಂಬುದಕ್ಕೆ ಅವು ಬಾಧಗಳಾಗಲಾರವು ಎಂದು ಸಾರಿದರು. ಆದರೆ, ಇಂಥ ಪ್ರಯೋಗಗಳು ಒಂದೇ ಕೃತಿಯಲ್ಲಿ ಬಂದಿದ್ದರೂ ಬೇರೆ ಬೇರೆ ಪದ್ಯಗಳಲ್ಲಿ ಬಂದಿವೆ ಎಂಬುದನ್ನು ನಾವು ಗಮನಿಸಬೇಕು; ಕವಿರಾಜಮಾರ್ಗದ ಮೇಲ್ಕಂಡ ಉದಾಹರಣೆಗಳು ಕೆಲವಲ್ಲಿ ಒಂದೇ ವಾಕ್ಯದಲ್ಲಿ ಪ್ರಥಮಪುರುಷ ಉತ್ತಮಪುರುಷ

ಗಮನಿಸಿದಂತೆ ಕಾಣುವುದಿಲ್ಲ. ರಾಜಪುರೋಹಿತರೂ ಕೂಡ ಈ ಎರಡು ಪದ್ಯಗಳಲ್ಲಿ ಕ್ಷಾತ್ರದ್ಯೋತಕಗಳಾದ ನೃಪತುಂಗನ ಬಿರುದುಗಳಿರುವುದರಿಂದ, ಗ್ರಂಥಕಾರನು ನೃಪತುಂಗ ಎನ್ನುವುದಕ್ಕೆ ಇವು ಪ್ರಮಾಣಗಳೆಂದು ವಾದಿಸಿದ್ದಾರೆ. ಗ್ರಂಥಾರಂಭದ ಮೂರನೆಯ ಪದ್ಯ, ದಂಡಿಯ ಶ್ಲೋಕದ ಕನ್ನಡ ಅನುವಾದ; ಮೂಲ ಶ್ಲೋಕದ ವೈದಿಕ ಕಲ್ಪನೆಯನ್ನು ಇಲ್ಲಿ ಉದ್ದೇಶಪೂರ್ವಕವಾಗಿ ಕವಿರಾಜಮಾರ್ಗಕಾರನು ಕೈಬಿಟ್ಟಿದ್ದಾನೆ (ನೋಡಿ: ೩ನೆಯ ಪದ್ಯದ ಟಿಪ್ಪಣಿ, ಪು.೧೨೨). ವಿಷ್ಣುಭಕ್ತನಾದ ನೃಪತುಂಗನು – ತಾನೇ ಗ್ರಂಥಕಾರನಾಗಿದ್ದರೆ – ಹೀಗೆ ಮಾಡುತ್ತಿದ್ದನೆ? (ನೃಪತುಂಗನು ವಿಷ್ಣುಭಕ್ತನಾಗಿದ್ದನೆಂದು ಈ ಮೊದಲೇ ನಾವು ಸ್ಥಾಪಿಸಿದ್ದೇವೆ). ಈ ಮಂಗಳ ಶ್ಲೋಕಗಳ ಆಧಾರದ ಮೇಲೆಯೇ ಹೇಳುವುದಾದರೆ, ನೃಪತುಂಗನ ಆಶ್ರಿತನಾದ ಕವಿ ಮೊದಲ ಎರಡು ಪದ್ಯಗಳಲ್ಲಿ ತನ್ನ ಆಶ್ರಯದಾತನಾದ ದೊರೆಗೂ ಆತನ ವಂಶದ ಹಾಗೂ ಇಷ್ಟದ ದೈವಕ್ಕೂ ಅಭೇದವನ್ನು ಕಲ್ಪಿಸಿ, ದೊರೆಯ ಬಿರುದುಗಳನ್ನೆಲ್ಲ ದೈವಕ್ಕೂ ಅನ್ವಯಿಸಿ, ಆ ದೈವವನ್ನೆ ಎದೆ ತುಂಬಿ ಹೊಗಳಿದ್ದಾನೆ; ಮೂರನೆಯ ಪದ್ಯದಲ್ಲಿ, ತನ್ನ ಧಾರ್ಮಿಕ ಭಾವನೆಗೆ ವಿರುದ್ಧವಾದ ವೈದಿಕ ಕಲ್ಪನೆಯನ್ನು ಮೂಲ ಶ್ಲೋಕದಿಂದ ತೆಗೆದುಹಾಕಿ, ಜೈನ ಸಂಪ್ರದಾಯಕ್ಕೆ ಅವಿರುದ್ಧವಾಗುವಂತೆ ಸರಸ್ವತೀ ಸ್ತೋತ್ರ ಮಾಡಿದ್ದಾನೆ. (ಇಂಥ ಮಾರ್ಪಾಟುಗಳು ಗ್ರಂಥದಲ್ಲಿ ಇನ್ನೂ ಕೆಲವಿವೆ). ಈ ಪ್ರಮೇಯದಿಂದ, ಈ ಮೂರು ಪದ್ಯಗಳಲ್ಲಿ ಸೂಕ್ಷ್ಮವಾಗಿ ಅಡಗಿರುವ ಮತದ್ವಯಗಳ ಸಂಶ್ಲೇಷದಿಂದ ಉಂಟಾಗಿರುವ ವಿರೋಧಾಭಾಸವು ಪರಿಹಾರವಾಗುತ್ತದೆ. ಆ ಆಶ್ರಿತ ಕವಿ ಯಾರೆಂಬುದು ಮುಂದಿನ ಪ್ರಶ್ನೆ.

ಇನ್ನು **(ii)** ನೆಯ ವಿಭಾಗದ ಆಂತರಿಕ ಪ್ರಮಾಣಗಳನ್ನು ಪರಿಶೀಲಿಸೋಣ: ಇವೆಲ್ಲ ನೃಪತುಂಗ ಪರವಾದ ಉಕ್ತಿಗಳೇ. ಇವುಗಳಲ್ಲಿ ಮುಖ್ಯವಾಗಿ 'ಭಾವಿಸಿ ಬೆಸಸಿದನ್ ಅಖಿಳಧರಾವಲ್ಲಭಂ ಅಮೋಘವರ್ಷ ನೃಪೇಂದ್ರಂ' – 'ಎಂದನತಿಶಯಧವಳಂ' – 'ಅತಿಶಯಧವಳೋರ್ವಿಪೋದಿತಾಲಂಕೃತಿ' – 'ಅತಿಶಯ ಧವಳೋಕ್ತಕ್ರಮದೆ' – 'ಮಹಾನೃಪತುಂಗ ದೇವನಾದರದೊಳ್ ಪೇಳ್ದ ಮಾರ್ಗಗತಿಯಿಂ' –'ನುತಸರಸ್ವತೀ ತೀರ್ಥಾವತಾರನೆಸಕಂ' –'ನೃಪತುಂಗದೇವ ಮಾರ್ಗಾಂತರ ಗತಬೋಧ ವಿಶೇಷಯಾನಪಾತ್ರಂ' – ಎಂಬೀ ಉಕ್ತಿಗಳು "ನೃಪತುಂಗನು ಗ್ರಂಥಕಾರನೆಂಬ ಅಂಶವನ್ನು ಸಂದೇಹಕ್ಕೆಡೆಯಿಲ್ಲದಂತೆ ಸ್ಥಾಪಿಸುತ್ತವೆ" ಎಂದು ನೃಪತುಂಗ ಪಕ್ಷದವರ ವಾದ.[೧೯] ಇವೂ ಇಂಥ ಇನ್ನಿತರ ಉಕ್ತಿಗಳೂ ಪ್ರಥಮ ಪುರುಷದಲ್ಲಿರುವುದರ ಕಡೆಗೆ ಫ್ಲೀಟರು ಗಮನ ಸೆಳೆದು,

ಯೋಜಿಸಿದ್ದಾನೆಂದು ನಿಷ್ಪನ್ನವಾಗುತ್ತದೆ" ಗ್ರಂಥವು ಅನ್ಯ ಕವಿಕೃತವಾಗಿದ್ದರೆ, (ಪೊನ್ನ, ರನ್ನ, ನೇಮಿಚಂದ್ರ ಇತ್ಯಾದಿ ಕವಿಗಳ ಸಂಪ್ರದಾಯದಂತೆ) '.....ಕವಿ ವಿರಚಿತಮುಂ ನೃಪತುಂಗದೇವಾನುಮತಮುಮಪ್ಪ ಕವಿರಾಜಮಾರ್ಗದೊಳ್' ಎಂದು ಕವಿಯ ಹೆಸರು ಆಶ್ರಯದಾತನ ಹೆಸರು – ಎರಡೂ ಕೂಡಿ ಇರಬೇಕಾಗಿದ್ದಿತು; ನೃಪತುಂಗನ ಹೆಸರೊಂದೇ ಇರುವುದರಿಂದ "ಕವಿರಾಜಮಾರ್ಗ ಗ್ರಂಥವನ್ನು ನೃಪತುಂಗನೇ ರಚಿಸಿರುತ್ತಾನೆಂದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ" ಎಂದು ನೃಪತುಂಗ ಪಕ್ಷದ ರಾಜಪುರೋಹಿತರ ವಾದ. ಇದಕ್ಕೆ ಪ್ರತಿಪಕ್ಷವಾಗಿ ಕೊಟ್ಟ ಉತ್ತರಗಳನ್ನೂ ಸಮಾಧಾನಗಳನ್ನೂ ಹೀಗೆ ಸಂಗ್ರಹಿಸಬಹುದು. ೧.ನೃಪತುಂಗನೇ ಕರ್ತೃವಾಗಿದ್ದ ಪಕ್ಷದಲ್ಲಿ ಅಭಿಮತಾರ್ಥದಲ್ಲಿ 'ಅನುಮತ' ಎಂಬ ಪದವನ್ನು ಉಪಯೋಗಿಸುವ ಬದಲು, 'ಅಭಿಮತ' ಇಲ್ಲವೆ 'ಸಮ್ಮತ' ಎಂಬ ಪದವನ್ನೆ ಉಪಯೋಗಿಸಬಹುದಾಗಿತ್ತು. ೨.ಪರಿಚ್ಛೇದಾಂತ ಗದ್ಯದಲ್ಲಿ ಆಶ್ರಿತಕವಿ ಆಶ್ರಯದಾತನ ಹೆಸರಿನೊಂದಿಗೆ ತನ್ನದನ್ನೂ ಸೇರಿಸಿ ಹೇಳಬೇಕೆಂಬನಿಯಮವೇನೂ ಇಲ್ಲ. ಪೊನ್ನರನ್ನಾದಿ ಮುಂದಿನ ಕಾಲದ ಕವಿಗಳ ಸಂಪ್ರದಾಯವನ್ನು ಹಿಂದಿನ ಕವಿಯೊಬ್ಬನಿಗೆ ಅನ್ವಯಿಸುವುದು ಸಲ್ಲದು. ಅಲ್ಲದೆ, ಗ್ರಂಥದ ಉದ್ದಕ್ಕೂ ಮೇಲಿಂದ ಮೇಲೆ ಪ್ರಯೋಗವಾಗಿರುವ 'ನೃಪತುಂಗದೇವ **ಮಾರ್ಗ**', 'ಅತಿಶಯಧವಳೋಕ್ತಿ **ಕ್ರಮ**', 'ನರಲೋಕಚಂದ್ರ **ಮತ**' ಇತ್ಯಾದಿ 'ಮಾರ್ಗ', 'ಕ್ರಮ', 'ಮತ' ಮುಂತಾದ ಪದಗಳಿಂದ ವ್ಯಕ್ತಪಡುವ ಅಲಂಕಾರಶಾಸ್ತ್ರ ವಿಷಯಕವಾದ ನೃಪತುಂಗಮತವನ್ನೆ ಗದ್ಯದ 'ಅನುಮತ' ಎಂಬ ಮಾತು ಪುಷ್ಟೀಕರಿಸುತ್ತದೆ. ೩. ಕವಿರಾಜಮಾರ್ಗಕಾರನು ತನ್ನ ಆಶ್ರಯದಾತನ ಪ್ರತಿಷ್ಠೆಯನ್ನು ಹೆಚ್ಚಿಸುವುದಕ್ಕೋಸ್ಕರ, ಬೇರೆಯ ಕಡೆಗಳಲ್ಲಿ ತನ್ನ ಕರ್ತೃತ್ವವನ್ನು ಸೂಚ್ಯವಾಗಿ ತಿಳಿಸಿರುವುದರಿಂದ ಪರಿಚ್ಛೇದಾಂತ ಗದ್ಯದಲ್ಲಿ ತನ್ನ ಹೆಸರನ್ನು ಉದ್ದೇಶಪೂರ್ವಕವಾಗಿಯೇ ಸೇರಿಸದೆ ಬಿಟ್ಟಿದ್ದಾನೆ.

ಈ ಸಂಬಂಧವಾಗಿ ವಾದಪ್ರತಿವಾದಗಳನ್ನೆಲ್ಲ ಪರಿಶೀಲಿಸಿದ ಮೇಲೆ, ಪರಿಚ್ಛೇದಾಂತಗದ್ಯವೊಂದರ ಮೇಲೆ ನೃಪತುಂಗ ಕರ್ತೃತ್ವವನ್ನು ಸ್ಥಾಪಿಸಲಾಗುವುದಿಲ್ಲ; ಕರ್ತೃ ಬೇರೆ ಇನ್ನೊಬ್ಬನಿರಬಹುದೆಂಬನುಮಾನಕ್ಕೇ ಆಸ್ಪದಕೊಡುವಂತಿದೆ ಅದು – ಎಂಬ ಅಂಶ ವ್ಯಕ್ತಪಡುತ್ತದೆ.

ಪರಿಚ್ಛೇದಾಂತ್ಯದ ಮೂರು ಪದ್ಯಗಳೂ ಕವಿರಾಜಮಾರ್ಗಕಾರನು ಶ್ರೀವಿಜಯನಿರಬಹುದು ಎಂದು ಊಹಿಸುವುದಕ್ಕೆ ಸಹಾಯಕಗಳಾಗಿವೆ. ಎರಡನೆಯ ಪರಿಚ್ಛೇದದ ಕೊನೆಯ ಪದ್ಯದಿಂದ 'ಕವೀಶ್ವರ'ನೆಂಬುವನು ಕರ್ತೃ ಎಂದು

ಪ್ರಯೋಗಗಳೆರಡೂ ಒಟ್ಟಿಗೆ ಪ್ರಯೋಗವಾಗಿವೆ. ಆದ್ದರಿಂದ ಡಾ॥ ರಂ.ಶ್ರೀ.ಮುಗಳಿಯವರು ಹೇಳುವಂತೆ 'ಇಲ್ಲಿ ಎರಡೂ ಪುರುಷಗಳ ಪ್ರಯೋಗದಿಂದ ನೃಪತುಂಗನಲ್ಲದ ವ್ಯಕ್ತಿ ಗ್ರಂಥಕಾರನಾಗಿರಬೇಕೆಂದು ಸ್ಫುಟವಾಗಿ ಧ್ವನಿತವಾಗಿದೆ. 'ನೃಪತುಂಗನ ಮತದಂತೆ ನಾನು ಹೇಳುತ್ತೇನೆ' ಎಂದು ನೃಪತುಂಗನು ಹೇಳಲಾರನು' (ಕ.ಸಾ.ಚರಿತ್ರೆ, ಪು–೫೪). 'ಬೆಸಸಿದನಖಿಳಧರಾವಲ್ಲಭ ನಿಂ ತಮೋಘವರ್ಷನೃಪೇಂದ್ರಂ' ಎಂಬ ಉಕ್ತಿಯಲ್ಲಿ 'ಬೆಸಸಿದನ್' ಎಂಬ ಮಾತು ಗಮನಾರ್ಹ. ನೃಪತುಂಗನು ಬೇರೊಬ್ಬರಿಗೆ ಅಧಿಕಾರವತ್ತಾಗಿ ತನ್ನ ಅಭಿಪ್ರಾಯವನ್ನು ತಿಳಿಸಿದನು, ಅಪ್ಪಣೆ ಕೊಡಿಸಿದನು ಎಂದು ಈ ಮಾತಿನಿಂದ ಅರ್ಥವಾಗುತ್ತದೆ. 'ಅತಿಶಯಧವಳೋರ್ವಿಪ ಉದಿತ ಅಳಂಕೃತಿಮತಿ ನೀತಿನಿರಂತರ ಪ್ರತೀತಂ' (**I**–೧೪೮) ಎಂಬ ಉಕ್ತಿಯಿಂದ 'ನೃಪತುಂಗಕೃತವೆನ್ನಲು ಆಧಾರವಾಗಿದ್ದಂತೆ ತೋರಬಹುದು' ಎಂಬ ಶಂಕೆಯನ್ನು ಡಾ॥ ಮುಗಳಿಯವರು ವ್ಯಕ್ತಪಡಿಸಿ, ನೃಪತುಂಗನ ಆಶ್ರಯದಲ್ಲಿ ಅವನಿಂದ ಬೆಳಕಿಗೆ ಬಂದ ಗ್ರಂಥವೆಂಬ ವಿವರಣೆ ಹೆಚ್ಚು ಸಮಂಜಸವಾಗಿ ತೋರುತ್ತದೆ' ಎಂಬ ಶಂಕಾಪರಿಹಾರವನ್ನೂ ಸೂಚಿಸಿದ್ದಾರೆ. (ಅತಿಶಯಧವಳೋರ್ವಿಪ ಉದಿತ ಅಳಂಕೃತಿಮತಿ ನೀತಿ ನಿರಂತರ ಪ್ರತೀತಂ ಎಂಬ ಉಕ್ತಿಗೆ ನೀತಿನಿರಂತರ ಪ್ರತೀತವಾದ, ಅತಿಶಯಧವಳ ದೊರೆಯಿಂದ ಬೆಳಕಿಗೆ ಬಂದ ಅಲಂಕಾರಜ್ಞಾನ' ಎಂಬ ಅರ್ಥ ಹೆಚ್ಚು ಉಚಿತ ಎಂದು ಕಾಣುತ್ತದೆ. 'ಅಳಂಕೃತಿಮತಿ' ಎಂಬ ಪದಕ್ಕೆ 'ಅಲಂಕಾರ ಗ್ರಂಥ' ಎಂಬುದಕ್ಕಿಂತ 'ಅಲಂಕಾರ ಶಾಸ್ತ್ರಜ್ಞಾನ' ಎಂಬ ಅರ್ಥ ಸೂಕ್ತ.

ಪ್ರತಿಪರಿಚ್ಛೇದಾಂತ ಗದ್ಯ ಹೀಗಿದೆ: 'ಇದು ಪರಮಶ್ರೀ ನೃಪತುಂಗ ದೇವಾನುಮತಮಪ್ಪ ಕವಿರಾಜಮಾರ್ಗದೊಳ್....' ಇತ್ಯಾದಿ. ನರಪತುಂಗನೇ ಗ್ರಂಥಕಾರನಾಗಿದ್ದ ಪಕ್ಷದಲ್ಲಿ, 'ನೃಪತುಂಗದೇವ ವಿರಚಿತಮಪ್ಪ' ಎಂದು ಹೇಳದೆ, 'ಅನುಮತ'ಮಪ್ಪ ಎಂದು ಏಕೆ ಹೇಳಿದ್ದಾನೆ ಎಂಬ ಸಂದೇಹ ಯಾರಿಗಾದರೂ ಮೂಡುವುದು ಸಹಜ. (ಡಾ॥ ಫ್ಲೀಟರೂ[೨೦] ಆರ್.ನರಸಿಂಹಾಚಾರ್ಯರೂ ಹೀಗೆ ಸಂದೇಹಿಸಿದ್ದಾರೆ). ಇದಕ್ಕೆ ನೃಪತುಂಗ ಪಕ್ಷದವರು ಕೊಡುವ ಉತ್ತರ: "ಅಲಂಕಾರಶಾಸ್ತ್ರವು ಮತಭೇದಾತ್ಮಕ; ಗ್ರಂಥದ ಹೆಸರು ಮಾರ್ಗ, ಗ್ರಂಥದಲ್ಲಿ 'ಮಹಾನೃಪತುಂಗದೇವಾನಾದರದೊಳೆ ಪೇೞ್ದ ಮಾರ್ಗ'; 'ಅತಿಶಯಧವಳೋಪದೇಶ ಮಾರ್ಗ' ಎಂದು ಸ್ಪಷ್ಟವಾಗಿ ಹೇಳಿರುವುದರಿಂದಲೂ ನೃಪತುಂಗನು – 'ಈ ಗ್ರಂಥದಲ್ಲಿ ನನಗೆ ಅಭಿಮತವಾದ ಮಾರ್ಗವನ್ನು ಹೇಳಿದ್ದೇನೆ' ಎಂಬುದನ್ನು ವ್ಯಕ್ತಪಡಿಸುವುದಕ್ಕಾಗಿ 'ಅನುಮತ' ಎಂಬ ಶಬ್ದವನ್ನು

ಲಕ್ಷ್ಯಗಳಲ್ಲಿ 'ವೀರನಾರಾಯಣ – ನರಲೋಕ ಚಂದ್ರ–ನೃಪತುಂಗನ' 'ವಿಭವದ ಪೆಂಪುಮಂ' ಪ್ರಶಂಸಿಸಲಾಗಿದೆ.; ಇನ್ನುಳಿದ ಹಿಂದಿನ ಪದ್ಯಗಳಲ್ಲಿ (III–೧೭೪ ರಿಂದ ೧೭೯) ಆತನದೇ 'ಮನದ ಪೆಂಪುಮಂ' ವಿಶೇಷಿಸಿ ಹೇಳಲಾಗಿದೆ. 'ವ್ಯಾಜಸ್ತುತಿ' ಎಂಬ ಅಲಂಕಾರಕ್ಕೆ ಕೊಟ್ಟಿರುವ ಎರಡು ಲಕ್ಷ್ಯಗಳೂ ಅಷ್ಟೆ (III–೧೬೧, ೧೬೨; ಟಿಪ್ಪಣಿಯನ್ನೂ ನೋಡಿ: ಪು.೩೨೯–೩೩೧); ಮೊದಲೆರಡು ಮಂಗಳಶ್ಲೋಕಗಳಂತೆ ಇಲ್ಲಿಯೂ, ಲಕ್ಷ್ಮೀಲಲನೆಯನ್ನು ವಕ್ಷಸ್ಥಲದಲ್ಲಿ ಧರಿಸಿರುವ, ಧರಾವಧುವನ್ನು ಕಳತ್ರವಾಗಿ ಉಳ್ಳ ವಿಷ್ಣುವಿನ 'ವ್ಯಾಜಸ್ತುತಿ'ಯಲ್ಲಿ ವಿಷ್ಣುಭಕ್ತನೂ ಲಕ್ಷ್ಮೀಭಕ್ತನೂ ಆದ ನೃಪತುಂಗನ ಪ್ರಶಂಸೆಯೇ ಪರ್ಯಾಯವಾಗಿ ಬಂದಿದೆ. ಇಷ್ಟು ಮಾತ್ರವಲ್ಲದೆ ಗ್ರಂಥದಲ್ಲಿ ಅಲ್ಲಲ್ಲಿ ಪ್ರಯುಕ್ತಗಳಾದ ಲಕ್ಷ್ಯಗಳಲ್ಲಿ ಬರುವ ರಾಜವರ್ಣನೆಯಲ್ಲಿ (ಅವು ದಂಡಿಯ ಶ್ಲೋಕಗಳ ಅನುವಾದಗಳಾಗಿದ್ದರೂ ಕೂಡ ಅವುಗಳಲ್ಲಿನ ಕೆಲವು ಮಾರ್ಪಾಟುಗಳಿಂದಾಗಿ) (ನೋಡಿ: ಪದ್ಯಗಳು II–೮೦;III –೪೨, ೪೩, ೪೪, ೮೧, ೯೬, ೧೧೦, ೧೧೨, ೧೨೯, ೧೩೦, ೧೫೫, ೧೫೭, ೧೯೭ ಮತ್ತು ಅವುಗಳ ಮೇಲಿನ ಟಿಪ್ಪಣಿಗಳು: ಪು.೨೧೮, ೨೭೩, ೨೮೭, ೨೯೪, ೩೦೧, ೩೦೪, ೩೧೨, ೩೨೬, ೩೨೭, ೩೨೯, ೩೩೧, ೩೫೧) ನೃಪತುಂಗ ಪ್ರಶಂಸೆಯ ಛಾಯೆಯನ್ನು ಗುರುತಿಸಬಹುದು. ನೃಪತುಂಗ ಪ್ರಶಂಸಾತ್ಮಕವಾದ ಪದ್ಯಗಳಲ್ಲಿ ಎಲ್ಲಿಯೂ ಜೈನಧರ್ಮದ ಸೋಂಕೂ ಇಲ್ಲ.

ನೃಪತುಂಗ ವ್ಯಕ್ತಿತ್ವ ಚಿತ್ರಣದೊಂದಿಗೆಯೇ ನೃಪತುಂಗ ಸಭಾಸದನ ಚಿತ್ರಣವೂ ಸಾಗಿದೆ. ಪ್ರಥಮ ಪರಿಚ್ಛೇದದಲ್ಲಿಯೇ ನೃಪತುಂಗ ಸಭಾಸದರ ಮನ್ನಣೆಗೆ ಪಾತ್ರನಾಗಲು ಅರ್ಹತೆಯುಳ್ಳ ವಿದ್ವಾಂಸನೊಬ್ಬನು 'ವಿವೇಕ ಬೃಹಸ್ಪತಿ'ಯ ನಗರವನ್ನು ಪ್ರವೇಶಿಸುವ ಸಂದರ್ಭದ ವರ್ಣನೆಯಿದೆ: ಇದರೊಂದಿಗೆಯೆ 'ಪ್ರಿಯತರ' ಮತ್ತು 'ಆಶೀಃ' ಅಲಂಕಾರಗಳಿಗೆ ಕೊಟ್ಟಿರುವ ಲಕ್ಷ್ಯ ಪದ್ಯಗಳನ್ನೂ (III–೨೦೪, ೨೦೬; ಪ. ೨೦೬ರ ಟಿಪ್ಪಣಿ ನೋಡಿ), ಗ್ರಂಥಾಂತ್ಯದಲ್ಲಿ (III–೨೧೮ ರಿಂದ ೨೩೧ ಪದ್ಯಗಳು) ವರ್ಣಿತನಾಗಿರುವ 'ಆಶ್ರಿತ ಮಹಾ ನೃಪತುಂಗ ಸಭಾಸದನ' ವಿವರಪೂರ್ಣವಾದ ವರ್ಣನೆಯನ್ನೂ ಕೂಡಿಸಿಕೊಂಡು ಓದಿದರೆ, ಆ ನೃಪತುಂಗ ಸಭಾಸದನ ಸಮಗ್ರ ಚಿತ್ರ ಆಕೃತಿ ತಳೆದು ನಿಲ್ಲುತ್ತದೆ. ನೃಪತುಂಗನೇ ಗ್ರಂಥಕಾರನಾಗಿದ್ದ ಪಕ್ಷದಲ್ಲಿ, ತನ್ನ ಸಭಾಸದನ ವರ್ಣನೆಯನ್ನು ಸುಮಾರು ೧೫ ಪದ್ಯಗಳಲ್ಲಿ ಇಷ್ಟು ದೀರ್ಘವಾಗಿ, ಸ್ಪಷ್ಟವಾದ ಯಾವ ಕಾರಣವೂ ಇಲ್ಲದೆ, ಮಾಡಿರುವುದರ ಔಚಿತ್ಯವಾದರೂ ಏನು? ತದ್ವಿರುದ್ಧವಾಗಿ, ಈ ಸಭಾಸದನೇ

ಊಹಿಸಲು ಅವಕಾಶವಿದೆ. ಈ ಮೂರು ಪದ್ಯಗಳಲ್ಲಿಯೂ ಕ್ರಮವಾಗಿ 'ಶ್ರೀವಿಜಯಪ್ರಭೂತಮ', 'ಶ್ರೀ ವಿಜಯಪ್ರಭೂತ', 'ಶ್ರೀವಿಜಯಭೂತಿ' ಎಂಬ ಪ್ರಯೋಗಗಳಿವೆ. ಗ್ರಂಥಕಾರನು 'ಶ್ರೀವಿಜಯ' ಎಂದು ಹೇಳಿರುವವರಿಗೆ ಇವು ಬಹುಮಟ್ಟಿಗೆ ಏಕೈಕ ಎನ್ನಬಹುದಾದ, ಪ್ರಬಲವಾದ ಆಂತರಿಕ ಪ್ರಮಾಣ. ಆದ್ದರಿಂದ ಇದನ್ನು ತಮ್ಮ ಪಕ್ಷದ ಕಡೆಗೆ ತಿರುಗಿಸಿಕೊಳ್ಳಲು ಆ ಪಕ್ಷದ ಪ್ರಮುಖವಾದಿಗಳಾದ ರಾಜಪುರೋಹಿತರು ತಮ್ಮ ತರ್ಕಚಾತುರ್ಯವನ್ನೆಲ್ಲಾ ಉಪಯೋಗಿಸಿ, ಭಗವದ್ಗೀತೆಯ ಶ್ಲೋಕದಲ್ಲಿನ ಶ್ರೀ, ವಿಜಯ, ಭೂತಿ ಎಂಬ ಪದಪ್ರಯೋಗಗಳ ಆಧಾರದ ಮೇಲೆ, ಮೇಲ್ಕಂಡ ಪ್ರಯೋಗಗಳಲ್ಲಿ ನೃಪತುಂಗನ ಬಿರುದುಗಳೇ ಉಕ್ತವಾಗಿವೆ ಎಂದು ಸಾಧಿಸಲು ಪ್ರಯತ್ನಪಟ್ಟಿದ್ದಾರೆ. ಈ ವಾದದಲ್ಲಿ ಏನೂ ಹುರುಳಿಲ್ಲ. (ಟಿಪ್ಪಣಿ ೧೮ನ್ನು ನೋಡಿ). ಆದ್ದರಿಂದ ಈ ಬಗೆಗೆ ನಾವು ಪ್ರತಿವಾದವನ್ನು ಬೆಳೆಸಬೇಕಾದ ಅಗತ್ಯ ಕಾಣದು. ಹೆಚ್ಚಿನದಾಗಿ ನಾವು ಹೇಳಬಹುದಾದದ್ದು ಇಷ್ಟೇ: ಗ್ರಂಥದಲ್ಲಿ ಉಕ್ತವಾಗಿರುವ ನೃಪತುಂಗನ (ಅತಿಶಯಧವಳ, ಇತ್ಯಾದಿ) ಬಿರುದುಗಳಲ್ಲಿ ಯಾವುದೂ ಎಲ್ಲಿಯೂ ಅಕ್ಷರಮಾತ್ರದಿಂದ ಕೂಡ ರೂಪವ್ಯತ್ಯಾಸವನ್ನು ಹೊಂದಿಲ್ಲ. ಆದರೆ 'ಶ್ರೀವಿಜಯ **ಪ್ರಭೂತಮ, –ಪ್ರಭೂತ, –ಪ್ರಭೂತಿ'** ಎಂಬೀ ಪದಗಳಲ್ಲಿ ಕಾಣಬರುವ ಅಕ್ಷರವ್ಯತ್ಯಾಸಗಳು ಅವು (ಎಂದರೆ ಆ ಪದಗಳು) ಬಿರುದುಗಳಲ್ಲ ಎಂಬುದಕ್ಕೆ ಸ್ಪಷ್ಟಸಾಕ್ಷ್ಯಗಳು.

ಕವಿರಾಜಮಾರ್ಗವು ನೃಪತುಂಗರಚಿತವಲ್ಲ ಎಂದು ನಿರ್ಧರಿಸಲು – ಹಾಗೆ ನಿರ್ಧರಿಸುವಂದೇ ಅದು ಅನ್ಯಕರ್ತೃಕ ಎಂದು ತಿಳಿಯಲು – ಗ್ರಂಥದಲ್ಲಿ ಸೂಕ್ಷ್ಮ ಪರಿಶೀಲನೆಗೆ ಗೋಚರಿಸುವ ಪ್ರಬಲ ಪ್ರಮಾಣವೆಂದರೆ, ಗ್ರಂಥದಲ್ಲಿ ಮೂಡಿ ನಿಂತಿರುವ ವ್ಯಕ್ತದ್ವಯ ಚಿತ್ರಣ; ಮತ್ತು ಆ ಎರಡು ವ್ಯಕ್ತಿಗಳಿಗೆ ನಾವು ಆರೋಪಿಸಬಹುದಾದ ಮತಧರ್ಮೀಯ ಭಾವನೆ. ಈ ವಿಚಾರವನ್ನೀಗ ಸಂಕ್ಷೇಪವಾಗಿ ಪರಿಶೀಲಿಸೋಣ.

ಮಂಗಳಶ್ಲೋಕಗಳು , **II** ಮತ್ತು **III** ನೆಯ ಪರಿಚ್ಛೇದದಲ್ಲಿ – ಗ್ರಂಥಾಂತ್ಯದಲ್ಲಿ ಬರುವ 'ಉದಾತ್ತಾಲಂಕಾರ'ಕ್ಕೆ ಕೊಟ್ಟಿರುವ ಲಕ್ಷ್ಯಪದಗಳು (ನೋಡಿ: ಟಿಪ್ಪಣಿಗಳು: ಪ.೧೭೩–೧೮೧, ಪು.೩೩೭–೩೪೨) ಇವು ನಿರ್ವಿವಾದವಾಗಿ ನೃಪತುಂಗನನ್ನು ವರ್ಣಿಸುವ ಪದ್ಯಗಳು, ಮಂಗಳ ಶ್ಲೋಕಗಳಲ್ಲಿ ವಿಷ್ಣುಸ್ತುತಿಯ ವ್ಯಾಜದಲ್ಲಿ ನೃಪತುಂಗನ ಬಿರುದುಗಳ ಉಲ್ಲೇಖದ ಮೂಲಕ ಅವನ ಕೊಂಡಾಟವೇ ನಡೆದಿದೆ; ಉದಾತ್ತಾಲಂಕಾರದ ಲಕ್ಷ್ಯಪದ್ಯಗಳಲ್ಲಿ (**III**–೧೮೦, ೧೮೧) ಈಯೆರಡು

ಎಂದು ತಿಳಿಸಿದ್ದಾರೆ. ಪದ್ಯ **II**–೨೮ರ ವೃತ್ತಿಯಲ್ಲಿ 'ನೃಪತುಂಗದೇವನ ಮತದಿಂ ಪೇಳ್ವೆಂ" ಎಂದೂ, ಪ್ರಾಸಕ್ಕಾಗಿ ಉದಾಹರಿಸಿರುವ ನಾಲ್ಕು ಪದ್ಯಗಳಲ್ಲಿ ಒಂದಾದ **II**–೫ನೆಯ ಪದ್ಯದ ಕೆಳಗೆ "ಶ್ರೀ ವಿಜಯನ ಪ್ರಯೋಗ" ಎಂದೂ ಇರುವುದನ್ನು ನಮ್ಮ ಗಮನಕ್ಕೆ ತಂದು "ಶ್ರೀ ವಿಜಯನೇ ನೃಪತುಂಗ ದೇವನೆಂಬುದು ಈ ವ್ಯಾಖ್ಯಾನಕಾರನ ಬರವಣಿಗೆಯಿಂದ ಸ್ಪಷ್ಟವಾಗಿದೆ" ಎಂದು ಪ್ರೊ॥ ಭೀಮಸೇನರಾಯರು ನಿರ್ಧರಿಸಿದ್ದಾರೆ.[೨೧] ಈ ನಿರ್ಧಾರವನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ, ವ್ಯಾಖ್ಯಾನಕಾರನು ಕೇಶಿರಾಜನಿಗಿಂತ ಈಚಿನವನೆಂಬುದು ಸ್ಪಷ್ಟವಷ್ಟೆ. ಒಂದೋ, ಕವಿರಾಜಮಾರ್ಗವನ್ನು ಬರೆದವನು ನೃಪತುಂಗನೋ, ಶ್ರೀವಿಜಯನೋ ಎಂಬ ಗೊಂದಲ ಈಗ ಪ್ರಚಲಿತವಾಗಿರುವಂತೆ ಆಗಲೂ ಇದ್ದು, ವ್ಯಾಖ್ಯಾನಕಾರನು ಆ ಗೊಂದಲಕ್ಕೆ ಒಳಗಾಗಿದ್ದಿರಬೇಕು; ಇಲ್ಲವೋ, ಪ್ರಾಸವಿಚಾರವು ಶಬ್ದಾಲಂಕಾರದ ಭಾಗವಾದ್ದರಿಂದ ಅಲಂಕಾರ ಶಾಸ್ತ್ರಭಾಗವೆಲ್ಲ ನೃಪತುಂಗದೇವ ಮತವೆಂದೂ ವ್ಯಾಕರಣಕ್ಕೆ ಸಂಬಂಧಪಟ್ಟ ಕೃತಿಭಾಗವೆಲ್ಲ ಶ್ರೀವಿಜಯಕೃತವೆಂದೂ ಈ ವ್ಯಾಖ್ಯಾನಕಾರನ ಗ್ರಹಿಕೆಯಾಗಿದ್ದಿರಬೇಕು. ಇಷ್ಟಕ್ಕಿಂತ ಮುಂದೆ ಹೋಗಿ "ಶ್ರೀ ವಿಜಯನೇ ನೃಪತುಂಗ" ಎಂದು ಸಮೀಕರಣ ಮಾಡಿ ತೀರ್ಮಾನಿಸುವುದಕ್ಕೆ ವ್ಯಾಖ್ಯಾನಕಾರನ ಉಲ್ಲೇಖಗಳು ಪ್ರಮಾಣಭೂತ ಆಧಾರಗಳಾಗಲಾರವು. **(iii)**ಇನ್ನೊಂದು ಮುಖ್ಯ ಬಾಹ್ಯಪ್ರಮಾಣ ಭಟ್ಟಾಕಳಂಕನ (ಕ್ರಿ.ಶ.೧೬೦೪) ಶಬ್ದಾನುಶಾಸನದ್ದು. ಅದರ ೨೮೮ನೆಯ ಸೂತ್ರದ (ಆದೇನ್) ವ್ಯಾಖ್ಯಾನದಲ್ಲಿ ದಕ್ಷಿಣೋತ್ತರ ಮಾರ್ಗಪ್ರಯೋಗ ಭೇದವನ್ನು ಪ್ರಸ್ತಾವಿಸಿ, ಇದರ ವಿಚಾರವನ್ನು 'ನೃಪತುಂಗ ಗ್ರಂಥ'ದಲ್ಲಿ ನೋಡತಕ್ಕದ್ದು ಎಂದು ಹೇಳಿದೆ.[೨೨] ಇಲ್ಲಿ, ನೃಪತುಂಗಗ್ರಂಥ ಎಂದರೆ ಕವಿರಾಜಮಾರ್ಗ ಎಂದೇ ತಿಳಿಯಬೇಕು. ಇದರಲ್ಲಿ ಸಂದೇಹವೇನಿಲ್ಲ. ಆದರೆ, ಇದನ್ನು ಪ್ರಮಾಣವೆಂದು ಅಂಗೀಕರಿಸಬಹುದೋ? ಮೇಲೆ, ಶಬ್ದಮಣಿದರ್ಪಣದ ವ್ಯಾಖ್ಯಾನವೊಂದರಲ್ಲಿ ಒಂದು ಬಗೆಯ ಗೊಂದಲ ಸಂಭವಿಸಿರುವುದನ್ನು ಕಂಡಿದ್ದೇವೆ. ಭಟ್ಟಾಕಳಂಕನ ಕಾಲಕ್ಕೆ ಈ ಗೊಂದಲ ಮಾಸಿಹೋಗಿ, ಕವಿರಾಜಮಾರ್ಗದಲ್ಲಿ ನೃಪತುಂಗನ ಹೆಸರೂ ಆತನ ಬಿರುದುಗಳೂ ಮೇಲಿಂದ ಮೇಲೆ ಉಕ್ತವಾಗಿರುವುದರಿಂದಲೂ ಪರಿಚ್ಛೇದಾಂತ ಗದ್ಯದ 'ನೃಪತುಂಗ ದೇವಾನುಮತಮಪ್ಪ' ಎಂಬ ಉಲ್ಲೇಖವೊಂದೇ ಎದ್ದು ಕಾಣುವುದರಿಂದಲೂ ನೃಪತುಂಗನೇ ಗ್ರಂಥಕರ್ತನೆಂಬ ಪ್ರತೀತಿ ಬಲವಾಗಿ ಬೇರೂರಿರಬೇಕು. ಈಗಲೂ ಕವಿರಾಜಮಾರ್ಗವು ನೃಪತುಂಗಕೃತವಲ್ಲ ಎಂದು ದೃಢವಾಗಿ ನಂಬಿರುವವರೂ ಕೂಡ ಅದರ ಪ್ರಸ್ತಾವ

ಗ್ರಂಥಕಾರನೆಂದು ಇಟ್ಟುಕೊಂಡರೆ, ಆತನು ತನ್ನ ಆಶ್ರಯದಾತನಾದ ನೃಪತುಂಗನನ್ನು ಮಂಗಳಶ್ಲೋಕಗಳಲ್ಲಿಯೂ ಹಲಕೆಲವು ಲಕ್ಷ್ಯಪದ್ಯಗಳಲ್ಲಿಯೂ ಪ್ರಶಂಸೆ ಮಾಡಿರುವುದು ಕೇವಲ ಉಚಿತವಾಗಿ ಕಂಡು ಬರುತ್ತದೆ. ಅಲ್ಲದೆ, ಸಭಾಸದನದ ವರ್ಣನೆಯಲ್ಲಿ ಆತ್ಮವೃತ್ತಾಂತ ಕಥನವೇ ಕಂಡು ಬಂದು ಅದೂ ಸ್ವಾಭಾವಿಕವಾಗಿ ತೋರುತ್ತದೆ. ಆಗ, ಜೈನಧರ್ಮಪರವಾದು ಉಲ್ಲೇಖಗಳಲ್ಲಿ ಸಭಾಸದನಿಗೆ ಅನ್ವಿತವಾಗಿ, ಅವಕ್ಕೂ ನೃಪತುಂಗನ ವಿಷ್ಣುಭಕ್ತಿಗೂ ಘರ್ಷಣೆಯ ಲವಲೇಶವೂ ಉಳಿಯುವುದಿಲ್ಲ. ಪರಿಣಾಮದಲ್ಲಿ ವಿಶಾಲ ಧಾರ್ಮಿಕ ದೃಷ್ಟಿಯ ಆಶ್ರಯದಾತ ನೃಪತುಂಗ, 'ಆಶ್ರಿತ ಮಹಾನೃಪತುಂಗ ಸಭಾಸದ' – ಇವರಿಬ್ಬರ ವ್ಯಕ್ತಿತ್ವ ಚಿತ್ರಣದಲ್ಲಿ ಒಂದು ಸುಸಾಂಗತ್ಯ ಏರ್ಪಡುವುದು; ಆಶ್ರಯದಾತನ ಆದೇಶದಂತೆ ('ಅನುಮತ'ದಂತೆ) ಆಶ್ರಿತಸಭಾಸದನಿಂದ ಗ್ರಂಥ ರಚನೆಯಾಗಿದೆ – ಎಂಬ ಸಂದರ್ಭಸಂಭಾವ್ಯತೆ ಹೊಳೆಯುವುದು. ಈ ಸಂದರ್ಭವನ್ನು ಪರಿಭಾವಿಸಿ ಅರ್ಥ ಮಾಡಿಕೊಂಡರೆ, ನೃಪತುಂಗ ಸಭಾಸದನೊಬ್ಬನು 'ನೃಪತುಂಗ ದೇವಮತ'ವನ್ನು ತನ್ನ ಕಾವ್ಯಶಾಸ್ತ್ರದಲ್ಲಿ ಅಳವಡಿಸಿ, ಅದನ್ನು 'ನೃಪತುಂಗದೇವಾನುಮತಮಪ್ಪ ಕವಿರಾಜಮಾರ್ಗ' ಎಂದು ಕರೆದಿರುವುದರ ಔಚಿತ್ಯವೂ ವಿಶದಪಡುವುದು.

ಒಟ್ಟಿನಲ್ಲಿ ಆಂತರಿಕ ಪ್ರಮಾಣಗಳ ಪರೀಕ್ಷೆಯಿಂದ, "ಇದು ನೃಪತುಂಗರಚಿತವಾದ ಗ್ರಂಥವಲ್ಲ" ಎಂಬ "ಮೊದಲನೆಯ ಗಟ್ಟಿ ಮಾತು" ಹೊರಪಡುತ್ತದೆ.

(೨) **ಬಾಹ್ಯ ಪ್ರಮಾಣಗಳು : (i)** ನಾಗವರ್ಮನ ಛಂದೋಂಬುಧಿಯಲ್ಲಿ ಕವಿರಾಜಮಾರ್ಗದ ಕೆಲವು ಪದ್ಯಗಳು (ಕೆಲವು ವ್ಯತ್ಯಾಸಗಳೊಡನೆ) ಉದ್ಧೃತವಾಗಿವೆ. ಕವಿರಾಜಮಾರ್ಗದ ಎರಡು ಪದ್ಯಗಳ ಪಾಠಗಳಲ್ಲಿನ 'ನೃಪತುಂಗ' ಎಂಬ ಹೆಸರು ಛಂದೋಂಬುಧಿಯ ಪಾಠದಲ್ಲಿ ಕಂಡುಬರುವುದಿಲ್ಲ. ಈ ಬಾಹ್ಯಪ್ರಮಾಣ ನೃಪತುಂಗಪಕ್ಷಕ್ಕೆ ಸಹಾಯಕವಾಗಿಲ್ಲ. **(ii)** ಶಬ್ದಮಣಿದರ್ಪಣದಲ್ಲಿ ಕೇಶಿರಾಜನು ಪ್ರಮಾಣಗ್ರಂಥಕಾರರ ಗುಂಪಿನಲ್ಲಿ ಶ್ರೀವಿಜಯನ ಹೆಸರನ್ನು ಸೇರಿಸಿ, ವ್ಯಾಕರಣ ವಿಷಯಕ್ಕೆ ಸಂಬಂಧಿಸಿದ ಎರಡು ಪದ್ಯಗಳನ್ನು ಉದಾಹರಿಸಿದ್ದಾನೆ. ಅವನು ನೃಪತುಂಗನ ಹೆಸರನ್ನು ಹೇಳಿಲ್ಲ. ಇಷ್ಟರಿಂದ, ಕವಿರಾಜಮಾರ್ಗಕಾರನು ಶ್ರೀವಿಜಯ ಎಂದೂ ಖಂಡಿತವಾಗಿ ಹೇಳಲಾಗುವುದಿಲ್ಲ. ಪ್ರೊ|| ಡಿ.ಕೆ.ಭೀಮಸೇನರಾಯರು ಈಚೆಗೆ ತಮಗೆ ದೊರೆತ ಶಬ್ದಮಣಿದರ್ಪಣದ ಪ್ರಾಚೀನ ಪ್ರತಿಯೊಂದರಲ್ಲಿ ಅದರ ವ್ಯಾಖ್ಯಾನಕಾರನು ತನ್ನ ವೃತ್ತಿಯಲ್ಲಿ "ಕವಿರಾಜಮಾರ್ಗದಲ್ಲಿ ಉಕ್ತವಾದಂತೆ ಷಟ್ಪ್ರಾಸಗಳನ್ನು ಅವುಗಳ ಪ್ರಯೋಗೋದಾಹರಣೆಗಳೊಡನೆ ನಿರೂಪಿಸಿದ್ದಾನೆ"

ಪೇಟ್ದಿನುತಕಾವ್ಯಮಂ"* ಎಂದು ಸ್ಪಷ್ಟವಾಗಿ ಹೇಳಿರುವುದರಿಂದ (III–೨೨೩) ಕವಿರಾಜಮಾರ್ಗವನ್ನು 'ಆಶ್ರಿತ ನೃಪತುಂಗ ಸಭಾಸದ'ನೊಬ್ಬನು ಆಶ್ರಯದಾತನಾದ ನೃಪತುಂಗನ ಅಂಕಿತದಲ್ಲಿ ರಚಿಸಿದ್ದಾನೆ ಎಂದು ಕೃತಿಯೇ ಹೇಳುತ್ತಿದೆ. ಇದಕ್ಕೆ ಅನ್ಯಪ್ರಮಾಣ ಅನಗತ್ಯ. ಬೇಕಾದರೆ, ಒಂದು ಹೆಜ್ಜೆ ಮುಂದೆ ಹೋಗಿ, ಕವಿರಾಜಮಾರ್ಗ ರಚನೆಗೆ ಪ್ರೇರಕ ಶಕ್ತಿಯಾಗಿದ್ದುದು ಮಾತ್ರವಲ್ಲದೆ, ಅಲಂಕಾರಶಾಸ್ತ್ರ ವಿಚಾರದಲ್ಲಿ ತನ್ನ ಅಭಿಪ್ರಾಯ ಭೇದಗಳನ್ನು ಸ್ಪಷ್ಟವಾಗಿ ತಿಳಿಯ ಹೇಳಿ ತದನುಗುಣವಾಗಿ ತನ್ನ ಆಶ್ರಿತ ಕವಿಯಿಂದ ಗ್ರಂಥ ರಚನೆ ಮಾಡಿಸಿದನು ಎಂಬ ಅರ್ಥವನ್ನು 'ಬೆಸಸಿದನಖಿಳಧರಾವಲ್ಲಭನಿಂತಮೋಘವರ್ಷ ನೃಪೇಂದ್ರಂ' ಎಂಬ ವಾಕ್ಯಕ್ಕೆ ಕಲ್ಪಿಸಬಹುದು. ಆದರೆ, ಡಾ॥ ಫ್ಲೀಟರು ಸೂಚಿಸಿರುವಂತೆ 'ಬೆಸಸಿದನ್' ಎನ್ನುವುದಕ್ಕೆ 'ಹೇಳಿ ಬರೆಯಿಸಿದನು' ಎಂಬ ಅರ್ಥವನ್ನು ಹಿಂಜುವುದು ಕಷ್ಟ. ಆ ಆಶ್ರಿತ ಕವಿ ಯಾರು ಎಂಬುದು ಈಗ ನಮ್ಮ ಮುಂದಿರುವ ಪ್ರಶ್ನೆ.

### ಕವೀಶ್ವರ ಪಕ್ಷ

ಕವೀಶ್ವರ ಪಕ್ಷದವರಿಗೆ (ಡಾ॥ ಫ್ಲೀಟ್ ಮತ್ತು ಅವರನ್ನು ಅನುಸರಿಸಿರುವ ಮದ್ರಾಸು ಮುದ್ರಣದ ಸಂಪಾದಕದ್ವಯರು) ತಮ್ಮ ವಾದವನ್ನು ಸ್ಥಾಪಿಸಲು ಅತ್ಯಂತ ಮುಖ್ಯ ಆಧಾರಗಳೆಂದರೆ, ಕವಿರಾಜಮಾರ್ಗದ ಪರಿಚ್ಛೇದಾಂತ ಪದ್ಯಗಳು ಮೂರು ಮತ್ತು ದುರ್ಗಸಿಂಹನು (ಕ್ರಿ.ಶ.ಸುಮಾರು ೧೧೪೫) ತನ್ನ ಪಂಚತಂತ್ರದಲ್ಲಿ 'ಶ್ರೀವಿಜಯರ ಕವಿಮಾರ್ಗಂ' ಎಂದು ಹೇಳಿರುವ ಉಕ್ತಿ.

ಕವೀಶ್ವರ ಪಕ್ಷದವರ ವಾದದ ಮುಖ್ಯ ಸಾರಾಂಶ ಇಷ್ಟು:

> ನೃಪತುಂಗನು ಈ ಗ್ರಂಥದ ಕರ್ತೃವಲ್ಲ. ದುರ್ಗಸಿಂಹನ ಹೇಳಿಕೆಯಂತೆ, ಶ್ರೀವಿಜಯನೆಂಬ ಕವಿಯು 'ಕವಿಮಾರ್ಗ'ವೆಂಬ ಒಂದು ಲಕ್ಷಣ ಗ್ರಂಥವನ್ನು ಬರೆದಿದ್ದನು. ಕವಿರಾಜಮಾರ್ಗದಲ್ಲಿ ಉಕ್ತನಾದ ಪರಮ ಶ್ರೀವಿಜಯನೇ ಈತ. ಕವಿರಾಜಮಾರ್ಗದ ಪರಿಚ್ಛೇದಾಂತ್ಯ ಪದ್ಯಗಳಲ್ಲಿ "ಶ್ರೀವಿಜಯ ಪ್ರಭೂತಮನಿದಂ" ಇತ್ಯಾದಿ ಭಾಗಗಳಿಂದ ಶ್ರೀವಿಜಯನು ಒಂದು ಅಲಂಕಾರ ಗ್ರಂಥವನ್ನು ಬರೆದಿದ್ದನೆಂದು ಸೂಚಿತವಾಗಿದೆ. ಈ ಅಲಂಕಾರ ಗ್ರಂಥವೇ ಆ 'ಕವಿಮಾರ್ಗ'. "ಕವೀಶ್ವರನೆಂಬ ಬಿರುದುಳ್ಳ ಒಬ್ಬ ಕವಿ ಶ್ರೀವಿಜಯಕೃತವಾದ ಈ 'ಕವಿಮಾರ್ಗ'ವನ್ನೆ ತೆಗೆದುಕೊಂಡು ಕೆಲವೆಡೆಗಳಲ್ಲಿ ಮಾರ್ಪಡಿಸಿ, ಮತ್ತೆ ಕೆಲವೆಡೆಗಳಲ್ಲಿ ಹೊಸದಾಗಿ ಕೆಲವು ವಿಷಯಗಳನ್ನು ಸೇರಿಸಿ, 'ಕವಿರಾಜಮಾರ್ಗ'ವೆಂಬ ಹೆಸರಿನಿಂದ ಈ ಗ್ರಂಥವನ್ನು ಬರೆದು, ತನ್ನ ಆಶ್ರಯದಾತ .... ಅಮೋಘವರ್ಷನೆಂಬ ರಾಷ್ಟ್ರಕೂಟ ಸಾರ್ವಭೌಮನಿಂದ ವಿಶೇಷ ಪ್ರಯೋಜನವನ್ನು

ಬಂದಾಗ 'ನೃಪತುಂಗನ ಕವಿರಾಜಮಾರ್ಗ' ಎಂದು ಹೇಳುವುದು ರೂಢಿಯಾಗಿಬಿಟ್ಟಿದೆ! ರೂಢಿ ಅಷ್ಟು ಬಲವತ್ತರವಾದದ್ದು. ದಿವಂಗತ ವೆಂಕಣ್ಣಯ್ಯನವರು ಹೇಳುವಂತೆ, "ಒಟ್ಟಿನಲ್ಲಿ ಬಾಹ್ಯ ಪ್ರಮಾಣಗಳು ಶ್ರೀ ವಿಜಯನ ಪಕ್ಷದವರಿಗೆ ತಕ್ಕಮಟ್ಟಿಗೆ ಸಹಾಯಕಾರಿಗಳಾಗಿರುವಂತೆ ತೋರುತ್ತದೆ. ದುರ್ಗಸಿಂಹ ಕೇಶಿರಾಜರು ಭಟ್ಟಾಕಳಂಕನಿಗಿಂತಲೂ ಕವಿರಾಜಮಾರ್ಗವು ಹುಟ್ಟಿದ ಕಾಲಕ್ಕೆ ಹೆಚ್ಚು ಸಮೀಪದವರು. ದುರ್ಗಸಿಂಹನು ೧೨ನೆಯ ಶತಮಾನದವನು. ಭಟ್ಟಾಕಳಂಕನಾದರೋ ೧೭ನೆಯ ಶತಮಾನದವನು; ಆದುದರಿಂದ, ಕವಿರಾಜಮಾರ್ಗದ ಗ್ರಂಥಕರ್ತೃವು ಯಾರು ಎಂದು ಸಂದೇಹ ಹುಟ್ಟಿದಾಗ, ಭಟ್ಟಾಕಳಂಕನ ಸಾಕ್ಷ್ಯಕ್ಕಿಂತಲೂ ದುರ್ಗಸಿಂಹ ಕೇಶಿರಾಜರ ಸಾಕ್ಷ್ಯವು ಹೆಚ್ಚು ವಿಶ್ವಾಸಾರ್ಹವಾಗುವುದು ಸ್ವಾಭಾವಿಕವಾಗಿದೆ." ಅಲ್ಲದೆ, ಶಬ್ದಾನುಶಾಸನದ ಸೂತ್ರಕಾರ – ವೃತ್ತಿಕಾರನೇ ಬೇರೆ, ವ್ಯಾಖ್ಯಾನಕಾರನೇ ಬೇರೆ ಎಂಬುದಾಗಿ ದಿವಂಗತ ಕಾನಕಾನಹಳ್ಳಿ ವರದಾಚಾರ್ಯರು ಒಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು. ಅದರಲ್ಲಿ ನಿಜಾಂಶವಿದ್ದರೆ, ಮೇಲ್ಕಂಡ ಉಲ್ಲೇಖ ಭಟ್ಟಾಕಳಂಕನದಾಗದೆ, ಅವನ ವ್ಯಾಖ್ಯಾನಕಾರನದ್ದೆನಿಸುತ್ತದೆ. ಅದರ ವಿಶ್ವಾಸಾರ್ಹತೆ ಇನ್ನೂ ಕಡಿಮೆಯಾಗುತ್ತದೆ, ಅವನು ಇನ್ನೂ ಈಚಿನವನಾಗುವುದರಿಂದ.

ಹೀಗೆ, ಬಾಹ್ಯಾಂತರಿಕ ಪ್ರಮಾಣಗಳನ್ನು ಪರೀಕ್ಷಿಸಿ ನೋಡಿದ ಮೇಲೆ, ಕವಿರಾಜಮಾರ್ಗವು ನೃಪತುಂಗ ಕೃತವಲ್ಲ ಎಂಬ ತೀರ್ಮಾನಕ್ಕೆ ಬರಬೇಕಾದದ್ದು ಅನಿವಾರ್ಯವಾಗುತ್ತದೆ.

ನೃಪತುಂಗನು ಕರ್ತೃವಲ್ಲ ಎಂದು ಸಿದ್ಧವಾದ ಮೇಲೆ, ಕರ್ತೃ ಯಾರು ಎಂಬ ಪ್ರಶ್ನೆ ಹುಟ್ಟುವುದು ಸಹಜ. ಪ್ರಥಮ ಪರಿಚ್ಛೇದದ ಎರಡು ಪದ್ಯಗಳಲ್ಲಿಯೂ (I–೫, ೬) ತೃತೀಯ ಪರಿಚ್ಛೇದದ ಅಂತ್ಯದ ಕೆಲವು ಪದ್ಯಗಳಲ್ಲಿಯೂ (III–೨೧೮ ರಿಂದ ೨೩೦) 'ಆಶ್ರಿತ ನೃಪತುಂಗ ಸಭಾಸದನ' ಪ್ರಶಂಸಾತ್ಮಕ ವರ್ಣನೆಯಿದೆ. ಇದು ಯಾವನೋ ನೃಪತುಂಗ ಸಭಾಸದನ ವರ್ಣನೆ ಎನ್ನುವುದರಲ್ಲಿ ಅರ್ಥವಿಲ್ಲ. "ಆಶ್ರಿತ ನೃಪತುಂಗ ಸಭಾಸದಂ... ಕೂಡೆ

* ಕವಿರಾಜಮಾರ್ಗ ಲಕ್ಷಣಗ್ರಂಥ. ಇದನ್ನು ಕಾವ್ಯ ಎಂದು ಕರೆಯುವುದರ ಔಚಿತ್ಯ ಹೇಗೆ ಎಂಬ ಪ್ರಶ್ನೆ ಮೂಡುವುದು ಸಹಜ. ಗ್ರಂಥದಲ್ಲಿ ಲಕ್ಷಣ ಪದ್ಯಗಳ ಜೊತೆಗೆ ಸ್ವವಿರಚಿತ ಲಕ್ಷ್ಯಪದ್ಯಗಳೂ, ಕನ್ನಡ ನಾಡು ನುಡಿ ಮುಂತಾದ ಶಾಸ್ತ್ರಾತೀತ ವಿಷಯಗಳ ವ್ಯಾವರ್ಣನೆಯೂ ಇರುವುದರಿಂದ ಗ್ರಂಥಕಾರನು ತನ್ನ ಕೃತಿಯನ್ನು ಕಾವ್ಯ ಎಂದೂ ತನ್ನನ್ನು ಕವಿ ಎಂದೂ ('ಪಾರ್ಥಿವಲೋಕನಪ್ಪಂ, ಕವಿ ಎಂದುಂ, ನೃಪತುಂಗ ಸಭಾಸದರ್ ವರ್ಣಿಕುಂ'– ಉಉಉ ೨೨೪–೨೫) ಕರೆದುಕೊಂಡಿರುವುದು ಸ್ವಾಭಾವಿಕ.

ಪ್ರಸ್ತಾವಕ್ಕೆ ಅವಕಾಶವಿಲ್ಲ. ಗ್ರಂಥದಲ್ಲಿ ಉದ್ದಕ್ಕೂ ಲಕ್ಷಣ ಪದ್ಯಗಳಲ್ಲಿ 'ನೃಪತುಂಗ ಮಾರ್ಗ', 'ನೃಪತುಂಗಮತ' ಎಂಬ ಉಲ್ಲೇಖಗಳಿರುವ ಹಾಗೆ, ಯಾವ ಲಕ್ಷ್ಯಪದ್ಯದಲ್ಲಿಯೂ ನೇರವಾಗಿ ನೃಪತುಂಗನ ಹೆಸರನ್ನು ಎತ್ತಿಹೇಳದಿರುವಾಗ ಇದೊಂದೆಡೆಯಲ್ಲಿ ಅದು ಉಕ್ತವಾಗಿದೆ ಎನ್ನುವುದು ಅಸಂಭಾವ್ಯ. 'ಶತಮಖಸದೃಶ' ಎಂದು ಪುನರುಕ್ತವಾಗಿರುವೆಡೆಯಲ್ಲಿ ಯಾರೋ ಪಂಡಿತ ಪ್ರತಿಕಾರರು ಮಾಡಿರುವ ವ್ಯತ್ಯಾಸವಿರಬೇಕು ಈ ಪಾಠ. (ಪಾಠಕರು ನೃಪತುಂಗ ಪಕ್ಷಪಾತಿಯಾಗಿದ್ದರಿಂದ ಇಲ್ಲಿ 'ಶತಮಖಸದೃಶ' ಪಾಠವನ್ನು ಬಿಟ್ಟು 'ನೃಪತುಂಗ' ಪಾಠವನ್ನು ಸ್ವೀಕರಿಸಿರುವುದು ಸಹಜವಾಗಿಯೇ ಇದೆ). ಆದ್ದರಿಂದ ಈ ವ್ಯತ್ಯಾಸವು 'ಕವಿಮಾರ್ಗ' ಗ್ರಂಥದ ಅಸ್ತಿತ್ವದ ಊಹೆಗೆ ಆಧಾರವಾಗಲಾರದು.

ಇನ್ನು, II–೪೫೮ನೆಯ ಪಂಕ್ತಿಖಂಡ: 'ನೃಪತುಂಗದೇವ ವಿದಿತಕ್ರಮದಿಂ' ಇದರ ಎಡೆಯಲ್ಲಿ ಛಂದೋಂಬುಧಿಯ ಪಾಠ: 'ಕಂಜಾಯತಾಕ್ಷೀ ಕೇಳದನೊರೆವೆಂ', 'ನೃಪತುಂಗದೇವ ವಿದಿತಕ್ರಮದಿಂ' ಎಂಬ ವಾಕ್ಯಗ್ರಂಥದಲ್ಲಿ ದೊರಕುವ ಇಂತಹ ಅನೇಕ ಉಕ್ತಿಗಳಿಗೆ ಅನುಗುಣವಾಗಿಯೆ ಇದೆ. ಇದು ಯಾವುದೋ ಮೂಲಗ್ರಂಥವೊಂದರ ವ್ಯತ್ಯಸ್ತಪಾಠ ಎಂದು ಅನುಮಾನಿಸುವುದಾದರೆ, ತತ್ಸದೃಶಗಳಾದ ಇತರ ಉಕ್ತಿಗಳ ವಿಷಯದಲ್ಲಿಯೂ ಹಾಗೆಯೇ ಅನುಮಾನಿಸಬೇಕಾಗುತ್ತದೆ! ಎಂದರೆ, ತನ್ನ ಆಶ್ರಯದಾತ ನೃಪತುಂಗನನ್ನು ಮೆಚ್ಚಿಸುವ ಇಂಥ ಉಕ್ತಿಗಳನ್ನು ಮಾತ್ರ ಅಳವಡಿಸಿ ಆ ಮೂಲಗ್ರಂಥವನ್ನು ತನ್ನದಾಗಿಸಿಕೊಂಡ 'ಕವಿಚೋರ'ನಿವನು. 'ಕವೀಶ್ವರ'ನಲ್ಲ ಎನ್ನಬೇಕಾಗುತ್ತದೆ! II–೩೦ನೆಯ ಪದ್ಯದ 'ಕೃತಕೃತ್ಯಮಲ್ಲವಲ್ಲಭ' ಎಂಬ ಮಾತಿನ ಬಗೆಗೂ ಮೇಲಿನ ಟೀಕೆಯೇ ಅನ್ವಯಿಸುತ್ತದೆ.

ಆದ್ದರಿಂದ, ಕವಿರಾಜಮಾರ್ಗದ ಮೇಲ್ಕಂಡ ಮೂರು ಪದ್ಯಗಳಿಗೂ ಛಂದೋಂಬುಧಿಯಲ್ಲಿ ಅನುವಾದಗೊಂಡಿರುವ ಅವೇ ಪದ್ಯಗಳಿಗೂ ಇರುವ ಪಾಠವ್ಯತ್ಯಾಸಗಳ ಆಧಾರದ ಮೇಲೆ, ಶ್ರೀವಿಜಯ ವಿರಚಿತ ಪ್ರಾಚೀನತರ 'ಕವಿಮಾರ್ಗ'ವೊಂದು ಇತ್ತೆಂದು ಊಹಿಸುವುದು ಕೇವಲ ಕಲ್ಪನಾ ವಿಲಾಸ.

ಶಬ್ದಮಣಿ ದರ್ಪಣದಲ್ಲಿ ಅನುವಾದಗೊಂಡಿರುವ ಕವಿರಾಜಮಾರ್ಗದ ಪದ್ಯಗಳ ವಿಚಾರದಲ್ಲಿಯೂ ನಮ್ಮ ಅಭಿಪ್ರಾಯ ಮೇಲ್ಕಂಡಂತೆಯೇ ಇದೆ. ಕೇಶಿರಾಜನು ಅನುವಾದ ಮಾಡಿರುವ ಕವಿರಾಜಮಾರ್ಗದ ಪ್ರಯೋಗ ಪದ್ಯಗಳಲ್ಲಿ ಗಮನಾರ್ಹ ವ್ಯತ್ಯಾಸವಿದೆ. (ನೋಡಿ: ಅನುಬಂಧ–೭) ಕೇಶಿರಾಜನು ಶ್ರೀವಿಜಯನ ಹೆಸರನ್ನು ಮಾತ್ರ ಹೇಳಿ, ಕವಿರಾಜಮಾರ್ಗದ ಪದ್ಯಗಳನ್ನು ಉದಾಹರಿಸಿ, ಕವಿರಾಜಮಾರ್ಗದ

ಹೊಂದಿ, ನೃಪತುಂಗನೇ ಈ ಗ್ರಂಥವನ್ನು ಬರೆದನೆಂಬ ಪ್ರವಾದವು ಬರಬೇಕೆಂದು ತನ್ನ ಹೆಸರನ್ನು ಎಲ್ಲಿಯೂ ಸ್ಪಷ್ಟವಾಗಿ ಹೇಳದೆ, ಸೂಕ್ಷ್ಮ ವಿಚಾರಿಗಳಿಗೆ ಮಾತ್ರ ತಿಳಿಯುವಂತೆ, ಅಲ್ಲಿ ಈ ವಿಷಯವನ್ನು ಸೂಚಿಸಿರುವನೆಂದು ಊಹಿಸುವುದಕ್ಕೆ ಕಾರಣಗಳಿವೆ" (ಕ.ರಾ.ಮಾರ್ಗ, ಮದ್ರಾಸು, ಮುದ್ರಣದ ಪೀಠಿಕೆ; ಪು iii.).

ದುರ್ಗಸಿಂಹನ ಹೇಳಿಕೆಯಂತೆ, ಶ್ರೀ ವಿಜಯನೆಂಬುವನು 'ಕವಿಮಾರ್ಗ'ವನ್ನು ಬರೆದಿರುವನೆಂದು ಇಟ್ಟುಕೊಳ್ಳೋಣ. ಆ 'ಕವಿಮಾರ್ಗ' ನಮಗೆ ಸಿಕ್ಕಿಲ್ಲ. ಲಭ್ಯವಾಗದೆ ಇರುವ ಒಂದು ಗ್ರಂಥದ ಆಧಾರದ ಮೇಲೆ ಕವೀಶ್ವರನೆಂಬುವನು ಕವಿರಾಜಮಾರ್ಗವನ್ನು ಬರೆದನೆಂದು ಹೇಳಲು ಕವೀಶ್ವರಪಕ್ಷವು ಕೊಡುವ ಆಧಾರಗಳು ಆಧಾರಗಳೇ ಆಗಲಾರವು. ಆ ಮುಖ್ಯ ಆಧಾರಗಳು ಯಾವುವೆಂದರೆ, ನಾಗವರ್ಮನ 'ಛಂದೋಂಬುಧಿ'ಯಲ್ಲಿಯೂ ಕೇಶಿರಾಜನ 'ಶಬ್ದಮಣಿದರ್ಪಣ'ದಲ್ಲಿಯೂ ಪಾಠವ್ಯತ್ಯಾಸದೊಡನೆ ಉದ್ಧೃತವಾಗಿರುವ ಕವಿರಾಜಮಾರ್ಗದ ಕೆಲವು ಉದಾಹರಣ ಪದ್ಯಗಳು (ನೋಡಿ: ಅನುಬಂಧ ೭) ಇವುಗಳಲ್ಲಿ ಒಂದೆರಡನ್ನು ಈಗ ಪರಿಶೀಲಿಸೋಣ:

II – ೪೪ ನೆಯ ಪದ್ಯ: ಈ ಪದ್ಯದ ನಾಲ್ಕನೆಯ ಪಂಕ್ತಿ, 'ಶತಮುಖ ಸದೃಶಾನುಭಾವನೊಲವಿಂ ಪೆತ್ತಂ' ಎಂದಿದೆ. ಛಂದೋಂಬುಧಿಯಲ್ಲಿಯೂ ಹೀಗೆಯೇ ಇದೆ. ಪಾಠಕರ ಮುದ್ರಣದಲ್ಲಿ 'ಸತತಂ ನೃಪತುಂಗನೊಲವಿಂ ಪೆತ್ತಂ' ಎಂದಿದೆ; ಆದರೆ ಪಾಠಕರು 'ಶತಮುಖ... ಪೆತ್ತಂ' ಎಂಬ ಪಾಠವನ್ನು ಪಾಠಾಂತರವಾಗಿ ಅಡಿಟಿಪ್ಪಣಿಯಲ್ಲಿ ಕೊಟ್ಟಿದ್ದಾರೆ. ಇದನ್ನು ಫ್ಲೀಟರು ಗಮನಿಸಿದಂತೆ ಕಾಣಲಿಲ್ಲ. ಆದ್ದರಿಂದ ಪಾಠವ್ಯತ್ಯಾಸದ ಆಧಾರದ ಮೇಲೆ ಕವೀಶ್ವರನೂ ನಾಗವರ್ಮನೂ (ಅಥವಾ ಛಂದೋಂಬುಧಿಯಲ್ಲಿ ಕವಿರಾಜಮಾರ್ಗದ ಪದ್ಯಗಳನ್ನು ಪ್ರಕ್ಷೇಪ ಮಾಡಿರುವವನು) ಒಂದೇ ಮೂಲದಿಂದ (=ಶ್ರೀ ವಿಜಯನ ಕವಿಮಾರ್ಗ) ಪದ್ಯಗಳನ್ನು ಸ್ವೀಕರಿಸಿರುವರೆಂದೂ, ಕವಿರಾಜಮಾರ್ಗಕಾರನು ಸ್ವೀಕೃತ ಪದ್ಯವನ್ನು ಮಾರ್ಪಡಿಸಿಕೊಂಡಿರುವನೆಂದೂ ಹೇಳಲು ಆಧಾರವಿಲ್ಲ. 'ಶತಮುಖಸದೃಶಂ... ಪೆತ್ತಂ' ಎಂಬುದೇ ಮೂಲಪಾಠ. ಏಕೆಂದರೆ, II–೩೮ನೆಯ ಪದ್ಯದಲ್ಲಿಯೂ ವರ್ಗಪ್ರಾಸ ಪ್ರಯೋಗಕ್ಕೆ ಹೊಂದುವಂತೆ ('ಖ' ಪ್ರಾಸಕ್ಕಾಗಿ) 'ಶತಮುಖಸದೃಶ' ಎಂಬ ವಿಶೇಷಣದ ಪ್ರಯೋಗವಿದೆ. ಪ್ರಾಸ ಸಂಬಂಧವಾದ ಪದ್ಯಗಳೆಲ್ಲವೂ ಬಹುಮಟ್ಟಿಗೆ ರಾಮಾಯಣ ಕಥೆಗೆ ಸಂಬಂಧಿಸಿದ್ದು, 'ಶತಮುಖಸದೃಶ' ಎಂದರೆ ರಾಮ; ಆದ್ದರಿಂದ, ಪ್ರಸಕ್ತ ಪದ್ಯದಲ್ಲಿಯೂ 'ಶತಮುಖಸದೃಶ'ನ ಉಲ್ಲೇಖವೇ ಸಂಭಾವ್ಯ ಹಾಗೂ ಉಚಿತ; 'ನೃಪತುಂಗ'ನ

ಆದಲ್ಲಿ, ಅದು 'ಕವಿಮಾರ್ಗ'ವೇ? 'ಕವಿರಾಜಮಾರ್ಗ'ವೆ? ದುರ್ಗಸಿಂಹನಂಥ ಸಮರ್ಥ ಕವಿ ಛಂದಸ್ಸಿನ ಅನುಕೂಲಕ್ಕಾಗಿ ಗ್ರಂಥದ ಹೆಸರನ್ನು ಸಂಕ್ಷಿಪ್ತಗೊಳಿಸಿದ್ದಾನೆಂದರೆ ನಂಬಬಹುದೆ? ಹೀಗೆ ಈ ಉಕ್ತಿ ವಾದಗ್ರಸ್ತವಾಗಿದೆ.

ಶ್ರೀವಿಜಯನ 'ಕವಿಮಾರ್ಗ'ಜನ್ಯವಾದದ್ದು 'ಕವಿರಾಜಮಾರ್ಗ' ಎಂಬ ತಮ್ಮ ವಾದವನ್ನು ಬಲಪಡಿಸಲು ಕವೀಶ್ವರಪಕ್ಷದವರು ಕವಿರಾಜಮಾರ್ಗದ ಉಕ್ತಿಯೊಂದಕ್ಕೆ ತಮ್ಮದೇ ಆದ ವಿಚಿತ್ರ ರೀತಿಯಲ್ಲಿ ಅರ್ಥಕಲ್ಪನೆ ಮಾಡಲು ಪ್ರಯತ್ನಿಸಿದ್ದಾರೆ. "ಸವಿಶೇಷಗುಣಮನತಿಶಯಧವಳೋಕ್ತಿಕ್ರಮದಿನಜೆಪುವೆಂ **ತದ್ಭವದೊಳ್**" (II–೫೫, ಪು. ೪೮) ಎಂಬುದೇ ಮದ್ರಾಸು ಮುದ್ರಣದ ಸಂಪಾದಕರ 'ಕೈವೊಕ್ಕನಿಧಿ'! 'ತತ್ + ಭವದೊಳ್' (=ಆ ಕವಿಮಾರ್ಗದಿಂದ ಹುಟ್ಟಿದ + ಈ ಕವಿರಾಜ ಮಾರ್ಗದಲ್ಲಿ) ಎಂಬ ಪದಕ್ಕೆ ಅವರು ಕಲ್ಪಿಸಿರುವ ಅರ್ಥವಿವರಣೆ ಹಾಸ್ಯಾಸ್ಪದವಾದುದು. (II–೫೫ ರ ಟಿಪ್ಪಣಿಯನ್ನು ನೋಡಿ: ಪು.೨೦೬–೨೦೭). ಶ್ರೀವಿಜಯನ ಕವಿಮಾರ್ಗವೊಂದು ಇದ್ದಿತೆಂದು ಇಟ್ಟುಕೊಂಡರೂ, ಅದರ ರೂಪಾಂತರ ಈ ಕವಿರಾಜಮಾರ್ಗ ಎಂಬ ವಾದ 'ಗಾಂಪರ ಕುದುರೆಯ ಮೊಟ್ಟೆ'ಯೇ ಸರಿ.

'ಕವಿಮಾರ್ಗ' ಇದ್ದಿತೋ ಇಲ್ಲವೋ, ಕವೀಶ್ವರನೊಬ್ಬನು ಇದ್ದನೋ?

ಕವಿರಾಜಮಾರ್ಗದ ತರುವಾಯದ ಕವಿಗಳಲ್ಲಿ ಯಾರೂ ಕವೀಶ್ವರನೆಂಬ ಕವಿಯನ್ನು ಸ್ಮರಿಸಿಲ್ಲ. ಛಂದೋಂಬುಧಿಯಲ್ಲಿ (ಪ. ೨೫೨) ಔಪಚ್ಛಾಂದಸಿಕ ಛಂದಸ್ಸನ್ನು 'ಕವೀಶ್ವರೋಕ್ತಂ' ಎಂದು ಉಲ್ಲೇಖಿಸಿರುವ ಬಗೆಗೆ ಫ್ಲೀಟರು ಗಮನ ಸೆಳೆದು, ಅಲ್ಲಿ ಕವೀಶ್ವರ ಎಂದರೆ ಕವೀಶ್ವರ ಬಿರುದುಳ್ಳ ಶ್ರೀವಿಜಯನೆಂದೇ ಅಭಿಪ್ರಾಯ ಪಟ್ಟಿದ್ದಾರೆ. ಅದು ಯಾರಾಗಿದ್ದರೂ, ಕವಿರಾಜಮಾರ್ಗದ ಕರ್ತೃ ಎಂದು ಊಹಿಸಲಿಕ್ಕಾಗದು. ಕವಿರಾಜಮಾರ್ಗದಲ್ಲಿ ಛಂದಸ್ಸಿನ ವಿಚಾರವಿಲ್ಲ. ಕವಿರಾಜಮಾರ್ಗದಲ್ಲಿಯೇ 'ಪರಮ ಶ್ರೀವಿಜಯ ಕವೀಶ್ವರ....' (I–೩೨) ಎಂಬ ಉಲ್ಲೇಖವಿದೆ. ಅದು 'ಶ್ರೀವಿಜಯ' ನಾಮಕ್ಕೆ ತಗುಲಿಕೊಂಡಿರುವ ಬಿರುದು ಇಲ್ಲವೆ (ಕವಿಶ್ರೇಷ್ಠ ಎಂಬ ಅರ್ಥದ) ವಿಶೇಷಣ. ಕವಿರಾಜಮಾರ್ಗವು ಶ್ರೀವಿಜಯಕೃತ ಕವಿಮಾರ್ಗದಿಂದ ಹುಟ್ಟಿದ್ದು ಎಂದು ವಾದಿಸಲು, ಫ್ಲೀಟ್ ಮುಂತಾದವರು ಪರಿಚ್ಛೇದಾಂತ ಪದ್ಯಗಳ (೧)'ಕವಿಪ್ರಕರಂ ಶ್ರೀ ವಿಜಯ ಪ್ರಭೂತಮನಿದಂ ಕೈಕೊಳ್ವುದೀ ಮಾಟ್ಕೆ'ಯಿಂ, (೨)'ಅವಜು'ಂ ಸಮೆದೊಂದು ಕಾವ್ಯದಿಂ ಶ್ರೀವಿಜಯಪ್ರಭೂತ ಮುದಮಂ ತನಗಾಗಿಸಿದೊಂ ಕವೀಶ್ವರಂ',

ಇಲ್ಲವೆ ಕವೀಶ್ವರನ ಹೆಸರುಗಳನ್ನು ಹೇಳದೆ ಇರುವುದರಿಂದ, ಕೇಶಿರಾಜನು ಶ್ರೀವಿಜಯನಿಂದ (ಎಂದರೆ ಅವನ'ಕವಿಮಾರ್ಗ'ದಿಂದ) ಪದ್ಯಗಳನ್ನು ತೆಗೆದುಕೊಂಡು ಉದಾಹರಿಸಿದ್ದಾನೆ ಎಂದು ಫ್ಲೀಟರ ತರ್ಕ. ಕೇಶಿರಾಜನು ಕೆಲವು ಲಕ್ಷ್ಯಕಾರರ ಹೆಸರಿನೊಂದಿಗೆ ಶ್ರೀವಿಜಯನ ಹೆಸರನ್ನೂ ಸೇರಿಸಿದ್ದಾನೆ. ಯಾವ ಆಕರಗ್ರಂಥದ ಹೆಸರನ್ನೂ ಹೇಳಿಲ್ಲ. ಆದ್ದರಿಂದ ಕವಿರಾಜಮಾರ್ಗವನ್ನು ಹೆಸರಿಸಬೇಕಾದ ಅಗತ್ಯವಿರಲಿಲ್ಲ. ಕೇಶಿರಾಜನು ಒಂದು ವೇಳೆ (ದುರ್ಗಸಿಂಹನು 'ಶ್ರೀವಿಜಯರ ಕವಿಮಾರ್ಗಂ' ಎಂದು ಹೇಳಿರುವುದರಿಂದ) 'ಶ್ರೀವಿಜಯನ ಕವಿಮಾರ್ಗ'ದಿಂದಲೇ ಪದ್ಯಗಳನ್ನು ತೆಗೆದುಕೊಂಡಿದ್ದಾನೆ ಎಂದು ಭಾವಿಸಿದರೂ ಇದರಿಂದ ಕವಿರಾಜಮಾರ್ಗವು ಕವೀಶ್ವರಕೃತ ಎಂದು ಸಿದ್ಧವಾಗದು.

ಆದ್ದರಿಂದ, ಛಂದೋಂಬುಧಿಯಲ್ಲಿಯೂ ಶಬ್ದಮಣಿದರ್ಪಣದಲ್ಲಿಯೂ ಅನುವಾದಗೊಂಡಿರುವ ಕವಿರಾಜಮಾರ್ಗದ ಪದ್ಯಗಳಲ್ಲಿ ಕಂಡು ಬರುವ ಪಾಠ ವ್ಯತ್ಯಾಸಗಳಿಗೆ ಕಾರಣವೇ ಬೇರೆ: ಒಂದೋ, ನಾಗವರ್ಮ (ಇಲ್ಲವೆ ಪದ್ಯಗಳ ಪ್ರಕ್ಷೇಪಕಾರ) ಮತ್ತು ಕೇಶಿರಾಜರು ಉದ್ದೇಶಪೂರ್ವಕವಾಗಿಯೇ ವ್ಯತ್ಯಾಸಗಳನ್ನು ಮಾಡಿರಬೇಕು; ಇಲ್ಲವೆ, ಪಾಠವ್ಯತ್ಯಾಸಗಳಿರುವ ಕವಿರಾಜಮಾರ್ಗದ ಪ್ರತಿಗಳಿಂದ ಪದ್ಯಗಳನ್ನು ತೆಗೆದುಕೊಂಡಿರಬೇಕು; ಇಲ್ಲವೆ, ಇವೆರಡೂ ನಡೆದಿರಬಹುದು; ಪಾಠವ್ಯತ್ಯಾಸವಿರುವ ಹಸ್ತಪ್ರತಿಗಳಿಂದ ಪದ್ಯಗಳನ್ನು ಸ್ವೀಕರಿಸಿ ತಮ್ಮ ಉದ್ದೇಶಕ್ಕನುಗುಣವಾದ ಕೆಲವು ವ್ಯತ್ಯಾಸಗಳನ್ನೂ ಮಾಡಿಕೊಂಡಿರಬಹುದು.

ಇಷ್ಟರ ಜೊತೆಗೆ 'ಶ್ರೀವಿಜಯರ ಕವಿಮಾರ್ಗಂ' ಎಂಬ ದುರ್ಗಸಿಂಹನ ಉಕ್ತಿಯಲ್ಲಿ 'ಕವಿಮಾರ್ಗ' ಎಂದರೆ 'ಗ್ರಂಥ' ಎಂದೇ ಅರ್ಥ ಮಾಡಬೇಕಾಗಿಲ್ಲ ಎಂಬ ಅಭಿಪ್ರಾಯವೂ ಹೊರಟಿದೆ. ಕಾರಣ, 'ಕಾವ್ಯರಚನಾಪದ್ಧತಿ' ಎಂಬ ಅರ್ಥದಲ್ಲಿ 'ಕವಿಮಾರ್ಗ', 'ಕಾವ್ಯಮಾರ್ಗ' ಎಂಬ ಪದಗಳನ್ನು ಅನೇಕ ಕವಿಗಳು ಬಳಸಿಕೊಂಡು ಬಂದಿದ್ದಾರೆ. ಕವಿರಾಜಮಾರ್ಗದಲ್ಲಿಯೇ ಈ ಸಾಮಾನ್ಯಾರ್ಥದಲ್ಲಿ ಈ ಶಬ್ದದ ಪ್ರಯೋಗವಾಗಿದೆ. (II–೮೧, ಪು.೫೩) ದುರ್ಗಸಿಂಹನು 'ಕವಿಮಾರ್ಗ'ವನ್ನು 'ಕವಿರಾಜಮಾರ್ಗ'ದ ಸಂಕ್ಷಿಪ್ತ ರೂಪವಾಗಿ ಪ್ರಯೋಗಿಸಿರಬಹುದು ಎಂಬ ಊಹೆಯೂ ನಡೆದಿದೆ. ಕವಿರಾಜಮಾರ್ಗವನ್ನು ಶ್ರೀವಿಜಯನೇ ಬರೆದಿರಬಹುದು ಎಂದು ವಾದಿಸುವವರಿಗೂ ದುರ್ಗಸಿಂಹನ ಈ ಉಕ್ತಿ ಒಂದು ಪ್ರಮಾಣ. ನಮ್ಮ ಅಭಿಪ್ರಾಯದಲ್ಲಿ, ದುರ್ಗಸಿಂಹನು ಒಂದು ಗ್ರಂಥವನ್ನೇ ನಿರ್ದೇಶಿಸಿರುವನೆ ಹೊರತು ಒಬ್ಬ ಕವಿ ಅನುಸರಿಸಿರುವ 'ಮಾರ್ಗ'ವನ್ನಲ್ಲ. (ಈ ವಿಚಾರವನ್ನು ಮತ್ತೆ ಮುಂದೆ ವಿವೇಚಿಸಲಾಗಿದೆ). ಗ್ರಂಥವೇ

ಕವಿಜನದ ಮನಕೆ ಕನ್ನಡಿಯಂ ಕಯ್ದೀವಿಗೆಯುಮಾದುವದಱಿಂ। ಶ್ರೀವಿಜಯರ್ ದೇವರವರನೇವಣ್ಣಿಪುದೋ॥' ಎಂದು ಬಾಯ್ತುಂಬ ಹೊಗಳಿದ್ದಾನೆ. ಕೇಶಿರಾಜನು (ಸು.೧೨೬೦) ಶಬ್ದಮಣಿ ದರ್ಪಣದಲ್ಲಿ – 'ಗಜಗನ ಗುಣನಂದಿಯ ಮನ। ಸಿಜನಸಗನ ಚಂದ್ರಭಟ್ಟ ಗುಣವರ್ಮ ಶ್ರೀ। ವಿಜಯರ ಪೊನ್ನನ ಪಂಪನ ಸುಜನೋತ್ತಂಸನ ಸುಮಾರ್ಗಮಿದಜೊಳೆ ಲಕ್ಷ್ಯಂ॥' ಎಂದು ಹೇಳಿದ್ದಾನೆ.

ಮಂಗರಸ ದೊಡ್ಡರಸರ ಹೇಳಿಕೆಗಳಂತೆ ಶ್ರೀವಿಜಯನೆಂಬ ಕವಿ ಚಂದ್ರಪ್ರಭ ಪುರಾಣವೆಂಬ ಚಂಪೂಕಾವ್ಯದ ಕರ್ತೃ ಎಂದು ಗೊತ್ತಾಗುತ್ತದೆ. ಕವಿರಾಜಮಾರ್ಗದ ಕರ್ತೃ ಶ್ರೀವಿಜಯನೆಂಬುದಕ್ಕೆ ಅವು ಸಾಧಕವಾಗವು. ದುರ್ಗಸಿಂಹನ ಹೇಳಿಕೆಯಿಂದ ಶ್ರೀವಿಜಯನು ಕವಿರಾಜಮಾರ್ಗದ ಕರ್ತೃ ಎಂದ ಅನುಮಾನಿಸಲು ಅವಕಾಶವಿದೆ. 'ಕವಿಮಾರ್ಗ' ಎನ್ನುವ ಪದಕ್ಕೆ 'ಕಾವ್ಯರಚನಾಪದ್ಧತಿ' ಎಂಬ ಸಾಮಾನ್ಯಾರ್ಥನವನ್ನು ಹೇಳುವುದಕ್ಕಿಂತ 'ಕವಿಮಾರ್ಗವೆಂಬ ಗ್ರಂಥ'ವೆಂದು ವಿಶಿಷ್ಟಾರ್ಥವನ್ನು ಹೇಳುವುದೇ ಸೂಕ್ತವಾಗಿ ಕಾಣುತ್ತದೆ. ಒಂದು ಗ್ರಂಥವನ್ನು ಕೈಗನ್ನಡಿ, ಕೈದೀವಿಗೆ ಎಂದು ನಿರ್ದೇಶಿಸುವುದು ಉಚಿತ; ಕಾವ್ಯಮಾರ್ಗವನ್ನು ಹಾಗೆ ನಿರ್ದೇಶಿಸುವುದು ಸಮಂಜಸವೆನಿಸದು. ನಾಗವರ್ಮನು ತನ್ನ ಕಾವ್ಯಾವಲೋಕನವನ್ನು 'ಕವಿಗಳ್ಗಿದು ಕೈಯ್ಗನ್ನಡಿ' ಎಂದು ವರ್ಣಿಸಿರುವುದನ್ನು ಈ ಸಂದರ್ಭದಲ್ಲಿ ನೆನೆಯಬಹುದು. ಆದ್ದರಿಂದ 'ಕವಿಮಾರ್ಗ' ಎಂದರೆ ದುರ್ಗಸಿಂಹನು ಒಂದು ಲಕ್ಷಣ ಗ್ರಂಥವನ್ನೇ ಹೆಸರಿಸಿದ್ದಾನೆ ಎಂದು ತಿಳಿಯುವುದು ಹೆಚ್ಚು ಸಮಂಜಸ. 'ಕವಿರಾಜಮಾರ್ಗ' ಎಂಬ ಸಮಸ್ತ ಪದವನ್ನು ಮುಖ್ಯವಾಗಿ 'ಕವಿಗಳ+ರಾಜಮಾರ್ಗ', 'ಕವಿರಾಜರ (ಕವಿಶ್ರೇಷ್ಠರ)+ಮಾರ್ಗ,' ಎಂದು ಇಬ್ಬಗೆಯಾಗಿ ಬಿಡಿಸಬಹುದು. ಪದ್ಯರಚನೆಯ ಸೌಕರ್ಯಕ್ಕಾಗಿ ಶ್ರೇಷ್ಠಾರ್ಥವಾಚಿಯಾದ 'ರಾಜ' ಶಬ್ದವನ್ನು ಕವಿ ಲೋಪಿಸಿದ್ದಾನೆ. ಇದರಿಂದ, ಗ್ರಂಥನಾಮದ ಮುಖ್ಯಾರ್ಥಕ್ಕೆ ಬಾಧೆಯೇನೂ ತಟ್ಟುವುದಿಲ್ಲ.

* ೧. ಕನ್ನಡ ಕವಿಗಳು ತಮ್ಮ ಕೃತಿಗಳನ್ನು ಬೇರೆ ಬೇರೆ ಹೆಸರುಗಳಿಂದ ನಿರ್ದೇಶಿಸಿರುವ ನಿದರ್ಶನಗಳುಂಟು; ಹೆಸರು ಸಂಕ್ಷಿಪ್ತವಾಗಿರುವ ಉದಾಹರಣೆ ಇದೆ. ಕವಿ ಇಟ್ಟ ಹೆಸರು ಒಂದಾದರೆ, ಜನ ಕೊಟ್ಟ ಹೆಸರು ಮತ್ತೊಂದು. ಆದಿಪಂಪ ತನ್ನ 'ವಿಕ್ರಮಾರ್ಜುನ ವಿಜಯ'ವನ್ನು 'ಸಮಸ್ತಭಾರತ' ಎಂದೂ ಕರೆದುಕೊಂಡಿದ್ದಾನೆ. ಆದರದು ಪ್ರಸಿದ್ಧವಾಗಿರುವುದು 'ಪಂಪಭಾರತ' ಎಂದು. 'ಪಂಪರಾಮಾಯಣ'ಕ್ಕೆ ನಾಗಚಂದ್ರ ಇಟ್ಟ ಹೆಸರು 'ರಾಮಚಂದ್ರಚರಿತಪುರಾಣ' ದೇವಚಂದ್ರನು ಇದನ್ನು 'ಶ್ರೀಮದಭಿನವಪಂಪರಚಿತ ರಾಮಾಯಣ' ಎಂದೇ ಕರೆದಿದ್ದಾನೆ. 'ಶಾಂತಿಪುರಾಣ'ವನ್ನು ಪೊನ್ನ 'ಶಾಂತೀಶ್ವರ ಕತೆ', 'ಪುರಾಣ ಚೂಡಾಮಣಿ' ಎಂದೂ ನಿರ್ದೇಶಿಸಿದ್ದಾನೆ. ರನ್ನನ 'ಶ್ರೀಮದಜಿತತೀರ್ಥಕರ ಪುರಾಣತಿಲಕ'ವನ್ನೂ ನಾಗಚಂದ್ರ 'ಅಜಿತಪುರಾಣ' ಎಂದು ಹ್ರಸ್ವಗೊಳಿಸಿದ್ದಾನೆ. ನೆನೆದರೆ, ಹುಡುಕಿದರೆ, ಇನ್ನೂ ನಿದರ್ಶನಗಳು ದೊರೆತಾವು. ಹೀಗಿರುವಲ್ಲಿ, ದುರ್ಗಸಿಂಹನು 'ಕವಿರಾಜಮಾರ್ಗ'ವನ್ನು 'ಕವಿಮಾರ್ಗ' ಎಂದು ಸಂಕ್ಷೇಪಿಸಿದ್ದರೆ ಅದರಲ್ಲಿ ಸೋಜಿಗವೇನಿಲ್ಲ.

(೩)'ಪರಮಶ್ರೀವಿಜಯಪ್ರಭೂತಿಜಯಶಂ... ನೆಲೆಗೊಳ್ಗಾಚಂದ್ರತಾರಂಬರಂ'... ಎಂಬೀ ಉಕ್ತಿಗಳನ್ನು ಅವಲಂಬಿಸಿದ್ದಾರೆ. ಮೊದಲನೆಯ ಮತ್ತು ಮೂರನೆಯ ವಾಕ್ಯಗಳಲ್ಲಿ 'ಈ ಕೃತಿ ಶ್ರೀವಿಜಯನಿಂದ ಹುಟ್ಟಿದ್ದು' (ಅರ್ಥಾತ್ ರಚಿತವಾದದ್ದು) ಎಂಬ ಅರ್ಥ ನಿಷ್ಪನ್ನವಾಗುತ್ತದೆಯೆ ಹೊರತು, ಆ ಕೃತಿಗೂ ಕವೀಶ್ವರನೆಂಬ ಇನ್ನೊಬ್ಬ ಕವಿಗೂ ಸಂಬಂಧ ಕಲ್ಪಿಸಲು ಆಧಾರವಿಲ್ಲ. (ಪ.I–೧೫೦ ಮತ್ತು II–೨೩೧ರ ಟಿಪ್ಪಣಿಗಳನ್ನು ನೋಡಿ). ಎರಡನೆಯ ವಾಕ್ಯಕ್ಕೆ, 'ಶ್ರೀವಿಜಯ ಕೃತವಾದ ಕವಿರಾಜ ಮಾರ್ಗದಿಂದ ಒದಗುವ ಮುದವನ್ನು ಯಾವನು ತನಗೆ ದೊರಕಿಸಿಕೊಳ್ಳುವನೋ ಅವನೇ ಕವಿಶ್ರೇಷ್ಠ' ಎಂದು ಅರ್ಥ ಮಾಡಬೇಕಲ್ಲದೆ (ಪ.II–೧೫೫ರ ಟಿಪ್ಪಣಿ ನೋಡಿ), 'ಶ್ರೀವಿಜಯನಿಂದ ಉಂಟಾದ ಮುದವನ್ನು ಕವೀಶ್ವರನು ತನಗೆ ದೊರಕಿಸಿಕೊಂಡನು' (ಫ್ಲೀಟ್) ಎಂದಾಗಲಿ, 'ಕವೀಶ್ವರನೆಂಬುವನು ಶ್ರೀವಿಜಯಕರ್ತೃಕವಾದ ಈ ಗ್ರಂಥವನ್ನು ತನ್ನ ಪ್ರಯೋಜನಕ್ಕಾಗಿ ಉಪಯೋಗಿಸಿಕೊಂಡನು' (ಮದ್ರಾಸು ಮುದ್ರಣದ ಅವತರಿಣಿಕೆ, ಪು.IX) ಎಂದಾಗಲಿ ಅರ್ಥ ಮಾಡಲಾಗದು.

'ಶ್ರೀ ವಿಜಯರ ಕವಿಮಾರ್ಗಂ' ಇದ್ದಿತೋ ಇಲ್ಲವೋ ಖಚಿತವಾಗಿ ಹೇಳುವುದು ಕಷ್ಟ. ಅದರ ಆಧಾರದ ಮೇಲೆ ಕವೀಶ್ವರನು ಕವಿರಾಜಮಾರ್ಗವನ್ನು ಬರೆದನೆನ್ನುವುದು ಬುಡವಿಲ್ಲದ ವಾದ.

## ಶ್ರೀವಿಜಯನೇ ಕವಿರಾಜಮಾರ್ಗದ ಕರ್ತೃ

ಕವಿರಾಜಮಾರ್ಗದ ಕರ್ತೃ ನೃಪತುಂಗನೂ ಅಲ್ಲ ಕವೀಶ್ವರನೂ ಅಲ್ಲ ಎಂದು ಪೂರ್ವಾಪಕ್ಷಗಳಿಗೆ ಪ್ರತಿಪಕ್ಷವನ್ನಿಡುವ ಅವಸರದಲ್ಲಿಯೇ ಕವಿರಾಜಮಾರ್ಗಕಾರನು ಶ್ರೀವಿಜಯನಾಗಿರಬೇಕೆಂಬ ನಮ್ಮ ನಿಲವು ಪರೋಕ್ಷವಾಗಿ ಪ್ರತಿಪಾದನೆಗೊಂಡಿದೆ. ಆ ಸಂಬಂಧದ ವಾದಾಂಶಗಳನ್ನು ಆಧಾರ ಸಮೇತ ಸಂಕ್ಷೇಪವಾಗಿ ಇಲ್ಲಿ ತಿಳಿಯ ಹೇಳುವುದು ಅಗತ್ಯವೆಂದು ಭಾವಿಸಿದ್ದೇನೆ.

ಮಂಗರಸನು (ಸುಮಾರು ೧೫೦೮) ತನ್ನ ನೇಮಿಜಿನೇಶ ಸಂಗತಿಯಲ್ಲಿ 'ದೇವಚಂದ್ರಪ್ರಭರನು ಕೊಂಡಾಡಿದ ಶ್ರೀವಿಜಯರ....' ಎಂದು ಚಂಪೂ ಕಾವ್ಯಕರ್ತರ ವೃಂದದಲ್ಲಿ ಶ್ರೀವಿಜಯನ ಹೆಸರನ್ನು ಸೇರಿಸಿ ಸ್ಮರಿಸಿದ್ದಾನೆ. (೨)ಪಿರಿಯ ಪಟ್ಟಣದ ದೊಡ್ಡಯ್ಯನು (ಸು.೧೫೫೦) ತನ್ನ ಚಂದ್ರಪ್ರಭಸಾಂಗತ್ಯದಲ್ಲಿ "ಚಂದ್ರಪ್ರಭ ಪುರಾಣವ ಪೇಳ್ದ ವಿಜಯ ಕವೀಂದ್ರ" ಎಂದು ಉಲ್ಲೇಖಿಸಿದ್ದಾನೆ. ದುರ್ಗಸಿಂಹನು (ಸು. ೧೧೧೫) ತನ್ನ ಪಂಚತಂತ್ರದಲ್ಲಿ – 'ಶ್ರೀವಿಜಯರ ಕವಿಮಾರ್ಗಂ। ಭಾವಿಪ

ಪದ್ಯಕಾರರ ಶ್ರೇಣಿಯಲ್ಲಿ ಉಕ್ತನಾದ 'ಪರಮ ಶ್ರೀವಿಜಯ', ಕವಿರಾಜಮಾರ್ಗಕಾರ 'ನಿಂದ ಭಿನ್ನವಾದ ಪ್ರಾಚೀನ ಕವಿ ಎಂಬ ಅಭಿಪ್ರಾಯವೂ ಇದೆ. ಈ ಅಭಿಪ್ರಾಯಕ್ಕೆ ವಿಶೇಷ ಪುಷ್ಟಿಕೊಡುವ ಮಾತೆಂದರೆ, ಆ ಕವಿಗಳ 'ವಸ್ತು ವಿಸ್ತರ ವಿರಚನೆ ಲಕ್ಷ್ಯಂತದಾದ್ಯ ಕಾವ್ಯಕ್ಕೆಂದುಂ' ಎಂಬುದು. ಪೂರ್ವಕವಿಗಳ ಪಂಕ್ತಿಯಲ್ಲಿ ಮಾರ್ಗಕಾರನು ತನ್ನ ಹೆಸರನ್ನು ಸೇರಿಸುವುದು ಅಸಂಭವ ಎಂಬ ಆಕ್ಷೇಪವೂ ಇದೆ. 'ಆದ್ಯಕಾವ್ಯ' ಎಂದರೆ 'ಪ್ರಥಮ ಕಾವ್ಯ' ಎಂದೂ ಆಗಬಹುದು. 'ಶ್ರೇಷ್ಠ' ಅಥವಾ 'ಪ್ರಮುಖ ಕಾವ್ಯ' ಎಂದೂ ಆಗಬಹುದು. ಕಾಲದೃಷ್ಟಿಯಿಂದ ಆದ್ಯಕಾವ್ಯ ಎಂಬ ಗ್ರಹಿಕೆಯನ್ನು ಪುರಸ್ಕರಿಸಬಹುದಾದರೆ ಒಬ್ಬ ಕವಿಯ ಒಂದು ಕೃತಿ ಆದ್ಯಕಾವ್ಯವಾಗಬಹುದೆ ಹೊರತು ಹಲವು ಕವಿಗಳ ಹಲವು ಕೃತಿಗಳಲ್ಲ. ಆದ್ದರಿಂದ ಇಲ್ಲಿ 'ಆದ್ಯಕಾವ್ಯ' ಎಂದರೆ 'ಶ್ರೇಷ್ಠಕಾವ್ಯ' ಎಂದು ಡಾ॥ ರಂ.ಶ್ರೀ. ಮುಗಳಿಯವರು ಅರ್ಥ ಮಾಡಿರುವುದೇ ಸಾಧು. "೧–೩೦ರಲ್ಲಿಯ 'ಆದ್ಯ'ಕ್ಕೂ ಇದೇ ಅರ್ಥವಿದೆ" ಎಂಬ ಅವರ ಹೆಚ್ಚಿನ ಸಮರ್ಥನೆಯನ್ನೂ ಗಮನಿಸಬೇಕು. (ಕ.ಸಾ.ಚ. – ಪು.೫೮) ಅಲ್ಲದೆ ಮಾರ್ಗಕಾರನು ಗ್ರಂಥಾಂತ್ಯದಲ್ಲಿ ಸ್ವವಿಷಯವನ್ನು ಹೇಳಿಕೊಳ್ಳುತ್ತಾ "ಲಕ್ಷಣಲಕ್ಷ್ಯನಾಶ್ರಿತ ಮಹಾನೃಪತುಂಗ ಸಭಾಸದಂ" ಎಂದು ತಿಳಿಸಿರುವುದನ್ನು ಪರಿಶೀಲಿಸಬೇಕು. 'ಕವಿರಾಜಮಾರ್ಗ' ಲಕ್ಷಣ ಗ್ರಂಥ, ಮಾರ್ಗಕಾರನ ಲಕ್ಷ್ಯವೊಂದೂ ಇರಬೇಕಷ್ಟೆ? ಶ್ರೀವಿಜಯನು ತನ್ನ ಲಕ್ಷಣಗ್ರಂಥದಲ್ಲಿ 'ಮಾರ್ಗ' ಕಾವ್ಯವನ್ನೆ ಕುರಿತಿರುವುದರಿಂದ, ಅವನು ರಚಿಸಿರುವ ಲಕ್ಷ್ಯವೂ ಒಂದು ಮಾರ್ಗ ಕಾವ್ಯವೇ (=ಚಂಪೂಕಾವ್ಯವೇ) ಆಗಿರಬೇಕು. ಆದ್ದರಿಂದ ಮಂಗರಸ ದೊಡ್ಡಯ್ಯ ಇವರು ಸ್ಮರಿಸುವ 'ಚಂದ್ರಪ್ರಭಪುರಾಣ' ಕರ್ತೃ ಶ್ರೀವಿಜಯನೂ ಮಾರ್ಗಕಾರ ಶ್ರೀವಿಜಯನೂ ಒಬ್ಬನೇ ಎಂದು ಸದ್ಯದ ಮಟ್ಟಿಗೆ ತೀರ್ಮಾನಿಸುವುದು ಅಯುಕ್ತಿಕವಾಗದು. ಹೀಗೆ, ಶ್ರೀವಿಜಯನು 'ಲಕ್ಷಣಲಕ್ಷ್ಯ'ನಾದ್ದರಿಂದಲೇ ಜೈನಕವಿಯಾದರೂ ವೈದಿಕಮತಾನುಯಾಯಿಯಾದ ದುರ್ಗಸಿಂಹನಿಂದ ಬಹುವಚನದ ಗೌರವಕ್ಕೆ ಪಾತ್ರನಾದುದು.

**ಶ್ರೀವಿಜಯ**

'ಚಂದ್ರಪ್ರಭಪುರಾಣ'ವು ಉಪಲಬ್ಧವಾಗಿ ಅದರ ಕರ್ತೃ ಬೇರೆ ಎಂದು ನಿರ್ಧರವಾಗುವವರೆಗೆ ಕವಿರಾಜಮಾರ್ಗ ಕರ್ತೃವಾದ ಶ್ರೀವಿಜಯನೆ ಅದನ್ನು ಬರೆದಾತನೆಂದು ಇಟ್ಟುಕೊಳ್ಳಬಹುದು. ಈ ಶ್ರೀವಿಜಯನು 'ಆಶ್ರಿತ ಮಹಾನೃಪತುಂಗಸಭಾಸದ'ನೆಂದು ಗ್ರಂಥದಿಂದಲೆ ಸ್ಪಷ್ಟವಾಗುತ್ತದೆ. ನೃಪತುಂಗ

ಕೇಶಿರಾಜನೂ ಶ್ರೀವಿಜಯನ ಹೆಸರನ್ನು ಹೇಳಿ ಕವಿರಾಜಮಾರ್ಗದ ಪದ್ಯಗಳನ್ನು ಉದಾಹರಿಸಿರುವುದರಿಂದಲೂ, ಆಂತರಿಕ ಪ್ರಮಾಣಗಳಿಂದಲೂ ಕವಿರಾಜಮಾರ್ಗವು ಶ್ರೀವಿಜಯ ಕೃತ ಎಂದು ಸ್ಥಿರಪಡುವುದರಿಂದಲೂ ದುರ್ಗಸಿಂಹನು ಹೇಳುವ ಶ್ರೀವಿಜಯನ ಕವಿಮಾರ್ಗವು* ಕವಿರಾಜಮಾರ್ಗವೇ ಎಂಬಲ್ಲಿ ಸಂದೇಹವಿಲ್ಲ. ಆಂತರಿಕ ಪ್ರಮಾಣಗಳಲ್ಲಿ, ಪರಿಚ್ಛೇದಾಂತ ಪದ್ಯಗಳಲ್ಲಿ ಪ್ರಯುಕ್ತಗಳಾದ ಶ್ರೀವಿಜಯನಿಂದ ಉಂಟಾದದ್ದು – ಉತ್ಪನ್ನವಾದದ್ದು – ಜನಿಸಿದ್ದು – ನಿರ್ಮಾಣವಾದದ್ದು', 'ಶ್ರೀವಿಜಯ ಮೂಲವಾದದ್ದು' ಎಂದು ಅರ್ಥಕೊಡುವ 'ಶ್ರೀವಿಜಯಪ್ರಭೂತ', 'ಶ್ರೀವಿಜಯ ಪ್ರಭೂತಿ' ಎಂಬ ಪದಗಳು ಬಹು ಮುಖ್ಯವಾದವು. (ಪ್ರಭೂತ=Sprung from; produced ಪ್ರಭೂತಿಃ =Source, origin: Apte)(ಸಂಬಂಧಪಟ್ಟ I–೧೫೦, II–೧೫೫, III–೨೩೧ ಪದ್ಯಗಳ ಟಿಪ್ಪಣಿಗಳನ್ನು ನೋಡಿ).

ಶ್ರೀವಿಜಯನೇ ಕವಿರಾಜಮಾರ್ಗಕಾರನೆನ್ನಲು ಗ್ರಂಥದೊಡಲಿನಲ್ಲಿ ಇನ್ನು ಕೆಲವು ಹೊಳಹುಗಳು ಅಲ್ಲಲ್ಲಿ ಮಿಂಚುತ್ತಿವೆ. "ಪದ್ಯಕಾರರಲ್ಲಿ ಶ್ರೀವಿಜಯನನ್ನು ಹೆಸರಿಸಿ ತನ್ನನ್ನೆ ಕವಿರಾಜಮಾರ್ಗಕಾರನು ಸೂಚಿಸಿದಂತಿದೆ" (ಕ.ಸಾ.ಚ.; ಪು.೫೮) ಸಂಬಂಧಪಟ್ಟ ಪದ್ಯದಲ್ಲಿಯೂ (I–೩೨) ಗಂಥಸಮಾಪ್ತಿಯ ಪದ್ಯದಲ್ಲಿಯೂ ಪ್ರಯೋಗವಾಗಿರುವ 'ಪರಮಶ್ರೀವಿಜಯ' ಎಂಬ ಏಕರೂಪವು ಗಮನಾರ್ಹ.

---

* ೨. ಅಥವಾ, ಇನ್ನೂ ಒಂದು ಊಹೆಯನ್ನು ಮಾಡಬಹುದು:
ಶ್ರೀವಿಜಯನು 'ಕವಿಮಾರ್ಗ' ಎಂಬ ಲಕ್ಷಣ ಗ್ರಂಥವನ್ನು ಬರೆದಿದ್ದು, 'ವಿವೇಕ ಬೃಹಸ್ಪತಿ'ಯ ನಗರವನ್ನು ಹೊಕ್ಕು 'ಆಶ್ರಿತ ನೃಪತುಂಗ ಸಭಾಸದ'ನಾದ ಮೇಲೆ ಅದನ್ನು ನೃಪತುಂಗ ಸಭೆಯಲ್ಲಿ ನಿವೇದಿಸಿ, ಸ್ವತಃ ವಿದ್ವಾಂಸನಾಗಿರಬಹುದಾಗಿದ್ದ 'ನೃಪತುಂಗಮತ'ವನ್ನು ಅಳವಡಿಸಿ, ಅನೇಕ ಮಾರ್ಪಾಟುಗಳೊಡನೆ ವಿಸ್ತಾರಗೊಂಡ ತನ್ನ ಗ್ರಂಥವನ್ನು ಅರ್ಥಗರ್ಭಿತವಾದ 'ಕವಿರಾಜಮಾರ್ಗ' ಎಂದು ಕರೆದು, 'ನೃಪತುಂಗದೇವಾನುಮತಮಪ್ಪ' ಆ ಗ್ರಂಥವನ್ನು ಪ್ರಸಿದ್ಧಗೊಳಿಸಿರಬಹುದು. ಕವಿರಾಜಮಾರ್ಗದ ಕೆಲವು ಗಮನಾರ್ಹ ಪಾಠವ್ಯತ್ಯಾಸಗಳಿಗೆ ಇದು ಕಾರಣವಾಗಿರಬಹುದು. ನೃಪತುಂಗನ ಸಂಬಂಧವಿಲ್ಲದ ಶ್ರೀವಿಜಯಕೃತವೆಂದು ಸ್ಪಷ್ಟ ನಿರ್ದೇಶನವಿದ್ದ, ಮೂಲಗ್ರಂಥ 'ಕವಿಮಾರ್ಗ'ವು ದುರ್ಗಸಿಂಹನ ಗಮನಕ್ಕೆ ಬಂದಿರಬಹುದು. ಕಾಲಕ್ರಮದಲ್ಲಿ ನೃಪತುಂಗಾಂಕಿತವಾದ ಕವಿರಾಜಮಾರ್ಗವೊಂದೇ ಪ್ರಚಾರಕ್ಕೆ ಬಂದು, ಮೂಲಗ್ರಂಥ ವಿನಷ್ಟವಾಗಿರಬಹುದು. ಒಂದು ವೇಳೆ 'ಕವಿಮಾರ್ಗ' ಎಂಬ ಗ್ರಂಥವೊಂದು ಇದ್ದುದಾದರೆ ಅದೂ ಶ್ರೀವಿಜಯಕೃತವೇ ಹೊರತು 'ಕವೀಶ್ವರ' ಕೃತ ಎಂದಾಗದು. ಜಿಜ್ಞಾಸುಗಳ ಮುಂದೆ ಇದನ್ನು ಒಂದು ಊಹೆಯಾಗಿ ಇಡುತ್ತಿದ್ದೇವೆಯೇ ಹೊರತು, ತೀರ್ಮಾನವಾಗಿಯಲ್ಲ. –ಸಂ.

ಜಗತ್ತಿನ ಅಗಾಧವಾದ ಅಂತಃಪ್ರದೇಶವನ್ನು ಬೆಳಗತಕ್ಕ ದೀಪಸದೃಶವಾದ 'ನುತಕಾವ್ಯ'ವನ್ನು (ಎಂದರೆ ಲಕ್ಷ್ಯಲಕ್ಷಣಸಮನ್ವಿತವಾದ ಕವಿರಾಜಮಾರ್ಗವನ್ನು) ಹೇಳಿದನು. ಇವನು ಅಭಿಮಾನಿ, ಮಹಾಪುರುಷವ್ರತನಿಶ್ಚಿತ, ಆದ್ದರಿಂದ, ಯಾರಿಂದಲೂ ಯಾವ ಬಗೆಯ ಹೊಗಳಿಕೆಯನ್ನೂ ನಿರೀಕ್ಷಿಸತಕ್ಕವನಲ್ಲ; ಇತ್ಯಾದಿಯಾಗಿ ಅವನ ಗುಣಗುಣಪ್ರಶಂಸೆ ಸಾಗಿದೆ.

ಈ ಸಂದರ್ಭದಲ್ಲಿ ನಾವು ಗಮನಿಸಬೇಕಾದ ಇನ್ನೊಂದು ಮುಖ್ಯ ಸಂಗತಿಯೆಂದರೆ ಕವಿರಾಜಮಾರ್ಗರಚನೆಗೆ ಸಂಬಂಧಪಟ್ಟದ್ದು. ನೃಪತುಂಗನ ವಿದ್ವತ್ಸಭೆಯಲ್ಲಿ 'ದಂಡಿ ಭಾಮಹ ಮುಂತಾದ ಪೂರ್ವಾಚಾರ್ಯಪ್ರಣೀತ ಕಾವ್ಯಮಾರ್ಗಗಳು ಚರ್ಚಿತವಾಗುತ್ತಿದ್ದವು; ಆ ಚರ್ಚೆಗಳಲ್ಲಿ ಸ್ವತಃ ವಿದ್ವಾಂಸನಾಗಿದ್ದ ನೃಪತುಂಗದೇವನು ತನ್ನ ನಿರ್ಣಾಯಕ ಅಭಿಪ್ರಾಯಗಳನ್ನು ಮಂಡಿಸುತ್ತಿದ್ದಂತೆ ಕಾಣುತ್ತದೆ. ಹೀಗೆ, ಕಾವ್ಯಮೀಮಾಂಸೆಯಲ್ಲಿ 'ನೃಪತುಂಗದೇವಮಾರ್ಗಾಂತರ' ವೊಂದು ರೂಪುಗೊಂಡಿದ್ದಿರಬೇಕು. ನೃಪತುಂಗದೇವಾನುಮತಮಪ್ಪ ಕನ್ನಡ ಕಾವ್ಯಲಕ್ಷಣ ಮಾರ್ಗವೆ ನೃಪತುಂಗದೇವಮಾರ್ಗ. ಇದರಲ್ಲಿ ಅಡಗಿರುವ ಕಾವ್ಯ ತತ್ತ್ವವೆಂಬ 'ವಿಶೇಷಯಾನ ಪಾತ್ರ' ಸ್ವರೂಪನೇ ಶ್ರೀವಿಜಯ; ಅವನು ಮಹಾತ್ಮ; ಕಾವ್ಯತತ್ತ್ವಸ್ವರೂಪನಾದ್ದರಿಂದಲೇ ಕಾವ್ಯರತ್ನಾಕರದ ಅಪಾರಪಾರವನ್ನು ಅವನು ಮುಟ್ಟಬಲ್ಲವನಾಗಿದ್ದನು. ಹೀಗೆ, ಕಾವ್ಯತತ್ತ್ವ ಸಂಬಂಧವಾಗಿ ತಾನು ಪಡೆದಿದ್ದ ತಿಳಿವಳಿಕೆಯನ್ನೂ ನೃಪತುಂಗ ದೇವಮತವನ್ನೂ ಅಳವಡಿಸಿ ಅವಕ್ಕೆ ಗ್ರಂಥರೂಪವನ್ನು ಕೊಟ್ಟವನು ಶ್ರೀವಿಜಯ. ಈ ಗ್ರಂಥವೆ ಕವಿರಾಜಮಾರ್ಗ. ಇದರಲ್ಲಿ ತನ್ನ ಆಶ್ರಯದಾತನಾದ ನೃಪತುಂಗನ ಪ್ರತಿಷ್ಠೆಯನ್ನು ಉತ್ಕರ್ಷಗೊಳಿಸುವುದಕ್ಕಾಗಿ ಆತನ ಹೆಸರಿನ ಹಸರವೇ ಗ್ರಂಥದಲ್ಲಿ ಹರಡಿಕೊಳ್ಳುವಂತೆ ಮಾಡಿ ಶ್ರೀವಿಜಯನು ತನ್ನ ಕರ್ತೃತ್ವವನ್ನು ಗೌಣವಾಗಿರಿಸಿದ್ದರಿಂದ, ಗ್ರಂಥವು ನೃಪತುಂಗಕೃತವೆಂಬ ಪ್ರತೀತಿಯೇ ಈವರೆಗೂ ಸಾಗಿ ಬಂದಿತು. ಇನ್ನಾದರೂ ನಿಜವಾದ ಕರ್ತೃವಿಗೆ ಸಲ್ಲಬೇಕಾದ ಗೌರವವನ್ನು ಸಲ್ಲಿಸೋಣ. ಕವಿರಾಜಮಾರ್ಗವು ಶ್ರೀವಿಜಯಕೃತ ಎಂದು ಮನವರಿಕೆಯಾಗಿರುವಾಗ ಹಾಗೆಂದು ನಿಶ್ಶಂಕೆಯಿಂದ ಪ್ರಕಟಪಡಿಸಲು ಹಿಂದೆಗೆಯದಿರೋಣ.

ಶ್ರೀವಿಜಯನು ಮಾನ್ಯಖೇಟ ನಗರಕ್ಕೆ ಆಗಮಿಸಿದ ಬಗೆಗೆ ಕವಿರಾಜಮಾರ್ಗ ದಲ್ಲಿಯೇ ಉಲ್ಲೇಖವಿದೆಯಷ್ಟೆ. ಎಂದ ಮೇಲೆ, ಅವನ ಸ್ಥಳ ಬೇರೆಯದೇ ಆಗಿರಬೇಕು. ಅವನು ತನ್ನ ಸ್ವಸ್ಥಳದಿಂದ ರಾಷ್ಟ್ರಕೂಟ ರಾಜಧಾನಿಗೆ ಎಂದು,

ಸಭಾಸದನಾಗುವ ಮುನ್ನವೆ ಆತ 'ಕವಿವೃಷಭರಾಪ್ರಯೋಗಗಳೊಳು ಕೃತಪರಿಚಯಬಲನೂ', 'ವ್ಯಾಕರಣ ಕಾವ್ಯನಾಟಕಲೋಕಕಳಾ ಸಮಯ ಮಾದಳಂಕೃತಿಗಳೊಳಂ ವ್ಯಾಕುಳನೂ' ಆಗಿದ್ದು, ತನ್ನ ಪ್ರತಿಭೆ ಪಾಂಡಿತ್ಯಗಳಲ್ಲಿ ಆತ್ಮವಿಶ್ವಾಸವುಳ್ಳವನಾದ್ದರಿಂದಲೇ 'ವಿವೇಕ ಬೃಹಸ್ಪತಿ'ಯ ನಗರವನ್ನು ಪ್ರವೇಶಿಸಿ, 'ಅತಿಶಯಧವಳ ಸಭಾಸದರ ಮನ್ನಣೆಗೆ ಪಾತ್ರನಾದನು.' ಶ್ರೀವಿಜಯನು ನೃಪತುಂಗ ನಗರವಾದ ಮಾನ್ಯಖೇಟವನ್ನು ಹೊಕ್ಕದ್ದು, ನೃಪತುಂಗನ ಪಾಂಡಿತ್ಯ ಪಕ್ಷಪಾತದಿಂದ ಆಕರ್ಷಿತನಾಗಿ, ಕವಿರಾಜಮಾರ್ಗದ ಒಂದೆರಡು ಪದ್ಯಗಳಲ್ಲಿ (III–೨೦೪, ೨೦೬), ನೃಪತುಂಗನು ಶ್ರೀವಿಜಯನನ್ನು ಗೌರವಾದರಗಳಿಂದ ಬರಮಾಡಿಕೊಂಡ ಸಂದರ್ಭವೇ ವರ್ಣಿತವಾಗಿರುವಂತಿದೆ.

ಹೀಗೆ ನೃಪತುಂಗನ ಗೌರವಕ್ಕೆ ಪಾತ್ರನಾಗಿ, ಅವನ ಅನುಮತಿಯಂತೆ ಕನ್ನಡದಲ್ಲಿ ಲಕ್ಷಣಗ್ರಂಥವನ್ನು ಬರೆಯುವ ಹೆಚ್ಚಿನ ಮನ್ನಣೆಗೆ ಪಾತ್ರನಾಗಿದ್ದಿರಬೇಕಾದರೆ ಶ್ರೀವಿಜಯನ ವ್ಯಕ್ತಿತ್ವವು ಘನವಾದುದಾಗಿರಬೇಕು. ಅದನ್ನು ಅವನು ನಮ್ಮ ಊಹೆಗೆ ಬಿಡದೆ, ತನ್ನ 'ಭಾಚಿತ್ರ'ವನ್ನು ತಾನೇ ಚಿತ್ರಿಸಿ ನಮ್ಮ ಮುಂದಿಟ್ಟಿರುವುದು ತರುವಾಯದ ಅನೇಕ ಕನ್ನಡ ಕವಿಗಳಲ್ಲಿ ಕಾಣಬರದ ಒಂದು ವಿಶೇಷ ಸಂಗತಿ. (III–೨೧೮ ರಿಂದ ೨೩೦ ರವರೆಗಿನ ಪದ್ಯಗಳನ್ನೂ, ಅವುಗಳ ಮೇಲಿನ ಟಿಪ್ಪಣಿಗಳನ್ನೂ ನೋಡಿ). ಈ ಸ್ವವಿಷಯವನ್ನು ಆತ್ಮಪ್ರಶಂಸೆಯ ರೂಪದಲ್ಲಿ ಹೇಳಿಕೊಂಡಿಲ್ಲ. ನೃಪತುಂಗನ ಸಭಾಸದರು ಕವಿಯ (ಎಂದರೆ ತನ್ನ) ಗುಣೋದಯದಿಂದ ಆಕರ್ಷಿತರಾಗಿ, ತಮ್ಮ ಮನಸ್ಸು ಪ್ರಸನ್ನವಾಗಿರಲು ('ಬಗೆ ಪೆರ್ಚಿರೆ'), ಬಾಯಿಂದ ಮಾತು ಹೇಗೆ ಬಿದ್ದಿತೋ ಹಾಗೆ ಎಂದರೆ ಸ್ವಯಂಪ್ರೇರಿತರಾಗಿ ಹೇಳಿ ತನ್ನನ್ನು ಸಂತೋಷಪಡಿಸುವರು ಎಂದು ಚಮತ್ಕಾರವಾಗಿ ತಿಳಿಸಿದ್ದಾನೆ. ಶ್ರೀವಿಜಯನ ಈ ಗುಣವರ್ಣನೆಯಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ಅಂಶಗಳು ಇವು: ಶ್ರೀವಿಜಯನು ಲೋಕವ್ಯವಹಾರದಲ್ಲಿಯೂ ಜೈನ ವೈದಿಕ ಧರ್ಮಗಳೆರಡರಲ್ಲಿಯೂ ನಿಷ್ಣಾತನಾಗಿದ್ದನು; ಉಕ್ತಿಕಲೆಯಲ್ಲಿ ಪ್ರವೀಣ; ಸಾಹಿತ್ಯ ವಿದ್ಯೆಯಲ್ಲಿ ಪ್ರತಿಭಾವಂತ; ಕಾವ್ಯಲಕ್ಷಣ ಲಕ್ಷ್ಯಗಳಲ್ಲಿ ಅಭಿಜ್ಞ; ಸಮಸ್ತ ಭಾಷಾ ವಿಶೇಷ ವಿಷಯ ಕುಶಲಿ; ದೇವತಾಗುರುವೃದ್ಧರನ್ನು ಚೆನ್ನಾಗಿ ಸೇವಿಸತಕ್ಕವನು; ಪರಮ ಕಾರುಣಿಕ, ದೋಷರಹಿತ; ಸಮಸ್ತ ಜನರಲ್ಲಿಯೂ ಆದರವನ್ನು ಹುಟ್ಟಿಸತಕ್ಕವನು; ಪರರ ಗುಣದಲ್ಲಿ ಅಸಹನೆಯಿಲ್ಲದವನು, ಆತ್ಮಗುಣೋದಯವೇ ಮೈವೆತ್ತಂತಿರುವವನು – ಇಂಥವನು ನಿರ್ಮಲವಾದ ಕೀರ್ತಿವಿತಾನವನ್ನು ನಿರ್ಮಿಸುವ ಉದ್ದೇಶದಿಂದ

ಅವನು ಈ ತಿರುಳ್ಗನ್ನಡನಾಡವನು ಎಂದು ಊಹಿಸಿದರೆ, ಆ ಊಹೆ ಬಹುಶಃ ಗುರಿತಪ್ಪದ್ದು. ಮುಳಿಯ ತಿಮ್ಮಪ್ಪಯ್ಯನವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, 'ಸದಭಿಸ್ತುತಮಪ್ಪ' ಎಂಬ 'ಒಂಕುಂದ'ದ ವಿಶೇಷಣಕ್ಕೆ 'ಸಜ್ಜನರಾದ ವಿದ್ವಾಂಸರಿಂದ ಹೊಗಳಲ್ಪಟ್ಟ' ಎಂಬ ಅರ್ಥವಿವರಣೆ ಕೊಟ್ಟು, ಇಂಥ ವಿಶಿಷ್ಟ ವಿಶೇಷಣ ಉಳಿದ ಮೂರು ಸ್ಥಳಗಳಿಗೆ ಇಲ್ಲವಾದ್ದರಿಂದ, 'ಭಾವನಾತ್ಮಕ ಆಧಾರ'ದ ಮೇಲೆ ಒಂಕುಂದವೇ ಶ್ರೀವಿಜಯನ ಹುಟ್ಟೂರು ಎಂದು ಊಹಿಸಿದ್ದಾರೆ. ಹಾಗಿದ್ದಿರಲಾರದು ಎಂದು ಅಲ್ಲಗಳೆಯಲು ಕಾರಣವಿಲ್ಲ.

ನೃಪತುಂಗ ಸಭಾಸದನಾದ ಶ್ರೀವಿಜಯನು ಜೈನಮತೀಯನೆಂಬುದಕ್ಕೆ ಹಲವು ಸ್ಪಷ್ಟ ಸೂಚನೆಗಳಿವೆ. ರಾಮಾಯಣ ಕಥೆಗೆ ಸಂಬಂಧಿಸಿದ ಸ್ವನಿರ್ಮಿತ ಲಕ್ಷ್ಯಪದಗಳಲ್ಲಿ, ಆ ಕಥೆ ಜೈನಸಂಪ್ರದಾಯಕ್ಕೆ ಅನುಗುಣವಾಗಿರಬಹುದೆಂದು ಹೇಳಲವಕಾಶವಿರುವುದರಿಂದ, ಶ್ರೀವಿಜಯ ಜೈನನೆನ್ನಲು ಇವು ಪ್ರಮಾಣವನ್ನೊದಗಿಸುತ್ತವೆ. ಕವಿಯ ಜೈನಮತವನ್ನು ಇನ್ನೂ ಕೆಲವು ಲಕ್ಷ್ಯಪದ್ಯಗಳು ಪ್ರಚ್ಛನ್ನವಾಗಿ ಸಾರುತ್ತಿವೆ. ಆ ಪದ್ಯಗಳನ್ನು ಪರಶೀಲಿಸಬೇಕು. (ಪದ್ಯಗಳು I–೩, ೯೧, ೧೦೪, ೧೧೯; II–೧೧೯, ೧೫೨; III–೧೮, ೫೭, ೯೫, ೧೫೭, ೨೨೭). ಉಪಲಬ್ಧವಾಗಿಲ್ಲದ 'ಚಂದ್ರಪ್ರಭ ಪುರಾಣ'ದ ಕರ್ತೃ, ಶ್ರೀವಿಜಯನೂ ಇವನೇ ಎಂದು ದೃಢಪಟ್ಟಲ್ಲಿ, ಕವಿರಾಜಮಾರ್ಗಕಾರನು ಜೈನ ಎಂಬುದಕ್ಕೆ ಈ ಅಂಶವು ನಿರ್ವಿವಾದವಾದ ಪ್ರಮಾಣವಾಗುತ್ತದೆ. ಒಟ್ಟಿನಲ್ಲಿ ಶ್ರೀವಿಜಯನು ಜೈನನೆನ್ನಲು ಅಡ್ಡಿಯಿಲ್ಲ. ಆಶ್ರಯದಾತನಂತೆಯೆ ಆಶ್ರಿತನೂ ಪರಸಮಯಗಳಲ್ಲಿ ಗೌರವವುಳ್ಳ, ಸ್ವಧರ್ಮದಲ್ಲಿ ಅಭಿಮಾನಶಾಲಿಯಾದ, ಉದಾರಭಾವನೆಯ ವ್ಯಕ್ತಿಯಾಗಿದ್ದನೆಂದು ಹೇಳಬಹುದು.

**ಕವಿರಾಜಮಾರ್ಗ ಗ್ರಂಥವಿಚಾರ** : ಗ್ರಂಥದ ಹೆಸರಿನ ಸಮಸ್ತ ಪದವನ್ನು ನಾವು ಈ ಹಿಂದೆಯೇ ಸೂಚಿಸಿರುವಂತೆ (೧)ಕವಿಗಳ + ರಾಜಮಾರ್ಗ, (೨) ಕವಿರಾಜರ + ಮಾರ್ಗ – ಎಂದು ಬಿಡಿಸಬಹುದಾಗಿರುವುದರ ಜೊತೆಗೆ (೩) ಕವಿರಾಜ(ನ) + ಮಾರ್ಗ ಎಂದೂ ಬಿಡಿಸಬಹುದಾಗಿದೆ. ಗ್ರಂಥವು ಕವೀಶ್ವರ ಕೃತ ಎಂದು ವಾದಿಸುವವರು 'ಕವಿರಾಜ + ಮಾರ್ಗ' ಎಂಬುದು 'ಕವೀಶ್ವರ + ಮಾರ್ಗ'ಕ್ಕೆ ಸಂವಾದಿಯಾಗಿದೆ ಎಂದು, ಗ್ರಂಥದ ಹೆಸರನ್ನು ತಮ್ಮ ವಾದಸಮರ್ಥನೆಗೆ ಬಳಸಿಕೊಂಡಿದ್ದಾರೆ. ಆದರೆ ಕವೀಶ್ವರ ಪಕ್ಷ ಪ್ರವರ್ತಕರಾದ ಡಾ॥ ಫ್ಲೀಟರವರೇ ಗ್ರಂಥದ ಹೆಸರನ್ನು "The Path of Poets Laureate" ಎಂದು ಇಂಗ್ಲೀಷಿನಲ್ಲಿ ಭಾಷಾಂತರಿಸಿದ್ದಾರೆ. ಕನ್ನಡ ಕವಿಗಳು 'ಕವಿಮಾರ್ಗ', 'ಕಾವ್ಯಮಾರ್ಗ' ಎಂದು

ಏಕೆ ಆಗಮಿಸಿದನೆಂಬುದು ವಿಚಾರಣೀಯವಾಗಿದೆ. ಈ ಬಗೆಗೆ ಗ್ರಂಥದಲ್ಲಿಯೇ ಸ್ಪಷ್ಟ ಸೂಚನೆ ಯಾವುದೂ ಇಲ್ಲ. ದಿ.ಮುಳಿಯ ತಿಮ್ಮಪ್ಪಯ್ಯನವರು ಗ್ರಂಥದ ಚಕ್ರಬಂಧ ಶ್ಲೋಕದ ಆಧಾರದ ಮೇಲೆ ಶ್ರೀವಿಜಯನ ಹುಟ್ಟು ಹೆಸರು: ಜಯಾಟ್ವಿ ಎಂದಿರಬಹುದೆಂದೂ ಅವನು 'ಸಾಮಪ' (ಸಂಧಿವಿಗ್ರಹಿ)ನಾಗಿದ್ದನೆಂದೂ ಊಹಿಸಿರುವರಷ್ಟೆ. (ನೋಡಿ: ಪದ್ಯ ೧೪೨ರ ಟಿಪ್ಪಣಿ; ಪುಟ: ೨೪೪–೨೪೯) ಸಂಜನ ಶಾಸನದ ೪೧ನೆಯ ಶ್ಲೋಕದಲ್ಲಿ 'ರಟ್ಟಮಾರ್ತಾಂಡ ನೃಪತುಂಗನ ಪುನರುದಯಕ್ಕೆ ಆಧಾರಭೂತನಾದ 'ಪಾತಾಳಮಲ್ಲ'ನೆಂಬ ಬಿರುದಿನ ಪೂಜ್ಯ ರಾಜನೀತಿ ನಿಪುಣನಾದ ವ್ಯಕ್ತಿಯ ಉಲ್ಲೇಖವಿದೆ. 'ಪಾತಾಳಮಲ್ಲ' ಎಂಬುದು ನೃಪತುಂಗನ ಚಿಕ್ಕಪ್ಪನಾದ ಗುಜರಾತಶಾಖೆಯ ರಾಷ್ಟ್ರಕೂಟ ರಾಜ ಸುವರ್ಣವರ್ಷನ ಬಿರುದಾಗಿರಬಹುದು ಎಂಬುದು ಎ.ಎಸ್.ಅಲ್ತೇಕರರ ಊಹೆ. ಬಿರುದಿನ 'ಪಾದಾಳ್ವ' ಎಂಬ ಭಾಗ ಶಾಸನ ಲೇಖಕನ ಕೈಯಲ್ಲಿ 'ಪಾತಾಳ' ಎಂದಾಗಿರಬಹುದೆಂದೂ (ಪಾದಾಳ್ವ > ಪಾದಾಳ > ಪಾತಾಳ) "ಈ ಗ್ರಂಥಕಾರನಾದ ಜಯಾಟ್ವಿ (ಶ್ರೀವಿಜಯ)ನೇ ಹಾಗೆ ನೃಪತುಂಗನಿಗೆ ಹಿಂದೆ ನೆರವಾದ, ಮತ್ತು ಅವನ ಪುನರುದಯಕ್ಕೆ ಕಾರಣಪುರುಷನಾದ 'ಆಳ್ವಮಲ್ಲ'ನಾಗಿರಬೇಕೆಂದೂ ತಿಮ್ಮಪ್ಪಯ್ಯನವರು 'ವೈಯಕ್ತಿಕಾಭಿಪ್ರಾಯ'ವನ್ನು ವ್ಯಕ್ತಪಡಿಸಿದ್ದಾರೆ. (ಕ.ರಾ.ವಿವೇಕ–೧; ಪು– ೯೩–೯೪) ಶ್ರೀವಿಜಯನು 'ಪಾರ್ಥಿವಲೋಕನಪ್ಪನ್' (=ಕ್ಷತ್ರಿಯ) ಎಂದು ಗ್ರಂಥದಲ್ಲಿಯೇ ಉಲ್ಲೇಖವಿದೆ. (III–೨೨೫) ನೃಪತುಂಗನು ಹೊರ ಒಳಹಗೆಗಳನ್ನೆಲ್ಲಾ ಗೆದ್ದು, ಶಾಂತಿಯನ್ನು ನೆಲೆಗೊಳಿಸಿ, ವಿದ್ವತ್ಸಭೆಯನ್ನು ನೆರೆಯಿಸುತ್ತಿದ್ದ ಕಾಲದಲ್ಲಿ ಅವನು ವಿದ್ವತ್‌ಪಕ್ಷಪಾತಿ ಎಂಬ ಕೀರ್ತಿ ನಾಡಿನಲ್ಲಿ ಹರಡಿರಬೇಕು. ಅಂಥ ಶಾಂತಿ ಕಾಲದಲ್ಲಿ ಶ್ರೀವಿಜಯನು ಮಾನ್ಯಖೇಟ ಪ್ರವೇಶ ಮಾಡಿರಬೇಕು ಎಂದು ನಮಗೆ ತೋರುತ್ತದೆ. ಎಂದ ಮೇಲೆ ನೃಪತುಂಗನ ಪುನರುದಯಕ್ಕೆ ಕಾರಣನಾದ ಆ ವ್ಯಕ್ತಿ ಶ್ರೀವಿಜಯನಾಗಿರಲಾರ ಎಂದು ಹೇಳಬೇಕಾಗುತ್ತದೆ. ಅಂತೂ, ಶ್ರೀವಿಜಯನು ಮಾನ್ಯಖೇಟಕ್ಕೆ ಹೊರಗಿನಿಂದ ಬಂದವನು ಎಂಬುದು ನಿಶ್ಚಿತ. ಎಲ್ಲಿಂದ ಬಂದಿರಬಹುದು?

ಶ್ರೀವಿಜಯನು ಕನ್ನಡ ನಾಡಿನ ದಕ್ಷಿಣೋತ್ತರ ಸೀಮೆಗಳನ್ನೂ ತಿರುಳ್ಗನ್ನಡ ನಾಡಿನ ಚೌಮೂಲೆಗಳನ್ನೂ ಕನ್ನಡ ಜನರ ನುಡಿಬಲ್ಮೆಯನ್ನೂ ವರ್ಣಿಸಿರುವನಷ್ಟೆ. ಈ ವರ್ಣನಾ ಪದ್ಯಗಳಲ್ಲಿ ಅಭಿವ್ಯಕ್ತಿ ಪಡೆದಿರುವುದು ಶ್ರೀವಿಜಯನ ನಾಡುನುಡಿಗಳ ಅಭಿಮಾನವೇ ಎಂಬಲ್ಲಿ ಸಂದೇಹವಿಲ್ಲ. ಕನ್ನಡ ನಾಡಿನ 'ತಿರುಳ್ಗನ್ನಡ' ನಾಡನ್ನು ನಿರ್ದೇಶಿಸಿರುವುದೂ ಅವನ ಅಭಿಮಾನದ ದ್ಯೋತಕವೇ ಸರಿ. ಆದ್ದರಿಂದ

ಪದ್ಯ; ಗದ್ಯಲಕ್ಷಣ (೨೨–೨೫) – ಸಂಸ್ಕೃತ ಗದ್ಯ ಕಾವ್ಯಗಳು (೨೬) – (ಕನ್ನಡ) ಗದ್ಯಕಥೆಯ ಲಕ್ಷಣ (೨೭) – ಕವಿಯ ಯೋಗ್ಯತಾಸಿದ್ಧಿ (೨೮) – ಕನ್ನಡ ಗದ್ಯ ಕವಿಗಳು (೨೯) – ಪದ್ಯ ಲಕ್ಷಣ (೩೦) –ಸಂಸ್ಕೃತ ಮಹಾಕವಿಗಳು (೩೧) – ಕನ್ನಡ ಪದ್ಯ ಕವಿಗಳು (೩೨) – ಕನ್ನಡ (ದೇಸಿ) ಕಬ್ಬದ ಪ್ರಾಕಾರಗಳು: ಚತ್ತಾಣ, ಬೆದಂಡೆ (೩೩); ಅವುಗಳ ಲಕ್ಷಣ (೩೪–೩೫) – ತಿರುಳ್ಗನ್ನಡ ನಾಡು (೩೬–೩೭) – ನಾಡವರ ನುಡಿಜಾಣು (೩೮–೪೦) – ಸಕ್ಕದ ಪಾಗದಗಳಲ್ಲಿ ಲಕ್ಷ್ಯ ಲಕ್ಷಣಗಳು, ಕನ್ನಡದಲ್ಲಿ ಅವುಗಳ ಅಭಾವ (೪೧–೪೨) – ಕಾವ್ಯದೋಷ, ದೋಷನಿವಾರಣೆಯ ಅವಶ್ಯಕತೆ (೪೩–೪೫) – ಕನ್ನಡಂಗಳಲ್ಲಿ ದೋಷಕಾರಣಗಳು: ದೇಸಿಯ ಅಸಂಖ್ಯಾತತೆ, ಲಕ್ಷಣಜ್ಞಾನದ ಅಭಾವ, ಹಳಗನ್ನಡದ ಅಪಪ್ರಯೋಗ (೪೬–೫೦) – ಸಮಸಂಸ್ಕೃತಗಳು, ಸಂಸ್ಕೃತಾವಯಗಳು, ಇವುಗಳ ಪ್ರಯೋಗ ಸಂಬಂಧವಾದ ವಿಧಿನಿಷೇಧಗಳು (೫೧–೫೭) – ಸಮಾಸೋಕ್ತಿಗಳಲ್ಲಿ ಸಂಸ್ಕೃತ ಕನ್ನಡ ಮಿಶ್ರಣ ನಿಷೇಧ (ಅರಿಸಮಾಸ ವಿಚಾರ) (೫೮–೬೧) – **ನಾಲ್ಕು ಕೃತಿದೋಷಗಳು:** ಶ್ರುತದುಷ್ಟ, ಅರ್ಥದುಷ್ಟ, ಶ್ರುತಿಕಷ್ಟ, ಕಲ್ಪನೋಕ್ತಿ ಕಷ್ಟ; ಇವಕ್ಕೆ ಲಕ್ಷ್ಯಗಳು (೬೨–೬೭); ಈ ಸಂಬಂಧದ ಅಪವಾದ ಸೂತ್ರ (೬೮) – ಇತರ ಕಾವ್ಯದೋಷಗಳು (ಲಕ್ಷಣ ಲಕ್ಷ್ಯಸಮನ್ವಯ ಸಮೇತ); ಯತಿ (೭೦), ಯತಿಭಂಗ (೭೨–೭೪), ಕನ್ನಡದಲ್ಲಿ ಯತಿ ವಿಲಂಘನ ಬಂಧುರತೆ (೭೫–೭೬), ಯತಿನಿಯತತೆ (೭೭); ಅರ್ಥಶೂನ್ಯ (೭೮–೮೦); ವರುದ್ಧಾರ್ಥ (೮೧–೮೩); ಪುನರುತ್ತ (೮೪–೮೫); ಯಾಥಾಸಂಖ್ಯ ಲಕ್ಷಣ (೮೬); ಚುತ್ಯಯಾಥಾಸಂಖ್ಯ ದೋಷ (೮೭–೮೯); ವ್ಯವಹಿತ (೯೦–೯೧); ಛಂದೋಭಂಗ (೯೨–೯೪); ವಿಸಂಧಿ (೯೫–೯೬); ವಿರೂಪಸಂಧಿ (೯೮–೧೦೦); ನೇಯಾರ್ಥ (೧೦೧–೧೦೩); ಸಮಯ, ನ್ಯಾಯ, ಕಲಾ, ಕಾಲ, ಲೋಕ, ದೇಶ, – ವಿರುದ್ಧ ದೋಷಗಳು (೧೦೫–೧೧೦); ವಿರುದ್ಧ ದೋಷಭೇದಗಳು ಅನಂತತೆ (೧೧೧); ದೋಷನಿವಾರಣೆಯ ಅಗತ್ಯ (೧೧೨) – ಕಾರಕಾದಿ ಇತರ ದೋಷಗಳು (೧೧೩) – ಕಾರಕ–ದೋಷ, ಅದೋಷ; ಲಕ್ಷ್ಯ (೧೧೬); ಲಕ್ಷ್ಯಲಕ್ಷಣ ಸಮನ್ವಯ (೧೧೭); ವಚನ–ದೋಷ, ಅದೋಷ; ಲಕ್ಷ್ಯ (೧೧೮); ವಚನದೋಷ; ಅಪವಾದ ಸೂತ್ರ; ಜಾತ್ಯೇಕ ವಚನ, ಸಂಖ್ಯೆಯಲ್ಲಿ ಏಕಬಹುತ್ವ ವಿಪರ್ಯಯ; ಏಕಬಹುತ್ವ ವಿಕಲ್ಪ; ಇವಕ್ಕೆ ಲಕ್ಷ್ಯ (೧೧೯–೧೨೦);

ಉಲ್ಲೇಖಿಸುವುದೇ ಸರ್ವಸಾಮಾನ್ಯವಾಗಿದೆ. ಕವಿರಾಜಮಾರ್ಗದಲ್ಲಿಯೇ ನಿರ್ದಿಷ್ಟವಾದ ಕಾವ್ಯರಚನಾ ರೀತಿಯನ್ನು 'ಮಾರ್ಗ' ಎಂದು ಉದ್ದಕ್ಕೂ ನಿರ್ದೇಶಿಸಿದೆಯೆ ಹೊರತು ಎಲ್ಲಿಯೂ 'ರಾಜಮಾರ್ಗ'ದ ಉಲ್ಲೇಖವಿಲ್ಲ. ಗ್ರಂಥವನ್ನು ಮೊದಲಿಂದ ಕಡೆಯವರೆಗೆ ಸೂಕ್ಷ್ಮವಾಗಿ ಪರಿಶೀಲಿಸಿದರೆ, 'ಕವಿವೃಷಭ', 'ಕವಿಪ್ರಧಾನರಾ ಕಾವ್ಯಂಗಳ್', 'ಕವೀಶ ಪ್ರಯೋಗ ಪದ್ಧತಿ', 'ಕವಿ ವೃಷಭರ್ಕಳ್', 'ಕವೀಶರಾರ್ಪಂತು ಪಿಂಗಿಸುಗೆ', 'ಮಿಗೆ ಪೇಲ್ಗೆ ಕವೀಶ್ವರರ್', 'ಪರಮ ಕವೀಶ ಪ್ರಯೋಗಗತ ಮಾರ್ಗಂಗಳ್', 'ಪೇಲ್ಗೆ ಕವೀಶರ್' ಇತ್ಯಾದಿಯಾಗಿ ಮೇಲಿಂದ ಮೇಲೆ ಉಕ್ತವಾಗಿರುವುದು ಕಂಡು ಬರುತ್ತದೆ. ಇದರಿಂದ, ಶ್ರೀವಿಜಯನು 'ಕವೀಶ್ವರರು' ಅಥವಾ 'ಕವಿಶ್ರೇಷ್ಠರು' ಎಂಬರ್ಥದಲ್ಲಿ 'ಕವಿರಾಜ'ರನ್ನು ಉದ್ದೇಶಿಸಿ ತನ್ನ ಲಕ್ಷಣ ಗ್ರಂಥವನ್ನು ಬರೆದಿದ್ದಾನೆನ್ನುವುದು ಸ್ಪಷ್ಟವಾಗಿದೆ. ಕವಿಗಳು ಕವೀಶ್ವರರೆನ್ನಿಸಿಕೊಳ್ಳಬೇಕಾದರೆ 'ಮಾರ್ಗ' ಕಾವ್ಯಗಳನ್ನು ರಚಿಸಬೇಕೆಂಬುದು ಅವನ ಆಶಯ. ಈ "ಗ್ರಂಥವನ್ನು ನಿರ್ಮಿಸಿದುದು ಮಾರ್ಗೀಯ ವಿದ್ವತ್ಕವಿಗಳ ಮೀಸಲಾದ ಪ್ರಯೋಜನಕ್ಕಾಗಿ. ಆ ಮಟ್ಟಕ್ಕೇರದ ಕೆಳಗಿನ ತರಗಿಯ ದೇಸಿಗಬ್ಬಿಗರನ್ನು ಗುರಿಯಿಟ್ಟು ಇದು ರಚಿತವಾದುದಲ್ಲ" ಎಂಬ ಮುಳಿಯ ತಿಮ್ಮಪ್ಪಯ್ಯನವರ ಮಾತು, ಇದೇ ಅಭಿಪ್ರಾಯವನ್ನು ಹೊಂದಿದೆ.

**ವಿಷಯವ್ಯಾಪ್ತಿ** : ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕವಿರಾಜ ಮಾರ್ಗಕ್ಕೆ ಒಂದು ಮಹತ್ವದ ಸ್ಥಾನವಿದೆ; ಕನ್ನಡ ಕಾವ್ಯಮೀಮಾಂಸೆಯ ಬೆಳವಣಿಗೆಯಲ್ಲಿ ಒಂದು ವಿಶಿಷ್ಟ ಸ್ಥಾನವಿದೆ. ಇವನ್ನು ಎತ್ತಿ ಕಾಣಿಸಿ ತೋರುವುದಕ್ಕೆ, ಗ್ರಂಥದಲ್ಲಿ ಪ್ರತಿಪಾದಿತವಾದ ವಿಷಯ ವ್ಯಾಪ್ತಿಯ ಸ್ಥೂಲ ಪರಿಚಯ ಅಗತ್ಯ. ಅದನ್ನು ಈ ಕೆಳಗೆ ಸಂಕ್ಷೇಪವಾಗಿ ನಿರ್ದೇಶಿಸಿದೆ.

**ಪ್ರಥಮ ಪರಿಚ್ಛೇದ: ದೋಷಾದೋಷಾನುವರ್ಣನ ನಿರ್ಣಯ:** (ಕಂಸದಲ್ಲಿರುವುದು ಪದ್ಯ ಸಂಖ್ಯೆ) ಮಂಗಳ ಪದ್ಯಗಳು (೧–೨) – ಸರಸ್ವತೀ ಪ್ರಾರ್ಥನೆ(೩) – ಕವೀಶ್ವರರಲ್ಲಿ ಪ್ರಾರ್ಥನೆ, ನೃಪತುಂಗ ಸಭಾಸದರ ವಿಚಾರ, ಸ್ವವಿಚಾರ (೪–೬) – 'ಅಶ್ರುತ ಪ್ರಕೃತಿಜನಸ್ವರೂಪ' ವರ್ಣನೆ, ಪೂರ್ವಕಾವ್ಯಾಭ್ಯಾಸದ ಅವಶ್ಯಕತೆ, ಓದಿನ ಸ್ವರೂಪ (೭–೧೦) – ವಾಗ್ವಿದಗ್ಧತಾ ನಿಪುಣತೆಗೆ ಕಾರಣ (೧೧) – ವಚನ ವಿರಚನೆಯ ಸ್ವರೂಪ (೧೨–೧೩) – ಪರಾನುಕರಣನಿಂದೆ )(೧೪) – ಮಾತರಿವವರು, ಅವರಲ್ಲಿ ಕವಿ ವೃಷಭರ ಸ್ಥಾನ (೧೫–೧೭) – ಕವಿತೆಯ ಕಾರ್ಯ, ಪ್ರಯೋಜನ (೧೮–೨೧) – ಕಾವ್ಯ ಲಕ್ಷಣ; ಕಾವ್ಯ ಶರೀರ ಸ್ವರೂಪ; ಶರೀರಭೇದ; ಗದ್ಯ,

ಆದ ಅರ್ಥಾಲಂಕಾರ ಭೇದಗಳ ಅನುಕ್ರಮ ನಿರ್ದೇಶ: ಪ್ರತಿಜ್ಞಾಪದ್ಯಗಳು (೨–೫) (ಲಕ್ಷ್ಯಗಳೊಡನೆ) ಜಾತಿ ರೂಪಕಾದಿ ಅರ್ಥಾಲಂಕಾರಗಳ ನಿರೂಪಣ (೬–೨೦೮); ಮಹಾಕಾವ್ಯ ಲಕ್ಷಣ (೨೦೯–೨೧೭); 'ಆಶ್ರಿತಮಹಾನೃಪತುಂಗ ಸಭಾಸದ' ಪ್ರಶಂಸೆ (೨೧೮–೨೩೦); ಸಮಾಪ್ತಿ ವಾಕ್ಯ (೨೩೧).

ಮೇಲ್ಕಂಡ ಗ್ರಂಥ ವಿಷಯ ವಿನ್ಯಾಸದ ಚೌಕಟ್ಟಿನಲ್ಲಿ ಗ್ರಂಥದ ಮಹತ್ತ್ವ ಮತ್ತು ವೈಶಿಷ್ಟ್ಯಗಳ "ಸ್ವರೂಪವನ್ನು ಈಗ ಗುರುತಿಸಬಹುದು: ಕವಿರಾಜಮಾರ್ಗವು ಆದ್ಯಗ್ರಂಥ, ಆದ್ಯಲಕ್ಷಣಗ್ರಂಥ ಎಂಬ ಮಾತು ಈ ಸಂದರ್ಭದಲ್ಲಿ ಮತ್ತೆ ನೆನೆಯತಕ್ಕದ್ದು. ಈ ವಿಶಿಷ್ಟತೆಯಿಂದಾಗಿಯೆ ಅದಕ್ಕೆ ಒಂದು ಐತಿಹಾಸಿಕ ಮಹತ್ತ್ವ ಸಂದಿರುವುದು. ಅದು ದಂಡಿ ಭಾಮಹರ ಲಕ್ಷಣ ಗ್ರಂಥಗಳಿಗೆ ಕಡಹೊತ್ತ ಕೇವಲ ಅನುವಾದ ಗ್ರಂಥವಾಗಿದ್ದಿದ್ದರೆ' ಅದರ ಈಗಿನ ಬೆಲೆಯ ಬಹುಭಾಗ ಇಲ್ಲವಾಗುತ್ತಿತ್ತು. ಜೊತೆಗೆ, ಅದು ತನ್ನದೇ ಆದ ಸ್ವತಂತ್ರ ದೃಷ್ಟಿ–ಸೃಷ್ಟಿಗಳನ್ನು ಮೈಗೂಡಿಸಿಕೊಂಡು ಅವತರಿಸಿರುವುದು ಕನ್ನಡದ ಪುಣ್ಯ.

**ಐತಿಹಾಸಿಕ ಮಹತ್ವ :** ಸ್ವತಂತ್ರವೆನಿಸಿರುವ ಗ್ರಂಥಭಾಗದಲ್ಲಿ, ತತ್ಕಾಲದ ಮತ್ತು ತತ್ಪೂರ್ವದ ಕನ್ನಡ ನಾಡು ನುಡಿಗಳ ಸ್ವರೂಪ, ಅಂದಿನ ಮತ್ತು ಹಿಂದಿನ ಸಾಹಿತ್ಯ ಸ್ಥಿತಿ – ಇವುಗಳ ಸ್ಥೂಲ ಸ್ವರೂಪವನ್ನು ತಿಳಿಸುವ ಕುರುಹುಗಳು ಅಡಕವಾಗಿವೆ. ಕತ್ತಲಿಡಿದ ಸಾಹಿತ್ಯ ಚರಿತ್ರೆಯ ಅಜ್ಞಾತ ಯುಗದ ಮೇಲೆ ಈ ಗ್ರಂಥಭಾಗ ಬೀರುವ ಬೆಳಕಿನ ಕಿರಣಗಳಲ್ಲಿ ಮುಖ್ಯವಾದವು ಇವು:

೧. ಕನ್ನಡ ಕಾವ್ಯಗಳಲ್ಲಿ ಗದ್ಯಪದ್ಯ ಸಂಮಿಶ್ರಿತವಾದ, ಗದ್ಯಪ್ರಾಚುರ್ಯ ಹೆಚ್ಚಾದ, ಚಂಪೂಕಾವ್ಯ ಎನ್ನಬಹುದಾದ, 'ಗದ್ಯಕಥಾ' ಪ್ರಕಾರವವೊಂದಿದ್ದಿತು (I–೨೭); ೨.ಚತ್ತಾಣ–ಬೆದಂಡೆ ಎಂಬ ದೇಸಿಗಬ್ಬ ಪ್ರಕಾರಗಳು ರೂಢವಾಗಿದ್ದವು. (I–೩೯); ಬೆದಂಡೆ ಯಕ್ಷಗಾನದ ಅಂದಿನ ರೂಪವಾಗಿದ್ದರಿಬಹುದು. 'ಪಗರಣ' (=ಪ್ರಕರಣ) ಅಂದಿನ ನಗೆನಾಟಕ. 'ವ್ಯಾಕರಣ ಕಾವ್ಯನಾಟಕ' ಪ್ರವೀಣನ ಉಲ್ಲೇಖ (I–೬೮); ನಾಟಕದ ಅಸ್ತಿತ್ವದ ಊಹೆಗೆ ಪೋಷಕ. ೩.ವಿಮಳೋದಯ ನಾಗಾರ್ಜುನಾದಿಗಳು 'ಗದ್ಯಾಶ್ರಮಪದ ಗುರುತಾಪ್ರತೀತಿ'ಯನ್ನು ಕೈಕೊಂಡಿದ್ದಂತೆ, ಶ್ರೀವಿಜಯಾದಿಗಳ 'ವಸ್ತುವಿಸ್ತರ ರಚನೆ' ('ವಸ್ತುಪ್ರಧಾನಕಾವ್ಯ' = 'ವಸ್ತುಕ' ಎಂದರೆ ಮಾರ್ಗಕಾವ್ಯ) 'ಲಕ್ಷ್ಯಂ ತದಾದ್ಯ ಕಾವ್ಯಕ್ಕೆಂದುಂ' ಎನಿಸಿಕೊಂಡಿದ್ದುವು. (I–೨೯,೩೨)(ಈ ಕವಿಗಳ ವಿಚಾರಕ್ಕೆ ಟಿಪ್ಪಣಿಗಳನ್ನು ನೋಡಿ); ೪.ಬಾಣ, ಗುಣಸೂರಿ (ಈತ ಯಾರೋ ತಿಳಿಯದು) ನಾರಾಯಣ ('ಯಶಸ್ತಿಲಕ'ದ

ಕಾರಕಸಂಪದವಿರುವಲ್ಲಿ ವಚನದೋಷ ಅಲ್ಪ (೧೨೧);ಏಕಬಹುತ್ವ ವಿಕಲ್ಪದಲ್ಲಿ ಕಾರಕದೋಷಾಭಾವ, ಇದಕ್ಕೆ ಲಕ್ಷ್ಯ (೧೨೨, ೧೨೩, ೧೨೪); ಗುರುಲಘುದೋಷಗಳು (೧೨೬–೧೨೯); ಸಮುಚ್ಚಯ ದೋಷ, ದೋಷಾಭಾವ (೧೩೨–೧೩೩); ವಿಕಲ್ಪದೋಷ, ದೋಷಾಭಾವ (೧೩೫–೧೩೬); ಅವಧಾರಣ ಏಶಂಕಾ ದೋಷಗಳು (೧೩೮–೧೪೨); ಉಪಮಿತೋಕ್ತಿ ಗುಣಾವಗುಣ (೧೪೩–೧೪೬) – ನೀತಿನಿರಂತರ ನಿರೂಪಣಕ್ರಮ (೧೪೯)

**ದ್ವಿತೀಯ ಪರಿಚ್ಛೇದ : ಶಬ್ದಾಲಂಕಾರ ವರ್ಣನ ನಿರ್ಣಯ:** ಅಲಂಕಾರಭೇದ ನಿರ್ದೇಶ (೧–೨); ಶಬ್ದಾಲಂಕಾರ ನಿರೂಪಣ ನಿಶ್ಚಯ (೩); ಉಚಿತ ಮೃದುಪದ ಪ್ರಯೋಗ ನಿರ್ದೇಶ (೪); ಶಬ್ದಾರ್ಥ ಸಾಂಗತ್ಯ ವಿಚಾರ (೫); ಹ್ರಸ್ವಾಕ್ಷರಾಂತ ವಾದ ಪದದ ಮುಂದೆ ದೀರ್ಘಾಕ್ಷರಾದಿಯಾದ ಪದದ ಪ್ರಯೋಗದ ನಿಷೇಧ, ಈ ಸಂಬಂಧದ 'ದೂಷ್ಯ' ಪ್ರಯೋಗಕ್ಕೂ 'ಮಾರ್ಗ' ಪ್ರಯೋಗಕ್ಕೂ ಲಕ್ಷ್ಯಗಳು (೬–೮); ಕ್ರಿಯಾ ವಿಶೇಷಣ ಪ್ರಯೋಗ ವಿಚಾರ (೯–೧೨); ವ್ಯರ್ಥ ಪದಪ್ರಯೋಗ ವಿಚಾರ (೧೩–೧೪); ದ್ವಿತೀಯಾ, ಷಷ್ಠೀ, ಸಂಬೋಧನಾ ವಿಭಕ್ತಿ ಪ್ರತ್ಯಯಗಳ ದೀರ್ಘೀಕರಣ (೧೫–೨೪); ಯುಕ್ತ ಪುನರುಕ್ತಿ (೨೫–೨೬); 'ಬಹುವಿಶೇಷಗಣ' ಪ್ರಯೋಗ ವಿಚಾರ (೨೭–೨೯); ಕನ್ನಡದಲ್ಲಿ ಪ್ರಾಸದ ಅತಿಶಯತೆ, ಆರು ಬಗೆಯ ಪ್ರಾಸಗಳು, ಅವುಗಳಿಗೆ ಲಕ್ಷ್ಯಗಳು (೩೦–೪೫); 'ಪೂರ್ವಶಾಸ್ತ್ರಪದವಿಧಿ'ಗೆ ಅನುಗುಣವಾಗಿ, ಸಹಜವಾಗಿ ಅನಂತವಾಗಿರುವ 'ಕವೀಶಪ್ರಯೋಗಗತ ಮಾರ್ಗಗಳ'ಲ್ಲಿ ಪ್ರಸಿದ್ಧವಾದ ದಕ್ಷಿಣೋತ್ತರ ಮಾರ್ಗನಿರೂಪಣಾ ಪ್ರತಿಜ್ಞೆ (೪೬–೫೩); ದಕ್ಷಿಣ ಮಾರ್ಗದ ದಶಭೇದಗಳು, ಅವುಗಳ ವಿಪರ್ಯಯುವೃತ್ತಿ ವಿಕಲ್ಪದಿಂದ ಆಗುವ ಉತ್ತರಮಾರ್ಗ, ದಕ್ಷಿಣೋತ್ತರ ಮಾರ್ಗಗತಗಳಾದ ದಶ ಬಂಧ–ಗುಣಗಳ ಲಕ್ಷ್ಯ ಲಕ್ಷಣ ಪೂರ್ವಕ ನಿರೂಪಣ (೫೪–೮೬); ಉಭಯ ಮಾರ್ಗಗಳಲ್ಲಿ ಓಜೋಗುಣ ಪ್ರಕಾಶನಕ್ಕೆ ಸಾಧಕವಾದ ಸಮಸ್ತಪದ ಪ್ರಯೋಗ ವಿಚಾರ; ಲಕ್ಷ್ಯಲಕ್ಷಣ ಸಮನ್ವಯದೊಂದಿಗೆ (೮೭–೧೧೦); ದುಷ್ಕರ (ಚಿತ್ರ) ಕಾವ್ಯ ಲಕ್ಷ್ಯಭೇದಗಳು (೧೧೨–೧೪೨); 'ಹೇಳಿಕೆ'ಯ ಲಕ್ಷ್ಯಭೇದಗಳು (೧೪೩–೧೫೨); ಪರಿಚ್ಛೇದಾಂತ ಉಪಸಂಹಾರಪದ್ಯಗಳು (೧೫೩–೧೫೫).

**ತೃತೀಯ ಪರಿಚ್ಛೇದ : ಅರ್ಥಾಲಂಕಾರ ಪ್ರಕರಣ:** 'ಪುರಾಣಶಾಸ್ತ್ರೋಕ್ತಂಗಳ್'

ಕನ್ನಡದಲ್ಲಿ ಇರಲಿಲ್ಲ. ಕನ್ನಡದ ಓಜರು ಅವರಷ್ಟು ಬಲ್ಲಿದರಾಗಿರಲಿಲ್ಲ" (I–೪೨) ಎಂಬ ಹೇಳಿಕೆಯಿಂದ ಕನ್ನಡ ಕಾವ್ಯಲಕ್ಷಣಜ್ಞರೂ ಲಕ್ಷಣಗ್ರಂಥಗಳೂ ಬಹುಶಃ ಇದ್ದಿರಲಿಲ್ಲವೆಂದು ಊಹಿಸಬೇಕಾಗುತ್ತದೆ. ಇದ್ದಿರಲಿಲ್ಲವೆಂಬುದೇ ಮುಳಿಯ ತಿಮ್ಮಪ್ಪಯ್ಯನವರ ಸ್ಪಷ್ಟಾಭಿಪ್ರಾಯ. (ಕ.ರಾ.ಮಾ.ವಿವೇಕ–೧, ಪು.–೧೧೬) ಮೇಲೆ ಪ್ರಸಕ್ತರಾದ 'ಪೂರ್ವಾಚಾರ್ಯರು' ಕೆಲವರು ಸಂಸ್ಕೃತ ಕಾವ್ಯಲಕ್ಷಣವನ್ನು ಬಲ್ಲ ಕನ್ನಡಿಗರೇ ಆಗಿದ್ದು. ಕನ್ನಡ ಕಾವ್ಯಕ್ಕೆ ಅದನ್ನು ಅನ್ವಯಿಸಿ ಹೇಳುವಲ್ಲಿ ಕನ್ನಡಕ್ಕೆ ವಿಶಿಷ್ಟವಾದ ವಿಧಿನಿಷೇಧಗಳನ್ನು ತಿಳಿಸುತ್ತಿದ್ದರೆಂದು ಗ್ರಹಿಸಿದರೆ, ಮೇಲಿನ ಇಬ್ಬಗೆಯ ಉಕ್ತಿಗಳಲ್ಲಿನ ವಿರೋಧಾಭಾಸವು ಪರಿಹಾರವಾಗಬಹುದು. ಗುಣದೋಷ, ದಕ್ಷಿಣೋತ್ತರ ಮಾರ್ಗ, ಅಲಂಕಾರ – ಈ ಭಾಗಗಳ ಲಕ್ಷಣ ನಿರೂಪಣ ಸಂಬಂಧದಲ್ಲಿ ಪೂರ್ವಶಾಸ್ತ್ರ ಇಲ್ಲವೆ ಪೂರ್ವಾಚಾರ್ಯರ ಮಾತು ಬಂದಾಗ (ಉದಾ: I–೭೧, II–೬೨, III–೫) ಸಂಸ್ಕೃತ ಲಾಕ್ಷಣಿಕರೆಂದೇ ಗ್ರಹಿಸಬೇಕು. ಫಲಿತಾರ್ಥವಾಗಿ, ಕವಿರಾಜಮಾರ್ಗವನ್ನು ಆಧರಿಸಿ ಅದಕ್ಕಿಂತ ಹಿಂದೆ ಕನ್ನಡ ಕಾವ್ಯಕ್ಕೆ ಸಂಬಂಧಪಟ್ಟಂತೆ ಲಕ್ಷಣ ಗ್ರಂಥವೊಂದು ಇದ್ದಿತೋ ಇಲ್ಲವೋ ಎಂದು ಖಚಿತವಾಗಿ ಹೇಳಲಾಗದಿದ್ದರೂ, ಗದ್ಯಪದ್ಯ ಕವಿ ಕಾವ್ಯ ಪ್ರಸಕ್ತಿಯಿರುವುದರಿಂದಲೂ ಕನ್ನಡ ಕಾವ್ಯಕ್ಕೆ ವಿಶಿಷ್ಟವಾದ ಕೆಲವು ಲಕ್ಷಣಗಳ ಸಂಬಂಧದಲ್ಲಿ 'ಪೂರ್ವಾಚಾರ್ಯ'ರ ಮಾತು ಬಂದಿರುವುದರಿಂದಲೂ ಕನ್ನಡ ಕಾವ್ಯಸಂಬಂಧಿಯಾದ ಲಕ್ಷಣ ಪರಂಪರೆಯೊಂದು ಬೆಳೆಯುತ್ತ ಬಂದಿದ್ದಿರಬೇಕೆಂದು ಊಹಿಸಿದರೆ ತಪ್ಪಾಗದು.

ಕವಿರಾಜಮಾರ್ಗದಲ್ಲಿ ರಾಮಾಯಣ ಕಥೆಗೆ ಸಂಬಂಧಪಟ್ಟ ಕೆಲವು ಲಕ್ಷ್ಯಪದ್ಯಗಳಿವೆ. (II–೩೮, ೪೦, ೪೨, ೮೯, ೯೧, ೯೩, ೯೬, ೧೨೪, ೧೨೫, ೧೨೭, ೧೩೦; III–೧೮೯, ೧೯೦, ೧೯೪), ಅವುಗಳಲ್ಲಿ ಜೈನರಾಮಾಯಣ ಸಂಪ್ರದಾಯದ ಕುರುಹುಗಳಿವೆಯೆಂದೂ, ಯಾವುದೋ ಪೂರ್ವ ಜೈನರಾಮಾಯಣದಿಂದ ಆ ಪದ್ಯಗಳನ್ನೂ ಕವಿರಾಜಮಾರ್ಗಕಾರನು ಉದ್ಧರಿಸಿರಬೇಕೆಂದೂ ವಿದ್ವಾಂಸರು ಊಹಿಸಿದ್ದಾರೆ. ಈ ಲಕ್ಷ್ಯಪದ್ಯಗಳು ಗ್ರಂಥಕರ್ತನಿಂದಲೇ ರಚಿತವಾದ ಸ್ವತಂತ್ರ ಲಕ್ಷ್ಯಪದ್ಯಗಳೆಂದು ಸ್ಥಾಪಿಸಲು ಪ್ರತ್ಯೇಕ ಲೇಖನದಲ್ಲಿ ಈ ಸಂಪಾದಕನು ಪ್ರಯತ್ನಿಸಿದ್ದಾನೆ. (ನೋಡಿ: 'ಕವಿರಾಜಮಾರ್ಗದಲ್ಲಿನ ರಾಮಾಯಣ ಪದ್ಯಗಳು'; ಕ.ಸಾ.ಪ. ಪತ್ರಿಕೆ, ಡಿಸೆಂಬರ್ ೧೯೬೬) ಭಾರತಕಥೆ ಹಾಗೂ ರತ್ನಾವಳೀ ನಾಟಿಕೆಯ ಸಂಬಂಧದ ಲಕ್ಷ್ಯ ಪದ್ಯಗಳೂ ಇವೆಯೆಂಬ ಊಹೆಯೂ ಇದೆ. ಹಾಗೆ ಊಹಿಸಲು ಪದ್ಯಗಳಲ್ಲಿ ಪ್ರಮಾಣವಿಲ್ಲ (II–೧೪,

ಸೋಮದೇವನು ಸ್ಮರಿಸಿರುವ ಕವಿಯಿರಬಹುದು) ಭಾರವಿ, ಕಾಳಿದಾಸ, ಮಾಘಾದಿ ಸಂಸ್ಕೃತ ಗದ್ಯ ಪದ್ಯ ಕವಿಗಳು ಕನ್ನಡ ನಾಡಿನ ಪಂಡಿತ ಲೋಕಕ್ಕೆ ಪರಿಚಿತರಾಗಿದ್ದು, ಕನ್ನಡ ಸಾಹಿತ್ಯದ ಬೆಳವಣಿಗೆಯ ಮೇಲೆ ಪ್ರಭಾವ ಬೀರತೊಡಗಿದ್ದರು. (I–೨೬–೩೧); ೫.ಕನ್ನಡ ನಾಡಿನ ಜನ 'ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್'; 'ತಂತಮ್ಮ ನುಡಿಯೊಳೆಲ್ಲರ್ ಜಾಣರ್'; ಜಾಣರಲ್ಲದವರೂ ಕೂಡ, ಕೃತಿಗಳಲ್ಲಿ 'ಅವಗುಣದಾ ತಾಣಮನಿನಿಸೆಡೆವೆತ್ತೊಡೆ ಮಾಣದೆ ಪಿಡಿದವನೆ ಕೃತಿಗಳಂ ಕೆಡೆನುಡಿವರ್' (I–೩೮, ೩೯, ೪೦); ಇದರಿಂದ, ಕನ್ನಡ ನಾಡವರ ಸಹಜ ಕಾವ್ಯಪ್ರಜ್ಞೆ, ಸಹೃದಯತೆ, ಕಾವ್ಯವಿಮರ್ಶನ ಸಾಮರ್ಥ್ಯ ಇವು ವ್ಯಕ್ತಪಡುತ್ತವೆ.; ೬.'ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಂ' ಎಂಬ ಪದ್ಯದ ಮಾತಿನಿಂದ (I–೪೮), ಮುಖ್ಯವಾಗಿ ಗಮನಿಸಬೇಕಾದ ಸಂಗತಿಗಳೆಂದರೆ (i)ಕನ್ನಡ ಕಾವ್ಯಪರಂಪರೆಯೊಂದು ರೂಢಮೂಲವಾಗಿದ್ದಿತು. (ii) ಪೂರ್ವದ ಹಳಗನ್ನಡವೊಂದಿದ್ದಿತು. (ಈ ಅಂಶವನ್ನು ಸಮರ್ಥಿಸುವ ಶಬ್ದಪ್ರಯೋಗಗಳೂ ಗ್ರಂಥದಲ್ಲಿವೆ); (iii) ಕನ್ನಡದಲ್ಲಿ ಪ್ರಾಂತಭೇದಗಳೂ ದೇಸಿಗಳೂ ಅನೇಕವಾಗಿದ್ದು 'ಕನ್ನಡಂಗಳು' ದೋಷಮಯವಾಗಿದ್ದುವು; (iv) 'ಆಗಮಬಲಹೀನರು' (ಕಾವ್ಯಲಕ್ಷಣವನ್ನು ಅರಿಯದವರು) ಕಾವ್ಯರಚನೆಗೆ ಕೈಹಾಕುತ್ತಿದ್ದರು.

ಈ ಸ್ಪಷ್ಟ ನಿರ್ದೇಶಗಳ ಜೊತೆಗೆ 'ಪುರಾಣಕವಿಗಳ್', 'ಕವಿವೃಷಭರಾಪ್ರಯೋಗಂಗಳಂ', 'ಪೂರ್ವಕಾವ್ಯರಚನೆಗಳಂ','ಪರಮ ಕವಿಪ್ರಧಾನರಾ ಕಾವ್ಯಂಗಳ್', 'ಪುರಾಣಕಾವ್ಯ ಪ್ರಯೋಗಂಗಳ್' 'ಪುರಾಣ ಕವಿಪ್ರಭುಪ್ರಯೋಗಾವಿಲ ಸದ್ಗುಣೋದಯಮಂ' ಇತ್ಯಾದಿ ಪ್ರಯೋಗಗಳು ಕವಿರಾಜಮಾರ್ಗಪೂರ್ವ ಕಾವ್ಯನಿರ್ಮಾಣೋದ್ಯೋಗದ ಜಾಡಿನ ಹೆಜ್ಜೆ ಗುರುತುಗಳಂತಿವೆ.

ಪ್ರಾಚೀನ ಕನ್ನಡ ಲಕ್ಷಣ ಸಾಹಿತ್ಯದ ಬಗೆಗೆ ಇಂಥದೇ ನಿಸ್ಸಂದಿಗ್ಧಸಾಕ್ಷ್ಯ ಗ್ರಂಥದಲ್ಲಿ ದೊರಕದು. ಗದ್ಯ ಕಥೆಯನ್ನು ನಿಗದಿಸುವ 'ಚಿರಂತನಾಚಾರ್ಯರ್ಕಳ್', ಸಮ ಸಂಸ್ಕೃತವನ್ನೂ ಕನ್ನಡವನ್ನೂ ಬೆರಸುವಂದು 'ಅರಿದು ಪೇೞ್ಗೆ' ಎಂಬ 'ಆಗಮಕೋವಿದ ನಿಗದಿತ ಮಾರ್ಗ', 'ಪೂರ್ವಶಾಸ್ತ್ರವಿಧಿ', 'ಪ್ರಾಕ್ತನೋಕ್ತವರ್ಗಪ್ರಾಸ', 'ಪುರಾಣಶಾಸ್ತ್ರೋಕ್ತಂಗಳ್' ಇತ್ಯಾದಿ ಉಕ್ತಿಗಳಲ್ಲಿ ಕೆಲವಂತೂ ಕನ್ನಡ ಕಾವ್ಯಲಕ್ಷಣ ಶಾಸಕರಾದ ಪೂರ್ವಾಚಾರ್ಯರು ಇದ್ದಿರಬೇಕೆಂಬುದರ ಕಡೆಗೇ ಕೈದೋರುತ್ತಿವೆ. ಆದರೆ, "ಅವರಿವರನ್ನು ಕೇಳಿಯಾದರೂ ತಿಳಿದು ಕಾವ್ಯಲಕ್ಷಣವನ್ನು ಹೇಳೋಣವೆಂದರೆ, ಸಂಸ್ಕೃತ ಪ್ರಕೃತಗಳಲ್ಲಿಯಂತೆ ಲಕ್ಷಣವನ್ನು ಚೆನ್ನಾಗಿ ಬಲ್ಲವರು

ಎಂದೆನ್ನುವ ಮಟ್ಟಿಗೆ ತನ್ನ ಉತ್ತರದ ಸೀಮೆಯಿಂದ ಕೆಳಕ್ಕೆ ಸರಿದಿತ್ತು. 'ತಿರುಳ್ಗನ್ನಡನಾಡು' ಬೇರೆ ಬೇರೆ ದೇಸಿಗಳ ಪ್ರಾಚುರ್ಯ, ವಾಸುಕಿಯೂ ಅರಿಯಲಾಗದಷ್ಟು ದೋಷಮಯವಾದ 'ಕನ್ನಡಂಗಳ್', ಕನ್ನಡಕ್ಕೆ ಸಂಬಂಧಪಟ್ಟಂತೆ ದಕ್ಷಿಣೋತ್ತರ ಮಾರ್ಗ ನಿರ್ಣಯ, ಹೊಲಗೆಟ್ಟ 'ಪಟಿಗನ್ನಡ'ದ ಉಲ್ಲೇಖ, ಇವುಗಳ ಆಧಾರದಿಂದ ಅಂದಿನ ಕನ್ನಡ ನುಡಿಯ ಪಾಡು ಒಟ್ಟಿನ ಮೇಲೆ ಹದಗೆಟ್ಟಿತ್ತೆಂದು ತಿಳಿಯಬೇಕಾಗಿದೆ. ಕನ್ನಡ ನಾಡವರ ನುಡಿಬಲ್ಮೆಯನ್ನೂ ಸಾಮರ್ಥ್ಯವನ್ನೂ ಕುರಿತು ಶ್ರೀವಿಜಯ ಅಭಿಮಾನದ ಮಾತುಗಳನ್ನೆ ಆಡಿದ್ದಾನೆ. (I–೩೬–೪೨, ೪೬; ೪೮; II–೧೦೧–೧೧೦). ಆದರೂ ನಿರ್ದುಷ್ಟ ಭಾಷಾಪ್ರಯೋಗದಿಂದ ಕೂಡಿದ ಅಭಿಜಾತ ಮಾರ್ಗಕಾವ್ಯ ರಚನೆಗೆ ತಕ್ಕ ಲಕ್ಷ್ಯಲಕ್ಷಣ ನಿರ್ದಿಷ್ಟವಾದ 'ಮಾರ್ಗ' ನೇರ್ಪಿಟ್ಟಿರಲಿಲ್ಲವೆಂದು ಕಾಣುತ್ತದೆ. ಅದನ್ನು ಕಲ್ಪಿಸಿದ ಶ್ರೇಯಸ್ಸು ಶ್ರೀವಿಜಯನಿಗೂ ಅವನಿಗೆ ಸ್ಫೂರ್ತಿಯನ್ನೂ ಆಶ್ರಯವನ್ನೂ ಪಾಂಡಿತ್ಯದ ನೆರವನ್ನೂ ನೀಡಿದ ನೃಪತುಂಗನಿಗೂ ಸಲ್ಲುತ್ತದೆ.

ಕವಿರಾಜಮಾರ್ಗ ಕಾವ್ಯವಾಗಿರದೆ ಲಕ್ಷಣಗ್ರಂಥವಾಗಿದ್ದರೂ ಕೂಡ ಕಣ್ಣಿಟ್ಟು ಆರೈದರೆ ಸಮಕಾಲೀನ ಸಮಾಜ ಸ್ವರೂಪದ ಒಂದು ಚಿಕ್ಕ ಇಣುಕು ನೋಟ ಸಿಕ್ಕುತ್ತದೆ. ಆಗಿನ ವರ್ಣಾಶ್ರಮಧರ್ಮ ಪರಿಪಾಲನೆ (I–೬೫), ಆಗ ರಾಜಮನ್ನಣೆ ಪಡೆದಿದ್ದ ವೈದಿಕ ಜೈನಮತಗಳ ಜೊತೆಗೆ ಸಾಂಖ್ಯ, ಬೌದ್ಧ, ವೈಶೇಷಿಕ, ಚಾರ್ವಾಕ ದರ್ಶನಗಳಿಗೆ ಸಮಾಜದಲ್ಲಿದ್ದ ಸ್ಥಾನಮಾನ (I–೧೦೫), ಸೈನ್ಯದ ಸ್ವರೂಪ (I–೧೨೦–೧೩೪), ಇವುಗಳ ಹೊಳಹು ಗ್ರಂಥದಲ್ಲಿದೆ. 'ಗೊರವರ' ಪ್ರಸಕ್ತಿ ಎರಡು ಮೂರು ಕಡೆ (ಉದಾ: I–೪೯–೧೩೨) ಬಂದಿದೆ. ಸಮಾಜದಲ್ಲಿ ಇವರ ಸ್ಥಾನಮಾನದ ಬಗೆಗೆ ಮುಳಿಯ ತಿಮ್ಮಪ್ಪಯ್ಯನವರು ಸಂಶೋಧನೆಯನ್ನು ಗಮನಿಸಬೇಕು. (ಕ.ರಾ.ಮಾರ್ಗ ವಿವೇಕ – ೧; ಪು.–೬೧–೬೩) "ಕಸವರಮೆಂಬುದು ಮಿಗೆ ಸೈರಿಸಲಾರ್ಪೊಡೆ ಪರವಿಚಾರಮಂ ಧರ್ಮಮುಮಂ" ಎಂಬ ಅಂದಿನ ರಾಜಪ್ರಜಾವರ್ಗದ ವಿಶಾಲ ಭಾವನೆಯ ಹಿರಿಯ ಆದರ್ಶ (III–೧೭೬) ಇಂದಿಗೂ ಅನುಸರಣೀಯ. ಆಗ ಪಂಡಿತವರ್ಗದಲ್ಲಿಯೂ ಜನಸಾಮಾನ್ಯರಲ್ಲಿಯೂ ಕನ್ನಡ ಸಕ್ಕದಗಳ ಜೊತೆಗೆ ಪಾಗದ (ಪ್ರಾಕೃತ)ವೂ ಬಳಕೆಯಲ್ಲಿದ್ದಂತೆ ಕಾಣುತ್ತದೆ. ಕ್ಷತ್ರಿಯೋಚಿತ ರಾಜೋಚಿತಗಳಾದ ನಡವಳಿಕೆಗಳ ಉಲ್ಲೇಖ ಅಲ್ಲಲ್ಲಿ ಬರುತ್ತವೆ; ಇವುಗಳಲ್ಲಿ ಅರಸರು 'ಕಂದುಕಕ್ರೀಡೆ' (=ಈಗಿನ ಪೋಲೋ, ಗಾಲ್ಫ್ ಆಟಗಳಂಥದು) ಆಡುತ್ತಿದ್ದರೆಂಬುದು ಗಮನಾರ್ಹ. (I–೯೯) 'ಪಗರಣ', ವಿಷಯಕವಾದ

II–೩೬ ಪದ್ಯಗಳ ಟಿಪ್ಪಣಿಗಳನ್ನು ನೋಡಿ). ದಂಡಿಯ ಲಕ್ಷ್ಯಪದ್ಯಗಳ ಅನುವಾದಗಳನ್ನು ಬಿಟ್ಟು, ಉಳಿದೆಲ್ಲ ಲಕ್ಷ್ಯಪದ್ಯಗಳನ್ನೂ ದಂಡಿಯ ಪದ್ಧತಿಯನ್ನೇ ಅನುಸರಿಸಿ, ಶ್ರೀವಿಜಯನೇ ಸ್ವತಃ ರಚಿಸಿರುವನೆಂದು ಹೇಳಬಹುದು. ಸದ್ಯದ ಮಟ್ಟಿಗೆ, ಅನ್ಯಕಾವ್ಯಗಳಿಂದ ಅವನು ಲಕ್ಷ್ಯ ಪದಗಳನ್ನು ಸ್ವೀಕರಿಸಿದ್ದಾನೆ ಎಂದು ಹೇಳಲು ಸ್ಪಷ್ಟ ಸೂಚನೆ ಗ್ರಂಥದಲ್ಲಿಲ್ಲ. (ಆದರೆ, ಈ ಬಗೆಗೆ ದಿವಂಗತ ಬಿ.ಎಂ.ಶ್ರೀ. ಯವರ ಅಭಿಪ್ರಾಯ ಬೇರೆಯಾಗಿದೆ. ಈ ಅಂಶ ವಿಚಾರಾರ್ಹ)[೨೩] ಆದ್ದರಿಂದ, ಕವಿರಾಜಮಾರ್ಗದ ಲಕ್ಷ್ಯಪದ್ಯಗಳ ಆಧಾರದ ಮೇಲೆ ಅದಕ್ಕಿಂತಲೂ ಹಿಂದೆ ಒಂದು ನಿರ್ದಿಷ್ಟ ಕಾವ್ಯವೊಂದು ಇದ್ದಿತೆಂದು ಹೇಳಲು ಸಾಧ್ಯವಿಲ್ಲ. ದಿವಂಗತ ವೆಂಕಣ್ಣಯ್ಯನವರು ಕವಿರಾಜಮಾರ್ಗಕ್ಕಿಂತಲೂ ಹಿಂದೆ ಬೌದ್ಧರು ಗ್ರಂಥರಚನೆ ಮಾಡಿರಬಹುದೆಂಬ ಊಹೆಯನ್ನು ಮುಂದಿಟ್ಟು, ಕವಿರಾಜಮಾರ್ಗದಲ್ಲಿ ಉಕ್ತರಾದ ವಿಮಲೋದಯ ನಾಗಾರ್ಜುನಾದಿಗಳು ಬೌದ್ಧರಾಗಿದ್ದಿರಬಹುದೇ ಎಂಬ ಸಂದೇಹವನ್ನು ವ್ಯಕ್ತಪಡಿಸಿದ್ದಾರೆ. ಈ ಬಗೆಗೆ ಯಾವುದೇ ನಿಶ್ಚಿತಾಭಿಪ್ರಾಯ ಇಲ್ಲ.

ಶ್ರೀವಿಜಯನು ಗ್ರಂಥಾರಂಭದಲ್ಲಿ ತಾನು ವ್ಯಾಕರಣದಲ್ಲಿ ಪಂಡಿತ (I–೬) ಎಂದು ಸೂಚಿಸಿರುವುದಲ್ಲದೆ, ಕಾರಕದೋಷ ಇತ್ಯಾದಿ ಕನ್ನಡಕ್ಕೆ ವಿಶಿಷ್ಟಗಳಾದ ವ್ಯಾಕರಣ ವಿಚಾರಗಳನ್ನು ಪ್ರಸ್ತಾವಿಸಿದ್ದಾನೆ. ಅಕ್ಕರ, ಚೌಪದಿ, ಗೀತಿಕೆ, ತ್ರಿಪದಿ ಮುಂತಾದ ಕನ್ನಡ ಪದ್ಯಜಾತಿಗಳ ಹೆಸರನ್ನು ಹೇಳಿದ್ದಾನೆ. 'ಪೂರ್ವಾಚಾರ್ಯರು' ಯತಿಯನ್ನು ಮಿಕ್ಕ ಸಂದರ್ಭವನ್ನು ಉಲ್ಲೇಖಿಸಿದ್ದಾನೆ. ಇವುಗಳಿಂದ, ಕವಿರಾಜಮಾರ್ಗಕ್ಕಿಂತ ಹಿಂದೆ ಕನ್ನಡದಲ್ಲಿ ಛಂದೋಗ್ರಂಥವೂ ವ್ಯಾಕರಣಗ್ರಂಥವೂ ಇದ್ದುವೆಂದು ಹೇಳಲಾಗದಿದ್ದರೂ ಕನ್ನಡ ಛಂದಸ್ಸಿನ ಸ್ಪಷ್ಟವಾದ ಜಾಡೂ ಕನ್ನಡ ವ್ಯಾಕರಣ ಪದ್ಧತಿಯೂ ಪಂಡಿತ ಮಾನ್ಯವಾಗುವ ಮಟ್ಟಿಗೆ ರೂಪುಗೊಂಡಿದ್ದುವೆಂದು ಹೇಳಲಡ್ಡಿಯಿಲ್ಲ.

ಇದುವರೆಗೆ, ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಕವಿರಾಜಮಾರ್ಗ ಗ್ರಂಥಕ್ಕೆ ಸಂದಿರುವ ಅಥವಾ ಸಲ್ಲಬೇಕಾದ ಐತಿಹಾಸಿಕ ಪ್ರಾಮುಖ್ಯವನ್ನು ಕುರಿತು ನಿರವಿಸಿದ್ದಾಯಿತು. ನೃಪತುಂಗನ ಕಾಲದ ಮತ್ತು ತತ್ಪೂರ್ವದ ಕೆಲವು ಚಾರಿತ್ರಿಕ ಅಂಶಗಳನ್ನು ಗ್ರಂಥದ ಹಲಕೆಲವು ಪದ್ಯಗಳಿಂದ ಊಹಿಸಬಹುದಾಗಿದೆ. (ಉದಾ: III–೧೨೯–೧೩೦, ೧೪೪–೧೫೨). ನಾವು ಈ ಹಿಂದೆ ಬಿತ್ತರಿಸಿದ ಚಾರಿತ್ರಿಕ ಹಿನ್ನೆಲೆಗೆ ಇವು ಪೂರಕವಾದಾವು. ನೃಪತುಂಗನ ಕಾಲಕ್ಕೆ ಕರ್ಣಾಟಕ ಸಾಮ್ರಾಜ್ಯವು 'ಕಾವೇರಿಯಿಂದ ಗೋದಾವರಿವರಂ' 'ಇರ್ಪ' ನಾಡು ಎಂದಾಗದೆ 'ಇರ್ದ'ನಾಡು

ಶಾಬ್ದಿಕೆಗಳಾದ್ದರಿಂದ ಈ ಗುಣ–ಮಾರ್ಗ ವಿವೇಚನೆ ಶಬ್ದಾಲಂಕಾರ ಪ್ರಕರಣದಲ್ಲಿ ಸಮಾವೇಶಗೊಂಡಿದೆ. ವಕ್ರೋಕ್ತಿ ಸ್ವಭಾವೋಕ್ತಿಗಳು ಪ್ರಮುಖವಾಗಿ ಆರ್ಥಿಕಗಳಾಗಿದ್ದು ಅರ್ಥಾಲಂಕಾರಗಳಿಗೆ ಸಂಬಂಧಪಟ್ಟವಾದ್ದರಿಂದ, ದಂಡಿಪ್ರೋಕ್ತವಾದ ಮಾರ್ಗಭೇದ ಕಲ್ಪನೆಗೆ ವಕ್ರೋಕ್ತಿ ಸ್ವಭಾವೋಕ್ತಿ ಪ್ರಕಾರಗಳನ್ನು 'ಕಸಿ' ಕಟ್ಟಲು ಮಾಡಿರುವ ಶ್ರೀವಿಜಯನ ಪ್ರಯತ್ನ ಫಲಕಾರಿಯಾಗಿದೆಯೆಂದು ತೋರುವುದಿಲ್ಲ. ಏಕೆಂದರೆ, ಅವನು ಮಾರ್ಗದ್ವಯಕ್ಕೆ ಕೊಟ್ಟಿರುವ ಲಕ್ಷ್ಯಗಳಲ್ಲಿ ಆ ಉಕ್ತಿ ಪ್ರಕಾರಗಳಿಗೆ ಸಮರ್ಥನೆ ದೊರಕುವುದಿಲ್ಲ.

ಗೌಡ ವೈದರ್ಭಗಳೆಂಬ ಭೇದ ದೇಶನಿಷ್ಠವೆಂಬುದನ್ನು ಮಾರ್ಗಕಾರನು ಬಲ್ಲನು. ಆದ್ದರಿಂದ, ಈ ಮಾರ್ಗಭೇದವನ್ನು ಕನ್ನಡಕ್ಕೆ ಅನ್ವಯಿಸಿ ಹೇಳುವಾಗ ಗೌಡ ವೈದರ್ಭಗಳೆಂಬ ದೇಶವಾಚಕಗಳನ್ನು ಪೂರ್ತಿಯಾಗಿ ಕೈಬಿಟ್ಟು,* ಕೇವಲ ದಕ್ಷಿಣೋತ್ತರ ಮಾರ್ಗವೆಂದು ಉದ್ದಕ್ಕೂ ಹೆಸರಿಸುತ್ತಾ ಹೋಗುವಲ್ಲಿ ಔಚಿತ್ಯವನ್ನೆ ತೋರಿದ್ದಾನೆ. ಶ್ರೀವಿಜಯನ ಕಾಲಕ್ಕಾಗಲೇ ಕನ್ನಡ ಭಾಷೆಯ ಹಾಗೂ ಕಾವ್ಯ ಸೃಷ್ಟಿಯ ಮೇಲೆ ಸಂಸ್ಕೃತದ ಪ್ರಭಾವವು ದೇಸಿಗಬ್ಬಗಳನ್ನು ಹಿಂದಿಕ್ಕುವ ಮಟ್ಟಿಗೆ ಪರಿಣಾಮ ಗೋಚರವಾಗಿದ್ದುದರಿಂದ, ಕಾವ್ಯ ರಚನೆಯ ಶೈಲಿಗೆ ನಿಕಟವಾಗಿ ಸಂಬಂಧಪಟ್ಟ 'ಗುಣ'ಗಳನ್ನು ಕನ್ನಡಕ್ಕೆ ಅಳವಡಿಸಿ ನಿದರ್ಶನಗೊಳಿಸುವಲ್ಲಿ ಅವನು ವೈಶಿಷ್ಟ್ಯವನ್ನೆ ಮೆರೆದಿದ್ದಾನೆ; ಅವನ ಕಾಲದ ಮತ್ತು ಅವನ ಕಾಲಕ್ಕೆ ಹಿಂದಿನ ಕಾವ್ಯ ಪ್ರಯೋಗ ಪದ್ಧತಿಯಲ್ಲಿ ಮಾರ್ಗಭೇದಗಣನೆ ಇದ್ದಿತೋ ಇಲ್ಲವೋ, ಅದು ಹೇಗಾದರೂ ಇರಲಿ; ದಂಡಿಯನ್ನನುಸರಿಸಿ ಬಂಧಾನುಗತ ಗುಣ ನಿರೂಪಣೆ ಮಾಡುವ ಮೂಲಕ ಮುಂದಿನ ಕವಿಗಳಿಗೆ ಅವನು ಕವಿತಾಶೈಲಿಯ 'ಮಾರ್ಗ'ವನ್ನು ಕಲ್ಪಿಸಿದನೆಂಬುದನ್ನು ಒಪ್ಪಿಕೊಳ್ಳಬೇಕು.

ಇನ್ನು, ಕನ್ನಡ ಕಾವ್ಯಪದ್ಧತಿಯಲ್ಲಿ ದಕ್ಷಿಣೋತ್ತರ ಮಾರ್ಗಭೇದ ಇದ್ದಿತೆ ಇಲ್ಲವೆ ಎಂಬುದನ್ನು ಸ್ವಲ್ಪದರಲ್ಲಿ ವಿಚಾರ ಮಾಡಬಹುದು. ದಶಗುಣಗಳಿಗೆ ಸಂಬಂಧಪಟ್ಟಂತೆ ಮಾರ್ಗಭೇದ ಕಲ್ಪನೆಯ ವಿಷಯದಲ್ಲಿ ಶ್ರೀವಿಜಯನು ಸಂಪೂರ್ಣವಾಗಿ ದಂಡಿಯನ್ನೆ ಅನುಸರಿದ್ದಾನೆಯಷ್ಟೆ; ಅವನು ಕೊಡುವ ಲಕ್ಷ್ಯಗಳಲ್ಲಿ ಕೆಲವು ದಂಡಿಯ ಲಕ್ಷ್ಯಗಳ ಅನುವಾದಗಳು. ಇನ್ನುಳಿದವು ಸ್ವನಿರ್ಮಿತ; ಯಾವವೂ ಅನ್ಯಕಾವ್ಯಗಳಿಂದ ತೆಗೆದುಕೊಂಡುವಲ್ಲ, ಅನ್ಯಕಾವ್ಯಗಳ ಅಸ್ತಿತ್ವ ಸ್ಥಾಪನೆಗೆ

---

* ನಾಗವರ್ಮನು ಭಾಮಹನನ್ನು ಅನುವಾದಿಸುವಲ್ಲಿ ಈ ಮಾತುಗಳನ್ನು ಉಪಯೋಗಿಸಿದ್ದಾನೆ. (ನೋಡಿ: ಟಿಪ್ಪಣಿ ಪುಟದ ಅಡಟಿಪ್ಪಣಿ ೨೫)

ಸ್ವಾರಸ್ಯವಾದ ಪ್ರಸ್ತಾವವೊಂದು ಅಂದು ಜನಸಾಮಾನ್ಯರಲ್ಲಿ ರೂಢಿಯಲ್ಲಿದ್ದ ನಗೆನಾಟಕವನ್ನೆ ಸೂಚಿಸುತ್ತಿದೆ (I–೬೮). ನೃಪತುಂಗನ ರಾಜ್ಯದಲ್ಲಿ ಕೂಡ 'ಎಡೆತುಡಗ'ರ (ದಾರಿಗಳ್ಳರ) ಭೀತಿ ಬುತ್ತಿಗೊಳುಣ್ಣುವ ಪಯಣಿಗರನ್ನು ಬಾಧಿಸುತ್ತಿತ್ತು. ಒಟ್ಟಿನ ಮೇಲೆ, ಸಾಮಂತರಿಂದ ಆನೆಗಳನ್ನು ರಾಜಸಭೆ, ಕನ್ನಡ, ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳ ಕವಿಗಳನ್ನೂ ವಿದ್ವಾಂಸರನ್ನು ಆಕರ್ಷಿಸುತ್ತಿರಬೇಕಾದರೆ ನೃಪತುಂಗನ ರಾಜ್ಯ ಕವಿರಾಜಮಾರ್ಗ ರಚನೆಯಾದ ವೇಳೆಯಲ್ಲಿ ಶಾಂತಿ ಸುಭಿಕ್ಷಗಳಿಂದ ಕೂಡಿದ್ದಿರಬೇಕು.

**ದಕ್ಷಿಣೋತ್ತರ ಮಾರ್ಗ**

ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಕ್ಕೆ ಎಡೆಕೊಟ್ಟಿರುವ ಕವಿರಾಜಮಾರ್ಗ ಸಂಬಂಧಿಯಾದ ತೊಡಕಿನ ಪ್ರಶ್ನೆಗಳಲ್ಲಿ ಇದೊಂದು. ಕವಿರಾಜಮಾರ್ಗದಲ್ಲಿ ೨ನೆಯ ಪರಿಚ್ಛೇದದಲ್ಲಿ ಕಾವ್ಯಗುಣಗಳನ್ನು ವಿವರಿಸುವಾಗ ಮಾರ್ಗಕಾರನು ಇದರ ಪ್ರಸ್ತಾವ ಮಾಡಿದ್ದಾನೆ. ಈ ಪ್ರಕರಣದ ಬಹುಭಾಗವೆಲ್ಲವೂ ದಂಡಿಯ ಕಾವ್ಯಾದರ್ಶದಲ್ಲಿನ ಮಾರ್ಗವಿಭಾಗದಲ್ಲಿ ಪ್ರತಿಪಾದಿತವಾದ ವಿಷಯವನ್ನೇ ಅನುಸರಿಸಿದೆ. ದಂಡಿ ದಕ್ಷಿಣ ಮಾರ್ಗ ಉತ್ತರ ಮಾರ್ಗ ಎಂಬ ಮಾತುಗಳನ್ನು ಕ್ವಚಿತ್ತಾಗಿಯೂ, ಅವಕ್ಕೆ ಪರ್ಯಾಯವಾಗಿ ಅದೇ ಅರ್ಥದಲ್ಲಿ ವೈದರ್ಭಮಾರ್ಗ ಗೌಡಮಾರ್ಗ ಎಂಬ ಮಾತುಗಳನ್ನು ವಿಶೇಷವಾಗಿಯೂ ಬಳಸಿದ್ದಾನೆ. ಈ ಮಾರ್ಗವಿಚಾರದಲ್ಲಿ ಶ್ರೀವಿಜಯನು ದಂಡಿಯನ್ನು ಎಷ್ಟರಮಟ್ಟಿಗೆ ಅನುಸರಿಸಿದ್ದಾನೆ ಎಂಬ ಅಂಶವು ೨ನೆಯ ಪರಿಚ್ಛೇದದಲ್ಲಿ ತತ್ಸಂಬಂಧವಾದ ಪದ್ಯಗಳನ್ನೂ ಅವುಗಳ ಮೇಲಿನ ಟಿಪ್ಪಣಿಗಳನ್ನೂ (II–೪೭ ರಿಂದ ೧೦೦) ಪರಿಶೀಲಿಸುವುದರಿಂದ ವ್ಯಕ್ತಪಡುತ್ತದೆ. (ಕಾವ್ಯಾವಲೋಕನದಲ್ಲಿ ನಾಗವರ್ಮನೂ ದಂಡಿಯನ್ನೇ ಅನುಸರಿಸಿ 'ಕೃತಿ ಗುಣಂಗಳೀರೈದ'ನ್ನು ಏಳು ಸೂತ್ರಗಳಲ್ಲಿ ನಿರೂಪಿಸಿದ್ದಾನೆ. ಮಾರ್ಗದ್ವಯ ಭೇದವನ್ನು ಉಲ್ಲೇಖಿಸಿದ್ದಾನೆಯೇ ಹೊರತು, ವಿವರಿಸುವ ಗೋಜಿಗೆ ಹೋಗಿಲ್ಲ).[೨೪] ಶ್ರೀವಿಜಯನು ದಂಡಿಯನ್ನು ಅಕ್ಷರಶಃ ಅನುವಾದ ಮಾಡಿ ಅಷ್ಟಕ್ಕೇ ವಿಷಯವನ್ನು ಬಿಟ್ಟುಬಿಟ್ಟಿದ್ದರೆ, ಕನ್ನಡದಲ್ಲಿ ಮಾರ್ಗಭೇದವಿದ್ದಿತೆ ಇಲ್ಲವೆ ಎಂಬ ವಾದಕ್ಕೆ ಅವಕಾಶವಿರುತ್ತಿರಲಿಲ್ಲ. ಶ್ರೀವಿಜಯನು ದಂಡಿಯ ಮಾರ್ಗದ್ವಯ ಲಕ್ಷಣ ನಿರೂಪಣೆಯನ್ನು ಅನುವಾದಿಸುವ ಸಂದರ್ಭದಲ್ಲಿ, ಭಾಮಹನು ಹೇಳುವ ವಕ್ರೋಕ್ತಿಸ್ವಭಾವೋಕ್ತಿಗಳೆಂಬ ಉಕ್ತಿರೀತಿಗಳನ್ನು ಗೌಡ ವೈದರ್ಭಮಾರ್ಗಗಳಿಗೆ ಸಮನ್ವಯಿಸಿ (ಗೌಡ = ವಕ್ರ = ಉತ್ತರ; ವೈದರ್ಭ = ಸ್ವಭಾವ = ದಕ್ಷಿಣ) ವಿಷಯವನ್ನು ದಶಗುಣಗಳು ಆಧಾರಭೂತ; ಇವು

ನರಸಿಂಹಾಚಾರ್ಯರ ಕವಿಚರಿತ್ರೆ, ಸಂಪುಟ IIರ ಅವತರಣಿಕೆ, ಪುಟ:೨೩–೨೫, ಹಾಗೂ (೨) ಅವರ History of Kannada Language, ಪುಟ:೧೨೧–೧೨೮; (೩)ಕನ್ನಡ ಕೈಪಿಡಿ, ಪ್ರಥಮ ಸಂಪುಟ, ಪುಟ:೩೬೩–೩೬೬}. ಶ್ರೀವಿಜಯನು 'ಕನ್ನಡಂಗಳ' ಉಲ್ಲೇಖ ಮಾಡಿರುವುದರಿಂದ ಈಗಿನಂತೆ ಆಗಲೂ ಕನ್ನಡ ಭಾಷೆಯಲ್ಲಿ ಪ್ರಾಂತಭೇದಗಳಿದ್ದವೆಂಬುದನ್ನು ಒಪ್ಪಿಕೊಳ್ಳಬಹುದು.[೬] ಶ್ರೀವಿಜಯನು ಕೊಡುವ ಕೇವಲ ಮೂರು ನಾಲ್ಕು ಪದಗಳ ಪ್ರಯೋಗ ರೂಪಗಳಲ್ಲಿನ ವ್ಯತ್ಯಾಸವು ಅಂದಿನ ಕಾವ್ಯಮಾರ್ಗದಲ್ಲಿ ಇದ್ದಿರಬಹುದಾದ ಭೇದಗಳನ್ನುಗುರುತಿಸಿ ನಿಷ್ಕರ್ಷಿಸಲು ಸಹಾಯಕವಾಗಲಾರದು. ಅಲ್ಲದೆ ಶ್ರೀವಿಜಯನೇ 'ನೋಟ್ಪೆ' (ನೋಟ್ಪುಗ, ೧–೮೯) ಎಂಬ ದಕ್ಷಿಣಮಾರ್ಗ ವಾಚಕವನ್ನೂ 'ಸೊಗಯಿಪ್ಪುದಾಯ್ತು' (೨–೨೧೦) ಎಂಬ ಉತ್ತರೋತ್ತರ ವಾಚಕವನ್ನೂ ಪ್ರಯೋಗಿಸಿರುವಲ್ಲಿ, ಅವನ ಭೇದವಾದ ಹೇಗೆ ನಿಂತೀತು? ದಂಡಿಯ ಅಂಧಾನುಕರಣ ಮಾಡದೆ, ಅವನ ಮಾರ್ಗಭೇದ ಕಲ್ಪನೆಯನ್ನು ಕನ್ನಡಕ್ಕೂ ಅನ್ವಯಿಸಿ ವಿಸ್ತರಿಸುವಲ್ಲಿ ಶ್ರೀವಿಜಯನ ಸ್ವತಂತ್ರದೃಷ್ಟಿಯ ವಿಚಾರ ಪ್ರಯತ್ನವನ್ನು ಮೆಚ್ಚಿಕೊಳ್ಳಬಹುದಾದರೂ ಅದು ಫಲಕಾರಿಯಾಗಿದೆ ಎಂದು ಹೇಳುವಂತಿಲ್ಲ.

**ಸ್ವತಂತ್ರ ದೃಷ್ಟಿ :** ಶ್ರೀವಿಜಯನು ತನ್ನ ಕವಿರಾಜಮಾರ್ಗದಲ್ಲಿ ಬಹುಮಟ್ಟಿಗೆ ದಂಡಿಯ ಕಾವ್ಯಾದರ್ಶವನ್ನೂ, ಕೆಲವು ವಿಚಾರಗಳಲ್ಲಿ ಭಾಮಹನನ್ನೂ ಅನುಸರಿಸಿರುವುದು ಸುಸ್ಪಷ್ಟವಷ್ಟೆ. ಆದರೂ, ಅವನು ಅವರನ್ನು ಕಣ್ಣು ಮುಚ್ಚಿಕೊಂಡು ಅನುಸರಿಸದೆ, ಸಂಸ್ಕೃತ ಕಾವ್ಯ ಲಕ್ಷಣವನ್ನು ಕನ್ನಡದ ಜಾಯಮಾನಕ್ಕೆ ಹೊಂದಿಕೊಳ್ಳುವಂತೆ ಹೇಳುವುದರಲ್ಲಿ ತನ್ನ ಸ್ವತಂತ್ರ ದೃಷ್ಟಿಯನ್ನು ಅಮೋಘವಾಗಿ ಮೆರೆದಿದ್ದಾನೆ; ತನ್ನ ವೈಶಿಷ್ಟ್ಯವನ್ನು ಪ್ರಸ್ತಾಪಿಸಿದ್ದಾನೆ. ಕಾವ್ಯದೋಷಗಳ ವಿಚಾರವನ್ನು ದಂಡಿ ಕಾವ್ಯಾದರ್ಶದ ಮೂರನೆಯ (ಕಡೆಯ) ಪರಿಚ್ಛೇದದಲ್ಲಿ ಕಿಂಚಿತ್ ಸ್ಪರ್ಶಮಾಡಿದ್ದಾನೆ; ಭಾಮಹನು ಕಾವ್ಯಾಲಂಕಾರದ ನಾಲ್ಕನೆಯ ಅಧ್ಯಾಯದಲ್ಲಿ ಅದನ್ನು ವಿಸ್ತಾರವಾಗಿಯೇ ವಿವೇಚಿಸಿದ್ದಾನೆ. ಶ್ರೀವಿಜಯನು ಈ ವಿಚಾರದಲ್ಲಿ ಭಾಮಹನನ್ನೆ ಅನುಸರಿಸಿದ್ದಾದರೂ, ದೋಷಪ್ರಕರಣವನ್ನು ಕಡೆಗೆ ಇಟ್ಟುಕೊಳ್ಳದೆ ಗ್ರಂಥಾರಂಭದಲ್ಲಿಯೇ ಎತ್ತಿಕೊಂಡು ವಿಶೇಷ ಔಚಿತ್ಯವನ್ನು ತೋರಿಸಿದ್ದಾನೆ. ಮಾತ್ರವಲ್ಲ, ಕಾವ್ಯಮೀಮಾಂಸೆಯಲ್ಲಿ ದೋಷವರ್ಜನ ಪ್ರಕರಣಕ್ಕೆ ಇರುವ ಪ್ರಾಮುಖ್ಯವನ್ನು ಆ ಮೂಲಕ ಪ್ರಕಟಪಡಿಸಿದ್ದಾನೆ. ಇದಕ್ಕೆ ಇನ್ನೊಂದು ಕಾರಣವೂ ಇದ್ದಿತು; ಅವನ ಕಾಲಕ್ಕೆ ದೇಶೀ ಬೇರೆಬೇರೆಯಾಗಿದ್ದು, ಕನ್ನಡಂಗಳಲ್ಲಿ ವಾಸುಕಿಯೂ

ಆಧಾರಗಳೂ ದೊರಕಿಲ್ಲ. ಹೀಗಿರುವಲ್ಲಿ, ಶ್ರೀವಿಜಯನ ಕಾಲದ ಕನ್ನಡ ಕಾವ್ಯಪದ್ಧತಿಯ ಸ್ವರೂಪವೇ ತಿಳಿಯದಿರುವಲ್ಲಿ ಮಾರ್ಗಭೇದ ವಿಚಾರದಲ್ಲಿ ಶ್ರೀವಿಜಯನ ಮಾತನ್ನು ಒರೆಗೆ ಹಚ್ಚಿನೋಡಲು ಅವಕಾಶವೇ ಇಲ್ಲ. ಶ್ರೀವಿಜಯನು ಕನ್ನಡ ಕಾವ್ಯಪದ್ಧತಿಯಲ್ಲಿದ್ದಿರಬಹುದಾದ ಮಾರ್ಗಭೇದವನ್ನು ವಿಶ್ಲೇಷಣ ಮಾಡುತ್ತಿದ್ದಾನೆಂದು ತಿಳಿಯುವುದು ತಪ್ಪಾಗುತ್ತದೆ. ನಾವು ಈ ಹಿಂದೆ ಸೂಚಿಸಿದಂತೆ, ಕನ್ನಡ ಕವಿಗಳಿಗೆ ಅವನು ಮಾರ್ಗವನ್ನು ಹಾಕಿ ತೋರಿಸುತ್ತಿದ್ದಾನೆಂದು ತಿಳಿಯುವುದೇ ಸಾಧು. ಅವನ ಈ ಮಾರ್ಗದ್ವಯ ಕಲ್ಪನೆ ದಂಡಿಯ ಅನುಸರಣೆಯಿಂದ ಸಂಭವಿಸಿರುವ ಒಂದು ಅನೌಚಿತ್ಯ.

ಆದರೆ, ಕನ್ನಡಕ್ಕೆ ಮಾತ್ರ ಸಂಬಂಧಪಟ್ಟಂತೆ ಕೆಲವು ಕ್ರಿಯಾಪದಗಳ ವಿಚಾರವಾಗಿ 'ಮಾರ್ಗಕಾರ' ಶ್ರೀವಿಜಯನು ಮಾಡಿರುವ ಮಾರ್ಗವಿವೇಚನೆ 'ಕನ್ನಡ ಕಾವ್ಯ ಮೀಮಾಂಸೆಗೆ ಅವನ ಸ್ವತಂತ್ರವಾದ ಕೊಡುಗೆ' ಎಂದರೆ ತಪ್ಪಾಗದು (ನೋಡಿ: ಪದ್ಯಗಳು II–೧೦೨ ರಿಂದ ೧೧೦ ಮತ್ತು ಅವುಗಳ ಮೇಲಿನ ಟಿಪ್ಪಣಿ) 'ಸ್ವತಂತ್ರ' ಎಂದದ್ದರಿಂದ ಅವನು ಇಲ್ಲಿ ದಂಡಿಯನ್ನು ಅನುಸರಿಸಿಲ್ಲ ಎಂದಷ್ಟೆ ನಮ್ಮ ಅಭಿಪ್ರಾಯ. ಅವನ ನಿಲುವು ಸಮರ್ಥನೀಯ, ಆದರಣೀಯ ಎಂದಲ್ಲ.

ಕನ್ನಡ ಮಾರ್ಗಭೇದ ವಿಚಾರದಲ್ಲಿ ಕವಿರಾಜಮಾರ್ಗಕಾರನ ಹೇಳಿಕೆಗಳನ್ನೂ ಭಟ್ಟಾಕಳಂಕನು ಆನ್ ಆಮ್ (ದಕ್ಷಿಣಮಾರ್ಗವಾಚಕ) ನಾನಾ ನಾಮ್ (ಉತ್ತರ ಮಾರ್ಗವಾಚಕ) ಎಂಬ ಸರ್ವನಾಮಗಳು ಮಾರ್ಗಭೇದಕ್ಕೆ ಉದಾಹರಣೆಗಳೆಂದು ಹೇಳಿರುವುದನ್ನೂ ಆಧಾರವಾಗಿಟ್ಟುಕೊಂಡು ಕನ್ನಡದಲ್ಲಿ ದಕ್ಷಿಣೋತ್ತರ ಮಾರ್ಗವಿದ್ದಿತೆಂದು ಪ್ರಥಮತಃ ವಾದಿಸಿದವರು ಆರ್.ರಘುನಾಥರಾಯರು. ತೆಲುಗಿನ ಪ್ರಭಾವದಿಂದ ದಕ್ಷಿಣ ಮಾರ್ಗವೂ ಉಂಟಾದುವೆಂದು ಅವರ ವಾದ. (ನೋಡಿ: 'ವ್ಯಾಕರಣೋಪನ್ಯಾಸ ಮಂಜರಿ', ಚತುರ್ಥೋಪನ್ಯಾಸ, ಪುಟ:೩೫–೬೬). ಮಾರ್ಗಕಾರನು ಸರ್ವನಾಮಗಳ ವಿಚಾರವನ್ನು ಪ್ರಸ್ತಾವ ಮಾಡದಿರುವುದರಿಂದ ಅದರ ವಿಚಾರ ನಮಗೆ ಇಲ್ಲಿ ಅಪ್ರಕೃತ. ೧೦೨ನೆಯ ಪದ್ಯದ 'ನೋಟ್ಪೆನ್' ಇತ್ಯಾದಿ ಪ್ರಯೋಗಗಳಲ್ಲಿ 'ಟ'ಕಾರ ಪ್ರಯೋಗ ವಿರುವುದರಿಂದ ದಕ್ಷಿಣ ಮಾರ್ಗವು ತಮಿಳಿನ ಪ್ರಭಾವದಿಂದ ಆದುದೆಂದು ರಘುನಾಥರಾಯರ ವಾದ. ಇವರ ವಾದದಲ್ಲಿ ಹುರುಳಿಲ್ಲವೆಂಬ ಅಂಶವನ್ನು ಆರ್.ನರಸಿಂಹಾಚಾರ್ಯರು ಬಹು ಸಮರ್ಥ ರೀತಿಯಲ್ಲಿ ಪ್ರತಿಪಾದಿಸಿರುವುದರಿಂದ[೨೫] ಲೇಖನ ವಿಸ್ತಾರ ಭಯದಿಂದ ನಾವು ಇಲ್ಲಿ ಆ ಪ್ರಕರಣವನ್ನು ಬೆಳೆಸಲು ಇಚ್ಛಿಸುವುದಿಲ್ಲ. {ನೋಡಿ: (೧) ಆರ್

ವ್ಯಾಕರಣಕ್ಕೂ ಕಾವ್ಯಮೀಮಾಂಸೆಗೂ ಸಂಬಂಧವಿಲ್ಲದೆ ಇಲ್ಲ ಎಂಬ ಅಂಶ ವಿಶದಪಡುವುದು ಈ ಪ್ರಕರಣದಲ್ಲಿ; ನಾಗವರ್ಮನ 'ಶಬ್ದಸ್ಮೃತಿ' ವಿಭಾಗ ರಚನೆಗೆ ಈ ಪ್ರಕರಣದಿಂದ ಸ್ಫೂರ್ತಿಯೊದಗಿದ್ದರೆ ಆಶ್ಚರ್ಯವಿಲ್ಲ. ದೋಷಪ್ರಕರಣದ ಈ ವಿಚಾರಗಳನ್ನು ನಾಗವರ್ಮನು ಕೂಡ ಇಷ್ಟು ವ್ಯಾಪಕವಾಗಿ, ಖಚಿತವಾಗಿ, ನಿರೂಪಿಸಿಲ್ಲ; ಸಂಸ್ಕೃತಲಾಕ್ಷಣಿಕರನ್ನು ಅನುವಾದಿಸುವಷ್ಟರಿಂದಲೇ ಅವನು ತೃಪ್ತನಾಗಿದ್ದಾನೆ. ಇದರಿಂದ ಕನ್ನಡ ಕಾವ್ಯಮೀಮಾಂಸೆಗೆ ಶ್ರೀವಿಜಯನ ಕೊಡುಗೆಯ ಮಹತ್ತ್ವವೇನೆಂಬುದರ ಅರಿವು ಉಂಟಾಗಬಹುದು. ನಮ್ಮ ಅಭಿಪ್ರಾಯದಲ್ಲಿ, ಕವಿರಾಜಮಾರ್ಗದಲ್ಲಿ ಶ್ರೀವಿಜಯನ ಪ್ರತಿಭೆ ಬೆಳಗಿರುವುದು ಪ್ರಥಮ ಪರಿಚ್ಛೇದದಲ್ಲಿ – ಅದರಲ್ಲಿ ವಿಶೇಷವಾಗಿ ಈ ದೋಷಾದೋಷ ವಿಚಾರ ವಿಮರ್ಶೆಯಲ್ಲಿ; ಅವನ ಸ್ವೋಪಜ್ಞತೆ, ಸ್ವತಂತ್ರ ವಿಚಾರಧಾರೆ, ಮೆರೆದಿರುವುದು ಇಲ್ಲಿ; ಕನ್ನಡದ ಜೀವನಾಡಿಯನ್ನು ಹಿಡಿದು, ತನ್ನ ಭಾಷಾಭೈಷಜವನ್ನು ಪ್ರಯೋಗಿಸಿರುವುದು ಇಲ್ಲಿ. ಕನ್ನಡದ ಆರೋಗ್ಯವನ್ನು ಕಾಪಾಡುವುದಕ್ಕೆ ಕವಿರಾಜಮಾರ್ಗದ ಮಾರ್ಗದರ್ಶನ ಇಂದಿಗೂ ಊರ್ಜಿತ ಎಂದು ವ್ಯಕ್ತಪಡುವುದು ಇಲ್ಲಿ. ಈ ಪ್ರಕರಣ ಚಿರಂತನ ಮೌಲ್ಯವುಳ್ಳದ್ದು. ಕಣ್ಣಿಟ್ಟು ವ್ಯಾಸಂಗ ಮಾಡಿ ಪ್ರಯೋಜನವನ್ನು ಪಡೆಯಬಯಸುವವರಿಗೆ.

ಇಷ್ಟು ಹೇಳಿದ್ದರಿಂದ ಗ್ರಂಥದ ಉಳಿದೆರಡು ಪರಿಚ್ಛೇದಗಳಲ್ಲಿ ಶ್ರೀವಿಜಯನು ತನ್ನತನವನ್ನು ಮೆರೆದಿಲ್ಲ ಎಂದು ತಿಳಿಯಬಾರದು. ಶಬ್ದಾಲಂಕಾರ ನಿರೂಪಣೆಗೆ ಮೀಸಲಾದ ಎರಡನೆಯ ಪರಿಚ್ಛೇದದಲ್ಲಿ ಮಾರ್ಗ ಭೇದ ನಿರೂಪಣೆಯ ಪ್ರಕರಣದಲ್ಲಿ ಅವನ ಸ್ವತಂತ್ರ ವಿಚಾರವಿಮರ್ಶೆಯನ್ನು ಇದೇ ತಾನೇ ಗಮನಿಸಿದ್ದಾಗಿದೆ. ಮಾರ್ಗದ್ವಯಾನುಸಾರವಾಗಿ ಗುಣನಿರೂಪಣೆಯನ್ನು ಮಾಡಿದ ಮೇಲೆ, ಗುಣಗಳಿಗೆ ರಸಪರತ್ವವನ್ನು ಹೇಳಿರುವುದು ಶ್ರೀವಿಜಯನ ಸ್ವತಂತ್ರ ಕಲ್ಪನೆ ಎಂಬುದು ಗಮನಾರ್ಹ. (ನೋಡಿ: II, ೯೮, ೯೯–೧೦೦ ಮತ್ತು ಇವುಗಳ ಮೇಲಿನ ಟಿಪ್ಪಣಿಗಳು) 'ನುತಶಬ್ದಾಲಂಕಾರದೊಳತಿಶಯಮೀ ಕನ್ನಡಕ್ಕೆ ಸತತಂ ಪ್ರಾಸಂ' ಎಂದು ಹೇಳಿ, ಕನ್ನಡ ಕೃತಿವಧುವಿನ ಲಾಸ್ಯಲಯದ ಗುಟ್ಟನ್ನೇ ಅವನು ಬಯಲು ಮಾಡಿದ್ದಾನೆ. ಅರ್ಥಾಲಂಕಾರ ಪ್ರಕರಣದಲ್ಲಿ (ಮೂರನೆಯ ಪರಿಚ್ಛೇದ), ಶ್ರೀವಿಜಯನ ಲಕ್ಷಣ ನಿರೂಪಣೆಗೆ ಬಹುಮಟ್ಟಿಗೆ ದಂಡಿ ಭಾಮಹರನ್ನೇ ಅನುಸರಿಸಿದ್ದರೂ ಅಲ್ಲೊಮ್ಮೆ ಇಲ್ಲೊಮ್ಮೆ ಅವನ ಸ್ವತಂತ್ರ ವಿಚಾರ ಕಿರಣ ಹೊಸಬೆಳಕನ್ನು ಬೀರದಿಲ್ಲ. 'ಆಕ್ಷೇಪಾಲಂಕಾರ'ವನ್ನು ಕುರಿತು 'ವ್ಯತಿರೇಕವಿಕಲ್ಪಮಿದು' ಎಂದು ಹೇಳಿರುವುದೂ, ನಿದರ್ಶನಾಲಂಕಾರದ ಒಂದು

ಅರಿಯಲಾರದೆ ಬೇಸರಿಸುವ ಮಟ್ಟಿಗೆ ದೋಷಗಳು ತುಂಬಿಕೊಂಡಿದ್ದವು. ಸಂಸ್ಕೃತ ಪ್ರಾಕೃತಗಳಲ್ಲಿದ್ದಂತೆ ಕನ್ನಡಕ್ಕೆ ಲಕ್ಷ್ಯಲಕ್ಷಣಗಳಿರಲಿಲ್ಲ; ನೆಲಸಿದ್ದ ದೇಸಿಗಬ್ಬ 'ಮಾರ್ಗಕಾವ್ಯ'ಕ್ಕೆ ಮೇಲ್ಪಂಕ್ತಿಯಾಗುವಂತಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಕನ್ನಡದಲ್ಲಿ ಕಾವ್ಯನಿರ್ಮಾಣಕ್ಕೆ ಹೆದ್ದಾರಿಯನ್ನು ಹಾಕಬೇಕೆಂಬ ಘನೋದ್ದೇಶದಿಂದ ಶ್ರೀವಿಜಯನು 'ಪುರಾಣ ಕವಿಗಳ ಸಂತತಗತ ಮಾರ್ಗಗದಿತ ದೋಷಂಗಳುಮಂ, ಚಿಂತಿಸಿ ಮತ್ತೆನ್ನವುದುಮಂ ಕೆಲವಂಪೇೞ್ವೆಂ' ಎಂದು ನಿಶ್ಚಯಿಸಿ, ದೋಷಪ್ರಕರಣಕ್ಕೆ ಆದ್ಯತೆಯನ್ನೂ ಅಗ್ರಮಾನ್ಯತೆಯನ್ನೂ ಕೊಟ್ಟು, ಅದನ್ನು ವಿಸ್ತಾರವಾಗಿ ಪ್ರತಿಪಾದಿಸಿರುವುದು ಕನ್ನಡ ಕಾವ್ಯಮೀಮಾಂಸೆಯ ಬೆಳವಣಿಗೆಗೆ, ಕನ್ನಡ ವ್ಯಾಕರಣ ನಿರ್ಮಾಣಕ್ಕೆ ನಿರ್ದುಷ್ಟ ಕನ್ನಡ ಕಾವ್ಯನಿರ್ಮಿತಿಗೆ, ಅವನು ಹಾಕಿದ ಭದ್ರವಾದ ಅಡಿಪಾಯ. ಅವನ ದೃಷ್ಟಿಯಲ್ಲಿ ದೂಷ್ಯವಲ್ಲದ್ದೆ ಮಾರ್ಗ. ಲಕ್ಷ್ಯಸಮೇತ ದೋಷಗಳನ್ನು ವಿವರಿಸಿಯಾದ ಮೇಲೆ 'ಅದೋಷ' ಲಕ್ಷ್ಯಗಳನ್ನು ಕೊಟ್ಟು ದೋಷಾದೋಷ ನಿರ್ಣಯ ಮಾಡಿರುವುದು ವಿಷಯ ವಿಶದೀಕರಣಕ್ಕೆ ವಿಶೇಷ ಸಹಾಯಕವಾಗಿದೆ. ಅದರಲ್ಲಿಯೂ ಕನ್ನಡಕ್ಕೆ ಸಂಬಂಧಪಟ್ಟಂತೆ (೧) ಸಮಸಂಸ್ಕೃತ ಪದಗಳನ್ನು ಕನ್ನಡದೊಂದಿಗೆ ಬೆರೆಸುವ ವಿಚಾರ (I, ೫೧–೫೭); (೨)ಶ್ರುತದುಷ್ಟ ಅರ್ಥದುಷ್ಟ ಶ್ರುತಿಕಷ್ಟ ಕಲ್ಪನೋಕ್ತಿ ಕಷ್ಟ –ಈ ದೋಷಗಳನ್ನು ತಕ್ಕ ಕನ್ನಡ ಲಕ್ಷಗಳಿಂದ ವಿಶದಪಡಿಸಿರುವುದು (I, ೬೩–೬೬); ಮತ್ತು ಈ ದೋಷಗಳಿಗೆ 'ಪಗರಣ'ದಲ್ಲಿ ಅವಕಾಶವಿತ್ತಿರುವುದು; (೩)ಯತಿಭಂಗವನ್ನು ಸಮರ್ಥಿಸಿ ಕನ್ನಡಕ್ಕೆ ಅತಿಶಯವಾದ ಖಂಡಪ್ರಾಸವನ್ನು ಎತ್ತಿಹಿಡಿದಿರುವುದು (I, ೭೫); (೪)ವಿಸಂಧಿ ದೋಷವನ್ನು ನಿಷೇಧಿಸುವ ಸಂದರ್ಭದಲ್ಲಿಯೇ 'ಸಂಧಿಗಳುಂ ಕೆಲವೆಡೆಯೊಳ್ ವಿರೂಪಂಗಳಾಗಿ ಸಮನಿಸಿ' ಹೇಗೆ ಕವಿತೆಗೆ ಕುಂದನ್ನು ತರುತ್ತದೆ ಎಂಬುದನ್ನು ಸ್ಪಷ್ಟಪಡಿಸಿರುವುದು (I, ೯೮–೯೮); (೫)ಕನ್ನಡದಲ್ಲಿ ಕಾರಕದೋಷ ಹೇಗೆ ಸಂಭವಿಸಬಹುದೆಂಬುದನ್ನು ತಕ್ಕ ಉದಾಹರಣೆಗಳಿಂದ ಸ್ಪಷ್ಟಪಡಿಸಿರುವುದು (I,೧೧೬–೧೧೭); (೬)ಕನ್ನಡದಲ್ಲಿ ಜಾತ್ಯೇಕ ವಚನದ ವೈಶಿಷ್ಟ್ಯವನ್ನು ಗುರುತಿಸಿರುವುದು (I–೧೨೦); (೭)ಸಮುಚ್ಚಯ ಪ್ರಯೋಗದಲ್ಲಿ ಸಂಭವಿಸುವ ದೋಷದ ವಿವರಣೆ (I–೧೨೧); (೮)ಅವಧಾರಣೆ, ವಿಶಂಕೆ ಇವುಗಳಲ್ಲಿ ಕೇವಲ ಅಲ್ಪಪ್ರಮಾದದಿಂದ ತೋರುವ ಅರ್ಥವೈಪರೀತ್ಯ ಈ ಪ್ರಮುಖ ದೋಷಗಳನ್ನು ಶ್ರೀವಿಜಯನು ವಿವರಿಸಿರುವ ರೀತಿ ಕನ್ನಡ ಕಾವ್ಯರಚನೆಯಲ್ಲಿ ಕೆಲವಂಶಗಳಲ್ಲಿಯಾದರೂ – ಇಂದಿಗೂ ಕವಿಜನಕ್ಕೆ ಮಾರ್ಗದರ್ಶಕವಾಗಬಲ್ಲದು ಎಂದರೆ ಅತಿಶಯೋಕ್ತಿಯಾಗಲಾರದು.

ತಮ್ಮ ಕಾಡಿಗೆಯಂ', 'ಒತ್ತುಂಗರಡೆಯ ಮದ್ದಳೆಯ ಜರ್ಝರ ಧ್ವನಿಗಳವೋಲ್', 'ಮಱುಗುವ ಪಾಲ್ಗಳೆಯ ಪನಿಗಳಂ ಬೆರಸಿದವೋಲ್', 'ಕೇಡಡಸಿದಂದು ಬಗೆಯುಂ ಕೂಡದು', 'ತಲೆಯಂ ಕಿರಿಯಿಸಿ ದಿವಸಮನಲಸದೆ ಬೆಸಗೊಳ್ವನಂತು ಗಾವಿಲನಕ್ಕುಂ', 'ಕಸವರಮೆಂಬುದು ನಜೆ ಸೈರಿಸಲಾರ್ಪೊಡೆ ಪರವಿಚಾರಮಂ ದರ್ಮಮುಮಂ' ಎಂಬಿವೇ ಮುಂತಾದ ಲೋಕಾನುಭವಪೂರ್ಣವಾದ ಕವಿಯ ದೃಷ್ಟಾಂತವಾಕ್ಯಗಳೂ ಹೋಲಿಕೆಗಳೂ ಶಾಸ್ತ್ರಮಾರ್ಗದ ದೀರ್ಘಪ್ರಯಾಣದಲ್ಲಿ ಅಲ್ಲಲ್ಲಿ ಕಣ್ಣಿಗೆ ಬೀಳುವ ಕಮಲಾಕರಗಳಂತೆ ಬೇಸರನ್ನು ನೀಗುತ್ತವೆ. ಕವಿರಾಜಮಾರ್ಗಕ್ಕೂ ಹಿಂದೆ ಶಾಸನಗಳಲ್ಲಿ ಮಾತ್ರ ಪ್ರಯೋಗವಾಗಿರುವ ಪೂರ್ವದ ಹಳಗನ್ನಡ ಎನ್ನಬಹುದಾದ ಕೆಲವು ಶಬ್ದ ಪ್ರಯೋಗಗಳೂ ವ್ಯಾಕರಣಪ್ರಕ್ರಿಯೆಗಳೂ ಇತರ ಅಪೂರ್ವ ಶಬ್ದರೂಪಗಳೂ ಅದರಲ್ಲಿ ದೊರಕುತ್ತವೆ; ಭಾಷಾಚರಿತ್ರೆಯ ದೃಷ್ಟಿಯಿಂದ ಇವು ಗಮನಾರ್ಹ.[೨೭]

ಕವಿರಾಜಮಾರ್ಗವು ಇಡಿಯಾಗಿಯಲ್ಲದಿದ್ದರೂ ಬಿಡಭಾಗಗಳಲ್ಲಿ ಅನುವಾದಿತ ಗ್ರಂಥ ಎಂಬುದು ವಿದಿತವಷ್ಟೆ. ಗ್ರಂಥಾರಂಭದಲ್ಲಿ 'ನೆರಮಕ್ಕೆ ಪರಮಕವೀಶ್ವರರ್ ಅಕೃತಕಾಚಾರಪರರ್ ಎಮಗೀ ಕೃತಿಯೊಳ್' ಎಂಬ ಪೂಜ್ಯಭಾವನೆಯ ಕೋರಿಕೆಯೂ, ಪೂರ್ವ ಸಂಸ್ಕೃತ ಕನ್ನಡ ಕವಿಗಳನ್ನು ಹೆಸರಿಸಿ ನೆನೆದಿರುವುದೂ, ಗ್ರಂಥದುದ್ದಕ್ಕೂ ಅಲ್ಲಲ್ಲಿ ಪೂರ್ವಾಚಾರ್ಯರನ್ನೂ, ಪೂರ್ವಕವಿಗಳನ್ನೂ ಒಟ್ಟಿನ ಮೇಲೆ ಮಾರ್ಗದರ್ಶಕರನ್ನಾಗಿ ಪರಿಗಣಿಸಿರುವುದೂ ಪೂರ್ವಕವಿಗಳಿಗೂ ಲಾಕ್ಷಣಿಕರಿಗೂ ತಾನು ಋಣಿ ಎಂಬ ಅಂಶವನ್ನು ಅವನು ಒಪ್ಪಿಕೊಂಡಂತೆಯೇ ಆಗಿದೆ. ಎಲ್ಲಿಯೂ ಕಂಠೋಕ್ತವಾಗಿ ಹೇಳದಿದ್ದರೂ, ಕಾವ್ಯದೋಷ ನಿರೂಪಣೆಯ ವಿಭಾಗದಲ್ಲಿ ಸಂಸ್ಕೃತ 'ಕಾವ್ಯಾಲಂಕಾರ' ಕರ್ತೃವಾದ ಭಾಮಹನನ್ನೂ ಕಾವ್ಯಗುಣಗಳು, ದಕ್ಷಿಣೋತ್ತರ ಮಾರ್ಗಭೇದ, ಅರ್ಥಾಲಂಕಾರ ಪ್ರಕರಣ ಈ ವಿಭಾಗಗಳಲ್ಲಿ 'ಕಾವ್ಯಾದರ್ಶ'ದ ಆಚಾರ್ಯ ದಂಡಿಯನ್ನೂ ಅವನು ಅನುಸರಿಸಿರುವುದು ಸ್ಪಷ್ಟವಾಗಿಯೇ ಇದೆ. ಅನುಸರಿಸಿರುವುದೇನು, ಪ್ರಾಯಿಕವಾಗಿ ಅವರ ಲಕ್ಷ್ಯಲಕ್ಷಣಶ್ಲೋಕಗಳನ್ನು ಅನುವಾದಿಸಿದ್ದಾನೆ. ವಸ್ತುಸ್ಥಿತಿ ಹೀಗಿರುವಲ್ಲಿ, ತಾನು ರಚಿಸಲಿರುವ ಗ್ರಂಥಕ್ಕೆ ಪ್ರತ್ಯಕ್ಷ ಸಂಬಂಧವಿಲ್ಲದ ಸಂಸ್ಕೃತಕವಿಗಳನ್ನು ನೆನೆದಿರುವಲ್ಲಿ, ಯಾವ ನಿರ್ದಿಷ್ಟ ಪೂರ್ವಾಚಾರ್ಯರಿಗೆ ತಾನು ಋಣಿಯೋ ಆ ದಂಡಿ ಭಾಮಹರ ಹೆಸರುಗಳನ್ನು ಒಮ್ಮೆಯಾದರೂ ನೆನೆಯುದಿರುವುದು ಸೋಜಿಗದ ಸಂಗತಿಯಲ್ಲವೆ? 'ಗುಣೋದಯ', 'ಪರಗುಣ ಸಹನಶೀಲ' ಎಂದು ನೃಪತುಂಗ ಸಭಾಸದರ ಮನ್ನಣೆಗೆ ಪಾತ್ರನಾದ 'ಶ್ರೀವಿಜಯರ್ ದೇವರ್'ಗೆ

ಪ್ರಭೇದ ದೃಷ್ಟಾಂತ ಎಂದು ಹೇಳಿ ದೃಷ್ಟಾಂತಾಲಂಕಾರಕ್ಕೆ ಪ್ರಥಮತಃ ಕಾವ್ಯಮೀಮಾಂಸೆಯಲ್ಲಿ ಒಂದು ಸ್ಥಾನವನ್ನು ಕಲ್ಪಿಸಿ ಕನ್ನಡ ಕಾವ್ಯಕನ್ನಿಕೆಯ ಅಲಂಕಾರಕಂಠಿಕೆಗೆ ನಾಯಕಮಣಿಯನ್ನು ಪವಣಿಸಿರುವುದೂ (ನೋಡಿ: ಪದ್ಯ ೧೫೩ ಮತ್ತು ೧೪೩ನೆಯ ಪದ್ಯದ ಟಿಪ್ಪಣಿ), ರಸವದಲಂಕಾರವನ್ನು ನಿರೂಪಿಸುವಾಗ ದಂಡಿ ಭಾಮಹರು ಹೇಳಿಲ್ಲದ ಶಾಂತರಸವನ್ನು ಹೆಸರಿಸಿ ಅದಕ್ಕೆ ಲಕ್ಷ್ಯವನ್ನು ಕೊಟ್ಟಿರುವುದೂ, ದಂಡಿ ಹೇಳಿರುವ ೩೫ ಅಲಂಕಾರಗಳ ಮಾಲೆಗೆ ೩೬ನೆಯದಾಗಿ 'ಧ್ವನ್ಯಲಂಕಾರ'ವನ್ನು ಸೇರಿಸುವುದರ ಮೂಲಕ ಕನ್ನಡ ಕಾವ್ಯಮೀಮಾಂಸೆಯಲ್ಲಿ ಧ್ವನಿತತ್ತ್ವದ ಆದ್ಯ ಪ್ರವರ್ತಕನೆನಿಸಿರುವುದೂ, ಕಾವ್ಯತತ್ತ್ವ ನಿರೂಪಣೆಯಲ್ಲಿ ಶ್ರೀವಿಜಯನು ಸಂಸ್ಕೃತ ಲಾಕ್ಷಣಿಕರನ್ನು 'ಮಕ್ಕಿಕಾಮಕ್ಕಿ' ಅನುಸರಿಸದೆ ಸ್ವಂತ ವ್ಯಕ್ತಿತ್ವವನ್ನು ತೋರ್ಪಡಿಸಿದ್ದಾನೆ ಎನ್ನಲು ಸಾಕ್ಷ್ಯಗಳಾಗಿವೆ. ಇಷ್ಟು ಮಾತ್ರವಲ್ಲ, ದೋಷಪ್ರಕರಣದಲ್ಲಿ ಹೇಗೋ ಹಾಗೆ ಅಲಂಕಾರ ಪ್ರಕರಣಗಳಲ್ಲಿಯೂ ಅವನು ಚೆಲುವಾದ ಅನೇಕ ಲಕ್ಷ್ಯ ಪದ್ಯಗಳನ್ನು ಸ್ವಂತವಾಗಿ ವಿರಚಿಸಿ, ಕನ್ನಡ ಅಲಂಕಾರ ಶಾಸ್ತ್ರಕ್ಕೂ ಕಾವ್ಯ ಪ್ರಪಂಚಕ್ಕೂ ಮೊದಲ ಕಾಣಿಕೆಯನ್ನೂ ಸಲ್ಲಿಸಿದ್ದಾನೆ. ಇಂತು, ಶ್ರೀವಿಜಯನು ತನ್ನನ್ನು 'ಲಕ್ಷಣಲಕ್ಷ್ಯನ್' ಎಂದು ಕರೆದುಕೊಂಡಿರುವುದು (III–೨೧೯) ಸಾರ್ಥಕವೆನಿಸಿದೆ.

ಕನ್ನಡ ಸಾಹಿತ್ಯ ಲೋಕದಲ್ಲಿ ನಾಗವರ್ಮನ ಕಾವ್ಯಾವಲೋಕನವು ರಚಿತವಾಗುವವರೆಗೆ ಸುಮಾರು ಮೂರು ಶತಮಾನಗಳ ಕಾಲ ಕವಿರಾಜಮಾರ್ಗದ ಲಕ್ಷಣಭಾಗ ಕವಿಜನದ 'ಕನ್ನಡಿ'ಯೂ ಲಕ್ಷ್ಯಭಾಗ 'ಕೈದೀವಿಗೆ'ಯೂ ಆಗಿ ಪ್ರಭಾವ ಬೀರಿವೆ.

**ಗ್ರಂಥ ಮಹಿಮೆ :** ಕವಿರಾಜಮಾರ್ಗವು ಪ್ರಮುಖವಾಗಿ ಒಂದು ಶಾಸ್ತ್ರಗ್ರಂಥ. ಇಂಥದರಲ್ಲಿ ನಿತಾಂತವಾದ ಅರ್ಥರಮಣೀಯತೆ, ಭಾವಪುಷ್ಟಿ, ರಸಪ್ರತೀತಿ ಮುಂತಾದ ಕಾವ್ಯಲಕ್ಷಣಗಳನ್ನು ನಿರೀಕ್ಷಿಸುವುದು ತಪ್ಪು. ನಾಗವರ್ಮನ ಕಾಲಕ್ಕಾದರೆ ಉತ್ತಮ ಕಾವ್ಯರಾಶಿ ಸೃಷ್ಟಿಯಾಗಿತ್ತು; ಲಕ್ಷಣಗಳಿಗೆ ಅನ್ಯಕಾವ್ಯಗಳಿಂದ ಲಕ್ಷ್ಯಗಳನ್ನು ಎತ್ತಿಕೊಡುವುದು ಅವನಿಗೆ ಸಾಧ್ಯವಾಯಿತು. ಶ್ರೀವಿಜಯನಿಗೆ ಆ ಸದವಕಾಶವಿರಲಿಲ್ಲ. ಅವನು ದಂಡಿ ಭಾಮಹರ ಲಕ್ಷ್ಯಗಳನ್ನೇ ಅನುವಾದಿಸಿಕೊಳ್ಳಬೇಕಾದ್ದು ಅನಿವಾರ್ಯವಾಯಿತು; ಆದರೂ ಈ ಹಿಂದೆಯೇ ಸೂಚಿಸಿರುವಂತೆ, ಅನೇಕ ಸಂದರ್ಭಗಳಲ್ಲಿ ಅವನು ಸ್ವಂತ ಲಕ್ಷ್ಯಪದ್ಯಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಅನೇಕ ಪದ್ಯಗಳು ಪಂಪನ ಶೈಲಿಯ ಮುನ್ಸವಿಯನ್ನು ನಮಗೆ ನೀಡುತ್ತಿವೆ. 'ಕಲ್ತೊಡನೋದುವುವಲ್ತೆ ಗಿಳಿಗಳುಂ ಪುರುಳಿಗಳುಂ', 'ಕಾಣದಂತೆಂದುಂ ಕಣ್ಗಳ್

ಕೆಲವು ಕಡೆ ಕಳೆಯೇರಿಸಿದ್ದಾನೆ. ಪ್ರತಿಪ್ರಕರಣದಲ್ಲಿಯೂ ಸ್ವಂತ ಲಕ್ಷಪದ್ಯಗಳಿಗೆ ಕೊರತೆಯಿಲ್ಲ. ಲಕ್ಷಣ ಪದ್ಯವಾಗಲಿ, ಲಕ್ಷ್ಯಪದ್ಯವಾಗಲಿ, ಅನುವಾದ ಮಾಡಿರುವ ಸಂದರ್ಭಗಳಲ್ಲಿ ಕೂಡ ಅವನ್ನು ಅನುವಾದ ಎಂದು ಹೇಳಲಾಗದಂತೆ 'ಸ್ವಂತಿಕೆ'ಯನ್ನು ಮೆರೆದು, ಮುಂದಿನ ಅನುವಾದಕರಿಗೆ ಮೇಲ್ಪಂಕ್ತಿಯೆನಿಸಿದ್ದಾನೆ. ಅನಪೇಕ್ಷಣೀಯವೆಂದು ತೋರುವ ಸಂಸ್ಕೃತಭಾಷಾ ಪ್ರಾಚುರ್ಯ ಕೆಲವೆಡೆ (ವಿಶೇಷವಾಗಿ, III, ೨೦೯–೨೧೬; ೨೧೮–೨೨೧; ೨೨೬–೨೩೧) ಅವನ ಪಾಂಡಿತ್ಯಪ್ರವಣತೆಯನ್ನು ಸಾರುತ್ತಿದ್ದರೂ, ಮೆಲ್ಪುವೆತ್ತ ನುಡಿಗಳ ಅಚ್ಚಗನ್ನಡದ ಬರವಣಿಗೆ ಅವನಿಗೆ ಮೆಚ್ಚು (ಉದಾ: I ೧೫, ೩೮, ೪೫, ೧೧೨, ೧೨೪, ೧೪೯; II, ೪, ೫, ೨೮; III, ೧೪೩–೧೫೨; ೧೬೯; ೧೭೩–೧೮೧) ಅಂಥ ಬರವಣಿಗೆ ಅನೇಕ ವೇಳೆ ಪಂಪನ ಶೈಲಿಯನ್ನು ನೆನಪಿಗೆ ತರುತ್ತದೆ. "ಇಲ್ಲಿಗಿದು ತಕ್ಕುದಿಲ್ಲಿಗೆ ಪೊಲ್ಲದು" (II–೫) ಎಂಬ ತನ್ನ ಮಾತಿನಂತೆಯೆ ವಿಷಯಾನುಗುಣವಾಗಿ ಸಂದರ್ಭೋಚಿತವಾಗಿ ನುಡಿಯಿಡುವುದನ್ನೂ, ನುಡಿನಡೆಯನ್ನು ತಿರುಗಿಸುವುದನ್ನೂ ಬಲ್ಲ ಉಚಿತ ಪದಪ್ರಯೋಗ ವಿಜ್ಞಾನಿ 'ವಾಗಧಿಪ' – ಶ್ರೀವಿಜಯ. "ಅನುವಾದದಲ್ಲಿ ಮೂಲದ ವಾಕ್ಯಗಳ ಸೊಗಸು ತಪ್ಪದೆ ಬಂದಿದೆಯೆಂದು ಎಲ್ಲ ಸಂದರ್ಭಗಳಲ್ಲೂ ಹೇಳಲಾಗುವುದಿಲ್ಲ" ಎಂಬ ಪ್ರೊ॥ ತೀ.ನಂ.ಶ್ರೀ. ಯವರ ಮಾತಿನಲ್ಲಿಯೆ (ಭಾ.ಕಾ.ಮೀ. ಪುಟ–೪೪೨) 'ಕೆಲವು ಸಂದರ್ಭಗಳಲ್ಲಿಯಾದರೂ ಬಂದಿದೆ' ಎಂಬ ಧ್ವನಿ ಇದ್ದೇ ಇದೆ. ಮೂಲವಾಕ್ಯಗಳ ಸೊಗಸು ಮೂಡಿ ಬಂದಿಲ್ಲದ ಕೆಲವೆಡೆಗಳಲ್ಲಿಯಾದರೂ ಕನ್ನಡ ರಚನೆಯ ಸೊಗಸು ಹಾಗೆ ಆದ ನಷ್ಟವನ್ನು ತುಂಬಿಕೊಟ್ಟಿದೆ ಎನ್ನಲಡ್ಡಿಯಿಲ್ಲ. "ಸಂಸ್ಕೃತ ಸಮಾಸಗಳನ್ನು ಹೆಣೆದು ಕಂದಪದ್ಯದಲ್ಲಿ ಅಳವಡಿಸುವಾಗ ಒಮ್ಮೊಮ್ಮೆ ಅರ್ಥಕ್ಲೇಶಕ್ಕೆ ಆಸ್ಪದಕೊಟ್ಟಿರುವುದೂ ಉಂಟು" ಎಂಬ ತೀ.ನಂ.ಶ್ರೀ. ಯವರ ಮಾತಿಗೆ, ಅವನು ಕನ್ನಡದಲ್ಲಿ ಬರೆದಾಗಲೂ ಕೆಲವೊಮ್ಮೆ ಅರ್ಥಕ್ಲೇಶಕ್ಕೆ ಎಡೆಗೊಟ್ಟಿದೆ ಎಂಬ ನಮ್ಮ ಮಾತನ್ನೂ ಕೂಡಿಸಬಹುದು. "ಕವಿರಾಜಮಾರ್ಗಕಾರನ ಸ್ವತಂತ್ರ ಶೈಲಿ"ಯನ್ನು ಮೆಚ್ಚಿಕೊಂಡಿರುವ ಅವರು, "ಒಟ್ಟಿನಲ್ಲಿ ಕವಿರಾಜಮಾರ್ಗದ ಬರವಣಿಗೆ ಲಲಿತವಾಗಿದೆಯೆಂದೇ ಒಪ್ಪಬೇಕು" ಎಂದು ಇತ್ತಿರುವ ತೀರ್ಪನ್ನು ಯಾರಾದರೂ ಒಪ್ಪಬೇಕು. ಲಾಲಿತ್ಯ ಕವಿರಾಜಮಾರ್ಗದ ಶೈಲಿಯ ಒಂದು ಮುಖ ಮಾತ್ರ; ಔಚಿತ್ಯ ಇನ್ನೊಂದು ಮುಖ. ಅವನ 'ಸ್ವತಂತ್ರಶೈಲಿ'ಯ ಸೂತ್ರಪ್ರಾಯಗುಣವೆಂದರೆ, ಅದರ 'ನಾಣ್ನುಡಿಯ ಬೆಡಂಗು'. ಇಷ್ಟರ ಜೊತೆಗೆ, ಈ ಮೊದಲೇ ವಿಶದಪಡಿಸಿರುವಂತೆ (ನೋಡಿ: ಪುಟ ೪೩–೪೬) ಸ್ವತಂತ್ರ ವಿಚಾರಮಾರ್ಗವೂ

ಇದು ಯೋಗ್ಯವರ್ತನೆಯೆ? ಹಾಗೆ ನೆನೆದರೆ, ಆತ್ಮಪ್ರತಿಷ್ಠೆಗೆ ಕುಂದು ಬರುವುದೆಂಬ ಎಣಿಕೆಯೊ? ಅಥವಾ, ಆಶ್ರಯದಾತ ನೃಪತುಂಗಭಕ್ತಿ ಕಾರಣವೊ? ಗ್ರಂಥದ ಮೊದಲಿಂದ ಕಡೆಯವರೆಗೆ 'ನರಲೋಕಚಂದ್ರಮತದಿಂ', 'ಎಂದನತಿಶಯಧವಳಂ', 'ನೃಪತುಂಗದೇವವಿದಿತ ಕ್ರಮದಿಂ' 'ಅತಿಶಯಧವಳೋಕ್ತಿಕ್ರಮದಿಂ', 'ಮಹಾನೃಪತುಂಗದೇವನಾದರದೊಳ್ ಪೇಳ್ದ ಮಾರ್ಗಗತಿ', 'ಅತಿಶಯಧವಳೋರ್ವಿಪೋಕ್ತಿಮಾರ್ಗ', 'ಬೆಸಸಿದನಖಿಳ ಧರಾವಲ್ಲಭನಿಂತಮೋಘವರ್ಷನೃಪೇಂದ್ರಂ', 'ಅತಿಶಯಧವಳೋಪದೇಶಮಾರ್ಗ ಕ್ರಮ' ಎಂದು ಮುಂತಾಗಿ, ಪ್ರತಿಪಾದಿಸಿರುವ ವಿಚಾರಗಳೆಲ್ಲ ನೃಪತುಂಗ ಮುಖೋದ್ಗೀತವೆಂಬಂತೆ ಪ್ರಭುಭಕ್ತಿಯನ್ನು ಪ್ರದರ್ಶಿಸಿದ್ದಾನೆ. ಗ್ರಂಥವು 'ನೃಪತುಂಗದೇವಾನುಮತಮಪ್ಪ ಕವಿರಾಜಮಾರ್ಗ' ವೆಂಬುದಂತೂ ಸ್ಪಷ್ಟವಾಗಿಯೆ ಇದೆ. ಆಶ್ರಯದಾತನಾದ ರಾಜನಿಗೆ ಸರ್ವಪ್ರಾಮುಖ್ಯವನ್ನು ಕೊಡಬೇಕೆಂಬ ಏಕೈಕ ಉದ್ದೇಶದಿಂದ ನೃಪತುಂಗನ ಹೆಸರನ್ನು ಹರಹಿ, ತನ್ನ ಹೆಸರನ್ನು ಹಿಂದಿಕ್ಕಿ, ಆಹಾರವಿತ್ತ ಆಕರಗ್ರಂಥಗಳ ಕರ್ತೃಗಳ ಹೆಸರುಗಳನ್ನು ಉದ್ದೇಶಪೂರ್ವಕವಾಗಿಯೇ ತನ್ನ ಗುಪ್ತಭಕ್ತಿಗಾಗಿ ಮಾರ್ಗಕಾರನು ಉಳಿಸಿಕೊಂಡನೆನ್ನೋಣವೇ? ಅಂತೂ, ಗ್ರಂಥ ಋಣವನ್ನು ಒಪ್ಪಿಕೊಳ್ಳದ ಒಂದು **ಕವಿರಾಜಮಾರ್ಗ**ವನ್ನೆ ಕನ್ನಡ ಕವಿಗಳಿಗೆ ಶ್ರೀವಿಜಯ ಹಾಕಿಕೊಟ್ಟನೆನ್ನಬೇಕಾಗುತ್ತದೆ. ಅಥವಾ ಕರ್ತೃವಿನ ವಿಷಯದಲ್ಲಿ ನಾವು ಉದಾರಮತಿಗಳಾಗಿ ಹೀಗೆ ತರ್ಕಿಸಬಹುದು: 'ಕವಿರಾಜಮಾರ್ಗ'ದ ಒಟ್ಟು ಪದ್ಯಸಂಖ್ಯೆ ೫೩೬ (ಪ್ರಕ್ಷಿಪ್ತವಾದುವನ್ನು ಬಿಟ್ಟು); ಇವುಗಳಲ್ಲಿ ಸುಮಾರು ೪೫ ಪದ್ಯಗಳಿಗೆ ಭಾಮಹನ ಕಾವ್ಯಾಲಂಕಾರವೂ ಸುಮಾರು ೨೩೦ಕ್ಕೆ ದಂಡಿಯ ಕಾವ್ಯಾದರ್ಶವೂ ಆಕರಗ್ರಂಥಗಳು. ಎಂದ ಮೇಲೆ, ಸುಮಾರು ಅರ್ಧದಷ್ಟು ಗ್ರಂಥ ಸ್ವಂತ ರಚನೆ. ಉಳಿದರ್ಧದಲ್ಲಿ ಮಾರ್ಗಕಾರನು ಮೂಲಶ್ಲೋಕಗಳನ್ನು ಪದಶಃ ಭಾಷಾಂತರ ಮಾಡಿಲ್ಲ; ಭಾವವನ್ನು, ವಿಚಾರವನ್ನು, ಸ್ವೀಕರಿಸಿ ತನ್ನದೇ ಆದ ಧಾಟಿಯಲ್ಲಿ ಅಚ್ಚುಕಟ್ಟಾಗಿ ಬರೆದಿದ್ದಾನೆ. ಹಲವು ಕಡೆ ಮೂಲಶ್ಲೋಕದ ಲಕ್ಷಣ ಸ್ವರೂಪವನ್ನು ವಿಶದಪಡುವಂತೆ ವಿಸ್ತರಿಸಿದ್ದಾನೆ; ಸಂಕ್ಷೇಪ ಮಾಡಿರುವ ಸಂದರ್ಭಗಳೂ ಉಂಟು. ಶಾಸ್ತ್ರವಿಚಾರವಾದ್ದರಿಂದ, ಮೂಲದ ಶಾಸ್ತ್ರೀಯ ಪದಪುಂಜಗಳನ್ನು ಸಂದರ್ಭೋಚಿತವಾಗಿ ಇದ್ದಹಾಗೆಯೇ ಬಳಸಿಕೊಂಡಿದ್ದಾನೆ; ಇದು ಸಹಜ, ಅನಿವಾರ್ಯ. ಲಕ್ಷ್ಯಪದ್ಯಗಳನ್ನು ಅನುವಾದ ಮಾಡುವಾಗ ಸಾಕಷ್ಟು ಸ್ವಾತಂತ್ರ್ಯವಹಿಸಿದ್ದಾನೆ; ಮೂಲ ಶ್ಲೋಕದ ಕಲ್ಪನೆಗಳಿಗೆ ತನ್ನವನ್ನು ಬೆರಸಿದ್ದಾನೆ.

ಪ್ರತಿಚಿತ್ರವಿದ್ದರೆ, ಇನ್ನೊಂದು ಬದಿಯಲ್ಲಿ ಶ್ರೀವಿಜಯನ ಕೃತಿಚಿತ್ರವಿದೆ. ರಾಜಮುದ್ರೆ ಬಿದ್ದ ಶ್ರೀವಿಜಯಾಂಕಿತ ನಾಣ್ಯ ಕವಿರಾಜಮಾರ್ಗ. ಈ ವಿಚಾರದಲ್ಲಿ ಎಂದರೆ, ಮುಖ್ಯವಾಗಿ ಕವಿರಾಜಮಾರ್ಗದ ಕರ್ತೃತ್ವ ವಿಚಾರದಲ್ಲಿ ಈವರೆಗಿನ ಅನಿಶ್ಚಿತಸ್ಥಿತಿಯನ್ನೇ ಮುಂದುವರಿಸಿಕೊಂಡು ಹೋಗುವುದು ನಿಜವಾದ ಕೃತಿಕಾರನಿಗೆ ಅನ್ಯಾಯ ಮಾಡಿದಂತೆ.

'ನೃಪತುಂಗನ ಕವಿರಾಜಮಾರ್ಗ' ಎನ್ನುವುದು ನಮಗೆ ಅಭ್ಯಾಸವಾಗಿ ಹೋಗಿದೆ. ಇನ್ನಾದರೂ 'ಶ್ರೀವಿಜಯನ ಕವಿರಾಜಮಾರ್ಗ' ಎನ್ನೋಣ. ಈ ನಿಶ್ಚಿತವನ್ನು ಮುಂದಿಡುವುದರಲ್ಲಿ ಪ್ರಕೃತ ಸಂಪಾದಕನ ಪಾತ್ರ ಇಷ್ಟೆ; ಕವಿರಾಜಮಾರ್ಗದ ಕರ್ತೃ ಶ್ರೀವಿಜಯ ಎಂದು ನಿಶ್ಚಯಿಸಿದ್ದ ವಿದ್ವಾಂಸರು ಕೂಡ ಹೆಸರಿನ ಮುಂದೆ ಒಂದು ಪ್ರಶ್ನಾರ್ಥಕ ಚಿಹ್ನೆಯನ್ನು ಹಾಕುತ್ತಿದ್ದರು; ಈ ಸಂಪಾದಕನು ಅದನ್ನು ಅಳಿಸಿ ಹಾಕಲು ಪ್ರಯತ್ನಿಸಿದ್ದಾನೆ ಅಷ್ಟೆ.

* * * *

ಪಾಠ ಪರಿಷ್ಕರಣ ವಿಚಾರದಲ್ಲಿ ಹೇಳಬೇಕಾದದ್ದು ಹೆಚ್ಚಿನದೇನೂ ಇಲ್ಲ. ಈ ಸಂಬಂಧದಲ್ಲಿ ಪಾಠಾಂತರಗಳ ಅನುಬಂಧದಲ್ಲಿ ನಾಲ್ಕು ಮಾತು ಬರೆದಿದ್ದೇನೆ. ಪರಿಷ್ಕರಣ ಕಾರ್ಯ ಎಷ್ಟು ಶಾಸ್ತ್ರೀಯವಾಗಿ ಸಾಗಬೇಕೋ ಅಷ್ಟರ ಮಟ್ಟಿಗೆ ಸಾಗಿಲ್ಲ ಎಂಬುದರ ಪೂರ್ಣವಾದ ಅರಿವು ನನಗಿದೆ. ಅದಕ್ಕೆ ಮುಖ್ಯ ಕಾರಣ, ಹೊಸ ಹಸ್ತಪ್ರತಿಗಳು ದೊರಕದಿದ್ದುದು; ಅವುಗಳನ್ನು ದೊರಕಿಸಿಕೊಳ್ಳಲು ಅಗತ್ಯವಾದಷ್ಟು ಪ್ರಯತ್ನವನ್ನು ಮಾಡಲಿಲ್ಲ. ಗ್ರಂಥವನ್ನು ಸಾಧ್ಯವಾದಷ್ಟು ಬೇಗ ಹೊರಕ್ಕೆ ತರಬೇಕು ಎಂಬ ಆತುರದಿಂದಾಗಿ, ಪ್ರತಿಗಳನ್ನುಳ್ಳ ಮಹನೀಯರೂ,

ಸಂಸ್ಥೆಗಳೂ ಔದಾರ್ಯದಿಂದ ತಾವಾಗಿ ಮುಂದೆ ಬಂದು ಅವುಗಳ ಪ್ರಯೋಜನವನ್ನು ಸಂಪಾದಕನಿಗೆ ದೊರಕಿಸಿಕೊಡುವ ಕೃಪೆ ಮಾಡಬೇಕೆಂದು ಈ ಮೂಲಕ ಪ್ರಾರ್ಥಿಸಿಕೊಳ್ಳುತ್ತೇನೆ. ಪಾಠಪರಿಷ್ಕರಣಸಂಬಂಧವಾದ ಕುಂದುಕೊರತೆಗಳೂ ಇನ್ನಿತರ ಲೋಪದೋಷಗಳೂ ಮುಂದಿನ ಆವೃತ್ತಿಯಲ್ಲಿ ನಿವಾರಣೆಯಾಗುವಂತೆ ಪ್ರಯತ್ನಿಸಲು ಸಾಧ್ಯವಾಗುವ ಹಾಗೆ ಸಹೃದಯರಾದ ವಿದ್ವಾಂಸರು ತಮ್ಮ ಅಮೂಲ್ಯವಾದ ಸಲಹೆ ಸೂಚನೆಗಳನ್ನು ನೀಡಿ, ಉಪಕಾರ ಮಾಡಬೇಕೆಂದು ಬೇಡಿಕೊಳ್ಳುತ್ತೇನೆ.

ಪ್ರಕೃತ ಮುದ್ರಣದ ಸಂಪಾದನ ಕಾರ್ಯ ಸ್ವಲ್ಪಮಟ್ಟಿಗಾದರೂ ಉಪಯುಕ್ತವಾಗಿ ಪರಿಣಮಿಸಿದ್ದರೆ ಪೂರ್ವವಿದ್ವಾಂಸರ ಪರಿಶ್ರಮವೇ ಅದಕ್ಕೆ ಮೂಲಾಧಾರ; ಅವರಿಗೆಲ್ಲ ನನ್ನ ಕೃತಜ್ಞತೆಯ ಪ್ರಣಾಮಗಳು.

ಬೆಂಗಳೂರು **ಎಂ. ವಿ. ಸೀತಾರಾಮಯ್ಯ**

೧೨-೨-೧೯೬೮

ಇದೆ. ಔಪಚಾರಿಕವಾಗಿ ಅದನ್ನವನು 'ನೃಪತುಂಗದೇವಮಾರ್ಗ', 'ನೃಪತುಂಗವಿಚಾರಕ್ರಮ', ಎಂದು ನಿರ್ದೇಶಿಸಿರುವುದು ತೀರ ಸಹಜವಷ್ಟೆ. ಸಂಸ್ಕೃತ ಕಾವ್ಯಮಾರ್ಗದ ಲಕ್ಷಣವನ್ನು ಕನ್ನಡಕ್ಕೆ ಹೊಂದಿಸಿ ಪ್ರತಿಪಾದಿಸುವಲ್ಲಿ ಅವನು ಮೆರೆದ ಸ್ವತಂತ್ರ ವಿಚಾರ ಕ್ರಮವನ್ನು ಈಚಿನ ಕನ್ನಡ ಲಾಕ್ಷಣಿಕರು ಅನುಸರಿಸಿದ್ದರೆ, ಕನ್ನಡ ಕಾವ್ಯಶಾಸ್ತ್ರ ಸಂಸ್ಕೃತಕ್ಕೆ ಹೊತ್ತ ಋಣಭಾರ ಎಷ್ಟೋ ಕಡಿಮೆಯಾಗುತ್ತಿತ್ತು. ಕಾವ್ಯಮೀಮಾಂಸೆಗೆ ಸಂಬಂಧಪಟ್ಟಿದೆಯೋ ಇಲ್ಲವೋ, ಕನ್ನಡ ನಾಡು ನುಡಿ ಜನ ಈ ಕುರಿತು ಕವಿರಾಜ ಮಾರ್ಗಕಾರನು ತೊಳಗಿ ಬೆಳಗುವ 'ಕನ್ನಡದೊಲವಿನ ನುಡಿಗಳನ್ನಾಡಿ, ಮೊತ್ತ ಮೊದಲಬಾರಿಗೆ ಹೊತ್ತಿಸಿದ ಕನ್ನಡ ದೀವಟಿಗೆ ಅಂದಿನಿಂದ ಇಂದಿನವರೆಗೆ ಪ್ರಮುಖ ಕವಿಗಳ ಕೈಯಿಂದ ಕೈಗೆ ಕುಂದದೆ ನಂದದೆ ಸಾಗಿಬಂದಿರುವುದು ಹೆಮ್ಮೆಯ ಮಾತು. ಇಂಥ ಬಹುವಿಧಪ್ರಾಮುಖ್ಯವುಳ್ಳ ಗ್ರಂಥವನ್ನು ಕುರಿತು `Kavirajamarga is not a wonderful masterpiece in either matter or style'ಎಂದು ತಿಳಿಸುವಲ್ಲಿ ದಿವಂಗತ ಬಿ.ಎಂ.ಶ್ರೀ.ಯವರು ಕಾವ್ಯಮೌಲ್ಯ ಮಾಪನದಂಡದಿಂದ ಲಕ್ಷಣ ಗ್ರಂಥದ ಮೌಲ್ಯವನ್ನು ಅಳೆಯ ಹೊರಟು, ತಮ್ಮ ವಿಮರ್ಶನ ಪ್ರಜ್ಞೆಯನ್ನು ಸರಿಯಾಗಿ ವಿನಿಯೋಗಿಸಿಲ್ಲವೆಂದು ಹೇಳಬೇಕಾಗುತ್ತದೆ. "ಕನ್ನಡಭಾಷೆಯ ಅಂತಸ್ಸತ್ತ್ವವನ್ನು ಮರೆಯದೆ, ಸಂಸ್ಕೃತ ಆದರ್ಶಗಳ ಅಗತ್ಯವನ್ನು ತೃಣೀಕರಿಸದೆ, ಮುಂದಿನ ಕವಿಗಳಿಗೂ ಲಾಕ್ಷಣಿಕರಿಗೂ ಮಾರ್ಗದರ್ಶನ ಮಾಡಿದ ಮಹಾಗ್ರಂಥವೇ ಕವಿರಾಜಮಾರ್ಗ. ಅದರ ಲಕ್ಷಣಗಳು ಸಂಸ್ಕೃತ ಪ್ರಸಿದ್ಧವಾಗಿದ್ದರೂ, ಲಕ್ಷ್ಯಗಳೇ ಮುಂದಿನವರ ಕನ್ನಡ ರಚನೆಗಳಿಗೆ ಕೈದೀವಿಗೆಗಳಾದವು. ಕನ್ನಡದಲ್ಲಿ ಕಾವ್ಯಮೀಮಾಂಸೆಗೆ ಕವಿರಾಜಮಾರ್ಗಕಾರನೇ ಆದ್ಯಾಚಾರ್ಯ" ಎಂಬ ಡಾ॥ ಕೆ.ಕೃಷ್ಣಮೂರ್ತಿಯವರ ಮಾತಿಗೆ, "ಕವಿರಾಜ ಮಾರ್ಗವು.... ಅನುವಾದ ದೃಷ್ಟಿಯಿಂದ ಸ್ವತಂತ್ರವೆಂಬುದಲ್ಲದೆ ಅಂದಿನ ಕನ್ನಡ ನಾಡು ನುಡಿಗಳ ಸ್ವರೂಪ, ಸಾಹಿತ್ಯ ಸ್ಥಿತಿ, ಕವಿಗಳಿಗೆ ರಾಜಮಾರ್ಗವನ್ನು ತೋರುವ ವಿಮರ್ಶಾತ್ಮಕ ವಿಚಾರ ಪ್ರಣಾಲಿ ಎಂಬಿವುಗಳಿಂದ ಸ್ವತಂತ್ರವಾದ ಮತ್ತು ಬೆಲೆಯುಳ್ಳ ಪ್ರಮಾಣ ಗ್ರಂಥವಾಗಿದೆ" ಎಂಬ ಡಾ॥ ರಂ.ಶ್ರೀ. ಮುಗಳಿಯವರ ಮಾತನ್ನೂ ಜೋಡಿಸಿಕೊಂಡರೆ ಗ್ರಂಥದ ಯಥಾರ್ಥವಾದ ಬೆಲೆಯ ಅರಿವಾಗುತ್ತದೆ. ಮೊತ್ತದಲ್ಲಿ, ಕವಿರಾಜಮಾರ್ಗ ಕಾವ್ಯರತ್ನವೇನಲ್ಲ; ಹೇಳಿಕೇಳಿ ಶಾಸ್ತ್ರಗ್ರಂಥ; ಆದರೆ, ತನ್ನ ಇತಿಮಿತಿಯಲ್ಲಿ ಅದು ಚಿನ್ನದಂಥ ಕೃತಿ. ಚಿನ್ನದ ಅರೆಪಾಲಿನ ಸ್ವಾಮ್ಯ ಸಂಸ್ಕೃತ ಲಾಕ್ಷಣಿಕರಿಗೆ ಸೇರಿದ್ದರೆ, ಉಳಿದ ಅರೆಪಾಲು ಸ್ವಂತ ಗಳಿಕೆಯ ಆಸ್ತಿ. ಟಂಕ ಪೂರ್ತಿಯಾಗಿ ಶ್ರೀವಿಜಯನದು. ನಾಣ್ಯದ ಒಂದು ಪಕ್ಕದಲ್ಲಿ ನೃಪತುಂಗನ

ಉದ್ದೇಶದಿಂದ ಯೌವರಾಜ್ಯಾಭಿಷೇಕ ಪ್ರಕರಣವನ್ನು ತೇಲಿಸಿಬಿಟ್ಟಿರುವಂತೆ ಕಾಣುತ್ತದೆ.

೪. ಈ ಅಭಿಪ್ರಾಯವನ್ನು ದಿ॥ ಮುಳಿಯ ತಿಮ್ಮಪ್ಪಯ್ಯನವರು ಒಪ್ಪಿಲ್ಲ; ರಾಷ್ಟ್ರಕೂಟ ಸಾಮ್ರಾಜ್ಯದ ರಾಜಧಾನಿಯಾದ 'ಮಾನ್ಯಖೇಟ' ನಗರವು (ಈಗಿನ ಮಾಲಖೇಡ್ ಅಥವಾ ಮಳಖೇಡ) ನೃಪತುಂಗನಿಂದ ನಿರ್ಮಿತವಾಯಿತೆಂದು ಡಾ॥ ಫ್ಲೀಟರ ಅಭಿಪ್ರಾಯ; ಅವನಿಗಿಂತ ಹಿಂದೆಯೂ ಇದ್ದುದಕ್ಕೆ, ನೃಪತುಂಗನ ಗುರು ಎಂದು ಹೇಳಲಾದ ಜಿನಸೇನರಿಗಿಂತಲೂ ಹಿಂದಿನ ಪ್ರಭಾಚಂದ್ರರ 'ಕಮಲ ಮಾರ್ತಾಂಡ'ದಲ್ಲಿ ಉಲ್ಲೇಖವಿದೆ. "ದಂತಿದುರ್ಗಾದಿಗಳಾಗಿ ಗೋವಿಂದನವರೆಗಿನ ರಾಷ್ಟ್ರಕೂಟ ರಾಜರ ರಾಜಧಾನಿ ವಿಧ್ಯಾಂದ್ರಿ ಪಾದದಲ್ಲಿ ರೇವಾನದಿಯ ಹತ್ತಿರದಲ್ಲಿ ಆ ಹೆಸರನ್ನೊಂದಿದ ರೇವಾನಗರಿಯೆ ಆಗಿತ್ತು; ಅವರೆಲ್ಲರ ಅಥವಾ ಗೋವಿಂದರಾಜನ ಅರಮನೆಯ ಹೆಸರು 'ಶ್ರೀಭವನ' ಎಂದಾಗಿತ್ತು." ಎಂದು ತಿಳಿಸಿ, ಪುತ್ರ ನೃಪತುಂಗನು ತಂದೆ ಗೋವಿಂದನ ಬೀಡುದಾಣಗಳಲ್ಲೊಂದಾದ 'ಹೇಲಾಪುರ' (ವಿಲಾಸನಗರಿ)ವನ್ನೆ, 'ಮಾನ್ಯಖೇಟ' ಎಂಬ ಹೆಸರಿನಿಂದ ರಾಜಧಾನಿಯನ್ನಾಗಿ ಮಾರ್ಪಡಿಸಿಕೊಂಡನೆಂದು ಶಾಸನಗಳ ಆಧಾರದಿಂದ ತಿಮ್ಮಪ್ಪಯ್ಯನವರು ನಿರ್ಣಯಿಸಿದ್ದಾರೆ. ನೃಪತುಂಗನ ಕಾಲದಿಂದ ಮಾನ್ಯಖೇಟವೆ ರಾಷ್ಟ್ರಕೂಟ ರಾಜಧಾನಿ ಎಂಬುದಂತೂ ಖಚಿತ.

೫. Eastern Chalukyas: D.C.Ganguli (pp..೫೭-೬೪)(ಕವಿರಾಜಮಾರ್ಗ ವಿವೇಕ, ಭಾಗ ೧ರಲ್ಲಿ ಮುಳಿಯ ತಿಮ್ಮಪ್ಪಯ್ಯನವರು ಉಲ್ಲೇಖಿಸಿರುವ ಆಧಾರ) ನೃಪತುಂಗನು ಕ್ರಿ.ಶ.೮೧೪ರಿಂದ ೮೮೦ರವರೆಗೆ ಆಳಿದನೆಂದೂ ಅವನು ಪಟ್ಟಕ್ಕೆ ಬಂದಾಗ ೧೩-೧೪ ವರ್ಷಗಳ ಕಿರಿಯನೆಂದೂ ಚರಿತ್ರಕಾರರಲ್ಲಿ ಭಿನ್ನಮತವಿದೆ.

೬. ಕವಿರಾಜಮಾರ್ಗ: III – ಪ.೧೧೦; ೧೨೯-೧೩೦; ೧೪೪-೧೫೨; ೧೭೪-೧೮೧; ೧೯೭; ೨೦೪; ೨೦೬ (ಈ ಪದ್ಯಗಳನ್ನೂ ಇವುಗಳ ಮೇಲಣ ಟಿಪ್ಪಣಿಗಳನ್ನೂ ಪರಿಶೀಲಿಸಿರಿ).

೭. (i)"ವೀರನುದಾರಂ ಶುಚಿಗಂ। ಧೀರಂ ನಯಶಾಲಿ ಕೈದುವೊತ್ತರ ದೇವಂ॥ ಗಾರೆಜಿಗರ್ ನೃಪತುಂಗಂಗೆ – "(ಶ.ಮ.ದ., ಸೂ. ೧೫೧ರ ಉದಾಹರಣೆ).

(ii) "ಕರಿವೋಲ್ ಭದ್ರಗುಣಂ ಕೇ।ಸರಿವೋಲ್ ನಿರ್ವ್ಯಾಜ ಶೌರ್ಯನಂಭೋನಿಧಿವೋಲ್॥ ಶರಣಾಗತರಕ್ಷಕಪಟು। ಗಿರಿವೋಲ್ ನಿಷ್ಕಂಪಚಿತ್ತನಾ ನೃಪತುಂಗಂ" (ಕಾವ್ಯಾವಲೋಕನ ೩೪೯).

(iii) "ಕಾಯಲುಂ ಬಲಗರ್ವದಿಂ ನೆಲನೆಲ್ಲನಂ ನೆಲಕೆಲ್ಲಮಾ। ತ್ರ್ಯಯಲುಂ ತನಗಾಚತುರ್ಭುಜಮುಂ ಭುಜದ್ವಯಮಾದನಿ। ತ್ತಾಯದಾಯತಿ ತೋಳ್ಗೊಳೊಪ್ಪಿರೆ ಮಿಕ್ಕ ಪೆಂಪಿನ ಕೀರ್ತಿನಾರಾಯಣಂ ದಯೆಗೆಯ್ಗೆ ಜಾಗ ಚತುರ್ಭುಜಂ ಗರುಡಧ್ವಜಂ II" (ಕಾವ್ಯಾವಲೋಕನ ೩೫೮)

['ಕೀರ್ತಿನಾರಾಯಣ' ಎಂಬುದು ३ನೆಯ ಗೋವಿಂದನ ಬಿರುದು.

# ಪೀಠಿಕೆಯ ಟಿಪ್ಪಣಿಗಳು

೧. ರಾಷ್ಟ್ರಕೂಟರು ನೇರವಾಗಿ ಚಂದ್ರವಂಶದ ಯದುಕುಲೋದ್ಭವರೆಂದು ಈಚಿನ ವಂಶಾವಳಿಯ ಉಲ್ಲೇಖಗಳು ಹೇಳುತ್ತವೆ. 'ರೆಡ್ಡಿ'ಗಳ ಕುಲ ಎಂದು ಡಾ॥ ಬರ್ನೆಲ್, ಉತ್ತರ ದೇಶದಿಂದ ಬಂದವರೆಂದು ಡಾ॥ಫ್ಲೀಟ್, ರಾಷ್ಟ್ರಕೂಟರೂ ಶಿವಾಜಿಯೂ ಒಂದೇ ಕುಲ ಎಂದು ಕೆ.ಬಿ.ಪಾಠಕ್, ಈ ಹೇಳಿಕೆಗಳಿಂದ ರಾಷ್ಟ್ರಕೂಟರು ಮೂಲತಃ ತೆಲುಗರು, ಇಲ್ಲವೆ ರಾಜಪೂತರು ಇಲ್ಲವೆ ಮಹಾರಾಷ್ಟ್ರರು ಎಂಬ ಅಭಿಪ್ರಾಯಗಳು ಹುಟ್ಟುತ್ತವೆ. ಎ.ಎಸ್.ಅಳ್ತೇಕರರ ಹೇಳಿಕೆಯಂತೆ ರಾಷ್ಟ್ರಕೂಟರು ಹುಟ್ಟು ಕನ್ನಡಿಗರು. ಕರಹಾಡ ಶಾಸನವೊಂದರಲ್ಲಿ ೧ನೆಯ ಕಕ್ಕನು 'ರಟ್ಟ' ಎಂದು ಹೆಸರುಗೊಂಡಿದ್ದಾನೆ. 'ಲಟ್ಟನೂ(ಲೂ)ರ ಪುರವರಾಧೀಶ್ವರ' ಎಂಬ ಶಾಸನದ ಉಲ್ಲೇಖದಿಂದ, ಲಟ್ಟ=ರಟ್ಟ ಎಂದು ಊಹಿಸಲಾಗಿದೆ. 'ರಟ್ಟರ ಕೂಡಲು' = ರಾಷ್ಟ್ರಕೂಟ ಎಂದು ಮುಳಿಯ ತಿಮ್ಮಪ್ಪಯ್ಯನವರ ಊಹೆ. ರಾಷ್ಟ್ರಕೂಟ = ನಾಡಗೌಡ: ಪಿ.ಬಿ.ದೇಸಾಯಿ.

೨. IIನೆಯ ಅಮೋಘವರ್ಷನ ಚಿತ್ರದುರ್ಗ ಶಾಸನ (ಕಾಲ, ಶ.೮೫೯, ಕ್ರಿಶ.೯೩೭) "....ಯಾದವ ಕುಲರೊಳ್ ಪಲರುಂ ಮೇದಿನಿಯಂ ಸುಖದಿನಾಳ್ದರ್, ಅವರಿಂ ಬಳಿಯಿಂ ಶ್ರೀದಯಿತಂದಂತಿಗನುತೋದಿತಮಾದಂ" ಎಂದು ಹೇಳಿ, ಈ ವಂಶದ ಕನ್ನರ, ನಿರುಪಮ, ಜಗತ್ತುಂಗ, ಅಮೋಘವರ್ಷ, ದೇವ, ಇಂದರ ಇಜೆವ ಕನ್ನರ – ಈ ದೊರೆಗಳ ಹೆಸರುಗಳನ್ನು ಉಲ್ಲೇಖಿಸಿ, "ನೆಗಟ್ದರೀ ರಾಷ್ಟ್ರಕೂಟಾನ್ವಯರ್ಕಳ್" ಎಂದು ಶಾಸನವನ್ನು ಮುಗಿಸಿದೆ.

(S.K.H., Vol. I, pp.೮೫–೮೬)

೩. ಅಕಾಲವರ್ಷ ಧ್ರುವನಿಗೆ ನಾಲ್ವರು ಮಕ್ಕಳು. ಇವರಲ್ಲಿ ಹಿರಿಯ 'ರಣಾವಲೋಕ' ಕಂಭ. ಗೋವಿಂದನು ಮೂರನೆಯ ಮಗನೆಂಬ ಅಭಿಪ್ರಾಯವೂ ಇದೆ. ಅದು ಹೇಗಿದ್ದರೂ, ಇನ್ನಿಬ್ಬರೆಂದರೆ – ಕರ್ಕ ಮತ್ತು ಇಂದ್ರ. ಧ್ರುವನು ಗೋವಿಂದನಿಗೆ ಯುವರಾಜಪಟ್ಟಗಟ್ಟಬೇಕೆಂದು ನಿಶ್ಚಯಿಸಿದಾಗ ಗೋವಿಂದನು ವಿನಯ ಪೂರ್ವಕವಾಗಿ ಆ ಗೌರವವನ್ನು ನಿರಾಕರಿಸಿದಂತೆ ಸಂಜನ ಶಾಸನದ ಉಲ್ಲೇಖವಿದೆ. ಆದರೆ, ಪಟ್ಟಗಟ್ಟಿದ ಅಥವಾ ಕಟ್ಟದೆ ಬಿಟ್ಟ ಬಗೆಗೆ ಸ್ಪಷ್ಟ ಸೂಚನೆಯಿಲ್ಲ. ಉದಾತ್ತನೂ ವಿನಯಶಾಲಿಯೂ ಆದ ಗೋವಿಂದನು ತಂದೆಯ ಮರಣಾನಂತರ ಹಿರಿಯಣ್ಣನನ್ನು ಮೂಲೆಗೊತ್ತಿ ಮಂತ್ರಿವರ್ಗದ ಬೆಂಬಲದಿಂದ ಸಿಂಹಾಸನವೇರಿದನು ಎಂದರೆ ನಂಬುವುದು ಕಷ್ಟ. ಸಂಜನ ಶಾಸನಕಾರನು ಗೋವಿಂದನ ಗುಣಪ್ರಶಂಸೆಯ

೧೧. ಯಸ ಪ್ರಾಂಶುನಖಾಂಶುಜಾಲ ವಿಸರದ್ಧಾರಾಂತರಾವಿರ್ಭಮ್।
ತಾದಾಂಭೋಜ ರಜ:ಪಿಶಂಗ ಮಕುಟ ಪ್ರತ್ಯಗ್ರರತ್ನದ್ಯುತಿಃ॥
ಸಂಸ್ಕರ್ತಾಸ್ವಯಮೋಘವರ್ಷನೃಪತಿಃ ಪೂತೋಹಮದ್ಯೇತ್ಯಲಂ।
ಸಶ್ರೀಮಾನ್ ಜಿನಸೇನ ಪೂಜ್ಯ ಭಗವತ್ಪಾದೋ ಜಗನ್ಮಂಗಲಮ್ ॥೧೦॥
(ನೃಪತುಂಗನ ಮತವಿಚಾರ: ಗೋವಿಂದ ಪೈ; ಕ.ಸಾ.ಪ. ೧೨-೪)

೧೨. ಉಮಾಸ್ವಾತಿಯ 'ತತ್ತ್ವಾರ್ಥಸೂತ್ರ' ಎಂಬ ಜೈನಧರ್ಮ ಗ್ರಂಥಕ್ಕೆ ವೀರಸೇನಾಚಾರ್ಯರು 'ಜಯಧವಲಾ' ಟೀಕೆಯನ್ನು ಬರೆದಿದ್ದರು; ಅವರು ೨೦,೦೦೦ ಶ್ಲೋಕಗಳನ್ನು ಮಾತ್ರ ಬರೆದು ನಿರ್ವಾಣ ಹೊಂದಿದ್ದರು; ಜಿನಸೇನರು ಹೆಚ್ಚಿನ ೪೦,೦೦೦ ಶ್ಲೋಕಗಳನ್ನು ಬರೆದು ಗ್ರಂಥವನ್ನು ಪೂರೈಸಿದರು. ಆ ವೇಳೆಗೆ, ಅವರಿಗೆ ಸುಮಾರು ೮೫ ರ ವಯಸ್ಸು. (Jinasena II, author of Maha Purana, wrote Jayadhavala Tika on the work of Virasena in S.759 when Amoghavarsa was ruling. - Dr.S.Srikantha Sastri; Sources of Karnataka History). ಅವರ ಇತರ ಗ್ರಂಥಗಳು: ೧.ವರ್ಧಮಾನ ಪುರಾಣ; ೨.ಜಿನೇಂದ್ರಗುಣ ಸಂಸ್ತುತಿ; ೩.ಆದಿಪುರಾಣ (ಅಥವಾ ಪೂರ್ವ ಪುರಾಣ): ಇದು ಅವರ ಕಟ್ಟಕಡೆಯ ಗ್ರಂಥ. ಇದನ್ನು ಬರೆದು ಮುಗಿಸುವ ವೇಳೆಗೆ ಸುಮಾರು ೯೫ರ ವಯಸ್ಸಾಗಿದ್ದು, ಸುಮಾರು ಕ್ರಿ.ಶ. ೮೪೮ರಲ್ಲಿ ಮರಣಹೊಂದಿರಬಹುದು ಎಂದು ಊಹಿಸಲಾಗಿದೆ. ೪.ಪಾರ್ಶ್ವಾಭ್ಯುದಯ ಕಾವ್ಯ: ಕಾಳಿದಾಸನ 'ಮೇಘದೂತ'ವನ್ನವಲಂಬಿಸಿದ 'ಸಮಸ್ಯಾಪೂರ್ತಿ ರೂಪದ ಚಿಕ್ಕ ಕಾವ್ಯ'; ೪.ಸರ್ಗಗಳಿವೆ; ಪ್ರತಿ ಸರ್ಗಾಂತ ಗದ್ಯ ಹೀಗಿದೆ: "ಇತ್ಯಮೋಘವರ್ಷ ಪರಮೇಶ್ವರ ಪರಮಗುರು ಶ್ರೀಜಿನಸೇನಾಚಾರ್ಯ ವಿರಚಿತ ಮೇಘದೂತ ವೇಷ್ಟಿತೇ ಪಾರ್ಶ್ವಾಭ್ಯುದಯೇ.... 'ಇದರಿಂದಲೂ, ಕಾವ್ಯದ" ಭುವನ ಮವತು ದವಸ್ಸರ್ವದಾಮೋಘವರ್ಷಃ "(IV-೨) ಎಂಬ ಆಶೀರ್ವಚನದಿಂದಲೂ 'ಅಮೋಘವರ್ಷ'ನೆಂಬ ರಾಜನ ಕಾಲದಲ್ಲಿ ಇದು ರಚಿತ. ಆತನ ಗುರು 'ಜಿನಸೇನಾಚಾರ್ಯ' ಎಂಬ ಸಂಗತಿ ತಿಳಿದು ಬರುತ್ತದೆ. ಗೋವಿಂದ ಪೈ ಅವರ ಅಭಿಪ್ರಾಯದಂತೆ, ಜಿನಸೇನರು ಇದನ್ನು ತಮ್ಮ ೪೦-೪೫ರ ಪ್ರಾಯದಲ್ಲಿ, ಸುಮಾರು ಕ್ರಿ.ಶ.೮೦೦ ರಲ್ಲಿ, ಎಂದರೆ ನೃಪತುಂಗನು ಪಟ್ಟಕ್ಕೆ ಬರುವುದಕ್ಕೆ ೧೫ ವರ್ಷ ಮುಂಚೆ, (ಎಂದರೆ ನೃಪತುಂಗನು ಚಿಕ್ಕ ಮಗುವಾಗಿದ್ದಾಗ) ರಚಿಸಿರಬೇಕು ಎಂದು ಊಹಿಸಲಾಗಿದೆ. ಅಲ್ಲದೆ, ಈ ಕಾವ್ಯದ ಸರ್ಗಾಂತ ಗದ್ಯ ಪ್ರಕ್ಷಿಪ್ತವಾಗಿರಬೇಕೆಂದು ಗೋವಿಂದ ಪೈ ಅವರು ತೀರ್ಮಾನಿಸಿದ್ದಾರೆ. ಹೀಗಿರುವುದರಿಂದ, ಈ ಕಾವ್ಯದಲ್ಲಿನ ಅಮೋಘವರ್ಷ ಪರವಾದ ಉಲ್ಲೇಖಗಳನ್ನು ಪ್ರಮಾಣಭೂತವೆಂದು ಅಂಗೀಕರಿಸುವುದು ಕಷ್ಟ. ಅಲ್ಲದೆ ಈ ಉಲ್ಲೇಖಗಳಿಂದ ನೃಪತುಂಗನು ಜಿನಸೇನರಿಂದ

ಕವಿರಾಜಮಾರ್ಗದಲ್ಲಿ 'ವೀರನಾರಾಯಣ' ಎಂಬುದು ನೃಪತುಂಗನ ಬಿರುದಾಗಿರುವುದು ಸುಪ್ರಸಿದ್ಧ. 'ಗರುಡಧ್ವಜ' ವಂಶದ ರಾಜರೆಲ್ಲರ ಬಿರುದು. ಈ ಪದ್ಯವು ಗೋವಿಂದನನ್ನೆ ಕುರಿತಿದೆ ಎಂದು ಮುಳಿಯ ತಿಮ್ಮಪ್ಪಯ್ಯನವರ ಅಭಿಪ್ರಾಯ. (ಕವಿರಾಜಮಾರ್ಗ ವಿವೇಕ–೧; ಪು.೩೪). ನೃಪತುಂಗನ ಕಾಲದ ಶಾಸನವೊಂದರಲ್ಲಿ 'ಕೀರ್ತಿನಾರಾಯಣ' ಎಂಬ ಬಿರುದೂ ಕಂಡುಬರುವುದರಿಂದ, ಈ ಪದ್ಯದಲ್ಲಿ ನೃಪತುಂಗನೇ ಕೀರ್ತಿತನಾಗಿರಬಹುದೇ ಎಂಬ ಊಹೆಗೂ ಅವಕಾಶವಿದೆ.] (ಹೋಲಿಸಿ: ಕವಿರಾಜಮಾರ್ಗ, ಪ.೩–೧೭೪; ಗದಾಯುದ್ಧ, ೧–೧೫)

೮. Sakatayana, a Swetambara scholar wrote his Grammar and a Vritti on it, at the court of Amoghavarsha. The Vritti is named Amogha Vritti after the patron. Sakatayana, in illustrating `andyatanabhuta' tense, refers to the conquest over Pandyas and "the burning of enemies" (ಅದಹದಮೋಘವರ್ಷೋಽರಾತೀನ್) by ಅಮೋಘವರ್ಷ, (S.K.H., Vol. I, p.-೬೯)

೯. ಕೊಣ್ಣೂರ ಶಾಸನದ ೩೪ನೆಯ ಶ್ಲೋಕದ ಮೇಲಿನ ಗದ್ಯಭಾಗ: "ತೇನ ಏವಂ ಭೂತೇನ ಬಂಕೆಯಾಭಿಧಾನೇನ ಮದಿಷ್ಟಭೃತ್ಯೇನ ಪ್ರಾರ್ಥತಸ್ಸನ್ ತತ್ಪಾರ್ಥ ನಯಾ ಮಾನ್ಯಖೇಟ ರಾಜಧಾನ್ಯಾಮವಸ್ಥಿತೇನ ಮಯಾ ಮಾತಾ ಪಿತ್ರೋ ರಾತ್ಮನಶ್ಚೈಹಿಕಾಮುತ್ರಿಕ ಪುಣ್ಯಯಶೋಭಿವೃದ್ಧಯೇ ಕೋಲನೂರೇ ತದ್ಬಂಕೆಯ ನಿರ್ಮಾಪಿತ ಜಿನಾಯ ಪರಿಪಾಲನ ನಿಯುಕ್ತಾಯ..." (ದಿ॥ ಮುಳಿಯ ತಿಮ್ಮಪ್ಪಯ್ಯನವರ ಕವಿರಾಜಮಾರ್ಗ ವಿವೇಕ – ೧, ಪು.–೭೩ರಲ್ಲಿ ಉದ್ಧೃತ)

೧೦. (i) "ಮಾನ್ಯಖೇಟ ರಾಜಧಾನ್ಯವಸ್ಥಿತೇನ ಮಯಾ ಮಾತಾ ಪಿತ್ರೋರಾತ್ಮನಶ್ಚ ಐಹಿಕಾಮುತ್ರಿಕ ಪುಣ್ಯಯಶೋಭಿವೃದ್ಧಯೇ ಕರಹಡವಿನಿರ್ಗತ ಭರದ್ವಾಜಾಗ್ನಿವೇಶ್ಯಾಂಗಿರಸ ಬಾರ್ಹಸ್ಪಶ್ಯಾಂಗಿರಸ ಬಾರ್ಹಸ್ಪಶ್ಯಾನಾಂ ಬ್ರಾಹ್ಮಣಾನಾಂ ಗ್ರಾಮೋದತ್ತಃ...." (ಅದೇ).

(ii) "ರಟ್ಟವಂಶೋದ್ಭವಂ ಗರುಡಲಾಂಛನಂ... ಲಟ್ಟಲೂರಪುರ ಪರಮೇಶ್ವರಂ ಶ್ರೀನೃಪತುಂಗ ನಾಮಾಂಕಿತ ಲಕ್ಷ್ಮೀವಲ್ಲಭೇಂದ್ರಂ... ಮಹಾವಿಷ್ಣುವ ರಾಜ್ಯಂಬೋಲ್... ಏೞ್ನೂಱುಚೇಕ್‌ಭಂಟನೆಯ ವ್ಯಯುವೆಂಬ ಸಂವತ್ಸರಂ ಪ್ರವರ್ತ್ತಿಸೆ.... ಶ್ರೀಮದಮೋಘವರ್ಷ ನೃಪತುಂಗ ನಾಮಾಂಕಿತಂ.... ಸಂವತ್ಸರಂಗಳ್ ಅಯ್ವತ್ತೆರಡುವ್... ಸಲುತ್ತಿರೆ ಅತಿಶಯಧವಳನರೇಂದ್ರ ಪ್ರಸಾದ ದಿಂದಮೋಘವರ್ಷದೇವ ಪದಪಂಕಜಭ್ರಮರಂ..." (ಶಾಸನದ ಕಾಲ: ಕ್ರಿ.ಶ.೮೬೬), ಜೂನ್ ೧೬. (I.A., p.218-19 'ನೃಪತುಂಗನ ಮತವಿಚಾರ' – ಗೋವಿಂದ ಪೈ; ಕ.ಸಾ.ಪ.–೧೨–೪)

interest to learn that Ugraditya, the Jaina author of Kalyana Karaka, a Sanskrit work on medicine, says at the close of work that at the instance of this King he delivered at his court, in the presence of many physicians and doctors, a discourse on the evils of a flesh diet and on its avoidance in the treatment of disease. Nripatunga was a Jaina King, a disciple of Jinasena, the author of Adipurana." (History of Kannada Literature, 1940; p.2)

೧೬. ಪ್ರಶ್ನೋತ್ತರ ಮಾಲಿಕೆಯ ಮುಖ್ಯ ಪ್ರಸಕ್ತ ಶ್ಲೋಕಗಳು:
"ನಿರ್ಣಯಸಾಗರ" ಮುದ್ರಣಾಲಯದ ಮುದ್ರಿತ ಪ್ರತಿ ಎರಡು ಹಸ್ತಪ್ರತಿಗಳ ಪಾಠಗಳನ್ನು ಆಧರಿಸಿದೆ: 'ಕ' ಮತ್ತು 'ಖ', ಈ ಎರಡು ಪ್ರತಿಗಳ ಕೊನೆಯ ಶ್ಲೋಕ ಮಾತ್ರ ಎರಡರಲ್ಲಿ ಭಿನ್ನವಾಗಿದೆ. ಎರಡಕ್ಕೂ ಸಮಾನವಾಗಿರುವ ಶ್ಲೋಕಗಳಲ್ಲಿ ಈ ಕೆಳಗಿನವು ಗಮನಾರ್ಹ.

ಪ್ರಣಿಪತ್ಯ ವರ್ಧಮಾನಂ ಪ್ರಶ್ನೋತ್ತರ ರತ್ನಮಾಲಿಕಾಂ ವಕ್ಷ್ಯೆ।
ನಾಗನರಾಮರ ವಂದ್ಯಂ ದೇವಂ ದೇವಾಧಿಪಂ ವೀರಂ ॥೧॥
ಕಃಖಲು ನಾಲಂಕ್ರಿಯತೇ ದೃಷ್ಟಾದೃಷ್ಟಾರ್ಥ ಸಾಧನಪಟೀಯಾನ್।
ಕಂಠಸ್ಥಿತಯಾ ವಿಮಲ ಪ್ರಶ್ನೋತ್ತರ ರತ್ನಮಾಲಿಕಯಾ ॥೨॥

* * * *

ಇತಿ ಕಂಠಗತಾ ವಿಮಲಾ ಪ್ರಶ್ನೋತ್ತರ ರತ್ನಮಾಲಿಕಾ ಯೇಷಾಮ್।
ತೇ ಮುಕ್ತಾಭರಣಾ ಅಪಿ ವಿಭಾಂತಿ ವಿದ್ವತ್ಸಮಾಜೇಷು ॥೨೮॥

"ನಿರ್ಣಯಸಾಗರ" ಮುದ್ರಣಾಲಯದ ಕ+ಖ ಹಸ್ತಪ್ರತಿಗಳಲ್ಲಿ 'ಕ' ಪ್ರತಿಯ ಕೊನೆಯ ಪದ್ಯ:

ರಚಿತಾ ಸಿತಪಟ ಗುರುಣಾ ವಿಮಲಾ ವಿಮಲೇನ ರತ್ನಮಾಲೇವ।
ಪ್ರಶ್ನೋತ್ತರಮಾಲೇಯಂ ಕಂಠಗತಾ ಕಂ ನ ಭೂಷಯತಿ ॥೨೯॥

'ಖ' ಪ್ರತಿಯ ಪಾಠ:

ವಿವೇಕಾತ್ಯಕ್ತರಾಜ್ಯೇನ ರಾಜ್ಞೇಯಂ ರತ್ನಮಾಲಿಕಾ
ರಚಿತಾಮೋಘವರ್ಷೇಣ ಸುಧಿಯಾ ಸದಲಂಕೃತಿಃ ॥೨೯॥

(i) ಈ ಗ್ರಂಥವನ್ನು ಕುರಿತು ದಿ॥ ಗೋವಿಂದ ಪೈ ಅವರ ತೀರ್ಮಾನಗಳನ್ನು ಹೀಗೆ ಸಂಗ್ರಹಿಸಬಹುದು:

(೧)ಅದ್ವೈತವಿಚಾರ, ಭಕ್ತಿ, ವಿಷ್ಣುಶಿವಸ್ತುತಿ ಮುಂತಾದ ಯಾವ ವೈದಿಕ ಸಂಗತಿಗಳ ಪ್ರಸ್ತಾವವೂ ಇದರಲ್ಲಿ ಇಲ್ಲ. ಆದ್ದರಿಂದ ಇದು, ಶಂಕರಾಚಾರ್ಯ ಇಲ್ಲವೆ

ಜೈನಧರ್ಮ ಸ್ವೀಕಾರಮಾಡಿ, ಅವರ ಶಿಷ್ಯನಾದನೆಂಬ ಸಂಗತಿ ಹೊರಪಡುವುದಿಲ್ಲ.

೧೩. "ಶ್ರೀಮದಮೋಘವರ್ಷೇಣ ಯೇನಸ್ವೇಷ್ಟ ಹಿತೈಷಿಣಾ॥
ವಿಭಸ್ತೈಕಾಂತಪಕ್ಷಸ್ಯ ಸ್ಯೆದ್ವಾದನ್ಯಾಯವಾದಿನಃ।
ದೇವಸ್ಯ ನೃಪತುಂಗಸ್ಯ ವರ್ಧತಾಂತಸ್ಯ ಶಾಸನಂ॥"
("Mahavira, the author of this Mathematical work, was the disciple of ವಿದ್ಯಾನಂದ ವಾದೀಂದ್ರ and the teacher to Amoghavarsha, Amoghavarsha had the titles Deva, Nripatunga" - Dr.S.Srikantha Sastry, Sources of Karnataka History, p. ವಿದ್ಯಾನಂದ ವಾದೀಂದ್ರ ೭೧)
ಮುಳಿಯ ತಿಮ್ಮಪ್ಪಯ್ಯನವರು "ಮಹಾವೀರಾಚಾರ್ಯನೇನೋ ನೃಪತುಂಗನ ಆಸ್ಥಾನದಲ್ಲೇ ಇದ್ದವನು 'ಎಂದು ಅಭಿಪ್ರಾಯಪಟ್ಟು', ಸ್ಯಾದ್ವಾದ ನ್ಯಾಯವಾದಿನಃ" ಎಂಬ ಕಡೆ "ಸ್ಯೆದ್ವಾದನ್ಯಾಯ ವೇದಿನಃ" ಎಂದು ಪಾಠವಿದ್ದಿರಬೇಕೆಂದು ಊಹಿಸಿ, ಜೈನಧರ್ಮವನ್ನು ಬಲ್ಲವನಾಗಿದ್ದನು ಎಂಬ ಅರ್ಥವನ್ನು ಹೊರಡಿಸಿದ್ದಾರೆ. ಇದು ವಿಚಾರಣೀಯವಾದ ಅಂಶ.

೧೪. ".....It is variously attributed to Sankaracharya, Sankarananda, and a Svetambara writer Vimala. But, the royal authorship of `Rathnamala' is confirmed by a Tibetan translation of it discovered by Schiefner in which the author is represented to have been a King, and his Tibetan name, as re-translated into Sanskrit by the same scholar, is Amoghodaya, which obviously stands for Amoghavarsha. This work was composed between Saka 797-99; in the former year Nripatunga abdicated in favour of his son Akalavarsha", (K.B.Pathak: ಕವಿರಾಜಮಾರ್ಗದ ಮುನ್ನುಡಿ, ಪು.೯)

೧೫. "ನೃಪತುಂಗನು ೬೨ ವರ್ಷಗಳು ರಾಜ್ಯಭಾರ ಮಾಡಿದನು. ಬಳಿಕ ತಾನೇ ರಾಜ್ಯವನ್ನು ಬಿಟ್ಟಂತೆ ಅವನು ಸಂಸ್ಕೃತದಲ್ಲಿ ಬರೆದಿರುವ ಪ್ರಶ್ನೋತ್ತರ ಮಾಲೆಯೆಂಬ ಗ್ರಂಥದ ಅಂತ್ಯ ಶ್ಲೋಕದಿಂದ ತಿಳಿಯುತ್ತದೆ" (ಕ.ಕ.ಚರಿತೆ – ಪ್ರ.ಸಂಪುಟ, ೧೯೨೪, ಪುಟ–೧೮)
"He has written in Sanskrit a small work called Prasnottaramala, of which the concluding verse tells us that he voluntarily retired from the throne. It may be of some

ವೇಳೆಗೆ, ಸುಮಾರು ೮೦–೮೨ ವಯಸ್ಸಿನ ಆತನಿಗೆ ಇದು ನೈಸರ್ಗಿಕ. ಈತನಿಗಿಂತ ಮೊದಲು ಅಜ್ಜ ಧ್ರುವರಾಜನ ಮೇಲ್ಪಂಕ್ತಿ ಇದ್ದೇ ಇದೆ.) (ನೃಪತುಂಗನ ಮತವಿಚಾರ; ಕ.ಸಾ.ಪ., ೧೨–೪).

(ii) ಮುಳಿಯ ತಿಮ್ಮಪ್ಪಯ್ಯನವರ ತೀರ್ಮಾನ:

"ಈ ಎರಡೂ ಶಾಸನಗಳಿಂದಾಗಿ (ಸೊರಬ ಶಾಸನ ನಂ. ೮೫ ಮತ್ತು ಕನ್ಹೇರಿ ಶಾಸನ) ಕ್ರಿ.ಶ. ೮೭೭ (ಶಾ.ಶ.೭೯೯) ರಲ್ಲಿಯೂ ನೃಪತುಂಗನು 'ವಿವೇಕಾತ್ತ್ಯಕ್ತ ರಾಜ್ಯ'ನಾಗಿಲ್ಲ. ರಾಜ್ಯಾಧಿರೂಢನಾಗಿಯೇ ಇದ್ದನು ಎಂಬುದು ಸಿದ್ಧವಾಗುತ್ತಿದೆ. ಇದರಿಂದ ಈ ಪ್ರಶ್ನೋತ್ತರಮಾಲಿಕೆ ಎಂಬ ಮತಗ್ರಂಥದ ಕರ್ತೃತ್ವವು ನೃಪತುಂಗನಿಂದ ಕಳಚಿ ಹೋಗಿ ತನ್ಮೂಲಕವಾಗಿ ಆತನು ಜೈನಮತೀಯನು ಎನ್ನುವ ಹೇಳಿಕೆಯೂ ಮಾಸಿಹೋಗುತ್ತದೆ." (ಕವಿರಾಜಮಾರ್ಗ ವಿವೇಕ – ೧, ಪುಟ–೭೨)

೧೭. ಕವಿರಾಜಮಾರ್ಗವನ್ನು ಪ್ರಪ್ರಥಮವಾಗಿ ೧೮೮೩ರಲ್ಲಿಯೆ ವಿದ್ವಜ್ಜನರ ಗಮನಕ್ಕೆ ತಂದವರು ಬಿ.ಎಲ್.ರೈಸ್‌ರವರು ('Early Kannada Authors' - JRAS, N.S., Vol.XX, pp.295-314) ಎಂಬುದಾಗಿ ಕೆ.ಬಿ.ಪಾಠಕರು ಆ ಗ್ರಂಥದ ಪ್ರಥಮ ಮುದ್ರಣದ ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಆದರೆ, J.F. ಫ್ಲೀಟರು, ಆ ಲೇಖನದಲ್ಲಿ ರೈಸರು ಎಲ್ಲಿಯೂ ಕವಿರಾಜಮಾರ್ಗದ ಹೆಸರನ್ನು ಕೂಡ ಎತ್ತಿಲ್ಲವೆಂದು ಹೇಳಿ, ಪಾಠಕರ ಈ ನಿರಾಧಾರವಾದ ಉಲ್ಲೇಖವನ್ನು 'Slovenly' ಅಲಕ್ಷ್ಯದ್ದು ಮತ್ತು ಅಜಾಗರೂಕ) ಎಂದು ಕರೆದಿದ್ದಾರೆ! (Ind.Ant.XXXIII)

೧೮. "..... ಇದೇ ಪತ್ರಿಕೆಯಲ್ಲಿಯೂ ಇತರ ಪತ್ರಿಕೆಗಳಲ್ಲಿಯೂ (ಎಂದರೆ, ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ ಮತ್ತು ಪ್ರಬುದ್ಧ ಕರ್ಣಾಟಕ –ಸಂ.) ಕವಿರಾಜಮಾರ್ಗದ ಕರ್ತೃವಿನ ವಿಷಯವಾಗಿ ಅನೇಕ ವಾಗ್ಯುದ್ಧಗಳು ನಡೆದಿವೆ. ಈ ಯುದ್ಧದಲ್ಲಿ ಅನ್ವಯಿಸುವ ಶಕ್ತಿ ನನಗಿಲ್ಲ. ಶ್ರೀಮಾನ್ ನಾರಾಯಣ ಶ್ರೀನಿವಾಸ ರಾಜ ಪುರೋಹಿತರು ಈ ಯುದ್ಧದಲ್ಲಿ ವಿಶೇಷವಾಗಿ ಅನ್ವಯಿಸಿ ಹಲವು ಆಯುಧಗಳನ್ನು ಜಳಪಿಸಿದ್ದಾರೆ. ಆದರೆ ಇದರಿಂದ ಕನ್ನಡಿಗರಿಗೆ ವಿಶೇಷ ಪ್ರಯೋಜನವಾದಂತೆ ಕಾಣುವುದಿಲ್ಲ. ಈ ವಾದದ ಗುಣಾವಗುಣಗಳನ್ನು ವಿಚಾರಮಾಡಲು ಇಲ್ಲಿ ಅವಕಾಶವಿಲ್ಲ; ಇಷ್ಟು ಮಾತ್ರ ಹೇಳಬಹುದು; ಜೈನನಾದ ನೃಪತುಂಗನು ಬ್ರಾಹ್ಮಣರ ಭಗವದ್ಗೀತೆಯ – 'ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ। ತತ್ರ ಶ್ರೀರ್ವಿಜಯೋ

ಶಂಕರಾನಂದಗುರು ಕೃತವಲ್ಲ;

(೨) 'ಖ' ಪ್ರತಿಯ ಕಡೆಯ ಶ್ಲೋಕ ('ವಿವೇಕಾತ್ತ್ಯಕ್ತ... ಸದಲಂಕೃತಿಃ') ಮಾತ್ರ ಅನುಷ್ಟುಪ್ ಛಂದಸ್ಸಿನಲ್ಲಿದ್ದು, ಉಳಿದ ೨೮ ಆರ್ಯಾವೃತ್ತ ಛಂದಸ್ಸಿನಲ್ಲಿವೆ; 'ಕ' ಪ್ರತಿಯ (ಕಡೆಯ ೨೯ನೆಯದೂ ಸೇರಿ) ಎಲ್ಲ ಶ್ಲೋಕಗಳೂ ಆರ್ಯಾವೃತ್ತಗಳಾಗಿವೆ. ಆದ್ದರಿಂದ, ಛಂದಸ್ಸಿನ ಪ್ರಯೋಗದ ದೃಷ್ಟಿಯಿಂದ 'ಕ' ಪ್ರತಿಯಲ್ಲಿ ಸುಸಾಂಗತ್ಯ ಕಂಡು ಬಂದು, ಅದರಲ್ಲಿ ಹೇಳಿರುವ ವಿಮಲನೇ ಕರ್ತೃವಾಗಿ ಕಂಡುಬರುತ್ತದೆ;

(೩) ಎರಡೂ ಪ್ರತಿಗಳಿಗೂ ಸಮಾನವಾಗಿರುವ ಮೇಲ್ಕಂಡ (೧, ೨, ೨೮) ಶ್ಲೋಕಗಳಲ್ಲಿ ಎಲ್ಲೆಡೆಯೂ 'ಪ್ರಶ್ನೋತ್ತರ' ಎಂಬ ಪೂರ್ವಪದ ಸಮೇತವಾದ 'ಪ್ರಶ್ನೋತ್ತರ ರತ್ನಮಾಲಿಕಾ' ಎಂದಿದೆ. 'ಕ' ಪ್ರತಿಯ ೨೯ನೆಯ (ಕೊನೆಯ) ಶ್ಲೋಕದಲ್ಲಿ 'ಪ್ರಶ್ನೋತ್ತರ ಮಾಲಾ' ಎಂದಷ್ಟೇ ಇದ್ದರೂ 'ರತ್ನಮಾಲೀನ' ಎಂಬ ಮೊದಲ ಪಾದದ ಉಪಮಾನದಿಂದಾಗಿ ಅದು ಸಮಂಜಸವಾಗಿಯೇ ಇದೆ. ಆದರೆ, 'ಕ' ಪ್ರತಿಯ ೨೯ನೆಯ (ಕೊನೆಯ) ಅನುಷ್ಟುಪ್ ಶ್ಲೋಕದಲ್ಲಿ ಕೇವಲ 'ರತ್ನಮಾಲಿಕಾ' ಎಂದಷ್ಟೇ ಇದ್ದು, ಮುಖ್ಯವಾದ ಪೂರ್ವಪದ ಇಲ್ಲವಾಗಿದೆ. ಆದ್ದರಿಂದ 'ಖ' ಪ್ರತಿಯ ಕೊನೆಯ ಪದ್ಯ ಮೂಲಪ್ರತಿಯಲ್ಲಿ ಇದ್ದಿರಲಾರದು;

(೪) ೨–೨೮ ಪದ್ಯಗಳಲ್ಲಿ 'ವಿಮಲ' ಪದದಲ್ಲಿ ಕವಿ ತನ್ನ ಹೆಸರನ್ನೆ ಸೂಚಿಸಿ, ಕೊನೆಯ ಪದ್ಯದಲ್ಲಿ ಸ್ಪಷ್ಟವಾಗಿಯೇ ಹೇಳಿಕೊಂಡಿದ್ದಾನೆ;

(೫) ನೃಪತುಂಗನು ಕ್ರಿ.ಶ. ೮೭೫ರಲ್ಲಿ ಅಕಾಲವರ್ಷನಿಗೆ ಪಟ್ಟಕಟ್ಟಿ ನಿವೃತ್ತನಾದನೆಂದು ಪಾಠಕರು ಹೇಳಿರುವುದಕ್ಕೆ ಆಧಾರವಿಲ್ಲ. ಕ್ರಿ.ಶ.೮೭೭ ರ ಸೊರಬ ಶಾಸನದಂತೆ ಆ ಇಸವಿಯವರೆಗೂ ನೃಪತುಂಗನೇ ಆಳುತ್ತಿದ್ದನು;

(೬) ತಿಬೆಟ್ ಭಾಷಾಂತರದಲ್ಲಿನ ಅಮೋಘೋದಯುವನ್ನು ಅಮೋಘವರ್ಷನೊಂದಿಗೆ ಸಮೀಕರಣ ಮಾಡುವುದು ಸಲ್ಲದು. ಅಮೋಘೋದಯ = ಅಮೋಘವರ್ಷ ಎಂದಾದರೂ, ತಿಬೆಟ್ ಭಾಷಾಂತರ ಪ್ರಕ್ಷಿಪ್ತಶ್ಲೋಕವುಳ್ಳಪ್ರತಿಯ ಭಾಷಾಂತರವಾಗಿರಬಹುದು.

ಆದ್ದರಿಂದ ಈ ಕವಿತೆಯ ಕರ್ತೃ 'ವಿಮಲ'; ನೃಪತುಂಗನಲ್ಲ... ಈ 'ವಿವೇಕಾತ್ತ್ಯಕ್ತ ರಾಜ್ಯೇನ' ಎಂಬ ಶ್ಲೋಕವು ಐತಿಹಾಸಿಕ ತಥ್ಯವನ್ನೇ ಹೇಳುತ್ತದೆಂದು ನಿಷ್ಪ್ರಮಾಣವಾಗಿ ಒಪ್ಪಿದರೂ, ಇದರಿಂದ 'ನೃಪತುಂಗನು ಜೈನಮತವನ್ನು ಅವಲಂಬಿಸಿದನೆಂದೇನೂ ಅರ್ಥವಾಗುವುದಿಲ್ಲ; ವಿವೇಕದಿಂದ ತಾನೆ ರಾಜ್ಯಭಾರವನ್ನುಬಿಟ್ಟನೆಂದು ಇದೆಯಲ್ಲದೆ, ಆ ವಿವೇಕೋದಯವು ಆತನಿಗೆ ಜೈನಧರ್ಮದಿಂದ ಆದುದೆಂದೇನೂ ಇಲ್ಲ (ಆ

ವೃತ್ತಿ: 'ಕನ್ನಡ ಕವಿತೆಯೆಂಬ ಪೆಣ್ಗೆ ಪ್ರಾಸವೆ ಪ್ರಾಣವಾ ಪ್ರಾಸಂ ಶಬ್ದಾಳಂಕಾರದೊಳತಿಶಯಮವ(ದ)ಱ ಪ್ರಪಂಚಮಂ ನೃಪತುಂಗದೇವನ ಮತದಿಂ ಪೇಳ್ವೆಂ'

ಈ ವೃತ್ತಿಯನ್ನು ಯಾರೇ ಬರೆದಿರಲಿ, ಇದರಿಂದ ದ್ಯೋತವಾಗುವ ಮಹತ್ತ್ವದಂಶವೆಂದರೆ ಕೃತಕೃತ್ಯಮಲ್ಲವಲ್ಲಭನೆಂದರೆ ನೃಪತುಂಗದೇವನೆಂದೂ, ಆ ನೃಪತುಂಗನೇ ಕವಿರಾಜಮಾರ್ಗವನ್ನು ಬರೆದಿರುವನೆಂದೂ ಅದೀಗ ಮತ್ತಷ್ಟು ಬಲಪಡುವುದೆಂಬುದು. ಮುಂದೆ ಬೇರೆ ಎಡೆಯಲ್ಲಿ ಬರುವ ಪ್ರಯೋಗದಿಂದ ಈ ಅಂಶವೂ ಇನ್ನೂ ದೃಢವಾಗುತ್ತದೆ. (ಪು.೩೭)

(ಗಯಿಸಿದರ್ಥಂ..." ಎಂದು ಮೊದಲಾಗುವ II–೫ ನೆಯ ಪದ್ಯ) "ಶ್ರೀವಿಜಯನ ಪ್ರಯೋಗಂ"

ವ್ಯಾಖ್ಯಾನಕಾರನು ಈ ಪದ್ಯವನ್ನು ಉದಾಹರಿಸಿ ಅದನ್ನು ಶ್ರೀವಿಜಯನ ಪ್ರಯೋಗವೆಂದು ಕರೆದಿರುವುದರಿಂದ ಕವಿರಾಜಮಾರ್ಗವನ್ನು ಬರೆದವನು ಶ್ರೀವಿಜಯನೆಂಬಂಥವು ಮತ್ತಷ್ಟು ದೃಢಪಡುತ್ತದೆ. ಮೇಲೆ .... ೨೮ನೆಯ ಪದ್ಯವನ್ನು ಉದಾಹರಿಸಿದೆಯಷ್ಟೆ. ಅಲ್ಲಿ ಕೃತಕೃತ್ಯ ಮಲ್ಲವಲ್ಲಭ ಎಂಬುದಕ್ಕೆ ವ್ಯಾಖ್ಯಾನಕಾರನು ನೃಪತುಂಗದೇವನೆಂದು ವ್ಯಾಖ್ಯಾನಾವಸರದಲ್ಲಿ ಬರೆದಿದ್ದಾನೆ. ಇಲ್ಲಿ ಶ್ರೀವಿಜಯನೆಂದು ಹೇಳಿದ್ದಾನೆ. ಕೃತಕೃತ್ಯಮಲ್ಲವಲ್ಲಭ, ನೃಪತುಂಗದೇವ, ಶ್ರೀವಿಜಯ ಎಂಬಿವುಗಳು ಒಬ್ಬನಿಗೇ ಇದ್ದ ಪರ್ಯಾಯ ನಾಮಗಳು. ಶ್ರೀವಿಜಯನು ಬೇರೆ ಎಂಬ ತಿಳಿವಳಿಕೆಯನ್ನು ಇದು ನಿರಸನ ಮಾಡುವುದು. ಕೇಶಿರಾಜನು ಪೂರ್ವಕವಿಗಳನ್ನು ಸ್ಮರಿಸುವ ಸಂದರ್ಭದಲ್ಲಿ ನೃಪತುಂಗನ ಹೆಸರನ್ನು ಹೇಳದೆ ಶ್ರೀವಿಜಯನ ಹೆಸರನ್ನು ಹೇಳಿರುವುದರಿಂದ ಇವು ಬೇರೆ ಬೇರೆ ಕವಿಗಳ ಹೆಸರಾಗಿರಬೇಕೆಂದು ಕೆಲವರು ಅಭಿಪ್ರಾಯಪಟ್ಟಿರುವುದನ್ನು ಪಂಡಿತರು ಬಲ್ಲರು. ಶ್ರೀವಿಜಯನೇ ನೃಪತುಂಗದೇವನೆಂಬುದು ಈ ವ್ಯಾಖ್ಯಾನಕಾರನ ಬರವಣಿಗೆಯಿಂದ ಸ್ಪಷ್ಟವಾಗಿದೆ. ಕೇಶಿರಾಜನು ಶ್ರೀವಿಜಯನ ಹೆಸರನ್ನು ಹೇಳಿರುವುದರಿಂದ ಅದು ನೃಪತುಂಗನ ಹೆಸರೆಂದು ನಿರ್ಧರಿಸಬೇಕು. ಈ ಎರಡು ಹೆಸರುಗಳು ಒಬ್ಬನಿಗೆ ಇದ್ದುದರಿಂದ ನೃಪತುಂಗನು ಎಂದರೆ ಶ್ರೀವಿಜಯನು ಕವಿರಾಜಮಾರ್ಗದ ಕರ್ತೃವೆಂದು ನಿರ್ಧರಿಸಿಕೊಳ್ಳಬೇಕು. ಕವಿರಾಜಮಾರ್ಗದಲ್ಲಿ ಪದ್ಯಕವಿಗಳನ್ನು ಹೆಸರಿಸುವ ಸಂದರ್ಭದಲ್ಲಿ ಶ್ರೀವಿಜಯನ ಹೆಸರೂ ಬಂದಿರುವುದರಿಂದ ಕವಿರಾಜಮಾರ್ಗವನ್ನು ಬರೆದ ಶ್ರೀವಿಜಯನು ತನ್ನ ಹೆಸರನ್ನು ಕವಿಗಳ ಗುಂಪಿಗೆ ಸೇರಿಸಿ ಹೇಳಿದುದು ಅಷ್ಟು ಯುಕ್ತವಾಗಲಾರದೆಂಬ ಆಕ್ಷೇಪಣೆ ಬಲವತ್ತರವಾಗಿಲ್ಲ. ನೃಪತುಂಗನು ಆಗಿನ ಕಾಲದಲ್ಲಿ ಸರ್ವಮಾನ್ಯನಾದ ಕವಿಯಾಗಿದ್ದನು. ಎಲ್ಲರ ಮಾನ್ಯತೆಗೆ ಪಾತ್ರನಾಗಿದ್ದ ರಾಜಕವಿ ತನ್ನ ಹೆಸರನ್ನು ಕವಿಗಳ ಶ್ರೇಣಿಯಲ್ಲಿ ಸೇರಿಸಿ ಹೇಳಿದುದರಿಂದ ಯಾವ

ಭೂತಿರ್ಧ್ರುವ ನೀತಿರ್ಮತಿರ್ಮಮ॥' ಎಂಬ ಶ್ಲೋಕದಲ್ಲಿ ಉಕ್ತವಾದ ಕೆಲವು ಪದಗಳನ್ನೇ ತನಗೆ ಬಿರುದುಗಳಾಗಿ ಮಾಡಿಕೊಳ್ಳಲು ಕುತೂಹಲಿಯಾದುದಕ್ಕೆ ಕಾರಣವು ಗೋಚರವಾಗುವುದಿಲ್ಲ. ಶ್ರೀವಿಜಯ ಎಂಬ ಬಿರುದು ನೃಪತುಂಗನಿಗೆ ಉಂಟೆಂದು ತೋರಿಸುವುದಕ್ಕೆ ಶ್ರೀಮಾನ್ ರಾಜಪುರೋಹಿತರು – 'ವೀರಶ್ರೀ ವಿಜಯನ ಕೆಯ್ಸಾರೆ ಸುರಾಂಗನೆಯರೊಸೆದು ಪರಸುವ ರವಮುಂ। ಭೋರೆಂದೆಸಗುವ ಕುಸುಮಾ। ಸಾರದ ಬಲ್ಸರಿಯುಮೆಸೆದುವಂಬರತಳದೊಳ್॥' ಎಂಬ ಪದ್ಯವನ್ನು ಉದಾಹರಿಸಿದ್ದಾರೆ. (ಪರಿಷತ್ಪತ್ರಿಕೆ, ಜುಲೈ, ೧೯೨೩). ಈ ಪದ್ಯದಲ್ಲಿ ಶ್ರೀವಿಜಯ ಎಂಬ ಬಿರುದೇ ಇಲ್ಲ. ವೀರಶ್ರೀ ಎಂಬುದು ಕರ್ತೃ. ವಿಜಯ ಎಂದರೆ ಅರ್ಜುನ. ವೀರಲಕ್ಷ್ಮಿ ಅರ್ಜುನನ ಕೈಸೇರಲು ಸುರಾಂಗನೆಯರು ಹರಸಿದರು, ಪುಷ್ಪವೃಷ್ಟಿಯಾಯಿತು ಎಂಬುದು ಈ ಪದ್ಯದ ಅರ್ಥವು" (ಕವಿಚರಿತೆ: ತಿದ್ದಿದ ಮುದ್ರಣ, ೧೯೨೪; ಅವತರಣಿಕೆ, ಪು:೨೦)

೧೯. "These passages establish Nripatunga's claims to authorship beyond dispute". (K.B.Pathak: ಕವಿರಾಜಮಾರ್ಗದ ಪೀಠಿಕೆ).III–೨೩೦, III–೨೨೫ ಈ ಪದ್ಯಗಳಲ್ಲಿನ ಉಲ್ಲೇಖಗಳನ್ನು ಕುರಿತು: "These facts prove that Nripatunga composed the present work".

೨೦. "....all the various allusions to the method, style opinions and teaching of Nripatunga. Atisayadhavala, etc., have, of course, to be interpreted in accordance with any specific information that we can find else where. And, in the colophons, we have the plainest possible intimation that the author of the work was at any rate not Nripatunga. And the colophons explain, in the clearest manner, the real nature of the various references in the body of the work to the method, style, opinions and teaching of Nripatunga etc." (Dr.Fleet: Ind. Ant. Vol.XXXIII)(ಇಲ್ಲಿ ಒಂದು ಸಂಗತಿಯನ್ನು ಗಮನಿಸಬಹುದು: ಫ್ಲೀಟರು 'ಕವೀಶ್ವರ' ಪಕ್ಷವಾದರೂ, ನೃಪತುಂಗಪಕ್ಷ ನಿರಸನಕ್ಕೆ ಅವರು ಹೂಡಿರುವ ಪ್ರತಿವಾದ ಬಲವತ್ತರವಾಗಿದೆ. ಆದ್ದರಿಂದ ಕವಿರಾಜಮಾರ್ಗವು ನೃಪತುಂಗಕೃತವಲ್ಲ. ಅನ್ಯಕವಿ ಕೃತ ಎಂದು ವಾದಿಸುವವರಿಗೆ ಅದು ಪ್ರಯೋಜನಕರವಾಗಬಲ್ಲದು – ಸಂ.)

೨೧. "ಕವಿರಾಜಮಾರ್ಗದ ದ್ವಿತೀಯ ಪರಿಚ್ಛೇದದ ಪದ್ಯಗಳು ೨೮–೨೯–೩೦–೪೩ ಇವುಗಳಿಗೆ ವೃತ್ತಿ ಇದೆ. ಪದ್ಯ ೨೮ರ ವೃತ್ತಿಯಿಂದ ಹೊಸ ಅಂಶವೊಂದು ವ್ಯಕ್ತವಾಗುವುದರಿಂದ ಆ ಪದ್ಯವನ್ನೂ ಅದರ ವೃತ್ತಿಯನ್ನೂ ಇಲ್ಲಿ ಕೊಡಲಾಗಿದೆ.

ಸೂಚಿತವಾಗುತ್ತದೆ" ಎಂದು ಡಾ॥ ಕೆ.ಕೃಷ್ಣಮೂರ್ತಿಗಳು ಅಭಿಪ್ರಾಯಪಟ್ಟಿರುವುದಕ್ಕೆ ('ಕನ್ನಡದಲ್ಲಿ ಕಾವ್ಯತತ್ತ್ವ', ಪು.-೪೨) ನಾಗವರ್ಮನ ಈ ಉಕ್ತಿ ಆಧಾರವಾಗಲಾರದು. ಇದರಿಂದ, ಅವನು ಕವಿರಾಜಮಾರ್ಗವನ್ನು ಓದಿರಲಾರ ಎಂದು ನಮ್ಮ ಅಭಿಪ್ರಾಯವಲ್ಲ. ಆ ಅಭಿಪ್ರಾಯವನ್ನು ಸಮರ್ಥಿಸಲು ಈ ಉಕ್ತಿ ಆಧಾರವಾಗಲಾರದಷ್ಟೆ; ಬೇರೆಯ ಆಧಾರಗಳನ್ನು ಹುಡುಕಬೇಕು.

ಪ್ರೊ॥ ತೀ.ನಂ.ಶ್ರೀ. ಯವರೂ ಹೆಚ್ಚು ಕಡಿಮೆ ಡಾ॥ ಕೃಷ್ಣಮೂರ್ತಿಯವರ ಅಭಿಪ್ರಾಯವನ್ನೆ ಹೊಂದಿದ್ದಾರೆ. (ಭಾ.ಕಾ.ಮೀ., ಪು.xxii,ತಿದ್ದುಪಡಿ). ದಿ॥ ಆರ್. ನರಸಿಂಹಾಚಾರ್ಯರು 'The context clearly shows that the expression Kavirajamarga does not refer to any work of that name; but that it simply means the path of excellent poets" ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ. (ಕಾವ್ಯಾವಲೋಕನ, ದ್ವಿತೀಯ ಮುದ್ರಣ, ಪು.xxxii).

೨೫. "ಕನ್ನಡದ ದಕ್ಷಿಣೋತ್ತರ ಮಾರ್ಗಗಳಿಗೆ ಸಂಬಂಧಿಸುವ ವಿಷಯವು ಕವಿರಾಜಮಾರ್ಗದಲ್ಲಿ ಒಂದೇ ಒಂದು ಕಡೆ ದೊರೆಯುತ್ತದೆ. ಅದಾವುದೆಂದರೆ, ಕ್ರಿಯೆಗಳಲ್ಲಿ ನೋಳ್ಪೆಂ, ತರಿಸುವೆಂ ಇತ್ಯಾದಿ ರೂಪಗಳನ್ನು ದಕ್ಷಿಣಮಾರ್ಗದ ಕವಿಗಳು ಅವಕ್ಕೆ ಪ್ರತಿಯಾಗಿ ನೋಡುವೆಂ, ತರಿಪೆಂ ಇತ್ಯಾದಿ ರೂಪಗಳನ್ನು ಉತ್ತರಮಾರ್ಗದ ಕವಿಗಳೂ ಪ್ರಯೋಗಿಸುತ್ತಾರೆ ಎಂಬುದೇ. ಏವಂಚ ಸಮಾನಾರ್ಥಕವಾದ ಕೆಲವು ದ್ವಿರೂಪ ಕ್ರಿಯೆಗಳಲ್ಲಿ ಒಂದು ಉತ್ತರಮಾರ್ಗದಲ್ಲಿಯೂ ಮತ್ತೊಂದು ದಕ್ಷಿಣ ಮಾರ್ಗದಲ್ಲಿಯೂ ವಿಶೇಷವಾಗಿ ಬಳಕೆಯಲ್ಲಿರುವುದೇ ಈ ಮಾರ್ಗಗಳಿಗೆ ಭೇದಕಗುಣವೆಂದು ಫಲಿತವಾಯಿತು. ನೃಪತುಂಗನ ಕಾಲದಲ್ಲಿ ಒಂದು ವೇಳೆ ಈ ಭೇದವು ಇದ್ದಿರಬಹುದು. ಆದರೆ ಈಚೆಯ ಗ್ರಂಥಗಳಲ್ಲಿ ಕ್ರಿಯೆಗಳ ರೂಪದ್ವಯವೂ ದೊರೆಯುತ್ತದೆ. ಉತ್ತರಮಾರ್ಗದಲ್ಲಿ ನೃಪತುಂಗನ ಹೇಳಿಕೆಯ ಪ್ರಕಾರ 'ಱ'(ರ)ಕಾರ ವಿಶಿಷ್ಟವಾದ ಕ್ರಿಯಾರೂಪವು ಬಳಕೆಯಲ್ಲಿಲ್ಲ. ತೆಲುಗಿನಲ್ಲೂ 'ಱ' (ರ)ಕಾರವಿಲ್ಲ. ಆದುದರಿಂದ ಉತ್ತರಮಾರ್ಗವು ತೆಲುಗಿನ ಸಂಪರ್ಕದಿಂದ ಹುಟ್ಟಿತು ಎಂದು ನಿರ್ಣಯಿಸುವುದು ಧಾರ್ಷ್ಟ್ಯವೇ ಸರಿ. ತೆಲುಗಿನಲ್ಲಿ ಈಗ 'ಱ'(ರ)ಕಾರವಿಲ್ಲದಿದ್ದರೂ ಒಂದಾನೊಂದು ಕಾಲದಲ್ಲಿ ಅದು ಇದ್ದಿರಬಹುದು ಎಂಬ ಊಹೆಗೆ ಸಾಧಕವಾದ ಗುರುತುಗಳು ಶಬ್ದಗಳಲ್ಲಿ ಕಾಣುತ್ತವೆ...." ಎಂದು ಹೇಳಿ ಮಾರ್ಗಭೇದ ವಿಚಾರದಲ್ಲಿ ನಾಗವರ್ಮ ಭಟ್ಟಾಕಳಂಕರ ಮತಗಳನ್ನು ತಿಳಿಸಿ ಆರ್.ನರಸಿಂಹಾಚಾರ್ಯರೂ ತಮ್ಮ ವಾದವನ್ನು ಹೀಗೆ ಮುಗಿಸಿದ್ದಾರೆ: "ಇದುವರೆಗೂ ಮಾಡಿದ ವಿಚಾರದಿಂದ ಕನ್ನಡದಲ್ಲಿ ದಕ್ಷಿಣೋತ್ತರ ಮಾರ್ಗಗಳುಂಟು; ಅವಕ್ಕೆ ಸಮಾನಾರ್ಥಕವಾದ ದ್ವಿರೂಪಕ್ರಿಯೆಗಳಲ್ಲಿಯೂ ಉತ್ತಮಪುರುಷ, ದ್ವಿರೂಪ ಸರ್ವನಾಮಗಳಲ್ಲಿಯೂ ಅನ್ಯತರವನ್ನು ಪ್ರಯೋಗಿಸುವುದೇ ಭೇದಕಗುಣವು – ಎಂದು ಫಲಿತವಾಯಿತು.

ನ್ಯೂನತೆಯೂ ಇಲ್ಲ. ಅಹಂಕಾರವೂ ಇಲ್ಲ. ತಮ್ಮನ್ನು ತಾವೇ ಹೊಗಳಿಕೊಳ್ಳುವ ಕವಿಗಳ ಆತ್ಮಶ್ಲಾಘನೆಗಿಂತ ಇದೇನು ಅಧಿಕವಾಗಿಲ್ಲ. ಆದ್ದರಿಂದ ಕೇಶಿರಾಜನೂ ಅವನಿಗೆ ಮುಂಚೆ ಇದ್ದ ದುರ್ಗಸಿಂಹನೂ ಹೆಸರಿಸಿದ ಶ್ರೀವಿಜಯನು ನೃಪತುಂಗದೇವನೇ". ಪ್ರೊ॥ ಡಿ.ಕೆ. ಭೀಮಸೇನರಾವ್, 'ಶಬ್ದಮಣಿದರ್ಪಣದ ಪಾಠಾಂತರಗಳು' (೧೯೫೧)(ಪು.– ೪೧–೪೪).

೨೨. "ತಥಾಪಿ ಸ ಕೈಶ್ಚಿದೇವ ಅಂಗೀಕ್ರಿಯತೇ ಉತ್ತರಮಾರ್ಗಾನುಗಾಮಿಭಿಃ ಕವೀಶ್ವರೈಃ ನ ಸರ್ವೈಃ, ದಕ್ಷಿಣಮಾರ್ಗಾನುಯಾಯಿಭಿಸ್ತೈರನಂಗೀಕಾರಾತ್. 'ಏನ್ ಪಕ್ಷಪಾತಿನೋ ಹಿ ದಾಕ್ಷಿಣಾತ್ಯಾಃ ಕವಿಜನಾ ಇತಿ. ದಕ್ಷಿಣೋತ್ತರ ಮಾರ್ಗಭೇದ ಭಿನ್ನ ಪ್ರಯೋಗ ಚಾತುರೀ ಪ್ರಪಂಚೋ ನೃಪತುಂಗ ಗ್ರಂಥೇ ದ್ರಷ್ಟವ್ಯ ಇತಿ" – ಶಬ್ದಾನುಶಾಸನ, ೨೮೮ನೆಯ ಸೂತ್ರದ ವ್ಯಾಖ್ಯಾನ; ಪು.೨೬೩.

೨೩. "It is apparently thought that no quotations from previous literature are to be found in this work (Preface, p.22) the quotations under Prasa, etc., being interpolations (foot note, p.-22) But it has to be noticed that one merit in Kannada Lakshnagranthas is a careful and meticulous use of quotations from older writers by way of illustrations to rules and `Nripatunga', whoever he is, is no exception" (Q.J.M.S., Vol. XXIII, no.3, pp.438-39) (ಈ ಉದ್ಧರಣದಲ್ಲಿ ನಿರ್ದೇಶಿಸಿರುವ ಪುಟ ಸಂಖ್ಯೆ ಮದ್ರಾಸು ಮುದ್ರಣವನ್ನು ಕುರಿತದ್ದು. –ಸಂ.)

೨೪. 'ಇವು ನಿಯತಂ ದಕ್ಷಿಣದೇಶವರ್ತಿ ಕವಿರಾಜಮಾರ್ಗದೊಳ್‌ನೆಗಟ್ಟುಂ ಮತ್ತವಱ ವಿಪರ್ಯಯ ವೃತ್ತಿಯೆ ಬವರಿಸುಗುಮುದೀಚ್ಯ ಮಾರ್ಗದೊಳ್ ಪ್ರಚುರತೆಯಿಂ II' (ಕಾವ್ಯಾವಲೋಕನ, ಸೂ.೧೨೪). 'ಇವು (ಎಂದರೆ ಈ ಹತ್ತು ಗುಣಗಳು) ದಕ್ಷಿಣ ದೇಶದಲ್ಲಿ ವರ್ತಿಸುವ (ಎಂದರೆ ರೂಢಿಯಾಗಿರುವ) ಕವಿಶ್ರೇಷ್ಠರ ಮಾರ್ಗದಲ್ಲಿ ನಿಯತವಾಗಿ ಕಂಡುಬರುತ್ತವೆ; ಅವುಗಳ ವಿಪರ್ಯಯ ಪ್ರಯೋಗವೆ ಉತ್ತರಮಾರ್ಗದಲ್ಲಿ ವಿಶೇಷವಾಗಿ ಸಲುವಳಿಯಾಗುತ್ತವೆ.' ಇದು ಪದ್ಯದ ತಾತ್ಪರ್ಯ. ಇಲ್ಲಿ ಕಾವ್ಯಾವಲೋಕನಕಾರ 'ದಕ್ಷಿಣ ದೇಶವರ್ತಿ ಕವಿ ರಾಜಮಾರ್ಗ', 'ಉದೀಚ್ಯ ಮಾರ್ಗ' ಎಂಬುವನ್ನು ೧೨೫ನೆಯ ಸೂತ್ರದಲ್ಲಿ 'ವೈದರ್ಭಗೌಡಮಾರ್ಗ' ಎಂದೇ ಸ್ಪಷ್ಟಪಡಿಸಿದ್ದಾನೆ. 'ದಕ್ಷಿಣ ದೇಶವರ್ತಿ ಕವಿರಾಜಮಾರ್ಗ' ಎಂಬ ಮಾತಿಗೆ 'ದಕ್ಷಿಣ ದೇಶದಲ್ಲಿ ಪ್ರಚುರವಾಗಿರುವ ಕವಿಶ್ರೇಷ್ಠರ ಕಾವ್ಯಮಾರ್ಗ' ಎಂದು ಅರ್ಥಮಾಡಬೇಕು. ಆದ್ದರಿಂದ "... ಇವು ನಿಯತಂ ದಕ್ಷಿಣದೇಶವರ್ತಿ ಕವಿರಾಜಮಾರ್ಗದೊಳ್ ನೆಗಟ್ಟಂ' ಎಂದಿರುವುದರಿಂದ (ನಾಗವರ್ಮನು) 'ಕವಿರಾಜಮಾರ್ಗ' ಗ್ರಂಥವನ್ನೂ ಓದಿರುವುದು

accusative is noted by Kesiraja: Sutra ೧೧೮ example: ತನತ್ತು ಬಿಲ್ಲಾನದನಂತೆ ಕೀಸುವಂ (Nripatunga himself in II–೧೫,೧೬, ೧೭, ೩೬೨, See also II -.೧೦೪, p.೫೪) (೩೬೨ ಪದ್ಯ ಸಂಖ್ಯೆ ತಪ್ಪಾಗಿ ಅಚ್ಚಾಗಿರುವ ಹಾಗೆ ಕಾಣುತ್ತದೆ. ಉಳಿದವು ಮದರಾಸು ಮುದ್ರಣದಲ್ಲಿರುವಂತೆ – ಸಂ.) A Curious trace of this is preserved in Kesiraja: Sutra ೬೧, Parishad pp.೪೮–೪೯. ಬಗೆವೊಡಮಿನಿಸಿನಿಸಿರ ಅದೆ, ಇರ,ಅದೆ, ಇರಾದೆ, ಇರದೆ," (Q.J.M.S., Vol.XXIII New Series No.೩; p. ೪೩೯) (I–೧೨೮ನೆಯ ಪದ್ಯ ಸಂಬಂಧವಾಗಿ ನಮ್ಮ ಟಿಪ್ಪಣಿಯನ್ನು ನೋಡಿ: ಪು.೧೭೯, ಈ ಪದ್ಯ ಗೌರವದೋಷಕ್ಕೆ ಉದಾಹರಣೆಯಾಗಿರದೆ, ನಿಜವಾಗಿ ಲಘುದೋಷಕ್ಕೆ ಉದಾಹರಣೆ ಎಂಬ ನಮ್ಮ ಊಹೆ ಸರಿಯಾಗಿರುವ ಪಕ್ಷಕ್ಕೆ ದೀರ್ಘ ಆಕಾರವನ್ನುಳ್ಳ ನಿಷೇಧಾತ್ಮಕ (ಬಾರಾದೆ ಇತ್ಯಾದಿ) ಕ್ರಿಯಾ ರೂಪಗಳು ಕವಿರಾಜಮಾರ್ಗಕಾರನಿಗೂ ಸಮ್ಮತವೆಂದಾಗುತ್ತದೆ. –ಸಂ.)

ಈ ಭೇದಕ್ಕೆ ತಮಿಳಾಗಲಿ ತೆಲುಗಾಗಲಿ ಕಾರಣವೆಂದು ಹೇಳಲು ಆಧಾರವಿಲ್ಲ. ಆದುದರಿಂದ ಅತ್ಯಲ್ಪವಾಗಿಯೂ ಅಮುಖ್ಯವಾಗಿಯೂ ಇರುವ ಭೇದವನ್ನು ಆಧಾರವಾಗಿಟ್ಟುಕೊಂಡು ದಕ್ಷಿಣೋತ್ತರ ಮಾರ್ಗಗಳಿಗಾಗಿ ಈಗ ಹೋರಾಡುವುದು ಅಷ್ಟು ಪ್ರಯೋಜನಕಾರಿಯಲ್ಲ" (ಕವಿಚರಿತೆ, ಸಂಪುಟ ೨ರ ಅವತರಣಿಕೆ, ಪು. ೨೩–೨೫).

೨೬. "... ಕನ್ನಡ, ತೆಲುಗು, ತಮಿಳು – ಈ ಮೂರೂ ಒಂದೇ ಮೂಲಭಾಷೆಯಿಂದ ಹುಟ್ಟಿದ್ದುವಾದ್ದರಿಂದ ತೆಲುಗು ತಮಿಳುಗಳ ಸಂಪರ್ಕದಿಂದಲೇ ಉತ್ತರ ದಕ್ಷಿಣ ಮಾರ್ಗಭೇದವುಂಟಾಯಿತೆಂಬ ವಾದವು ಸಮರ್ಪಕವಾದುದಲ್ಲ. ಹಿಂದೆಯೇ ಹೇಳಿದಂತೆ ದೇಶವಿಸ್ತಾರದಿಂದ ಪೂರ್ವದಲ್ಲಿಯೂ ಪ್ರಾಂತಭೇದವಿತ್ತೆಂದು ಸ್ಥೂಲವಾಗಿ ಒಪ್ಪಿಕೊಳ್ಳಬಹುದು. ಆ ವ್ಯತ್ಯಾಸವು ಇಂಥದೇ ಎಂದು ನಿರ್ಧರಿಸುವುದಕ್ಕೆ ಪ್ರಯತ್ನಿಸುವುದು ಪ್ರಕೃತಸ್ಥಿತಿಯಲ್ಲಿ ಸಾಹಸಕಾರ್ಯವೆಂದು ತೋರುತ್ತದೆ." (ಕನ್ನಡ ಕೈಪಿಡಿ, ಪ್ರಥಮ ಸಂಪುಟ, ಪು.೩೬೫).

೨೭. ಮಱಗು (೧–೫೮); ಉಲ್ಲಿಂ, ಉ (೧–೬೩) ಉಂತೆ (೩–೧೦೫); ಅಟ್ಟೆಯ, ಅನುಕ್ರಮೋಕ್ತಿಯೆ (೧–೮೫, ೮೭); ಅದರಱೆಯೆ (೧–೮೭); ನೋಟ್ಟಿಗ (=ನೋಡಲಿ)(೧–೮೯); ಈ ತೆಱತ್ತು, ಎರಟ್ಟೆಱತ್ತು (೧–೧೦೧, ೧೧೪); ನೋಡಲಿಂ (೧–೧೨೨), ಕಲ್ಲದರಿಂ (೨–೧೩); ಬಾರಾದೆ, ಬಗೆಯಾದೆ, ತಡೇದಾನ್, ಅವನಾನ್, ಅಟ್ಟಿದೇನ್ (೧–೧೨೮); ಸಯ್ (=ಸಾಯ್)(೧–೧೩೦); ಒಪ್ಪುವವಳಾನ್ (೨–೧೪೫); ಗುಣಂಗಳಾನ್ (೩–೧೨); ಮತ್ತು ೨–೧೭, ೧೮ರಲ್ಲಿನ ಇಂಥವೇ ಪ್ರಯೋಗಗಳು; ಅಪ್ಪೊನ್ (೨–೧೪೮); ಕಿರಿ (೩–೧೪೪).

ಮೇಲ್ಕಂಡ ಪ್ರಯೋಗಗಳಲ್ಲಿ ಕೆಲವುಗಳ ಬಗೆಗೆ ಬಿ.ಎಂ.ಶ್ರೀ. ಅವರ ಅಭಿಪ್ರಾಯ ಗಮನಾರ್ಹ:

"In st.128 he gives examples of ಗೌರವ ದೋಷ, making a syllable long when it should be short. These are: ಬಗೆಯಾದ for ಬಗೆಯದೆ ಅವನಾನ್ for ಅವನನ್, ಅಟ್ಟಿದೇನ್ for ಅಟ್ಟಿದೆನ್, ಬಾರಾದೆ (the true reading which satisfies the metre) for ಬಾರದೆ (which is the corrupt reading apparently corrected by a copyist), ತಡೆದಾನ್ for ತಡೆದನ್. These especially the negative forms of the verb, are taken even by the author of Kavirajamarga as errors, and as objectionable, when really the negative forms were the older forms found in inscriptions and nearer the Tamil forms which still persist to our own days. The older forms in the

(೪) ಮಣಿ(ವಿ)ಭೂಷಣ: ಅಪ್ಪುದಾಮಣಿವಿಭೂಷಣಮೇ ರನಭಂಭರಂ.
I–೧೨೬, ೧೨೭, ೧೨೮, ೧೨೯, ೧೩೧, ೧೩೨, ೧೩೪; III–೨೨೦, ೨೨೪; ಒಟ್ಟು: ೯.

(೫) ಮಾಲಿನೀ: ನನಮಯಯಗಣಂಗಳ್ ಮಾಲಿನೀವೃತ್ತಮಕ್ಕುಂ.
II–೧೫೪; III–೨೦೯, ೨೧೦, ೨೧೧, ೨೧೨, ೨೧೩, ೨೧೪, ೨೧೫, ೨೧೬; ಒಟ್ಟು: ೯.

(೬) ಮಂಗಳ: ನಭಜ ಜಂಜಗಮುಮೊಂದಿರಲಪ್ಪುದು ಮಂಗಳಂ.
I–೧೩೦, ೧೩೩, ೧೩೫, ೧೩೬; III–೨೨೧, ೨೨೨; ಒಟ್ಟು: ೬.

(೭) ವಿಧಿವೃತ್ತ: ಸಜಸಂಸಯಂ ನೆರೆದಿರಲ್ ವಿಧಿವೃತ್ತಮಕ್ಕುಂ.
III–೨೨೬, ೨೨೭, ೨೨೮, ೨೨೯; ಒಟ್ಟು: ೪.

(೮) ಪುಷ್ಪಿತಾಗ್ರ: ಇದು ಅರ್ಧಸಮವೃತ್ತ. ಇದರ ವಿಷಮಪಾದಗಳಲ್ಲಿ ನನರಯ ಗಣಗಳೂ, ಸಮಪಾದಗಳಲ್ಲಿ ನಜಜರಗಣಗಳೂ ಒಂದು ಗುರುವೂ ಬರುವುವು.
I–೧೪೭, ೧೪೮; III–೨೩೦; ಒಟ್ಟು: ೩.

(೯) ಮತ್ತೇಭವಿಕ್ರೀಡಿತ: ಸಭರಂ ನಂ ಮಯಲಂಗಮುಂ ಬಗೆಗೊಳಲ್ ಮತ್ತೇಭ ವಿಕ್ರೀಡಿತಂ.
I–೧೫೦; III–೨೩೧; ಒಟ್ಟು: ೨.

(೧೦) ಶಾರ್ದೂಲವಿಕ್ರೀಡಿತ: ಕಣ್ಗೊಪ್ಪಲ್ ಮಸಜಂಸತಂತಗಮುಮಾ ಶಾರ್ದೂಲ ವಿಕ್ರೀಡಿತಂ.
II–೧೪೨; ೧.

(೧೧) ವೀರವೃತ್ತ: ವೀರವೃತ್ತಮಿರಲ್ ರಸಸಂಲಗಂ.
I–೧೪೦; ೧.

(೧೨) (ಅನುಷ್ಟುಪ್) ಶ್ಲೋಕ: II–೧೧೨ ರಿಂದ ೧೩೬; ೧೩೯ ರಿಂದ ೧೪೧; ಒಟ್ಟು ೨೮.
ಸಂಸ್ಕೃತದ ಅನುಷ್ಟುಪ್ ಶ್ಲೋಕದಲ್ಲಿ (೮+೮=೧೬) ಹದಿನಾರು ಅಕ್ಷರಗಳ ಎರಡು ಪಾದಗಳು. ಮಾರ್ಗಕಾರನು ಇದನ್ನು ಕನ್ನಡದ ಜಾಯಮಾನಕ್ಕೆ ಹೊಂದಿಸಲು ಆದಿಪ್ರಾಸವನ್ನೂ, ೮ ಅಕ್ಷರಗಳಾದ ಮೇಲೆ ಒಳಪ್ರಾಸವನ್ನೂ ಯೋಜಿಸಿರುವುದನ್ನು ಗಮನಿಸಬೇಕು.

## ೩. ಮಾತ್ರಾವೃತ್ತ

ಕಂದ: ಒಟ್ಟು ೪೧೩+೫(ಕಂದ ಪದ್ಯವನ್ನು ಸುಲಭವಾಗಿ ಗುರುತಿಸಬಹುದಾದ್ದರಿಂದ ಪರಿಚ್ಛೇದ – ಪದ್ಯಸಂಖ್ಯಾನುಗುಣವಾಗಿ ಅವನ್ನು ಇಲ್ಲಿ ನಿರ್ದೇಶಿಸಿಲ್ಲ. ಒಟ್ಟು ಪದ್ಯ

# ಪರಿಶಿಷ್ಟ

## ಅ. ಕವಿರಾಜಮಾರ್ಗದಲ್ಲಿ ಬಳಕೆಯಾಗಿರುವ ಛಂದಸ್ಸುಗಳು

### ೧.ಛಂದಸ್ಸುಗಳ ಸಂಖ್ಯಾ ವಿವರ

ಪರಿಚ್ಛೇದ I: ಒಟ್ಟು ಪದ್ಯಸಂಖ್ಯೆ: ೧೫೦–ಕಂದ ೧೧೦; ವೃತ್ತ ೩೬; ಗೀತಿಕೆ ೪

ಪರಿಚ್ಛೇದ II: ಒಟ್ಟು ಪದ್ಯಸಂಖ್ಯೆ: ೧೫೫–ಕಂದ ೯೬; ವೃತ್ತ ೧೫; ಗೀತಿಕೆ ೧೬; ಶ್ಲೋಕ ೨೮

ಪರಿಚ್ಛೇದ III: ಒಟ್ಟು ಪದ್ಯಸಂಖ್ಯೆ: ೨೩೧–ಕಂದ ೨೦೭; ವೃತ್ತ ೨೦; ಗೀತಿಕೆ ೪ (ಮದರಾಸು ಪ್ರತಿಯಲ್ಲಿ ಮಾತ್ರ ಇದೆಯೆಂದು ಹೇಳಲಾದ ಒಂದು ಕಂದವನ್ನು ಬಿಡಲಾಗಿದೆ.)

ಅಧಿಕ ಪಾಠ: ಕಂದ ೫

ಗ್ರಂಥದ ಒಟ್ಟು ಪದ್ಯ ಸಂಖ್ಯೆ: ೫೩೬+೫. ಇವುಗಳಲ್ಲಿ, ಕಂದ ೪೧೩+೫; ವೃತ್ತ ೭೧; ಶ್ಲೋಕ ೨೮; ಗೀತಿಕೆ ೨೪.

### ೨. ವರ್ಣವೃತ್ತಗಳ ವಿವರ

(೧) ಚಂಪಕಮಾಲೆ: ನಜಭಜ ಜಂಜರಂ ಬಗೆಗೊಳುತ್ತಿರೆ ಚಂಪಕಮಾಲೆ ಯೆಂದಪರ್.
I–೧೧೫, ೧೧೬, ೧೨೦, ೧೨೧, ೧೨೨, ೧೨೩, ೧೨೪, ೧೪೯; II–೧೦೪, ೧೦೫, ೧೦೬, ೧೦೭, ೧೦೮, ೧೦೯, ೧೧೦; ಒಟ್ಟು ೧೫.

(೨) ಉತ್ಪಲಮಾಲೆ: ಉತ್ಪಲಮಾಲೆಯಪ್ಪುದು ಭ ರ ಂ ನ ಭ ಭ ಂ ರ ಲ ಗ ಂ ನೆಗಟ್ದಿರಲ್
I–೧೧೩,೧೧೪, ೧೧೭, ೧೧೮, ೧೧೯; II–೯೯, ೧೦೦, ೧೦೧, ೧೦೨, ೧೦೩, ೧೫೫, ಒಟ್ಟು: ೧೧.

(೩) ದ್ರುತವಿಲಂಬಿತ: ದ್ರುತವಿಲಂಬಿತಮೊಪ್ಪೆನಭಂ ಭರಂ.
I–೧೩೮, ೧೩೯, ೧೪೧, ೧೪೨, ೧೪೩, ೧೪೪, ೧೪೫, ೧೪೬; III–೨೧೮, ೨೧೯; ಒಟ್ಟು: ೧೦

| ೨ | ೬ |
|---|---|
| ವಿ । ಬ್ರ । ರು ॥ | ವಿ । ವಿ। ಬ್ರ । ರು ॥ |
| ೨ | ೬ |
| ಬ್ರ । ಬ್ರ । ರು ॥ | ವಿ । ವಿ। ಬ್ರ । ವಿ (ರು?) |

ಏಳೇಳು ಗಣದ ಎರಡು ಪಾದ ಮಾತ್ರ, ನಾಲ್ಕನೆಯ ಗಣದಲ್ಲಿ ಒಳಪ್ರಾಸ, ಕಡೆಯಲ್ಲಿ ರುದ್ರ, ಮಿಕ್ಕ ಕಡೆ ವಿಷ್ಣು, (ರುದ್ರಪರ್ಯಾಯಗಣ), ೨, ೬ ರಲ್ಲಿ ಬ್ರಹ್ಮ ಎಂದು ಹೇಳಬಹುದೆ? ಗೀತಿಕೆ ಎಂಬುದರಿಂದ ಸಾಂಗತ್ಯ ಸಂಬಂಧಿಯಾಗಿರಬಹುದೆ?'

(ii) ಗೀತಿಕೆಯನ್ನು ಕುರಿತು ಡಾ॥ ಡಿ.ಎಸ್. ಕರ್ಕಿಯವರು ತಮ್ಮ 'ಛಂದೋವಿಕಾಸ'ದಲ್ಲಿ (ಪು. ೧೫೧–೧೫೨), "ಗೀತಿಕೆಯ ಲಕ್ಷಣವು ನಿರ್ದಿಷ್ಟವಾಗಿ ನಿರೂಪಿಸಲ್ಪಟ್ಟಿಲ್ಲ. ಅದರ ಗಣಯೋಜನೆಯು ಖಚಿತವಾಗಿದ್ದಂತೆ ತೋರುವುದಿಲ್ಲ" ಎಂದು ಹೇಳಿ, ನಾಗವರ್ಮನ ಲಕ್ಷಣ ನಿರೂಪಣೆಯೂ, ಅನಿರ್ದಿಷ್ಟವೆಂದು ಸೂಚಿಸಿ, ಜಯಕೀರ್ತಿ ತನ್ನ 'ಛಂದೋನುಶಾಸನ'ದಲ್ಲಿ ಹೇಳುವ ಗೀತಿಕೆಯ ಲಕ್ಷಣವನ್ನು ಹೀಗೆ ತಿಳಿಯಪಡಿಸಿದ್ದಾರೆ: "ಜಯಕೀರ್ತಿಯು ಹೇಳುವ ಗೀತಿಕೆಯ ಲಕ್ಷಣದಲ್ಲಿ ಒಂದಿಷ್ಟು ವಿವರಗಳು ಕಾಣುವವೇನೋ ನಿಜ. ಆದರೆ ಅಲ್ಲಿಯೂ ಲಯದ ಸುಳುಹು ಸಂಪೂರ್ಣವಾಗಿ ಸಿಕ್ಕುವುದಿಲ್ಲ. ಗೀತಿಕೆಯ ಪ್ರತಿ ಅರ್ಧದ ೨ನೆಯ ಮತ್ತು ೬ನೆಯ ಗಣಗಳು ಬ್ರಹ್ಮಗಣಗಳಾಗಿರಬೇಕೆಂದೂ ಉಳಿದ ಗಣಗಳು ಲಯಕ್ಕೆ ಹೊಂದಿಕೆಯಾಗುವಂತೆ ವಿಷ್ಣು ಅಥವಾ ರುದ್ರಗಣಗಳಾಗಿರಬೇಕೆಂದೂ ಅವನು ಅಭಿಪ್ರಾಯ ಪಡುತ್ತಾನೆ."

ಇನ್ನು ಕವಿರಾಜಮಾರ್ಗದ (೨೪) ಗೀತಿಕೆಗಳಲ್ಲಿ ಕೆಲವನ್ನು ಪರಿಶೀಲಿಸಿ ನೋಡಲಾಗಿ, ಪ್ರತಿ ಎರಡು ಪಾದಗಳ ಒಂದೊಂದು ಘಟಕದಲ್ಲಿಯೂ ಏಳೇಳು ಗಣದ ನಿಯಮವೇನೋ ಸ್ಥೂಲವಾಗಿ ಗೋಚರಕ್ಕೆ ಬರುತ್ತದೆ. (ಗಣಸಂಖ್ಯೆ ಹೆಚ್ಚಿರುವುದೂ ಉಂಟು. ಉದಾ: III–೨೨೩). ಸರ್ವಸಾಮಾನ್ಯವಾಗಿ ವಿಷ್ಣುಗಣಗಳೂ ಪರ್ಯಾಯವಾಗಿ ಅನಿಯತ ಸ್ಥಳಗಳಲ್ಲಿ ಬ್ರಹ್ಮ ಅಥವಾ ರುದ್ರಗಣವೂ ಪ್ರಯೋಗವಾಗಿರುವುದು ಕಂಡು ಬರುತ್ತದೆ. ಉದಾಹರಣೆಯಾಗಿ ಗ್ರಂಥದಲ್ಲಿ ಮೊತ್ತ ಮೊದಲು ಕಣ್ಣಿಗೆ ಬೀಳುವ ಗೀತಿಕೆಯ ಲಕ್ಷಣವನ್ನು ಪರಿಶೀಲಿಸಬಹುದು:

ಸಂಖ್ಯೆಯಲ್ಲಿ ಸು.೪–೫ರಷ್ಟು ಕಂದಪದ್ಯಗಳಿರುವುದು ಗಮನಾರ್ಹ.) ಲಕ್ಷಣ: "ಚತುರ್ಮಾತ್ರಾಗಣವು ಒಂದು ಮೂರನೆಯ ಪಾದಗಳಲ್ಲಿ ಮೂರು ಮೂರೂ, ಎರಡು ನಾಲ್ಕನೆಯ ಪಾದಗಳಲ್ಲಿ ಐದೈದೂ ಇರಬೇಕು. ಇದರ ಪೂರ್ವೋತ್ತರಾರ್ಧಗಳ (೧–೩–೫–೭ನೆಯ) ವಿಷಮಸ್ಥಾನಗಳಲ್ಲಿ ಮಧ್ಯಗುರುವುಳ್ಳ (U-U) ಗಣಗಳು ಬರಕೂಡದು. ಆರನೆಯ ಸ್ಥಾನದಲ್ಲಿ (U-U) 'ಜ' ಗಣವಾಗಲಿ ನಾಲ್ಕು ಲಘುವುಳ್ಳ (UUUU) ಗಣವಾಗಲಿ ಬಂದು ಮೊದಲಿನ ಹ್ರಸ್ವದ ಮುಂದೆ ಯತಿ ಇರಬೇಕು." ಕವಿರಾಜಮಾರ್ಗಕಾರನೂ ಕಂದಪದ್ಯಕ್ಕೆ ಯತಿ ನಿಯಮವನ್ನು ವಿಧಿಸಿದ್ದಾನೆ. (ನೋಡಿ: I–೭೭). ಮುಂದಿನ ಚಂಪೂ ಕಾವ್ಯಗಳಲ್ಲಿ ವೃತ್ತಗಳ ಬಳಕೆಗಿಂತಗ ಕಂದಕ್ಕೇ ಹೆಚ್ಚಿನ ಪ್ರಾಧಾನ್ಯ ಸಂದಿರುವುದಕ್ಕೆ ಮಾರ್ಗಕಾರನ ಮೇಲ್ಪಂಕ್ತಿಯೂ ಕಾರಣವಾಗಿರಬಹುದೆ?

## ೪. ಕನ್ನಡ ಛಂದಸ್ಸು : ಗೀತಿಕೆ

ನಾಗವರ್ಮನ ಪ್ರಕಾರ ಗೀತಿಕೆಯ ಲಕ್ಷಣ:

೨
ಎರಡಜೊ । ಳಾಜೆಂ । ಬ ಸಂಖ್ಯೆಯೊಳ್ । (ಬಾ?)
೬
ಬರೆ ಪದ್ಮ । ಭವನುಟಿ । ದುವು ಮೆ ।ಚ್ಚುವ ತೆರದಿಂ ।
೨
ದಿರೆ ಮುಂ ।ದಣ ಪ। ದಂ ಮುನ್ನಿನಂ ।
೬
ತಿರೆ ಕರಂ । ಗೀತಿಕೆ । ಯಿಂತ ।ಕ್ಕುಂ ಸಖೀ ।

(i) ಈ ಪದ್ಯದ ಬಗೆಗೆ ಕನ್ನಡ ಕೈಪಿಡಿಯ ಟಿಪ್ಪಣಿ : "ಎರಡನೆಯ ಪಾದದಲ್ಲಿ 'ಬರೆ ಬ್ರಹ್ಮನುಳಿದೆಡೆಗಳೊಳು ವಿಷ್ಣುಮುಂ' ಎಂದೂ ಮೂರನೆಯ ಪಾದದಲ್ಲಿ 'ಒಪ್ಪುವ ಗೀತಗಣಂ' 'ಗೀತಿಕೆಗೇಳುಗಣಮಕ್ಕುಂ' ಎಂದೂ ಪಾಠಾಂತರಗಳಿವೆ. ಇದ್ದ ಹಾಗೆ ನೋಡಿದರೆ:–

ಕವಿರಾಜಮಾರ್ಗದಲ್ಲಿ ಗೀತಿಕೆಗಳ ಪ್ರಯೋಗದಲ್ಲಿ ಕಂಡುಬರುವ ಗಮನಾರ್ಹ ಸಂಗತಿ ಎಂದರೆ, ಹೇಳಿಕೆಗಳ ಲಕ್ಷ್ಯಗಳನ್ನು (II, ೧೧೪-೧೫೨) ಹೊರತುಪಡಿಸಿದರೆ, ವಿಶೇಷವಾಗಿ ಒಂದು ನಿರ್ದಿಷ್ಟ ಪ್ರಕರಣಾಂತ್ಯದಲ್ಲಿ ಉಪಸಂಹಾರ ವಾಕ್ಯವಾಗಿಯೂ, ಕ್ವಚಿತ್ತಾಗಿ ಪ್ರಕರಣಾದಿಯ ಪ್ರತಿಜ್ಞಾ ವಾಕ್ಯವಾಗಿಯೂ ಗೀತಿಕೆಯನ್ನು ಬಳಸಿರುವುದು ಕಂಡು ಬರುತ್ತದೆ.

ಗೀತಿಕೆಯ ಛಂದಸ್ಸು ನಿಷ್ಕೃಷ್ಟವಾಗಿ ತಿಳಿಯದ ಕಾರಣ, ಗೀತಿಕೆಗಳಲ್ಲಿನ ಪಾಠದೋಷಗಳನ್ನು ಛಂದಸ್ಸಿನ ಆಧಾರ ಮೇಲೆ ಗುರುತಿಸಿ, ಪಾಠ ಪರಿಷ್ಕರಣಮಾಡುವುದು ಕಷ್ಟಸಾಧ್ಯವೆಂದೇ ಹೇಳಬೇಕು.

(I–೧೩೦, ೧೩೫, ೧೩೬, ೧೪೦; II–೧೪೨; III–೨೨೦, ೨೨೧, ೨೨೪, ೨೨೬, ೨೨೭, ೨೨೮,೨೨೯, ೨೩೧, – ಈ ವೃತ್ತಗಳ ಹೆಸರುಗಳೂ ಲಕ್ಷಣವೂ ಯಾವ ಛಂದೋಗ್ರಂಥದಲ್ಲಿಯೂ ದೊರಕಲಿಲ್ಲವೆಂದು ಮದರಾಸು ಮುದ್ರಣದ ಸಂಪಾದಕರು ಸಂಬಂಧಪಟ್ಟ ಪದ್ಯಗಳ ಅಡಿ ಟಿಪ್ಪಣಿಗಳಲ್ಲಿ ತಿಳಿಸಿರುತ್ತಾರೆ. ಒಂದೆರಡು ವೃತ್ತಗಳ ನಾಮನಿರ್ದೇಶ ಸರಿಯಾಗಿರಲಿಲ್ಲ. ಈ ವೃತ್ತಗಳಿಗೆಲ್ಲಾ ಗಣಪ್ರಸಾರ ಹಾಕಿ ಕೂಲಂಕಷವಾಗಿ ಪರಿಶೀಲಿಸಲಾಗಿ, ಇವೆಲ್ಲವುಗಳ ಹೆಸರುಗಳೂ ಲಕ್ಷಣವೂ ಕನ್ನಡ ಕೈಪಿಡಿಯಲ್ಲಿಯೆ ದೊರೆತವು. ಈ ಸಂದರ್ಭದಲ್ಲಿಯ, I–೧೪೭ ರ ಮತ್ತು I–೧೪೮ ರ ೨ನೆಯ, ೪ನೆಯ ಪಾದಗಳಲ್ಲಿ ಅರ್ಥಪ್ರತೀತಿಯ ದೃಷ್ಟಿಯಿಂದ ಈ ಮೊದಲು ಮಾಡಿದ್ದ ತಿದ್ದುಪಾಟು ಛಂದಸ್ಸಿನ ದೃಷ್ಟಿಯಿಂದ ದೋಷಪೂರ್ಣವಾಗಿ ಕಂಡುಬಂದಿತು. ಈ ಸಂಬಂಧದ ಮರುತಿದ್ದುಪಾಟುಗಳನ್ನು ಶುದ್ಧಾಶುದ್ಧ ಪತ್ರಿಕೆಯಲ್ಲಿ ಕಾಣಿಸಿದೆ. ಈ ಪ್ರಮಾದಕ್ಕಾಗಿ ವಿಷಾದಿಸಬೇಕಾಗಿದೆ. ಈ ಎರಡು ಪದ್ಯಗಳ ಪುನಃಪರಿಷ್ಕರಣದ ಕಡೆಗೆ ನನ್ನ ಗಮನವನ್ನು ಸೆಳೆದದ್ದು, 'ಕನ್ನಡ ನುಡಿ'ಯಲ್ಲಿ ಪ್ರಕಟವಾಗಿದ್ದು, ಈಚೆಗೆ ನನ್ನ ನೆನಪಿಗೆ ಬಂದ 'ಕವಿರಾಜಮಾರ್ಗದ ಎರಡು ವೃತ್ತಗಳು' ಎಂಬ ಲೇಖನ, ಶ್ರೀ ಕೆ.ಪು. ಸೀತಾರಾಮ ಕೆದಿಲಾಯ ಅವರದ್ದು. –ಸಂ.)

– U -   - -   - -       - U -

ಕಾಣನೇ । ಗೆಯ್ದುಂ ತ । ನ್ನ (ನ್ನಾ?) ದೋಷಮಂ ।

– U -   - -   -   - - U   - U U -

ಕಾಣದಂ । ತೆಂದುಂ ಕ । ಣ್ಗಳ್ತಮ್ಮ । ಕಾಡಿಗೆಯಂ ॥

–  U U  - U U  - U U -

ಪೂಣಿಗ । ನಾದುದ । ಱ ಪೆ ಱ ರಿಂ ।

–  U U  -  U U  - U U  - U -

ಜಾಣರಿ । ನೋದಿಸಿ । ಪೇೞ್ವುದು । ಕಬ್ಬಮಂ ।

(ವಿ । ವಿ । ರು ॥ ವಿ । ವಿ । ವಿ । ರು ॥ ವಿ । ವಿ। ರು ॥ ವಿ । ವಿ । ವಿ । ವಿ ॥)

'ಗೀತಿಕೆ' ಹಾಡುವ ಮಟ್ಟು ಎಂಬುದನ್ನು ನೆನೆದರೆ, ಕವಿರಾಜಮಾರ್ಗದ ಕಾಲದಲ್ಲಿ, ಬೇಕಾದಲ್ಲಿ ಎಳೆದು ಬೇಕಾದಲ್ಲಿ ನಿಲ್ಲಿಸಿ ಹಾಡಲನುಕೂಲವಾಗುವಂತೆ ಗಣಯೋಜನೆಯಲ್ಲಿಯೂ ಲಯವಿನ್ಯಾಸದಲ್ಲಿಯೂ ಸ್ವತಂತ್ರಗತಿಯೇ ಇದ್ದಿರ ಬೇಕೆಂದು ಕಾಣುತ್ತದೆ. ಮೇಲ್ಕಂಡ ಪದ್ಯದ ಮೊದಲ ಪಾದಕ್ಕೆ ಹೀಗೂ ಪ್ರಸ್ತಾರ ಮಾಡಬಹುದು:

– U  -  -  -   - U  -  U -

ಕಾಣ । ನೇಗೆಯ್ದುಂ । ತನ್ನ । ದೋಷಮಂ ॥

ಬ್ರ । ವಿ । ಬ್ರ । ವಿ ॥

ಈ ಲಯವಿನ್ಯಾಸದಲ್ಲಿ ಗೀತಗುಣ ಮೊದಲಿಗಿಂತ ಹೆಚ್ಚು ಬಂಧುರವಾಗಿದೆಯೆಂದು ನಮ್ಮೆಣಿಕೆ.

ಇನ್ನೊಂದು ಗೀತಿಕೆಯ (II–೧೪೩) ಪೂರ್ವಾರ್ಧ:

U U U -  -  U  U U -

ಅನುಗತಂ । ಪೂರ್ವ । ಕವಿಗಳ್ ।

U U - -   - -   - U  -  U -

ನೆನೆದಿನ್ನುಂ । ಪೇೞ್ದಿಂ । ದುಷ್ಕ । ರೋಕ್ತಿಯ ॥ ನ್ನನುಗತ –

ವಿ । ಬ್ರ । ವಿ ॥ ವಿ । ಬ್ರ । ಬ್ರ । ವಿ ॥

# ೨. ಕಿರಿಯ ಆವೃತ್ತಿಯ ಪೀಠಿಕೆ

## ೧.ರಚನಾಸಂದರ್ಭ

ಕನ್ನಡ ಸಾಹಿತ್ಯದಲ್ಲಿಯೂ ಕನ್ನಡ ಕಾವ್ಯಮೀಮಾಂಸೆಯ ಬೆಳವಣಿಗೆಯಲ್ಲಿಯೂ ಕವಿರಾಜಮಾರ್ಗಕ್ಕೆ ನಾನಾ ಕಾರಣಗಳಿಂದ ಅತ್ಯಂತ ಮಹತ್ತ್ವದ ಸ್ಥಾನವಿದೆ. ನಮಗೆ ಈವರೆಗೆ ದೊರೆತಿರುವ ಅತ್ಯಂತ ಪ್ರಾಚೀನ ಕನ್ನಡ ಗ್ರಂಥಗಳಲ್ಲಿ ಇದೇ ಮೊದಲನೆಯದು. ಇದು ಕಾವ್ಯಶಾಸ್ತ್ರವನ್ನು ನಿರೂಪಿಸುವ ಸ್ವತಂತ್ರದೃಷ್ಟಿಯ ಲಕ್ಷಣಗ್ರಂಥ; ಆದ್ದರಿಂದ, ಇದು ರಚಿತವಾಗುವ ವೇಳೆಗೆ ಕನ್ನಡ ಸಾಹಿತ್ಯ ಒಂದು ಪ್ರೌಢಾವಸ್ಥೆಯ ಹಂತವನ್ನು ಮುಟ್ಟಿತ್ತು ಎಂದು ಊಹಿಸಬಹುದು. ಏಕೆಂದರೆ, ಲಕ್ಷ್ಯಗಳ ಹಿನ್ನಲೆಯಿಲ್ಲದೆ ಲಕ್ಷಣಗ್ರಂಥ ನಿರ್ಮಾಣವಾಗುವ ಸಂಭವ ಬಹು ಕಡಿಮೆ. ಸಂಸ್ಕೃತ ಲಕ್ಷಣ ಗ್ರಂಥಗಳನ್ನು ಅವಲಂಬಿಸಿ ಕವಿರಾಜಮಾರ್ಗದ ಬಹುಭಾಗವು ರಚಿತವಾಗಿದ್ದರೂ, ಒಂದು ಗಣ್ಯವಾದ ಗ್ರಂಥಭಾಗ ಪೂರ್ವಕಾವ್ಯಗಳನ್ನು ಅನುಲಕ್ಷಿಸಿಯೆ ಸಿದ್ಧವಾಗಿರುವುದು ಗ್ರಂಥದಿಂದಲೇ ವ್ಯಕ್ತಪಡುತ್ತದೆ. ತನ್ನ ಕಾಲದವರೆಗಿನ ಕನ್ನಡ ಕಾವ್ಯಮಾರ್ಗಕ್ರಮಣಪದ್ಧತಿಯ ತಪ್ಪು ಒಪ್ಪುಗಳನ್ನು ಗುರುತಿಸಿ ತಿಳಿಸುವುದರ ಜೊತೆಗೆ, ಕವೀಶ್ವರ (ಅಥವಾ 'ಕವಿರಾಜ') ಎನ್ನಿಸಿಕೊಳ್ಳಬೇಕೆಂಬ ಕವಿಗಳಿಗೆ ಒಂದು ಹೆದ್ದಾರಿಯನ್ನು (ರಾಜಮಾರ್ಗವನ್ನು) ಕಲ್ಪಿಸಿಕೊಡುವ ಘನವಾದ ಉದ್ದೇಶದಿಂದ ರಚಿತವಾದದ್ದು ಈ 'ಕವಿರಾಜ' ರಚಿತವಾದ 'ಕವಿಮಾರ್ಗ'. ಇದು ರಚಿತವಾದದ್ದಾದರೂ ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷ ನೃಪತುಂಗನ ಸಮ್ಮುಖದಲ್ಲಿ; ಆತನ ಸಹಯೋಗದೊಂದಿಗೆ; ಗ್ರಂಥದಲ್ಲಿ ನಿರೂಪಿತವಾಗಿರುವುದು 'ನೃಪತುಂಗದೇವಮಾರ್ಗ'; ಸ್ವತಃ ವಿದ್ವಾಂಸನೂ ಕವಿಯೂ ಕವಿ–ವಿದ್ವಾಂಸರ ಆಶ್ರಯದಾತನೂ ಆಗಿದ್ದ ನೃಪತುಂಗನೂ ಕವಿರಾಜನೇ. ಯಾವ ಮುಖದಿಂದ ನೋಡಿದರೂ 'ಕವಿರಾಜಮಾರ್ಗ' ಎಂಬ ಗ್ರಂಥದ ಹೆಸರು ಸಾರ್ಥಕ.

## ಆ. ಸಂಕ್ಷಿಪ್ತಗಳು

| | |
|---|---|
| ಉದಾ | –ಉದಾಹರಣೆ |
| ಉ.ವಿ.ವಿ.ನಿ. | –ಉಸ್ಮಾನಿಯಾ ವಿಶ್ವವಿದ್ಯಾನಿಲಯ |
| ಕ.ಕಾ. | –ಕನ್ನಡ ಕಾವ್ಯಾಲಂಕಾರ |
| ಕ.ಕೈ. | –ಕನ್ನಡ ಕೈಪಿಡಿ |
| ಕ.ಚ. | –ಕವಿ ಚರಿತೆ |
| ಕ.ಸಾ.ಚ | –ಕನ್ನಡ ಸಾಹಿತ್ಯ ಚರಿತ್ರೆ |
| ಕ.ಸಾ.ಪ; ಪರಿಷತ್ಪತ್ರಿಕೆ | –ಕನ್ನಡ (ಕರ್ಣಾಟಕ) ಸಾಹಿತ್ಯ ಪರಿಷತ್ಪತ್ರಿಕೆ |
| ಕ.(ರಾ.)(ಮಾರ್ಗ)ವಿವೇಕ | –ಕವಿರಾಜಮಾರ್ಗ ವಿವೇಕ |
| ಕಾ.ವ್ಯಾ. | –ಕಾವ್ಯಾವಲೋಕನ |
| ಕಾವ್ಯಾಲಂ. | –ಕಾವ್ಯಾಲಂಕಾರ |
| ಕ್ರಿ.ಶ. | –ಕ್ರಿಸ್ತ ಶಕ |
| ಗದಾಯು.ಸಂ. | –ಗದಾಯುದ್ಧ ಸಂಗ್ರಹ |
| ತ್ಭ | –ತದ್ಭವ |
| ಧಾ. | –ಧಾತು |
| ಪ. | –ಪದ್ಯ |
| ಪು. | –ಪುಟ |
| ಪ್ರ.ಮು. | –ಪ್ರಥಮ ಮುದ್ರಣ |
| ಭಾ.ಕಾ.ಮೀ. | –ಭಾರತೀಯ ಕಾವ್ಯ ಮೀಮಾಂಸೆ |
| ಮ.ಮು. | –ಮದರಾಸು ಮುದ್ರಣ |
| ಮಾರ್ಗಕಾರ | –ಕವಿರಾಜಮಾರ್ಗಕಾರ (=ಶ್ರೀವಿಜಯ) |
| ಶ. | –ಶಾಲಿವಾಹನ ಶಕಾ |
| ಶ.ಮ.ದ. | –ಶಬ್ದಮಣಿದರ್ಪಣ |
| ಶ.ಶಾಸನ | –ಶಬ್ದಾನುಶಾಸನ |
| ಸಂ. | –(ಸಂದರ್ಭಾನುಸಾರ) ಸಂಪಾದಕ; ಸಂಪುಟ; ಸಂಸ್ಕೃತ |
| ಸು. | –ಸುಮಾರು |

ಕವಿರಾಜಮಾರ್ಗ ಕರ್ತೃತ್ವ ವಿಚಾರದಲ್ಲಿ – ೧. ನೃಪತುಂಗಪಕ್ಷ; ೨.ಕವೀಶ್ವರಪಕ್ಷ; ೩.ಶ್ರೀವಿಜಯಪಕ್ಷ ಎಂದು ಮೂರು ಪಕ್ಷಗಳು ಹುಟ್ಟಿಕೊಂಡುವು. ದಿವಂಗತ ನಾ.ಶ್ರೀ ರಾಜಪುರೋಹಿತರು, ದಿವಂಗತ ಡಿ.ಕೆ.ಭೀಮಸೇನರಾಯರು ಮತ್ತು ಈಚೆಗೆ, ಡಾ॥ ಎಸ್.ಸಿ.ನಂದೀಮಠ, ಡಾ॥ ಕೆ.ಕೃಷ್ಣಮೂರ್ತಿ, ಭೀಮರಾವ್ ಚಿಟಗುಪ್ಪಿ – ಇವರುಗಳು ನೃಪತುಂಗಕರ್ತೃತ್ವ ವಾದದ ಪುರಸ್ಕರ್ತರು. ದಿವಂಗತರುಗಳಾದ ಟಿ.ಎಸ್. ವೆಂಕಣ್ಣಯ್ಯ, ಡಾ॥ ಎ.ಆರ್.ಕೃಷ್ಣಶಾಸ್ತ್ರೀ, ಮುಳಿಯ ತಿಮ್ಮಪ್ಪಯ್ಯ, ತೀ.ನಂ.ಶ್ರೀಕಂಠಯ್ಯ; ಮತ್ತು ಡಾ॥ ರಂ.ಶ್ರೀ.ಮುಗಳಿ, ಎಂ.ವಿ.ಸೀತಾರಾಮಯ್ಯ ಡಾ॥ ಎಂ.ಎಂ.ಕಲಬುರ್ಗಿ – ಇವರುಗಳು, ನೃಪತುಂಗ ಸಭಾಸದನಾದ ಶ್ರೀವಿಜಯನು ತನ್ನ ಆಶ್ರಯದಾತನಾದ ನೃಪತುಂಗನ ಅಭಿಮತಾನುಸಾರವಾಗಿ, ಅವನ ಅಂಕಿತಕ್ಕೂ ಬಿರುದಾವಳಿಗೂ ಕೃತಿಯಲ್ಲಿ ಪ್ರಾಮುಖ್ಯವನ್ನು ಕೊಟ್ಟು, ಪರಿಚ್ಛೇದಾಂತ ಪದ್ಯಗಳಲ್ಲಿ ಸೂಚ್ಯವಾಗಿ ತನ್ನ ಹೆಸರನ್ನೂ ಅಡಕಮಾಡಿ ಕೃತಿರಚನೆ ಮಾಡಿದ್ದಾನೆ ಎಂದು ವಾದಿಸಿದ್ದಾರೆ. ಡಾ॥ ಫ್ಲೀಟ್ ಅವರು ಮುಂದಿಟ್ಟ ಕವೀಶ್ವರ ಕರ್ತೃತ್ವವಾದವನ್ನು ಎತ್ತಿಹಿಡಿದವರು – ಮದರಾಸು ವಿಶ್ವವಿದ್ಯಾನಿಲಯಕ್ಕಾಗಿ ಕವಿರಾಜಮಾರ್ಗವನ್ನು ಎರಡನೆಯ ಬಾರಿಗೆ ಪರಿಷ್ಕರಿಸಿ ಸಂಪಾದನೆ ಮಾಡಿದ ದಿವಂಗತ ಎ.ವೆಂಕಟರಾವ್ ಮತ್ತು ಪಂಡಿತ ಎಚ್. ಶೇಷಯ್ಯಂಗಾರ್.

ಕರ್ತೃತ್ವ ನಿರ್ಣಯದಲ್ಲಿ ಯಾವ ಪಕ್ಷದವರೇ ಆಗಲಿ ೧.ಆಂತರಿಕ ಹಾಗೂ ೨.ಬಾಹ್ಯ ಪ್ರಮಾಣಗಳನ್ನು ಅವಲಂಬಿಸಿ ವಾದ ಮಾಡಬೇಕಾಗುತ್ತದೆ; ಅವರು ತಮಗೆ ಅನುಕೂಲವಾದ ಪ್ರಮಾಣಗಳಿಗೆ ಪ್ರಾಮುಖ್ಯ ಕೊಟ್ಟು, ಪ್ರತಿಕೂಲ ಪ್ರಮಾಣಗಳನ್ನು ಉಪೇಕ್ಷೆ ಮಾಡುವುದೋ ಇಲ್ಲವೆ ತಮ್ಮ ವಾದಕ್ಕೆ ಅನುಕೂಲವಾಗುವಂತೆ ತಿರುಗಿಸಿಕೊಂಡು ವಿವರಿಸುವುದೋ ಸಹಜ; ಸಾಧ್ಯ. ಇಲ್ಲಿನ ಪರಿಮಿತ ಅವಕಾಶದಲ್ಲಿ ಎಲ್ಲ ಪ್ರಮಾಣಗಳನ್ನೂ ಪರಿಶೀಲಿಸುವುದು ಸಾಧ್ಯವಿಲ್ಲವಾದ್ದರಿಂದ ಬಹು ಮುಖ್ಯ ಪ್ರಮಾಣಗಳನ್ನು ಮಾತ್ರ ಕೂಡಿದಮಟ್ಟಿಗೂ ವಸ್ತುನಿಷ್ಠವಾಗಿ ಪರೀಕ್ಷಿಸಿ, ಅವು ಯಾವ ಪಕ್ಷಕ್ಕೆ ಹೆಚ್ಚು ಅನುಕೂಲವಾಗಿವೆ ಎಂದು ಕಂಡುಕೊಂಡು, ಕರ್ತೃತ್ವದ ಬಗೆಗೆ ತೀರ್ಮಾನ ಮಾಡುವುದು ಸಕ್ರಮ.

### (I) ಆಂತರಿಕ ಪ್ರಮಾಣಗಳು:

೧.ಮೊದಲ ಪರಿಚ್ಛೇದದ ಮೂರು ಮಂಗಳ ಶ್ಲೋಕಗಳು. ಇವುಗಳ ಪೈಕಿ ಮೊದಲ ಎರಡು ಪದ್ಯಗಳು ವಿಷ್ಣುಸ್ತುತಿ. ಇವುಗಳಲ್ಲಿ ವಿಷ್ಣುವಿಗೂ ನೃಪತುಂಗನಿಗೂ ಅಭೇದವನ್ನು ಕಲ್ಪಿಸಿ ಸ್ತೋತ್ರ ಮಾಡಿದೆ.

ನೃಪತುಂಗನ ಆಳ್ವಿಕೆಯ ಕಾಲ ಕ್ರಿ.ಶ.೮೧೪–೮೭೭. ಚಿಕ್ಕ ವಯಸ್ಸಿನಲ್ಲಿ ಪಟ್ಟಕ್ಕೆ ಬಂದ ನೃಪತುಂಗನು ಒಳ ಹೊರ ಹಗೆಗಳನ್ನೆಲ್ಲಾ ದಮನ ಮಾಡಿ ರಾಜ್ಯವನ್ನು ನಿಷ್ಕಂಟಕವಾಗಿಸಿ, ಕಾವ್ಯ ರಚನೆ ವಿದ್ವಜ್ಜನ ಪ್ರೋತ್ಸಾಹ ಮುಂತಾದ ಶಾಂತಿ ಕಾಲದ ರಚನಾ ಕಾರ್ಯಗಳಿಗೆ ಗಮನ ಕೊಡಲು ಬಹಳ ಕಾಲವೇ ಹಿಡಿಯಿತು. ರಾಜ್ಯವು ಸುಭಿಕ್ಷವಾಗಿದ್ದು, ರಾಜಪ್ರಜೆಗಳು ನೆಮ್ಮದಿಯಿಂದ ಇದ್ದ ಕಾಲದಲ್ಲಿ ಗ್ರಂಥ ರಚನೆ ಯಾಯಿತೆಂದು ಕವಿರಾಜಮಾರ್ಗದ ಕೆಲವು ಪದ್ಯಗಳಿಂದಲೂ ಶಾಸನಗಳ ಆಧಾರದಿಂದಲೂ ಹೇಳಬಹುದು. ಬಹುಜನ ವಿದ್ವಾಂಸರು ಗ್ರಂಥ ರಚನಾ ಕಾಲವನ್ನು ಕ್ರಿ.ಶ. ೮೫೦ ಎಂದು ನಿರ್ಣಯಿಸಿದ್ದಾರೆ; ೮೫೦–೮೭೦ ನಡುವಣ ಅವಧಿಯಲ್ಲಿ ರಚಿತವಾಗಿರಬಹುದೆಂದು ಶಾಸನಾಧಾರಗಳಿಂದ ಊಹಿಸಲು ಅವಕಾಶವಿದೆ.

## ೨. ಕರ್ತೃತ್ವ

ಕವಿರಾಜಮಾರ್ಗವು ೧೮೯೮ರಲ್ಲಿ ಪ್ರಪ್ರಥಮವಾಗಿ ಕೆ.ಬಿ.ಪಾಠಕರಿಂದ ಸಂಪಾದಿತವಾಗಿ ಪ್ರಕಟವಾದಂದಿನಿಂದ ಈವೊತ್ತಿನವರೆಗೂ ಗ್ರಂಥಕರ್ತೃ ಯಾರು ಎಂಬ ಬಗೆಗೆ ವಾದವಿವಾದಗಳು ನಡೆಯುತ್ತಲೇ ಇವೆ. ಅವರ ನಿರ್ಣಯದ ಪ್ರಕಾರ ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗ ಅದರ ಕರ್ತೃ. ಡಾ॥ ಜೆ.ಎಫ್.ಫ್ಲೀಟ್ ಎಂಬ ಪಾಶ್ಚಾತ್ಯ ವಿದ್ವಾಂಸನು (೧೯೦೪ರಲ್ಲಿ) 'ಇಂಡಿಯನ್ ಆಂಟಿಕ್ವೆರಿ'ಯಲ್ಲಿ 'ಕವೀಶ್ವರನ ಕವಿರಾಜಮಾರ್ಗ' ಎಂಬ ಲೇಖನವನ್ನು ಬರೆದು, ಗ್ರಂಥಕರ್ತ ನೃಪತುಂಗ ಸಭಾಸದನಾದ 'ಕವೀಶ್ವರ' ಎಂಬ ವಾದವನ್ನು ಮಂಡಿಸಿದರು. ಕವಿಚರಿತೆಕಾರರಾದ ಆರ್.ನರಸಿಂಹಾಚಾರ್ಯರು ಕವಿಚರಿತೆಯ ಪ್ರಥಮ ಸಂಪುಟದಲ್ಲಿ – "ಯದ್ಯಪಿ ಈ ಗ್ರಂಥವು ನೃಪತುಂಗ ಕೃತವೆಂದು ಪ್ರತೀತಿಯಿದ್ದರೂ ಶ್ರೀವಿಜಯಕೃತವೋ ಎಂದು ಸಂದೇಹ ಪಡುವುದಕ್ಕೆ ಅವಕಾಶವಿದೆ" ಎಂದು ಹೇಳಿ, ಹಾಗೆ ಹೇಳಲು ಸಾಧಕಗಳಾದ ಕೆಲವು ಗ್ರಂಥಸ್ಥ ಪ್ರಮಾಣಗಳನ್ನೂ ಬಾಹ್ಯ ಪ್ರಮಾಣಗಳನ್ನೂ ಸೂಚಿಸಿದರು. "ಆದರೆ, ಈ ವಿಷಯದಲ್ಲಿ ಹೀಗೆಯೇ ಸರಿ ಎಂದು ನಿಶ್ಚಯಿಸಲಾಗುವುದಿಲ್ಲ. ಒಂದು ವೇಳೆ ನೃಪತುಂಗನಿಗೆ ಶ್ರೀವಿಜಯ ಎಂಬ ಬಿರುದೂ ಇದ್ದಿರಬಹುದು ಎಂದರೆ ಅದಕ್ಕೆ ಶಾಸನಗಳಲ್ಲಿಯಾಗಲಿ ಈ ಗ್ರಂಥದಲ್ಲಿಯಾಗಲಿ ಆವ ಆಧಾರವೂ ಸಿಕ್ಕುವುದಿಲ್ಲ." ಎಂದು ಕರ್ತೃತ್ವ ವಿಚಾರವನ್ನು ಅನಿಶ್ಚಿತವಾಗಿಯೇ ಉಳಿಸಿದರು. ಆದರೂ, ತಮ್ಮ ಆಮೇಲಿನ ಬರಹಗಳಲ್ಲಿ 'ನೃಪತುಂಗನ ಕವಿರಾಜಮಾರ್ಗ' ಎಂದು ಉಲ್ಲೇಖಿಸಿದರು. ಹೀಗೆ,

ಆಕಸ್ಮಿಕ ಇಲ್ಲವೆ ಅನುದ್ದಿಷ್ಟ ಎಂದು ಅಲಕ್ಷಿಸುವಂತಿಲ್ಲ. ವಿಷ್ಣುಭಕ್ತನಾದ ನೃಪತುಂಗನು ತನ್ನ ಕೃತಿಯಲ್ಲಿ ಈ ಬಗೆಯ ಸ್ವಧರ್ಮ ವಿರುದ್ಧವಾದ ಮಾರ್ಪಾಟುಗಳನ್ನು ಖಂಡಿತವಾಗಿಯೂ ಮಾಡಿಕೊಳ್ಳುತ್ತಿರಲಿಲ್ಲ. ಅಲ್ಲದೆ, ಆತ ಎಷ್ಟೇ ಆತ್ಮಸ್ತುತಿಪ್ರಿಯನೆಂದು ಇಟ್ಟುಕೊಂಡರೂ, ತನ್ನನ್ನು ವಿಷ್ಣುವಿಗೆ ಹೋಲಿಸಿಕೊಂಡು ಆತ್ಮಪ್ರಶಂಸೆ ಮಾಡಿಕೊಂಡಿರುವನೆಂದು ಊಹಿಸುವುದೂ ಸಾಧ್ಯವಿಲ್ಲ. ಮೊದಲ ಮೂರು ಪದ್ಯಗಳಲ್ಲಿ ಇನ್ನೊಂದು ಗಮನಾರ್ಹ ಸಂಗತಿ ಗೋಚರವಾಗುತ್ತದೆ: ಎರಡನೆಯ ಸ್ತೋತ್ರ ಪದ್ಯದಲ್ಲಿ, "ವೀರನಾರಾಯಣನಪ್ಪ ಅತಿಶಯಧವಳಂ **ನಮಗೆ** ಈಗೆ ಪ್ರತಾಪೋದಯಮಂ" ಎಂಬ ವಾಕ್ಯದಲ್ಲಿನ ಬಹುವಚನದ ಸ್ವಾರ್ಥಕ ಸರ್ವನಾಮವೂ, ಮೂರನೆಯದಾದ ಸರಸ್ವತೀಸ್ತುತಿ ಪದ್ಯದಲ್ಲಿನ "ಸರಸ್ವತಿ ನೆಲೆಗೊಳ್ಗೆ **ಮನ್ಮಾನಸದೊಳ್**" (**ನನ್ನ** ಮನಸ್ಸಿನಲ್ಲಿ ನೆಲೆಸಲಿ) ಎಂಬ ಏಕವಚನ ಸರ್ವನಾಮವೂ ಸ್ಪಷ್ಟವಾಗಿ ಭಿನ್ನವ್ಯಕ್ತಿಗಳನ್ನು ಸೂಚಿಸುತ್ತಿವೆ. ಮೊದಲೆರಡು ಪದ್ಯಗಳಲ್ಲಿ ವಿಷ್ಣುಕಲ್ಪನಾದ ನೃಪತುಂಗನು **'ನಮಗೆ'** (ಎಂದರೆ, ತನಗೆ + ನೃಪತುಂಗ ಸಭೆಯ ಶ್ರೋತೃಗಳಿಗೆ ಅಥವಾ ವಾಚಕರಿಗೆ) ಪ್ರತಾಪೋದಯವನ್ನು ಕೊಡಲಿ ಎಂದು ಪ್ರಾರ್ಥಿಸಿ, ಮುಂದಿನ ಪದ್ಯದಲ್ಲಿ – ನನ್ನ ಮನಸ್ಸಿನಲ್ಲಿ ಸರಸ್ವತಿ 'ನೆಲಸಿರಲಿ' ಎಂದು ಗ್ರಂಥಕರ್ತನು ಪ್ರಾರ್ಥಿಸಿದ್ದಾನೆ. ಗ್ರಂಥಾರಂಭದ ಮೂರು ಪದ್ಯಗಳಲ್ಲಿ ಆಶ್ರಯದಾತನಾದ ವಿಷ್ಣುಭಕ್ತ ನೃಪತುಂಗ ಮತ್ತು (ಗ್ರಂಥದ ಜೈನಧರ್ಮಪರವಾದ ಸಂದರ್ಭಗಳಿಂದಲೂ ಸೂಚಿತವಾಗುವಂತೆ) ಜೈನಧರ್ಮೀಯನಾದ ಆಶ್ರಿತಕವಿ – ಇವರಿಬ್ಬರ ಸಂಬಂಧದ ಸೂಚನೆ ವಿಚಾರದೃಷ್ಟಿಗೆ ಸ್ಪಷ್ಟವಾಗಿ ಗೋಚರವಾಗುತ್ತದೆ.

೨. ಗ್ರಂಥದ ಉದ್ದಕ್ಕೂ ನೃಪತುಂಗಪರವಾದ ಉಕ್ತಿಗಳು ವಿಪುಲ ಸಂಖ್ಯೆಯಲ್ಲಿ ಮೇಲಿಂದ ಮೇಲೆ ಕಣ್ಣಿಗೆ ಬೀಳುತ್ತವೆ. ಕೆಲವು ಉದಾಹರಣೆಗಳು:

(i)ನರಲೋಕಚಂದ್ರಮತದಿಂ, ಅತಿಶಯಧವಳೋಕ್ತಕ್ರಮದೆ, ನೃಪತುಂಗದೇವ ಮತದಿಂ, ಇತ್ಯಾದಿ ಇಂತಹ ಹಲವಾರು ಹೇಳಿಕೆಗಳಿವೆ. ಕಾವ್ಯಶಾಸ್ತ್ರ ವಿಚಾರದಲ್ಲಿ ನೃಪತುಂಗನಿಗೆ ಸಮ್ಮತವಾದ ಮಾರ್ಗವೊಂದು ಇದ್ದಿತು ಎಂದು ಇವುಗಳಿಂದ ಸಿದ್ಧವಾಗುತ್ತದೆಯೇ ಹೊರತು, ಇವುಗಳ ಆಧಾರದ ಮೇಲೆ ನೃಪತುಂಗನೇ ಕರ್ತೃ ಎಂದು ತೀರ್ಮಾನಿಸಲಾಗುವುದಿಲ್ಲ. (ii)ಆದರೆ, 'ಭಾವಿಸಿ **ಬೆಸಸಿದನ್** ಅಖಿಳಧರಾವಲ್ಲಭಂ ಅಮೋಘವರ್ಷ ನೃಪೇಂದ್ರಂ', **'ಎಂದನತಿ**ಶಯಧವಳಂ', **'ಮಹಾನೃಪತುಂಗದೇವನಾದರದೊಳೆ ಪೇಳ್ದ** ಮಾರ್ಗ ಗತಿ' ಎಂಬೀ ಉಕ್ತಿಗಳು ನೃಪತುಂಗ ಪಕ್ಷದವರಿಗೆ ಸಹಾಯಕವಾಗುವ ಪ್ರಮಾಣಗಳು. ನೃಪತುಂಗನೇ ಕರ್ತೃವಾಗಿದ್ದಲ್ಲಿ ಉತ್ತಮಪುರುಷದಲ್ಲಿ ಹೇಳದೆ ಪ್ರಥಮಪುರುಷದಲ್ಲಿ ಏಕೆ

ಈ ಸಂದರ್ಭದಲ್ಲಿ, ನೃಪತುಂಗನ ಮತವನ್ನೂ ಗ್ರಂಥದಲ್ಲಿ ಕಂಡುಬರುವ ಜೈನಧರ್ಮಪರವಾದ ಕೆಲವು ಸ್ಪಷ್ಟ ಉಲ್ಲೇಖಗಳನ್ನೂ ಗಮನಿಸುವುದು ಅಗತ್ಯ. ನೃಪತುಂಗನು ಜೈನ ಮಹಾಪುರಾಣ ಕರ್ತೃ ಜಿನಸೇನಾಚಾರ್ಯರಲ್ಲಿ ಗುರುಭಾವನೆಯನ್ನು ಇಟ್ಟಿದ್ದನೆಂದು ಹೇಳಲು ಅಭ್ಯಂತರವಿಲ್ಲ. ಅವನು ಜಿನಸೇನ, ಗುಣಭದ್ರ, ಮಹಾವೀರಾಚಾರ್ಯ, ಶಾಕಟಾಯನ, ಶ್ರೀವಿಜಯ, ಮುಂತಾದ ಅನೇಕ ಜೈನ ವಿದ್ವಾಂಸರುಗಳಿಗೂ ಕವಿಗಳಿಗೂ ಆಶ್ರಯ ಕೊಟ್ಟಿದ್ದನು. ಕನ್ನಡ ನಾಡಿನಲ್ಲಿ ಜೈನ ಮತವು ಪ್ರಚಾರಕ್ಕೆ ಬಂದು, ಪ್ರಬಲಗೊಂಡು, ಜನಪ್ರೀತಿಯನ್ನು ಗಳಿಸುತ್ತಿದ್ದ ಕಾಲವದು. ಪರಮತಸಹಿಷ್ಣುವಾದ ನೃಪತುಂಗನು ಜೈನಧರ್ಮದಲ್ಲಿಯೂ ಜೈನಾಚಾರ್ಯರಲ್ಲಿಯೂ ಪೂಜ್ಯ ಭಾವನೆಯನ್ನಿರಿಸಿದ್ದನೆಂದ ಮಾತ್ರಕ್ಕೆ ಅವನು ಜೈನ ಮತಕ್ಕೆ ಸೇರಿದ್ದನೆಂದು ಹೇಳಲಾಗದು. ಕ್ರಿ.ಶ.೮೭೦ರವರೆಗೆ, ಕವಿರಾಜಮಾರ್ಗ ರಚಿತವಾದ ವೇಳೆಯಲ್ಲಿ, ಅವನು ವೈದಿಕ ಮತಾನುಯಾಯಿಯಾಗಿದ್ದನೆಂದು ಹೇಳಲು ಅವನೇ ಹೊರಡಿಸಿದ ಸಂಜಾನ ಶಾಸನ (ಕ್ರಿ.ಶ.೮೭೧) ಪ್ರಬಲವಾದ ಪ್ರಮಾಣವಾಗಿದೆ. ಕವಿರಾಜಮಾರ್ಗದ ವಿಷ್ಣುಪರ ಸ್ತೋತ್ರಗಳೂ ಈ ಅಂಶವನ್ನೆಸಾರಿ ಹೇಳುತ್ತಿವೆ. ಮೂರನೆಯ ಪದ್ಯ ದಂಡಿಯ ಶ್ಲೋಕದ ಅನುವಾದ. ಅದರಲ್ಲಿ – "ಚತುರ್ಮುಖ ಮುಖಾಂಭೋಜವನ ಸವಧೂ" ಎಂಬ ಸರಸ್ವತೀಸ್ವರೂಪ ವರ್ಣನೆಯ ರೂಪಕದಲ್ಲಿನ ಬ್ರಹ್ಮವಾಚಕವನ್ನು ಕೃತಿಕಾರ ಉದ್ದೇಶಪೂರ್ವಕವಾಗಿ ಬಿಟ್ಟುಬಿಟ್ಟಿರುವಂತಿದೆ. ನೃಪತುಂಗನೇ ಕರ್ತೃವಾಗಿದ್ದ ಪಕ್ಷದಲ್ಲಿ, ಈ ವೈದಿಕಾಂಶವನ್ನು ಕಳೆಯಬೇಕಾದ ಅಗತ್ಯವಿರುತ್ತಿರಲಿಲ್ಲ. ಈ ಪದ್ಯವೊಂದು ಮಾತ್ರವಲ್ಲದೆ, ಗ್ರಂಥದ ಅನೇಕ ಕಡೆಗಳಲ್ಲಿ ಜೈನಧರ್ಮಪರವಾದ ಉಲ್ಲೇಖಗಳು ಗೋಚರಿಸುತ್ತವೆ. (ನೋಡಿ: I–೧೯, ೨೮, ೯೧, ೧೦೪, ೧೦೯; II–೧೦೯, ೧೩೫, ೧೫೨; III–೧೮, ೯೪, ೨೨೭)[೧]. ಒಂದು ಉದಾಹರಣೆ ಗಮನಾರ್ಹ: "ಹರಿಪಾದಶ್ಶರೋಲಗ್ನಜಹ್ನುಕನ್ಯಾ ಜಲಾಂಶುಕಃ। ಜಯತ್ಯಸುರನಿಶ್ಶಂಕ ಸುರಾನಂದೋತ್ಸವಧ್ವಜ॥" (ಕಾವ್ಯಾದರ್ಶ, II–೮೧) ಎಂಬ ದಂಡಿಯ ವಿಷ್ಣುಸ್ತುತಿ, "**ಜಿನಚರಣ**ನಖಾದರ್ಶಂ। ವಿನತಾಮರರಾಜ ರಾಜವದನ ಪ್ರತಿಮಂ॥" (III–೧೮) ಎಂದು ಜಿನಸ್ತುತಿಯಾಗಿ ಮಾರ್ಪಟ್ಟಿದೆ. ಇಂತಹ ಮಾರ್ಪಾಟುಗಳನ್ನು

---

* ೧. ಈ ಜೈನಪರ ಉಲ್ಲೇಖಗಳ ವಿವರಣೆಯನ್ನು ತಿಳಿಯಬಯಸುವವರು ಮದರಾಸು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಕವಿರಾಜಮಾರ್ಗದ ಮುದ್ರಣದಲ್ಲಿನ ೬ನೆಯ ಪರಿಶಿಷ್ಟವನ್ನು (ಪು.೧೭೨–೧೭೫) ನೋಡಬಹುದು.

ಕಾರಣವೂ ಇಲ್ಲದೆ ತನ್ನ ಸಭಾಸದನನ್ನು ವರ್ಣಿಸುವ ಅಗತ್ಯವೇನಿತ್ತು? ಈ ಸಭಾಸದನ ಗುಣಗಳ ವರ್ಣನೆಯಲ್ಲಿ ಬರುವ **'ಮಹಾಪುರುಷ ವ್ರತನಿಶ್ಚಿತ'** ಎಂಬ ವಿಶೇಷಣ ಗಮನಾರ್ಹ (III–೨೩೩). ಪಂಪಭಾರತ, ವಡ್ಡಾರಾಧನೆ, ನೇಮಿಚಂದ್ರನ ಲೀಲಾವತಿ, ಮುಂತಾದ ಕಾವ್ಯಗಳಲ್ಲಿಯೂ 'ಪುರುಷವ್ರತ' ಎಂಬ ಮಾತು 'ಸ್ತ್ರೀಮಾತ್ರ ಪರಿಗ್ರಹತ್ಯಾಗ'ನಿಷ್ಠವಾದ ನೈಷ್ಠಿಕ ಬ್ರಹ್ಮಚರ್ಯ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.[೨] (ಸ್ತ್ರೀಸಂಬಂಧವಾಗಿ, ಪಾತಿವ್ರತ್ಯ ಎಂಬ ಅರ್ಥಕೊಡುವ ಪ್ರಯೋಗಗಳೂ ಉಂಟು.) ನೃಪತುಂಗನು ವಿವಾಹಿತನಾಗಿದ್ದು, ಇಬ್ಬರು ಹೆಣ್ಣುಮಕ್ಕಳ ಹಾಗೂ ಒಬ್ಬ ಪುತ್ರನ ತಂದೆ ಎಂಬುದು ಇತಿಹಾಸಪ್ರಸಿದ್ಧ ಸಂಗತಿ. 'ಪುರುಷವ್ರತ' ಎಂಬ ಪದ ಜಿನಸಮಯದ ವಾಙ್ಮಯದಲ್ಲಿ ಮಾತ್ರ ಪ್ರಚುರವಾಗಿರುವ ಪದವೆಂದು ಗ್ರಂಥಾಧಾರಗಳಿಂದಲೂ ಶಾಸನಾಧಾರಗಳಿಂದಲೂ ಕಂಡುಬರುತ್ತದೆ. ಹೇಗೆ ವಿಚಾರ ಮಾಡಿದರೂ, ಕವಿರಾಜಮಾರ್ಗದಲ್ಲಿ ವೈದಿಕಮತಾನುಯಾಯಿಯೂ ಆಶ್ರಯದಾತನೂ ಆದ ನೃಪತುಂಗನ ವ್ಯಕ್ತಿತ್ವ ಚಿತ್ರವೂ ಜೈನಮತಾನುಯಾಯಿಯಾದ ಆಶ್ರಿತ ಸಭಾಸದನ ಚಿತ್ರವೂ ಒಟ್ಟಿಗೆ ಬಂದಿರುವುದು, ಆ 'ಮಹಾಪುರುಷವ್ರತ ನಿಶ್ಚಿತ'ನಾದ ಸಭಾಸದನೆ ಕವಿರಾಜಮಾರ್ಗಕಾರ ಎಂಬ ಅನುಮಾನಕ್ಕೆ ಕಾರಣವಾಗುತ್ತದೆ.

೪. ನೃಪತುಂಗ ಪಕ್ಷದವರು ತಮ್ಮ ವಾದಕ್ಕೆ ಒಂದು ಬಲವಾದ ಪ್ರಮಾಣ ಎಂದು ಉಪಯೋಗಿಸಿಕೊಳ್ಳುವ ಮಾತು ಎಂದರೆ, ಪ್ರತಿ ಪರಿಚ್ಛೇದಾಂತ ಗದ್ಯದಲ್ಲಿ ಕಾಣಿಸಿಕೊಳ್ಳುವ "ಪರಮಶ್ರೀ **ನೃಪತುಂಗದೇವಾನುಮತಮಪ್ಪ** ಕವಿರಾಜಮಾರ್ಗದೊಳ್" ಎಂಬುದು. ಅವರು **ಅನುಮತ** ಎಂಬ ಪದಕ್ಕೆ **ವಿರಚಿತ** ಎಂದು ಅರ್ಥನಿರ್ವಚನ ಮಾಡುವುದಕ್ಕೆ ನಿಘಂಟು, ಶಬ್ದಶಾಸ್ತ್ರ, ಮುಂತಾದ

* ೨. 'ಪುರುಷವ್ರತ' ಪದದ ಅರ್ಥನಿರ್ಣಯ ವಿಚಾರಕ್ಕೆ ಇದೇ ಲೇಖಕನ 'ಪುರುಷವ್ರತ ಮತ್ತು ಕವಿರಾಜಮಾರ್ಗ' ಎಂಬ ಲೇಖನವನ್ನು ನೋಡಿ: ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಸಂ.೫೪–೨, ೧೯೬೯.
ಈಚೆಗೆ ಡಾ॥ ಎ.ಎನ್.ಉಪಾಧ್ಯೆ ಅವರು ಪರಿಷತ್ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆದಿದ್ದಾರೆ. (ಸಂ.೫೦–೧), ಅದರಲ್ಲಿ, ಬಂಧುವರ್ಮನ (ಕ್ರಿ.ಶ.೧೨೦೦) 'ಜೀವಸಂಬೋಧನ' ಹಾಗೂ ಜಟಾಸಿಂಹನಂದಿಯ 'ವಾರಾಂಗ ಚರಿತ'ದ ಪ್ರಯೋಗಗಳ ಆಧಾರದ ಮೇಲೆ, ಪುರುಷವ್ರತ ಎಂದರೆ–ಸ್ತ್ರೀಯರ ಸಂದರ್ಭದಲ್ಲಿ ಪಾತಿವ್ರತ್ಯ ಮತ್ತು ಪುರುಷರ ಸಂಬಂಧದಲ್ಲಿ 'ಸ್ವದಾರ ಸಂತೋಷ' ಎಂಬ ಅರ್ಥಗಳನ್ನು ನಿಷ್ಕರ್ಷಿಸಿದ್ದಾರೆ. ಇದು ಸರಿಯಾದರೂ, ಪಂಪಭಾರತದಲ್ಲಿ ಭೀಷ್ಮನ ಸಂಬಂಧವಾಗಿ ಈ ಮಾತು ಪ್ರಯೋಗವಾಗಿರುವುದರಿಂದ, ಅದಕ್ಕೆ 'ನೈಷ್ಠಿಕ ಬ್ರಹ್ಮಚರ್ಯ' ಎಂದೂ ಅರ್ಥ, ಇದೇ 'ಮಹಾಪುರುಷವ್ರತ.'

ಹೇಳಿದ್ದಾನೆ ಎಂದು ಆಕ್ಷೇಪಿಸಬಹುದು. ಇದಕ್ಕೆ, ಉತ್ತಮಪುರುಷಾರ್ಥದಲ್ಲಿ ಪ್ರಥಮಪುರುಷ ಪ್ರಯೋಗವಮಾಡುವ ಸಂಪ್ರದಾಯವುಂಟು ಎಂಬ ಸಮಾಧಾನವನ್ನೂ ಹೇಳಬಹುದು. (iii)ಆದರೆ, **ಒಂದೇ ಪದ್ಯದ ಒಂದೇ ಸಂದರ್ಭದಲ್ಲಿ** ಪ್ರಥಮಪುರುಷ ಪ್ರಯೋಗಗಳೊಂದಿಗೆಂಯೇ ಉತ್ತಮಪುರುಷಪ್ರಯೋಗಗಳೂ ಒಡಗೂಡಿ ಹೆಣೆದು ಕೊಂಡಿರುವುದಕ್ಕೆ ಸಮಾಧಾನ ಹೇಳುವುದು ಕಷ್ಟ. "ಸವಿಶೇಷಗುಣಮ **ನತಿಶಯಧವಳೋಕ್ತಿ ಕ್ರಮ ದಿನಱೆ ಪುವೆಂ** ತದ್ಭವದೋಳ್" (II–೫೫) ಎಂಬೀ ಉಕ್ತಿಯನ್ನು ಗಮನಿಸಿದ ಕೆ.ಬಿ.ಪಾಠಕರು – "ಕೃತಿಕಾರನು ನೃಪತುಂಗನಿಗಿಂತ ಭಿನ್ನನು ಎಂಬ ಅಭಿಪ್ರಾಯ ಇದರಿಂದ ಉಂಟಾಗುತ್ತದೆ; ಆದರೆ ಇದು ಒಂದೇ ಒಂದಾದ ನಿದರ್ಶನ. ನೃಪತುಂಗನೇ ಗ್ರಂಥಕರ್ತನೆಂಬ (ನಮ್ಮ) ಸಿದ್ಧಾಂತಕ್ಕೆ ವಿರೋಧವಾಗದಂತೆ ಇದಕ್ಕೆ ತೃಪ್ತಿಕರವಾದ ವಿವರಣೆ ಕೊಡುವುದು ಸುಲಭಸಾಧ್ಯವಲ್ಲ." ಎಂದು ತಮ್ಮ ಪ್ರಾಮಾಣಿಕವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಅವರು ಎತ್ತಿತೋರಿಸಿದಂಥ ಇನ್ನೂ ಕೆಲವು ಉಕ್ತಿಗಳಿದ್ದುದು ಅವರ ಗಮನಕ್ಕೆ ಬಂದಿದ್ದರೆ, ನೃಪತುಂಗನು ಕೃತಿಕಾರನಲ್ಲ ಎಂಬ ತೀರ್ಮಾನಕ್ಕೆ ಬರುತ್ತಿದ್ದರೇನೋ!" ಶ್ರೀ ನೃಪತುಂಗ ವಿಚಾರಕ್ರಮಮಾರ್ಗಗಣನೆಯೊಳ್ ಪರಮಾಲಂಕಾರಂ ಶಬ್ದಾರ್ಥಭೇದದಿಂದೆ ರಡಕ್ಕುಂ" ಎಂದು ಹೇಳಿ (II–೨), ಒಡನೆಯೇ "ಶಬ್ದಾಳಂಕಾರನ್ನಿಶ್ಚಿತಮಕ್ಕೆ ಪೇೞ್ವೆ ಮೀೞ್ಕೆಯೊಳೆನ್ನಾ" (II–೩) ಎಂದು ಹೇಳುವುದು ಸೋಜಿಗವಾಗಿ ಕಾಣುವುದಿಲ್ಲವೆ? **'ಬೆಸಸಿದನ್** ಧರಾವಲ್ಲಭಂ' (III–೧) ಮತ್ತು 'ಅನುಕ್ರಮೋಕ್ತಿಯೆ ಪೇೞ್ಕುಂ' (III–೫) ಎಂಬ ಪ್ರಥಮ–ಉತ್ತಮ ಪುರುಷ ಪ್ರಯೋಗಗಳೂ ಅದೇ ಪ್ರಕಾರದವು. ಇಂಥ ಉಕ್ತಿಗಳಲ್ಲಿ ಕಂಡುಬರುವ ವಿರೋಧಾ ಭಾಸವನ್ನು, 'ಗ್ರಂಥಕರ್ತ ನೃಪತುಂಗನಿಗಿಂತ ಭಿನ್ನನು' ಎಂಬ ವಿವರಣೆಯಿಂದ ಮಾತ್ರ ಪರಿಹರಿಸಲು ಸಾಧ್ಯ.

೩. ಮಂಗಳ ಶ್ಲೋಕಗಳಿಂದಲೂ ಶಾಸನಾಧಾರಗಳಿಂದಲೂ ನೃಪತುಂಗನು ವೈದಿಕ ಮತಾವಲಂಬಿ ಎಂಬುದು ಸ್ಪಷ್ಟ. ಇತರ ಕೆಲವು ಲಕ್ಷ್ಯಪದ್ಯಗಳಿಂದಲೂ, ಉದಾರಶೀಲನೂ ಉದಾತ್ತ ಸ್ವಭಾವದವನೂ ಸಾಮಂತಚೂಡಾಮಣಿಯೂ ಆದ ನೃಪತುಂಗ ಚಕ್ರವರ್ತಿಯ ವ್ಯಕ್ತಿಚಿತ್ರ ಕಣ್ಣಿಗೆ ಕಟ್ಟಿ ನಿಲ್ಲುತ್ತದೆ. ನೃಪತುಂಗನ ಚಿತ್ರಣವಾದ ಮೇಲೆ ಕಡೆಯಲ್ಲಿ, ಸುಮಾರು ೧೫ ಪದ್ಯಗಳಲ್ಲಿ (III–೨೧೮ ರಿಂದ ೨೩೧) ನೃಪತುಂಗ ಸಭಾಸದನ ವ್ಯಕ್ತಿತ್ವದ ಚಿತ್ರಣ ಸವಿವರವಾಗಿ ನಿರೂಪಿತವಾಗಿದೆ. ನೃಪತುಂಗನೇ ಗ್ರಂಥಕರ್ತನಾಗಿದ್ದ ಪಕ್ಷದಲ್ಲಿ, ಯಾವ ಸ್ಪಷ್ಟ

ನೃಪತುಂಗನು ಇಲ್ಲಿ ಹೇಳಿಕೊಂಡಿರುವನೆಂದೂ ವಾದಿಸಿದ್ದಾರೆ.[೩] ಈ ವಾದವನ್ನು ಆರ್.ನರಸಿಂಹಾಚಾರ್ಯರು ಸಮರ್ಥವಾಗಿ ಖಂಡಿಸಿದ್ದಾರೆ.[೪] ಈ ವಾದದಲ್ಲಿ ಸ್ವಲ್ಪವೂ ಹುರುಳಿಲ್ಲ. ಶಾಸನಗಳಲ್ಲಿ ದೊರೆಯುವ ನೃಪತುಂಗಪರವಾದ ಬಿರುದುಗಳು ಕವಿರಾಜಮಾರ್ಗದಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಕಾಣ ಸಿಕ್ಕುತ್ತವೆ. ಆದರೆ, ಶ್ರೀವಿಜಯ ಎಂಬುದು ಅಷ್ಟು ಪ್ರಸಿದ್ಧವಾದ ಬಿರುದಾಗಿದ್ದಲ್ಲಿ, ಅದು ಯಾವೊಂದು ಶಾಸನದಲ್ಲಿಯೇ ಆಗಲಿ ಗ್ರಂಥದಲ್ಲಿನ ಇತರ ಬಿರುದುಗಳಂತೆ ಬೇರೆ ಬೇರೆ ಗ್ರಂಥ ಸಂದರ್ಭಗಳಲ್ಲಿಯೇ ಆಗಲಿ ಏಕೆ ಕಾಣಬರುವುದಿಲ್ಲ ಎಂಬ ಪ್ರಶ್ನೆಗೆ ಉತ್ತರವಿಲ್ಲ.

(ii)'ಶ್ರೀವಿಜಯ' – ಇದು ನೃಪತುಂಗನ ಕೃತಿಮುದ್ರಿಕೆ ಎಂಬುದು ಇನ್ನೊಂದು ವಾದ. ಇದನ್ನು ಎತ್ತಿರುವವರು ಡಾ॥ ಕೆ.ಕೃಷ್ಣಮೂರ್ತಿಗಳು. ಈ ವಾದದ ಸಾರಾಂಶ: ಭಾರವಿ ತನ್ನ ಕಾವ್ಯ 'ಕಿರಾತಾರ್ಜುನೀಯ'ದಲ್ಲಿ 'ಲಕ್ಷ್ಮೀ' ಎಂಬ ಮುದ್ರೆಯನ್ನು ಉಪಯೋಗಿಸಿದ್ದಾನೆ; ಈ ಕಾವ್ಯದ ಕೆಲವು ಶ್ಲೋಕಗಳನ್ನು ಕವಿರಾಜಮಾರ್ಗಕಾರನು ನಿದರ್ಶನಾಲಂಕಾರಕ್ಕೆ ಕೊಡುವ ಲಕ್ಷ್ಯ ಪದ್ಯಗಳಲ್ಲಿ ಭಾವಾನುವಾದ ಮಾಡಿದ್ದಾನೆ; ಅವನ ಮಾದರಿಯನ್ನು ಅನುಸರಿಸಿ, 'ಶ್ರೀವಿಜಯ' ಎಂಬ ಮುದ್ರೆಯನ್ನು ಇಟ್ಟು ಕೊಂಡಿರಬಹುದು. ಭಾರವಿಯ ದೃಷ್ಟಾಂತಕ್ಕೆ ಒಂದು ಪ್ರಮಾಣದ ಬೆಲೆಯನ್ನು ಕೊಡುವುದು ಕಷ್ಟ. ಭಾರವಿ ಮುದ್ರೆಯನ್ನು ಉಪಯೋಗಿಸಿರುವುದರ ಜೊತೆಗೆ, "ಭಾರವಿಕೃತೌ" ಎಂದು ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ. ಮುದ್ರೆಯನ್ನು ಇಟ್ಟುಕೊಳ್ಳು ವುದರಲ್ಲಿ ಮಾತ್ರ ಭಾರವಿಯನ್ನು ಅನುಸರಿಸಿ, 'ನೃಪತುಂಗದೇವಕೃತ' ಎಂದು ಹೇಳಿದೆ, 'ನೃಪತುಂಗದೇವಾನುಮತಮಪ್ಪ' ಎಂದು ಏಕೆ ಹೇಳಿದೆ? ಈ ಪ್ರಶ್ನೆಗೆ ಸಮಂಜಸವಾಗಿ ಉತ್ತರ ಹೇಳುವುದು ಸಾಧ್ಯವಿಲ್ಲ.

(iii)'ಶ್ರೀವಿಜಯ' ಎಂಬುದು ನೃಪತುಂಗನ ಆಚಾರ್ಯಮುದ್ರೆ ಎಂಬುದು ಇನ್ನೊಂದು ಅತ್ಯಂತ ಈಚಿನ ವಾದ.[೫] ದುರ್ಗಸಿಂಹನು (ಕ್ರಿ.ಶ. ೧೦೩೧) ಒಂದು ಪದ್ಯದಲ್ಲಿ "ಶ್ರೀವಿಜಯರ ಕವಿಮಾರ್ಗಂ" ಎಂದು ಹೊಗಳಿದ್ದಾನೆ. ಜಿನಸೇನಾಚಾರ್ಯರು ನೃಪತುಂಗನ ಗುರು ಎಂದು ಬಹುಮಂದಿ ವಿದ್ವಾಂಸರು

---

೩. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಜುಲೈ ೧೯೨೩.

೪. ಕವಿಚರಿತೆ, ಸಂಪುಟ ೧; ತಿದ್ದಿದ ಮುದ್ರಣ, ೧೯೨೪; ಅವತರಣಿಕೆ, ಪು.೨೦

೫. ಶ್ರೀ ಭೀಮರಾವ್ ಚಿಟಗುಪ್ಪಿಯವರು ತಮ್ಮ 'ಕವಿರಾಜಮಾರ್ಗ ಪ್ರಶಸ್ತಿ' ಎಂಬ ಗ್ರಂಥದಲ್ಲಿ (ಮನ್ವಂತರ ಪ್ರಕಾಶನ, ಧಾರವಾಡ; ೧೯೭೭) ಈ ವಾದವನ್ನು ವಿಸ್ತಾರವಾಗಿ ಪ್ರತಿಪಾದಿಸಿದ್ದಾರೆ. (ಪು.೧೩೫–೧೪೮).

ಯಾವ ಶಾಸ್ತ್ರದಲ್ಲಿಯೂ ಆಧಾರವಿಲ್ಲ. ಗ್ರಂಥದಲ್ಲಿ ಹಲವು ಕಡೆ ನೃಪತುಂಗದೇವಮತ, ಕ್ರಮ, ಮಾರ್ಗ ಎಂಬ ಮಾತುಗಳ ಪ್ರಯೋಗವಾಗಿದೆ. **'ಅನುಮತ'** ಪದಕ್ಕೆ **ಅನುಮೋದನೆ, ಒಪ್ಪಿಗೆ,** ಎಂಬ ಅರ್ಥವನ್ನೇ ಹೇಳಬೇಕು. ದಂಡಿ ಭಾಮಹರನ್ನು ಅನುಸರಿಸಿರುವ ಕವಿ ರಾಜಮಾರ್ಗದಲ್ಲಿ ಎಲ್ಲೆಲ್ಲಿ ಸ್ವತಂತ್ರ ವಿಚಾರಸರಣಿ ಕಂಡುಬರುತ್ತದೆಯೋ ಅಲ್ಲೆಲ್ಲ ಸಾಧಾರಣವಾಗಿ ನೃಪತುಂಗದೇವಮತ, ಕ್ರಮ, ಮುಂತಾದ ಪದಗಳು ಪ್ರಯೋಗವಾಗಿರುವುದು ಗಮನಾರ್ಹ. ಕವಿರಾಜಮಾರ್ಗದಲ್ಲಿನ ಚರ್ಚಾಸ್ಪದ ವಿಷಯಗಳು ನೃಪತುಂಗನ ವಿದ್ವತ್ಸಭೆಯಲ್ಲಿ ಚರ್ಚೆಯಾಗುತ್ತಿದ್ದುವು, ವಿಷಯ ಒಂದು ತೀರ್ಮಾನಕ್ಕೆ ಬಂದಾಗ ನೃಪತುಂಗನು ತನ್ನ ಅನುಮೋದನೆಯನ್ನು ಸೂಚಿಸುತ್ತಿದ್ದನು – ಎಂದು ತಿಳಿಯಬೇಕಾಗಿದೆ. ಆದ್ದರಿಂದ, 'ನೃಪತುಂಗ ದೇವಾನುಮತಮಪ್ಪ' ಎಂಬ ಮಾತು ನೃಪತುಂಗ ಕರ್ತೃತ್ವವನ್ನು ಸೂಚಿಸುವುದಿಲ್ಲ ಎಂದು ಖಚಿತವಾಗಿ ಹೇಳಬಹುದು.

೫. ಪರಿಚ್ಛೇದಾಂತ ಗದ್ಯವಾಕ್ಯಕ್ಕೆ ಪೂರ್ವಭಾವಿಯಾಗಿ ಬರುವ ಪರಿಚ್ಛೇದಾಂತ ಪದ್ಯಗಳಲ್ಲಿ ಬರುವ ಉಕ್ತಿಗಳು:

(i)".... ಕವಿಪ್ರಕರಂ **ಶ್ರೀವಿಜಯಪ್ರಭೂತಮಂ** ಇದಂ ಕೈ ಕೊಳ್ವುದು..."

(ii)"**ಶ್ರೀವಿಜಯ ಪ್ರಭೂತಮುದಮಂ** ತನಗಾಗಿಸಿದೊಂ ಕವೀಶ್ವರಂ..."

(iii)"**ಪರಮ ಶ್ರೀವಿಜಯಪ್ರಭೂತಿಜಯಶಂ...** ನೆಲೆಗೊಳ್ಗೆ ಆ ಚಂದ್ರತಾ
ರಂಬರಂ."

'ಶ್ರೀವಿಜಯ' ಎಂಬ ಇಲ್ಲಿನ ಮಾತು ಗ್ರಂಥಕರ್ತನನ್ನು ಸೂಚಿಸುತ್ತದೆ ಎಂಬುದಕ್ಕೆ ಬಾಹ್ಯ ಪ್ರಮಾಣಗಳ ಸಮರ್ಥನೆಯಿದೆ. 'ಶ್ರೀವಿಜಯ **ಪ್ರಭೂತ'** ಮತ್ತು 'ಶ್ರೀವಿಜಯ **ಪ್ರಭೂತಿ'** ಎಂಬ ಮಾತುಗಳಿಗೆ ಕ್ರಮವಾಗಿ 'ಶ್ರೀವಿಜಯನಿಂದ **ಉಂಟಾದದ್ದು – ಉತ್ಪನ್ನವಾದದ್ದು – ಜನಿಸಿದ್ದು – ನಿರ್ಮಾಣವಾದದ್ದು** ಹಾಗೂ ಶ್ರೀವಿಜಯಮೂಲವಾದದ್ದು ಎಂಬ ಅರ್ಥಗಳು ಪ್ರಸಿದ್ಧವಾದವು. ಬೇರೆಯ ರೀತಿಯಲ್ಲಿ ಅರ್ಥಮಾಡುವುದು ಸಾಧ್ಯವಿಲ್ಲ. ಆದ್ದರಿಂದ, ಈ ಪ್ರಮಾಣಗಳು ನೃಪತುಂಗ ಪಕ್ಷದವರಿಗೆ ವಿರುದ್ಧ ಸಾಕ್ಷ್ಯಗಳಾಗಿ ಪರಿಣಮಿಸುತ್ತವೆ. ಈ ವಿರೋಧವನ್ನು ನಿವಾರಿಸುವುದಕ್ಕಾಗಿ, ಒಬ್ಬೊಬ್ಬ ವಿದ್ವಾಂಸರು ಒಂದೊಂದು ರೀತಿಯಲ್ಲಿ ವಾದಮಾಡಿದ್ದಾರೆ.

(i)ನಾ.ಶ್ರೀ.ರಾಜಪುರೋಹಿತರು ಭಗವದ್ಗೀತೆಯ ಶ್ಲೋಕವೊಂದರಲ್ಲಿ (೧೮–೭೮) ಉಕ್ತವಾದ 'ಶ್ರೀ, ವಿಜಯ, ಭೂತಿ' ಎಂಬ ಮಾತುಗಳನ್ನು ಸ್ಮರಿಸಿಕೊಂಡು, ನೃಪತುಂಗನಿಗೆ 'ಶ್ರೀವಿಜಯ' ಎಂಬ ಬಿರುದಿದ್ದಿತೆಂದೂ, ಅದನ್ನೇ

ಈ ಹೊಸ ವಾದಕ್ಕೆ ಬುಡವೇ ಇಲ್ಲ. ಮಂಗಳ ಶ್ಲೋಕಗಳನ್ನು ನೃಪತುಂಗನು ಬರೆದಿರಲಾರನೆಂದು ಈ ಹಿಂದೆಯೇ ಹೇಳಿದೆ. ಈ ಪದ್ಯಗಳಲ್ಲಿಯೂ, ನೃಪತುಂಗ ಪ್ರಶಸ್ತಿಯುಳ್ಳ ಬೇರೊಂದು ಪದ್ಯದಲ್ಲಿಯೂ (III–೧೮೦) 'ವೀರ ನಾರಾಯಣ' ಎಂಬ ಅವನ ಬಿರುದು ಉಕ್ತವಾಗಿದೆ. ಈ ಪದ್ಯಗಳು ನೃಪತುಂಗ ಕೃತವಲ್ಲ ಎಂದಮೇಲೆ, 'ಕವಿಮಾರ್ಗ'ದ ಪದ್ಯಗಳು ಎನ್ನಬೇಕಾಗುತ್ತದೆ. ನೃಪತುಂಗನಿಗೆ 'ವೀರನಾರಾಯಣ' ಎಂಬ ಬಿರುದು ಸಂದದ್ದು ಕ್ರಿ.ಶ.೮೪೫–೮೫೦ ರ ಸುಮಾರಿನಲ್ಲಿ ಎನ್ನುವುದಕ್ಕೆ ಶಾಸನಾಧಾರವಿದೆ. ಆದ್ದರಿಂದ, ಕವಿರಾಜಮಾರ್ಗಕ್ಕೆ ಮೂಲವಾಗಿದ್ದಿರಬಹುದಾದ 'ಕವಿಮಾರ್ಗ' ಕೂಡ ಆ ವೇಳೆಗೆ ರಚಿತವಾಗಿರಲು ಸಾಧ್ಯವಿಲ್ಲ. ಜಿನಸೇನರು ಕ್ರಿ.ಶ.೮೪೩ರಲ್ಲಿ ತೀರಿಕೊಂಡರು. ಹೀಗಿರುವಲ್ಲಿ, ಜಿನಸೇನರು 'ಕವಿಮಾರ್ಗ'ದ ಕರ್ತೃ ಎಂಬ ವಾದದ ತಳಹದಿಯೇ ಬಿದ್ದು ಹೋಗುತ್ತದೆ.

೬. ಪ್ರಾಚೀನ ಕವಿಗಳು 'ಚಕ್ರಬಂಧ' ಪದ್ಯಗಳನ್ನು ರಚಿಸಿ, ಬಂಧ ರಚನೆಯ ಕೆಲವು ನಿರ್ದಿಷ್ಟ ಸ್ಥಾನಗಳಲ್ಲಿನ ಅಕ್ಷರಗಳನ್ನು ಒಂದು ನಿರ್ದಿಷ್ಟ ಅನುಪೂರ್ವಿಯಲ್ಲಿ ಓದಿದಾಗ ಕೃತಿ–ಕರ್ತೃನಾಮಗಳು ಹೊರಪಡುವಂತೆ ಪದ್ಯರಚನೆ ಮಾಡುತ್ತಿದ್ದರು. ಉದಾಹರಣೆಗೆ, ಮಾಘನ 'ಶಿಶುಪಾಲವಧ'ದ ಚಕ್ರಬಂಧ ಪದ್ಯ (೧೯–೧೨೦)ದಿಂದ 'ಮಾಘಕಾವ್ಯಮಿದಂ–'ಶಿಶುಪಾಲವಧಃ' ಎಂಬ ಕವಿಕಾವ್ಯನಾಮಾಕ್ಷರಗಳು ಒಂದು ನಿರ್ದಿಷ್ಟ ಕ್ರಮದಲ್ಲಿ ಅಕ್ಷರಗಳನ್ನು ಕೂಡಿಸಿಕೊಂಡು ಓದಿದಾಗ ಹೊರಪಡುತ್ತವೆ. ಅಂತೆಯೇ ರುದ್ರಟನ ಕಾವ್ಯಾಲಂಕಾರದಲ್ಲೂ ಕವಿಕಾವ್ಯಾದಿನಾಮನಿರ್ದೇಶ ಚಕ್ರಬಂಧ ಶ್ಲೋಕಗಳಿಂದ ದೊರಕುತ್ತದೆ. ಕವಿರಾಜಮಾರ್ಗಕಾರನೂ ಈ ಪೂರ್ವ ಕವಿಗಳನ್ನು ಅನುಸರಿಸಿರುವ ಸಂಭವವುಂಟು. ಕವಿರಾಜಮಾರ್ಗದ II–೧೪ನೆಯ ಪದ್ಯ ಚಕ್ರಶ್ಲೋಕ ಎಂದು ಉಕ್ತವಾಗಿದೆ. ಚಕ್ರಶ್ಲೋಕದಲ್ಲಿ ಅನೇಕ ಪ್ರಕಾರಗಳುಂಟು. ದಿವಂಗತ ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರು 'ಷಡರಬಂಧ' (ಆರು ಅರಗುಗಳುಳ್ಳ ಚಕ್ರಬಂಧರಚನೆ) ಕ್ರಮಕ್ಕೆ ಅನುಸಾರವಾಗಿ ಪದ್ಯವನ್ನು ಓದಿ, 'ಸಂದಪಿಂದಾಳಾನಾ–**ಸಾಮಾಪಾ ಜಯಾಟ್ಟಿಂ** ಎಂಬ ಕವಿನಾಮವನ್ನು ಉದ್ಧಾರ ಮಾಡಿದ್ದಾರೆ. ಶ್ರೀವಿಜಯನೇ ಕವಿರಾಜಮಾರ್ಗದ ಕರ್ತೃ ಎಂಬ ತಮ್ಮ ವಾದಕ್ಕೆ ಈ ಚಕ್ರಬಂಧವನ್ನೂ ಒಂದು ಪ್ರಬಲ ಆಂತರಿಕ ಪ್ರಮಾಣವಾಗಿ ಮುಂದಿಟ್ಟಿದ್ದಾರೆ. ಅವರ ಈ ಪ್ರಯತ್ನದಲ್ಲಿನ ಮುಖ್ಯ ದೋಷಗಳೆಂದರೆ: (i)ಪದ್ಯವನ್ನು ಅಲ್ಲಲ್ಲಿ ತಿದ್ದುಪಾಟು ಮಾಡಿಕೊಂಡಿರುವುದು. ಪಾಠಾಂತರಗಳ ನೆರವಿಲ್ಲದೆ ಈ ರೀತಿ

ಒಪ್ಪಿರುವರಷ್ಟೆ. ಶ್ರೀವಿಜಯ ಜಿನಸೇನರ ಅಂಕಿತವೆಂದೂ, ಅವರು 'ಕವಿಮಾರ್ಗ'ವನ್ನು ರಚಿಸಿದ್ದರೆಂದೂ ದುರ್ಗಸಿಂಹನ ಹೇಳಿಕೆಗೆ ಉಪಪತ್ತಿಯನ್ನು ಕಲ್ಪಿಸಿ, ಶ್ರೀವಿಜಯನ (ಎಂದರೆ ಜಿನಸೇನರ) ಮೂಲಕೃತಿ 'ಕವಿಮಾರ್ಗ'ವನ್ನು ಆಧರಿಸಿ ನೃಪತುಂಗನು ಶ್ರೀವಿಜಯ ನಾಮಾಂಕವನ್ನು ತಾನು ಇಟ್ಟುಕೊಂಡು ಕವಿರಾಜಮಾರ್ಗವನ್ನು ರಚಿಸಿರುವನು ಎಂಬುದು ಈ ವಾದದ ಸಾರಾಂಶ; 'ಶ್ರೀವಿಜಯ ಪ್ರಭೂತ' ಇತ್ಯಾದಿ ಮಾತುಗಳಿಂದ ಅರ್ಥವಾಗುವ 'ಶ್ರೀವಿಜಯನಿಂದ ಹುಟ್ಟಿದ್ದು' ಎನ್ನುವುದಕ್ಕೆ 'ಶ್ರೀವಿಜಯ (ಜಿನಸೇನ) ರಚಿತ ಕವಿಮಾರ್ಗ ಎಂದು ಸಾಮಂಜಸ್ಯವನ್ನು ಕಲ್ಪಿಸಲಾಗಿದೆ. 'ಶ್ರೀವಿಜಯ ಪ್ರಭೂತ ಮುದಮಂ ತನಗಾಗಿಸಿದೊಂ ಕವೀಶ್ವರಂ' (II–೧೫೫) ಎಂಬ ವಾಕ್ಯದ ಹಾಗೂ ದುರ್ಗಸಿಂಹನ ಹೇಳಿಕೆ, ಇವುಗಳ ಆಧಾರದ ಮೇಲೆ–ಕವೀಶ್ವರನೆಂಬ ಕವಿ 'ಶ್ರೀವಿಜಯರ ಕವಿಮಾರ್ಗ'ವನ್ನು ತನ್ನದಾಗಿ ಮಾಡಿಕೊಂಡನು. ('ಶ್ರೀವಿಜಯ ಪ್ರಭುತ ಮುದಮಂ ತನಗಾಗಿಸಿದೊಂ ಕವೀಶ್ವರಂ'), ಎಂದರೆ ಅದರ ಆಧಾರದ ಮೇಲೆ ಕವಿರಾಜಮಾರ್ಗವನ್ನು ರಚಿಸಿ, ಆಶ್ರಯದಾತ ನೃಪತುಂಗನ ಹೆಸರನ್ನೇ ಮುಂದುಮಾಡಿ, ತಾನು ಆತನಿಂದ ಪ್ರಯೋಜನ ಪಡೆದನು – ಎಂಬ ಕವೀಶ್ವರಪಕ್ಷವೂ ಇದೆಯಷ್ಟೆ.[೬] ಕವಿರಾಜಮಾರ್ಗದಲ್ಲಿಯೆ ಉಕ್ತನಾದ 'ಪರಮ ಶ್ರೀವಿಜಯ' (೧–೩೨) ಎಂಬ ಪೂರ್ವಕವಿಯೇ 'ಕವಿಮಾರ್ಗ'ದ ಕರ್ತೃ ಎಂಬುದು ಈ ಪಕ್ಷದ ನಿಲುವು. ಇದನ್ನು ಸ್ವಲ್ಪ ವ್ಯತ್ಯಾಸ ಮಾಡಿಕೊಂಡು, ಶ್ರೀವಿಜಯ ಎಂಬ ನಾಮಾಂತರವುಳ್ಳ ಜಿನಸೇನರು 'ಕವಿಮಾರ್ಗ' ಕರ್ತೃ ಹಾಗೂ ಅವರ ಹೆಸರನ್ನು ಧರಿಸಿದ ನೃಪತುಂಗನೇ ಕವೀಶ್ವರ ಎಂದು ವಾದಿಸಿ, ಶ್ರೀವಿಜಯ–ಕವೀಶ್ವರ–ನೃಪತುಂಗ ಏಕೈಕ ವ್ಯಕ್ತಿ ಎಂದು ಸಿದ್ಧಾಂತ ಮಾಡಲಾಗಿದೆ.

---

೬. ಈ ಪಕ್ಷದವರ ವಾದ ಬಹಳ ದುರ್ಬಲವಾದದ್ದು. ಆದ್ದರಿಂದ, ಅದನ್ನು ಇಲ್ಲಿ ಪ್ರತ್ಯೇಕವಾಗಿ ಪ್ರಸ್ತಾಪಿಸುವ ಅಗತ್ಯವಿಲ್ಲ. 'ತನಗಾಗಿಸಿದೊಂ ಕವೀಶ್ವರಂ' ಎಂಬಲ್ಲಿ ಕವೀಶ್ವರನು 'ತನಗಾಗಿಸಿಕೊಂಡನು' ಎಂಬ ಕವೀಶ್ವರ ಪಕ್ಷದವರ ಕ್ರಿಯಾರ್ಥ ಹೊಂದುವುದಿಲ್ಲ. 'ತನಗಾಗಿಸಿದವನು' ಎಂಬ ಕೃಲ್ಲಿಂಗದ ಅರ್ಥ ಹಿಡಿಯಬೇಕು ಎಂಬ ನನ್ನ ಅಭಿಪ್ರಾಯವನ್ನು ಪ್ರಶ್ನಿಸಿ, ಪಾಡಿದಂ / ಪಾಡಿದೊಂ ಎಂಬ ಕಿಟ್ಟೆಲ್ ವ್ಯಾಕರಣದ (ಪು.೧೩೮) ದೃಷ್ಟಾಂತಗಳನ್ನು ಕೊಟ್ಟು, 'ಈ ಬಗೆಯ ಪ್ರಯೋಗದ ಒಂದು ಉದಾಹರಣೆಯನ್ನು ಕೊಟ್ಟಿದ್ದರೆ ಶ್ರೀ ವಿಜಯವಾದಿಗಳ ಈ ಆಗ್ರಹದ ಸೂಚನೆ ವಿಚಾರಾರ್ಹವಾಗುತ್ತಿತ್ತು' ಎಂದು ಶ್ರೀ ಭೀಮರಾವ್ ಚಿಟಗುಪ್ಪಿಯವರು ಆಕ್ಷೇಪಿಸಿದ್ದಾರೆ. (ಕವಿರಾಜಮಾರ್ಗ ಪ್ರಶಸ್ತಿ, ಪು.–೧೧೩). ಕವಿರಾಜಮಾರ್ಗದಲ್ಲಿಯೆ ಅಂತಹ ಪ್ರಯೋಗಗಳು ಇರುವುದನ್ನು ಗಮನಿಸಬಹುದು: 'ನಿನ್ನನ್ನನಪ್ಪೊನ್' (ii–೧೪೮), 'ವಿಗಳಿತರಾಗನಾವೊಂ' (ii–೧೫೨).

ಏಕ ವ್ಯಕ್ತಿ ಎಂದು ಭಾವಿಸುವುದಕ್ಕೂ ಅವಕಾಶವಿದೆ.[೬] ಕವಿರಾಜಮಾರ್ಗದ ಪದ್ಯಗಳು ಶಬ್ದಮಣಿದರ್ಪಣದಲ್ಲಿ ಉದಾಹೃತವಾಗಿರುವುದರಿಂದ, ಕೇಶಿರಾಜನು ಕವಿರಾಜಮಾರ್ಗದ ಕರ್ತೃ ಶ್ರೀವಿಜಯ ಎಂದು ತಿಳಿದಿದ್ದ ಕಾರಣ ಅವನ ಹೆಸರನ್ನು ಸ್ಮರಿಸಿದ್ದಾನೆ. ಹೀಗೆ ಊಹಿಸುವುದು ತರ್ಕಬದ್ಧ.

(೨) ದಿ|| ಡಿ.ಕೆ.ಭೀಮಸೇನರಾಯರು ತಮ್ಮ 'ಶಬ್ದಮಣಿದರ್ಪಣದ ಪಾಠಾಂತರಗಳು' ಎಂಬ ಗ್ರಂಥದಲ್ಲಿ (೧೯೫೧, ಪು. ೪೧–೪೪) ತಮಗೆ ದೊರೆತ ಆ ಗ್ರಂಥದ ಹಸ್ತಪ್ರತಿಯಲ್ಲಿ ಕವಿರಾಜಮಾರ್ಗದ II–೫; ೨೮, ೨೯, ೩೦ ಮತ್ತು ೪೩ ಪದ್ಯಗಳು ಉದಾಹೃತವಾಗಿವೆಯೆಂದೂ, ಶಬ್ದಮಣಿದರ್ಪಣದ ವ್ಯಾಖ್ಯಾನಕಾರನು ಅವುಗಳಿಗೆ ವೃತ್ತಿಯನ್ನು ಬರೆದಿರುವನೆಂದೂ, ಪದ್ಯ II–೮೨ರ ವೃತ್ತಿಯಲ್ಲಿ 'ನೃಪತುಂಗದೇವನ ಮತದಿಂ ಪೇೞ್ವೆಂ' ಎಂದೂ, II–೫ ಪದ್ಯದ ಕೆಳಗೆ 'ಶ್ರೀವಿಜಯನ ಪ್ರಯೋಗಂ' ಎಂದೂ ವ್ಯಾಖ್ಯಾನಕಾರನು ಬರೆದಿರುವುದಾಗಿಯೂ ತಿಳಿಸಿದ್ದಾರೆ; ಮತ್ತು "ಶ್ರೀವಿಜಯನೇ ನೃಪತುಂಗದೇವನೆಂಬುದು ಈ ವ್ಯಾಖ್ಯಾನಕಾರನ ಬರವಣಿಗೆಯಿಂದ ಸ್ಪಷ್ಟವಾಗಿದೆ" ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ನಮ್ಮ ಅಭಿಪ್ರಾಯದಲ್ಲಿ, ವ್ಯಾಖ್ಯಾನಕಾರನು ಕವಿರಾಜಮಾರ್ಗದ ಕರ್ತೃತ್ವದ ಬಗೆಗೆ ಸ್ಪಷ್ಟವಾದ ಅಭಿಪ್ರಾಯವನ್ನು ಹೊಂದಿಲ್ಲ.

(೩) ಭಟ್ಟಾಕಲಂಕನು (ಕ್ರಿ.ಶ.೧೬೦೪) ತನ್ನ 'ಶಬ್ದಾನುಶಾಸನ'ದಲ್ಲಿ ೨೮೮ನೆಯ ಸೂತ್ರದ ವ್ಯಾಖ್ಯಾನದಲ್ಲಿ ದಕ್ಷಿಣೋತ್ತರಮಾರ್ಗಪ್ರಯೋಗ ಭೇದವನ್ನು ಪ್ರಸ್ತಾವಿಸಿ, ಅದನ್ನು 'ನೃಪತುಂಗಗ್ರಂಥೇ ದ್ರಷ್ಟವ್ಯ ಇತಿ' (ನೃಪತುಂಗ ಗ್ರಂಥದಲ್ಲಿ ನೋಡತಕ್ಕದ್ದು) ಎಂದು ಹೇಳಿದ್ದಾನೆ. ಇಲ್ಲಿ, 'ನೃಪತುಂಗ ಗ್ರಂಥ' ಎಂದರೆ ಅವನು ಕವಿರಾಜಮಾರ್ಗವನ್ನೆ ಉದ್ದೇಶಿಸಿದ್ದಾನೆ ಎಂಬ ಬಗೆಗೆ ಸಂಶಯವಿಲ್ಲ. ಆದರೆ, ಕವಿರಾಜಮಾರ್ಗ ಹುಟ್ಟಿ ೬೦೦ ವರ್ಷಗಳಾದ ಮೇಲೆ ಕಾಣಿಸಿಕೊಂಡ ಗ್ರಂಥದ ಮಾತಿಗೆ ಕಾಲದೃಷ್ಟಿಯಿಂದ ಸಮೀಪಸ್ಥರಾದ ಕೇಶಿರಾಜ ದುರ್ಗಸಿಂಹರ ಹೇಳಿಕೆಗಳಿಗಿಂತ ಹೆಚ್ಚಿನ ಬೆಲೆ ಕೊಡುವುದು ಸರಿಯಾಗದು. ಕವಿರಾಜಮಾರ್ಗದಲ್ಲಿ ಪ್ರತಿ ಪರಿಚ್ಛೇದಾಂತದಲ್ಲೂ 'ನೃಪತುಂಗ ದೇವಾನುಮತಮಪ್ಪ' ಎಂಬ ಮಾತೂ ಗ್ರಂಥದುದ್ದಕ್ಕೂ ಮೇಲಿಂದಮೇಲೆ ಬರುವ ನೃಪತುಂಗಪರವಾದ ಉಕ್ತಿಗಳೂ

---

ಹೇಳಿರುವಲ್ಲಿ, ಪಂಜೆ ಮಂಗೇಶರಾಯರು ನಿಶ್ಚಿತವಾಗಿ ಹೇಳಿರುವುದು ಗಮನಾರ್ಹ. ಯಾವುದೇ ಒಂದು ಪ್ರಮಾಣಭೂತ ಗ್ರಂಥದಲ್ಲಿನ ಅಡಿ ಟಿಪ್ಪಣಿಗಳನ್ನು ಅಮುಖ್ಯ ಎಂದು ಅಲಕ್ಷಿಸಲಾಗದು ಎಂಬುದಕ್ಕೆ ಇದೊಂದು ನಿದರ್ಶನ.

ತಿದ್ದುಪಾಟು ಮಾಡುವುದು ಸರಿಯಲ್ಲ; (ii)ಚಕ್ರಶ್ಲೋಕದ ಪದ್ಧತಿಯ ಮೇರೆಗೆ ಕವಿನಾಮವೊಂದು ಉದ್ಧೃತವಾಗಿದೆಯೇ ಹೊರತು, ಕೃತಿನಾಮ ಉದ್ಧೃತವಾಗಿಲ್ಲ. (iii)'ಜಯಾಟ್ವಿ' ಎನ್ನವುದು 'ಶ್ರೀವಿಜಯ' ಆಗಲಾರದು. ತಿಮ್ಮಪ್ಪಯ್ಯನವರ ಪ್ರಯತ್ನವೇನೋ ಅತ್ಯಂತ ಶ್ಲಾಘ್ಯ. ಇತರ ಯಾರಿಗೂ ಈ ಪದ್ಯ ತನ್ನ ರಹಸ್ಯವನ್ನು ಬಿಟ್ಟುಕೊಟ್ಟಿಲ್ಲ. ಹೀಗಿರುವುದರಿಂದ, ಈ ಪದ್ಯ ಪ್ರಕ್ಷಿಪ್ತವಾಗಿರಬಹುದೇ ಎಂಬ ಸಂದೇಹಕ್ಕೂ ಅವಕಾಶವಿದೆ. ಕರ್ತೃವಿನ ಬಗೆಗೆ ನಮ್ಮ ಮುಂದಿರುವ ಹೆಸರುಗಳ ಪೈಕಿ ಯಾವುದೊಂದೂ ಈ ಪದ್ಯದಿಂದ ಉದ್ಧಾರವಾದರೂ ಸರಿಯೆ, ಆ ಹೆಸರಿನಾತ ಕೃತಿಕರ್ತೃ ಎಂದು ನಿರ್ವಿವಾದವಾಗಿ ತೀರ್ಮಾನಿಸಬಹುದು. ಆದರೆ, ಸದ್ಯದ ಪರಿಸ್ಥಿತಿಯಲ್ಲಿ ಈ ಪದ್ಯ ಯಾವ ಪಕ್ಷದವರಿಗೂ ಅನುಕೂಲವಾಗುವಂತಿಲ್ಲ.

**(II) ಬಾಹ್ಯ ಪ್ರಮಾಣಗಳು:**

(೧) ಶಬ್ದಮಣಿದರ್ಪಣದಲ್ಲಿ ಕೇಶಿರಾಜನು ಪ್ರಮಾಣ ಗ್ರಂಥಕಾರರ ಗುಂಪಿನಲ್ಲಿ 'ಶ್ರೀವಿಜಯ'ನನ್ನೂ ಸೇರಿಸಿ, ಅವರ 'ಸುಮಾರ್ಗಮಿದಜೊಳೆ ಲಕ್ಷ್ಯಂ' ಎಂದು ಹೇಳಿದ್ದಾನೆ. ಈ ಶ್ರೀವಿಜಯನು ಕವಿರಾಜಮಾರ್ಗವನ್ನು ರಚಿಸಿದ ಶ್ರೀವಿಜಯನೋ, ದೊಡ್ಡಯ್ಯ ಮಂಗರಸ ಮುಂತಾದವರು ಸ್ಮರಿಸಿರುವ 'ಚಂದ್ರಪ್ರಭಪುರಾಣ'ಕರ್ತನಾದ ಶ್ರೀವಿಜಯನೋ, ಖಂಡಿತವಾಗಿ ಹೇಳುವುದು ಕಷ್ಟ. ಇಬ್ಬರು ಶ್ರೀವಿಜಯರೂ

---

*೭. ಪ್ರಾಚೀನ ಕನ್ನಡ ಗ್ರಂಥಗಳಿಂದಲೂ ಕೆಲವು ಶಾಸನಗಳಿಂದಲೂ ಅನೇಕ ಶ್ರೀವಿಜಯರು ಇದ್ದರೆಂಬ ಸಂಗತಿ ತಿಳಿದು ಬರುತ್ತದೆ. ಶಬ್ದಮಣಿದರ್ಪಣದಲ್ಲಿ ಉಕ್ತನಾದ ಶ್ರೀವಿಜಯ ಕವಿರಾಜಮಾರ್ಗಕಾರನೇ ಎಂಬುದು ಪಂಜೆ ಮಂಗೇಶರಾಯರ ಅಭಿಪ್ರಾಯ::

"ಶ್ರೀವಿಜಯ Who is generally addressed in the plural by the succeeding poets is the reputed author of the famous poem ಕವಿರಾಜಮಾರ್ಗ, a book of the 8th century on poetics."

ಮೊದಲ ಸಲ ೧೮೭೨ರಲ್ಲಿ ಕಿಟ್ಟೆಲ್ ಅವರಿಂದ ಸಂಪಾದಿತವಾದ ಶಬ್ದಮಣಿದರ್ಪಣದ ಮೂರನೆಯ ಆವೃತ್ತಿ ೧೯೨೦, ಪು.–೬ರಲ್ಲಿನ ಅಡಿ ಟಿಪ್ಪಣಿ. ಈ ಮೂರನೆಯ ಆವೃತ್ತಿಯನ್ನು ಪರಿಷ್ಕರಿಸಿದವರು ದಿ॥ ಪಂಜೆ ಮಂಗೇಶರಾಯರು. ೧೮೯೪ರಲ್ಲಿ ಪ್ರಕಟವಾದ ಕಿಟ್ಟೆಲ್ ನಿಘಂಟಿನಲ್ಲಿ ಕವಿರಾಜಮಾರ್ಗದ ಶಬ್ದ ಪ್ರಯೋಗಗಳನ್ನು ತೆಗೆದುಕೊಂಡಿಲ್ಲ. ಕವಿರಾಜಮಾರ್ಗದ ಪ್ರಥಮ ಮುದ್ರಣ ಪ್ರಕಟವಾದದ್ದು ೧೮೯೮ರಲ್ಲಿ. ಆದ್ದರಿಂದ ಈ ಅಡಿ ಟಿಪ್ಪಣಿಯನ್ನು ಬರೆದವರು ಪಂಜೆಯವರಿರಬೇಕು. ಈ ಅಡಿ ಟಿಪ್ಪಣಿಯ ಅಭಿಪ್ರಾಯವನ್ನು ನಾನು ಇದಕ್ಕೆ ಮೊದಲು ಗಮನಿಸಿರಲಿಲ್ಲ. ಇತರ ವಿದ್ವಾಂಸರೂ ಗಮನಿಸಿದಂತೆ ಕಂಡುಬರುವುದಿಲ್ಲ. ಆರ್.ನರಸಿಂಹಾಚಾರ್ಯರು ಕವಿಚರಿತೆಯಲ್ಲಿ (೧೯೧೭ ಮತ್ತು ೧೯೨೦) ಕರ್ತೃ – ಶ್ರೀ ವಿಜಯನಿರಬಹುದು ಎಂದು ಸಂದೇಹಪೂರ್ವಕ

ಈ ವಾದಗಳ ಸರಣಿಯನ್ನೇ ಹಿಡಿದು, ದುರ್ಗಸಿಂಹನ ಪದ್ಯವನ್ನು ಶ್ರೀವಿಜಯಕರ್ತೃತ್ವ ಪರವಾಗಿಯೇ ಯುಕ್ತಿಯುಕ್ತವಾಗಿ ವಿವರಿಸಬಹುದು. ಶ್ರೀವಿಜಯನು ನೃಪತುಂಗಸಭಾಸದ; ಕವಿ ಮತ್ತು ಲಕ್ಷಣಶಾಸ್ತ್ರಜ್ಞ; ಬಹುಶಃ ನೃಪತುಂಗನ ಕೋರಿಕೆಯಂತೆ, ದಂಡಿಭಾಮಹರನ್ನು ಅನುಸರಿಸಿ ಆತ 'ಕವಿಮಾರ್ಗ'ವನ್ನು ರಚಿಸಿದ್ದನು. ಅವನು ಅದನ್ನು ನೃಪತುಂಗ ಸಭೆಯಲ್ಲಿ ಶ್ರುತಪಡಿಸಿದನು. ಕನ್ನಡನಾಡಿನ ಚಕ್ರವರ್ತಿಯಾಗಿದ್ದ ನೃಪತುಂಗನು ಕನ್ನಡಕ್ಕೆ ಸಂಬಂಧಪಟ್ಟಂತೆ ಶಾಸ್ತ್ರವಿಚಾರವನ್ನು ವಿಸ್ತರಿಸಿ ಪ್ರತಿಪಾದಿಸಬೇಕೆಂದು ಸೂಚಿಸಿರಬಹುದು; ಅಲ್ಲದೆ, ಸ್ವತಃ ವಿದ್ವಾಂಸನಾಗಿದ್ದ ನೃಪತುಂಗನು 'ಕವಿಮಾರ್ಗ'ದ ಇತರ ಶಾಸ್ತ್ರವಿಚಾರಗಳನ್ನು ತನ್ನ ಸಭೆಯಲ್ಲಿ ಚರ್ಚಿಸಿ, ತನ್ನ ಅಭಿಪ್ರಾಯಗಳನ್ನೂ ಸೂಚಿಸಿರಬಹುದು. ಇಂಥ ಒಂದು ವಿಚಾರಮಥನದ ಫಲಿತವಾಗಿ 'ಕವಿರಾಜಮಾರ್ಗ' ರೂಪಗೊಂಡಿರಬೇಕೆಂಬುದಕ್ಕೆ ಗ್ರಂಥದಿಂದ ಅನೇಕ ಸಂದರ್ಭೋಕ್ತಿಗಳನ್ನು ನಿದರ್ಶನಗಳಾಗಿ ಕೊಡಬಹುದು. ಶ್ರೀ ವಿಜಯನು ತನ್ನ ಪ್ರಭುವಿನ ಹಾಗೂ ಇತರ ವಿದ್ವಾಂಸರ ಅಭಿಪ್ರಾಯಗಳೆಲ್ಲವನ್ನೂ ಸ್ವೀಕರಿಸಿ ಅಳವಡಿಸಿ, ತನ್ನ 'ಕವಿಮಾರ್ಗ'ವನ್ನು 'ಕವಿರಾಜಮಾರ್ಗ' ಎಂದು ಕರೆದು, ಪರಿಚ್ಛೇದಾಂತ ಪದ್ಯಗಳಲ್ಲಿ 'ಶ್ರೀವಿಜಯಪ್ರಭೂತ' ಮುಂತಾಗಿ ತನ್ನ ಕರ್ತೃತ್ವವನ್ನೂ ಸೂಚಿಸಿ, ಪರಿಚ್ಛೇದಾಂತ ಗದ್ಯದಲ್ಲಿ ತನ್ನ ಕೃತಿಗೆ ಆಶ್ರಯದಾತ ನೃಪತುಂಗನ ಮಾನ್ಯತೆಯಿದೆ, ಒಪ್ಪಿಗೆಯಿದೆ ಎಂಬುದನ್ನು 'ನೃಪತುಂಗದೇವಾನುಮತಮಪ್ಪ ಕವಿರಾಜಮಾರ್ಗ' ಎಂಬ ಮಾತುಗಳಲ್ಲಿ ಸ್ಮರಿಸಿದ್ದಾನೆ. ಅಲ್ಲದೆ, ಗ್ರಂಥದ ಅನೇಕ ಕಡೆಗಳಲ್ಲಿ 'ಇದು ನೃಪತುಂಗನ ಮತ, ವಿಚಾರಕ್ರಮ, ಮಾರ್ಗ' ಎಂದು ಮುಂತಾಗಿ ಹೇಳಿ, ಗ್ರಂಥರಚನೆಯಲ್ಲಿ ನೃಪತುಂಗನ ಪಾಲುಗಾರಿಕೆ ಎಷ್ಟು ಎಂಥದು ಎಂಬುದನ್ನು ಸ್ಪಷ್ಟವಾಗಿ ಸೂಚಿಸಿದ್ದಾನೆ. 'ಕವಿಮಾರ್ಗ' ಪೂರ್ತಿಯಾಗಿ ಶ್ರೀವಿಜಯನದು; ಕವಿಕಾವ್ಯ ನಾಮಗಳನ್ನು ಹಸ್ತಪ್ರತಿ ದುರ್ಗಸಿಂಹನ ಕೈಗೆ ಬಂದಿದೆಯೆಂದು ಕಾಣುತ್ತದೆ. ಅವನು 'ಶ್ರೀವಿಜಯರ ಕವಿಮಾರ್ಗಂ' – ಎಂದು ಹೇಳಲು ಈ ಸಂದರ್ಭ ಕಾರಣವಾಗಿದ್ದಿರಬಹುದು.

(೫) ಈಚೆಗೆ, ಎರಡನೆಯ ನಾಗವರ್ಮನ 'ವರ್ಧಮಾನ ಪುರಾಣ'ದ ಹಸ್ತಪ್ರತಿ ದೊರಕಿದ್ದು, ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾಗಿದೆ. ಇದರಲ್ಲಿ, ಪೂರ್ವಕವಿಗಳನ್ನು ಹೊಗಳುವ ಸಂದರ್ಭದಲ್ಲಿ ಶ್ರೀವಿಜಯನನ್ನು ರಘುವಂಶ ಪುರಾಣ ಕರ್ತೃವೆಂದು ಹೊಗಳುವ ಪದ್ಯ ಹೀಗಿದೆ:

ಗ್ರಂಥವು ನೃಪತುಂಗರಚಿತ ಎಂಬ ಪ್ರತೀತಿ ಹುಟ್ಟಿ ಬೆಳೆಯಲು ಕಾರಣವಾಗಿವೆ. ಭಟ್ಟಾಕಳಂಕನ ಮಾತಿಗೂ ಆ ಉಕ್ತಿಗಳೂ ಈ ಪ್ರತೀತಿಯೂ ಆಧಾರಗಳು. ಆಗಿನ ದಿನಗಳಲ್ಲಿ ಈಗಿನಂತೆ ಗ್ರಂಥದ ಕರ್ತೃತ್ವದ ನಿಜಾಂಶವನ್ನು ಹುಡುಕಿ ತಿಳಿಯಲು ಯಾರೂ ಆಸಕ್ತರಾಗಿರಲಿಲ್ಲ.

(೪) ದುರ್ಗಸಿಂಹನು (ಸು.ಕ್ರಿ.ಶ.೧೧೧೫) ತನ್ನ ಪಂಚತಂತ್ರದಲ್ಲಿ –

ಶ್ರೀವಿಜಯರ ಕವಿಮಾರ್ಗಂ। ಭಾವಿಪ ಕವಿಜನದಮನಕೆ ಕನ್ನಡಿಯುಂ ಕೈ–॥
ದೀವಿಗೆಯುಮಾದುದಱಿಂ। ಶ್ರೀವಿಜಯರ್ ದೇವರವರನೇ ವಣ್ಣಿಪುದೋ॥

–ಎಂದು ಶ್ರೀವಿಜಯನನ್ನೂ ಆತನ ಕೃತಿಯನ್ನೂ ಮಾನ್ಯಮಾಡಿಕೊಂಡಿದ್ದಾನೆ. 'ಕವಿಮಾರ್ಗ' ಎಂಬ ಮಾತು ವಿವಾದಕ್ಕೆ ಒಳಗಾಗಿದೆ. ದುರ್ಗಸಿಂಹನು 'ಕವಿರಾಜಮಾರ್ಗ' ಎಂಬ ಗ್ರಂಥವನ್ನು ಕುರಿತಿದ್ದರೆ, 'ಕವಿಮಾರ್ಗ' ಎಂದು ಗ್ರಂಥನಾಮವನ್ನು ಸಂಕ್ಷೇಪಗೊಳಿಸಲು ಕಾರಣವೇನು? ಎಂಬ ಪ್ರಶ್ನೆಗೆ ಸೂಕ್ತ ಸಮಾಧಾನವನ್ನು ಕೊಡಬೇಕಾಗುತ್ತದೆ. ಛಂದಸ್ಸಿನ ಅಗತ್ಯಕ್ಕೋಸ್ಕರ ಹಾಗೆ ಮಾಡಿರಬಹುದು, ಎಂದರೆ, ದುರ್ಗಸಿಂಹನಂಥ ಸಮರ್ಥ ಕವಿ ಕವಿರಾಜಮಾರ್ಗ ಪದವನ್ನು ಪದ್ಯದಲ್ಲಿ ಅಳವಡಿಸಿಕೊಳ್ಳಲಾರದೆ ಹೋದನು ಎಂದು ತೀರ್ಮಾನಿಸಬೇಕಾಗುತ್ತದೆ. ಹಾಗೇನೂ ತೀರ್ಮಾನಿಸಬೇಕಾಗಿಲ್ಲ. ಕನ್ನಡ ಕಾವ್ಯ ಪ್ರಪಂಚದಲ್ಲಿ ಕವಿಗಳು ತಮ್ಮ ಕೃತಿಗಳನ್ನು ಸಮಾನಾರ್ಥಕವಾದ ಬೇರೆಯ ಹೆಸರಿನಿಂದ ನಿರ್ದೇಶಿಸುವ ಪದ್ಧತಿಯೂ ಇದೆ. ದುರ್ಗಸಿಂಹನ ಕಾಲದಲ್ಲಿ 'ಕವಿರಾಜಮಾರ್ಗ' 'ಕವಿಮಾರ್ಗ' ಎಂದೂ ಪ್ರಸಿದ್ಧವಾಗಿದ್ದಿರಬಹುದು; ಅವನ ಕೈಗೆ ಬಂದ ಹಸ್ತಪ್ರತಿಯಲ್ಲಿ ಆ ಹೆಸರೇ ಲಿಖಿತವಾಗಿದ್ದಿರಬಹುದು.

ಶ್ರೀ ವಿಜಯನ ಕರ್ತೃತ್ವವನ್ನು ಒಪ್ಪದವರು 'ಶ್ರೀವಿಜಯರ ಕವಿಮಾರ್ಗ' ಎಂಬ ಉಕ್ತಿಯನ್ನು ಹೇಗೆ ವಿವರಿಸಿದ್ದಾರೆ ಎಂಬ ವಿಚಾರವನ್ನು ಬೇರೆಯ ಸಂದರ್ಭದಲ್ಲಿ ಈ ಹಿಂದೆ ಪ್ರಸ್ತಾಪಿಸಲಾಗಿದೆ. ಶ್ರೀವಿಜಯ ಜಿನಸೇನರ ನಾಮಾಂತರ, ಅವರು 'ಕವಿಮಾರ್ಗ'ವನ್ನು ರಚಿಸಿದ್ದರು, ಅವರ ಹೆಸರನ್ನೇ ತಾನೂ ಧರಿಸಿ ನೃಪತುಂಗನು ಅದನ್ನು 'ಕವಿರಾಜಮಾರ್ಗ'ವನ್ನಾಗಿ ಮಾಡಿಕೊಂಡನು – ಇದು ಒಂದು ವಿವರಣೆ. ಶ್ರೀವಿಜಯನೆಂಬ ಕವಿಯ 'ಕವಿಮಾರ್ಗ'ವನ್ನು ಕವೀಶ್ವರನೆಂಬ ಕವಿ ಉಪಯೋಗಿಸಿಕೊಂಡು, ಪ್ರಭುವಾದ ನೃಪತುಂಗನಿಗೆ ಕೀರ್ತಿ ಬರಲೆಂದು ಅವನ ಗ್ರಂಥವೆಂಬ ಭ್ರಾಂತಿ ಬರುವಂತೆ 'ಕವಿರಾಜಮಾರ್ಗ'ವನ್ನು ರಚಿಸಿ ತಾನು ಪ್ರಯೋಜನ ಪಡೆದನು – ಎಂಬುದಿನ್ನೊಂದು ವಿವರಣೆ. ಈ ಎರಡು ವಾದಗಳಲ್ಲಿಯೂ ಹುರುಳಿಲ್ಲವೆಂಬುದನ್ನು ಈ ಮೊದಲೇ ಸಾಧಿಸಿ ತೋರಿಸಿದೆ.

ಅವನ ಲಕ್ಷಣ ಜ್ಞಾನಕ್ಕೂ ರಘುವಂಶ ಮಹಾಪುರಾಣವು ಅವನ ಲಕ್ಷ್ಯಗ್ರಂಥಕ್ಕೂ ನಿದರ್ಶನಗಳು. ಮಂಗರಸನು (ಸು.೧೫೦೮) 'ದೇವಚಂದ್ರಪ್ರಭರನು ಕೊಂಡಾಡಿದ ಶ್ರಿವಿಜಯರ'... ಎಂದು ಚಂಪೂ ಕವಿಗಳ ಗುಂಪಿನಲ್ಲಿ ಶ್ರೀವಿಜಯನ ಹೆಸರನ್ನು ಬಹುವಚನದ ಗೌರವದಿಂದ ಸ್ಮರಿಸಿರುವುದು ದುರ್ಗಸಿಂಹನ ಗೌರವಾರ್ಥಕ 'ಶ್ರಿವಿಜಯರ್ ದೇವರ್' ಎಂಬ ಬಹುವಚನದ ಪ್ರಯೋಗವನ್ನು ನೆನಪಿಗೆ ತರುತ್ತದೆ. ಲಕ್ಷ್ಯ ಲಕ್ಷಣ ನಿರ್ಮಾಪಕನೂ ಜೈನಧರ್ಮದೀಪಕನೂ ಆದ ಕವಿರಾಜಮಾರ್ಗಕಾರ ಶ್ರೀವಿಜಯನನ್ನೇ ಇವರಿಬ್ಬರೂ ಗೌರವಪೂರ್ವಕ ಸ್ಮರಿಸಿದ್ದಾರೆ ಎಂದು ತಿಳಿಯಬಹುದಾಗಿದೆ. ದೊಡ್ಡಯ್ಯನು (ಸು.೧೫೫೦) 'ಚಂದ್ರಪ್ರಭ ಪುರಾಣವ ಪೇಟ್ದ ವಿಜಯ ಕವೀಂದ್ರ' ಎಂದು ಹೇಳಿರುವುದನ್ನೂ ನೆನೆಯಬಹುದು.

### ಕವಿರಾಜಮಾರ್ಗ ಶ್ರೀವಿಜಯಕೃತ

ಈವರೆಗೆ ಪರಿಶೀಲಿಸಿದ ಎಲ್ಲ ಪ್ರಮಾಣಗಳನ್ನೂ ಒಟ್ಟಿನಲ್ಲಿ ತೂಗಿ ನೋಡಿದಾಗ, ಕವಿರಾಜಮಾರ್ಗ ರಘುವಂಶ ಮಹಾಪುರಾಣ ಚಂದ್ರಪ್ರಭ ಪುರಾಣ – ಈ ಮೂರೂ ಏಕಕರ್ತೃಕ, ಆ ಕರ್ತೃ ಶ್ರೀವಿಜಯ, ಎಂಬ ತೀರ್ಮಾನಕ್ಕೆ ಧಾರಾಳವಾದ ಅವಕಾಶವಿದೆ. ಕವಿರಾಜಮಾರ್ಗದಲ್ಲಿ ಪದ್ಯಕವಿಗಳ ಸಾಲಿನಲ್ಲಿ ಮೊದಲಲ್ಲೇ ಉಕ್ತನಾದ 'ಪರಮ ಶ್ರೀವಿಜಯ ಕವೀಶ್ವರ'ನು ಒಬ್ಬ ಪೂರ್ವ ಕವಿಯೋ, ಕವಿರಾಜಮಾರ್ಗಕಾರನಾದ ಶ್ರೀವಿಜಯನೇ ತನ್ನ ಹೆಸರನ್ನು ಮೊದಲು ಹೇಳಿಕೊಂಡಿರುವನೋ – ನಿಶ್ಚಯಿಸುವುದು ಕಷ್ಟ. ಅವನು ಪೂರ್ವ ಕವಿ ಎನ್ನುವುದಕ್ಕೆ ಆಧಾರ ಸಿಕ್ಕಿದರೆ, ಆತ ಚಂದ್ರಪ್ರಭ ಪುರಾಣಕರ್ತೃ ಎಂದು ಊಹಿಸಲೂಬಹುದು. ಸದ್ಯದ ಪರಿಸ್ಥಿತಿಯಲ್ಲಿ ಸಕಾರಣವಾದ ಊಹೆಗಳ ಮೇಲೆಯೇ ನಮ್ಮ ತೀರ್ಮಾನಗಳ ಕಟ್ಟಡ ನಿಲ್ಲಬೇಕಾಗಿದೆ. ಆದರೆ, ಕವಿರಾಜಮಾರ್ಗ ಮತ್ತು ರಘುವಂಶ ಮಹಾಪುರಾಣಗಳ ಕರ್ತೃ ಒಬ್ಬನೇ ಶ್ರೀವಿಜಯ ಎಂಬ ತೀರ್ಮಾನ ಊಹೆಗಳ ಸೀಮೆಯನ್ನು ದಾಟಿ, ನಿಶ್ಚಿತದಲ್ಲಿ ನೆಲೆಗೊಂಡಿದೆ ಎಂದು ನಾನು ಭಾವಿಸಿದ್ದೇನೆ. ಇದು ಹೇಗಿದ್ದರೂ, ಕವಿರಾಜಮಾರ್ಗವಂತೂ ಶ್ರೀವಿಜಯಕೃತ; ಅದರ ಮೇಲೆ ಅಚ್ಚೊತ್ತಿಬಿದ್ದಿರುವುದು ನೃಪತುಂಗದೇವ ಮತ.

### ೩. ಕವಿರಾಜಮಾರ್ಗದ ವಿಷಯವಿನ್ಯಾಸ

ಕವಿರಾಜಮಾರ್ಗದಲ್ಲಿ ಮೂರು ಪರಿಚ್ಛೇದಗಳಿವೆ: (೧) 'ದೋಷಾದೋಷಾನುವರ್ಣನ ನಿರ್ಣಯಂ' ಎಂಬ ಮೊದಲನೆಯ ಪರಿಚ್ಛೇದದಲ್ಲಿ

ಅಘವಿಘಟನ ಕಾರಣಮಂ ।
(ಸು)ಘಟಿತ ಪದಬಂಧ ಬಂಧುರಾಳಂಕೃತಿಯಂ ॥
ಲಘುವಾಗೆ ಪೊಗಟಿ ಪೇಟ್ದಂ ।
ರಘುವಂಶ ಮಹಾಪುರಾಣಮಂ ಶ್ರೀವಿಜಯಂ ॥ (೧–೨)

ವರ್ಧಮಾನಪುರಾಣಕವಿ ನಾಗವರ್ಮನು ಗುಣವರ್ಮ ಪಂಪ ಪೊನ್ನ ರನ್ನ ಮೊದಲಾದ ಪ್ರಾಚೀನ ಜೈನಕವಿಗಳ ಪಂಕ್ತಿಯಲ್ಲಿ ಮೊತ್ತಮೊದಲು ಒಂದು ಪುರಾಣಕಾವ್ಯವನ್ನೂ ಅದರ ಕವಿಯನ್ನೂ ಕೊಂಡಾಡಿರುವುದರಿಂದ, ಕೃತಿ ಜೈನಧರ್ಮಾನುಸಾರಿಯಾದುದೆಂದೂ ಕೃತಿಕಾರ ಶ್ರೀವಿಜಯ ಜೈನಧರ್ಮಿಯನೆಂದೂ ಎಣಿಸಬಹುದು. 'ಲಘುವಾಗೆ ... ಪೇಟ್ದಂ' ಎಂದರೆ 'ಸಂಕ್ಷೇಪ'ವಾಗಿ ಹೇಳಿದನು ಎಂದು ಅರ್ಥವಾಗುತ್ತದೆ. ಆದ್ದರಿಂದ, ಸಂಸ್ಕೃತ ಇಲ್ಲವೆ ಪ್ರಾಕೃತ ಮೂಲ ರಘುವಂಶ ಮಹಾಪುರಾಣವನ್ನು ಆಧರಿಸಿ ಈ ಕನ್ನಡಕೃತಿ ರಚಿತವಾಗಿದೆಯೆಂದು ತೋರುತ್ತದೆ. ಈ ರಘುವಂಶ ಮಹಾಪುರಾಣದಲ್ಲಿ ರಾಮಾಯಣದ ಕಥೆಯೂ ಇರಬೇಕಷ್ಟೆ. ಕವಿರಾಜಮಾರ್ಗದಲ್ಲಿ ರಾಮಾಯಣದ ಕಥೆಗೆ ಸಂಬಂಧಪಟ್ಟ ಹಲವಾರು ಲಕ್ಷ್ಯ ಪದ್ಯಗಳಿವೆ. ಜೈನಸಂಪ್ರದಾಯದ ರಾಮಾಯಣದಿಂದ ಈ ಪದ್ಯಗಳು ಉದ್ಧೃತವಾಗಿರಬಹುದು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೮] ಇತರ ಲಕ್ಷ್ಯಪದ್ಯಗಳಂತೆ ಈ ಪದ್ಯಗಳಾದರೂ ಕವಿರಾಜಮಾರ್ಗಕಾರನಿಂದಲೇ ರಚಿತವಾದವು ಎಂದು ಸಕಾರಣವಾಗಿ ಊಹಿಸಬಹುದು. ನೃಪತುಂಗನ ಆಶ್ರಿತ ಸಭಾಸದನೂ ಜೈನನೂ ಆದ ವ್ಯಕ್ತಿಯೊಬ್ಬನಿಂದ ಕವಿರಾಜಮಾರ್ಗ ರಚಿತವಾಗಿರಬೇಕೆಂಬ ಅಭಿಪ್ರಾಯವನ್ನು ಈ ಹಿಂದೆಯೇ ವ್ಯಕ್ತಪಡಿಸಿದೆ. ಈವರೆಗೆ ಪರ್ದಿಟಲಿಸಿದ ಕೆಲವು ಆಂತರಿಕ ಹಾಗೂ ಬಾಹ್ಯ ಪ್ರಮಾಣಗಳಿಂದ ಕೃತಿಕಾರನು ಶ್ರೀವಿಜಯ ಎಂದೂ ವ್ಯಕ್ತಪಡುತ್ತದೆ. ಆದ್ದರಿಂದ, ರಘುವಂಶ ಮಹಾಪುರಾಣವನ್ನೂ ಕವಿರಾಜಮಾರ್ಗವನ್ನೂ ರಚಿಸಿದವನು ಒಬ್ಬನೇ ಎಂದು ಸದ್ಯದಮಟ್ಟಿಗೆ ನಿಶ್ಚಯಿಸಬಹುದು. ಕವಿರಾಜಮಾರ್ಗದಲ್ಲಿ ನೃಪತುಂಗ ಸಭಾಸದನು 'ಮಹಾಪುರುಷವ್ರತನಿಶ್ಚಿತಂ', ಹಾಗೂ 'ಲಕ್ಷ್ಯಲಕ್ಷಣಂ' ಎಂಬಿವೇ ಮುಂತಾದ ಅರ್ಥಪೂರ್ಣ ವಿಶೇಷಣಗಳಿಂದ ವರ್ಣಿತನಾಗಿರುವನಷ್ಟೆ. ಕವಿರಾಜಮಾರ್ಗವು

*೮. ಡಾ॥ ರಂ.ಶ್ರೀ. ಮುಗಳಿ: 'ಕನ್ನಡ ಸಾಹಿತ್ಯ ಚರಿತ್ರೆ' (೧೯೬೦), ಪು.–೨೨.

ಈ ಪ್ರಸ್ತಾಪದ ಸಾಂದರ್ಭಿಕ ಸಮಂಜಸತೆಯ ಅರಿವಾಗುತ್ತದೆ.

ಕವಿರಾಜಮಾರ್ಗದ ರಚನೆಯು ಕಾಲವನ್ನೂ ಅದು ಏಕೆ ರಚಿತವಾಯಿತೆಂಬುದನ್ನೂ ಈ ಮೊದಲೇ ಸೂಚಿಸಿದೆ. ಅದು ರಚಿತವಾಗುವ ಕಾಲಕ್ಕೆ ಕನ್ನಡ ಸಾಹಿತ್ಯ ಒಂದು ಮೇಲ್ಮಟ್ಟವನ್ನು ಮುಟ್ಟಿದ್ದಿರಬೇಕು. 'ಗದ್ಯಾಶ್ರಮ ಪದಗುರುತಾ ಪ್ರತೀತಿಯುಂ ಕೆಯ್ಕೊಂಡ' ಗದ್ಯಕವಿಗಳೂ ತಮ್ಮ 'ವಸ್ತುವಿಸ್ತರರಚನೆ'ಯಿಂದ 'ಲಕ್ಷ್ಯಂ ತದಾದ್ಯಕಾವ್ಯಕ್ಕೆಂದುಂ' ಎಂಬ ಪ್ರತಿಷ್ಠೆಯನ್ನು ಗಳಿಸಿದ್ದ 'ಪರಮ ಶ್ರೀವಿಜಯ ಕವೀಶ್ವರ'ನೇ ಮುಂತಾದ ಪದ್ಯ ಕವಿಗಳೂ ಆಗಿ ಹೋಗಿದ್ದರು. ಅಂದಿನ ಕನ್ನಡ ಸಾಹಿತ್ಯದ ಮೇಲೆ ಬಾಣನ ಹರ್ಷಚರಿತೆ ಕಾದಂಬರಿಗಳು ವಿಶೇಷ ಪ್ರಭಾವವನ್ನು ಬೀರಿದ್ದುವು. ಬಹುಶಃ ಈ ಪ್ರಭಾವ ಪರಿಣಾಮದಿಂದ, ಗದ್ಯದ ಪ್ರಾಧಾನ್ಯವುಳ್ಳ, ಆದರೆ ಗದ್ಯಪದ್ಯ ಸಮ್ಮಿಶ್ರಿತವೂ ಆದ, **ಗದ್ಯಕಥೆ** ಎಂಬ ಕಾವ್ಯ ಪ್ರಾಕಾರವನ್ನು 'ಚಿರಂತನಾಚಾರ್ಯರು' ಬಳಕೆಗೆ ತಂದಿದ್ದರು. ಅದು ಕನ್ನಡಕಾವ್ಯಗಳಲ್ಲಿ 'ಅಗಣಿತಗುಣ'ದಿಂದ ಕೂಡಿದ ವಿಶಿಷ್ಟ ಕಾವ್ಯರೂಪವಾಗಿದ್ದಿತು. ದಂಡಿಯ ಕಾವ್ಯದರ್ಶದಲ್ಲಿ ಗದ್ಯಪದ್ಯ ಮಿಶ್ರ ಕಾವ್ಯವನ್ನು ಚಂಪು ಎಂದು ಹೆಸರಿಸಿದ್ದರೂ ಅದನ್ನು ಅನುಸರಿಸಿದ ಈ ಗ್ರಂಥದಲ್ಲಿ ಆ ಹೆಸರು ಪ್ರಸಕ್ತವಾಗಿಲ್ಲದಿರುವುದು ವಿಚಾರಕ್ಕೆ ಎಡೆಗೊಟ್ಟಿದೆ. ಪುರಾತನ ಕವಿಗಳು ಆಗ್ಗೆ ಪ್ರಸಿದ್ಧವಾದ ಕಾವ್ಯದಲ್ಲಿ **ಚತ್ತಾಣ** ಮತ್ತು **ಬೆದಂಡೆ** ಎಂಬ ದೇಶ್ಯ ಪದ್ಯಕಾವ್ಯ ಪ್ರಕಾರಗಳನ್ನು ಸಮಾವೇಶಗೊಳಿಸಿದ್ದರು. ಚತ್ತಾಣದಲ್ಲಿ ಅಂಶಗಣ ನಿಬದ್ಧವಾದ ಅಕ್ಕರ, ಗೀತಿಕೆ, ತ್ರಿಪದಿ, ಮುಂತಾದ ದೇಶ್ಯ ಛಂದಸ್ಸಿನ ಪದ್ಯಗಳು ಕಂದವೃತ್ತಗಳೊಡನೆ ಸೇರಿಕೊಂಡಿರುತ್ತಿದ್ದುವು. ಈ ಬೆದಂಡೆ – ಚತ್ತಾಣಗಳು 'ನೆಗಟ್ತೆಯ ಕಬ್ಬ'ದೊಂದಿಗೆ (ಇದು ಬಹುಶಃ ಗದ್ಯಕಥೆ) ಕೂಡಿಕೊಂಡು, ಆಮೇಲೆ ಕನ್ನಡ ಚಂಪೂ ಕಾವ್ಯಪ್ರಕಾರ ರೂಪಗೊಂಡಂತೆ ಕಾಣುತ್ತದೆ.

**ದೋಷ ಪ್ರಕರಣದ ಪ್ರಾಮುಖ್ಯ :** ಹೀಗೆ, ಒಂದು ಪ್ರಾಚೀನ ಕಾವ್ಯ ಪರಂಪರೆಯಿಂದ ಶೋಭಿಸುತ್ತಿದ್ದ ಕನ್ನಡನಾಡು ನೃಪತುಂಗನ ಕಾಲದಲ್ಲಿ ಕಾವೇರಿಯಿಂದ ಗೋದಾವರಿಯವರೆಗೆ ವಿಸ್ತಾರವಾಗಿ ಹಬ್ಬಿತ್ತು. ಈಗಿನ ಉತ್ತರ ಕರ್ನಾಟಕದ ನಡುವಣ ನಾಡು ಅಂದಿನ 'ಕನ್ನಡದ ತಿರುಳು' ಎನ್ನಿಸಿತ್ತು. ಆದರೂ, ಒಟ್ಟಿನಮೇಲೆ ಎಲ್ಲ ನಾಡವರೂ 'ಕಾವ್ಯಪ್ರಯೋಗ ಪರಿಣತಮತಿಗಳ್' ಎನ್ನಿಸಿ, ಕಾವ್ಯವಿಚಾರದಲ್ಲಿ ಸದಭಿರುಚಿಯುಳ್ಳವರೂ ಕಾವ್ಯ ಪರಿಚಯವುಳ್ಳವರೂ ವಿಮರ್ಶನ ದೃಷ್ಟಿಯುಳ್ಳವರೂ ಆಗಿದ್ದರು. ಕನ್ನಡ ಜನ ಹೀಗೆ ಸಹಜವಾದ ಕಾವ್ಯಪ್ರಜ್ಞೆಯುಳ್ಳವರಾಗಿದ್ದರೂ ಸಂಸ್ಕೃತ ಪ್ರಾಕೃತಭಾಷೆಗಳಲ್ಲಿದ್ದಂತೆ

ಕನ್ನಡ ಕಾವ್ಯರಚನೆಯಲ್ಲಿ ಸಂಭವಿಸಬಹುದಾದ ದೋಷಗಳನ್ನೂ, ಕೆಲವು ದೋಷಗಳನ್ನು ಪರಿಹರಿಸುವ ಬಗೆಯನ್ನೂ ನಿರೂಪಿಸಿದೆ. (೨)'ಶಬ್ದಾಲಂಕಾರ ವರ್ಣನಾ ನಿರ್ಣಯಂ' ಎಂಬ ಎರಡನೆಯ ಪರಿಚ್ಛೇದದಲ್ಲಿ, ಶಬ್ದಗಳನ್ನು ಹೇಗೆ ಪ್ರಯೋಗಿಸಿದರೆ ಅವು ಕಾವ್ಯಕ್ಕೆ ಅಲಂಕಾರಪ್ರಾಯವಾಗಿರುತ್ತದೆ ಎಂಬ ಹಿನ್ನೆಲೆಯಲ್ಲಿ ವಿಶಿಷ್ಟರೀತಿಯಲ್ಲಿ ಪದಗಳನ್ನು ಪ್ರಯೋಗ ಮಾಡುವ ವಿಚಾರ, ಕನ್ನಡಕ್ಕೆ ಅತಿಶಯವಾದ ಪ್ರಾಸವಿಚಾರ, ಶಬ್ದಗುಣ ಮತ್ತು ಪದಬಂಧಗಳನ್ನು ಅವಲಂಬಿಸಿದಂತೆ ದಕ್ಷಿಣೋತ್ತರಮಾರ್ಗವಿಚಾರ, ಚಿತ್ರಕಾವ್ಯ ಅಥವಾ ದುಷ್ಕರಕಾವ್ಯ ವಿಚಾರ – ಇವುಗಳ ನಿರೂಪಣೆಯಿದೆ. (೩)'ಅರ್ಥಾಲಂಕಾರ ಪ್ರಕರಣಂ' ಎಂಬ ಮೂರನೆಯ ಪರಿಚ್ಛೇದದಲ್ಲಿ ೩೬ ಅರ್ಥಾಲಂಕಾರಗಳನ್ನು ನಿರೂಪಿಸಿದೆ. ಕಾವ್ಯದೋಷ ಪ್ರಕರಣದಲ್ಲಿ ವಿಶೇಷವಾಗಿ ಭಾಮಹನ ಕಾವ್ಯಾಲಂಕಾರವನ್ನು ಅನುಸರಿಸಿದ್ದರೂ, ಸ್ವತಂತ್ರ ವಿಚಾರಗಳನ್ನು ಒಳಗೊಂಡ ಭಾಗ ಹೆಚ್ಚಿನ ಪ್ರಮಾಣದಲ್ಲಿ ಎದ್ದು ಕಾಣುವಂತಿದೆ. ದ್ವಿತೀಯ ಪರಿಚ್ಛೇದದ ಗುಣ–ಮಾರ್ಗ ವಿವೇಚನೆಯಲ್ಲಿ ದಂಡಿಯ ಕಾವ್ಯಾದರ್ಶವನ್ನು ಅನುಸರಿಸಿದ್ದರೂ ದಂಡಿಯ ಲಕ್ಷಣ ನಿರೂಪಣೆಯನ್ನು ಕನ್ನಡ ಕಾವ್ಯರಚನೆಗೆ ಅನ್ವಯಿಸಿ ಹೇಳುವಲ್ಲಿಯೂ, ಲಕ್ಷಣಗಳಿಗೆ ಸ್ವಂತ ಲಕ್ಷ್ಯಗಳನ್ನು ಉದಾಹರಿಸುವಲ್ಲಿಯೂ ಶ್ರೀವಿಜಯನ ಸ್ವೋಪಜ್ಞತೆ ಪ್ರಕಾಶಕ್ಕೆ ಬಂದಿದೆ. ಅರ್ಥಾಲಂಕಾರ ಪ್ರಕರಣದಲ್ಲಿ ಮಾತ್ರ ಈತ ಪ್ರಧಾನವಾಗಿ ದಂಡಿಯನ್ನೇ ಅನುಸರಿಸಿದ್ದಾನೆ; ಆದರೂ ಕೆಲವು ಸಂದರ್ಭಗಳಲ್ಲಿ ಸ್ವತಂತ್ರವಾದ ಅಭಿಪ್ರಾಯಗಳನ್ನು ತಿಳಿಸಿರುವುದೂ ಉಂಟು. ದಂಡಿ ನಿರೂಪಿಸಿರುವ ೩೫ ಅಲಂಕಾರಗಳ ಜೊತೆಗೆ ೩೬ನೆಯದಾಗಿ 'ಧ್ವನ್ಯಲಂಕಾರ'ವನ್ನು ನಿರೂಪಿಸಿದ್ದಾನೆ. ಈ ಪ್ರಕರಣದಲ್ಲಿ ಒಂದೆರಡು ಕಡೆಗಳಲ್ಲಿ ಸಂಸ್ಕೃತ ಅಲಂಕಾರಿಕನಾದ ಉದ್ಭಟನ ಪ್ರಭಾವವನ್ನೂ ಗುರುತಿಸಬಹುದು. ಒಟ್ಟಿನ ಮೇಲೆ, ಸಂಸ್ಕೃತ ಅಲಂಕಾರಿಕರ ಪ್ರಭಾವ ಎಷ್ಟೇ ಇದ್ದರೂ, ಅನೇಕ ಕಾರಣಗಳಿಂದ ಕವಿರಾಜಮಾರ್ಗವನ್ನು ಒಂದು ಸ್ವತಂತ್ರ ಕೃತಿ ಎಂದು ಪರಿಗಣಿಸಲು ಅಡ್ಡಿಯಿಲ್ಲ.

**ಕವಿರಾಜಮಾರ್ಗಪೂರ್ವದ ಭಾಷಾಸಾಹಿತ್ಯಗಳ ಸ್ಥಿತಿ :** ಕವಿರಾಜಮಾರ್ಗದ ಪ್ರಥಮ ಪರಿಚ್ಛೇದದಲ್ಲಿ ಕಾವ್ಯಮೀಮಾಂಸೆಗೆ ಸಂಬಂಧಪಟ್ಟಂತೆ ಕಾವ್ಯಲಕ್ಷಣ, ಕವಿವರ್ಗ, ಕಾವ್ಯದೋಷಗಳು ಇವುಗಳ ಪ್ರಸ್ತಾವನೆಯ ಸಂದರ್ಭದಲ್ಲಿ ಕನ್ನಡ ನಾಡು, ಕನ್ನಡ ಜನ, ಕನ್ನಡ ಭಾಷೆಯ ಸ್ಥಿತಿ, ಪೂರ್ವ ಕವಿಕಾವ್ಯವಿಚಾರ – ಇವುಗಳ ವರ್ಣನೆ ಹಾಸುಹೊಕ್ಕಾಗಿ ಬಂದಿದೆ. ಕಾವ್ಯ ಶಾಸ್ತ್ರ ಗ್ರಂಥದಲ್ಲಿ ಇವುಗಳ ಪ್ರಸ್ತಾಪ ಏಕೆ ಎಂಬ ಪ್ರಶ್ನೆ ಏಳುವುದು ಸಹಜ. ಸೂಕ್ಷ್ಮವಾಗಿ ಪರಿಶೀಲಿಸಿದರೆ,

ಹೇಗೆ ಕಣ್ಣುಮುಚ್ಚಬೇಕಾಗಿ ಬಂದು ದೃಷ್ಟಿಗೆ ಹಾನಿಯಾಗುವುದೋ ಹಾಗೆ ಕಾವ್ಯದ ದೋಷ ಎಷ್ಟೇ ಅಲ್ಪವಾದರೂ ಕಾವ್ಯ ಸಮಸ್ತವನ್ನೂ ದುಷ್ಟವಾಗಿ ಮಾಡುವುದೆಂಬುದು ಕವಿರಾಜಮಾರ್ಗಕಾರನ ಖಂಡಿತವಾದ ಅಭಿಪ್ರಾಯ. ಕಣ್ಣಿಗೆ ಕಪ್ಪೆಚ್ಚಿದರೆ ಇತರರಿಗೆ ಕಾಣುವಂತೆ ಕಣ್ಣಿಗೆ ಕಾಣಿಸುವುದೇ? ಹೀಗಿರುವುದರಿಂದ, ತನ್ನ ಕಾವ್ಯ ಸರ್ವಾಂಗಸುಂದರವಾಗಿರಬೇಕೆಂದು ಬಯಸುವ ಕವಿ 'ಪೆಱರಿಂ ಜಾಣರಿಂ ಓದಿಸಿ ಕಬ್ಬಮಂ ಪೇೞ್ವುದು' ಎಂಬ ಶ್ರೀವಿಜಯನ ಹಿತವಚನವನ್ನು ಭಾಷಾಶುದ್ಧಿಗೂ ಲಯಶುದ್ಧಿಗೂ ಗಮನಕೊಡದ ಅಭ್ಯಾಸ ಮಟ್ಟದ ಇಂದಿನ ಕವಿಜನ ಅಗತ್ಯವಾಗಿ ಗಮನಿಸಬೇಕು. ದೋಷಪ್ರಕರಣಕ್ಕೆ ಪೀಠಿಕಾಪ್ರಾಯವಾಗಿ ಶ್ರೀವಿಜಯನು ಆಡಿರುವ ಅನೇಕ ಬೆಲೆಯುಳ್ಳ ಮಾತುಗಳಲ್ಲಿ ಕವಿಜನವರ್ಗಗಳನ್ನು ವಿವರಿಸಿರುವ ಮಾತು ಬಹುಮುಖ್ಯವಾದುದು. ಅನುಕರಣಶೀಲರಾದ ಕವಿಗಳು, ಅಭಿವ್ಯಕ್ತಿ ಸಮರ್ಥರಾದ ಮಾತುಬಲ್ಲ ಕವಿಗಳು, ಕಿರಿದರಲ್ಲಿ ಹಿರಿಯ ಅರ್ಥವನ್ನು ಅಡಕಮಾಡಿ ಹೇಳಬಲ್ಲ ಕವಿಗಳು, ಛಂದೋಬಂಧದಲ್ಲಿ ಕಾವ್ಯರಚನೆ ಮಾಡಬಲ್ಲವರು, ಇವರೆಲ್ಲರಿಗಿಂತ ಮೇಲಾದ 'ಮಹಾಧ್ವಕೃತಿಕಾರ'ರು (ಮಹಾಮಾರ್ಗಕವಿಗಳು), 'ಕವಿತಾನೀತಿ'ಯೊಂದಿಗೆ 'ನೀತಿ'ಯನ್ನೂ* ಹುದುಗಿಸಿ ('ಕಾಂತಾಸಂಮಿತ'ದ) ಕಾವ್ಯವನ್ನು ರಚಿಸಬಲ್ಲ 'ಕವಿವೃಷಭರು' – ಹೀಗೆ ಕವಿತಾಸಾಮರ್ಥ್ಯದ ಸೋಪಾನಪಂಕ್ತಿಯ ಒಂದು ಚಿತ್ರವನ್ನು ಅನ್ಯಾದೃಶವಾಗಿ ಚಿತ್ರಿಸಿದ್ದಾನೆ ಶ್ರೀವಿಜಯ. ಪ್ರತಿಕಾಲದ ಕವಿಜನರೂ ಈ ಸೋಪಾನಶ್ರೇಣಿಯಲ್ಲಿ ತಮ್ಮ ಸ್ಥಾನ ಯಾವುದು ಎಂಬುದನ್ನು ಸುಲಭವಾಗಿ ಗುರುತಿಸಿಕೊಳ್ಳಬಹುದು; ಕವಿಯ ಸ್ಥಾನನಿರ್ಣಯಕ್ಕೆ ಶ್ರೀವಿಜಯನ ಈ ನಿರೂಪಣೆ ಸಹಕಾರಿಯಾಗಬಲ್ಲದು. (ಈ ಪ್ರಸಂಗ ಕಾವ್ಯ ವಿಮರ್ಶೆಗೆ ಬೆಲೆಯುಳ್ಳ ಕೊಡುಗೆ). ಪರಮೋಚ್ಚಸ್ಥಾನಕ್ಕೆ

---

*೯. ಕಾವ್ಯ ಹೇಳಬೇಕಾದ ಸಾರ್ವಕಾಲಿಕ ಸಾರ್ವದೇಶೀಯ ನೀತಿಸ್ವರೂಪವನ್ನು ಶ್ರೀವಿಜಯ ಬಹು ಮನೋಜ್ಞವಾಗಿ ತಿಳಿಸಿದ್ದಾನೆ. ಇಂಥ ಪದ್ಯ ರತ್ನ ಅನ್ಯತ್ರ ನನ್ನ ದೃಷ್ಟಿಗೆ ಬಿದ್ದಿಲ್ಲ. ಆ ಪದ್ಯ ಹೀಗಿದೆ:

ಪಾಪಮಿದು ಪುಣ್ಯ ಮಿದು ಹಿತ ।
ರೂಪಮಿದಹಿತಪ್ರಕಾರಮಿದು ಸುಖಮಿದು ದುಃ॥
ಖೋಪಾತ್ತಮಿದೆಂದಱಿಪುಗು–
ಮಾ ಪರಮ ಕವಿಪ್ರಧಾನರಾ ಕಾವ್ಯಂಗಳ್ ॥

ಸಾಮಾನ್ಯ ಕವಿಗಳ ಕಾವ್ಯಗಳಲ್ಲ, ಪರಮ ಕವಿಪ್ರಧಾನರ ಕಾವ್ಯಗಳು, ಎಂಬುದನ್ನು ಲಕ್ಷಿಸಬೇಕು.

ಆಚಾರ್ಯಸ್ಥಾನದಲ್ಲಿ ನಿಂತು ಕಾವ್ಯರಚನೆಯ ವಿಷಯದಲ್ಲಿ ಸರಿಯಾದ ಮಾರ್ಗದರ್ಶನ ಮಾಡುವವರು ಇರಲಿಲ್ಲ; ಕನ್ನಡದಲ್ಲಿ ಕಾವ್ಯಶಾಸ್ತ್ರಪರಿಣತರಾಗಿದ್ದ 'ಪೂರ್ವಾಚಾರ್ಯರು' ಆಗಿಹೋಗಿದ್ದರೂ, ಲಕ್ಷಣ ಗ್ರಂಥವೊಂದು ಇರಲಿಲ್ಲ. ಕನ್ನಡ ಭಾಷೆಯ ಸ್ವರೂಪದಲ್ಲಿಯೂ ಒಂದು ಬಗೆಯ ಗೊಂದಲದ ಪರಿಸ್ಥಿತಿ ಉದ್ಭವಿಸಿತ್ತು. ವಿಸ್ತಾರವಾದ ಕನ್ನಡನಾಡಿನಲ್ಲಿ ಹೆಸರಿಗೆ ಒಂದು ಕನ್ನಡವಿದ್ದರೂ, ಪ್ರಾದೇಶಿಕ ಭಿನ್ನತೆಗಳಿಂದಾಗಿ, ದೇಸಿ ಬೇರೆಬೇರೆಯಾಗಿದ್ದುವು; ಈ 'ಕನ್ನಡಂಗಳ'ಲ್ಲಿ ಆದಿಶೇಷ ಕೂಡ ಎಣಿಸಲಾರದಷ್ಟು ದೋಷಗಳು ತುಂಬಿಕೊಂಡಿದ್ದುವು. ಆಗಿನ ಕಾಲದಲ್ಲಿಯೇ ಹಳಗನ್ನಡವೊಂದಿತ್ತು; ಸಾಮಾನ್ಯ ಕವಿಗಳಿಗೆ ಈ ದೇಸಿ ಕನ್ನಡದ ನಿಶ್ಚಿತಜ್ಞಾನವಿರಲಿಲ್ಲ; ಅವರು ಶಬ್ದಶಾಸ್ತ್ರವನ್ನು ಅರಿತವರಾಗಿರಲಿಲ್ಲ; ಆದ್ದರಿಂದ, ಬಳಕೆಯಲ್ಲಿಲ್ಲದ ಹಳಗನ್ನಡದ ಪ್ರಯೋಗಗಳಿಂದ ಕೂಡಿದ್ದ ಕಾವ್ಯಗಳನ್ನೆ ಲಕ್ಷಣವೆಂದು ಸ್ವೀಕರಿಸಿ, ಹಳಗನ್ನಡವನ್ನು ಹೊಲಗೆಡಿಸುತ್ತಿದ್ದರು. ಸಂಸ್ಕೃತ ಶಬ್ದಗಳನ್ನು ಕನ್ನಡ ಶಬ್ದಗಳೊಂದಿಗೆ ಹೇಗೆ ಬೆರಸಬೇಕು ಎಂಬ ಬಗೆಗೆ ವಿಧಿ–ನಿಷೇಧಗಳ ಅರಿವು ಸಾಕಷ್ಟಿರಲಿಲ್ಲ. ಸಂಸ್ಕೃತವನ್ನೂ, ಸಂಸ್ಕೃತ ಕಾವ್ಯ ಪದ್ಧತಿಯನ್ನೂ ಬಿಟ್ಟು ಕನ್ನಡದಲ್ಲಿ ಶ್ರೇಷ್ಠ ಕಾವ್ಯ ರಚನೆ ಸಾಧ್ಯವಿರಲಿಲ್ಲ. ಸಂಸ್ಕೃತದ ಅತಿವ್ಯಾಮೋಹವೂ ಇಲ್ಲದೆ, ಕನ್ನಡದ ದುರಭಿಮಾನವನ್ನೂ ಬೆಳೆಯಗೊಡದೆ, ಸಂಸ್ಕೃತದಿಂದ ಕನ್ನಡ ಕಾವ್ಯ ಸಂಪುಷ್ಟವಾಗಬಲ್ಲ ನಿರ್ದಿಷ್ಟವೂ ಉಪಯುಕ್ತವೂ ಆದ ಸೂಚನೆಗಳನ್ನು ಮೊತ್ತಮೊದಲಿಗೆ ನೀಡಿದ ಶ್ರೇಯಸ್ಸು ಶ್ರೀವಿಜಯನದು. ಕನ್ನಡ ಭಾಷೆಗೆ ಸಂಬಂಧಪಟ್ಟಂತೆ ದೋಷಸ್ವರೂಪ, ದೋಷಪರಿಹಾರದ ಅಗತ್ಯ, ದೋಷಪರಿಹಾರಮಾರ್ಗ – ಇವುಗಳ ನಿರೂಪಣೆಗೆ ಉಚಿತವಾದ ಪೀಠಿಕೆಯಂತಿದೆ, ಕನ್ನಡನಾಡು ನುಡಿ ಜನ ಹಾಗೂ ಕನ್ನಡ ಕಾವ್ಯಪ್ರಪಂಚದ ಪೂರ್ವವೈಭವ, – ಈ ಸಂಬಂಧವಾದ ಅವನ ಅಭಿಮಾನಪೂರ್ವಕವಾದ ವರ್ಣನೆ. 'ಕನ್ನಡ ಕಾವ್ಯ ಒಂದು ಉನ್ನತಿಯ ಮಟ್ಟದಲ್ಲಿತ್ತು. ಈಗ ಅವನತಿ ಹೊಂದಿದೆ. ಇದು ತಲೆಯೆತ್ತುವ ಬಗೆ ಹೇಗೆ? ಹಿಂದಿನಂತೆ ನಮ್ಮಲ್ಲಿ ಕವೀಶ್ವರರು, ಕವಿರಾಜರು, ಹುಟ್ಟುವುದು ಎಂದಿಗೆ?' ಎಂಬ ಹೃದಯವೇದನೆಯ ತುಡಿತ ಈ ಪ್ರಕರಣದ ಕೆಲವು ಪದ್ಯಗಳಲ್ಲಿ ಸ್ಪಷ್ಟವಾಗಿ ಕೇಳಿಬರುತ್ತಿದೆ. ಅದಕ್ಕೆ ಇಂದಿನವರಾದ ನಾವೂ ಕಿವಿಗೊಡುವುದು ಶ್ರೇಯಸ್ಕರ.

**ಕಾವ್ಯದೋಷಗಳು :** ಸಾಮಾನ್ಯವಾಗಿ ಎಲ್ಲ ಭಾಷೆಗಳ ಎಲ್ಲ ಕಾಲಗಳ ಕಾವ್ಯಗಳಿಗೂ ಅನ್ವಯಿಸುವ ದೋಷಗಳು ಹಲವು ಉಂಟು. ಈ ದೋಷಗಳು ಭಾಷಾದೋಷಗಳಂತೆ ಕಾವ್ಯಸೌಂದರ್ಯವನ್ನು ಕೆಡಿಸುವುವು. ಕಣ್ಣಿಗೆ ಕಸ ಹೊಕ್ಕರೆ

ವಿಧಿಸಿರುವುದು; ವಚನದೋಷ ಸಂಬಂಧವಾಗಿ, ಕನ್ನಡದಲ್ಲಿ ಜಾತ್ಯೇಕ ವಚನಪ್ರಯೋಗದ ವೈಶಿಷ್ಟ್ಯವನ್ನು ಮನಗಾಣಿಸಿರುವುದು; 'ಕಾರಕದೋಷ–ಅದೋಷಗಳ ವಿವರಣೆ – ಇಲ್ಲೆಲ್ಲಾ ಆ ಕನ್ನಡದ ದೃಷ್ಟಿ ವಿಶೇಷವಾಗಿ ಪ್ರಕಾಶಗೊಂಡು, ಕವಿರಾಜಮಾರ್ಗವನ್ನು ಭಾರತೀಯ ಕಾವ್ಯಮೀಮಾಂಸೆಗೆ ಕನ್ನಡದ ಕೊಡುಗೆಯನ್ನಾಗಿ ಮಾಡಿದೆ.

## ಅಲಂಕಾರ ಪ್ರಕರಣ

**ಶಬ್ದಾಲಂಕಾರ**: ದ್ವಿತೀಯ ಪರಿಚ್ಛೇದವೆಲ್ಲವೂ ಶಬ್ದಾಲಂಕಾರಗಳ ನಿರೂಪಣೆಗೆ ಮೀಸಲಾಗಿದೆ. ಅಲಂಕಾರ ಪ್ರಕರಣದಲ್ಲಿ ಅವನು ದಂಡಿಯ ಕಾವ್ಯಾದರ್ಶವನ್ನು ಪ್ರಮುಖವಾಗಿ ಅನುಸರಿಸಿದ್ದಾನೆ. ಆದರೂ, ದಂಡಿ ಬೇರೆಬೇರೆ ಕಡೆಗಳಲ್ಲಿ ಹೇಳಿರುವ ದಶಗುಣನಿಷ್ಠವಾದ ಕಾವ್ಯಮಾರ್ಗದ್ವಯ, ಯಮಕ ಅನುಪ್ರಾಸಾದಿ ಶಬ್ದಾಲಂಕಾರಗಳು, ಚಕ್ರಬಂಧ ಗೋಮೂತ್ರಿಕೆ ಪ್ರಹೇಳಿಕೆ ಮುಂತಾದ ದುಷ್ಕರ (ರಚಿಸಲು ಕಷ್ಟವಾದ) ಕಾವ್ಯರಚನೆಗಳು –ಇವನ್ನೆಲ್ಲ ಶಬ್ದಾಲಂಕಾರದ ವ್ಯಾಪ್ತಿಗೆ ಒಳಪಡಿಸಿರುವುದು ಶ್ರೀವಿಜಯನ ಸ್ವತಂತ್ರ ವಿಚಾರ ಕ್ರಮವನ್ನೂ ಕಾವ್ಯತತ್ತ್ವಾನ್ವೇಷಕ ಬುದ್ಧಿಯನ್ನೂ ಸೂಚಿಸುತ್ತದೆ.

ಕಾವ್ಯಸ್ವರೂಪದ ಬಗೆಗೆ ಶ್ರೀವಿಜಯನ ನಿಲುವು ಸ್ಪಷ್ಟವಾಗಿದೆ. ಪ್ರಾಚೀನ ಸಂಸ್ಕೃತಾಲಂಕಾರಿಕರಾದ ಭಾಮಹಾದಿಗಳಾಗಲಿ ಶ್ರೀವಿಜಯನಾಗಲಿ ಕಾವ್ಯದಲ್ಲಿ ರಸ–ಭಾವಗಳ ಪ್ರಾಮುಖ್ಯವನ್ನು ಅರಿತವರಾಗಿರಲಿಲ್ಲ ಎಂದು ಭಾವಿಸುವುದು ತಪ್ಪು. ಪ್ರತಿಭಾಶಾಲಿಯಾದ ಕವಿ ರಸವತ್ತಾಗಿ ಭಾವಪೂರ್ಣವಾಗಿ ಬರೆಯುತ್ತಾನೆಂಬುದು ಬಹುಶಃ ಅವರು ಒಪ್ಪಿಕೊಂಡ ಪ್ರಮೇಯವೇ. ಶ್ರೀವಿಜಯನಂತೂ ಕಾವ್ಯಸ್ವರೂಪದ ಬಗೆಗೆ ತನ್ನ ಅಭಿಪ್ರಾಯವನ್ನು ಪ್ರಥಮ ಪರಿಚ್ಛೇದದಲ್ಲಿಯೇ ವಿವಾದಕ್ಕೆಡೆಯಿಲ್ಲದಂತೆ ಸ್ಪಷ್ಟವಾಗಿ ತಿಳಿಸಿದ್ದಾನೆ: ಅವನ ಅಭಿಮತದಂತೆ, "ಕಾವ್ಯವು ಕವಿಭಾವನಿರ್ಮಿತ; ಅನೇಕ ಪ್ರಕಾರಗಳಲ್ಲಿ ಅಭಿವ್ಯಕ್ತಿ ಪಡೆಯುವ ಉಕ್ತಿಮಾರ್ಗ, ವಿಶಿಷ್ಟವಾದ ಶಬ್ದರಚನೆ; ವಿವಿಧಾರ್ಥಗಳಭಿವ್ಯಕ್ತಿರೂಪದ ಅಲಂಕಾರ" (I–೨೨). ಪ್ರಾಚೀನರು ನಿರ್ಮಾಣಕೌಶಲಕ್ಕೆ ತಮ್ಮ ಗಮನವನ್ನು ಸಹಜವಾಗಿಯೇ ಹರಿಸಿದರು. ಭಾವಸೌಂದರ್ಯ ಇದ್ದೇ ತೀರಬೇಕು; ಅದಿಲ್ಲದೆ ಕಾವ್ಯವೇ ಆಗದು. ಆದರೆ, ಕಾವ್ಯಶರೀರ ಸೌಂದರ್ಯವೂ ಅಷ್ಟೇ ಮುಖ್ಯವಾದದ್ದು. "ಪರಮಾಲಂಕಾರಮುಂ ಶರೀರಮುಂ ಎಂದಿಂತೆರಡಕ್ಕುಂ ಭೇದಂ" (I–೨೩) ಎಂಬ ಮಾತಿನಿಂದ ಶಬ್ದಾರ್ಥನಿಷ್ಠವಾದ ಕಾವ್ಯ ಶರೀರವೇ ಬೇರೆ, ಅಲಂಕಾರವೇ

ಏರಬಯಸುವ ಕವಿಗೆ ಕಾವ್ಯದೋಷಾs ದೋಷಪ್ರಜ್ಞೆ ನಿಚ್ಚಳವಾಗಿರಬೇಕು ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲವಷ್ಟೆ? ಈ ಪ್ರಸ್ತಾವದ ಹಿನ್ನೆಲೆಯಲ್ಲಿ ವಿಚಾರ ಮಾಡಿದರೆ, ಶ್ರೀವಿಜಯನು ದೋಷಪ್ರಕರಣಕ್ಕೆ ಆದ್ಯತೆಯನ್ನೂ ಅಗ್ರಸ್ಥಾನವನ್ನೂ ಕೊಟ್ಟಿರುವುದರ ಔಚಿತ್ಯ ವಿಶದವಾಗುವುದು. ದಂಡಿ ಭಾಮಹರು ದೋಷಗಳನ್ನು ವಿವರಿಸಿದ್ದರೂ ಇವನ ಹಾಗೆ ಅವಕ್ಕೆ ಪ್ರಮುಖ ಸ್ಥಾನವನ್ನು ಕಲ್ಪಿಸಿಲ್ಲ ತಮ್ಮ ಗ್ರಂಥಗಳಲ್ಲಿ; ಸಂಸ್ಕೃತ ಕಾವ್ಯಸಂದರ್ಭದಲ್ಲಿ ಬಹುಶಃ ಅದರ ಅಗತ್ಯವೂ ಇದ್ದಿರಲಾರದು.

ಕಾವ್ಯದೋಷಗಳ ವಿವರಣೆಯಲ್ಲಿ ಶ್ರೀವಿಜಯನು ಬಹುಮಟ್ಟಿಗೆ ಭಾಮಹನನ್ನು ಅನುಸರಿಸಿ ಶ್ರುತದುಷ್ಟ, ಅರ್ಥದುಷ್ಟ, ಶ್ರುತಿಕಷ್ಟ, ಕಲ್ಪನೋಕ್ತಿ ಕಷ್ಟ, ಎಂಬ ೪ ಮುಖ್ಯ 'ಅಶ್ರಾವ್ಯ' ದೋಷಗಳನ್ನೂ ಯತಿಭಂಗ, ಅರ್ಥಶೂನ್ಯ, ಉಕ್ತಪುನುರುಕ್ತ, ನೇಯಾರ್ಥ, ಕಾಲವಿರುದ್ಧ, ಲೋಕವಿರುದ್ಧ, ಇತ್ಯಾದಿ ೧೬ ಇತರ ದೋಷಗಳನ್ನೂ ಲಕ್ಷ್ಯ ಲಕ್ಷಣ ಸಮನ್ವಯ ಮಾಡಿ ನಿರೂಪಿಸಿದ್ದಾನೆ. ಸಂಸ್ಕೃತ ಅಲಂಕಾರಿಕರನ್ನು ಅನುಸರಿಸುತ್ತಿದ್ದರೂ ಬರೆಯುತ್ತಿರುವುದು ಕನ್ನಡ ಕವಿಗಳಿಗಾಗಿ ಎಂಬ ಗುರಿ ಸದಾ ಕವಿರಾಜಮಾರ್ಗಕಾರನ ಮುಂದಿರುತ್ತದೆ. ಸಂಸ್ಕೃತೋಕ್ತ ಲಕ್ಷಣಗಳನ್ನು ಅನುವಾದಿಸಿ ಕನ್ನಡ ಕಾವ್ಯರಚನಾ ಪದ್ಧತಿಗೆ ಹೊಂದಿಕೊಳ್ಳುವಂತೆ ಉದಾಹರಣ ಪದ್ಯಗಳನ್ನು ರಚಿಸಿ, ದೋಷ–ಅದೋಷಗಳನ್ನು ನಿರ್ಣಯಿಸಿ ತೋರಿಸುವುದು ಕವಿರಾಜಮಾರ್ಗದ ವೈಶಿಷ್ಟ್ಯಗಳಲ್ಲಿ ಒಂದು. ಛಂದೋವಿಚಾರವಾಗಲಿ, ಪದಪ್ರಯೋಗ ಪದ್ಧತಿಯಾಗಲಿ, ವ್ಯಾಕರಣ ವಿಚಾರವಾಗಲಿ, ಸಂಸ್ಕೃತಕ್ಕೆ ಸಂಬಂಧಪಡದೆ ಕನ್ನಡಕ್ಕೆ ಮಾತ್ರ ಸಂಬಂಧಪಟ್ಟ ಲಕ್ಷಣಗಳನ್ನು ಗುರುತಿಸಿ, ಅವುಗಳನ್ನು ತಿಳಿಸಿಕೊಡುವುದು ಇನ್ನೊಂದು ಗಮನಾರ್ಹ ವೈಶಿಷ್ಟ್ಯ. ಈ ಪರಿಚ್ಛೇದದಲ್ಲಿ ಮಾತ್ರವಲ್ಲದೆ ಮುಂದಿನ ಪರಿಚ್ಛೇದಗಳಲ್ಲಿಯೂ ನಮ್ಮ ಲಾಕ್ಷಣಿಕನ ಕನ್ನಡದ ದೃಷ್ಟಿ ತನ್ನ ಸೂಕ್ಷ್ಮ ಅವಲೋಕನಶಕ್ತಿಯನ್ನು ಪ್ರಕಟಪಡಿಸಿದೆ. ಪ್ರಥಮ ಪರಿಚ್ಛೇದವನ್ನು ಅನುಲಕ್ಷಿಸಿ ಹೇಳುವುದಾದರೆ, ಶ್ರುತಿಕಷ್ಟದೋಷ ದುಷ್ಕರ ಕಾವ್ಯಗಳಲ್ಲಿ ಅದೋಷ, "ಪಗರಣದೊಳ್ ಉಳಿದ ಮೂಱುಂ (ಎಂದರೆ ಶ್ರುತದುಷ್ಟ, ಅರ್ಥದುಷ್ಟ, ಕಲಪನೋಕ್ತಿ ಕಷ್ಟ) ನಗಿಸುಗುಮಪ್ಪುದೆಱುಂ ಅಲ್ಲಿಗಂತು ಅವು ಅದೋಷಂ" ಎಂದಿರುವುದು; "ಪೂರ್ವಾಚಾರ್ಯರ್ ದೇಸಿಯನೆ ನಿಱುಷಿ ಖಂಡಪ್ರಾಸಮಂ ಅತಿಶಯಂ ಇದೆಂದು ಯತಿಯಂ ಮಿಕ್ಕರ್" ಎಂದು ಕನ್ನಡ ಅಕ್ಷರವೃತ್ತಗಳ ಮಟ್ಟಿಗೆ ಯತಿಭಂಗದೋಷವನ್ನು ಗುಣವೆಂದೇ ಗ್ರಹಿಸಿ ಅದನ್ನು ಒಪ್ಪಿಕೊಂಡಿದ್ದರೂ 'ಆರ್ಯಾ' ಮತ್ತು 'ಕಂದ'ಗಳಲ್ಲಿ ಯತಿನಿಯಮ ಪಾಲನೆಯನ್ನು

**ಅರ್ಥಾಲಂಕಾರ:** ಅರ್ಥಾಲಂಕಾರ ಪ್ರಕರಣದಲ್ಲಿ ಶ್ರೀವಿಜಯನು ಸಾಮಾನ್ಯವಾಗಿ ದಂಡಿಯನ್ನೇ ಅನುಸರಿಸಿದ್ದಾನೆ; ಅವನಲಕ್ಷಣ ಲಕ್ಷ್ಯಗಳನ್ನೇ ಅನುವಾದ ಮಾಡಿದ್ದಾನೆ. ಸ್ವಂತ ಲಕ್ಷ್ಯಗಳನ್ನೂ ಸೇರಿಸಿರುವ ಸಂದರ್ಭಗಳೂ ಉಂಟು. ನಿದರ್ಶನಾಲಂಕಾರದ ಕೆಲವು ಉದಾಹರಣ ಪದ್ಯಗಳು ಮಾಘ ಭಾರವಿಗಳ ಕೃತಿಗಳಿಂದ ತೆಗೆದುಕೊಂಡವು ಎಂದು ಈಚೆಗೆ ತಿಳಿದುಬಂದಿದೆ. ದಂಡಿ ಹೇಳಿರುವ ೩೫ ಅರ್ಥಾಲಂಕಾರಗಳ ಜೊತೆಗೆ ೩೬ನೆಯದಾಗಿ ಧ್ವನ್ಯಲಂಕಾರವನ್ನು ಹೊಸದಾಗಿ ನಿರೂಪಿಸಿದ್ದಾನೆ. ಯಾವ ಸಂಸ್ಕೃತಲಾಕ್ಷಣಿಕನೂ ಈ ಅಲಂಕಾರವನ್ನು ಪ್ರಸ್ತಾವಿಸಿಲ್ಲ. ಶ್ರೀವಿಜಯನ ಸಮಕಾಲೀನನಾದ ಕಾಶ್ಮೀರ ದೇಶೀಯ ಆನಂದವರ್ಧನು 'ಧ್ವನಿ ಕಾವ್ಯದ ಆತ್ಮ' ಎಂಬ ನೂತನ ಸಿದ್ಧಾಂತವನ್ನು ಪ್ರತಿಪಾದಿಸಿದ್ದನು; ಅದಕ್ಕೂ ಮುಂಚೆಯೇ ಧ್ವನಿವಿಚಾರವನ್ನು ವಿದ್ವಾಂಸರು ಅರಿತಿದ್ದರೆಂದು ಆನಂದವರ್ಧನನ 'ಧ್ವನ್ಯಾಲೋಕ'ದಿಂದಲೇ ತಿಳಿದು ಬರುತ್ತದೆ. ಆದ್ದರಿಂದ, ವಿದ್ವತ್ಪ್ರಪಂಚದಲ್ಲಿ ಪ್ರಚುರವಾಗಿದ್ದ ಧ್ವನಿವಿಚಾರ ನೃಪತುಂಗ ಸಭೆಯಲ್ಲಿ ಚರ್ಚೆಗೆ ಬಂದಿರಬಹುದು. "ಧ್ವನಿ ಕಾವ್ಯದ ಆತ್ಮವಲ್ಲ. ರಸವದಲಂಕಾರದಂತೆ ಧ್ವನಿಯೂ ಒಂದು ಅಲಂಕಾರ. ಪರ್ಯಾಯೋಕ್ತ, ಸಮಾಸೋಕ್ತಿ, ಮುಂತಾದ ಕೆಲವು ಅಲಂಕಾರಗಳು ವ್ಯಂಗ್ಯಾರ್ಥ ನಿಷ್ಠವಾಗಿವೆ. ವಿಶಿಷ್ಟವಾದ ಶಬ್ದಪ್ರಯೋಗದಲ್ಲಿ ವಾಚ್ಯಾರ್ಥದಿಂದ ಭಿನ್ನವಾದ ವ್ಯಂಗ್ಯಾರ್ಥವೂ ತೋರಿಬರುತ್ತಿದ್ದರೆ ಅದು ಕಾವ್ಯಸೌಂದರ್ಯವರ್ಧಕವಾದ ಅಲಂಕಾರವೇ ಹೊರತು ಆತ್ಮವೇನಲ್ಲ" ಎಂಬ ಒಂದು ನಿಲುವು ಆ ಚರ್ಚೆಯ ಫಲವಾಗಿ ರೂಪಗೊಂಡಿರಬೇಕು. 'ಧ್ವನಿಯೆಂಬುದಲಂಕಾರಂ' (III–೨೦೮) ಎಂಬ ಲಕ್ಷಣವಾಕ್ಯದಲ್ಲಿ ಈ ನಿಲುವಿನ ಆಶಯ ಸೂಚಿತವಾಗಿರುವಂತಿದೆ. ಧ್ವನಿ ಆತ್ಮವೇ, ಅಲಂಕಾರವೇ ಎಂಬ ಚರ್ಚೆಯಾಗಲಿ ಶ್ರೀವಿಜಯನ ಹೇಳಿಕೆಯ ವಿವರಣೆಯಾಗಲಿ ಈ ಪೀಠಿಕೆಯ ವ್ಯಾಪ್ತಿಗೆ ಮೀರದ ವಿಷಯ. ಎಷ್ಟೇ ವಿವಾದಾಸ್ಪದವಾದರೂ, ಧ್ವನಿಪ್ರಸ್ಥಾನ ಪ್ರತಿಪಾದಿತವಾದ ಕಾಲದಲ್ಲಿಯೇ ಕನ್ನಡದ ಆದಿ ಲಕ್ಷಣಗ್ರಂಥದಲ್ಲಿ ಧ್ವನಿಯ ಪ್ರಸ್ತಾಪ ಬಂದಿರುವುದು ಒಂದು ಮಹತ್ವದ ಸಂಗತಿ.

ಧ್ವನ್ಯಲಂಕಾರದ ನಿರೂಪಣೆಯಲ್ಲದೆ, ಈ ಅರ್ಥಾಲಂಕಾರ ಪ್ರಕರಣದಲ್ಲಿ ಶ್ರೀವಿಜಯನ ಸ್ವತಂತ್ರ ವಿಚಾರದೃಷ್ಟಿಗೆ ಇನ್ನೂ ಕೆಲವು ನಿದರ್ಶನಗಳನ್ನು ಕೊಡಬಹುದು. ಆಕ್ಷೇಪಾಲಂಕಾರವನ್ನು ಕುರಿತು 'ವ್ಯತಿರೇಕವಿಕಲ್ಪಮಿದು' ಎಂದಿರುವುದು; ದೃಷ್ಟಾಂತಾಲಂಕಾರವು ನಿದರ್ಶನಾಲಂಕಾರದಲ್ಲಿ ಉದಿಸಿದ ಒಂದು ಪ್ರಭೇದ ಎಂದು (ಬಹುಶಃ ಉದ್ಭಟನ ಪ್ರಭಾವದಿಂದ) ಅಭಿಪ್ರಾಯಪಟ್ಟಿರುವುದು;

ಬೇರೆ ಎಂಬುದು ಶ್ರೀವಿಜಯನ ದೃಷ್ಟಿ. ಶರೀರದ್ದು ಸಹಜಸೌಂದರ್ಯ; ಶಬ್ದಾರ್ಥಾಲಂಕಾರಗಳು ಆ ಸೌಂದರ್ಯಕ್ಕೆ ತಮ್ಮ ಸೌಂದರ್ಯವನ್ನೂ ಕೂಡಿಸುತ್ತವೆ. ಕಾವ್ಯದ ಸಹಜಸೌಂದರ್ಯ ಶಬ್ದಗಳಲ್ಲಿಯೂ – ಎಂದರೆ ಅವುಗಳ ಗುಣಗಳಲ್ಲಿ – ನೆಲಸಿರುತ್ತದೆ. ಇಲ್ಲಿ ಸೌಂದರ್ಯ ಎಂದರೆ ವಿಶಾಲವಾದ ಅರ್ಥದಲ್ಲಿ ಗ್ರಹಿಸದೆ ಹೋದರೆ ಶ್ರೀವಿಜಯಾದಿ ಅಲಂಕಾರಿಕರಿಗೆ ಅನ್ಯಾಯ ಮಾಡಿದಂತಾಗುತ್ತದೆ. ಈ ದೃಷ್ಟಿಯಿಟ್ಟುಕೊಂಡು ವಿಚಾರ ಮಾಡಿದರೆ, ದಂಡಿ ವಿಸ್ತಾರವಾಗಿ ಪ್ರಥಮಾಧ್ಯಾಯದಲ್ಲಿಯೇ ಪ್ರತಿಪಾದನೆ ಮಾಡಿರುವ ಶಬ್ದಗುಣನಿಷ್ಠ ಮಾರ್ಗದ್ವಯ ವಿಚಾರವನ್ನು ಶ್ರೀವಿಜಯನು ಶಬ್ದಾಲಂಕಾರ ಪ್ರಕರಣದಲ್ಲಿ ಸೇರಿಸಿರುವುದರ ಔಚಿತ್ಯವು ಅರ್ಥವಾಗುತ್ತದೆ. ಮಾತ್ರವಲ್ಲ; ಈ ಶಬ್ದಗುಣಗಳು ರಸವ್ಯಂಜಕಗಳೆಂಬ ತತ್ತ್ವವನ್ನು ಪ್ರತಿಪಾದಿಸಿ (II–೯೯, ೧೦೦) ಅವನು ದಂಡಿಭಾಮಹರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿದ್ದಾನೆ. (ಈ ತತ್ತ್ವವನ್ನು ಧ್ವನಿತತ್ವಕ್ಕೆ ಹೊಂದಿಸಿ ಹೇಳಿದವನು ಶ್ರೀವಿಜಯನ ಸಮಕಾಲೀನನಾದ ಆನಂದವರ್ಧನ ಎಂಬುದನ್ನು ಇಲ್ಲಿ ನೆನೆಯಬಹುದು.)

"ನುತಶಬ್ದಾಲಂಕಾರದೊಳ್ ಅತಿಶಯಮೀ ಕನ್ನಡಕ್ಕೆ ಸತತಂ ಪ್ರಾಸಂ" ಎಂದು ಹೇಳಿ, ಸಂಸ್ಕೃತದಲ್ಲಿಲ್ಲದ ಆದಿಪ್ರಾಸಕ್ಕೆ ಪ್ರಾಶಸ್ತ್ಯವನ್ನು ಕೊಟ್ಟಿರುವುದು ಈ ಪ್ರಕರಣದಲ್ಲಿ ಗಮನಾರ್ಹವಾದ ವಿಶೇಷ ಸಂಗತಿ. ದಂಡಿ ಕಾವ್ಯಮಾರ್ಗಗಳನ್ನು ಗೌಡೀಯ ವೈದರ್ಭೀ ಎಂದು ಭೌಗೋಳಿಕ ದೃಷ್ಟಿಯಿಂದ ಸಂಸ್ಕೃತ ಭಾಷೆಗೆ ಅನ್ವಯಿಸುವಂತೆ ಹೇಳಿದ್ದನ್ನು ದಕ್ಷಿಣೋತ್ತರಮಾರ್ಗ ಎಂದು ಹೇಳಿರುವುದೂ ಗಮನಾರ್ಹ. ದಂಡಿ ಯಮಕ, ಪ್ರಹೇಳಿಕೆ, ಮುಂತಾದ ಅಲಂಕಾರಗಳನ್ನು ವಿವರವಾಗಿ ಹೇಳಿರುವಲ್ಲಿ, ಶ್ರೀವಿಜಯ ಅವು ಅಮುಖ್ಯವೆಂಬಂತೆ ಕೇವಲ ಕೆಲವು ಉದಾಹರಣೆಗಳ ಮೂಲಕ ಗಮನಿಸಿರುವುದು ಅವನ ವಿವೇಕಕ್ಕೆ ನಿದರ್ಶನ. ಕಾವ್ಯದ ಶರೀರಸೌಂದರ್ಯ ಶಬ್ದನಿಷ್ಠವಾಗಿರುವುದರಿಂದ, ಶಬ್ದಪ್ರಯೋಗದಲ್ಲಿ ಕವಿಯ ಔಚಿತ್ಯಜ್ಞಾನ ಎಷ್ಟು ಸೂಕ್ಷ್ಮವಾಗಿರಬೇಕು ಎಂಬುದನ್ನು ಕವಿರಾಜಮಾರ್ಗದ ಈ ಪದ್ಯಕ್ಕಿಂತ ಹೆಚ್ಚು ಅರ್ಥಪೂರ್ಣವಾಗಿ ತಿಳಿಸುವುದು ಕಷ್ಟ:

ಇಲ್ಲಿಗಿದು ತಕ್ಕುದಿಲ್ಲಿಗೆ
ಪೊಲ್ಲದೆಂಚೆದು ಸಮಟೆ ಬಲ್ಲಂತೆಲ್ಲಂ
ನೆಲ್ಲುಂ ಮೊಸರುಂಗುಡಿದಂ–
ತಲ್ಲದೆ ತಲ್ಲಣಿಸದಲಸದಿಡು ಮೃದುಪದಮಂ

# ೩. ಶ್ರೀನಿವಾಸ ಕಲ್ಯಾಣ

## ಮುನ್ನುಡಿ

ನನ್ನ ಸಮೀಪ ಬಂಧುಗಳಾದ ದಿ॥ ಶ್ರೀ ಕೆ.ಶ್ರೀಕಂಠಯ್ಯ (ನನ್ನ ದೊಡ್ಡಪ್ಪ ದಿ॥ಪೂಜ್ಯ ಪಟ್ಟಾಭಿರಾಮದಾಸರು ಅವರ ಅಳಿಯಂದಿರು) ತಮ್ಮ ಪತ್ನಿ ಶ್ರೀಮತಿ ಗೌರಮ್ಮನವರು ಬರೆದಿಟ್ಟುಕೊಂಡಿದ್ದ ಕಾಗದದ ಹಸ್ತಪ್ರತಿಯನ್ನು ಅವರ ನೆನಪಿಗೆಂದು ನನಗೆ ಕೊಟ್ಟಿದ್ದರು. ಅದನ್ನು ನಾನು ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನಕ್ಕೆ ಅದು ಸ್ಥಾಪಿತವಾದ ತರುಣದಲ್ಲಿಯೇ ಕೊಟ್ಟುಬಿಟ್ಟಿದ್ದೆ. ಅದರ ಹಾಳೆಗಳನ್ನು ತಿರುವಿಹಾಕುತ್ತಿದ್ದಾಗ ಏರಿ ಶೇಷಾಚಾರ್ಯ ವಿರಚಿತ ಶ್ರೀನಿವಾಸಕಲ್ಯಾಣ ಅದರಲ್ಲಿ ಲಿಖಿತವಾಗಿದ್ದುದು ಗಮನಕ್ಕೆ ಬಂದಿತು. ಅದರ ಉಲ್ಲೇಖ ಕವಿಚರಿತೆಯಲ್ಲಿದ್ದುದನ್ನೂ ಬಲ್ಲವನಾಗಿದ್ದೆ. ಮೊನ್ನೆ ಮೊನ್ನೆಯವರೆಗೂ ಹರಿಕಥೆ ಮಾಡುವವರು ಶ್ರೀನಿವಾಸ ಕಲ್ಯಾಣವನ್ನು ಕಥಾರೂಪದಲ್ಲಿ ಕೀರ್ತನ ಮಾಡುತ್ತಿದ್ದುದು ಆಸ್ತಿಕರು ಬಲ್ಲ ವಿಷಯ. ನನಗೆ ಬಂದ ಹಸ್ತಪ್ರತಿಯಲ್ಲಿ ೧೯೧೧ನೇ ಇಸವಿ ಅಂಕಿತವಾಗಿರುವುದರಿಂದ, ಆ ಕಾಲದ ಹಿಂಚು ಮುಂಚಿನ ದಿನಗಳಲ್ಲಿ ಹರಿಕಥಾರೂಪದಲ್ಲಿ ಮಾತ್ರವಲ್ಲದೆ ಗೃಹಿಣಿಯರು ಮನೆಮನೆಗಳಲ್ಲಿ ಶ್ರೀನಿವಾಸ ಕಲ್ಯಾಣವನ್ನು ಆತ್ಮತೃಪ್ತಿಗಾಗಿ ಹಾಡಿಕೊಳ್ಳುತ್ತಿದ್ದರೆಂದು ತೋರುತ್ತದೆ. ಕಥಾವಿಷಯ ಮುಖ್ಯವಾಗಿದ್ದಿತೇ ಹೊರತು ಗ್ರಂಥಕರ್ತ ಮಾಧ್ವನೇ, ಶ್ರೀವೈಷ್ಣವನೇ, ಸ್ಮಾರ್ತನೇ, ಲಿಂಗಾಯತನೇ ಎಂಬ ಜಾತಿಲಕ್ಷಿತವಾದ ಸಂಕುಚಿತ ಭಾವನೆ ಅಂದಿನ ದಿನಗಳಲ್ಲಿ ಈಗಿನಂತೆ ವಿಷವೃಕ್ಷಚ್ಛಾಯೆಯಾಗಿ ಹಬ್ಬಿಹರಡಿರಲಿಲ್ಲ. ಗೌರಮ್ಮ ಶ್ರೀನಿವಾಸ ಕಲ್ಯಾಣವನ್ನುಬರೆದಿಟ್ಟುಕೊಂಡಿರಬೇಕಾದರೆ ಅದು ಆಗ ಇನ್ನೂ ಮುದ್ರಿತವಾಗಿ ಪ್ರಕಾಶಗೊಂಡಿರಲಿಲ್ಲ ಎಂದು ಊಹಿಸಬಹುದಾಗಿದೆ. ಶ್ರೀನಿವಾಸ ಕಲ್ಯಾಣವನ್ನು ಇಡಿಯಾಗಿ ಕಂಠಪಾಠ ಮಾಡಿಕೊಂಡು ಗೃಹಿಣಿಯರು ಹಾಡಿಕೊಳ್ಳುತ್ತಿದ್ದರು ಎಂದು ಕೇಳಿ ಬಲ್ಲೆ. ಅಪರೂಪವಾಗಿ ಅದನ್ನು ಬರೆದಿಟ್ಟುಕೊಂಡವರಿಂದ ನಕಲಾಗಿ ಮರುನಕಲಾಗಿ ಮರುನಕಲಿನ ಮಮ್ಮರುನಕಲಾಗಿ ಪ್ರಚಾರದಲ್ಲಿ ಇದ್ದಿರಬೇಕು.

ರಸವದಲಂಕಾರ ನಿರೂಪಣೆಯ ಸಂದರ್ಭದಲ್ಲಿ, ದಂಡಿ ಎಂಟೇ ರಸಗಳನ್ನು ಹೇಳಿರುವ ಕಡೆ ಇವನು ಒಂಬತ್ತನೆಯ 'ಶಾಂತ' ರಸವನ್ನು ಹೇಳಿರುವುದು – ಇವು ಸ್ವತಂತ್ರ ವಿಚಾರಪರತೆಯ ಕೆಲವು ನಿದರ್ಶನಗಳು.

## ೪. ಗ್ರಂಥದ ಮಹತ್ವ

ಕವಿರಾಜಮಾರ್ಗ ಲಕ್ಷಣ ಗ್ರಂಥವಾದ್ದರಿಂದ ಇದರಲ್ಲಿ ನಾವು ಉತ್ತಮ ಕಾವ್ಯವೊಂದರ ರಸವಂತಿಕೆಯನ್ನಾಗಲಿ ಅರ್ಥರಮಣೀಯತೆಯನ್ನಾಗಲಿ ನಿರೀಕ್ಷಿಸುವುದು ತಪ್ಪಾಗುತ್ತದೆ. ಆದರೂ, ಸ್ವವಿರಚಿತ ಲಕ್ಷ್ಯಪದ್ಯಗಳು ಹಲವು ಶ್ರೀವಿಜಯನ ಕವಿತಾ ಸಾಮರ್ಥ್ಯಕ್ಕೆ ನಿದರ್ಶನಗಳಾಗಬಲ್ಲವು; ಅವುಗಳ ಶೈಲಿ 'ಮೃದುಪದ' ಬಂಧದಿಂದ ಕೂಡಿ ಲಲಿತ ಮನೋಹರವಾಗಿವೆ. ಮೊದಲೆರಡು ಪರಿಚ್ಛೇದಗಳಲ್ಲಿ ಅಲ್ಲಲ್ಲಿ ಮಿನುಗುವ ದೃಷ್ಟಾಂತವಾಕ್ಯಗಳು ನೆನಪಿಡತಕ್ಕಂಥ ಸುಭಾಷಿತಗಳಾಗಿವೆ. ನೃಪತುಂಗನ ಕಾಲಕ್ಕಿಂತ ಹಿಂದಿನ ಕನ್ನಡ ಸಾಹಿತ್ಯದ ಸ್ಥಿತಿಯ ಮೇಲೆ ಈ ಗ್ರಂಥ ಗಮನಾರ್ಹವಾದ ಬೆಳಕು ಚೆಲ್ಲುತ್ತದೆ. ಕನ್ನಡ ನಾಡು, ನುಡಿ, ಜನ ಸಂಬಂಧವಾದ ವರ್ಣನೆ, ನೃಪತುಂಗನ ಆಳ್ವಿಕೆಯ ಸಂದರ್ಭಗಳನ್ನು ಧ್ವನಿಸುವಂತಿರುವ ಕೆಲವು ಪದ್ಯಗಳು ಹಾಗೂ ನೃಪತುಂಗ ಪರವಾದ ಪದ್ಯಗಳು, ಇವು ಕವಿರಾಜಮಾರ್ಗಕ್ಕೆ ಐತಿಹಾಸಿಕ ಮಹತ್ವವನ್ನು ನೀಡಿವೆ. ಹೀಗೆ, ಅನೇಕ ದೃಷ್ಟಿಗಳಿಂದ ಕವಿರಾಜಮಾರ್ಗ ಒಂದು ಮಹತ್ವಪೂರ್ಣ ಗ್ರಂಥ ಎಂಬ ಬಗೆಗೆ ಸಂಶಯವಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ, ಕನ್ನಡ ಅಲಂಕಾರ ಶಾಸ್ತ್ರಗ್ರಂಥಗಳ ಶ್ರೇಣಿಯಲ್ಲಿ ಸ್ವತಂತ್ರವಿಚಾರ ಪ್ರಣಾಳಿಕೆಯ ನೆಲಗಟ್ಟಿನಮೇಲೆ ನಿರ್ಮಾಣವಾದ ಗ್ರಂಥ ಯಾವುದಾದರೂ ಇದೆಯೆ ಎಂದರೆ ಕವಿರಾಜಮಾರ್ಗದ ಕಡೆಗೇ ಕೈದೋರಿಸಬೇಕಾಗುತ್ತದೆ. ನೃಪತುಂಗ ಮತವುಳ್ಳ ಶ್ರೀವಿಜಯಕೃತ ಕವಿರಾಜಮಾರ್ಗ ಭಾರತೀಯ ಕಾವ್ಯಮೀಮಾಂಸೆಯ ಚರಿತ್ರೆಯಲ್ಲಿ ಒಂದು ಗಣ್ಯವಾದ ಉಲ್ಲೇಖವನ್ನು ಪಡೆಯಲು ಅರ್ಹವಾದ ಕೃತಿ.

ಆಗಸ್ಟ್ ೧೫, ೧೯೭೪ **ಎಂ.ವಿ. ಸೀತಾರಾಮಯ್ಯ**

ಬೆಂಗಳೂರು

ಪ್ರಕಾಶತೇ' ಎಂಬುದಕ್ಕೆ 'ಫಣಿತೇನ ಪ್ರಕಾಶಯೇ' ಎಂದಿದೆ. ಮುದ್ರಣ ದೋಷಗಳು ಹೆಚ್ಚಾಗಿವೆ.

'ಶ್ರೀನಿವಾಸ ಕಲ್ಯಾಣ' ಒಂದು ಉತ್ತಮ ಸಾಹಿತ್ಯಕೃತಿ ಎಂದು ನಾವು ಭಾವಿಸಿಲ್ಲ. ಆದರೆ, ಆಸ್ತಿಕರಾದ ಸಾಮಾನ್ಯ ಜನರಲ್ಲಿ ತಿರುಪತಿ ತಿಮ್ಮಪ್ಪನಲ್ಲಿ ಎಷ್ಟು ಭಕ್ತಿಯೋ ಆತನ ಕಲ್ಯಾಣದ ಕಥೆಯಲ್ಲಿಯೂ ಅಷ್ಟೇ ಅಕ್ಕರೆ ಭಕ್ತಿ ಇರುವುದರಿಂದ, ಪೂರ್ವ ಸಂಪ್ರದಾಯದ ಶ್ರೀ ವೆಂಕಟೇಶನ ಭಕ್ತರು ಇಂದಿಗೂ ಈ ಗ್ರಂಥವನ್ನು ಪಾರಾಯಣ ಮಾಡುವ ರೂಢಿ ಇಟ್ಟುಕೊಂಡಿರುವುದರಿಂದ, ಉಪಲಬ್ಧ ಮುದ್ರಿತ ಪ್ರತಿ ಮತ್ತು ಪ್ರತಿಷ್ಠಾನದ ಹಸ್ತಪ್ರತಿಯಲ್ಲದೆ ಇನ್ನೂ ದೊರೆಯಬಹುದಾದ ಹಸ್ತಪ್ರತಿಗಳ ಆಧಾರದಿಂದ ಕೂಡಿದಮಟ್ಟಿಗೂ ಸುವಾಚನೀಯವಾದ ಒಂದು ಹೊಸ ಸ್ಖಾಲಿತ್ಯರಹಿತ ಮುದ್ರಣವನ್ನು ಏಕೆ ತರಬಾರದು ಎಂಬ ಆಲೋಚನೆ ನಮ್ಮಲ್ಲಿ ಮೂಡಿತು. ತಿರುಮಲೆ ತಿರುಪತಿ ದೇವಸ್ಥಾನದ ಆಡಳಿತವು ಧಾರ್ಮಿಕಗ್ರಂಥಗಳ ಪ್ರಕಟನೆಗೆ ಧನಸಹಾಯ ನೀಡುವ ಶ್ಲಾಘ್ಯವ್ಯವಸ್ಥೆ ನಮಗೆ ತಿಳಿದುಬಂದಿತು; ನಮ್ಮ ಉದ್ದೇಶವನ್ನು ತಿಳಿಸಿ ಅವರಿಗೆ ಪತ್ರ ಬರೆದೆವು. ಆಡಳಿತಾಧಿಕಾರಿಗಳು ಮುದ್ರಣವೆಚ್ಚ ಅರ್ಧದಷ್ಟು ಮೊಬಲಗನ್ನು ಸಹಾಯಧನವಾಗಿ ನೀಡುವ ಆಶ್ವಾಸನೆ ಕೊಟ್ಟರು. ಈ ಸಂಗತಿಯನ್ನು ಪ್ರಸ್ತಾವತ್ವೇನ ಮಾನ್ಯ ಮಿತ್ರರಾದ ಡಾ॥ ಕೆ.ಎಂ.ಕೃಷ್ಣರಾವ್ ಅವರಿಗೆ ತಿಳಿಸಿದಾಗ ತಮ್ಮಲ್ಲಿಯೂ ಈ ಕೃತಿಯ ಒಂದೆರಡು ಹಸ್ತಪ್ರತಿಗಳಿರುವುದಾಗಿ ತಿಳಿಸಿದರು. ಗ್ರಂಥ ಸಂಪಾದನಕಾರ್ಯವನ್ನು ಅವರಿಗೇ ವಹಿಸುವುದು ಸೂಕ್ತವೆಂದು ತೀರ್ಮಾನಿಸಿ, ಸಂಪಾದನಕಾರ್ಯವನ್ನು ಮಾಡಿಕೊಡಬೇಕೆಂದು ಅವರನ್ನು ಪ್ರಾರ್ಥಿಸಿಕೊಂಡೆವು. ಅವರು ಕೃಪೆಮಾಡಿ ಗ್ರಂಥವನ್ನು ಸಂಪಾದನ ಮಾಡಿಕೊಡಲು ಒಪ್ಪಿಕೊಂಡರು.

ಶ್ರೀ ಕೃಷ್ಣರಾಯರು ತಮ್ಮಲ್ಲಿದ್ದ ಹಸ್ತಪ್ರತಿ, ಪ್ರತಿಷ್ಠಾನದ ಹಸ್ತಪ್ರತಿ, ಇವುಗಳ ಜೊತೆಗೆ ಬೇರೆಯ ಹಸ್ತಪ್ರತಿಗಳನ್ನೂ ದೊರಕಿಸಿಕೊಂಡು, ಒಟ್ಟು ಐದು ಹಸ್ತಪ್ರತಿಗಳ ಸಹಾಯದಿಂದ ಶ್ರಮವಹಿಸಿ, ಪರಿಷ್ಕೃತ ಗ್ರಂಥಪಾಠವನ್ನು ಸಿದ್ಧಪಡಿಸಿದ್ದಾರೆ. ಏರೀ ಶೇಷಾಚಾರ್ಯರ ಸಂಸ್ಕೃತ ಶ್ಲೋಕಗಳನ್ನೂ ಹಲವು ಕಡೆ ಗೋಚರವಾಗುವ ಭಾಷಾ ಪ್ರೌಢಿಮೆಯನ್ನೂ ಗಮನಿಸಿದರೆ, ಅವರು ಉಭಯಭಾಷಾ ಪರಿಣತರೆಂದು ವ್ಯಕ್ತಪಡುತ್ತದೆ. ಆದರೂ ಶ್ರೀನಿವಾಸ ಕಲ್ಯಾಣವು ಪಂಡಿತರ ಮೆಚ್ಚುಗೆಗಾಗಿ ಬರೆದ ಛಂದೋಬದ್ಧ ಕೃತಿಯಲ್ಲ." ಶ್ರೀಮದ್ ಹರಿಭಕ್ತರೆಲ್ಲಕೇಳಿರೈ॥ ಈ ಶುದ್ಧ ಜನವಂದ್ಯ ಪರಮಾತ್ಮ ಕಥೆಯ" ಎಂದು ಕೃತಿಕಾರರೇ ಹೇಳಿಕೊಂಡಿರುವುದರಿಂದ, ಪಾಮರರನ್ನು ಉದ್ದೇಶಿಸಿ 'ಹರಿಭಕ್ತ'ರಿಗಾಗಿ ಬರೆದ ಹರಿಕಥೆ. "ದ್ವಿಪದ

ಚಿಂತಾಮಣಿಯಲ್ಲಿ ಏರಿಯವರ ವಂಶಿಕರು ಕೃತಿಯನ್ನು ನಕಲು ಮಾಡಿ ಹಂಚುತ್ತಿದ್ದುದನ್ನು ಸಂಪಾದಕರು ತಿಳಿಸಿದ್ದಾರೆ. ಈ ಗ್ರಂಥದಾನ ಪದ್ಧತಿ ಅತ್ತಿಮಬ್ಬೆ ಪೊನ್ನನ ಶಾಂತಿಪುರಾಣದ ೧೦೦೦ ಪ್ರತಿಗಳನ್ನು ಹಂಚಿದ ಕಾಲದಿಂದ ರೂಢಿಯಲ್ಲಿದೆ. ಗ್ರಂಥದಾನ ಪದ್ಧತಿ ಬಳಕೆ ತಪ್ಪಿದಾಗ ಜನ ತಾವೇ ನಕಲು ಮಾಡಿಕೊಳ್ಳುತ್ತಿದ್ದರು. ಇಂಥ ಒಂದು ನಕಲು, ಗೌರಮ್ಮನವರು ಹಸ್ತಪ್ರತಿಯಲ್ಲಿ ಬರೆದಿಟ್ಟುಕೊಂಡದ್ದು. ಈಚಿನ ದಿನಗಳಲ್ಲಿ ಶ್ರೀನಿವಾಸಕಲ್ಯಾಣ ಮುದ್ರಿತವಾಗಿ ದೊರೆಯುತ್ತಿತ್ತು. ನಾನು ಒಂದು ಮುದ್ರಿತ ಪ್ರತಿಯನ್ನು ತರಿಸಿಕೊಂಡು (ಮುದ್ರಿತ ಪ್ರತಿ ದೊರಕುವುದು ಕಷ್ಟಸಾಧ್ಯವೇ ಆಗಿತ್ತು), ನಮ್ಮಲ್ಲಿದ್ದ ಹಸ್ತಪ್ರತಿಯ ಪಾಠದೊಂದಿಗೆ ಹೋಲಿಸಿ ನೋಡಲಾಗಿ ಎರಡರಲ್ಲಿಯೂ ಸ್ಖಾಲಿತ್ಯಗಳು ಬಹಳವಾಗಿದ್ದುವು; ಪಾಠಭೇದಗಳೂ ಇದ್ದುವು.

ಉದಾಹರಣೆಗೆ, ಈಗ ಮುದ್ರಿತವಾಗಿರುವ ಪ್ರತಿಷ್ಠಾನದ ಆವೃತ್ತಿಯಲ್ಲಿ ಕರ್ತೃತ್ವ ವಿಷಯಕವಾದ ಪಾಠ ಹೀಗಿದೆ (ಪ್ರತಿಷ್ಠಾನದ ಪ್ರತಿಯ ಪಾಠವೂ ಇದೇ):–

ಏರೀ ಮುದ್ಗಲ ಕೃಷ್ಣಾರ್ಯಃ ರುಗ್ಮಿಣ್ಯಾಂ ಮುಗ್ಧಯೇವಚ।
ಇತಿ ಶ್ರೀ ಶ್ರೀನಿವಾಸ ಕಲ್ಯಾಣಂ ಫಣಿಪೇನ ಪ್ರಕಾಶತೇ॥

ಕವಿಚರಿತೆಕಾರರು ಉದ್ಧರಿಸಿಕೊಟ್ಟಿರುವ ಪಾಠ (ಕರ್ಣಾಟಕ ಕವಿಚರಿತೆ, ಸಂ.೩, ೧೯೨೯; ಪುಟ–೧೬೦) ಹೀಗಿದೆ:–

ರುಕ್ಮಿಣ್ಯಾಮೇರೀಕೃಷ್ಣಾರ್ಯಸಂಭವೇನಯಥಾಮತಿ।
ಶ್ರೀ ಶ್ರೀನಿವಾಸ ಕಲ್ಯಾಣಂ ಫಣಿಪೇನ ಪ್ರಕಾಶ್ಯತೇ॥

೧೯೭೮ರಷ್ಟು ಈಚಿನ ವರ್ಷಗಳಲ್ಲಿ ಬೆಂಗಳೂರು ಚಂದ್ರಿಕಾ ಪ್ರಕಾಶನಮಂದಿರ, ಬೆಂಗಳೂರು–೨ ಇವರು ಈ ಮುದ್ರಿತ ಆವೃತ್ತಿಯನ್ನು ಪ್ರಕಟಿಸಿದ್ದಾರೆ. ಈ ಗ್ರಂಥಕ್ಕೆ ನಂಜನಗೂಡಿನ ಶ್ರೀ ರಾಜಾ ಎಸ್. ಗುರುರಾಜಾಚಾರ್ಯರು ಒಂದು ಚಿಕ್ಕ ಮುನ್ನುಡಿ ಬರೆದಿರುತ್ತಾರೆ. ಇದರಲ್ಲಿ ಗ್ರಂಥಪರಿಷ್ಕರಣ ವಿಚಾರವಾಗಿಯಾಗಲಿ ಗ್ರಂಥಕರ್ತರ ವಿಷಯವಾಗಿಯಾಗಲಿ ಏನೂ ಹೇಳಿಲ್ಲ. ಈ ಮುದ್ರಿತ ಪ್ರತಿಯಲ್ಲಿ ಮೇಲಿನ ಶ್ಲೋಕದ 'ಫಣಿಪೇನ

ಇತ್ಯಾದಿ ವಿವರಗಳಿಗೆ ಕ್ರಿಸ್ತಶಕೆಯ ಯಾವ ವರ್ಷ ಮತ್ತು ತೇದಿಗಳು ಕೂಡಿಬರುತ್ತವೆ, ತಿಳಿಸಬೇಕೆಂದು ಮೈಸೂರಿನ ಸುವಿಖ್ಯಾತ ದೈವಜ್ಞರಾದ ಶ್ರೀ ವಿದ್ವಾನ್ ನ.ಕೃಷ್ಣ ಜೋಯಿಸರವರಿಗೆ ಪತ್ರ ಬರೆದು ಕೇಳಿಕೊಳ್ಳಲಾಗಿ ಅವರು ತಮ್ಮ ೨-೧೦-೧೯೮೮ರ ಪತ್ರದಲ್ಲಿ ಈ ಕೆಳಗಿನಂತೆ ಕೃಪೆಮಾಡಿ ತಿಳಿಸಿರುತ್ತಾರೆ:

"ವಾರ ಇದ್ದಿದ್ದರೆ ನಿಖರವಾದ ಕಾಲವನ್ನು ಗುರುತಿಸಲು ಅನುಕೂಲವಾಗುತ್ತಿತ್ತು" ಎಂದು ಹೇಳಿ "ಪ್ಲವ ಸಂವತ್ಸರ ಜ್ಯೇಷ್ಠ ಶುದ್ಧ ಅಷ್ಟಮಿಯು ಬರುವ ದಿನಗಳ ವಿವರ ಈ ರೀತಿ ಇದೆ" ಎಂಬುದಾಗಿ ಈ ಕೆಳಗಿನಂತೆ ತಿಳಿಸಿದ್ದಾರೆ:

(೧) "೨೫-೫-೧೯೦೧ - ಶನಿವಾರ;
(೨) ೨೫-೮-೧೮೪೧ - ಶುಕ್ರವಾರ;
(೩) ೨೯-೫-೧೭೮೧ - ಮಂಗಳವಾರ;
(೪) ೨೨-೫-೧೭೨೧ - ಸೋಮವಾರ;
(೫) ೨೫-೫-೧೬೬೧ - ಶನಿವಾರ... ಅಕಸ್ಮಾತ್ ವಾರದಲ್ಲಿ ಒಂದು ದಿನವ್ಯತ್ಯಾಸ ಕಂಡುಬರಬಹುದು."

ಗ್ರಂಥಸಂಪಾದಕರ ಸ್ಥೂಲ ನಿರ್ದೇಶನದ ಆಧಾರದ ಮೇಲೆ ಹೇಳುವುದಾದರೆ, **ಕ್ರಿ.ಶ.೧೮೪೧, ಮೇ ತಿಂಗಳ ೨೮, ಶುಕ್ರವಾರ** ಏರಿ ಶೇಷಾಚಾರ್ಯರು ವೈಕುಂಠವಾಸಿಗಳಾದರು ಎಂದು ಧಾರಾಳವಾಗಿ ಹೇಳಬಹುದು.

ನನ್ನ ಇನ್ನುಳಿದ ಕರ್ತವ್ಯವೆಂದರೆ, ಉಪಕಾರ ಸ್ಮರಣೆ. ಮೊತ್ತಮೊದಲನೆಯದಾಗಿ, ನಾನು ಕೇಳಿಕೊಂಡ ಕೂಡಲೆ ತಮ್ಮ ಅನಾರೋಗ್ಯದ ಸ್ಥಿತಿಯಲ್ಲಿಯೂ ಶ್ಲಾಘ್ಯ ರೀತಿಯಲ್ಲಿ ಗ್ರಂಥಸಂಪಾದನ ಕಾರ್ಯವನ್ನು ನಿರ್ವಹಿಸಿಕೊಟ್ಟಿರುವ ಡಾ॥ ಕೆ.ಎಂ.ಕೃಷ್ಣರಾವ್ ಅವರಿಗೂ ಅವರಿಗೆ ನೆರವಾಗಿರುವ ಅವರ ಪುತ್ರ ಡಾ॥ ಕೆ.ಗೋಕುಲನಾಥ ಅವರಿಗೂ, ಗ್ರಂಥ ಪ್ರಕಾಶನಕ್ಕೆ ಉದಾರವಾಗಿ ಧನಸಹಾಯ ಮಾಡಿರುವ ತಿರುಮಲೆ ತಿರುಪತಿ ದೇವಸ್ಥಾನದ ಆಡಳಿತಾಧಿಕಾರಿಗಳು ಹಾಗೂ ಸಂಪಾದನ ವಿಭಾಗದ ಸಂಪಾದಕರಿಗೂ ಪ್ರತಿಷ್ಠಾನದ ಪರವಾಗಿ ಕೃತಜ್ಞತೆಯ ವಂದನೆಗಳನ್ನು ಸಮರ್ಪಿಸುತ್ತೇನೆ. ಕಾಲ ನಿರ್ಣಯ ಮಾಡಿಕೊಟ್ಟ ಶ್ರೀ ನ.ಕೃಷ್ಣ ಜೋಯಿಸರಿಗೆ ಪ್ರತಿಷ್ಠಾನ ಕೃತಜ್ಞವಾಗಿದೆ. ಕರಡು ತಿದ್ದುವುದರಲ್ಲಿ ನೆರವಾದ ಗೌ॥ ಕಾರ್ಯದರ್ಶಿ ಶ್ರೀ ಎಂ.ವಿ.ಸತ್ಯನಾರಾಯಣ ಅವರಿಗೂ ನನ್ನ ವಂದನೆಗಳು.

ಪದಪದ್ಯಗಳಿಂದ .... ಸುಪದ ಕೃತಿಯಿಂದ ವರತಾಳಂಗಳಿಂದ" ಎಂದು ಕೃತಿಯಲ್ಲಿ ಉಕ್ತವಾಗಿರುವುದರಿಂದ ಇದು ಗೇಯಕೃತಿ ಎಂಬುದು ಸ್ಪಷ್ಟ. ಕವಿಚರಿತೆಕಾರರೇನೋ ಇದನ್ನು 'ಯಕ್ಷಗಾನ' ಎಂದು ನಿರ್ದೇಶಿಸಿದ್ದಾರೆ. ಆದರೆ, ಹರಿಭಕ್ತರಿಗಾಗಿ ಬರೆದ ಕಥೆ ಎಂದು ಕೃತಿಕಾರರೇ ಹೇಳಿರುವುದರಿಂದಲೂ, ಈ ಮೊದಲೇ ಹೇಳಿರುವಂತೆ ಸಾಮಾನ್ಯ ಜನ ಇದನ್ನು ಹಾಡಿಕೊಳ್ಳುವ ರೂಢಿ ಇದ್ದುದರಿಂದಲೂ ಹರಿಕಥಾ ಪ್ರಸಂಗಕ್ಕಾಗಿ ಸಿದ್ಧಪಡಿಸಿದ ಲಿಖಿತ ರೂಪ ಇದು ಎಂದು ತೋರುತ್ತದೆ. ಪ್ರಯೋಗ ಇಲ್ಲವೆ ಪ್ರದರ್ಶನಕ್ಕಾಗಿ (Performing) ಬರೆದ ಕೃತಿಯಲ್ಲ. ಹರಿಕಥೆ ಮಾಡುವವರೂ ತಮ್ಮದೇ ಆದ ಕಥಾಲಿಖಿತ (Script) ಇಟ್ಟುಕೊಂಡಿರುತ್ತಾರೆ; ಪ್ರಾಯಿಕವಾಗಿ ಇವು ಪ್ರಕಟವಾಗುವುದಿಲ್ಲ. ಶೇಷಾಚಾರ್ಯರು ತಮ್ಮ ಈ ಕೃತಿಯನ್ನು ಕೀರ್ತನ ಮಾಡುತ್ತಿದ್ದಿರಬಹುದು. ಹಾಗೆಂದು ಖಂಡಿತವಾಗಿ ಹೇಳಲು ಆಧಾರವಿಲ್ಲ. ಅಂತೂ ಈ ಕೃತಿ ಅವರ ಮುಖದಿಂದ ವಾಕ್–ಗೇಯವಾಗಿ ಮೂಡಿಬಂದಿತು ಎಂಬ ಹೇಳಿಕೆ ಗಮನಾರ್ಹ. ಇದು ಬರೆದದ್ದಲ್ಲ; ಹಾಡಿ ಹೊಮ್ಮಿದ್ದು. ಪಂಡಿತಾಭಿಮುಖವಾದದ್ದಲ್ಲ, ಜನಾಭಿಮುಖವಾದದ್ದು. ಎಂತಲೇ ಜನಪ್ರಿಯವಾಯಿತು; ಜಾನಪದ ಶೋಭೆಯುಳ್ಳದ್ದಾಯಿತು.

ಏರೀ ಶೇಷಾಚಾರ್ಯರ ಜೀವನ ವೃತ್ತಾಂತದ ಬಗೆಗೆ ಅಲ್ಪಸ್ವಲ್ಪ ವಿವರಗಳೂ 'ಶ್ರೀನಿವಾಸ ಕಲ್ಯಾಣ'ದ ಪರಿಚಯ ಇರುವವರಿಗೆ ಕೂಡ ಏನೂ ಗೊತ್ತಿರದಿದ್ದ ಸನ್ನಿವೇಶದಲ್ಲಿ ಮಾನ್ಯ ಸಂಪಾದಕರು ಅವರ ಬಗೆಗೆ ಅವರ ಪೂರ್ವಿಕರು ಮತ್ತು ಸಂಬಂಧಿಕರ ಬಗೆಗೆ, ಅವರ ಸ್ಥಳ ಕಾಲ ವಿದ್ಯೆ ಸಾಧನೆ ಮುಂತಾದ ವಿವರಗಳ ಬಗೆಗೆ ಶ್ರಮವಹಿಸಿ ವಿಷಯ ಸಂಗ್ರಹ ಮಾಡಿ ತಮ್ಮ ಪೀಠಿಕೆಯಲ್ಲಿ ನಿರೂಪಿಸಿದ್ದಾರೆ; ಆಸಕ್ತರಾದ ಓದುಗರಿಗೆ ಮಹೋಪಕಾರ ಮಾಡಿದ್ದಾರೆ. ಹೈದರಾಬಾದಿನ (ಈಗ ಆಂಧ್ರ ಪ್ರದೇಶ) ಗದ್ವಾಲ್ ಪ್ರಾಂತಕ್ಕೆ ಸೇರಿದವರಾದರೂ ಕರ್ನಾಟಕದ ರಾಯಚೂರಿನವರು, ಚಿಂತಾಮಣಿಯಲ್ಲಿ ಓಡಾಡಿದವರು, ಬೆಂಗಳೂರನ್ನೂ ಸಂದರ್ಶಿಸಿದವರು, ಶೇಷಾಚಾರ್ಯರು. ಅತ್ತಣವರಿಗೂ ಇತ್ತಣವರಿಗೂ ಅಭಿಮಾನಾಸ್ಪದರು.

ಶೇಷಾಚಾರ್ಯರು ದಿವಾನ್ ಪೂರ್ಣಯ್ಯನವರ ಕಾಲದವರು, ಸುಮಾರು ೧೮ನೆಯ ಶತಮಾನದ ಉತ್ತರಾರ್ಧ ಮತ್ತು ೧೯ನೆಯ ಶತಮಾನದ ಪೂರ್ವಾರ್ಧ–ಈ ನಡುವಣ ಕಾಲದವರು ಎಂದು ಹೇಳಿ, ಅವರು ಪ್ಲವ ಸಂವತ್ಸರದ ಜ್ಯೇಷ್ಠ ಶುದ್ಧ ಅಷ್ಟಮಿಯಂದು ದೇಹತ್ಯಾಗ ಮಾಡಿದರು – ಎಂದು ಸಂಪಾದಕರು ತಿಳಿಸಿದ್ದಾರೆ. ದಿವಸದ ಉಲ್ಲೇಖ ಇಲ್ಲ. ತಿಳಿಸಿರುವ ಸಂವತ್ಸರ

# ೪. ಚಂದ್ರಚೂಡಾಮಣಿ ಶತಕ

## ಪೀಠಿಕೆ

"ಶ್ರೀ ಚಂದ್ರಚೂಡಾಮಣಿಶತಕ'ವು ಆ ಹೆಸರಿನಿಂದ ಪ್ರಖ್ಯಾತವಾಗಿದ್ದರೂ ಕೃತಿಕರ್ತೃ ಅದಕ್ಕೆ ಇಟ್ಟಿರುವ ಅರ್ಥಪೂರ್ಣವಾದ ಹೆಸರು 'ಜ್ಞಾನಸಾರಂ'. ಕೃತಿಯ ಹೆಸರು ಉಕ್ತವಾಗಿರುವ ಪದ್ಯದಲ್ಲಿಯೇ ಕೃತಿಕಾರನ ಹೆಸರೂ ದೊರೆಯುತ್ತದೆ:

ಉದಯಾದಿತ್ಯನ ಸಂಧಿವಿಗ್ರಹಿ ಲಲಾಮಂ ನಾಗವರ್ಮಂ ಸಮಂ–
ತುದಯಾದಿತ್ಯನ ರಾಯಭಾರಿಯೆನಿಸಿರ್ದಾತ್ಮಾಗ್ರಜಂ ಭಾಸ್ಕರಂ
ಮೊದಲಾಧೀಶ್ವರಭಕ್ತರಪ್ಪಿವರ್ಗೆ ಪೇಟ್ದೀ ಜ್ಞಾನಸಾರಂ ಸುಖಾ–
ಸ್ಪದಮೊಲ್ದೋದುಗೆ ಭುಕ್ತಿಮುಕ್ತಿಫಲಮಂ ಶ್ರೀ ಚಂದ್ರಚೂಡಾಮಣೀ

**ಕೃತಿನಾಮ**: ನಾವು ಬಳಸಿಕೊಂಡಿರುವ ಹಸ್ತಪ್ರತಿಯ ಸಮಾಪ್ತಿವಾಕ್ಯದಲ್ಲಿ ಚಂದ್ರಚೂಡಾಮಣಿ ಶತಕ ಎಂದು ಉಕ್ತವಾಗಿರುವುದರಿಂದಲೂ ಪ್ರತಿಪದ್ಯಾಂತದ ಇಷ್ಟದೈವ ಮುದ್ರಿಕೆಯೇ ಕೃತಿಯ ಹೆಸರಾಗುವುದು ಅಸಂಭವವಲ್ಲವಾದ್ದರಿಂದಲೂ 'ಚಂದ್ರಚೂಡಾಮಣಿಶತಕ' ಎಂಬುದೇ ಕೃತಿನಾಮವೆಂದೂ 'ಜ್ಞಾನಸಾರಂ' ಎಂಬುದು ಕೃತಿಯ ವಿಷಯದ್ಯೋತಕವಾಗಿದ್ದು ಈ ಹೆಸರು ಕವಿಗೆ ಪ್ರಿಯವಾದ ಅನ್ವರ್ಥನಾಮವೆಂದೂ ಹೇಳಬಹುದಾಗಿದೆ.

**ಕರ್ತೃ: ನಾಗವರ್ಮ** – ಮೇಲ್ಕಂಡ ಪದ್ಯದಲ್ಲಿ ಉಕ್ತವಾದ ನಾಗವರ್ಮನೇ ಕೃತಿಕಾರನೆಂಬುದರಲ್ಲಿ ನಮಗೆ ಈಗ ಎಳ್ಳಷ್ಟೂ ಸಂದೇಹವಿಲ್ಲ. 'ಕನ್ನಡ ಶತಕ ಸಾಹಿತ್ಯದ ಆದ್ಯ ಪ್ರವರ್ತಕರು' ಎಂಬ ತಮ್ಮ ಸುದೀರ್ಘ ಲೇಖನದಲ್ಲಿ ಉದಯಾದಿತ್ಯನೆ ಕೃತಿಕಾರ ಎಂದು ಸಾಧಿಸಲು ಪ್ರೊ॥ ಸಿ.ಮಹಾದೇವಪ್ಪನವರು

ಪುಸ್ತಕವನ್ನು ಸಮರ್ಪಕವಾಗಿ ಅಚ್ಚುಮಾಡಿಕೊಟ್ಟಿರುವ ನೇತ್ರಾ ಪ್ರಿಂಟರ್ಸ್ ಅವರಿಗೂ ನಮ್ಮ ವಂದನೆಗಳು. ಗ್ರಂಥಪ್ರಕಾಶನ ಕಾರ್ಯದಲ್ಲಿ ನೆರವಾದ ಎಲ್ಲರಿಗೂ ಈ ಪುಸ್ತಕದ ವಾಚಕವರ್ಗಕ್ಕೂ ಶ್ರೀ ಶ್ರೀನಿವಾಸನ ಅನುಗ್ರಹ ಇರಲಿ ಎಂದು ಪ್ರಾರ್ಥಿಸುತ್ತೇನೆ.

ಅಕ್ಟೋಬರ್ ೮, ಶನಿವಾರ, ೧೯೮೮
ಬೆಂಗಳೂರು

**ಎಂ.ವಿ. ಸೀತಾರಾಮಯ್ಯ**
ಪ್ರಧಾನ ಸಂಪಾದಕ ಮತ್ತು ಅಧ್ಯಕ್ಷ,
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ.

ಎಂಬ ಪ್ರಶ್ನೆಗೆ 'ಉದಯಾದಿತ್ಯನ' 'ಸಂಧಿವಿಗ್ರಹಿ' ಎಂದು ಸರಳವಾದ ಉತ್ತರ ದೊರೆತು, ಆಕಾಂಕ್ಷೆ ಪೂರೈಕೆಯಾಗುತ್ತದೆ. ಪದ್ಯದಲ್ಲಿ 'ಭಾಸ್ಕರಂ' ಎಂಬ ಇನ್ನೊಂದು ವ್ಯಕ್ತಿನಾಮವಿದೆ. ಈ ಭಾಸ್ಕರ ಯಾರು? ಉದಯಾದಿತ್ಯನ ರಾಯಭಾರಿ. ಈ ರಾಯಭಾರಿ ಎನಿಸಿದ್ದ ಭಾಸ್ಕರ ಮೊದಲಾದ ಈಶ್ವರಭಕ್ತರಿಗೆ 'ಪೇಟ್ದಿ' ಈ 'ಜ್ಞಾನಸಾರಂ' ಸುಖಾಸ್ಪದವಾದದ್ದು.

ಕೃತಿಕರ್ತೃ ನಾಗವರ್ಮ ಎಂದು ಇಟ್ಟುಕೊಂಡರೆ ಈ ನಾಗವರ್ಮ ಯಾರು ಎಂಬುದು ಮುಂದಿನ ಪ್ರಶ್ನೆ.

ಪ್ರಾಚೀನ ಕನ್ನಡ ಕವಿಪರಂಪರೆಯಲ್ಲಿ ಹಲವರು ನಾಗವರ್ಮರು ಆಗಿಹೋಗಿದ್ದಾರೆ: (೧)'ಕರ್ಣಾಟಕದ ಕಾದಂಬರಿ'ಯ ಕರ್ತೃ ನಾಗವರ್ಮ; (೨)'ಛಂದೋಂಬುಧಿ'ಯ ನಾಗವರ್ಮ; (೩)ವರ್ಧಮಾನಪುರಾಣ, ಕಾವ್ಯಾವಲೋಕನ ಮತ್ತು ವಸ್ತು ಕೋಶಗಳ ನಾಗವರ್ಮ (ಇವನು ಎರಡನೆಯ ನಾಗವರ್ಮ ಎಂದು ಪ್ರಸಿದ್ಧ. ಕಾರಣ, 'ಕಾದಂಬರಿ'ಯ ಹಾಗೂ 'ಛಂದೋಂಬುಧಿ'ಯ ಕವಿ ಒಬ್ಬನೇ ಎಂದು ಕವಿಚರಿತೆಕಾರರು ಅಭಿಪ್ರಾಯಪಟ್ಟಿದ್ದರು.) ಚಂದ್ರಚೂಡಾಮಣಿ ಶತಕದ ಕರ್ತೃವಿನ ಬಗೆಗೆ ಕವಿಚರಿತೆಕಾರರು ಹೀಗೆ ಅಭಿಪ್ರಾಯಪಟ್ಟಿದ್ದಾರೆ:

> "ಷಿಕಾರಿಪುರದ ೧೨೯ನೆಯ ಶಾಸನದಿಂದ (೧೦೭೨) ಚಾಳುಕ್ಯರಾಜನಾದ ಭುವನೈಕಮಲ್ಲನಲ್ಲಿ (೧೦೬೯-೧೦೭೬) 'ಶ್ರೀಮನ್ಮಹಾಪ್ರಧಾನಂ ಹಿರಿಯ ಸಂಧಿವಿಗ್ರಹಿ ಮನೆವೆರ್ಗಡೆ ದಂಡನಾಯಕಂ' ಆದ ಉದಯಾದಿತ್ಯನ ಕಾಲದಲ್ಲಿ ಬಹಳ ಪ್ರಸಿದ್ಧನಾದ ಅದ್ವೈತಿ ಗುಣಗಳ್ಳ ನಾಗವರ್ಮಾಚಾರ್ಯ ನೆಂಬವನೊಬ್ಬನು ಇದ್ದಂತೆ ತಿಳಿಯುತ್ತದೆ. ಈ ನಾಗವರ್ಮನೇ ಕವಿಯಾಗಿರಬಹುದೆಂದು ಊಹಿಸುತ್ತೇವೆ. ಹಾಗಿದ್ದ ಪಕ್ಷದಲ್ಲಿ ಸುಮಾರು ೧೦೭೧ ರಲ್ಲಿ ಇದ್ದಿರಬೇಕು."[೧]

---

ಇದಕ್ಕಾಗಿ ವಿಷಾದಿಸುತ್ತೇನೆ. ಅದೇ ಲೇಖನದಲ್ಲಿ, ಶತಕದಲ್ಲಿ ೯೯ ಪದ್ಯಗಳಿವೆ, ಆದ್ದರಿಂದ ಇದು ಶತಕಗ್ರಂಥವಾಗುವುದಿಲ್ಲ ಎಂದೂ ಹೇಳಿದ್ದೆ. ನನ್ನ ಹೇಳಿಕೆಗೆ ಆಧಾರ, ಕವಿಚರಿತೆ II (೧೯೭೨ರ ಮುದ್ರಣ, ಪು.೧೧೩-೧೧೪): ಅಲ್ಲಿ ಉದ್ಧರಿಸಿ ಕೊಟ್ಟಿರುವ ೩ ಪದ್ಯಗಳಿಗೆ ಕ್ರಮವಾಗಿ ೯೭, ೯೮, ೯೯ ಎಂದಿರುವುದು ಗ್ರಂಥದ ಎಲ್ಲ ಉದಾಹೃತ ಪದ್ಯಗಳಿಗೆ ಕೊಟ್ಟ ಕ್ರಮಾಂಕವಾಗಿದ್ದು, ನನ್ನ ಹೇಳಿಕೆ ಅನವಧಾನದಿಂದಾದ ತಪ್ಪು. ಪ್ರೊ॥ ಸಿ.ಮಹಾದೇವಪ್ಪನವರು ಈ ತಪ್ಪಿನ ಕಡೆಗೆ ನನ್ನ ಗಮನ ಸೆಳೆದು ಉಪಕಾರ ಮಾಡಿದ್ದಾರೆ. (ತನ್ನ ತಪ್ಪು ಗ್ರಹಿಕೆಯನ್ನು ಸಾಧಿಸುವುದಕ್ಕಿಂತ ಅದನ್ನು ಒಪ್ಪಿಕೊಳ್ಳುವುದು ಪ್ರಾಮಾಣಿಕನಾದ ಸಂಶೋಧಕನ ಕರ್ತವ್ಯ.)

೧. ಕವಿಚರಿತೆ, ಸಂ. II, ೧೯೭೨; ಪುಟ ೧೧೩-೧೧೪.

ಪ್ರಯತ್ನಪಟ್ಟಿದ್ದಾರೆ.[೧] ಅವರು ಅನ್ವಾಯಾರ್ಥ ಮಾಡಿರುವ ಪ್ರಕಾರ, 'ಉದಯಾದಿತ್ಯನ ಪೇಟ್ದಿ' ಎಂಬಲ್ಲಿ ಕರ್ತೃರ್ಥದಲ್ಲಿ ಪ್ರಥಮೆಗೆ ಬದಲು ಷಷ್ಠಿವಿಭಕ್ತಿ ಪ್ರಯೋಗವಾಗಿ, 'ಪೇಟ್ದಿ' ಎಂಬ ಕ್ರಿಯೆಗೆ 'ಉದಯಾದಿತ್ಯ' ಕರ್ತೃಪದ.ಪ್ರಥಮೆಯ ಅರ್ಥದಲ್ಲಿ ಷಷ್ಠಿ ಪ್ರಯೋಗವಾಗುವುದು ವ್ಯಾಕರಣ ಶಾಸ್ತ್ರ ಸಮ್ಮತ. ("ನೃಪಂ ಪೇಟಿ" ಎಂಬುದಕ್ಕೆ "ನೃಪನ ಪೇಟಿ": ಶ.ಮ.ದ ಸೂತ್ರ ೧೪೫). ಆದರೆ, ತಮ್ಮ ಬಳಿ ಇರುವ ಹಸ್ತಪ್ರತಿಗಳ ಪಾಠಾಂತರಗಳಲ್ಲಿ ತಮಗೆ ಅನುಕೂಲವಾದುದೆಂದು ಭಾವಿಸಿ, 'ಆತ್ಮಾಗ್ರಜಂ' ಎಂಬ ಉಚಿತವಾದ ಪಾಠಕ್ಕೆ ಬದಲಾಗಿ ಆತಗ್ರಜಂ ಎಂಬ ಸಂಧಿದೋಷವುಳ್ಳ ಪಾಠವನ್ನು ಸ್ವೀಕರಿಸಿದ್ದಾರೆ. ಉದಯಾದಿತ್ಯ ಎಂಬ ಅಕಾರಾಂತ ಪದಕ್ಕೆ 'ಅ' ಷಷ್ಠಿಪ್ರತ್ಯಯ ಸೇರಿ 'ಉದಯಾದಿತ್ಯನ' ಎಂದು ಆಗಿರುವಂತೆ ಆತ+ಅ=ಆತನ (ನಕಾರಾಗಮ) (ಅಥವಾ, ಆತನ್+ಅ=ಆತನ) ಎಂದಾಗಬೇಕು. ನಮಗೆ ದೊರೆತ ಹಸ್ತಪ್ರತಿಯಲ್ಲಿ 'ಆತ್ಮಾಗ್ರಜಂ' ಎಂಬ ಸ್ವೀಕಾರಾರ್ಹವಾದ ಪಾಠವೇ ಇದೆ. ಕವಿಚರಿತೆಕಾರರು ಉದ್ಧೃತಮಾಡಿರುವ ಪದ್ಯದಲ್ಲಿಯೂ 'ಆತ್ಮಾಗ್ರಜಂ' ಎಂಬ ಸರಿಯಾದ ಪಾಠವನ್ನು ಇಟ್ಟುಕೊಂಡಾಗ ಅದು 'ನಾಗವರ್ಮಂ' ಎಂಬ ನಾಮಪದಕ್ಕೆ ಅನ್ವಯವಾಗುತ್ತದೆ; ಎಂದರೆ 'ನಾಗವರ್ಮನ ಆತ್ಮಾಗ್ರಜ' ಎಂದಾಗುತ್ತದೆ. ಅಲ್ಲದೆ, 'ಉದಯಾದಿತ್ಯನ' ಎಂಬ ಷಷ್ಠ್ಯಂತ ಪದ ಎರಡು ಸಲ ಪ್ರಯೋಗವಾಗಿರುವುದನ್ನು ಗಮನಿಸಬೇಕು. ಉದಯಾದಿತ್ಯನೇ ಗ್ರಂಥಕರ್ತೃವಾಗಿದ್ದರೆ, ಎರಡನೆಯ ಸಲ 'ಉದಯಾದಿತ್ಯನ' ಎಂದು ಖಂಡಿತ ಪ್ರಯೋಗಿಸುತ್ತಿರಲಿಲ್ಲ, 'ಸಮಂತಾತನ' (ಇಲ್ಲವೆ, ಸಮಂತೆನ್ನ) ರಾಯಭಾರಿ ಎಂಬ ಅರ್ಥ ಬರುವಂತೆ ಪ್ರಯೋಗಿಸುತ್ತಿದ್ದ.

ಪದಪ್ರಯೋಗಗಳ ಆಕಾಂಕ್ಷೆಯನ್ನು ಗಮನಿಸೋಣ: ಯಾರು ಯಾರಿಗೆ ಏನನ್ನು ಹೇಳಿದರು? ಪೇಟ್ದಿ ಈ ಜಾನಸಾರಂ' ಎಂಬಲ್ಲಿಯ ಕೃದಂತದ ಕ್ರಿಯೆ ಪೇಟ್; ಹೇಳಿದವರು ಯಾರು ಎಂಬುದಕ್ಕೆ 'ನಾಗವರ್ಮಂ' ಎಂಬ ಉತ್ತರ ಸ್ವಯಂ ಸ್ಪಷ್ಟ.[೨] ಈ ನಾಗವರ್ಮ ಸಂಧಿವಿಗ್ರಿಹಿಲಲಾಮ. 'ಯಾವಾತನ ಸಂಧಿವಿಗ್ರಹಿ'

---

೧. 'ಸಿದ್ಧಗಂಗಾ ಶ್ರೀ (ಸುವರ್ಣ ಸಂಪುಟ, ೧೯೬೧; ಪುಟ–೧೫೦)

೨. ಆರ್.ನರಸಿಂಹಾಚಾರ್ಯರು ಕವಿಚರಿತೆಯಲ್ಲಿ 'ನಾಗವರ್ಮ'ನು ಜ್ಞಾನಸಾರಂ ಎಂಬ ಚಂದ್ರಚೂಡಾಮಣಿ ಶತಕವನ್ನು ಬರೆದವನು ಎಂದು ಸರಿಯಾಗಿಯೆ ಅರ್ಥಯಿಸಿದ್ದರು. ಅವರ ಅನ್ವಯಾರ್ಥ ಸರಿಯಲ್ಲ ಎಂದು ನಾನು 'ಮಹಲಿಂಗರಂಗ'ನನ್ನು ಕುರಿತ ನನ್ನ ಲೇಖನದಲ್ಲಿ (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ.೫, ಪು.೧೩೨ ಮತ್ತು ೧೪೬; ಬೆಂಗಳೂರು ವಿಶ್ವವಿದ್ಯಾಲಯ, ೧೯೮೨) ತಿಳಿಸಿದ್ದೆನು. ಈಗ ಈ ಪದ್ಯವನ್ನು ಅಧ್ಯಯನ ಮಾಡಿದ ಮೇಲೆ ಆಚಾರ್ಯರ ಅಭಿಪ್ರಾಯ ಸರಿ, ನನ್ನದು ತಪ್ಪು, ಎಂದು ತೋರುತ್ತಿದೆ.

'ಸಂಧಿವಿಗ್ರಹಿಲಲಾಮ'; ಈ ಸಂಧಿವಿಗ್ರಹಿ ಸಂಧಿವಗ್ಗಿಯೇ ಆದ ಉದಯಾದಿತ್ಯನ ಸಂಧಿವಿಗ್ರಹಿಯಾಗಿರುವುದು ಹೇಗೆ ಸಾಧ್ಯ? ಆದ್ದರಿಂದ, ಶತಕಪದ್ಯದಲ್ಲಿ ಹೇಳಿರುವ ಉದಯಾದಿತ್ಯ ಷಿಕಾರಿಪುರದ ಶಾಸನಗಳ ಉದಯಾದಿತ್ಯ ಆಗಲಾರನು. ಈತ ಬೇರೆಯ ಇನ್ನೊಬ್ಬ ಉದಯಾದಿತ್ಯನಾಗಿರಬೇಕು, ಎಂದು ನಮಗೆ ತೋರುತ್ತದೆ.

ಈ ಸಂದರ್ಭದಲ್ಲಿ 'ಉದಯಾದಿತ್ಯಾಲಂಕಾರ'ದ ಉದಯಾದಿತ್ಯ ಪ್ರಸ್ತುತನಾಗುತ್ತಾನೆ. ಈ ಉದಯಾದಿತ್ಯ ಯಾರಿರಬಹುದು ಎನ್ನುವುದಕ್ಕೆ ಪ್ರಬಲವಾದ ಆಂತರಿಕ ಪ್ರಮಾಣ ಈ ಕೆಳಗಿನ ಪದ್ಯ:

ಎಸೆದೀ ಕಾವ್ಯಶರೀರಮಂ ಪೊಸಯಿಸಿರ್ದಷ್ಟಾದಶಾಂಗಂಗಳಂ
ರಸರೀತಿಕ್ರಮದಿಂದಮೊಂದಿದ ದಶಪ್ರಾಣಂಗಳೊಂದಂದಮಂ
ವಸುಧಾನಾಥನ ಸೋಮನಾಥನ ಸುತಂ **ಚೋಳೋದಯಾದಿತ್ಯನಿಂ–**
ತುಸಿರ್ದಂ ಪೇಟ್ದಿ ಪನಿನ್ನಲಂಕೃತಿಗಳಂ ಸಾಹಿತ್ಯರತ್ನಾಕರಂ

'ಉದಯಾದಿತ್ಯಾಲಂಕಾರ'ವನ್ನು ಬರೆದವನು ಉದಯಾದಿತ್ಯ, ಚೋಳೋದಯಾದಿತ್ಯ ಎಂದು ಹೇಳಿಕೊಂಡಿರುವುದರಿಂದ ಈತನು ಅವನೋ ಒಬ್ಬ ಸೋಮನಾಥನೆಂಬ ಚೋಳರಾಜನ ಮಗನೆಂದು ತಿಳಿಯುತ್ತದೆ ಎಂದು ಅಭಿಪ್ರಾಯಪಟ್ಟು, ಉದಯಾದಿತ್ಯನ ಕಾಲವನ್ನು ಸು.೧೧೫೦ ಎಂದು ಕವಿಚರಿತಕಾರರು ಊಹಿಸಿದ್ದಾರೆ.[೧]

ಉದಯಾದಿತ್ಯಾಲಂಕಾರವನ್ನು ಮೊತ್ತಮೊದಲಿಗೆ ಎಂ.ಎ. ರಾಮಾನುಜಯ್ಯಂಗಾರರೂ ಎಸ್.ಜಿ.ನರಸಿಂಹಚಾರ್ಯರೂ ಕೂಡಿ ಸಂಪಾದನೆ ಮಾಡಿ ೧೮೯೪ರಲ್ಲಿ ಕರ್ಣಾಟಕ ಕಾವ್ಯಮಂಜರಿ ಗ್ರಂಥಮಾಲೆಯಲ್ಲಿ ಪ್ರಕಟಿಸಿದ್ದರು. ಇದನ್ನು ನಾನು ಬೇರೊಂದು ಹಸ್ತಪ್ರತಿಯ ಸಹಾಯದಿಂದ ಪುನಃ ಪರಿಷ್ಕರಣ ಮಾಡಿದೆನು. (ಈ ಪರಿಷ್ಕೃತ ಮುದ್ರಣ ಮೈಸೂರಿನ ಡಿ.ವಿ.ಕೆ.ಮೂರ್ತಿ ಅವರಿಂದ ೧೯೭೦ರಲ್ಲಿ ಪ್ರಕಟವಾಗಿದೆ.) ಈ ದ್ವಿತೀಯ ಮುದ್ರಣದಲ್ಲಿ ಕವಿಕಾವ್ಯವಿಚಾರವನ್ನು ವಿಸ್ತಾರವಾಗಿ ವಿಮರ್ಶೆ ಮಾಡಿ, ನನ್ನ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿರುವೆನು: "ಉದಯಾದಿತ್ಯಾಲಂಕಾರಗ್ರಂಥದ ಪ್ರಥಮ ಮುದ್ರಣದ ಸಂಪಾದಕರೂ ಕವಿಚರಿತ್ರಕಾರರೂ ತಿಳಿಸಿರುವಂತೆ ಉದಯಾದಿತ್ಯಾಲಂಕಾರದ ಕರ್ತೃ ಉದಯಾದಿತ್ಯನಲ್ಲ, ಅವನ ಆಶ್ರಿತ ಕವಿ, – ಎಂಬುದು ನಮ್ಮ ಖಚಿತ ಅಭಿಪ್ರಾಯ."

---

೧. ಕವಿಚರಿತೆ, ಸಂ. I, ೧೯೭೨; ಪುಟ ೧೭೬

ನಾಗವರ್ಮರಂತೆಯೇ ಉದಯಾದಿತ್ಯರೂ ಅನೇಕ ಮಂದಿ ಇದ್ದಾರೆ. ಕವಿಚರಿತಕಾರರೇ ನಂ.೫೧ನೆಯದು ಮುಂತಾದ ಕೆಲವು ಬೇರೆಯ ಷಿಕಾರಿಪುರ ಶಾಸನಗಳಲ್ಲಿ ಉಕ್ತನಾಗಿರುವ ಬ್ರಹ್ಮಕ್ಷತ್ರವಂಶದ ಉದಯಾದಿತ್ಯನು ಬೇರೆ ಎಂದು ತಿಳಿಸಿದ್ದಾರೆ.[೨]

ಪ್ರೊ॥ ಮಹಾದೇವಪ್ಪನವರು – ಚಂದ್ರಚೂಡಾಮಣಿ ಶತಕದ ಕವಿ ಉದಯಾದಿತ್ಯ, ಅವನ ಈ ಕೃತಿಯಲ್ಲಿ "ಲಿಂಗಾಂಗಸಂಗಾದ್ವೈತ ಭಾವನೆಯೂ ಜೀವಶಿವೈಕ್ಯತಾ ದೃಷ್ಟಿಯೂ, ಪ್ರಸಾದಲಿಂಗಪ್ರಸಾದಿತ್ವವೂ, ಇಷ್ಟಲಿಂಗಧಾರಣೆಯಲ್ಲಿನ ನಿಷ್ಠೆಯೂ ಸುವ್ಯಕ್ತವಾಗಿರುವುದನ್ನಿಲ್ಲಿ ಕಾಣುತ್ತೇವೆ. ಸತ್–ಆನಂದ–ದಯಾಪಯೋರಾಶಿಯಲ್ಲಿ ಓಲಾಡುವ ಬಯಕೆಯಲ್ಲಿ ಜೈನಾಗಮಾದ್ವೈತ ದಯಾಮೂಲಧರ್ಮವೂ ಶಕ್ತಿವಿಶಿಷ್ಟಾದ್ವೈತದ ಜೀವಶಿವೈಕ್ಯತಾಲಿಂಗಾಂಗ ಸಾಮರಸ್ಯವೂ ಅಭಿವ್ಯಕ್ತವಾಗಿದೆ" ಎಂದು ಹೇಳಿ, ಕೃತಿಕಾರನ ಹೆಸರು ಮತ್ತು ಮತಧರ್ಮದ ಬಗೆಗೆ ತಮ್ಮ ಲೇಖನದಲ್ಲಿ ಸವಿಸ್ತಾರವಾಗಿ ಹೇಳಿದ್ದಾರೆ. ಮತ್ತು ಈ ಕೃತಿ ಶಾಂಕರ ಅದ್ವೈತವನ್ನು ಸ್ಪಷ್ಟವಾಗಿ ನಿರಾಕರಣೆ ಮಾಡುತ್ತದೆ ಎಂದೂ ಅಭಿಪ್ರಾಯ ಪಡುತ್ತಾರೆ. ಕೃತಿಕಾರ ಉದಯಾದಿತ್ಯ ಎಂದು ನಂಬಿರುವ ಅವರು ಪೂರ್ವೋಕ್ತ ಷಿಕಾರಿಪುರ ಶಾಸನದ ಉದಯಾದಿತ್ಯ (ಕ್ರಿ.ಶ.೧೦೭೨) ಅಲ್ಲ ಎಂದೂ ತಿಳಿದಿರುವಂತಿದೆ. ಆದರೆ ಈತ ಯಾವ ಉದಯಾದಿತ್ಯ ಎಂದು ಖಚಿತವಾಗಿ ತಿಳಿಸಿರುವಂತೆ ಕಂಡುಬರುವುದಿಲ್ಲ. ಚಂದ್ರಚೂಡಾಮಣಿ ಶತಕದಲ್ಲಿ ಅಲ್ಲಮಪ್ರಭು, ಬಸವಣ್ಣ, ಹರಿಹರ, ತುರುಗಾಹಿ ರಾಮಣ್ಣ (ಸುಮಾರು ಕ್ರಿ.ಶ.೧೧೬೭) ಮುಂತಾದ ಪ್ರಮುಖ ವೀರಶೈವ ಲೇಖಕರ ಪ್ರಭಾವವನ್ನು ಉದಾಹರಣ ಸಹಿತ ಚಂದ್ರಚೂಡಾಮಣಿ ಶತಕದ ಹಲಕೆಲವು ಪದ್ಯಗಳಲ್ಲಿ ಗುರುತಿಸಲು ಪ್ರಯತ್ನಪಟ್ಟಿರುವುದರಿಂದ, ಅವರ ಅಭಿಪ್ರಾಯದಲ್ಲಿ, ಕೃತಿಯ ಕಾಲ ಸ್ಥೂಲವಾಗಿ ೧೨ನೆಯ ಶತಮಾನ ಎಂದಾಗುತ್ತದೆ.

ಆರ್. ನರಸಿಂಹಾಚಾರ್ಯರು ಶತಕದ ಕರ್ತೃ ನಾಗವರ್ಮನನ್ನು ಷಿಕಾರಿಪುರ ಶಾಸನದಲ್ಲಿ ಹೇಳಿರುವ ಭುವನೈಕಮಲ್ಲನಲ್ಲಿ ಹಿರಿಯ ಸಂಧಿವಿಗ್ರಹಿ ಆಗಿದ್ದ ಉದಯಾದಿತ್ಯನ ಕಾಲದಲ್ಲಿದ್ದ ಅದ್ವೈತಮುನಿ ಗುಣಗಳ್ಳ ನಾಗವರ್ಮಾಚಾರ್ಯನೊಂದಿಗೆ ಸಮೀಕರಿಸಿರುತ್ತಾರಷ್ಟೆ. ಅವರ ಈ ಊಹೆಯಲ್ಲಿ ಒಂದು ತೊಡಕಿದೆ. ಶತಕದ ಕರ್ತೃ ನಾಗವರ್ಮನು ಉದಯಾದಿತ್ಯನ

---

೨. ಅದೇ

**ಅಬ್ಜದಳನೇತ್ರೇ, ಅಂಬುಜವದನೇ** ಮುಂತಾಗಿ ಕವಿ ಪತ್ನಿಯನ್ನು ಸಂಬೋಧಿಸಿ ಹೇಳಿರುವುದು ಛಂಧೋಂಬುಧಿಯಲ್ಲಿ ಸರ್ವಸಾಮಾನ್ಯವಾಗಿ ಕಂಡುಬರುತ್ತದೆ. ಉದಯಾದಿತ್ಯಾಲಂಕಾರದ ಕೆಲವು ಪದ್ಯಗಳಲ್ಲಿ ಉದಯಾದಿತ್ಯಾ, ರಾಜಸುಕವಿರತ್ನಾಭರಣಾ, ಉದೆಗ, ಉದೆಗನೃಪ ಇತ್ಯಾದಿಯಾಗಿ ಉದಯಾದಿತ್ಯರಾಜನನ್ನು ಕುರಿತು ಅಲಂಕಾರ ವಿಚಾರವನ್ನು ವ್ಯಾವರ್ಣನೆ ಮಾಡಿದಂತೆ ಸಂಬೋಧನೋಕ್ತಿಯಿದ್ದರೂ ಎರಡು ಪದ್ಯಗಳಲ್ಲಿ (ಪ.೪೭, ೪೮) **ಕೆಳದಿ, ಅಬ್ಜಲೋಚನೇ** ಎಂದು ತನ್ನ ಪ್ರಿಯೆಯನ್ನು ಕುರಿತು ಹೇಳಿದಂತೆಯೂ ಸಂಬೋಧನೆ ನುಸುಳಿದೆ. ಇದರಿಂದ, ಛಂದೋಂಬುಧಿಯನ್ನು ಬರೆದ ಕವಿಯೆ ಉದಯಾದಿತ್ಯಾಲಂಕಾರವನ್ನೂ ಬರೆದಿರಬಾರದೇಕೆ ಎಂಬ ಸಂದೇಹದ ಪ್ರಶ್ನೆ ಸಹಜವಾಗಿಯೇ ತಲೆದೋರುತ್ತದೆ. ಹೀಗೆ, ಛಂದೋಂಬುಧಿ, ಉದಯಾದಿತ್ಯಾಲಂಕಾರ, ಒಂದು ಶತಕ – ಈ ಮೂರನ್ನೂ ಒಬ್ಬ ನಾಗವರ್ಮ ಬರೆದಿರಬಹುದಲ್ಲವೆ ಎಂಬ ಸಂಭಾವ್ಯವಾದ ಪ್ರಮೇಯ ವಿಚಾರಾರ್ಹವಾಗಿದೆ. ಇದು ನಿರ್ವಿವಾದವಾದ ನಿರ್ಣಯವಲ್ಲ ಎಂದು ಒತ್ತಿ ಹೇಳಬಯಸುತ್ತೇನೆ.

ಮತಧರ್ಮದ ದೃಷ್ಟಿಯಿಂದಲೂ ಈ ಪ್ರಮೇಯಕ್ಕೆ ಸಮರ್ಥನೆ ದೊರೆಯುತ್ತದೆ. ಶತಕದ ಕರ್ತೃ ನಾಮವರ್ಮ ಎಂಬುದು ನಮ್ಮ ನಿಶ್ಚಿತವಷ್ಟೆ. ನಾಗವರ್ಮ ಎಂಬ ಹೆಸರಿನವನು ಬ್ರಾಹ್ಮಣನಾಗಿರಬೇಕು, ಇಲ್ಲವೆ ಜೈನನಾಗಿರಬೇಕು. ಭಾಸ್ಕರ ಎಂಬ ಹೆಸರೂ ಸಾಧಾರಣವಾಗಿ ವಿಪ್ರ ಇಲ್ಲವೆ ಜೈನಸಂಬಂಧಿ. ಶತಕದ ಕವಿ ನಾಗವರ್ಮ ಎಂಬುದನ್ನು ಒಪ್ಪಿಕೊಂಡರೆ ವೀರಶೈವ ಕರ್ತೃತ್ವದ ವಾದಕ್ಕೆ ಎಲ್ಲಿ ಧಕ್ಕೆ ಬರುತ್ತದೆಯೋ ಎಂಬ ಆಶಂಕೆಯಿಂದ ನನ್ನ ಮಿತ್ರರು ಉದಯಾದಿತ್ಯನೇ ಗ್ರಂಥಕರ್ತ ಎಂಬ ವಾದವನ್ನು ಹೂಡಿ, ಪದ್ಯಗಳಲ್ಲಿ ಸಹಜವಾಗಿ ದೊರೆಯದ ಲಿಂಗ, ಅಲ್ಲಮ, ಇತ್ಯಾದಿ ವೀರಶೈವ ಪರ ಪದಗಳನ್ನು ಹೆಕ್ಕಿ ತೆಗೆಯಲು ಬಲು ಪ್ರಯಾಸಪಟ್ಟಿದ್ದಾರೆ. ಶತಕಕಾರನ ಶೈಲಿ ಪ್ರಹೇಳಿಕಾಮಾರ್ಗದ್ದು, ಅನೇಕ ಕಡೆ ಶ್ಲಿಷ್ಟಾರ್ಥವುಳ್ಳದ್ದು, ಗೂಢಾರ್ಥವುಳ್ಳದ್ದು ಎಂಬ ಆಶ್ಚರ್ಯಕರವಾದ ಶೋಧಗಳನ್ನು ಮಾಡಿದ್ದಾರೆ. ಆದರೆ ಸೂರ್ಯಪರ್ಯಾಯವಾದ ಉದಯಾದಿತ್ಯ ಹೆಸರಿನವನು ವೀರಶೈವನಾಗಿರಲು ಸಾಧ್ಯವಿಲ್ಲ; ಈಶ್ವರಭಕ್ತನೇನೋ ಹೌದು. ನಾಗವರ್ಮನೂ ಶೈವ, ಅದ್ವೈತಿ ಎಂಬ ಬಗೆಗೆ ನಮಗಂತೂ ಸಂದೇಹವಿಲ್ಲ.

ಚಂದ್ರಚೂಡಾಮಣಿ ಶತಕ ತೀವ್ರವಾದ ವೈರಾಗ್ಯವನ್ನು ಪ್ರತಿಪಾದಿಸುತ್ತದೆ. ಜೈನಧರ್ಮ, ಬೌದ್ಧಧರ್ಮ ಮತ್ತು ಅದ್ವೈತಕ್ಕೆ ಮಾತ್ರ ತೀವ್ರ ವೈರಾಗ್ಯದ ನಿಲುವು ಗ್ರಾಹ್ಯ. ಶತಕಕಾರ ಎಲ್ಲ ದುಃಖಕ್ಕೂ ಆಶೆಯೇ, ತೃಷ್ಣೆಯೇ ಮೂಲ ಎಂಬ

ಕಾದಂಬರಿಯ ನಾಗವರ್ಮನೇ ಬೇರೆ, ಛಂದೋಂಬುಧಿಯನ್ನು ಬರೆದವನೇ ಬೇರೆ ಎಂಬ ಕವಿಚರಿತಕಾರರ ಊಹೆಗೆ ಉಪಷ್ಟಂಭಕವಾದ ಪ್ರಮಾಣಗಳನ್ನು ಅವರೇ ಹೇಳಿರುವುದರಿಂದ ಛಂದೋಂಬುಧಿಯ ಕರ್ತೃ ನಾಗವರ್ಮ ೧೦ನೇ ಶತಮಾನದವನಾಗಬೇಕಿಲ್ಲ. ಅವನ ಕಾಲವನ್ನು ಇನ್ನೂ ಈಚೆಗೆ ತಳ್ಳಬಹುದು. ಇದರಿಂದ, ಉದಯಾದಿತ್ಯನ ಆಶ್ರಿತ ಕವಿಯೆ ಛಂದೋಂಬುಧಿಯನ್ನು ಬರೆದಿರಬಹುದು ಎಂಬ ನನ್ನ ಊಹೆಗೆ ಅವಕಾಶವಾಯಿತು. ಕಾಕತೀಯ ರುದ್ರದೇವನ ಹನುಮಕೊಂಡ ಶಾಸನ (ಕ್ರಿ.ಶ.೧೧೬೨–೬೩) ದಲ್ಲಿ ಉಕ್ತನಾದ ಉದಯ, ಆಂಧ್ರ ಪ್ರದೇಶದ ಮಾಮಿಳ್ಳಪಲ್ಲಿ ಶಾಸನ (ಕ್ರಿ.ಶ.೧೧೭೮) ಮತ್ತು ಪಾನುಗಲ್ ಶಾಸನ (ಕ್ರಿ.ಶ.೧೧೨೪)ಗಳಲ್ಲಿ ಉಕ್ತನಾದ ಉದಯಾದಿತ್ಯ, ಇವರುಗಳು ತೆಲುಗು ಜೋಡವಂಶದ ದೊರೆಗಳಾಗಿದ್ದು, ಇವರುಗಳ ಉಲ್ಲೇಖ ಒಬ್ಬನೇ ಚೋಳೋದಯಾದಿತ್ಯನನ್ನು ಕುರಿತದ್ದು ಎಂಬ ತೀರ್ಮಾನಕ್ಕೆ ಬಂದಿರುವುದಾಗಿದೆ. 'ಉದಯಾದಿತ್ಯಾಲಂಕಾರ'ದಲ್ಲಿ ಆತನನ್ನು ಉದಯ, ಉದೆಗ ಎಂಬ ಸಂಕ್ಷಿಪ್ತ ನಾಮಗಳಿಂದ ಸಂಬೋಧನೆ ಮಾಡಿರುವುದು ಈ ತೀರ್ಮಾನಕ್ಕೆ ಅವಕಾಶ ಕೊಡುತ್ತದೆ. ಈ ಉದಯಾದಿತ್ಯನ ಕಾಲವೇ ಅವನ ಆಶ್ರಿತಕವಿಯ ಕಾಲವಾಗುತ್ತದೆ, ಎಂದರೆ ಸು.ಕ್ರಿಶ.೧೧೦೦–೧೧೬೦. ಈ ಉದಯಾದಿತ್ಯನೇ 'ಚಂದ್ರಚೂಡಾಮಣಿಶತಕ' ಪದ್ಯದಲ್ಲಿ ಹೇಳಿರುವ ಉದಯಾದಿತ್ಯ ಎಂಬುದು ಸದ್ಯದಮಟ್ಟಿಗೆ ನಮ್ಮ ತೀರ್ಮಾನ.[೧]

ಈ ಶತಕದ ಮೇಲೆ ಹರಿಹರಾದಿಗಳ ಪ್ರಭಾವ ಇದೆಯೆಂದು ಮಹಾದೇವಪ್ಪನವರು ಅಭಿಪ್ರಾಯಪಟ್ಟಿರುವುದನ್ನು ಈ ಮೊದಲು ಪ್ರಸ್ತಾವಿಸಿದೆಯಷ್ಟೆ. ಶತಕದ ನಾಗವರ್ಮ ಅವರಿಗಿಂತ ಹಿಂದಿನವನಾದ್ದರಿಂದ ಅವನ ಪ್ರಭಾವ ಇವರ ಮೇಲೆ ಆಗಿರಬಾರದೇಕೆ? ಹೇಗೂ ಈ ಶತಕ ಕನ್ನಡದ ಮೊದಲ ಶತಕ ಎಂಬ ಅಭಿಪ್ರಾಯ ನಿಲ್ಲತಕ್ಕದ್ದು.

'ಉದಯಾದಿತ್ಯಾಲಂಕಾರ'ದ ಮತ್ತು ಚಂದ್ರಚೂಡಾಮಣಿ ಶತಕದಲ್ಲಿ ಉಕ್ತನಾದ ಉದಯಾದಿತ್ಯ ಒಬ್ಬನೇ ಆಗಿರುವ ಸಂದರ್ಭದಲ್ಲಿ, ಶತಕದ ಕವಿ ಒಬ್ಬ ನಾಗವರ್ಮನೆಂಬುದು ನಮ್ಮ ನಿಲುವಾಗಿರುವುದರಿಂದ, ಉದಯಾದಿತ್ಯಾಲಂಕಾರದ ಕರ್ತೃವೂ ಒಬ್ಬ ನಾಗವರ್ಮನೇ ಎಂಬ ಊಹೆ ಸಂಭಾವ್ಯ ಎನಿಸುತ್ತದೆ. **ಕೆಳದೀ,**

---

೧. ಹೆಚ್ಚಿನ ವಿವರಗಳಲ್ಲಿ ಆಸಕ್ತಿಯುಳ್ಳವರು 'ಉದಯಾದಿತ್ಯಾಲಂಕಾರ'ದ ಪೀಠಿಕೆಯನ್ನು ನೋಡಬಹುದು.

ಪ್ರಸ್ತಾವವಿದೆಯೇ ಹೊರತು ವೀರಶೈವ ಸಿದ್ಧಾಂತದ ಷಟ್ಸ್ಥಲದ ಸುಳಿವೂ ತೋರದು) ಪದ್ಯ ೭೯ರಲ್ಲಿ 'ಸರ್ವಂ ಖಲ್ವಿದಂ ಬ್ರಹ್ಮ' ವಾಕ್ಯದ ವಿವರಣೆ ಬಂದಿದೆ. "ತ್ರೈಮೂರ್ತಿಯೆಂದರ್ಚನೋತ್ಸವವಮಂ" ಪ್ರಶಂಸೆ ಮಾಡುವ ಕವಿ ಯಾವ ಮತಸಿದ್ಧಾಂತಕ್ಕೆ (ಪ.೮೧) ನಿಷ್ಠೆಯುಳ್ಳವನು ಎಂಬುದು ಸ್ವಯಂ ಸ್ಪಷ್ಟ. ಶ್ರುತಿವಾಕ್ಯವಲ್ಲ, ಅನುಭವವೇ ಪ್ರಮಾಣ ಎಂಬ ಶ್ರೀ ಶಂಕರರ ಉಪನಿಷದ್ಭಾಷ್ಯದ ದೃಷ್ಟಾಂತ ವಾಕ್ಯದ ಪ್ರಸ್ತಾವವೂ ಗಮನಾರ್ಹ[೧] (ಪ.೮೮). ಶಿವನ ಅಷ್ಟಮೂರ್ತಿಪ್ರಶಂಸೆಯ ಸಂದರ್ಭದಲ್ಲಿ 'ಹವಿಸ್ಸು, ಯಜ್ಞ, ಯಜಮಾನ ಮುಂತಾದವೆಲ್ಲ ಪರಮಾತ್ಮ' ಎಂಬ ವೇದವಾಕ್ಯ ಪ್ರಮಾಣ (ಪದ್ಯ ೯೩), ಮಿಗಿಲಾಗಿ "ನಿಮ್ಮನರಿದು ನಾನು ನೀನಾದೆ ಎಂಬ ಬುದ್ಧಿಯನ್ನು ಕೊಡು" ಎಂಬಲ್ಲಿ ಜೀವ–ಬ್ರಹ್ಮೈಕ್ಯದೃಷ್ಟಿ – ಈ ಎಲ್ಲ ವಿಚಾರವೂ ಕೃತಿಯ ಅದ್ವೈತಪ್ರವಣತೆಯನ್ನು ನಿಚ್ಚಳವಾಗಿ ಎತ್ತಿಹಿಡಿಯುತ್ತದೆ.

ಕೃತಿಯ ತತ್ತ್ವವಿಚಾರ ಯಾವ ನೆಲೆಯಲ್ಲಿ ನಿಂತಿದೆ ಎಂಬ ಮೇಲಿನ ವಿಚಾರ ವಿಮರ್ಶೆಯಲ್ಲಿ ಒಂದಕ್ಕಿಂತ ಇನ್ನೊಂದು ಮೇಲು ಅಥವಾ ಕೀಳು ಎಂದು ವಾದಿಸುವ ದೃಷ್ಟಿ ಖಂಡಿತ ಇಲ್ಲ ಎಂದು ಸ್ಪಷ್ಟಪಡಿಸಬಯಸುತ್ತೇನೆ. ಕೃತಿಕಾರನ ತಾತ್ತ್ವಿಕ ನಿಲುವನ್ನು ಸತ್ಯಾನ್ವೇಷಕ ಬುದ್ಧಿಯಿಂದ ಗುರುತಿಸುವ ಪ್ರಾಮಾಣಿಕ ಪ್ರಯತ್ನ ಸಂಪಾದಕನದು. ಗ್ರಂಥಸಂಪಾದನ ಶಾಸ್ತ್ರದ ಪ್ರಕ್ರಿಯೆಗೆ ಅನುಗುಣವಾಗಿ ಪಾಠದ ಸ್ಖಾಲಿತ್ಯಗಳನ್ನು ತಿದ್ದುವ ಪ್ರಯತ್ನ ಮಾಡಿದೆಯೇ ಹೊರತು, ಮತೀಯ ಪಕ್ಷಪಾತದಿಂದ ಪಾಠಪರಿಷ್ಕರಣ ಮಾಡುವ ಹವ್ಯಾಸಕ್ಕೆ ಹೋಗಿಲ್ಲ.

ಈ ಕೃತಿಯ ಪಾಠವನ್ನು ನನಗೆ ದೊರೆತ ಏಕೈಕ ಹಸ್ತಪ್ರತಿಯ ಆಧಾರದಿಂದ ಸಿದ್ಧಪಡಿಸಿದ್ದಾಗಿದೆ. ಈ ಹಸ್ತಪ್ರತಿ KB ೭೩೪ನೆಯ ಕ್ರಮಸಂಖ್ಯೆಯ ಹಸ್ತಪ್ರತಿ; ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರಕ್ಕೆ ಸೇರಿದ್ದು.[೧] ಈ ಹಸ್ತಪ್ರತಿಯ ಒಂದು ಯಥಾಪ್ರತಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಸಂಗ್ರಹದಲ್ಲಿ ಇದೆ ಎಂದು ಸಂಶೋಧನ ವಿಭಾಗದ ಮುಖ್ಯಸ್ಥರಾದ ಶ್ರೀ ಎಸ್.ಶಿವಣ್ಣನವರು ನನಗೆ ತಿಳಿಸಿ, ಅದನ್ನು

---

*೧. ಮೂಲ ಹಸ್ತಪ್ರತಿಯನ್ನು ೧೨-೬-೧೯೭೭ ರಂದು ಪ್ರತಿ ಮಾಡಿ ಮುಗಿಸಿದವರು ಮಾನಸ ಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯ ಸಂಶೋಧನ ಸಹಾಯಕರಾದ ಶ್ರೀ ಕೆ.ಆರ್.ಶೇಷಗಿರಿ ಅವರು, ಹೋಲಿಸಿ ನೋಡಿದವರು ಅವರು ಮತ್ತು ಸಂಪಾದನ ವಿಭಾಗದ ಉಪ ನಿರ್ದೇಶಕರಾದ ಶ್ರೀ ಎನ್. ಬಸವಾರಾಧ್ಯ ಅವರು.

ಬೌದ್ಧ ತತ್ತ್ವವನ್ನು ಬೆಂಬಲಿಸುತ್ತಾನೆ. ಸಕಲ ಪ್ರಾಣಿಗಳನ್ನೂ ದಯೆಯಿಂದ ಕಾಣಬೇಕು ಎಂಬ ಬೌದ್ಧ, ಜೈನ ದೃಷ್ಟಿ ಶತಕಕಾರನಿಗೆ ಸಮ್ಮತ; 'ಶಂ ದ್ವಿಪದೇ ಶಂ ಚತುಷ್ಪದೇ' ಎಂಬುದು ಉಪನಿಷತ್ತುಗಳ ನಿಲವು ಕೂಡ ಈ ದೃಷ್ಟಿಯುಳ್ಳವನಾದ್ದರಿಂದಲೇ ಒಂದು ಪದ್ಯದಲ್ಲಿ (ಪ.೯೩), "ಜೈನ ಬೌದ್ಧರನೇಳಿಪ್ಪರು ನಿಮ್ಮನೇಳಿಸಿದವರ್" ಎಂದು ಕವಿ ಉದ್ಗಾರ ತೆಗೆದಿರುವುದು, ಶಂಕರಾಚಾರ್ಯರು ಪ್ರಚ್ಛನ್ನ ಬೌದ್ಧ ಎಂಬ ಪ್ರತೀತಿಗೆ ಒಳಗಾದದ್ದು ಏಕೆ? ಬೌದ್ಧರ ಶೂನ್ಯಕ್ಕೂ ಅದ್ವೈತದ ಮಾಯಾವಾದಕ್ಕೂ ಸಾಮ್ಯವಿರುವುದರಿಂದಲ್ಲವೆ? ಜೈನ ಧರ್ಮ ಆತ್ಮವನ್ನು ಒಪ್ಪಿಕೊಂಡದ್ದರಿಂದ ಭರತಖಂಡದಲ್ಲಿ ಉಳಿಯಿತು. ಪಂಪನ ಪೂರ್ವಜ ಜೈನಧರ್ಮವನ್ನು ಅಂಗೀಕರಿಸಿದ್ದು, ವಿಪ್ರನಿಗೆ ಅದು ಮೆಚ್ಚಾದ ಧರ್ಮ ಎಂಬ ಕಾರಣದಿಂದ. ವೈದಿಕರು ಬುದ್ಧನಿಗೆ ಒಂಬತ್ತನೆಯ ಅವತಾರದ ಸ್ಥಾನವನ್ನು ನೀಡಿದ್ದಾರೆ. ಕರ್ನಾಟಕದ ಪ್ರಾಚೀನ ಇತಿಹಾಸದಲ್ಲಿ ಜೈನರಿಗೂ ವೀರಶೈವರಿಗೂ ಇದ್ದ ವಿರಸ, ಒರಸೊರಸು, ತಿಕ್ಕಾಟ, ಘರ್ಷಣೆ, ಸುಪ್ರಸಿದ್ಧ. ಶತಕಕಾರ ನಾಗವರ್ಮನೇ ಇರಲಿ, ಉದಯಾದಿತ್ಯನೇ ಇರಲಿ, ಆತ ಜೈನ ಬೌದ್ಧ ಮತಗಳ ಪಕ್ಷಪಾತಿ ಎಂಬುದು ಸ್ಪಷ್ಟ.

ಕೃತಿಪ್ರಾರಂಭದಲ್ಲಿ ಶ್ರೀಲಕ್ಷ್ಮಿಯನ್ನು, ಮೋಕ್ಷಲಕ್ಷ್ಮಿಯನ್ನು ಬಯಸುವ ಪ್ರಾರ್ಥನಾ ಪದ್ಯ ವಿಷಯಪ್ರತಿಪಾದನೆಗೆ ಶ್ರೀಕಾರ ಹಾಕಿದೆ ಎನ್ನಬಹುದು. ಜೀವ–ಜಗತ್ತು–ಈಶ್ವರ ಇವುಗಳ ಓತಪ್ರೋತವಾದ ಸಂಬಂಧದ ಪರಾಮರ್ಶೆ ಕೃತಿಯ ಉದ್ದಕ್ಕೂ ಸಾರವತ್ತಾಗಿ ಸಾಗಿದೆ. ಪ್ರಾರಂಭದ ಕೆಲವು ಪದ್ಯಗಳಲ್ಲಿ ತೀವ್ರ ವೈರಾಗ್ಯಪ್ರಾಪ್ತಿಗಾಗಿ ಹಂಬಲಿಕೆ, ಈಶ್ವರ ಕೃಪೆಗೆ ಬೇಡಿಕೆ, ಪ್ರಸ್ಫುಟವಾಗಿ ಪ್ರಕಾಶಗೊಂಡಿವೆ. ೩೮ನೇ ಪದ್ಯದಲ್ಲಿ ಶಾಂಕರ ಅದ್ವೈತದ ಜಗನ್ಮಿಥ್ಯಾ ದೃಷ್ಟಿ ಸ್ಪಷ್ಟಗೋಚರವಾಗಿದೆ. ಇದರ ಮುಂದಿನ ಪದ್ಯದಲ್ಲಿಯೇ 'ಎನ್ನಂ ಮೋಹಿಸುತ್ತಿರ್ಪ ಮಾಯೆ'ಯ ಪ್ರಸ್ತಾವವಿದೆ. ಪದ್ಯ ೬೬ರಲ್ಲಿ ಕರ್ಮಕಾಂಡ ಜ್ಞಾನಕಾಂಡಗಳ ಪ್ರಸ್ತಾವ ವೈದಿಕ ಅದ್ವೈತ ಪ್ರಕ್ರಿಯೆಗೇ ಸಂಬಂಧಪಟ್ಟದ್ದಾಗಿದೆ. ಪದ್ಯ ೭೨ರಲ್ಲಿ ಸಗುಣಾರಾಧನೆಯ ವಿಚಾರವಿದೆ. ಇದರ ಮುಂದಿನ ಪದ್ಯಗಳಲ್ಲಿ ಯೋಗಸಾಧನೆಯಿಂದ ನಿರ್ಗುಣಬ್ರಹ್ಮಾನಂದಾನುಭವದ ಚಿತ್ರಣವಿದೆ. (ಅಷ್ಟಾಂಗಯೋಗದಲ್ಲಿ ಪ್ರೋಕ್ತವಾದ ಓಂಕಾರ, ಷಟ್ಚಕ್ರಗಳ ಪರೋಕ್ಷ

---

*೧. ಶ್ರೀ ಶಾಂಕರಭಾಷ್ಯದ ಮೂಲವಾಕ್ಯವನ್ನು ಬರೆದು ಕಳಿಸಿಕೊಟ್ಟು ಉಪಕರಿಸಿದವರು ವಿದ್ವಾನ್ ಶ್ರೀ ಎನ್.ರಂಗನಾಥ ಶರ್ಮ ಅವರು. "ನ ಚ ಪ್ರಮಾಣಾಂತರ ವಿರುದ್ಧಾರ್ಥ ವಿಷಯೇ ಶ್ರುತೇಃ ಪ್ರಾಮಾಣ್ಯಂ ಕಲ್ಪ್ಯತೇ, ಯಥಾ ಶೀತೋಽಗ್ನಿಃ ಕ್ಲೇಯತೀತಿ"..

ಪಾಠ–ಪರಿಷ್ಕರಣವನ್ನೂ ಪೀಠಿಕೆಯ ಬರಹವನ್ನೂ ಅಚ್ಚಿನ ಕರಡು ತಿದ್ದಾಣಿಕೆಯನ್ನೂ ತರಾತುರಿಯಲ್ಲಿ ಮಾಡಿದ್ದಾಗಿದೆ. ಒಂದಕ್ಕಿಂತ ಹೆಚ್ಚು ಸಲ ಅಚ್ಚಿನ ಕರಡನ್ನು ಪರಿಶೀಲಿಸುವುದಕ್ಕಾಗಿಯಾಗಲಿ ಈಗಿರುವುದಕ್ಕಿಂತ ಹೆಚ್ಚು ವಿಮರ್ಶಾತ್ಮಕವಾಗಿ, ವಿಸ್ತಾರವಾಗಿ, ಪೀಠಿಕೆ ಬರೆಯುವುದಕ್ಕಾಗಲಿ ವ್ಯವಧಾನವಾಗಲಿಲ್ಲ. ಅನವಧಾನದಿಂದ ಮುದ್ರಣದೋಷಗಳೂ ಇತರ ದೋಷಗಳೂ ಇದ್ದಾವು. ಪ್ರಾಜ್ಞರು ಅವನ್ನು ತೋರಿಸಿಕೊಟ್ಟಲ್ಲಿ ಮುಂದಿನ ಮುದ್ರಣದಲ್ಲಿ ಸರಿಪಡಿಸಿಕೊಳ್ಳಲಾಗುವುದು.

ಬಹಳ ಅತ್ಯಲ್ಪಕಾಲದಲ್ಲಿ ಶ್ರೀ ಲಕ್ಷ್ಮಿ ಪ್ರಿಂಟರ್ಸ್ ಅವರು ಈ ಪುಸ್ತಕವನ್ನು ಮುತವರ್ಜಿ ವಹಿಸಿ ಅಚ್ಚುಕಟ್ಟಾಗಿ ಮುದ್ರಣ ಮಾಡಿಕೊಟ್ಟಿದ್ದಾರೆ. ಇವರಿಗೆ ಪ್ರತಿಷ್ಠಾನದ ಪರವಾಗಿ ನನ್ನ ಕೃತಜ್ಞತೆಯ ವಂದನೆಗಳು.

೨೫–೧–೧೯೮೯ **ಎಂ.ವಿ. ಸೀತಾರಾಮಯ್ಯ**

ಬೆಂಗಳೂರು–೧೯

ದೊರಕಿಸಿಕೊಟ್ಟರು. ಚಂದ್ರಚೂಡಾಮಣಿ ಶತಕವನ್ನು ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ಪ್ರಕಟಿಸಲು ಅನುಮತಿಯನ್ನು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರಾದ ಪ್ರೊ॥ ಹ.ಕ.ಜಯದೇವ ಅವರೂ ಮೈಸೂರು ಮಾನಸ ಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ॥ ಜಿ.ಶಂ.ಪರಮಶಿವಯ್ಯನವರೂ ನೀಡಿ ಉಪಕರಿಸಿರುತ್ತಾರೆ. ಈ ಮೂವರು ಮಹನೀಯರಿಗೂ ನಾವು ಕೃತಜ್ಞರಾಗಿದ್ದೇವೆ.

ಚಂದ್ರಚೂಡಾಮಣಿ ಶತಕವನ್ನು ಸಂಪಾದಿಸಿ ಪ್ರಕಟಿಸಬೇಕೆಂದಿದ್ದ ನನ್ನ ಬಹು ವರ್ಷಗಳ ಹಿಂದಿನ ಕನಸು ಇಂದು ನನಸಾಗಿರುವುದು ನನಗೆ ಸಂತೃಪ್ತಿಯನ್ನುಂಟು ಮಾಡಿದೆ. ಮಾನ್ಯ ಮಿತ್ರರಾದ ಪ್ರೊ॥ ಸಿ.ಮಹಾದೇವಪ್ಪನವರು ತಮ್ಮ ಬಳಿ ಚಂದ್ರಚೂಡಾಮಣಿ ಶತಕದ ಪ್ರತಿಗಳು ಇವೆ ಎಂಬ ವಿಷಯವನ್ನು ಹಿಂದೆಯೇ ತಿಳಿಸಿದ್ದರು. ಅವರು ಕೃತಿಯನ್ನು ಇನ್ನೂ ಪ್ರಕಟಿಸಿರಲಿಲ್ಲವಾದ್ದರಿಂದ, ಅದನ್ನು ಪ್ರಕಟಿಸುವ ನಿರ್ಧಾರವನ್ನು ಪ್ರತಿಷ್ಠಾನ ಕೈಗೊಂಡ ಮೇಲೆ ತಮ್ಮ ಬಳಿ ಇರುವ ಪ್ರತಿಗಳನ್ನು ಎರವಲು ಕೊಡಬೇಕೆಂದು ಪ್ರಾರ್ಥಿಸಿ ಅವರಿಗೆ ಪತ್ರ ಬರೆದೆನು; ಅವರನ್ನು ಭೇಟಿಯಾದಾಗ ಕೇಳಿಕೊಂಡೆನು. ತಾವೇ ಪ್ರಕಟಿಸಬೇಕೆಂದಿರುವುದಾಗಿ ತಿಳಿಸಿದರಷ್ಟೆ. ಪ್ರತ್ಯಂತರಗಳು ದೊರೆತಿದ್ದರೆ ಪಾಠಪರಿಷ್ಕರಣಕ್ಕೆ ಹೆಚ್ಚಿನ ನೆರವು ದೊರೆಯುತ್ತಿತ್ತು; ಊಹಾತ್ಮಕ ಪರಿಷ್ಕರಣ ಬಹುಶಃ ಈಗ ಇರುವಷ್ಟು ಇರುತ್ತಿರಲಿಲ್ಲ. "ಸಿದ್ಧಗಂಗಾ ಶ್ರೀ" ಸಂಪುಟದಲ್ಲಿ ಅವರು ಪ್ರಕಟಿಸಿರುವ ಲೇಖನದಲ್ಲಿ ಶತಕದ ಸು. ೨೩ ಪದ್ಯಗಳು ಉದಾಹೃತವಾಗಿವೆ. ಈ ಪದ್ಯಗಳಿಗೆ a, b, c ಎಂಬ ಮೂರು ತಾಡವೋಲೆ ಹಸ್ತಪ್ರತಿಗಳಿಂದ ಪಾಠಾಂತರಗಳನ್ನು ಕೊಟ್ಟಿದ್ದಾರೆ. ಉದ್ಧೃತ ಪದ್ಯಗಳು ಅವರು ಬಳಸಿಕೊಂಡಿರುವ ಹಸ್ತಪ್ರತಿಯಲ್ಲಿಯವು. ಈ ನಾಲ್ಕು ಹಸ್ತಪ್ರತಿಗಳೂ ಇಲ್ಲಿ ಮ, ಮa, ಮb, ಮc ಎಂಬ ಸಂಕೇತಗಳಿಂದ ಸೂಚಿತವಾಗಿವೆ. (ಅಧ್ಯಯನ ಸಂಸ್ಥೆಯ ಪಾಠದ ಸಂಕೇತ 'ಆ') ಮಹಾದೇವಪ್ಪನವರ ವಿಚಾರಪ್ರಚೋದಕ ಲೇಖನಕ್ಕೆ ನಾನು ಬಹು ವಿಧಗಳಲ್ಲಿ ಋಣಿಯಾಗಿದ್ದೇನೆ.

ಹಳಗನ್ನಡದಲ್ಲಿ ಪ್ರವೇಶವಿಲ್ಲದ ಓದುಗರ ಅನುಕೂಲಕ್ಕಾಗಿ ಪ್ರತಿಪದ್ಯಕ್ಕೂ ಸರಳವಾದ ಗದ್ಯಾನುವಾದವನ್ನು ಕೊಟ್ಟಿದೆ. ಕಠಿಣ ಪದಗಳ ಅರ್ಥವನ್ನು ಕೊಟ್ಟಿದೆ. ಇವುಗಳ ಸಹಾಯದಿಂದ ಮೂಲಪದ್ಯಗಳ ಅರ್ಥಮಾಡಿಕೊಳ್ಳಲು ಸ್ವಲ್ಪವಾದರೂ ಸಹಾಯವಾಗಬಹುದು ಎಂದು ನಂಬಿದ್ದೇನೆ.

ನಿರ್ದಿಷ್ಟ ಅವಧಿಯಲ್ಲಿ ಪುಸ್ತಕವನ್ನು ಹೊರತರಬೇಕಾಗಿ ಬಂದದ್ದರಿಂದ

("ಕನ್ನಡ ಸಂಪಾದನೆ", ೧೯೭೦, ಪು.೧೦೬, ೧೧೬, ೧೪೫) ಸಹ ಈ ಗ್ರಂಥದ ಸಂಪಾದನೆ ಎಷ್ಟು ಗುರುತರವಾದ ಕಾರ್ಯ ಎಂಬುದನ್ನೇ ಹೇಳುತ್ತವೆ.

ಮಿಶ್ರಪಾಠ ಸಂಪ್ರದಾಯಗಳ ತೊಡಕು ಬಿಡಿಸಿ, ಪ್ರಕ್ಷೇಪಗಳನ್ನು ಸವರಿ ಹಾಕಿದರೆ ಕುಮಾರವ್ಯಾಸ ಭಾರತದ ಸಂಪಾದನೆಯಲ್ಲಿ ಮುಂದಿನ ದಾರಿ ಬಹುಶಃ ಅಷ್ಟೇನೂ ಕಷ್ಟವಾಗದು. ಆಗ ಕಾಲದ ದೃಷ್ಟಿಯಿಂದ ಪ್ರಾಚೀನವಾದ, ಪ್ರದೇಶದ ದೃಷ್ಟಿಯಿಂದ ಪ್ರಾತಿನಿಧಿಕವಾದ, ಶಕಟರೇಫದ ಸರಿಯಾದ ಬಳಕೆಯಿರುವ, ಸುಲಭಪಾಠಗಳಿಗಿಂತ ಕಠಿನಪಾಠಗಳನ್ನು ಮನ್ನಿಸುವ, ಗ್ರಂಥಪಾತಗಳಿಲ್ಲದಿರುವ, ಸುಶಿಕ್ಷಿತ ಲಿಪಿಕಾರಲೇಖ್ಯವಾಗಿರುವ ಹಸ್ತಪ್ರತಿಗಳನ್ನೆಲ್ಲ ಒಗ್ಗೂಡಿಸಿಕೊಂಡು ಪಾಠಸಂಕಲನಾದಿ ವಿದಾನಗಳಿಂದ ಮೂಲಪಾಠದ ಹೊಲಬು ಹಿಡಿಯಲು ಪ್ರಯುತ್ನಿಸಬಹುದು. ಈಗಿನ ಅಂದಾಜಿನಂತೆ ಸುಮಾರು ೧೨೦ ಹಸ್ತಪ್ರತಿಗಳಿರುವುದು ನಮಗೆ ತಿಳಿದಿದೆ. ಇನ್ನೂ ಶೋಧಿಸಿದರೆ, ಸಾಕಷ್ಟು ಹಸ್ತಪ್ರತಿಗಳು ದೊರೆಯಬಹುದು. ಇವನ್ನೆಲ್ಲ ಒಗ್ಗೂಡಿಸಿಕೊಂಡು ಎಷ್ಟರಮಟ್ಟಿಗೆ ಶಕ್ಯವೋ ಅಷ್ಟರಮಟ್ಟಿಗೆ ಪೀಳಿಗೆಯನ್ನು ಕಂಡುಹಿಡಿಯುವುದಾಗಬೇಕು; ಇಲ್ಲವೆ ಪರಸ್ಪರವಾದ ಸಂಬಂಧಗಳಾದರೂ ವಿಶದಪಡುವಂತೆ ತುಲನೆ ಮಾಡಿ ಗುಂಪುಗಳನ್ನು ವಿಂಗಡಿಸಿಕೊಳ್ಳಬೇಕು. ಅನಂತರದಲ್ಲಿ ಹೆಚ್ಚು ಉಪಯೋಗಕ್ಕೆ ಬಾರದವನ್ನು ವರ್ಜಿಸಿ, ಒಂದು ಕನಿಷ್ಠ ಮಿತಿಗೆ ಹಸ್ತಪ್ರತಿಗಳ ಸಂಖ್ಯೆಯನ್ನು ಇಳಿಸಿಕೊಂಡರೆ, ಪಾಠಸಂಕಲನ ಮೂಲಪಾಠವನ್ನು ಗೊತ್ತು ಮಾಡುವಲ್ಲಿ ಉದ್ದೇಶಿತ ಲಕ್ಷ್ಯಕ್ಕೆ ಸಹಾಯಕವಾಗುತ್ತದೆ. ಕನಿಷ್ಠಮಿತಿಗೆ ಇಳಿಸಿಕೊಂಡ ಹಸ್ತಪ್ರತಿಗಳಲ್ಲಿ ಅತ್ಯಂತ ವಿಶ್ವಾಸಾರ್ಹವೆಂದು ತೋರಿದುದನ್ನು ಆಧಾರಪ್ರತಿಯಾಗಿಟ್ಟುಕೊಂಡು, ಇತರ ಪ್ರತಿಗಳ ಪಾಠಭೇದಗಳನ್ನು ಅಡಿಟಿಪ್ಪಣಿಗಳಲ್ಲಿ ಪ್ರತ್ಯೇಕವಾಗಿ ಸೂಚಿಸಬಹುದು.

ಪ್ರಸ್ತುತ ಪರಿಷ್ಕರಣವಾದ ಎಂ.ವಿ.ಸೀತಾರಾಮಯ್ಯನವರ ಸಂಪಾದಕತ್ವದ "ಕುಮಾರವ್ಯಾಸಭಾರತ ಸಂಗ್ರಹ"ದ ಬಗೆಗೆ ಈಗ ಕೆಲವು ಮಾತುಗಳು:

ಈ ಸಂಗ್ರಹವನ್ನು ಬಿ.ಎಂ.ಶ್ರೀಕಂಠಯ್ಯ – ಟಿ.ಎಸ್.ವೆಂಕಣ್ಣಯ್ಯ ಇವರು ಜೊತೆಗೂಡಿ ಸಿದ್ಧಪಡಿಸಿದ್ದರೆನ್ನಲಾದ ಕುಮಾರವ್ಯಾಸಭಾರತ ಸಂಗ್ರಹವನ್ನು ಮುಖ್ಯವಾದ "ಆಧಾರಪ್ರತಿಯನ್ನಾಗಿಟ್ಟುಕೊಂಡು, ಬೇರೆ ಕೆಲವು ಹಸ್ತಪ್ರತಿಗಳನ್ನೂ ಮುದ್ರಿತ ಪ್ರತಿಗಳನ್ನೂ ಸಂದರ್ಭೋಚಿತವಾಗಿ ಬಳಸಿ ಸಿದ್ಧಪಡಿಸಲಾಗಿದೆ. ಇವುಗಳ ವಿವರವನ್ನು ಸಂಪಾದಕೀಯ ಸಹಾಯಕರ ಪ್ರತ್ಯೇಕವಾದ ಟಿಪ್ಪಣಿಯ ಭಾಗದಿಂದ ತಿಳಿದುಕೊಳ್ಳಬಹುದಾಗಿದೆ. ಎಂ.ವಿ.ಸೀ. ಅವರು "ಆಧಾರಪ್ರತಿ"ಯನ್ನೂ ಒಳ

# ೫. ಕುಮಾರವ್ಯಾಸ ಭಾರತ ಸಂಗ್ರಹ

## ಅ) ಉಪೋದ್ಘಾತದಿಂದ....

..... ತೋರಣ ನಾಂದಿಯ ಈ ಮಾತುಗಳು ಕುಮಾರವ್ಯಾಸಭಾರತದ ಸಂಪಾದನೆ ಎಷ್ಟು ಜಟಿಲವಾದುದು, ಎಷ್ಟು ವ್ಯಾಪಕವಾದ ಕಾರ್ಯವಿಧಾನವನ್ನು ನಿರೀಕ್ಷಿಸುವಂತಹುದು ಎನ್ನುವುದನ್ನು ಸ್ಪಷ್ಟವಾಗಿ ತಿಳಿಸುತ್ತವೆ: "ಒಟ್ಟಿನಲ್ಲಿ ನಾವು ಸಿದ್ಧಗೊಳಿಸಿರುವುದು ಜನಪ್ರಿಯ ಪ್ರತಿ ಮಾತ್ರ. ಸಂಶೋಧಿತ ವಿಶುದ್ಧಪ್ರತಿ ಬರದ ತನಕ ಕುಮಾರವ್ಯಾಸನ ಪ್ರತಿಭೆಯ ನಿಜಸ್ವರೂಪದ ಸಂಪೂರ್ಣದರ್ಶನವಾಗುವುದಿಲ್ಲ. ಹಾಗೆ ಮಾಡಲು ಅತ್ಯಂತ ಪ್ರಾಚೀನವಾದ ಹಾಗೂ ಗದುಗಿನ ಸುತ್ತಮುತ್ತಣ ಪ್ರದೇಶದಲ್ಲಿ ದೊರೆಯಬಹುದಾದ ಪ್ರತಿಗಳನ್ನೆಲ್ಲಾ ಸಂಗ್ರಹಿಸಬೇಕು. ೧೪–೧೫ನೆ ಶತಮಾನದ ಶಾಸನಗಳನ್ನೆಲ್ಲಾ ಸಂಗ್ರಹಿಸಿ ಅಭ್ಯಸಿಸಬೇಕು. ಇದು ಒಂದೆರಡು ದಶಕದ ನಾಲ್ಕಾರು ವಿದ್ವಾಂಸರ ಕೆಲಸ."

"ಕುಮಾರವ್ಯಾಸ ಭಾರತ"ವನ್ನು ರಚಿಸಿದ ಕವಿ ತನ್ನ ಕಾವ್ಯದ "ಪ್ರತಿ ಪರ್ವವನ್ನು ಎಷ್ಟು ಸಂಧಿಗಳಾಗಿ ವಿಭಾಗ ಮಾಡಿದ್ದನೋ, ಪ್ರತಿಸಂಧಿಯಲ್ಲಿ ಎಷ್ಟು ಪದ್ಯಗಳನ್ನು ಬರೆದಿದ್ದನೋ ಖಚಿತವಾಗಿ ಹೇಳಲಾಗುವುದಿಲ್ಲ. ಇದರಿಂದ ಪ್ರಕ್ಷೇಪಕಾರರಿಗೆ ಒಳ್ಳೆಯ ಅವಕಾಶ ಉಂಟಾಯಿತು" ಎಂಬುದಾಗಿಯೂ, "ಕನ್ನಡ ಭಾರತದಲ್ಲಿ ಇರುವ ಪ್ರಕ್ಷೇಪಗಳನ್ನು ಗೊತ್ತು ಮಾಡಲು ಆ ಗ್ರಂಥದ ಹಸ್ತಪ್ರತಿಗಳ ಪ್ರಗಾಢವೂ ಶಾಸ್ತ್ರೀಯವೂ ಆಗಿರುವ ಅಭ್ಯಾಸವನ್ನು ಇನ್ನು ಮುಂದೆ ಯಾರಾದರೂ ಮಾಡಬೇಕಾಗಿದೆ. ಮೈಸೂರು ಓರಿಯಂಟಲ್ ಲೈಬ್ರರಿಯಿಂದ ಮುದ್ರಿತವಾಗಿರುವ ಆ ಗ್ರಂಥದ ಯುದ್ಧ ಪಂಚಕದ ಪ್ರತಿ ಪರ್ವದ ಅಂತ್ಯದಲ್ಲಿ ಕಾಣಿಸಿರುವ ಪರಿಶಿಷ್ಟಗಳನ್ನು ಸದ್ಯಕ್ಕೆ ಅವಲೋಕಿಸುವುದು ಸಾಕು" ಎಂಬುದಾಗಿಯೂ, "ಕನ್ನಡದ ಕಾವ್ಯಗಳಲ್ಲಿ ಕುಮಾರವ್ಯಾಸನ ಭಾರತಯದ ಕೆಲವು ಹಸ್ತಪ್ರತಿಗಳು ಮಿಶ್ರಪಾಠ ಸಂಪ್ರದಾಯಗಳ ಸೀಗೆಯ ಮೆಳೆಯಾಗಿವೆ. ಆ ಗ್ರಂಥದ ಸಂಪಾದನೆ ಮಾಡಬಯಸುವವರು ಈ ವಿಷಯವನ್ನು ಗಮನಿಸಬೇಕಾಗಿದೆ' ಎಂಬುದಾಗಿಯೂ ಡಿ.ಎಲ್.ನರಸಿಂಹಾಚಾರ್ಯರು ತಿಳಿಸಿರುವ ಕೆಲವು ಎಚ್ಚರಿಕೆಯ ಮಾತುಗಳು

ಉತ್ಕೃಷ್ಟವಾದ ಪದ್ಯಗಳು (ಉದಾ.ಗೆ: "ಮುನಿಪತಿಯ ಮಾತಿನ ಬಲೆಗೆ..." – ಸಭಾ ೧–೯೩, "ಸುರನಗರಿ ನಡುಗಿತ್ತು..." –ದ್ರೋಣ ೮–೧೧ ಇ.) ಪ್ರಸ್ತುತ ಸಂಗ್ರಹದಲ್ಲಿ ಬಿಟ್ಟು ಹೋಗಬಾರದಿತ್ತು ಎಂದು ಕೆಲವರಿಗಾದರೂ ತೋರದಿರದು. ಹೀಗೆಯೇ ಪಾಠನಿಷ್ಕರ್ಷೆಯಲ್ಲಿಯೂ ಸಂದಿಗ್ಧತೆಗಳಿಗೆ ಅವಕಾಶವುಂಟು. ಇವುಗಳ ಪರಿಹಾರ ಕುಮಾರವ್ಯಾಸಭಾರತದ ಸವಿಮರ್ಶ ಪರಿಷ್ಕರಣದಿಂದ ಮಾತ್ರ ಸಾಧ್ಯ. ಅಲ್ಲಿಯವರೆಗೆ ಈ ಕೃತಿಯ ಪಾಠಸಂಯೋಜನೆ ತಾತ್ಕಾಲಿಕ ಮತ್ತು ಸಮ್ಮಿಶ್ರ ರೀತಿಯದು. ಬೆಳೆಯುತ್ತಿರುವ ಗ್ರಂಥಗಳ ಪಾಠಪರಿಷ್ಕರಣದ ತತ್ತ್ವಗಳನ್ನು ಕುಮಾರವ್ಯಾಸ ಭಾರತದ ಕೃತಿಗೆ ಸಹ ಅನ್ವಯಿಸಬೇಕಾಗಬಹುದು. ಪ್ರಸ್ತುತ, ಹಲವೆಡೆಗಳಲ್ಲಿ ಎಂ.ವಿ.ಸೀ. ಸಂಗ್ರಹ ಉತ್ತಮ, ಸಂಭಾವ್ಯ ಕವಿಪಾಠಗಳನ್ನು ಕೊಡುವುದರಲ್ಲಿ ಕೃತಕೃತ್ಯವಾಗಿದೆ. ಕೆಲವೆಡೆ ಆಗಿಲ್ಲ. ಕವಿಶೈಲಿಯ ಹಾಗೂ ಕವಿಸಹಜ ಭಾಷೆಯ ಧೋರಣೆಯನ್ನು ಎಚ್ಚರದಿಂದ ಗಮನಿಸದೆ ಕೆಲವೆಡೆ ಪಾಠಗಳನ್ನು ಸ್ವೀಕರಿಸಿದ್ದರೆ, ಇನ್ನು ಕೆಲವೆಡೆ ಯೋಗ್ಯಪಾಠಗಳು ಪ್ರತ್ಯಂತರಗಳಲ್ಲಿ ದೊರೆಯುತ್ತಿದ್ದರೂ ಅನಗತ್ಯವಾಗಿ ಊಹಾತ್ಮಕ ಪರಿಷ್ಕರಣಗಳನ್ನು ಮಾಡಿದೆ. ಅಲ್ಲದೆ, ಡಿ.ಎಲ್.ಎನ್. ಅವರು "ಕನ್ನಡ ಗ್ರಂಥ ಸಂಪಾದನೆ"ಯಲ್ಲಿ ಚರ್ಚಿಸಿರುವ ಹಾಗೂ ಪರಿಷ್ಕರಿಸಿರುವ ಈ ಕೃತಿಯ ಪಾಠಗಳನ್ನು ಏಕೆ ಗಮನಿಸಿಲ್ಲವೋ, ತಿಳಿಯದು. ಈಗ ಕೆಲವು ನಿದರ್ಶನಗಳ ಆಧಾರದಿಂದ ಈ ಹೇಳಿಕೆಗಳನ್ನು ಪರೀಕ್ಷಿಸಬಹುದಾಗಿದೆ. ಈ ಪರಿಶೀಲನೆ ಸರ್ಗಾನುಕ್ರಮದಲ್ಲಿದ್ದು, ಪಾಠಪರಿಶೀಲನೆಯ ಉಲ್ಲೇಖಭಾಗದಲ್ಲಿ ಮೊದಲನೆಯದು ಸಾಮಾನ್ಯವಾಗಿ ಕ ಅ ಸಂ. – ಕುಮಾ. ಪ್ರತಿಗಳದು, ಎರಡನೆಯದು ಎಂ.ವಿ.ಸೀ. (ಹಾಗೂ ಭಾಗಶಃ ಆಧಾರಪ್ರತಿಯ ಸಂಗ್ರಹಕರ್ತರು) ಅಂಗೀಕರಿಸಿದ್ದು ಇಲ್ಲವೆ ಸೂಚಿಸಿದ್ದು ಆಗಿರುತ್ತವೆ.

ಆದಿ: ೧–೫ ಚಾರು ಕವಿತೆಯ–ಜಾರ ಕವಿತೆಯ (೨ ಕವಿಶೈಲಿಗೆ ಅನುಗುಣವಾದ ಸಂಭಾವ್ಯ ಪಾಠ). ೧–೯ ಲೆಕ್ಕಿಪನೆ–ಬಗೆವನೇ (೨ ಕ.ಪ್ರತಿಯದಾದ್ದರಿಂದ ಸಂಭಾವ್ಯ). ೧–೧೨ ಗೆಲಿದನ–ಗೆಲಿದನ (ರೂಪಶುದ್ಧಿಗೆ ಗೆಲಿದ[ವ] ಅವಶ್ಯ). ೨–೪ ನಖಸಾಳವಗ್ಗದ–ಗಳಗಾಣ ವೆಗ್ಗಳ (೨ ಬಹುಶಃ ಸರಿ; ಗಳಗಾಳ/ಗಳಗಾಣ=ಗಂಟಲ ಗಾಣ; ನೋ. ಕ.ಗ್ರಂ.ಸಂ. ಪು.೧೩೦). ೨–೧೪ ಸಹಗಮನದಲಿ – ಸಹಗಮನ[ವೇ] (೧ ಕವಿಶೈಲಿಗೆ ಸಹಜ). ೨–೧೭, ೨೩ ನೂರಾರು [ನೂರೈದು], ೨–೨೯ ನೂರರುವರನು–ನೂರೈವರನು (೧ ಸಂಭಾವ್ಯ; ಕವಿ ದುಶ್ಶಳೆ ಸೇರಿದಂತೆ ಕೌರವರು ೧೦೧ ಜನರನ್ನೂ

ಕೊಂಡ ಹಾಗೆ ತಾವು ಪರಿಶೀಲಿಸಿದ ಯಾವುದೇ ಪ್ರತಿಯನ್ನೂ ತಮ್ಮ ವಿವೇಚನೆಯ ಒರೆಗಲ್ಲಿನ ಮೇಲೆ ವಿಶದವಾಗಿ ಪರೀಕ್ಷಿಸಿಯೇ ಸಂಪಾದನ ಕಾರ್ಯವನ್ನು ಕೈಕೊಂಡಿದ್ದಾರೆ. ಪದ್ಯಗಳ ಆಯ್ಕೆ, ಆನುಪೂರ್ವಿ ಮತ್ತು ಪಾಠಗಳ ನಿಷ್ಕರ್ಷೆ ಮೂರಕ್ಕೂ ಈ ಮಾತು ಅನ್ವಯಿಸುತ್ತದೆ. ಈ ದೃಷ್ಟಿಯಿಂದ, ವಿಶೇಷವಾಗಿ ಜನಪ್ರಿಯ ಆವೃತ್ತಿಗಳಾಗಿ ಪ್ರಚಲಿತವಾಗಿರುವ ಕನ್ನಡ ಅಧ್ಯಯನ ಸಂಸ್ಥೆಯ ಬಿಡಿಪರ್ವಗಳು ಹಾಗೂ ಕುವೆಂಪು–ಮಾಸ್ತಿ ಸಂಪಾದಕತ್ವದ ಸಮಗ್ರಕೃತಿ – ಇವುಗಳಲ್ಲಿ ಸಿದ್ಧವಾಗಿರುವ ಗ್ರಂಥ ಪಾಠವನ್ನು ಹೆಚ್ಚಿನ ವಿಚಕ್ಷಣೆಯಿಂದಲೂ ಧೈರ್ಯದಿಂದಲೂ ಪರಿಷ್ಕರಿಸಿ, ವೈಯಕ್ತಿಕ ಜವಾಬ್ದಾರಿಯ ವಿಶಿಷ್ಟಸ್ವರೂಪದ ಗ್ರಂಥಪಾಠವೊಂದನ್ನು ಒದಗಿಸಲು ಅವರು ಯತ್ನಿಸಿರುವುದು ನಮ್ಮ ಗಮನವನ್ನು ಸೆಳೆಯುತ್ತದೆ. ಹಾಗೆಂದೇ ಈ ಸಂಗ್ರಹಕ್ಕೆ ಕುಮಾರವ್ಯಾಸಭಾರತದ ಸಂಪಾದನೆಗಳಲ್ಲಿ ತನ್ನದೇ ಆತ ಒಂದು ಸ್ಥಾನವಿದೆ.

ಕುಮಾರವ್ಯಾಸಭಾರತದ ಪರಿಷ್ಕರಣಕಾರ್ಯದ ಕ್ಲೇಶಗಳನ್ನು ಬಲ್ಲವರಿಗೆ ಎಂ.ವಿ.ಸೀ. ಅವರ ಪರಿಶ್ರಮ ಸಾಮರ್ಥ್ಯಗಳು ಏನೆಂಬುದು ಅರ್ಥವಾಗುತ್ತದೆ. ಅವರು ಸಂಗ್ರಹಗ್ರಂಥವಾಗಿಯೂ ಪಾಠಾಂತರಗಳನ್ನು ಸೂಚಿಸುವ ಹೊಸ ಪ್ರಕ್ರಮವನ್ನು ಬಹುಶಃ ಮೊದಲ ಸಲ ರೂಢಿಸಿದ್ದಾರೆ; ತಾವು ಸ್ವೀಕರಿಸಿದ ಪಾಠ ಯಾವುದು ಎಂಬುದನ್ನು ಪ್ರತ್ಯೇಕವಾಗಿಯೇ ಹಲವೆಡೆ ತೋರಿಸಿದ್ದಾರೆ. ಪದ್ಯಗಳ ಆಯ್ಕೆ, ಆನುಪೂರ್ವಿ ಮತ್ತು ಪಾಠನಿಷ್ಕರ್ಷೆಯಲ್ಲಿ ಗಮನಾರ್ಹವಾದ ವಿಶೇಷ ಸಂಗತಿಗಳನ್ನು ತಿಳಿಸಬೇಕೆಂದು ತೋರಿದಾಗ, ಅವನ್ನೂ ವಿವರಿಸಿದ್ದಾರೆ. ಜೊತೆಗೆ ಅಭ್ಯಾಸಿಗಳಿಗೂ ಗಮಕಿಗಳಿಗೂ ಅನುಕೂಲವಾಗುವಂತೆ, ಶಬ್ದಾರ್ಥಗಳನ್ನೂ ಸಣ್ಣಪುಟ್ಟ ವಿವರಣೆಗಳನ್ನೂ ನೀಡಿದ್ದಾರೆ. ಪದ್ಯಗಳ ಆಯ್ಕೆ, ಆನುಪೂರ್ವಿ ಮತ್ತು ಪಾಠನಿಷ್ಕರ್ಷೆಯಲ್ಲಿ ಅವರಿಗೆ "ಆಧಾರ ಪ್ರತಿ"ಯೇ ವಿಶೇಷವಾಗಿ ಸಹಾಯಕವಾಗಿರುವುದರಿಂದ, ಆ ಸಂಬಂಧವಾದ ಅಂಶಗಳಲ್ಲಿ ಸಂಪಾದನೆಯ ಯಶಸ್ಸಿಗೆ "ಆಧಾರ ಪ್ರತಿ"ಯ ಸಂಪಾದಕರೂ ಪಾಲುದಾರರಾಗಿದ್ದಾರೆ ಎಂದು ತಿಳಿಯಬೇಕಾಗಿದೆ; ಅವರ ಕವಿಪೂಜೆಯನ್ನು ಕೃತಜ್ಞತೆಯಿಂದ ಸ್ಮರಿಸಬೇಕಾಗಿದೆ.

ಎಂ.ವಿ.ಸೀ. ಅವರ ಸಂಪಾದನಕಾರ್ಯದ ಬಗೆಗೆ ಇಲ್ಲಿ ಕೆಲವಂಶಗಳನ್ನು ಬರೆಯಬಹುದು. ಹಾಗೆ ಬರೆಯುವಾಗ, ಪದ್ಯಗಳ ಆಯ್ಕೆ ಆನುಪೂರ್ವಿಗಳ ಮಟ್ಟಿಗೆ ಸಂಪಾದಕರ ಸ್ವಾತಂತ್ರ್ಯವನ್ನು ನಾವು ಒಪ್ಪಬೇಕಾದುದು ಅನಿವಾರ್ಯವೆಂದಿಟ್ಟುಕೊಂಡರೂ, ಇಲ್ಲಿ ಆಯಾ ಸಂಪಾದಕರ ಅಗತ್ಯ ಅಭಿರುಚಿಗಳಿಗೆ ಅನುಸಾರವಾಗಿ ಸಂಕ್ಷೇಪ ವಿಸ್ತಾರಗಳು ಸ್ವಾಭಾವಿಕವೇ ಆದರೂ, ಕೆಲವು

ಆವರಿಸು ಅಲ್ಲ; ತಡೆ, ನಿರೋಧಿಸು. ೭–೨೩೪ ಜಿನುಗು=ಮಾತಿನ ಮಳೆಗರೆ ಅಲ್ಲ, ಗೊಣಗಾಡು; ನೋ. "ಜಿನಗು ನಿನುಂಗು ಅಸಹ್ಯಾವ್ಯಕ್ತಧ್ವನೌ"(ಶಮಧಾ). ೭–೨೩೫) ಸವಡಿಮಾರಿ–ಚೌಡಿ, ಚವುಡಿ (=ಚಾಮುಂಡಿ) ಇರಲಾರದು; ಮಹಾಮಾರಿ ಇರಬಹುದು. ಸವಡಿ=ಎರಡು, ಜೋಡಿಗೆ ಕುಮಾರವ್ಯಾಸ ಭಾರತದಲ್ಲಿ ಪ್ರಯೋಗಗಳಿವೆ. ೯–೨೮೮ "ಸಮಾ[ಶ] ವಿಸ್ತಾರವನು""ಸಮಾಸ ವಿಸ್ತಾರವನು" ಇರಬಹುದು; ಸಂಕ್ಷೇಪ ಮತ್ತು ವಿಸ್ತಾರ ಬಹುಶಃ ಆಶಯ.

ಸಭಾ : ೧–೯ ಮುರನರಕರಾಳನ–ಮುರನರಕರಾ[ಳ್ಗಳ] (೨ ಸಮರ್ಥನೀಯ). ೨–೧೪ ಮಾಡದೆ ಮಿಗೆ–ಮಾಡಿದು[ದಾ] (೧ರ ಅರ್ಥ ಸಹಜ; ಟಿಪ್ಪಣಿ ತಪ್ಪಾಗಿರುವಂತಿದೆ). ೪–೬೭ ಕಾರ್ಮುಕ–ಮಾರ್ಗಣ (೧ ಸಂಭಾವ್ಯ). ೬–೧೨೩ ಝಳಪಟೆಯ– ಜಲವಟೆಯ (೨ ಸಂಭಾವ್ಯ; ಆದರೆ "ಜಲವಟಿಯ" ಇದ್ದೀತು. ನೋ. ಕರ್ಣ ೨–೧೨). ೬–೧೩೮ ಮಣಿಖಟಿಲ–[ಖ]ಣಿಖಟಿಲ (೨ ಸರಿ; ನೋ. ದ್ರೋಣ ೧೮–೪). ೬–೧೮೭ ಗುಜುರಿನ–ಜೂಬಿನ (ಕಠಿನಪಾಠದ ಆಯ್ಕೆ ದೃಷ್ಟಿಯಿಂದ ೨ ಸಂಭಾವ್ಯ).

ರೂಪ, ಅರ್ಥಗಳು: ೨–೧೭ ರವಣ–ಪರಿಹಾಸ, ವಿನೋದ ಆಗದು; ಸಾರ, ತಿರುಳು, ಸಾಧನ ಆದೀತು. ೨–೨೦ ರಣದರ್ಥಿ–ರಣದ[ರ್ತಿ] (ಅರ್ಥಿ–ಯಾಚಿಸುವವನು, ಬೇಡುವವನು ಆದ್ದರಿಂದ ೧ ಆಗಬಹುದು; ಆಗ ಪ್ರಾಸವೂ ಶುದ್ಧ. ಆದರೆ ೨ರ ಸಾಧ್ಯತೆಯೂ ಉಂಟು). ೨–೨೭ ಬೇರೆ ಬೇರೆ ಸಂಧಿಗಳ ಸೂಚನಾಪದ್ಯಗಳ ಸೇರಿಕೆ ಸರಿಯಾಗಲಿಲ್ಲ. ಪ್ರಾಸವೈಷಮ್ಯವೂ ಉಂಟು. ಅ.ಟಿ. ಸೂಚನೆಗಳಲ್ಲಿ ಮೊದಲಿನದು ೨–೨೭ಕ್ಕೆ ಅನ್ವಯಿಸುತ್ತದೆ; ಎರಡನೆಯದನ್ನು ಕೈಬಿಡಬೇಕು. ಅಲ್ಲದೆ ೨–೨೬ರ ಆದಿಗೆ* ಚಿಹ್ನೆ ಅನಗತ್ಯ. ಅದು ಪ್ರಚಲಿತ ಪಾಠದಲ್ಲಿ ೨–೧೯ರ ಪದ್ಯವಾಗಿದೆ. ೪–೭೫ ವಧು–ರಾಜ್ಯಲಕ್ಷ್ಮಿ(?) (ವಧು–ಪತ್ನಿ ಎಂದೇ ಗ್ರಾಹ್ಯ. ಇದು ಮುಂದಾಗಲಿರುವುದರ ಮುನ್ಸೂಚನೆಯ ಮಾತು; ನಾಟಕೀಯ ವ್ಯಂಗ್ಯದ ಒಂದು ಒಳ್ಳೆಯ ಲಕ್ಷ್ಯ. ೫–೮೫ ಬೆಳ್ಳಾಳ ಹಬ್ಬುಗೆ – "ಹರಡಿದ ಬಿಳಿಯ ಬಲೆ(?)" ಇರಲಾರದು; "ಹುರುಳಿಲ್ಲದವರ ಉಬ್ಬಟೆ" ಎಂದು ಪ್ರಾಯಃ ಅರ್ಥ. ೫–೯೫ ಕೂಳಿ–ಕುಳಿ, ಗುಂಡಿ(?) ಬೇಕಿಲ್ಲ. ಆದರೆ ಅರ್ಥ ರೂಪಕವಾಗಿ ಗ್ರಾಹ್ಯವಾಗಬೇಕು. ಬೇಳಂಬ–ವಿಚಾರ, ಚಿಂತೆ(?) ಎಂದಿದೆ; (ಪ್ರಾ.)ವೇಲಂಬೋ–ಬೇಳಂಬ (=ವಿಡಂಬನೆ, ಹಾಸ್ಯ). ಬಾಳಿಕೆಯ ಬೇಳಂಬ=ಹಾಸ್ಯಾಸ್ಪದವಾದ ಬದುಕು ಇದ್ದೀತು. ೬–೧೫೨ ಆದುದು–ಆಯಿತು, ಒದಗಿತು(?) ಎಂದಿದೆ; ಆದರೆ ತಡೆಯಿತು, ನಿರ್ವಾಹಗೊಂಡಿತು ಆಗಬೇಕು

ಯುವರು ಪಾಂಡವರನ್ನೂ ಸೇರಿಸಿ ಹೀಗೆಂದಿರಬಹುದು). ೨–೨೩ ತಂದೆಡೆಯಾಡಿ–[ಕಂಡೆ]ಡೆಯಾಡಿ (೧ ಸಹಜ). ೨–೨೫ತಾವೊಂದಾಗುತಾತನ–ತಾವೊಂದಾಗಿ ಭೀಮನ, ಮೈಮರಸಿ ಭೀಮನ–ಮೈಮರಸಿ[ಯಾತನ] (೧ ಕಥಾಗತಿಗೆ ಅನುಸಾರವಾದವು). ೨–೨೬ ಕೇಳಿ ನೀವೆಂದ–[ಎಂದನಾ ಭೀಮ] (೨ನೆಯದಕ್ಕೆ ಸಮರ್ಥನೆಯಿಲ್ಲ). ೨–೨೭ ಬೆಳೆದುದು–[ಬ]ಳೆದುದು (ನ.ಗ.ದಲ್ಲಿ ಬಳೆ–ಬೆಳೆ ಧಾತುಗಳ ಅರ್ಥವ್ಯತ್ಯಾಸ ಉಳಿದಿಲ್ಲ; ಆದ್ದರಿಂದ ತಿದ್ದು ಅನಗತ್ಯ). ೨–೪೬ ನೀನನುನಾಯಕನೊ–ನೀ[ನುಪ]ನಾಯಕನೊ (೨ ಯಾದೃಚ್ಛಿಕ; ೧ ಗ್ರಾಹ್ಯ). ೨–೭೦ ಸಿಕ್ಕಿರ್ದ–ಸಿ[ಲ್ಕಿ]ರ್ದ (ನ.ಗ.ದಲ್ಲಿ ಸಿಲ್ಕು>ಸಿಕ್ಕು ಆಗಿದೆ; ತಿದ್ದು ಅನಗತ್ಯ; ನೋ.ಅರಣ್ಯ ೨೦–೧, ದ್ರೋಣ ೧–೬೩). ೩–೭೯ "ವೈರಿ–ಘಟಕುಲದಾವಗೆಯನಿಡಿಸುವಿರಿ" ಒಳ್ಳೆಯ ಪಾಠಸಂಯೋಜನೆ; ಆದರೆ ನಿಮ್ಮ–[ನಿನ್ನ] ಇಲ್ಲಿ ತಿದ್ದು ಅನಗತ್ಯ. ೩–೮೦ ಸಹದಾಯಾದ ವಿಷಯದಲಿ–[ಸಮದಾಯ ಭಾಗದಲಿ](ಅ.ಕ.ಆಧರಿಸಿ[ದಾ]ಯಾದ್ಯ ಮಾರ್ಗದಲಿ ಆಗಬಹುದು; ತಿದ್ದು ಹೆಚ್ಚು). ೩–೮೪ ನೆರವಿಗದುವಾವಗೆಯ–ನೆರವಿಗದು [ಏ]ವಗೆಯ (ಪಾಠಕ್ಲೇಶ ಉಳಿದಿದೆ; ನೋ.ಕ.ಗ್ರಂ.ಸಂ. ಪುಟ೧೩೦). ೩–೮೬ ಚಾರಿ–[ತೀರು?] (ಪಾಠಕ್ಲೇಶ ಹೋಗಿಲ್ಲ; ಱ ಕಾರ ಪ್ರಾಸ ಬೇಕು). ೪–೧೦೨ ಕೇಸರಿ–ಕೇ[ಸು]ರಿ (೨ ಸರಿ). ೫–೧೦೨ ಕಷ್ಟವೆ ಗರುವೆಯಹುದೌ–ನೀ ನಿಷ್ಕರುಣಿಯಹುದೌ (ಪಾಠ ಸಂಯೋಜನೆ ಸಂಯೋಜನೆ ತೃಪ್ತಿಕರವಲ್ಲ; ನೋ.ಕ.ಗ್ರಂ.ಸಂ.ಪು.೧೩೧). ೫–೧೩೧ ಮೆತ್ತಿ–[ಎ]ತ್ತಿ (೧ ಕವಿಶೈಲಿಗೆ ಸಹಜ). ೫–೧೩೫ ಮಹೀಸುರನ ಮಾತಾಡಿಸಿದ ನಂದರಸ–[ಪ್ರವಾಸಿತಾ]ಧ್ವಶ್ರಮನ ("ಪರಾಸಿತಾಧ್ವಶ್ರಮನ" ಸಂಭಾವ್ಯ; ಪರಾಸ್ತ>ಪರಾಸಿತ; ನೋ. ಕ.ಗ್ರಂ.ಸಂ.ಪು.೧೩೧–೩೨). ೫–೧೪೫ ನುಡಿಸಿದನು ನರನ–ನರನ ತೆಗೆದೆಚ್ಚ (ಶ್ರೀ.ಸೂಚನೆಯನ್ನು ಗ್ರಹಿಸುವ ಅಗತ್ಯವಿರಲಿಲ್ಲ). ೬–೧೫೯ ಮೇಳವಣೆಗಳ ಪಾಟಿ–ಮೇಳವಣೆಗಳ ಪೇಟೆ ([ಖೇ]ಳವಣೆಗಳ ಪೇಟೆ; ಕ.ಗ್ರಂ.ಸಂ. ಪು–೧೩೨). ೬–೧೬೩ ಕಾಮಿಸಿದರೆಯು ನಿಮಿಷಕೆ–ಕಾಮಿಸಿದ[ಡೆನಿಮೇಷಕೆ](೧ ಸಂಭಾವ್ಯ; ಕಾಮಿಸಿದ[ಡೆ]ಯು ಇದ್ದೀತು; ಅರಣ್ಯ ೮–೧೦೩). ೬–೧೮೧ ಶರಾಸನಾಕರುಷಣದಿ–ಶರಾಸನಾಕ[ರ್ಷಣ]ದಿ (೧ ಕವಿಶೈಲಿಗೆ ಸಹಜ; ನೋ. ದೃಗುವಾರಿ, ಅರಣ್ಯ ೨–೮; ಲಾಭೋತ್ಕರುಷ, ಅರಣ್ಯ ಸೂ.೭; ಅಬುಜಿನೀ ರಮಣ, ಭೀಷ್ಮ ೮–೧).

ರೂಪ, ಅರ್ಥಗಳು : ೨–೧೯ 'ಸೂಱುಳ್' 'ಸೂರುಳ್' ಇರಬೇಕು; ೨–೩೭ "ಸೀಗುರಿ" ಚಾಮರವಲ್ಲ, ಒಂದು ವಿಧವಾದ ಛತ್ರಿ. ೫–೧೨೦ ತಗೆ=ಕವಿ,

೧೦ ಬರಿದೊರರೆಯಾಯ್ತು–ಬ[ರು]ದೊರೆಯಾಯ್ತು ಸಂಭಾವ್ಯ (ಇಲ್ಲಿಯೇ "ಕರಿಮೊಳೆ[ವೋ]ಯ್ತು ಭಯಬೀಜ" ಎಂದಿರುವುದನ್ನೂ ದ್ರೋಣ ೧–೨೦ರ "ನುಡಿಗೆ ಮೊಳೆ ಹೊಮ್ಮುತಿದೆ" ಎಂದಿರುವುದನ್ನು ಗಮನಿಸಿ ಆದಿ ೧೦–೧೮ರ ಪಾಠವನ್ನು ಪುನಾರಚಿಸುವುದು ಸಾಧ್ಯವೇ ಎಂದು ನೋಡಬಹುದು). ೧–೫೭ ಮಾಯವೇಷ–ಮಾ[ಯೆ]ವೇಷ (ಬಹುಶಃ ೨ ಸರಿ). ೨–೭೨ ಕರ್ಣ ದುಶ್ಶ್ಯಾಸನ–[ಶಲ್ಯ] ದುಶ್ಶ್ಯಾಸನ (೩ನೆಯ ಪಾದದಲ್ಲಿ 'ಕರ್ಣ' ಎಂದಿರುವುದರಿಂದ ಇಲ್ಲಿ ತಿದ್ದು ತಂದಿರಬಹುದು; ಆದರೆ ಅದು ಅನಾವಶ್ಯಕ). ೨–೧೧೨ ನಾಟಕವಿದ್ಯವಲ್ಲೆಂದ–ನಾಟ್ಯದ ವಿದ್ಯೆಯಲ್ಲೆಂದ (೧ಸಂಭಾವ್ಯ; ನಾಟಕ =ನಾಟ್ಯ). ೨–೧೨೩ ಗಾಂಡಿವವ ಜೇವಡಿಸಿ–ಗಾಂಡೀವ[ವನು ಮಿಡಿದು] (ಗಾಂಡೀವ, ಗಾಂಡಿವ ಎರಡೂ ಸಾಧುರೂಪಗಳೇ; ನೋ. ಕರ್ಣ ೨೪–೨೪;೧ ಸರಿ; ತಿದ್ದು ಅನಗತ್ಯ).

ರೂಪ, ಅರ್ಥಗಳು : ೨–೭೫ ಧೂಳಿಗೋಟೆಯ ಕೊಂಡರು–ಸತ್ತು ಸ್ವರ್ಗಸ್ಥರಾದರು ಎಂದು ತಿಳಿದರೆ ಸಾಕು.

ಉದ್ಯೋಗ : ೩–೮೦ ಹೊರವಂಡುತ್ತ–[ತಾ ಹೊರವಡುತ] (ಶಬ್ದರೂಪ ವಿಲಕ್ಷಣವಾಗಿ ತೋರಿದರೂ ಮೊದಲಿನದೇ ಸಂಭಾವ್ಯ; ಪೊರಮಡು>ಹೊರ–ವ[ಂ]ಡು). ೩–೮೫"ಅರೆವು ಮಯಣಾಮಯದ..." ಒಂದು ಪಾಠಕ್ಲೇಶದ ಭಾಗ; ಪರಿಷ್ಕಾರ ಪೂರ್ತಿ ತೃಪ್ತಿಕೊಡುವಂತಿಲ್ಲ (ನೋ. ಕ.ಗ್ರಂ.ಸಂ. ಪು–೨೧೯–೧೦).೩–೧೧೧ ಈ ಕೃಪನನೀ–ಈ ಕೃಪನ[ಈ] (೨ನೆಯದು ಬಹುಶಃ ಸರಿ). ೪–೧೭೧ ವಿಜಯನಗಡುಬಾಣಕೆ–ವಿಜಯನ [ಅಡಗ] ಬಾಣಕೆ (ಎರಡೂ ಸಂಭಾವ್ಯಗಳಾಗಿ ತೋರುವುದಿಲ್ಲ; ಅ.ದ "ಪಾಂಡವರಡಗು ಬಾಣಕೆ" ಪರಿಶೀಲನಾರ್ಹ; "ಅಡಗುಬಾಣ" ಕವಿಶೈಲಿಗೆ ಸಹಜವಾದುದು). ೪–೧೭೬ ವಿಸಸನದ ಕಟ್ಟಾಳು–ವಿಶಸನದ ಕಟ್ಟಾಳು (ಸ–ಶ ಪ್ರಾಸ ಸಾಧ್ಯ; ೨ ಸಂಭಾವ್ಯ; ವಿಶಸನ–ಯುದ್ಧ; ನೋ. ಪಮಪಭಾ.೧೨–೬ ವ.; ನೋ. ಕ.ಗ್ರಂ.ಸಂ. ಪು.೧೩೩).

ರೂಪ, ಅರ್ಥಗಳು : ೩–೯೬ ಜಠರದಗ್ರಿಯರು–ಹೊಟ್ಟೆಮುಂದಾಗಿರುವವರು ಎಂದಿದೆ; ಆದರೆ "ಹಿಗ್ಗಿದ ಜಠರದ" ಎಂಬುದರಲ್ಲಿ ಅದು ವಿವಕ್ಷಿತ. "ಅಗ್ರಿಯರು' ಎಂಬಮಾತಿಗೆ ಇದು ವಿಶೇಷಣ. ಅಗ್ರಿಯರು–ಶ್ರೇಷ್ಠರು, ಪ್ರಥಮವರ್ಣದವರು. ೩–೧೪೫ "ಮೋಹು""ಮೋದು"ವಿಗೆ ಸಂಬಂಧಿಸಿಲ್ಲ; ಮೋಪು>ಮೋಹು ಸೋಕು, ಸ್ಪರ್ಶಿಸು. ೫–೧೮೬ ಪತಿಕರಿಸು–ಎದುರಿಸು(?) ಅಲ್ಲ; "ಕುಳವರಿದವರ ಪತಿಕರಿಸಿ" ಎಂಬುದನ್ನು ಒಪ್ಪಿ, ಅದಕ್ಕೆ

(ಧಾ.ಆನ್/ಆನು: ಆಂತುದು>ಅತುದು). ೬–೧೮೫ ಮಾದುದು (ಮಾಯ್–ಧಾ.) ಕಣ್ಮರೆಯಾಯಿತು, ಅದೃಶ್ಯವಾಯಿತು ಎಂದಿದೆ; ಆದರೆ ತಪ್ಪಿತು, ನಿಂತಿತು, ತಡೆಗೊಂಡಿತು ಎಂದು ಆಗಬೇಕು (ಧಾ.ಮಾಣ್: ಮಾಣ್ದುದು>ಮಾಂದುದು>ಮಾದುದು); ಆದರೆ ಉದ್ಯೋಗ ೪–೧೮೪ರಲ್ಲಿ ಸರಿಯಾಗಿ ಗುರುತಿಸಿದೆ.

ಅರಣ್ಯ : ೨–೧೭ ಹಾದರವಿಲ್ಲದಂತಿರೆ–ಬಾಧಕವಿಲ್ಲದಂತಿರೆ (ಕವಿಶೈಲಿಗೆ ೧ ಸಹಜ; ಸರ್ವತ್ರ ಪಾಠವೂ ಇದೇ). ೨–೩೦, ೩೧ [ವಿಕಾರದಲಿ], [ಯಿವನಾರೋ] ಸಂಗ್ರಹದ ಸೌಕರ್ಯಕ್ಕೆ ಮಾಡಿರುವಂತಿದೆ; ಆದರೆ ತಿದ್ದು ಅನಗತ್ಯ. ೨–೩೩ ಭವತ್ತಪೋವನ ನೆರೆ–ಭವತ್ತಪೋವನ[ವೆ]ರೆ (೧ ಸರಿ; ನೆರೆ=ಮೀಸಲು, ಸೇವೆ, ಭೋಗ ಅನುಭವಕ್ಕೆ ಬಿಟ್ಟುದು; ನೋ.ಕ.ನಿ., ಪು.೪೯೫೬).೨–೪೯ ಉತ್ತರಾರ್ಧ ಬಹುಶಃ "ನೋಂಯೆ ನೊಂದನು ಮೀರಿ ಮುನಿದಡಪಾಯವಾದುದೆಯಕಟಕಟ". ೨–೭೫ "ಕುಲಾಲಚಕ್ರದಪರಿ ಬವಣಿಗೆಯ ಪಾಡಿನಲಿ" ಎಂಬುದಾಗಿ ಪಾಠವೂ ಪರಿಚ್ಛೇದವೂ ಇದ್ದೀತು. ೩–೧೦೪ ಏನು ಬಿಜಯಂಗೈದಿರಿತ್ತಲು–ಏ[ನಿ] ಬಿಜಯಂಗೈದಿರಿತ್ತಲು (೨ರ ಆಯ್ಕೆ ಸರಿ; ಪ್ರತಿಗಳ ಸಮರ್ಥನೆಯುಂಟು; ಆದ್ದರಿಂದ ತಿದ್ದು ಅನಗತ್ಯ). ೫–೧೬೪ ತೋರಬೇಕೆಂದ–ತೋರಬೇಕೆಂ[ದು] (೨ ಸರಿ). ೬–೨೩೩ ಲೋಗನೇ ತಾನೆನುತ–ಲೋಗನೇ[ನಾ]ನೆನುತ (ಪ್ರ.ಪು.ರಚನೆ ಸಹಜವಾದ್ದರಿಂದ ೧ ಸರಿ).

ರೂಪ ಅರ್ಥಗಳು : ೨–೩೪ ಪಾರಿವದ–ಹಸುರಿನ(?); ಆದರೆ "ಪಾರಿವಾಳದ ಬಣ್ಣದ" ಎಂದು ಡಿ.ಎಲ್.ಎನ್. (ಪಂಪದೀ. ಪು.೩೪೦). ೨–೩೫ "ಬೆಳ್ಫಾಲವಲೆಗಳ ಮಯಣದಂಟಿನ" ಎಂಬ ಪ್ರಚಲಿತ ಪಾಠವೇ ಹೆಚ್ಚು ಸಂಭಾವ್ಯ. ಪ್ರಾಸಕ್ಕಾ "ಬೆಳ್ಫಾರ""ಬೆಳ್ಫಾಲ' ಆಗಿರಬೇಕು. ಬೆಳ್ಫಾರವಲೆ–ಒಂದು ಬಗೆಯ ಬಲೆ ಎಂಬ ಗ್ರಹಿಕೆಯೇ ಸೂಕ್ತ. ೩–೮೬ "ಕೂಳಿಗಳ" ಸ್ವೀಕಾರ ಅಂತಸ್ಸಂಭಾವ್ಯತೆಯ ದೃಷ್ಟಿಯಿಂದ ಸಮರ್ಥನೀಯ; (ಮೀನು ಹಿಡಿಯುವ) ಬುಟ್ಟಿಗಳು ಎಂದು ಅರ್ಥ' "ಕರ್ಮದ ಕೂಳಿಗಳು" ಒಂದು ರೂಪಕ. ೫–೧೭೩ ತಲಿ ಕಟಕಟೆಯಲ್ಲ; ಮರದ ದಿಮ್ಮಿಗಳಿಂದ ರಚಿಸಿದ ಸುತ್ತುಗೋಡೆ (ನೋ.ಬರಡಗೆ, ಡಿ.ಎಲ್.ಎನ್., ಪ್ರ.ಕ. ೪೨–೧). ೫–೧೮೬ ಮೈಗುಡಿಯಿಡಿದ–ಪುಲಕವೆದ್ದ. ೬–೨೩೦ ಅವನಿಪ ಬಂಧ ಕೃತಿ – "ಜಯದ್ರಥನಿಂದ" ಎಂಬೆಡೆ "ಚಿತ್ರಸೇನನಿಂದ' ಎಂದಿರಬೇಕು.

ವಿರಾಟ : ೧–೪ ಕಟ್ಟಲೇರಿದರು – ಕಟ್ಟಿ ನೇರಿದರು (೨ ಸರಿ.) ೧–

೯೫ ದಂತಶ್ರೇಣಿತವೆ ಪಾವನವೆ – ದಂತಶ್ರೇಣಿಯಾ ಬಾಚಣಿಗೆ (೧ ಸಂಭಾವ್ಯ). ೩–೯೬ ಉಡಿಗೆಯಳಿದನ–ಉಡಿಗೆ[ಯೆಳೆ]ದನ (ಆ.ದ. "ಉಡಿಗೆಯುಡಿದನ" ಸಂಭಾವ್ಯ). ೪–೧೧೩ ಹಡಪಿಗ ಚಮರಬಾಹೆಯ–ಹಡಪಿಗ ಚಮರ[ವಾ]ಹಿಯ (ಆ.ದ. ಹಡಪಿಗ ಚಮರ ಚಾಹಿಯ ಸಮರ್ಥನೀಯ; ಇತರತ್ರ ಶಲ್ಯ ೧–೮, ಗದಾ ೨–೨. ೩–೧೬ ರಲ್ಲಿ ಮತ್ತು ಪಂಪಭಾ. ೪–೮೭ರಲ್ಲಿ "ಚಾಹಿ" ರೂಪವುಂಟು. ಚಾಹಿ=ಛತ್ರಿ ಎಂದು ಬಹುಶಃ ಅರ್ಥ. ನೋ.ಕನಿ. ಪು.೨೮೧೦). ೪–೧೬೬ ಚಕ್ಷುಶ್ರವನಿವನು–ಚಕ್ಷುಶ್ವನ ಸುತ (೧ ಸರಿ; ಚಕ್ಷುಶ್ರವ–ತಕ್ಷಕನ ಮಗ ಎಂಬುದಕ್ಕೆ ಆಧಾರ? ಚಕ್ಷು ಶ್ರವ=ಹಾವು). ೪–೧೮೬ ಆಳಿವನಘಾಟವೆ–ಆಳುತನದಾಟವ (೧ ಸರಿ; ಅಘಾಟ ಕಠಿನಪಾಠ; ಗದಾ ೫–೫೦ರಲ್ಲಿ ಸಹ ಬಂದಿರುವುದರಿಂದ ಅಂತಸ್ಸಂಭಾವ್ಯತೆಯೂ ಉಂಟು. ಈ ವ್ಯಕ್ತಿಯೇನು ಅತಿಶಯವಾದವನೇ? – ಎಂದು ಅರ್ಥ).

ರೂಪ, ಅರ್ಥಗಳು : ೩–೮೯ ಸುರಿದು–ಹೊಯ್ದುಕೊಂಡು; ಆದರೆ ಸುರಿ–ಲೇಹನೇ (ಶಮಧಾ) ಎಂದಿರುವುದರಿಂದ ನೆಕ್ಕು, ಚಪ್ಪರಿಸು ಆಗಬೇಕು. ೩–೧೦೯ ಸರಿಗೇರಿದ, ಕಳನೇರಿದಾತನ ಇವುಗಳಲ್ಲಿ "ಏರು" ಎಂದು ರೂಪವಿರಬೇಕು. ೪–೧೬೭ ನೀರಿಳಿಸುವೆನು ನೆತ್ತರಲಿ–ಧಾರಾಕಾರವಾಗಿ ರಕ್ತವನ್ನು ಸುರಿಸಿಬಿಡುತ್ತೇನೆ(?); ಆದರೆ ರಕ್ತದಲ್ಲಿ ಸೂಕಸ್ನಾನ ಮಾಡಿಸುತ್ತೇನೆ ಎಂದರ್ಥ (ನೋ. ಪಂಪಭಾ.೧೨–೨೨೦; ಗದಾಯು. ೬–೨೮ ವ). ೪–೧೬೭ ಆಯತಿಕೆ – ಅವಕಾಶ(?); ಗೌರವ, ಯೋಗ್ಯತೆ, ಸಾಮರ್ಥ್ಯ ಎಂದು ಆಗಬಹುದು. ೪–೧೭೫ ಪಂತದ ಪಾಡು–ಹೋರಾಟದ ಸ್ಥಿತಿಗತಿ, ನಿಯಮ ಎಂಬುದಕ್ಕಿಂತ ನಡೆವಳಿಕೆ, ಪದ್ಧತಿ ಅಥವಾ ಧರ್ಮದ ರೀತಿ ಸೂಕ್ತ (ನೋ. ಕನಿ. ಪು.೫೦೬೦–೬೨).

ಶಲ್ಯ : ೧–೨೧ ಮಹಾರಥರ–ಮಹಾರಥ[ರು] (ತಿದ್ದು ಅನಗತ್ಯ). ಹೊದರು ತಳಿತುದು–ಹೆದರಿ ಹೊಕ್ಕರು (೧ ಸರಿ; ಕವಿಶೈಲಿಗೆ ಸಹಜವಾದ್ದು, "ಸೈನ್ಯ ಮತ್ತೆ ಒಗ್ಗೂಡು" ಎಂಬುದು ಆಶಯ; ಇದರ ಪ್ರತಿಶಬ್ದ "ಹೊದರ ಹರೆಗಡಿ" ಎಂದು: ನೋ. ಗದ ೨–೨೬), ಲಗ್ಗೆವರೆ ಮೌನದಲಿ–ಲಗ್ಗೆ ವರಮೌನದಲಿ (೧ ಸರಿ).

ರೂಪ, ಅರ್ಥಗಳು : ೧–೫ ಬೊಪ್ಪನ ಭಾವ–ಪಾಂಡುವಿನ ಭಾವನಾದ ಶಲ್ಯ ಎಂದಾಗಬೇಕು (ಪಾಂಡು ಪತ್ನಿ ಮಾದ್ರಿ ಶಲ್ಯನ ಸೋದರಿ). ೧–೬ ನೆರವಣಿಗೆ–ಬೆಂಬಲ, ಸಹಾಯ(?); ಸಮಗ್ರತೆ, ಸಮಗ್ರಸಾಮರ್ಥ್ಯ ಎಂದು

"ಅಂಗೀಕರಿಸಿ, ಸಹಾನುಭೂತಿಯಿಂದ ಕಂಡು" ಎಂದು ಹೇಳಬಹುದು.

ಭೀಷ್ಮ : ೧–೪೫ ಅಹಿಂಸಾ ಪರಮಧರ್ಮವೆ–ಅಹಿಂ[ಸೆಯೆ] ಪರಮ ಧರ್ಮವು (ಅಹಿಂಸಾ ಪರಮೋ ಧರ್ಮಃ" ಎಂಬ ಸೂಕ್ತಿಯ ಉದ್ಧೃತಿಯೆಂಬುದರಿಂದ ೧ ಸಂಭಾವ್ಯ). ೧–೬೩ ಸಸಿದರಳೆ–ಸಸಿ[ದೆ]ರಳೆ (೧ ಸರಿ; ಧಾ.ಸಸಿ=ಕಾರ್ಪಾಸಶೋಧನ, ಹತ್ತಿಯನ್ನು ಎಕ್ಕುವುದು ಅಥವಾ ಬಿಡಿಸುವುದು. ಆದ್ದರಿಂದ ಸಸಿದರಳೆ–ಎಕ್ಕಿದ ಹತ್ತಿ. ನೋ.ಪಂಪಭಾ. ೩–೫). ೨–೬೮ ಬೆನ್ನಲೆವ–ಬೆನ್ನಗಿವ (೧ ಸಹಜ).೫–೧೪೦ ನಮಗೆ–[ನ]ನಗೆ (ಬಹುಶಃ [ತ]ನಗೆ).

ರೂಪ, ಅರ್ಥಗಳು : ೧–೨೫ ಸರಳಿಸು–ವ್ಯರ್ಥಮಾಡು,ಲಘುವಾಗಿ ಪ್ರಯೋಗಿಸು; ಆದರೆ ಬಾಣ ಹೂಡು, ಬಾಣ ಬಿಡು ಎಂದಾಗಬೇಕು. ಇದು ಕರ್ಣನ ಪ್ರತಿಜ್ಞೆಗೆ ಅನುಗುಣವಾದುದು. ೨–೭೮ ನಾಯಕವಾಡಿಗಳು–ಬಹುಶಃ ದಳಪತಿ, ಸೇನಾನಾಯಕ ಇರಬೇಕು; ನೋ. ದ್ರೋಣ ೫–೨೫ (ನೋ. ಕನಿ., ಪು.೪೪೯). ೫–೧೨೨ ಬಾಣ–ಬಾನು, ಆಕಾಶ ಬಹುಶಃ ಸರಿಯಲ್ಲ; ರೂಢಿಯ ಅರ್ಥವೇ ಸಾಕು; "ಬಾಣದ ಮುಗಿಲು" ಒಂದು ರೂಪಕ.

ದ್ರೋಣ : ೧–೧ ಊಹೆದೆಗಹು–ಊಹೆದೆಗಹು (ಊಹೆ[ದ]ಗಹು ಸೂಕ್ತ). ೨–೬೭ ತೊಡೆಯೊಳೊದರಿಸುತ–ತೊಡೆಯೊಳೊದರಿಸುತ (ತೊಡೆಯೊಳೊದ[ವಿ]ಸುತ ಸೂಕ್ತ). ೨–೯೬ ವೀರ ನಿರ್ವಹಣ–ವೀರ[ನಿರ್ವಹಣ] (ಸಂ. ಚಿಹ್ನಗಳು ಬೇಕಾಗಿಲ್ಲ; ಅರ್ಥದಲ್ಲಿ ಪ್ರಶ್ನೆಯಿದೆ. ಆದರೆ "ಅಂತ್ಯ, ಕೊನೆ, ಸಾವು" ಎಂದು ಇಟ್ಟು, "ವೀರನು ಸಾಯುವುದು ವಿಪತ್ಕರವೇನಲ್ಲ" ಎಂದು ಹೇಳಬಹುದು.

ರೂಪ, ಅರ್ಥಗಳು : ೨–೪೪ ಕೆತ್ತುಕೊಳ್ಳು–ಅಡ್ಡಗಟ್ಟು, ತಡೆಗಟ್ಟು(?); ಆದರೆ ಕವಿದಿರು, ಮುಚ್ಚಿಕೊಂಡಿರು (ಧಾ. ಕಿರು>ಕೆತ್ತು) ಆಗಬಹುದು. ೨–೪೭ ಸಾಧು (=ಸಾದು) ಜವಾಜಿ ("ಸಾಧು" ಅಪಲಿಖಿತ; ಸಾಂದು>ಸಾದು). ೨–೭೬

ಕರ್ಣ : ೨–೨೯ ವರನಿಭಾರಿಯ ಬಳವಿನಲಿ–ವರನಿಭಾರಿಯ ಬಿಳಿದಿನಲಿ ("ವರ ನಿ[ಖಾ]ರಿಯ ಬಿಳಿದಿನಲಿ" ಸಂಭಾವ್ಯ. ಮರಾ. ನಿಖಾರಿ=ಬಿಳಿಯ ವಸ್ತ್ರ. ಕವಿಯ ಇತರ ಪ್ರಯೋಗಗಳಿಗೆ ನೋ. ಕನಿ. ಪು.೪೫೪೮, ೪೬೨೨). ೩–೭೪ ಬಿರುದುಗಹಳೆಯ ದನಿಯ ಘಾಯದ–ಬಿರು[ಬು]ಗಹಳೆಯ ದನಿಯಘೂಟದ (ಪಾಠ "ಬಿರುದುಗಹಳೆಯ ದನಿಯ[ಘಾ]ಟದ" ಎಂದು ತೋರುತ್ತದೆ.) ೩–

೫-೧೧೯ ಉಕ್ಕಡಕೆ ಕಳವಳಿಸಿ ಹಾಯಿದರೊಮ್ಮೆ-ಉಕ್ಕದಕೆ ಕಳವಳಿಸಿ ಹೊಯ್ದರದೊಮ್ಮೆ (೧ ಸರಿ; ರಚನೆ ಸಹಜ). ಮತ್ತಂತೆಲೆ ಮಿಡುಕದಾಲಿಸಿ-ಮತ್ತಂ ತಲೆಮಿಡುಕದಾಲಿಸಿ (೧ ಸರಿ; ನೋ. ದ್ರೋಣ ೧೭-೧೨; ಅಲ್ಲದೆ ಪಂಪಭಾ. ೬-೫೯ ವ., ಧರ್ಮಾಮೃ ೩-೯೨, ಯಶೋಧ ೪-೭, ಕುರಾಸಾಂ. ೨-೯೬, ಎಇ-xvi, ೩೨೯). ೫-೧೨೩ ಕಗ್ಗೊಲೆ-ಕ[ಳ್ಗೊ]ಲೆ (೧ ಸರಿ; ನೋ. ಆದಿ ೯-೩೨, ದ್ರೋಣ ೧೭-೧೨, ಗದಾ ೯-೭). ೫-೧೨೬ ಇಲ್ಲಿ ಪ್ರಚಲಿತ ಪ್ರತಿಗಳ ಪಾಠವಾದ "ಪೂತ್ಕೃತಿಯ ನಾಸಾಪುಟದ, ವೈಕಕ್ಷಕದ ವಿಷಧರ ಪತಿಯ ವಾಸುಗಿಯ" ಎಂಬುದೇ ಉಚಿತವಾದ ಪಾಠವೆಂದು ತೋರುತ್ತದೆ. "ವೈಕಕ್ಷಕದ" ಕಠಿನ ಪಾಠವಾದ್ದರಿಂದ ಸ್ವೀಕಾರಯೋಗ್ಯ. ಸಂಸ್ಕೃತ ಮೂಲದಲ್ಲಿ "ನಾಗಯಜ್ಞೋಪವೀತಿನಮ್" ಮತ್ತು "ತಸ್ಯಾಸ್ಯಾನ್ನಾಸಿಕಾಭ್ಯಾಂ ಚ.. ಪ್ರಾದುರಾಸನ್ಮಹಾರ್ಚಿಷಃ" ಎಂಬ ಮಾತುಗಳ ಅನುವಾದವನ್ನಿಲ್ಲಿ ಕಾಣಬಹುದು (ಸೌಪ್ತಿಕ. ೬-೪, ೮). ೬-೧೬೮ ಹೊಲಸಿದ-ಹೊಲಸಿ[ನ] (ಪೊಲೆ+ಸು="ಪೊಲಸು" ಧಾತುವಾಗಿ ೧ರಲ್ಲಿ ಬಳಸಿದಂತಿದೆ). ೭-೧೮೩, ೮೪ ಪ್ರಚಲಿತ ಪ್ರತಿಗಳಲ್ಲಿಲ್ಲದಿರುವುದರಿಂದ ಬಿಡಬಹುದಾಗಿತ್ತು.

ರೂಪ, ಅರ್ಥಗಳು : ೨-೯ ಎಡಹುದರೆ-"ಕಾಲಿಗೆ ತೊಡರಿಕೊಂಡು ಮುಗ್ಗರಿಸಿ ಬೀಳುವಂತೆ ಮಾಡುವ ರುಂಡಗಳು" ಎಂದಿದೆ; ಆದರೆಎಡಹುವಿಕೆ, ಅಡಚಣೆ ಎಂಬರ್ಥದಲ್ಲಿ ಎಡಹು+ದಲೆ ಎಂದಾಗಿದೆ. "ದಲೆ" ಭಾ.ನಾ. ಪ್ರತ್ಯಯ (ನೋ. ಡಿ.ಎಲ್.ಎನ್., ಪೀಲೇ., ಪು.-೭೯೫). ೨-೧೪ ಜಂಗಳವ ಜಾರು-ಕೃಶವಾಗುವಿಕೆ(?); ಆದರೆ ಓಡಿಹೋಗು, ಪಲಾಯನಮಾಡು ಇದ್ದೀತು. (ಸಂ. ಜಂಘಾಲ>ಜಂಗಲ/ಜಂಗಳ; ನೋ. "ಜಂಘಾಳತನ" ಕರ್ಣ ೧೬-೨೧). ೨-೧೭ ಲಜ್ಜೆಯಭಿಮತ ಜಾತಿಗೆಡದು-(?); ಆದರೆ ಅಭಿಮಾನ, ಆತ್ಮಗೌರವ ತಮ್ಮತನವನ್ನು ಬಿಡವು. ೨-೨೬ ಸುಶರ್ಮ-"ತ್ರಿಗರ್ತದೇಶದ ರಾಜ" ಸರಿ; ಆದರೆ "ಕರ್ಣನ ಮಗ(?)" ಎಂಬುದಕ್ಕೆ ಆಧಾರವಿಲ್ಲ, ಬಿಡಬಹುದು. ೨-೨೭ ಭೂತನಿಕರ-"ಪಿಶಾಚಿಗಳ ಸಮೂಹ" ಎಂಬರ್ಥವೇ ಸಂಗತ. ೩-೪೨ ಬೇಳಂಬ-ಉಪಹತಿ, ಹೊಡೆತ" ಎಂದಿದೆ; ಆದರೆವಿಡಂಬನೆ, ಅಪಹಾಸ್ಯ ಸೂಕ್ತ. ೩-೪೬ ತಿಗುರ ತವಕ- "(ಸುಗಂಧದ್ರವ್ಯವನ್ನು) ಲೇಪಿಸುವಲ್ಲಿ ಆತುರ" ಎಂದಿದೆ; ಆದರೆ 'ಗೆಲಿದನು ತಿಗುರತವಕದಲಿ" ಎಂಬುದರ ಆಶಯ "ಉತ್ಸಾಹದಿಂದ ಲೇಪನದ್ರವ್ಯಗಳನ್ನು ಹಚ್ಚಿಕೊಂಡನು" ಎಂದು. ೪-೫೬ ಬಿಡೆಯರಿದು-"(ಕದನ ಭೂಮಿಯಲ್ಲಿ ಗದಾಯುದ್ಧಕ್ಕೆ) ಬಿಡಬೇಕಾದ ಸ್ಥಳವನ್ನು ಅರಿತುಕೊಂಡು" ಎಂದಿದೆ;

ಗ್ರಾಹ್ಯ. ೧–೧೦ ಕಳಶಸಿಂಧ–ಸಂದೇಹದೊಂದಿಗೆ ಅರ್ಥ ಸೂಚಿಸಿದೆ; ಸಂಸ್ಕೃತಭಾರತದಲ್ಲಿ ದ್ರೋಣನಿಗೆ ಯಜ್ಞವೇದಿಯನ್ನು ಧ್ವಜವಾಗಿ ಹೇಳಿದೆ; ಕುಮಾರವ್ಯಾಸ ಪಂಪನನ್ನು ಅನುಸರಿಸಿ (ಕುಂಭಧ್ವಜ: ಪಂಪಭಾ.೧೧–೫೬) ದ್ರೋಣನನ್ನು "ಕಳಶಸಿಂಧ" ಎಂದಿರುವಂತೆ ತೋರುತ್ತದೆ.

ಗದಾ : ೨–೨೦ ಚಮರ ಚಾಹಿ–ಛತ್ರ ಚಾಮರ (೧ ಸರಿ; ನೋ. ಕರ್ಣ ೪–೧೧೩ರ ಟಿಪ್ಪಣಿ). ೨–೧೩ ಉಸುರುದೆಗಹಾದುದೆ–ಉಸುರುದೆಗೆವಂತಾಯ್ತು (ಬಹುಶಃ ಪಾಠ "ಉಸುರು[ದ]ಗಹಾದುದೆ"; ಉಸಿರು ನಿಲ್ಲುವಂತಾಗು, ಉಸಿರು ಸಿಕ್ಕಿಕೊಳ್ಳು : ಉಸುರು+ತಗಹು+ಆಗು). ೨–೧೫ ನಿರರ್ಥಕೆ ಒದರಿದಡೆ–ನಿರರ್ಥಕೆ ಒದರದಿರು (ಬಹುಶಃ ಪಾಠ ಆ.ದಂತೆ: ನಿರರ್ಥಕಕೊದರದಿರು. ಇದು ಕವಿ ಶೈಲಿಗೆ ಸಹಜವಾದ್ದು. ನೋ. ದ್ರೋಣ ೧೪–೫, ಕರ್ಣ ೯–೧೭, ಗದಾ ೨–೨೭). ೨–೧೯, ೨೧ ಒಂದೇ ಆಶಯದವು; ಒಂದನ್ನು ಕೈಬಿಡಬಹುದಾಗಿತ್ತು. ೨–೩೦ ಧುರಪಥ–ಧುರಪಥ (ದರುಪದ : ಕ.ಗ್ರಂ.ಸಂ. ಪು.೧೯೧; ಬಹುಶಃ ದುರಪದ ಎಂದೂ ಇದ್ದೀತು. ಇದರ ಅರ್ಥ ನಾಂದಿ, ಪಲ್ಲವಿ; ಆಲಂ. ಆರಂಭ). ೩–೪೬ ಹೇರು–ಹೋರು (೨ ಸರಿ). ೩–೫೦ ಆಳ್ವೆವು–ಆ ಳೆ ವು (೧ ಸರಿ).೪–೫೯ ಪಾಂಡವ–ಪಾಂಡ[ವರು] (೧ ಸರಿ; "ಮಮ ಪ್ರಾಣಾ ಹಿ ಪಾಂಡವಾಃ" ಎಂಬುದು ಸುಕರಗೊಂಡಿದೆ ೧ರಲ್ಲಿ). ೪–೬೨ ನಿಲುಕಿದರು–[ತಳ]ಕಿದರು (ಬಹುಶಃ ಪಾಠ ತಲುಕಿದರು; ನೋ. ಅರಣ್ಯ ೯–೮೩; ತಳ್ಕು>ತಳುಕು). ೪–೬೫ ಘಟನೆಯೊಳು–ಘಟ್ಟಣೆಗೆ (೨ ಕವಿಶೈಲಿಗೆ ಅನುಗುಣ). ೪–೬೮ ಕುರುಪತಿಯ–ಕುರುಪತಿ[ಯು] (೨ ಬಹುಶಃ ಸರಿ). ೪–೭೯ ಸೂಚ್ಯಾಗ್ರ–ಸೂಚ್ಯಗ್ರ (೨ ಶುದ್ಧ). ಹಿಂದಣಪರಾಧವನು–ಹಿಂದಣಪಕಾರವನು (೧ ಬಹುಶಃ ಸರಿ). ಮಡದಿಂದ–ಮದದಿಂದ (೧ ಸರಿ; ನೋ. ೫–೧೧೦). ಕಳಚಿದನು–ಕಳೆದನಾ (೨ ಬಹುಶಃ ಸಹಜ). ೪–೯೪ ತೊಡೆಗಳ ಹಣಿದವಾಡಲಿ–ತೊಡೆಯಲಿ ಹಣಿದವಾಗಲಿ (೨ ಬಹುಶಃ ಸರಿ). ೫–೧೦೮ ಭಾರಿಸಿತಿದೇನು–[ಬಾರಿ]ಸಿತೇನು (೧ ಕವಿಶೈಲಿಗೆ ಸಹಜ; "ಭಾರಣೆಯೆನೆ ಬಲುಭಾರಂ" ಭಾರನಿ., ಪ.೫೯). ೫–೧೦೯ ವೇಢೆಯಲಿ–ವೇ[ಡೆ]ಯಲಿ (೧ ಕವಿಶೈಲಿಗೆ ಸಹಜವಾದ್ದು; ನೋ.೫–೧೧೬). ೫–೧೧೬ ವಾಗುರಿ–ವಾಗುರಿ (ಆ.ದ ವಾಗುರೆ ಗ್ರಾಹ್ಯ; ಸಂ.–ವಾಗುರಾ>ವಾಗುರೆ). ೫–೧೧೮ ಚಟುಳಪಟ–ಪಟುಳಪಣ (೧ ಸರಿ; ಕವಿಶೈಲಿಗೆ ಸಹಜವಾದ್ದು; "ಪಟುಳ" ರೂಪ ವಿಚಾರಾರ್ಹ; ಚಟುಳಪಣ=ವೇಗ, ತ್ವರೆ, ಚುರುಕು).

## (ಆ) ಪಾಠ ಪರಿಷ್ಕರಣ

ಕುಮಾರವ್ಯಾಸ ಭಾರತದ ಸಂಗ್ರಹವೊಂದನ್ನು ಪ್ರಕಟಿಸಬೇಕೆಂಬ ಆಸೆ ಪ್ರೊ॥ ಎಂ.ವಿ.ಸೀತಾರಾಮಯ್ಯನವರಿಗೆ ಬಹುಕಾಲದಿಂದಲೂ ಇತ್ತು. ಈ ಕಾರ್ಯ ಪ್ರತಿಷ್ಠಾನದ ಮೂಲಕವೇ ಆಗಬೇಕೆಂಬುದೂ ಅವರ ಹಂಬಲವಾಗಿತ್ತು. ಎಂ.ವಿ.ಸೀ.ಯವರ ಈ ಹಂಬಲಕ್ಕೆ ದೊಡ್ಡ ಬೆಂಬಲ ದೊರೆತದ್ದು ಪ್ರೊ॥ ಎಚ್.ಎಂ.ಶಂಕರ ನಾರಾಯಣರಾಯರ ಮೂಲಕ ಪ್ರತಿಷ್ಠಾನಕ್ಕೆ ದಾನವಾಗಿ ಬಂದ ಹಸ್ತಪ್ರತಿಯಿಂದ. ಇದು ಬಿ.ಎಂ.ಶ್ರೀ. ಮತ್ತು ಟಿ.ಎಸ್.ವೆಂಕಣ್ಣಯ್ಯನವರು ಜೊತೆಸೇರಿ ಮಾಡಿದ ಸಂಗ್ರಹವೆಂದು ಹೇಳಲಾದರೂ ಅಲ್ಲಲ್ಲಿ ಎ.ಆರ್.ಕೃ. ಮತ್ತು ಡಿ.ಎಲ್.ಎನ್. ರವರ ಕೈಬರಹವೂ ಇದೆ. ಇದನ್ನು ಮುಖ್ಯ ಆಧಾರ ಪ್ರತಿಯಾಗಿಟ್ಟುಕೊಂಡು ಈಗಾಗಲೇ ಪ್ರಕಟವಾಗಿರುವ ಹಾಗೂ ಪ್ರತಿಷ್ಠಾನದಲ್ಲಿ ಉಪಲಬ್ಧವಿರುವ ಓಲೆಗರಿ ಪ್ರತಿಯನ್ನು ಸೇರಿಸಿಕೊಂಡು ಗದುಗಿನ ಭಾರತದ ಸಂಗ್ರಹವೊಂದನ್ನು ಪ್ರತಿಷ್ಠಾನದ ಮೂಲಕ ಹೊರತರಬೇಕೆಂದು ತೀರ್ಮಾನಿಸಲಾಗಿತ್ತು.

ನಿಯೋಜಿತ ಸಂಗ್ರಹದ ಪ್ರಕಟನ ಕಾರ್ಯಕ್ಕೆ ರಾಜ್ಯ ಸರ್ಕಾರದ ಆರ್ಥಿಕ ನೆರವನ್ನು ಕೇಳತಕ್ಕದ್ದೆಂದು ಪ್ರತಿಷ್ಠಾನದ ಕಾರ್ಯಕಾರಿ ಸಮಿತಿ ನಿರ್ಣಯಿಸಿತ್ತಲ್ಲದೆ, ಸಂಗ್ರಹ ಕಾರ್ಯದ ರೂಪರೇಷೆಗಳನ್ನು ಗೊತ್ತು ಪಡಿಸಲು ಒಂದು ಸಂಪಾದಕ ಮಂಡಲಿಯನ್ನೂ ರಚಿಸಿತ್ತು. ವಿದ್ವಾಂಸರನ್ನೊಳಗೊಂಡಿದ್ದ ಈ ಮಂಡಳಿಯು ಒಂದೆರಡು ಸಲ ಸಭೆ ಸೇರಿ ಸಂಗ್ರಹ ಕಾರ್ಯಕ್ಕೆ ಮೂರ್ತರೂಪವನ್ನು ನೀಡಲು ಕೆಲವು ಸಲಹೆ ಸೂಚನೆಗಳನ್ನು ನೀಡಿತ್ತು. ಸರ್ಕಾರದಿಂದ ಯೋಜನೆಗೆ ಅನುಮೋದನೆ ದೊರಕದ ಕಾರಣ ಸಂಪಾದಕ ಮಂಡಲಿಯನ್ನು ವಿಸರ್ಜಿಸಬೇಕಾಯಿತು.

ಪ್ರೊ॥ ಎಂ.ವಿ.ಸೀತಾರಾಮಯ್ಯನವರು ಈ ಯೋಜನೆಯ ಗಾತ್ರ ಮತ್ತು ಸ್ವರೂಪವನ್ನು ಬದಲಾಯಿಸಿ ಕೇಂದ್ರ ಸರ್ಕಾರಕ್ಕೆ ಕಳಿಸಿದರು. ೧೯೮೭ರಲ್ಲಿ ಕೇಂದ್ರ ಸರ್ಕಾರ ಮಂಜೂರು ಮಾಡಿದ ಅನುದಾನದಿಂದ ಕುಮಾರವ್ಯಾಸ ಭಾರತದ ಈ ಸಂಗ್ರಹವನ್ನು ಪ್ರಕಟಿಸಲು ಸಾಧ್ಯವಾಯಿತು. ಯೋಜನೆಯ ಅವಧಿಯೊಳಗೇ ಕಾರ್ಯ ಮುಗಿಸಬೇಕಾಗಿದ್ದುದರಿಂದ ಎಂ.ವಿ.ಸೀ.ಯವರೇ ಸಂಪಾದನಾ ಕಾರ್ಯದ ಪೂರ್ಣ ಹೊಣೆ ಹೊತ್ತರು. ಮೊದಲು ಪದ್ಯಗಳ ಆಯ್ಕೆಯ ಕಾರ್ಯ ನಡೆಯಿತು. ಇದಕ್ಕಾಗಿ ಕುವೆಂಪು ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು

ಆದರೆ ಇಲ್ಲಿ "ಬಿಡೆ" ಚೆನ್ನಾಗಿ ಎಂಬರ್ಥದ ಅವ್ಯಯ. ೪–೬೨ಅಳವು (<ಅಳ್ವು<ಅಱ್ವು). ೪–೭೦ ಪಡವಾಗು–ವಶವಾಗು ಎಂದಿದೆ; ಆಶ್ರಯ, ನೆಲೆ ಅರ್ಥದ ಪಡವು+ಆಗು (ಹಿಂ. ಮರಾ. ಪಡಾವ್). ೫–೧೧೯ ತಲೆಮಿಡುಕದೆ– "ತಲೆಯಲ್ಲಾಡಿಸದೆ" ಎಂದಿದೆ; ನೋ. "ಎಲೆಮಿಡುಕು" ಟಿಪ್ಪಣಿ,೫–೧೩೯ ಸೋಮ ಪ್ರಬದ್ಧಕರು–(?); ಆದರೆ ಸೋಮಕರು ಮತ್ತು ಪ್ರಭದ್ರಕರು ಇಲ್ಲಿ ಉದ್ದೇಶಿತ (ನೋ. ಸೌಪ್ತಿಕ ೮–೪೪, ೪೬ ಇ.). ಸೋಮವಂಶದ ಕ್ಷತ್ರಿಯರಾಜರು ಇಲ್ಲವೆ ಪಾಂಚಾಲದ ಸೋಮಕರಾಜನ ವಂಶದವರು ಇಲ್ಲಿ "ಸೋಮ" ಆಗಿದೆ; ಬಹುಶಃ "ಪ್ರಭದ್ರಕರು" ಎಂಬುದರ ಅಪಲಿಖಿತ "ಪ್ರಬದ್ಧಕರು".ಪ್ರಭದ್ರಕರೂ ಪಾಂಚಾಲದೇಶದ ಕ್ಷತ್ರಿಯರು. ೫–೧೪೧ ಭೋಜ–ಕೃತವರ್ಮ. ಗೌತಮ (ಕೌರವ ಪಕ್ಷದ ಪುರೋಹಿತ (?) ಬೋಜ–ಕೃತವರ್ಮ ಎಂಬುದು ಸರಿ; ಇವನು ಭೋಜವಂಶದ ಹೃದಿಕನ ಮಗ; ವಂಶವನ್ನು ಹಿಡಿದು ಇಲ್ಲಿ ಭೋಜನೆಂದಿದೆ. ಗೌತಮ–ಕೃಪ; ಇವನು ಗೌತಮ ಗೋತ್ರದ ಶರದ್ವಂತನ ಮಗ; ವಂಶವನ್ನು ಹಿಡಿದು ಇಲ್ಲಿ ಗೌತಮನೆಂದಿದೆ. ೭–೧೭೮ ಮೇಲುವರ್ಣ–"ಬ್ರಾಹ್ಮಣ" ಎಂದಿರಬೇಕು.

ಮೈಸೂರು
೨೬–೮–೧೯೯೦

**ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ**
ಪ್ರಾಧ್ಯಾಪಕ,
ಕನ್ನಡ ಅಧ್ಯಯನ ಸಂಸ್ಥೆ,
ಮಾನಸಗಂಗೋತ್ರಿ, ಮೈಸೂರು–೬

ಇಂಥ ಕವಿಯ ಕಾವ್ಯವನ್ನು ಮೂಲಕ್ಕೆ ಅಪಚಾರವಾಗದಂತೆ ಸಂಗ್ರಹಿಸುವುದು ಕಷ್ಟ ಸಾಧ್ಯ. ಈಗಾಗಲೇ ಕುಮಾರವ್ಯಾಸ ಭಾರತದ ಅನೇಕ ಪರ್ವಗಳ ಸಂಗ್ರಹಗಳು ಪ್ರಕಟವಾಗಿದ್ದರೂ ಅವುಗಳಲ್ಲಿ ಹಲವು ವಿದ್ಯಾರ್ಥಿಗಳಿಗೆಂದು ಪಠ್ಯ ದೃಷ್ಟಿಯನ್ನಿಟ್ಟು ಕೊಂಡು ಮಾಡಿದ ಕಾರ್ಯವೆಂದರೆ ತಪ್ಪಾಗಲಾರದು. ಇಲ್ಲಿ ಶಾಸ್ತ್ರೀಯ ಸಂಪಾದನಾ ಕಾರ್ಯವನ್ನಾಗಲಿ ಸಮರ್ಪಕ ಸಂಗ್ರಹವನ್ನಾಗಲಿ ಅರಸುವುದು ಉಚಿತವಲ್ಲ. ಆದರೆ ಮುದ್ರಣಗೊಂಡಿರುವ ಬಿಡಿಪರ್ವಗಳು ಪಾಠಾಂತರಗಳನ್ನೊಳಗೊಂಡಿವೆ. ಅದೇನೇ ಇರಲಿ, ಕಾಲಕಾಲಕ್ಕೆ ಲಿಪಿಕಾರರ ಕೈಚಳಕದಿಂದ ಸ್ಥಿತ್ಯಂತರ ಪಡೆದಿರುವ ಪದ್ಯಗಳಲ್ಲಿ ಕವಿಯ ಪಾಠವನ್ನು ನಿರ್ಧರಿಸಲು ನಮ್ಮಲ್ಲಿ ಸಾಕಷ್ಟು ಸಾಧನಗಳು ಇಲ್ಲವೆಂದೇ ಹೇಳಬೇಕು. ಈ ದಿಸೆಯಲ್ಲಿ ಪ್ರಸ್ತುತ ಸಂಗ್ರಹವು ಒಂದು ತೋರುಬೆರಳಾಗಿರಬೇಕೆಂದು ಸಂಪಾದಕರು ಆಶಿಸಿದ್ದರು. ಜನಪ್ರಿಯ ಕವಿಯ ಶ್ರೇಷ್ಠ ಕಾವ್ಯಸುಧೆಯು ಜನಸಾಮಾನ್ಯರಿಗೂ ದೊರೆಯಬೇಕು, ಅಷ್ಟೇ ಅಲ್ಲ, ಇದು ಪಂಡಿತರಿಗೂ ಕಿಂಚಿತ್ ಪ್ರಮಾಣದಲ್ಲಿ ಉಪಯುಕ್ತ ಕೃತಿಯಾಗಿರಬೇಕೆಂಬುದೂ ಎಂ.ವಿ.ಸೀ. ಯವರ ಬಯಕೆಯಾಗಿತ್ತು.

ಈ ಸಂಗ್ರಹ ಕಾರ್ಯ ಪೂರ್ಣಗೊಳ್ಳಲು ಎರಡು ವರ್ಷಗಳು ಬೇಕಾದವು. ದಿನಕ್ಕೆ ಮೂರು–ನಾಲ್ಕು ತಾಸುಗಳ ಕಾಲ ಕೂತಾಗ ಏಳೆಂಟು ಪದ್ಯಗಳ ಪರಿಷ್ಕರಣವಾಗುತ್ತಿತ್ತು. ತೊಡಕುಗಳು ಸಂಭವಿಸಿದಾಗ ಇದರ ಸಂಖ್ಯೆ ಇಳಿಯುತ್ತಿತ್ತು. ಯಾವ ಆಧಾರವೂ ಇಲ್ಲದೆ ಕವಿಯ ಪಾಠವನ್ನು ತಿದ್ದಲು ಎಂ.ವಿ.ಸೀ.ಯವರು ಒಪ್ಪುತ್ತಿರಲಿಲ್ಲ. ಆಧಾರಪ್ರತಿಯಲ್ಲಿ ಅಲ್ಲಲ್ಲಿ ಕೆಲವು ತಿದ್ದುಪಾಟುಗಳನ್ನು ಸೂಚಿಸಿದ್ದರೂ ಎಂ.ವಿ.ಸೀ. ಯವರಿಗೆ ಆ ತಿದ್ದುಪಾಟನ್ನು ಒಪ್ಪುವುದು ಕಷ್ಟವಾಗುತ್ತಿತ್ತು. ಒಮ್ಮೊಮ್ಮೆ ಎರಡಕ್ಷರದ ಒಂದು ಪದದ ನಿರ್ಣಯಕ್ಕೂ ಹೆಚ್ಚಿನ ಕಾಲ ವ್ಯಯವಾಗುತ್ತಿತ್ತು. ಕನ್ನಡದ ಆಕರಗಳು ತೃಪ್ತಿಕೊಡದೆ ಹೋದಾಗ ಮೂಲ ಸಂಸ್ಕೃತ ಭಾರತವನ್ನೂ ಅವಲೋಕಿಸುತ್ತಿದ್ದರು. ಇಲ್ಲಿಯೂ ಸಮಾಧಾನಕಾರಕ ಅಂಶಗಳು ದೊರೆಯದಿದ್ದಾಗ ಪ್ರಶ್ನಾರ್ಥಕ ಚಿಹ್ನೆಯೊಂದಿಗೆ ಊಹಾಪಾಠ ಸಿದ್ಧವಾಗುತ್ತಿತ್ತು.

ಮೊದಲು ಒಂದು ಪದ್ಯದ ಕೆಳಭಾಗದಲ್ಲಿ ಪಾಠಾಂತರಗಳನ್ನು ಕೊಟ್ಟು ಆ ಪದ್ಯದ ಕಠಿಣ ಪದಗಳಿಗೆ ಅರ್ಥವನ್ನು ಕೊನೆಯಲ್ಲಿ ಕೊಡಬೇಕೆಂದು ತೀರ್ಮಾನಿಸಿದ್ದರೂ ಈ ಕ್ರಮವನ್ನು ಅನುಸರಿಸಲಾಗಲಿಲ್ಲ, ಪದ್ಯ ಪ್ರಕಟವಾಗಿರುವ ಪುಟದಲ್ಲೇ ಮೊದಲು ಪಾಠಾಂತರ, ಆನಂತರ ಅಲ್ಲೇ ಅರ್ಥಗಳನ್ನು ಕೊಡಬೇಕೆಂದು ತೀರ್ಮಾನಿಸಿದರು. ಸಾಮಾನ್ಯ ಓದುಗನಿಗೆ ಪಾಠಾಂತರಗಳ ಗೊಡವೆ ಬೇಕಿಲ್ಲ. ಆತನಿಗೆ ಬೇಕಾದುದು ಕಾವ್ಯ, ಅದರ ಭಾವಾರ್ಥ ಮತ್ತು ಅಂತರಾರ್ಥ.

ಸಂಪಾದಿಸಿರುವ ಕರ್ಣಾಟಕ ಭಾರತ ಕಥಾ ಮಂಜರಿ; ಪೇಟೆ ಮುದ್ರಣದ ಕೆಲವು ಪ್ರತಿಗಳು, ಕನ್ನಡ ಅಧ್ಯಯನ ಸಂಸ್ಥೆ ಬಿಡಿ ಬಿಡಿಯಾಗಿ ಪ್ರಕಟಿಸಿರುವ ಪರ್ವಗಳ ಪ್ರತಿಗಳನ್ನು ಅವಲೋಕಿಸಲಾಯಿತು. ಪ್ರತಿಷ್ಠಾನದ ಹಸ್ತಪ್ರತಿ ಭಂಡಾರದಲ್ಲಿರುವ ಓಲೆಗರಿ ಗ್ರಂಥವೂ ಸಹಾಯಕ್ಕೆ ಬಂದಿತು. ಅನಂತರ ಬಿ.ಎಂ.ಶ್ರೀ. ಮುಂತಾದವರಿಂದ ಭಾಗಶಃ ಸಿದ್ಧಪಡಿಸಲ್ಪಟ್ಟಿದ್ದ ಪ್ರಸ್ತುತ ಹಸ್ತಪ್ರತಿಯನ್ನೂ ಪರಿಶೀಲಿಸಲಾಯಿತು.

ಬಿ.ಎಂ.ಶ್ರೀ. ಯವರ ಸಂಗ್ರಹದಲ್ಲಿ ಪ್ರಾರಂಭದ ಪೀಠಿಕಾ ಸಂಧಿಯಲ್ಲಿ ಗಣೇಶನ ಪ್ರಾರ್ಥನಾ ಪದ್ಯವನ್ನು ಕೈಬಿಡಲಾಗಿದೆ. ಅಲ್ಲದೆ ಮೂಲದ ಗದ್ಯಾನುಕ್ರಮಣಿಕೆಯಲ್ಲಿ ಪದ್ಯಗಳು ಅಲ್ಲಲ್ಲಿ ಹಿಂದುಮುಂದಾಗಿವೆ. ಅಂದರೆ ಒಂದು ಪರ್ವದ ಸಂಧಿಗಳು ಪದ್ಯಗಳಲ್ಲಿ ಕೊನೆಯದು ಮಧ್ಯ ಬರುತ್ತದೆ, ಪ್ರಾರಂಭದ್ದು ಕೊನೆಯದಾಗುತ್ತದೆ. ಹೀಗೆ ಮಾಡಿದ್ದರೂ ಯಾವುದೇ ಅನೌಚಿತ್ಯ ಉಂಟಾಗಿಲ್ಲದಿರುವುದು ಶ್ರೀಯವರ ಅಗ್ಗಳಿಕೆ. ಒಮ್ಮೊಮ್ಮೆ ಒಂದು ಪದ್ಯದ ಸಾಲನ್ನು ಹೊಡೆದು ಅಲ್ಲಿ ಮತ್ತೊಂದು ಪದ್ಯದ ಸಾಲನ್ನು ಸೇರಿಸಿರುತ್ತಾರೆ. ಇಂಥ ಸಂದರ್ಭದಲ್ಲಿ ಅನೌಚಿತ್ಯ ಕಂಡುಬರುತ್ತದೆ. ಕವಿಪಾಠದ ನಿಷ್ಕರ್ಷೆಯ ಬಗ್ಗೆ ಅನುಮಾನ ಬಂದಾಗ ಸ್ವಾತಂತ್ರ್ಯವಹಿಸಿ ತಾವೇ ಒಂದು ಪಾಠವನ್ನು ಸೂಚಿಸುತ್ತಾರೆ. ಈ ಸೂಚನೆಗೆ ಯಾವುದೇ ಪ್ರತಿಯಲ್ಲೂ ಆಧಾರ ದೊರೆಯುವುದಿಲ್ಲ. ಘಟನೆಗಳಿಗೆ ಸಂಬಂಧ ಕಲ್ಪಿಸುವ ಸಲುವಾಗಿ ಒಂದು ಸಂಧಿಯ ಸೂಚನಾ ಪದ್ಯವನ್ನು ಮತ್ತೊಂದು ಸಂಧಿಯ ಸೂಚನಾ ಪದ್ಯದೊಡನೆ ಸೇರಿಸಿ ಇದನ್ನೆ ಸ್ವತಂತ್ರ ಪದ್ಯವೆಂದು ಪರಿಗಣಿಸಿದ್ದಾರೆ. ಒಮ್ಮೊಮ್ಮೆ ಪಾಠಸ್ವೀಕಾರ ಸಂದರ್ಭದಲ್ಲಿ ಅರ್ಥಪೂರ್ಣ ಟೀಕೆಗಳೊಡನೆ ತಮ್ಮ ಒಲವನ್ನು ವ್ಯಕ್ತಪಡಿಸಿರುವುದುಂಟು. ಆದರೆ ಬಹುತೇಕ ಸಂದರ್ಭಗಳಲ್ಲಿ ಯಾವ ಟೀಕೆಟಿಪ್ಪಣಿಯೂ ಇಲ್ಲದೆ ಸರಿ (v') ಗುರುತನ್ನು ಮಾತ್ರ ಹಾಕಿದ್ದಾರೆ. ಇಂಥ ಕಡೆಗಳಲ್ಲಿ ಆಗಾಗ ಆಭಾಸಗಳೂ ತಲೆದೋರಿವೆ. ಶ್ರೀಯವರು ಪರಿಶೀಲಿಸಿರುವ ಹಸ್ತಪ್ರತಿಯಲ್ಲಿ ಶಕಟರೇಫದ ಉಲ್ಲೇಖವಿಲ್ಲ; ಶಕಟರೇಫ ಇರಬೇಕಾದ ಕಡೆಗಳಲ್ಲಿ ರೇಫದ ಬಳಕೆಯಾಗಿದೆ. ಆದರೆ ಶ್ರೀಯವರು ಶಕಟರೇಫವನ್ನು ಸೂಚಿಸಿದ್ದಾರೆ. ಇದೊಂದು ಉತ್ತಮ ಸಂಗ್ರಹಕಾರ್ಯ. ಆದರೆ ಈ ಸಂಪಾದನಾಕಾರ್ಯ ಭೀಷ್ಮಪರ್ವದಿಂದ ಮುಂದಕ್ಕೆ ನಡೆದಿಲ್ಲ. ಇದನ್ನೇ ಆಧಾರ ಪ್ರತಿಯನ್ನಾಗಿ ಪರಿಗಣಿಸಿ ಇಲ್ಲಿನ ಅನೇಕ ಒಳ್ಳೆಯ ಅಂಶಗಳನ್ನು ಪ್ರಸ್ತುತ ಸಂಗ್ರಹದಲ್ಲಿ ಕೃತಜ್ಞತೆಯಿಂದ ಸ್ವೀಕರಿಸಲಾಗಿದೆ.

ಕುಮಾರವ್ಯಾಸ ಜನಪ್ರಿಯ ಕವಿಯೂ ಹೌದು, ಶ್ರೇಷ್ಠ ಕವಿಯೂ ಹೌದು.

ಪರಿಶೀಲಿಸಿದ್ದರು. ಮೂಲ ಸಂಸ್ಕೃತ ಭಾರತದ ಮೇಲೂ ಕಣ್ಣಾಡಿಸಿದ್ದರು. ಆದರೆ ಎಂ.ವಿ.ಸೀ. ಯವರ ಅಧ್ಯಯನ, ಯೋಚನೆಯ ಫಲ ಈ ಸಂಗ್ರಹಕ್ಕೆ ದೊರಕದಾಯಿತು. ಸಂಪಾದಕರಿಗೆ ಸಹಾಯಕರಾಗಿ ಕಾರ್ಯನಿರತರಾಗಿದ್ದಾಗ ಆಗಾಗ ನಡೆದ ಚರ್ಚೆ, ಪಾಠಾಂತರಗಳನ್ನು ನಿಷ್ಕರ್ಷಿಸುವಾಗ ತಲೆದೋರಿದ ಗೊಂದಲ, ಒಂದು ಪದಕ್ಕೆ ಅರ್ಥ ನಿರ್ಣಯಿಸಬೇಕಾದ ಸಂದರ್ಭದಲ್ಲಿ ನಡೆದ ವಾದವಿವಾದ ಇತ್ಯಾದಿ ಅಂಶಗಳನ್ನು ನೆನಪಿನಲ್ಲಿಟ್ಟುಕೊಂಡು ಎಲ್ಲವನ್ನೂ ದಾಖಲಿಸುವುದು ನಮ್ಮ ಮಿತಿಗೆ ಮೀರಿದ ಕಾರ್ಯವಾಗಿದೆ. ಅಲ್ಲದೆ ಈ ಪಾಲಿನ ಕರ್ತವ್ಯ ನಮ್ಮದಾಗುತ್ತದೆಂಬ ಕಲ್ಪನೆಯು ಲವಲೇಶವೂ ನಮ್ಮಲ್ಲಿರಲಿಲ್ಲ. ಸುಮಾರು ಎರಡು ವರ್ಷಗಳ ದೀರ್ಘ ಕಾಲ ಆ ಹಿರಿಯ ಪ್ರಬುದ್ಧ ಚೇತನದ ಸಮ್ಮುಖದಲ್ಲಿ ಕುಳಿತು ಮಹಾಕವಿಯ ಕಾವ್ಯದ ಒಳಗುಹೊರಗುಗಳಲ್ಲಿ ವಿಹರಿಸಿ ಅನಿರ್ವಚನೀಯ ಆನಂದವನ್ನು ಪಡೆದಿದ್ದೇವೆ. ನಮ್ಮ ಅನುಭವದ ಕೆಲವು ತುಣುಕುಗಳಿಗೆ ಅಭಿವ್ಯಕ್ತಿ ನೀಡಲು ಇಲ್ಲಿ ಯತ್ನಿಸಿದ್ದೇವೆ, ಅಷ್ಟೆ.

ಇಂಥ ಮಹತ್ಕಾರ್ಯದಲ್ಲಿ ನಾವೂ ಭಾಗಿಗಳಾಗಲು ಅವಕಾಶ ಮಾಡಿಕೊಟ್ಟಿದ್ದಕ್ಕಾಗಿ ಪೂಜ್ಯ ಎಂ.ವಿ.ಸೀತಾರಾಮಯ್ಯನವರಿಗೂ, ಪ್ರತಿಷ್ಠಾನಕ್ಕೂ ನಾವು ಆಭಾರಿಗಳಾಗಿದ್ದೇವೆ.

ಮುಖಪುಟದಲ್ಲಿ ಮುದ್ರಿಸಿರುವ ವೀರನಾರಾಯಣ ವಿಗ್ರಹ ಯಗಟಿಯ ದೇವಸ್ಥಾನದ್ದು. ಯಗಟಿಯಲ್ಲಿ ಕುಮಾರವ್ಯಾಸನ ಅಸ್ತಿತ್ವವನ್ನು ಕುರಿತು ಇತ್ತೀಚೆಗೆ ನಡೆದ ಚರ್ಚೆಯ ಹಿನ್ನೆಲೆಯಲ್ಲಿ ಸಂಪಾದಕರು ಪ್ರತಿಷ್ಠಾನದ ಲೋಚನದಲ್ಲಿ ತಮ್ಮ ಅಭಿಪ್ರಾಯವನ್ನು ನೀಡಿದ್ದ ಸಂದರ್ಭದಲ್ಲಿ ಈ ಪಡಿಯಚ್ಚನ್ನು ಮುದ್ರಿಸಿ, ಈ ಗ್ರಂಥದ ಮುಖಪುಟದಲ್ಲಿ ಮುದ್ರಿಸಬೇಕೆಂದು ಆಶಿಸಿದ್ದರು. ಈ ಭಾವಚಿತ್ರವನ್ನು ನಮಗೆ ಒದಗಿಸಿಕೊಟ್ಟ ತರೀಕೆರೆಯ ಮಾನ್ಯ ಮಿತ್ರರನ್ನೂ ನಾವು ಇಲ್ಲಿ ನೆನೆಯುತ್ತೇವೆ.

**ಎನ್.ಎಸ್. ರಾಮಸ್ವಾಮಿ ಅಯ್ಯರ್**
**ವಿ. ವೆಂಕಟರಾವ್**
ಸಂಪಾದಕೀಯ ಸಹಾಯಕರು

ಪದ್ಯವನ್ನು ಓದುವಾಗ ಒಂದು ಪದದ ಅರ್ಥ ತಿಳಿಯದೆ ಹೋದಾಗ ಓದುಗ ಪದದ ಅರ್ಥಕ್ಕಾಗಿ ಕೊನೆಯ ಪುಟಗಳನ್ನು ತಿರುವಿ ಹಾಕಬೇಕು. ಹೀಗಾದಾಗ ಓದುಗನಿಗೆ ಕಾಲವ್ಯಯದ ಜೊತೆಗೆ ರಸಭಂಗವಾಗುವ ಸಾಧ್ಯತೆಗಳೂ ಇರುತ್ತವೆ. ಆದ್ದರಿಂದ ಪದ್ಯ ಪ್ರಕಟಗೊಂಡಿರುವ ಪುಟದ ಅಡಿಭಾಗದಲ್ಲೇ ಮೊದಲು ಪಾಠಾಂತರ, ಆಮೇಲೆ ಅರ್ಥಗಳನ್ನು ಕೊಡುವುದು ಸೂಕ್ತವೆಂದು ಎಂ.ವಿ.ಸೀ.ಯವರು ಅಭಿಪ್ರಾಯಪಟ್ಟು ಆ ಕ್ರಮವನ್ನೇ ಕೊನೆಯವರಗೂ ಅನುಸರಿಸಿದರು.

ಗದುಗಿನ ಭಾರತದ ಅನೇಕ ಪದ್ಯಗಳ ಕೆಲವು ಪದಗಳಿಗೆ ನಿಘಂಟಿನ ಅರ್ಥ ಸರಿಹೊಂದುವುದಿಲ್ಲ. ಕೆಲವು ಸಾಲುಗಳು ಸುಲಭವಾಗಿರುವಂತೆ ಕಂಡರೂ ಅವನ್ನು ವ್ಯಾಖ್ಯಾನಿಸುವುದು ಕಷ್ಟಸಾಧ್ಯ. ಹಲವು ಪದಗಳಿಗೆ ಆ ಪದ್ಯದ ಹಿಂದುಮುಂದಿನ ಪದ್ಯಗಳನ್ನು ಪರಿಶೀಲಿಸಿ ಸನ್ನಿವೇಶವನ್ನು ಗ್ರಹಿಸಿ ಅರ್ಥವನ್ನು ನಿರ್ಣಯಿಸಬೇಕಾಗುತ್ತದೆ. ನಮ್ಮ ಬದುಕಿಗೆ ಹತ್ತಿರವಾಗಿರುವ ದಿನನಿತ್ಯದ ಸಂಗತಿಗಳೂ ಕವಿಯ ಕಾವ್ಯಜಾಲಕ್ಕೆ ಸಿಕ್ಕಿ, ಸಿಕ್ಕಾಗಿ ಕಂಡರೂ ಜಾಣ್ಮೆಯಿಂದ ಯೋಚಿಸಿದಾಗ ಅದರ ಸೊಗಸು ಮನದಟ್ಟಾಗಿ ಕವಿಯ ಪ್ರತಿಭೆಯ ಹೊಳವು ಶ್ರೀಸಾಮಾನ್ಯನಿಗೂ ಅವನವನ ಅನುಭವ, ಸಂಸ್ಕಾರಗಳಿಗೆ ಅನುಗುಣವಾಗಿ ತಿಳಿಯುತ್ತದೆ. ಈ ತಿಳಿವಿಗೆ ದಾರಿಮಾಡಿಕೊಡಲು ನಾವು ಶ್ರಮಿಸಬೇಕು ಎಂಬುದೂ ಎಂ.ವಿ.ಸೀ. ಯವರ ಉದ್ದೇಶವಾಗಿತ್ತು. ಪದಗಳಿಗೆ ಅರ್ಥಕೊಡುವ ಸಂದರ್ಭ ಬಂದಾಗ ಶ್ರೀ ಸಾಮಾನ್ಯ ಎಂ.ವಿ.ಸೀ. ಯವರ ಕಣ್ಣೆದುರಿಗೆ ನಿಲ್ಲುತ್ತಿದ್ದ. ಸಾಮಾನ್ಯ ಓದುಗರ ಬಗ್ಗೆ ಎಂ.ವಿ.ಸೀ.ಯವರ ಕಳಕಳಿ ಎಷ್ಟಿತ್ತೆಂದರೆ ವ್ಯಾಕರಣದ ಪರಿಚಯವಿರದ ಈ ಜನ ಸಂಧಿ, ಸಂಯುಕ್ತ ಪದಗಳು ಬಂದಾಗ ಅವನ್ನು ತಪ್ಪು ತಪ್ಪಾಗಿ ಬಿಡಿಸಿಕೊಂಡು ಓದಿ ಗೊಂದಲಕ್ಕೊಳಗಾಗುವುದನ್ನು ತಪ್ಪಿಸಲು ಪದವಿಭಾಗವನ್ನು ಕೊಡಲೂ ತಯಾರಿದ್ದರು. ಆದರೆ ಇದು ಒಂದು ರೀತಿಯಲ್ಲಿ ಅನೌಚಿತ್ಯವಾಗುವುದೆಂದು ಅವರು ಈ ಮಾರ್ಗವನ್ನು ಕೈಬಿಟ್ಟರು.

ಪ್ರಸ್ತುತ ಸಂಗ್ರಹವು ಪಂಡಿತ ಪಾಮರರಿಬ್ಬರಿಗೂ ಪ್ರಿಯವಾಗಬೇಕೆಂಬ ಎಂ.ವಿ.ಸೀ.ಯವರ ಇಚ್ಛೆಯನ್ನು ಬಹುಮಟ್ಟಿಗೆ ಪೂರೈಸಿದೆ ಎಂಬುದು ನಮ್ಮ ಭಾವನೆ.

ಈ ಸಂಗ್ರಹಕ್ಕೆ ವಿದ್ವತ್ಪೂರ್ಣ ಪ್ರಸ್ತಾವನೆಯನ್ನು ಬರೆಯಲು ಎಂ.ವಿ.ಸೀ. ಯವರು ತುಂಬಾ ಶ್ರಮವಹಿಸಿ ವಿಷಯ ಸಂಗ್ರಹಿಸಿದ್ದರು, ಚಿಂತನೆ ನಡಸಿದ್ದರು. ಈವರೆಗೆ ಕುಮಾರವ್ಯಾಸನ ಬಗ್ಗೆ ಬಂದಿರುವ ಎಲ್ಲಾ ವಿಮರ್ಶಾ ಗ್ರಂಥಗಳನ್ನೂ

ಜೋಯಿಸರ ಮತ್ತು ನನ್ನ ಪರಿಚಯ ಸ್ನೇಹಗಳು ಪ್ರಾರಂಭವಾದವು. ಏಕೈಕ ಹಸ್ತಪ್ರತಿಯಿಂದ ತಾವು ಪ್ರತಿ ತೆಗೆದಿದ್ದ ಹಸ್ತಪ್ರತಿಯನ್ನು ನನ್ನ ಪರಿಶೀಲನೆಗೆ ಒಪ್ಪಿಸಿದರು. ಕವಿ ಮತ್ತು ಕೃತಿಯನ್ನು ಕುರಿತು ಅವರಾಗಲೇ ವಿಸ್ತಾರವಾದ ಪೀಠಿಕೆಯನ್ನು ಬರೆದಿದ್ದರು. ಕೀರ್ತನೆಗಳ ಪಾಠ ಬಲುಮಟ್ಟಿಗೆ ಶುದ್ಧವಾಗಿದ್ದ ಕಾರಣ ಪರಿಷ್ಕರಣದ ಅಗತ್ಯ ಹೆಚ್ಚಾಗಿರಲಿಲ್ಲ. ಆದರೆ, ಕವಿ ಕೀರ್ತನೆಗಳಿಗೆ ರಾಗ ತಾಳಗಳನ್ನು ನಿರ್ದೇಶಿಸಿರಲಿಲ್ಲ; ಲಯಾನುಗುಣವಾಗಿ ಚರಣಗಳನ್ನು ವ್ಯವಸ್ಥೆಗೊಳಿಸುವ ಅಗತ್ಯವಿದ್ದಿತು. ಈ ಕೆಲಸವನ್ನು ನಾನು ಸಂತೋಷದಿಂದ ನಿರ್ವಹಿಸಿ ಕೊಟ್ಟೆನು.

ಕೆಳದಿ ವಸ್ತುಸಂಗ್ರಹಾಲಯದ ಹಸ್ತಪ್ರತಿಗಳ ಸಂಗ್ರಹದಲ್ಲಿದ್ದ ವೆಂಕಣ್ಣ ಕವಿಯ ಇನ್ನು ಮೂರು ಕೃತಿಗಳನ್ನು ಶ್ರೀ ಗುಂಡಾಜೋಯಿಸರು ಶೋಧಿಸಿ ಹೊರತೆಗೆದು ಪ್ರಕಟನೆಗೆ ಅಣಿಮಾಡಿದರು. ಈ ವೇಳೆಗೆ ಕೆಳದಿ ವಸ್ತುಸಂಗ್ರಹಾಲಯಕ್ಕೆ ಸಾರ್ವಜನಿಕ ಸ್ವರೂಪವನ್ನು ಕೊಡುವ ಸಲುವಾಗಿ, ಪ್ರಖ್ಯಾತ ಪ್ರಾಚ್ಯವಸ್ತು ಸಂಶೋಧನ ತಜ್ಞರಾದ ಶ್ರೀ ಎಸ್.ಆರ್. ರಾವ್ ಅವರ ಅಧ್ಯಕ್ಷತೆಯಲ್ಲಿ ಟ್ರಸ್ಟನ್ನು ಸ್ಥಾಪಿಸಿದರು. ಟ್ರಸ್ಟಿಗಳ ಮಂಡಲಿಯಲ್ಲಿ ನನ್ನನ್ನೂ ಒಬ್ಬ ಸದಸ್ಯನನ್ನಾಗಿ ಸೇರಿಸಿಕೊಂಡದ್ದು ಮಾತ್ರವಲ್ಲದೆ, ಟ್ರಸ್ಟಿನ ಉಪಾಧ್ಯಕ್ಷ ಪದವಿಯನ್ನೂ ನನಗಿತ್ತು ನನ್ನನ್ನು ಗೌರವಿಸಿದರು. ಇದಕ್ಕಾಗಿ ನಾನು ಶ್ರೀ ಜೋಯಿಸರಿಗೆ ಕೃತಜ್ಞನಾಗಿದ್ದೇನೆ.

ಟ್ರಸ್ಟು ಕಾರ್ಯಾರಂಭ ಮಾಡಿದ ಕೂಡಲೆ ಸದ್ಯದಲ್ಲಿ ದೊರಕಿರುವ ವೆಂಕಣ್ಣ ಕವಿಯ 'ಪಾರ್ವತೀವಲ್ಲಭಶತಕ', 'ಗಣಸಹಸ್ರನಾಮ' ಮತ್ತು 'ನರಸಿಂಹವಿಜಯ' ಎಂಬೀ ಮೂರು ಕೃತಿಗಳನ್ನು ಸಂಪಾದಿಸಿ ಪ್ರಕಟಿಸತಕ್ಕದ್ದೆಂದೂ, ಸಂಪಾದನಕಾರ್ಯದಲ್ಲಿ ಶ್ರೀ ಗುಂಡಾಜೋಯಿಸರಿಗೆ ನಾನು ಸಹಾಯ ಮಾಡತಕ್ಕದ್ದೆಂದೂ ತೀರ್ಮಾನವಾಯಿತು. ತಮ್ಮ ಸಾಮರ್ಥ್ಯದ ಇತಿಮಿತಿಗಳನ್ನು ಬಲ್ಲ, ವಿನಯವಂತ ಶ್ರೀ ಜೋಯಿಸರು ಪಾಠ ಪರಿಷ್ಕರಣವನ್ನು ನಾನು ಮಾಡಿಕೊಡಬೇಕೆಂದು ಕೋರಿ, ಗ್ರಂಥಸಂಪಾದನ ಕಾರ್ಯದ ಉಳಿದ ಭಾಗವನ್ನು – ಎಂದರೆ, ಕವಿಕಾವ್ಯವಿಷಯಕ ಪರಿಚಯ ಮತ್ತು ಅಗತ್ಯವಾದ ಅನುಬಂಧಗಳನ್ನು ಒದಗಿಸುವುದು – ಇವನ್ನು ತಾವು ವಹಿಸಿಕೊಂಡರು. ವಹಿಸಿಕೊಂಡ ಕಾರ್ಯವನ್ನು ದೇಹಶ್ರಮವನ್ನೂ ಲೆಕ್ಕಿಸದೆ ಅತ್ಯಂತ ಶ್ರದ್ಧೆಯಿಂದ ಅವರು ನಿರ್ವಹಿಸಿದ್ದಾರೆ ಎಂದು ತಿಳಿಸಲು ಸಂತೋಷಿಸುತ್ತೇನೆ. ಗಣಸಹಸ್ರನಾಮವನ್ನು ಕುರಿತ ಅನ್ಯಕರ್ತೃಕ ಕೃತಿಗಳ ಹಸ್ತ ಪ್ರತಿಗಳನ್ನು ಪರಿಶೀಲಿಸಿ, ಅಗತ್ಯ ಮಾಹಿತಿಯನ್ನು ಸಂಗ್ರಹಿಸುವಲ್ಲಿ (ಸಂಶೋಧನೆಯಲ್ಲಿ ಆಸಕ್ತಿ ಇಲ್ಲದವರಿಗೆ ಇದು ಅನಗತ್ಯ ಎಂದು ತೋರುತ್ತದೆ

# ೬. ಕೆಳದಿ ವೆಂಕಣ್ಣ ಕವಿಯ ಕೃತಿಗಳು

## ಪ್ರಸ್ತಾವನೆ

ಐತಿಹಾಸಿಕ ಮೌಲ್ಯವುಳ್ಳ, ಲೋಕಪ್ರಸಿದ್ಧವಾದ ಚಂಪೂ 'ಕೆಳದಿ ನೃಪವಿಜಯ'ದ ಕರ್ತೃವಾದ ಲಿಂಗಣ್ಣ ಕವಿಯ ಮನೆತನಕ್ಕೆ ಸೇರಿದ ಕೆಳದಿ ಗುಂಡಾ ಜೋಯಿಸರು ವಂಶಾಭಿಮಾನದಿಂದಲೂ ಸ್ಥಳಾಭಿಮಾನದಿಂದಲೂ ಪ್ರೇರಿತರಾಗಿ ಕೆಳದಿ ವಸ್ತುಸಂಗ್ರಹಾಲಯ ಮತ್ತು ಸಂಶೋಧನ ಕೇಂದ್ರವನ್ನು ಸ್ಥಾಪಿಸಿ, ಈಗ್ಗೆ ಹಲವು ವರ್ಷಗಳಿಂದಲೂ ಅದನ್ನು ನಡಸಿಕೊಂಡು ಬರುತ್ತಿದ್ದಾರೆ. ಈ ಸಂಸ್ಥೆಯ ಸ್ಥಾಪನೆ ಮತ್ತು ಅಭಿವೃದ್ಧಿಗಳಿಗಾಗಿ ಗಣ್ಯಪ್ರಮಾಣದಲ್ಲಿ ಸ್ವಂತ ಹಣವನ್ನೂ ಕಾಲವನ್ನೂ, ಶಕ್ತಿಸಾಮರ್ಥ್ಯಗಳನ್ನೂ ವಿನಿಯೋಗಿಸಿದ್ದಾರೆ. ಈ ಸಂಸ್ಥೆಗಾಗಿ ಅವರು ಕೆಳದಿ ಸಂಸ್ಥಾನಕ್ಕೆ ಸಂಬಂಧ ಪಟ್ಟಂತೆ ನಾಣ್ಯಗಳು, ಐತಿಹಾಸಿಕ ದಾಖಲೆಗಳು, ಹಸ್ತಪ್ರತಿಗಳು, ಮುಂತಾದುವನ್ನು ಶ್ರಮಪಟ್ಟು ಶೇಖರಿಸಿ ಕಾಪಾಡಿಕೊಂಡು ಬರುತ್ತಿದ್ದಾರೆ. ಕೆಳದಿ ಇತಿಹಾಸಕ್ಕೆ ಸಂಬಂಧಪಟ್ಟಂತೆ ಸಂಶೋಧನಾತ್ಮಕ ಗ್ರಂಥಗಳನ್ನು ರಚಿಸಿ, ಸ್ವತಂತ್ರ ವ್ಯಾಸಂಗ ವ್ಯವಸಾಯಗಳ ಫಲವಾಗಿ ಸಂಶೋಧನ ಪ್ರವೃತ್ತಿಯನ್ನೂ, ವಿದ್ವದಾಸಕ್ತಿಯನ್ನೂ, ಸಾಹಿತ್ಯಾಭಿರುಚಿಯನ್ನೂ ಬೆಳಸಿಕೊಂಡು, ವಿದ್ವಜ್ಜನಪ್ರಿಯರಾಗಿದ್ದಾರೆ; ಕೆಳದಿ ಸಂಸ್ಥಾನಕ್ಕೆ ಸಂಬಂಧಪಟ್ಟ ಇತಿಹಾಸ ಮತ್ತು ಸಾಹಿತ್ಯ ಕ್ಷೇತ್ರಗಳಲ್ಲಿ ಸ್ವತಂತ್ರವಾಗಿ ಸಂಶೋಧನೆ ನಡಸುವುದಕ್ಕೂ, ಪ್ರಾಚೀನ ಸಾಹಿತ್ಯ ಕೃತಿಗಳನ್ನು ಸಂಪಾದನೆ ಮಾಡುವುದಕ್ಕೂ ಅಧಿಕಾರವನ್ನು ಸಂಪಾದನೆ ಮಾಡಿಕೊಂಡಿದ್ದಾರೆ. ಗ್ರಂಥಸಂಪಾದನೆಗೆ ಸಂಬಂಧಪಟ್ಟಂತೆ ಈಗ್ಗೆ ೫–೬ ವರ್ಷಗಳ ಹಿಂದೆ ಅವರು 'ವೆಂಕಣ್ಣಕವಿಯ ಕೀರ್ತನೆಗಳು' ಎಂಬ ಗ್ರಂಥವನ್ನು ಸಂಪಾದನೆ ಮಾಡಿ, ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದ ವತಿಯಿಂದ ಹೊರತಂದಿದ್ದಾರೆ (೧೯೭೭). ಈ ಕೃತಿಯ ಪ್ರಕಟನ ಕಾರ್ಯದ ಸಂದರ್ಭದಲ್ಲಿ

---

* ಕೆಳದಿ ನೃಪವಿಜಯ – ಸಂ. ಕೆಳದಿ ಗುಂಡಾಜೋಯಿಸ್, ಪ್ರಸಂ : ಎಂ.ವಿ. ಸೀತಾರಾಮಯ್ಯ ಕೆಳದಿ ಪ್ರಾಚ್ಯವಸ್ತು – ಇತಿಹಾಸ ಸಂಶೋಧನ ಸಂಸ್ಥೆ, ಕೆಳದಿ, ೧೯೮೦

ಹೀಗೆಯೇ ಬರೆದಿದ್ದಾನು ಎಂದು ಊಹಿಸುವುದು ಸಂಪಾದಕನಿಗೆ ಸಾಧ್ಯವಾದರೆ ಹಾಗೆ ಮಾಡುವುದು ತಪ್ಪಾಗಲಾರದು ಎಂದು ನನ್ನ ನಿಲುವು. ಅದಕ್ಕನುಗುಣವಾಗಿ ನಷ್ಟವಾದ ಕೃತಿಭಾಗಗಳನ್ನು ನಾನು ಊಹೆಯಿಂದ ತುಂಬಿ ನನ್ನ'ನಿಕ್ಷೇಪ'ಗಳನ್ನು ಚೌಕಕಂಸಗಳಲ್ಲಿ ಕಾಣಿಸಿದ್ದೇನೆ. ಕೃತಿಯ ಮೊದಲ ಹನ್ನೆರಡು ಪದ್ಯಗಳು ಸಂಪೂರ್ಣವಾಗಿ ಲುಪ್ತವಾಗಿರುವುದು ವಿಷಾದನೀಯ, ೧೩ ಮತ್ತು ೧೪ನೆಯ ಪದ್ಯಗಳಲ್ಲಿ ತ್ರುಟಿತವಾಗಿರುವ ಭಾಗಗಳನ್ನು ಊಹೆಯಿಂದ ಕಲ್ಪಿಸಿಕೊಳ್ಳುವುದು ಅಸಾಧ್ಯವೆಂದೇ ಕೃತಪ್ರಯತ್ನನಾದ ನನಗೆ ಕಂಡು ಬಂದದ್ದರಿಂದ ಈ ಎರಡು ಪದ್ಯಗಳನ್ನು ಕೃತಿಯ ಪರಿಶಿಷ್ಟವಾಗಿ ಕೊಟ್ಟಿದೆ.

### ಕೃತಿಗಳ ಪರಾಮರ್ಶೆ

ಗ್ರಂಥ ಸಂಪಾದಕರಾದ ಶ್ರೀ ಕೆ. ಗುಂಡಾಜೋಯಿಸರು ಕೃತಿಗಳ ಸಮೀಕ್ಷೆ ಮತ್ತು ಮೌಲ್ಯಮಾಪನಗಳನ್ನು ತಮ್ಮ 'ಉಪೋದ್ಘಾತ'ದಲ್ಲಿ ಮಾಡಿಕೊಟ್ಟಿದ್ದಾರೆ. ಆದ್ದರಿಂದ ಆ ಬಗೆಗೆ ನಾನು ವಿಸ್ತಾರವಾಗಿ ಹೇಳಬೇಕಾದುದು ಏನೂ ಇಲ್ಲ. ಅವರ ಬರಹಕ್ಕೆ ಪೂರಕವಾಗಿ ನಾಲ್ಕು ಮಾತುಗಳನ್ನು ಸೇರಿಸಲಿಚ್ಛಿಸುತ್ತೇನೆ.

**ಪಾರ್ವತೀವಲ್ಲಭಶತಕ :** ಕನ್ನಡ ಸಾಹಿತ್ಯದ ಶತಕ ಸಾಹಿತ್ಯ ಪರಂಪರೆ ನಾಗವರ್ಮಾಚಾರ್ಯನ(?)[೧] 'ಚಂದ್ರಚೂಡಾಮಣಿ' ಶತಕದಿಂದ ಪ್ರಾರಂಭವಾಗುತ್ತದೆ. ಶತಕ ಸಂಪ್ರದಾಯ ಇಪ್ಪತ್ತನೆಯ ಶತಮಾನದಲ್ಲಿ ಮುಂದುವರಿದಿದೆ.[೨] ಶತಕಗಳು ಪ್ರಾಯಿಕವಾಗಿ ಕನ್ನಡದಲ್ಲಿ ಪ್ರಸಿದ್ಧವಾದ ಉತ್ಪಲಮಾಲಾ, ಚಂಪಕಮಾಲಾ, ಮತ್ತೇಭವಿಕ್ರೀಡಿತ, ಶಾರ್ದೂಲ ವಿಕ್ರೀಡಿತ, ಸ್ರಗ್ಧರಾಮಹಾಸ್ರಗ್ಧರಾ ಎಂಬೀ ಆರು ಸಂಸ್ಕೃತ ಛಂದಸ್ಸಿನಿಂದ ತೆಗೆದುಕೊಂಡ ವೃತ್ತಗಳಲ್ಲಿ ರಚಿತವಾಗಿರುತ್ತವೆ. ಪಾರ್ವತೀವಲ್ಲಭ ಶತಕವು ಯಾವಯಾವ ವೃತ್ತಜಾಜಿತಗಳಲ್ಲಿ ರಚಿತವಾಗಿವೆ ಎಂಬ ವಿವರವನ್ನು ಶ್ರೀ ಜೋಯಿಸರು ಉಲ್ಲೇಖಿಸಿದ್ದಾರೆ (ಉಪೋ.ಪು.೯). ಮತ್ತೇಭವಿಕ್ರೀಡಿತ ಕವಿಗೆ ಪ್ರಿಯವಾದ ವೃತ್ತಜಾತಿ ಎನ್ನುವುದು ಅದರ

---

೧. ಈ ಶತಕವನ್ನು ರಚಿಸಿದವನು ನಾಗವರ್ಮಾಚಾರ್ಯ (ಕ್ರಿ.ಶ.೧೦೭೦) ಎಂಬ ಕವಿಚರಿತೆಕಾರರ ಹೇಳಿಕೆಗೆ ಆಧಾರವಾದ ಪದ್ಯದ ಅರ್ಥವಿವರಣೆಯಲ್ಲಿ ಭಿನ್ನಾಭಿಪ್ರಾಯಕ್ಕೆ ಅವಕಾಶವಿದೆ. ಆದ್ದರಿಂದ ಈ ಶತಕದ ಕರ್ತೃ ನಾಗವರ್ಮಾಚಾರ್ಯನಲ್ಲವೆಂಬ ಅಭಿಪ್ರಾಯಕ್ಕೆ ಬರಬಹುದಾಗಿದೆ. ಆದರೆ ಈ ಶತಕದ ಕಾಲದ ಬಗೆಗೆ ಅವರ ನಿರ್ಣಯ ಸರಿ.

೨. ದೇವಶಿಖಾಮಣಿ ಅಳಸಿಂಗರಾಚಾರ್ಯರ 'ಶ್ರೀ ಚೆಲ್ವನಾರಾಯಣ ಶತಕ'ವನ್ನು (೧೯೨೦) ಉದಾಹರಿಸಬಹುದು.

ಎಂಬುದನ್ನು ನಾನು ಬಲ್ಲೆ) ಅವರು ಧಾರವಾಡ ಮತ್ತು ಮೈಸೂರುಗಳಿಗೆ ಪ್ರಯಾಣ ಬೆಳಸಿ ಬಹಳ ಶ್ರಮಪಟ್ಟರು. ಬೇರೆಬೇರೆ ಆಕರಗಳಿಂದ ಸಂಗ್ರಹಿಸಿ ಅವರು ಒದಗಿಸಿದ ಅಲ್ಪಸ್ವಲ್ಪ ವ್ಯತ್ಯಸ್ತ ರೂಪಗಳ ಗಣನಾಮಗಳ ಪಟ್ಟಿಯನ್ನೂ ಅನುಬಂಧವಾಗಿ ಕೊಟ್ಟಿರುವ 'ಗಣಸಹಸ್ರನಾಮ ಸ್ತೋತ್ರಮ್' ಎಂಬ ಸಂಸ್ಕೃತ ಕೃತಿಯ ಪ್ರತಿಯನ್ನೂ ನನಗೆ ಒದಗಿಸದೆ ಇದ್ದಿದ್ದರೆ, ವೆಂಕಣ್ಣ ಕವಿಯ 'ಗಣಸಹಸ್ರನಾಮ'ದ ಪರಿಷ್ಕರಣ ತಕ್ಕಮಟ್ಟಿಗೆ ತೃಪ್ತಿಕರವಾಗಿ ಆಗಲು ಸಾಧ್ಯವಿರುತ್ತಿರಲಿಲ್ಲ.

## ಪಾಠಪರಿಷ್ಕರಣ

**ಪಾರ್ವತೀವಲ್ಲಭಶತಕ :** ಈ ಕೃತಿಯ ಪಾಠ ಬಲುಮಟ್ಟಿಗೆ ಶುದ್ಧವಾಗಿದೆ. ಆದರೂ, ಲಿಪಿಕಾರರ ಹಸ್ತದೋಷದಿಂದ ಇರಬಹುದು, ಕೆಲವು ಸ್ಖಾಲಿತ್ಯಗಳೂ, ಪಾಠಕ್ಲೇಶಗಳೂ ಕಂಡುಬಂದಿವೆ. ಇದನ್ನು ಮೊದಲು 'ಪ್ರಬುದ್ಧ ಕರ್ಣಾಟಕ'ದಲ್ಲಿ ಪ್ರಕಟಿಸಲಾಗಿತ್ತು. ಪತ್ರಿಕಾ ಸಂಪಾದಕರು ಪಾಠವನ್ನು ಪರಿಷ್ಕರಿಸಿದರೂ ಕೆಲವು ಸಂದಿಗ್ಧ ಪಾಠಗಳೂ ಸ್ಖಾಲಿತ್ಯಗಳೂ ಉಳಿದೇ ಇದ್ದುವು. ನಾನು ಮಾಡಿರುವ ತಿದ್ದುಪಾಟುಗಳನ್ನು ಚೌಕಕಂಸದಲ್ಲಿ ಕಾಣಿಸಿದೆ. ಅವು ಎಷ್ಟರಮಟ್ಟಿಗೆ ಸಮಂಜಸವಾಗಿವೆ ಎಂಬುದನ್ನು ಬಲ್ಲ ವಿದ್ವಾಂಸರು ವಿಚಾರ ಮಾಡಬಹುದು.

**ಗಣಸಹಸ್ರನಾಮ :** ಈ ಕೃತಿಯ ಪಾಠದಲ್ಲಿ ಲಿಪಿಕಾರನ ಹಸ್ತಪ್ರಮಾದದಿಂದ ಅನೇಕ ಬಗೆಯ ಸ್ಖಾಲಿತ್ಯಗಳು ಇದ್ದುವು. ಈ ಸ್ಖಾಲಿತ್ಯಗಳು ಹೆಸರುಗಳ ಶಬ್ದರೂಪವನ್ನು ಕೆಡಿಸಿಬಿಟ್ಟಿದ್ದುವು. ಇತರ ಗಣಸಹಸ್ರನಾಮ ಗ್ರಂಥಗಳಲ್ಲಿ ಉಕ್ತವಾಗಿರುವ ನಾಮಗಳನ್ನು ಗಮನಿಸಿ ಸ್ಖಾಲಿತ್ಯಗಳನ್ನು ತಿದ್ದುವುದು ಸುಲಭವಾಯಿತು. ಇಂಥ ತಿದ್ದುಪಾಟುಗಳನ್ನು ಚೌಕಕಂಸದಲ್ಲಿ ಕಾಣಿಸಿದೆ. ಅಡಿಟಿಪ್ಪಣಿಯಲ್ಲಿ ಮೂಲಪಾಠಗಳನ್ನು ಗುರುತಿಸುವ ಗೋಜಿಗೆ ಹೋಗಿಲ್ಲ. ಅಗತ್ಯವಾದೆಡೆಗಳಲ್ಲಿ ಮಾತ್ರ ಮೂಲಪಾಠವನ್ನು ಕೆಳಗೆ ಕೊಟ್ಟಿದೆ. ಇನ್ನಿತರ ತಿದ್ದುಪಾಟುಗಳಿಗೆ ಸಂಬಂಧಪಟ್ಟಂತೆ ಮೂಲಪಾಠವನ್ನು ಅಡಿಯಲ್ಲಿ ಕಾಣಿಸಿದೆ.

**ನರಹರಿವಿಜಯ :** ಈ ಕೃತಿಯಲ್ಲಿ ಲಿಪಿಕಾರರ ಕೈತಪ್ಪಿನಿಂದಾದ ಸ್ಖಾಲಿತ್ಯಗಳು ಬಹಳ ಕಡಿಮೆಯ ಪ್ರಮಾಣದಲ್ಲಿದ್ದುವು. ಆದರೆ, ಅನೇಕ ಪದ್ಯಗಳಲ್ಲಿ ಒಂದೋ ಹಲವೋ ಶಬ್ದಗಳು, ಕೆಲವು ಸಂದರ್ಭಗಳಲ್ಲಿ ಇಡಿಯ ಸಾಲುಗಳು, ತ್ರುಟಿತವಾಗಿ ಹೋಗಿದ್ದುವು. ಇವುಗಳನ್ನು ಸ್ವಕಪೋಲ ಕಲ್ಪನೆಯಿಂದ ತುಂಬುವ ವಿಷಯದಲ್ಲಿ ಭಿನ್ನಾಭಿಪ್ರಾಯಕ್ಕೆ ಅವಕಾಶವಿದೆ. ಗ್ರಂಥಪಾತವಾಗಿರುವ ಸ್ಥಳದಲ್ಲಿ ಕವಿ ಬಹುಶಃ

ವೆಂಕಣ್ಣ ಶೃಂಗಾರದಲ್ಲಿ ಸುಖಿಸಿ, ಅದರಲ್ಲಿ ಬೇಸತ್ತು, ವೈರಾಗ್ಯದ ಕಡೆಗೆ ಒಲಿದಿರುವ ಅವನ ಆತ್ಮಪರಿಪಾಕವಿಕಾಸವನ್ನು ಈ ಪೂರ್ವಭಾವಿ ಶೃಂಗಾರರಸವಿನ್ಯಾಸದಲ್ಲಿ ಗುರುತಿಸಬಹುದು.[೩] ಜೀವನೋತ್ಕರ್ಷ ಸಾಧಕವಾದ, ಭಕ್ತಿಜ್ಞಾನ ವೈರಾಗ್ಯಗಳನ್ನು ಎತ್ತಿ ಹಿಡಿಯುವ, ನೀತಿತತ್ತ್ವ ವಿವೇಚನೆಯೇ ಈ ಕೃತಿಯ ತಿರುಳು. ಈ ಕೃತಿಯ ಮುಖ್ಯ ರಸ ಶಾಂತ; ಭಕ್ತಿಭಾವ ಅದಕ್ಕೆ ಅಧೀನ. ಆದ್ದರಿಂದ, ಈ ಕೃತಿಯ ವಾಚನಮನನಗಳಿಂದ ಓದುಗರು ಚಿತ್ತಶಾಂತಿಯನ್ನು ಪಡೆಯಬಹುದು.

ಈ ಶತಕದ ಪರಿಶೀಲನೆಯಿಂದ ವೆಂಕಣ್ಣ ಕವಿಯ ಭಾಷಾಪ್ರೌಢಿಮೆಯನ್ನಲ್ಲದೆ ವಿಸ್ತಾರವಾದ ವೈವಿಧ್ಯಮಯವಾದ ಅವನ ಗ್ರಂಥವ್ಯಾಸಂಗದ ಹಿನ್ನೆಲೆಯನ್ನೂ ಊಹಿಸಿಕೊಳ್ಳಬಹುದು. ಭರ್ತೃಹರಿಯಿಂದ ಪ್ರಭಾವಿತನಾಗಿರುವಂತೆಯೇ ಇತರರ ಕೃತಿಗಳಿಂದಲೂ ಪ್ರಭಾವಿತನಾಗಿರುವುದಕ್ಕೆ ಒಂದೆರಡು ಸ್ಪಷ್ಟವಾದ ನಿದರ್ಶನಗಳು ವಿದ್ವಾಂಸರಿಗೆ ಸುಲಭ ಗೋಚರಗಳು. ಶತಕದ 'ಕೆರೆಯಂ ಕಟ್ಟಿಸು' ಇತ್ಯಾದಿಯಾಗಿ ಮೊದಲಾಗುವ ೪೬ನೆಯ ಪದ್ಯವನ್ನು ಮಧುರಕವಿ ವಿರಚಿತವಾದ ಹಂಪೆಯ ಶಾಸನದ (ಕ್ರಿ.ಶ.೧೪೧೧) ಈ ಪದ್ಯದೊಂದಿಗೆ ಹೋಲಿಸಬಹುದು:

ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಾಗಾರಮಂ ಮಾಡಿಸ–
ಜ್ಜೆರೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗಿಂಬುಕೆಯ್ ನಂಬಿದೆ–
ರ್ಗೆರೆವಟ್ಟಾಗಿರು ಶಿಷ್ಟರಂ ಪರೆಯೆನುತ್ತಿಂತೆಲ್ಲಮಂ ಪಿಂದೆ ತಾ–
ಯೆರೆದಳ್ಪಾಲೆರೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ.

ವೆಂಕಣ್ಣನ ಪದ್ಯ ಶಾಸನ ಪದ್ಯದಿಂದ ಬಲುಮಟ್ಟಿಗೆ ಪ್ರೇರಣೆ ಹೊಂದಿದೆಯೇ ಹೊರತು ಅದರ ಅನುಕೃತಿ ಅಲ್ಲ ಎನ್ನುವುದು ಗಮನಾರ್ಹ. ಶಾಸನಸಾಹಿತ್ಯದಲ್ಲಿ ಪಂಚಪಾದವೃತ್ತ ದೊರಕುವುದೂ ಶತಕದ ೪೬ನೆಯ ಪದ್ಯ ಪಂಚಪಾದವೃತ್ತವಾಗಿರುವುದೂ ವೆಂಕಣ್ಣನು ಶಾಸನ ಸಾಹಿತ್ಯದ ಪರಿಚಯ ಹೊಂದಿದ್ದನೆನ್ನುವುದಕ್ಕೆ ಸಮರ್ಥನೆ ನೀಡುತ್ತವೆ. ಈ ಸಂದರ್ಭದಲ್ಲಿ ಒಂದು ಮುಖ್ಯ ಸಂಗತಿ ವಿಚಾರಣೀಯ: ಪಾಶ್ಚಾತ್ಯ ಮತ್ತು ದೇಶೀಯ ವಿದ್ವಾಂಸರ

---

೩. ಜೈನಪುರಾಣ ಪದ್ಧತಿಯಲ್ಲಿ ತೀರ್ಥಂಕರರ ಜೀವನಚಿತ್ರವನ್ನು ಚಿತ್ರಿಸುವಲ್ಲಿ ಶಾಂತರಸ ಪೋಷಣೆಗೆ ಶೃಂಗಾರರಸ ಅಂಗವಾಗಿ ಬಂದಿರುವುದನ್ನು ಗಮನಿಸಬೇಕು. ಇದಕ್ಕೆ ಶ್ರೇಷ್ಠವಾದ ಉದಾಹರಣೆ ಪಂಪನಾದಿಪುರಾಣ.

ಸಂಖ್ಯಾಬಾಹುಳ್ಯದಿಂದ (೮೭ ಪದ್ಯಗಳು) ವ್ಯಕ್ತಪಡುತ್ತದೆ. (ಯಾವ ಪದ್ಯ ಯಾವ ವೃತ್ತದಲ್ಲಿದೆ ಎಂಬ ವಿವರವನ್ನು ಕಾಣಿಸಬಹುದಾಗಿದ್ದಿತೇನೋ). ಹಾಗೆ ನೋಡಿದರೆ, ಕನ್ನಡದ ಎಲ್ಲ ಶತಕ ಕೃತಿಗಳನ್ನೂ ಒಟ್ಟಾರೆ ಗಮನಿಸಿದಾಗ ಅವುಗಳಲ್ಲಿ ಮತ್ತೇಭವಿಕ್ರೀಡಿತದ ಪ್ರಾಮುಖ್ಯ ಪ್ರಭಾವಗಳು ಆಕ್ರಮಿಸಿಕೊಂಡಿರುವುದನ್ನು ಕಾಣಬಹುದು. ಪ್ರೊ॥ ಎಂ.ಮರಿಯಪ್ಪ ಭಟ್ಟರು ಅಭಿಪ್ರಾಯಪಟ್ಟಿರುವಂತೆ, – "ಶತಕಗಳು ಹೆಚ್ಚಾಗಿ ಭಕ್ತಿಜ್ಞಾನ ವೈರಾಗ್ಯ ಬೋಧಕಗಳು. ನಿತ್ಯಸತ್ಯವನ್ನು ಸಾರುವವು. ಅನೇಕ ಶತಕಗಳಲ್ಲಿ ಜ್ಞಾನಿಕವಿಗಳ ಸ್ವಾನುಭವದೊಂದಿಗೆ ಪುರಾಣಪುರುಷರ ಜೀವನ ಆದರ್ಶಗಳು ಹಾಸುಹೊಕ್ಕಾಗಿ ಬಂದಿರುವುದರಿಂದ ಅವುಗಳಿಗೆ ಪ್ರಮಾಣದ ಯೋಗ್ಯತೆ ಬಂದಿರುತ್ತದೆ" ('ಕನ್ನಡ ಸಾಹಿತ್ಯಚರಿತ್ರೆ', ೧೯೬೦; ಪು.೧೪೨). ಶತಕ ಸಾಹಿತ್ಯದಲ್ಲಿ ಅತ್ಯಂತ ಪ್ರಸಿದ್ಧವಾದದ್ದು ಹರಿಹರನ 'ಪಂಪಾಶತಕ'ವಾದರೂ ಅತ್ಯಂತ ಜನಪ್ರಿಯವಾದದ್ದು 'ಸೋಮೇಶ್ವರಶತಕ'. ಈ ಶತಕ ಸಾಹಿತ್ಯ ಪರಂಪರೆಯಲ್ಲಿ ವೆಂಕವಿಬುಧನ 'ಪಾರ್ವತೀವಲ್ಲಭಶತಕ'ವೂ ಒಂದು ಗಣ್ಯಸ್ಥಾನಕ್ಕೆ ಅರ್ಹವಾಗಿದೆ.

ಸಾಮಾನ್ಯವಾಗಿ ಎಲ್ಲ ಶತಕಗಳಂತೆ ಈ ಶತಕವೂ ಮುಖ್ಯವಾಗಿ ಭಕ್ತಿಜ್ಞಾನ ವೈರಾಗ್ಯಗಳನ್ನು ಪ್ರತಿಪಾದಿಸುತ್ತದೆ. ಆದರೆ, "೫ ರಿಂದ ೧೪ ರವರೆಗಿನ ಶೃಂಗಾರ ರಸವನ್ನೊಳಗೊಂಡ ಪದ್ಯಗಳನ್ನು ಆರಂಭದಲ್ಲಿಯೇ ಹೆಣೆದಿರುವುದರ ಕಾರಣವೇನೋ ತಿಳಿಯದು. ಪ್ರಾಯಃ ಓದುಗರನ್ನು ಆಕರ್ಷಿಸುವ ಚಮತ್ಕಾರವಾಗಿರಬಹುದೆ? ಆದರೆ ೫ ನೆಯ ಪದ್ಯಕ್ಕೆ ಪೂರಕವಾಗಿ ಅದರ ಭಾವಕ್ಕೆ ಚಾಲನೆಯನ್ನೀಯಬೇಕಾಗಿರುವುದರಿಂದ ಹೀಗಿರಬಹುದಾಗಿದೆ" ಎಂಬ ಸಂಪಾದಕರ ಮಾತು ವಿಚಾರಾರ್ಹ. ವಿಷಯ ಸುಖದ ಉಪಾದೇಯತ್ವವನ್ನು ಮನೋಜ್ಞವಾಗಿ ಬಣ್ಣಿಸಿದರೂ ವಿವೇಕೋದಯವಾಗಿ ಸ್ತ್ರೀಸೌಂದರ್ಯದ ನಿಸ್ಸಾರತೆಯನ್ನೂ ಬಣ್ಣಿಸಿರುವುದು (ಪ.೧೪) ಗಮನಾರ್ಹ. ಈ ಸಂದರ್ಭದಲ್ಲಿ ನೀತಿವೈರಾಗ್ಯಶತಕಗಳನ್ನು ರಚಿಸಿರುವ ಭರ್ತೃಹರಿಯ ಶೃಂಗಾರ ಶತಕವನ್ನು ನೆನೆಯಬಹುದು. ಸಾಧಕನು ಜೀವನದ ನಿಚ್ಚಣಿಗೆಯ ಮೇಲಿನ ಹಂತಕ್ಕೆ ಏರಲು ಕೆಳಗಿನ ಹಂತವಾದ ಶೃಂಗಾರವನ್ನು ಮೆಟ್ಟಲೇಬೇಕಲ್ಲವೆ? ಅತ್ಯಂತ ಮಧುರವಾದ ರಸಾಲಫಲದ ಕಾಯಿ ಬಲು ಹುಳಿಯಾಗಿಯೇ ಇರುತ್ತದೆಯಲ್ಲವೆ? ಭರ್ತೃಹರಿ ಈ ಸಮೀಚಿನ ದೃಷ್ಟಿಯುಳ್ಳವನಾದ್ದರಿಂದಲೇ ಶೃಂಗಾರಾನುಭವಿಯಾಗಿ ಶೃಂಗಾರಶತಕ ರಚನೆಗೆ ತೊಡಗಿದ್ದಿರಬೇಕು. 'ವಿಬುಧ'ನಾದ ವೆಂಕಕವಿ ಭರ್ತೃಹರಿಯನ್ನು ಓದಿಕೊಂಡಿರುವ ಸಂಭವ ಇಲ್ಲದಿಲ್ಲ. ಅಲ್ಲದೆ, ಗೃಹಸ್ಥನಾದ

"ವರಪಂಚಾಕ್ಷರಿಯೆಂಬ ಮಂತ್ರವನೆ ನಿಚ್ಚಂ ಜಿಹ್ವೆಯೊಳ್ ಪೇಳುತೊ–
ಪ್ಪಿರು ನೀಂ ದ್ವೈತವನಾಡುತಿರ್ಪೆಡೆಯೊಳಂ ಮೇಣ್ ನಿನ್ನೊಳ್ ಅದ್ವೈತಮಂ
ಪಿರಿದುಂ ಚಿಂತಿಸು ತತ್ವಮಂ ತಿಳಿ."

ಮುಂದಿನ ಪದ್ಯದ "ಇದೆಲ್ಲ ದೃಶ್ಯವೆನುತಂ ನಿಶ್ಚೈಸು" ಎಂಬ ಮಾತೂ ಕವಿಯ ಅದ್ವೈತ ನಿಷ್ಠೆಗೆ ಪೋಷಕ. ಈ ಬ್ರಾಹ್ಮಣ ಕವಿ ವೀರಶೈವರಿಗೆ ಪ್ರಿಯವಾದ, ಪವಿತ್ರವೆನಿಸಿದ, 'ಗಣಸಹಸ್ರನಾಮದ' ರಚನೆಗೆ – ರಸಭಾವ ಪೋಷಣೆಗೆ ಈಷದಪಿ ಅವಕಾಶವಿಲ್ಲದ ನಾಮಗಳ ಪಟ್ಟಿಯನ್ನು ಛಂದೋಬಂಧದಲ್ಲಿ ಜೋಡಿಸುವುದಕ್ಕೆ – ಹೇಗೆ ಮನತಂದ ಎನ್ನುವುದು ಕುತೂಹಲಕಾರಿ ಪ್ರಶ್ನೆ. ವಿಚಾರಮಾಡಿ ನೋಡಿದರೆ, ಸಮಂಜಸವಾದ ಉತ್ತರಗಳನ್ನು ಕಾಣುವುದು ಕಷ್ಟವಲ್ಲ. ಶ್ರೀ ಕೆ. ಗುಂಡಾ ಜೋಯಿಸರು ಹೇಳುವಂತೆ, "ಕೆಳದಿಯ ದೇವಾಲಯದಲ್ಲಿರುವ ವಿವಿಧ ಗಣಗಳ ಮೂರ್ತಿಶಿಲ್ಪಗಳೂ ಹಾಗೂ ಮಠ ಮುಂತಾದೆಡೆಗಳಲ್ಲಿ ಉಪಲಬ್ಧವಿದ್ದ ಶಾಸನಗಳೂ ಕಾವ್ಯವನ್ನು ರಚಿಸಲು ಕವಿಗೆ ಪ್ರೇರಣೆಯನ್ನುಂಟುಮಾಡಿರಲಿಕ್ಕೆ ಸಾಕೆಂದು ಊಹಿಸಬಹುದಾಗಿದೆ." ವೀರಶೈವಮತ ರೂಪಗೊಳ್ಳುವುದಕ್ಕೂ ಮೊದಲು ೬೩ ಪುರಾತನರು ದಕ್ಷಿಣಭಾರತದ ಎಲ್ಲ ಶೈವರಿಗೂ ಪೂಜ್ಯರೆನಿಸಿದ್ದರು. ಶೈವ ದೇವಾಲಯಗಳಲ್ಲಿ ಈ ಶಿವಗಣರ ವಿಗ್ರಹಗಳನ್ನು ಒಳಪ್ರಾಕಾರದಲ್ಲಿ ಸ್ಥಾಪಿಸುವ ವಾಡಿಕೆಯಿದ್ದಿತು. ನಂಜನಗೂಡಿನ ಶ್ರೀ ಶ್ರೀಕಂಠೇಶ್ವರ ದೇವಾಲಯದಲ್ಲೂ ಈ ೬೩ ಪುರಾತನರ ವಿಗ್ರಹಗಳನ್ನು ಕಾಣಬಹುದು. ವೀರಶೈವ ಮತವು ಬಸವೇಶ್ವರರಿಂದ ಪ್ರವರ್ತನಗೊಂಡ ಬಳಿಕ ೬೩ ಪುರಾತನರ ಜೊತೆಗೆ (ಬಸವ ಪೂರ್ವದ, ಬಸವ ಸಮಕಾಲದ, ಬಸವೋತ್ತರಕಾಲದ) ಪ್ರಮುಖ ಶಿವಶರಣರ ನಾಮಗಳೂ ೬೩ ಪುರಾತನರ ಹೆಸರುಗಳೊಂದಿಗೆ ಸೇರ್ಪಡೆಯಾದುವು. ಈ ಸಾವಿರ ನಾಮಗಳು ವೀರಶೈವರಿಗೆ ಮಾತ್ರ ಪವಿತ್ರ. ಆದರೆ, ಬ್ರಾಹ್ಮಣ ಕವಿಯೊಬ್ಬ 'ಬಸವೇಶ್ವರನ ದಿವ್ಯಪದ ತಾಮರಸಮಂ' ನೆನೆದು 'ಪ್ರಭುರಾಯನಂಘ್ರಿಗಾನತನಾಗಿ' ಗಣಸಹಸ್ರನಾಮವನ್ನು 'ಶಿವಭಕ್ತನಿಕರ ಚಿಂತಾರತ್ನ'ರಿಗೆ (ವೀರಶೈವರಿಗೆ) ಹೇಳಹೊರಟಿರುವುದನ್ನು ನೋಡಿದರೆ, 'ಬಸವೇಂದ್ರಾಶ್ರಿತನಾಗಿದ್ದ ತಂದೆ ಲಿಂಗಣ್ಣ ಕವಿಯಂತೆ ಮಗ ವೆಂಕಣ್ಣನು ೨ನೆಯ ಬಸವಪ್ಪನಾಯಕನ (ಕ್ರಿ.ಶ.೧೭೪೦–೧೭೫೫) 'ಆಶ್ರಿತ'ನಾಗಿರದಿದ್ದರೂ ತಂದೆಗೆ ಆಶ್ರಯ ಕೊಟ್ಟಿದ್ದ ಪ್ರಭುವನ್ನೂ ಆತನ ಪರಿವಾರದ 'ಶಿವಭಕ್ತನಿಕರ ಚಿಂತಾರತ್ನ'ರನ್ನೂ ಮೆಚ್ಚಿಸುವ ಸಲುವಾಗಿ ಈ ಕೃತಿಯನ್ನು ರಚಿಸಿರಬಹುದು. ಶ್ರೀ ಜೋಯಿಸರು ಅಭಿಪ್ರಾಯಪಟ್ಟಿರುವಂತೆ,

ಪ್ರಯತ್ನಗಳಿಂದ ಶಾಸನ ಸಾಹಿತ್ಯ ಇಂದು ಎಲ್ಲರಿಗೂ ಸುಲಭವಾಗಿ ದೊರಕುವಂತಾಗಿದೆ. ಬೇರೆ ಬೇರೆ ಸ್ಥಳಗಳಲ್ಲಿ ಚೆದರಿ ಹೋಗಿರುವ ಶಿಲಾಶಾಸನ ರಚನೆಗಳು ವೆಂಕಣ್ಣನ ಗಮನಕ್ಕೆ ಬಂದಬಗೆ ಹೇಗೆ ಎಂಬುದು ನಮ್ಮ ಕುತೂಹಲವನ್ನು ಕೆರಳಿಸುವ ಸಂಗತಿ.

ವೆಂಕಣ್ಣನ ಶತಕದಲ್ಲಿಯ ವೈರಾಗ್ಯದೃಷ್ಟಿ ಅಪ್ಪಯ್ಯದೀಕ್ಷಿತರ ಶಿವಾಪರಾಧ ಕ್ಷಮಾಪಣ ಸ್ತೋತ್ರದಿಂದ ಪ್ರಭಾವಿತವಾಗಿರಬಹುದು ಎಂದು ನನಗನ್ನಿಸುತ್ತದೆ. "ಕಿಂ ಯಾನೇನ ಧನೇನ ವಾಜಿ ಕರಿಭಿಃ... ಪುತ್ರಕಳತ್ರ ಮಿತ್ರ ಪಶುಭಿರ್ದೇಹೇನಗೇಹೇನ ಕಿಮ್..." ಈ ಮಾತುಗಳನ್ನು ಮುಖ್ಯವಾಗಿ ಶತಕದ ೫೨ನೆಯ ಪದ್ಯದ ಮಾತುಗಳೊಂದಿಗೆ ಹೋಲಿಸಿ ನೋಡಬಹುದು. ಅಲ್ಲದೆ, ಇಲ್ಲಿ ಉದ್ಧರಿಸಿಕೊಟ್ಟಿರುವ ಮಾತುಗಳುಳ್ಳ ಸಂಸ್ಕೃತ ಪದ್ಯದ ಮುಡಿ 'ಶ್ರೀ ಪಾರ್ವತೀವಲ್ಲಭಾ' ಎಂಬ ಮುಡಿಮಾತಿಗೆ ಪ್ರೇರಕವಾಗಿರಬಹುದು.

ಶತಕದ ೯೯ನೆಯ ಪದ್ಯಕ್ಕೂ ಆಸ್ತಿಕರಲ್ಲಿ ಪ್ರಚಾರದಲ್ಲಿರುವ 'ಶಿವಮಾನಸ ಪೂಜಾ ಸ್ತೋತ್ರದ'ದ ಒಂದು ಪದ್ಯಕ್ಕೂ ಇರುವ ಬಹು ಹತ್ತಿರದ ಹೋಲಿಕೆ ಗಮನಾರ್ಹ; ಪ್ರಸಿದ್ಧವಾದ ಸಂಸ್ಕೃತ ಪದ್ಯ ಇದು:

ಆತ್ಮಾ ತ್ವಂ ಗಿರಿಜಾ ಮತಿಸ್ಸಹಚರಾಃ ಪ್ರಾಣಾಶ್ಶರೀರಂ ಗೃಹಂ।
ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿಸ್ಥಿತಿಃ॥
ಸಂಚಾರೇಃ ಪದಯೋಃ ಪ್ರದಕ್ಷಿಣ ವಿಧಿಃ ಸ್ತೋತ್ರಾಣಿ ಸರ್ವಾಗಿರೋ।
ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ ತವಾರಾಧನಂ॥

ಬಹುಶಃ ಆತನ ನಿತ್ಯಪಠನೆಯಲ್ಲಿದ್ದ ಸ್ತೋತ್ರ ಕವಿಯ ಮೇಲೆ ಪ್ರಭಾವ ಬೀರಿದ್ದರೆ ಅದರಲ್ಲಿ ಆಶ್ಚರ್ಯವಿಲ್ಲ.

ಅನೇಕ ಹೂವುಗಳಿಂದ ಸಂಗ್ರಹಿಸಿದ್ದರೂ ಮಕರಂದವು ಮಧುಕರಕ್ರಿಯೆಯಿಂದ ಅನನ್ಯವಾದ ಮಧುವಾಗಿ ಸೇವ್ಯವಾಗುವುದಿಲ್ಲವೆ? ಅನೇಕ ಕಾವ್ಯಗಳ ವಿಷಯವೂ ಹಾಗೆಯೆ. ಈ ಮಾತಿಗೆ ಈ ಶತಕವೂ ಹೊರತಲ್ಲ.

**ಗಣಸಹಸ್ರನಾಮ :** ವೆಂಕಣ್ಣಕವಿ ಸ್ಮಾರ್ತಬ್ರಾಹ್ಮಣ; ಅದ್ವೈತದರ್ಶನವನ್ನು ಒಪ್ಪಿಕೊಂಡವನು; ಆದರೂ, ಸಗುಣಾರಾಧನೆಯಲ್ಲಿ ಶೈವ; ಕೆಳದಿಯ ರಾಮೇಶ್ವರ ಇಷ್ಟದೈವ. ಈ ಮಾತಿಗೆ, 'ಪಾರ್ವತೀವಲ್ಲಭಶತಕ'ದ ೪೯ನೆಯ ಪದ್ಯದಲ್ಲಿ ಸಾಕ್ಷ್ಯಾಧಾರವಿದೆ:

**ನರಹರಿವಿಜಯ :** ಈ ಕೃತಿಯ ಮೊದಲ ಹಲವು ಪದ್ಯಗಳು ನಷ್ಟವಾಗಿರುವುದರಿಂದ ಕವಿಯ ಸ್ವವಿಷಯ ನಿರೂಪಣೆಯಿಂದಲೂ ಕಥಾರಂಭ ಭಾಗದಿಂದಲೂ ನಾವು ಅರಿಯಬಹುದಾಗಿದ್ದ ಕೆಲವು ಮುಖ್ಯ ಸಂಗತಿಗಳು ನಮ್ಮ ಗಮನಕ್ಕೆ ಬಾರದಂತಾಗಿರುವುದು ವ್ಯಸನಕರವಾದ ಸಂಗತಿ. ಇದರಿಂದ ನಾವು ಕಲಿಯಬೇಕಾದ ಪಾಠ ಏನೆಂದರೆ, ಪ್ರಸಿದ್ಧ ಹಸ್ತಪ್ರತಿಗ್ರಂಥಾಲಯಗಳನ್ನು ಬಿಟ್ಟು ಸಾರ್ವಜನಿಕರ ವಶದಲ್ಲಿ ಮನೆತನದ ಆಸ್ತಿ ಎಂದು ಸರಿಯಾದ ಸಂರಕ್ಷಣ ಸಾಧನಗಳಿಲ್ಲದೆ ನಷ್ಟವಾಗುವುದರಲ್ಲಿರುವ, ನಾಡಿನ ಅಮೂಲ್ಯ ಸಾಂಸ್ಕೃತಿಕ ಆಸ್ತಿ ಎನ್ನಬಹುದಾದ ಹಸ್ತಪ್ರತಿಗಳ ಸಂಗ್ರಹಣಕ್ಕೆ ನಾವು ಆದ್ಯ ಗಮನಕೊಡಬೇಕು ಎಂಬ ಸಂಗತಿ. ಮತ್ತು ಅವುಗಳನ್ನು ಆದಷ್ಟು ಬೇಗ ಪ್ರಕಟಿಸಿ ಸಂಶೋಧಕರ ವಿಶ್ಲೇಷಣೆಗೆ ಒದಗಿಸಬೇಕು. ಗಣಸಹಸ್ರನಾಮ ಕಾವ್ಯ ಅಲ್ಲದಿರಬಹುದು. ನಾವು ಈ ಹಿಂದೆಯೆ ಗಮನಿಸಿರುವಂತೆ, ಒಂದು ಕಾಲದ ಧಾರ್ಮಿಕ ಧೋರಣೆಗೆ ದೃಷ್ಟಾಂತವಾಗಿರುವ ಅದಕ್ಕೆ ಸಾಂಸ್ಕೃತಿಕ ಮೌಲ್ಯ ಇದೆ. 'ನರಹರಿವಿಜಯ'ಕ್ಕೆ ತಿರುಗೋಣ: ಇದು ಒಂದು ಮಧ್ಯಮ ದರ್ಜೆಯ ಕಿರುಕಾವ್ಯ ಎನ್ನುವುದರಲ್ಲಿ ಸಂಶಯವಿಲ್ಲ. ಕವಿ ವೆಂಕಣ್ಣ, ಕುಮಾರವ್ಯಾಸಾದಿ ಭಾಮಿನಿ ಷಟ್ಪದಿಕಾರರ ಕೃತಿಗಳನ್ನು ಓದಿ ಅರಗಿಸಿಕೊಂಡು ಭಾಮಿನಿ ಷಟ್ಪದೀ ರಚನೆಯ ನಡೆಯನ್ನು ಸ್ವಾಧೀನಪಡಿಸಿಕೊಂಡಿದ್ದಾನೆ. ಇವನ ಭಾಮಿನೀ ಪದ್ಯಗಳ ಓಟದಲ್ಲಿ ಓಘವಿದೆ; ಭಾವಾನುಗುಣವಾಗಿ ಪದಗಳನ್ನು ಜೋಡಿಸುವ ಶಕ್ತಿ ಇದೆ. ನಾಟಕೀಯ ಸನ್ನಿವೇಶಗಳನ್ನು ಆಕರ್ಷಕವಾಗಿ ನಿರ್ವಹಿಸಬಲ್ಲ. ನನಗೆ ಬಲು ಮೆಚ್ಚಾದ ಭಾಗ ಎಂದರೆ, ಹಿರಣ್ಯಕಶಿಪುವಿನ ಆಜ್ಞೆಯಂತೆ ದನುಜರು ಹಾರುವರನ್ನು ಪೀಡಿಸುವ ವೈಖರಿಯನ್ನು ವರ್ಣಿಸುವಾಗ ಹಾರುವರ ಆಚಾರ ವಿಚಾರಗಳನ್ನು ವಿಡಂಬನೆ ಮಾಡುವ ಭಾಗ. ಈ ಭಾಗದಲ್ಲಿ ಹಾಸ್ಯರಸ ನಿರೂಪಣೆ ಸ್ಫುಟವಾಗಿ ಮೂಡಿದೆ. ಬ್ರಾಹ್ಮಣ ಕವಿಯೊಬ್ಬ ತನ್ನ ಪಂಗಡದ ಪ್ರತಿನಿಧಿಗಳನ್ನು ಹೀಗೆ ಲೇವಡಿಗೆ ಗುರಿಮಾಡಿರುವುದು – ಸ್ವಜನ ವಿಡಂಬನೆ – ಉತ್ತಮ ಮಟ್ಟದ ಹಾಸ್ಯ. ಕುಮಾರವ್ಯಾಸನು ದ್ರೌಪದೀ ಸ್ವಯಂವರ ಪ್ರಕರಣದಲ್ಲಿ ಹಾರುವರನ್ನು – ಗಡ್ಡದುಪಾಧ್ಯಾಯರನ್ನು – ಗೇಲಿಮಾಡಿಸಿರುವುದನ್ನು ಈ ಪ್ರಸಂಗ ನೆನಪಿಗೆ ತರುತ್ತದೆ. ಹರಿಭಕ್ತಿಯ ಮೇಲ್ಮೆಯನ್ನು ಎತ್ತಿಹಿಡಿದಿರುವ ಈ ಕೃತಿ ಕವಿಯ ತಾತ್ವಿಕ ಧೋರಣೆಗೂ ನಿದರ್ಶನ. 'ಪಾರ್ವತೀವಲ್ಲಭ ಶತಕ'ದಲ್ಲಿ ಶಿವಭಕ್ತಿಯನ್ನು ಸ್ವಂತದ ಅನುಭವವಾಗಿ ಪ್ರತಿಪಾದಿಸಿದ್ದರೆ, ಹರಿಭಕ್ತಿಯನ್ನು ಅಷ್ಟೇ ನಿಷ್ಠೆಯಿಂದ ಇಲ್ಲಿ ನಿರೂಪಿಸಿದ್ದಾನೆ ಕವಿ ವೆಂಕಣ್ಣ. ಹರಿಹರರಲ್ಲಿ ಸಮಾನವಾದ ಭಕ್ತಿಯನ್ನು

'ಉಪ್ಪುಂಡ ಮನೆಗೆ ಎರಡು ಬಗೆಯಬಾರದೆಂಬಂತೆ" ಕೆಳದಿ ಆಸ್ಥಾನಕ್ಕೆ ಕೃತಜ್ಞತೆ ತೋರಿಸಲು ಪ್ರಯತ್ನಿಸಿ ಅವರನ್ನು ನೆನೆಯುತ್ತಾ ತನ್ನ ಬಡತನದಲ್ಲಿಯೂ ಅಳುಕದೆ ಕಾವ್ಯರಚನೆ ಮಾಡಿದ್ದಾನೆ." (ಪು.೨೦) ಎಂದು ಊಹಿಸಲು ಪದ್ಯದಲ್ಲಿ (ಪ.೧) ಆಧಾರವಿಲ್ಲ. 'ಕೆಳದಿಪುರದ ರಾಮೇಶ್ವರ'ನ ಉಲ್ಲೇಖ ವೆಂಕಣ್ಣ ಕೆಳದಿಯಲ್ಲಿದ್ದಾಗಲೇ ಕೃತಿರಚನೆಮಾಡಿರುವ ಸಂಭವ ಹೆಚ್ಚು ಎನ್ನಲು ಪೋಷಕವಾಗಿದೆ. ಪಾರ್ವತೀವಲ್ಲಭ ಶತಕದಲ್ಲಿ 'ಕೆಳದೀ ಲಿಂಗಪ್ಪ ಸನ್ಮಂತ್ರಿ ಭಾಸ್ಕರನಾತ್ಮೋದ್ಭವ' ಎಂದು ಹೇಳಿಕೊಂಡಿರುವನಷ್ಟೆ (ಶತಕ ಪದ್ಯ ೨). ಲಿಂಗಣ್ಣನು ಬಸವಪ್ಪನ ಕಾಲದಲ್ಲಿಯೇ ಕೆಳದಿ ನೃಪವಿಜಯದ ಬಹುಭಾಗವನ್ನು ಬರೆದಿದ್ದು, ೧೭೬೩ ರ ತರುವಾಯ ಆವರೆಗಿನ ಕೆಳದಿಯ ಚರಿತ್ರೆಯನ್ನೂ ಕಾವ್ಯದಲ್ಲಿ ಅಡಕಮಾಡಿರುವಂತೆ ತೋರುತ್ತದೆ. ತಂದೆ ಮಕ್ಕಳು ಸಮಕಾಲೀನವಾಗಿ ಕಾವ್ಯರಚನೆಮಾಡಿರಬಾರದೇಕೆ? ರಾಜ್ಯಪತನವಾದ ಮೇಲೆ ವೀರಶೈವ ಸಮಾಜವನ್ನು ಮೆಚ್ಚಿಸ ಹೊರಟು ವೆಂಕಣ್ಣ 'ಗಣಸಹಸ್ರನಾಮ'ವನ್ನು ಬರೆದನೆಂದು ಹೇಳುವುದು ಯುಕ್ತಿಯುಕ್ತವಾಗಿ ಕಾಣಿಸುವುದಿಲ್ಲ. ಇಷ್ಟು ಹೇಳಿಯೂ, ಹೀಗೆಯೇ ಸರಿ ಎಂದು ಹೇಳುವುದು ಕಷ್ಟ.

'ಗಣಸಹಸ್ರನಾಮ'ದ ಮೊದಲ ಹತ್ತು ಪದ್ಯಗಳನ್ನು ಓದಿದರೆ, ವಾರ್ಧಿಕ ಷಟ್ಪದೀ ರಚನೆಯಲ್ಲಿ ಕವಿಗಿರುವ ಪ್ರಭುತ್ವ ವೇದ್ಯವಾಗುತ್ತದೆ. ಹನ್ನೊಂದನೇ ಪದ್ಯದಿಂದ ತೊಡಗಿ, "ಹರಗಣರನಾಮಗಳು ಬರೆ ಬರೆ ಪದಂಗಳೊಳು ವಿರಚಿಸಿದ" ಈ ಕಾವ್ಯದಲ್ಲಿ ಅಲ್ಲಲ್ಲಿ ಶೈಥಿಲ್ಯವೂ ಛಂದೋದೋಷಗಳೂ ಕಂಡುಬಂದಿದ್ದರೆ, ಅಂಕಿತನಾಮಗಳನ್ನು ಛಂದಸ್ಸಿಗೆ ಅನುಸಾರವಾಗಿ ಪವಣಿಸುವುದರಲ್ಲಿ ಇರುವ ಕಷ್ಟಸಾಧ್ಯತೆ ಪದ್ಯರಚನೆಯಲ್ಲಿ ನುರಿತವರಿಗೆ ಮಾತ್ರ ಮನವರಿಕೆಯಾಗತಕ್ಕ ಸಂಗತಿ. ಕವಿ ಈ ರಚನೆಯನ್ನು ಕಾವ್ಯ ಎಂದಿರುವುದು ಕೇವಲ ಉಪಚಾರದ ಮಾತು, ಅಷ್ಟೆ. ಇದರಲ್ಲಿ ಕಾವ್ಯಗುಣವನ್ನು ನಾವು ಅರಸಬೇಕಾಗಿಲ್ಲ. ಕೃತಿರಚನೆಗೆ ಪ್ರೇರಣೆ ಯಾವ ಕಡೆಯಿಂದ ಹೇಗಾದರೂ ಬಂದಿರಲಿ, ಒಬ್ಬ ಬ್ರಾಹ್ಮಣಕವಿ ವೀರಶೈವರಿಗೆ ಪವಿತ್ರವಾದ ವಸ್ತುವನ್ನು ಆಯ್ದುಕೊಂಡು ಕೃತಿರಚನೆ ಮಾಡಿರುವುದು ಒಂದು ಅಪೂರ್ವ ನಿದರ್ಶನ; ಕೆಳದಿ ಅರಸರು ಎಲ್ಲ ಮತಧರ್ಮಗಳಿಗೂ ಸಮಾನವಾಗಿ ಪುರಸ್ಕಾರ ನೀಡುತ್ತಿದ್ದ ವಿಶಾಲ ಮನೋಧರ್ಮ ಪ್ರಜೆಗಳ ಮೇಲೂ ಸತ್ಪ್ರಭಾವವನ್ನು ಬೀರಿದ್ದಿತು ಎನ್ನುವುದಕ್ಕೆ ಒಂದು ಶ್ಲಾಘ್ಯ ಉದಾಹರಣೆ; ಜಾತಿಮತಗಳ ನಡುವೆ ವ್ಯಕ್ತಾವ್ಯಕ್ತವಾಗಿ ಇಂದು ನೆಲಸಿರುವ ವಿರಸ ನಿರಸನಕ್ಕೆ ಮದ್ದಾಗಬಹುದಾದ ಶ್ರೇಷ್ಠವಾದ ಮಾದರಿ.

# ೭. ಸರ್ವಜ್ಞ ವಚನಗಳು

## ಪ್ರಸ್ತಾವನೆ

**ಸರ್ವಜ್ಞ ಮತ್ತು ಆತನ ತ್ರಿಪದಿಗಳು**

ಸರ್ವಜ್ಞ ಜನತೆಯ ಕವಿ; ಆದರೆ ಜಾನಪದ ಕವಿಯಲ್ಲ. ಅವನ ಪದ್ಯಗಳು ಜಾನಪದ ಸತ್ವದಿಂದ ತುಂಬಿವೆ. ಅವನು ಜನತೆಗಾಗಿ ಜನ ಬಳಸುವ ಭಾಷೆಯಲ್ಲಿ, ಜಾನಪದ ಮಟ್ಟಿನ ತ್ರಿಪದಿಯಲ್ಲಿ ಸಮಯ ಸ್ಫೂರ್ತಿಯಿಂದ ಪದ್ಯಗಳನ್ನು ಕಟ್ಟಿಕೊಂಡು ಹೋದ. ಅವನು ಸಹಜ ಕವಿ; ಆಶುಕವಿ. ಸತತಾಭ್ಯಾಸ ಪ್ರಯತ್ನದಿಂದ, ಪೂರ್ವಕವಿ ಪರಿಚಯದಿಂದ, ಲಕ್ಷಣಕ್ಕೆ ಕಟ್ಟುಬಿದ್ದ, ತಾನು ಕವಿಯಾಗಬೇಕೆಂದು ಬಯಸಿ ಬರೆಯಲಿಲ್ಲ. ಪಂಡಿತರಿರಲಿ, ಪಾಮರರನ್ನು ಮೆಚ್ಚಿಸುವುದು ಕೂಡಾ ಅವನ ಗುರಿಯಲ್ಲ. ಕವಿಗಜಾರಣ್ಯದಲ್ಲಿ ಅವನು ಹಿಂಡಗಲಿದ ಒಂಟಿ ಸಲಗ; ಅವನು ನಡೆದದ್ದೇ ದಾರಿ. ಲೋಕಾನುಭವ ಅವನ ಪದ್ಯಗಳ ವಿಷಯ; ಲೋಕಶಿಕ್ಷಣ ಅವನ ಧ್ಯೇಯ. ರಸಾನುಭೂತಿಯಲ್ಲಿ ಸರ್ವಜ್ಞನನ್ನು ಯಾವುದೇ ದೃಷ್ಟಿಯಿಂದ ವಿವೇಚಿಸುವಾಗ, ಈ ಅಂಶಗಳನ್ನು ನೆನಪಿನಲ್ಲಿಡಬೇಕು.

ಸರ್ವಜ್ಞ ಪದ್ಯಗಳನ್ನು ಬರೆಯಲಿಲ್ಲ, ಕಟ್ಟಿಕೊಂಡುಹೋದ ಎಂದರೆ, ಅವನು ಬರಹ ಬಾರದ ಶುದ್ಧ ಶುಂಠಿಕಾಯಿ ಎಂದು ಅರ್ಥವಲ್ಲ. ಬರೆದಿಡುವುದರಲ್ಲಿ ಅವನಿಗೆ ನಂಬಿಕೆಯಿಲ್ಲ; ಬರೆಯುವ ಗೋಜಿಗೆ ಅವನು ಹೋಗಿರಲಾರ; "ಬರೆದವರ ಕೂಡ ಹಗೆ ಬೇಡ" ಎಂದು ಬಹುಶಃ ವ್ಯಂಗ್ಯವಾಗಿ ಬರೆಯಬಲ್ಲವರ ಶಕ್ತಿಯನ್ನು ಎತ್ತಿ ಆಡಿರುವ ಅವನು ಬರೆಯುವ ಹವ್ಯಾಸದಿಂದ ದೂರವಾದವನೆ.

ಹೇಳಲರಿಯೆ ನಾನು ಹೇಳೆನೆ ಹೇಳಿದೆ
ಭಾಳಲೋಚನನಾ ಶರಣರ – ಆಳಾಗಿ
ಹೇಳಿದೆ ನೋಡ ಸರ್ವಜ್ಞ

– ಎಂದಿರುವುದರಿಂದ, ಊರೂರು ಕೇರಿಕೇರಿ ತಿರುಗುತ್ತ ಸರ್ವಜ್ಞ ಪದ್ಯಗಳನ್ನು ಹೇಳಿಕೊಂಡು ಅಥವಾ ಹಾಡಿಕೊಂಡು ಹೋಗಿರಬೇಕು. ಸರ್ವಜ್ಞನ ವ್ಯಕ್ತಿತ್ವಕ್ಕೆ ಮಾರುಹೋಗಿ ಶಿಷ್ಯರಂತೆ ಅವನನ್ನು ಅನುವರ್ತಿಸಿದವರು ಒಬ್ಬಿಬ್ಬರು

ಪ್ರದರ್ಶಿಸುವುದು ಅದ್ವೈತ ಸಿದ್ಧಾಂತಕ್ಕೆ ಸಹಜವಾದುದು.

ಒಟ್ಟಿನಲ್ಲಿ ಈ ಮೂರು ಕೃತಿಗಳೂ – ಅವನ ಕೀರ್ತನೆಗಳನ್ನೂ ಗಮನದಲ್ಲಿಟ್ಟು ಕೊಂಡು ಹೇಳುವುದಾದರೆ – ಕವಿ ವೆಂಕಣ್ಣನಿಗೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಗಮನಾರ್ಹ ಸ್ಥಾನವನ್ನು ಕಲ್ಪಿಸಿಕೊಡತಕ್ಕವಾಗಿವೆ.

೨೦–೩–೧೯೮೦ **ಎಂ.ವಿ. ಸೀತಾರಾಮಯ್ಯ**

ಬೆಂಗಳೂರು–೧೯

ಸಾಲವನು ಕೊಂಬಾಗ ಹಾಲೋಗರುಂಡಂತೆ
ಸಾಲಿಗನು ಬಂದು ಎಳೆವಾಗ – ಕಿಬ್ಬದಿಯ
ಕೀಲು ಮುರಿದಂತೆ ಸರ್ವಜ್ಞ (ಕಿ.ಕೋಶ, ಪು. ೧೫೪೮)

ಸಾಲವ ಕೊಂಬಾಗ ಹಾಲು ಕೂಳುಂಬಂತೆ
ಸಾಲವ ಮರಳಿ ಕೊಡುವಾಗ – ಕಿಬ್ಬರಿಯ
ಕೀ(ಕೋ?)ಲು ಕೊಂಡಂತೆ ಪರಮಾರ್ಥ('ಪರಮಾರ್ಥ', ೮೯೮)

ಇಂಥ ಸಂದರ್ಭಗಳಲ್ಲಿ ಯಾವ ಪದ್ಯವನ್ನು ಸ್ವೀಕರಿಸಬೇಕು, ಅಥವಾ ಎಲ್ಲ ಪದ್ಯಗಳನ್ನು ಇಟ್ಟುಕೊಳ್ಳಬೇಕೆ, ಯಾವುದು ಪ್ರಕ್ಷಿಪ್ತ ಯಾವುದು ಅಲ್ಲ, ಸಂದೇಹ ಬಂದ ಕಡೆ ಯಾವ ಸೂತ್ರವನ್ನು ಅನುಸರಿಸಿ ಪಾಠಪರಿಷ್ಕರಣ ಮಾಡಬೇಕು, ಎಂಬ ಸಮಸ್ಯೆಗಳು ಗ್ರಂಥಸಂಪಾದಕನ ಮುಂದೆ ಪೆಡಂಭೂತವಾಗಿ ನಿಲ್ಲುತ್ತವೆ.

## ೨

ವಿರ್ತ್ ಮತ್ತು ಕಿಟೆಲ್ಲರ ತರುವಾಯ ಸರ್ವಜ್ಞ ವಚನಗಳ ಸಂಗ್ರಹಣ, ಪರಿಷ್ಕರಣ ಮತ್ತು ಪ್ರಕಾಶನಕ್ಕೆ ಮೊತ್ತಮೊದಲಿಗೆ ಕೈಹಾಕಿ ಅನೇಕ ವರ್ಷಗಳ ಸರ್ವಜ್ಞೋಪಾಸನೆಯ ಬಳಿಕ ಸವಿಸ್ತಾರವಾದ ಪೀಠಿಕೆಯೊಂದಿಗೆ ರೆವರೆಂಡ್ ಚನ್ನಪ್ಪ ಉತ್ತಂಗಿಯವರು ತಮ್ಮ ಪರಿಷ್ಕೃತ ಮುದ್ರಣವನ್ನು ೧೯೨೫ರಲ್ಲಿ ಹೊರ ತಂದರು. ಮೂಲ ಹಸ್ತಪ್ರತಿಗಳ ಸ್ವರೂಪದ ಬಗೆಗೆ ಅವರ ಅಭಿಪ್ರಾಯಗಳು ಗಮನಾರ್ಹ; ಅವನ್ನು ಸಂಗ್ರಹಿಸಿ ಕೆಳಗೆ ಕೊಟ್ಟಿದೆ:

ಸರ್ವಜ್ಞನು ಜೀವಂತನಿರುವಾಗ ಬರೆಯಲ್ಪಟ್ಟ ಓಲೆಯ ಪ್ರತಿಗಳೂ ದೊರೆತಿಲ್ಲ. ಇದುವರೆಗೂ ಲಿಖಿತವಾದ ಸರ್ವಜ್ಞನ ಕೈಬರಹದ ಪ್ರತಿಗಳು ಮೂಲ ಸಂಗ್ರಹಗಳೆಂತಲೂ ನೂತನ ಸಂಗ್ರಹಗಳೆಂತಲೂ ಎರಡು ಭಾಗಗಳಾಗಿ ವಿಭಾಗಿಸಬಹುದು. ಮೊದಲನೆಯ ತರದ ಪ್ರತಿಗಳು ಅಲ್ಲಲ್ಲಿ ವ್ಯತ್ಯಾಸವುಳ್ಳವುಗಳಾಗಿದ್ದರೂ ಒಂದನ್ನೊಂದು ಹೋಲುತ್ತಿರುವುವು. ಆದರೆ ಎರಡನೆಯ ತರದ ಪ್ರತಿಗಳು ಹಾಗಲ್ಲ. ಇವು ಸ್ವತಂತ್ರ ಕ್ರಮದಿಂದ ಬರೆಯಲ್ಪಟ್ಟಿದ್ದು ಪ್ರತಿ ಒಂದರಲ್ಲಯೂ ಹೊಸ ಪದ್ಯಗಳು ದೊರೆಯುತ್ತಾ ಹೋಗುವವು. ಇದರಿಂದ ಸರ್ವಜ್ಞನು ಕಾಲವಾದ ಕೆಲವು ವರ್ಷಗಳಲ್ಲಿ ಆಗ್ಗೆ ರೂಢಿಯಲ್ಲಿದ್ದ ಪದ್ಯಗಳ ಹೊರ್ತು ಅನೇಕ ಹೊಸ ಪದ್ಯಗಳುಂಟಾದುವೆಂದೂ ಇವುಗಳನ್ನು ಸಂಗ್ರಹಿಸುವ

ಅವನು ಮತ್ತೆ ಮತ್ತೆ ಹೇಳಿದ ಪದ್ಯಗಳನ್ನು ಬರೆದಿಟ್ಟಿರಬೇಕು; ಇಲ್ಲವೇ ಹೃದ್ಗತ ಮಾಡಿಕೊಂಡು ಮುಖಸ್ಥವಾಗಿ ಸಂರಕ್ಷಿಸಿರಬಹುದು. ಈ ಪದ್ಯಗಳ ಸೊಬಗನ್ನೂ ಬೆಲೆಯನ್ನೂ ಅರಿತವರು ಸರ್ವಜ್ಞನ ಅನುವರ್ತಿಗಳಿಂದ ಹೇಳಿಸಿ ಗ್ರಂಥಸ್ಥವಾಗಿ ಮಾಡಿರಬೇಕು. ಹೀಗೆ ಮುಖಸ್ಥವಾಗಿ ಜನಧಾರಣೆ ಮಾಡಿದ ಸರ್ವಜ್ಞನ ಪದಗಳು ಬಾಯಿಂದ ಬರಹಕ್ಕೂ ಮತ್ತೆ ಬರಹದಿಂದ ಬಾಯಿಗೂ, ಒಂದು ಗ್ರಂಥದಿಂದ ಮತ್ತೊಂದು ಗ್ರಂಥಕ್ಕೂ ಪರ್ಯಾಟನೆ ಮಾಡಿ, ಅನೇಕ ಹಸ್ತಪ್ರತಿಗಳು ಹುಟ್ಟಿಕೊಂಡಿವೆ. ಪಂಪಾದಿ ಪ್ರತಿಷ್ಠಿತ ಕವಿಗಳ ಸ್ವಹಸ್ತಾಕ್ಷರ ಪ್ರತಿಗಳೇ ಅನ್ಯ ಲಿಪಿಕಾರರ ಕೈವಾಡದಿಂದ ಪಾಠವ್ಯತ್ಯಾಸಗಳಿಗೆ ಎಡೆಗೊಟ್ಟಿರುವಲ್ಲಿ, ಮುಖಸ್ಥವಾಗಿ, ಗ್ರಂಥಸ್ಥವಾಗಿ ಎರಡೂ ವಿಧಾನಗಳಲ್ಲಿ ಸಾಗಿ ಬಂದಿರುವ ಸರ್ವಜ್ಞನ ಪದ್ಯಗಳಲ್ಲಿ ಹೇರಳವಾದ ಪಾಠ ವ್ಯತ್ಯಾಸಗಳಿದ್ದರೆ ಆಶ್ಚರ್ಯಪಡಬೇಕಾಗಿಲ್ಲ. ಜೊತೆಗೆ ಸರ್ವಜ್ಞನೇ ತಾನು ಒಮ್ಮೆ ಹೇಳಿದ ಪದ್ಯವನ್ನು ಮತ್ತೆ ಹೇಳಿದಾಗ ಅಲ್ಪಸ್ವಲ್ಪವೋ ಗಮನಾರ್ಹವೋ ಆದ ವ್ಯತ್ಯಾಸಗಳಾಗಿ, ಒಂದೇ ಪದ್ಯದ ಎರಡು ಮೂರು ಪಾಠಭೇದಗಳು ಇರುವ ಸಂದರ್ಭಗಳೂ ಉಂಟು. ಈ ನಿದರ್ಶನಗಳನ್ನು ನೋಡಿ:

ಕಂಡುದನು ನುಡಿದೊಡನೆ ಕೆಂಡವಾಗುವುದೇಕೆ
ಮಂಡಲದ ಒಳಗೆ ಜಾರದಿಹ – ಮನುಜರನು
ಕಂಡಿರುವದುಂಟೆ ಸರ್ವಜ್ಞ

ಕಂಡಂತೆ ಹೇಳಿದರೆ ಕೆಂಡ ಉರಿಯುವುದು ಭೂ–
ಮಂಡಲದ ಒಳಗೆ ಖಂಡಿತವ – ನಾಡುವರ
ಕಂಡಿಹುದೆ ಕಷ್ಟ ಸರ್ವಜ್ಞ

ಸಾಲವನು ತರುವಾಗ ಹಾಲುಬೋನುಂಡಂತೆ
ಸಾಲಿಗನು ಬಂದು ಕೇಳಿದರೆ – ಕುಂಡಿಗಂ
ಚೇಳು ಕಡಿದಂತೆ ಸರ್ವಜ್ಞ (ಚಉ. ೧೩೯೦–೧೨೬೪)

ಸಾಲವನು ಕೊಂಬಾಗ ಹಾಲುಹಣ್ಣುಂಡಂತೆ
ಸಾಲಿಗನು ಬಂದು ಎಳೆವಾಗ – ಕಿಬ್ಬದಿಯ
ಕೀಲು ಮುರಿದಂತೆ ಸರ್ವಜ್ಞ (ಚಉ. ೧೩೯೧ – ೧೨೬೫)

**ಬಳ್ಳಾರಿ ಗ್ರಂಥ:**

ಅಂದಿನಾ ಪುಷ್ಪದತ್ತ ಒಂದೇ ವರುಷಿಯಾಗಿ
ಮುಂದವ ಸಾಲೆ ಸರ್ವಜ್ಞನೆಂದೆನಿಸಿ
ನಿಂದವನು ನಾನೆ ಸರ್ವಜ್ಞ

**ಬೆಂಗಳೂರು ನೀತಿಸಾರ:**

ಅಂದಿನ ಪುಷ್ಪದತ್ತ ಮುಂದೆ ವರುಷಿಯಾಗಿ
ಸಂದೇಹಮುಳಿದು ಸರ್ವಜ್ಞನೆಂದೆನಿಸಿ
ನಿಂದವನು ನಾನೆ ಸರ್ವಜ್ಞ

ಇಲ್ಲಿ ಟೀಕಾಕಾರನು 'ಒಂದೇ ವರುಷಿಯಾಗಿ' ಎಂಬುದಕ್ಕೆ ಒಮ್ಮೆ ದೇವಸಭೆಯಲ್ಲಿ ಋಷಿಯಾಗಿದ್ದವನೆಂದು ಅರ್ಥಮಾಡಿದರೂ 'ಸಾಲೆ ಸರ್ವಜ್ಞ' ಎಂಬುದಕ್ಕೆ ಅರ್ಥ ಮಾಡದೇ ಹೋಗಿದ್ದಾರೆ. ಸಾಲೆ ಸರ್ವಜ್ಞನೆಂಬುದಕ್ಕೆ ಕಿಟೆಲ್ ಪಂಡಿತರು ಸಾಲೆಯಲ್ಲಿ ಕಲಿತವನೆಂದು ಅರ್ಥ ಮಾಡಿಕೊಂಡಿದ್ದಾರೆ. ಆದರೆ ಮೂಲಪ್ರತಿ ನೋಡಿದರೆ 'ಕುಂಬಾರ ಸಾಲೆ'ಯಲ್ಲಿ ಸರ್ವಜ್ಞನು ಬಾಲ್ಯವನ್ನು ಕಳೆದದ್ದರಿಂದ ಬಂದ ಹೆಸರೆಂದು ಸ್ಪಷ್ಟವಾಗುತ್ತದೆ. ಪದ್ಯದ ಮೂಲರೂಪ:

ಅಂದಿನ ಪುಷ್ಪದತ್ತ ಬಂದ ವರರುಚಿಯಾಗಿ
ಮುಂದವ ಸಾಲೆ ಸರ್ವಜ್ಞ ನೆಂದನಿಸಿ
ನಿಂದವನು ನಾನೆ ಸರ್ವಜ್ಞ

ಇಂತಹ ದೋಷಗಳು ೫೦೦ಕ್ಕೂ ಮಿಗಿಲಾಗಿವೆ ಎಂದು ಉತ್ತಂಗಿ ತಿಳಿಸಿದ್ದಾರೆ.

ಕಲ್ಪನೆಯಿಂದ ತಿದ್ದಿದರೆ ಪದ್ಯ ಹೇಗೆ ಕೆಟ್ಟುಹೋಗುತ್ತವೆ ಎಂಬುದಕ್ಕೆ ;

**ಮುದ್ರಣ ಗ್ರಂಥ:**

'ಆನೆ ಮಕುರದೊಳಡಗೆ ಭಾನುವೊಳು ಶಶಿಯಡಗ
ಲೇನು ವೊಣೆಯವು ಜಗದೊಳಗೆ ಶಿವಯೋಗಿ
ಮೌನದಿಂದಿರುವ ಸರ್ವಜ್ಞ

[ಆನೆಯು ಕನ್ನಡಿಯೊಳಗೆ, ಸೂರ್ಯನ ಬೆಳಕಿನಲ್ಲಿ ಚಂದ್ರನು ಅಡಗಲಾಗಿ ಜಗದೊಳಗೆ ಏನು ಶೂನ್ಯತೆಯುಂಟಾಗುವುದು?]

**ಮೂಲಪ್ರತಿ:**

'ಆನೆ ಮಕುರದೊಳಡಗಿ ಭಾನು ಸರಸಿಯೊಳಡಗಿ
ಆನೆನ್ನ ಗುರುವಿನೊಳಡಗಿ ಸಂಸಾರ
ತಾನೆತ್ತಣದು ಸರ್ವಜ್ಞ

ಅವಶ್ಯಕತೆಯು ಬಿದ್ದು ಆರಂಭದಿಂದಲೇ ಸರ್ವಜ್ಞನ ಪದ್ಯ ಸಂಗ್ರಹದಲ್ಲಿ ಎರಡು ತರದ ಆವೃತ್ತಿಗಳು ಉದ್ಭವವಾದವೆಂದೂ ತಿಳಿದುಬರುತ್ತದೆ. ನಮಗೆ ದೊರೆತ ಮೈಸೂರು, ಮದ್ರಾಸ್ ಪ್ರಾಚ್ಯ ಕೋಶಾಲಯಗಳ ಪ್ರತಿಗಳಲ್ಲಿಯೂ ಇದೇ ತರದ ಭೇದವು ಒಡೆದು ಕಾಣುತ್ತದೆ. ಬಹುಶಃ ಈಗ ಅಚ್ಚಾದ ಗ್ರಂಥಗಳೆಲ್ಲ ಈ ಎರಡು ತರದ ಕೈಬರಹದ ಪ್ರತಿಗಳ ಮಿಶ್ರಮುದ್ರಣಗಳಿರುವವಷ್ಟೆ.

ಇವನ ಹಸ್ತಲಿಖಿತಗಳಲ್ಲಿ ಹಳಗನ್ನಡ 'ಱ' ಎಂಬ ಅಕ್ಷರವು ಆಗಾಗ್ಗೆ ದೊರೆಯುವುದರಿಂದ ಅವನ ಕಾಲವನ್ನು ತಿಳಿಯುವದಕ್ಕೆ ಸಹಾಯವಾಗುವುದು. ಕನ್ನಡದ ಹಳೇ ಬರಹ ಪದ್ಧತಿಯಂತೆ ಇವನ ಪ್ರತಿಗಳಲ್ಲಿ ಸೊನ್ನೆಯ ಬದಲಾಗಿ ಆಯಾ ವರ್ಗದ ಅನುನಾಸಿಕಗಳು ಬರುವುವಲ್ಲದೆ ಅ, ಆ ಎಂಬ ಸ್ವರಗಳನ್ನು ಬಿಟ್ಟು ಉಳಿದ ಎಲ್ಲ ಸ್ವರಗಳು ವ್ಯಂಜನಗಳಿಂದಲೇ ಬರೆಯಲ್ಪಟ್ಟಿವೆ.

ಮುದ್ರಣ ಪ್ರತಿಗಳ ವಿಚಾರ: ಸರ್ವಜ್ಞನ ಪದ್ಯಗಳ ಮೊದಲ ಮುದ್ರಣವಾದದ್ದು ೧೮೬೬ರಲ್ಲಿ. ಧಾರವಾಡದ ಹುಚ್ಚಯ್ಯ ಹೊನ್ನಾಪುರಮಠ ಇವರಿಂದ. ಶಿಲಾಮುದ್ರಣದ ಇದರಲ್ಲಿ ೨೨೫ ಪದ್ಯಗಳು ಇವೆ. ೧೮೬೭ರಲ್ಲಿ ಬೆಂಗಳೂರಿನ ವೆಸ್ಲಿಯನ್ ಮಿಷನ್ನಿನವರು ೧೦೫ ಪದ್ಯಗಳನ್ನು ಮುದ್ರಿಸಿರುವರು. ೧೯೨೦ರಲ್ಲಿ ಬೆಂಗಳೂರು ಪ್ರಿಂಟಿಂಗ್ ಪಬ್ಲಿಷಿಂಗ್ ಹೌಸಿನವರು 'ನೀತಿಸಾರ' ಎಂಬ ಹೆಸರಿನಿಂದ ಒಂದು ಮುದ್ರಣ ಹೊರ ತಂದಿದ್ದಾರೆ.[೧] ಈ ಎಲ್ಲ ಮುದ್ರಣಗಳೂ ತುಂಬಾ ದೋಷಪೂರ್ಣವಾಗಿವೆ. "ಸರ್ವಜ್ಞನ ಗ್ರಂಥವು ಗೋಡೆ ಬಿದ್ದು ಹೆಂಟೆಗಳು ಚೂರು ಚೂರಾಗಿ ಒಡೆದು ಹೋಗಿರುವ ಒಂದು ಹಾಳುಮನೆಗೆ ಸರಿಯಾಗಿದೆ ಎಂದು ಹೇಳಬೇಕು. ಇಂಥ ಸ್ಥಿತಿಯಲ್ಲಿ ವಚನಗಳ ಮೂಲವನ್ನು ಗೊತ್ತು ಹಚ್ಚಿ ಅವುಗಳನ್ನು ಮುಂಚಿನ ಸ್ಥಿತಿಗೆ ತರುವಂತದ್ದು ಕಷ್ಟಕರ. ಎಷ್ಟು ಶ್ರಮಿಸಿದರೂ ಕೆಲಸವು ಅತೃಪ್ತಿಕರ".

ಕೈಬರಹದ ಪ್ರತಿಗಳನ್ನು ಚೆನ್ನಾಗಿ ಶೋಧಿಸದೇ ಹೋದರೆ ಬರಹದ ದೋಷದಿಂದ ತಪ್ಪುಗಳು ಹೇಗೆ ಒಳನುಗ್ಗುವವೆಂದೂ ಕೇವಲ ಕಲ್ಪನೆಯಿಂದ ತಿದ್ದಲು ಯತ್ನಿಸಿದರೆ ಪದ್ಯಗಳು ಹೇಗೆ ಕೆಡುವವೆಂದೂ ತೋರಿಸುವುದಕ್ಕಾಗಿ ಉತ್ತಂಗಿಯವರು ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾರೆ.

---

೧. ಜಿ.ಎ. ವಿತ್ ಎಂಬ ಜರ್ಮನ್ ಪಾದ್ರಿ ೧೮೬೮ರಲ್ಲಿ ನೂರು ಪದ್ಯಗಳನ್ನು ತನ್ನ 'ಪ್ರಾಕ್ಕಾವ್ಯ ಮಾಲಿಕೆ'ಯಲ್ಲಿ ಪ್ರಕಟಿಸಿದನು. ಚನ್ನಪ್ಪ ಉತ್ತಂಗಿಯವರೇ ಹಲವು ಮುದ್ರಣಗಳನ್ನು ಹೊರತಂದಿದ್ದಾರೆ.

ಪ್ರಕಾರ 'ಪರಮಾರ್ಥ' ಈಚೆಗೆ (೧೯೭೨ರಲ್ಲಿ) ಡಾ॥ ಎಲ್.ಬಸವರಾಜು ಅವರು ಅತ್ಯಂತ ಪ್ರಾಚೀನವಾದ ಒಂದು ಓಲೆಗರಿಯ ಹಸ್ತಪ್ರತಿಯ ಆಧಾರದ ಮೇಲೆ 'ಪರಮಾರ್ಥ' ಎಂಬ ಅಂಕಿತವನ್ನೇ ಸ್ವೀಕರಿಸಿದರು. ತಮ್ಮ ಪರಿಷ್ಕೃತ ಮುದ್ರಣವನ್ನು 'ಪರಮಾರ್ಥ' ಎಂದೇ ಹೆಸರಿಸಿದ್ದಾರೆ.[೨] ಆದರೆ 'ಪರಮಾರ್ಥ'ದ ಹಸ್ತಪ್ರತಿಯನ್ನು ಬಿಟ್ಟು ಉಳಿದ ಎಲ್ಲ ಹಸ್ತಪ್ರತಿಗಳಲ್ಲಿ "ಸರ್ವಜ್ಞ" ಎಂಬ ಅಂಕಿತವಿರುವುದು ನಮಗೆ ತಿಳಿದುಬಂದಿರುವ ಸಂಗತಿ. ಈ 'ಬಹುಸಂಖ್ಯೆ' ಇಂದಿನ ಪ್ರಜಾಪ್ರಭುತ್ವದ ರಾಜಕೀಯದಲ್ಲಿ ನಿರ್ಣಾಯಕಪಾತ್ರವನ್ನು ವಹಿಸಬಹುದೇ ಹೊರತು ಗ್ರಂಥ ಸಂಪಾದನೆಯಂಥ ಶಾಸ್ತ್ರಪ್ರಪಂಚದಲ್ಲಿ ಅಲ್ಲ. ಒಂದೇ ಒಂದು ಹಸ್ತಪ್ರತಿ ಕವಿ ಪಾಠವನ್ನು ಉಳಿಸಿಕೊಂಡು, ಇತರ ಹಲವು ಹಸ್ತಪ್ರತಿಗಳು ಅಪಪಾಠವನ್ನೇ ಮುಂದುವರೆಸಿಕೊಂಡು ಬಂದಿರುವ ಸಾಧ್ಯತೆ ಉಂಟು. ಹೀಗಿರುವಲ್ಲಿ, ಯಾವ ಅಂಕಿತ ಸರಿ ಎಂದು ನಿರ್ಣಯಿಸುವಾಗ ವಿಚಾರದ ಓರೆಗಲ್ಲನ್ನು ಉಪಯೋಗಿಸಬೇಕು.

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ವಚನಕಾರರೂ ಹರಿದಾಸರೂ ಬಳಸಿರುವ ಅಂಕಿತಗಳನ್ನು ಪರಿಶೀಲಿಸಿದರೆ ಅಂಕಿತ ಸಾಧಾರಣವಾಗಿ ಕೃತಿಕಾರನ ಇಷ್ಟದೈವದ ಹೆಸರಾಗಿರುವುದು ಕಂಡುಬರುತ್ತದೆ. 'ಪರಮಾರ್ಥ' ಎಂದರೆ ಪರಮ ಪುರುಷಾರ್ಥವಾದ 'ಮೋಕ್ಷ' ಎಂದು ಅರ್ಥವಾದೀತೇ ಹೊರತು ಯಾವ ದೈವದ ನಾಮಾಂತರವೂ ಆಗದು. ಕೆಲವು ಹಸ್ತಪ್ರತಿಗಳಲ್ಲಿ 'ಪರಮಾರ್ಥ' ಎಂಬ ಅಂಕಿತ ಏಕೆ ಪ್ರಯೋಗವಾಗಿದೆ ಎಂಬುದನ್ನು ಪರಿಶೋಧಿಸಿ ತಿಳಿಯಬೇಕಾಗಿದೆ.[೩] 'ಪರಮಾರ್ಥ' ಎಂಬ ಪಾಠವನ್ನು ಆರ್. ನರಸಿಂಹಾಚಾರ್ಯರೇ ಗಮನಿಸಿ, "ನಮಗೆ

---

೨. ಎಲ್ಲ ಹಸ್ತಪ್ರತಿಗಳ, ಕೆಲವು ಮುದ್ರಿತ ಪ್ರತಿಗಳ, ಪಾಠಾಂತರಗಳನ್ನೂ ಒಳಗೊಂಡಂತೆ ೧೯೮೦ರಲ್ಲಿ ಪ್ರಕಟವಾಗಿರುವ 'ಪರಮಾರ್ಥ' ಸಂಶೋಧಕರಿಗೆ ತುಂಬ ಉಪಯುಕ್ತವಾದ ಮುದ್ರಣ.

೩. "ಪರಮಾರ್ಥ" ಪಾಠಸಂಪ್ರದಾಯಕ್ಕೆ ಮೂಲವಾದ ಮಾತೃಕೆಯಲ್ಲಿ ಉದ್ದಕ್ಕೂ 'ಪರಮಾತ್ಮ' ಎಂಬುದು ಲಿಪಿಕಾರನ ಬರಹದಲ್ಲಿ 'ಪರಮಾರ್ತ' ಎಂಬ ಭ್ರಮೆಗೆ ಕಾರಣವಾಗುವಂತೆ ಲಿಖಿತವಾಗಿದ್ದು, ತರುವಾಯದ ಸಂಪ್ರತಿಕಾರನು ಹಾಗೆಯೇ ಭ್ರಮಿಸಿ, ಅಲ್ಪ ಪ್ರಾಣ 'ತ' ಕಾರವನ್ನು ಮಹಾಪ್ರಾಣವಾಗಿಸಿ, "ಪರಮಾರ್ಥ" ಎಂದು ತಿದ್ದಿರಬಹುದು. ಈ ಸಂದರ್ಭದಲ್ಲಿ "ಸರ್ವಜ್ಞ" ಪದದಂತೆ "ಪರಮಾತ್ಮ"ವೂ ದೇವರ ವಿಶೇಷಣವಾಗುತ್ತದೆ. ಸರ್ವಜ್ಞನು ತನ್ನ ಇಷ್ಟಾನುಸಾರ ಎರಡು ಪದಗಳನ್ನೂ ಪ್ರಯೋಗಿಸಿರಬಹುದು. ಏಕರೂಪತೆಯ ದೃಷ್ಟಿಯಿಂದ ಸಂಪ್ರತಿಕಾರರು ಒಂದನ್ನು ಇಷ್ಟಾನುಸಾರ ಸ್ವೀಕರಿಸಿ, ಎರಡು ಪಾಠಸಂಪ್ರದಾಯಗಳಿಗೆ ಕಾರಣವಾಗಿರಬಹುದು.

[ಆನೆಯು ಕನ್ನಡಿಯಲ್ಲಿಯೂ, ಸೂರ್ಯನು ಸರೋವರದಲ್ಲಿಯೂ ಅಡಗಿರುವಂತೆ ನಾನು ನನ್ನ ಗುರುವಾದ ಪರಮಾತ್ಮನಲ್ಲಿ ಕೂಡಿಕೊಂಡಿರಲು ಸಂಸಾರವು ಹೇಗೆ ಅಂಟಿಕೊಳ್ಳುವುದು]

೩

ಸರ್ವಜ್ಞನ ತ್ರಿಪದಿಗಳ ಮೂಲಪಾಠದ ನಿಷ್ಕರ್ಷೆಯ ಸಂಬಂಧವಾಗಿ ಇಂಥ ಹಲವಾರು ಸಮಸ್ಯೆಗಳು ಪರಿಹಾರಕ್ಕಾಗಿ ಕಾದಿವೆ. ಸರ್ವಜ್ಞನ ತ್ರಿಪದಿಗಳ ಸಂಗ್ರಹ ಮತ್ತು ಸಂಪಾದನ ಕಾರ್ಯಗಳನ್ನು ಒಂದು ತಪಸ್ಸು ಎಂಬಂತೆ ಸಾಧಿಸಿ ಕೃತಕೃತ್ಯರಾದ ದಿ॥ರೆ॥ ಚನ್ನಪ್ಪ ಉತ್ತಂಗಿಯವರು ಸರ್ವಜ್ಞನ ಭಕ್ತರಾದರೂ ಸರ್ವಜ್ಞಾಂಕಿತ ಪದ್ಯಗಳೆಲ್ಲವೂ ಅವನವೆಂದು ನಂಬಿಲ್ಲ. ಸರ್ವಜ್ಞನ ಪದ್ಯಗಳನ್ನು ಅನುಸರಿಸಿರುವ ಅನ್ಯಕರ್ತೃಕ ಪದ್ಯಗಳು ಹೇರಳವಾಗಿ ಪ್ರಕ್ಷೇಪವಾಗಿವೆ ಎಂದು ಹೇಳಿ, ಸರ್ವಜ್ಞನವು ಯಾವುವು, ಯಾವುವು ಅಲ್ಲ, ಯಾವುವು ಸಂದೇಹಾಸ್ಪದ ಎಂಬುದನ್ನು ಮೊದಲೆರಡು ಮುದ್ರಣಗಳಲ್ಲಿ ಗುರುತಿಸುವ ಪ್ರಯತ್ನವನ್ನೂ ಮಾಡಿದ್ದಾರೆ ಅವರು. ಈ ದಿಕ್ಕಿನಲ್ಲಿ ಪುನಃಪರಿಶೀಲನೆಯ ಅಗತ್ಯವೂ ಇದೆ. ಅವರಾಗಲಿ, ಈಚೆಗೆ ಪ್ರಕಟವಾಗಿರುವ ಬೇರೆ ಬೇರೆ ಪರಿಷ್ಕೃತ ಮುದ್ರಣಗಳ ಸಂಪಾದಕರುಗಳಾಗಲಿ ಖಚಿತವೂ ಶಾಸ್ತ್ರೀಯವೂ ಆದ ಎಲ್ಲ ವಿಧಾನಗಳನ್ನೂ ಅನುಸರಿಸಿ ಮೂಲಪಾಠದ ನಿಷ್ಕರ್ಷೆಗೆ ಸರ್ವಪ್ರಯತ್ನ ಮಾಡಿದಂತೆ ಕಂಡುಬರುವುದಿಲ್ಲ; ಹಸ್ತಪ್ರತಿಗಳ ಪಾಠಾಂತರಗಳನ್ನು ಪರಿಶೀಲಿಸಿ, ತಮಗೆ ಸರಿಕಂಡ ಪಾಠವನ್ನು ಒಪ್ಪಿಕೊಂಡಂತೆ ತೋರುತ್ತದೆ. ಯಾವುದೇ ಒಂದು ಕವಿಕೃತಿಯ ಸಂಪಾದನಕಾರ್ಯದಲ್ಲಿ ದೊರೆತಷ್ಟು ಸಾಕ್ಷ್ಯಾಧಾರಗಳೆಲ್ಲವನ್ನೂ ಉಪಯೋಗಿಸಿಕೊಂಡಮೇಲೂ ಕವಿಪಾಠದ ನಿಷ್ಕರ್ಷೆ ಸಮರ್ಪಕವಾಗಿ ಆಗಿಲ್ಲ ಎಂಬ ಅನುಮಾನ ಉಳಿದಾಗ, ಸಂಪಾದಕ ತನ್ನ ಪ್ರತಿಭೆಯ ಬಲದಿಂದ ಕವಿಪಾಠವನ್ನು ಊಹಿಸಬೇಕಾದ ಸಾಹಸವನ್ನು ಕೈಗೊಳ್ಳಬೇಕಾಗುತ್ತದೆ; ಈ ಸಂದರ್ಭದಲ್ಲಿ ಕೂಡ ಅವನು ತನ್ನ ಇಚ್ಛಾನುಸಾರ ಪಾಠವನ್ನು ತಿದ್ದಹೋಗದೆ, ಶಾಸ್ತ್ರಸಿದ್ಧವಾದ ನಿಯಮಗಳನ್ನು ಅನುಸರಿಸಿಯೋ, ಇಲ್ಲವೇ ಶಾಸ್ತ್ರೀಯವೆನ್ನಬಹುದಾದ ಹೊಸ ನಿಯಮವನ್ನು ಕಲ್ಪಿಸಿಕೊಂಡೋ ಪರಿಷ್ಕರಣ ಕಾರ್ಯವನ್ನು ಮಾಡಬೇಕಾಗುತ್ತದೆ. ಸರ್ವಜ್ಞನ ತ್ರಿಪದಿಗಳ ವಿಷಯದಲ್ಲಿ ಇಂಥ ಕಾರ್ಯ ಆಗಬೇಕಾಗಿದೆ.

ಸರ್ವಜ್ಞನ ತ್ರಿಪದಿಗಳ ಅಂಕಿತದ ಸಂಬಂಧವಾಗಿಯೇ ಎರಡು ಪಾಠ ಸಂಪ್ರದಾಯಗಳಿವೆ. ಒಂದರ ಪ್ರಕಾರ 'ಸರ್ವಜ್ಞ' ಎಂಬುದು ಅಂಕಿತ; ಇನ್ನೊಂದರ

ಡಾ॥ ಬಸವರಾಜು ಅವರು 'ಪರಮಾರ್ಥ' ಅಂಕಿತವನ್ನು ಸಮರ್ಥಿಸುವ ಸಂಬಂಧದಲ್ಲಿ " 'ಸರ್ವಜ್ಞ' ಎಂಬುದು ತ್ರಿಪದಿಯ ಕೊನೆಯ ಗಣಸ್ಥಾನದಲ್ಲಿ ಛಂದಸ್ಸಿನ ದೃಷ್ಟಿಯಿಂದ ("ಸರುವಜ್ಞ" ಎಂದಾದ ಹೊರತು) ಹೊಂದುವುದಿಲ್ಲವೆಂಬುದನ್ನು ವಿದ್ವಾಂಸರು ಗಮನಿಸಿದಂತಿಲ್ಲ" ಎಂದು ಹೇಳಿ, ತಾವು ಗುರುತಿಸಿದ ಛಂದಸ್ಸಿನ ಬಗೆಗೆ ನಮ್ಮ ಗಮನ ಸೆಳೆದಿದ್ದಾರೆ. ಪರಮಾರ್ಥ (UU–U), ಸರ್ವಜ್ಞ (– –U) ಇವೆರಡೂ ಅಂಕಿತಗಳು ಪಂಚಮಾತ್ರಾಗಣಗಳೂ ಆಗಬಲ್ಲವು, ಮೂರು ಅಂಶಗಳ ವಿಷ್ಣು ಗುಣಗಳೂ ಆಗಬಲ್ಲವು. 'ಸರ್ವಜ್ಞ' ಛಂದಸ್ಸಿಗೆ ಕೂಡಿಬರುವುದಿಲ್ಲ ಎಂದು ಅವರು ಏಕೆ ಹೇಳಿದರೋ ನಮಗೆ ಅರ್ಥವಾಗುವುದಿಲ್ಲ.

೪

ಸರ್ವಜ್ಞ ವಚನಗಳ ಮೂಲಪಾಠವನ್ನು ನಿಷ್ಕರ್ಷೆಮಾಡುವಲ್ಲಿ ಲಿಖಿತ ಕವಿ ಕೃತಿಗಳ ವಿಷಯದಲ್ಲಿ ಅನ್ವಯಿಸುವ ಗ್ರಂಥಸಂಪಾದನಶಾಸ್ತ್ರದ ನಿಯಮಗಳನ್ನು ಸಂಪೂರ್ಣವಾಗಿ ಅನ್ವಯಿಸುವುದು ಕಷ್ಟವೆಂದು ತೋರುತ್ತದೆ. ಕೃತಿ ಪದ್ಯಕಾವ್ಯವಾಗಿದ್ದರೆ, ನಿರ್ದಿಷ್ಟ ಪದ್ಯದ ಒಂದು ಸಂದರ್ಭದಲ್ಲಿ ಉಪಲಬ್ಧವಾಗಿರುವ ಎಲ್ಲ ಪಾಠಾಂತರಗಳಲ್ಲಿಯೂ ಛಂದೋದೋಷ ಕಂಡುಬಂದರೆ, ಆ ಪದ್ಯದ ಛಂದಸ್ಸನ್ನು ಸರಿಪಡಿಸುವುದರಿಂದ ಕವಿಪಾಠ ದೊರಕುವ ಸಾಧ್ಯತೆಯಿದೆ. ಸರ್ವಜ್ಞನ ತ್ರಿಪದಿಗಳನ್ನು ಪರಿಷ್ಕರಿಸುವ ಸಂದರ್ಭದಲ್ಲಿ ಅವನು ಬಳಸಿರುವ ಛಂದಸ್ಸನ್ನು ಆಧಾರವಾಗಿಟ್ಟುಕೊಂಡು ಪರಿಷ್ಕಾರ ಮಾಡಬೇಕಾದ ಅಗತ್ಯ ಬಹಳವಾಗಿದೆ. ಸರ್ವಜ್ಞನ ಪದ್ಯಗಳ ಛಂದಸ್ಸಿನ ವಿಷಯದಲ್ಲಿ ಭಿನ್ನಾಬಿಪ್ರಾಯವೂ ಇದೆ.

ನಾಗವರ್ಮನ ಛಂದೋಂಬುಧಿ, ಜಯಕೀರ್ತಿಯ ಛಂದೋನುಶಾಸನ ಮುಂತಾದ ಪ್ರಾಚೀನ ಕನ್ನಡ ಮತ್ತು ಸಂಸ್ಕೃತ ಲಕ್ಷಣ ಗ್ರಂಥಗಳಿಂದಲೂ ಪ್ರಾಚೀನ ಶಾಸನಗಳಲ್ಲಿ ದೊರಕುವ ತ್ರಿಪದಿಗಳಿಂದಲೂ ಪಂಪ ಮೊದಲ್ಗೊಂಡು ಷಡಕ್ಷರದೇವನ ವರೆಗಿನ ಕಾವ್ಯಗಳಲ್ಲಿಯ ತ್ರಿಪದಿಗಳಿಂದಲೂ ಇಂದಿಗೂ ಜನತೆಯ ಬಾಯಲ್ಲಿ ಜೀವಂತವಾಗಿರುವ ತ್ರಿಪದಿಗಳಿಂದಲೂ ತ್ರಿಪದಿಯ ಛಂದಸ್ಸು (ತ್ರಿಮೂರ್ತಿ) ದೇವಗಣಾತ್ಮಕ (ಅಥವಾ ಈಗ ಕರೆಯುವಂತೆ ಅಂಶಗಣಾತ್ಮಕ) ಎಂಬುದು ಸ್ಪಷ್ಟ. ಮೂಲ ಷಟ್ಪದಿಯೂ ಅಂಶಗಣಾತ್ಮಕವಾಗಿದ್ದು ಕಾಲಕ್ರಮದಲ್ಲಿ ಮಾತ್ರಗಣಾತ್ಮಕವಾಗಿ ಪರಿಣಮಿಸಿದ್ದು ಕನ್ನಡ ಛಂದಸ್ಸಿನ ಚರಿತ್ರೆಯನ್ನು ಅರಿತವರಿಗೆ ಗೊತ್ತಿರುವ ವಿಷಯ. ಅದೇ ರೀತಿಯಲ್ಲಿ, ಅಂಶಲಯದ ತ್ರಿಪದಿ ಮಾತ್ರಾಲಯಕ್ಕೆ ತಿರುಗಿರುವುದಕ್ಕೆ ಕನ್ನಡ ಕಾವ್ಯ ಪ್ರಪಂಚದಲ್ಲಿ ಸಾಕಷ್ಟು ನಿದರ್ಶನಗಳು ದೊರಕುತ್ತವೆ.

ದೊರೆತ ಒಂದು ಓಲೆಯ ಪ್ರತಿಯಲ್ಲಿ ಪ್ರತಿ ಪದ್ಯವೂ ಪರಮಾರ್ಥ ಎಂದು ಮುಗಿಯುವುದಲ್ಲದೆ ಗ್ರಂಥಕ್ಕೆ 'ಪರಮಾರ್ಥಿಕೆ' ಎಂಬ ಹೆಸರೂ ಹೇಳಿದೆ' ಎಂದಿದ್ದಾರೆ. (ಕರ್ಣಾಟಕ ಕವಿಚರಿತೆ, ಸಂಪುಟ ೨, ಕ.ಸಾ.ಪ. ತಿದ್ದಿದ ಮುದ್ರಣ, ೧೯೭೩; ಪು; ೪೯). ಚನ್ನಪ್ಪ ಉತ್ತಂಗಿಯವರ ಜನಪದಾವೃತ್ತಿಯ ಮುದ್ರಣದಲ್ಲೂ "ಪರಮಾರ್ಥ" ಅಂಕಿತವುಳ್ಳ ಕೆಲವು ಪದ್ಯಗಳಿವೆ(೪೦೬–೪೧೧).[೪] "ಪರಮಾರ್ಥ" ಯಾವ ದೈವದ ಅಂಕಿತವೂ ಅಲ್ಲ. "ಸರ್ವಜ್ಞ" (omniscient) ಭಗವಂತ ಅಥವಾ ಪರಮಾತ್ಮನಿಗೆ ಮಾತ್ರ ಸಲ್ಲುವ ವಿಶೇಷಣ. ಆದ್ದರಿಂದ, ವಚನಕಾರರ ಮೇಲ್ಪಂಕ್ತಿಯನ್ನು ಅನುಸರಿಸಿ ಸರ್ವಜ್ಞನು ಪದ್ಯಗಳ ಕೊನೆಯಲ್ಲಿ ಪರಮಾತ್ಮನ ವಿಶೇಷಣವಾದ "ಸರ್ವಜ್ಞ" ಪದವನ್ನೇ ತನ್ನ ಕೃತಿಮುದ್ರಿಕೆಯಾಗಿ ಇಟ್ಟುಕೊಂಡಿದ್ದಾನೆ ಎಂದು ತಿಳಿಯುವುದು ಸಾಧು. ಸ್ವವಿಚಾರವನ್ನು ತಿಳಿಸುವ ಪದ್ಯಗಳಲ್ಲಿ ಕವಿ ಹೇಗೆ ಸರ್ವಜ್ಞನೆನಿಸಿದನು ಎಂಬುದರ ವಿವರಣೆಯಿದೆ. "ಸರ್ವಜ್ಞನೆಂಬುವನು ಗರ್ವದಿಂದಾದವನೇ? ಸರ್ವರೊಳು ಒಂದೊಂದು ನುಡಿಗಲಿತು ಪರ್ವತವೇ ಆದವನು" ಎಂಬ ಅವನ ಮಾತಿನಲ್ಲಿ ಹೆಸರಿನ ಸೂಚನೆ ಸ್ಪಷ್ಟವಾಗಿದೆ. ಸರ್ವಜ್ಞನ ಮುಂಚಿನ ಹೆಸರು ಯಾವುದು ಎಂಬುದು ಖಚಿತವಾಗಿ ತಿಳಿದುಬಂದಿಲ್ಲ. ಸರ್ವಜ್ಞ, ಸುಗತ ಮುಂತಾದ ಹೆಸರುಗಳು ಬುದ್ಧನಿಗೆ ಉಂಟು; ಆದರೆ ಅವು ಅವನಿಗೆ ಅವನ ತಾಯಿ ತಂದೆಗಳು ಇಟ್ಟ ಹೆಸರಲ್ಲ". ('ಸರ್ವಜ್ಞ ಕವಿ', ಪು.೬) (ಜನ್ಮವೃತ್ತಾಂತ ಪ್ರಕರಣದಲ್ಲಿ ಈ ಬಗ್ಗೆ ವಿಚಾರ ಮಾಡಿದೆ.) ಅವನ ಪ್ರಸಿದ್ಧವಾದ ಹೆಸರು ಸರ್ವಜ್ಞ ಎಂದಿರುವುದರಿಂದಲೂ,

ಒಬ್ಬ ನಲ್ಲದೆ ಜಗಕೆ ಇಬ್ಬರುಂಟೇ ಮತ್ತೆ
ಒಬ್ಬ ಸರ್ವಜ್ಞ ಕರ್ತನು–ಜಗಕೆಲ್ಲ
ಒಬ್ಬನೇ ದೈವ ಸರ್ವಜ್ಞ

ಎಂದು ದೈವವನ್ನು "ಸರ್ವಜ್ಞ" ಎಂದು ನಿರ್ದೇಶಿಸಿರುವುದರಿಂದಲೂ ಒಂದು ವೇಳೆ ಕೆಲವೊಮ್ಮೆ ಸರ್ವಜ್ಞನು ತನ್ನ ಪದ್ಯಗಳನ್ನು 'ಪರಮಾರ್ಥ' (ಅಥವಾ 'ಪರಮಾತ್ಮ') ನಾಮಾಂಕಿದಿಂದ ಹೇಳಿದ್ದರೂ ಕೂಡ 'ಸರ್ವಜ್ಞ' ಎಂಬ ನಾಮಾಂಕಿತವನ್ನೇ ಅವನ ಪದ್ಯಗಳ ನಾಮಾಂಕಿತ ಎಂದು ಸ್ವೀಕರಿಸುವುದು ಹೆಚ್ಚು ಸಮರ್ಥನೀಯವಾಗಿದೆ. ಕೆಲವರು ಊಹಿಸಿರುವಂತೆ, 'ಸರ್ವಜ್ಞ' ಅವನ ಬಿರುದಂತೂ ಖಂಡಿತ ಅಲ್ಲ.

(೪. 'ಪರಮಾರ್ಥ' ಹಸ್ತಪ್ರತಿ ಒಂದನ್ನು ಉತ್ತಂಗಿಯವರೂ ನೋಡಿದ್ದಾರೆ. ಅದರಿಂದ ಈ ಪದ್ಯಗಳನ್ನು ಸ್ವೀಕರಿಸಿರಬಹುದು.)

"ಸರ್ವಜ್ಞನ ತ್ರಿಪದಿಗಳ ಶುದ್ಧ ಪಾಠ ನಿರ್ಣಯವಾದರೆ ಅವುಗಳ ಛಂದಸ್ಸಿನ ವಿಷಯದಲ್ಲೂ ಒಂದು ನಿರ್ಣಯ ಸಾಧ್ಯವಾಗಬಹುದೆಂದು ತೋರುತ್ತದೆ" ಎಂದು ಹೇಳಿರುವುದು ವಿಚಾರಣೀಯವಾಗಿ ಕಾಣುತ್ತದೆ. ಸರ್ವಜ್ಞನ ತ್ರಿಪದಿಗಳ ಶುದ್ಧ ಪಾಠನಿರ್ಣಯಕ್ಕೆ ಅವು ಅಂಶಲಯದಲ್ಲಿವೆ ಎಂಬ ತಿಳಿವಳಿಕೆ ಒಂದು ಮುಖ್ಯ ಸಾಧನ ಎಂದು ನನ್ನ ಖಚಿತವಾದ ನಂಬಿಕೆ. ಸರ್ವಜ್ಞನ ತ್ರಿಪದಿಗಳು ಅಂಶಗಣಾತ್ಮಕ ಎಂಬ ಮಾತನ್ನು ನಾನು ಹೊಸದಾಗಿ ಹೇಳುತ್ತಿಲ್ಲ. ಶ್ರೀ ಸೇಡಿಯಾಪು ಕೃಷ್ಣ ಭಟ್ಟರು 'ಸಮರ್ಪಣೆ' ಎಂಬ ಸಂಭಾವನಾ ಗ್ರಂಥದಲ್ಲಿ 'ತ್ರಿಪದಿಯ ಲಕ್ಷಣ'ವನ್ನು ಕುರಿತು ಕೂಲಂಕುಷವಾಗಿ ವಿವೇಚನೆ ಮಾಡಿದ್ದಾರೆ. ಅವರು ತಮ್ಮ ಲೇಖನದಲ್ಲಿ ಸರ್ವಜ್ಞನ ತ್ರಿಪದಿಗಳು ಮಾತ್ರಾಗಣದ ಧಾಟಿಗೆ ತಿರುಗಿಲ್ಲ ಎಂಬ ಅಂಶವನ್ನು ಸ್ಪಷ್ಟಪಡಿಸಿದ್ದಾರೆ. ಇದು ವಸ್ತುಸ್ಥಿತಿ. ಸರ್ವಜ್ಞನ ತ್ರಿಪದಿಗಳು ಮಾತ್ರಾಗಣಕ್ಕೆ ತಿರುಗಿವೆ ಎಂದು ಹೇಳುವುದಕ್ಕಿಂತ, ಈ ನಾನ್ನೂರು ವರ್ಷಗಳಲ್ಲಿ ಸಂಪ್ರತಿಕಾರರೂ ಸಂಪಾದಕರುಗಳೂ ಅವುಗಳನ್ನು ಪಂಚಮಾತ್ರಾಗಣಗಳ ಧಾಟಿಗೆ ತಿರುಗಿಸಿದ್ದಾರೆ ಎಂದು ಹೇಳುವುದು ಸರಿಯಾದ ಮಾತು. ಆದ್ದರಿಂದ, ಈಗ ಆಗಬೇಕಾಗಿರುವ ಮುಖ್ಯ ಕಾರ್ಯ ಎಂದರೆ, ಸರ್ವಜ್ಞನ ತ್ರಿಪದಿಗಳನ್ನು ಮಾತ್ರಾಗಣಗಳ ಕೃತಕರೂಪದಿಂದ ಅಂಶಗಣಗಳ ಸಹಜ ರೂಪಕ್ಕೆ ಹಿಂದಿರುಗಿಸುವುದು. ಇದು ಸುಲಭದ ಕೆಲಸವಲ್ಲ. ಇದನ್ನು ತೃಪ್ತಿಕರವಾಗಿ ನಿರ್ವಹಿಸಿದರೆ, ಸರ್ವಜ್ಞನ ತ್ರಿಪದಿಗಳ ಶುದ್ಧಪಾಠನಿರ್ಣಯದಲ್ಲಿ ಅರ್ಧದೂರವಾದರೂ ಸಾಗಿದಂತಾಗುವುದು. ಒಂದೆರಡು ಉದಾಹರಣೆಗಳ ಮೂಲಕ ನನ್ನ ವಾದದ ಸಮಂಜಸತೆಯನ್ನು ವಿಶದಪಡಿಸುತ್ತೇನೆ. ಈ ಹಿಂದೆಯೇ ಉದಾಹರಿಸಿರುವ ತುಂಬ ಪ್ರಸಿದ್ಧವಾದ, ಸಾಲ ಮತ್ತು ದೈವವನ್ನು ಕುರಿತ ಪದ್ಯಗಳಲ್ಲಿ ಮೂಲಭೂತವಾದ ಮಾರ್ಪಾಟುಗಳನ್ನು ಮಾಡದೆ, ಅವನ್ನು ಅಂಶಗಣಾತ್ಮಕವಾಗಿ ಮಾಡಬಹುದು:

ಸಾಲವ ಕೊಂಬಾಗ ಹಾಲೋಗರುಂಡಂತೆ
ಸಾಲಿಗ ಬಂದು ಎಳೆವಾಗ । ಕಿಬ್ಬದಿ
ಕೀಲ್ಮುರಿದಂತೆ ಸರ್ವಜ್ಞ

ಒಬ್ಬನಲ್ಲದೆ ಜಗಕಿಬ್ಬರುಂಟೇ ಮತ್ತೆ
ಒಬ್ಬ ಸರ್ವಜ್ಞ ಕರ್ತನು । ಜಗಕೆಲ್ಲ
ಒಬ್ಬನೇ ದೈವ ಸರ್ವಜ್ಞ

ಸರ್ವಜ್ಞನ ತ್ರಿಪದಿಗಳ ಅಂಶಲಯವನ್ನು ಮಾತ್ರಾಲಯಕ್ಕೆ ತಿರುಗಿಸುವಾಗ

ಈ ಬೆಳವಣಿಗೆ ವಚನಕಾರರ ಕಾಲದಲ್ಲಿಯೆ (ಎಂದರೆ ೧೨ನೇಯ ಶತಮಾನದಲ್ಲಿ) ಪ್ರಾರಂಭವಾಯಿತು. ಇದಕ್ಕ ಮುಖ್ಯ ಕಾರಣ. ಅಕ್ಕರ, ತ್ರಿಪದಿ, ಸಾಂಗತ್ಯ ಮುಂತಾದ ಅಚ್ಚಕನ್ನಡ ಮಟ್ಟುಗಳಲ್ಲಿ ಬ್ರಹ್ಮ ವಿಷ್ಣು ರುದ್ರ ಎಂಬ ತ್ರಿಮೂರ್ತಿಗಣಗಳ ಪೈಕಿ ಮೂರು ಅಂಶಗಳ ವಿಷ್ಣುಗಣಕ್ಕಿರುವ ಸರ್ವಪ್ರಧಾನ್ಯತೆ ಹಾಗೂ ವಿಷ್ಣುಗಣ ವಿನ್ಯಾಸದಲ್ಲಿ ಪಂಚ ಮಾತ್ರಾಗಣಗಳ ಪ್ರಾಮುಖ್ಯತೆ. ವಿಷ್ಣುಗಣದ ಎಂಟು ಬಗೆಯ ಪ್ರಸ್ತಾರಗಳಲ್ಲಿ ಎರಡು ಷಣ್ಮಾತ್ರಾ ಪ್ರಸ್ತಾರ, ನಾಲ್ಕು ಪಂಚಮಾತ್ರಾ ಪ್ರಸ್ತಾರ, ಎರಡು ಚತುರ್ಮಾತ್ರಾ ಪ್ರಸ್ತಾರ ಕಂಡುಬರುತ್ತವೆ. ಹೀಗಿರುವುದರಿಂದ, ಅಂಶಗಣಾತ್ಮಕವಾದ ಯಾವುದೇ ಪದ್ಯ ರಚನೆಯಲ್ಲಿ ಪಂಚಮಾತ್ರಾ ಗಣಗಳ ಪ್ರಾಚುರ್ಯವಿರುವುದು ಸಹಜ. ಸರ್ವಜ್ಞನ ತ್ರಿಪದಿಗಳಲ್ಲೂ ಈ ಲಕ್ಷಣವಿರುವುದು ಕೇವಲ ಸಹಜ. ಅಂಶಲಯದ ರಹಸ್ಯವನ್ನರಿಯದ ಪ್ರಾಚೀನ ಸಂಪ್ರತಿಕಾರರೇ ಸರ್ವಜ್ಞನ ತ್ರಿಪದಿಗಳಲ್ಲಿ ಚಾತುರ್ಮಾತ್ರಾ ಗಣಗಳು ಕಂಡುಬಂದಲ್ಲೆಲ್ಲಾ ಪ್ರಾಯಶಃ ಅವನ್ನು ಪಂಚಮಾತ್ರಾಗಣಗಳಾಗಿ ಮಾರ್ಪಡಿಸುವ ಪ್ರಯತ್ನ ಮಾಡಿದ್ದಾರೆ; ಇದರಿಂದಾಗಿ, ಸರ್ವಜ್ಞನ ತ್ರಿಪದಿಗಳನ್ನು ಮೊದಲ ಬಾರಿಗೆ ಒತ್ತಟ್ಟಿಗೆ ಕಲೆ ಹಾಕಿ ಪ್ರಕಟಿಸಿದ ಚನ್ನಪ್ಪ ಉತ್ತಂಗಿಯವರು ಅವು ಪಂಚಮಾತ್ರಾ ಗಣಘಟಿತ ಎಂಬ ಭ್ರಮೆಗೆ ಒಳಗಾಗಿ, ಅವನ್ನು ಸಂಪೂರ್ಣವಾಗಿ ಪಂಚಮಾತ್ರಾಗಣಾತ್ಮಕವಾಗಿ ಮಾಡಿಬಿಟ್ಟಂತೆ ತೋರುತ್ತದೆ. ಅವರು ತಮ್ಮ ಪ್ರಸ್ತಾವನೆಯಲ್ಲಿ ಸರ್ವಜ್ಞನ ತ್ರಿಪದಿಗಳ ಛದಸ್ಸನ್ನು ಪಂಚಮಾತ್ರಾಗಣಾತ್ಮಕವಾಗಿಯೇ ಲಕ್ಷಣಿಸಿದ್ದಾರೆ. ಬಹುಶಃ ಇದನ್ನು ಗಮನಿಸಿ, ದ್ರಾವಿಡ ಛಂದಸ್ಸಿನ ರಹಸ್ಯವನ್ನು ಕರತಲಾಮಲಕ ಮಾಡಿಕೊಂಡ, ಷಟ್ಪದಿಗಳಲ್ಲಿಯೂ ಅಂಶಲಯದ ನಡೆಯನ್ನು ಗುರುತಿಸಬಹುದು ಎಂದು ಬಿ.ಎಂ.ಶ್ರೀ.ಯವರು ಕೂಡ ಸರ್ವಜ್ಞನ ತ್ರಿಪದಿಗಳನ್ನು ಪಂಚಮಾತ್ರಗಣಾತ್ಮಕ ಎಂದೇ ಅಂಗೀಕರಿಸಿಬಿಟ್ಟದ್ದು ಅತ್ಯಂತ ಸೋಜಿಗವಾಗಿದೆ. ಚನ್ನಪ್ಪ ಉತ್ತಂಗಿಯವರು ಹೊರತಂದ ಸರ್ವಜ್ಞ ವಚನಗಳ ಜನಪದಾವೃತ್ತಿಗೆ ಮುನ್ನುಡಿ ಬರೆದಿರುವ ಪಂಡಿತ ಶಿವಮೂರ್ತಿಶಾಸ್ತ್ರಿಗಳೂ ಇವರನ್ನೇ ಅನುಸರಿಸಿದ್ದಾರೆ. ಕನ್ನಡ ಛಂದಸ್ಸನ್ನು ಆಳವಾಗಿ ಅಭ್ಯಾಸ ಮಾಡಿರುವ ಡಾ|| ಟಿ.ವಿ. ವೆಂಕಟಾಚಲಶಾಸ್ತ್ರಿಯವರು, "ಸರ್ವಜ್ಞನ ತ್ರಿಪದಿಗಳು ಪ್ರಾಚೀನವಾದವು,........... ಅಂಶಲಯದಲ್ಲಿದ್ದವು, ಕೆಲವನ್ನು ಮಾತ್ರಾಲಯಕ್ಕೆ ತಿರುಗಿಸಲು ಪ್ರಯತ್ನಿಸಿದಂತೆ ಕಾಣುತ್ತದೆ ಎಂದು ಸದ್ಯಕ್ಕೆ ಭಾವಿಸಬಹುದು"[೪೨] ಎಂಬ ಸರಿಯಾದ ಅಭಿಪ್ರಾಯವನ್ನೇ ತಳೆದಿದ್ದರೂ,

೪೨ ಮೈಸೂರು ವಿಶ್ವವಿದ್ಯಾನಿಲಯದ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯ ಮೊದಲ ವರ್ಷದ ಎಂ.ಎ. ತರಗತಿಗೆ ಶ್ರೀ ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು ಸಿದ್ಧಪಡಿಸಿದ ಅಚ್ಚಾದ ಟಿಪ್ಪಣಿಗಳಿಂದ.

'ಒಚ್ಚತ ಬೆಳಕು' ಎಂದರೆ ಸೊಗಸಾದ, ಹಿತವಾದ ಬೆಳಕು. ಉತ್ತಂಗಿಯವರು ಸ್ವೀಕರಿಸಿರುವ ಪಾಠ ಪ್ರಾದೇಶಿಕ ಸ್ವರೂಪದ್ದಾಗಿದ್ದು, ಅರ್ಥಸೌಂದರ್ಯ ಪೋಷಕವೂ ಆಗಿದೆ. ಸೊಡರು ಉರಿಯುವುದಕ್ಕೆ ಅಪಾರ ಎಣ್ಣೆ ಬೇಕು. ಕೊಡುವಾ ಬೆಳಕಾದರೋ ಸ್ವಲ್ಪ. ಸೂರ್ಯ ಏನನ್ನೂ ಸ್ವೀಕರಿಸದೆ, ಪಕ್ಷಪಾತವಿಲ್ಲದೆ, ಎಲ್ಲರಿಗೂ ಅಪಾರ ಬೆಳಕನ್ನು ಕೊಡುತ್ತಾನೆ. ಧರ್ಮದೃಷ್ಟಿಯುಳ್ಳವನು ಸೂರ್ಯನ ಹಾಗಿರಬೇಕು; ಲಂಚವನ್ನು ಸ್ವೀಕರಿಸದೆ ಕರ್ತವ್ಯಪಾಲನೆ ಮಾಡಬೇಕು, ಶಕ್ತಿಮೀರಿ ಪರೋಪಕಾರ ಮಾಡಬೇಕು. ಒಪ್ಪಚಿ ಎನ್ನು ಪದಪ್ರಯೋಗ ಒಂದನ್ನು ಬಿಟ್ಟರೆ, ಉಳಿದಂತೆ ಕಿಟೆಲ್ ಕೋಶದ ಪದ್ಯಪಾಠ ಪೂರ್ಣವಾಗಿ ಸ್ವೀಕಾರಾರ್ಹ–ಛಂದಸ್ಸಿನ ದೃಷ್ಟಿಯಿಂದ. ಒಂದು ಪದ್ಯದಲ್ಲಿ ದುರ್ಜನರ ಸಂಗಡದ ಒಡನಾಟವನ್ನು ಬಚ್ಚಲ ಕೊಚ್ಚೆಯ ನೀರಿಗೆ ಹೋಲಿಸಿದೆ. ಉತ್ತಂಗಿಯವರ ಸಂಕಲನದಲ್ಲಿ ಕೊಚ್ಚೆಗೆ ರೊಜ್ಜು (== ರೊಚ್ಚು) ಎಂಬ ಪದವಿದೆ; ಕವಿಚರಿತೆಯ ಉದಾಹರಣ ಪದ್ಯದಲ್ಲಿ ಗೊಜ್ಜಲು ಎಂಬ ಪದವಿದೆ. ಈ ಎರಡು ಪ್ರಯೋಗಗಳ ಹಸ್ತಪ್ರತಿಗಳು ಯಾವ ಪ್ರದೇಶಕ್ಕೆ ಸೇರಿದವು ಎಂಬುದನ್ನು ತಿಳಿದು, ಯಾವ ಪದ ಸ್ವೀಕಾರಾರ್ಹ ಎಂಬುದನ್ನು ನಿರ್ಣಯಿಸಬೇಕಾಗುತ್ತದೆ. ರೊಜ್ಜು ಎಂಬ ಪದ ಮೂಲಪಾಠವಿರಬಹುದು. 'ಗೊಜ್ಜು' ಉತ್ತರ ಕರ್ನಾಟಕದಲ್ಲಿ ಈಗಲೂ ರೂಢಿಯಲ್ಲಿ ಇದೆ. (ಪರಮಾರ್ಥದ ಪಾಠ : 'ಬಚ್ಚಲ ಬಜ್ಜರ'.)

ஜ

ಜೀವನ ವಿವರ ಸರ್ವಜ್ಞನ ವ್ಯಕ್ತಿತ್ವವನ್ನು, ಅವನ ಮೂರ್ತಿಮಹತ್ವವನ್ನು, ಅವನ ಪದ್ಯಗಳಿಂದ ಅರಿಯುವುದು ಸಾಧ್ಯ.

ಆದರೆ ಅವನ ತಂದೆ, ತಾಯಿ, ಹುಟ್ಟೂರು, ಕಾಲ, ಮತ, ಮುಂತಾದ ವಿಚಾರಗಳ ಬಗ್ಗೆ ಹೀಗೆಯೇ ಸರಿ ಎಂದು ನಿಶ್ಚಿತವಾಗಿ ಹೇಳುವುದು ಕಷ್ಟ. ಪ್ರಕ್ಷಿಪ್ತ ಪದ್ಯಗಳನ್ನೆಲ್ಲ ಶೋಧಿಸಿ ತೆಗೆದು, ಉಳಿದವು ನಿರ್ವಿವಾದವಾಗಿ ಸರ್ವಜ್ಞನು ರಚಿಸಿದ ಪದ್ಯಗಳು ಎಂದು ಸ್ಥಾಪಿಸುವವರೆಗೆ ಅವನ ಜೀವನ ವೃತ್ತಾಂತವನ್ನು ತಿಳಿಸುವ ಪದ್ಯಗಳನ್ನು ಸಂದೇಹ ದೃಷ್ಟಿಯಿಂದಲೇ ನೋಡಬೇಕಾಗುತ್ತದೆ. ಈ ವೃತ್ತಾಂತವನ್ನು ಒಳಗೊಂಡ ಸುಮಾರು ೩೦ ಪದ್ಯಗಳು ಪ್ರಕ್ಷಿಪ್ತವೇ ಅಲ್ಲವೇ ಎಂದು ಇನ್ನೂ ನಿರ್ಣಯವಾಗಿಲ್ಲ.[೭]

೭. ಚನ್ನಪ್ಪ ಉತ್ತಂಗಿಯವರ ೧೯೩೫ರ ಮುದ್ರಣದಲ್ಲಿ ಸರ್ವಜ್ಞನ ಜೀವನ ವೃತ್ತಾಂತದ ೨೪ ಪದ್ಯಗಳು 'ಪೀಠಿಕಾ ಪ್ರಕರಣ' ಎಂಬ ಹೆಸರಿನಲ್ಲಿ ಪ್ರಕಟವಾಗಿವೆ. ೧೯೫೭ರ ಮುದ್ರಣದಲ್ಲಿ ೨೯ ಪದ್ಯಗಳಿವೆ. ಈ ವಿಷಯಕವಾದ ೨೮ ಪದ್ಯಗಳು 'ಪರಮಾರ್ಥ'ದಲ್ಲಿ 'ಜಾತಿ ಸ್ಮರಣ' ಪದ್ಧತಿ ಎಂಬ ಹೆಸರಿನಲ್ಲಿ ಸೇರಿವೆ. ಈ ನಾಮಕರಣಕ್ಕೆ ಹಸ್ತಪ್ರತಿಗಳ ಆಧಾರ ಉಂಟು.

ಪ್ರಥಮಾ ವಿಭಕ್ತಿ ಪ್ರತ್ಯಯ ಉ, ಅನುಸ್ವಾರದ ಬಿಂದು, ಷಷ್ಠಿ ವಿಭಕ್ತಿಯ ದೀರ್ಘೀಕರಣ, ಮುಂತಾದವು ಉದ್ದೇಶಪೂರ್ವಕವಾಗಿಯೋ ಉದ್ದೇಶರಹಿತವಾಗಿಯೋ ನಡೆದಿರುವ ಪ್ರಕ್ಷೇಪಗಳೇ ಸರಿ; ಇಡಿಯ ಪದ್ಯಗಳೇ ಪ್ರಕ್ಷೇಪವಾಗಿರುವ ಸಂಗತಿಯನ್ನು ಉತ್ತಂಗಿಯವರೆ ತಿಳಿಸಿರುವತ್ತಾರೆ. ಇವುಗಳನ್ನೆಲ್ಲ ನಿರ್ಮೂಲಮಾಡಿ ಸರ್ವಜ್ಞ ಮೂರ್ತಿಯ ನಿಜಸ್ವರೂಪವನ್ನು ಕನ್ನಡಿಗರಿಗೆ ತೋರಿಸಿಕೊಡಬೇಕಾದದ್ದು ವಿದ್ವಾಂಸರ ಕರ್ತವ್ಯ.[೫]

ಸರ್ವಜ್ಞನ ತ್ರಿಪದಿಗಳ ಮೂಲಪಾಠನಿಷ್ಕರ್ಷೆಯಲ್ಲಿ ಛಂದಸ್ಸಿನ ಆಧಾರದ ಮೇಲೆ ಹೇಗೆ ಪರಿಷ್ಕರಣ ಅಗತ್ಯ ಎಂಬುದನ್ನು ತೋರಿಸಲು ಪ್ರಯತ್ನಪಟ್ಟಿದ್ದೇನೆ.[೬] ಇನ್ನೂ ಕೆಲವು ದೃಷ್ಟಿಕೋನಗಳಿಂದ ಪದ್ಯಗಳನ್ನು ಶಾಸ್ತ್ರೀಯವಾದ ಪರೀಕ್ಷೆಗೆ ಒಳಪಡಿಸಬೇಕಾಗುತ್ತದೆ. ಅವುಗಳಲ್ಲಿ ಪ್ರಾದಶಿಕ ಪದ ಪ್ರಯೋಗದ ವೈಶಿಷ್ಟವನ್ನು ಗಮನಿಸಬೇಕಾದದ್ದು ಒಂದು ಮುಖ್ಯವಾದ ದೃಷ್ಟಿಕೋನ. ಒಂದು ಉದಾಹರಣೆ: ಪ್ರಕೃತ ಪರಿಸ್ಥಿತಿಗೆ ಅನ್ವಯಿಸುವ ಸ್ವಾರಸ್ಯವಾದ ಪದ್ಯ:

ಸೊಡರು ಲಂಚನ ಕೊಂಡು ಕೊಡುವದೊಪ್ಪಚಿ ಬೆಳಗ
ಪೊಡವಿಗಂ ಸೂರ್ಯ–ಬೆಳಗೀವೊಲ್ಲಂಚವನು
ಹಿಡಿಯದವ ಧರ್ಮಿ ಸರ್ವಜ್ಞ,

ಉತ್ತಂಗಿಯವರ ಸಂಕಲನದಿಂದ ಆಯ್ದ ಈ ಪದ್ಯದ ಪಾಠ ಕಿಟೆಲ್ ಕೋಶದಲ್ಲಿ ಹೀಗಿದೆ :

ಸೋಡರು ಲಂಚನ ಕೊಂಡು ಕೊಡುವುದೊಚ್ಚತ ಬೆಳಗ
ಪೊಡವಿಗೆ ಸೂರ್ಯ ಬೆಳಗೀವೋಲ್ । ಲಂಚವ
ಹಿಡಿಯದವ ಧರ್ಮಿ ಸರ್ವಜ್ಞ

ಸೊಡರು ಎಣ್ಣೆಯ ಲಂಚವನ್ನು ಪಡೆದು ಬೆಳಕು ಕೊಡುತ್ತದೆ. ಒಂದು ಪಾಠದ ಪ್ರಕಾರ 'ಒಪ್ಪಚಿ ಬೆಳಕು' ಎಂದರೆ ಸ್ವಲ್ಪ ಬೆಳಕು; ಇನ್ನೊಂದರ ಪ್ರಕಾರ

---

೫ ಈ ಸಂದರ್ಭದಲ್ಲಿ ಒಂದು ಮುಖ್ಯ ಸಂಗತಿಯನ್ನು ಗಮನಿಸಬೇಕು. ಅದೇನೆಂದರೆ, ಪಂಚಮಾತ್ರಾಗಣಗಳ ಲಯಸ್ವರೂಪಕ್ಕೂ ಅಂಶಗಣಗಳ ಲಯಸ್ವರೂಪಕ್ಕೂ ಇರುವ ಮೂಲಭೂತ ವ್ಯತ್ಯಾಸ. ಇದನ್ನು ಲಘು ಗುರುಗಳ ಲೆಕ್ಕಾಚಾರದ ಪ್ರಸ್ತಾರದ ಮೂಲಕ ತೋರಿಸಲಾಗುವುದಿಲ್ಲ. ಪಠನ ಮೂಲಕವೇ ತೋರಿಸಬೇಕು. ಸಂಪೂರ್ಣವಾಗಿ ಪಂಚಮಾತ್ರಾ ಗಣಾತ್ಮಕವಾದ ತ್ರಿಪದಿಯನ್ನು ಅಂಶಲಯದಲ್ಲಿ ಹಾಡಬಹುದು. ವಚನಕಾರರು ಹೀಗೆಯೇ ಹಾಡುತ್ತಿದ್ದರೋ ಏನೋ. ಈ ಸಂದರ್ಭದಲ್ಲಿ, ಕೆಲವೇಳೆ, ಪಂಚಮಾತ್ರಾಗಣ ರುದ್ರಗಣಕ್ಕೆ ಸಂವಾದಿಯಾಗಿದ್ದು, ವಿಷ್ಣುಗಣದ ಲಯಮಾನಕ್ಕೆ ಕುಗ್ಗುತ್ತದೆ–ಉಚ್ಚಾರಣೆಯಲ್ಲಿ.

೬. ಆದರೆ, ಒಂದು ಅಂಶವನ್ನು ಇಲ್ಲಿ ನೆನೆಪಿನಲ್ಲಿಡಬೇಕು : ಛಂದಸ್ಸಿನ ಸೂತ್ರಾನ್ವಯದಿಂದ ಕೆಲವು ಪದ್ಯಗಳನ್ನು ಮಾತ್ರ ಪ್ರಕ್ಷಿಪ್ತ ಎಂದು ವರ್ಜಿಸುವ ಸಾಧ್ಯತೆ ಇದ್ದರೂ ಎಲ್ಲ ಪ್ರಕ್ಷಿಪ್ತ ಪದ್ಯಗಳನ್ನೂ ಈ ಮಾನದಂಡದಿಂದ ಗುರುತಿಸುವುದು ಸಾಧ್ಯವಾಗದು.

ಊರು ಧಾರವಾಡ ಪ್ರಾಂತದ 'ಮಾಸೂರು'. ಅವನ ಹೆಸರು ಬಸವರಸ; ಸರ್ವಜ್ಞನನ್ನು ಹೊತ್ತು ಹೆತ್ತವಳು ಕುಂಬಾರ 'ಮಾಳಿ'. ಇನ್ನೊಂದು ಕಥೆಯ ಪ್ರಕಾರ ಸರ್ವಜ್ಞನ ತಂದೆಯ ಊರು ಧಾರವಾಡ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ 'ಅಂಬಲೂರು' ಎಂಬ ಹಳ್ಳಿ. ತಂದೆ ಬಸವರಸ ಅಥವಾ ಮಲ್ಲರಸ; ಇವನು 'ಆರಾಧ್ಯ' ಪಂಗಡದ (ಶೈವ) ಬ್ರಾಹ್ಮಣ. ಸರ್ವಜ್ಞನ ತಾಯಿ ಯಥಾಪ್ರಕಾರ ಕುಂಬಾರ ಮಾಳಿ. ಈ ಕಥಾಸಂಗತಿಯನ್ನು ಉಲ್ಲೇಖಿಸಿರುವ ವಿದ್ವಾಂಸರು ಸರ್ವಜ್ಞನ ಜನ್ಮ ವರ್ಷವನ್ನು ಕ್ರಿ.ಶ. ೧೫೭೦ ಎಂದೂ, ಸರ್ವಜ್ಞನಿಗೆ ತಂದೆ ತಾಯಿ ಇಟ್ಟ ಹೆಸರು ಗುಂಡಪ್ಪ ಎಂದೂ ಹೇಳಿದ್ದಾರೆ. (ಈ ವಿದ್ವಾಂಸರು ಯಾವ ಮೂಲದಿಂದ ಈ ಸ್ಪಷ್ಟ ಹೇಳಿಕೆಗಳನ್ನು ಪಡೆದುಕೊಂಡರೋ ತಿಳಿಯದು.) ಈ ಹೇಳಿಕೆಯನ್ನು ಉದ್ಧರಿಸಿ ಕೊಟ್ಟಿರುವ ವಿದ್ವಾಂಸರು–"ಈ ಕಥೆ ಸತ್ಯಕ್ಕೆ ಅತ್ಯಂತ ಸನ್ನಿಹಿತವಾಗಿದೆ. ಸರ್ವಜ್ಞ ನಾಮದೇಯವು ತಾಯಿ ತಂದೆಗಳು ಇಟ್ಟದ್ದು ಅಲ್ಲವೆಂದೂ, ಮೊದಲ ಹೆಸರು ಗುಂಡಪ್ಪ ಎಂದೂ ಈ ಕಥೆಯಿಂದ ತಿಳಿದುಬರುತ್ತದೆ. ಇದು ವಿಶ್ವಾಸಕ್ಕೆ ತಕ್ಕ ವಿಷಯ" ಎಂದು ನಂಬಿದ್ದಾರೆ.[೮]

ಸರ್ವಜ್ಞನ ಪೂರ್ವನಾಮ 'ಗುಂಡಪ್ಪ' ಎಂದಿರಬಹುದಾದರೆ, ಅವನ ತಾಯಿಗೆ 'ಮಾಳಿ' ಎಂದು ಹೆಸರಿರಬೇಕಾದರೆ, ತಂದೆಗೂ ಒಂದು ಉಚಿತವಾದ ಹೆಸರನ್ನು ಯಾಕೆ ಕೊಡಬಾರದು ಎಂಬ ಅಪೇಕ್ಷೆ ಒಬ್ಬ ಸರ್ವಜ್ಞಾಭಿಮಾನಿ ಪಂಡಿತ ಸಂಪ್ರತಿಕಾರನಿಗೆ ಉಂಟಾಗಿರಬೇಕು. ಆತ ಬ್ರಾಹ್ಮಣನೇ ಎಂಬಲ್ಲಿ ಸಂಶಯವಿಲ್ಲ. ಆತ ಸರ್ವಜ್ಞನ ತಂದೆಗೆ 'ಶಂಕರಭಟ್ಟ' ಎಂಬ ಹೆಸರನ್ನು ಕೊಟ್ಟ!

ತಂದೆ ಶಂಕರಭಟ್ಟ ತಾಯಿ ಕುಂಬರ ಮಲ್ಲಿ
ಚಂದ್ರಶೇಖರ ವರಪುತ್ರ । ನಾ ನಿನ್ನ
ಕಂದ ಕಾಣಯ್ಯ ಸರ್ವಜ್ಞ[೯]

ಸರ್ವಜ್ಞನ ತಂದೆ ತಾಯಿಗಳ ಹೆಸರುಗಳು ಯಾವ ಯಾವ ಹಂತದಲ್ಲಿ ಹೇಗೆ ಹೇಗೆ ಅವರಿಗೆ ಉಂಟಾಗಿವೆ ಎಂಬ ಸಂಗತಿಯ ಬೆಳವಣಿಗೆಯ ಪರಿಶೀಲನ ಸ್ವಾರಸ್ಯವಾಗಿದೆ:

---

೮ ಡಾ॥ ಗಂಧಂ ಅಪ್ಪಾರಾವು : ವೇಮನ್ನ ಸರ್ವಜ್ಞುಲು' (ತುಲನಾತ್ಮಕ ಪರಿಶೀಲನ);ಮಾದರಾಸು, ೧೯೭೯.

೯. ಇದು ಕೆಳದಿ ಮ್ಯೂಸಿಯಮ಼್ನ ಏಕಪತ್ರದ ಹಸ್ತಪ್ರತಿಯಲ್ಲಿರುವ ಪಾಠ. (ಈ ಸಂಗ್ರಹದಲ್ಲಿ ಕೊಟ್ಟಿರುವ ಈ ಪದ್ಯಗುಚ್ಛದ ಮೊದಲ ಪದ್ಯವನ್ನು ನೋಡಿ. (ಪುಟ ೪೬)

**ತಂದೆ, ತಾಯಿ :** ಈವರೆಗೆ ದೊರೆತಿರುವ ಎಲ್ಲ ಹಸ್ತಪ್ರತಿಗಳಲ್ಲೂ, ಅವುಗಳನ್ನು ಅನುಸರಿಸಿ ಅಚ್ಚಾಗಿರುವ ಗ್ರಂಥಗಳಲ್ಲೂ ಸರ್ವಜ್ಞನ ಜನ್ಮ, ಊರು, ತಂದೆ ತಾಯಿಗಳ ವಿಚಾರವಾಗಿ ಕಥೆಗಳು ಇವೆ. ಇವು ಎಲ್ಲವೂ ಯಾವುದೋ ಒಂದು ಮೂಲ ದಂತಕಥೆಯ ರೂಪಾಂತರಗಳು ದೇವಲೋಕ ಸಂಬಂದವನ್ನು ಕಲ್ಪಿಸಿ, ಮನುಷ್ಯ ಜನ್ಮವನ್ನು ಅವನಿಗೆ ಆರೋಪಿಸುವಾಗಲೂ ಅವನ ಜನ್ಮವೃತ್ತಾಂತವನ್ನು ಅಸಾಧರಣವಾಗಿ ಮಾಡುವ, ನಮ್ಮ ಸಂಸ್ಕೃತಿಗೆ ಸಹಜವೆನೆಸಿದ ಒಂದು ದೃಷ್ಟಿ ಕಂಡುಬರುತ್ತದೆ. ಎಲ್ಲ ಮಹಾಪುರುಷರೂ ದೈವಾಂಶ ಸಂಭೂತರು, ಸರ್ವಜ್ಞನೂ ಅಂಥ ಒಬ್ಬ ಮಹಾಪುರುಷ ಎಂದು ಹೇಳಿದರೆ ಸಾಲದು. ಅವನು ಕೈಲಾಸದ ಗಣಗಳಲ್ಲಿ ಒಬ್ಬನಾದ ಪುಷ್ಪದತ್ತ, ಜನ್ಮಾಂತರದಲ್ಲಿ ವರರುಚಿ ಎಂಬ ಸಂಗತಿ ಸರ್ವಜ್ಞ ಜೀವಂತನಾಗಿದ್ದಾಗಲೇ ಜನಜನಿತವಾಗಿ ಪ್ರಚಾರಕ್ಕೆ ಬಂದಂತೆ ಕಾಣುತ್ತದೆ. ಈ ಕಥೆಗೆ ಹರಿಹರನ ರಗಳೆಗಳನ್ನು ಬಲ್ಲ ವೀರಶೈವ ಪಂಡಿತರು ಕಾರಣ ಆಗಿದ್ದರೂ ಆಗಿರಬಹುದು. ಸರ್ವಜ್ಞ ವೀರಶೈವನಾಗಿರಬಹುದು ಎನ್ನುವುದು ಆಂತರಿಕ ಪ್ರಮಾಣವೇ ನೆರವಿಗಿರುವಾಗ ಈ ಕಥೆ ಏಕೆ ಎಂಬ ಪ್ರಶ್ನೆ ಹುಟ್ಟಿಕೊಳ್ಳುವುದೂ ಸಹಜವೇ. ಈ ಕಥೆ ಹುಟ್ಟಿಕೊಂಡಾಗ ಸರ್ವಜ್ಞನ ತ್ರಿಪದಿಗಳು ಪದ್ಧತಿಗಳಾಗಿ ವರ್ಗೀಕರಣವಾಗದೆ ಅವ್ಯವಸ್ಥಿತವಾಗಿ ಪ್ರಚಾರದಲ್ಲಿದ್ದುವು ಎಂದು ಕಾಣುತ್ತದೆ. ಸಂಪಾದನೆಯ ಸಿದ್ಧವೀರಣ್ಣನು ಸರ್ವಜ್ಞನವೆಂದು ಆಚರಣೆಯ ವಚನಗಳನ್ನು ತನ್ನ 'ಶೂನ್ಯ ಸಂಪಾದನೆ' ಯಲ್ಲಿ ಅಳವಡಿಸಿಕೊಂಡಿರುವನಷ್ಟೆ. ಅದೇ ಸುಮಾರಿನಲ್ಲಿ ಅಥವಾ ಅದಕ್ಕೂ ಮುಂಚೆ ಸರ್ವಜ್ಞನ ವಚನಗಳು ಪದ್ಧತಿಗಳಾಗಿ ವಿಂಗಡನೆಗೊಂಡಿರಬೇಕು. ವೀರಶೈವ ಧರ್ಮದ ಹಿನ್ನೆಲೆಯಲ್ಲಿ ಈ ಕಾರ್ಯಗಳೆಲ್ಲ ನಡೆಯುತ್ತಿದ್ದಾಗಲೇ ಬ್ರಾಹ್ಮಣವರ್ಗವೊಂದು ಈ ಮಹಾಪುರುಷನನ್ನು ತಮ್ಮವನನ್ನಾಗಿ ಮಾಡಿಕೊಳ್ಳುವ ಉದ್ದೇಶದಿಂದ– ಸಂದರ್ಭವನ್ನು ಬಹುಶಃ ಸ್ವಲ್ಪ ಕುಹಕ ದೃಷ್ಟಿಯಿಂದಲೇ ಕಾಣುತ್ತ, ಅವನನ್ನು ಒಬ್ಬ ಹಾರುವನಿಗೂ ಕುಂಬಾರ ಸಾಲೆಯ ಒಬ್ಬ ವಿಧವೆಗೂ ಹುಟ್ಟಿದವನು ಎಂಬ ಪ್ರಚಲಿತ ವಿದ್ಯಮಾನದ ಆಧಾರದ ಮೇಲೆ ಅವರಿಬ್ಬರನ್ನೂ ಹೆಸರಿಟ್ಟು ಕರೆದರು ಎಂದು ಕಾಣುತ್ತದೆ. ಪುರುಷಪ್ರಧಾನವಾದ ಅಂದಿನ (ಇಂದಿನದು ಕೂಡ) ಸಮಾಜದಲ್ಲಿ ಹೆಣ್ಣು ಯಾವ ಕುಲದವಳಾದರೂ ಸ್ತ್ರೀಪುರುಷ ಸಂಬಂಧದಲ್ಲಿ ಜಾತಿ ಸಂಕರ ಇದ್ದಾಗ ಪುರುಷನ ವರ್ಣವೆ (ಅಥವಾ ಜಾತಿಯೆ) ಸಂತಾನಕ್ಕೂ ಸಲ್ಲತಕ್ಕದ್ದಾಗಿತ್ತು. ಹೀಗೆ, ಸರ್ವಜ್ಞ ಹಾರುವನೊಬ್ಬನ ಮಗ ಎನ್ನುವುದು ಸ್ಥಿರಪಟ್ಟಿರಬೇಕು. ಒಂದು ಕಥೆಯ ಪ್ರಕಾರ ಸರ್ವಜ್ಞನ ತಂದೆಯಾದ ಈ ಬ್ರಾಹ್ಮಣನ

ಎಲು ಕರುಳು ನರ ತೊಗಲು ಬಲಿದ ಚರ್ಮದ ಹೊದಿಕೆ
ಮಲಮೂತ್ರ ಕೀವು ಕ್ರಿಮಿಯಿರ್ಪ । ದೇಹಕ್ಕೆ
ಕುಲವಾವುದಯ್ಯ ಸರ್ವಜ್ಞ

ಅವಯವವೆಲ್ಲರಿಗೆ ಸವನಾಗಿ ಇರುತ್ತಿರೆ
ಭವಿ ಭಕ್ತ ಶ್ವಪಚ ಶೂದ್ರರು । ಎಂದೆಂಬ
ಕವನವೆತ್ತಣದು ಸರ್ವಜ್ಞ [೧೦]

**ಸರ್ವಜ್ಞನ ಮೂರ್ತಿಮಹತ್ವ :** ಸರ್ವಜ್ಞನು ವಿಶ್ವಮಾನವತಾವಾದಿ ಎಂಬ ಸತ್ಯ ಸಂಗತಿಯನ್ನು ಒಪ್ಪಿದರೂ ಅಂದಿನ (ಮತ್ತು ಇಂದಿನ) ಸಮಾಜಿಕ ವಿದ್ಯಮಾನದಂತೆ ಆತ ಜನ್ಮತಃ ಯಾವುದೋ ಒಂದು ಕುಲದಲ್ಲಿ ಹುಟ್ಟಿರಲೇಬೇಕಲ್ಲ. ಅವನ ಜನ್ಮವೃತ್ತಾಂತವನ್ನು ವಿವರಿಸುವ ಪದ್ಯಗಳನ್ನು ದಂತಕಥೆಯ ಆಧಾರದ ಮೇಲೆ ಈಚಿನವರು ಕಟ್ಟಿ ಅವನ ಪದ್ಯರಾಶಿಗೆ ಸೇರಿಸಿರಬೇಕು ಎಂದರೂ ಆ ದಂತ ಕಥೆಯ ಬುಡದಲ್ಲಿ ಸಾಸಿವೆ ಕಾಳಿನಷ್ಟಾದರೂ ನಿಜಾಂಶ ಹುದುಗಿದೆ ಎಂದು ತೋರುತ್ತದೆ. ಅದೆಂದರೆ, ಅವನು ಒಬ್ಬ ಹಾರುವ ಹಾಗೂ ಒಬ್ಬ ಕುಂಬರಿತಿಯ ಮಗ ಎನ್ನುವುದು. ಆ ಹಾರುವ ಶೈವ ಬ್ರಾಹ್ಮಣ. ಕಂಬರಿತಿ ವೀರಶೈವಳು.[೧೧] ವೀರಶೈವ ರಲ್ಲಿಯೂ ಅನಾದಿಕಾಲದಿಂದಲೂ ಎರಡು ಮುಖ್ಯ ಪಂಗಡಗಳು ಇದ್ದೇ ಇವೆ. ಇವುಗಳಲ್ಲಿ ಆರಾಧ್ಯ ಬ್ರಾಹ್ಮಣ ಪಂಗಡವೂ ಒಂದು. ತಂದೆ ಈ 'ಹಾರುವ' ಪಂಗಡದವನಾಗಿದ್ದು, ತಾಯಿ ಬಸವೇಶ್ವರರು ಪ್ರವರ್ತನಗೊಳಿಸುವ ವೀರಶೈವ ಸಂಪ್ರದಾಯಕ್ಕೆ ಸೇರಿದವಳಿರಬಹುದು. ಈ ಬಗೆಯ ಹುಟ್ಟಿನ ಹಿನ್ನೆಲೆಯಲ್ಲಿ ಪರಿಶೀಲನೆ ಮಾಡಿ ನೋಡಿದರೆ, ಲಿಂಗ–ಜಾತಿ–ದೈವ–ಯೋಗ ಮುಂತಾದ ಗಹನವಿಚಾರಗಳ ಬಗೆಗೆ ಸ್ಪಷ್ಟವಾದ ಮಾತುಗಳಲ್ಲಿ ಅವನು ಪ್ರತಿಪಾದಿಸುವ ಸಿದ್ಧಾಂತದ ಸಮಂಜಸತೆಯನ್ನು ಅರ್ಥ ಮಾಡಿಕೊಳ್ಳಬಹುದು.

---

೧೦ ಈ ಪದ್ಯ 'ಪರಮಾರ್ಥ' ಸಂಗ್ರಹದಲ್ಲಿ ಇಲ್ಲ, ಉಳಿದ ಸಂಗ್ರಹಗಳಲ್ಲಿ ಉಂಟು. 'ಭವಿ–ಭಕ್ತ' (ಎಂದರೆ, ವೀರಶೈವನಲ್ಲದವನು ಮತ್ತು ವೀರಶೈವ) ಎಂಬ ಭೇದವನ್ನು ಸರ್ವಜ್ಞ ನಿರಾಕರಿಸಿರುವುದು ಗಮನಾರ್ಹ. ಅಂತೆಯೇ ಇಷ್ಟ ಲಿಂಗ ಮಹತ್ವವನ್ನು ಹೊಗಳುವ ಪದ್ಯಗಳೊಂದಿಗೆ ಲಿಂಗ ನಿಷ್ಠೆಯನ್ನು ಹಳಿಯುವ ಪದ್ಯಗಳೂ (ಈ ಸಂಗ್ರಹದ ೪೯ನೇಯ ಪು ನೋಡಿ.) ಇರುವುದು ಗಮನಾರ್ಹ.

೧೧ ಉತ್ತರ ಕರ್ನಾಟಕದ ಕುಂಬಾರ ಕಸಬಿನವರೆಲ್ಲರೂ ವೀರಶೈವರು ಎಂದು ತಿಳಿದು ಬರುತ್ತದೆ. ದಕ್ಷಿಣ ಕರ್ನಾಟಕದಲ್ಲಿ ಹಾಗಿಲ್ಲ. ಈ ಅಂಶವನ್ನು ಈಚೆಗೆ ನನಗೆ ತಿಳಿಸಿದವರು ಡಾ॥ ಎಂ. ಚಿದಾನಂದಮೂರ್ತಿ ಅವರು.)

ಅತ್ಯಂತ ಹಿಂದಿನ ಪಾಠಗಳಲ್ಲಿ ಸರ್ವಜ್ಞನ ತಂದೆ ಬ್ರಾಹ್ಮಣನೂ ಅಲ್ಲ. ತಾಯಿ ಕುಂಬಾರ ಮಾಳಿಯೂ ಅಲ್ಲ. ಸರ್ವಜ್ಞ, ಸಾಕ್ಷಾತ್ ಈಶ್ವರನ ವರದಿಂದ ಹುಟ್ಟಿದವನು–ಎಂಬ ಸಂಗತಿ ಹೊರಪಡುತ್ತದೆ:

ತಂದೆ ಹಾರುವನಲ್ಲ ತಾಯಿ ಮಾಳಿಯು ಅಲ್ಲ
ಚಂದ್ರಶೇಖರನ ವರಪುತ್ರ–ನಾ ನಿನ್ನ
ಕಂದನಲ್ಲೆಂಬ (ಪರಮಾರ್ಥ)

ತಂದೆ ವಿಪ್ರನು ಅಲ್ಲ ತಾಯಿ ಮಾಳಿಯು ಅಲ್ಲ
ಚಂದ್ರಶೇಖರನ ವರದಿಂದ ಪುಟ್ಟಿದ
ಕಂದ ತಾನೆಂದ (ಸರ್ವಜ್ಞ)

ಮೇಲಿನ ಎರಡು ಪ್ರತ್ಯೇಕ ಪಾಠಗಳ ಪದ್ಯಗಳಲ್ಲಿ ಒಂದೇ ಅರ್ಥ ಕೊಡುವ ಮಾತುಗಳು ಬೇರೆಯಾಗಿವೆಯೆ ಹೊರತು ತಾತ್ಪರ್ಯ ಒಂದೇ.

'ತಂದೆ ಹಾರುವನಲ್ಲ' ಎಂಬ ಕಡೆಗಳಲ್ಲಿ 'ತಂದೆ ಹಾರುವ ಬಸವ' ಎಂದು ತಿದ್ದುವುದಕ್ಕೆ ಆ ಪಾಠಗಳ ಜನ್ಮವೃತ್ತಾಂತದ ಪದ್ಯಗಳಲ್ಲಿಯೆ ಆಧಾರ ಇದೆ. 'ಪರಮಾರ್ಥ' ಅಂಕಿತದ ಪಾಠದ ಪ್ರತಿಯಲ್ಲಿ ತಂದೆ ಮಾಸನೂರ (ಮಾಸೂರು) ಬಸವ, ಅಥವಾ ಬಸವರಸ; ಇವನ ಧರ್ಮಪತ್ನಿ ಅಕ್ಕ ಮಲ್ಲಮ್ಮ. ಇಬ್ಬರಿಗೂ ಸಂತಾನವಿರಲಿಲ್ಲ. ಸಂತಾನಪ್ರಾಪ್ತಿಗಾಗಿ ಕಾಶಿಯ ಈಶನಲ್ಲಿ (ವಿಶ್ವೇಶ್ವರನಲ್ಲಿ) ವರ ಬೇಡಲು ಹೋದ ಅವನು ಊರಿಗೆ ಹಿಂದಿರುಗುವಾಗ ಆಕಸ್ಮಿಕವಾಗಿ 'ಲಂಡೆ' (= ರಂಡೆ, ವಿಧವೆ) ಮಾಳಿಯ ಸಹವಾಸವಾಗುತ್ತದೆ. ಇವರಿಬ್ಬರ ಸಮಾಗಮದ ಫಲವೇ ಪುತ್ರಜನನ. ಈಶ್ವರನ ವರದಿಂದ ಧರ್ಮಪತ್ನಿಯ ಗರ್ಭದಲ್ಲಿ ಅವತರಿಸಬೇಕಾಗಿದ್ದ ಶಿಶು ವಿಧವೆ ಮಾಳಿಯ ಗರ್ಭದಲ್ಲಿ ಬೆಳೆಯಿತು. ಮಾಳಿಯನ್ನು ವಿಧವೆಯಾಗಿ ಮಾಡಿದ್ದರಿಂದ ಬಸವರಸನಿಗೆ ಪರಸ್ತ್ರೀಗಮನ ದೋಷವೂ ಅಷ್ಟಾಗಿ ತಟ್ಟುವುದಾಗಲಿಲ್ಲ!

ಹೀಗೆ, ಮೇಲಿನ ಜನ್ಮವೃತ್ತಾಂತ ವಿಷಯದ ಮೂರು ಪದ್ಯಗಳೂ ಸರ್ವಜ್ಞನ ಬ್ರಾಹ್ಮಣತ್ವವನ್ನು ಎತ್ತಿ ಹಿಡಿದರೂ, ಆ ಪದ್ಯಗಳು ಪ್ರಕ್ಷಿಪ್ತಗಳಲ್ಲಿ ಎಂದು ಎಣಿಸಿ ಹೇಳುವುದಾದರೆ ಸರ್ವಜ್ಞನು ತನ್ನ ಬ್ರಾಹ್ಮಣ ಹುಟ್ಟನ್ನು ನಿರಾಕರಿಸಿ, ತಾನು ಈಶ್ವರನ ವರದಿಂದ ಹುಟ್ಟಿದವನು, ತಾನು ಯಾವ ಕುಲಕ್ಕೂ ಸೇರಿದವನಲ್ಲ, ಎಲ್ಲರಂತೆ ತಾನೊಬ್ಬ ಮಾನವ ಎಂದು ಘೋಷಿಸುವಂತೆ ತೋರುತ್ತದೆ:

ರಜೋಗುಣ ಕೆಂಪು ಪ್ರಧಾನನಾದ ಬ್ರಹ್ಮ, ನೀಲಮೇಘಶ್ಯಾಮ ವರ್ಣದ (ಕಪ್ಪು) ತಮೋಗುಣಪ್ರಧಾನವಾದ ವಿಷ್ಣು, ಸತ್ವಗುಣ (ಬಿಳುಪು, ಧವಳವರ್ಣ) ಪ್ರಧಾನನಾದ ಪುರಹರ (ಎಂದರೆ ಹರ), ಇವರುಗಳು 'ಸರಿಯ ದೈವಕ್ಕೆ' ಎಂಬ ಹೇಳಿಕೆಯಲ್ಲಿ 'ದೈವ' ಎಂದರೆ ತ್ರಿಗುಣಾತೀತನಾದ ಪರಬ್ರಹ್ಮ ಎಂಬುದು ಸ್ಪಷ್ಟ. ಈ ಕಲ್ಪನೆ (ಹಾರುವರ) ಶುದ್ಧಶೈವಕ್ಕೂ ವೀರಶೈವಕ್ಕೂ ಸಮಾನವಾದುದು. ವೀರಶೈವ 'ಶುದ್ಧ ಶೈವ'ದ ಬೆಳವಣಿಗೆ ತಾನೆ? ಷಟ್‌ಸ್ಥಲದ ವಿಚಾರಗಳು ಬಸವಣ್ಣನವರ ಕಾಲದ ಶರಣರಿಗಿಂತ ಹಿಂದಿನ ಶುದ್ಧ ಶೈವರಲ್ಲೂ (ಆದ್ಯರಲ್ಲೂ) ಉಂಟು. ಲಿಂಗವಂತ, ವೇದಿಕ, ಜೈನ–ಈ ಮೂರು ಮತಗಳ ಬಾಹ್ಯ ಡಂಭ ಆಚರಣೆಗಳನ್ನು ಖಂಡಿಸುತ್ತ ಮೂರು ಮತಗಳಲ್ಲೂ ಸಮಾನ ಗೌರವ ಉಳ್ಳ, "ಹರನಿಷ್ಠೆಯುಳ್ಳ ಪರಮಋಷಿ" ಸರ್ವಜ್ಞ. ಇಂಥ ಒಬ್ಬ ಮಹಾಪುರುಷನನ್ನು ವೀರಶೈವದ ಚೌಕಟ್ಟಿನಲ್ಲಿಯೇ ಮೂರ್ತೀಕರಿಸಬೇಕು ಎಂಬ ನಿಲುವನ್ನು ವಿರೋಧಿಸುವ ಅಗತ್ಯವೇನೂ ಇಲ್ಲ. ಈ ವಿಚಾರದಲ್ಲಿ ನಾವು ಕೊಡುವ ಒತ್ತಿನಲ್ಲಿ ಸ್ವಲ್ಪ ಹೆಚ್ಚು, ಕಡಮೆ ಕಂಡುಬರಬಹುದು ಅಷ್ಟೆ. ಸರ್ವಜ್ಞನ ಮೂರ್ತಿಮಹತ್ವವನ್ನು ಅರಿತುಕೊಂಡೆವಾದರೆ ಅವನ ಮತದ ಬಗೆಗಿನ ಅಲ್ಪ ಸ್ವಲ್ಪ ಭಿನ್ನಾಭಿಪ್ರಾಯಗಳು ನಾವು ಆ ಮಹಾನುಭಾವನಿಗೆ ಸಲ್ಲಿಸುವ ಗೌರವಾರ್ಪಣೆಗೆ ಅಡ್ಡ ಬಾರವು.[೧೩]

**ಸರ್ವಜ್ಞನ ಸ್ಥಳ :** ಸರ್ವಜ್ಞನ ತವರೂರು ಮಾಸೂರೇ, ಅಂಬಲೂರೇ? ಈ ಬಗೆಗೂ ಭಿನ್ನಾಭಿಪ್ರಾಯಕ್ಕೆ ಅವಕಾಶವಿದೆ. ಅವನ ಹುಟ್ಟೂರು ಯಾವುದೇ ಆದರೂ ಅವನು ಕನ್ನಡಿಗ, ಕನ್ನಡನಾಡನ್ನೆಲ್ಲ ತಿರುಗಿ ನೋಡಿದವನು. ಜೋಳದ ಬೋನ, ಅಕ್ಕಿಯ ಅನ್ನ, ರಾಗಿಯ ಮುದ್ದೆ, ಎಮ್ಮೆಯ ಹಯನು, ನವಣೆ, ಪುಡಿಗಡುಬು, ಬೆಲ್ಲ–ಬೇಳೆಯ ಹೂರಣ–ಇವೆಲ್ಲವನ್ನೂ ಬಲ್ಲ ಸರ್ವಜ್ಞ, ಬೆಳುವೊಲ ನಾಡು ಎಂತ ಮೆಚ್ಚೋ ಮಲೆನಾಡೂ ಅಂತೆಯೆ ಮೆಚ್ಚು ಅವನಿಗೆ. ಕರ್ನಾಟಕದ ಮೂಡಲು ಬಡಗಲು ಪಡುವಲು ತೆಂಕಲು ಈ ಎಲ್ಲ ಕಡೆಯೂ ತಿರುಗಾಡಿದವನು ಈ ಕನ್ನಡದ ಯೋಗಿ ತಿರುಕ. "ಅವನ ಪದ್ಯಗಳಲ್ಲಿ ಒದರು, ಒರಸೆ, ಶಾನೆ, ದುಸ್ತು, ದೇವಾಂಗ, ಕಮ್ಮೆ ಇತ್ಯಾದಿ ಅನೇಕ ಮೈಸೂರು ಪ್ರಯೋಗಗಳ ಜತೆಗೆ ನಾವುಗಳು, ಶ್ರೇಷ್ಠರುಗಳ ಎಂಬುದಾಗಿ ಅತಿ ಬಹುವಚನ

---

೧೩. ದೈವ, ಜಾತಿ, ಕುಲಗಳ ಬಗೆಗೆ ಸರ್ವಜ್ಞನವು ಎಂದು ಪ್ರಸಿದ್ಧವಾಗಿರುವ ಪದ್ಯಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಎತ್ತಿ ಹೇಳಿದೆ. ಅವನ ಹೃದಯ ವೈಶಾಲ್ಯವನ್ನು ಪ್ರತಿಬಿಂಬಿಸುವ ವಚನಗಳು ಇನ್ನೂ ಹಲಕೆಲವು ಉಂಟು. ಇವು ಪ್ರಕ್ಷಿಪ್ತಗಳಲ್ಲ ಎಂಬ ನಿಶ್ಚಿತವನ್ನು ಅವಲಂಬಿಸಿ ನಮ್ಮ ಅಭಿಪ್ರಾಯವನ್ನು ತಿಳಿಸಲಾಗಿದೆ.

ಕಾಯಕಮಲದ ಸಜ್ಜೆ ಜೀವರತ್ನದ ಲಿಂಗ
ಭಾವಪುಷ್ಪದಲಿ ಶಿವಪೂಜೆ । ಮಾಡುವನೆ
ದೇವ ಕಾಣಯ್ಯ ಸರ್ವಜ್ಞ

ಅಷ್ಟ ವಿಧಾರ್ಚನೆಯೆಷ್ಟು ಮಾಡಿದರೇನು
ನಿಷ್ಠೆಯಿಲ್ಲದನ ಶಿವಪೂಜೆ । ಹಾಳೂರ
ಬಿಷ್ಟೆ ಕಾಣಯ್ಯ ಸರ್ವಜ್ಞ

ಕಂಡಕಂಡವರೆಲ್ಲಾ ಕೊಂಡು ಲಿಂಗವ ಕಟ್ಟಿ
ಕೊಂಡಾಡಲರಿಯದಧಮರೊಳು । ಆ ಲಿಂಗ
ಕೆಂಡದಂತಿರ್ಕು ಸರ್ವಜ್ಞ

ಕಲ್ಲುಕಲ್ಲೆಂಬರು ಕಲ್ಲಲುಂಟೇ ದೈವ
ಕಲ್ಲಲಿ ಕಲೆಯನರುಹಿದ । ಗುರುವಿನ
ಸೊಲ್ಲೆ ತಾ ದೈವ ಸರ್ವಜ್ಞ – ಇತ್ಯಾದಿ ಪದ್ಯಗಳು.

ಸರ್ವಜ್ಞ ವೀರಶೈವನೇ ಆದರೂ ಬಾಹ್ಯನಿಷ್ಠವೂ ಅವಿಚಾರಪರವೂ ಆದ ಶಿವಾಚಾರಕ್ಕೆ ಕಟ್ಟು ಬೀಳದ ಸ್ವತಂತ್ರ ಮಾರ್ಗದ (ಶಿವ)ಯೋಗಿ. ಹಿಂಡನಗಲಿದ ಗಜ, ಎಂದು ಕಾಣಬರುತ್ತದೆ. ನಿರ್ಗುಣಬ್ರಹ್ಮನ ಉಪಾಸನೆಯತ್ತ ಇವನ ಒಲವು. ತ್ರಿಗುಣಾತೀತನಾದ ಶಿವನೇ ಆ ನಿರ್ಗುಣಬ್ರಹ್ಮ. ಈ ಶಿವ ಸೃಷ್ಟಿ ಸ್ಥಿತಿಲಯಕರ್ತರಾದ ತ್ರಿಮೂರ್ತಿಗಳಲ್ಲಿ ಒಬ್ಬನಾದ ಶಿವನಲ್ಲ. ಆತ ಪರಶಿವ, ಸದಾಶಿವ, ಈ ದೃಷ್ಟಿ ನಿಜಗುಣರ ದೃಷ್ಟಿಗೆ ಸರಿಬರುವಂಥದು:

ಹಿರಿಯ ಬೊಮ್ಮನು ಕೆಂಚ ಕಿರಿಯ ಹರಿ ಕರಿಗ
ಪುರುಹರ ಶುದ್ಧ ಧವಳಕ । ನಿವರುಗಳು
ಸರಿಯೆ ದೈವಕ್ಕೆ [೧೨] ಸರ್ವಜ್ಞ

---

೧೨ 'ಸರಿಯೆ ದೈವಕ್ಕೆ' ಎನ್ನುವುದರೆಡೆಯಲ್ಲಿ 'ಹರಗೆ ಸರಿಯಾರು' ಎಂದಿದೆ 'ಪರಮಾರ್ಥ'ದಲ್ಲಿ. 'ಪುರಹರ' ಎಂದರೂ ಹರನೆ. ಎಂದ ಮೇಲೆ, 'ಸರಿಯೆ ದೈವಕ್ಕೆ' ಎಂಬ ಪಾಠವನ್ನು 'ಪರಮಾರ್ಥ' ಸಂಕಲನಕಾರ 'ಹರಗೆ ಸರಿ ಯಾರು' ಎಂದು ಮಾರ್ಪಡಿಸಿಕೊಂಡಿರುವಂತೆ ಕಾಣುತ್ತದೆ. ಇದರಿಂದ ಹೊರಡುವುದು ಏನು? ವಿರ್ತ್, ಕಿಟಿಲ್, ಉತ್ತಂಗಿ, ಈ ಮೂವರಲ್ಲಿ ಕಂಡುಬರುವ ಸುಮಾರು ಸಮನಾದ ಪಾಠಕ್ಕೆ ಮೂಲವಾದ ಒಂದು ಪಾಠ ಇದ್ದು, ಅದು 'ಪರಮಾರ್ಥ'ದ ಪಾಠಕ್ಕಿಂತ ಹಿಂದಿನದು; ಆ ಪಾಠ 'ಪರಮಾರ್ಥ'ದ ಪಾಠಕ್ಕಿಂತ ಹೆಚ್ಚು ವಿಶ್ವಸನೀಯವಾಗಿರಲು ಸಾಧ್ಯ–ಎಂಬ ವಿಚಾರ.

ಅನಗತ್ಯವಾಗಿ ಜೋಡಿಸಿದ್ದಾರೆ. ಎಲ್ ಬಸವರಾಜು ಅವರು ಸಂಪಾದಿಸಿರುವ ಸರ್ವಜ್ಞ ವಚನಗಳಲ್ಲೂ ಕೆಳದಿ ಮ್ಯೂಸಿಯಂನಲ್ಲಿ ದೊರೆತ ಹಸ್ತಪ್ರತಿಯಲ್ಲೂ ಱಕಾರ ಪ್ರಯೋಗವಿದೆ. ಆದ್ದರಿಂದ ಱಕಾರ ಪ್ರಯೋಗವು ಇನ್ನೂ ಪ್ರಚುರತೆಯಲ್ಲಿದ್ದ ಕಾಲದಲ್ಲಿ ಸರ್ವಜ್ಞ ವಚನಗಳ ಪ್ರಪ್ರಾಚೀನ ಹಸ್ತಪ್ರತಿಗಳು ಹುಟ್ಟಿವೆ ಎಂದಾಯಿತು. ಕಿಟೆಲ್‌ರವರ ಅಭಿಪ್ರಾಯದಂತೆ ಲಿಖಿತ ಸಾಹಿತ್ಯ ಕೃತಿಗಳಲ್ಲಿ ಱಕಾರ ಪ್ರಯೋಗವು ೧೭ನೆಯ ಶತಮಾನದಲ್ಲಿಯೂಇದ್ದಿತು. ಈಗ ನಮಗೆ ದೊರೆತಿರುವ ಹಸ್ತಪ್ರತಿಗಳಲ್ಲಿ ಡಾ॥ ಬಸವರಾಜುರವರ "ಪರಮಾರ್ಥ" ಹಸ್ತಪ್ರತಿಯನ್ನು ಬಿಟ್ಟರೆ ಬೇರೆ ಯಾವ ಹಸ್ತಪ್ರತಿಯಲ್ಲಿಯೂ ಕಾಲ ನಮೂದಾಗಿಲ್ಲ. "ಪರಮಾರ್ಥ"ದ ಹಸ್ತಪ್ರತಿಯ ಕಾಲ ಕ್ರಿ.ಶ. ೧೬೩೬. (ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಇರುವ ಈ ಪ್ರತಿ ವೆಂಕ ಎಂಬುವನು ಪ್ರತಿ ಮಾಡಿಕೊಂಡದ್ದು.) ಆದ್ದರಿಂದ, ಬೇರೆ ಬೇರೆ ವಿದ್ವಾಂಸರು ಈ ಸಂದರ್ಭದಲ್ಲಿ ಮಾಡಿರುವ ಊಹೆಗಳೆಲ್ಲವೂ ಅಪ್ರಸ್ತುತವಾಗುವುದರಿಂದ ಅವುಗಳನ್ನು ಇಲ್ಲಿ ಉಲ್ಲೇಖಿಸಿ ಅವುಗಳ ಬಗ್ಗೆ ವೃಥಾ ಚರ್ಚೆ ಮಾಡುವ ಗೋಜಿಗೆ ಹೋಗಿಲ್ಲ.[೧೪] ವೆಂಕನ ಹಸ್ತಪ್ರತಿಯ ಕಾಲ ಕ್ರಿ.ಶ. ೧೬೩೬ ಎಂದು ಖಚಿತವಾಗಿ ತಿಳಿದುಬರುವುದರಿಂದ ಅದಕ್ಕಿಂತ ಹಿಂದೆ ಸರ್ವಜ್ಞ ಇದ್ದ ಎನ್ನುವುದು ಸಿದ್ಧವಾಗುತ್ತದೆ. ಎಷ್ಟು ಹಿಂದೆ ಎಂಬ ಪ್ರಶ್ನೆ ಉಳಿಯುತ್ತದೆ. "ಸಂಪಾದನೆಯ ಸಿದ್ಧ ವೀರಣ್ಣಾಚಾರ್ಯನು ಸರ್ವಜ್ಞನ ಕೆಲವು ಯಥೋಕ್ತಿಗಳನ್ನು ಉಲ್ಲೇಖಿಸಿದ್ದು, ಇವನು ಸುಮಾರು ೧೬೦೦ರಲ್ಲಿದ್ದಂತೆ ಆರ್. ನರಸಿಂಹಾಚಾರ್ಯರು ಹೇಳಿದ್ದಾರೆ. ಇದು ನಿಜವಿದ್ದಲ್ಲಿ ಸರ್ವಜ್ಞನು ಹಿಂದೆ ಅಂದರೆ ೧೬೦೦ಕ್ಕೆ ಮುಂಚೆ ಬದುಕಿದವನಾಗಿರಬೇಕು" ಎಂಬ ತೀರ್ಮಾನಕ್ಕೆ ಬಂದು, ಸರ್ವಜ್ಞ ೧೬ನೆಯ ಶತಮಾನದವನು ಎಂದು ಉತ್ತಂಗಿಯವರು ಹೇಳಿರುವುದು ಸತ್ಯಾಂಶಕ್ಕೆ ಹತ್ತಿರದ್ದಾಗಿ ಕಾಣುತ್ತದೆ.

ಈ ಸಂದರ್ಭದಲ್ಲಿ, ಕಾಲ ನಿರ್ಣಯಕ್ಕೆ ಪೋಷಕವಾದ ಆಂತರಿಕ ಪ್ರಮಾಣ

---

೧೪. ಸರ್ವಜ್ಞ ರಚಿತ ಎಂದು ನಂಬಲಾಗಿರುವ 'ಕಾಲಜ್ಞಾನ ಪದ್ಧತಿ'ಯ ವಚನಗಳ ಆಧಾರದ ಮೇಲೆ ಇ.ಪಿ. ರೈಸ್ ಅವರು ಸರ್ವಜ್ಞನ ಕಾಲವನ್ನು ಕ್ರಿ.ಶ. ೧೭೬೦ ಎಂದೂ ಕಿಟೆಲ್ ಅವರು ೧೮೦೦ ಎಂದೂ ನಿರ್ಣಯಿಸಿದ್ದಾರೆ. ಈ 'ಪದ್ಧತಿ'ಯ ಆಧಾರದ ಮೇಲೆ ಉತ್ತಂಗಿಯವರು ಅವನ ಕಾಲವನ್ನು ೧೬೦೦ ಎಂದು ಹೇಳಿದ್ದಾರೆ. ಈ ಕಾಲಜ್ಞಾನ ಪದ್ಧತಿಯ ಪದ್ಯಗಳನ್ನು ಈಚಿನವರು ಬರೆದು ಸೇರಿಸಿರುವಂತೆ ತೋರುತ್ತದೆ. ಸದ್ಯದ ಮಟ್ಟಿಗೆ ಅತ್ಯಂತ ಪ್ರಾಚೀನ ಎನ್ನಲಾದ 'ಪರಮಾರ್ಥ' ಅಂಕಿತದ ಸಂಕಲನದ ಹಸ್ತಪ್ರತಿಯಲ್ಲ. 'ಕಾಲಜ್ಞಾನ ವಚನಗಳು' ಇಲ್ಲದಿರುವುದು ಗಮನಾರ್ಹ

ಪ್ರಯೋಗವಾಗಿರುವುದರಿಂದ ಇವನು ಧಾರವಾಡ, ಮೈಸೂರು ಮಧ್ಯದಲ್ಲಿರುವ ಮಾಸೂರಿನ ನೆರೆ ಪ್ರದೇಶದವನಾಗಿರಬೇಕೆಂಬ ಸಂಗತಿಯು ಸತ್ಯವಾಗಿದ್ದಂತೆ ತೋರುತ್ತದೆ. ಕರ್ನಾಟಕದ ಎಲ್ಲ ಭಾಗಗಳ ಪರಿಚಯ ಇವನಿಗಿದ್ದಂತೆ ಕಾಣುತ್ತದೆ" ಎಂದು ಉತ್ತಂಗಿ ಹೇಳುತ್ತಾರೆ. ಧಾರವಾಡ ಸೀಮೆ ಮೈಸೂರು ಸೀಮೆ ಇವುಗಳ ನಡುವಣ ಬೆಳುವೊಲ ಪ್ರಾಂತದ ಅಬ್ಬಲೂರು ಇವನ ಸ್ಥಳ ಎನ್ನವುದು ಶ್ರೀ ಎಚ್. ದೇವೀರಪ್ಪನವರ ತೀರ್ಮಾನ.[೧೩.ಎ] ಬೆಳುವೊಲ ನಾಡಿನವನು ಸರ್ವಜ್ಞ ಎಂದು ತಿಳಿಯಲು ಅಡ್ಡಿಯಿಲ್ಲ.

**ಸರ್ವಜ್ಞನ ಕಾಲ :** ಕಾವ್ಯಕವಿಗಳು ತಮ್ಮ ಪೂರ್ವದ ಕವಿಗಳನ್ನೋ ಆಶ್ರಯವಿತ್ತ, ಬಿರುದು ಮನ್ನಣೆಗಳನ್ನಿತ್ತ ಪೋಷಕರನ್ನೋ ಸ್ಮರಿಸುವುದು ಸಾಧಾರಣವಾಗಿ ಕಂಡುಬರುತ್ತದೆ. ಒಬ್ಬ ಕವಿಯ ತರುವಾಯದ ಕವಿಗಳು ಆತನ ಹೆಸರು ಹೇಳುವುದೂ ಉಂಟು. ಇದರಿಂದ ಕವಿಯ ಕಾಲವನ್ನು ಸ್ಥೂಲವಾಗಿ ಗೊತ್ತುಮಾಡುವುದು ಸುಲಭ. ಕೆಲವು ಕವಿಗಳು ಕೃತಿಯಲ್ಲಿ ರಚನಾಕಾಲವನ್ನೂ ತಿಳಿಸಿರುತ್ತಾರೆ. ಹಸ್ತಪ್ರತಿಯ ಲಿಪಿಕಾರರು ತಾವು ಬರೆದ ಹಸ್ತಪ್ರತಿಯಲ್ಲಿ ಅದನ್ನು ಬರೆದು ಮುಗಿಸಿದ ಕಾಲವನ್ನು ತಿಳಿಸಿದ್ದರೆ, ಕವಿ ಆ ಕಾಲಕ್ಕಿಂತ ಹಿಂದಿನವನು ಎಂದು ಊಹಿಸಬಹುದು. ಶಾಸನದ ಆಧಾರವೂ ಕೆಲವೊಮ್ಮೆ ನೆರವಿಗೆ ಒದಗಬಹುದು. ಕವಿಯೇ ಕೃತಿರಚನಾಕಾಲವನ್ನು ತಿಳಿಸಿರುವ ಸಂದರ್ಭವನ್ನು ಬಿಟ್ಟರೆ, ಉಳಿದ ಯಾವ ಪ್ರಮಾಣದಿಂದಲೂ ಕವಿಯ ಕಾಲವನ್ನು ನಿಖರವಾಗಿ ತಿಳಿಸಿಸುವುದು ಸಾಧ್ಯವಿಲ್ಲ. ಭಾಷೆ ಶೈಲಿಗಳ ಆಧಾರದ ಮೇಲೆಯೂ ಸ್ಥೂಲವಾಗಿ ಕವಿ ಬದುಕಿದ್ದ ಶತಮಾನವನ್ನು ಊಹಿಸಲು ಅವಕಾಶವಿದೆ. ಸರ್ವಜ್ಞನನ್ನು ಯಾವ ಕವಿಯೇ ಸ್ತುತಿಸಿರುವುದು ನಮ್ಮ ಗಮನಕ್ಕೆ ಬಂದಿಲ್ಲ. ಸರ್ವಜ್ಞನ ಭಾಷೆ ಕುಮಾರವ್ಯಾಸಾದಿಗಳ ನಡುಗನ್ನಡದ ಜಾಡಿಗಿಂತ ಮುಂದುವರಿದು ಜನಾಭಿಮುಖವಾಗಿ ಬರೆಯುತ್ತಿದ್ದ ಪುರಂದರದಾಸರ ಭಾಷಾಶೈಲಿಯನ್ನು ಹೋಲುತ್ತದೆ. ಕಿಟೆಲ್‌ರವರು ಸರ್ವಜ್ಞನ ವಚನಗಳಲ್ಲಿ ಅನೇಕವನ್ನು ಶಬ್ದಾರ್ಥ ನಿರ್ಣಯ ಸಂದರ್ಭಕ್ಕೆ ಉದಾಹರಣೆಗಳಲ್ಲಿ ಬಳಸಿಕೊಂಡಿರುವರಷ್ಟೆ. ಅವರು ಏಕಪ್ರಕಾರವಾಗಿ ಸರ್ವಜ್ಞನ ವಚನಗಳಲ್ಲಿ ಹಳಗನ್ನಡದ ೞ ಕಾರವನ್ನೂ ಱ ಕಾರವನ್ನೂ ಪ್ರಯೋಗಿಸಿದ್ದಾರೆ. ಸರ್ವಜ್ಞ ವಚನಗಳ ಹಸ್ತಪ್ರತಿಗಳಲ್ಲೇನೋ ಱಕಾರ ಪ್ರಯೋಗವಿದೆ. ೞಕಾರವನ್ನು ಕಿಟೆಲ್ಲರು ಸರ್ವಜ್ಞನ ಭಾಷಾಶೈಲಿಗೆ

(೧೩.ಎ. 'ಜಂಗಮಜ್ಯೋತಿ', ಶ್ರೀ ಜಗದ್ಗುರು ಜಯದೇವ ಪ್ರಶಸ್ತಿ; ಚಿತ್ರದುರ್ಗ, ೧೯೭೫; ಪು. ೨೭೨, ೨೭೪, ೨೭೫.)

ತಿಳಿಸುತ್ತಾರೆ. (Administration and Social life under Vijayanagar, p. 149). ಇದಕ್ಕಿಂತಲೂ ಮುಂಚೆಯೇ ಕ್ರಿ.ಶ. ೧೧೧೭ರಲ್ಲಿ ನಿರ್ಮಿತವಾದ ಬೇಲೂರಿನ ಚನ್ನಕೇಶವ ದೇವಸ್ಥಾನದ ಗೋಡೆಗಳ ಮೇಲೆ ಬಂದೂಕುಗಳಿಂದ ಹೊಡೆಯುತ್ತಿರುವ ಪುರುಷರ ವಿಗ್ರಹಗಳಿವೆ ಎಂದು ತಿಳಿದು ಬರುತ್ತದೆ (R. Narasimhachar : The Kesava Temple at Belur, p-9). (ಈ ಭಾಗವನ್ನು ದೇವಸ್ಥಾನದ ಮೂಲ ಕಟ್ಟಡದ ಒಂದು ಸ್ಥಳದಲ್ಲಿ ಆಮೇಲೆ ಅಳವಡಿಸಲಾಯಿತೇನೋ ಎಂಬ ಸಂದೇಹವೂ ಸುಳಿಯುತ್ತದೆ).[೧೫] ಪ್ರತಿಷ್ಠಾನದ ಹಸ್ತಪ್ರತಿ ಭಂಡಾರಕ್ಕೆ ಈಚೆಗೆ ಸೇರಿದ 'ಕೃಷ್ಣದೇವರಾಯನ ದಿನಚರಿಯ ಕೃತ್ಯಗಳ ವಿಸ್ತಾರ' ವನ್ನು ನಿರೂಪಿಸುವ ಬಖೈರು ಮಾದರಿಯ ಓಲೆಗರಿಯ ಹಸ್ತಪ್ರತಿಯಲ್ಲಿ 'ಫಿರಂಗಿ' ಶಬ್ದ ಪ್ರಯೋಗವಾಗಿದೆ.

"........ವಿಜಯಾಪುರದ ಕೋಟೆಕೊತ್ತಲಗಳ ಚೆಂನಾಗಿ ಮಾಡಿ।
ರಸ್ತು ಸಾಮಾಗ್ರಿಗಳ ಹಾಕಿ ಯಂದು । ವಂದಲಿಸದಾಗಿ । ಬಾಗಿಲ
ಪಾರುಪತ್ಯಗಾರರು ಯೆಂಟು ದಿನದಿಂದಲ್ಲಿ ನಿದ್ರಾಹಾರಗಳು
ಯಿಲ್ಲದೆ । ಮೊದಲ ಧೊರೆ ಯಾವಾಗ ಬಂದು ನೋಡಿಯಾನೋ
ಯಂದು । ಬಯದಿಂದಾ । ಜಾಗರೂಕರಾಗಿ । ಕೋಟೆಕೊತ್ತಳಗಳ
ಚೆಂನಾಗಿ ಮಾಡಿಸಿ । ಫಿರಂಗಿಗಳು ಜಬರಜಂಗಿಗಳು ।
ಕೈಗಲ್ಲುಗಳು । ಲಗ್ಗೆಯ ಕೊರಡುಗಳು । ಹುಲಿ ತಲೆಗಳು ।
ಕೋಟೆಯ ಹೊರಗೆ ಕುದುರೆಗಳು ನಿಲ್ಲವಂಥಾ ಕಲ್ಲುಗಳು
ಮುಂತಾದವನ್ನು ಹಾಕಿದ್ದರು....."

ಕೃಷ್ಣದೇವರಾಯನ ಕಾಲದಲ್ಲಿ (ಕ್ರಿ.ಶ. ೧೫೦೯-೧೫೨೯) ಫಿರಂಗಿಗಳು ಬಳಕೆಯಲ್ಲಿದ್ದವು ಎಂಬ ಸಂಗತಿ ಮೇಲಿನ ವಿಶ್ವಸನೀಯ ದಾಖಲೆಯಿಂದ ಹೊರಪಡುತ್ತದೆ. ವಿಜಯನಗರ ಸಾಮ್ರಾಜ್ಯದ ವೈಭವವನ್ನು ವರ್ಣಿಸುವ ನ್ಯೂನಿಜ್ ಮುಂತಾದ ವಿದೇಶಿ ಪ್ರವಾಸಿಗರ ಬರಹಗಳಲ್ಲೂ ಫಿರಂಗಿಗಳ ಉಲ್ಲೇಖವಿದೆ. ಹೀಗಿರುತ್ತ, ಕ್ರಿ.ಶ. ೧೬೭೮ರ ಸುಮಾರಿನಲ್ಲಿ ಸಿಡಿಮದ್ದು ಬಳಕೆಗೆ ಬಂದಿತ್ತೆಂಬ ಮಹಾಲಿಂಗಂ ಅವರ ಮಾತನ್ನೂ ಒಪ್ಪಬಹುದು. ತೆಲುಗಿನ ವೇಮನನ ಕಾಲ

---

೧೫. ಡಾ॥ ಎಂ. ಚಿದಾನಂದಮೂರ್ತಿ ಅವರು ತಮ್ಮ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ದಲ್ಲಿ (ಪು. ೨೭೯-೮೦) ಈ ಬಗೆಗೆ ಪ್ರಸ್ತಾವಿಸಿದ್ದಾರೆಂದು ತಿಳಿಸಿ, ಮೆಲ್ಕಂಡ ಉಪಯುಕ್ತ ಮಾಹಿತಿಯನ್ನು ಹುಡುಕಿತೆಗೆದು ಟಿಪ್ಪಣಿ ಸಿದ್ಧಪಡಿಸಿ ಉಪಕರಿಸಿದವರು ನನ್ನ ವಿದ್ಯಾರ್ಥಿ ಮಿತ್ರರಾದ ಡಾ॥ ಆರ್. ಶೇಷಶಾಸ್ತ್ರಿ ಅವರು.

ಯಾವುದಾದರೂ ದೊರಕೀತೇ ಎಂಬುದನ್ನೂ ಪರಿಶೀಲಿಸಬಹುದು.

ಕಿಟೆಲ್ಲರು ಉದಾಹರಿಸಿದ ಸರ್ವಜ್ಞನ ವಚನ ಹೀಗಿದೆ:

ಗಂಡಗಂಬಲಿಯಿಕ್ಕಿ ಗಂಡುಗರಣೆಯ ನುಂಗಿ
ಗಂಡ ಬಂದಾಗ ನರಳುವ । ಹೆಣ್ಣಿಂಗೆ
ಗುಂಡಿಕ್ಕು [ಬಿಡದೆ] ಸರ್ವಜ್ಞ

(ಉತ್ತಂಗಿಯವರ ಮುದ್ರಣಗಳಲ್ಲಿ 'ಗುಂಡಿಗಿಕ್ಕೆಂದ' ಎಂಬ ಪಾಠಾಂತರ ಇದೆ. 'ಪರಮಾರ್ಥ'ದಲ್ಲಿ ಈ ಪದ್ಯ ಇಲ್ಲ.)

'ಗುಂಡಿಕ್ಕು' ಎನ್ನುವುದಕ್ಕೆ ಸರ್ವಜ್ಞನ ಪ್ರಯೋಗವನ್ನೇ ಕೊಟ್ಟು to shoot a ball ಎಂದು ಅರ್ಥಕೊಟ್ಟಿದ್ದಾರೆ ಕಿಟೆಲ್ಲರು. (ಪು. ೫೫೨, ಗುಣ್ಡು ೨) ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟುವಿನಲ್ಲಿ 'ಗುಂಡುಹಾರಿಸು' ಎಂಬ ಅರ್ಥವನ್ನು ಕೊಟ್ಟಿದ್ದರೂ ಪ್ರಾಚೀನ ಪ್ರಯೋಗ ಯಾವುದನ್ನೂ ಉದಾಹರಿಸಿಲ್ಲ. ಪ್ರಸ್ತುತ ಪದ್ಯ ಪ್ರಕ್ಷಿಪ್ತವಲ್ಲ ಎಂದು ಇಟ್ಟುಕೊಂಡು ಪರಿಶೀಲಿಸುವುದಾದರೆ, ಗುಂಡುಹಾರಿಸುವುದಕ್ಕೆ ಅಗತ್ಯವಾದ ಸಿಡಿಮದ್ದಿನ ಬಳಕೆ ಕನ್ನಡ ನಾಡವರಿಗೆ ತಿಳಿದದ್ದು ಯಾವಾಗ ಎಂಬುದನ್ನು ಶೋಧಿಸಬೇಕಾಗುತ್ತದೆ.

ಪ್ರಾಚೀನ ಭಾರತೀಯರಿಗೆ ಸಿಡಿಮದ್ದಿನ ಪ್ರಯೋಗ ತಿಳಿದಿತ್ತು ಎಂದು ಕೆಲವು ವಿದ್ವಾಂಸರೂ (Gustav Oppert: on the Weapons, Army Organisation and Political Maxims of Ancient Hindus, with special reference to Gunpowder and Fire arms; 1880, pp 58-82. V.R.R. Dixitar: war in Ancient India, pp 101-106), ತಿಳಿದಿತ್ತೆಂದು ಹೇಳಲು ನಿರ್ವಿವಾದವಾದ ಪ್ರಮಾಣಗಳು ಇಲ್ಲವೆಂದು ಇನ್ನು ಕೆಲವು ವಿದ್ವಾಂಸರೂ (Date : The art of war in Ancient India, pp 36-40) ಅಭಿಪ್ರಾಯಪಟ್ಟಿದ್ದಾರೆ. ಪ್ರಾಚೀನ ಕರ್ನಾಟಕದ ಮಟ್ಟಿಗೆ ಹೇಳುವುದಾದರೆ 'ಸಿಡಿಮದ್ದು' (ಅಗ್ನಿಚೂರ್ಣ) ಪದವಾಗಲಿ, 'ನಾಲಿಕೆ' ಎಂಬ ಪದವಾಗಲಿ ಪ್ರಾಚೀನ ಕರ್ನಾಟಕದವರಿಗೆ ತಿಳಿದಿರಲಿಲ್ಲ ಎಂದು ಖಚಿತವಾಗಿ ಹೇಳಬಹುದು. ಫಿರಂಗಿ, ಗುಂಡು–ಗೋವಿ, ಶತಘ್ನಿ ಮುಂತಾದ ಸಿಡಿಮದ್ದಿನ ಆಯುಧಗಳು ಹದಿನಾರನೆಯ ಶತಮಾನದಿಂದ ಈಚಿನ ಕಾವ್ಯಗಳಲ್ಲಿ ಯಥೇಷ್ಟವಾಗಿ ಕಾಣಿಸಿಕೊಳ್ಳುತ್ತವೆ (ಬೆಟಗೇರಿ ಕೃಷ್ಣಶರ್ಮ: 'ಕನ್ನಡಿಗರ ಕೋಟೆಗಾಳೆಗ' ಎಂಬ ವಿಷಯವಾಗಿ 'ಕರ್ನಾಟಕ ಜನಜೀವನ' ಎಂಬ ಗ್ರಂಥದಲ್ಲಿಯ ಉಲ್ಲೇಖ, ಪು. ೨೬). ದಕ್ಷಿಣ ಭಾರತದಲ್ಲಿ ಮಹಮ್ಮದೀಯರ ದಾಳಿ ನಡೆದ ಬಳಿಕ ಸು. ಕ್ರಿ.ಶ. ೧೩೬೮ರ ಹೊತ್ತಿಗೆ ಸಿಡಿಮದ್ದು ಬಳಕೆಗೆ ಬಂದಿತೆಂದು ಡಾ॥ ಟಿ.ವಿ. ಮಹಾಲಿಂಗಂ

(ಸು. ೧೬೫೦) ಸರಿ ಹೊಂದುತ್ತದೆ. ಅಜ್ಜನ ಹಸ್ತಪ್ರತಿಯ 'ಪರಮಾರ್ಥ' ಅಂಕಿತವನ್ನು ಹೆಚ್ಚು ರೂಢಿಯಲ್ಲಿದ್ದ 'ಸರ್ವಜ್ಞ' ಅಂಕಿತಕ್ಕೆ ಮೊಮ್ಮಗ ವೆಂಕಣ್ಣ ಮಾರ್ಪಡಿಸಿಕೊಂಡನೆಂದು ಕಾಣುತ್ತದೆ. ಈ 'ವೆಂಕ'ರಲ್ಲದೆ ಕವಿಚರಿತೆಯಲ್ಲಿ ಆರ್. ನರಸಿಂಹಾಚಾರ್ಯರು ಕೆಲವು 'ವೆಂಕ ಕವಿ'ಗಳನ್ನು ಉಲ್ಲೇಖಿಸಿದ್ದಾರೆ. ಇವರ ಪೈಕಿ 'ವೆಂಕಟೇಶ್ವರ ಪ್ರಬಂಧ'ದ ಕರ್ತೃವಿನ ಕಾಲ ಕ್ರಿ.ಶ. ೧೬೫೦ ಎಂದು ಊಹಿಸಲಾಗಿದೆ. 'ಪರಮಾರ್ಥ'ದ ಪ್ರತಿಕಾರ ಈ ವೆಂಕನೂ ಆಗಿರಬಹುದು. ಯಾರೇ ಆಗಿದ್ದಿರಲಿ, ಶ್ರೀ ದೇವಿರಪ್ಪನವರು ಹೇಳುವಂತೆ 'ವೆಂಕ' ಅನಾಮದೇಯನಲ್ಲ; ನಿಜವಾದ ವ್ಯಕ್ತಿ. 'ವೆಂಕ' ಕಳ್ಳ ಹೆಸರಲ್ಲ; ನಿಜನಾಮ. ಇಷ್ಟು ಹೇಳಿದ್ದರ ಉದ್ದೇಶ, ಬರೆದ ಕಾಲ ನಮೂದಾಗಿರುವ 'ಪರಮಾರ್ಥ'ದ ಹಸ್ತಪ್ರತಿ ಸರ್ವಜ್ಞನ ಕಾಲನಿರ್ಧಾರಕ್ಕೆ ಸಹಾಯವಾಗಿರುವಂತೆ ಅದರ ಜೊತೆಗೆ ಪ್ರತಿಕಾರನ ಹೆಸರೂ ಉಪಷ್ಟಂಭಕ ಪ್ರಮಾಣವಾಗಿ ಒದಗಿಬರುತ್ತದೆ ಎಂದು ಸೂಚಿಸುವ ಸಲುವಾಗಿ.

**ಪ್ರಕ್ಷಿಪ್ತ ಪದ್ಯಗಳು :** 'ಪರಮಾರ್ಥ' ಸಂಗ್ರಹದಲ್ಲಿ ೯೩೭ ಪದ್ಯಗಳಿವೆ. ಈ ಸಂಗ್ರಹವನ್ನು ಪ್ರಕಟಿಸಿರುವ ಡಾ॥ ಬಸವರಾಜು ಅವರು ಇವೆಲ್ಲವೂ ನಿಜವಚನಗಳೆಂದು ಗಣನೆಮಾಡಿದ್ದಾರೆ. ಅವನ ಜನ್ಮವೃತ್ತಾಂತವನ್ನು ತಿಳಿಸುವ ಪದ್ಯಗಳೂ ಕಾಲಜ್ಞಾನಪದ್ಧತಿಯ ವಚನಗಳೂ ಪ್ರಕ್ಷಿಪ್ತಗಳೆಂದು ನಮಗೆ ತೋರುತ್ತದೆ. ಈ ಬಗೆಗೆ ಉತ್ತಂಗಿಯವರ ವಸ್ತುನಿಷ್ಠವಾಗಿ ವಿಚಾರ ಮಾಡಿ ಕೆಲವು ತೀರ್ಮಾನಗಳಿಗೆ ಬಂದಿದ್ದಾರೆ. ಸರ್ವಜ್ಞನ ವಚನಗಳು ಸಮಯ ಸ್ಫೂರ್ತಿಯಿಂದ ಮೂಡಿಬಂದವೆಂದೂ ಪದ್ಧತಿಗಳಾಗಿ ವಿಭಾಗಗೊಂಡಿರುವುದು ತರುವಾಯದ ಬೆಳವಣಿಗೆ ಎಂದೂ ಅವರ ಅಭಿಪ್ರಾಯ. ಹೀಗಿದ್ದರೂ, "ಸರ್ವಜ್ಞನ ವಚನಗಳ ಭಾಷೆ, ಉದ್ದೇಶ ಮುಂತಾದುವುಗಳನ್ನು ಲಕ್ಷಿಸಿದರೆ ಇವನ ಗುರುಪದ್ಧತಿ, ದಾನಪದ್ಧತಿ, ಜಾತಿಪದ್ಧತಿ ಮುಂತಾದ ಕೆಲವು ಪದ್ಧತಿಗಳಲ್ಲಿ ಬರುವ ವಚನಗಳು ಏತತ್ಕೃತವೆಂದು ನಿಸ್ಸಂದೇಹವಾಗಿ ಹೇಳಬಹುದು. ವಿಶೇಷವಾಗಿ ಜೋತಿಷಪದ್ಧತಿಯಲ್ಲಿರುವ ಹೆಚ್ಚಾದ ವಚನಗಳು ಕಟ್ಟು ಒಡೆಯದೆ ಹಾಗೆಯೇ ಉಳಿದಿರುವುದರಿಂದ ಸರ್ವಜ್ಞನ ಭಾಷಾಶೈಲಿಯನ್ನು ಗೊತ್ತು ಹಚ್ಚುವುದಕ್ಕೆ ಇದೊಂದೇ ಬೀಗದ ಕೈಯೆಂದೂ ಹೇಳಲಿಕ್ಕೆ ಅಭ್ಯಂತರವಿಲ್ಲ" ಎಂದಿರುವುದು ಪ್ರಕ್ಷಿಪ್ತ ಪದ್ಯಗಳನ್ನು ಕಂಡುಹಿಡಿಯಲು ನೆರವಾಗುವುದಿಲ್ಲ ಎಂದೇ ನಮ್ಮ ಭಾವನೆ. ಉತ್ತಂಗಿಯವರು ಏಳು ಓಲೆಯಗರಿ ಹಸ್ತಪ್ರತಿಗಳನ್ನೂ ಒಂಬತ್ತು ಅಚ್ಚಾದ ಗ್ರಂಥಗಳನ್ನೂ ಪರಿಶೀಲಿಸಿ ತಮ್ಮ ಪದ್ಯ ಸಂಗ್ರಹವನ್ನು ಸಿದ್ಧಪಡಿಸಿರುವುದಾಗಿ ತಮ್ಮ ಪ್ರಥಮ ಮುದ್ರಣದ ಪ್ರಸ್ತಾವನೆಯಲ್ಲಿ

೧೭ನೇ ಶತಮಾನ ಎಂದು ವಿದ್ವಾಂಸರ ನಿರ್ಣಯ.[೧೬] ಆದ್ದರಿಂದ, ಸರ್ವಜ್ಞನು ೧೬ನೆಯ ಶತಮಾನದವನು ಎಂಬ ಆರ್. ನರಸಿಂಹಾಚಾರ್ ಮತ್ತು ಚನ್ನಪ್ಪ ಉತ್ತಂಗಿಯವರ ಅಭಿಮತ ಮಾನ್ಯವಾದುದು. ಮೇಲೆ ಉಲ್ಲೇಖಿಸಿದ 'ಹೊಸ ಶೋಧನೆಯ ಆಧಾರದ ಮೇಲೆ ಹೇಳುವುದಾದರೆ, ಉತ್ತರ ಕರ್ನಾಟಕದ ಧಾರವಾಡ ಪ್ರಾಂತದಲ್ಲಿ ಬಿಜಾಪುರ ಗೋಲ್ಕೊಂಡ ಮುಂತಾದ ಬಹಮನಿ ರಾಜ್ಯಗಳಲ್ಲಿ ಪ್ರಬಲಿಸಿದ್ದ ಮಹಮ್ಮದೀಯರ ಪ್ರಭಾವ ಹೆಚ್ಚಾಗಿ, ವೈದಿಕ ವೀರಶೈವ ಜೈನ ಸಾಮಾಜಿಕ ಜೀವನ ಪರಿಶುದ್ಧತೆ ಇಳಿಮುಖವಾಗಿದ್ದ ಕಾಲದಲ್ಲಿ, ಪುರಂದರ ದಾಸರ ಜೀವಿತ ಕಾಲಕ್ಕಿಂತ (೧೪೮೦–೧೫೬೫) ಸ್ವಲ್ಪ ಮುಂಚೆ, ಎಂದರೆ ೧೫ನೆಯ ಶತಮಾನದ ಉತ್ತರಾರ್ಧದಲ್ಲಿ, (ಎಂದರೆ ೧೪೫೦ ರ ಸುಮಾರಿನಲ್ಲಿ) ಸರ್ವಜ್ಞಮೂರ್ತಿ ಜೀವಿಸಿದ್ದನೆಂದು ಹೇಳಲು ಅವಕಾಶವಿದೆ.

'ಪರಮಾರ್ಥ'ದ ಹಸ್ತ ಪ್ರತಿಯನ್ನು ವೆಂಕನೆಂಬುವನು ಕ್ರಿ.ಶ. ೧೬೩೬ರಲ್ಲಿ ಪ್ರತಿ ಮಾಡಿದನೆಂದು ತಿಳಿದುಬರುತ್ತದೆ. ಈ ವೆಂಕ ಯಾರು? " 'ವೆಂಕ' ಆತನ ನಿಜನಾಮಧೇಯವೇನಲ್ಲ" ಎಂದು ಎಚ್. ದೇವೀರಪ್ಪನವರು ಅದನ್ನು ನಿರಾಕರಿಸಿ, "ಕನ್ನಡದಲ್ಲಿ 'ವೆಂಕ ನಾಣಿ ಸೀನ' ಎಂದು ಅಪ್ರಸಿದ್ಧ ಅಗಣ್ಯ ಅನಾಮಿಕರನ್ನು ಸಂಬೋಧಿಸುವುದುಂಟು" ಎಂದು ಅಭಿಪ್ರಾಯಪಟ್ಟಿದ್ದಾರೆ.[೧೬ಎ] 'ಕೆಳದಿ ನೃಪವಿಜಯ'ದ ಕರ್ತೃವಾದ ಲಿಂಗಣ್ಣ ಕವಿ ಕೆಳದಿಯ ಅರಸು ಎರಡನೆಯ ಬಸವಪ್ಪನಾಯಕನ ಕಾಲದಲ್ಲಿದ್ದನು ಎಂದು ತಿಳಿದುಬರುತ್ತದೆ. (ಕ್ರಿ.ಶ. ೧೭೪೦–೧೭೫೫). ಲಿಂಗಣ್ಣ ಕವಿಯ ಮಗನೇ ವೆಂಕಣ್ಣ ಕವಿ. ಲಿಂಗಣ್ಣ "ವೆಂಕಪಾತ್ಮಜಂ ಲಿಂಗವಿಬುಧಂ" ಎಂದು ಹೇಳಿಕೊಂಡಿರುವುದರಿಂದ ಲಿಂಗಣ್ಣನ ತಂದೆಯೂ ಒಬ್ಬ ವೆಂಕಪ್ಪನೆಂದು ತಿಳಿದುಬರುತ್ತದೆ. ನಮಗೆ ದೊರೆತ ಕೆಳದಿ ಮ್ಯೂಸಿಯಮ್ಮಿನ ಸರ್ವಜ್ಞ ವಚನಗಳ ಹಸ್ತಪ್ರತಿ ವೆಂಕಣ್ಣನ ಕೃತಿಗಳ ಓಲೆಗರಿ ಕಟ್ಟಿನಲ್ಲಿದ್ದುದರಿಂದ ಅದು ವೆಂಕಣ್ಣನ ಸ್ವಹಸ್ತಾಕ್ಷರದ ಪ್ರತಿಯೋ ಅದರ ನೇರ ನಕಲೋ ಆಗಿರಬೇಕು ಎನ್ನುವುದಕ್ಕೆ ಅಡ್ಡಿಯಿಲ್ಲ. ಆ ಕಟ್ಟಿನಲ್ಲಿ ಸರ್ವಜ್ಞ ವಚನಗಳುಳ್ಳ ಇನ್ನೂ ಹಲವಾರು ಓಲೆಯ ಗರಿಗಳಿದ್ದು ಅವು ನಷ್ಟವಾಗಿರುವಂತೆ ತೋರುತ್ತದೆ. 'ಪರಮಾರ್ಥ'ದ ಹಸ್ತಪ್ರತಿಕಾರ ಈತನಲ್ಲ; ಈತನ ಅಜ್ಜನಾದ ವೆಂಕಪ್ಪ('ವೆಂಕ') ಆಗಿರಬಹುದು. ಈಗ ದೊರೆತಿರುವ 'ಪರಮಾರ್ಥ'ದ ಹಸ್ತಪ್ರತಿಯ ಕಾಲ ಈ ವೆಂಕಪ್ಪನ ಕಾಲಕ್ಕೆ

---

೧೬ 'ವೇಮನ್ನ–ಸರ್ವಜ್ಞುಲು', ಪು.೪೫.)

೧೬ಎ. 'ಜಂಗಮಜ್ಯೋತಿ', ಪು ೨೭೪.)

ಅವರು 'ಪರಮಾರ್ಥ'ದ ಪಾಠವನ್ನು ಓದುಗರ ಮುಂದಿಡುವಾಗ ಪ್ರತಿಪದ್ಯದ ಅಡಿಯಲ್ಲಿಯೂ ಉಪಲಬ್ಧವಿರುವ ಸರ್ವಪಾಠಗಳನ್ನೂ ಸಂಗ್ರಹಿಸಿ ಒಂದು ದೊಡ್ಡ ಉಪಕಾರ ಮಾಡಿದ್ದಾರೆ. 'ಪರಮಾರ್ಥ'ದ ಪಾಠವೇ ಪರಮಸತ್ಯ ಎಂದು ನೆರೆನಂಬಿ ಅವರು ಪರಿಷ್ಕರಣ ಕಾರ್ಯದಲ್ಲಿ ಹೊಲಬು ತಪ್ಪಿದರು ಎಂದು ನಮಗೆ ತೋರುತ್ತದೆ.

ಉದಾಹರಣೆಗೆ, ಒಂದು ಪದ್ಯ:

ಮಂಡೆ ಬೋಳಾದೊಡಂ ದಂಡು ಕೋಲ್ವಿಡಿದೊಡಂ
ಹೆಂಡತಿಯ ಬಿಟ್ಟು ನಡೆದೊಡಂ ಗುರುಮುಖವ
ಕಂಡಲ್ಲದಿಲ್ಲ ಪರಮಾರ್ಥ (೩೮)

'ದಂಡು' ಎಂಬ ಪದಕ್ಕೆ ಒಂದು ಹಸ್ತಪ್ರತಿಯಲ್ಲಿ 'ದಂಡಿ' ಎಂದು 'ವಿರ್ತ್' ಮತ್ತು 'ಉತ್ತಂಗಿ'ಯವರ ಮುದ್ರಿತ ಪಾಠಗಳಲ್ಲಿ 'ದಂಡ' ಎಂದೂ ಇವೆ. ('ಪರಮಾರ್ಥ', ೧೯೮೦, ಪು.೧೪). 'ದಂಡಿ' ಎಂಬ ಪಾಠವೆ ಸರಿಯಾದ ಪಾಠ; ದಂಡವೂ ಆಗಬಹುದು. ಸಂನ್ಯಾಸಿಗಳಲ್ಲಿ 'ಏಕದಂಡಿ' ಸಂನ್ಯಾಸಿಗಳು, ತ್ರಿದಂಡಿ'ಗಳು ಎಂಬ ಭೇದಗಳುಂಟು. ಆದ್ದರಿಂದ, 'ದಂಡಿ' ಎಂಬ ಪಾಠವೇ ಸರಿಯಾದದ್ದು; ಹಾಗೂ ಮೂಲಪಾಠ. ಹೀಗಿರುವಾಗ, 'ಪರಮಾರ್ಥ'ದ ಪಾಠವೇ ಮೂಲಪಾಠ ಎಂದು ಪಟ್ಟು ಹಿಡಿಯುವುದು ಉಚಿತವೆಸದು.

ಪ್ರಸ್ತುತ ಮುದ್ರಣದ ೬೮ ಮತ್ತು ೬೯ನೆಯ ಪದ್ಯಗಳ ಪಾಠ ನಮ್ಮ ಅಭಿಪ್ರಾಯದಲ್ಲಿ ಮೂಲ ಪಾಠಕ್ಕೆ ಸಮೀಪವಾಗಿದೆ. ಡಾ॥ ಬಸವರಾಜು ಅವರೇ ಒಪ್ಪಿಕೊಂಡಿರುವಂತೆ, ಎಲ್ಲ ಶೈವಪಾಠಗಳಲ್ಲಿ ಇಲ್ಲದ 'ಜಂಗಮ' ಪದವನ್ನು 'ಪರಮಾರ್ಥ'ದ ಮೂಲ ಸಂಪ್ರತಿಕಾರ (ವೆಂಕನಲ್ಲ!) ಪ್ರಕ್ಷೇಪ ಮಾಡಿಕೊಂಡಿರುವನು ಎಂದು ಊಹಿಸಲು ಅವಕಾಶವಿದೆ ಅಲ್ಲವೇ?

ಇತರ ಪ್ರತಿಗಳ ಪಾಠಗಳಲ್ಲಿ ಇರುವಂತೆ, ಪರಮಾರ್ಥ'ದಲ್ಲಿಯೂ ಛಂದಸ್ಸಿಗೆ ಕೂಡಿಬರದ, ಮೂಲದ ಅಂಶಲಯನಿಷ್ಠ ಲಯವನ್ನು ಪಂಚಮಾತ್ರಾಲಯಕ್ಕೆ ಖಚಿತಗೊಳಿಸುವುದಕ್ಕಾಗಿ ಹೆಚ್ಚಿನ ಅಕ್ಷರವನ್ನು ಸೇರಿಸಿರುವ, ಉದಾಹರಣೆಗಳು ಎಷ್ಟೋ ದೊರೆಯುತ್ತವೆ. (ಛಂದಸ್ಸು ಕೆಟ್ಟಿರುವುದಕ್ಕೆ ಒಂದು ಉದಾಹರಣೆ: ಈ ಸಂಗ್ರಹದ ೬೫ನೆಯ ಪದ್ಯದ ಅಡಿಟಿಪ್ಪಣಿ ನೋಡಿ).

ಮೊತ್ತದಲ್ಲಿ ಹೇಳುವುದಾದರೆ, ಪಾಠದೋಷಗಳು ಎಲ್ಲ ಪ್ರತಿಗಳಲ್ಲೂ ಇವೆ; 'ಪರಮಾರ್ಥ'ದಲ್ಲಿ ಕಡಿಮೆಯಾಗಿದ್ದು, ಮೂಲಪಾಠಕ್ಕೆ ಹೆಚ್ಚು ಸಮೀಪ ಎಂದು ಬೇಕಾದರೆ ಹೇಳಬಹುದು. ಅದೇ ಮೂಲಪಾಠ ಅಲ್ಲ.

(೧೯೨೩) ತಿಳಿಸಿರುತ್ತಾರೆ; ಸು. ೧೪೦೦ ವಚನಗಳನ್ನು ಸರ್ವಜ್ಞನ ಸ್ವಂತ ರಚನೆಗಳೆಂದು ನಿರ್ಣಯಿಸಿದ್ದಾರೆ. ಹಾಗೆ ನಿರ್ಣಯಿಸಲು ಅವರು ಅಂಗೀಕರಿಸಿದ ಆಧಾರ ಸೂತ್ರದ ಬಗೆಗೆ ಅವರ ನಿಲುವು ಹೀಗಿದೆ: "ಸರ್ವಜ್ಞನ ನಿಜಪದ್ಯಗಳನ್ನು ವಿವೇಕಿಸಿ ತಿಳಿಯುವುದು ದುಸ್ಸಾಧ್ಯವಾಗಿದ್ದರೂ ಒಂದು ತರದ ಸೂತ್ರವನ್ನು ಅನುಸರಿಸಿ ಇದನ್ನು ನಿಶ್ಚಯಿಸಿರುವೆವು. ವಿಶೇಷ ವಿರೂಪಹೊಂದದೆ ಕೈಬರಹದ ಹಾಗೂ ಅಚ್ಚಾದ ಎಲ್ಲ ಪತ್ರಿಕೆಗಳಲ್ಲಿ ದೊರೆಯುವವು ಕವಿಕೃತವೆಂದು ತಿಳಿಯಲ್ಪಟ್ಟಿವೆ." ಕಾವ್ಯಕವಿಗಳು ತಮ್ಮ ಕೃತಿಗಳನ್ನು ತಾವೇ ಬರೆದು ಇಡುತ್ತಿದ್ದರು. ಅವರ ಸ್ವಹಸ್ತಾಕ್ಷರ ಪ್ರತಿಗಳು ಪ್ರಾಯಿಕವಾಗಿ ದೊರೆಯದಿದ್ದರೂ, ಅವುಗಳ ನಕಲು ಪ್ರತಿಗಳು ದೊರೆಯುತ್ತವೆ. ಇವುಗಳಲ್ಲಿಯ ಪಾಠಾಂತರಗಳ ಸಹಾಯದಿಂದ ಮೂಲಪ್ರತಿಯ ಕವಿಪಾಠಕ್ಕೆ ಸಮೀಪವಾದ ಪಾಠವನ್ನು ನಿಷ್ಕರ್ಷೆ ಮಾಡುವುದು ಸಾಧ್ಯ. ಸರ್ವಜ್ಞನ ವಚನಗಳ ವಿಚಾರದಲ್ಲಿ ಪಾಠಾಂತರಗಳ ಮೂಲಕ ಒಂದು ಸರ್ವಸಮಾನ ಪಾಠವನ್ನು ಎಂದರೆ ಮೂಲಪಾಠವನ್ನು ಕಂಡುಹಿಡಿಯುವುದು ದುಸ್ಸಾಧ್ಯವೇ ಸರಿ. ಡಾ॥ ಬಸವರಾಜು ಅವರು ನಂಬಿರುವಂತೆ 'ಪರಮಾರ್ಥ'ದ ಪಾಠವೇ ನಿಜವಾದ ಪಾಠ ಎಂದು ತಿಳಿಯುವುದು ಸರಿಯೆನಿಸದು. ಈ ಮೊದಲೇ ಸೂಚಿಸಿರುವಂತೆ ಸರ್ವಜ್ಞನು ವಚನಗಳನ್ನು ಸಮಯಸ್ಫೂರ್ತಿಯಿಂದ ರಚಿಸಿರುವುದರಿಂದ ಜಾನಪದ ಛಂದಸ್ಸಾದ ಅಂಶಲಯದ ತ್ರಿಪದಿಛಂದಸ್ಸಿನಲ್ಲಿ ಅವನು ಪದ್ಯಗಳನ್ನು ಲೀಲಾಜಾಲವಾಗಿ ಕಟ್ಟಿಕೊಂಡುಹೋಗಿದ್ದಾನೆ. ಇದು ಸುಲಭವಾದ ಛಂದಃಪ್ರಕಾರವಾದ್ದರಿಂದ ಅನುಕರಣೆಗಳ ಮೂಲಕ ಖೋಟಾ ಸರ್ವಜ್ಞ ಪದ್ಯಗಳು ಸಾಚಾ ಸರ್ವಜ್ಞ ಪದ್ಯರಾಶಿಯಲ್ಲಿ ತೂರಿಕೊಳ್ಳಲು ಸುಲಭವಾಯಿತು; ಅನುಕೂಲವೂ ಆಯಿತು. ನಾಗವರ್ಮನ ತ್ರಿಪದಿಲಕ್ಷಣ ಅಂಶಲಯದ ತ್ರಿಮೂರ್ತಿಗಣವನ್ನೇ ಎತ್ತಿಹಿಡಿದಿದೆ. ಜಾನಪದ ಸಾಹಿತ್ಯದಲ್ಲಿ ಹೇರಳವಾಗಿ ದೊರಕುವ ತ್ರಿಪದಿಗಳೂ ತ್ರಿಮೂರ್ತಿಗಣಕ್ಕೆ ಸರಿಗೂಡತಕ್ಕವು. ಆದ್ದರಿಂದ, ತ್ರಿಮೂರ್ತಿಗಣ ಅಥವಾ ಅಂಶಲಯನಿಷ್ಠವಾದ ತ್ರಿಪದಿ ಛಂದದ ಧಾಟಿಯನ್ನು ಅನುಸರಿಸಿ ಸರ್ವಜ್ಞನ ಪದ್ಯಗಳನ್ನು ಪರಿಷ್ಕರಿಸುವುದು ಅಗತ್ಯ. ಹೀಗೆ ಪರಿಷ್ಕರಿಸುವಾಗ, ಪರಮಾರ್ಥದ ಪಾಠವನ್ನೂ ಇತರ ಓಲೆಗರಿ ಪುಸ್ತಕಗಳ ಪಾಠಾಂತರಗಳನ್ನೂ ಪರಿಶೀಲಿಸಿ, ಸರ್ವಜ್ಞನು ಹೇಳಿರಬಹುದಾದ ಮೂಲವಚನಗಳ ಸ್ವರೂಪವನ್ನು ಗುರುತಿಸುವ ಕೆಲಸ ನಡೆಯಬೇಕಾಗಿದೆ. (ಈ ರೀತಿ ಛಂದಸ್ಸನ್ನು ಆಧಾರವಾಗಿಟ್ಟುಕೊಂಡು ಸರ್ವಜ್ಞ ವಚನಗಳ ಪರಿಷ್ಕರಣ ಕಾರ್ಯದ ಅಗತ್ಯವನ್ನು ಕುರಿತು ಈ ಹಿಂದೆ ವಿವೇಚಿಸಿದೆ.) ಡಾ॥ ಬಸವರಾಜು

ಹೇಳಲಾಗದು. ಅವರು ವಿರ್ತನ ಮುದ್ರಿತ ಪಾಠವನ್ನು ಬಲುಮಟ್ಟಿಗೆ ಅವಲಂಬಿಸಿದ್ದರೂ, ಕೋಶದ ಕೆಲವು ಪದ್ಯಗಳಲ್ಲಿ ಭಿನ್ನ ಪಾಠಗಳೂ ಇರುವುದರಿಂದ ಅವರು ಬೇರೊಂದು ಪೂರ್ವಮುದ್ರಣವನ್ನೋ ಇಲ್ಲವೆ ಹಸ್ತಪ್ರತಿಯನ್ನೊ ಪರಿಶೀಲಿಸಿರುವ ಸಾಧ್ಯತೆ ಉಂಟು. ಹೀಗಿರುವುದರಿಂದ, ಸರ್ವಜ್ಞನ ಎಲ್ಲ ಹಸ್ತಪ್ರತಿಗಳ ಪಾಠಗಳಲ್ಲಿಯ ಪದಪ್ರಯೋಗಗಳು ನಿಘಂಟುವಿನಲ್ಲಿ ಪ್ರವೇಶ ಪಡೆದಿವೆ ಎಂದಾಗಲಿ ಹೇಳುವುದು ಸಾಧ್ಯವಿಲ್ಲ. ಕಿಟೆಲ್ ಅವರು ನಿಘಂಟುವನ್ನು ರಚಿಸುವ ಕಾಲಕ್ಕೆ ಸರ್ವಜ್ಞ ವಚನಗಳ ಸರ್ವಪಾಠ ಸಾಮಾಗ್ರಿ ಇನ್ನೂ ಸಿದ್ಧವಾಗಿರಲಿಲ್ಲ. ಈ ಪರಿಸ್ಥಿತಿಯಲ್ಲಿ, ಅವರು ತಮಗೆ ದೊರೆತ ಸರ್ವಜ್ಞ ವಚನಗಳ ಒಂದೋ ಎರಡೋ ಸಂಗ್ರಹಗಳನ್ನು ಪ್ರಯೋಗಾಕರಗಳಾಗಿ ಸ್ವೀಕರಿಸಿದ್ದೇ ಮಹತ್ವದ ವಿಷಯ.[೧೮]

ಒಂದು ಆಶ್ಚರ್ಯದ ಸಂಗತಿ ಎಂದರೆ, ಆಕರ ನಿರ್ದೇಶ ಸಂದರ್ಭದಲ್ಲಿ ಅವರು ಆಯ್ದ ಪದಪ್ರಯೋಗವನ್ನುಳ್ಳ ಸರ್ವಜ್ಞ ಪದ್ಯವೊಂದರ ಒಂದು ತುಣುಕನ್ನಷ್ಟೆ ಉದ್ಧರಿಸಿಕೊಡಬಹುದಾಗಿತ್ತು. (ಅನೇಕ ಸಂದರ್ಭಗಳಲ್ಲಿ ಹಾಗೆ ಮಾಡಿದ್ದಾರೆ); ಆದರೆ ಬಹು ಸಂದರ್ಭಗಳಲ್ಲಿ ಇಡಿಯ ಪದ್ಯವನ್ನೆ ಅವರು ಉದಾಹರಿಸಿದ್ದಾರೆ. ಹೀಗಿದ್ದುದರಿಂದ, ಒಂದು ಚಿಕ್ಕ ಸಂಗ್ರಹಕ್ಕೆ ಸಾಕಾಗುವಷ್ಟು ಪದ್ಯಗಳು ದೊರೆತುವು; ಆ ಪದ್ಯ ಸಂಗ್ರಹಕ್ಕೆ ಒಂದು ಹಸ್ತಪ್ರತಿಯ ಬೆಲೆಯನ್ನು ಕೊಡಬಹುದು ಎಂದು ಮನದಟ್ಟಾದದ್ದರಿಂದ ಅದನ್ನು ಪ್ರಕಟಿಸುವ ಆಲೋಚನೆ ಮಾಡಲಾಯಿತು.

---

೧೮. ಕಿಟೆಲ್ ಕೋಶದ ಆಕರ ಗ್ರಂಥಗಳ ಪಟ್ಟಿಯಲ್ಲಿ 'ಸರ್ವಜ್ಞನ ಪದ'(ರಗಳೆಯಲ್ಲಿರುವದು, ಸು. ಕ್ರಿ.ಶ. ೧೮೦೦) [Sarvajna's Pada(in ragale, of about A.D. 1800] ಎಂದು ತಿಳಿಸಿದೆ. ಮತ್ತು 'ಸರ್ವಜ್ಞ ಪದ'ಕ್ಕೆ ಸಂಬಂಧಪಟ್ಟಂತೆ 'ಅದರಲ್ಲಿರುವ ಎಲ್ಲ ಪದಗಳನ್ನೂ ಕೋಶದಲ್ಲಿ ಸೇರಿಸಿಲ್ಲ' ಎಂದು ಸ್ಪಷ್ಟಪಡಿಸಲಾಗಿದೆ. (ಪ್ರಸ್ತಾವನೆ, ಪು. iii ಮತ್ತು iv) ಸಂಕ್ಷಿಪ್ತಗಳ ಪಟ್ಟಿಯಲ್ಲಿ, "Sp. Sarvajnapada (Manuscript and W)" ಎಂದು ನಮೂದಿಸಲಾಗಿದೆ. ಇದರಿಂದ, ಸರ್ವಜ್ಞ ಪದ್ಯಗಳಿಂದ ಪದಗಳನ್ನು ಆಯ್ದುಕೊಳ್ಳುವುದಕ್ಕಾಗಿ ಒಂದು ಹಸ್ತಪ್ರತಿಯನ್ನೂ ಮತ್ತು W. ಅವರ, ಎಂದರೆ ಬಹುಶಃ Wurth, G.A. ಅವರ 'ಕರ್ಣಾಟಕ ಪ್ರಕ್ಕಾವ್ಯಮಾಲಿಕೆಯಲ್ಲಿ (೧೮೬೮) ಪ್ರಕಟವಾಗಿರುವ ಸರ್ವಜ್ಞ ಪದ್ಯಸಂಗ್ರಹವನ್ನೂ ಬಳಸಿಕೊಂಡಿರುವುದಾಗಿ ತಿಳಿದುಬರುತ್ತದೆ. (ಪ್ರಸ್ತಾವನೆ, ಪು.೪).

Wurth ಅವರ ಹೆಸರಿನ ಉಚ್ಚಾರನೆಯನ್ನು ಡಾ॥ ಬಸವರಾಜು ಅವರನ್ನು ಅನುಸರಿಸಿ 'ವಿರ್ತ್' ಎಂದು ನಾವು ಕೊಟ್ಟಿದ್ದೇವೆ. ಉಚ್ಚಾರಣೆ 'ವರ್ಥ್' ಎಂದು ವೆಂಕಟೇಶ ಸಾಂಗಲಿಯವರ 'ಗ್ರಂಥಕರ್ತ ಚರಿತ್ರಕೋಶ' (೧೯೬೦) ದಿಂದ ತಿಳಿದುಬರುತ್ತದೆ. (ಪು. ೧೪೦) ಸರಿಯಾದ ಉಚ್ಚರಣೆ 'ವುರ್ತ್' ಎಂದಿರಬಹುದು.)

ಹೇಗೂ, ಅಂಶಲಯನಿಷ್ಠವಾದ ಛಂದಸ್ಸನ್ನು ಅನ್ವಯಿಸಿ ಮೂಲಪಾಠವನ್ನು ನಿರ್ಣಯಿಸುವ ಅವಸರದಲ್ಲಿ ಸಂಪೂರ್ಣವಾಗಿ ಮಾತ್ರಾಛಂದೋನಿಯಮಕ್ಕೆ ಒಳಪಟ್ಟು ಪದ್ಯಗಳು ಸಿಕ್ಕಿದರೆ ಅವುಗಳನ್ನು ಪ್ರಕ್ಷಿಪ್ತಗಳೆಂದು ವರ್ಜಿಸಬಹುದು. ಅತಿಯಾಗಿ ಸಂಸ್ಕೃತ ಭೂಯಿಷ್ಠವಾಗಿರುವ ಪದ್ಯಗಳನ್ನೂ ಅದೇ ರೀತಿ ಬಿಟ್ಟುಬಿಡಬಹುದು. ಇಷ್ಟು ಮಾಡಿಯೂ, ಸುಲಭವಾಗಿ ಬೇರ್ಪಡಿಸಲಾಗದ ಸೋಗಿನ ಸರ್ವಜ್ಞ ವಚನಗಳು ಸವಾಲೆಸೆದು ನಮ್ಮನ್ನು ಅಣಕಿಸುತ್ತಲೇ ಇರುತ್ತವೆ.

ಱ

**ಕಿಟೆಲ್ ಕೋಶದ ಪದ್ಯಗಳು**

ಪ್ರಸ್ತುತ ಕಿಟೆಲ್ ಕೋಶದ ಪದ್ಯಗಳನ್ನು ಸಂಗ್ರಹಿಸುವ ಉದ್ದೇಶ, ಆತನು ಪಾಠಪರಿಷ್ಕರಣಕ್ಕೆ ಬಹುಶಃ ಕೈಹಾಕದೆ ತನಗೆ ದೊರೆತ ಇಲ್ಲವೆ ತಾನು ಪಡೆದುಕೊಂಡ ಒಂದು ಹಸ್ತಪ್ರತಿಯಲ್ಲಿಯ (ಹಾಗೂ ವಿರ್ತನ ಮುದ್ರಿತ ಪ್ರತಿಯ) ಪಾಠವನ್ನು ಅನುಸರಿಸಿರುವುದರಿಂದ ಕೋಶದ ಪದ್ಯ ಸಂಗ್ರಹಕ್ಕೆ ಒಂದು ಹಸ್ತಪ್ರತಿಯ ಬೆಲೆ ಉಂಟು ಎಂಬುದನ್ನು ವಿದ್ವಾಂಸರ, ಸರ್ವಜ್ಞ ಪಾಠಪರಿಷ್ಕರಣಾಸಕ್ತರ ಗಮನಕ್ಕೆ ತರುವುದು. ವಿರ್ತ್ ಸಂಗ್ರಹದ ಪಾಠಕ್ಕೂ ಕಿಟೆಲ್ ಕೋಶದ ಪದ್ಯಗಳ ಪಾಠಕ್ಕೂ ಹೋಲಿಕೆಯಿದೆ. ಆದರೂ, ಕೆಲವು ಸಂದರ್ಭಗಳಲ್ಲಿ, ಇಬ್ಬರ ಪಾಠಗಳಲ್ಲಿ ಭಿನ್ನತೆಯೂ ಕಂಡುಬರುತ್ತದೆ. ಇವರಿಬ್ಬರಿಗೂ ಮೂಲವಾದ ಒಂದು ಪಾಠ ಇದ್ದಂತಿದೆ. ಕೆಳದಿ ಮ್ಯೂಸಿಯಮ್ಮಿನ ಹಸ್ತಪ್ರತಿಯ ಪದ್ಯಗಳ ಪಾಠ ಅನೇಕ ಸಂದರ್ಭಗಳಲ್ಲಿ 'ಪರಮಾರ್ಥ'ದ ಪಾಠಕ್ಕೆ ಸಂವಾದಿಯಾಗಿದೆ. ಈ ಎಲ್ಲ ಪಾಠಗಳಲ್ಲಿಯ ಪಾಠಾಂತರಗಳನ್ನು ಗಮನಿಸಿ, ಸರ್ವಪಾಠಸಮನ್ವಿತವೂ ಮೂಲಪಾಠಕ್ಕೆ ಸಮೀಪತಮವಾದದ್ದೂ ಆದ 'ಸರ್ವಜ್ಞ ಪಾಠ'ವನ್ನು ನಿರ್ಣಯಿಸಬೇಕಾದ ಕೆಲಸ ಆಗಬೇಕಾಗಿದೆ.[೧೭]

ನಿಘಂಟು ರಚನೆಗೆ ಶುದ್ಧ ಪಾಠ ಸ್ವೀಕಾರ ಅಗತ್ಯ. ಕಿಟೆಲ್ ಅವರು ಸರ್ವಜ್ಞ ವಚನಗಳ ಎಲ್ಲ ಹಸ್ತಪ್ರತಿಗಳನ್ನೂ ಪಾಠವಿಮರ್ಶಕನ ದೃಷ್ಟಿಯಿಂದ ಪರಿಶೀಲಿಸಿ, ಮೂಲಪಾಠವನ್ನು ಗುರುತಿಸಿ ಅದರಿಂದ ತಮ್ಮ ನಿಘಂಟುವಿನ ನಿರ್ಮಾಣಕ್ಕೆ ಪದ ಪ್ರಯೋಗಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ ಎಂದು

---

(೧೭. ಉತ್ತಂಗಿಯವರು 'ಪರಮಾರ್ಥ'ದ ಹಸ್ತಪ್ರತಿಯನ್ನೂ ಗಮನಿಸಿದ್ದಾರೆ. ಅದನ್ನು ಎಷ್ಟರ ಮಟ್ಟಿಗೆ ಬಳಸಿಕೊಂಡಿದ್ದಾರೆ ಎಂದು ಹೇಳುವುದು ಸಾಧ್ಯವಿಲ್ಲ. ಕಿಟೆಲ್ ಕೋಶಕ್ಕೆ ಮೂಲವಾದ ಹಸ್ತಪ್ರತಿಯನ್ನು ಬಳಸಿಕೊಂಡಿರಬಹುದು. ಕಿಟೆಲ್‌ಕೋಶ ಪ್ರಕಟ ಆದದ್ದು ೧೮೯೪ರಲ್ಲಿ. ಉತ್ತಂಗಿಯವರ ಪ್ರಥಮ ಮುದ್ರಣ ೧೯೨೩ರಲ್ಲಿ ಹೊರಬಂದಿತು.)

ವಿಮರ್ಶನ ಸಾಹಿತ್ಯ ಬೆಳೆದಿದೆ: ಬಿಡಿಲೇಖನಗಳ, ಮುನ್ನುಡಿಗಳ, ಪೀಠಿಕೆ ಪ್ರಸ್ತಾವನೆಗಳ ಗ್ರಂಥಗಳ ರೂಪದಲ್ಲಿ ಇವೆಲ್ಲವುಗಳ ಮಾಹಿತಿಯನ್ನು "ಲೇಖನ–ಗ್ರಂಥ–ಸೂಚಿ"ಯ ರೂಪದಲ್ಲಿ ಈ ಗ್ರಂಥದ ಕಡೆಯಲ್ಲಿ ಕೊಟ್ಟಿದೆ. ಕುತೂಹಲಿಗಳು ಅವುಗಳಿಂದ ಪ್ರಯೋಜನ ಪಡೆಯಬಹುದು.

ಬೆಂಗಳೂರು – ೧೯
ಬಲಿಪಾಡ್ಯಮಿ, ೧೬–೧೧–೧೯೮೨

**ಎಂ. ವಿ. ಸೀತಾರಾಮಯ್ಯ**
ಪ್ರಧಾನ ಸಂಪಾದಕ
ಮತ್ತು ಅಧ್ಯಯನ ನಿರ್ದೇಶಕ

ಕಿಟೆಲ್ ನಿಘಂಟುವಿನಲ್ಲಿ ಯಾವ ಕ್ರಮದಲ್ಲಿ ಪ್ರಯುಕ್ತ ಪದ್ಯಗಳು ದೊರೆತವೋ ಅದೇ ಅಕಾರಾದಿ ಕ್ರಮದಲ್ಲಿ ಅವನ್ನು ಇಲ್ಲಿ ಮುದ್ರಿಸಲಾಗಿದೆ. ಪ್ರತಿಪದ್ಯದ ಪಕ್ಕದಲ್ಲಿ ಪದ್ಯವು ನಿಘಂಟುವಿನ ಯಾವ ಪದಕ್ಕೆ (ಅಥವಾ ಪದಗಳಿಗೆ) ಉದಾಹೃತವಾಗಿದೆ ಎಂಬುದನ್ನು ನಿಘಂಟುವಿನ ಪುಟಸಂಖ್ಯೆಯೊಂದಿಗೆ ಸೂಚಿಸಲಾಗಿದೆ. ಪದ್ಯಗಳನ್ನು 'ಪದ್ಧತಿ'ಗಳಿಗೆ ಹೊಂದಿಸಿ ಜೋಡಿಸುವ ಆಲೋಚನೆಯನ್ನು ಕೈಬಿಡಲಾಯಿತು. ಆದರೂ ಹಲವು 'ಪದ್ಧತಿ'ಗಳನ್ನು ಪ್ರತಿನಿಧಿಸುವ ಪದ್ಯಗಳು ಈ ಸಂಗ್ರಹದಲ್ಲಿದ್ದು, ಅನುದ್ದಿಷ್ಟವಾಗಿ ಇದೊಂದು ಪ್ರಾತಿನಿಧಿಕ ಸಂಗ್ರಹವಾಗಿ ಪರಿಣಮಿಸಿದೆ ಎಂದು ಹೇಳಬಹುದು.

**ಪಾಠ ಪರಿಷ್ಕರಣ :** ಕಿಟೆಲ್ ಕೋಶದ ಪದ್ಯಗಳನ್ನು ಛಂದಸ್ಸಿನ ದೃಷ್ಟಿಯಿಂದ ಪರಿಷ್ಕರಿಸಿರುವ ಮಾದರಿಯಲ್ಲಿಯೇ ಕೆಳದಿ ಮ್ಯೂಸಿಯಮ್ಮಿನ ಹಸ್ತಪ್ರತಿಯ ಪದ್ಯಗಳನ್ನೂ ಅದೇ ರೀತಿ ಪರಿಷ್ಕರಿಸಿದೆ. ಎಲ್ಲೆಲ್ಲಿ ಬೇರೆಯ ಕಾರಣಕ್ಕಾಗಿ ಪಾಠಪರಿಷ್ಕರಣ ಮಾಡಿದೆಯೋ ಅಂಥಲ್ಲೆಲ್ಲ ತಿದ್ದುಪಾಟನ್ನು ಚೌಕಕಂಸದಲ್ಲಿ ಕಾಣಿಸಿದೆ. ಹೀಗೆ ಪರಿಷ್ಕರಣ ಮಾಡಿರುವ ಕೆಲಸ ಎಲ್ಲ ಸಂದರ್ಭಗಳಲ್ಲೂ ಸಮರ್ಪಕವಾಗಿದೆ ಎಂದು ನಾವು ಭಾವಿಸಿಲ್ಲ. ನಮ್ಮ ನಿಲುವನ್ನು ಅನುಮೋದಿಸುವ, ಅನುಮೋದಿಸದ, ವಿದ್ವಾಂಸರು ಈ ನಿಟ್ಟಿನಲ್ಲಿ ನೀಡಬಹುದಾದ ಸಲಹೆಸೂಚನೆಗಳನ್ನು ತೆರೆದ ಮನಸ್ಸಿನಿಂದ ಸ್ವಾಗತಿಸುತ್ತೇವೆ. ಅವುಗಳ ಬೆಳಕಿನಲ್ಲಿ ನಮ್ಮ ಪರಿಷ್ಕರಣಕಾರ್ಯವನ್ನು ಮುಂದಿನ ಮುದ್ರಣದಲ್ಲಿ ಉತ್ತಮಪಡಿಸಲು ಪ್ರಯತ್ನಿಸುತ್ತೇವೆ. ಪಾಠ ಪರಿಷ್ಕರಣ ಕಾರ್ಯಕ್ಕೆ 'ಮೊದಲು' ಎನ್ನುವುದುಂಟು; 'ಕೊನೆ' ಎನ್ನುವುದು ಇಲ್ಲ. ಎಡೆಬಿಡದೆ ನಡೆಯಬೇಕಾದ ಕೆಲಸ ಇದು. ಸರ್ವಜ್ಞನ ವಿಚಾರದಲ್ಲಂತೂ ಈ ಮಾತು ಪೂರ್ತಿಯಾಗಿ ಅನ್ವಯಿಸತಕ್ಕದ್ದು.

ಪರಿಷ್ಕರಣದ ಎಲ್ಲ ಹೊಣೆಗಾರಿಕೆಯೂ ಪ್ರಧಾನ ಸಂಪಾದಕನಿಗೆ ಸೇರಿದೆ. ಆ ಸಂಬಂಧದ ಎಲ್ಲ ಲೋಪದೋಷಗಳಿಗೆ ಅವನೇ ಬಾಧ್ಯ.

ಸರ್ವಜ್ಞ ವಚನಗಳ ಸಾಹಿತ್ಯಕ ಮೌಲ್ಯ, ಅವನ ವ್ಯಕ್ತಿತ್ವ, ಅವನ ಸಾಮಾಜಿಕ ಪ್ರಜ್ಞೆ ಮತ್ತು ಸಮಾಜ ಸುಧಾರಣೆಯ ದೃಷ್ಟಿ, ಕನ್ನಡ ಸಾಹಿತ್ಯದಲ್ಲಿ ಅವನ ಸ್ಥಾನ, ಸರ್ವಜ್ಞ ಮತ್ತು ವೇಮನರ ಪದ್ಯಗಳಲ್ಲಿ ಕಂಡುಬರುವ ಸಾಮ್ಯ, ಮುಂತಾದ ಅನೇಕ ಮಹತ್ವದ ವಿಷಯಗಳ ಬಗೆಗೆ ನಾವು ಇಲ್ಲಿ ವಿವೇಚನೆ ಮಾಡುವ ಪ್ರಯತ್ನವನ್ನು ಕೈಕೊಂಡಿಲ್ಲ. ಈಗಾಗಲೇ ದೀರ್ಘವಾಗಿರುವ ಪ್ರಸ್ತಾವನೆ ಎಲ್ಲಿ ಒಂದು ಗ್ರಂಥವಾಗಿ ಪರಿಣಮಿಸುವುದೋ ಎಂಬ ಭೀತಿ ಒಂದು ಕಾರಣ. ಮುಖ್ಯಕಾರಣ ಎಂದರೆ, ಸರ್ವಜ್ಞ ಮತ್ತು ಆತನ ವಚನಗಳ ಬಗೆಗೆ ವಿಪುಲವಾದ

ಅವು ಬರುಬರುತ್ತ ವಿರಳವಾಗುತ್ತವೆ. ಶಾಸನಗಳು ಶಿಲಾಲಿಖಿತಗಳಾದರೆ ಕೈಫಿಯತ್ತು ಮುಂತಾದವು ಕಾಗದಗಳ ಮೇಲೆ ಬರೆದವು. ಕಡತಗಳು ಮಾತ್ರ ಒಂದು ವಿಶಿಷ್ಟ ರೀತಿಯಲ್ಲಿ ಸಿದ್ಧಪಡಿಸಿದ ಉದ್ದನೆಯ ಕಪ್ಪು ಬಣ್ಣದ ರಟ್ಟು ಬಟ್ಟೆಯ ಮೇಲೆ ಬಳಪದಿಂದ ಬರೆದವು. ಕಡತದ ಪ್ರಾಚೀನತೆಯ ಬಗ್ಗೆ ಕನ್ನಡ ಕಾವ್ಯಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ; ಉಲ್ಲೇಖಗಳ ಪರಿಶೀಲನೆಯಿಂದ ಅವು ಲೆಕ್ಕಗಳನ್ನು ಮಾತ್ರ ಬರೆದಿಡಲು ಬಳಕೆಯಾಗುತ್ತಿತ್ತು ಎಂದು ವ್ಯಕ್ತಪಡುತ್ತದೆ. ಕಡತಗಳು ಉಪಲಬ್ಧವಾಗಿರುವುದು ಈಚಿನ ದಿನಗಳಲ್ಲಿ. ಅರಮನೆಯ, ದೇವಸ್ಥಾನಗಳ ಲೆಕ್ಕಗಳನ್ನು ಇತರ ಸಣ್ಣ ಪುಟ್ಟ ವಿವರಗಳನ್ನೂ ದಾಖಲೆ ಮಾಡಲು ಕಡತಗಳನ್ನು ಉಪಯೋಗಿಸುತ್ತಿದ್ದರು ಎಂದು ತಿಳಿದುಬರುತ್ತದೆ.

ಇನ್ನೊಂದು ಬಗೆಯ ಐತಿಹಾಸಿಕ ಮಹತ್ವದ ದಾಖಲೆ ಎಂದರೆ ಬಖೈರು ಅಥವಾ ನಾಮೆ. ನಮಗೆ ತಿಳಿದುಬಂದಿರುವ ಮಟ್ಟಿಗೆ ಇವು ಸಾಧಾರಣವಾಗಿ ಕಾಗದದ ಮೇಲೆ ಬರೆದವು. ಕೃಷ್ಣದೇವರಾಯನ ದಿನಚರಿಯೂ ಒಂದು ಬಖೈರು. 'ಕಾಗಜ' ಎಂಬ ಮಾತು ಕೃಷ್ಣದೇವರಾಯನ ಈ ದಿನಚರಿಯಲ್ಲಿಯೇ ಬಳಕೆಯಾಗಿದೆ. ಹೀಗಿದ್ದರೂ ಈ ಬಖೈರು ತಾಳೆಗರಿಯ ಮೇಲೆ ಲಿಖಿತವಾಗಿರುವುದರಿಂದ ಬಹಳ ಕುತೂಹಲಕಾರಿಯಾದ ವಿಷಯ. ಅಲ್ಲದೆ, ಈವರೆಗೂ ಅನುಪಲಬ್ಧವಾಗಿದ್ದ ಈ ಬಖೈರು, ದೊರೆತಿರುವವುಗಳಲ್ಲಿ ('ರಾಮರಾಯನ ಬಖೈರು', 'ಹೈದರ್ ನಾಮೆ', 'ರಾಜೇಂದ್ರ ನಾಮೆ', ) ಅತ್ಯಂತ ಪ್ರಾಚೀನವಾದದ್ದು ಎಂದು ತೋರಿಬರುತ್ತದೆ. ಅಲ್ಲದೇ, ನಮ್ಮ ಗಮನಕ್ಕೆ ಬಂದಂತೆ, ಸದ್ಯದ ಓಲೆಗರಿಯಲ್ಲಿ ಬರೆದ ಬಖೈರು ಇದೊಂದೇ ದೊರೆತಿರುವುದು.

ಈ ಕೃತಿಯ ಸಮಾಪ್ತಿ ವಾಕ್ಯಗಳನ್ನು ಪರಿಶೀಲಿಸಿದರೆ, ಇದೇ ರೀತಿಯಲ್ಲಿ ಕೃಷ್ಣದೇವರಾಯನ ಮುಂಚಿನ ದೊರೆಗಳ ಹಾಗೂ ಆತನ ಪೂರ್ತಿ ಆಳ್ವಿಕೆಗೆ ಸಂಬಂಧಪಟ್ಟಂತೆ ದಿನಚರಿ ಕೃತಿಗಳು ರಚಿತವಾಗಿದ್ದುದು ವ್ಯಕ್ತಪಡುತ್ತದೆ. (ಇವು ಓಲೆಗರಿಯಲ್ಲಿ ಬರೆದವಾಗಿರಬೇಕು)

"ವಂದು ದಿನ ವಾಲಗದಲಿ। ಯಿಷ್ಟಾಲಾಪ ವಿನೊದರಾಗಿ। ಅರಮನೆಯ ನಿಯೋಗಿಗಳು। ವಿದ್ವಾಂಸರು। ಕವೀಶ್ವರರುಗಳು ಮುಂತಾದವರು ಯಿರಲಾಗಿ। ಪ್ರಸಂಗ ಬೆಂಬಳಿಯಲ್ಲಿ ಕಿರ್ತಿ ಶಾಶ್ವತವಾಗಿ ನಿಲ್ಲುವ ಹಾಗೆ। ಆದಿ ಧೊರೆಗಳ ಕೃತಿಯಲ್ಲಿ ಕೊಂಗರವರ ಪ್ರಸಂಗ ಪ್ರತಾಪಗಳು ಯಲ್ಲರಿಗೂ ಯಣಿಸಲಾಯಿತು। ಅದರಿಂದ ತಾ ಉಂನ್ನು। ಕೃತಿಯ ಹೆಳಿಸ ಬೆಕೂ ಯಂದು ಅಪ್ಪಣೆಯನ್ನು ಕೊಟ್ಟು । ಮುಕ್ಕು ತಿಂಮೈಯ್ಯ । ಮಾದಯ್ಯನವರ ಮಲ್ಲೈಯ್ಯನವರು

# ೮. ಶ್ರೀ ಕೃಷ್ಣದೇವರಾಯ ದಿನಚರಿ

## ಪ್ರಸ್ತಾವನೆ

ಶ್ರೀ ಕೃಷ್ಣದೇವರಾಯನ ದಿನಚರಿ ಎಂಬ ಮಾತು ಈ ಕೃತಿಯ ಹಸ್ತಪ್ರತಿಯ ಮೊದಲಲ್ಲೆ ಹೇಳಿದೆಯಷ್ಟೆ. "ದಿನಚರಿಯ ಕೃತ್ಯಗಳ ವಿಸ್ತಾರ" ಎಂಬ ವಿವರಣೆಯ ಮಾತಿನಿಂದ, ದಿನ ದಿನದ ಕೃತ್ಯಗಳನ್ನು ವಿಸ್ತಾರವಾಗಿ ಹೇಳುವ ಒಂದು ದಾಖಲೆ ಎಂದು ಅರ್ಥ ಮಾಡಲು ಅವಕಾಶವಿದೆ. ದಿನಚರಿ ಎಂದ್ದದ್ದರಿಂದ ಒಂದು ದಿನದ ಕಾರ್ಯ ಕಲಾಪದ ವಿವರ ಮಾತ್ರ ಎಂದೇನೂ ತಿಳಿಯಬೇಕಾದ್ದಿಲ್ಲ. ಅನೇಕ ದಿನಗಳ ಕಾರ್ಯಗಳ ದಾಖಲೆ ಉಳ್ಳ ಪುಸ್ತಕ, ಹಾಳೆಗಳ ಕಟ್ಟು, – ಅದನ್ನೂ ದಿನಚರು ಎನ್ನುತ್ತೇವೆ. ತನ್ನ ದಿನ ದಿನದ ಕೆಲಸ ಕಾರ್ಯಗಳ ವಿಷಯವಾಗಿ ತಾನೇ ಬರೆದಿಟ್ಟದ್ದು ದಿನಚರಿ. ದಿನಚರಿಕಾರನ ವ್ಯಕ್ತಿತ್ವ, ಮನೋಧರ್ಮ, ಇವುಗಳಿಗೆ ದಿನಚರಿ ಕೈಗನ್ನಡಿ. ಜೀವನ ಚರಿತ್ರೆ ಬರೆಯುವಾತನಿಗೆ ದಿನಚರಿಯೂ ಒಂದು ಉಪಯುಕ್ತ ಆಕರ ಸಾಮಗ್ರಿ.

ಶಾಸನಗಳು ಪ್ರಾಯಿಕವಾಗಿ ಕಲ್ಲಿನ ಮೇಲೆ ಕೊರೆದವು. ತಾಮ್ರಫಲಕಗಳ ಮೇಲೆ ಬರೆದವೂ ಉಂಟು. ಇವು ಒಂದು ಘಟನೆಯನ್ನು (ಅಗ್ರಹಾರ ಇತ್ಯಾದಿಗಳ ದಾನ, ದೇವಾಲಯ, ಕೆರೆ ಮುಂತಾದವನ್ನು ನಿರ್ಮಾಣ ಮಾಡಿದ್ದು, ವ್ಯಕ್ತಿಯ ಮರಣ, ಮುಂತಾದ ಸಂಗತಿಗಳನ್ನು) ಮಾತ್ರ ಸಂದರ್ಭೋಚಿತ ವಿವರಗಳೊಂದಿಗೆ ಸಂಕ್ಷೇಪವಾಗಿಯೋ ಇಲ್ಲ ಸ್ವಲ್ಪ ವಿಸ್ತಾರವಾಗಿಯೋ ತಿಳಿಸುತ್ತವೆ. ಈ ಶಾಸನಗಳು ಪದ್ಯರೂಪದಲ್ಲಿಯೂ ಗದ್ಯರೂಪದಲ್ಲಿಯೂ ದೊರಕಿವೆ. ಕಾವ್ಯಶೈಲಿಯ ಶಾಸನಗಳೂ ಹೇರಳವಾಗಿ ದೊರಕಿವೆ. ಚರಿತ್ರಕಾರನಿಗೆ ಇವು ಚಿನ್ನದ ಗಣಿ ಇದ್ದ ಹಾಗೆ.

ಕೈಫಿಯತ್ತು, ನಾಮೆ, ಕಡತ (ಅಥವಾ ಕಡಿತ), ಬಖೈರು, ಪತ್ರವ್ಯವಹಾರ, ಇವು ಕೂಡಾ ಚರಿತ್ರಕಾರನಿಗೆ ಅತ್ಯುಪಯುಕ್ತ ಸಾಧನಸಾಮಾಗ್ರಿ. ಶಾಸನಗಳಷ್ಟು ಪ್ರಾಚೀನ ದಾಖಲೆಗಳಲ್ಲ ಇವು. ೭ನೆಯ ಶತಕದಿಂದ ಮೊದಲ್ಗೊಂಡು ೧೫ನೆಯ ಶತಕದವರೆಗೂ ಶಾಸನಗಳು ವಿಪುಲ ಸಂಖ್ಯೆಯಲ್ಲಿ ದೊರೆಯುತ್ತವೆ. ಅಲ್ಲಿಂದೀಚೆಗೆ

'ಅಮುಕ್ತಮಾಲ್ಯದ' ಕಾವ್ಯದಲ್ಲಿ ಶ್ರೀ ಕೃಷ್ಣದೇವರಾಯನು ರಾಜನೀತಿ ನಿರೂಪಣೆಯ ಸಂದರ್ಭದಲ್ಲಿ ನೀಡಿರುವ ಮೇಲ್ಕಂಡ ನಿರ್ದೇಶನವನ್ನು ಸ್ವತಃ ಹೇಗೆ ಅನುಸರಿಸಿದ್ದನು ಎನ್ನುವುದಕ್ಕೆ ಈ ದಿನವರಿ ಕೈಗನ್ನಡಿ ಆಗಿದೆ. ಮೇಲಿನ ಅವತರಣಿಕೆಯಲ್ಲಿ ಕಂಡು ಬಾರದ ಎಷ್ಟೋ ರಾಜನೀತಿಯ ಸಂಗತಿಗಳು– ಈ ದಿನಚರಿಯಲ್ಲಿ ಹೇಳಿರುವವು– 'ಅಮುಕ್ತಮಾಲ್ಯದ' ಕಾವ್ಯದಲ್ಲಿಯೂ ಹೇಳಿವೆ.

ಮುನ್ನಡಿಯಲ್ಲಿ ಗ್ರಂಥ ಸಂಪಾದಕರು ಹೇಳಿರುವಂತೆ, ಕೃಷ್ಣದೇವರಾಯನು ಪಟ್ಟಕ್ಕೆ ಬಂದ ವರ್ಷದಿಂದ, ಎಂದರೆ ಕ್ರಿ.ಶ. ೧೫೦೯ ರಿಂದ ೧೫೨೦ ರವರೆಗೆ ನಡೆದ ಪ್ರಮುಖ ಘಟನೆಗಳು – ಯುದ್ಧಗಳು, ಕೈಗೊಂಡ ತೀರ್ಥಯಾತ್ರೆಗಳು, ದಿನನಿತ್ಯದ ಕಾರ್ಯಕ್ರಮ, ಒಡ್ಡೋಲಗದ ವಿವರಗಳು, ಸೈನ್ಯ ವಿವರಗಳು, ಮುಂತಾದ ಚಾರಿತ್ರಕ ಮೌಲ್ಯವುಳ್ಳ ಅನೇಕಾನೇಕ ಸಂಗತಿಗಳು ಬಿತ್ತರಗೊಂಡಿವೆ.* ಮಕ್ಕುತಿಮ್ಮಯ್ಯ, ಮುಂತಾದ ಹಲವರಿಗೆ ಆಳ್ವಿಕೆಯ ವಿವರಗಳನ್ನು "ಹೇಳಿಕೊಂಡು ಬನ್ನಿ" ಎಂದು ಈ ದಿನಚರಿಯ ಕೊನೆಯಲ್ಲಿ ಹೇಳಿದೆಯಷ್ಟೆ. ಹನ್ನೊಂದು ವರ್ಷಗಳ ಆಳ್ವಿಕೆಯ ವಿವರಗಳನ್ನು ಅವರಿಬ್ಬರೂ ಕೂಡಿ ಬರೆದರೇ, ಇಲ್ಲವೇ ಹೇಳಿ ಬರೆಯಿಸಿದರೆ, ಈ ಇಬ್ಬರಲ್ಲಿ ಬರೆದವನು (ಅಥವಾ ಹೇಳಿ ಬರೆಯಿಸಿದವನು) ಒಬ್ಬನೆಯೇ (ತಿಮ್ಮಯ್ಯ ಅಥವಾ ಮಲ್ಲಯ್ಯ) ಎಂಬುದು ಖಚಿತವಾಗಿ ತಿಳಿದುಬರುವುದಿಲ್ಲ. ದೊರೆಯ ಅಪ್ಪಣೆಯಂತೆ ಈ ಇಬ್ಬರೂ ಬರೆದರು ಎಂದು ಊಹೆ ಮಾಡಲು ಅಡ್ಡಿಯಿಲ್ಲ. ತಿಮ್ಮಯ್ಯ ಮತ್ತು ಮಲ್ಲಯ್ಯ ಆಸ್ಥಾನದ ಕವಿಗಳು (ಗದ್ಯರಚನೆ ಮಾಡುವವರೂ ಕವಿಗಳೆ ತಾನೆ, ನಮ್ಮ ಲಾಕ್ಷಣಿಕರ ಅಭಿಪ್ರಾಯದಲ್ಲಿ) ಎನ್ನುವುದು ಮಾತ್ರ ಈ ಕೃತಿಯಿಂದ ಸ್ಪಷ್ಟ. ಅಂದು ರೂಢಿಯಲ್ಲಿದ್ದ ಬಳಕೆಯ ಭಾಷೆಯಲ್ಲಿ ಈ ಕೃತಿ ನಿಗದಿತವಾಗಿದೆ.

ವಿದೇಶಿ ಪ್ರವಾಸಿಗಳು ಮತ್ತು ಇತರ ಆಧಾರಗಳಿಂದ ಶ್ರೀಕೃಷ್ಣದೇವರಾಯನ ಆಳ್ವಿಕೆಗೆ ಸಂಬಂಧಪಟ್ಟಂತೆ ತಿಳಿದುಬರುವ ಮುಖ್ಯ ಸಂಗತಿಗಳನ್ನು ಚರಿತ್ರ ಗ್ರಂಥಗಳಿಂದ ತಿಳಿಯಬಹುದಾಗಿದೆ. ಈ ಗ್ರಂಥದಲ್ಲಿ ಪ್ರಸಕ್ತವಾದ ಅವಧಿಯಲ್ಲಿ

---

*ದಿನಚರಿಯ ಪ್ರಭವಾದಿಯಲ್ಲಿ ಕೃಷ್ಣದೇವಾರಯನಿಗೆ ಯುವರಾಜ ಪಟ್ಟಾಭಿಷೇಕ ಆಯಿತೆಂದೂ ವಿಜಯಯಾತ್ರೆ ಮುಗಿದ ಮೇಲೆ ಶ್ರೀಮುಖ ಸಂವತ್ಸರದಲ್ಲಿ ತೀರ್ಥಕ್ಷೇತ್ರಗಳಿಗೆ ಭೇಟಿಕೊಟ್ಟು ವಿದ್ಯಾನಗರಕ್ಕೆ ಹಿಂದಿರುಗಿದ ಮೇಲೆ ಅಲ್ಲಿಯವರೆಗೆ ನಡೆದ ಸಂಗತಿಗಳನ್ನು ಹೇಳುವಂತೆ ಕೃಷ್ಣದೇವರಾಯನು ಅಪ್ಪಣೆ ಮಾಡಿದನೆಂದೂ ಉಲ್ಲೇಖಿಸಿದೆ. ಎಂದ ಮೇಲೆ ಪ್ರಭವದಿಂದ ಶ್ರಿಮುಖದವರೆಗೆ ೭ ವರ್ಷಗಳ (ಎಂದರೆ ೧೫೦೯ ರಿಂದ ೧೫೧೬ರ ವರೆಗಿನ ಸಂಗತಿಗಳು ಮಾತ್ರ ಹೇಳಿವೆ ಎಂದು ತಿಳಿಯಬೇಕಾಗುತ್ತದೆ. ಗಜಪತಿಯ ಮೇಲೆ ವಿಜಯ ಸಾಧಿಸಿದ್ದು ಕ್ರಿ.ಶ. ೧೫೧೬ ಎಂದು ಈ ದಿನಚರಿ ದಾಖಲಿಸಿದೆ. ಇದು ವಿಚಾರಾರ್ಹ.

ಮೊದಲಾದವರಂನ್ನು ಕೃತಿಯ ಹೇಳಿಕೊಂಡು ಬಹ ಹೇಳಿ ಅಪ್ಪಣೆ ಕೊಟ್ಟರು. । ಯಿದೂ ಯಿಂದಿನವರೆಗೆ ನಡೆದ ಪ್ರವರ್ತ್ತಕಗಳು । ಯಿಂನ್ನು ಮೆಲೆ ನಡದ ವರ್ತ್ತಮಾನಗಳಿಗೆ ಬಿಂನ್ನೆಹಂ ಮಾಡಿ ಕಳುಹಿಸ್ಸಿನು ಚಿತ್ತಕ್ಕೆ ಪರಮಾರಿಸಿಕೊಳ್ಳ ಚಿತ್ತೈಸುದು ಇಂತಿ ಬಿಂನಹ".

ದಿನಚರಿಯನ್ನು ಇಡುವ ಒಂದು ಪದ್ಧತಿ ಕೂಡ ಕೃಷ್ಣದೇವರಾಯನಿಂದಲೇ ಸೂಚಿತವಾದದ್ದು ಎನ್ನುವುದಕ್ಕೆ ಆತನ ಕೃತಿಯಲ್ಲೆ ಆಧಾರ ಇದೆ; ಅಲ್ಲದೆ, ರಾಜನಾದವನು ದಿನವಹಿ ಮುಂಜಾವಿನಿಂದ ಸಂಜೆಯುವರಗೆ ಏನು ಮಾಡಬೇಕೆಂಬುದರ ಬಗೆಗೆ ಕೃಷ್ಣದೇವರಾಯನೆ ತೆಲುಗಿನಲ್ಲಿ ರಚಿಸಿರುವ "ಅಮುಕ್ತ ಮಾಲ್ಯದ" ಎಂಬ ಕೃತಿಯಲ್ಲಿ ವಿವರಿಸುವುದಕ್ಕೂ ಈ ಕೃತಿಯಲ್ಲಿ ತಿಳಿಸಿರುವ ವಿವರಗಳಿಗೂ ಹೆಚ್ಚು ವ್ಯತ್ಯಾಸವಿಲ್ಲ ಎನ್ನುವುದು ಗಮನಾರ್ಹ. ತೆಲುಗು ಕಾವ್ಯದ ಪ್ರಸಕ್ತ ಭಾಗದ ಸಾರಾಂಶವನ್ನು ಕೆಳಗೆ ಕೊಟ್ಟಿದೆ.*

ರಾಜನು ಪ್ರತಿನಿತ್ಯವೂ ಒಂದು ನಿರ್ದಿಷ್ಟ ಕಾರ್ಯಕ್ರಮುವನ್ನು ಅನುಸರಿಸಬೇಕು. ಹೊತ್ತಿಗೆ ಮುಂಚೆ ಎದ್ದ ಕೂಡಲೆ ವೈದ್ಯರನ್ನೂ ಜೋತಿಷಿಗಳನ್ನು ಕರೆಸಿಕೊಂಡು ತನ್ನ ಆರೋಗ್ಯದ ಬಗೆಗೂ ಗ್ರಹಗತಿಯ ಬಗೆಗೂ ಸಮಾಲೋಚನೆ ನಡೆಸಬೇಕು. ಆನಂತರ ಆತನು ತನ್ನ ಸಚಿವರು, ಸಾಮಂತರು, ಕರಣಿಕರು, ಇವರುಗಳೊಂದಿಗೆ ವಿಚಾರ ವಿನಿಮಯ ಮಾಡಿ, ಆದಾಯ ವೆಚ್ಚಗಳನ್ನು ಪರಿಶೀಲಿಸಿ, ರಾಜ್ಯದ ಆಗುಹೋಗುಗಳ ಬಗೆಗೆ ತನ್ನ ಆಪ್ತ ಮಂತ್ರಿಗಳ ಸಲಹೆ ಪಡೆಯಬೇಕು. ಬಳಿಕ, ಅಂಗಮರ್ದನ ಮಾಡಿಸಿಕೊಂಡು ಗರಡಿಯಲ್ಲಿ ಸಾಮು ಮಾಡಬೇಕು. ಇದಾದ ಮೇಲೆ, ಮಾಂಸವನ್ನು ಸರಬರಾಯಿ ಮಾಡುವವರೊಂದಿಗೆ ಅದರ ಗುಣಮಟ್ಟವನ್ನು ವಿಚಾರಿಸಿ ತಿಳಿದುಕೊಂಡು, ಅಡಿಗೆ ಮಾಡುವವರೊಂದಿಗೆ ಅಂದು ತಯಾರಿಸಬೇಕಾದ ತಿಂಡಿ ತಿನಿಸುಗಳ ಬಗೆಗೆ ತಿಳಿಯ ಹೇಳಬೇಕು. ಮಧ್ಯಾಹ್ನದ ವೇಳೆಯಲ್ಲಿ ದೇವತಾರ್ಚನೆ ಮಾಡಿ ಹಿರಿಯರು, ಸಾಧು ಸಂತರು, ಧರ್ಮಾಧಿಕಾರಿಗಳು, ಇವರುಗಳೊಂದಿಗೆ ಸ್ವಲ್ಪ ಕಾಲವನ್ನು ಕಳೆಯಬೇಕು. ಭೋಜನಾನಂತರ ವಿದೂಷಕರು, ಪೌರಾಣಿಕರು, ಕವಿಗಳು ಇವರುಗಳೊಂದಿಗೆ ವಿನೋದ ಗೋಷ್ಠಿ ನಡೆಸಬೇಕು. ಸಂಜೆಯ ವೇಳೆಯಲ್ಲಿ ಬೇಹುಗಾರರು ತಂದು ಹೇಳುವ ಸುದ್ದಿ ಸಮಾಚಾರಗಳನ್ನು ಕೇಳಿ ತಿಳಿದು, ಸಂಗೀತವನ್ನು ಆಲಿಸಬೇಕು. ರಾತ್ರಿಯನ್ನು ಅಂತಃಪುರ ಸ್ತ್ರೀಯರೊಂದಿಗೆ ಕಳೆಯಬೇಕು."

*ಶ್ರೀ. ಎಂ. ರಾಮರಾವ್ ಅವರು ಬರೆದ 'ಕೃಷ್ಣದೇವರಾಯ' (ದೆಹಲಿಯ ನ್ಯಾಷನಲ್ ಬುಕ್ ಟ್ರಸ್ಟ್‌ನ ಇಂಗ್ಲೀಷು ಪ್ರಕಟಣೆ, ೧೯೭೧, ಪು. ೫೫) ಪುಸ್ತಕದ ಆಧಾರದಿಂದ ಸಂಗ್ರಹಿಸಿದೆ.

ಈ ದಿನಚರಿಯಲ್ಲಿ ಮುಖ್ಯವಾಗಿ ನಿರೂಪಿತವಾಗಿರುವ ದಿಗ್ವಿಜಯಗಳು ಎರಡು: ಉತ್ತರದಿಂದ ದಂಡೆತ್ತಿ ಬಂದ ಬಹಮನಿ ರಾಜ್ಯದ ಅರಸು ಸುಲ್ತಾನ ಮಹಮದ್ ಷಹ (II) ಮತ್ತು ಬಿಜಾಪುರದ ಯುಸೂಫ್ ಅದಿಲ್‌ಖಾನರ ಸಂಯುಕ್ತ ಆಕ್ರಮಣ. ಈ ಆಕ್ರಮಣವನ್ನು ವಿಜಯನಗರದ ಸೈನ್ಯ ಎರಡು ಸಲ ಎದುರಿಸಿ, ಎರಡನೆಯ ಸಲ ಕೋವಿಲಕೊಂಡದ ಬಳಿ ಮುಸ್ಲಿಮರನ್ನು ಪೂರ್ತಿಯಾಗಿ ಸೋಲಿಸಿದುವು; ಅದಿಲ್‌ಖಾನನು ಯುದ್ಧದಲ್ಲಿ ಮೃತನಾದನು; ಮಹಮದ್ ಷಹನು ಬೀದರಿಗೆ ಓಡಿಹೋದನು. ಮುಸ್ಲಿಮರಲ್ಲಿ ಉಂಟಾದ ಗೊಂದಲದ ಪರಿಸ್ಥಿತಿಯನ್ನು ಗಮನಿಸಿ, ಕೃಷ್ಣದೇವರಾಯನು ಕೃಷ್ಣ–ತುಂಗಭದ್ರೆ ನಡುವಣ ಪ್ರದೇಶಕ್ಕೆ ನುಗ್ಗಿ ರಾಯಚೂರನ್ನು ವಶಪಡಿಸಿಕೊಂಡನು(೧೫೧೨) ಬೀದರಿಗೆ ಓಡಿಹೋಗಿದ್ದ ಸುಲ್ತಾನ ಮಹಮದ್ ಷಹನು ಮಂತ್ರಿ ಅಮೀರ್ ಬರೀದನ ಬಂದಿಯಾಗಿದ್ದನು. ಕೃಷ್ಣದೇವರಾಯನು ಸುಲ್ತಾನನ್ನು ಸೆರೆಯಿಂದ ಬಿಡಿಸಿ, ಬಹಮನಿ ಗದ್ದುಗೆಯ ಮೇಲೆ ಅವನನ್ನು ಕುಳ್ಳಿರಿಸಿ, ಮುಸ್ಲಿಮರು ತಲೆ ಎತ್ತದಂತೆ ಮಾಡಿ, "ಯವನರಾಜ್ಯಸ್ಥಾಪನಾಚಾರ್ಯ" ಎಂಬ ಬಿರುದನ್ನು ಧರಿಸಿದನು. ಆನಂತರ ಉಮ್ಮತೂರು ಗಂಗರಾಜನು ಪ್ರತಿಭಟನೆ ತೋರಲು ಅವನ ಮೇಲೆ ದಂಡೆತ್ತಿ ಹೋಗಿ ಅವನ ಅಧೀನದಲ್ಲಿದ್ದ ಪೆನುಕೊಂಡ, ಶ್ರೀರಂಗಪಟ್ಟಣ, ಶಿವನಸಮುದ್ರಗಳನ್ನು ಸ್ವಾಧೀನಪಡಿಸಿಕೊಂಡನು. ದಿನಚರಿಯಲ್ಲಿ ಈ ಎಲ್ಲ ದಂಡಯಾತ್ರೆಗಳ ನಿರೂಪಣೆ ಹಿಂದು ಮುಂದಾಗಿ (ಎಂದರೆ, ಮೊದಲು ಉಮ್ಮತ್ತೂರು ದೊರೆಯ ವಿರುದ್ಧ, ಆಮೇಲೆ ಮುಸ್ಲಿಮರ ವಿರುದ್ಧ) ಉಲ್ಲೇಖಗೊಂಡಿವೆ.

ಮುಸ್ಲಿಮರ ಪ್ರಭಾವವನ್ನು ನಿರ್ನಾಮ ಮಾಡಿದ ಮೇಲೆ, ಕೃಷ್ಣದೇವರಾಯನ ದೃಷ್ಟಿ ಓರುಂಗಲ್ಲಿನ (ಒರಿಸ್ಸಾದ) ಗಜಪತಿ ಪ್ರತಾಪರುದ್ರ ದೇವನ ಕಡೆಗೆ ಹರಿಯಿತು. ಪ್ರತಾಪರುದ್ರನು ಬಹಳ ಬಲಶಾಲಿ; ಅನೇಕ ಕೋಟೆಕೊತ್ತಲ ಗಿರಿದುರ್ಗಗಳ ಅಧಿಪತಿ; ಅಜೇಯ ಎನಿಸಿದ್ದವನು. ಈ ಬಗೆಗೆ ದಿನಚರಿಯಲ್ಲಿ ವಿವರಪೂರ್ಣವಾದ ಪುರಾವೆ ದೊರೆಯುತ್ತದೆ. ಅವನ ಅಧೀನದಲ್ಲಿದ್ದ ಷೋಡಶ'ಪಾತ್ರ'ರ ಹೆಸರುಗಳು ದಿನಚರಿಯಲ್ಲಿ ಉಲ್ಲೇಖಗೊಂಡಿವೆ.* ಪ್ರಲೋಭನೆಯಾಗಿ ಅವರಿಗೆ ಕಳಿಸಿಕೊಟ್ಟ ೧೬ ಅನರ್ಘ್ಯರತ್ನಾಭರಣಗಳ ಹೆಸರುಗಳೂ ಇಲ್ಲಿ ನಮೂದಾಗಿವೆ. ಗಜಪತಿಯೊಂದಿಗೆ ನಡೆಸಿದ ಮಹಾಯುದ್ಧವು ೧೯೧೩–೧೯೧೮ರ ವರೆಗೆ

---

*ಒರಿಸ್ಸಾದಲ್ಲಿ ಈಗಲೂ 'ಮಹಾಪಾತ್ರ' ಎಂಬ ಉಪನಾಮವು ಬಳಕೆಯಲ್ಲಿದೆ.

(೧೫೦೯–೧೯೧೬) ಜರುಗಿದ ಮುಖ್ಯ ಘಟನೆಗಳನ್ನು ಚರಿತ್ರ ಗ್ರಂಥಗಳಿಂದ ಹೀಗೆ ಸಂಗ್ರಹಿಸಬಹುದು:

ಗ್ರಂಥಾರಂಭದಲ್ಲಿ ವಿದ್ಯಾರಣ್ಯರು ಶಾಲಿವಾಹನ ಶಕ ೧೧೨೫ರಲ್ಲಿ (ಎಂದರೆ ಕ್ರಿ.ಶ. ೧೨೦೩ರಲ್ಲಿ) ವಿದ್ಯಾನಗರವನ್ನು ಸ್ಥಾಪಿಸಿದರು ಎಂದು ಹೇಳಿದೆ. ಆದರೆ ಚಾರಿತ್ರಿಕ ದಾಖಲೆಗಳಲ್ಲಿ ಸಾಮ್ರಾಜ್ಯ ಸ್ಥಾಪನೆಯ ವರ್ಷ ೧೩೩೬. ರಾಜ್ಯ ಸ್ಥಾಪನೆಯಾಗಿ ಆದ ೨೫ ಪಟ್ಟಗಳು ಜರುಗಿ ೩೦೦ ವರ್ಷಗಳು ಸಂದಮೇಲೆ ಕೃಷ್ಣರಾಯನ ಪಟ್ಟ ಎಂದು ಈ ದಾಖಲೆ ತಿಳಿಸುತ್ತದೆ; ಎಂದರೆ, ಕೃಷ್ಣರಾಯನು ಪಟ್ಟಕ್ಕೆ ಬಂದದ್ದು, ಈ ದಾಖಲೆಯ ಪ್ರಕಾರ, ೧೫೦೩. ಆದರೆ, ಕೃಷ್ಣದೇವರಾಯ ಪಟ್ಟಕ್ಕೆ ಬಂದದ್ದು ೧೫೦೯. ಅದೇ ರೀತಿ, ರಾಜ್ಯಸ್ಥಾಪನೆ ಆದ ಮೇಲೆ "೩೬೦ ವರುಷ ನಿಂತೀತು" ಎಂದು ಈ ದಾಖಲೆಯ ಹೇಳಿಕೆ. ಎಂದರೆ, ೧೬೩೬ರಲ್ಲಿ ರಾಜ್ಯ ಕೊನೆಗೊಂಡಿತು. ವಿಜಯನಗರ ಸಾಮ್ರಾಜ್ಯದ ಅಂತ್ಯ ೧೬೪೬. ಇದು ಭವಿಷ್ಯವಾಣಿಯ ಮಾತಾದ್ದರಿಂದ, ೧೦ ವರ್ಷದ ವ್ಯತ್ಯಾಸವನ್ನು ಗಮನಕ್ಕೆ ತಂದುಕೊಳ್ಳಬೇಕಾಗಿಲ್ಲ. ಆದರೆ, ರಾಜ್ಯದ ಶಂಕುಸ್ಥಾಪನೆ ಶಾಲಿವಾಹನ ಶಕ ೧೧೨೫ರ ಮೇಲೆ ಸಂದ ಪ್ರಭಾವ ಸಂವತ್ಸರದ ಚೈತ್ರ ಬಹುಳ ಅಮವಾಸ್ಯೆ ಎಂದಿರುವುದು ಪರಿಶೀಲನಾರ್ಹ.

ಕೃಷ್ಣದೇವರಾಯನು ಪಟ್ಟಕ್ಕೆ ಬಂದದ್ದು ೧೫೦೩ ಎಂದಿರುವುದಕ್ಕೆ ಈ ರೀತಿ ಸಮಾಧಾನ ಹೇಳಬಹುದು: "ಈ ಪ್ರಭವಾದಿಯಲ್ಲಿ ಯುವರಾಯ ಪಟ್ಟವನ್ನು ಕೃಷ್ಣರಾಯರಿಗೆ ಮಾಡಬೇಕು ಯೆಂದು ಡಣಾಯಕರ ಕೊಡೆ ಯೆಂದಂಥಾದ್ದಕ್ಕೆ ವೀರನೃಸಿಂಹಾರಾಯರವರು । ತಾವು ಹಿರಿಯರಾದೆವು । ತಮ್ಮೋಪಾದಿಯಲ್ಲಿ ರಾಜ್ಯಪರಿಪಾಲನೆಯ ಮಾಡೋದಕ್ಕೆ ಕೃಷ್ಣದೇವರಾಯರವರಿಗೆ ಪಟ್ಟಾಭಿಷೇಕವ ಮಾಡಿ ಅಧಿಷ್ಠಾನಕರ್ತರ ಮಾಡುಯೆಂದು ವೊಳ್ಳೆಯ ವೇಳೆಯಲ್ಲಿ ಮುದ್ರೆ ಉಂಗುರವನ್ನು ಕೊಟ್ಟರು" ಎಂದಿರುವುದರಿಂದ, ೧೫೦೩ರಲ್ಲಿ ವೀರ ನರಸಿಂಹರಾಯನ ಅಪೇಕ್ಷೆಯಂತೆ ಕೃಷ್ಣದೇವರಾಯನಿಗೆ ಯುವರಾಜ ಪಟ್ಟವಾಯಿತು ಎಂದು ಭಾವಿಸಬೇಕು. ಆದರೂ, ವೀರನರಸಿಂಹನ ಪರವಾಗಿ ಕೃಷ್ಣದೇವರಾಯನೇ ವಾಸ್ತವವಾಗಿ ಆಡಳಿತ ಮಾಡತೊಡಗಿದನು. ೧೫೦೯ರಲ್ಲಿ ವೀರನರಸಿಂಹನು ಕಾಲಾಧೀನನಾದ ಮೇಲೆ ಕೃಷ್ಣದೇವರಾಯನೇ ಸ್ವತಂತ್ರವಾಗಿ ಆಳತೊಡಗಿದನು ಎಂದು ಇಟ್ಟುಕೊಂಡರೆ ೧೫೦೩–೧೫೦೯ರ ನಡುವಣ ವ್ಯತ್ಯಾಸಕ್ಕೆ ಪರಿಹಾರವನ್ನು ಹೇಳಿದಂತಾಗುವುದು.

* * * * *

ಅಧೀನರಾದ ಷೋಡಶಪಾತ್ರರ ಶಕ್ತಿ ಸಾಮರ್ಥ್ಯಗಳು – ಈ ಎಲ್ಲವುಗಳ ವರ್ಣನೆ ಸವಿವರವಾಗಿ ಸ್ವಾರಸ್ಯಪೂರ್ಣವಾಗಿ ಸಾಗಿದೆ.(ಪು. ೩೧–೩೭).

ಗಜಪತಿಯನ್ನು ಸತ್ವಸಂಪನ್ನನಾಗಿ ಮಾಡಿ ವ್ಯಕ್ತಿತ್ವವನ್ನು ಕೃಷ್ಣದೇವರಾಯನ ವ್ಯಕ್ತಿತ್ವಕ್ಕೆ ಸರಿದೊರೆಯಾಗಿ ಮಾಡಿದೆ. ಇಂಥ ಸಮಾನಸ್ಕಂದನನ್ನು ಗೆದ್ದದ್ದರಿಂದ ಕೃಷ್ಣದೇವರಾಯನ ವ್ಯಕ್ತಿತ್ವದ ಬಣ್ಣವೂ ಏರಿದೆ. ಕೃಷ್ಣದೇವರಾಯ ಮದುವೆ ಆಗುವುದು ಗಜಪತಿಯಂಥ ಶೂರನ ಮಗಳನ್ನು.

**ಕೃಷ್ಣದೇವರಾಯನ ವ್ಯಕ್ತಿತ್ವ**

ಆಳಾಗಲಿ ಅರಸಾಗಲಿ, ಆತನ ವ್ಯಕ್ತಿತ್ವ ಹೊಮ್ಮಿ ಬೆಳಕಿಗೆ ಬರುವುದು ಆತನ ನಡೆನುಡಿಗಳ ಮೂಲಕ. ಈ ಬಖೈರಿನ ಕರ್ತರು ಇದನ್ನು “ಕೃಷ್ಣರಾಜಯರ ದಿನಚರಿಯ ಕೃತ್ಯಗಳ ವಿಸ್ತಾರ” ಎಂದು ಕರೆದಿರುವುದರಿಂದ, ಕೃಷ್ಣದೇವರಾಯನ ಗೈಮೆ ಗರಿಮೆ ಹಿರಿಮೆಗಳನ್ನು ಬಿತ್ತರಿಸುವುದೇ ಇದರ ಮುಖ್ಯ ಉದ್ದೇಶವಾಗಿ ಕಾಣುತ್ತದೆ.

ಕೃಷ್ಣದೇವರಾಯನೇ ರಚಿಸಿರುವ ‘ಆಮುಕ್ತಮಾಲ್ಯದ’ವು ಪರಮವಿಷ್ಣು ಭಕ್ತನಾದ ವಿಷ್ಣುಚಿತ್ತನ ಕಥೆಯನ್ನು ಮಹಾಕಾವ್ಯದ ಪ್ರಕಾರದಲ್ಲಿ ನಿರೂಪಿಸುತ್ತದೆ. ಈ ಕೃತಿಗೆ ‘ವಿಷ್ಣುಚಿತ್ತೀಯ’ ಎಂಬ ನಾಮಾಂತರವೂ ಉಂಟು. ಇದರಲ್ಲಿ ವಿಷ್ಣು ಚಿತ್ತ (ಪೆರಿಯಾಳ್ವಾರ್), ಅವನಿಗೆ ದೊರೆತ ಹೆಣ್ಣುಮಗು ಶೂಡಿಕುಡುತ್ತಮ್ಮ (ಆಂಡಾಳ್ ಮತ್ತು ಗೋದಾದೇವಿ ಎಂಬುದು ಅವಳ ನಾಮಾಂತರಗಳು), ಅವಳ ಭಕ್ತಿ ಪರವಶತೆ, ಕಟ್ಟಕಡೆಯಲ್ಲಿ ಅವಳು ಶ್ರೀರಂಗನಾಥನಲ್ಲಿ ಸಾಯುಜ್ಯ ಹೊಂದುವುದು, ವಿಷ್ಣುಚಿತ್ತನು ಪಾಂಡ್ಯ ರಾಜನಿಗೆ ವಿಶಿಷ್ಟಾದ್ವೈತ ಸಿದ್ಧಾಂತದ ಪ್ರಕಾರ ವಿಷ್ಣು ಪಾರಮ್ಯವನ್ನು ಬೋಧಿಸಿ ಪಾಂಡ್ಯ ರಾಜನಾದ (ಶೈವ) ಮಸ್ಸ್ಯಧ್ವಜನನ್ನು ವಿಷ್ಣು ಭಕ್ತನನ್ನಾಗಿ ಮಾಡಿದ್ದು; ಇವು ವರ್ಣಿತವಾಗಿರುವ ಮುಖ್ಯ ಸಂಗತಿಗಳು. ಇವುಗಳನ್ನೊಳಗೊಂಡ ಕಥಾಭಿತ್ತಿಯಲ್ಲಿ ಪ್ರಾಸಂಗಿಕವಾಗಿ ಯಾಮುನಾಚಾರ್ಯರು ತಮ್ಮ ಮಗನಿಗೆ ರಾಜನೀತಿಯನ್ನು ಬೋಧಿಸುತ್ತಾರೆ. ಈ ರಾಜನೀತಿಯ ಪ್ರಕರಣದಲ್ಲಿ “ರಾಜನ ದಿನಚರಿ” ಹೇಗಿರಬೇಕೆಂಬ ವಿವರಣೆ ಅಡಕವಾಗಿದೆ. ಕೃಷ್ಣದೇವರಾಯನು ತಾನು ಅನುಸರಿಸುತ್ತಿದ್ದ ದಿನಚರಿಯನ್ನೇ ಯಾಮುನಾಚಾರ್ಯರ ಮುಖೇನ ಹೇಳಿದಂತಿದೆ. ‘ಆಮುಕ್ತಮಾಲ್ಯದ’ದ ರಾಜನೀತಿಯ ಕೆಲವು ಅಂಶಗಳೂ, ದಿನಚರಿಯ ಅನೇಕ ವಿವರಗಳೂ ಪ್ರಸ್ತುತ ದಿನಚರಿ ಕೃತಿಯಲ್ಲಿ ಪ್ರತಿಬಿಂಬಿತವಾಗಿದೆ ಎನ್ನಲಡ್ಡಿಯಿಲ್ಲ. ಈ ಕೃತಿಯ ಕರ್ತರು

ದೀರ್ಘವಾಗಿ ನಡೆಯಿತು. ಗಜಪತಿಯೊಡನೆ ನಡೆದ ಹೋರಾಟದ ಹಿನ್ನೆಲೆಯ ಚಿತ್ರಣವು ಚರಿತ್ರ ಗ್ರಂಥಗಳಲ್ಲಿ ದೊರೆಯದ ಒಂದೆರಡು ಸ್ವಾರಸ್ಯದ ಸಂಗತಿಗಳನ್ನು ಒಳಗೊಂಡಿದೆ. ಓರುಗಲ್ಲಿನ ಗಜಪತಿ ಪ್ರತಾಪರುದ್ರನಿಗೂ ದೆಹಲಿ ಸುಲ್ತಾನನಿಗೂ ವೈರ ಮಸೆದು, ಸುಲ್ತಾನನು ಓರುಗಲ್ಲಿಗೆ ಮುತ್ತಿಗೆ ಹಾಕಿದನು. ಗಜಪತಿ ಹನ್ನೆರಡು ವರ್ಷ ಹೋರಾಡಿದನು. ದುರ್ಗದೊಳಗಿನ ಆಹಾರ ಮುಂತಾದ ಸಾಮಾಗ್ರಿ ತೀರಿಹೋಗಲು, ಗಜಪತಿ ಹೊರ ಹೊರಟು ಹೋರಾಡಿದನು; ಸುಲ್ತಾನನಿಗೆ ಸೆರೆ ಸಿಕ್ಕಿದನು. ಸುಲ್ತಾನನು ಅವನನ್ನು ದೆಹಲಿಗೆ ಕರೆದೊಯ್ದನು. ಸುಲ್ತಾನನ ತಾಯಿ ಗಜಪತಿಯನ್ನು ನೋಡಲು ಅಪೇಕ್ಷೆ ಪಟ್ಟಳು. ಅವಳ ನಿದ್ರೆಯಲ್ಲಿ ಪ್ರತಾಪರುದ್ರನು ಈಶ್ವರನಂತೆ, ಅವನ ಬಾಹ್ಯಚಿಹ್ನೆಗಳೊಡನೇ ಕಾಣಿಸಿಕೊಂಡನು. ಇಂತಹ ದೊರೆಯನ್ನು ಹಿಡಿದು ತರುವುದು ಸರಿಯಲ್ಲ ಎಂದು ಆಕೆ ಸೂಚಿಸಲು, ತಾನು ನಿದ್ರೆ ಹೋಗುವಾಗ ನೋಡು ಎಂದು ತಾಯಿಗೆ ತಿಳಿಸಿದನು. ಅದರಂತೆ ನೋಡಿದಾಗ, ತಾಯಿಗೆ ಸುಲ್ತಾನನು ಶೇಷಶಾಯಿಯಾಗಿ ವಿಷ್ಣುವಿನಂತೆ ಕಂಡನು. ಆಕೆಗೆ ಆಶ್ಚರ್ಯ. ಮಹಿಮೆಯಲ್ಲಿ ಇಬ್ಬರೂ ಸಮಾನರು ಎಂದು ಎಣಿಸಿ, ಪ್ರತಾಪರುದ್ರರಿಗೆ ಸಹಪಂಕ್ತಿ ಭೋಜನ ಮಾಡಿಸಿ, ಸನ್ಮಾನ ಬಹುಮಾನಗಳನ್ನು ಮಾಡಿ ಓರುಗಲ್ಲಿಗೆ ಕಳಿಸಿಕೊಟ್ಟರೆ ಕೀರ್ತಿ ಶಾಶ್ವತವಾಗಿ ಉಳಿಯುವುದು' ಎಂದು ಸಲಹೆ ಮಾಡಿದಳು. ಸುಲ್ತಾನನು ಹಾಗೆಯೇ ಮಾಡಿದನು. ಬೇಹುಗಾರರಿಂದ ಕೇಳಿ ತಿಳಿದ ಈ ಸಂಗತಿಯನ್ನು ಕೃಷ್ಣದೇವರಾಯನಿಗೆ ಅವನ ಆಪ್ತರಾದ ಓಲಗದ ಸಾಮಾಜಿಕರೂ ತಿಳಿಸುತ್ತಾರೆ. ಅಂದಿನ ದಿನಗಳಲ್ಲಿ ದಿಲ್ಲಿ ಸುಲ್ತಾನನ ಹಾಗೂ ಪ್ರತಾಪರುದ್ರನ ಮಹಿಮೆಯ ಬಗ್ಗೆ ಜನಜನಿತವಾಗಿ ಹಬ್ಬಿದ್ದ ಪ್ರತೀತೀಯೋ ಇಲ್ಲವೆ ದಿನಚರಿಯನ್ನು ಬರೆಯಿಸಿದವರೇ ಕಟ್ಟಿದ ಕತೆಯೋ ಎನ್ನುವುದನ್ನು ನಿಶ್ಚಯಿಸುವುದಕ್ಕೆ ಆಧಾರವೇನೂ ಇಲ್ಲ. ಅದು ಹೇಗೇ ಇರಲಿ, ಪ್ರತಾಪರುದ್ರನ ಮಹಿಮೆಯನ್ನು ಅತಿಶಯ ಮಾಡಿ ಹೇಳಿದರೆ ಅವನನ್ನು ಗೆದ್ದ ಕೃಷ್ಣದೇವರಾಯನ ಮಹಿಮೆಯೂ ಇಮ್ಮಡಿಸಿದಂತಾಗುವುದು ಎನ್ನುವುದು ಈ ಸ್ವಪ್ನ ಪ್ರಸಂಗದ (ಪು. ೨೯) ಉದ್ದೇಶವಾಗಿರುವ ಹಾಗೆ ಕಂಡುಬರುತ್ತದೆ. ಅಂತೆಯೇ, ಗಜಪತಿಯನ್ನು ಕೊಲ್ಲಲು ಅವನ ಶತ್ರುಗಳು ಜಗನ್ನಾಥನ ಪೂಜಾರಿಯನ್ನು ಒಳ ಹಾಕಿಕೊಂಡು ತೀರ್ಥದಲ್ಲಿ ವತ್ಸನಾಭಿ ವಿಷವನ್ನು ಬೆರೆಸಿ ಗಜಪತಿಯನ್ನು ಕೊಲೆ ಮಾಡಲು ಯತ್ನಿಸಿದಾಗ, ಅವನು ವಿಷಬೆರಸಿದ ತೀರ್ಥವನ್ನು ಸೇವಿಸಿ ವಿಷವನ್ನು ಜೀರ್ಣಿಸಿಕೊಂಡ ಪ್ರಕರಣವೂ ಆತನ ಮಹಿಮೆಯನ್ನು ಹೆಚ್ಚಿಸುವುದಾಗಿದೆ.

ಗಜಪತಿಯ ದೈವಭಕ್ತಿ, ಶೌರ್ಯ ಪ್ರತಾಪಗಳು, ರಾಜನೀತಿಜ್ಞತೆ, ಅವನ

ವ್ಯಕ್ತಿತ್ವದ ಸುಳುವು ಹೊಳವುಗಳೆಲ್ಲ ಈ ಅಪೂರ್ವ ಕೃತಿಯಲ್ಲಿ ಹಾಸುಹೊಕ್ಕಾಗಿ ಬಂದಿವೆ. ಯಾವ ದೃಷ್ಟಿಯಿಂದ ನೋಡಿದರೂ ಇದೊಂದು ಅಮೂಲ್ಯ ಐತಿಹಾಸಿಕ ದಾಖಲೆ ಎಂಬಲ್ಲಿ ಸ್ವಲ್ಪವೂ ಸಂದೇಹವಿಲ್ಲ.

ಪ್ರಮಾಣದ ದೃಷ್ಟಿಯಿಂದ ಕೃತಿ ಸಣ್ಣದು. ಆದರೆ ಅಡಗಿರುವ ವಿಷಯದ ವ್ಯಾಪ್ತಿಯನ್ನು ಗಮನಿಸಿದರೆ ದಿನ ದಿನದ 'ಕೃತ್ಯಗಳ ವಿಸ್ತಾರ' ಎಂಬ ಮಾತು ಈ ಕೃತಿಗೆ ಸಲ್ಲುತ್ತದೆ. ಕೃತಿಯ ಘಟನೆಗಳನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು: ವೀರನರಸಿಂಹರಾಯನ ಅರ್ಥಾತ್ ಕೃಷ್ಣದೇವರಾಯನ ಪ್ರಾತಃಕಾಲದ ದಿನಚರಿ(ಪು.೧-೩); ವಿದ್ಯಾರಣ್ಯರಿಂದ ರಾಜ್ಯಸ್ಥಾಪನೆಯಾದ ಸಂಗತಿ (ಪು.೩-೫); ಕೃಷ್ಣದೇವರಾಯನ ಪಟ್ಟಾಭಿಷೇಕ (೫-೬); ಅಪ್ಪಾಜಿ ಮಂತ್ರಿ ರಾಜನೀತಿಯನ್ನು ಬೋಧಿಸಿದ್ದು (ಪು. ೭-೯: ಇಲ್ಲಿ 'ಆಮುಕ್ತಮಾಲ್ಯದ'ದ ಪ್ರಭಾವವನ್ನು ಗುರುತಿಸಬಹುದು); ನೆರೆ ರಾಜ್ಯಗಳ ವಿಚಾರವನ್ನು ತಿಳಿಯಲು ಬೇಹುಗಾರರನ್ನು ಕಳಿಸುವುದು(ಪು.೧೦); ಕೃಷ್ಣದೇವರಾಯನು ರಾತ್ರಿಯ ವೇಳೆ ನಗರ ಶೋಧನೆ ಮಾಡಿದ್ದು (ಪು.೧೦); ಅರಮನೆಯ ಬೊಕ್ಕಸದ ಲೆಕ್ಕಗಳ ತನಿಖೆ (ಪು. ೧೩-೧೭); ತುರುಷ್ಕರಾಜರ ಪಟ್ಟಣಗಳಲ್ಲಿಯ ವಿದ್ಯಮಾನದ ವರ್ಣನೆ (ಪು. ೧೮-೨೨); ಅವರ ಮೇಲೆ ದಂಡೆತ್ತಿಕೊಂಡು ಹೋಗುವ ಬಗೆಗೆ ಮಂತ್ರಾಲೋಚನೆ, ಯುದ್ಧಸಿದ್ಧತೆ (೨೩-೨೮); ದೆಹಲಿ ಸುಲ್ತಾನನು ಓರುಗಲ್ಲಿಗೆ ಮುತ್ತಿಗೆ ಹಾಕಿದ್ದು, ದೆಹಲಿ ಸುಲ್ತಾನ ಮತ್ತು ಗಜಪತಿಗಳ ಮಹಿಮೆಯ ವರ್ಣನೆ (ಪು. ೨೯-೩೦); ಪುರುಷೋತ್ತಮ ನಗರದ (ಈಗಿನ ಪೂರಿ ಜಗನ್ನಾಥ?) ವರ್ಣನೆ (ಪು.೩೧-೩೩); ಗೋದಾವರೀ ತೀರದಲ್ಲಿ ಗಜಪತಿ ಜಗನ್ನಾಥನನ್ನು ಅರ್ಚನೆ ಮಾಡಿದ ವಿವರ, ಷೋಡಶಪಾತ್ರರ ಸಾಹಸ ಪರಾಕ್ರಮ ವ್ಯಕ್ತಪಟ್ಟದ್ದು (ಪು. ೩೪-೩೫); ಓರುಗಲ್ಲಿನ ಗರುಡಿ ಮನೆಗಳಲ್ಲಿ ಜಟ್ಟಿಗಳು ಸಾಮು ಮಾಡುವುದರ ವರ್ಣನೆ (ಪು.೩೬); ತುರುಕರ ಮೇಲೆ ಸಾಧಿಸಿದ ವಿಜಯ (ಪು೩೭-೪೧); ಕೃಷ್ಣದೇವರಾಯ ಗಜಪತಿಯ ಮೇಲೆ ದಂಡೆತ್ತಿ ಬರಬಹುದು ಎಂದು ಶಂಕಿಸಿ, ಆತನ ಸೈನ್ಯವನ್ನು ಎದುರಿಸಲು ಷೋಡಶ ಪಾತ್ರರನ್ನು ಸಜ್ಜುಗೊಳಿಸಿದ್ದು(೪೨-೪೬); ಈ ಸಂಗತಿಯನ್ನು ತಿಳಿದು ಕೃಷ್ಣದೇವರಾಯನು ಚಿಂತಾಕ್ರಾಂತನಾದದ್ದು, ಅಪ್ಪಾಜಿಯೊಡನೆ ಮಂತ್ರಾಲೋಚನೆ, ದಾನಭೇದೋಪಾಯಗಳಿಂದ ಷೋಡಶ ಪಾತ್ರರನ್ನು ನಿಷ್ಕ್ರಿಯರನ್ನಾಗಿ ಮಾಡಿ, ಆನಂತರ ಗಜಪತಿಯ ಮೇಲೆ ಬೀಳಬೇಕು ಎಂದು ಅಪ್ಪಾಜಿ ಸಲಹೆ ಮಾಡಿ ಅದರಂತೆ ಕಾರ್ಯ ನಡೆಸಿದ್ದು ಪರಿಣಾಮವಾಗಿ, ಷೋಡಶಪಾತ್ರರು ತಂತಮ್ಮ

'ಆಮುಕ್ತಮಾಲ್ಯದ'ವನ್ನು ಓದಿಕೊಂಡಿದ್ದು ಅದರ ಪ್ರಭಾವಕ್ಕೆ ಒಳಗಾಗಿದ್ದರೋ ಇಲ್ಲವೆ ಕೃಷ್ಣರಾಯನ ದಿನನಿತ್ಯದ ಕಾರ್ಯಚಟುವಟಿಕೆಗಳನ್ನು ಸಾಕ್ಷಾತ್ತಾಗಿ ಬಲ್ಲವರಾಗಿದ್ದು ಅವುಗಳನ್ನು ಯಥಾವತ್ತಾಗಿ ವರ್ಣಿಸಿರುವರೋ ಹೇಳುವುದು ಕಷ್ಟ. ಈ ದಿನಚರಿಯಲ್ಲಿ ಕೃತಿಕರ್ತರು ಕೃಷ್ಣರಾಯನು ಬಹಮನಿ ರಾಜ್ಯದ ತುರುಷ್ಕ ದೊರೆಗಳನ್ನೂ ಗಜಪತಿ ಪ್ರತಾಪರುದ್ರನನ್ನೂ ಯುದ್ಧದಲ್ಲಿ ಸೋಲಿಸಿ ಜಯ ಪಡೆದದ್ದನ್ನು ಪ್ರಧಾನವಾಗಿ ನಿರೂಪಿಸಿದ್ದಾರೆ. ಹೀಗಿರುತ್ತ, ಈ ಕೃತಿಯನ್ನು 'ಕೃಷ್ಣದೇವರಾಯ ವಿಜಯ' ಎಂದು ಕರೆದರೂ ತಪ್ಪಾಗುವುದಿಲ್ಲ. ಈ ವಿಜಯಕ್ಕೆ ಜಂಗಮ ಜಯಸ್ತಂಭವೋ ಎನ್ನುವಂತೆ, "ಗಜಪತಿ ತನ್ನ ಕುಮಾರಿತಿಯನ್ನು ಧಾರೆಯೆರೆದು ಕೊಟ್ಟನು."

ಕೃಷ್ಣದೇವರಾಯನು ಮನುಧರ್ಮಶಾಸ್ತ್ರ, ಕೌಟಿಲ್ಯನ ಅರ್ಥಶಾಸ್ತ್ರ ಶುಕ್ರನೀತಿಸಾರ ಮೊದಲಾದ ಧರ್ಮಶಾಸ್ತ್ರ ಗ್ರಂಥಗಳನ್ನೂ ಅರ್ಥಶಾಸ್ತ್ರ ಗ್ರಂಥಗಳನ್ನೂ ಓದಿಕೊಂಡಿದ್ದನು. ತಾನು ಬಲ್ಲ ರಾಜನೀತಿಯನ್ನು ತನ್ನ ಜೈತ್ರಯಾತ್ರೆಗಳ ಸಂದರ್ಭದಲ್ಲಿಯೂ ರಾಜ್ಯಭಾರಕ್ರಮದಲ್ಲಿಯೂ ಅನುಸರಿಸುತ್ತಿದ್ದನು. ಶತ್ರುಗಳ ಚಲನವಲನಗಳನ್ನು, ಸಂಚುಹೊಂಚುಗಳನ್ನು ಬೇಹುಗಾರರ ಮೂಲಕ ತಿಳಿದು, ಆಪ್ತರಾದ ಮಂತ್ರಿಗಳೊಂದಿಗೆ ಮಂತ್ರಾಲೋಚನೆ ಮಾಡಿ ಸಮಯಕ್ಕೆ ತಕ್ಕಂತೆ ಚತುರೋಪಾಯಗಳನ್ನು ಪ್ರಯೋಗಿಸಿ, ಶತ್ರುಗಳನ್ನು ಸ್ವಾಧೀನಕ್ಕೆ ತಂದುಕೊಳ್ಳುತ್ತಿದ್ದನು. ಶತ್ರುಗಳ ಸೈನ್ಯಬಲಗಳ ಅಂಕಿಅಂಶಗಳನ್ನು ತಿಳಿದುಕೊಂಡು ಅದಕ್ಕೆ ತಕ್ಕಂತೆ ತನ್ನ ಸೈನ್ಯದ ದಳಗಳನ್ನು ಹೆಚ್ಚಿಸಿಕೊಳ್ಳುತ್ತಿದ್ದನು. ಸ್ವತಃ ವಿದ್ವಾಂಸನೂ ಕವಿಯೂ ಆದ್ದರಿಂದ ವಿದ್ವಾಂಸರಿಗೂ ಕವಿಗಳಿಗೂ ಆಶ್ರಯವಿತ್ತಿದ್ದನು. ದೈವ ಬ್ರಾಹ್ಮಣರಲ್ಲಿ ಅಪಾರ ಭಕ್ತಿ. ತನ್ನ ಯಶಸ್ಸಿಗೆ ದೈವಕೃಪೆಯೇ ಕಾರಣ ಎಂದು ನಂಬಿದ್ದರಿಂದ ದಿಗ್ವಿಜಯಪೂರ್ವದಲ್ಲೂ ದಿಗ್ವಿಜಯಾನಂತರವೂ ಪ್ರಸಿದ್ಧ ದೈವಸನ್ನಿಧಿಗಳಾದ ತೀರ್ಥಕ್ಷೇತ್ರಗಳಿಗೆ ಹೋಗಿ ದೇವರ ಸೇವೆ ಮಾಡುತ್ತಿದ್ದನು. ಅಚ್ಚ ಶ್ರೀವೈಷ್ಣವನಾದರೂ ಎಲ್ಲ ಮತಧರ್ಮಗಳನ್ನೂ ಸಮದೃಷ್ಟಿಯಿಂದ ಕಾಣುತ್ತಿದ್ದನು. ಜೋತಿಷ ಶಕುನಾದಿಗಳಲ್ಲಿ ನಂಬಿಕೆ ಇಟ್ಟಿದ್ದನು. ಬೆಳಗ್ಗೆ ನಿದ್ರೆಯಿಂದ ಎದ್ದ ಕ್ಷಣದಿಂದ ತೊಡಗಿ ರಾತ್ರಿ ಮಲಗುವವರೆಗೂ ನಿತ್ಯಕರ್ಮಗಳನ್ನು ನಿಷ್ಠೆಯಿಂದ ಆಚರಿಸುತ್ತ ನುಡಿದಂತೆ ನಡೆದುಕೊಳ್ಳುತ್ತಿದ್ದನು. ಶಕ್ತಿತ್ರಯಗಳೂ ಅವನಲ್ಲಿ ಮನೆಮಾಡಿಕೊಂಡಿದ್ದವು. ಯುದ್ಧವೀರನಾಗಿದ್ದುದಲ್ಲದೆ ದಾನ ದಯಾವೀರನೂ ಆಗಿದ್ದನು. ಭಕ್ತನಾಗಿದ್ದರೂ ಭೋಗಿ. ಒಂದು ಮಾತಿನಲ್ಲಿ, ಪುರಾಣ ಪ್ರಸಿದ್ಧ ರಾಜರಂತೆ ಕೃಷ್ಣದೇವರಾಯ ಒಬ್ಬ ಆದರ್ಶ ಪ್ರಭು. ಅವನ

ಬರೆದದ್ದಾದ್ದರಿಂದ ಹಾಗೆ ಬರೆದಿದೆಯೋ ಇಲ್ಲವೆ ಇದನ್ನು ಬರೆದ ಲಿಪಿಕಾರನೇ ಶ್ರೀವೈಷ್ಣವ ಮತಾನುಯಾಯಿಯೋ ಹೇಳಬರುವಂತಿಲ್ಲ. ಇದನ್ನು ಹೇಳಿ ಬರೆಯಿಸಿದವರಿಬ್ಬರೂ (ಮುಕ್ಕು ತಿಮ್ಮಯ್ಯ ಮತ್ತು *ಮಾದಯ್ಯ*ನವರ ಮಲ್ಲಯ್ಯ) ಕೃಷ್ಣದೇವರಾಯನ ಓಲಗದ 'ಕವೀಶ್ವರರು'ಎಂದು ಗ್ರಂಥದಲ್ಲಿಯೇ ಉಲ್ಲೇಖವಿದೆ. ಉದ್ದಕ್ಕೂ ಆ ಕಾಲದ ಆಡು ನುಡಿಯ ಗದ್ಯವೇ ಬಳಕೆಯಾಗಿದ್ದರೂ ನೀತಿಪದ್ಯಗಳು, ಶ್ಲೋಕಗಳು ಉದಾಹೃತವಾಗಿರುವುದರಿಂದಲೂ ಒಂದೆರಡು ಕಡೆ ಚಂಪೂ ಕಾವ್ಯಗಳ ಸಂಸ್ಕೃತ ಸಮಾಸ ಭೂಯಿಷ್ಠ ಶೈಲಿಯ ವಾಕ್ಯಗಳಿರುವುದರಿಂದಲೂ ಇಬ್ಬರು ಕವೀಶ್ವರರಲ್ಲಿ ಒಬ್ಬರು ಹೇಳಿ ಬರೆಯಿಸಿದ್ದು ಎಂಬಲ್ಲಿ ಸಂದೇಹವಿಲ್ಲ. ಹಸ್ತಪ್ರತಿಯಲ್ಲಿ ಲಿಪಿಕಾರ ಸ್ಖಾಲಿತ್ಯಗಳೂ ವೈಲಕ್ಷಣ್ಯಗಳೂ ಹೇರಳವಾಗಿವೆ. ಆದ್ದರಿಂದ ಕೃತಿ ಕೃಷ್ಣದೇವರಾಯನ ಸಮಕಾಲೀನವೇ ಆದರೂ ನಮಗೆ ದೊರಕಿರುವ ಹಸ್ತಪ್ರತಿ ಮೂಲ ಮಾತೃಕೆಯ ನಕಲಾಗಿರುವ ಸಂಭವವೇ ಹೆಚ್ಚು. ಱಕಾರ ಇರಬೇಕಾದ ಕೆಲವು ಪದಗಳು ಬಳಕೆಯಾಗಿದ್ದು, ಱಕಾರ ಇಲ್ಲದಿರುವುದರಿಂದ ಕೃತಿ ೧೬ನೆಯ ಶತಮಾನದ್ದಾದರೂ ಪ್ರತಿ ಇನ್ನೂ ಈಚಿನದು–ಬಹುಶಃ ೧೭–೧೮ನೆಯ ಶತಮಾನದ್ದು ಎನ್ನಬೇಕಾಗುತ್ತದೆ.

**ಪಾಠಸ್ವರೂಪ : ಪರಿಷ್ಕರಣ**

ಸಾಧಾರಣವಾಗಿ ಎಲ್ಲ ಹಸ್ತಪ್ರತಿಗಳಲ್ಲಿಯೂ ಕಂಡುಬರುವ ಕೆಲವು ಲಿಪಿ ಲೇಖನ ವೈಲಕ್ಷಣ್ಯಗಳು ಈ ಹಸ್ತಪ್ರತಿಯಲ್ಲಿಯೂ ಕಂಡು ಬರುತ್ತವೆ; ಅವು ಯಾವುವೆಂದರೆ :–

೧. 'ಯ' ಶ್ರುತಿ : ಇ ಈ ಎ ಏ ಐ ಸ್ವರಗಳು ಬಿಡಿಯಾದ ರೂಪದಲ್ಲಿದ್ದಾಗ'ಯ' ಕಾರವಾಗಿ ಉಚ್ಚಾರಣೆಯಾಗಿ ಹಾಗೆಯೇ ಲಿಖಿತವಾಗುತ್ತವೆ. ಉದಾ: ಇದ್ದಾರು > ಯಿದ್ದಾರು, ಇಲ್ಲ > ಯಿಲ್ಲ. ಇಲ್ಲಿಗೆ > ಯಿಲ್ಲಿಗೆ, ಎಂದು > ಯೆಂದು> ಯಂದು (ಈ ಹಸ್ತಪ್ರತಿಯಲ್ಲಿ ಈ ರೂಪ ಇದ್ದು, 'ಯೆಂದು' ಎಂದು ಮಾರ್ಪಡಿಸಿದೆ.) ಏಕಾಂಬರ > ಯೆಕಾಂಬರ.

'ವ' ಶ್ರುತಿ : ಉ, ಊ, ಒ, ಓ ಸ್ವರಗಳು ವಕಾರವಾಗಿ ಮಾರ್ಪಡುತ್ತವೆ: ಉದಾ. ಉಂಟಾಗ > ವುಂಟಾಗ, ಓಲಗ > ವೋಲಗ > ವಾಲಗ ಇತ್ಯಾದಿ.

ಇಂಥ ಸಂದರ್ಭಗಳಲ್ಲಿ, ಸರಿಯಾದ ಶಬ್ದಪ್ರಯೋಗಗಳನ್ನು ಹಸ್ತಪ್ರತಿಯಲ್ಲಿ ತಿದ್ದುಪಾಟು ಮಾಡಲಾಗಿದೆ.

---

* 'ದ'ಕಾರಕ್ಷರ ಸ್ಪಷ್ಟವಾಗಿ ಲಿಖಿತವಾಗಿಲ್ಲವಾದ್ದರಿಂದ 'ಮಾರಯ್ಯ' ಎಂದು ಓದಿಕೊಳ್ಳಲೂ ಸಾಧ್ಯವಿದೆ.

ದುರ್ಗಗಳಿಗೆ ಹೊರಟುಹೋಗಲು ಗಜಪತಿ ನಿಸ್ಸಹಾಯಕನಾದುದನ್ನು ತಿಳಿದು ಕೃಷ್ಣದೇವರಾಯನು ಶರಣಾಗತನಾದ ಗಜಪತಿಯೊಡನೆ ಹೋರಾಡದೆ ಒಪ್ಪಂದ ಮಾಡಿಕೊಂಡು, ಪಟ್ಟುನೂರು ಸಿಂಹಾದ್ರಿಯಲ್ಲಿ ಜಯಸ್ತಂಭವನ್ನು ಹಾಕಿಸಿ, ಗಜಪತಿಯ ಮಗಳನ್ನು ಮದುವೆನಿಂದು ಕಲುಬುರ್ಗಿ ಕೋಟೆಯನ್ನು ಸಾಧಿಸಿ ವಿದ್ಯಾನಗರಕ್ಕೆ ಹಿಂದಿರುಗುವ ಮುನ್ನ ತಿರುಪತಿ ಮೊದಲಾದ ತೀರ್ಥಕ್ಷೇತ್ರಗಳಿಗೆ ಹೋಗಿ, ವಿದ್ಯಾನಗರಕ್ಕೆ ಹಿಂದಿರುಗಿ, ಓಲಗಕೊಟ್ಟದ್ದು, ಮುಂತಾದ ಸಂಗತಿಗಳ ವಿವರಗಳು (೪೭–೫೮).

ಮುಸಲ್ಮಾನ ದೊರೆಗಳ ಹೆಸರುಗಳು, ಯುದ್ಧಗಳ ಕಾಲಗಳ ಅನುಪೂರ್ವಿ, ಚತುರಂಗ ಸೈನ್ಯದ ಲೆಕ್ಕವಿವರ ಮುಂತಾದ ಕೆಲವು ಸಂಗತಿಗಳ ವಿಚಾರದಲ್ಲಿ ಚರಿತ್ರೆಯಲ್ಲಿ ಹೇಳಿರುವುದಕ್ಕೂ ಇಲ್ಲಿ ತಿಳಿಸಿರುವುದಕ್ಕೂ ಅಲ್ಪಸ್ವಲ್ಪ ವ್ಯತ್ಯಾಸಗಳು ಕಂಡುಬಂದರೂ ಈ ದಿನಚರಿ ಕೃಷ್ಣದೇವರಾಯನ ಆಳ್ವಿಕೆಗೆ ಸಂಬಂಧಪಟ್ಟಂತೆ ಚರಿತ್ರ ಗ್ರಂಥಗಳಲ್ಲಿ ಕಾಣಸಿಕ್ಕದ ಕೆಲವು ವಿಚಾರಗಳನ್ನು ಹೇಳುವುದರಿಂದ ಐತಿಹಾಸಿಕ ಮೌಲ್ಯವುಳ್ಳದ್ದಾಗಿದೆ. ಚರಿತ್ರೆಯ ವಿದ್ಯಾರ್ಥಿಗಳು ಅಧ್ಯಯನ ಮಾಡಲು ಯೋಗ್ಯವಾಗಿದೆ. ಹೀಗಿದ್ದರೂ, ವಿಶಿಷ್ಟವಾದ ಗದ್ಯ ಶೈಲಿಯ ಈ ಕೃತಿಯಲ್ಲಿ ಸಾಹಿತ್ಯಗುಣಲೇಪವೂ ಸಹೃದಯರಿಗೆ ಗೋಚರಿಸದೆ ಇರದು. ಇಲ್ಲಿಯ ಶಬ್ದ ಪ್ರಯೋಗಗಳೂ ಗಮನಾರ್ಹವಾದದ್ದರಿಂದ, ಸ್ಥಳನಾಮಗಳು ವ್ಯಕ್ತಿನಾಮಗಳು ಇತರ ಶಬ್ದಗಳು ಇವಗಳನ್ನು ಸಂಗ್ರಹಿಸಿ ಅನುಬಂಧವಾಗಿ ಕೊಟ್ಟಿದೆ. ಇವು ಅಂದಿನ ಉಚ್ಚಾರಣೆಯ ರೂಪದಲ್ಲಿಯೇ ಪ್ರಯೋಗವಾಗಿವೆ. ಸ್ಥಳನಾಮ–ವ್ಯಕ್ತಿನಾಮಗಳ ಅಧ್ಯಯನ ಪ್ರಾರಂಭವಾಗಿರುವ ಈ ಕಾಲದಲ್ಲಿ ಇವು ಅಧ್ಯಯನ ಸಾಮಗ್ರಿಯನ್ನು ಒದಗಿಸುತ್ತವೆ.

**ಹಸ್ತಪ್ರತಿಯ ಸ್ವರೂಪ**

ಕಡೆಯ ಗರಿ ಅಲ್ಲಲ್ಲಿ ಸ್ವಲ್ಪ ಮುರಿದುಹೋಗಿರುವುದನ್ನು ಬಿಟ್ಟರೆ ಗರಿಗಳು ತಕ್ಕಮಟ್ಟಿಗೆ ಸುಸ್ಥಿತಿಯಲ್ಲಿವೆ. ಪ್ರತಿ ಗರಿಯಲ್ಲಿಯೂ ಸರಾಸರಿ ೯ ಸಾಲುಗಳಿದ್ದು, ಪ್ರತಿ ಸಾಲಿನಲ್ಲಿಯೂ ಸರಾಸರಿ ೩೫ ಅಕ್ಷರಗಳಿವೆ. ಗರಿಗಳ ಸಂಖ್ಯೆ ೬೩; ಗರಿಯ ಅಳತೆ–ಉದ್ದ ೨೨ ಸೆಂಟಿಮಿಟರ್, ಅಗಲ ೪.೭ ಸೆಂ.ಮೀ. ಬರವಣಿಗೆ ಸ್ಫುಟವಾಗಿದ್ದು, ಹೆಚ್ಚು ಕಷ್ಟವಿಲ್ಲದೆ ಓದಬಹುದಾಗಿದೆ. ಹಸ್ತಪ್ರತಿಯ ಪ್ರಾರಂಭದಲ್ಲಿ "ಶ್ರೀ ರಾಮಾನುಜಾಯನಮಃ" ಎಂದಿರುವುದರಿಂದ, ಶ್ರೀವೈಷ್ಣವ ಮತಾನುಯಾಯಿಯಾದ ಶ್ರೀ ಕೃಷ್ಣದೇವರಾಯನ ಅಪ್ಪಣೆಯ ಪ್ರಕಾರ

ಪ್ರಕರಣಬಲದಿಂದ 'ನೀರು ತಾ' ಎಂದು ತಿದ್ದಿದೆ (ಪು ೧೩). ಇಂಥಲ್ಲಿ, ಮೂಲಪಾಠವನ್ನು ಅಡಿಯಲ್ಲಿ ಕೊಟ್ಟಿದೆ.

ಇದು ಏಕೈಕ ಹಸ್ತಪ್ರತಿ ಆದ್ದರಿಂದ ಪಾಠಾಂತರದ ಪ್ರಶ್ನೆಯೇ ಉದ್ಭವಿಸಿಲ್ಲ.

**ಉಪಕಾರ ಸ್ಮರಣೆ**

ಶ್ರೀ ಕೃಷ್ಣದೇವರಾಯನ ದಿನಚರಿಯನ್ನು ಕೇಳಿದ ಕೂಡಲೆ ಪ್ರತಿಷ್ಠಾನದ ಮೇಲಣ ಅಭಿಮಾನದಿಂದ ಪ್ರಕಟನೆಗಾಗಿ ಹಸ್ತಪ್ರತಿಯನ್ನು ನಕಲು ಮಾಡಿ ತಮ್ಮ ಸಾರವತ್ತಾದ 'ನುಡಿ'ಯೊಂದಿಗೆ ಕಳಿಸಿಕೊಟ್ಟದ್ದಲ್ಲದೆ ಓಲೆಗರಿಯ ಹಸ್ತಪ್ರತಿಯನ್ನೂ ಪ್ರತಿಷ್ಠಾನಕ್ಕೆ ಕೊಟ್ಟು ಮಹೋಪಕಾರ ಮಾಡಿದ್ದಾರೆ, ಡಾ॥ ವಿ.ಎಸ್.ಎಸ್. ಆಚಾರ್ಯ ಅವರು. ಈ ಅಪೂರ್ವ ಕೃತಿ ಕನ್ನಡ ಬಾರದ ಇತಿಹಾಸಜ್ಞ ವಿದ್ವಾಂಸರ ಗಮನಕ್ಕೂ ಬರಬೇಕೆಂಬ ಉದ್ದೇಶದಿಂದ ಅವರು ತಮ್ಮ ಮುನ್ನುಡಿಯನ್ನು ಇಂಗ್ಲಿಷಿನಲ್ಲೂ ಬರೆದು ಕೊಟ್ಟು ಉಪಕಾರ ಮಾಡಿದ್ದಾರೆ ಇವರಿಗೆ ನಮ್ಮ ತುಂಬು ಹೃದಯದ ಧನ್ಯವಾದಗಳು. ಈ ವಿಚಾರದಲ್ಲಿ ಪ್ರತಿಷ್ಠಾನದ ಸದಸ್ಯರೂ ಹಿತೈಷಿಗಳೂ ಆದ ಶ್ರೀ ಕೆಳದಿ ಗುಂಡಾಜೋಯಿಸರ ನೆರವು ಚಿರಸ್ಮರಣೀಯ. ಅವರಿಗೂ ನಮ್ಮ ಕೃತಜ್ಞತೆಯ ವಂದನೆಗಳು. ಪ್ರತಿಷ್ಠಾನದ ಕಾರ್ಯಕರ್ತರೇ ಆದ ಶ್ರೀ ನಾ. ಗೀತಾಚಾರ್ಯ ಅವರು ಅಚ್ಚಿನಮನೆ ಪ್ರತಿ ತಯಾರಿಸುವುದು, ಪಾಠ ಪರಿಷ್ಕರಣ, ಅನುಬಂಧಗಳ ತಯಾರಿಕೆ, ಅಚ್ಚಿನ ಕರಡು ತಿದ್ದುವುದು ಮುಂತಾದ ಗ್ರಂಥಸಂಪಾದನೆಯ ಎಲ್ಲ ಕೆಲಸಗಳಲ್ಲೂ ಸಕ್ರಿಯವಾಗಿ ಪಾಲುಗೊಂಡಿದ್ದಾರೆ. ಆತನ ಶ್ರೇಯಸ್ಸನ್ನು ಕೋರಿ ಆತ ನೀಡಿದ ನೆರವನ್ನು ಮನಃಪೂರ್ವಕವಾಗಿ ನೆನೆಯುತ್ತೇನೆ.

ಡಾ॥ ಸೂರ್ಯನಾಥ ಕಾಮತ್, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ, ಡಾ॥ ಎಂ. ಚಿದಾನಂದಮೂರ್ತಿ, ಇವರ ಸಮಯೋಚಿತ ಸಹಾಯವೂ ಸ್ಮರಣೀಯ.

ತಿರುಪತಿ ತಿರುಮಲ ದೇವಸ್ಥಾನದ ಅಧಿಕಾರಗಳು ಶ್ರೀ ಕೃಷ್ಣದೇವರಾಯನ ಪ್ರತಿಮೆಯ ಛಾಯಾಚಿತ್ರದ ಪ್ರತಿಯನ್ನು ಕಳುಹಿಸಿಕೊಟ್ಟು ಸಹಕರಿಸಿದ್ದಾರೆ. ಇವರಿಗೂ ನಮ್ಮ ವಂದನೆಗಳು.

ನಾವು ಕೊಟ್ಟ ತೊಂದರೆಯನ್ನು ಸಹಿಸಿಕೊಂಡು ಶ್ರದ್ಧೆಯಿಂದ ಮುದ್ರಣ ಕಾರ್ಯ ಮಾಡಿಕೊಟ್ಟ ಸ್ವತಂತ್ರ ಮುದ್ರಣಾಲಯದ ಶ್ರೀ ಎನ್. ರಾಘವೇಂದ್ರ ಅವರಿಗೆ ಕೃತಜ್ಞತೆ ತಿಳಿಸಿದರೆ ಉಪಚಾರದ ಮಾತಾಗದು.

ಬೆಂಗಳೂರು **ಎಂ.ವಿ. ಸೀತಾರಾಮಯ್ಯ**

೨-೩-೧೯೮೨ ಗೌ॥ ಕಾರ್ಯದರ್ಶಿ

'ಉ' ಸ್ವರದೊಂದಿಗೆ (ಆಗಮವಾಗಿ ಇಲ್ಲವೆ ಸಹಜವಾಗಿ) 'ವ' ಕಾರ ಇರಬೇಕಾದಲ್ಲಿ 'ವ' ಕಾರವನ್ನು ಬಿಟ್ಟು 'ಉ' ಕಾರ ಸಹಿತವಾಗಿ ಪ್ರಯೋಗಿಸಿರುವುದು: ನಾಉ (ನಾವು), ನಡಉತ್ತ (ನಡೆವುತ್ತ), ದಿವಸಊ (ದಿವಸವೂ), ಕೆಲಉ (ಕೆಲವು), ಇತ್ಯಾದಿ

೨. ಸಂಯುಕ್ತ ವ್ಯಂಜನಾಕ್ಷರಗಳ ಪೂರ್ವವ್ಯಂಜನ ಸ್ಥಾನದಲ್ಲಿ ಬಿಂದುವಿನ ಪ್ರಯೋಗ : ತಂನ (ತನ್ನ), ನಿಂನ (ನಿನ್ನ), ಅನಿತಂನು (ಅನಿತನ್ನು), ಇತ್ಯಾದಿ.

೩. ಸಾಧಾರಣವಾಗಿ ದೀರ್ಘ ಸ್ವರ ಚಿಹ್ನೆಗಳನ್ನು ಕೊಡಬೇಕಾದ ಕಡೆ ಕೊಡದೆ ಇರುವುದು : ಕೆಳಿಕೊ (ಕೇಳಿಕೊ), ಕಿರ್ತಿ (ಕೀರ್ತಿ), ಅಬಿಷೆಕ (ಅಭಿಷೇಕ), ನಿಉ (ನೀವು), ಇತ್ಯಾದಿ.

೪. ಸ–ಶ–ಷ ಭೇದ ವಿವಕ್ಷೆ ಇಲ್ಲದಿರುವುದು, ಅಲ್ಪಪ್ರಾಣ–ಮಹಾಪ್ರಾಣಗಳ ಸ್ಥಾನಪಲ್ಲಟ್ಟ–ಇವೂ ಸಾಮಾನ್ಯ : ಉದಾ. ವಿಸೆಷ (ವಿಶೇಷ), ಸಿಬಿ (ಶಿಬಿ), ಇದ್ಧಾರೆ (ಇದ್ದಾರೆ), ಬೂಷಣ (ಭೂಷಣ), ಲೆಖ್ಖ (ಲೆಕ್ಕ) ಇತ್ಯಾದಿ.

೫. ಕ್ರಿಯಾಪದಗಳ ಪ್ರೇರಣಾರ್ಥಕ ಇಸು ಪ್ರತ್ಯಯದ ಮುಂದೆ ಕಾಲ ವಾಚಕ ಪ್ರತ್ಯಯಗಳ, ಅಖ್ಯಾತ ಪ್ರತ್ಯಯಗಳು, ಇವುಗಳಲ್ಲಿ 'ದ' ಕಾರಕ್ಕೆ 'ತ'ಕಾರ ಮತ್ತು ವಿವೃತವಾಗಿ ಬರೆಯುವುದಕ್ಕೆ ಬದಲಾಗಿ ಸಂವೃತವಾಗಿ ಬರೆಯುವುದು: ಇರಿಸ್ತರಾದ ಕಾರಣ (ಇರಿಸಿದರಾದ ಕಾರಣ), ಪರಾಮರಿಸ್ತಿದ ಕಾರ್ಯ (ಪರಾಮರಿಸಿದ ಕಾರ್ಯ), ಇತ್ಯಾದಿ; ವಾಲಗಿಸ್ತರು (ಓಲಗಿಸಿದವರು); ಈ ಪ್ರಯೋಗಗಳ ರೂಪಸಾಮ್ಯದಿಂದಾಗಿ ನಾಮಪದಗಳ ಷಷ್ಠಿ ವಿಭಕ್ತಿ ರೂಪಗಳಲ್ಲೂ ದಕಾರಕ್ಕೆ ತಕಾರಾದೇಶ ಕಂಡುಬರುತ್ತದೆ: ಬೊಕ್ಕಸ್ತ (ಬೊಕ್ಕಸದ), ಇತ್ಯಾದಿ.

ನಡುಗನ್ನಡ ಕಾವ್ಯಗಳಲ್ಲಿ ಕಂಡು ಬರುವ ಕ್ರಿಯಾರೂಪಗಳೂ ಕಂಡು ಬಂದಿವೆ: ಬಾಹು (< ಬಹ < ಬಪ್ಪ = ಬರುವ), ಹೋಹ (ಪೋಪ) = ಹೋಗುವ), ಇತ್ಯಾದಿ.

ಇನ್ನೂ ಇಂತಹ ಎಷ್ಟೋ ಲಿಪಿಕಾರ ವಿಶಿಷ್ಟ ಶಬ್ದಪ್ರಯೋಗಗಳನ್ನು ಪಟ್ಟಿ ಮಾಡಬಹುದು. ಮೂಲ ಪಾಠದ ಸ್ವರೂಪವನ್ನು ಅನಗತ್ಯವಾಗಿ ಶಿಷ್ಟ ಪ್ರಯೋಗಾನುಗುಣ್ಯವಾಗಿ ತಿದ್ದುವ ಗೋಜಿಗೆ ಹೋಗಿಲ್ಲ. ಇಂಥ ಪ್ರಯೋಗಗಳನ್ನು ಅರ್ಥಕ್ಲೇಶಕ್ಕೆ ಎಡೆಗೊಡಬಹುದಾದ ಇಲ್ಲವೆ ಅರ್ಥಶೂನ್ಯವೋ ವಿಪರೀತಾರ್ಥವೋ ಆಗಬಹುದಾದ ಸಂದರ್ಭಗಳಲ್ಲಿ ಮಾತ್ರ ಮೂಲಪಾಠವನ್ನು ತಿದ್ದುವ ಯತ್ನಮಾಡಿದೆ. ಉದಾ., "ನಂಬಿದವರ ನಿರುತ ಯೆಂದು" ಎಂಬ ಪಾಠದಲ್ಲಿ 'ನಿರುತ'ಕ್ಕೆ 'ದಿಟ, ಸತ್ಯ' ಎಂಬ ಅರ್ಥವಿದ್ದು, ಸಂದರ್ಭಕ್ಕೆ ಹೊಂದುವುದಿಲ್ಲ.

# ೧. ಅರ್ಚನ

## ಪೀಠಿಕೆ

### ೧. ಕವಿಯ ಹೆಸರು, ಸ್ಥಳ

'ಪೂಜಾವಿಧಾನ ಕೀರ್ತನೆ'ಗಳ ಕರ್ತೃ ಶ್ರೀ ತಿಮ್ಮಪ್ಪದಾಸರ ನಿಜನಾಮ ತಿಮ್ಮಪ್ಪಯ್ಯ. ಕೆಲವು ಕೃತಿಗಳಲ್ಲಿ 'ತಿಂಮದಾಸ', 'ತರಳ ತಿಂಮದಾಸ' ಎಂಬ ಸ್ವನಾಮ ಮುದ್ರಿಕೆ, ಕಂಡುಬರುತ್ತದೆ. ಅನೇಕ ಕೃತಿಗಳಲ್ಲಿ ಕಂಡುಬರುವುದು ಇಷ್ಟದೇವತಾಮುದ್ರಿಕೆ, 'ತಿರುಪತಿಯ ವೆಂಕಟರಮಣ'ನ ನಾಮವೊಂದೇ. ಹೊನ್ನಪ್ಪ (ಅಥವಾ ಹೊನ್ನಯ್ಯ, ಚಿನ್ನಪ್ಪ) ಎಂಬ ಅಡ್ಡ ಹೆಸರೂ ಇದ್ದಿರಬಹುದು. (ನೋಡಿ: ೫೮ನೆಯ ಕೀರ್ತನೆಯ ೫ನೆಯ ನುಡಿ).

ತಿಮ್ಮಪ್ಪದಾಸರ ಸ್ಥಳ ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ. 'ತಮ್ಮ ಪೂರ್ವಿಕರು ಚಿಕ್ಕನಾಯಕನಹಳ್ಳಿಯಿಂದ ಬಂದವರು' ಎಂಬ ವಂಶಸ್ಥರ ಹೇಳಿಕೆ; ಕೆಲವು ಕೃತಿಗಳಲ್ಲಿ ಈ ವೂರಿನ ಸಂಸ್ಕೃತರೂಪದ ಕ್ಷೇತ್ರಮುದ್ರಿಕೆ (ಚಿಕ್ಕನಾಗಪುರ, ತರುಣ ನಾಗಪುರ) ಇರುವುದು; ದಾಸರ ಎರಡನೆಯ ಮಗ ವೆಂಕಟರಮಣದಾಸರ ಗೃಹಕೃತ್ಯದ ಲೆಕ್ಕಪುಸ್ತಕದಲ್ಲಿ (ಸ್ವಹಸ್ತಾಕ್ಷರದ್ದು) ಚಿಕ್ಕನಾಯಕನಹಳ್ಳಿಯಲ್ಲಿದ್ದ ಪಿತ್ರಾರ್ಜಿತ ಭೂಸ್ವತ್ತಿನ ವಿವರಗಳಿರುವುದು;[೧] ತಾವು ಪೂರ್ವದಲ್ಲಿ ಚಿಕ್ಕನಾಯಕನಹಳ್ಳಿಯವರೆಂದು ಹೇಳಿಕೊಳ್ಳುವ, ದಾಸರ ವಂಶದ (ಬಹುಶಃ ದೌಹಿತ್ರ) ಶಾಖೆಗೆ ಸೇರಿದವರಲ್ಲಿಯೂ ಈ ಪೂಜಾವಿಧಾನ ಕೀತನೆಗಳಲ್ಲಿ ಕೆಲವು ಇಂದಿಗೂ ಮುಖಸ್ಥವಾಗಿಯೂ ಗ್ರಂಥಸ್ಥವಾಗಿಯೂ ಉಳಿದುಬಂದಿರುವುದು – ಈ ಅಂಶಗಳು ದಾಸರ ಸ್ಥಳವನ್ನು (ಜನ್ಮಸ್ಥಳವನ್ನು?) ನಿರ್ವಿವಾದವಾಗಿ ಸ್ಥಾಪಿಸುತ್ತವೆ. ಚಿಕ್ಕನಾಯಕನಹಳ್ಳಿಯ ಸಮೀಪದಲ್ಲಿರುವ ಶಿವಗಂಗೆಯ (ಕಕುದ್ಗಿರಿ) ಗಂಗಾಧರನನ್ನು ತಮ್ಮ ಕೀರ್ತನೆಗಳಲ್ಲಿ ದಾಸರು ಮೇಲಿಂದಮೇಲೆ ಸ್ತೋತ್ರ ಮಾಡಿರುವುದೂ ಈ ಸಂಗತಿಗೆ ಪೋಷಕವಾಗಿದೆ.

ತಿಮ್ಮಪ್ಪದಾಸರು ಚಿಕ್ಕನಾಯಕನಹಳ್ಳಿಯಲ್ಲಿ ಯಾವಾಗ, ಎಷ್ಟುಕಾಲ, ನೆಲಸಿದ್ದರೆಂಬುದಕ್ಕೆ ದಾಖಲೆಗಳಿಲ್ಲ. ಚಿಕ್ಕನಾಯಕನಹಳ್ಳಿಯ ವೆಂಕಟರಮಣ

ಒಂದೆರಡು ಕೀರ್ತನೆಗಳಲ್ಲಿ ರಾಮಸಾಗರ, ರಜತಪುರ ಅಥವಾ ರಜತನಗರ (ಬೆಳ್ಳೂರು ಇರಬಹುದೆ?) – ಈ ಊರುಗಳ ಉಲ್ಲೇಖವಿದೆ.

## ೨. ಕಾಲ

ತಿಮ್ಮಪ್ಪದಾಸರು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಕ್ರಿ.ಶ. ೧೭೯೬–೧೮೬೮) ಜೀವಿಸಿದ್ದರೆಂದು ಧಾರಾಳವಾಗಿ ಹೇಳಬಹುದು. ಅವರ ವಂಶಜರು ಹಾಗೆ ಹೇಳುತ್ತಿದ್ದುದರ ಜೊತೆಗೆ, ಲಿಖಿತ ಆಧಾರಗಳೂ ದೊರೆತಿವೆ. ನಾವು ಪರಿಶೀಲಿಸಿರುವ ಮಟ್ಟಿಗೆ, ಅವರ ಕೃತಿಗಳು ಲಿಖಿತವಾಗಿರುವ ಯಾವ ಹಸ್ತಪ್ರತಿಯಲ್ಲಿಯೂ ಕೃತಿರಚನೆಯ, ಇಲ್ಲವೆ ಪ್ರತಿನಿರ್ಮಾಣದ ಕಾಲ ಸೂಚಿತವಾಗಿಲ್ಲ$ ಅವರ ಮನೆತನದವರ ಬಳಿ ಇದ್ದ ಹಳೆಯ ಹಸ್ತಪ್ರತಿಗಳ ಸಂಗ್ರಹವನ್ನು ತಂದು, ಅವರ ಕೃತಿಗಳೆಂದು ಊಹಿಸಬಹುದಾಗಿದ್ದವನ್ನು ಜೋಡಿಸಿ ಇಡುವಂದು, ಜಾತಕದ ಕುಂಡಲಿ ಬರೆದಿದ್ದ ಒಂಟಿ ಓಲೆಯಗರಿಯೊಂದು ಕೇವಲ ಆಕಸ್ಮಿಕವಾಗಿ ಸಿಕ್ಕಿತು. ಅದರಲ್ಲಿ ಜ್ಯೇಷ್ಠ ಪುತ್ರ ನಾರಾಯಣನ ಜಾತಕ ಬರೆದಿದ್ದುದು ವ್ಯಕ್ತಪಟ್ಟಿತು. ನಮಗೆ ಇಲ್ಲಿ ಪ್ರಸಕ್ತವಾದ ಭಾಗ ಇಷ್ಟು: "... ಶಾಲಿವಾಹನ ಶಕಾಬ್ದಂಗಳಲ್ಲಿ ೧೭೪೪ನೇ ಸಂದ ಚಿತ್ರಭಾನು ಸಂವತ್ಸರದ ಮಾಘ ಬಹುಳ ೩೦ ಮಂಗಳವಾರ... ಚಿರಂಜೀವಿ ತಿಮ್ಮಪ್ಪಯ್ಯನ ಜ್ಯೇಷ್ಠಪುತ್ರ ನಾರಾಯಣನ ಜನನ." ಇಲ್ಲಿನ ತೇದಿ ಕ್ರಿ.ಶ.೧೧–೨–೧೮೨೩ಕ್ಕೆ ಸರಿಹೋಗುತ್ತದೆ.*

ಅನುಬಂಧ ೨ರಲ್ಲಿ ಕೊಟ್ಟಿರುವ ಷಟ್ಪದೀ ರಚನೆಯಲ್ಲಿ, – ತಿಮ್ಮಪ್ಪದಾಸರು ಗುರು ವಾಸುದೇವಾರ್ಯರನ್ನು ಮಹಾನವಮಿಯ ಮಹೋತ್ಸವದ ಸಂದರ್ಭದಲ್ಲಿ ಸಂದರ್ಶಿಸಿದ ಉಲ್ಲೇಖವಿದೆಯಷ್ಟೆ. ಶ್ರೀರಂಗಪಟ್ಟಣದಲ್ಲಿ ಆಗ ಆಳುತ್ತಿದ್ದ ಖಾಸಾ ಚಾಮರಾಜ ಒಡೆಯರು (ಕ್ರಿ.ಶ.೧೭೭೬–೧೭೯೬) ನಡಸುತ್ತಿದ್ದ ನವರಾತ್ರಿಯ ಉತ್ಸವ ಟಿಪ್ಪುಸುಲ್ತಾನನ ಕಾಲದಲ್ಲಿ, ಸುಮಾರು ೧೭೯೪ರಲ್ಲಿ, ನಿಂತು ಹೋದಂತೆ ತಿಳಿದುಬರುತ್ತದೆ (ಟಿಪ್ಪಣಿ ೨ ನೋಡಿ).ಆದ್ದರಿಂದ, ಗುರುಶಿಷ್ಯರ ಭೇಟಿ ಅದಕ್ಕೆ

---

$. ಮೈಸೂರು ಮಾನಸಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ 'ಕೃಷ್ಣಸಂಧಾನ ಕೀರ್ತನೆಗಳು' ಎಂಬ ಹಸ್ತಪ್ರತಿಯಿದೆ. ಇದರಲ್ಲಿರುವ ಕೀರ್ತನೆಗಳು ತಿಮ್ಮಪ್ಪದಾಸರವು ಎಂಬ ನಮ್ಮ ಊಹೆ ಸರಿಯಾಗಿ ಪರಿಣಮಿಸಿದರೆ, ಆ ಪ್ರತಿಯಲ್ಲಿ ನಮೂದಾಗಿರುವ ಕ್ರಿ.ಶ.೧೮೩೪ ಎಂಬ ಕಾಲನಿರ್ದೇಶ ದಾಸರ ಕಾಲಕ್ಕೆ ಹೊಂದಿಬರುತ್ತದೆ.

* ಈ ಅಂಶವನ್ನು ತಿಳಿಸಿಕೊಟ್ಟು ಉಪಕರಿಸಿದವರು, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸಂಶೋಧನ ಸಹಾಯಕರಾಗಿರುವ ವಿದ್ವಾನ್ ಎಸ್.ಎನ್.ಕೃಷ್ಣ ಜೋಯಿಸರು.

ಸ್ವಾಮಿಯ ದೇವಸ್ಥಾನ ಪುರಾತನವಾದದ್ದು. ತಿಮ್ಮಪ್ಪದಾಸರೂ ಅವರ ಗುರುಗಳಾದ ವಾಸುದೇವಾರ್ಯರೂ ತಿರುಪತಿ ವೆಂಕಟರಮಣನ ಪರಮಭಕ್ತರು. ತಿರುಪತಿಯ ವೆಂಕಟರಮಣ ಭಕ್ತರನ್ನು ಉದ್ಧರಿಸಲು 'ಚಿಕ್ಕನಾಗಪುರ'ದಲ್ಲಿ ಬಂದು ನೆಲಸಿದ್ದನೆಂದೇ ದಾಸರ ಅಚಲ ವಿಶ್ವಾಸ. ಅಂತೂ, ಅವರ ಮುಖ್ಯ ಪೂಜಾಮೂರ್ತಿ, ಶ್ರೀದೇವಿ, ಭೂದೇವಿ ಸಮೇತವಾದ ವೆಂಕಟರಮಣಸ್ವಾಮಿಯ ವಿಗ್ರಹ; ಪಂಚಲೋಹದಿಂದ ಮಾಡಿದ್ದು. (ಚಿತ್ರ ೧). ಇತರ ಪೂಜಾಮೂರ್ತಿಗಳಲ್ಲಿ ಮುಖ್ಯವಾದವು ಶ್ರೀ ಲಕ್ಷ್ಮೀನೃಸಿಂಹ ವಿಗ್ರಹ, ಮತ್ತು ಕೋದಂಡರಾಮ ವಿಗ್ರಹ. ಈ ಪೂಜಾಮೂರ್ತಿಗಳು (ಮಂಟಪ ಸಮೇತ) (ಚಿತ್ರ ೨) ಚಿಕ್ಕನಾಯಕನ ಹಳ್ಳಿಯಿಂದ ಶ್ರೀರಂಗಪಟ್ಟಣಕ್ಕೂ, ಅಲ್ಲಿಂದ (ಹಾಸನ ಜಿಲ್ಲೆಯ) ಅರಕಲ ಗೂಡಿಗೂ, ಅಲ್ಲಿಂದ ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲದಲ್ಲಿ ಮೈಸೂರಿಗೂ ಅವರೊಂದಿಗೆ ಸ್ಥಳಾಂತರ ಹೊಂದಿದಂತೆ ಕಂಡುಬರುತ್ತದೆ.[೨] ತಿಮ್ಮಪ್ಪದಾಸರು ಬದುಕಿದ್ದಾಗಲೂ, ಬಳಿಕ ಅವರ ಮಕ್ಕಳುಗಳಾದ ನಾರಾಯಣದಾಸರು (ಇವರೂ ಹಲವು ಕೀರ್ತನೆಗಳನ್ನು ರಚಿಸಿದ್ದಾರೆ) ಮತ್ತು ವೆಂಕಟರಮಣದಾಸರ ಕಾಲದಲ್ಲೂ (೧೯೧೬ ರವರೆಗೆ) ಮುಮ್ಮಡಿ ಕೃಷ್ಣರಾಜ ಒಡೆಯರ ಕೃಪಾಶ್ರಯದ ಪರಿಣಾಮವಾಗಿ ತಿಮ್ಮಪ್ಪದಾಸರು ಮೈಸೂರಿಗೆ ಬಿಜಯಮಾಡಿಸಿಕೊಂಡುಬಂದ ಪೂಜಾಮೂರ್ತಿಗಳು–ಮೈಸೂರು ಕೋಟೆಯ ಶ್ರೀ ತ್ರಿನಯನೇಶ್ವರಸ್ವಾಮಿಯ ದೇವಸ್ಥಾನದ ಹೆಬ್ಬಾಗಿಲಿಗೂ ಒಳಪ್ರಾಕಾರದ ಮುಂಬಾಗಿಲಿಗೂ ನಡುವೆ ಬಲಭಾಗದಲ್ಲಿ – 'ತಿಮ್ಮಪ್ಪದಾಸರ ವೆಂಕಟರಮಣಸ್ವಾಮಿಯ ದೇವಸ್ಥಾನ' ಎಂದು ಹೆಸರು ಪಡೆದ ನಿವಾಸದಲ್ಲಿ ಸ್ಥಾಪಿತವಾಗಿದ್ದುವು.[೩] ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಕೋಟೆಯೊಳಗಿದ್ದ ಮನೆಗಳನ್ನೆಲ್ಲಾ ಒಡೆದು ಹಾಕಿದಾಗ, 'ಇದು ದೇವಸ್ಥಾನವಲ್ಲ, ಮನೆದೇವರು' ಎಂದು ಹೇಳಿ, ದೇವರನ್ನು ಕೊಂಡೊಯ್ಯಬೇಕೆಂದು ಅರಮನೆಯಿಂದ ನಿರೂಪ ಹೊರಟಿತು. ಅದರಂತೆ, ದಾಸರ ಮೊಮ್ಮಕ್ಕಳಾದ ವೆಂಕಟದಾಸಪ್ಪನವರು ದೇವರನ್ನು (ಮೈಸೂರು ಹಳೆಯ ಅಗ್ರಹಾರಕ್ಕೆ ಸೇರಿದ ರಾಮಚಂದ್ರ ಅಗ್ರಹಾರದ ೩ನೆಯ ಬೀದಿಯಲ್ಲಿದ್ದ) ತಮ್ಮ ವಾಸದ ಮನೆಗೆ ಬಿಜಯಮಾಡಿಸಿ, ಅದರ ಪಕ್ಕದಲ್ಲಿಯೆ ತಿಮ್ಮಪ್ಪದಾಸರ ಹೆಸರಿನಲ್ಲಿ ದೇವಸ್ಥಾನವನ್ನೆ ಕಟ್ಟಿಸಿ, ೧೯೧೬ರಲ್ಲಿ ದೇವರನ್ನು ಅಲ್ಲಿ ಸ್ಥಾಪಿಸಿದರು.[೪] ಹೀಗೆ, ತಿಮ್ಮಪ್ಪದಾಸರಂತೆ ಅವರ ದೇವರೂ ಚರಮೂರ್ತಿಯಾಗಿ ಪರಿಣಮಿಸಿಬಿಟ್ಟಿತು!

ತಿಮ್ಮಪ್ಪದಾಸರು ಮೇಲೆ ತಿಳಿಸಿದ ನಾಲ್ಕು ಊರುಗಳಲ್ಲದೆ ಬೇರೆ ಊರುಗಳಲ್ಲಿಯೂ ವಾಸವಾಗಿದ್ದರೋ ಹೇಗೋ, ಹೇಳುವುದು ಕಷ್ಟ. ಅವರ

ತರ್ಪಣಗಳಲ್ಲಿ ಪ್ರಪಿತಾಮಹ ಮತ್ತು ಪ್ರಪಿತಾಮಹೀ ಇವರ ಹೆಸರುಗಳು 'ತಿಮ್ಮಪ್ಪಯ್ಯ' ಮತ್ತು 'ವೆಂಕಮ್ಮ' ಎಂದು ಉಕ್ತವಾಗುವುದರಿಂದ, ತಿಮ್ಮಪ್ಪದಾಸರ ಹೆಂಡತಿಯ ಹೆಸರು ವೆಂಕಮ್ಮ ಎಂಬುದು ಸ್ಪಷ್ಟ. ಕೀರ್ತನೆಗಳಲ್ಲಿ ಮೇಲಿಂದ ಮೇಲೆ ಗುರು ವಾಸುದೇವಾರ್ಯರನ್ನು ಸ್ಮರಿಸಿರುವ ರೀತಿಯನ್ನು ಪರಿಭಾವಿಸಿದರೆ, ಗುರುಶಿಷ್ಯ ಸಂಬಂಧವನ್ನೂ ಮೀರಿ, ದಾಸರ ಪಾಲಿಗೆ ಅವರು ಸಾಕ್ಷಾತ್ ವೆಂಕಟರಮಣನೇ. ('ಮಾತೃ ದೇವೋ ಭವ', 'ಪಿತೃ ದೇವೋ ಭವ', 'ಆಚಾರ್ಯ ದೇವೋ ಭವ' ಎಂಬ ನಮ್ಮ ಆರ್ಷೇಯ ಭಾವನೆಗೆ ಇದು ಅನುಗುಣವಾಗಿಯೇ ಇದೆ.) ಆದರೆ, ತಂದೆ ತಾಯಿಗಳ ಮತ್ತು ಈ ಮಗನ ನಡುವೆ ಸಂಬಂಧ ಹೇಗಿತ್ತು ಎಂಬುದನ್ನು ಅರಿಯುವುದು ಕಷ್ಟವಾಗಿದೆ. ಒಂದು ಕೀರ್ತನೆಯಲ್ಲಿ "ಜನಿಸಿದ ಮೂರು ವರ್ಷಕ್ಕೆ ನಿನ್ನಯ ದಾಸನೆನ್ನುತ ಮಾತುಳನಿಂದ ನುಡಿಸಿದೆ" ಎಂದಿರುವ ಮಾತಿನಿಂದ, ಸೋದರಮಾವನಿಂದ ದಾಸದೀಕ್ಷೆ ಪಡೆದ ಹಾಗೆ ಭಾಸವಾಗುತ್ತದೆ. ಇನ್ನೊಂದು ಕೀರ್ತನೆಯಲ್ಲಿ "ವಾಸುದೇವಾರ್ಯ, ಚಿಕ್ಕನಾಗಪುರದಿ ಪರತತ್ತ್ವವರುಹಿ ವೆಂಕಟದಾಸವೇಷದಿಂ ಮರಳಿ ನಿಜದೊಳು ನಿಂದೆ" ಎಂದು ಹೇಳಿರುವುದಲ್ಲದೆ, ಒಂದೆರಡು ಕೀರ್ತನೆಗಳಲ್ಲಿ ಇವರನ್ನೂ ಕೊಂಡಾಡಿದ್ದಾರೆ. ಈ ವೆಂಕಟದಾಸ ಮಾತುಳನೆಂದು ಊಹಿಸಬಹುದು. ಸ್ವಂತ ತಂದೆಯನ್ನು ಹೀಗೆ ಗುರುಭಾವನೆಯಿಂದ ಕೊಂಡಾಡಿರುವ ಕೀರ್ತನೆ ಸದ್ಯಕ್ಕೆ ಯಾವುದೂ ಗಮನಕ್ಕೆ ಬಂದಿಲ್ಲ.

ಈ ಸಂದರ್ಭದಲ್ಲಿ, ತಂದೆತಾಯಿಗಳ ಬಗೆಗೆ ದಾಸರ ಅಭಿಪ್ರಾಯವನ್ನು ತಿಳಿಸುವ ಒಂದು ಕೀರ್ತನೆಯ* ಕೆಲವು ಸಾಲುಗಳನ್ನು ಇಲ್ಲಿ ಉದ್ಧರಿಸುವುದು ಅಪ್ರಕೃತವೆನಿಸದು:

ಪ್ರಾರಬ್ಧವೆ ನಿನಗೊಪ್ಪಿದ ತನುವಿದ । ನಾರೈದುಳಿಸು ಕೆಡಿಸು।
ನಿನ್ನ ಮನಸು।
ಹಾರೈಸಲಾರದೆ ಹಲವು ದೈವಗಳನ್ನು । ಸೇರಿದೆ
ಶ್ರೀವಾಸುದೇವಾರ್ಯ ಪದವನ್ನು ।ಪಲ್ಲ।
ಎರೆದು ಪಾಲ್ದುಪ್ಪವ ಹೊರೆದೆನೆನ್ನುತ ತಾಯಿ।
ಪರಲೋಕ ಸಾಧಕವೆನುತ ಸಂಸ್ಕಾರಗಳ್।

---

* ಈ ಕೀರ್ತನೆಯನ್ನು 'ಗ' ಹಸ್ತಪ್ರತಿಯಲ್ಲಿ ಕಾಣಬಹುದು.

ಮುಂಚೆ ಸುಮಾರು ೧೭೩೦–೯೪ರ ನಡುವೆ ನಡೆದಿರಬಹುದು. ಶ್ರೀರಂಗಪಟ್ಟಣದಲ್ಲಿದ್ದಾಗ ದಾಸರಿಗೆ ಮಕ್ಕಳಾಗಿರಲಿಲ್ಲವೆಂದೂ, ಆಗ ಅವರು ೧೮–೨೦ ವರ್ಷದ ಪ್ರಾಯದವರಿದ್ದಿರಬಹುದೆಂದೂ ಇಟ್ಟುಕೊಂಡರೆ, ಅವರ ಜನನ ಸುಮಾರು ಕ್ರಿ.ಶ.೧೭೭೦–೭೫ರಷ್ಟು ಹಿಂದಕ್ಕೆ ಹೋಗುತ್ತದೆ. ಎಂದಮೇಲೆ, ಹಿರಿಯ ಮಗ ನಾರಾಯಣನ ಜನನ ಅವರಿಗೆ ಸುಮಾರು ೪೦–೪೫ರ ವಯಸ್ಸಾಗಿದ್ದಾಗ ಆಯಿತು ಎನ್ನಬೇಕಾಗುತ್ತದೆ.+ ಈ ಹಿಂದೆಯೆ ಉಲ್ಲೇಖಿಸಿರುವ ಲೆಕ್ಕ ಪುಸ್ತಕದಲ್ಲಿ, ಶುಕ್ಲ–ಪ್ರಮೋದೂತ ಸಂವತ್ಸರಗಳ ಲೆಕ್ಕದ ದಾಖಲೆಗಳಲ್ಲಿ (ಸು. ಕ್ರಿ.ಶ. ೧೮೭೯–೭೦) 'ತಂದೆಗಳ ಯಡೆಕಟ್ಲೆಗೆ' ಎಂಬ ದಾಖಲೆಯಿದೆ. ತಿಮ್ಮಪ್ಪದಾಸರು (೧೦ನೆಯ) ಚಾಮಾರಾಜ ಒಡೆಯರ ಕಾಲದಲ್ಲಂತೂ (ಕ್ರಿ.ಶ.೧೮೬೮–೧೮೯೪) ಇದ್ದಿರಲಾರರು. ತಮ್ಮ ಮಕ್ಕಳಾದ ವೆಂಕಟರಮಣದಾಸರಂತೆ ಅವರೂ ೯೦ ವರ್ಷ ದೀರ್ಘಾಯುಷಿಯಾಗಿದ್ದರು ಎಂದು ಇಟ್ಟುಕೊಂಡರೆ, ಅವರ ಜನನ ವರ್ಷ ೧೭೭೦ ಎಂದು ಲೆಕ್ಕಹಿಡಿದಿರುವುದರ ಆಧಾರದ ಮೇಲೆ ಅವರ ಮರಣ ೧೮೬೦ರ ಸುಮಾರಿನಲ್ಲಿ ಸಂಭವಿಸಿರಬೇಕು. ಸದ್ಯದ ಮಟ್ಟಿಗೆ, **ತಿಮ್ಮಪ್ಪದಾಸರ ಕಾಲವನ್ನು ಕ್ರಿ. ಶ.೧೭೭೦–೧೮೬೦ ಎಂದು ನಿರ್ಧರಿಸಬಹುದು.**

### ೩. ಕುಲಪರಂಪರೆ

ತಿಮ್ಮಪ್ಪದಾಸರ ಕೃತಿಗಳಿಂದ ಅವರ ತಂದೆತಾಯಿಗಳ ವಿಚಾರವಾಗಿ ಹೆಚ್ಚಿನ ಸಂಗತಿಗಳೇನೂ ತಿಳಿದು ಬರುವುದಿಲ್ಲ. ತಂದೆಯ ಹೆಸರು ನಾರಾಯಣ ('ನಾರಾಯಣಾರ್ಯ'), ತಾಯಿಯ ಹೆಸರು ಚೆನ್ನಮ್ಮ ('ಚೆನ್ನಾಂಬೆ') ಎಂದು ಒಂದು ಕೀರ್ತನೆಯಿಂದ ತಿಳಿದುಬರುತ್ತದೆ.[೫] ತಿಮ್ಮಪ್ಪದಾಸರ ಪ್ರಪೌತ್ರರು ಕೊಡುವ

---

\+ ಇಷ್ಟು ತಡವಾಗಿ ಜ್ಯೇಷ್ಠ ಪುತ್ರನ ಜನನವೇ? ಎಂಬ ಸಂದೇಹವುಂಟಾಗುವುದು ಸಹಜ. ಅಲ್ಲದೆ, ಅನುಬಂಧ ೨ರ – ೩ನೆಯ ಕೀರ್ತನೆಯಲ್ಲಿ 'ಜಾಯಾಸುತಾದ್ಯರ ಬರಿಯ ಮೋಹದಲ್ಲಿ ಆಯು ಬೀಯವಾಗುತ್ತಿದೆ' ಎಂಬ ಮಾತಿನಿಂದ ಶ್ರೀರಂಗಪಟ್ಟಣದಲ್ಲಿದ್ದಾಗ (ಎಂದರೆ ೧೭೯೦ರ ಸುಮಾರಿನಲ್ಲಿ) ಅವರಿಗೆ ಹೆಂಡತಿ ಮಕ್ಕಳಿದ್ದರು ಎಂದು ಗ್ರಹಿಸಬೇಕು. ಹೀಗಿದ್ದರೆ, ೧೮೨೩ರಲ್ಲಿ ಜ್ಯೇಷ್ಠ ಪುತ್ರನ ಜನನ ಎಂದರೆ ಪೂರ್ವಾಪರ ವಿರೋಧವಾಗುವುದಿಲ್ಲವೆ ಎಂಬ ಪ್ರಶ್ನೆ ಏಳುತ್ತದೆ. ಶ್ರೀರಂಗಪಟ್ಟಣದಲ್ಲಿದ್ದಾಗಮೊದಲ ಹೆಂಡತಿ ಮತ್ತು ಮಗ ಇದ್ದು ಅವರು ತೀರಿಕೊಂಡಿರಬೇಕು; ನಾರಾಯಣ ಎರಡನೆಯ ಹೆಂಡತಿಯ ಜ್ಯೇಷ್ಠ ಪುತ್ರನಿರಬಹುದು. ಬೇರೆ ಯಾವ ರೀತಿಹಿಂದಲೂ ಈ ತೊಡಕನ್ನು ಪರಿಹರಿಸುವುದು ಸಾಧ್ಯವಿಲ್ಲ. ಇದು ಕೇವಲ ಊಹೆ ಮಾತ್ರ.

ರೂಢಿಯಲ್ಲಿರುವ ಪ್ರಕಾರ 'ಸುತ', 'ಪುತ್ರ' ಎಂದು ಬರೆಯಬೇಕಾಗಿದ್ದಿತು.'ಪೌತ್ರ' ಮತ್ತು ಅದಕ್ಕೆ ಸಮನಾದ ಕನ್ನಡ ಪದ ಇವನ್ನು ಬಲ್ಲವನಿಗೆ 'ಪುತ್ರ' ಪದ ತಿಳಿಯದಿರುವುದೆ? ವಾಸುದೇವಾರ್ಯ–ತಿಮ್ಮಪ್ಪ ದಾಸರ ಗುರುಶಿಷ್ಯ ಸಂಬಂಧಕ್ಕಿಂತ ಹೆಚ್ಚಾಗಿ ಅವರ ಔರಸ (ರಕ್ತ) ಸಂಬಂಧ – ಎಂದರೆ 'ಪಿತಾಮಹ – ಪೌತ್ರ' ಸಂಬಂಧ–ಸಂಪ್ರತಿಕಾರನಿಗೆ ಸಹಜವಾಗಿಯೆ ನೆನಪಿಗೆ ಬಂದಂತೆ ಕಾಣುತ್ತದೆ.[೬] ಅವನಿಗೆ ಇಬ್ಬರಲ್ಲಿಯೂ ಭಕ್ತಿ, ಗೌರವ. ತಾನು ಯಾವ ಕಾವ್ಯವನ್ನು ಸಂಪ್ರತಿಸುತ್ತಿರುವನೋ ಆ ಕಾವ್ಯದ ಕರ್ತೃ ವಾಸುದೇವಾರ್ಯರ ಮೊಮ್ಮಗ ಎಂದು ಉಲ್ಲೇಖಿಸುವುದರಲ್ಲಿ ಅವನಿಗೆ ಹೆಮ್ಮೆ. ದಾಸರ ವಂಶಸ್ಥರು, "ತಮ್ಮ ವಂಶದ ಮೂಲ ಪುರುಷರು ವಾಸುದೇವಾರ್ಯರು, ತಮ್ಮ ಪೂರ್ವಿಕರು ಚಿಕ್ಕನಾಯಕನಹಳ್ಳಿಯಿಂದ ಬಂದವರು" ಎಂದು ಹೇಳಿಕೊಳ್ಳುತ್ತಿದ್ದುದು ಮೇಲಿನ ತೀರ್ಮಾನಕ್ಕೆ ಉಪಷ್ಟಂಭಕವಾಗಿದೆ.

ತಿಮ್ಮಪ್ಪದಾಸರಿಗೆ ವೆಂಕಟದಾಸಪ್ಪ, ಸೀತಾರಾಮ ಎಂಬ ಇಬ್ಬರು ತಮ್ಮಂದಿರು ಇದ್ದಂತೆ ತಿಳಿದುಬರುತ್ತದೆ. (ವಂಶವೃಕ್ಷ ಸಂ.೯–೧೦). ಈ ವೆಂಕಟದಾಸಪ್ಪ 'ಅಂಖಂಡಾನಂದಸ್ವರೂಪ' ಎಂಬ ವೇದಾಂತ ವಿಷಯಕ ಗದ್ಯಗ್ರಂಥದ ಕರ್ತೃ 'ವೆಂಕಟದಾಸ' ಆಗಿದ್ದಿರಲಾರರು; ಈ ಹಿಂದೆ ತಿಳಿಸಿದ 'ಮಾತುಲ'ನೂ, ಗುರು ಸ್ವರೂಪನೂ ಆದ 'ವೆಂಕಟದಾಸಾರ್ಯ' ಅದರ ಕರ್ತೃವಾಗಿರಬಹುದು. ಆ ಗ್ರಂಥದ ಸಮಾಪ್ತಿವಾಕ್ಯದಲ್ಲಿ 'ವಾಸುದೇವಾರ್ಯರ ಶಿಷ್ಯ ದಾಸಾರ್ಯ, ಅವರ ಶಿಷ್ಯ ವೆಂಕಟದಾಸ' ಎಂದಿದೆ. ಚಿಕ್ಕನಾಯಕನಹಳ್ಳಿಯಲ್ಲಿ ದಾಸಪ್ಪನವರು ಒಬ್ಬರು ಇದ್ದರೆಂದು ತಿಳಿದು ಬರುತ್ತದೆ; ಈ ದಾಸಪ್ಪ ಆ ದಾಸಾರ್ಯರ ಮೊಮ್ಮಗನಿರಬಹುದು. ಅವರ ಸಂತತಿಯವರೂ ತಾವು ದಾಸರ ವಂಶದವರೆಂದು ಹೇಳಿಕೊಳ್ಳುತ್ತಾರೆ. ಅವರುಗಳು ವಾಸುದೇವಾರ್ಯರ ದೌಹಿತ್ರ ಸಂತತಿಯವರು ಎಂದು ಕಾಣುತ್ತದೆ. (ಅನುಬಂಧ ೫–ವಂಶವೃಕ್ಷ ನೋಡಿ). ಈ ವಿಷಯವಾಗಿ ಹೆಚ್ಚಿನ ಪರಿಶೀಲನೆ ಇಲ್ಲಿಗೆ ಅಪ್ರಕೃತ.

**೪. ಗುರು ಪರಂಪರೆ – ವಿದ್ಯಾವ್ಯಾಸಂಗ**

ಶ್ರೀ ವಾಸುದೇವಾರ್ಯರು ತಿಮ್ಮಪ್ಪದಾಸರ ಪಿತಾಮಹರು ಎನ್ನುವುದು ಇಲ್ಲಿನ ವಿವೇಚನೆಯಲ್ಲಿ ಗೌಣವಾದ ವಿಷಯ; ಸತ್ಯಾನ್ವೇಷಣೆಯ ದೃಷ್ಟಿಯಿಂದ ಆ ಸಂಗತಿಯನ್ನು ಈವರೆಗೆ ವಿಚಾರ ಮಾಡಿದ್ದಾಯಿತು. ಸ್ಪಷ್ಟವಾಗಿ, ನಿರ್ವಿವಾದವಾಗಿ, ಎದ್ದುಕಾಣುವುದು ಅವರಿಬ್ಬರ ಗುರು–ಶಿಷ್ಯ ಸಂಬಂಧ. ಗುರುಸ್ತುತಿ ಪರವಾದ

ವಿರಚಿಸಿ ತಂದೆಯ ಬೆರೆತಿರಲವರೊಳ।
ಗಿರದಂತೆ ತೊಲಗಿಸಿ ಬರಸೆಳಕೊಂಡಂಥ ॥೧॥

* * * *

ನೀನಿತ್ತಡಗ್ನಿಗೆ ಪುಲಿಗೆ ಚೋರಗೆ ಸುತ।
ಗಾನುಕೂಲದ ಸತಗಯ್ಯಗಮ್ಮಗೆನಗೆ।
ನೀನೀಯ್ಯದಿರಲಾರಿಗಿಲ್ಲೆಂದು ಗುರುವರ್‍ಯ।
ತಾನೆ ಬೋಧಿಸುತೆನ್ನ ವಿಂಗಡಿಸಿದನಾಗಿ ॥೪॥

ಬಾಗರೆದರೆ ಬೆಳೆದಂಜಿಪೆ ತೊರೆದರೆ।
ಬೀಗುವೆ ನೀನೆಂದು ತಿಳಿದೀಗ ನಾ ಚಿಕ್ಕ।
ನಾಗಪುರದಿ ಗುರುವಾಸುದೇವಾರ್‍ಯರ।
ಬೇಗದಿಂ ಸೇರಿ ಬೆರೆದೆನಂಜೆ ನಿನಗಿನ್ನು ॥೫॥

ಪ್ರಾರಬ್ಧ ಕರ್ಮದ ಪ್ರಭಾವವನ್ನು ಎದುರಿಸಿ, ತಂದೆ ತಾಯಿ ಹೆಂಡತಿ ಮಕ್ಕಳು (ಸುತ) ಇವರನ್ನು ತೊರೆದುಕೊಂಡು, ಗುರು ವಾಸುದೇವಾರ್‍ಯರ ಮಹಿಮೆಯಿಂದ ಆಕರ್ಷಿತರಾಗಿ, ಚಿಕ್ಕನಾಗಪುರಕ್ಕೆ ದಾಸರು ತೆರಳಿರಬೇಕೆಂದು ಊಹಿಸಬಹುದು. ಬಹುಶಃ ಶ್ರೀರಂಗಪಟ್ಟಣವನ್ನು ಬಿಟ್ಟು ಚಿಕ್ಕನಾಯಕನಹಳ್ಳಿಗೆ ಹೋಗಿರಬಹುದು.

ವಾಸುದೇವಾರ್‍ಯರು ತಿಮ್ಮಪ್ಪದಾಸರಿಗೆ ಉಪದೇಶವಿತ್ತ ಗುರುವಾಗಿದ್ದುದಲ್ಲದೆ, ಪಿತಾಮಹರೂ ಆಗಿದ್ದರೆಂದು ಅನುಮಾನಿಸಲು ಅವಕಾಶವಿದೆ. "ತಿಂಮದಾಸ ಪೇಳಿದ ಧ್ರುವ ಚರಿತೆ" ಎಂಬ ಸಾಂಗತ್ಯ ಕಾವ್ಯದ ಕೊನೆಯ ಪದ್ಯಗಳಿಂದ ಅದರ ಕರ್ತೃತ್ವವೂ, ೩೬ನೆಯ ಮತ್ತು ೪೧ನೆಯ ಗರಿಗಳಲ್ಲಿ ಸೇರಿಕೊಂಡಿರುವ (ಕಾವ್ಯಕ್ಕೆ ಸಂಬಂಧಪಡದ) ಲಿಪಿಕಾರಲಿಖಿತದಿಂದ ತಿಮ್ಮಪ್ಪದಾಸರು "ವಾಸುದೇವಾರ್‍ಯರ ಮೊಂಮ್ಮ" (=ಮೊಮ್ಮಗ), "ವಾಸುದೇವ ಪಉತ್ರ (=ಪವುತ್ರ < ಪೌತ್ರ)" ಎಂಬ ಅಂಶವೂ ತಿಳಿದುಬರುತ್ತದೆ. 'ಪೌತ್ರ' ಎಂಬ ಮಾತೊಂದೇ ಲಿಖಿತವಾಗಿದ್ದರೆ, ಅದಕ್ಕೆ 'ಪ್ರಶಿಷ್ಯ' (ಶಿಷ್ಯನ ಶಿಷ್ಯ) ಎಂದು ಅರ್ಥ ಕಲ್ಪಿಸಬಹುದಾಗಿತ್ತು. ತಿಮ್ಮಪ್ಪದಾಸರು ವಾಸುದೇವಾರ್‍ಯರ ಪ್ರಶಿಷ್ಯನಾಗಿರದೆ ಸಾಕ್ಷಾತ್ ಶಿಷ್ಯನೇ ಆಗಿದ್ದರೆಂಬುದಕ್ಕೆ ಅವರ ಅನೇಕಾನೇಕ ರಚನೆಗಳಲ್ಲಿ ಸಾಕ್ಷ್ಯ ವಿಪುಲವಾಗಿದೆ. 'ಶಿಷ್ಯ' ಪದಕ್ಕೆ ಪ್ರತಿಯಾಗಿ ಗುರುಪರಂಪರೆಯನ್ನು ಹೇಳುವಾಗ

ಪೂರ್ವಾಶ್ರಮದಲ್ಲಿ 'ಹರಿದಾಸ'ರಾಗಿದ್ದು, ದಾಸದೀಕ್ಷೆಯನ್ನು ವಂಶಪದ್ಧತಿಯಂತೆ ಮಗನಿಗೋ ಮೊಮ್ಮಗನಿಗೋ ಕೊಟ್ಟು ಇಲ್ಲವೆ ಕೊಡಿಸಿ, ತಾವು ಸಂನ್ಯಾಸಾಶ್ರಮವನ್ನು ಸ್ವೀಕರಿಸಿರಬೇಕು. ಬಹುಶಃ ಗೃಹಸ್ಥಾಶ್ರಮದಲ್ಲಿದ್ದಾಗ, ಅವರ ವೃದ್ಧ ಮಾತೆ ಗಂಗಾಸ್ನಾನ ಮಾಡಬೇಕೆಂದು ಅಪೇಕ್ಷೆ ಪಟ್ಟರಂತೆ. ವಾಸುದೇವಾರ್ಯರು ತಮ್ಮ ತೋಟದ ಬಾವಿಗೆ ಗಂಗೆಯನ್ನು ಬರಮಾಡಿ, ಬಾವಿಯಲ್ಲಿ ಅದು ಉಕ್ಕಿ ಹರಿಯುವಂತೆ ಮಾಡಿದರಂತೆ. ಈ ಸಂಗತಿಯನ್ನು ತಿಮ್ಮಪ್ಪದಾಸರ ವಂಶಸ್ಥರು ಹೇಳುತ್ತಿದ್ದುದಲ್ಲದೆ, ಚಿಕ್ಕನಾಯಕನ ಹಳ್ಳಿಯಲ್ಲಿ ಈಗಲೂ ಇರುವ ವಯೋವೃದ್ಧರು ತಾವು ಕೇಳಿಬಲ್ಲೆವೆಂದು ತಿಳಿಸುತ್ತಾರೆ. (ಅನುಬಂಧ ೪ನ್ನು ನೋಡಿ). ವಾಸುದೇವಾರ್ಯರು ತುಂಬ ಬಡತನದಲ್ಲಿ ಇದ್ದಂತೆ ಕಾಣುತ್ತದೆ. ಅವರ ಪತ್ನಿ ಗಿರಿಯಮ್ಮ(?) ಒಮ್ಮೆ ಪತಿಯ ದೇವತಾರ್ಚನೆಗೆ ಗಂಧ ತೇಯುತ್ತಾ, "ಸ್ವಾಮಿ, ನಿನ್ನ ಪೂಜೆಗೆ ಗಂಧ ತೆಯ್ದುತೆಯ್ದು, ಕೊರಡು ತೆಯ್ದುಹೋಗುವುದರ ಜೊತೆಗೆ ನನ್ನ ಕೈಯೂ ತೆಯ್ದು ಹೋಯಿತು. ನಮ್ಮ ಬಡತನ ಮಾತ್ರ ತೇಯಲಿಲ್ಲ. ನಿನಗೆ ನಮ್ಮ ಮೇಲೆ ದಯೆ ಬರಲಿಲ್ಲ" ಎಂದು ದೇವರಲ್ಲಿ ಮೊರೆಯಿಟ್ಟರಂತೆ. ತಿರುಪತಿಯ ಯಾತ್ರಾರ್ಥಿಗಳ ತಂಡದ ಕೆಲವರು ಬಂದು ಅಲ್ಲಿಯೆ ಸಮೀಪದಲ್ಲಿ ತಂಗಿದ್ದರಂತೆ. "ನೀವು ತಂದಿರುವ ಕಾಣಿಕೆಯನ್ನೆಲ್ಲಾ ಈ ಊರಿನ ನನ್ನ ಭಕ್ತನಿಗೆ ಒಪ್ಪಿಸಿಬಿಡಿ. ನನಗೆ ಕಾಣಿಕೆ ಸಂದಹಾಗಾಗುತ್ತದೆ." ಎಂದು ವೆಂಕಟರಮಣಸ್ವಾಮಿ ತಿಳಿಸಿದ ಹಾಗೆ ರಾತ್ರಿ ಸ್ವಪ್ನವಾಯಿತಂತೆ. ಅವರು ಹಾಗೆಯೆ ಮಾಡಿದರಂತೆ. ಗಿರಿಯಮ್ಮನ ಆನಂದಕ್ಕೆ ಪಾರವೇ ಇಲ್ಲ. ಸ್ನಾನಕ್ಕೆ ಹೋಗಿದ್ದ ಪತಿ ಹಿಂತಿರುಗಿ ಬಂದಾಗ ಹಣದ ರಾಶಿ ಕಂಡು, "ದೇವರನ್ನು ಕೇಳಿಕೊಂಡೆ ಅಂತಾ ಕಾಣುತ್ತೆ!" ಎಂದು ಹೆಂಡತಿಯನ್ನು ಆಕ್ಷೇಪಿಸಿ, ಅದನ್ನೆಲ್ಲಾ ಭಕ್ತರಿಗೇ ಹಿಂತಿರುಗಿಸುವ ಹಾಗೆ ಮಾಡಿದರಂತೆ. (ಈ ಎರಡು ಸಂಗತಿಗಳೂ ಅನುಬಂಧ ೪ ರಲ್ಲಿ ಉಲ್ಲೇಖಿಸಿರುವ 'ಗಿರಿಜಾಪ್ರಶ್ನೆ' ನಾಡೀ ಗ್ರಂಥದಲ್ಲಿ ಉಕ್ತವಾಗಿವೆ.) ಈ ದಂತಕಥೆಗಳ ಸತ್ಯಾಸತ್ಯತೆ ಒತ್ತಟ್ಟಿಗಿರಲಿ. ಇಲ್ಲಿಗೆ ಪ್ರಕೃತವಾದದ್ದು, ಅವು ಸೂಚಿಸುವ ವಾಸುದೇವಾರ್ಯರ ಪರಮ ಭಕ್ತಿವೈರಾಗ್ಯಗಳು. ಮಹಾಜ್ಞಾನಿಗಳೂ ಆಗಿದ್ದರು ವಾಸುದೇವಾರ್ಯರು. ತಮ್ಮ ಜ್ಞಾನ ಭಕ್ತಿ ವೈರಾಗ್ಯಗಳಿಂದ ಭಕ್ತರನ್ನೂ ಜಿಜ್ಞಾಸುಗಳನ್ನೂ ಮುಮುಕ್ಷುಗಳನ್ನೂ ತಮ್ಮ ಕಡೆಗೆ ಆಕರ್ಷಿಸಿಕೊಂಡರು. ಅವರ ಕಾಲದಲ್ಲಿ ಚಿಕ್ಕನಾಯಕನಹಳ್ಳಿ ಚಿಕ್ಕದಾದರೂ ಸುತ್ತಮುತ್ತ ಪ್ರಸಿದ್ಧವಾದ ಆಧ್ಯಾತ್ಮಿಕ ಕೇಂದ್ರವಾಗಿ, ಭಗವದ್ದಾಸರು ಕಲೆಯುವ ಸ್ಥಳವಾಗಿ, ಪರಿಣಮಿಸಿದ್ದಂತೆ ಕಾಣುತ್ತದೆ. ಕನ್ನಡದಲ್ಲಿ 'ಜ್ಞಾನಸಿಂಧು' ಮೊದಲಾದ ಅನೇಕ ವೇದಾಂತ ತತ್ತ್ವವಿಷಯಕ ಗ್ರಂಥಗಳನ್ನು ರಚಿಸಿರುವ

ದಾಸರ ಕೀರ್ತನೆಗಳು ಅನೇಕ ಉಪಲಬ್ಧವಾಗಿವೆ. ಅವುಗಳನ್ನೆಲ್ಲ ಸಂಗ್ರಹಿಸಿ ಅಧ್ಯಯನ ಮಾಡಿದ ಮೇಲೆ, ಗುರುವಿನ ವ್ಯಕ್ತಿತ್ವ ಈಗ ತಿಳಿದುಬಂದಿರುವುದಕ್ಕಿಂತ ಹೆಚ್ಚು ಸ್ಪಷ್ಟರೇಖೆಗಳಿಂದ ಮೂಡಿ ನಿಲ್ಲುವ ಸಂಭವವಿದೆ. ಒಟ್ಟಿನ ಮೇಲೆ, ಚಿಕ್ಕನಾಯಕನಹಳ್ಳಿಯ ಪ್ರಾಂತದ ಜನಜನಿತ ಹೇಳಿಕೆಗಳಿಂದಲೂ, ತಿಮ್ಮಪ್ಪದಾಸರ ಕೃತಿಗಳ, ಆಧಾರಗಳಿಂದಲೂ ಇತರ ಕೆಲವು ಆಧಾರಗಳಿಂದಲೂ ವಾಸುದೇವಾರ್ಯರು ಅವರ ಕಾಲದಲ್ಲಿ ಒಬ್ಬ ಮಹಿಮಾ ಪುರುಷರಾಗಿದ್ದರೆಂದು ತಿಳಿಯಲು ಯಾವ ಅಡ್ಡಿಯೂ ಇಲ್ಲ. ತಿಮ್ಮಪ್ಪದಾಸರ ಕಾಲದ ಆಧಾರದ ಮೇಲೆ, ವಾಸುದೇವಾರ್ಯರು ಸುಮಾರು ೧೭೨೫ ರಿಂದ ೧೭೮೦ರ ನಡುವಣಕಾಲಾವಧಿಯಲ್ಲಿ ಜೀವಿಸಿದ್ದರೆಂದು ಹೇಳಬಹುದು.

ವಾಸುದೇವಾರ್ಯರು ಸಂನ್ಯಾಸಾಶ್ರಮಿಗಳಾಗಿದ್ದುದಕ್ಕೂ ಗುಹಾಪ್ರವೇಶ ಮಾಡಿ ಬ್ರಹ್ಮೀಭೂತರಾದದ್ದಕ್ಕೂ ತಿಮ್ಮಪ್ಪದಾಸರ ರಚನೆಗಳಲ್ಲಿ (ಅನುಬಂಧ–೨ ನೋಡಿ) ಸ್ಪಷ್ಟ ಉಲ್ಲೇಖವಿದೆ. ಈ ಘಟನೆ ೧೭೮೦ರ ಸುಮಾರಿನಲ್ಲಿ ನಡೆದಿರಬಹುದು. 'ಗಿರಿಗುಹೆಯನ್ನು ಸೇರುವೆನು' ಎಂದು ಸ್ಪಷ್ಟ ಉಲ್ಲೇಖವಿರುವುದರಿಂದ, ಶಿವಗಂಗೆಯ ಬೆಟ್ಟದ ಗುಹೆಯೊಂದರಲ್ಲಿ ಯೋಗಸಮಾಧಿಸ್ಥರಾಗಿ ಬ್ರಹ್ಮೈಕ್ಯರಾಗಿರಬೇಕು. ಆ ಗುಹೆಯಿಂದ ಅವರ ಕಳೇಬರವನ್ನು ಅವರ ಶಿಷ್ಯರು ತಂದು ಚಿಕ್ಕನಾಯಕನಹಳ್ಳಿಯ ಕೆರೆಯ ಬಳಿ ಹುಗಿದು, ಅದರ ಮೇಲೆ ಬೃಂದಾವನ ನಿರ್ಮಾಣ ಮಾಡಿದಂತೆ ಕಂಡು ಬರುತ್ತದೆ. ಪಕ್ಕದಲ್ಲಿಯೇ ಅವರ ಶಿಷ್ಯರೊಬ್ಬರ ಬೃಂದಾವನವೂ ಇದೆ. ಈ ಶಿಷ್ಯ ಯಾರೆಂಬುದು ಸರಿಯಾಗಿ ತಿಳಿಯದು. ತಿಮ್ಮಪ್ಪದಾಸರ ಶ್ರಾದ್ಧದ ಬಗೆಗೆ ವೆಂಕಟರಮಣದಾಸರ ಲೆಕ್ಕಪುಸ್ತಕದಲ್ಲಿ ದಾಖಲೆಯಿರುವುದರಿಂದ, ಅದು ಇವರದ್ದಾಗಿರಲು ಸಾಧ್ಯವಿಲ್ಲ. ಅದೇ ಪುಸ್ತಕದಲ್ಲಿ 'ಗುರುಗಳ ಆರಾಧನೆ' ಮತ್ತು 'ಬೃಂದಾವನ ಕಾಮಗಾರಿಗೆ ೧೦ ರೂ.' ಕಳಿಸಿಕೊಟ್ಟದ್ದಕ್ಕೆ ದಾಖಲೆಗಳಿವೆ. ಗುರುಗಳ ಆರಾಧನೆ ದಾಸರ ವಂಶದಲ್ಲಿ ಅವರ ಮೊಮ್ಮಕ್ಕಳ ಕಾಲದಲ್ಲೂ (ಸು. ೧೯೨೦ರ ವರೆಗೆ) ನಡೆಯುತ್ತಿತ್ತು; ಗುರುಗಳು ತಿಮ್ಮಪ್ಪದಾಸರಿಗೆ ಅನುಗ್ರಹಿಸಿದ್ದ ಪಾದುಕೆಗಳಿಗೆ ಆರಾಧನೆಯಂದು ವಿಶೇಷ ಪೂಜೆ ಮಾಡಿ, ಗುರುಸ್ತುತಿಯ ಕೀರ್ತನೆಗಳನ್ನು ಹಾಡುತ್ತಿದ್ದರು. (ಅನುಬಂಧ–೪ನ್ನೂ ನೋಡಿ).

ವಾಸುದೇವಾರ್ಯರು ಮಾಹಿಮಾಪುರುಷರಾಗಿದ್ದು, ಅನೇಕ ಮಹಿಮೆಗಳನ್ನು ಮೆರೆದರೆಂದು ಕೀರ್ತನೆಗಳಲ್ಲಿಯೇ ಪ್ರಸ್ತಾವವಿದೆ. ಚಿಕ್ಕನಾಯಕನಹಳ್ಳಿಯಲ್ಲಿ 'ದಾಸರ ಬಾವಿ' ಎಂದು ಖ್ಯಾತಿ ಪಡೆದ ಬಾವಿ ಈಗಲೂ ಇದೆ. ವಾಸುದೇವಾರ್ಯರು

'ಪಂಡಿತತ್ವಾಭಿಮಾನ' (ಕೀ.೭೮–೩), 'ವಿದ್ಯದಲ್ಲಿ ನಿರ್ಬಂಧವಾಯಿತು' (ಕೀ.೭೯–೧), 'ವಿದ್ಯ ವಿಸ್ತರವಾದರದ್ದುವದು ಗರ್ವದಲಿ' (ಕೀ. ೧೦೧–೩)– ಇವುಗಳ ಉಲ್ಲೇಖ; ಸಂಸ್ಕೃತದಲ್ಲಿ ಕೃತಿರಚನಾ ಸಾಮರ್ಥ್ಯ; ಕೆಲವೆಡೆಗಳಲ್ಲಿ ಭಾಷಾಶೈಲಿಯ ಪ್ರೌಢಿಮೆ; ವೇದ, ಉಪನಿಷತ್ತು, ಭಗವದ್ಗೀತೆ, ಭಾಗವತ ಮುಂತಾದ ಗ್ರಂಥಗಳ ಪರಿಚಯ; ಈಗಲೂ ವಂಶಸ್ಥರ ಬಳಿ ಅಳಿದುಳಿದಿರುವ (ಬಹುಶಃ ತಿಮ್ಮಪ್ಪದಾಸರದ್ದೇ ಆದ) (ಸು.೫೫–೬೦ ಹಸ್ತಪ್ರತಿಗಳ) ಗ್ರಂಥಸಂಗ್ರಹ – ಇವನ್ನೆಲ್ಲಾ ಗಮನಕ್ಕೆ ತಂದುಕೊಂಡರೆ, ತಿಮ್ಮಪ್ಪದಾಸರು ಹುಟ್ಟು ಕವಿಯಾಗಿದ್ದುದರ ಜೊತೆಗೆ ನಾನಾ ಶಾಸ್ತ್ರಗಳಲ್ಲಿ ಪಾರಂಗತರಾದ ವಿದ್ವಾಂಸರೂ ಆಗಿದ್ದರೆಂದು ಹೇಳಬಹುದು.

### ೫. ಮತ–ಧರ್ಮ

ತಿಮ್ಮಪ್ಪದಾಸರ ವಂಶಸ್ಥರು ಹರಿತಸಗೋತ್ರಾನ್ವಿತ ಸ್ಮಾರ್ತಬ್ರಾಹ್ಮಣ ಕಮ್ಮೆ ಕುಲದ 'ಬಬ್ಬೂರು ಕಮ್ಮೆ'ಎಂಬ ಉಪಪಂಗಡಕ್ಕೆ ಸೇರಿದವರು. ಆದ್ದರಿಂದ, ತಿಮ್ಮಪ್ಪದಾಸರ ಮತ ಯಾವುದು ಎಂಬುದರ ಬಗೆಗೆ ಸಂದೇಹಕ್ಕೆ ಅವಕಾಶವೇ ಇಲ್ಲ. ಈ ಪಂಗಡದವರು ಅದ್ವೈತಿಗಳು ಎಂಬುದು ಸ್ವಯಂಸ್ಪಷ್ಟ; ಇವರು ಶೃಂಗೇರಿ ಮಠದ ಶಿಷ್ಯಕೋಟಿಗೆ ಸೇರಿದವರು. ತಿಮ್ಮಪ್ಪದಾಸರ ಇಲ್ಲಿನ ಪೂಜಾವಿಧಾನ ಕೀರ್ತನೆಗಳಲ್ಲಿಯೂ, ಇತರ ಕೆಲವು ಕೃತಿಗಳಲ್ಲಿಯೂ, ಸಾಹಿತ್ಯ–ಸಂಗೀತಗಳ ಚೌಕಟ್ಟಿನಲ್ಲಿ ಅದ್ವೈತ ತತ್ತ್ವದ ಪ್ರತಿಪಾದನೆಯನ್ನು ಸ್ಪಷ್ಟವಾಗಿ ಕಾಣಬಹುದು. ಇಷ್ಟರ ಜೊತೆಗೆ, ಇವರ ಇಷ್ಟದೈವ ತಿರುಪತಿಯ ವೆಂಕಟರಮಣಸ್ವಾಮಿ ಎಂದೂ, ಇವರು 'ಹರಿದಾಸ'ರೆಂದೂ ಅವರ ಕೃತಿಗಳಿಂದಲೇ ಗೊತ್ತಾಗುತ್ತದೆ. ಅದ್ವೈತ ಸಿದ್ಧಾಂತದ ಪ್ರವರ್ತಕರಾದ ಆದಿ ಶಂಕರರ ಶೈವನಿಷ್ಠೆ ಹೆಚ್ಚೋ ವೈಷ್ಣವ ನಿಷ್ಠೆ ಹೆಚ್ಚೋ ಹೇಳುವುದು ಕಷ್ಟ. ಶಿವನ ಕಡೆಗೆ ಅವರ ಒಲವು ಹೆಚ್ಚಿರಬಹುದು; ಆದರೆ ಅವರು ಶುದ್ಧ ಶೈವ ಮತಾನುಯಾಯಿಗಳಲ್ಲ.[೮] ಅದೇ ರೀತಿ, ಕುಮಾರವ್ಯಾಸ ಲಕ್ಷ್ಮೀಶರಲ್ಲಿ ಹರಿಭಕ್ತಿ ಪ್ರಧಾನವಾದರೂ ಅವರು 'ವೈಷ್ಣವ'ರಲ್ಲ. ಹಾಗೆಯೆ, ತಿಮ್ಮಪ್ಪದಾಸರು ಅನೇಕ ಕಡೆ ತಾವು 'ಹರಿದಾಸ'ರೆಂದು ಹೇಳಿಕೊಂಡಿದ್ದರೂ,[೯] ಪುರಂದರದಾಸಾದಿಗಳಂತೆ ಮಾಧ್ವವೈಷ್ಣವ ಸಂಪ್ರದಾಯದ ಹರಿದಾಸರಲ್ಲ ಅವರು. ಇವರ ಕೃತಿಗಳ ಪರಿಶೀಲನೆಯಿಂದ, ಅದ್ವೈತಕ್ಕೆ ಅವಿರೋಧವಾದ ಭಾಗವತ ಧರ್ಮವನ್ನು ಇವರು ಅನುಸರಿಸುತ್ತಿದ್ದರು ಎಂದು ಹೇಳಬಹುದು.

ಚಿದಾನಂದ ಅವಧೂತರು ಚಿಕ್ಕನಾಯಕನಹಳ್ಳಿಗೆ ಬಂದಿದ್ದು, ಯೋಗಿಗಳಿಬ್ಬರ ಸಮಾಗಮವಾಗಿದ್ದಿರಬೇಕು ಎಂದು ಊಹಿಸಲು ಅವಕಾಶವಿದೆ. (ಕರ್ತೃತ್ವ ಪ್ರಕರಣದಲ್ಲಿ 'ಭಗವದ್ವಿಲಾಸದಾಟ' ಕೃತಿಯ ವಿಚಾರದಲ್ಲಿ ಈ ಸಂಗತಿಯ ಪ್ರಸ್ತಾವವಿದೆ.) ಕವಿಚರಿತ್ರಕಾರರು ಚಿದಾನಂದಾವಧೂತರಿಗೆ ಸೂಚಿಸಿರುವ ಕಾಲ (ಸು.ಕ್ರಿ.ಶ.೧೭೫೦) ವಾಸುದೇವಾರ್ಯರ ಜೀವಿತಕಾಲಕ್ಕೆ ಹೊಂದುತ್ತದೆ. ಗುರು ವಾಸುದೇವಾರ್ಯರ ಪ್ರಭಾವ ತಿಮ್ಮಪ್ಪದಾಸರನ್ನು ಒಬ್ಬ ಭಕ್ತನನ್ನಾಗಿ, ಸಾಧಕನನ್ನಾಗಿ, ರೂಪಿಸಿದೆ; ಅವರ ಕೃತಿಗಳ ರಚನೆಗೆ ಸ್ಫೂರ್ತಿಯ ಸೆಲೆಯಾಗಿದೆ. ತಿಮ್ಮಪ್ಪದಾಸರು ತಮ್ಮ ಸಂಸ್ಕೃತ ರಚನೆಯೊಂದರಲ್ಲಿ ಗುರುಮೂರ್ತಿಯ ವ್ಯಕ್ತಿತ್ವವನ್ನು ಹೀಗೆ ಕಡೆದಿಟ್ಟಿದ್ದಾರೆ:

ರಾಗರಹಿತ ಮಹಾಗಮಜ್ಞ ವಿರಾಗಿಜನ ಸಂಸೇವಿತ।
ಯೋಗಿಸಂಘಾರಾಧ್ಯಪದ ಚಿಕನಾಗನಗರ ನಿಕೇತನ।
ವಾಗಮೃತ ಜೀವಿತ ಭವಾಮಯ ಭೋಗಮೂರ್ಛಿತಬಹುಜನ।
ಶ್ರೀಗುರೋ ವಾಸುದೇವ ಯತಿವರ ಸ್ವಾಗತಂ ತೇ ಸುಖಕರ॥

ರಾಮಕೃಷ್ಣಾರ್ಯರು ಮತ್ತು ನೀಲಕಂಠಾರ್ಯರು ದಾಸರ ಇನ್ನಿಬ್ಬರು ವಿದ್ಯಾ ಗುರುಗಳು. ಇವರ ವಿಚಾರ ಈ ಗ್ರಂಥದ (೪, ೫, ೬, ೭ನೆಯ) ನಾಲ್ಕು ಕೀರ್ತನೆಗಳಲ್ಲಿ ನಿರೂಪಿತವಾಗಿದೆ. ಇವರ ಬಳಿ ಶಿಷ್ಯವೃತ್ತಿ ಮಾಡಿ ತಿಮ್ಮಪ್ಪದಾಸರು ಅಪಾರ ಜ್ಞಾನ ಸಂಪಾದನೆ ಮಾಡಿರುವುದರಲ್ಲಿ ಸಂದೇಹವಿಲ್ಲ. ಆದರೂ, ಇವರ ಕೃತಿಗಳಲ್ಲಿ ಗುರು ವಾಸದೇವಾರ್ಯರ ಪ್ರಭಾವಮುದ್ರೆ ಮೂಡಿರುವಂತೆ, ಉಳಿದಿಬ್ಬರ ಪ್ರಭಾವ ಮೂಡಿ ಎದ್ದು ಕಾಣುವುದಿಲ್ಲ; ಆದರೆ, ಕೀರ್ತನೆ ಕಾವ್ಯ ಮುಂತಾದ ಕೃತಿರಚನೆಗೆ ಅಗತ್ಯವಾದ ವ್ಯುತ್ಪತ್ತಿ ಈ ಇಬ್ಬರು ಮಹನೀಯರುಗಳ ಬೋಧೆಯಿಂದ ದಾಸರ ವಶವಾಗಿದೆ ಎಂಬಲ್ಲಿ ಸಂದೇಹವಿಲ್ಲ.

ಮೇಲ್ಕಂಡ ಇಬ್ಬರಲ್ಲದೆ, ತಿಮ್ಮಪ್ಪದಾಸರು ವೆಂಕಟದಾಸಾರ್ಯ, ಕೃಷ್ಣಯೋಗೀಂದ್ರ, ನರಸಾರ್ಯ, ನಾರಾಯಣಾಚಾರ್ಯ, ಗೋಪಾಲಾರ್ಯ ಇವರನ್ನು ಸ್ತುತಿಸಿದ್ದಾರೆ. (ಟಿಪ್ಪಣಿ ೫ನ್ನೂ ನೋಡಿ). ಇವರ ಪೈಕಿ ವೆಂಕಟದಾಸಾರ್ಯರ ವಿಚಾರ ಈ ಹಿಂದೆಯೇ ಬಂದಿದೆ. ಉಳಿದವರೆಲ್ಲಾ ವಾಸುದೇವಾರ್ಯರಿಗಿಂತಲೂ ಹಿಂದಿನ ಗುರುಪರಂಪರೆಗೆಸೇರಿದ್ದವರು.[೭] (ವಂಶವೃಕ್ಷ ನೋಡಿ). ಗೋಪಾಲಾರ್ಯರನ್ನು ಸ್ತೋತ್ರ ಮಾಡುವ ಅನೇಕ ಕೀರ್ತನೆಗಳಿವೆ. (ಇವು ಹಲವು ತೆಲುಗಿನಲ್ಲಿವೆ).

"ವಿಷ್ಣುಭಗವಂತನನ್ನು ನಿಯಮದಿಂದ ಆರಾಧಿಸುವವರೂ ವೈಷ್ಣವದೀಕ್ಷೆಯನ್ನು ಕೈಕೊಂಡಿರುವವರೂ ಯಾವ ಸಿದ್ಧಾಂತವನ್ನೆ ಅನುಸರಿಸಿರಲಿ, ಅವರೆಲ್ಲರೂ ವೈಷ್ಣವರೇ. ಅವರೆಲ್ಲಾ ಈ ವಿಶಾಲಾರ್ಥದಲ್ಲಿ ಭಾಗವತರೇ ಆಗಿರುತ್ತಾರೆ. ಆದರೂ ನಮ್ಮ ದೇಶದಲ್ಲಿ **ವೈಷ್ಣವ**ರೆಂದರೆ ಮಾಧ್ವ ಸಂಪ್ರದಾಯದ ದ್ವೈತಿಗಳು; **ಶ್ರೀವೈಷ್ಣವ**ರೆಂದರೆ ಶ್ರೀ ರಾಮಾನುಜಾಚಾರ್ಯರ ಅನುಯಾಯಿಗಳಾದ ವಿಶಿಷ್ಟಾದ್ವೈತಿಗಳು; **ಭಾಗವತರು** ಎಂದರೆ ಶ್ರೀ ಶಂಕರ ಭಗವತ್ಪಾದರು ಅನುಸರಿಸಿರುವ ಅದ್ವೈತ ಸಿದ್ಧಾಂತವನ್ನೇ ಅವಲಂಬಿಸಿ ವೈಷ್ಣವ ಸಂಪ್ರದಾಯವನ್ನು ವಿಶೇಷ ರೀತಿಯಿಂದ–ಆಚರಿಸುವವರು ಎಂಬ ಸಂಕೇತವು ಬಂದಿರುತ್ತದೆ." ತಾತ್ತ್ವಿಕ ದೃಷ್ಟಿಭೇದ, ಆಚಾರ ಭೇದ – ಇವನ್ನು ಹೊರತುಪಡಿಸಿ ತ್ರಿಮತಸ್ಥರಿಗೂ ಅನ್ವಯಿಸುವಂತೆ ಹೇಳುವುದಾದರೆ, "ವಿಷ್ಣುಭಗವಂತನನ್ನು ಆರಾಧಿಸುವ ಭಾಗವತರ, ಎಂದರೆ ಭಗವದ್ಭಕ್ತರ, ಧರ್ಮವೇ ಭಾಗವತ ಧರ್ಮ" ಎಂದು ಹೇಳಲು ಅಡ್ಡಿಯಿಲ್ಲ. ಆದ್ದರಿಂದ ಇದು ಭಕ್ತಿಪಂಥವೇ ಆಗುತ್ತದೆ; ಏಕದೇವೋಪಾಸನೆ ಅದರ ಸಾರಸರ್ವಸ್ವ. ಭಾಗವತ ಧರ್ಮದ ಕ್ರಮವಾದ ವ್ಯಾಪಕವಾದ ಬೆಳವಣಿಗೆಯನ್ನು ಅನುಲಕ್ಷಿಸಿ ಹೇಳುವುದಾದರೆ, ಇದು ವೈಷ್ಣವಧರ್ಮವೇ.[೧೦] (ಭಾಗವತ ಮತದಲ್ಲಿ ಶೈವ ಇತ್ಯಾದಿ ಉಪಶಾಖೆಗಳು ಇರುವುವಾದರೂ, ರೂಢಿಯಲ್ಲಿ ಭಾಗವತಮತ ವೈಷ್ಣವ ಎಂದೇ ಪ್ರಸಿದ್ಧ.)

ಅದ್ವೈತಿಗಳು ತಾತ್ತ್ವಿಕವಾಗಿ ನಿರ್ಗುಣಬ್ರಹ್ಮದ ಉಪಾಸಕರಾದರೂ ವ್ಯವಹಾರದ ನೆಲೆಗಟ್ಟಿನಲ್ಲಿ ದ್ವೈತದೃಷ್ಟಿಯವರು – ಸಗುಣೋಪಾಸನೆಯನ್ನೂ ಒಪ್ಪಿಕೊಂಡವರು ಎಂಬ ಅರ್ಥದಲ್ಲಿ. ಪರಬ್ರಹ್ಮನ ಸಗುಣತ್ವವನ್ನು ತ್ರೈಗುಣ್ಯ ದೃಷ್ಟಿಯಿಂದ (ಸೃಷ್ಟಿ ಸ್ಥಿತಿ ಲಯ ತತ್ತ್ವಗಳ) ಚತುರ್ಮುಖಬ್ರಹ್ಮ, ವಿಷ್ಣು, ಮಹೇಶ್ವರ ಎಂದು ವಿಭಜನೆ ಮಾಡಲಾಯಿತು. ಆದರೆ, ವಿಷ್ಣು ಮಹೇಶ್ವರರು ಮಾತ್ರ ಆರಾಧ್ಯ ದೈವಗಳೆನಿಸಿಕೊಂಡರು. ಅದ್ವೈತಿಗಳು ಈ ಉಭಯದೈವಗಳನ್ನೂ ಸಮಪ್ರಾಧಾನ್ಯದಿಂದ ಒಪ್ಪಿಕೊಂಡದ್ದು ತಾತ್ತ್ವಿಕವಾಗಿ ಕ್ರಮಪ್ರಾಪ್ತವಾಗಿಯೇ ಇದೆ. ದಕ್ಷಿಣದೇಶದಲ್ಲಿ ಶೈವಧರ್ಮ ವೈಷ್ಣವಧರ್ಮಕ್ಕಿಂತ ಹೆಚ್ಚು ಪ್ರಾಚೀನವೂ ವ್ಯಾಪಕವೂ ಆಗಿದ್ದಿತು. ಆದ್ದರಿಂದ ಮಧ್ವರಾಮಾನುಜರು ವೈಷ್ಣವ ಧರ್ಮವನ್ನು ಪ್ರಚಾರ ಮಾಡುವುದಕ್ಕೆ ಮುಂಚೆ ಅದ್ವೈತಿಗಳಲ್ಲಿ ಶೈವದ ಕಡೆಗೆ ಒಲವು ಹೆಚ್ಚಾಗಿದ್ದಂತೆ ಕಂಡುಬರುತ್ತದೆ; (ಕನ್ನಡ ನಾಡಿನಲ್ಲಿ ಕೂಡ) ಶೈವ ಬ್ರಾಹ್ಮಣರ ಪಂಗಡ ಪ್ರಮುಖವಾಗಿದ್ದಿತು. ಆದರೆ, ಭಾಗವತ ಧರ್ಮವನ್ನು ನಿರಾಕರಿಸಿದ ಹಾಗೆ ಕಂಡುಬರುವುದಿಲ್ಲ. ೧೩ನೆಯ ಶತಮಾನದಲ್ಲಿ ವೈಷ್ಣವ ಧರ್ಮ ಪ್ರಾಬಲ್ಯಕ್ಕೆ

**ಭಾಗವತ ಧರ್ಮ :** ತಿಮ್ಮಪ್ಪದಾಸರ ವಂಶಸ್ಥರ ಸಂಬಂಧಿಗಳು ಒಬ್ಬಿಬ್ಬರು ತಾವು 'ಭಾಗವತ ಸಂಪ್ರದಾಯ'ದವರು ಎಂದು ಹೇಳಿಕೊಳ್ಳುವವರು ಇದ್ದಾರೆ; ಆದರೆ ದಾಸರ ನೇರಸಂತತಿಯವರು ಯಾರೂ ಆ ಸಂಪ್ರದಾಯಕ್ಕೆ ಸೇರಿದವರಿಲ್ಲ. ಹೀಗಿದ್ದರೂ, ದಾಸರ ಈ ಪೂಜಾವಿಧಾನ ಕೀರ್ತನೆಗಳಲ್ಲಿಯೂ ಇನ್ನು ಕೆಲವು ಕೃತಿಗಳಲ್ಲಿಯೂ ಭಾಗವತ ಧರ್ಮದ ಕೆಲವು ಲಕ್ಷಣಗಳು ಕಂಡುಬರುತ್ತವೆ. ಇಲ್ಲಿನ ಕೀರ್ತನೆಗಳಲ್ಲಂತೂ ಅದ್ವೈತ ಸಿದ್ಧಾಂತದ ಪ್ರಿಪಾದನೆಯೊಂದಿಗೆ ಆ ಲಕ್ಷಣಗಳು ಹಾಲು ನೀರಿನಂತೆ ಬೆರೆತುಕೊಂಡಿರುವಂತೆ ತೋರುತ್ತದೆ; ಇದೊಂದು ವಿಶೇಷ. ತಿಮ್ಮಪ್ಪದಾಸರ ಎಲ್ಲ ಕೃತಿಗಳೂ ಪ್ರಕಟಗೊಂಡು, ಅವುಗಳನ್ನು ವ್ಯಾಪಕವಾಗಿ ಅಭ್ಯಾಸ ಮಾಡುವವರೆಗೆ ಈ ಬಗೆಗೆ ಸಮಗ್ರವಾದ ಸಮೀಕ್ಷೆ ನಡಸುವುದು ಸಾಧ್ಯವಾಗದು. ಇಲ್ಲಿನ ವಿಶ್ಲೇಷಣೆ ಪ್ರಧಾನವಾಗಿ ಇಲ್ಲಿನ ಕೀರ್ತನೆಗಳನ್ನೂ, ಇತರ ಕೆಲವು ಕೀರ್ತನೆಗಳ ಬಹುಸ್ಥೂಲ ಪರಿಶೀಲನೆಯನ್ನೂ ಅವಲಂಬಿಸಿದೆ. ಮೊದಲು ಭಾಗವತ ಧರ್ಮದ ಸ್ವರೂಪವನ್ನು ಸ್ಥೂಲವಾಗಿ ತಿಳಿಸಬೇಕಾದ್ದು ಅಗತ್ಯ.

ಭಾಗವತ ಧರ್ಮವನ್ನು ಪ್ರತಿಪಾದಿಸುವ ಗ್ರಂಥಗಳು ಮುಖ್ಯವಾಗಿ ಇವು: ಮಹಾಭಾರತದ ಶಾಂತಿಪರ್ವದ ನಾರಾಯಣೀಯ ಭಾಗ, ಭಗವದ್ಗೀತೆ, ಭಾಗವತ ಪುರಾಣ, ವಿಷ್ಣುಪುರಾಣ, ಮತ್ತು ಪಾಂದರಾತ್ರಾದಿ ವೈಷ್ಣವಾಗಮಗಳು. ಈ ಗ್ರಂಥಗಳ ಆಧಾರದ ಮೇಲೆ, (ವಿಶೇಷವಾಗಿ ಪಾಂಚರಾತ್ರಾಗಮಾದಿ ವೈಷ್ಣವ ಗ್ರಂಥಗಳನ್ನು ಆಧರಿಸಿ), ಶ್ರೀ ರಾಮಾನುಜಾಚಾರ್ಯರೂ ಶ್ರೀ ಮಧ್ವಾಚಾರ್ಯರೂ ತಮ್ಮ ತಮ್ಮ ದ್ವೈತ ವಿಶಿಷ್ಟಾದ್ವೈತ ಸಿದ್ಧಾಂತಗಳಿಗೆ ಅನುಗುಣವಾಗಿ ಭಾಗವತ ಧರ್ಮವನ್ನು ಅಳವಡಿಸಿಕೊಂಡು ಪ್ರತಿಪಾದಿಸಿರುತ್ತಾರೆ. ಇವರಿಗಿಂತಲೂ ಪ್ರಾಚೀನರಾದ ಶ್ರೀ ಶಂಕರಾಚಾರ್ಯರು ಕೂಡ ಭಾಗವತ ಧರ್ಮದ ವಿವೇಚನೆಯನ್ನು ಮಾಡಿ, "ಭಗವಾನೇವೈಕೋ ವಾಸುದೇವೋ ನಿರಞ್ಜನ ಜ್ಞಾನ ಸ್ವರೂಪಃ ಪರಮಾರ್ಥ ತತ್ತ್ವಮ್" ಎಂದು ತಿಳಿಸಿ, ಆ ಮತವು ಅದ್ವೈತಕ್ಕೆ ಅವಿರುದ್ಧವಾದುದೆಂಬ ಅಭಿಪ್ರಾಯವನ್ನು ಮುಂದಿಟ್ಟಿರುತ್ತಾರೆ. ಶಂಕರರು 'ವಾಸುದೇವ' ಶಬ್ದಕ್ಕೆ ಲಕ್ಷ್ಯ ಹರಿಸಿದ್ದರೆ, ಮಧ್ವರಾಮಾನುಜರು 'ಹರಿ–ನಾರಾಯಣ–ವಿಷ್ಣು' ಈ ಭಗವದ್ವಾಚಕಗಳಿಗೆ ಪ್ರಾಧಾನ್ಯ ಕೊಟ್ಟಿರುತ್ತಾರೆ. ವಾಚಕ ಯಾವುದಾದರೂ ವಾಚ್ಯ ಪರಮಾತ್ಮನೆನಿಸಿಕೊಂಡ ಆ ಭಗವಂತನೇ. ಆದ್ದರಿಂದ, ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು ತಮ್ಮ 'ಭಾಗವತ ಸಂಪ್ರದಾಯ' ಎಂಬ ಅಮೂಲ್ಯ ಗ್ರಂಥದಲ್ಲಿ (ಪು.೧೪೫) ಅಪ್ಪಣೆ ಕೊಡಿಸಿರುವಂತೆ,

ಸರ್ವದೇವತಾ ಸಮದೃಷ್ಟಿ – ಅದರಲ್ಲಿ ವಿಶೇಷವಾಗಿ, ಹರಿಹರಾಭೇದ ದೃಷ್ಟಿ – ಈ ಭಾಗವತ ಧರ್ಮದ – ಭಾಗವತ ಸಂಪ್ರದಾಯದ – ಪ್ರಧಾನ ಲಕ್ಷಣ ಎನ್ನುವುದಕ್ಕೆ ಯಾವ ಪ್ರತ್ಯವಾಯವೂ ಇರದು. ಇಂದಿಗೂ, ಕೆಲವು ವಿಶಿಷ್ಟ ವೈಷ್ಣವಾಚರಣೆಗಳನ್ನು ಅನುಸರಿಸುವ, ತಾವು ಭಾಗವತ ಸಂಪ್ರದಾಯದವರು ಎಂದು ಹೇಳಿಕೊಳ್ಳುವ ಪಂಗಡದವರು ಕೂಡ, ಸ್ಮಾರ್ತ ಅದ್ವೈತಿಗಳು ಎಂಬ ಅಂಶ ಗಮನಾರ್ಹ.*

ಕನ್ನಡ ಸಾಹಿತ್ಯದಿಂದ ದೃಷ್ಟಾಂತಗಳನ್ನು ತೆಗೆದು ಹೇಳುವುದಾದರೆ, 'ಜಗನ್ನಾಥ ವಿಜಯ'ದ ರುದ್ರಭಟ್ಟ, ಕನ್ನಡ ಭಾರತದ ಕುಮಾರವ್ಯಾಸ, ಕನ್ನಡ ಭಾಗವತದ ನಿತ್ಯಾತ್ಮ ಶುಕಯೋಗಿ, – ಇವರುಗಳು ಸ್ಮಾರ್ತ ಭಾಗವತರಾಗಿದ್ದರು. ಅವರ ಕಾವ್ಯಗಳಲ್ಲಿ ಉತ್ಕಟವಾದ ವೈಷ್ಣವಭಕ್ತಿ ಕಂಡುಬರುತ್ತದೆ. ಪುರಂದರದಾಸರೇ ಮೊದಲಾದ ಹರಿದಾಸರ ರಚನೆಗಳಲ್ಲಿ, ಪುರಾಣಗಳಲ್ಲಿ ಹೇಳಿರುವಂತೆ, ಶಿವನನ್ನು 'ವಿಷ್ಣುಮಿತ್ರ' ಎಂದು ಎಣಿಸಿರುವುದರ ಜೊತೆಗೆ, 'ವಿಷ್ಣುಭಕ್ತ' ಎಂದು ಹೇಳರುವುದೂ ಕಂಡುಬರುತ್ತದೆ. ("ಕೊರಳಲಿ ಭಸ್ಮರುದ್ರಾಕ್ಷಿಯ ಧರಿಸಿದ ಪರಮವೈಷ್ಣವನು ನೀನೆ" –ಪುರಂದರದಾಸರು). ಹರಿಹರ ಸಾಮ್ಯದೃಷ್ಟಿ ಎಲ್ಲಿಯೂ ಕಂಡುಬರುವುದಿಲ್ಲ. ವಿಶಾಲಾರ್ಥದಲ್ಲಿ ದ್ವೈತಿಗಳ ವೈಷ್ಣವ ಧರ್ಮವನ್ನೂ ಭಾಗವತ ಧರ್ಮ ಎಂದು ಪರಿಗಣಿಸುವುದು ತಪ್ಪಲ್ಲ. ಆದರೆ, ಅದೊಂದೇ ಭಾಗವತ ಧರ್ಮ ಎಂದೆಣಿಸುವುದಾಗಲಿ, ಅದನ್ನು ಅದ್ವೈತಿಗಳ ಭಾಗವತ ಧರ್ಮದೊಂದಿಗೆ ಸಮೀಕರಿಸುವುದಾಗಲಿ, ಸರಿಯಲ್ಲ. ಆದ್ದರಿಂದ, 'ಭಾಗವತ ಧರ್ಮ' ಅಥವಾ 'ಭಾಗವತ ಸಂಪ್ರದಾಯ' ಎಂಬ ಪದವನ್ನು ಯಾವ ತಾರತಮ್ಯದೃಷ್ಟಿಯೂ ಇಲ್ಲದೆ, ಕೇವಲ ವಿಚಾರ ಸೌಕರ್ಯ ದೃಷ್ಟಿಯಿಂದ, ಅದ್ವೈತಿಗಳ ಭಾಗವತ ಧರ್ಮಕ್ಕೆ ಅನ್ವಯಿಸುವುದು ಮೇಲು. ಇದಕ್ಕೆ ರೂಢಿಯ ಬೆಂಬಲವೂ ಇದೆ.

---

* ವಸ್ತುಸ್ಥಿತಿ ಹೀಗಿರುವಲ್ಲಿ, ಈ ಹರಿಹರಾಭೇದದೃಷ್ಟಿಯ ಭಾಗವತ ಧರ್ಮ ಎನ್ನುವುದು ಸಾಮಾನ್ಯವಾಗಿ ರೂಢಿಯಲ್ಲಿರುವ ಹೇಳಿಕೆ ಎಂದೂ, ನಿಜವಾದ ಸಮನ್ವಯ ಕಂಡು ಬರುವುದು ದ್ವೈತಸಿದ್ಧಾಂತದ ವೈಷ್ಣವ ಮತದಲ್ಲಿ ಎಂದೂ, ಕರ್ಣಾಟಕದ ಹರಿದಾಸ ಪಂಥವೆ ಅದರ ಅಂತಿಮ ಅಭಿವ್ಯಕ್ತಿಯೆಂದೂ ಒಬ್ಬರು ವಿದ್ವಾಂಸರು ಈಚೆಗೆ ವ್ಯಕ್ತಪಡಿಸಿರುವ ಅಭಿಪ್ರಾಯ ಸರಿಯಲ್ಲವೆಂದು ತೋರುತ್ತದೆ.[೨] ಏಕೆಂದರೆ, ದ್ವೈತ ಸಂಪ್ರದಾಯದ ರೀತ್ಯಾ ವಿಷ್ಣು ಶಿವ ಇತ್ಯಾದಿ ದೇವತೆಗಳಲ್ಲಿ ತಾರತಮ್ಯ ಪರಿಗಣನೆ (hierarchical assignment of positions) ಕಂಡುಬರುತ್ತದೆಯೇ ಹೊರತು, ಹರಿಹರ ಸಾಮ್ಯವಾಗಲಿ,ಸರ್ವದೇವತಾ ಸಮನ್ವಯ ದೃಷ್ಟಿಯಾಗಲಿ ಕಂಡು ಬರುವುದಿಲ್ಲ.

ಬಂದಮೇಲೆ, ಅದ್ವೈತಿಗಳ ಶೈವನಿಷ್ಠೆ ಕುಗ್ಗಿ ವೈಷ್ಣವ ನಿಷ್ಠೆಗೆ ಎಡೆಗೊಟ್ಟಂತೆ ಕಂಡುಬರುತ್ತದೆ. ಈ ಬೆಳವಣಿಗೆಯಲ್ಲಿ, ಬಹು ಪ್ರಾಚೀನ ಕಾಲದಲ್ಲಿಯೇ, ಶೈವನಿಷ್ಠೆಗೂ ವೈಷ್ಣವನಿಷ್ಠೆಗೂ ತಾಕಲಾಟ ಬಂದ ಎಡೆ ಕಟ್ಟಿನಲ್ಲಿ – ಎರಡಕ್ಕೂ ಮನ್ನಣೆ ಕೊಡುವ 'ಹರಿಹರ ಕಲ್ಪನೆ' ಪ್ರಾದುರ್ಭವಿಸಿರಬೇಕು. ಚಾಲುಕ್ಯರು ಶೈವ ವೈಷ್ಣವ ಸಮನ್ವಯ ಸಾಧಕರಾಗಿದ್ದರು; ಅವರು ಕಟ್ಟಿಸಿದ ಗುಹಾಂತರ್ದೇವಾಲಯಗಳಲ್ಲಿ ತ್ರಿಮೂರ್ತಿ ವಿಗ್ರಹ ಹಾಗೂ ಹರಿಹರ ವಿಗ್ರಹಗಳು ಕಂಡುಬಂದಿವೆ. ಅದ್ವೈತಕ್ಕೆ ಅವಿರೋಧಿಯಾದ ಪುರಾತನ ಭಾಗವತ ಧರ್ಮದ ಚೌಕಟ್ಟಿಗೆ ಈ ಹರಿಹರಾಭೇದ ಕಲ್ಪನೆ ಒಪ್ಪಾದದ್ದರಿಂದ, ಇದನ್ನು ಪ್ರಧಾನ ಲಕ್ಷಣವಾಗಿ ಉಳ್ಳ 'ಭಾಗವತ ಧರ್ಮ ಪ್ರಭೇದ'ವೊಂದು ರೂಪಗೊಂಡಂತೆ ಕಂಡುಬರುತ್ತದೆ. ವೀರಶೈವ ಧರ್ಮ ಪ್ರಾಬಲ್ಯಕ್ಕೆ ಬಂದ ಕಾಲದಲ್ಲಿ ಅದು ಸಹಜವಾಗಿಯೆ ವೈಷ್ಣವ ವಿರೋಧಿಯಾಗಿತ್ತು; ಇತ್ತ, ಮಧ್ವಮತ 'ಹರಿಸರ್ವೋತ್ತಮತ್ವ'ವನ್ನು ಎತ್ತಿಹಿಡಿಯುತ್ತಿತ್ತು. ಈ ಎರಡು ಪಂಥಗಳಲ್ಲಿಯೂ ವೀರನಿಷ್ಠೆಗೆ ಪ್ರಾಧಾನ್ಯ. ಈ ಎರಡು ವೀರನಿಷ್ಠೆಗಳ ನಡುವೆ ಮಧ್ಯಮಾರ್ಗವನ್ನು ಹಿಡಿದು, ಸಮನ್ವಯ ದೃಷ್ಟಿಯನ್ನು ಬೆಳಸಿಕೊಳ್ಳುವ ಪ್ರವೃತ್ತಿಯನ್ನು ಒಂದು ಐತಿಹಾಸಿಕ ಬೆಳವಣಿಗೆಯೆಂದೇ ಪರಿಗಣಿಸಬೇಕಾಗುತ್ತದೆ. ಶಂಕರಾಚಾರ್ಯರಲ್ಲಿಯೇ ಈ ದೃಷ್ಟಿಯನ್ನು ಗುರುತಿಸಬಹುದು. ಗುಪ್ತವಂಶದವರು ಪರಮಭಾಗವತರಾಗಿದ್ದರೆಂದು ತಿಳಿದುಬರುತ್ತದೆ. ಶಿವವಿಷ್ಣುದೇವಾಲಯಗಳೆರಡನ್ನೂ ಕಟ್ಟಿಸಿ, ಉಭಯ ದೇವತೆಗಳಿಗೂ ಸಮಪ್ರಾಧಾನ್ಯವನ್ನು ರಾಜರು ಕೊಟ್ಟಿರುವುದಕ್ಕೆ ರಾಷ್ಟ್ರಕೂಟರ ಕಾಲದ ಶಾಸನಗಳಲ್ಲಿಯೂ ಆಧಾರವಿದೆ. ಹೊಯ್ಸಳರ ಕಾಲದಲ್ಲಿ, ೨ನೆಯ ನಾರಸಿಂಹ ದಂಡನಾಯಕ ಪೋಲಾಳ್ವನು ಹರಿಹರ ಕ್ಷೇತ್ರದಲ್ಲಿ ಹರಿಹರ ದೇವಸ್ಥಾನವನ್ನು ಕಟ್ಟಿಸಿ ಗ್ರಾಮವನ್ನು ದತ್ತಿಯಾಗಿ ಬಿಟ್ಟಂತೆ ದಾವಣಗೆರೆಯ ಒಂದು ಶಾಸನದಲ್ಲಿ ಹೇಳಿದೆ (ಕ್ರಿ.ಶ.೧೨೨೪). ಇದರ ಹರಿಹರ ಸ್ತೋತ್ರ ಪದ್ಯಗಳು ಗಮನಾರ್ಹವಾಗಿವೆ.[೧೧] (ನೋಡಿ: ಆರ್.ನರಸಿಂಹಾಚಾರ್ಯರ 'ಶಾಸನ ಪದ್ಯ ಮಂಜರಿ', ಪು.೨೩೦). ಈ ಸಮನ್ವಯ ದೃಷ್ಟಿ ಇನ್ನೂ ವಿಶಾಲವಾಗಿರುವುದು, 'ಯಂ ಶೈವಾಸ್ಸಮುಪಾಸತೇ ಶಿವ ಇತಿ' ಎಂಬ ಪ್ರಸಿದ್ಧ ಶಾಸನ ಪದ್ಯದಲ್ಲಿ ಕಂಡುಬರುತ್ತದೆ. ಈ ಬೆಳವಣಿಗೆಯನ್ನು ಗಮನಿಸಿದರೆ, ನಿಜವಾದ ಭಾಗವತಧರ್ಮ ಈ ಸರ್ವದೇವತಾ ಸಮನ್ವಯ ದೃಷ್ಟಿಯ ಭೂಮಿಕೆಯ ಮೇಲೆ ನಿಂತಿದ್ದು, ಪ್ರಧಾನವಾಗಿ ವೈಷ್ಣವಮತವಾಗಿ ಬೆಳೆದು ಬಂದಿತು ಎಂದು ಕಂಡುಬರುತ್ತದೆ.

ಪು. ೯೮–೯೯). ... ಭಾಗವತರು 'ಓಂನಮೋ ಭಗವತೆ ವಾಸುದೇವಾಯ' ಎಂಬ ದ್ವಾದಶಾಕ್ಷರೀ ಮಂತ್ರವನ್ನೂ ಪಾಂಚರಾತ್ರರು 'ಓಂ ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರೀ ಮಂತ್ರವನ್ನೂ ಪಠಿಸುವರೆಂದು ಪಿ.ಟಿ.ಶ್ರೀನಿವಾಸಯ್ಯಂಗಾರ್ ಅವರು ಹೇಳಿರುವರು."(Outlines of Indian Philosophy ಎಂಬ ಗ್ರಂಥದ ಈ ಆಧಾರವನ್ನು ಡಾ॥ ಎಸ್.ಸಿ.ನಂದೀಮಠ ಅವರು 'ಕನ್ನಡ ನಾಡಿನ ಚರಿತ್ರೆ'–೨, ಪು.೭೬ರಲ್ಲಿ ಉಲ್ಲೇಖಿಸಿರುವರು.)

ತಿಮ್ಮಪ್ಪದಾಸರು ತಮ್ಮ 'ಪೀಠಸಮರ್ಪಣೆ'ಯ ಕೀರ್ತನೆಯಲ್ಲಿ, "ಪುರುಷ ಸೂಕ್ತಿದಿಂದೆನ್ನ ಶರೀರದೊಳ್ ಪೂಜಿಪ ವರಬಿಂಬದೊಳು ನ್ಯಾಸಗೈದಿಹೆನು ಪರಮ ಮಂತ್ರಾಧಿದೇವತೆಗಳನೆಂಟು; **ಪನ್ನೆರಡಕ್ಕರದ ವಿದ್ಯೆಯಿಂದಲು** ಜಗದೀಶ" ಎಂಬಲ್ಲಿ ಗುರೂಪದಿಷ್ಟ ಮಂತ್ರವನ್ನೇ ಸೂಚಿಸಿದ್ದಾರೆ. ಇಲ್ಲಿ, 'ಪನ್ನೆರಡಕ್ಕರದ ವಿದ್ಯೆ' ಎಂದರೆ ಮೇಲೆ ಹೇಳಿರುವ 'ದ್ವಾದಶಾಕ್ಷರಿ'ಯೆ ಎಂಬುದು ಸ್ಪಷ್ಟ.*

(೩) "ಜಪೇತ್ ಅಷ್ಟೋತ್ತರ ಶತಮ್" ಎಂಬುದು ಭಾಗವತದ ಇನ್ನೊಂದು ಸಾಧನಾ ಕ್ರಮ (೮–೧೬, ಶ್ಲೋ. ೪೨). (ವಿಷ್ಣುಪರವಾದ ಯಾವ ಅಷ್ಟೋತ್ತರ ಎಂಬುದು ಇಲ್ಲಿ ನಿರ್ದಿಷ್ಟವಾದಂತೆ ಕಂಡುಬರುವುದಿಲ್ಲ. ಭಾಗವತ ಧರ್ಮದ ಬೆಳವಣಿಗೆಯಲ್ಲಿ ಭಗವಂತ ವಾಸುದೇವನನ್ನು ವೃಷ್ಣಿವಂಶದ ವಸುದೇವ ಪುತ್ರ ವಾಸುದೇವನೊಂದಿಗೆ ಸಮೀಕರಿಸಿಕೊಂಡಂತೆ ಕಂಡುಬರುವುದರಿಂದ, 'ಕೃಷ್ಣಾಷ್ಟೋತ್ತರ' ಎಂದು ಗ್ರಹಿಸಬಹುದು). ತಿಮ್ಮಪ್ಪದಾಸರ ಪೂಜಾ ವಿಧಾನದ ೧೦೮ ಕೀರ್ತನೆಗಳನ್ನು ಕೃಷ್ಣಾಷ್ಟೋತ್ತರಕ್ಕೆ ಅಳವಡಿಸಿರುವುದು ಗಮನಾರ್ಹ.

(೪) ವಿಷ್ಣು ಪುರಾಣದಲ್ಲಿ, ಕೇಶಿಧ್ವಜನು ಖಾಂಡಿಕ್ಯನೆಂಬವನಿಗೆ ಯೋಗ ಪ್ರಕಾರವನ್ನು ಉಪದೇಶಿಸುವ ಪ್ರಕರಣದಲ್ಲಿ (೬–೭; ಶ್ಲೋ. ೨೭ ರಿಂದ ೯೭), "ಭಗವಂತನ ಮಾನಸ ಪೂಜೆ, ನಿರಾಕಾರ ಧ್ಯಾನ,ಬ್ರಹ್ಮಾತ್ಮೈಕ್ಯ – ಇವುಗಳು ಕ್ರಮವಾಗಿ ಉಕ್ತವಾಗಿವೆ" ಎಂದು ತಿಳಿದುಬರುತ್ತದೆ. ('ಭಾಗವತ ಸಂಪ್ರದಾಯ', ಪು.೧೧೨–೧೧೩). ತಿಮ್ಮಪ್ಪದಾಸರ ಕೀರ್ತನೆಗಳಲ್ಲಿ ಪ್ರತಿಪಾದಿತವಾಗಿರುವುದೂ ಇದೇ ಉಪಾಸನಾ ಕ್ರಮ.

(೫) "ಸ್ಮಾರ್ತರಲ್ಲಿಯೇ ಇದ್ದುಕೊಂಡು ಅದ್ವೈತ ಸಿದ್ಧಾಂತವನ್ನೇ ನಂಬಿ,

---

*"ನ್ಯಾಸಗೈದಿಹೆನು ಪರಮ ಮಂತ್ರಾಧಿದೇವತೆಗಳನು; **ಎಂಟು ಪನ್ನೆರಡಕ್ಕರದ ವಿದ್ಯೆಯಿಂದಲು**" ಎಂದೂ ಅನ್ವಯಮಾಡಬಹುದು... ಆಗ, ಅಷ್ಟಾಕ್ಷರೀ ಮಂತ್ರದ ವಿವಕ್ಷೆಯೂ ಹೊರಡುತ್ತದೆ. ಭಾಗವತರು ಈ ಇರಡೂ ಮಂತ್ರಗಳನ್ನು ಪಠಿಸಬಹುದು ಅಥವಾ ಪಠಿಸುತ್ತಿದ್ದರು ಎಂದಾಗುತ್ತದೆ.

**ತಿಮ್ಮಪ್ಪದಾಸರ ಭಾಗವತದೃಷ್ಟಿ :** ತಿಮ್ಮಪ್ಪದಾಸರು 'ಭಾಗವತ ಸಂಪ್ರದಾಯ'ದ ವಿಶಿಷ್ಟ ಸ್ಮಾರ್ತಸಮಾಜಕ್ಕೆ ಸೇರಿದವರಲ್ಲವೆಂಬ ಸಂಗತಿಯನ್ನು ಈ ಹಿಂದೆಯೆ ಸೂಚಿಸಿದೆ. ಹಾಗಿದ್ದರೂ ಕೂಡ, ಮೂಲ ಭಾಗವತ ಧರ್ಮದ ಕೆಲವು ಲಕ್ಷಣಗಳು ಅವರ ಕೃತಿಗಳಲ್ಲಿ ಗಮನಾರ್ಹವಾಗಿ ಗೋಚರಕ್ಕೆ ಬರುತ್ತವೆ. ಅವು ಪರಿಶೀಲನಾರ್ಹ.*

(೧) (ನಾವು ಗ್ರಹಿಸಿರುವಂತೆ) ತಿಮ್ಮಪ್ಪದಾಸರ ಪಿತಾಮಹರು ಸಂನ್ಯಾಸಾಶ್ರಮವನ್ನು ಸ್ವೀಕರಿಸಿದ ಮೇಲೆ 'ವಾಸುದೇವ' ಎಂಬ ಹೆಸರನ್ನು ತಳೆದಿರಬೇಕು. "ನಿರ್ವಿಶೇಷವಾದ ಪರಮಾರ್ಥ ತತ್ತ್ವವೇ ವಾಸುದೇವನು ಎಂದು ಭಾಗವತಮತದವರು ಒಪ್ಪಿರುವಂತೆಯೇ ಶಂಕರಾಚಾರ್ಯರೂ ಒಪ್ಪಿರುತ್ತಾರೆ" ('ಭಾಗವತ ಸಂಪ್ರದಾಯ', ಪು.೨೨) ಯಾದ್ದರಿಂದ, ಮೂಲತಃ ಭಾಗವತರು ವಾಸುದೇವೋಪಾಸಕರಾಗಿರುವುದರಿಂದ, ವಾಸುದೇವಾರ್ಯರು ಆ ಪರಮಾರ್ಥ ತತ್ತ್ವಸೂಚಕವಾಗಿಯೇ ಈ ಹೆಸರನ್ನು ಧರಿಸಿರಬಹುದು. ಈ ಗ್ರಹಿಕೆ ಸರಿಯಾಗುವ ಪಕ್ಷಕ್ಕೆ, ಭಾಗವತ ಮತವು ವಂಶಜರೂ ಶಿಷ್ಯರೂ ಆದ ತಿಮ್ಮಪ್ಪದಾಸರ ಕುಲಧರ್ಮವಾಗುತ್ತದೆ.

(ಈ ಸಂದರ್ಭದಲ್ಲಿ, ವಾಸುದೇವಾರ್ಯರ ವಂಶದವರು ಬಹು ಕಾಲದವರೆಗೆ ನಡಸಿಕೊಂಡುಬಂದ ಗುರುಗಳ ಆರಾಧನೆಯಲ್ಲಿ ಅನುಸರಿಸುತ್ತಿದ್ದ ತರ್ಪಣವಿಧಿಯಲ್ಲಿ 'ನಾರಾಯಣಾಯ ವಿದ್ಮಹೇ। ವಾಸುದೇವಾಯ ಧೀಮಹಿ। ತನ್ನೋ ವಿಷ್ಣುಃ ಪ್ರಚೋದಯಾತ್' ಎಂಬ ಮಂತ್ರವಿರುವುದೂ ಗಮನಾರ್ಹ) [ಇದು 'ಗ' ಹಸ್ತಪ್ರತಿಯ ಮೊದಲ ಹಾಳೆಯಲ್ಲಿ ಲಿಖಿತವಾಗಿದೆ.]

(೨) ವಿಷ್ಣುಪುರಾಣದ ಪ್ರಕಾರ (ವಿ.ಪು.ಧ್ರುವೋಪಾಖ್ಯಾನ: ೧–೧೧), "ಭಗವದ್ಭಕ್ತನು ತನ್ಮಯವಾದ ಏಕಾಗ್ರಚಿತ್ತದಿಂದ ದ್ವಾದಶಾಕ್ಷರಿಯಾದ ವಾಸುದೇವ ಮಂತ್ರವನ್ನು ಜಪಿಸಬೇಕು." ಭಾಗವತದ ನಿರ್ದೇಶವಾದರೂ ಇದೇ: "ಅರ್ಚೇತ್ ದ್ವಾದಶಾಕ್ಷರ ವಿದ್ಯಯಾ" (೮–೧೬; ಶ್ಲೋ.೩೯). ಬೋಧಾಯನ ಪ್ರೋಕ್ತ 'ವಿಷ್ಣುಕಲ್ಪ' ಎಂಬ ಪೂಜಾ ವಿಧಿಯ ಕೊನೆಯಲ್ಲಿ "ಓಂ ನಮೋ ಭಗವತೇ ವಾಸುದೇವಾಯ ಇತಿ ದ್ವಾದಶಾಕ್ಷರಂ ಜಪಿತ್ವಾ ಅಶ್ವಮೇಧ ಫಲಂ ಆಪ್ನೋತಿ ಸಕೃದಿಷ್ಟ್ವಾ ಸನಾತನಮ್" ಎಂದಿದೆ. "ಇದು ವಾಸುದೇವ ಭಗವಂತನನ್ನು ಆರಾಧನೆ ಮಾಡುವವರಿಗಾಗಿಯೇ ಬರೆದಿದೆ ಎಂಬುದು ಸ್ಪಷ್ಟ." ('ಭಾಗವತ ಸಂಪ್ರದಾಯ',

---

* ಈ ಪ್ರಕರಣದ ಅನೇಕ ಅಂಶಗಳನ್ನು 'ಭಾಗವತ ಸಂಪ್ರದಾಯ' ಎಂಬ ಗ್ರಂಥದಿಂದ ಸ್ವೀಕರಿಸಲಾಗಿದೆ.

(ಕೀ. ೨೩ರ ಕಡೆಯ ೨ ಕಂದಪದ್ಯಗಳನ್ನು ನೋಡಿ). ಹರಿಹಾರಾಭೇದ ದೃಷ್ಟಿ ಅನೇಕ ಕೀರ್ತನೆಗಳಲ್ಲಿ (೪೭–೪, ೫; ೬೬–೫, ೭೨–೨, ೭೩–೭) ಕಂಡುಬರುತ್ತದೆ. ಗುರು ನೀಲಕಂಠಾರ್ಯರನ್ನು 'ಹರಿಹರಾತ್ಮಕ' ಎಂದು ಉಲ್ಲೇಖಿಸಿದ್ದಾರೆ. 'ಶರಣು ಶರಣು' ಎಂಬ ಗುರು ಪರಂಪರಾಸ್ತುತಿ ರೂಪದ ಒಂದು ಕೀರ್ತನೆಯಲ್ಲಿ 'ಶರಣು ಹರಿಹರ ಭಕ್ತರೆ, ಮಹಾತ್ಮರೆ' ಎಂದು ಅವರಲ್ಲಿ ವಿಶೇಷ ನಿಷ್ಠೆ ತೋರಿಸಿದ್ದಾರೆ. ಇಲ್ಲಿನ ಕೀರ್ತನೆಗಳ ಸ್ತೋತ್ರ ಭಾಗದಲ್ಲಿ ವೆಂಕಟೇಶ ಸ್ತೋತ್ರ ಮತ್ತು ಶಿವಗಂಗೆಯ ಗಂಗಾಧರ ಸ್ತೋತ್ರ ಅನುಗೂಡಿಬಂದಿವೆ.

(೬) ಎಲ್ಲಕ್ಕಿಂತ ಮಿಗಿಲಾಗಿ, ಭಾಗವತ ಧರ್ಮಾಚರಣೆಯಲ್ಲಿ ಭಗವದ್ ಭಕ್ತಿ ಮುಖ್ಯವಾದುದು. ಆದ್ದರಿಂದ, ದ್ವೈತಾದ್ವೈತ ವಿಶಿಷ್ಟಾದ್ವೈತಾದಿ ಯಾವುದೇ ಸಿದ್ಧಾಂತದ ಅನುಯಾಯಿಗಳಾದರೂ ಸರಿಯೆ, ಭಗವದ್ ಭಕ್ತರೆಲ್ಲ ಭಾಗವತರು. 'ಹರಿ' ಅಥವಾ 'ವೆಂಕಟರಮಣ' ರೂಪದ ಭಗವಂತನನ್ನು ತಮ್ಮ ಇಷ್ಟ ದೈವವಾಗಿ ಉಳ್ಳ ತಿಮ್ಮಪ್ಪದಾಸರು ತಮ್ಮ ದೈವಕ್ಕೆ ಅರ್ಪಿಸಿರುವ ಭಕ್ತಿ ಕುಸುಮ ಮಾಲೆಗೆ ಅದ್ವೈತ ಸಿದ್ಧಾಂತ ಸೂತ್ರಪ್ರಾಯವಾಗಿದೆ; ಪುರಂದರದಾಸಾದಿ ಹರಿದಾಸರ ಕೀರ್ತನೆಗಳಿಗೆ ದ್ವೈತ ಸಿದ್ಧಾಂತ ಸೂತ್ರಪ್ರಾಯ. ಇವರೂ ಹರಿದಾಸರು; ಅವರೂ ಹರಿದಾಸರು.

### ೬. ತಿಮ್ಮಪ್ಪದಾಸರ ಕೃತಿಗಳು

ತಿಮ್ಮಪ್ಪದಾಸರ ವಂಶಜರ ಬಳಿ ಇದ್ದ ಹಸ್ತಪ್ರತಿಗಳನ್ನೆಲ್ಲ ಸಂಗ್ರಹಿಸಿ, ಜೋಡಿಸಿಟ್ಟು, ಕೂಲಂಕೂಷವಾಗಿ ಪರಿಶೋಧನೆ ಮಾಡಿದ ಮೇಲೆ* – ಈ ಕೆಳಗೆ ಹೆಸರಿಸಿರುವ ಕೃತಿಗಳು ತಿಮ್ಮಪ್ಪದಾಸರಿಂದ ರಚಿತವಾದವು ಎಂದು ತಿಳಿದುಬಂದಿದೆ:

(೧) ಪೂಜಾ ವಿಧಾನ ಕೀರ್ತನೆಗಳು (೧೦೮); (೨) ಗುರುಸ್ತುತಿಪರ ಕೀರ್ತನೆಗಳು; (೩)ಸದ್ಗುರು ಬೋಧಾನುವಾದ ಸುಧೆ (ಕೀರ್ತನೆಗಳು); (೪)ಆತ್ಮ ನಿವೇದನ, ಮುಂತಾದ ಸಂಕೀರ್ಣ ವಿಷಯದ ಕೀರ್ತನೆಗಳು; (೫)ಶ್ರೀಕೃಷ್ಣ

---

* ಈ ಹಸ್ತಪ್ರತಿಗಳೆಲ್ಲ ಈ ಸಂಪಾದಕನ ವಶದಲ್ಲಿವೆ. ಇವುಗಳನ್ನೆಲ್ಲ ಪರಿಶೀಲಿಸಿ, ತಿಮ್ಮಪ್ಪದಾಸರ ಕೃತಿಗಳನ್ನುಳ್ಳ ಹಸ್ತಪ್ರತಿಗಳನ್ನು ಗುರುತಿಸಿ ಪ್ರತ್ಯೇಕಿಸುವ ಕಾರ್ಯದಲ್ಲಿ ನನ್ನ ವಿದ್ಯಾರ್ಥಿ ಮಿತ್ರರಾದ ಶ್ರೀ ಕೆ.ಆರ್.ಗಣೇಶ್, ಎಂ.ಎ., ಶ್ರೀ ವಿ.ವೆಂಕಟರಾವ್, ಎಂ.ಎ., ಶ್ರೀ ಬಿ.ಎಸ್.ರಾಮಪ್ರಸಾದ್, ಬಿ.ಎ., ಇವರು ಶ್ರಮ ವಹಿಸಿ ಸಹಕರಿಸಿದ್ದಾರೆ. ಇವರ ಸಹಾಯವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ವೈಷ್ಣವಾಚಾರವನ್ನೇ ಇಟ್ಟುಕೊಂಡಿರುವ ಅಥವಾ ವೈಷ್ಣವಾಚಾರಗಳು ಹಲಕೆಲವು ಉಳಿದುಕೊಂಡಿದ್ದರೂ ಪಂಚಾಯತನ ಪೂಜೆಯೇ ಮುಂತಾದವುಗಳನ್ನು ಅನುಸರಿಸುತ್ತ ಕೆಲವು ಶೈವಾಚಾರಗಳನ್ನು ಬೆರೆಯಿಸಿಕೊಂಡಿದ್ದರೂ ಭಾಗವತೈಕಾದಶಿಯ ಆಚರಣೆಯನ್ನು ಪರಂಪರೆಯಿಂದ ನಡೆಯಿಸಿಕೊಂಡು ಬಂದಿರುವ ಭಾಗವತರು ನಮ್ಮಲ್ಲಿ ಈಗಲೂ ಹೇರಳವಾಗಿರುತ್ತಾರೆ" ಎಂದು ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಯವರು ತಮ್ಮ 'ಭಾಗವತ ಸಂಪ್ರದಾಯ' ಗ್ರಂಥದಲ್ಲಿ ಅಪ್ಪಣೆ ಕೊಡಿಸಿರುತ್ತಾರೆ (ಪು.೧೪೨).

ತಿಮ್ಮಪ್ಪದಾಸರ ಪೂಜಾವಿಧಾನ ಕೀರ್ತನೆಗಳಲ್ಲಿ ಅದ್ವೈತ ಸಿದ್ಧಾಂತ ಪ್ರತಿಪಾದನೆ ಸ್ವಯಂವೇದ್ಯವಾಗಿದೆಯಷ್ಟೆ. ಇವರ ಕುಲಾಚಾರದಂತೆ, – ಪ್ರತಿ ನಿತ್ಯ ಭಸ್ಮತ್ರಿಪುಂಡ್ರ ಧಾರಣೆ, ರುದ್ರಾಕ್ಷಿ ಧಾರಣೆ, ಸ್ಮಾರ್ತಪದ್ಧತಿಯ ಶಿವರಾತ್ರಿವ್ರತಾಚರಣೆ, ಲಿಂಗರೂಪದ ಈಶ್ವರಾರ್ಚನೆ, ಇವು ಮುಖ್ಯ ಶೈವಾಚಾರಗಳು; ವಿಶೇಷವಾಗಿ ಶ್ರಾವಣ ಶನಿವಾರಗಳಂದು ಊರ್ಧ್ವತ್ರಿಪುಂಡ್ರಧಾರಣೆ, ವಿಷ್ಣು ಭಗವನ್ನಾಮ ಸಂಕೀರ್ತನೆ (ಭಜನೆ), ಸಾಲಿಗ್ರಾಮಾರ್ಚನೆ – ಇವು ಮುಖ್ಯ ವೈಷ್ಣವಾಚಾರಗಳು. (ಊರ್ಧ್ವತ್ರಿಪುಂಡ್ರ ಎಂದರೆ ನಾಮದಧಾರಣೆ ಶ್ರೀವೈಷ್ಣವ ಲಾಂಛನ.) ಆದರೆ, ದಾಸರ ವಂಶದಲ್ಲಿ ಪರಂಪರೆಯಿಂದ'ಭಾಗವತೈಕಾದಶಿ'ಯ ಆಚರಣೆ ಕಂಡು ಬಂದಿಲ್ಲ. ಸ್ವಲ್ಪ ಸಡಿಲವಾದ ಪದ್ಧತಿಯ 'ಸ್ಮಾರ್ತ ಏಕಾದಶಿ'ಯೆ! ಆದರೆ, ತಿಮ್ಮಪ್ಪದಾಸರು ವೈಯಕ್ತಿಕವಾಗಿಯೋ ಪೂರ್ವ ಪರಂಪರೆಯನ್ನು ಅನುಸರಿಸಿಯೋ, ವೈಷ್ಣವ(?) ಏಕಾದಶಿಯ ಆಚರಣೆಗೆ ವಿಶೇಷ ಪ್ರಾಧಾನ್ಯಕೊಟ್ಟಿದ್ದುದು ಈ ಪದ್ಯದಿಂದಸ್ಪಷ್ಟವಾಗುತ್ತದೆ :–

ಹರಿದಿನದೇಕಾದಶಿಯೊಳು
ಹರಿಯರ್ಚನೆಗೈದು ಪಾಡಿ ಪೊಗಳುತ ಜಾಗರ।
ವಿರುವದಕಾಸ್ಪದ ಕೀರ್ತನೆ
ಬರೆದೋದಲು ಪೊರೆವ ನಮ್ಮ ವೆಂಕಟರಮ[ಣಾ]*

ದಾಸರ ಪಂಚಾಯತನ ನಿಷ್ಠೆಗೆ ಪ್ರಕೃತ ಗ್ರಂಥದಲ್ಲಿಯೇ ನಿದರ್ಶನವಿದೆ.

---

* ಈ ಪದ್ಯ 'ಕ' ಪ್ರತಿಯಲ್ಲಿ ಮಾತ್ರ ಇದೆ.

# ೨. ಕೀರ್ತನಕುಸುಮಾಂಗಲಿ

## ಪೀಠಿಕೆ

**ಕೀರ್ತನೆಗಳ ಕರ್ತೃತ್ವ**

ನಾರಾಯಣದಾಸರು ವಾಗ್ಗೇಯಕಾರ ತಿಮ್ಮಪ್ಪದಾಸರ ಜ್ಯೇಷ್ಠ ಪುತ್ರ. ತಿಮ್ಮಪ್ಪದಾಸರ 'ಪೂಜಾ ವಿಧಾನ ಕೀರ್ತನೆಗಳು'* ಮತ್ತು ಅವರ ಇತರ ಹಲವಾರು ರಚನೆಗಳು ಲಿಖಿತವಾಗಿರುವ ಕಾಗದದ ಹಸ್ತಪ್ರತಿಯಲ್ಲಿ ನಾರಾಯಣದಾಸರ ೩೭ ಕೀರ್ತನೆಗಳು ದೊರಕುತ್ತವೆ. ಸಾಧಾರಣವಾಗಿ ಕೀರ್ತನೆಗಳಲ್ಲಿ ನಾರಾಯಣದಾಸರ ಅಂಕಿತವಿದೆ; ಕೆಲವು ಕೀರ್ತನೆಗಳಲ್ಲಿ 'ದಾಸ' ಎಂದಷ್ಟೇ ಅಂಕಿತವಿರುವುದರಿಂದ ಅವು ತಿಮ್ಮಪ್ಪದಾಸರ ರಚನೆಗಳೋ ಇಲ್ಲವೆ ನಾರಾಯಣದಾಸರವೋ ಎಂಬಸಂದೇಹ ಉಂಟಾಗಬಹುದು. ಆದರೆ, ಹಸ್ತಪ್ರತಿಯ ೭೩ನೆಯ ಹಾಳೆಯ ಹಿಂಬದಿಯಲ್ಲಿ "ಯಿಲ್ಲಿಂದ ಮುಂದಕ್ಕೆ ನಾರಾಯಣದಾಸ ಕೃತ ಕೀರ್ತನಾಃ" ಎಂದು ಸ್ಪಷ್ಟವಾಗಿ ಬರೆದಿರುವುದರಿಂದ ಯಾವ ಸಂದೇಹಕ್ಕೂ ಅವಕಾಶವಿಲ್ಲವೆಂದೇ ಹೇಳಬಹುದು. ಅಲ್ಲದೆ, ತಿಮ್ಮಪ್ಪದಾಸರ ಕೀರ್ತನೆಗಳೂ ನಾರಾಯಣದಾಸರ ಕೀರ್ತನೆಗಳೂ ಅವರವರ ಸ್ವಹಸ್ತಾಕ್ಷರಗಳಲ್ಲಿಯೇ ಲಿಖಿತವಾಗಿರತಕ್ಕವು ಎಂದು ತಿಳಿಯಲು ಅವಕಾಶವಿದ್ದು, ಇಬ್ಬರ ಬರಹಗಳೂ ಮೇಲು ನೋಟಕ್ಕೆ ಒಂದೇ ತೆರನಾಗಿ ಕಂಡರೂ ಅವುಗಳ ನಡುವೆ ಇರುವ ಸ್ಪಷ್ಟವಾದ ಕೆಲವು ವ್ಯತ್ಯಾಸಗಳನ್ನೂ ಗುರುತಿಸಬಹುದು. ಕೀರ್ತನೆಗಳ ವಸ್ತು, ಭಾಷಾಶೈಲಿ, ಇವು ಕೂಡ ಭಿನ್ನವಾಗಿವೆ. 'ನಾರಾಯಣದಾಸ' ಅಥವಾ ಕೇವಲ

---

* ತಿಮ್ಮಪ್ಪದಾಸರ ಪೂಜಾವಿಧಾನ ಕೀರ್ತನೆಗಳು ಈ ಗ್ರಂಥದ ಸಂಪಾದಕನಿಂದ ಸಂಪಾದಿತವಾಗಿ 'ಅರ್ಚನ' ಎಂಬ ಹೆಸರಿನಿಂದ, ಬೆಂಗಳೂರು ವಿಶ್ವವಿದ್ಯಾಲಯದಿಂದ ೧೯೭೧ರಲ್ಲಿ ಪ್ರಕಟವಾಗಿದೆ. ತಿಮ್ಮಪ್ಪದಾಸರ ಜೀವನವೃತ್ತಾಂತವನ್ನು ಆ ಗ್ರಂಥದ ಪೀಠಿಕೆಯಲ್ಲಿ ನಿರೂಪಿಸಿದೆ.

ಬಾಲಲೀಲೆ ಮತ್ತು ಅಕ್ರೂರ ಪ್ರಕರಣ (ಕೀರ್ತನೆಗಳು); (೬)ಜೀವ ಕಾಯ ಸಂವಾದ (ವೈರಾಗ್ಯಪರ ಕೀರ್ತನೆಗಳು ಮತ್ತು ಕಂದಪದ್ಯಗಳು; ಅಸಮಗ್ರ ಕೃತಿ); (೭)ಧ್ರುವ ಚರಿತ್ರೆ (ಸಾಂಗತ್ಯ ಛಂದಸ್ಸಿನ ಕಾವ್ಯ); (೮)ಪರಬ್ರಹ್ಮ ಪ್ರಕಾಶಿಕೆ (ಗದ್ಯ ರೂಪದಲ್ಲಿರುವ ವೇದಾಂತ ವಿಷಯಕ ಪ್ರಕರಣ ಗ್ರಂಥ); (೯)ಭಗವದ್ವಿಲಾಸದಾಟ (ಅಸಮಗ್ರ ಗದ್ಯ ಗ್ರಂಥ).

ಮೇಲ್ಕಂಡಗ್ರಂಥಗಳಲ್ಲದೆ, ಈಗ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಎರಡು ಹಸ್ತಪ್ರತಿಗಳಲ್ಲಿ (K.B. ೨೦೪ ಮತ್ತು K೫೫೪) ತಿಮ್ಮಪ್ಪದಾಸರಿಂದ ರಚಿತವಾದ 'ಭಾಗವತ ಕೀರ್ತನೆಗಳು' ಮತ್ತು ರಾಗ ನಿರ್ದೇಶವುಳ್ಳ ಕಂದ ಭಾಮಿನಿಷಟ್ಪದಿ, ವಾರ್ಧಕಷಟ್ಪದಿ ಈ ಛಂದಸ್ಸುಗಳಲ್ಲಿರುವ 'ಉದ್ಯೋಗಪರ್ವದ ಭಾರತದ ಕಥೆ (ಹ.ವ.ಸೂಚಿಯಲ್ಲಿ ಕೃಷ್ಣ ಸಂಧಾನದ ....ಗಳು' ಎಂದು ಕರೆದಿದೆ) ಇವು ಸೇರಿವೆ.

ಜೀವಂತರಾಗಿದ್ದರು ಎಂದಾಯಿತು. ಈ ಗ್ರಂಥದ ಕೀರ್ತನೆಗಳ ೩೨ನೆಯ ಸಂಖ್ಯೆಯ ಕೀರ್ತನೆಯಲ್ಲಿ (ಶ್ರೀ ಚಾಮುಂಡೇಶ್ವರೀ ಸ್ತುತಿ)–"ನವರಾತ್ರಿಯು ಬಂತೆನ್ನುತ ಜನಗಳು । ತವಕಿಸುತಿಹರಮ್ಮ । ಅವನೀಶಾಧಿಪನ ಸಿಂಹಾಸನವೇರಿಸಿ ನವರಾತ್ರಿಯುತ್ಸವಮಂ ಮಾಡಿಸು ತಾಯೆ" ಎಂದು ನಾರಾಯಣರು ಬೇಡಿಕೊಂಡಿದ್ದಾರೆ; ಮುಂದಿನ ಕೀರ್ತನೆಯಲ್ಲಿಯೆ – "ನಿನ್ನ ಸನ್ನಿಧಿಗೆ ನಾ ಬಂದು ಪ್ರಾರ್ಥಿಸೆ । ಪ್ರಸನ್ನಳಾಗಿ ನೃಪನ । ರನ್ನದ ಸಿಂಹಾಸನವೇರಿಸಿ, ಎನ। ಗುನ್ನ ತೋನ್ನತವಾದಾನಂದವನಿತ್ತೆ" ಎಂದು ದೊರೆಗಳಿಗೆ (ಎಂದರೆ, ಶ್ರೀ ಚಾಮರಾಜ ಒಡೆಯರಿಗೆ) ರಾಜ್ಯಾಭಿಷೇಕವಾದ ಸಂದರ್ಭವನ್ನು ಉಲ್ಲೇಖಿಸಿದ್ದಾರೆ. ಚಾಮರಾಜ ಒಡೆಯರು ಪಟ್ಟಕ್ಕೆ ಬಂದದ್ದು ೧೮೮೧ ರಲ್ಲಿ. ಇನ್ನು ಮುಂದಿನ (೩೪,೩೫,೩೬ ಸಂಖ್ಯೆಯ) ಕೀರ್ತನೆಗಳಲ್ಲಿ ಚಾಮರಾಜ ಒಡೆಯರನ್ನು ರಕ್ಷಿಸಬೇಕೆಂದು ದೇವಿಯನ್ನೂ, ಇಷ್ಟದೈವ ಶ್ರೀರಾಮನನ್ನೂ, ನಂಜನಗೂಡಿನ ಶ್ರೀಕಂಠೇಶ್ವರ ಸ್ವಾಮಿಯನ್ನೂ ಪ್ರಾರ್ಥಿಸಿಕೊಂಡಿದ್ದಾರೆ. ಕೊನೆಯದಾದ ಮಂಗಳಾಚರಣಕೀರ್ತನೆಯಲ್ಲಿ – "ನವರಾತ್ರೋತ್ಸವದಿಂದಾನಂದಭರಿತಳಾಗಿ ।ನಲಿಯುತಂಬಾವಿಲಾಸದ ಮಧ್ಯದೊಳಗೆ । ಅವನೀಶಾಧಿಪ ಕೃಷ್ಣನೃಪತಿಗೆ ವರಗಳ ತವಕದಿಂದೀವ ಶ್ರೀಗೌರಿಗೆ" ಎಂದು ಮಂಗಳ ಹಾಡಿದ್ದಾರೆ. ಈ ಕೀರ್ತನೆಯಲ್ಲಿ ಉಲ್ಲೇಖಿತರಾದ ಕೃಷ್ಣನೃಪತಿ ನಾಲ್ಮಡಿ ಕೃಷ್ಣರಾಜ ಒಡೆಯರು ಎಂಬುದು ಸ್ವಯಂ ಸ್ಪಷ್ಟ. ಶ್ರೀ ಚಾಮರಾಜ ಒಡೆಯರು ೧೮೯೪ರಲ್ಲಿ ಸ್ವರ್ಗಸ್ಥರಾದ ಮೇಲೆ, ೧೯೦೨ರ ವರೆಗೆ ವಾಣಿವಿಲಾಸ ಸನ್ನಿಧಾನದವರು ರೀಜೆಂಟರಾಗಿದ್ದರು; ಶ್ರೀ ನಾಲ್ಮಡಿ ಕೃಷ್ಣರಾಜರು ೧೯೦೨ರಲ್ಲಿ ಪಟ್ಟಕ್ಕೆ ಬಂದರು. ಈ ಎಲ್ಲ ಸಂಗತಿಗಳ ಆಧಾರದ ಮೇಲೆ **ನಾರಾಯಣದಾಸರ ಕಾಲ ಕ್ರಿ.ಶ.೧೮೨೩–೧೯೦೨ ಎಂದು ಧಾರಾಳವಾಗಿ ಹೇಳಬಹುದು**. ವೆಂಕಟರಮಣದಾಸರ ಲೆಕ್ಕಪುಸ್ತಕದ ದಾಖಲೆಗಳನ್ನು ನೋಡಿದರೆ, ಅಣ್ಣತಮ್ಮಂದಿರಿಬ್ಬರೂ ಒಟ್ಟು ಸಂಸಾರದಲ್ಲಿದ್ದಂತೆಯೂ, ವೃದ್ಧರಾದ ನಾರಾಯಣದಾಸರು ದೇವತಾ ಕಾರ್ಯ ಮುಂತಾದ ಪಾರಮಾರ್ಥಿಕ ವಿಚಾರಗಳಲ್ಲಿ ಮಗ್ನರಾಗಿದ್ದರೆಂದೂ ಕಂಡು ಬರುತ್ತದೆ. ಸುಮಾರು ೮೦ ವರ್ಷಗಳಷ್ಟು ದೀರ್ಘಕಾಲ ಬದುಕಿದ್ದ ನಾರಾಯಣ ದಾಸರು ಕೀರ್ತನೆಗಳನ್ನು ರಚಿಸುವುದರಲ್ಲಿ ಸಮರ್ಥರಾಗಿದ್ದರೂ ಕೇವಲ ೩೭ ಕೀರ್ತನೆಗಳನ್ನು ಮಾತ್ರ ರಚಿಸಿರುವುದು ಆಶ್ಚರ್ಯಕರವಾಗಿ ಕಾಣುತ್ತದೆ. ಭಗವದ್ಭಜನೆಯ ಕಾಲಗಳಲ್ಲಿ ತಮ್ಮ ತಂದೆ ತಿಮ್ಮಪ್ಪದಾಸರು ರಚಿಸಿ ಸಂಕಲಿಸಿದ್ದ ಪೂಜಾವಿಧಾನದ ಕೀರ್ತನೆಗಳನ್ನು ಹಾಡುವಷ್ಟರಲ್ಲಿಯೇ ತೃಪ್ತರಾಗಿದ್ದು, ವಿರಳ ಸಂದರ್ಭಗಳಲ್ಲಿ ಭಾವಗಳ ಒತ್ತಡ

'ದಾಸ' ಎಂಬ ಅಂಕಿತವಿಲ್ಲದ ಕೆಲವು ಕೀರ್ತನೆಗಳೂ ಈ ೩೭ ಕೀರ್ತನೆಗಳ ಸರಣಿಯಲ್ಲಿ ಕಂಡುಬರುತ್ತವೆ. ಹೀಗಿರುವುದರಿಂದ, 'ಇಲ್ಲಿಂದ ಮುಂದಕ್ಕೆ ನಾರಾಯಣದಾಸ ಕೃತ ಕೀರ್ತನೆಗಳು' ಎಂಬ ಸ್ಪಷ್ಟೀಕರಣದ ಬರಹವನ್ನು ಈ ಎಲ್ಲ ಕೀರ್ತನೆಗಳ ಕರ್ತೃತ್ವದ ಬಗೆಗೆ ನಿರ್ವಿವಾದವಾದ ಸಾಕ್ಷ್ಯಾಧಾರವೆಂದು ಒಪ್ಪಿ ಕೊಳ್ಳಲು ಯಾವ ಅಡ್ಡಿಯೂ ಇಲ್ಲ.

**ಕಾಲ, ಸ್ಥಳ :**

ತಿಮ್ಮಪ್ಪದಾಸರ ಕೃತಿಗಳು ಲಿಖಿತವಾಗಿದ್ದ ಓಲೆಯ ಗರಿಗಳ ಕಟ್ಟುಗಳನ್ನು ವಿಂಗಡಿಸಿ, ಪರಿಶೀಲಿಸಿ, ಜೋಪಾನಮಾಡಿಡುವ ಸಮಯದಲ್ಲಿ ಜಾತಕದ ಕುಂಡಲಿ ಮತ್ತು ಜನ್ಮವಿವರಗಳನ್ನು ಬರೆದಿದ್ದ ಒಂಟಿ ಓಲೆಯ ಗರಿಯೊಂದು ಕೇವಲ ಆಕಸ್ಮಿಕವಾಗಿ ದೊರಕಿತು; ಅದರಲ್ಲಿ ಬರೆದಿದ್ದ ಜಾತಕ ತಿಮ್ಮಪ್ಪಯ್ಯನ (ಎಂದರೆ ತಿಮ್ಮಪ್ಪದಾಸರ) ಜ್ಯೇಷ್ಠಪುತ್ರ ನಾರಾಯಣನದು ಎಂದು ವ್ಯಕ್ತಪಟ್ಟಿತು. ನಮಗೆ ಇಲ್ಲಿ ಪ್ರಸಕ್ತವಾದ ಭಾಗ ಹೀಗಿದೆ: "... ಶಾಲಿವಾಹನಶಕಾಬ್ದಂಗಳಲ್ಲಿ ೧೭೪೪ನೇ ಸಂದ ಚಿತ್ರಭಾನು ಸಂವತ್ಸರದ ಮಾಘ ಬಹುಳ ೩೦ ಮಂಗಳವಾರ... ಚಿರಂಜೀವಿ ತಿಮ್ಮಪ್ಪಯ್ಯನ ಜ್ಯೇಷ್ಠ ಪುತ್ರ ನಾರಾಯಣನ ಜನನ." (ಜಾತಕದ ನಕಲನ್ನು ೩ನೆಯ ಅನುಬಂಧವಾಗಿ ಕೊಟ್ಟಿದೆ.) ಇಲ್ಲಿನ ತೇದಿ ಕ್ರಿಸ್ತಶಕದ ೧೮೨೩ರ ಫೆಬ್ರುವರಿ ೧೧ನೆಯ ತಾರೀಕಿಗೆ ಸರಿಹೋಗುತ್ತದೆ.* ತಿಮ್ಮಪ್ಪದಾಸರ ಎರಡನೆಯ ಮಗ ವೆಂಕಟರಮಣದಾಸರು ಬರೆದಿಟ್ಟಿರುವ ಗೃಹಕೃತ್ಯದ ಲೆಕ್ಕಪುಸ್ತಕದಲ್ಲಿ, ವಿಭವ ಸಂವತ್ಸರಕ್ಕೆ ಸಂಬಂಧಪಟ್ಟ ಒಂದು ದಾಖಲೆಯಲ್ಲಿ, ಚಿಕ್ಕನಾಯಕನಹಳ್ಳಿಯಲ್ಲಿದ್ದ ಪಿತ್ರಾರ್ಜಿತ ಸ್ವತ್ತಿನಿಂದ ಬಂದ ಗುತ್ತಿಗೆಯ ಆದಾಯದ ಹಣ ರೂ.೫೦–೦೦ ಅಣ್ಣಯ್ಯನವರಿಗೆ ಅನುಭವ ಎಂದು ನಮೂದಾಗಿದೆ. ಈ ವಿಭವ ಸಂವತ್ಸರ ಕ್ರಿ.ಶ.೧೮೭೮–೭೯ಕ್ಕೆ ಕೂಡಿಬರುತ್ತದೆ.+ ಎಂದಮೇಲೆ, ಈ ವರ್ಷದಲ್ಲಿ ಅವರು

---

* ಜಾತಕವನ್ನು ಪರಿಶೀಲಿಸಿ ಈ ತೇದಿಯನ್ನು ಗೊತ್ತು ಮಾಡಿಕೊಟ್ಟವರು ನನ್ನ ಮಾನ್ಯ ಮಿತ್ರರೂ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಗ್ರಂಥಸಂಪಾದನ ವಿಭಾಗದಲ್ಲಿ ಸಂಶೋಧನ ಸಹಾಯಕರಾಗಿದ್ದವರೂ (ಈಗ ನಿವೃತ್ತರಾಗಿದ್ದಾರೆ) ಆದ, ಜ್ಯೋತಿಷ ರತ್ನಂ ಶ್ರೀ ನ.ಕೃಷ್ಣಜೋಯಿಸರು.ಅವರ ಉಪಕಾರಕ್ಕಾಗಿ ಸಂಪಾದಕ ಕೃತಜ್ಞ.

+ ಈ ಸಂಬಂಧದ ಹೆಚ್ಚಿನ ವಿವರಗಳಿಗೆ ತಿಮ್ಮಪ್ಪದಾಸರ ಪೂರ್ವೋಕ್ತ 'ಅರ್ಚನ' ಗ್ರಂಥದ ಪೀಠಿಕೆಯನ್ನು ನೋಡಿ.(ಪು.xxxi-xxxiii)

ಮುಂಭಾಗದಲ್ಲಿದ್ದ, ತಿಮ್ಮಪ್ಪದಾಸರ ವೆಂಕಟರಮಣಸ್ವಾಮಿ ದೇವಸ್ಥಾನದಲ್ಲಿ (ಇದು ನಾರಾಯಣದಾಸರ ಕಾಲದಲ್ಲಿ ಅವರ ವಾಸಸ್ಥಳವೂ ಆಗಿದ್ದಂತೆ ಕಾಣುತ್ತದೆ) ಬಿಡಾರ ಮಾಡಿದ್ದರೆಂದು ಪ್ರತೀತಿಯಿದೆ. ಆಗಲೇ ಶ್ರೀ ಜಗದ್ಗುರುಗಳವರು ದೇವಸ್ಥಾನಕ್ಕೆ ಸನ್ನದು ಸಮೇತ ಛತ್ರಮರ್ಯಾದೆಯನ್ನು ಅನುಗ್ರಹಿಸಿದಂತೆ ತಿಳಿದು ಬರುತ್ತದೆ. ನಾರಾಯಣದಾಸರ ತಮ್ಮಂದಿರಾದ ವೆಂಕಟರಮಣದಾಸರ ಮಕ್ಕಳ ಕಾಲದಲ್ಲೂ ದೇವರಿಗೆ ಈ ಛತ್ರಸೇವೆ ಚಾಲ್ತಿಯಲ್ಲಿತ್ತು. ಇಷ್ಟೆಲ್ಲ ವಿವರಣೆ, ಕೀರ್ತನೆಯಲ್ಲಿ ಕೀರ್ತಿತರಾದ ಶ್ರೀ ನೃಸಿಂಹಭಾರತಿಯವರು ಶ್ರೀ ಶೃಂಗೇರೀ ಜಗದ್ಗುರು ಪರಂಪರೆಯಲ್ಲಿ ೩೨ನೆಯವರಾದ ಶ್ರೀ ನೃಸಿಂಹಭಾರತಿಗಳು (೧೮೧೮–೧೮೭೯) ಆಗಿರಬೇಕು; ಅವರ ಕರಸಂಜಾತರಾದ ಶ್ರೀ ಸಚ್ಚಿದಾನಂದ ಶಿವಾಭಿನವ ವಿದ್ಯಾನರಸಿಂಹ ಭಾರತಿಯವರು ಆಗಿರಲಾರರು–ಎಂಬ ಅಂಶವನ್ನು ನಿರ್ಣಯಿಸುವುದಕ್ಕಾಗಿ.

**ನಾರಾಯಣದಾಸರ ಜೀವನವೃತ್ತಾಂತ :**

ನಾರಾಯಣದಾಸರ ಜೀವನವೃತ್ತಾಂತದ ಬಗೆಗೆ ಹೆಚ್ಚಿನ ವಿವರಗಳು ತಿಳಿದು ಬಂದಿಲ್ಲ. ಅವರಿಗೆ ವೆಂಕಟರಮಣಯ್ಯ ಮತ್ತು ಸುಬ್ಬಯ್ಯ ಎಂಬ ಇಬ್ಬರು ತಮ್ಮಂದಿರೂ, ಇಬ್ಬರು ತಂಗಿಯರೂ ಇದ್ದರು.* ತಂದೆಯೇ ವಿದ್ಯಾಗುರುಗಳಾಗಿದ್ದಿರಬಹುದು. ನಾರಾಯಣದಾಸರ ರಚನೆಗಳಿಂದ ಅವರು ಸಂಸ್ಕೃತ ಕನ್ನಡ ಭಾಷೆಗಳಲ್ಲಿಯೂ, ಸಂಗೀತಶಾಸ್ತ್ರದಲ್ಲಿಯೂ, ತಕ್ಕಮಟ್ಟಿನ ಜ್ಞಾನ ಪಡೆದಿದ್ದರು ಎಂದು ಹೇಳಬಹುದು. ಪ್ರಸಿದ್ಧ ವಾಗ್ಗೇಯಕಾರರು ಮೈಸೂರು ಸದಾಶಿವರಾಯರ (ಸು. ೧೭೯೩–೧೮೭೩) ಸಮಕಾಲೀನರಾಗಿದ್ದು, ಅವರ ಪ್ರಭಾವಕ್ಕೆ ಒಳಗಾಗಿರುವ ಸಂಭವ ಉಂಟು.

ನಾರಾಯಣದಾಸರ ತರುವಾಯ ವೆಂಕಟರಮಣದಾಸರು ತಿಮ್ಮಪ್ಪದಾಸರ ದೇವಸ್ಥಾನದ ಉತ್ತರಾಧಿಕಾರಿಯಾದದ್ದರಿಂದ, ನಾರಾಯಣದಾಸರಿಗೆ ಸಂತಾನಪ್ರಾಪ್ತಿಯಿರಲಿಲ್ಲವೇನೋ ಎಂದು ಶಂಕಿಸಬೇಕಾಗುತ್ತದೆ. ೧೨ನೆಯ ಕೀರ್ತನೆಯಲ್ಲಿ ('ಈ ಸುಖ') "ಸೂನು ಮನೆ ಮೊದಲಾದ ಮಮಕಾರವನು ಬಿಟ್ಟು" ಎಂಬ ಮಾತಿನಿಂದ ಅವರಿಗೆ ಪುತ್ರನೊಬ್ಬನಿದ್ದು ಅವನು ಅಕಾಲ ಮರಣಹೊಂದಿರಬಹುದೆಂದು ಊಹಿಸಬಹುದಾಗಿದೆ.

---

* 'ಅರ್ಚನ' ಗ್ರಂಥದ ೫ನೆಯ ಅನುಬಂಧದಲ್ಲಿ ತಿಮ್ಮಪ್ಪದಾಸರ ಪುತ್ರಪೌತ್ರಸಂತತಿಯ ವಿವರಗಳನ್ನು ನೋಡಬಹುದು.

ಮತ್ತು ಅಂತಃಪ್ರೇರಣೆ ತೀವ್ರವಾದಾಗ ಮಾತ್ರ ಅವರು ಕೀರ್ತನೆಗಳನ್ನು ರಚಿಸುತ್ತಿದ್ದಿರಬೇಕು. ಅದು ಹೇಗಿದ್ದರೂ ತಿಮ್ಮಪ್ಪದಾಸರ ಕೃತಿರಾಶಿಗೆ ಹೋಲಿಸಿದರೆ ಅವರ ಪುತ್ರನ ರಚನೆಗಳ ಪ್ರಮಾಣ ಅದರ ಶತಾಂಶವೂ ಆಗದು.

ಸಂಸ್ಕೃತ ಭಾಷೆಯಲ್ಲಿರುವ 'ಸಾಲಗ್ರಾಮ ಲಕ್ಷಣ' ಎಂಬ ಗ್ರಂಥದ ಕಾಗದದ ಹಸ್ತಪ್ರತಿಯಲ್ಲಿ – "ಶಾರ್ವರೀ ವತ್ಸರೇ ಪುಷ್ಯಮಾಸೇ ಕೃಷ್ಣದ್ವಿತೀಯಕೇ ಮಂದವಾರೇ ಪುಷ್ಯಯುಕ್ತೇ 'ಸಾಲಗ್ರಾಮಸ್ಯ ಲಕ್ಷಣಂ' ನಾರಾಯಣೇನ ಲಿಖಿತಂ" ಎಂದಿದೆ. ಈ ತೇದಿ ೯–೧–೧೮೮೧ಕ್ಕೆ ಸರಿಹೋಗುತ್ತದೆ. ೧೯ನೆಯ ವಯಸ್ಸಿನಲ್ಲಿ ಪ್ರತಿ ಮಾಡಿದ ಈ ಗ್ರಂಥದ ಬರಹ ಅಂದವಾಗಿದೆ.

**ಶ್ರೀ ಶೃಂಗೇರಿ ಜಗದ್ಗುರುಗಳು :**

ನಾರಾಯಣದಾಸರು ತಮ್ಮ ತಂದೆಯ ಕೀರ್ತನೆಗಳಲ್ಲಿಯ ಮೇಲುಪಂಕ್ತಿಯನ್ನು ಅನುಸರಿಸಿ ಪ್ರಾಯಿಕವಾಗಿ ಎಲ್ಲ ಕೀರ್ತನೆಗಳಲ್ಲಿಯೂ ತಮ್ಮ ಪೂರ್ವಜರಾಗಿದ್ದ ಯತಿ ಶ್ರೀ ವಾಸುದೇವಾರ್ಯರನ್ನೇ ಗುರುವೆಂದು ಸ್ವೀಕರಿಸಿ ಸ್ಮರಿಸಿದ್ದಾರೆ. ತಿಮ್ಮಪ್ಪದಾಸರಿಗೆ ವಾಸುದೇವಾರ್ಯರು ಪ್ರತ್ಯಕ್ಷ ಗುರು; ಅವರು ಶೃಂಗೇರಿಯ ಜಗದ್ಗುರುಗಳು* ಯಾರನ್ನೂ ಯಾವಲ್ಲಿಯೂ ಸ್ಮರಿಸಿರುವುದು ನಮ್ಮ ಗಮನಕ್ಕೆ ಬಂದಿಲ್ಲ. ಹೀಗಿರುವಲ್ಲಿ ನಾರಾಯಣದಾಸರು ಮಾತ್ರ ಶ್ರೀ ನೃಸಿಂಹಭಾರತಿಗಳನ್ನು ಕುರಿತು ಒಂದು ಕೀರ್ತನೆಯನ್ನೇ ರಚಿಸಿರಬೇಕಾದರೆ, ಇದೊಂದು ವಿಶೇಷ ಸಂದರ್ಭಕ್ಕೆ ಸಂಬಂಧಪಟ್ಟಿರಬೇಕು ಎಂದು ತೋರುತ್ತದೆ. ಈ ಸಂಕಲನದಲ್ಲಿ ಒಂದನೆಯದಾದರೂ ಹಸ್ತಪ್ರತಿಯಲ್ಲಿ ೩೧ ನೆಯದಾದ ಈ ಕೀರ್ತನೆಯನ್ನು ಉಳಿದ ಕೀರ್ತನೆಗಳ ರಚನಾ ಕಾಲಗಳ ಆನುಪೂರ್ವಿಯ ಸರಣಿಯಲ್ಲಿ ಪರೀಕ್ಷಿಸಿದರೆ, ಇದು ೧೮೬೭ರ ತರುವಾಯ ರಚಿತವಾಗಿರಬೇಕು ಎಂದು ಊಹಿಸಲವಕಾಶವಿದೆ. ಈ ಊಹೆ ಸರಿಯಾಗಿದ್ದರೆ ಜಗದ್ಗುರುಗಳು ೧೮೬೮ರ ಸುಮಾರಿನಲ್ಲಿ ಮೈಸೂರಿಗೆ ಬಂದಿರಬೇಕು. ಶ್ರೀನೃಸಿಂಹಭಾರತಿ ಸ್ವಾಮಿಗಳು ಮೈಸೂರಿಗೆ ಬಿಜಯಮಾಡಿಸಿದ್ದಾಗ ಶ್ರೀ ತ್ರಿನಯನಸ್ವಾಮಿ ದೇವಸ್ಥಾನದ

---

* ಶ್ರೀ ಸಚ್ಚಿದಾನಂದ ಭಾರತಿಯವರು – ೧೭೭೦–೧೮೧೪; ಶ್ರೀಮದಭಿನವ ಸಚ್ಚಿದಾನಂದ ಭಾರತಿಯವರು – ೧೮೧೪–೧೮೧೭; ಶ್ರೀ ನೃಸಿಂಹ ಭಾರತಿಯವರು – ೧೮೧೭–೧೮೭೯. (ತಿಮ್ಮಪ್ಪದಾಸರ ಕಾಲ ಸು. ಕ್ರಿ.ಶ.೧೭೭೦–೧೮೯೦). ಕುತೂಹಲವುಳ್ಳವರ ತಿಳಿವಳಿಕೆಗಾಗಿ ಶ್ರೀ ವಿದ್ಯಾರಣ್ಯರಿಂದ ತೊಡಗಿ ಶ್ರೀನೃಸಿಂಹ ಭಾರತಿ ಸ್ವಾಮಿಗಳವರೆಗಿನ ಗುರುಪರಂಪರೆಯನ್ನು ೪ನೆಯ ಅನುಬಂಧವಾಗಿ ಕೊಟ್ಟಿದೆ.

ತಿಮ್ಮಪ್ಪದಾಸರ ಪೂಜಾವಿಧಾನ ಕೀರ್ತನೆಗಳಲ್ಲಿ ಕಂಡುಬರುವ ತತ್ತ್ವಚಿಂತನೆ ಇವರ ಕೀರ್ತನೆಗಳಲ್ಲಿ ಕಂಡುಬರುವುದಿಲ್ಲ; ಅವುಗಳಿಗಿಂತ ಇವು ಹೆಚ್ಚು ಸರಳವಾಗಿವೆ. ಸಾಹಿತ್ಯ ದೃಷ್ಟಿಯಿಂದ ಇವು ಮೇಲುಮಟ್ಟದವು ಎಂದು ಹೇಳುವುದು ಕಷ್ಟ. ಎಲ್ಲೆಲ್ಲಿ ವ್ಯಕ್ತಿನಿಷ್ಠ ನಿವೇದನವಿದೆಯೋ ಅಲ್ಲೆಲ್ಲ ಭಾವಗೀತೆಯ (lyric) ಗುಣಲೇಪವನ್ನು ಗುರುತಿಸಬಹುದು. ಕೆಲವು ಕೀರ್ತನೆಗಳಂತೂ ಗೇಯದೃಷ್ಟಿಯಿಂದ ತುಂಬ ಅಚ್ಚುಕಟ್ಟಾಗಿದ್ದು, ಗೇಯಕಾರರು ಹಾಡಲು ತಕ್ಕವಾಗಿವೆ. ನಮ್ಮ ಸಂಗೀತಗಾರರು ಹೊಸ ಹೊಸವಾಗಿ ಬೆಳಕಿಗೆ ಬರುತ್ತಿರುವ ಕನ್ನಡ ಕೀರ್ತನೆಗಳ ಕಡೆಗೂ ತಮ್ಮ ಆಸಕ್ತಿಯನ್ನು ಹರಿಸಬೇಕೆಂಬುದು ನಮ್ಮ ಅಪೇಕ್ಷೆ. ಎಷ್ಟೇ ಸಾಧಾರಣ ಮಟ್ಟದ ರಚನೆಯಾಗಲಿ, ಅದರ ಪರಿಣಾಮ ರಮಣೀಯತೆ ಮತ್ತು ಸಾಫಲ್ಯ ಹಾಡುವುದರಿಂದ ಸಿದ್ಧಿಸುತ್ತದೆಯೇ ಹೊರತು ಬರಿಯ ಓದಿನಿಂದಲ್ಲ.

ಸಂಗೀತ ಬಲ್ಲ, ಬಾರದ ಹೆಣ್ಣುಮಕ್ಕಳು ಕನ್ನಡ ಕೃತಿಗಳನ್ನು ಕಲಿತು ಹಾಡಬೇಕು, ಹಾಡಿಕೊಳ್ಳಬೇಕು. ಹಾಡುವುದಾಗಲಿ, ಓದುವುದಾಗಲಿ, ಭಕ್ತಿ ಸಾಹಿತ್ಯ ಆಸ್ತಿಕರಿಗೆ ಎಲ್ಲ ಕಾಲದಲ್ಲೂ ಉಪಾದೇಯ.

**ಕೀರ್ತನೆಗಳ ಪಾಠ :**

ಈ ಮೊದಲೇ ತಿಳಿಸಿದಂತೆ, ತಂದೆ ತಿಮ್ಮಪ್ಪದಾಸರು ತಮ್ಮ ಪೂಜಾವಿಧಾನ ಕೀರ್ತನೆಗಳನ್ನೂ ಇತರ ರಚನೆಗಳನ್ನೂ ಬರೆದಿದ್ದ ಕಾಗದದ ಹಸ್ತಪ್ರತಿಯಲ್ಲಿ ಬರೆಯದೆ ಬಿಟ್ಟಿದ್ದ ಹಾಳೆಗಳಲ್ಲಿ ಮಗ ನಾರಾಯಣದಾಸರು ತಮ್ಮ ರಚನೆಗಳನ್ನು ಪ್ರತಿಮಾಡಿದ್ದಾರೆ. ಇದೇ ಪುಸ್ತಕದ ೭೨-೭೩ ನೆಯ ಹಾಳೆಗಳಲ್ಲಿ ಪುರಂದರ ದಾಸರ ಒಂದೆರಡು ದೇವರನಾಮಗಳನ್ನೂ ಭದ್ರಾಚಲ ರಾಮದಾಸರ ಒಂದೆರಡು ರಚನೆಗಳನ್ನೂ ಬರೆದು, ೭೩ನೆಯ ಹಾಳೆಯ ಹಿಂಬದಿಯಿಂದ ಮೊದಲುಮಾಡಿ ೮೧ನೆಯ ಹಾಳೆಯವರೆಗೆ ತಮ್ಮ ರಚನೆಗಳನ್ನು ದಾಸರು ಬರೆದಿದ್ದಾರೆ.

ಪ್ರಸ್ತುತ ಹಸ್ತಪ್ರತಿ ಏಕೈಕ ಹಸ್ತಪ್ರತಿಯಾದ್ದರಿಂದ, ಪಾಠಾಂತರಗಳು ಯಾವುವೂ ಇಲ್ಲ. ಆ ಕಾಲದ ಬರವಣಿಗೆಯಲ್ಲಿ ಸಾಧಾರಣವಾಗಿ ಕಂಡುಬರುವ ವೈಲಕ್ಷಣ್ಯಗಳನ್ನು ಬಿಟ್ಟರೆ, ಪಾಠ ಶುದ್ಧವಾಗಿದೆ. ಈ ವೈಲಕ್ಷಣ್ಯಗಳು ಹೀಗಿವೆ: (೧)ವರ್ಣ, ಸ್ವರ್ಣ, ಇತ್ಯಾದಿ ಪದಗಳಲ್ಲಿ ಣ ಕಾರಕ್ಕೆ ಬದಲಾಗಿ ನ ಕಾರ; (೨)ನಿನ್ನ, ಎನ್ನ, ಇಂಥ ಪದಗಳಲ್ಲಿ ಸಂಯುಕ್ತ ಅನುನಾಸಿಕ ವ್ಯಂಜನಾಕ್ಷರಗಳ ಪೂರ್ವ ವ್ಯಂಜನದ ಸ್ಥಾನದಲ್ಲಿ ಬಿಂದುವಿನ ಪ್ರಯೋಗ: ನಿಂನ, ಎಂನುತ, ಎಂಬಂತೆ; (೩)ಎನಗೆ, ಎನ್ನ, ಈತ, ಈ, ಬೇರೆ, ಇತ್ಯಾದಿ ಪದಗಳ ಆದಿ

ನಾರಾಯಣದಾಸರ ಜೀವನದಲ್ಲಿ ಸುಖ ಭೋಗಗಳಿಗಿಂತ ಕಷ್ಟಕಾರ್ಪಣ್ಯಗಳೇ ಹೆಚ್ಚಾಗಿದ್ದವು. ತಂದೆಯವರು ತೀರಿಕೊಂಡ ಕೂಡಲೆ ಅವರು ತಮ್ಮ ಜೀವಿತ ಕಾಲದಲ್ಲಿ ದೇವಕಾರ್ಯ ಗೃಹಕೃತ್ಯಕಾರ್ಯಗಳಿಗಾಗಿ ಮಾಡಿದ್ದ ೨೧೦೦ ರೂಪಾಯಿಗಳ ಋಣಭಾರವು ನಾರಾಯಣದಾಸರ ಹೆಗಲೇರಿತು. ಋಣದ ಬಾಧೆಯನ್ನು ಪರಿಹರಿಸಿ ಮನಸ್ಸಿಗೆ ಸಮಾಧಾನ ನೀಡುವಂತೆ ಭಗವಂತನನ್ನು ಬೇಡಿಕೊಂಡಿದ್ದಾರೆ. ಆ ಸಮಾಧಾನ ಸ್ವಂತಕ್ಕಾಗಿ ಆಗಿರಲಿಲ್ಲ; ಭಗವಂತನನ್ನು ಪೂಜಿಸುವುದಕ್ಕಾಗಿ, 'ಪೂಜಾರ್ಹತೆ'ಗಾಗಿ. ಪೂಜೆಗೆ ಬೇಕಾದ ಅರ್ಹತೆ ಎಂದರೆ, ದೇವರನ್ನು ಚಿನ್ನದ ಮಂಟಪದಲ್ಲಿ ಕೂರಿಸಿ, ಪಂಚಭಕ್ಷ್ಯ ಪರಮಾನ್ನಗಳನ್ನು ನೈವೇದ್ಯ ಮಾಡಿ, ವಿಶಾಲ ಲೋಕಕ್ಕೆ ತನ್ನ ಭಕ್ತಿಯನ್ನು ವೈಭವಯುತವಾಗಿ ಪ್ರದರ್ಶನ ಮಾಡಲು ಅಗತ್ಯವಾದ ಧನಕನಕ ವಸ್ತುಗಳ ಒಡೆತನವಲ್ಲ; ಏಕಾಗ್ರಚಿತ್ತ, ಮನಶ್ಶಾಂತಿ. ಅವರಿಗೆ ಹಣವೂ ಬೇಕಾಗಿದ್ದಿತು; ಆದರೆ ಋಣಪರಿಹಾರಕ್ಕಾಗಿ ಮಾತ್ರ. ಈ ಉದ್ದೇಶದಿಂದ ಅವರು "ಕನಕ ದ್ರವ್ಯವನಿತ್ತು ಋಣವ ತೀರಿಸಿ ಬೇಗ ಮನವ ಸಂತೋಷಿಸು" ಎಂದು "ಮನಸಿಜಪಿತದೇವ"ನನ್ನು ಮೊರೆಹೊಕ್ಕರು. ದೇವರು ಅವರ ಮೊರೆಯನ್ನು ಕೇಳಿದನೆಂದು ಕಾಣುತ್ತದೆ. ತೆಲುಗಿನ ಕೀರ್ತನೆಯಲ್ಲಿ, ತಮ್ಮ ಸಾಲವನ್ನು ತೀರಿಸುವುದಕ್ಕಾಗಿಯೇ ರಾಮ ಮನೆಗೆ ಬಂದಿದ್ದಾನೆ ಎಂದು ಹರ್ಷಪಟ್ಟಿದ್ದಾರೆ. ಯಾವ ರೂಪದಲ್ಲಿ ಅಷ್ಟು ದ್ರವ್ಯ ಅವರಿಗೆ ದೊರಕಿತು ಎನ್ನುವುದರ ವಿವರ ತಿಳಿಯಬರುವುದಿಲ್ಲ. ಯಾವ ಬಗೆಯ ಪವಾಡವೂ ನಡೆಯದೆ, ಸಹಜವಾದ ರೀತಿಯಲ್ಲಿ ದೇವರ ವರ ಅವರಿಗೆ ದೊರಕಿರಬೇಕು. ಬಹುಶಃ ಆಶ್ರಯದಾತರಾಗಿದ್ದ ದೊರೆಗಳಿಗೆ ಆಶ್ರಿತನ ಪರಿಸ್ಥಿತಿ ತಿಳಿದು ಬಂದು, ದ್ರವ್ಯ ದಾನಮಾಡಿರಬೇಕೆಂದು ಊಹಿಸಿದರೆ ತಪ್ಪಾಗದು. ಏಕೆಂದರೆ, ಮುಂದಿನ ಕೀರ್ತನೆಗಳು ಕೆಲವಲ್ಲಿ, ದೊರೆಗಳ ಶ್ರೇಯಸ್ಸನ್ನು ಮನಸಾರೆ ಕೋರಿದ್ದಾರೆ. ಮನಸ್ಸಿಗೆ ನೆಮ್ಮದಿಯೂ ದೊರಕಿರಬೇಕು. "ಈ ಸುಖವ ಬಿಟ್ಟಿನ್ನು ಬೇರೆ ಸುಖವುಂಟೆ" ಎಂದು ನಿಷ್ಕಾಮ ಭಕ್ತಿಯಿಂದ ಮಾಡುವ ಪೂಜಾಸುಖವನ್ನು ಮಾತ್ರ ಬಯಸಿದ್ದಾರೆ; "ಒಂದೆ ಸಾಕೆನಗೆ ನಿನ್ನಯ ಸೇವೆಯೊಂದೆ ಸಾಕು" ಎಂಬ ಪರಮತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ. ನಾರಾಯಣದಾಸರು ತಮ್ಮ ತಂದೆಗಳಂತೆ ನೂರಾರು ಕೀರ್ತನೆಗಳನ್ನು ರಚಿಸಿಲ್ಲದಿರಬಹುದು; ರಚಿಸಿರುವಷ್ಟು ಕೀರ್ತನೆಗಳಲ್ಲಿ ಅನನ್ಯ ಭಕ್ತಿಯಿಂದ ಭಗವತ್ಸೇವೆ ಮಾಡಿದ ಭಕ್ತನ ಹೃದಯಸ್ಪಂದನಗಳು ಚೆನ್ನಾಗಿ ಕೇಳಿಬರುತ್ತವೆ. ಭಕ್ತಿಮಾರ್ಗದ ಪಯಣಿಗರಿಗೆ ಈ ಕೀರ್ತನೆಗಳಲ್ಲಿ ಕೆಲವಾದರೂ ಹಿಡಿಸದೆ ಇರುವುದಿಲ್ಲ.

ವಿದ್ಯಾರ್ಥಿ–ಮಿತ್ರರು, ಶ್ರೀ ಕೆ.ಆರ.ಗಣೇಶ ಅವರು ಮೂಲಹಸ್ತಪ್ರತಿಯಿಂದ ಕೀರ್ತನೆಗಳನ್ನು ಪ್ರತಿಮಾಡಿಕೊಟ್ಟು ಸಹಾಯಮಾಡಿದ್ದಾರೆ. ಅವರ ಸಹಾಯವನ್ನು ನೆನೆದು, ಅವರ ಶ್ರೇಯಸ್ಸನ್ನು ಕೋರುತ್ತೇನೆ.

ಪ್ರಭಾ ಮುದ್ರಣಾಲಯದವರು ಅತ್ಯಲ್ಪ ಕಾಲದಲ್ಲಿ ಪುಸ್ತಕವನ್ನು ಒಪ್ಪವಾಗಿ ಅಚ್ಚುಮಾಡಿಕೊಟ್ಟು ಸಹಕರಿಸಿದ್ದಾರೆ. ಅವರಿಗೆ ನನ್ನ ವಂದನೆಗಳು.

ಬೆಂಗಳೂರು–೧೯ **ಎಂ.ವಿ. ಸೀತಾರಾಮಯ್ಯ**
೧೭–೫–೧೯೭೯

## ಶ್ರೀ ನಾರಾಯಣದಾಸರ ಜನ್ಮಪತ್ರಿಕಾ
## (೧೧–೨–೧೮೨೩)

ಶ್ರೀ ಗಣೇಶ ಶಾರದಾಗುರುಭ್ಯೋ ನಮಃ । ಶುಭಮಸ್ತು ॥
ವಾಸುದೇವಾರ್ಯ ಗುರು ಚರಣಾರವಿಂದಾಭ್ಯಾಂ ನಮಃ ।
ಜನನೀ ಜನ್ಮ ಸೌಖ್ಯಾನಾಂ ವರ್ಧನೀ ಕುಲಸಂಪದಾಂ ।
ಪದವೀಪೂರ್ವಪುಣ್ಯಾನಾಂ ಲಿಖ್ಯತೇ ಜನ್ಮಪತ್ರಿಕಾ ॥

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾಬ್ದಂಗಳಲ್ಲಿ ೧೭೪೪ನೇ ಸಂದ ಚಿತ್ರಭಾನು ಸಂವತ್ಸರದ ಮಾಘ ಬಹುಳ ೩೦ ಮಂಗಳವಾರ ೩॥=ಧನಿ ೩೨॥=ಪರಿ ೫೭॥–ನಾ ೩॥= ರಾ ೨೨॥=ಅಮ್ಮ ೫ = ಕತ್ತಕು [?ಕೃತ್ತಿಕಾ] ೪೦ ಪದ್ಮಕ ಯೋಗಃ ರವಿಕ್ರಾ ಕುಂಭೇ ಪಂಚಗ್ರಹಃ। ತೇದಿ ೨ ಯೀ ಶುಭದಿವಸ ಸೂರ್ಯ ಅಸ್ತಮಯವಾದ ರಾತ್ರಿ ಘಳಿಗೆ ೧೪ಗೆಯಲ್ಲಿ ವೃಶ್ಚಿಕ ಲಗ್ನದಲ್ಲಿ ಚಿರಂಜೀವಿ ತಿಂಮಪ್ಪಯ್ಯನ ಜ್ಯೇಷ್ಠ ಪುತ್ರ ನಾರಾಯಣನ ಜನನಾ॥ ತತ್ಕಾಲ ಗ್ರಹಸಂಪತ್ತು॥ ಧನಿ ೩ ರ್ಕಃ ಕುಂಭ ಚಂದ್ರ ಶತ ೧ ಕುಜಃ ಶ್ತ ೨ ಬುಧಃ ಕೃತ್ತಿಕಾ ೩ ವ ಗುರುಃ ಶತ ೩ ಶುಕ್ರ ಅಶ್ವಿ ೩ ವ ಶನಿಃ ಶ್ರ ೨ ರಾಹುಃ ಪುಷ್ಯ ೪ ಕೇತುಃ॥ ಯೀ ವೃಶ್ಚಿಕಲಗ್ನಕ್ಕೆ ಹೋರಾಧಿಪತಿ ಶುಕ್ರಃ ದ್ರೇಕ್ಕಾಣಾಧಿಪತಿ ಚಂದ್ರಃ ನವಾಂಶಾಧಿಪತಿ ಚಂದ್ರನಲ್ಲಿ ಜನನಾ। ಯೀ ಶುಭದಿವಸ ರಾತ್ರಿ ಘಳಿಗೆ ೧೪। ಕ್ಕೆ ಶತತಾರಾನಕ್ಷತ್ರ ಪ್ರಥಮ ಪಾದದಲ್ಲಿ ರಾಹು ಮಹರ್ದಶೆಯಲ್ಲಿ ಸಂದ ವರ್ಷ ೯/೪.

ಸ್ವರವನ್ನು 'ಯ' ಕಾರದೊಡನೆ ('ಯ' ಶ್ರುತಿ) ಯೆನಗೆ, ಯೆನ್ನ, ಬ್ಯಾರೆ, ಎಂದು ಬರೆದಿರುವುದು. ಇದೇ ರೀತಿ 'ಒ'ಕಾರಕ್ಕೆ 'ವ'ಕಾರ: ಒಂದು–ವಂದು, ಒಲಿದು–ವಲಿದು, ಇತ್ಯಾದಿ; (೪) 'ಸ' ಕಾರದೆಡೆಯಲ್ಲಿ 'ಶ' ಕಾರ; (೫)ಅಲ್ಪಪ್ರಾಣ ಮಹಾಪ್ರಾಣಗಳ ಭೇದವನ್ನು ಗಮನಿಸದಿರುವುದು – ಇಂಥ ಎಲ್ಲ ವೈಲಕ್ಷಣ್ಯಗಳನ್ನೂ ಸರಿಪಡಿಸಿ, ಕೀರ್ತನೆಗಳನ್ನು ಪ್ರತಿಮಾಡಲಾಗಿದೆ. ಇಂಥ ಸರಿಪಡಿಕೆಗಳನ್ನು ಅಡಿಟಿಪ್ಪಣಿಯಲ್ಲಿ ಕಾಣಿಸಿಲ್ಲ; ಗಮನಾರ್ಹವಾದ ತಿದ್ದುಪಾಟುಗಳ ಸಂಬಂಧದಲ್ಲಿ, ಮೂಲಪಾಠವನ್ನು ಪುಟದಡಿಯಲ್ಲಿ ಕಾಣಿಸಿದೆ. ಕೆಲವು ಕಡೆಗಳಲ್ಲಿ (ಮುಖ್ಯವಾಗಿ ರಾಮಾಯಣದ ಕೀರ್ತನೆಯಲ್ಲಿ) ಕಂಡುಬಂದ ವ್ಯಾಕರಣ ವಿರುದ್ಧವಾದ ಪ್ರಯೋಗಗಳನ್ನು ಅನಿವಾರ್ಯವಾಗಿ ತಿದ್ದಬೇಕಾಯಿತು.

**ಉಪಕಾರ ಸ್ಮರಣೆ**

ನನ್ನ ಭಾವನವರಾದ ಶ್ರೀ ಬಿ.ಎಸ್.ಕಪನೀಪತಯ್ಯನವರು ಮೈಸೂರು ಅರಮನೆಯ ಸರಸ್ವತೀ ಭಂಡಾರದ ದಾಖಲೆಗಳನ್ನು ಪರಿಶೀಲಿಸಿ, ಶ್ರೀ ಶೃಂಗೇರಿ ಜಗದ್ಗುರು ಪರಂಪರೆಯ ವಿವರಗಳನ್ನು ಸಂಗ್ರಹಿಸಿ ದೊರಕಿಸಿಕೊಟ್ಟಿರುತ್ತಾರೆ. ನನ್ನ ಅಣ್ಣಂದಿರು ಶ್ರೀ ಎಂ.ವಿ.ವೆಂಕಟರಮಣಯ್ಯನವರು ಶ್ರೀನೃಸಿಂಹಭಾರತಿ ಸ್ವಾಮಿಗಳವರ ಕಲ್ಲಚ್ಚಿನ ಭಾವಚಿತ್ರಪ್ರತಿಯನ್ನು ಕಳಿಸಿಕೊಟ್ಟಿರುವುದಲ್ಲದೆ, ನಾರಾಯಣದಾಸರು ಮತ್ತು ಅವರ ಕೀರ್ತನೆಗಳ ವಿಚಾರವಾಗಿ ಉಪಯುಕ್ತ ಸಲಹೆ ಸೂಚನೆಗಳನ್ನು ನೀಡಿ ಸಹಾಯ ಮಾಡಿರುತ್ತಾರೆ. ಈ ಹಿರಿಯರಿಬ್ಬರ ಆಶೀರ್ವಾದ ನನ್ನ ರಕ್ಷಾಕವಚ. ಇವರಿಗೆ ನನ್ನ ಕೃತಜ್ಞತಾಪೂರ್ವಕ ನಮಸ್ಕಾರಗಳು.

ನನ್ನ ಮಾನ್ಯ ಮಿತ್ರರೂ, ಸಂಗೀತಶಾಸ್ತ್ರವಿಶಾರದರೂ, ಗಾನಕಲಾಭೂಷಣ ಮುಂತಾಗಿ ಅನೇಕ ಬಿರುದುಗಳಿಂದ ಸನ್ಮಾನಿತರೂ ಆದ, ವೈಣಿಕ ವಿದ್ವಾನ್ ಶ್ರೀ ಎಲ್.ರಾಜಾರಾಯರು ಕೀರ್ತನೆಗಳನ್ನು ಕುರಿತು ಅಮೂಲ್ಯವಾದ ಅಭಿಪ್ರಾಯವನ್ನು ನೀಡಿರುತ್ತಾರೆ; ಮತ್ತು ಹಸ್ತಪ್ರತಿಯಲ್ಲಿ ದಾಸರು ರಾಗತಾಳಗಳನ್ನು ನಿರ್ದೇಶ ಮಾಡಿರದಿದ್ದ ಕಡೆಗಳಲ್ಲಿ ಯಥಾಮತಿಯಾಗಿ ನಾನು ಸೂಚಿಸಿದ್ದ ರಾಗತಾಳ ನಿರ್ದೇಶಗಳನ್ನು ಕೀರ್ತನೆಗಳ ಸಾಹಿತ್ಯಭಾವ ಮತ್ತು ಲಯಗಳ ದೃಷ್ಟಿಯಿಂದ ಸೂಕ್ಷ್ಮವಾಗಿ ಪರೀಕ್ಷಿಸಿ, ಅನುಮೋದಿಸಿ, ಕೆಲವು ಕಡೆ ಹೆಚ್ಚು ಹೊಂದುವ ರಾಗ ತಾಳಗಳನ್ನು ಸೂಚಿಸಿದ್ದಾರೆ. ಈ ಎಲ್ಲ ಉಪಕಾರಕ್ಕಾಗಿ ನಾನು ಅವರಿಗೆ ಅತ್ಯಂತ ಋಣಿಯಾಗಿದ್ದೇನೆ.

ಆಚಾರ್ಯ ಪಾಠಶಾಲೆಯ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿರುವ ನನ್ನ

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸಂಶೋಧನ ಸಹಾಯಕರಾಗಿದ್ದು ಈಚೆಗೆ ನಿವೃತ್ತರಾದ, ಜ್ಯೌತಿಷ ವಿದ್ವಾನ್ ಶ್ರೀ ಎಸ್.ಎನ್. ಕೃಷ್ಣಜೋಯಿಸರವರು ನನ್ನ ಪ್ರಾರ್ಥನೆಯನ್ನು ಮನ್ನಿಸಿ ತಮ್ಮ ೧೮-೧೦-೧೯೭೦ರ ಪತ್ರದಲ್ಲಿ, ನಾರಾಯಣದಾಸರ ವಿಚಾರವಾಗಿ ಅವರ ಜನ್ಮಕುಂಡಲಿಯಿಂದ ಕಂಡು ಬಂದ ಕೆಲವು ವಿಚಾರಗಳನ್ನು ಹೀಗೆ ತಿಳಿಸಿಕೊಟ್ಟು ಉಪಕರಿಸಿರುವರು:

"ದಶಾಭುಕ್ತಿ ಗಣನೆಯಂತೆ ಬುಧ ದಶೆಯು ಲಗ್ನ ಮತ್ತು ಚಂದ್ರನಿಂದ ಅಷ್ಟಮಾಧಿಪತಿ ದಶೆಯಾಗುತ್ತದೆ. ಇದರಲ್ಲಿ ಗುರು ಭುಕ್ತಿಯಲ್ಲಿ ತೊಂದರೆಗೆ ಅವಕಾಶ ಕಂಡುಬರುತ್ತದೆ. ಗುರುವು ಲಗ್ನ-ಚಂದ್ರರಿಂದ ದ್ವಿತೀಯಾಧಿಪತಿಯಾಗಿ ಲಗ್ನಕ್ಕೆ ಸಪ್ತಮದಲ್ಲಿರುತ್ತಾನಲ್ಲದೆ ಅಂಶದಲ್ಲೂ ಬುಧ-ಗುರುಗಳಿಗೆ ದ್ವಿರ್ದ್ವಾದಶ ಸ್ಥಿತಿ ಇರುವುದರಿಂದ ಈ ಭುಕ್ತಿಯಲ್ಲಿ ಪ್ರಾಣಾಪಾಯಕ್ಕೆ ಅವಕಾಶವುಂಟು. ಇದು ಸುಮಾರು ೬೬ ವರ್ಷ ಆಗುತ್ತದೆ. ಆದ್ದರಿಂದ ೬೪ ರಿಂದ ೬೬ರ ವರೆಗೂ ಜೀವಿಸಿದ್ದರೆಂದು ಹೇಳಬಹುದು.

"ಗುರು ದಶಭುಕ್ತಿಯಲ್ಲಿ ಎಂದರೆ ಸುಮಾರು ೩೦ನೇ ವರ್ಷದಲ್ಲಿ ವಿವಾಹವಾಗಿರಬಹುದು.

"ಸಂತಾನಯೋಗಕ್ಕೆ ದಂಪತಿಗಳ ಜಾತಕ ಅವಶ್ಯಕ. ಇವರೊಬ್ಬರ ಜಾತಕದಂತೆ ಪಂಚಮಸ್ಥಾನ ಶುದ್ಧವಾಗಿದೆ. ಮಿತಸಂತಾನವಿರುವಂತೆ ತಿಳಿಯಬಹುದು.

"ಈ ಜಾತಕದಲ್ಲಿ ನವಮಿ ಮತ್ತು ದಶಮಾಧಿಪತಿಗಳಿಬ್ಬರೂ ಚತುರ್ಥ ಕೇಂದ್ರದಲ್ಲಿ ಕೂಡಿ ಇರುವುದು ಒಂದು ವಿಧ ರಾಜಯೋಗ.

"ವೃಶ್ಚಿಕ ಲಗ್ನವಾಗಿರುವುದರಿಂದ ಸ್ವಲ್ಪ ಹಠವಾದಿಗಳಾಗಲು ಅವಕಾಶವಿದೆ. ಗುರುದೃಷ್ಟಿ ಲಗ್ನಕ್ಕೆ ಇರುವುದರಿಂದ ಹಿರಿಯರ ಬಗ್ಗೆ ಗೌರವವುಂಟು. ಚತುರ್ಥದಲ್ಲಿ ಐದು ಗ್ರಹಗಳು ಕೂಡಿರುವುದು ಒಂದು ವಿಧ ಸಂನ್ಯಾಸಯೋಗ. ಇದರಿಂದ ಭಗವಂತನ ಧ್ಯಾನಾದಿಗಳಲ್ಲಿ ಹೆಚ್ಚು ಆಸಕ್ತರಾಗಲು ಅವಕಾಶವಿದೆ."

---

| | | | |
|---|---|---|---|
| | ಶನಿ | ಗುರು | |
| ರವಿ ಚಂದ್ರ ಬುಧ | | | ಕೇತು |
| ಕುಜ ಶುಕ್ರ ರಾಹ | ರಾಶಿ ಕುಂಡಲಿ | | |
| | | | |
| | ಲಗ್ನ | | |

ಶ್ರೀ ನಾರಾಯಣದಾಸರ ಜನ್ಮ ಪತ್ರಿಕಾ

| | | | |
|---|---|---|---|
| ರಾಹು | | ರವಿ | ಶುಕ್ರ |
| ಬುಧ | | | ಕೇತು |
| ಕುಜ ಶನಿ | ಅಂಶ ಕುಂಡಲಿ | | ಚಂದ್ರ |
| | ಲಗ್ನ | | ಗುರು |

೩೩. ಸಚ್ಚಿದಾನಂದ ಶಿವಾಭಿನವ ವಿದ್ಯಾನರಸಿಂಹ
ಭಾರತಿಯವರು ೧೮೬೭–೧೯೨೭*

೩೪. ಚಂದ್ರಶೇಖರ ಭಾರತಿಯವರು ೧೮೯೨–೧೯೫೪

---

೩೫. ಶ್ರೀಮದಭಿನವ ವಿದ್ಯಾತೀರ್ಥ ಸ್ವಾಮಿಗಳವರು
[ಈಗಿನ ಜಗದ್ಗುರುಗಳು]

---

ಶ್ರೀ ಎಸ್.ರಾಮಚಂದ್ರಶಾಸ್ತ್ರಿಗಳು ಹಿಂದಿಯಿಂದ ಕನ್ನಡಿಸಿರುವ ಬಲದೇವ ಉಪಾಧ್ಯಾಯರ 'ಶ್ರೀ ಶಂಕರಾಚಾರ್ಯ' ಎಂಬ ಗ್ರಂಥದಲ್ಲಿ ಶ್ರೀ ನೃಸಿಂಹಭಾರತಿಯವರ ಕಾಲವನ್ನು ೧೮೧೭–೧೮೮೮ ಎಂದೂ, ಶ್ರೀ ಸಚ್ಚಿದಾನಂದ ಶಿವಾಭಿನವ–ನರಸಿಂಹಭಾರತಿಯವರ ಕಾಲವನ್ನು ೧೮೬೬–೧೯೧೩ ಎಂದು ನಮೂದಿಸಿದೆ. ೧೯೧೩ರಲ್ಲಿ ಶ್ರೀ ಚಂದ್ರಶೇಖರಭಾರತಿಯವರು ಸಂನ್ಯಾಸಸ್ವೀಕಾರ ಮಾಡಿದರು.]

## ಶ್ರೀ ಶೃಂಗೇರೀ ಜಗದ್ಗುರು ಪರಂಪರಾ

೧. ಶ್ರೀ ಶಂಕರ ಭಗವತ್ಪಾದರು: ಕ್ರಿ.ಶ.೭೪೬–೭೭೯ (ಆಧುನಿಕ ವಿದ್ವಾಂಸರ ಅಭಿಪ್ರಾಯದಂತೆ: ಕ್ರಿ.ಶ. ೭೮೮–೮೨೦)

ಶ್ರೀ ಶ್ರೀಗಳಾದ –

| | | |
|---|---|---|
| ೧೨. | ವಿದ್ಯಾರಣ್ಯ ಸ್ವಾಮಿಗಳು | ೧೩೩೧–೧೩೮೬ |
| ೧೩. | ಚಂದ್ರಶೇಖರ ಭಾರತಿಯವರು | ೧೩೬೮–೧೩೮೯ |
| ೧೪. | ನೃಸಿಂಹಭಾರತಿಯವರು | ೧೩೮೭–೧೪೦೮ |
| ೧೫. | ಪುರುಷೋತ್ತಮ ಭಾರತಿಯವರು | ೧೪೦೬–೧೪೪೮ |
| ೧೬. | ಶಂಕರಾನಂದ ಭಾರತಿಯವರು | ೧೪೨೮–೧೪೫೪ |
| ೧೭. | ಚಂದ್ರಶೇಖರ ಭಾರತಿಯವರು | ೧೪೪೯–೧೪೫೪ |
| ೧೮. | ನೃಸಿಂಹಭಾರತಿಯವರು | ೧೪೬೪–೧೪೭೯ |
| ೧೯. | ಪುರುಷೋತ್ತಮ ಭಾರತಿಯವರು | ೧೪೭೨–೧೫೧೭ |
| ೨೦. | ರಾಮಚಂದ್ರ ಭಾರತಿಯವರು | ೧೫೦೮–೧೫೬೦ |
| ೨೧. | ನೃಸಿಂಹಭಾರತಿಯವರು | ೧೫೫೭–೧೫೭೩ |
| ೨೨. | ನೃಸಿಂಹಭಾರತಿಯವರು | ೧೫೬೩–೧೫೭೬ |
| ೨೩. | ಇಮ್ಮಡಿ ನರಸಿಂಹಭಾರತಿಯವರು | ೧೫೭೬–೧೫೯೯ |
| ೨೪. | ಅಭಿನವ ನರಸಿಂಹಭಾರತಿಯವರು | ೧೫೯೯–೧೬೨೨ |
| ೨೫. | ಸಚ್ಚಿದಾನಂದ ಭಾರತಿಯವರು | ೧೬೨೨–೧೬೬೩ |
| ೨೬. | ನೃಸಿಂಹಭಾರತಿಯವರು | ೧೬೬೩–೧೭೦೫ |
| ೨೭. | ಸಚ್ಚಿದಾನಂದ ಭಾರತಿಯವರು | ೧೭೦೫–೧೭೪೧ |
| ೨೮. | ಅಭಿನವ ಸಚ್ಚಿದಾನಂದಭಾರತಿಯವರು | ೧೭೪೧–೧೭೬೭ |
| ೨೯. | ನೃಸಿಂಹಭಾರತಿಯವರು | ೧೭೬೭–೧೭೭೦ |
| ೩೦. | ಸಚ್ಚಿದಾನಂದ ಭಾರತಿಯವರು | ೧೭೭೦–೧೮೧೪ |
| ೩೧. | ಅಭಿನವ ಸಚ್ಚಿದಾನಂದ ಭಾರತಿಯವರು | ೧೮೧೪–೧೮೧೭ |
| ೩೨. | ನೃಸಿಂಹಭಾರತಿಯವರು | *೧೮೧೮–೧೮೭೯ |

* [ಈ ಪಟ್ಟಿಯನ್ನು ಮೈಸೂರು ಅರಮನೆಯ ಸರಸ್ವತೀ ಭಂಡಾರದ ದಾಖಲೆಗಳಿಂದ ದೊರಕಿಸಿಕೊಟ್ಟು ಉಪಕರಿಸಿದವರು, ವೇದಾಂತ ವಿಷಯವಾಗಿ ಗ್ರಂಥಗಳನ್ನು ರಚಿಸಿರುವ ಸನ್ಮಾನ್ಯರಾದ ಮೈಸೂರಿನ ಶ್ರೀ ಬಿ.ಎಸ್.ಕಪನೀಪತಯ್ಯನವರು.

ಸೇರಿದವರಲ್ಲಿಯೂ ಈ ಪೂಜಾವಿಧಾನ ಕೀರ್ತನೆಗಳಲ್ಲಿ ಕೆಲವು ಇಂದಿಗೂ ಮುಖಸ್ಥವಾಗಿಯೂ ಗ್ರಂಥಸ್ಥವಾಗಿಯೂ ಉಳಿದುಬಂದಿರುವುದು–ಈ ಅಂಶಗಳು ದಾಸರ ಸ್ಥಳವನ್ನು (ಜನ್ಮಸ್ಥಳವನ್ನು?) ನಿರ್ವಿವಾದವಾಗಿ ಸ್ಥಾಪಿಸುತ್ತವೆ. ಚಿಕ್ಕನಾಯಕನಹಳ್ಳಿಯ ಸಮೀಪದಲ್ಲಿರುವ ಶಿವಗಂಗೆಯ (ಕಕುದ್ಗಿರಿ) ಗಂಗಾಧರನನ್ನು ತಮ್ಮ ಕೀರ್ತನೆಗಳಲ್ಲಿ ದಾಸರು ಮೇಲಿಂದ ಮೇಲೆ ಸ್ತೋತ್ರ ಮಾಡಿರುವುದೂ ಈ ಸಂಗತಿಗೆ ಪೋಷಕವಾಗಿದೆ.

ತಿಮ್ಮಪ್ಪದಾಸರು ಚಿಕ್ಕನಾಯಕನಹಳ್ಳಿಯಲ್ಲಿ ಯಾವಾಗ, ಎಷ್ಟು ಕಾಲ, ನೆಲಸಿದ್ದರೆಂಬುದಕ್ಕೆ ದಾಖಲೆಗಳಿಲ್ಲ. ಚಿಕ್ಕನಾಯಕನಹಳ್ಳಿಯ ವೆಂಕಟರಮಣಸ್ವಾಮಿಯ ದೇವಸ್ಥಾನ ಪುರಾತನವಾದದ್ದು. ತಿಮ್ಮಪ್ಪದಾಸರೂ ಅವರ ಗುರುಗಳಾದ ವಾಸುದೇವಾರ್ಯರೂ ತಿರುಪತಿಯ ವೆಂಕಟರಮಣನ ಪರಮಭಕ್ತರು. ತಿರುಪತಿಯ ವೆಂಕಟರಮಣ ಭಕ್ತರನ್ನು ಉದ್ಧರಿಸಲು 'ಚಿಕ್ಕನಾಗಪುರ'ದಲ್ಲಿ ಬಂದು ನೆಲಸಿದ್ದೆನೆಂದೇ ದಾಸರ ಅಚಲ ವಿಶ್ವಾಸ. ಚಿಕ್ಕನಾಯಕನಹಳ್ಳಿಯಿಂದ ಶ್ರೀರಂಗ ಪಟ್ಟಣಕ್ಕೂ, ಅಲ್ಲಿಂದ (ಹಾಸನ ಜಿಲ್ಲೆಯ) ಅರಕಲಗೂಡಿಗೂ, ಅಲ್ಲಿಂದ ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲದಲ್ಲಿ ಮೈಸೂರಿಗೂ ಅವರೊಂದಿಗೆ ಸ್ಥಳಾಂತರ ಹೊಂದಿದಂತೆ ಕಂಡುಬರುತ್ತದೆ.

ತಿಮ್ಮಪ್ಪದಾಸರು ಮೇಲೆ ತಿಳಿಸಿದ ನಾಲ್ಕು ಊರುಗಳಲ್ಲದೆ ಬೇರೆ ಊರುಗಳಲ್ಲಿಯೂ ವಾಸವಾಗಿದ್ದರೋ ಹೇಗೋ, ಹೇಳುವುದು ಕಷ್ಟ. ಅವರ ಒಂದೆರಡು ಕೀರ್ತನೆಗಳಲ್ಲಿ ರಾಮಸಾಗರ, ರಜತಪುರ ಅಥವಾ ರಜತನಗರ (ಬೆಳ್ಳೂರು)_ಈ ಊರುಗಳ ಉಲ್ಲೇಖವಿದೆ.

## ೨. ಕಾಲ

ತಿಮ್ಮಪ್ಪದಾಸರು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಕ್ರಿ.ಶ. ೧೭೯೬–೧೮೬೮) ಜೀವಿಸಿದ್ದರೆಂದು ಧಾರಾಳವಾಗಿ ಹೇಳಬಹುದು. ಅವರ ವಂಶಜರು ಹಾಗೆ ಹೇಳುತ್ತಿದ್ದುದರ ಜೊತೆಗೆ, ಲಿಖಿತ ಆಧಾರಗಳೂ ದೊರೆತಿವೆ. ನಾವು ಪರಿಶೀಲಿಸಿರುವ ಮಟ್ಟಿಗೆ, ಅವರ ಕೃತಿಗಳು ಲಿಖಿತವಾಗಿರುವ ಯಾವ ಹಸ್ತಪ್ರತಿ–ಯಲ್ಲಿಯೂ ಕೃತಿರಚನೆಯ, ಇಲ್ಲವೆ ಪ್ರತಿನಿರ್ಮಾಣದ ಕಾಲ ಸೂಚಿತವಾಗಿಲ್ಲ.[೨] ಅವರ ಮನೆತನದವರ ಬಳಿ ಇದ್ದ ಹಳೆಯ ಹಸ್ತಪ್ರತಿಗಳ ಸಂಗ್ರಹದಲ್ಲಿ ಜಾತಕದ ಕುಂಡಲಿ ಬರೆದಿದ್ದ ಒಂಟಿ ಓಲೆಯಗರಿಯೊಂದು ಕೇವಲ ಆಕಸ್ಮಿಕವಾಗಿ ಸಿಕ್ಕಿತು. ಅದರಲ್ಲಿ ಜ್ಯೇಷ್ಠಪುತ್ರ ನಾರಾಯಣನ ಜಾತಕ ಬರೆದಿದ್ದುದು ವ್ಯಕ್ತಪಟ್ಟಿತು. ನಮಗೆ

# ೩. ಶ್ರೀಕೃಷ್ಣಬಾಲಲೀಲೆ

## ಅ) ಭಾಗ – ೧ರ ಪೀಠಿಕೆ

### ೧. ಕವಿಯ ಹೆಸರು, ಸ್ಥಳ*

ಶ್ರೀ ಕೃಷ್ಣಬಾಲಲೀಲೆಯ ಕರ್ತೃ ಶ್ರೀ ತಿಮ್ಮಪ್ಪದಾಸರ[೧] ನಿಜನಾಮ ತಿಮ್ಮಪ್ಪಯ್ಯ. ಅವರ ಕೆಲವು ಕೃತಿಗಳಲ್ಲಿ 'ತಿಂಮದಾಸ', 'ತರಳ ತಿಂಮದಾಸ' ಎಂಬಸ್ವನಾಮ ಮುದ್ರಿಕೆ ಕಂಡುಬರುತ್ತದೆ. ಅನೇಕ ಕೃತಿಗಳಲ್ಲಿ ಕಂಡುಬರುವುದು ಇಷ್ಟದೇವತಾಮುದ್ರಿಕೆ, 'ತಿರುಪತಿಯ ವೆಂಕಟರಮಣ'ನ ನಾಮವೊಂದೇ. ಹೊನ್ನಪ್ಪ (ಅಥವಾ ಹೊನ್ನಯ್ಯ, ಚಿನ್ನಪ್ಪ) ಎಂಬ ಅಡ್ಡ ಹೆಸರೂ ಇದ್ದಿರಬಹುದು. (ನೋಡಿ: ಅರ್ಚನದ ೫೮ನೆಯ ಕೀರ್ತನೆಯ ೫ನೆಯ ನುಡಿ: "ನಿನ್ನಾ ಹೆಸರಿನ ಸುತನು ಹೊನ್ನಾಂಬಾ'...").

ತಿಮ್ಮಪ್ಪದಾಸರ ಸ್ಥಳ ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ. 'ತಮ್ಮ ಪೂರ್ವಿಕರು ಚಿಕ್ಕನಾಯಕನಹಳ್ಳಿಯಿಂದ ಬಂದವರು' ಎಂಬ ವಂಶಸ್ಥರ ಹೇಳಿಕೆ: ಕೆಲವು ಕೃತಿಗಳಲ್ಲಿ ಈ ಊರಿನ ಸಂಸ್ಕೃತರೂಪದ ಕ್ಷೇತ್ರಮುದ್ರಿಕೆ (ಚಿಕ್ಕನಾಗಪುರ, ತರುಣ ನಾಗಪುರ) ಇರುವುದು; ದಾಸರ ಎರಡನೆಯ ಮಗ ವೆಂಕಟರಮಣದಾಸರ ಗೃಹಕೃತ್ಯದ ಲೆಕ್ಕಪುಸ್ತಕದಲ್ಲಿ (ಸ್ವಹಸ್ತಾಕ್ಷರದ್ದು) ಚಿಕ್ಕನಾಯಕನಹಳ್ಳಿಯಲ್ಲಿದ್ದ ಪಿತ್ರಾರ್ಜಿತ ಭೂಸ್ವತ್ತಿನ ವಿವರಗಳಿರುವುದು; ತಾವು ಪೂರ್ವದಲ್ಲಿ ಚಿಕ್ಕನಾಯಕನ ಹಳ್ಳಿಯವರೆಂದು ಹೇಳಿಕೊಳ್ಳುವ, ದಾಸರ ವಂಶದ (ಬಹುಶಃ ದೌಹಿತ್ರ) ಶಾಖೆಗೆ

---

* ೧ ರಿಂದ ೬ನೇ ಭಾಗದವರೆಗೆ ಬಹುಮಟ್ಟಿಗೆ ಅರ್ಚನದ ಪೀಠಿಕೆಯೇ ಆಗಿದೆ.– ಸಂ.

೧. 'ಶ್ರೀ ಕೃಷ್ಣಬಾಲಲೀಲೆ'ಯ ಕರ್ತೃ ತಿಮ್ಮಪ್ಪದಾಸ ಎಂದು ತೀರ್ಮಾನಿಸಲು ಆಧಾರಗಳಿವೆ. ಈ ಕೃತಿಯಲ್ಲಿಯೇ ಕರ್ತೃವಿನ ಹೆಸರುಎಲ್ಲಿಯೂ ಉಕ್ತವಾಗಿಲ್ಲದಿರುವುದರಿಂದ ಈ ಮಾತನ್ನು ಹೇಳಬೇಕಾಗಿದೆ, ಇದೇ ಕವಿಯ ರಚನೆಗಳಾದ ಪೂಜಾ ವಿಧಾನ ಕೀರ್ತನೆಗಳನ್ನು 'ಅರ್ಚನ' ಎಂಬ ಹೆಸರಿನಿಂದ ಬೆಂಗಳೂರು ವಿಶ್ವವಿದ್ಯಾಲಯ ಪ್ರಕಟಿಸಿದೆ. ಅದರಲ್ಲಿ ಬರೆದಿರುವ 'ಪೀಠಿಕೆ'ಯಿಂದ ಕರ್ತೃವಿನ ವಿಷಯದಲ್ಲಿ ಇಲ್ಲಿ ಸಂಗ್ರಹಿಸಿಕೊಟ್ಟಿದೆ.

ಎಂದು ಇಟ್ಟುಕೊಂಡರೆ, ಅವರ ಜನನ ವರ್ಷ ೧೭೭೦ ಎಂದು ಲೆಕ್ಕಹಿಡಿದಿರುವುದರ ಆಧಾರದಮೇಲೆ ಅವರ ಮರಣ ೧೮೬೦ರ ಸುಮಾರಿನಲ್ಲಿ ಸಂಭವಿಸಿರಬೇಕು. ಸದ್ಯದ ಮಟ್ಟಿಗೆ, **ತಿಮ್ಮಪ್ಪದಾಸರ ಕಾಲವನ್ನು ಕ್ರಿ.ಶ.೧೭೭೦–೧೮೬೦ ಎಂದು ನಿರ್ಧರಿಸಬಹುದು.**

**೩. ಕುಲಪರಂಪರೆ**

ತಿಮ್ಮಪ್ಪದಾಸರ ಕೃತಿಗಳಿಂದ ಅವರ ತಂದೆ ತಾಯಿಗಳ ವಿಚಾರವಾಗಿ ಹೆಚ್ಚಿನ ಸಂಗತಿಗಳೇನೂ ತಿಳಿದುಬರುವುದಿಲ್ಲ. ತಂದೆಯ ಹೆಸರು ನಾರಾಯಣ ('ನಾರಾಯಣಾರ್ಯ'), ತಾಯಿಯ ಹೆಸರು ಚೆನ್ನಮ್ಮ ('ಚೆನ್ನಾಂಬೆ') ಎಂದು ಅರ್ಚನದ ಒಂದು ಕೀರ್ತನೆಯಿಂದ ತಿಳಿದುಬರುತ್ತದೆ. ತಿಮ್ಮಪ್ಪದಾಸರ ಪ್ರಪೌತ್ರರು ಕೊಡುವ ತರ್ಪಣಗಳಲ್ಲಿ ಪ್ರಪಿತಾಮಹ ಮತ್ತು ಪ್ರಪಿತಾಮಹೀ ಇವರ ಹೆಸರುಗಳು 'ತಿಮ್ಮಪ್ಪಯ್ಯ' ಮತ್ತು 'ವೆಂಕಮ್ಮ' ಎಂದು ಉಕ್ತವಾಗುವುದರಿಂದ, ತಿಮ್ಮಪ್ಪದಾಸರ ಹೆಂಡತಿಯ ಹೆಸರು ವೆಂಕಮ್ಮ ಎಂಬುದು ಸ್ಪಷ್ಟ. ಕೀರ್ತನೆಗಳಲ್ಲಿ ಮೇಲಿಂದ ಮೇಲೆ ಗುರು ವಾಸುದೇವಾರ್ಯರನ್ನು ಸ್ಮರಿಸಿರುವ ರೀತಿಯನ್ನು ಪರಿಭಾವಿಸಿದರೆ, ಗುರುಶಿಷ್ಯ ಸಂಬಂಧವನ್ನೂ ಮೀರಿ, ದಾಸರ ಪಾಲಿಗೆ ಅವರು ಸಾಕ್ಷಾತ್ ವೆಂಕಟರಮಣನೇ. ('ಮಾತೃ ದೇವೋ ಭವ', 'ಪಿತೃ ದೇವೋ ಭವ', 'ಆಚಾರ್ಯ ದೇವೋ ಭವ' ಎಂಬ ನಮ್ಮ ಆರ್ಷೇಯ ಭಾವನೆಗೆ ಇದು ಅನುಗುಣವಾಗಿಯೇ ಇದೆ.)

ಆದರೆ, ತಂದೆ ತಾಯಿಗಳ ಮತ್ತು ಈ ಮಗನ ನಡುವೆ ಸಂಬಂಧ ಹೇಗಿತ್ತು ಎಂಬುದನ್ನು ಅರಿಯುವುದು ಕಷ್ಟವಾಗಿದೆ. ಒಂದು ಕೀರ್ತನೆಯಲ್ಲಿ "ನಜಿಸಿದ ಮೂರು ವರ್ಷಕ್ಕೆ ನಿನ್ನಯ ದಾಸನೆನ್ನುತ ಮಾತುಳನಿಂದ ನುಡಿಸಿದೆ" ಎಂದಿರುವ ಮಾತಿನಿಂದ, ಸೋದರಮಾವನಿಂದ ದಾಸದೀಕ್ಷೆ ಪಡೆದ ಹಾಗೆ ಭಾಸವಾಗುತ್ತದೆ. ಇನ್ನೊಂದು ಕೀರ್ತನೆಯಲ್ಲಿ "ವಾಸುದೇವಾರ್ಯ, ಚಿಕ್ಕನಾಗಪುರದಿ

---

ಜ್ಯೇಷ್ಠ ಪುತ್ರನ ಜನನ ಎಂದರೆ ಪೂರ್ವಾಪರ ವಿರೋಧವಾಗುವುದಿಲ್ಲವೆ ಎಂಬ ಪ್ರಶ್ನೆ ಏಳುತ್ತದೆ. ಶ್ರೀರಂಗಪಟ್ಟಣದಲ್ಲಿದ್ದಾಗ ಮೊದಲ ಹೆಂಡತಿ ಮತ್ತು ಮಗ ಇದ್ದು ಅವರು ತೀರಿಕೊಂಡಿರಬೇಕು; ನಾರಾಯಣ ಎರಡನೆಯ ಹೆಂಡತಿಯ ಜ್ಯೇಷ್ಠಪುತ್ರನಿರಬಹುದು. ಬೇರೆ ಯಾವ ರೀತಿಯಿಂದಲೂ ಈ ತೊಡಕನ್ನು ಪರಿಹರಿಸುವುದು ಸಾಧ್ಯವಿಲ್ಲ. ಇದು ಕೇವಲ ಊಹೆ ಮಾತ್ರ.

ಇಲ್ಲಿ ಪ್ರಸಕ್ತವಾದ ಭಾಗ ಇಷ್ಟು: "... ಶಾಲಿವಾಹನ ಶಕಾಬ್ದಂಗಳಲ್ಲಿ ೧೭೪೪ನೇ ಸಂದ ಚಿತ್ರಭಾನು ಸಂವತ್ಸರದ ಮಾಘ ಬಹುಳ ೩೦ ಮಂಗಳವಾರ... ಚಿರಂಜೀವಿ ತಿಮ್ಮಪ್ಪಯ್ಯನ ಜ್ಯೇಷ್ಠಪುತ್ರ ನಾರಾಯಣನ ಜನನ." ಇಲ್ಲಿನ ತೇದಿ ಕ್ರಿ.ಶ. ೧೧–೨–೧೮೨೩ಕ್ಕೆ ಸರಿಹೋಗುತ್ತದೆ.

ಒಂದು ಷಟ್ಪದೀ ರಚನೆಯಲ್ಲಿ, – ತಿಮ್ಮಪ್ಪದಾಸರು ತಮ್ಮ ಗುರು ವಾಸುದೇವಾರ್ಯರನ್ನು ಶ್ರೀರಂಗಪಟ್ಟಣದಲ್ಲಿ ಮಹಾನವಮಿಯ ಮಹೋತ್ಸವದ ಸಂದರ್ಭದಲ್ಲಿ ಸಂದರ್ಶಿಸಿದ ಉಲ್ಲೇಖವಿದೆ. ಶ್ರೀರಂಗಪಟ್ಟಣದಲ್ಲಿ ಆಗ ಆಳುತ್ತಿದ್ದ ಖಾಸಾ ಚಾಮರಾಜ ಒಡೆಯರು (ಕ್ರಿ.ಶ.೧೭೭೬–೧೭೯೬) ನಡಸುತ್ತಿದ್ದ ನವರಾತ್ರಿಯ ಉತ್ಸವ ಟಿಪ್ಪುಸುಲ್ತಾನನ ಕಾಲದಲ್ಲಿ, ಸುಮಾರು ೧೭೯೪ರಲ್ಲಿ, ನಿಂತುಹೋದಂತೆ ತಿಳಿದುಬರುತ್ತದೆ. ಆದ್ದರಿಂದ, ಗುರುಶಿಷ್ಯರ ಭೇಟಿ ಅದಕ್ಕೆ ಮುಂಚೆ ಸುಮಾರು ೧೭೯೦–೯೪ರ ನಡುವೆ ನಡೆದಿರಬಹುದು. ಶ್ರೀರಂಗಪಟ್ಟಣದಲ್ಲಿದ್ದಾಗ ದಾಸರಿಗೆ ಮಕ್ಕಳಾಗಿರಲಿಲ್ಲವೆಂದೂ, ಆಗ ಅವರು ೧೮–೨೦ ವರ್ಷದ ಪ್ರಾಯದವರಿದ್ದಿರಬಹುದೆಂದೂ ಇಟ್ಟುಕೊಂಡರೆ, ಅವರ ಜನನ ಸುಮಾರು ಕ್ರಿ.ಶ.೧೭೭೦–೭೫ರಷ್ಟು ಹಿಂದಕ್ಕೆ ಹೋಗುತ್ತದೆ. ಎಂದಮೇಲೆ, ಹಿರಿಯ ಮಗ ನಾರಾಯಣನ ಜನನ ಅವರಿಗೆ ಸುಮಾರು ೪೦–೪೫ರ ವಯಸ್ಸಾಗಿದ್ದಾಗ ಆಯಿತು ಎನ್ನಬೇಕಾಗುತ್ತದೆ.[3] ಈ ಹಿಂದೆಯೆ ಉಲ್ಲೇಖಿಸಿರುವ ಲೆಕ್ಕಪುಸ್ತಕದಲ್ಲಿ ಶುಕ್ಲ – ಪ್ರಮೋದೂತ ಸಂವತ್ಸರಗಳ ಲೆಕ್ಕದ ದಾಖಲೆಗಳಲ್ಲಿ (ಸು. ಕ್ರಿ.ಶ.೧೮೬೯–೭೦) 'ತಂದೆಗಳ ಯಡೆಕಟ್ಲೆಗೆ' ಎಂಬ ದಾಖಲೆಯಿದೆ. ತಿಮ್ಮಪ್ಪದಾಸರು (೧೦ನೆಯ) ಚಾಮರಾಜ ಒಡೆಯರ ಕಾಲದಲ್ಲಂತೂ (ಕ್ರಿ.ಶ.೧೮೬೮–೧೮೯೪) ಇದ್ದಿರಲಾರರು. ತಮ್ಮ ಎರಡನೆಯ ಮಗ ವೆಂಕಟರಮಣದಾಸರಂತೆ ಅವರೂ ೯೦ ವರ್ಷ ದೀರ್ಘಾಯುಷಿಯಾಗಿದ್ದರು

---

* ೨. ಮೈಸೂರು ಮಾನಸಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ 'ಕೃಷ್ಣಸಂಧಾನ ಕೀರ್ತನೆಗಳು' ಎಂಬ ಹಸ್ತಪ್ರತಿಯಿದೆ. ಇದರಲ್ಲಿರುವ ಕೆಲವು ಕೀರ್ತನೆಗಳು ತಿಮ್ಮಪ್ಪದಾಸರವು; ಶ್ರೀ ಕೃಷ್ಣಬಾಲಲೀಲೆಯಲ್ಲಿ ಇರುವವು. ಆ ಪ್ರತಿಯಲ್ಲಿ ನಮೂದಾಗಿರುವ ಕ್ರಿ.ಶ.೧೮೩೪ ಎಂಬ ಕಾಲನಿರ್ದೇಶ ದಾಸರ ಕಾಲಕ್ಕೆ ಹೊಂದಿಬರುತ್ತದೆ.

೩. ಇಷ್ಟು ತಡವಾಗಿ ಜ್ಯೇಷ್ಠಪುತ್ರನ ಜನನವೇ? ಎಂಬ ಸಂದೇಹವುಂಟಾಗುವುದು ಸಹಜ. ಅಲ್ಲದೆ, ಒಂದು (ಅಪ್ರಕಟಿತ) ಕೀರ್ತನೆಯಲ್ಲಿ, 'ಜಾಯಾಸುತಾದ್ಯರ ಬರಿಯ ಮೋಹದಲ್ಲಿ ಆಯು ಬೀಯವಾಗುತ್ತಿದೆ' ಎಂಬ ಮಾತಿನಿಂದ ಶ್ರೀರಂಗಪಟ್ಟಣದಲ್ಲಿದ್ದಾಗ (ಎಂದರೆ ೧೭೯೦ರ ಸುಮಾರಿನಲ್ಲಿ) ಅವರಿಗೆ ಹೆಂಡತಿ ಮಕ್ಕಳಿದ್ದರು ಎಂದು ಗ್ರಹಿಸಬೇಕು. ಹೀಗಿದ್ದರೆ, ೧೮೨೩ರಲ್ಲಿ

ಪ್ರಾರಬ್ಧ ಕರ್ಮದ ಪ್ರಭಾವವನ್ನು ಎದುರಿಸಿ, ತಂದೆ ತಾಯಿ ಹೆಂಡತಿ ಮಕ್ಕಳು (ಸುತ) ಇವರನ್ನು ತೊರೆದುಕೊಂಡು, ಗುರು ವಾಸುದೇವಾರ್ಯರ ಮಹಿಮೆಯಿಂದ ಆಕರ್ಷಿತರಾಗಿ, ಚಿಕ್ಕನಾಗಪುರಕ್ಕೆ ದಾಸರು ತೆರಳಿರಬೇಕೆಂದು ಊಹಿಸಬಹುದು, ಬಹುಶಃ ಶ್ರೀರಂಗಪಟ್ಟಣವನ್ನು ಬಿಟ್ಟು ಚಿಕ್ಕನಾಯಕನಹಳ್ಳಿಗೆ ಹೋಗಿರಬಹುದು.

ವಾಸುದೇವಾರ್ಯರು ತಿಮ್ಮಪ್ಪದಾಸರಿಗೆ ಉಪದೇಶವಿತ್ತ ಗುರುವಾಗಿದ್ದುದಲ್ಲದೆ, ಪಿತಾಮಹರೂ ಆಗಿದ್ದರೆಂದು ಅನುಮಾನಿಸಲು ಅವಕಾಶವಿದೆ. "ತಿಂಮದಾಸ ಪೇಳಿದ ಧ್ರುವಚರಿತೆ"[೪] ಎಂಬ ಸಾಂಗತ್ಯ ಕಾವ್ಯದ ಕೊನೆಯ ಪದ್ಯಗಳಿಂದ ಅದರ ಕರ್ತೃತ್ವವೂ, ಹಸ್ತಪ್ರತಿಯ ೩೬ನೆಯ ಮತ್ತು ೪೧ನೆಯ ಗರಿಗಳಲ್ಲಿ ಸೇರಿಕೊಂಡಿರುವ (ಕಾವ್ಯಕ್ಕೆ ಸಂಬಂಧಪಡದ) ಲಿಪಿಕಾರ ಲಿಖಿತದಿಂದ ತಿಮ್ಮಪ್ಪದಾಸರು "ವಾಸುದೇವಾರ್ಯರ ಮೊಂಮ" (=ಮೊಮ್ಮಗ), "ವಾಸುದೇವ ಪುತ್ರ (=ಪವುತ್ರ<ಪೌತ್ರ)" ಎಂಬ ಅಂಶವೂ ತಿಳಿದುಬರುತ್ತದೆ. ಅಲ್ಲದೆ, ದಾಸರ ವಂಶಸ್ಥರು, "ತಮ್ಮ ವಂಶದ ಮೂಲಪುರುಷರು ವಾಸುದೇವಾರ್ಯರು, ತಮ್ಮ ಪೂರ್ವಿಕರು ಚಿಕ್ಕನಾಯಕನಹಳ್ಳಿಯಿಂದ ಬಂದವರು" ಎಂದು ಹೇಳಿಕೊಳ್ಳುತ್ತಿದ್ದುದು ಮೇಲಿನ ತೀರ್ಮಾನಕ್ಕೆ ಉಪಷ್ಟಂಭಕವಾಗಿದೆ.

### ೪. ಗುರು ಪರಂಪರೆ – ವಿದ್ಯಾವ್ಯಾಸಂಗ

ಶ್ರೀ ವಾಸುದೇವಾರ್ಯರು ತಿಮ್ಮಪ್ಪದಾಸರ ಪಿತಾಮಹರು ಎನ್ನುವುದು ಇಲ್ಲಿನ ವಿವೇಚನೆಯಲ್ಲಿ ಗೌಣವಾದ ವಿಷಯ; ಸ್ಪಷ್ಟವಾಗಿ ಎದ್ದುಕಾಣುವುದು ಅವರಿಬ್ಬರ ಗುರು–ಶಿಷ್ಯ ಸಂಬಂಧ. ಗುರುಸ್ತುತಿ ಪರವಾದ ದಾಸರ ಕೀರ್ತನೆಗಳು ಅನೇಕ ಉಪಲಬ್ಧವಾಗಿವೆ. ಅವುಗಳನ್ನೆಲ್ಲ ಸಂಗ್ರಹಿಸಿ ಅಧ್ಯಯನ ಮಾಡಿದ ಮೇಲೆ, ಗುರುವಿನ ವ್ಯಕ್ತಿತ್ವ ಈಗ ತಿಳಿದುಬಂದಿರುವುದಕ್ಕಿಂತ ಹೆಚ್ಚು ಸ್ಪಷ್ಟರೇಖೆಗಳಿಂದ ಮೂಡಿ ನಿಲ್ಲುವ ಸಂಭವವಿದೆ. ಒಟ್ಟಿನ ಮೇಲೆ, ಚಿಕ್ಕನಾಯಕನಹಳ್ಳಿಯ ಪ್ರಾಂತದ ಜನಜನಿತ ಹೇಳಿಕೆಗಳಿಂದಲೂ, ತಿಮ್ಮಪ್ಪದಾಸರ ಕೃತಿಗಳ ಆಧಾರಗಳಿಂದಲೂ ಇತರ ಕೆಲವು ಆಧಾರಗಳಿಂದಲೂ ವಾಸುದೇವಾರ್ಯರು ಅವರ ಕಾಲದಲ್ಲಿ ಒಬ್ಬ ಮಹಿಮಾ ಪುರುಷರಾಗಿದ್ದರೆಂದು ತಿಳಿಯಲು ಯಾವ ಅಡ್ಡಿಯೂ ಇಲ್ಲ. ತಿಮ್ಮಪ್ಪದಾಸರ ಕಾಲದ ಆಧಾರದ ಮೇಲೆ, ವಾಸುದೇವಾರ್ಯರು ಸುಮಾರು

* ೪. ಈ ಕೃತಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಿಂದ ಪ್ರಕಟವಾಗಿದೆ.

ಪರತತ್ತ್ವವರುಹಿ ವೆಂಕಟದಾಸವೇಷದಿಂ ಮರಳಿ ನಿಜದೊಳು ನಿಂದೆ" ಎಂದು ಹೇಳಿರುವುದಲ್ಲದೆ ಒಂದೆರಡು ಕೀರ್ತನೆಗಳಲ್ಲಿ ಇವರನ್ನೂ ಕೊಂಡಾಡಿದ್ದಾರೆ. ಈ ವೆಂಕಟದಾಸ ಮಾತುಳನೆಂದು ಊಹಿಸಬಹುದು. ಸ್ವಂತ ತಂದೆಯನ್ನು ಹೀಗೆ ಗುರುಭಾವನೆಯಿಂದ ಕೊಂಡಾಡಿರುವ ಕೀರ್ತನೆ ಸದ್ಯಕ್ಕೆ ಯಾವುದೂ ಗಮನಕ್ಕೆ ಬಂದಿಲ್ಲ.

ಈ ಸಂದರ್ಭದಲ್ಲಿ, ತಂದೆ ತಾಯಿಗಳ ಬಗೆಗೆ ದಾಸರ ಅಭಿಪ್ರಾಯವನ್ನು ತಿಳಿಸುವ ಒಂದು ಕೀರ್ತನೆಯ ಕೆಲವು ಸಾಲುಗಳನ್ನು ಇಲ್ಲಿ ಉದ್ಧರಿಸುವುದು ಅಪ್ರಕೃತವೆನಿಸದು:

ಪ್ರಾರಬ್ಧವೆ ನಿನಗೊಪ್ಪಿದ ತನುವಿದ । ನಾರೈದುಳಿಸು ಕೆಡಿಸು । ನಿನ್ನ ಮನಸು।
ಹಾರೈಸಲಾರದೆ ಹಲವು ದೈವಗಳನ್ನು। ಸೇರಿದೆ ಶ್ರೀವಾಸುದೇವಾರ್ಯಪದವನ್ನು ।ಪಲ್ಲ।

ಎರೆದು ಪಾಲ್ದುಪ್ಪವ ಹೊರೆದೆನೆನ್ನುತ ತಾಯಿ ।
ಪರಲೋಕ ಸಾಧಕವೆನುತ ಸಂಸ್ಕಾರಗಳ್ ।
ವಿರಚಿಸಿ ತಂದೆಯ ಬೆರೆತಿರಲವರೊಳ– ।
ಗಿರದಂತೆ ತೊಲಗಿಸಿ ಬರಸೆಳಕೊಂಡಂಥ ॥ ।೧।

○ ○ ○ ○

ನೀನಿತ್ತಡಗ್ನಿಗೆ ಪುಲಿಗೆ ಚೋರಗೆ ಸುತ– ।
ಗಾನುಕೂಲದ ಸತಗಯ್ಯಗಮ್ಮಗೆನಗೆ ।
ನೀನೀಯ್ಯದಿರಲಾರಿಗಿಲ್ಲೆಂದು ಗುರುವರ್ಯ ॥
ತಾನೆ ಬೋಧಿಸುತೆನ್ನ ಪಿಂಗಡಿಸಿದನಾಗಿ ॥ ।೪।

ಬಾಗರೆದರೆ ಬೆಳೆದಂಜಿಪೆ ತೊರೆದರೆ ।
ಬೀಗುವೆ ನೀನೆಂದು ತಿಳಿದೀಗ ನಾ ಚಿಕ್ಕ ।
ನಾಗಪುರದಿ ಗುರುವಾಸುದೇವಾರ್ಯರ ।
ಬೇಗದಿಂ ಸೇರಿ ಬೆರೆದೆನಂಜೆ ನಿನಗಿನ್ನು ॥ ।೫।

ಕುಲದ 'ಬಬ್ಬೂರು ಕಮ್ಮೆ' ಎಂಬ ಉಪಪಂಗಡಕ್ಕೆ ಸೇರಿದವರು. ಆದ್ದರಿಂದ, ತಿಮ್ಮಪ್ಪದಾಸರ ಮತ ಯಾವುದು ಎಂಬುದರ ಬಗೆಗೆ ಸಂದೇಹಕ್ಕೆ ಅವಕಾಶವೇ ಇಲ್ಲ. ಈ ಪಂಗಡದವರು ಅದ್ವೈತಿಗಳು ಎಂಬುದು ಸ್ವಯಂಸ್ಪಷ್ಟ; ಇವರು ಶೃಂಗೇರಿ ಮಠದ ಶಿಷ್ಯಕೋಟಿಗೆ ಸೇರಿದವರು. ತಿಮ್ಮಪ್ಪದಾಸರ ಇಲ್ಲಿನ ಪೂಜಾವಿಧಾನ ಕೀರ್ತನೆಗಳಲ್ಲಿಯೂ, ಇತರ ಕೆಲವು ಕೃತಿಗಳಲ್ಲಿಯೂ, ಇತರ ಕೆಲವು ಕೃತಿಗಳಲ್ಲಿಯೂ, ಸಾಹಿತ್ಯ–ಸಂಗೀತಗಳ ಚೌಕಟ್ಟಿನಲ್ಲಿ ಅದ್ವೈತ ತತ್ತ್ವದ ಪ್ರತಿಪಾದನೆಯನ್ನು ಸ್ಪಷ್ಟವಾಗಿ ಕಾಣಬಹುದು. ಪ್ರಸ್ತುತ, 'ಶ್ರೀ ಕೃಷ್ಣಬಾಲಲೀಲೆ'ಯನ್ನು ಶ್ರೀಮದ್ಭಾಗವತದ ಆಧಾರದ ಮೇಲೆ ರಚಿಸುವ ಸಂದರ್ಭದಲ್ಲಿ ಶ್ರೀದರಸ್ವಾಮಿ ಕೃತ 'ಭಾವಾರ್ಥ ದೀಪಿಕೆ' ಎಂಬ ಅದ್ವೈತಪರ ವ್ಯಾಖ್ಯಾನವನ್ನೂ ಬಹುಶಃ ಭಾಗವತಮತ ವ್ಯಾಖ್ಯಾನವನ್ನೂ ಅನುಸರಿಸಿರುವುದು ಗಮನಾರ್ಹ. ಇಷ್ಟರ ಜೊತೆಗೆ, ಇವರ ಇಷ್ಟದೈವ ತಿರುಪತಿಯ ವೆಂಕಟರಮಣ ಸ್ವಾಮಿ ಎಂದೂ, ಇವರು 'ಹರಿದಾಸ'ರೆಂದೂ ಅವರ ಕೃತಿಗಳಿಂದಲೇ ಗೊತ್ತಾಗುತ್ತದೆ. ಅದ್ವೈತ ಸಿದ್ಧಾಂತದ ಪ್ರವರ್ತಕರಾದ ಆದಿ ಶಂಕರರ ಶೈವನಿಷ್ಠೆ ಹೆಚ್ಚೋ ವೈಷ್ಣವನಿಷ್ಠೆ ಹೆಚ್ಚೋ ಹೇಳುವುದು ಕಷ್ಟ. ಶಿವನ ಕಡೆಗೆ ಅವರ ಒಲವು ಹೆಚ್ಚಿರಬಹುದು; ಆದರೆ ಅವರು ಶುದ್ಧ ಶೈವಮತಾನುಯಾಯಿಗಳಲ್ಲ. ಅದೇ ರೀತಿ, ಕುಮಾರವ್ಯಾಸ, ಲಕ್ಷ್ಮೀಶರಲ್ಲಿ ಹರಿಭಕ್ತಿ ಪ್ರಧಾನವಾದರೂ ಅವರು 'ವೈಷ್ಣವ'ರಲ್ಲ. ಹಾಗೆಯೆ, ತಿಮ್ಮಪ್ಪದಾಸರು ಅನೇಕ ಕಡೆ ತಾವು 'ಹರಿದಾಸ'ರೆಂದು ಹೇಳಿಕೊಂಡಿದ್ದರೂ, ಪುರಂದರದಾಸಾದಿಗಳಂತೆ ಮಾಧ್ವ ವೈಷ್ಣವ ಸಂಪ್ರದಾಯದ ಹರಿದಾಸರಲ್ಲ ಅವರು. ಇವರ ಕೃತಿಗಳ ಪರಿಶೀಲನೆಯಿಂದ, ಅದ್ವೈತಕ್ಕೆ ಅವಿರೋಧವಾದ ಭಾಗವತ ಧರ್ಮವನ್ನು ಇವರು ಅನುಸರಿಸುತ್ತಿದ್ದರು ಎಂದು ಹೇಳಬಹುದು.

**ಭಾಗವತ ಧರ್ಮ** : ಭಾಗವತ ಧರ್ಮವನ್ನು ಪ್ರತಿಪಾದಿಸುವ ಗ್ರಂಥಗಳು ಮುಖ್ಯವಾಗಿ ಇವು: ಮಹಾಭಾರತದ ಶಾಂತಿಪರ್ವದ ನಾರಾಯಣೀಯ ಭಾಗ, ಭಗವದ್ಗೀತೆ, ಭಾಗವತ ಮಹಾಪುರಾಣ, ವಿಷ್ಣುಪುರಾಣ ಮತ್ತು ಪಾಂಚರಾತ್ರಾದಿ ವೈಷ್ಣವಾಗಮಗಳು. ಈ ಗ್ರಂಥಗಳ ಆಧಾರದ ಮೇಲೆ, (ವಿಶೇಷವಾಗಿ ಪಾಂಚರಾತ್ರಾಗಮಾದಿ ವೈಷ್ಣವ ಗ್ರಂಥಗಳನ್ನು ಆಧರಿಸಿ) ಶ್ರೀ ರಾಮಾನುಜಾಚಾರ್ಯರೂ ಶ್ರೀ ಮಧ್ವಾಚಾರ್ಯರೂ ತಮ್ಮ ತಮ್ಮ ದ್ವೈತ ವಿಶಿಷ್ಟಾದ್ವೈತ ಸಿದ್ಧಾಂತಗಳಿಗೆ ಅನುಗುಣವಾಗಿ ಭಾಗವತ ಧರ್ಮವನ್ನು ಅಳವಡಿಸಿಕೊಂಡು ಪ್ರತಿಪಾದಿಸಿರುತ್ತಾರೆ. ಇವರಿಗಿಂತಲೂ ಪ್ರಾಚೀನರಾದ ಶ್ರೀ ಶಂಕರಾಚಾರ್ಯರು ಕೂಡ ಭಾಗವತ ಧರ್ಮದ ವಿವೇಚನೆಯನ್ನು ಮಾಡಿ,

೧೭೨೫ರಿಂದ ೧೭೭೦ರ ನಡುವಣ ಕಾಲಾವಧಿಯಲ್ಲಿ ಜೀವಿಸಿದ್ದರೆಂದು ಹೇಳಬಹುದು.

ರಾಮಕೃಷ್ಣಾರ್ಯರು ಮತ್ತು ನೀಲಕಂಠಾರ್ಯರು ದಾಸರ ಇನ್ನಿಬ್ಬರು ವಿದ್ಯಾಗುರುಗಳು. ಇವರ ಬಳಿ ಶಿಷ್ಯವೃತ್ತಿಮಾಡಿ ತಿಮ್ಮಪ್ಪದಾಸರು ಅಪಾರ ಜ್ಞಾನಸಂಪಾದನೆ ಮಾಡಿರುವುದರಲ್ಲಿ ಸಂದೇಹವಿಲ್ಲ. ಆದರೂ, ಇವರ ಕೃತಿಗಳಲ್ಲಿ ಗುರು ವಾಸುದೇವಾರ್ಯರ ಪ್ರಭಾವಮುದ್ರೆ ಮೂಡಿರುವಂತೆ, ಉಳಿದಿಬ್ಬರ ಪ್ರಭಾವ ಮೂಡಿ ಎದ್ದುಕಾಣುವುದಿಲ್ಲ; ಆದರೆ, ಕೀರ್ತನೆ ಕಾವ್ಯ ಮುಂತಾದ ಕೃತಿರಚನೆಗೆ ಅಗತ್ಯವಾದ ವ್ಯುತ್ಪತ್ತಿ ಈ ಇಬ್ಬರು ಮಹನೀಯರುಗಳ ಬೋಧೆಯಿಂದ ದಾಸರ ವಶವಾಗಿದೆ ಎಂಬಲ್ಲಿ ಸಂದೇಹವಿಲ್ಲ.

ಮೇಲ್ಕಂಡ ಇಬ್ಬರಲ್ಲದೆ, ತಿಮ್ಮಪ್ಪದಾಸರು ವೆಂಕಟದಾಸಾರ್ಯ, ಕೃಷ್ಣ ಯೋಗೀಂದ್ರ, ನರಸಾರ್ಯ, ನಾರಾಯಣಾಚಾರ್ಯ, ಗೋಪಾಲಾರ್ಯ ಇವರನ್ನು ಸ್ತುತಿಸಿದ್ದಾರೆ. ಇವರ ಪೈಕಿ ವೆಂಕಟದಾಸಾರ್ಯರ ಹೊರತು ಉಳಿದವರೆಲ್ಲಾ ವಾಸುದೇವಾರ್ಯರಿಗಿಂತಲೂ ಹಿಂದಿನ ಗುರುಪರಂಪರೆಗೆ ಸೇರಿದ್ದವರು. ಗೋಪಾಲಾರ್ಯರನ್ನು ಸ್ತೋತ್ರಮಾಡುವ ಅನೇಕ ಕೀರ್ತನೆಗಳಿವೆ (ಇವು ಹಲವು ತೆಲುಗಿನಲ್ಲಿವೆ).

ಕೀರ್ತನೆಗಳಲ್ಲಿ, 'ಪಂಡಿತತ್ವಾಭಿಮಾನ', 'ವಿದ್ಯದಲ್ಲಿ ನಿರ್ಬಂಧವಾಯಿತು', 'ವಿದ್ಯ ವಿಸ್ತರವಾದರದ್ದುವದು ಗರ್ವದಲಿ' – ಇವುಗಳ ಉಲ್ಲೇಖ; ಸಂಸ್ಕೃತದಲ್ಲಿ ಕೃತಿರಚನಾ ಸಾಮರ್ಥ್ಯ; ಕೆಲವೆಡೆಗಳಲ್ಲಿ ಭಾಷಾಶೈಲಿಯ ಪ್ರೌಢಿಮೆ; ವೇದ, ಉಪನಿಷತ್ತು, ಭಗವದ್ಗೀತೆ, ಭಾಗವತ ಮುಂತಾದ ಗ್ರಂಥಗಳ ಜ್ಞಾನ; ಈಗಲೂ ವಂಶಸ್ಥರ ಬಳಿ ಅಳಿದುಳಿದಿದ್ದ (ಬಹುಶಃ ತಿಮ್ಮಪ್ಪದಾಸರದ್ದೇ ಆದ) (ಸುಮಾರು ೫೫–೬೦ ಹಸ್ತಪ್ರತಿಗಳ) ಗ್ರಂಥಸಂಗ್ರಹ[೫] ಇವನ್ನೆಲ್ಲಾ ಗಮನಕ್ಕೆ ತಂದುಕೊಂಡರೆ, ತಿಮ್ಮಪ್ಪದಾಸರು ಹುಟ್ಟುಕವಿಯಾಗಿದ್ದುದರ ಜೊತೆಗೆ ನಾನಾ ಶಾಸ್ತ್ರಗಳಲ್ಲಿ ಪಾರಂಗತರಾದ ವಿದ್ವಾಂಸರೂ ಆಗಿದ್ದರೆಂದು ಹೇಳಬಹುದು.

## ೫. ಮತ – ಧರ್ಮ

ತಿಮ್ಮಪ್ಪದಾಸರ ವಂಶಸ್ಥರು ಹರಿತಸಗೋತ್ರಾನ್ವಿತ ಸ್ಮಾರ್ತಬ್ರಾಹ್ಮಣ ಕಮ್ಮೆ

---

* ೫. ಈ ಹಸ್ತಪ್ರತಿ ಸಂಗ್ರಹವಷ್ಟನ್ನೂ ದಾಸರ ಮರಿಮಕ್ಕಳಾದ ದಿ॥ ಎಂ.ವಿ.ವೆಂಕಟ ರಮಣಯ್ಯನವರೂ ಅವರ ಸೋದರರೂ ಬಿ.ಎಂ.ಶ್ರೀ. ಪ್ರತಿಷ್ಠಾನಕ್ಕೆ ದಾನಮಾಡಿದ್ದಾರೆ.

ದೈವಗಳೆನಿಸಿಕೊಂಡರು. ಅದ್ವೈತಿಗಳು ಈ ಉಭಯ ದೈವಗಳನ್ನೂ ಸಮಪ್ರಾಧಾನ್ಯದಿಂದ ಒಪ್ಪಿಕೊಂಡದ್ದು ತಾತ್ತ್ವಿಕವಾಗಿ ಕ್ರಮಪ್ರಾಪ್ತವಾಗಿಯೇ ಇದೆ. ದಕ್ಷಿಣದೇಶದಲ್ಲಿ ಶೈವ ಧರ್ಮ ವೈಷ್ಣವ ಧರ್ಮಕ್ಕಿಂತ ಹೆಚ್ಚು ಪ್ರಾಚೀನವೂ ವ್ಯಾಪಕವೂ ಆಗಿದ್ದಿತು. ಆದ್ದರಿಂದ ಮಧ್ವರಾಮಾನುಜರು ವೈಷ್ಣವ ಧರ್ಮವನ್ನು ಪ್ರಚಾರ ಮಾಡುವುದಕ್ಕೆ ಮುಂಚೆ ಅದ್ವೈತಿಗಳಲ್ಲಿ ಶೈವದ ಕಡೆಗೆ ಒಲವು ಹೆಚ್ಚಾಗಿದ್ದಂತೆ ಕಂಡುಬರುತ್ತದೆ; (ಕನ್ನಡ ನಾಡಿನಲ್ಲಿ ಕೂಡ) ಶೈವ ಬ್ರಾಹ್ಮಣರ ಪಂಗಡ ಪ್ರಮುಖವಾಗಿದ್ದಿತು. ಆದರೆ, ಭಾಗವತ ಧರ್ಮವನ್ನು ನಿರಾಕರಿಸಿದ ಹಾಗೆ ಕಂಡು ಬರುವುದಿಲ್ಲ. ೧೩ನೆಯ ಶತಮಾನದಲ್ಲಿ ವೈಷ್ಣವ ಧರ್ಮ ಪ್ರಾಬಲ್ಯಕ್ಕೆ ಬಂದಮೇಲೆ, ಅದ್ವೈತಿಗಳ ಶೈವನಿಷ್ಠೆ ಕುಗ್ಗಿ ವೈಷ್ಣವನಿಷ್ಠೆಗೆ ಎಡೆಗೊಟ್ಟಂತೆ ಕಂಡುಬರುತ್ತದೆ. ಈ ಬೆಳವಣಿಗೆಯಲ್ಲಿ, ಬಹು ಪ್ರಾಚೀನ ಕಾಲದಲ್ಲಿಯೇ, ಶೈವನಿಷ್ಠೆಗೂ ವೈಷ್ಣವ ನಿಷ್ಠೆಗೂ ತಾಕಲಾಟ ಬಂದ ಎಡೆಕಟ್ಟಿನಲ್ಲಿ, ಎರಡಕ್ಕೂ ಮನ್ನಣೆ ಕೊಡುವ 'ಹರಿಹರ ಕಲ್ಪನೆ' ಪ್ರಾದುರ್ಭವಿಸಿರಬೇಕು. ಚಾಲುಕ್ಯರು ಶೈವ ವೈಷ್ಣವ ಸಮನ್ವಯ ಸಾಧಕರಾಗಿದ್ದರು; ಅವರು ಕಟ್ಟಿಸಿದ ಗುಹಾಂತರ್ದೇವಾಲಯಗಳಲ್ಲಿ ತ್ರಿಮೂರ್ತಿ ವಿಗ್ರಹ ಹಾಗೂ ಹರಿಹರ ವಿಗ್ರಹಗಳು ಕಂಡುಬಂದಿವೆ. ಅದ್ವೈತಕ್ಕೆ ಅವಿರೋಧಿಯಾದ ಪುರಾತನ ಭಾಗವತ ಧರ್ಮದ ಚೌಕಟ್ಟಿಗೆ ಈ ಹರಿಹರಾಭೇದ ಕಲ್ಪನೆ ಒಪ್ಪಾದದ್ದರಿಂದ, ಇದನ್ನು ಪ್ರಧಾನ ಲಕ್ಷಣವಾಗಿ ಉಳ್ಳ 'ಭಾಗವತ ಧರ್ಮ ಪ್ರಭೇದ'ವೊಂದು ರೂಪಗೊಂಡಂತೆ ಕಂಡುಬರುತ್ತದೆ. ವೀರಶೈವ ಧರ್ಮ ಪ್ರಾಬಲ್ಯಕ್ಕೆ ಬಂದ ಕಾಲದಲ್ಲಿ ಅದು ಸಹಜವಾಗಿಯೆ ವೈಷ್ಣವ ವಿರೋಧಿಯಾಗಿತ್ತು; ಇತ್ತ, ಮಧ್ವಮತ 'ಹರಿಸರ್ವೋತ್ತಮತ್ವ"ವನ್ನು ಎತ್ತಿಹಿಡಿಯುತ್ತಿತ್ತು. ಈ ಎರಡು ಪಂಥಗಳಲ್ಲಿಯೂ ವೀರನಿಷ್ಠೆಗೆ ಪ್ರಾಧಾನ್ಯ. ಈ ಎರಡು ವೀರನಿಷ್ಠೆಗಳ ನಡುವೆ ಮಧ್ಯಮಾರ್ಗವನ್ನು ಹಿಡಿದು, ಸಮನ್ವಯ ದೃಷ್ಟಿಯನ್ನು ಬೆಳಸಿಕೊಳ್ಳುವ ಪ್ರವೃತ್ತಿಯನ್ನು ಒಂದು ಐತಿಹಾಸಿಕ ಬೆಳವಣಿಗೆಯೆಂದೇ ಪರಿಗಣಿಸಬೇಕಾಗುತ್ತದೆ. ಶಂಕರಾಚಾರ್ಯರಲ್ಲಿಯೇ ಈ ದೃಷ್ಟಿಯನ್ನು ಗುರುತಿಸಬಹುದು. ಗುಪ್ತವಂಶದವರು ಪರಮಭಾಗವತರಾಗಿದ್ದರೆಂದು ತಿಳಿದು ಬರುತ್ತದೆ. ಶಿವ-ವಿಷ್ಣು ದೇವಾಲಯಗಳೆರಡನ್ನೂ ಕಟ್ಟಿಸಿ, ಉಭಯ ದೇವತೆಗಳಿಗೂ ಸಮಪ್ರಾಧಾನ್ಯವನ್ನು ರಾಜರು ಕೊಟ್ಟಿರುವುದಕ್ಕೆ ರಾಷ್ಟ್ರಕೂಟರ ಕಾಲದ ಶಾಸನಗಳಲ್ಲಿಯೂ ಆಧಾರವಿದೆ. ಹೊಯ್ಸಳರ ಕಾಲದಲ್ಲಿ, ೨ನೆಯ ನಾರಸಿಂಹನ ದಂಡನಾಯಕ ಪೋಲಾಳ್ವನು ಹರಿಹರ ಕ್ಷೇತ್ರದಲ್ಲಿ ಹರಿಹರ ದೇವಸ್ಥಾನವನ್ನು ಕಟ್ಟಿಸಿ ಗ್ರಾಮವನ್ನು ದತ್ತಿಯಾಗಿ

"ಭಗವಾನೇವೈಕೋ ವಾಸುದೇವೋ ನಿರಞ್ಜನ ಜ್ಞಾನ ಸ್ವರೂಪಃ ಪರಮಾರ್ಥ ತತ್ತ್ವಮ್" ಎಂದು ತಿಳಿಸಿ, ಆ ಮತವು ಅದ್ವೈತಕ್ಕೆ ಅವಿರುದ್ಧವಾದುದೆಂಬ ಅಭಿಪ್ರಾಯವನ್ನು ಮುಂದಿಟ್ಟಿರುತ್ತಾರೆ. ಶಂಕರರು 'ವಾಸುದೇವ' ಶಬ್ದಕ್ಕೆ ಲಕ್ಷ್ಯ ಹರಿಸಿದ್ದರೆ, ಮಧ್ವರಾಮಾನುಜರು 'ಹರಿ–ನಾರಾಯಣ–ವಿಷ್ಣು' ಈ ಭಗವದ್ವಾಚಕಗಳಿಗೆ ಪ್ರಾಧಾನ್ಯ ಕೊಟ್ಟಿರುತ್ತಾರೆ. ವಾಚಕ ಯಾವುದಾದರೂ ವಾಚ್ಯ ಪರಮಾತ್ಮನೆನಿಸಿಕೊಂಡ ಆ ಭಗವಂತನೇ. ಆದ್ದರಿಂದ, ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳು ತಮ್ಮ 'ಭಾಗವತ ಸಂಪ್ರದಾಯ' ಎಂಬ ಅಮೂಲ್ಯ ಗ್ರಂಥದಲ್ಲಿ (ಪು. ೧೪೫) ಅಪ್ಪಣೆ ಕೊಡಿಸಿರುವಂತೆ, "ವಿಷ್ಣುಭಗವಂತನನ್ನು ನಿಯಮದಿಂದ ಆರಾಧಿಸುವವರೂ ವೈಷ್ಣವದೀಕ್ಷೆಯನ್ನು ಕೈಕೊಂಡಿರುವವರೂ ಯಾವ ಸಿದ್ಧಾಂತವನ್ನೆ ಅನುಸರಿಸಿರಲಿ, ಅವರೆಲ್ಲರೂ ವೈಷ್ಣವರೇ, ಅವರೆಲ್ಲಾ ಈ ವಿಶಾಲಾರ್ಥದಲ್ಲಿ ಭಾಗವತರೇ ಆಗಿರುತ್ತಾರೆ. ಆದರೂ ನಮ್ಮ ದೇಶದಲ್ಲಿ **ವೈಷ್ಣವ**ರೆಂದರೆ ಮಾಧ್ವ ಸಂಪ್ರದಾಯದ ದ್ವೈತಿಗಳು; **ಶ್ರೀವೈಷ್ಣವ**ರೆಂದರೆ ಶ್ರೀ ರಾಮಾನುಜಾಚಾರ್ಯರ ಅನುಯಾಯಿಗಳಾದ ವಿಶಿಷ್ಟಾದ್ವೈತಿ ಗಳು; **ಭಾಗವತರು** ಎಂದರೆ ಶ್ರೀ ಶಂಕರ ಭಗವತ್ಪಾದರು ಅನುಸರಿಸಿರುವ ಅದ್ವೈತ ಸಿದ್ಧಾಂತವನ್ನೇ ಅವಲಂಬಿಸಿ ವೈಷ್ಣವ ಸಂಪ್ರದಾಯವನ್ನು ವಿಶೇಷ ರೀತಿಯಿಂದ ಆಚರಿಸುವವರು – ಎಂಬ ಸಂಕೇತವು ಬಂದಿರುತ್ತದೆ." ತಾತ್ತ್ವಿಕ ದೃಷ್ಟಿಭೇದ, ಆಚಾರಭೇದ– ಇವನ್ನು ಹೊರತುಪಡಿಸಿ ತ್ರಿಮತಸ್ಥರಿಗೂ ಅನ್ವಯಿಸುವಂತೆ ಹೇಳುವುದಾದರೆ, "ವಿಷ್ಣು ಭಗವಂತನನ್ನು ಆರಾಧಿಸುವ ಭಾಗವತರ, ಎಂದರೆ ಭಗವದ್‌ಭಕ್ತರ, ಧರ್ಮವೇ ಭಾಗವತ ಧರ್ಮ" ಎಂದು ಹೇಳಲು ಅಡ್ಡಿಯಿಲ್ಲ. ಆದ್ದರಿಂದ ಇದುಭಕ್ತಿಪಂಥವೇ ಆಗುತ್ತದೆ; ಏಕದೇವೋಪಾಸನೆ ಅದರ ಸಾರಸರ್ವಸ್ವ. ಭಾಗವತ ಧರ್ಮದ ಕ್ರಮವಾದ ವ್ಯಾಪಕವಾದ ಬೆಳವಣಿಗೆಯನ್ನು ಅನುಲಕ್ಷಿಸಿ ಹೇಳುವುದಾದರೆ, ಇದು ವೈಷ್ಣವ ಧರ್ಮವೇ. ಭಾಗವತ ಮತದಲ್ಲಿ ಶೈವ ಇತ್ಯಾದಿ ಉಪಶಾಖೆಗಳು ಇರುವುವಾದರೂ, ರೂಢಿಯಲ್ಲಿ ಭಾಗವತಮತ ವೈಷ್ಣವ ಎಂದೇ ಪ್ರಸಿದ್ಧ.

ಅದ್ವೈತಿಗಳು ತಾತ್ತ್ವಿಕವಾಗಿ ನಿರ್ಗುಣಬ್ರಹ್ಮದ ಉಪಾಸಕರಾದರೂ ವ್ಯವಹಾರದ ನೆಲೆಗಟ್ಟಿನಲ್ಲಿ ದ್ವೈತದೃಷ್ಟಿಯವರು – ಸಗುಣೋಪಾಸನೆಯನ್ನೂ ಒಪ್ಪಿಕೊಂಡವರು ಎಂಬ ಅರ್ಥದಲ್ಲಿ. ಪರಬ್ರಹ್ಮನ ಸಗುಣತ್ವವನ್ನು ತ್ರೈಗುಣ್ಯ ದೃಷ್ಟಿಯಿಂದ (ಸೃಷ್ಟಿ ಸ್ಥಿತಿ ಲಯ ತತ್ತ್ವಗಳ) ಚತುರ್ಮುಖ ಬ್ರಹ್ಮ, ವಿಷ್ಣು, ಮಹೇಶ್ವರ ಎಂದು ವಿಭಜನೆ ಮಾಡಲಾಯಿತು. ಆದರೆ, ವಿಷ್ಣು ಮಹೇಶ್ವರರು ಮಾತ್ರ ಆರಾಧ್ಯ

ಸಮೀಕರಿಸುವುದಾಗಲಿ, ಸರಿಯಲ್ಲ. ಆದ್ದರಿಂದ, 'ಭಾಗವತ ಧರ್ಮ' ಅಥವಾ 'ಭಾಗವತ ಸಂಪ್ರದಾಯ' ಎಂಬ ಪದವನ್ನು ಯಾವ ತಾರತಮ್ಯದೃಷ್ಟಿಯೂ ಇಲ್ಲದೆ, ಕೇವಲ ವಿಚಾರ ಸೌಕರ್ಯ ದೃಷ್ಟಿಯಿಂದ, ಅದ್ವೈತಿಗಳ ಭಾಗವತ ಧರ್ಮಕ್ಕೆ ಅನ್ವಯಿಸುವುದು ಮೇಲು. ಇದಕ್ಕೆ ರೂಢಿಯ ಬೆಂಬಲವೂ ಇದೆ.

**ತಿಮ್ಮಪ್ಪದಾಸರ ಭಾಗವತದೃಷ್ಟಿ :** ತಿಮ್ಮಪದಾಸರು 'ಭಾಗವತ ಸಂಪ್ರದಾಯ'ದ ವಿಶಿಷ್ಟ ಸ್ಮಾರ್ತಸಮಾಜಕ್ಕೆ ಸೇರಿದವರಲ್ಲವೆಂಬ ಸಂಗತಿಯನ್ನು ಹಿಂದೆಯೆ ಸೂಚಿಸಿದೆ. ಹಾಗಿದ್ದರೂ ಕೂಡ, ಮೂಲ ಭಾಗವತ ಧರ್ಮದ ಕೆಲವು ಲಕ್ಷಣಗಳು ಅವರ ಕೃತಿಗಳಲ್ಲಿ ಗಮನಾರ್ಹವಾಗಿ ಗೋಚರಕ್ಕೆ ಬರುತ್ತವೆ. ಅವು ಪರಿಶೀಲನಾರ್ಹ.[೭]

(೧)(ನಾವು ಗ್ರಹಿಸಿರುವಂತೆ) ತಿಮ್ಮಪ್ಪದಾಸರ ಪಿತಾಮಹರು ಸಂನ್ಯಾಸಾಶ್ರಮವನ್ನು ಸ್ವೀಕರಿಸಿದಮೇಲೆ 'ವಾಸುದೇವ' ಎಂಬ ಹೆಸರನ್ನು ತಳೆದಿರಬೇಕು. "ನಿರ್ವಿಶೇಷವಾದ ಪರಮಾರ್ಥತತ್ತ್ವವೇ ವಾಸುದೇವನು ಎಂದು ಭಾಗವತ ಮತದವರು ಒಪ್ಪಿರುವಂತೆಯೇ ಶಂಕರಾಚಾರ್ಯರೂ ಒಪ್ಪಿರುತ್ತಾರೆ" ('ಭಾಗವತ ಸಂಪ್ರದಾಯ', ಪು.೨೨)ಯಾದ್ದರಿಂದ, ಮೂಲತಃ ಭಾಗವತರು ವಾಸುದೇವೋಪಾಸಕರಾಗಿರುವುದರಿಂದ, ವಾಸುದೇವಾರ್ಯರು ಆ ಪರಮಾರ್ಥ ತತ್ತ್ವಸೂಚಕವಾಗಿಯೇ ಈ ಹೆಸರನ್ನು ಧರಿಸಿರಬಹುದು. ಈ ಗ್ರಹಿಕೆ ಸರಿಯಾಗುವ ಪಕ್ಷಕ್ಕೆ, ಭಾಗವತ ಮತವು ಅವರ ವಂಶಜರೂ ಶಿಷ್ಯರೂ ಆದ ತಿಮ್ಮಪ್ಪದಾಸರ ಕುಲಧರ್ಮವಾಗುತ್ತದೆ.

(ಈ ಸಂದರ್ಭದಲ್ಲಿ, ವಾಸುದೇವಾರ್ಯರ ವಂಶದವರು ಬಹು ಕಾಲದವರೆಗೆ ನಡಸಿಕೊಂಡುಬಂದಗುರುಗಳ ಆರಾಧನೆಯಲ್ಲಿ ಅನುಸರಿಸುತ್ತಿದ್ದ ತರ್ಪಣವಿಧಿಯಲ್ಲಿ 'ನಾರಾಯಣಾಯವಿದ್ಮಹೇ । ವಾಸುದೇವಾಯ ಧೀಮಹಿ । ತನ್ನೋ ವಿಷ್ಣುಃ ಪ್ರಚೋದಯಾತ್' ಎಂಬ ಮಂತ್ರವಿರುವುದೂ ಗಮನಾರ್ಹ)[ಇದು ಪೂಜಾವಿಧಾನ ಕೀರ್ತನೆಗಳೂ ಶ್ರೀ ಕೃಷ್ಣಬಾಲಲೀಲೆಯ ಕೆಲವುರಚನೆಗಳೂ ಲಿಖಿತವಾಗಿರುವ 'ಗ' ಸಂಕೇತಾಕ್ಷರದ ಹಸ್ತಪ್ರತಿಯ ಮೊದಲ ಹಾಳೆಯಲ್ಲಿ ಲಿಖಿತವಾಗಿದೆ.]

(೨) ವಿಷ್ಣುಪುರಾಣದ ಪ್ರಕಾರ (ವಿ.ಪು.ಧ್ರುವೋಪಾಖ್ಯಾನ: ೧–೧೧), "ಭಗವದ್ಭಕ್ತನು ತನ್ಮಯವಾದ ಏಕಾಗ್ರಚಿತ್ತದಿಂದ ದ್ವಾದಶಾಕ್ಷರಿಯಾದ ವಾಸುದೇವ

---

* ೭.. ಈ ಪ್ರಕರಣದ ಅನೇಕ ಅಂಶಗಳನ್ನು 'ಭಾಗವತ ಸಂಪ್ರದಾಯ' ಎಂಬ ಗ್ರಂಥದಿಂದ ಸ್ವೀಕರಿಸಲಾಗಿದೆ.

ಬಿಟ್ಟಂತೆ ದಾವಣಗೆರೆಯ ಒಂದು ಶಾಸನದಲ್ಲಿ ಹೇಳಿದೆ (ಕ್ರಿ.ಶ.೧೨೨೪). ಇದರ ಹರಿಹರಸ್ತೋತ್ರ ಪದ್ಯಗಳು ಗಮನಾರ್ಹವಾಗಿವೆ (ನೋಡಿ: ಆರ್. ನರಸಿಂಹಾಚಾರ್ಯರ 'ಶಾಸನ ಪದ್ಯ ಮಂಜರಿ', ಪು.–೨೩೦). ಈ ಸಮನ್ವಯ ದೃಷ್ಟಿ ಇನ್ನೂ ವಿಶಾಲವಾಗಿರುವುದು 'ಯಂ ಶೈವಾಸ್ಸಮುಪಾಸತೇ ಶಿವ ಇತಿ.'ಎಂಬ ಪ್ರಸಿದ್ಧ ಶಾಸನ ಪದ್ಯದಲ್ಲಿ ಕಂಡುಬರುತ್ತದೆ. ಈ ಬೆಳವಣಿಗೆಯನ್ನು ಗಮನಿಸಿದರೆ, ನಿಜವಾದ ಭಾಗವತಧರ್ಮ ಈ ಸರ್ವ ದೇವತಾ ಸಮನ್ವಯ–ಅದರಲ್ಲಿ ವಿಶೇಷವಾಗಿ, ಹರಿಹರಾಭೇದ ದೃಷ್ಟಿ – ಈ ಭಾಗವತ ಧರ್ಮದ–ಭಾಗವತ ಸಂಪ್ರದಾಯದ–ಪ್ರಧಾನ ಲಕ್ಷಣ ಎನ್ನುವುದಕ್ಕೆ ಯಾವ ಪ್ರತ್ಯವಾಯವೂ ಇರದು. ಇಂದಿಗೂ, ಕೆಲವು ವಿಶಿಷ್ಟ ವೈಷ್ಣವಾಚರಣೆಗಳನ್ನು ಅನುಸರಿಸುವ, ತಾವು ಭಾಗವತ ಸಂಪ್ರದಾಯದವರು ಎಂದು ಹೇಳಿಕೊಳ್ಳುವ ಪಂಗಡದವರು ಕೂಡ, ಸ್ಮಾರ್ತ ಅದ್ವೈತಿಗಳು ಎಂಬ ಅಂಶ ಗಮನಾರ್ಹ.[೬]

ಕನ್ನಡ ಸಾಹಿತ್ಯದಿಂದ ದೃಷ್ಟಾಂತಗಳನ್ನು ತೆಗೆದು ಹೇಳುವುದಾದರೆ, 'ಜಗನ್ನಾಥ ವಿಜಯ'ದ ರುದ್ರಭಟ್ಟ, ಕನ್ನಡ ಭಾರತದ ಕುಮಾರವ್ಯಾಸ, ಕನ್ನಡ ಭಾಗವತದ ನಿತ್ಯಾತ್ಮ ಶುಕಯೋಗಿ – ಇವರುಗಳು ಸ್ಮಾರ್ತ ಭಾಗವತರಾಗಿದ್ದರು. ಅವರ ಕಾವ್ಯಗಳಲ್ಲಿ ಉತ್ಕಟವಾದ ವೈಷ್ಣವಭಕ್ತಿ ಕಂಡುಬರುತ್ತದೆ. ಪುರಂದರ ದಾಸರೇ ಮೊದಲಾದ ಹರಿದಾಸರ ರಚನೆಗಳಲ್ಲಿ, ಪುರಾಣಗಳಲ್ಲಿ ಹೇಳಿರುವಂತೆ, ಶಿವನನ್ನು 'ವಿಷ್ಣುಮಿತ್ರ' ಎಂದು ಎಣಿಸುರುವುದರ ಜೊತೆಗೆ, 'ವಿಷ್ಣುಭಕ್ತ' ಎಂದು ಹೇಳಿರುವುದೂ ಕಂಡುಬರುತ್ತದೆ ("ಕೊರಳಲಿ ಭಸ್ಮರುದ್ರಾಕ್ಷಿಯ ಧರಿಸಿದ ಪರಮ ವೈಷ್ಣವನು ನೀನೆ'–ಪುರಂದರದಾಸರು), ಹರಿಹರ ಸಾಮ್ಯದೃಷ್ಟಿ ಎಲ್ಲಿಯೂ ಕಂಡುಬರುವುದಿಲ್ಲ. ವಿಶಾಲಾರ್ಥದಲ್ಲಿ ದ್ವೈತಿಗಳ ವೈಷ್ಣವ ಧರ್ಮವನ್ನೂ ಭಾಗವತ ಧರ್ಮ ಎಂದು ಪರಿಗಣಿಸುವುದು ತಪ್ಪಲ್ಲ. ಆದರೆ, ಅದೊಂದೇ ಭಾಗವತ ಧರ್ಮ ಎಂದೆಣಿಸುವುದಾಗಲಿ, ಅದನ್ನು ಅದ್ವೈತಿಗಳ ಭಾಗವತ ಧರ್ಮದೊಂದಿಗೆ

---

೬. ವಸ್ತುಸ್ಥಿತಿ ಹೀಗಿರುವಲ್ಲಿ, ಈ ಹರಿಹರಾಭೇದದೃಷ್ಟಿಯ ಭಾಗವತ ಧರ್ಮ ಎನ್ನುವುದು ಸಾಮಾನ್ಯವಾಗಿ ರೂಢಿಯಲ್ಲಿರುವ ಹೇಳಿಕೆ ಎಂದೂ, ನಿಜವಾದ ಸಮನ್ವಯ ಕಂಡುಬರುವುದು. ದ್ವೈತಸಿದ್ಧಾಂತದ ವೈಷ್ಣವ ಮತದಲ್ಲಿ ಎಂದೂ, ಕರ್ಣಾಟಕದ ಹರಿದಾಸ ಪಂಥವೇ ಅದರ ಅಂತಿಮ ಅಭಿವ್ಯಕ್ತಿಯೆಂದೂ ಒಬ್ಬರು ವಿದ್ವಾಂಸರು ವ್ಯಕ್ತಪಡಿಸಿರುವ ಅಭಿಪ್ರಾಯ ಸರಿಯಲ್ಲವೆಂದು ತೋರುತ್ತದೆ. ಏಕೆಂದರೆ, ದ್ವೈತಸಂಪ್ರದಾಯದ ರೀತ್ಯಾ ವಿಷ್ಣು ಶಿವ ಇತ್ಯಾದಿ ದೇವತೆಗಳಲ್ಲಿ ತಾರತಮ್ಯ ಪರಿಗಣನೆ (hierarchical assignment of positions) ಕಂಡುಬರುತ್ತದೆಯೇ ಹೊರತು, ಹರಿಹರ ಸಾಮ್ಯವಾಗಲಿ,ಸರ್ವದೇವತಾ ಸಮನ್ವಯ ದೃಷ್ಟಿಯಾಗಲಿ ಕಂಡುಬರುವುದಿಲ್ಲ.

ಯೋಗಪ್ರಕಾರವನ್ನು ಉಪದೇಶಿಸುವ ಪ್ರಕರಣದಲ್ಲಿ (೬–೭; ಶ್ಲೋ.೨೭ ರಿಂದ ೯೭), "ಭಗವಂತನ ಮಾನಸ ಪೂಜೆ, ನಿರಾಕಾರ ಧ್ಯಾನ, ಬ್ರಹ್ಮಾತ್ಮೈಕ್ಯ – ಇವುಗಳು ಕ್ರಮವಾಗಿ ಉಕ್ತವಾಗಿವೆ" ಎಂದು ತಿಳಿದುಬರುತ್ತದೆ ('ಭಾಗವತ ಸಂಪ್ರದಾಯ', ಪು.೧೧೨–೧೧೩). ತಿಮ್ಮಪ್ಪದಾಸರ ಕೀರ್ತನೆಗಳಲ್ಲಿ ಪ್ರತಿಪಾದಿತವಾಗಿರುವುದೂ ಇದೇ ಉಪಾಸನಾ ಕ್ರಮ.

(೫) "ಸ್ಮಾರ್ತರಲ್ಲಿಯೇ ಇದ್ದುಕೊಂಡು ಅದ್ವೈತ ಸಿದ್ಧಾಂತವನ್ನೇ ನಂಬಿ, ವೈಷ್ಣವಾಚಾರವನ್ನೇ ಇಟ್ಟುಕೊಂಡಿರುವ ಅಥವಾ ವೈಷ್ಣವಾಚಾರಗಳು ಹಲಕೆಲವು ಉಳಿದುಕೊಂಡಿದ್ದರೂ ಪಂಚಾಯತನ ಪೂಜೆಯೇ ಮುಂತಾದವುಗಳನ್ನು ಅನುಸರಿಸುತ್ತ ಕೆಲವು ಶೈವಾಚಾರಗಳನ್ನು ಬೆರೆಯಿಸಿಕೊಂಡಿದ್ದರೂ ಭಾಗವತೈಕಾದಶಿಯ ಆಚರಣೆಯನ್ನು ಪರಂಪರೆಯಿಂದ ನಡೆಯಿಸಿಕೊಂಡು ಬಂದಿರುವ ಭಾಗವತರು ನಮ್ಮಲ್ಲಿ ಈಗಲೂ ಹೇರಳವಾಗಿರುತ್ತಾರೆ." ಎಂದು ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಯವರು ತಮ್ಮ 'ಭಾಗವತ ಸಂಪ್ರದಾಯ' ಗ್ರಂಥದಲ್ಲಿ ಅಪ್ಪಣೆ ಕೊಡಿಸಿರುತ್ತಾರೆ (ಪು. ೧೪೨).

ತಿಮ್ಮಪ್ಪದಾಸರ ಪೂಜಾವಿಧಾನ ಕೀರ್ತನೆಗಳಲ್ಲಿ ಅದ್ವೈತ ಸಿದ್ಧಾಂತ ಪ್ರತಿಪಾದನೆ ಸ್ವಯಂವೇದ್ಯವಾಗಿದೆಯಷ್ಟೆ. ಇವರ ಕುಲಾಚಾರದಂತೆ, – ಪ್ರತಿನಿತ್ಯ ಭಸ್ಮತ್ರಿಪುಂಡ್ರ ಧಾರಣೆ, ರುದ್ರಾಕ್ಷಿ ಧಾರಣೆ, ಸ್ಮಾರ್ತ ಪದ್ಧತಿಯ ಶಿವರಾತ್ರಿ ವ್ರತಾಚರಣೆ, ಲಿಂಗರೂಪದ ಈಶ್ವರಾರ್ಚನೆ, ಇವು ಮುಖ್ಯ ಶೈವಾಚಾರಗಳು; ವಿಶೇಷವಾಗಿ ಶ್ರಾವಣ ಶನಿವಾರಗಳಂದು ಊರ್ಧ್ವತ್ರಿಪುಂಡ್ರ ಧಾರಣೆ, ವಿಷ್ಣು ಭಗವನ್ನಾಮ ಸಂಕೀರ್ತನೆ (ಭಜನೆ), ಸಾಲಿಗ್ರಾಮಾರ್ಚನೆ– ಇವು ಮುಖ್ಯ ವೈಷ್ಣವಾಚಾರಗಳು. (ಊರ್ಧ್ವ ತ್ರಿಪುಂಡ್ರ ಎಂದರೆ ನಾಮದ ಧಾರಣೆ, ಶ್ರೀವೈಷ್ಣವ ಲಾಂಛನ.) ಆದರೆ, ದಾಸರ ವಂಶದಲ್ಲಿ ಪರಂಪರೆಯಿಂದ 'ಭಾಗವತೈಕಾದಶಿ'ಯ ಆಚರಣೆ ಕಂಡುಬಂದಿಲ್ಲ. ಸ್ವಲ್ಪ ಸಡಿಲವಾದ ಪದ್ಧತಿಯ 'ಸ್ಮಾರ್ತ ಏಕಾದಶಿ'ಯೇ! ಆದರೆ, ತಿಮ್ಮಪ್ಪದಾಸರು ವೈಯಕ್ತಿಕವಾಗಿಯೋ ಪೂರ್ವಪರಂಪರೆಯನ್ನು ಅನುಸರಿಸಿಯೋ, ವೈಷ್ಣವ(?) ಏಕಾದಶಿಯ ಆಚರಣೆಗೆ ವಿಶೇಷ ಪ್ರಾಧಾನ್ಯ ಕೊಟ್ಟಿದ್ದುದು ಈ ಪದ್ಯದಿಂದ ಸ್ಪಷ್ಟ–ವಾಗುತ್ತದೆ:–

ಹರಿದಿನದೇಕಾದಶಿಯೊಳು
ಹರಿಯರ್ಚನೆಗೈದು ಪಾಡಿ ಪೊಗಳುತ ಜಾಗರ–।
ವಿರುವದಕಾಸ್ಪದ ಕೀರ್ತನೆ
ಬರೆದೋದಲು ಪೊರೆವ ನಮ್ಮ ವೆಂಕಟರಮ(ಣಾ)

ಮಂತ್ರವನ್ನು ಜಪಿಸಬೇಕು." ಭಾಗವತದ ನಿರ್ದೇಶವಾದರೂ ಇದೇ: "ಅರ್ಚೇತ್ ದ್ವಾದಶಾಕ್ಷರ ವಿದ್ಯಯಾ" (೮–೧೬; ಶ್ಲೋ.೩೯). ಬೋಧಾಯನ ಪ್ರೋಕ್ತ 'ವಿಷ್ಣುಕಲ್ಪ' ಎಂಬ ಪೂಜಾವಿಧಿಯ ಕೊನೆಯಲ್ಲಿ "ಓಂ ನಮೋ ಭಗವತೇ ವಾಸು ದೇವಾಯ ಇತಿ ದ್ವಾದಶಾಕ್ಷರಂ ಜಪಿತ್ವಾ ಅಶ್ವಮೇಧ ಫಲಂ ಅಪ್ನೋತಿ ಸಕೃದಿಷ್ಟ್ವಾ ಸನಾತನಮ್" ಎಂದಿದೆ. "ಇದು ವಾಸುದೇವ ಭಗವಂತನನ್ನು ಆರಾಧನೆ ಮಾಡುವವರಿಗಾಗಿಯೇ ಬರೆದಿದೆ ಎಂಬುದು ಸ್ಪಷ್ಟ" ('ಭಾಗವತ ಸಂಪ್ರದಾಯ', ಪು.೯೮–೯೯). "ಭಾಗವತರು 'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕಷರೀ ಪಾಂಚರಾತ್ರರು 'ಓಂನಮೊ ಭಗವತೇ ವಾಸುದೇವಾಯ' ಎಂಬ ಅಷ್ಟಾಕ್ಷರಿ ಮಂತ್ರವನ್ನೂ ಪಠಿಸುವರೆಂದು ಪಿ.ಟಿ.ಶ್ರೀನಿವಾಸಯ್ಯಂಗಾರ್ ಅವರು ಹೇಳಿರುವರು" (Outlines of Indian Philosophy ಎಂಬ ಗ್ರಂಥದ ಈ ಆಧಾರವನ್ನು ಡಾ॥ ಎಸ್.ಸಿ.ನಂದೀಮಠ ಅವರು 'ಕನ್ನಡ ನಾಡಿನ ಚರಿತ್ರೆ' –೨, ಪು.೭೬ರಲ್ಲಿ ಉಲ್ಲೇಖಿಸಿರುವರು.)

ತಿಮ್ಮಪ್ಪದಾಸರು ತಮ್ಮ 'ಪೀಠಸಮರ್ಪಣೆ'ಯ ಕೀರ್ತನೆಯಲ್ಲಿ, "ಪುರುಷ ಸೂಕ್ತದಿಂದೆನ್ನ ಶರೀರದೊಳ್ ಪೂಜಿಪ ವರಬಿಂಬದೊಳು ನ್ಯಾಸಗೈದಿಹೆನು ಪರಮ ಮಂತ್ರಾಧಿದೇವತೆಗಳನೆಂಟು; **ಪನ್ನೆರಡಕ್ಕರದ ವಿದ್ಯೆಯಿಂದಲು ಜಗದೀಶ**" ಎಂಬಲ್ಲಿ ಗುರೂಪದಿಷ್ಟ ಮಂತ್ರವನ್ನೇ ಸೂಚಿಸಿದ್ದಾರೆ. ಇಲ್ಲಿ, 'ಪನ್ನೆರಡಕ್ಕರದ ವಿದ್ಯೆ' ಎಂದರೆ ಮೇಲೆ ಹೇಳಿರುವ 'ದ್ವಾದಶಾಕ್ಷರಿ'ಯೆ ಎಂಬುದು ಸ್ಪಷ್ಟ.[೮]

(೩) "ಜಪೇತ್ ಅಷ್ಟೋತ್ತರ ಶತಮ್" ಎಂಬುದು ಭಾಗವತದ ಇನ್ನೊಂದು ಸಾಧನಾ ಕ್ರಮ (೮–೧೬, ಶ್ಲೋ. ೪೨). (ವಿಷ್ಣುಪರವಾದ ಯಾವ ಅಷ್ಟೋತ್ತರ ಎಂಬುದು ಇಲ್ಲಿ ನಿರ್ದಿಷ್ಟವಾದಂತೆ ಕಂಡುಬರುವುದಿಲ್ಲ. ಭಾಗವತ ಧರ್ಮದ ಬೆಳವಣಿಗೆಯಲ್ಲಿ ಭಗವಂತ ವಾಸುದೇವನನ್ನು ವೃಷ್ಣಿವಂಶದ ವಸುದೇವ ಪುತ್ರ ವಾಸುದೇವನೊಂದಿಗೆ ಸಮೀಕರಿಸಿಕೊಂಡಂತೆ ಕಂಡುಬರುವುದರಿಂದ, 'ಕೃಷ್ಣಾಷ್ಟೋತ್ತರ' ಎಂದು ಗ್ರಹಿಸಬಹುದು.) ತಿಮ್ಮಪ್ಪದಾಸರು ಪೂಜಾವಿಧಾನದ ೧೦೮ ಕೀರ್ತನೆಗಳನ್ನು ಶ್ರೀಕೃಷ್ಣಾಷ್ಟೋತ್ತರಕ್ಕೆ ಅಳವಡಿಸಿರುವುದು ಗಮನಾರ್ಹ.

(೪) ವಿಷ್ಣುಪುರಾಣದಲ್ಲಿ, ಕೇಶಿಧ್ವಜನು ಖಾಂಡಿಕ್ಯನೆಂಬವನಿಗೆ

---

೮.. "ನ್ಯಾಸಗೈದಿಹೆನು ಪರಮ ಮಂತ್ರಾಧಿದೇವತೆಗಳನು; **ಎಂಟು ಪನ್ನೆರಡಕ್ಕರದ ವಿದ್ಯೆಯಿಂದಲು**" ಎಂದೂ ಅನ್ವಯ ಮಾಡಬಹುದು. ಆಗ, ಅಷ್ಟಾಕ್ಷರೀ ಮಂತ್ರದ ವಿವಕ್ಷೆಯೂ ಹೊರಡುತ್ತದೆ. ಭಾಗವತರು ಈ ಎರಡೂ ಮಂತ್ರಗಳನ್ನು ಪಠಿಸಬಹುದು ಅಥವಾ ಪಠಿಸುತ್ತಿದ್ದರು ಎಂದಾಗುತ್ತದೆ.

ಮೇಲ್ಕಂಡ ಗ್ರಂಥಗಳಲ್ಲದೆ, ಈಗ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಎರಡು ಹಸ್ತಪ್ರತಿಗಳಲ್ಲಿ (K.B. ೨೦೪ ಮತ್ತು K ೫೫೪) ತಿಮ್ಮಪ್ಪದಾಸರಿಂದ ರಚಿತವಾದ 'ಭಾಗವತ ಕೀರ್ತನೆಗಳು' ಮತ್ತು ರಾಗ ನಿರ್ದೇಶವುಳ್ಳ ಕಂದ ಭಾಮಿನೀ ಷಟ್ಪದಿ ವಾರ್ಧಕ ಷಟ್ಪದಿ – ಈ ಛಂದಸ್ಸುಗಳಲ್ಲಿರುವ 'ಉದ್ಯೋಗ ಪರ್ವದ ಭಾರತ ಕಥೆ' (ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯಲ್ಲಿ ಇದನ್ನು 'ಕೃಷ್ಣ ಸಂಧಾನ ಕೀರ್ತನೆಗಳು' ಎಂದು ಕರೆದಿದೆ. – ಇವು ಸೇರ್ಪಡೆಯಾಗಿವೆ.

**೨. ಕೃತಿಯ ಹೆಸರು: ಶ್ರೀಕೃಷ್ಣಬಾಲಲೀಲೆಯ ಕರ್ತೃತ್ವ :** ಈ ಹಿಂದೆ ತಿಳಿಸಿರುವ ತಿಮ್ಮಪ್ಪದಾಸರ ಕೃತಿಗಳ ಪಟ್ಟಿಯಲ್ಲಿ ಉಕ್ತವಾಗಿರುವ ಒಂಬತ್ತು ಕೃತಿಗಳ ಪೈಕಿ ಪೂಜಾವಿಧಾನ ಕೀರ್ತನೆಗಳೂ ('ಅರ್ಚನ') 'ಧ್ರುವಚರಿತ್ರೆ'ಯೂ ಪ್ರಕಟವಾಗಿವೆ. ಧ್ರುವಚರಿತ್ರೆಯಲ್ಲಿ ಕೃತಿಕಾರರ ಹೆಸರು "ತಿಂಮದಾಸ ಪೇಳಿದ ಧ್ರುವಚರಿತೆ" ಎಂದು ಸ್ಪಷ್ಟವಾಗಿ ಹೇಳಿದೆ. "ತರುಣ ನಾಗಪುರಪತಿ ವೆಂಕಟೇಶನು ಗುರು ವಾಸುದೇವ ತಾನಾಗಿ ಕರುಣದಿಂ ತಿಂಮದಾಸನ ಪರಿಪಾಲಿಪ" ಎಂದಿರುವುದರಿಂದಲೂ, ಪೂಜಾ ವಿಧಾನ ಕೀರ್ತನೆಗಳಲ್ಲಿ ಗುರುವಾಸುದೇವಾರ್ಯರ ಸ್ತೋತ್ರರೂಪದ ಕೀರ್ತನೆಗಳಿರುವುದರಿಂದಲೂ, ಪೂಜಾವಿಧಾನ ಕೀರ್ತನೆಗಳಲ್ಲಿ ಒಂದಾದ 'ಸಾಸಿರನಾಮ ಪೂಜೆ' ಎಂಬ ಕೀರ್ತನೆಯಲ್ಲಿ "ತಿರುಪತಿಯೊಡಯನೆ ಶ್ರೀ ವಾಸುದೇವಾರ್ಯ ಗುರುವಾಗಿ" ಎಂದು ಹೇಳಿರುವುದರಿಂದಲೂ ಈ ಎರಡು ಕೃತಿಗಳೂ ಏಕಕರ್ತೃಕ ಎಂದು ಹೇಳಬಹುದು (ಹೆಚ್ಚಿನ ವಿವರಗಳಿಗೆ ಪೂಜಾವಿಧಾನ ಕೀರ್ತನೆಗಳ ಸಂಕಲನ 'ಅರ್ಚನ'ದ ಪೀಠಿಕೆಯನ್ನು ನೋಡಬಹುದು.) ಪೂಜಾವಿಧಾನ ಕೀರ್ತನೆಗಳಲ್ಲಿಯ ಹಾಗೂ ಇತರ ಕೀರ್ತನೆಗಳಲ್ಲಿ ದೊರಕುವ ಆಂತರಿಕ ಪ್ರಮಾಣಗಳನ್ನೂ 'ಕೃಷ್ಣಬಾಲಲೀಲೆ'ಯಾಂತರಿಕ ಪ್ರಮಾಣಗಳನ್ನೂ ಪರಸ್ಪರ ಹೋಲಿಸಿ ನೋಡಿ ಕೆಲವು ಬಾಹ್ಯ ಪ್ರಮಾಣಗಳನ್ನೂ ಗಮನಿಸಿ, ವಿಚಾರ ಮಾಡಿ ನೋಡಿದ ಮೇಲೆ 'ಕೃಷ್ಣಬಾಲಲೀಲೆ'ಯ ಕರ್ತೃವೂ ತಿಮ್ಮಪ್ಪದಾಸರೇ ಎಂದು ಧಾರಾಳವಾಗಿ ಹೇಳಬಹುದು. 'ಕೃಷ್ಣಬಾಲಲೀಲೆ'ಯ ಹಸ್ತಪ್ರತಿಯ ಎರಡು ಕಟ್ಟುಗಳಿದ್ದು, ಎರಡರಲ್ಲಿಯೂ ಕರ್ತೃವಿನ ಹೆಸರು ಎಲ್ಲಿಯೂ ಉಕ್ತವಾಗಿಲ್ಲದಿರುವುದರಿಂದ 'ಬಾಲಲೀಲೆ'ಯ ಕರ್ತೃತ್ವದ ವಿಚಾರ ವಿಮರ್ಶೆ ಅಗತ್ಯ ವಾಗುತ್ತದೆ.

'ಶ್ರೀ ಕೃಷ್ಣಬಾಲಲೀಲೆ' ಎರಡು ತಾಡವೋಲೆ ಕಟ್ಟುಗಳಲ್ಲಿ ಲಿಖಿತವಾಗಿದೆ. ಎರಡರ ಬರವಣಿಗೆಯ ಲಿಪಿಲೇಖನಸ್ವರೂಪದಲ್ಲಿ ಸಾಮ್ಯವಿದೆ. ಮೊದಲ ಕಟ್ಟಿನಲ್ಲಿ,

ದಾಸರ ಪಂಚಾಯತನ ನಿಷ್ಠೆಗೆ 'ಅರ್ಚನ' ಗ್ರಂಥದಲ್ಲಿಯೇ ನಿದರ್ಶನವಿದೆ. (ಕೀ.೨೩ರ ಕಡೆಯ ೨ ಕಂದ ಪದ್ಯಗಳನ್ನು ನೋಡಿ.) ಹರಿಹರಾಭೇದ ದೃಷ್ಟಿ ಅನೇಕ ಕೀರ್ತನೆಗಳಲ್ಲಿ (೪೭, –೪, ೫; ೬೬–೫, ೭೨–೨, ೭೩–೭) ಕಂಡು ಬರುತ್ತದೆ. ಗುರು ನೀಲಕಂಠಾರ್ಯರನ್ನು 'ಹರಿಹರಾತ್ಮಕ' ಎಂದು ಉಲ್ಲೇಖಿಸಿದ್ದಾರೆ. 'ಶರಣು ಶರಣು' ಎಂಬ ಗುರುಪರಂಪರಾ ಸ್ತುತಿ ರೂಪದ ಒಂದು ಕೀರ್ತನೆಯಲ್ಲಿ 'ಶರಣು ಹರಿಹರ ಭಕ್ತರೆ, ಮಹಾತ್ಮರೆ' ಎಂದು ಅವರಲ್ಲಿ ವಿಶೇಷ ನಿಷ್ಠೆ ತೋರಿಸಿದ್ದಾರೆ. ಇಲ್ಲಿನ ಕೀರ್ತನೆಗಳ ಸ್ತೋತ್ರ ಭಾಗದಲ್ಲಿ ವೆಂಕಟೇಶ ಸ್ತೋತ್ರ ಮತ್ತು ಶಿವಗಂಗೆಯ ಗಂಗಾಧರ ಸ್ತೋತ್ರ ಅನುಗೂಡಿಬಂದಿವೆ.

(೬) ಎಲ್ಲಕ್ಕಿಂತ ಮಿಗಿಲಾಗಿ, ಭಾಗವತ ಧರ್ಮಾಚರಣೆಯಲ್ಲಿ ಭಗವದ್ಭಕ್ತಿ ಮುಖ್ಯವಾದುದು. ಆದ್ದರಿಂದ, ದ್ವೈತಾದ್ವೈತ ವಿಶಿಷ್ಟಾದ್ವೈತಾದಿ ಯಾವುದೇ ಸಿದ್ಧಾಂತದ ಅನುಯಾಯಿಗಳಾದರೂ ಸರಿಯೆ, ಭಗವದ್ ಭಕ್ತರೆಲ್ಲ ಭಾಗವತರು. 'ಹರಿ' ಅಥವಾ 'ವೆಂಕಟರಮಣ' ರೂಪದ ಭಗವಂತನನ್ನು ತಮ್ಮ ಇಷ್ಟದೈವವಾಗಿ ಉಳ್ಳ ತಿಮ್ಮಪ್ಪದಾಸರು ತಮ್ಮ ದೈವಕ್ಕೆ ಅರ್ಪಿಸಿರುವ ಭಕ್ತಿ ಕುಸುಮ ಮಾಲೆಗೆ ಅದ್ವೈತ ಸಿದ್ಧಾಂತ ಸೂತ್ರಪ್ರಾಯವಾಗಿದೆ; ಪುರಂದರದಾಸಾದಿ ಹರಿದಾಸರ ಕೀರ್ತನೆಗಳಿಗೆ ದ್ವೈತಸಿದ್ಧಾಂತ ಸೂತ್ರಪ್ರಾಯ. ಇವರೂ ಹರಿದಾಸರು; ಅವರೂ ಹರಿದಾಸರು.

### ೬. ತಿಮ್ಮಪ್ಪದಾಸರ ಕೃತಿಗಳು

ತಿಮ್ಮಪ್ಪದಾಸರ ವಂಶಜರ ಬಳಿ ಇದ್ದ ಹಸ್ತಪ್ರತಿಗಳನ್ನೆಲ್ಲ ಸಂಗ್ರಹಿಸಿ, ಜೋಡಿಸಿಟ್ಟು, ಕೂಲಂಕಷವಾಗಿ ಪರಿಶೋಧನೆ ಮಾಡಿದಮೇಲೆ – ಈ ಕೆಳಗೆ ಹೆಸರಿಸಿರುವ ಕೃತಿಗಳು ತಿಮ್ಮಪ್ಪದಾಸರಿಂದ ರಚಿತವಾದವು ಎಂದು ತಿಳಿದುಬಂದಿದೆ:

(೧) ಪೂಜಾ ವಿಧಾನ ಕೀರ್ತನೆಗಳು (೧೦೮); (೨) ಗುರುಸ್ತುತಿಪರ ಕೀರ್ತನೆಗಳು; (೩) ಸದ್ಗುರು ಬೋಧಾನುವಾದ ಸುಧೆ (ಕೀರ್ತನೆಗಳು); (೪)ಆತ್ಮ ನಿವೇದನ, ಮುಂತಾದ ಸಂಕೀರ್ಣ ವಿಷಯದ ಕೀರ್ತನೆಗಳು; (೫) ಶ್ರೀಕೃಷ್ಣ ಬಾಲಲೀಲೆ ಮತ್ತು ಅಕ್ರೂರ ಪ್ರಕರಣ (ಕೀರ್ತನೆಗಳು); (೬)ಜೀವ ಕಾಯ ಸಂವಾದ (ವೈರಾಗ್ಯಪರ ಕೀರ್ತನೆಗಳು ಮತ್ತು ಕಂದಪದ್ಯಗಳು; ಅಸಮಗ್ರ ಕೃತಿ); (೭)ಧ್ರುವ ಚರಿತ್ರೆ (ಸಾಂಗತ್ಯ ಛಂದಸ್ಸಿನ ಕಾವ್ಯ); (೮)ಪರಬ್ರಹ್ಮ ಪ್ರಕಾಶಿಕೆ (ಗದ್ಯ ರೂಪದಲ್ಲಿರುವ ವೇದಾಂತ ವಿಷಯುಕ ಪ್ರಕರಣ ಗ್ರಂಥ); (೯)ಭಗವದ್ವಿಲಾಸದಾಟ (ಅಸಮಗ್ರ ಗದ್ಯ ಗ್ರಂಥ).

ಕಾಣುತ್ತದೆ. ಪೂರ್ವಜರ ಕೃತಿ ಎಂಬ ಅಭಿಮಾನವೇ ಸಂಪ್ರತಿಕರಣಕ್ಕೆ ಪ್ರೇರಣೆ. ಪೂಜಾವಿಧಾನ ಕೀರ್ತನೆಗಳು ತಮ್ಮ ಪೂರ್ವಜರು ರಚಿಸಿದವು ಎಂಬ ತಿಳಿವಳಿಕೆಯೇನೋ ಇದ್ದಿತು ಅವರಿಗೆ. ಆ ಪೂರ್ವಜರು ತಿಮ್ಮಪ್ಪದಾಸರು, ವಾಸುದೇವಾರ್ಯರ ಮೊಮ್ಮಗ ಎಂಬ ಸ್ಪಷ್ಟವಾದ ತಿಳಿವಳಿಕೆ ಇದ್ದಿತೋ ಇಲ್ಲವೋ ಹೇಳಲಾಗದು. 'ತಿಮ್ಮಪ್ಪದಾಸರ ವೆಂಕಟರಮಣಸ್ವಾಮಿಯ ದೇವಸ್ಥಾನ' ನಿರ್ಮಾಣ ವೆಂಕಟದಾಸಪ್ಪನವರ ಶ್ರಮದ ಫಲ. (ಈಗ ಆ ದೇವಸ್ಥಾನವೂ ಇಲ್ಲ; ಪೂಜಾಮೂರ್ತಿಗಳೂ ಸ್ಥಳಾಂತರಗೊಂಡಿವೆ; ಕಟ್ಟಡ ಅನ್ಯರ ವಶದಲ್ಲಿದೆ). (೫)ತಿರುಪತಿಯ ವೆಂಕಟರಮಣ ತಿಮ್ಮಪ್ಪದಾಸರ ಇಷ್ಟದೈವ.'ಅರ್ಚನ'ದ ಕೀರ್ತನೆಗಳಲ್ಲಿ ಈ ಇಷ್ಟದೈವ ಮುದ್ರಿಕೆ ಇದ್ದು 'ಬಾಲಲೀಲೆ'ಯ ಕೀರ್ತನೆಗಳಿಗೂ ಅದೇ ಮುದ್ರಿಕೆ ಇದೆ. 'ಅರ್ಚನ', 'ಬಾಲಲೀಲೆ' ಇವೆರಡರಲ್ಲಿಯೂ ಇಷ್ಟದೈವವನ್ನು ವೆಂಕಟೇಶ, ವೆಂಕಟನಾಯಕ, ತಂದೆ ವೆಂಕಟರಮಣ ಎಂಬ ಪರ್ಯಾಯ ನಾಮಗಳಿಂದ ಸಂಬೋಧಿಸಲಾಗಿದೆ. (೬)ಎರಡು ಕೃತಿಗಳಲ್ಲಿಯೂ (ಎಂದರೆ, 'ಅರ್ಚನ' ಮತ್ತು 'ಬಾಲಲೀಲೆ') ಕೃತಿಕಾರರ ಅದ್ವೈತನಿಷ್ಠವಾದ ಭಾಗವತ ಧರ್ಮ ವ್ಯಕ್ತಪಟ್ಟಿದೆ; ಮುಖ್ಯವಾಗಿ, ಅದ್ವೈತದರ್ಶನ ಪ್ರತಿಪಾದನೆಯಲ್ಲಿ ವಿವಾದಕ್ಕೆ ಒಳಗಾಗಿರುವ 'ಮೂಲಾವಿದ್ಯೆ' ಪ್ರಮೇಯದ ಪ್ರಸ್ತಾಪವಿದೆ. (೭) 'ಶ್ರೀಕೃಷ್ಣಬಾಲ ಲೀಲೆ'ಗೆ ಸಂಬಂಧಪಟ್ಟ ಎರಡು ಕಟ್ಟಿನ ರಚನೆಗಳೂ ಭಾಷಾ ಶೈಲಿಯಲ್ಲಿಯೂ ಕೀರ್ತನೆಗಳ ರಚನಾಸ್ವರೂಪದಲ್ಲಿಯೂ ಒಂದೇ ಬಗೆಯಾಗಿವೆ. ಪುರಂದರದಾಸಾದಿ ಹರಿದಾಸರ 'ದೇವರ ನಾಮ' ಅಥವಾ 'ಪದ'ಗಳು ಹಾಡಿಕೆಗೆ ಒದಗಿಬರುವಂತೆ ಪ್ರಾಯಿಕವಾಗಿ ಸ್ವಲ್ಪ ಸಂಖ್ಯೆಯ 'ಚರಣ' ('ನುಡಿ')ಗಳುಳ್ಳ ರಚನೆಗಳಾಗಿವೆ; ಪ್ರಸನ್ನ ವೆಂಕಟದಾಸರ 'ಭಾಗವತ ಕೀರ್ತನೆಗಳು' ಕೂಡ ಹಾಗೆಯೇ ಇವೆ. ತಿಮ್ಮಪ್ಪದಾಸರ ಕೀರ್ತನೆಗಳಾದರೋ ಹಲಕೆಲವು ಹತ್ತಿಪ್ಪತ್ತರಿಂದ ಹಿಡಿದು ಐವತ್ತಕ್ಕೂ ಮೀರಿದ ಸಂಖ್ಯೆಯಲ್ಲಿ ಚರಣಗಳುಳ್ಳ ಕೀರ್ತನೆಗಳನ್ನು ಹೊಂದಿವೆ. (ನೋಡಿ: ಕೀರ್ತನ ಸಂಖ್ಯೆ, ಚರಣ ಸಂಖ್ಯೆ:– ೧೧–೫೫, ೨೦–೫೯, ೫೪–೩೪, ೬೫–೪೩, ಇತ್ಯಾದಿ) ಅಲ್ಲದೆ, ಹರಿದಾಸರ ಕೀರ್ತನೆಗಳಲ್ಲಿ ಸಾಮಾನ್ಯವಾಗಿ ಪಲ್ಲವಿ ಅನುಪಲ್ಲವಿ ಇರುತ್ತವೆ; 'ಅರ್ಚನ' ಮತ್ತು 'ಬಾಲಲೀಲೆ'ಗಳ ಕೀರ್ತನೆಗಳಲ್ಲಿ ಪಲ್ಲವಿ ಮಾತ್ರ ಇರುವುದು ಗಮನಾರ್ಹ ಸಮಾನಾಂಶ. (೮)ಕೃಷ್ಣಬಾಲಲೀಲೆಯ ಕೀರ್ತನೆಗಳನ್ನು ಹಾಡಬೇಕಾದ ಧಾಟಿಯನ್ನು ತೋರಿಸುವುದಕ್ಕಾಗಿ ಪ್ರತಿ ಕೀರ್ತನೆಯ ಪ್ರಾರಂಭದಲ್ಲಿಯೂ ಒಂದು 'ವರ್ಣ'ದ (=ಹಾಡು) ಪಲ್ಲವಿಯ ಮೊದಲ ಸಾಲನ್ನು, ಬರೆದಿದೆ. ಈ 'ವರ್ಣಮಟ್ಟು'

ಕೃಷ್ಣನ ಬಾಲೀಲೆಯ ಪೂರ್ವವೃತ್ತಾಂತ ನಿರೂಪಿತವಾಗಿದೆ; ಅಕ್ರೂರ ಪ್ರಕರಣದ ಎಂಟು ಕೀರ್ತನೆಗಳಿವೆ; ಸಮಾಪ್ತಿ ವಾಕ್ಯವಿಲ್ಲ. ಎರಡನೇ ಕಟ್ಟಿನ ಸಮಾಪ್ತಿ ವಾಕ್ಯ ಹೀಗಿದೆ: "ಇತೀ ಶ್ರೀಮದ್ಭಾಗವತೇ ಮಹಾಪುರಾಣೇ ದಶಮಸ್ಕಂಧೇ ಬಾಲಲೀಲಾ ಕಲ್ಯಾಣ ಮಹೋತ್ಸವಂ ಸಂಪೂರ್ಣಂ". ಎರಡನೆಯ ಕಟ್ಟಿನ ಮೊದಲ ಗರಿಯ ಮೊದಲ ವಾಕ್ಯಗಳು ಹೀಗಿವೆ: "ಶ್ರೀ ಗುರುಭ್ಯೋನಮಃ। ಬಾಲಲೀಲೆಯಲ್ಲಿ ಅಕ್ರೂರ ಪ್ರಕರಣದ ಚುಂಗಡಿ । ಒಂಭತ್ತನೇ ಕೀರ್ತನೆ". ಎಂದಮೇಲೆ, ಈ ಎರಡೂ ಕಟ್ಟುಗಳಲ್ಲಿ ಬರೆದಿರುವುದು ಒಂದೇ ಕೃತಿ: 'ಶ್ರೀಕೃಷ್ಣಬಾಲಲೀಲೆ' ಎಂಬ ಶೀರ್ಷಿಕೆಯ, ಶ್ರೀಮದ್ ಭಾಗವತಮಹಾಪುರಾಣದಲ್ಲಿ ಸವಿಸ್ತಾರವಾಗಿ ಹೇಳಿದ, ಶ್ರೀ ಕೃಷ್ಣಚರಿತೆ. ಈ ಸಂಪುಟದ ೪ನೆಯ ಕೀರ್ತನೆಯಲ್ಲಿ, 'ಬಾಲಲೀಲೆಯ ಪೇಳ್ವೆನು' ಎಂದು ಸ್ಪಷ್ಟವಾಗಿರುವುದರಿಂದ 'ಶ್ರೀಕೃಷ್ಣಬಾಲಲೀಲೆ' ಎಂಬುದೇ ಕೃತಿಯ ಪೂರ್ಣನಾಮ ಎಂಬುದು ಸುನಿಶ್ಚಿತ.

**ಕರ್ತೃತ್ವ ಪ್ರಮಾಣಗಳು :** ಮೇಲೆ ಶ್ರೀಕೃಷ್ಣಬಾಲಲೀಲೆಯ ಕರ್ತೃ ತಿಮ್ಮಪ್ಪದಾಸರು ಎಂದು ಸ್ಥೂಲವಾಗಿ ಹೇಳಿದೆ. ಈ ಹೇಳಿಕೆ ಈ ಮುಂದೆ ಹೇಳುವ ಬಾಹ್ಯಾಭ್ಯಂತರ ಪ್ರಮಾಣಗಳಿಂದ ದೃಢಪಡುತ್ತದೆ:

(೧) ತಿಮ್ಮಪ್ಪದಾಸರು ಭಾಗವತಧರ್ಮದ ಅನುಯಾಯಿಗಳಾಗಿರುವುದು. (೨) ಅಪ್ರಕಟಿತವಾದ ಒಂದು ಕೀರ್ತನೆಯಲ್ಲಿ, "ಗುರುವೆ ಪರಬ್ರಹ್ಮ । ವಾಸುದೇವಾರ್ಯ ಗುರುವೆ ಪರಬ್ರಹ್ಮ" ಎಂದು ಮೊದಲಾಗುವ ಕೀರ್ತನೆಯಲ್ಲಿ "ಭಾಗವತಾರ್ಥದಿ ರಾಗವ ಪುಟ್ಟಿಸಿ । ಹಾಗೆ ಗೀತಾಮೃತ ಸಾಗರದೆಡೆಗೊಯ್ವ" ಎಂಬ ಹೇಳಿಕೆಯಿಂದ ತಿಮ್ಮಪ್ಪದಾಸರು ಗುರುಪ್ರೇರಣೆಯಿಂದ ಭಾಗವತದಲ್ಲಿ ಆಸಕ್ತರಾಗಿದ್ದುದು ಸ್ಪಷ್ಟ. ಆದ್ದರಿಂದ, ಅದನ್ನು ಕನ್ನಡದಲ್ಲಿ ಬರೆಯಬೇಕೆಂದು ಅಪೇಕ್ಷೆ ಪಟ್ಟಿದ್ದರೆ, ಅದು ತೀರ ಸಹಜ. (೩)ಭಾಗವತದ ೪ನೆಯ ಸ್ಕಂಧದಲ್ಲಿ ಹೇಳಿರುವ ಪರಮವಿಷ್ಣುಭಕ್ತ ಧ್ರುವನ ಕಥೆಯನ್ನು ಸಾಮಗತ್ಯ ಛಂದಸ್ಸಿನಲ್ಲಿ ರಚಿಸಿದ್ದಾರೆ. (ಬಹುಶಃ ಕಾವ್ಯರೂಪದಲ್ಲಿ ಮೊದಲು ರಚಿಸಿದ ಕೃತಿ ಇದು ಎಂದು ತೋರುತ್ತದೆ.) ಕೃಷ್ಣನ ಚರಿತೆಯನ್ನೂ ರಚಿಸಬೇಕೆಂದು ಮನಸ್ಸು ಮಾಡಿರುವುದು ಸಹಜವಾಗಿಯೇ ಇದೆ. (೪) ತಿಮ್ಮಪ್ಪದಾಸರ ಮೊಮ್ಮಕ್ಕಳಲ್ಲಿ ಒಬ್ಬರಾದ ವೆಂಕಟದಾಸಪ್ಪ ಎಂಬವರು ಕೃಷ್ಣಬಾಲ ಲೀಲೆಯನ್ನು ಸ್ವಹಸ್ತಾಕ್ಷರದಲ್ಲಿ ಪ್ರತಿಮಾಡಿ ಇಟ್ಟುಕೊಳ್ಳಲು ತೊಡಗಿ, ೨೫ ಕೀರ್ತನೆಗಳಿಗೇ ಸಂಪ್ರತಿಕರಣವನ್ನು ನಿಲ್ಲಿಸಿಬಿಟ್ಟಿದ್ದಾರೆ. ಇವರು ತಮ್ಮ ಮನೆಯಲ್ಲಿ ಇದ್ದ ಏಕೈಕ ಓಲೆಗರಿ ಪ್ರತಿಯನ್ನೆ ಓದಿಕೊಳ್ಳುವ ಸೌಕರ್ಯಕ್ಕಾಗಿ ನಕಲು ಮಾಡಲು ಪ್ರಯತ್ನಿಸಿದ್ದಾರೆ ಎಂದು

**ಕೃತಿರಚನೆಗೆ ಪ್ರೇರಣೆ** : ಭಾಗವತವನ್ನು ರಚಿಸಲು ತಿಮ್ಮಪ್ಪದಾಸರಿಗೆ ಗುರು ವಾಸುದೇವಾರ್ಯರಿಂದಲೇ ಪ್ರೇರಣೆಯುಂಟಾಯಿತೆನ್ನುವುದಕ್ಕೆ ಅವರ ಹೇಳಿಕೆಯೆ ಪ್ರಮಾಣ. "ಗುರುವೆ ಪರಬ್ರಹ್ಮ । ವಾಸುದೇವಾರ್ಯ ಗುರುವೆ ಪರಬ್ರಹ್ಮ ॥" ಎಂಬ ಅವರ ಕೀರ್ತನೆಯಲ್ಲಿ "ಭಾಗವತಾರ್ಥದಿ ರಾಗವ ಪುಟ್ಟಿಸಿ । ಹಾಗೆ ಗೀತಾಮೃತ ಸಾಗರದೆಡೆಗೊಯ್ವ" ಎಂಬ ಮಾತಿನಿಂದ ಭಾಗವತದಲ್ಲಿ ಅವರಿಗೆ ಮೊದಲು ಪ್ರೀತಿ ಹುಟ್ಟಿದ್ದು ಗುರು ವಾಸುದೇವಾರ್ಯರ ಪ್ರೇರಣೆಯಿಂದಲೇ ಎನ್ನುವುದು ಸ್ಪಷ್ಟವಾಗುತ್ತದೆ. ಅನಂತರ 'ಭಗವದ್ಗೀತೆ'ಯ ವ್ಯಾಸಂಗ ವ್ಯಾಖ್ಯಾನಗಳಿಗೆ ತೊಡಗಿರಬೇಕು. (ಆದರೆ ತಿಮ್ಮಪ್ಪದಾಸರು ಭಗವದ್ಗೀತೆಗೆ ಸಂಬಂಧಪಟ್ಟಂತೆ ರಚಿಸಿರುವ ಯಾವ ಕೃತಿಯೂ ಸದ್ಯಕ್ಕೆ ಉಪಲಬ್ಧವಿಲ್ಲ.) ಭಾಗವತ ಧರ್ಮವನ್ನು ಒಪ್ಪಿಕೊಂಡ, ಕವಿತಾ ಶಕ್ತಿಯುಳ್ಳ ದಾಸರಿಗೆ ಪರಮಭಾಗವತನಾದ ಧ್ರುವನ ಚರಿತ್ರೆಯನ್ನು ಮೊದಲು ಬರೆಯಬೇಕೆಂದು ತೋರಿದ್ದರೆ ಅದರಲ್ಲಿ ಆಶ್ಚರ್ಯವೇನಿಲ್ಲ. ಸಂಸ್ಕೃತ ಭಾಗವತದ ಚತುರ್ಥ ಸ್ಕಂಧದಲ್ಲಿ ಧ್ರುವನಕಥೆ ನಿರೂಪಿತವಾಗಿದೆ. "ಐದು ಅಧ್ಯಾಯಗಳ ಇನ್ನೂರ ಅರವತ್ತೈದು ಶ್ಲೋಕಗಳಲ್ಲಿ ನಿರೂಪಿಸಲಾಗಿರುವ ಕಥೆಯನ್ನು ಚಾಟುವಿಟ್ಠಲನಾಥನು ಹೆಚ್ಚು ವಿಸ್ತರಿಸದೆಯೂ, ತಿಮ್ಮಪ್ಪದಾಸರು ಮೂಲಭಾಗವತದ ಯಾವ ಅಂಶಗಳನ್ನೂ ಕಳಚದೆ ಯುಕ್ತ ತೋರಿದ ಕಡೆಯಲ್ಲಿ ಅದನ್ನು ವಿಸ್ತರಿಸಿಕೊಂಡಿದ್ದಾರೆ. ತಿಮ್ಮಪ್ಪದಾಸರ ಇತರ ಕೆಲವು ಕೃತಿಗಳಲ್ಲಿ ಕಾಣುವ ಭಾಗವತ ಮನೋಧರ್ಮ ಈ ಕೃತಿಯಲ್ಲೂ ವಿಶೇಷವಾಗಿ ವ್ಯಕ್ತವಾಗಿದೆ.... ಕಥೆಯಲ್ಲಿ ಎಲ್ಲಿ ಅವಕಾಶ ಸಿಕ್ಕಿದರೂ ಅಲ್ಲಿ ಅವರು ಹರಿಸ್ತುತಿಗೆ ತೊಡಗುವುದು ಕಾಣುತ್ತದೆ."[೧೧] ಸ್ಥೂಲವಾಗಿ ಈ ಕಥನ ವಿಧಾನವೇ 'ಬಾಲಲೀಲೆ'ಯಲ್ಲಿಯೂ ಕಂಡುಬರುತ್ತದೆ. ದಾಸರು 'ಧ್ರುವಚರಿತ್ರೆ'ಯನ್ನು ಮಹಾಕಾವ್ಯ ಸಂಪ್ರದಾಯದಲ್ಲಿ ಬರೆಯಬೇಕೆಂದು ಪ್ರಯತ್ನಿಸಿರುವಂತೆ ಕಾಣುತ್ತದೆ. ಮೂಲ ಸಂಸ್ಕೃತ ಭಾಗವತದಲ್ಲಾಗಲಿ ಕನ್ನಡ ಭಾಗವತದಲ್ಲಾಗಲಿ ಕಾಣಬರದ ಒಂದು ಅನುಚಿತ ಶೃಂಗಾರ ಸನ್ನಿವೇಶದ ವರ್ಣನೆ ತಿಮ್ಮಪ್ಪದಾಸರ 'ಧ್ರುವಚರಿತ್ರೆ'ಯಲ್ಲಿದೆ; ಕೃತಿಕಾರರು ನಾರದಮುನಿಯನ್ನು ವೇಶ್ಯಾವಾಟದಲ್ಲಿ ಸುತ್ತಾಡಿಸಿದ್ದಾರೆ. ಈ ಬಗೆಯ ಉತ್ತಾನಶೃಂಗಾರದಲ್ಲಿ ಲೇಖಕರು ತೋರಿರುವ ಒಲವನ್ನು ನೋಡಿದರೆ ಅವರು ಈ ಕೃತಿಯನ್ನು ಕೇವಲ ತಾರುಣ್ಯದಲ್ಲಿ ಬರೆದಂತೆ ಕಾಣುತ್ತದೆ. 'ಬಾಲಲೀಲೆ'ಯಲ್ಲಿಯೂ ಗೋಪಿಯರ ವಸ್ತ್ರಾಪಹರಣ, ರಾಸಕ್ರೀಡೆ ಮುಂತಾದ

* ೧೧.. ತಿಮ್ಮಪ್ಪದಾಸರ 'ಧ್ರುವಚರಿತ್ರೆ'; ಸಂ.–ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟ; ಮುನ್ನುಡಿ: ಪುಟ–೭, ೨೦, ಮತ್ತು ೨೪.

ಗಳಲ್ಲಿ ಕೆಲವು 'ಅರ್ಚನ'ದಲ್ಲಿರುವ ಕೀರ್ತನೆಗಳವೇ ಆಗಿವೆ.[೯] (೯) 'ಸಲಹು ನಂದಕುಮಾರ' ಎಂಬ ಕೀರ್ತನೆ 'ಅರ್ಚನ'ದಲ್ಲಿಯೂ ಇದೆ, 'ಶ್ರೀಕೃಷ್ಣಬಾಲಲೀಲೆ'ಯಲ್ಲಿಯೂ ಇದೆ. 'ಅರ್ಚನ' ಬೇರೆ ಬೇರೆ ಕಾಲಗಳಲ್ಲಿ ಬರೆದ ಕೀರ್ತನೆಗಳ ಸಂಕಲನವಾದ್ದರಿಂದ 'ಶ್ರೀಕೃಷ್ಣಬಾಲಲೀಲೆ'ಯಿಂದಲೇ 'ಸಲಹು ನಂದಕುಮಾರ' ಕೀರ್ತನೆಯನ್ನು ತೆಗೆದುಕೊಂಡಿರುವ ಸಂಭವ ಹೆಚ್ಚು.[೧೦] ಈ ಏಕಕರ್ತೃಕವಾದ ಕೀರ್ತನೆ 'ಅರ್ಚನ'ಕ್ಕೂ 'ಬಾಲಲೀಲೆ'ಗೂ ಸಮಾನವಾಗಿರುವುದರಿಂದ ಎರಡೂ ಕೃತಿಗಳ ಕರ್ತೃ ಒಬ್ಬರೇ ಎಂದಾಗುತ್ತದೆ.

ಮೇಲೆ ನಿರೂಪಿಸಿರುವ ಬಾಹ್ಯಾಭ್ಯಂತರ ಪ್ರಮಾಣಗಳ ಆಧಾರದಿಂದ 'ಶ್ರೀಕೃಷ್ಣಬಾಲಲೀಲೆ'ಯ ಕರ್ತೃ ತಿಮ್ಮಪ್ಪದಾಸರೇ ಎಂಬುದು ಸ್ಥಿರಪಡುತ್ತದೆ.

**ಕೃತಿ ಸ್ವರೂಪ**

'ಶ್ರೀಕೃಷ್ಣಬಾಲಲೀಲೆ' ಶ್ರೀ ವೇದವ್ಯಾಸರು ರಚಿಸಿದ್ದೆಂದು ಪ್ರಸಿದ್ಧವಾದ ಶ್ರೀಮದ್ಭಾಗವತ ಮಹಾಪುರಾಣದ ದಶಮಸ್ಕಂಧದ ಕನ್ನಡ ಅನುವಾದವಾಗಿದೆ; ಸಂಸ್ಕೃತದ ಮೂಲಕ್ಕೆ ಸಮೀಪವರ್ತಿಯಾಗಿದ್ದರೂ ಭಾಷಾಂತರವಲ್ಲ. ನಿತ್ಯಾತ್ಮ ಶುಕಯೋಗಿ (ಚಾಟು ವಿಠಲನಾಥ?)ರಚಿಸಿದ ಕನ್ನಡ ಭಾಗವತ ಒಂದಿದೆಯಷ್ಟೆ. 'ಬಾಲಲೀಲೆ'ಯ ತಿಮ್ಮಪ್ಪದಾಸರು ಕನ್ನಡ ಭಾಗವತವನ್ನು ಓದಿಕೊಂಡು ಅದರಿಂದ ಪ್ರಭಾವಿತರಾಗಿದ್ದರೂ ಇರಬಹುದು. ಕನ್ನಡ ಭಾಗವತ, ಹರಿದಾಸರ ಕೀರ್ತನೆಗಳಲ್ಲಿ ಹೆಣೆದುಕೊಂಡಿರುವ ಬಾಲಕೃಷ್ಣಲೀಲಾ ಸನ್ನಿವೇಶ ಪ್ರಸಂಗಗಳು, ಪ್ರಸನ್ನ ವೆಂಕಟದಾಸರ 'ಭಾಗವತ ಕೀರ್ತನೆಗಳು' – ಇವುಗಳ ಹಾಗೂ 'ಕೃಷ್ಣಬಾಲಲೀಲೆ'ಯ ಸಂಬಂಧದ ತೌಲನಿಕ ವಿಚಾರ ವಿಮರ್ಶೆಯನ್ನು ಈ ಕೃತಿಯ ದ್ವಿತೀಯ ಸಂಪುಟದ ಪ್ರಸ್ತಾವನೆಯಲ್ಲಿ ಕೈಗೊಳ್ಳಲಾಗುವುದು.

---

೯.. 'ಸಲಹು ನಂದಕುಮಾರ', 'ಪೂಜೆಯ ಮಾಡುವ ಬನ್ನಿ', 'ನೈವೇದ್ಯವಿದು ಭುಂಜಿಸಲು ಯೋಗ್ಯವಾಗಿದೆ', 'ಪಾದವೆಚ್ಚರಿಕೆ' 'ರಾಜೋಪಚಾರ', ಇತ್ಯಾದಿ, ಕೆಲವು ವರ್ಣ ಮಾದರಿಗಳು ತೆಲುಗು ಕೀರ್ತನೆಗಳವು. ಗೋಪಾಲಾರ್ಯರೆಂಬ ಗುರುಸ್ತುತಿಯ ಕೀರ್ತನೆಗಳನ್ನು ತಿಮ್ಮಪ್ಪ ದಾಸರು ತೆಲುಗಿನಲ್ಲಿ ರಚಿಸಿದ್ದಾರೆ. ಅವರ ತೆಲುಗು ಪ್ರೇಮ, ಪಾಂಡಿತ್ಯ, ಈ ಸಂಗತಿಯಿಂದ ವ್ಯಕ್ತಪಡುತ್ತದೆ.

೧೦.. ಒಬ್ಬ ಕವಿ ಎರಡೋ ಮೂರೋ ಹಲವೋ ಕೃತಿಗಳನ್ನು ರಚಿಸಿದಾಗ ಒಂದು ಕೃತಿಯಲ್ಲಿಯ ರಚನೆಯನ್ನು ತನ್ನ ಇನ್ನೊಂದು ಕೃತಿಯಲ್ಲಿಯೂ ಸಂದರ್ಭೋಚಿತವಾಗಿ ಬಳಸಿಕೊಳ್ಳುವ ಪರಿಪಾಟ ಕನ್ನಡದ ಕೆಲವು ಕವಿಗಳಲ್ಲಿ ಕಂಡುಬರುತ್ತದೆ. ಹರಿಹರನ 'ಗಿರಿಜಾ ಕಲ್ಯಾಣ'ದಲ್ಲಿ ಬರುವ ಪುಷ್ಪೋಪಚಯ ಪ್ರಸಂಗದ ವಿಸ್ತೃತ ವರ್ಣನೆಯೇ 'ಪುಷ್ಪರಗಳೆ'ಯಾಗಿ ಪರಿಣಮಿಸಿದೆ. ರಾಘವಾಂಕನ ಹರಿಶ್ಚಂದ್ರ ಕಾವ್ಯದ ಕೆಲವು ವರ್ಣನಾಂಶಗಳು 'ಸಿದ್ಧರಾಮ ಚರಿತೆ'ಯಲ್ಲಿ ಕಂಡುಬರುತ್ತದೆ.

'ತಮ್ಮ ಇಷ್ಟದೈವವಾದ 'ಶ್ರೀ ತಿರುಪತಿಯರಸ'ನೇ ಈ ಕೃತಿಗೆ 'ಬೋಧಹೇತು', 'ಆತನು ಪ್ರೇರಿಸಿದಂತೆ ಪೇಳುವೆನು' ಎಂದು ಪೂರ್ವಕವಿ ಸಂಪ್ರದಾಯದಂತೆ ಮಾತ್ರವಲ್ಲದೆ ತಮಗೆ ಪ್ರಾಮಾಣಿಕವಾಗಿ ಅನ್ನಿಸಿದ್ದನ್ನೇ ಹೇಳಿದ್ದಾರೆ. ಏಕೆಂದರೆ, "ಆರು ಲೋಕವನಾಳುವವರು? ಇದ ತೋರಿ ತಾಳಿರುವರಾರು?" ಆ ಪರಮಾತ್ಮನೇ ಎಲ್ಲಕ್ಕೂ "ಬೇರು" (=ಮೂಲ), "ಬುದ್ಧ್ಯಾದಿಗಳನ್ನು ಬೆಳಗುವವನು" ಎಂಬ ಪರಮತತ್ತ್ವವನ್ನು ದಾಸರು ಬಲ್ಲರು. ಆದ್ದರಿಂದ ಅವರು ಹೇಳುತ್ತಾರೆ: "ಕೃತಿ ತನ್ನ ತಾನೆ ತಾ ಬಂದುಬಹು ಜಿತವಾಯಿತು ಜಗದಲ್ಲಿ ನಿಂತು." ಈ ಕೃತಿ ತಾವು ರಚಿಸಿದ್ದಲ್ಲ: "ಕಲಿಸಿದೆ ಕವಿಕಲೆಗಳನು, ಕೃತಿಗೊಳಿಸಿದೆ ಕಮಲಾಕ್ಷ ನೀನು." "ವೀಣೆಯು ಸ್ವರ ವಿವರವನು ಪೇಳೆ, ವೀಣೆಗೆ ಚೈತನ್ಯಹವೇನು? ವೀಣೆಗೆ ವೊಡಲು ಮಾನವನು; ಹಾಗೆ, ನಾನು ನೀ ನುಡಿಸೆ, ನಿಡಿವೆನು". ಹಾಗೆ ನುಡಿಸುವವನು ಬಾಲಲೀಲೆಗಳನ್ನು ಮೆರೆದ ಶ್ರೀಕೃಷ್ಣನೇ: "ಲೀಲೆಯಿಂದಾಡಿದ ಲಲಿತ ಚರಿತವನು ಕೀಲಿಸಿಕೊಡುತಿಹೆ ಕಾಣಲೆಂದಿದನು". ಸೃಷ್ಟಿಕಾರ್ಯಕ್ಕೆ ಬ್ರಹ್ಮನಿಗೇ ಸೃಷ್ಟಿಮಂತ್ರವನ್ನು ದಯಪಾಲಿಸಿದವನೇ "ನನಗೂ ಪ್ರೇರಕನೆಂಬ ನಿರ್ಣಯಕಿನ್ನೇನು ಅನುಮಾನ" ಎಂಬ ದೃಢವಾದ ನಂಬುಗೆ ಕವಿಯದು. "ವೀರನಾರಾಯಣನೆ ಕವಿ, ಲಿಪಿಕಾರ ಕುವ(ಮಾ)ರವ್ಯಾಸ ಎಂಬ ನಿಲುವೆ ಈ ಕವಿಯದೂ ಕೂಡ.

೪ನೆಯ ಕೀರ್ತನೆಯಲ್ಲಿ ಕವಿ ತನ್ನ ಕೃತಿಯಲ್ಲಿ ನಿರೂಪಿಸಲಾದ ಕಥಾವಸ್ತುವನ್ನು ಸಂಕ್ಷೇಪವಾಗಿ ತಿಳಿಸಿದ್ದಾರೆ:

"ಮೂಲೋಕವಂದ್ಯ ಮಾನ್ಯನು ವಸುದೇವನಾಲಯದಲಿ ಲೀಲೆಯಿಂದುದಿಸಿದನು; ನೀಲಾಂಬರನು (=ಬಲರಾಮ) ಸಹ ನಲಿಯೆ ಬಾಲಕನಾಗಿ, ಪೊಸತಾಗಿ ಹುಟ್ಟಿಲ್ಲದ ಹರಿಯು ಪುಟ್ಟಿ ಮಧುರಾಪುರದಿ, ಪುಟ್ಟತನವ ವ್ರಜದಿ (=ಗೋಕುಲದಲ್ಲಿ) ಪಡೆದನು; ತಟ್ಟನೆ ತಾನಲ್ಲಿ ಹೋಗಿ ಕೃಷ್ಣದೇವ ಗವ್ಯವ (=ಹಾಲು, ಬೆಣ್ಣೆ) ಬಾಲರೊಟ್ಟಿನಲಿ ಆಡುತ ಉಂಡನು. ಕರುಗಳ ಕಾದನು; ಖಳರನು (ಪೂತನಿ, ಶಕಟಾಸುರ, ಮುಂತಾದವರು) ಮುರಿದು (ಅವರಿಗೆ) ಮುಕ್ತಿಯ ಪಾಲಿಸಿ, ಗೋವಿನ ತಂಡವ ತರುಬಿ, ಮಹಿಮೆಯ ಪರಿಪರಿಯಾಗಿ ಪ್ರಸರಿಸಿ, ಹಾರಿದಾಡಿ ಹಾವಿನೊಳು, ಕಿರಿವಿನಾಟದೊಳ್ಕೂಡಿ ಕರುಬಿದವರ ಕೊಂದನು.

"ಗೋಪಸ್ತ್ರೀಯರ ಗಾತ್ರದ (=ಶರೀರದ) ವಸನಗಳ ಗೋಪನಗೈದು, ಕೊಟ್ಟನು. ದೀಕ್ಷಿತರ ಪತ್ನಿಯರಲಿ ಅನ್ನವ (ಬೇಡಿ ಗೋಪರ ಗುಂಪಿಗಿತ್ತು, ಗೋವರ್ಧನಾದ್ರಿಯ ಎತ್ತಿ ಈ ಪರಿಯಾಟವಾಡಿದನು. ರಾಸಕ್ರೀಡೆಯ ರಚಿಸಿ,

ಪ್ರಣಯ ಪ್ರಸಂಗಗಳಲ್ಲಿ ಶೃಂಗಾರವಿದೆ. ಸಂಸ್ಕೃತ ಭಾಗವತದಲ್ಲಿ "ಕೃಷ್ಣ ಗೋಪೀವಿಲಾಸ" ಪ್ರಕರಣವನ್ನು ಪರಮಾತ್ಮ–ಜೀವಾತ್ಮ ಸಂಬಂಧದ ಒಂದು ತಾತ್ವಿಕ ನೆಲೆಗಟ್ಟಿನಲ್ಲಿ ನಿರೂಪಿಸಲಾಗಿದೆ, ಎಂದು ವ್ಯಾಖ್ಯಾನಕಾರರು ತಿಳಿಸುತ್ತಾರೆ. ಅದೊಂದು ಬಗೆಯ ಮಧುರ ಭಕ್ತಿ ಎಂದೇ ಹೇಳಬಹುದು. 'ಬಾಲಲೀಲೆ'ಯಲ್ಲಿಯೂ ಅದೇ ಬಗೆಯ ತಾತ್ತ್ವಿಕ ದೃಷ್ಟಿ ಕಂಡುಬರುತ್ತದೆ. ತಿಮ್ಮಪ್ಪದಾಸರು ತತ್ತ್ವನಿಷ್ಠೆಯಲ್ಲಿ ನೆಲೆಗೊಂಡ ಮನಃಪರಿಪಾಕದ ಉತ್ತರಪ್ರಾಯದಲ್ಲಿ 'ಬಾಲಲೀಲೆ'ಯನ್ನು ರಚಿಸಬೇಕೆಂದು ತೋರುತ್ತದೆ.

'ಧ್ರುವಚರಿತ್ರೆ'ಗೂ 'ಶ್ರೀಕೃಷ್ಣಬಾಲಲೀಲೆ'ಗೂ ಇರುವ ರೂಪವ್ಯತ್ಯಾಸವು ಬಂಧಪ್ರಕಾರಕ್ಕೆ ಸಂಬಂಧಪಟ್ಟದ್ದು. ಮೂಲ ಭಾಗವತವನ್ನು ಆಧರಿಸಿದ ಪೌರಾಣಿಕ ಕಥಾಕಥನವೇ ಎರಡರಲ್ಲೂ ಪ್ರಧಾನವಾದರೂ ಮೊದಲಿನದು ಪೌರಾಣಿಕ ಚೌಕಟ್ಟಿನಿಂದ ಹೊರಬಂದು ಸಾಂಗತ್ಯಛಂದಸ್ಸಿನಲ್ಲಿ ರಚಿಸಿದ ವರ್ಣಕ ಕಾವ್ಯ (=ಹಾಡಗಬ್ಬ)ವಾಗಿದೆ; ಎರಡನೆಯದು ಪುರಾಣ ವಸ್ತುವನ್ನು 'ಕೀರ್ತನೆ' (=ದೇವತಾ ಸ್ತೋತ್ರ ರೂಪದ ಗೇಯ ರಚನೆ)ಗಳ ರೂಪದಲ್ಲಿ ನಿರೂಪಿಸಿದೆ. 'ಧ್ರುವಚರಿತ್ರೆ'ಯಲ್ಲಿಯ ಗೇಯಾಂಶ ಗೌಣವಾದದ್ದು. 'ಬಾಲಲೀಲೆ' ರಾಗ ತಾಳ ಯುಕ್ತವಾದ ಗೇಯಕೃತಿ ಸಮುಚ್ಚಯ.

**ಕವಿಯ ಹೇಳಿಕೆ :** ಕೃತಿಸ್ವರೂಪ, ಕೃತಿಯಲ್ಲಿ ನಿರೂಪಿತವಾಗಿರುವ ಕಥಾ ವಿಷಯ, ಕೀರ್ತನೆಗಳ ಭಾಷಾ ಶೈಲಿಗಳ ಲಕ್ಷಣ, – ಇವುಗಳನ್ನು ಕುರಿತು ತಿಮ್ಮದಾಸರೇ ಹೇಳಿಕೊಂಡಿರುವ ವಿವರಗಳನ್ನು ಇನ್ನು ಗಮನಿಸಬಹುದು.

ಮೂರನೆಯ ಕ್ರಮಸಂಖ್ಯೆಯ ಕೀರ್ತನೆಯಲ್ಲಿ ಕವಿ ತಿಮ್ಮಪ್ಪದಾಸರು[೧೨]

---

೧೨.. ತಿಮ್ಮಪ್ಪದಾಸರನ್ನು 'ಕವಿ' ಎಂದು ನಿರ್ದೇಶಿಸುವುದು ಅನುಚಿತವಲ್ಲ. ಏಕೆಂದರೆ, ತಿಮ್ಮಪ್ಪದಾಸರು ಸಂಸ್ಕೃತ ಭಾಗವತವನ್ನು ಮಾತಿಗೆ ಮಾತು ಇಟ್ಟು 'ಭಾಷಾಂತರ' ಮಾಡಿಲ್ಲ. ಸಮೀಪವರ್ತಿಯಾಗುವಂತೆ ಮೂಲವನ್ನು ಅನುಸರಿಸಿ ಹೇಳುತ್ತ ಹೋಗಿದ್ದರೂ ಕೃತಿಯನ್ನು 'ಅನುವಾದ' ಎಂದೂ ಹೇಳುವಂತಿಲ್ಲ. 'ಬಾಲಲೀಲೆ'ಯ ಕಥನಕ್ರಮದಲ್ಲಿ 'ಧ್ರುವಚರಿತ್ರೆ'ಯಲ್ಲಿ ಕಾಣಬರುವಷ್ಟು ಪ್ರಮಾಣದಲ್ಲಿ ಅಲ್ಲದಿದ್ದರೂ ತಕ್ಕಮಟ್ಟಿನ 'ಪುನಸ್ಸೃಷ್ಟಿಕಾರ್ಯ'ವನ್ನು ಗುರುತಿಸಬಹುದು. ಕೃತಿ ಕೀರ್ತನೆಗಳ ರೂಪದಲ್ಲಿದ್ದರೂ ಹರಿದಾಸರ ಕೀರ್ತನೆಗಳಂತೆ ಇವು ಬಿಡಿ ರಚನೆಗಳಲ್ಲ. ಪೂರ್ವಾಪರ ಸಂಬಂಧವನ್ನು ಪಡೆದುಕೊಂಡು ಪುರಾಣ ಕಥಾಸರಣಿ ಅನುಸ್ಯೂತವಾಗಿ ಸಾಗಿದೆ. ಎಲ್ಲ ಕೀರ್ತನೆಗಳೂ ಕೃಷ್ಣಸ್ತುತಿಯಾಗಿರದೆ, ಕೃಷ್ಣಚರಿತೆಯನ್ನು ನಿರೂಪಿಸುವುದರಿಂದ ಕೀರ್ತನರೂಪದ ಈ ಕೃತಿಯನ್ನು **'ಕೀರ್ತನ ಕಾವ್ಯ'** ಎಂದು ನಿರ್ದೇಶಿಸಲು ಯಾವ ಅಡ್ಡಿಯೂ ಇರದು. ಕೀರ್ತನಕರ್ತೃ ತಿಮ್ಮಪ್ಪದಾಸರು ತಾವು ಕವಿತೆಯ ಕೀಲನರಿಯದ ಅಜ್ಞನು ಎಂದು ಹೇಳಿಕೊಂಡಿದ್ದರೂ, ಸಂಸ್ಕೃತ ಭಾಗವತ ಪುರಾಣವಾದರೂ ಬಹ್ವಂಶದಲ್ಲಿ ಕಾವ್ಯಗುಣವನ್ನು ಹೊಂದಿದೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿರುವುದರಿಂದ ಮೂಲವನ್ನು ಅನುಸರಿಸಿಯೂ ಅಲ್ಲಲ್ಲಿ ಸ್ವೋಪಜ್ಞ ರಚನೆಯನ್ನು ಮೆರೆದಿರುವ ದಾಸರು ಕವಿಮನೋಧರ್ಮದವರೇ ಎಂದು ಧಾರಾಳವಾಗಿ ಹೇಳಬಹುದು.

ತೋರಿಹುದು"; ಮಾತ್ರವಲ್ಲ, "ಮೂಲವ್ಯಾಖ್ಯಾನಗಳ ಮುಖ್ಯ ತಾತ್ಪರ್ಯಗಳು ಲಲಿತ ಭಾಷೆಯೊಳಗೆ ಎರಕವಾಗಿ" ಇರುವುದಕ್ಕೆ ಕಾರಣ ಶ್ರೀಕೃಷ್ಣನ ಕೃಪೆ; ಹೀಗೆ "ಶ್ರೀಹರಿಯ ಸೂತ್ರದಲಿ ಸಾಗಿಬಂದಿರೆ ಕೃತಿಯು ತಾ ಹೊಂದಿಹೊಳೆಯುವುದೆ ತಪ್ಪೆಂಬುದೊಂದು?" ಆ ಮಹಿಮನೇ ಹೇಳಿಸಿದ ಕೃತಿಯಾದ್ದರಿಂದ, "ರೂಹಿಸಲು ದೋಷಗಳು ರುಜುವಾಗಿ ರಾಜಿಪುದು"; ತಪ್ಪೂ ನೇರ್ಪಾಗಿ ಕಾಣುವುದು. ಮಗುವಿನ ತೊದಲ್ನುಡಿಯಲ್ಲಿ ಯಾರಾದರೂ ತಪ್ಪು ಹುಡುಕುವರೆ? ಮಕ್ಕಳು ಹಾಗೂ ವಿದ್ವಾಂಸರು ಇವರಿಬ್ಬರ ಬುದ್ಧಿ–ವೃತ್ತಿಗಳನ್ನೂ ಪಾಲಿಸುವವನು ಅವರ ಹೃದಯದಲ್ಲಿ ನೆಲಸಿರುವ ಪರಮಾತ್ಮ; "ಬಾಲರಾಡುವ ಮಾತ ಬಾಲರಂತಾಡಿಪನು" – ಬಾಲಭಾಷೆಯಲ್ಲಿಯೂ ಒಂದು 'ಕಡುಸೊಬಗು' ಉಂಟು. ಈ ದೃಷ್ಟಿಯಲ್ಲಿ ತಮ್ಮ ಕೃತಿಯನ್ನು ಸ್ವೀಕರಿಸಬೇಕೆಂಬುದು ಕವಿ ದಾಸರ ಆಶಯ. ತಮ್ಮ ಕೃತಿ ಪುರಸ್ಕರಣ ಯೋಗ್ಯವಾಗಲು ಇನ್ನೂ ಒಂದು ಕಾರಣವದೇನೆಂದರೆ, ಅದು 'ಹರಿಕಥೆ'ಯಾಗಿರುವುದು. ಆದ್ದರಿಂದ, "ಕೃತಿಯೊಳಾವ ತಪ್ಪಿದ್ದಡೆಯು ಯದುವರನ ಕಥೆಯೆಂದು ಕವಿಜನರು ಹೃದಯದಲಿ ದಯವಿಟ್ಟು ಹರುಷದಿಂದಾಲಿಪುದು ತೊದಲನುಡಿ ಶಿಶುವನ್ನು ಕರೆದು ಲಾಲಿಸುವಂತೆ" ಎಂದು ಬೇಡಿಕೊಂಡಿದ್ದಾರೆ ದಾಸರು. ಎಲ್ಲ ಭಕ್ತ ಕವಿಗಳ ನಿವೇದನವೂ ಇದೇ ಆಗಿದೆ.

### ಶೈಲಿಯ ವೈಲಕ್ಷಣ್ಯಗಳು

ತಮ್ಮದು ಕವಿತೆ, ತಾವು ಕವಿ, ಎಂಬ ಅರಿವಿದ್ದರೂ 'ಬಾಲಲೀಲೆ' ಲಕ್ಷಣಬದ್ಧವಾದ ಕಾವ್ಯಕೃತಿಯಾಗಿರದೆ ಕೀರ್ತನೆಗಳ ರೂಪದಲ್ಲಿಅದನ್ನು ರಚಿಸಿರುವುದರಿಂದ ಆ ಪ್ರಕಾರದಲ್ಲಿ ತಾವು ವಹಿಸಿರುವ ಸ್ವಾತಂತ್ರ್ಯವನ್ನೂ ಅದರ ವೈಲಕ್ಷಣ್ಯಗಳನ್ನೂ ಕವಿ ತಿಮ್ಮಪ್ಪದಾಸರು ತಿಳಿಸಿರುತ್ತಾರೆ. ಅವರ ಕೀರ್ತನ ರಚನೆಗೆ ಪೂರ್ವದ ಭಕ್ತ ಕವಿಗಳ ರಚನೆಗಳೇ ಮಾದರಿ:

ಕನ್ನಡದ ಭಾಷೆಯಲಿ ಕುರುಹಿಟ್ಟು ವರ್ಣಗಳ ।
ಸನ್ನುತನ ಸತ್ಕಥೆಯು ಸಾಗಿಬಂದಿಹುದು ।
ಮುನ್ನ ಭಕ್ತರು ಮಾಡ್ದ ಮುಖ್ಯ ಪಲ್ಲವಪದದ ।
ಸನ್ನೆಯೊಂದೇ ಸಿದ್ಧಸಾಧನದಿ ನಡಸಿದನು ॥ (೫–೧೪)

ಪ್ರತಿ ಕೀರ್ತನೆಗೂ ತಮಗಿಂತ ಹಿಂದಿನವರಾದ ಪುರಂದರದಾಸರು ಮುಂತಾದ ಭಕ್ತಕವಿಗಳ 'ವರ್ಣ'ಗಳ ಧಾಟಿಯನ್ನು ಕುರುಹಾಗಿ ಇಟ್ಟುಕೊಂಡು ಆ ವರ್ಣದ ಪಲ್ಲವಿಯ ಪ್ರಥಮ ಪಾದವನ್ನು ಕೀರ್ತನಾರಂಭದಲ್ಲಿ ಕವಿ

ರತಿಯಿತ್ತು (=ಅವ್ಯಾಜ ಪ್ರೀತಿ), ತಾ ಸಲಹಿದ ಸ್ತ್ರೀಯರ. ವಾಸುದೇವನು ವೇಣುವ ವಿವರಿಸಿ ಬೀಸಿದ ಭಕ್ತಿಯ ಭಾಗ್ಯವ; ಅಸುರಧರ್ಮದಿಂದಲೈದಿದ ದುಷ್ಟರನ್ನು ಘಾಸಿಸಿ ಗತಿಯಿತ್ತನು.

"ಭಕ್ತನಕ್ರೂರ ಬಂದರೆ, ಮಧುರೆಗೆ ರಕ್ತಿಯಿಂದೈದಿ ರಥದಿ, ಶಕ್ತಿಯಿಂ ಕಂಸಾಸುರಗೆ ಮುಕ್ತಿಯಿತ್ತನು; ಯುಕ್ತರಾದರ ಕಾಯ್ದು, ಇಳೆಗೆ ಬಹುಭಾರಕರ ವ್ಯಕ್ತಿಗಳ ವಿದಳಿಸಿದನು.

"ಯಾದವರು ಇರಲು ವಾರಿಧಿಮಧ್ಯವಾಸಕೆ ಒಡನೆ ಒಂದು ದ್ವಾರಕಿಯನ್ನು ನಿರ್ಮಿಸಿ (ಯಾದವರನು) ನಿಲಿಸಿದ."

ಹೀಗೆ, "ಬಾಲತ್ವವಾದ ಭಾವದಿ ಭಗವಂತ ಪಾಲಿಸಿದಂಥ ಪರಿಯ ಕಥೆಯ ಕೀಲಿಸಿದೆನು" ಎಂದು ಹೇಳಿ, ತಾವು "ಕವಿತ್ವದ ಕೀಲನು ಅರಿಯದ ಅಜ್ಞನು" ಎಂದು ದಾಸರು ವಿನಯವನ್ನು ತೋರಿದ್ದಾರೆ. ಪ್ರಸಿದ್ಧ ಕವಿಗಳ ಪಾದಧೂಳಿಯನ್ನು ಧರಿಸಿದ್ದರಿಂದ ತಮಗೆ ಕವಿತಾಸಾಮರ್ಥ್ಯ ಒದಗಿತು ಎಂದು ಕವಿ ದಾಸರು ನಂಬಿದ್ದಾರೆ. ಕೃಷ್ಣನ ಬಾಲಲೀಲೆಯನ್ನು ಸ್ಮರಿಸುವುದೇ ತಮ್ಮ ಕವಿತಾರಚನೆಗೆ ಲಾಭ ಎಂದಿರುವ ಕವಿಗೆ ಕೀರ್ತಿಯ ಇಲ್ಲವೆ ಧನದ ಲಾಭದ ಆಸೆ ಇರಲಿಲ್ಲ.[೧೩]. ದಾಸರು ತಮ್ಮ ಕವಿತಾ ಸಾಮರ್ಥ್ಯದ ಬಗೆಗೆ ಹೆಮ್ಮೆಯನ್ನು ಮೆರೆದಿಲ್ಲ. ೫ನೆಯ ಕೀರ್ತನೆಯಲ್ಲಿ ಅವರ ವಿನೀತಭಾವ ಸ್ಪಷ್ಟವಾಗಿ ಮೂಡಿದೆ. ತಮ್ಮ ಕೃತಿಯಲ್ಲಿರುವ ಕೊರತೆಯನ್ನು ಕವಿಗಳು ಕ್ಷಮಿಸಬೇಕೆಂದು ಕೇಳಿಕೊಂಡಿದ್ದಾರೆ. ತಾವು ಕಾವ್ಯಶಾಸ್ತ್ರವನ್ನು ಕಂಡು ಕೇಳಿದವರಲ್ಲ, ಕವಿಗಳ ಸಂಗದಲ್ಲಿ ಕೂಡಿದ್ದುದಿಲ್ಲ ಎಂದು ವಿಜ್ಞಾಪಿಸಿಕೊಂಡಿದ್ದಾರೆ. ಸಂಸ್ಕೃತಭಾಗವತದ ಅರ್ಥವಿವರಗಳೆಲ್ಲವೂ ತಮಗೆ ವಿಷ್ಣುವಿನ ಪ್ರೇರಣೆಯಿಂದಲೇ ತೋರಿತೆಂದು ಅವರ ನಂಬಿಕೆ. ಹಾಗಲ್ಲದೆ ಅಜ್ಞಾನದ ಕತ್ತಲೆಯಲ್ಲಿ ಮುಳುಗಿದ್ದ ತಮಗೆ ಅಮರ (ದೇವ) ಭಾಷೆಯಲ್ಲಿರುವ ಸಂಸ್ಕೃತಭಾಗವತದ ವಿಚಾರ ತಾನೆ ಹೇಗೆ ತಿಳಿಯುತ್ತಿತ್ತು ಎಂದು ಸಂದೇಹಿಸಿದ್ದಾರೆ. ಇದು ಭಕ್ತ ಕವಿಯ ಭಕ್ತಿಯ ಮಾತೇ ಹೊರತು ಸಂಸ್ಕೃತ ವಿದ್ವತ್ತಿಗೆ ಆತ ಪರಿಶ್ರಮ ಮಾಡಿರಲಿಲ್ಲ ಎಂದು ಅರ್ಥವಲ್ಲ. ತಮ್ಮ ಕೃತಿ ಮಾನುಷಕೃತ, ವರಕವಿತ್ವವಲ್ಲ ಎಂದಾಗಿದ್ದರೂ ಇದರಲ್ಲಿ "ಗುರುತರದ ಭಾಗವತದ ಗೂಢದರ್ಥಗಳೆಲ್ಲ ಸ್ಫುರಿಸಿ

---

೧೩.. ತಿಮ್ಮಪ್ಪದಾಸರು ಮುಮ್ಮಡಿ ಕೃಷ್ಣರಾಜರ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದುದು ಭಗವದ್ಭಕ್ತರು ಎಂಬ ಕಾರಣದಿಂದ, ಕವಿಯಾಗಿ ಅಲ್ಲ, ಎಂದು ತೋರುತ್ತದೆ. ಒಬ್ಬ ವಿದ್ವಾಂಸ ಎಂದು ದೊರೆಯಿಂದ 'ಭಟಮಾನ್ಯ' ಪಡೆದಿದ್ದರೂ ಸಾಲಗಾರರಾಗಿ ಸತ್ತರು. ತಿಮ್ಮಪ್ಪದಾಸರು ಸಂಸ್ಕೃತ ಕನ್ನಡಗಳ ಪ್ರಸಿದ್ಧ ಕಾವ್ಯಗಳನ್ನು ಓದಿಕೊಂಡಿದ್ದರು.

೩. ೫ನೆಯ ಕೀರ್ತನೆಯ ೨೪, ೨೫ನೆಯ ನುಡಿಗಳಲ್ಲಿ ಯತಿಗಣ, ಪ್ರಾಸಗಳ ಸಮರ್ಥನೆ ಇದೆ. 'ಯತಿಗಣ ಪ್ರಾಸಗಳವೇತಕೆಂಬರು ಬುಧರು' ಎಂಬ ಪ್ರಶ್ನೆಯನ್ನು ತಾವೇ ಹಾಕಿಕೊಂಡು, ಪ್ರಶ್ನೆಗೆ ಹೀಗೆ ಉತ್ತರಿಸಿದ್ದಾರೆ: "ಗತಿ ನಡೆವರನುಕೂಲಗುಣವೆನಿಸುತಿಹವು। ಮತಿ ನಿಲುವುದರ್ಥದಲಿ ಮತ್ತದೇ ಫಲವಹುದು। ಹಿತವಹುದು ಕೇಳ್ವರಿಗೆ ಹೊದ್ದಿದರೆ ಲಕ್ಷಣವು॥" ತಿಮ್ಮಪ್ಪದಾಸರು ತೆಲುಗಿನಲ್ಲಿ ಪ್ರಸಿದ್ಧವಾದ 'ವಡಿ' ಎಂಬುದನ್ನೇ 'ಯತಿಗಣ' ಎಂದು ಕರೆದಿದ್ದಾರೆ ಎಂದು ತೋರುತ್ತದೆ. ಕೀರ್ತನೆಯ ಒಂದು ಪಾದದಲ್ಲಿ ನಾಲ್ಕು ತಾಳಾವರ್ತಗಳು ಇರುತ್ತವೆಯೆಂದು ಇಟ್ಟುಕೊಂಡರೆ ಮೊದಲ ಎರಡು ತಾಳಾವರ್ತ ನುಡಿದಮೇಲೆ ವಾಕ್ಯಾರ್ಥ ಕೆಡದಂತೆ ವಾಕ್ಯದ ಉಚ್ಚಾರಣೆಯನ್ನು ನಿಲ್ಲಿಸಬೇಕೆಂದು ಸಹಜವಾಗಿ ಬುದ್ಧಿಗೆ ಹೊಳೆಯುತ್ತದೆ. ಆ ಉಚ್ಚಾರದ ನಿಲುಗಡೆಯೇ ಯತಿ. ಈ ಆವರ್ತಗಳು ಎರಡು ಕೂಡಿ 'ಯತಿಗಣ' ಎನ್ನಿಸಿಕೊಳ್ಳುತ್ತದೆ. ಪಾದ ಯಾವ ವರ್ಣದಿಂದ ಪ್ರಾರಂಭವಾಗುತ್ತದೆಯೋ ಆ ವರ್ಣದಿಂದಲೇ ಯತಿಸ್ಥಾನದ ಮುಂದಿನ ಆವರ್ತ ಪ್ರಾರಂಭವಾಗಬೇಕು. ಇದೇ 'ಯತಿಗಣಪ್ರಾಸ'. ಉದಾಹರಣೆಗೆ–

ಸತಿಗೆ ತೊಡಿಗೆಗಳಿರಲು । ಶೋಭಿಸುವವಾಕೆಯನು ।
ರತಿಯೊಂದೆ ಪುರುಷನಿಗೆ। ರಸವೆನಿಸುತಿಹುದು ।

ಈ ನುಡಿಯಲ್ಲಿ ನಡುವಣ ಗೆರೆ ಯತಿಸ್ಥಾನವನ್ನು ತೋರಿಸುತ್ತದೆ. ಸ–ಶ, ರ–ರ ಇವು 'ಯತಿಗಣಪ್ರಾಸ'ಗಳು.[೧೪]

ಈ ಕವಿಯ ದೃಷ್ಟಿಯಲ್ಲಿ ಕಾವ್ಯದಲ್ಲಿ ಅಲಂಕಾರ ಮುಖ್ಯವಲ್ಲ; ಕಾವ್ಯಾರ್ಥವಾದ ರಸವೇ ಮುಖ್ಯ. ಪತ್ನಿಗೆ ಒಡವೆ ಶೋಭೆ ಕೊಡುತ್ತದೆ. ಅಷ್ಟೆ; ಪುರುಷನಿಗೆ (ಪತಿಗೆ) ಬೇಕಾದದ್ದು ದಾಂಪತ್ಯ ಸುಖ. ಅದೇ ರೀತಿ, ಲಕ್ಷಣಪಾಲನೆ ಕೃತಿಗೆ ಕಾಂತಿಯನ್ನು ಕೊಡಬಲ್ಲದೆ ಹೊರತು, ರಸಾಸ್ವಾದವನ್ನಲ್ಲ. 'ಬಾಲಲೀಲೆ' ಮುರಹರನ ಕಥೆಯಾದದ್ದರಿಂದ ಅದು ಕೃತಿಯ ದೋಷಗಳನ್ನು ಮರಸುವುದು ಎಂದು ಕವಿಯ ನಂಬಿಕೆ.

---

* ೧೪.. ಪದಪದ್ಯದ ಮೊದಲಕ್ಕರ। ವದು ತಪ್ಪದೆ ನಡುವೆ ಯತಿ ವಿಲಾಸದೊಳಿಡಲುಂ ॥ ವಿದತದೆ ವಡಿಯಪ್ಪುದು ಮೃದು । ಪದಯುಗೆ ನಿರ್ಮಲ ಸುಚಿತ್ತೆ ಪರಹಿತಚರಿತೇ॥

(ಕವಿಜಿಹ್ವಾಬಂಧನ: ೧೧–೧೯)

"ಪಾದಾದಿಯಲ್ಲಿ ಬಂದ ಅಕ್ಷರವು (ಅಥವಾ ಅದರ ಸವರ್ಣವು) ಯತಿಸ್ಥಾನದಲ್ಲಿಯೂ ಬಂದರೆ ಅದಕ್ಕೆ ಪಡಿ ಎಂದು ಹೆಸರು" (ಎ.ಆರ್.ಕೃ.: 'ಕವಿಜಿಹ್ವಾಬಂಧನ'ದ ಪೀಠಿಕೆ, ಪು.೧೬)

ಕಾಣಿಸಿರುವರು; ಕೆಲವೊಮ್ಮೆ ತಮ್ಮ ರಚನೆಯನ್ನೇ ಮಾದರಿಯಾಗಿ ಕೊಟ್ಟಿರುವರು. ಹಿಂದಿನವರ ಕೀರ್ತನೆಗಳಲ್ಲಿ ಸಾಧಾರಣವಾಗಿ ಪಲ್ಲವಿ (ಎರಡು ಪಾದಗಳು), ಅನುಪಲ್ಲವಿ (ಎರಡು ಪಾದಗಳು) ಇರುತ್ತವೆ. 'ಬಾಲಲೀಲೆ'ಯ ರಚನೆಗಳಲ್ಲಿ ಅನುಪಲ್ಲವಿ ಇಲ್ಲವೇ ಇಲ್ಲ; ಪಲ್ಲವಿಯಲ್ಲಿ ಎರಡು ಪಾದಗಳು ಇಲ್ಲವೆ ನಾಲ್ಕು ಪಾದಗಳು ಇರುತ್ತವೆ.

ಇನ್ನು ಕೆಲವು ರಚನಾ ಶೈಲಿಯ ವೈಲಕ್ಷಣ್ಯಗಳನ್ನು ೫ನೆಯ ಕೀರ್ತನೆಯ ೧೮, ೨೦, ೨೧, ೨೨ನೆಯ ನುಡಿಗಳಲ್ಲಿ ವಿವರಿಸಿದ್ದಾರೆ. (ವಿವರಣೆಯನ್ನು ಪುಸ್ತಕದ ೧೨ನೆಯ ಪುಟದ ಅಡಿ ಟಿಪ್ಪಣಿಯಲ್ಲಿ ಕಾಣಬಹುದು.) ಇಲ್ಲಿ ಕೆಲವು ಉದಾಹರಣೆಗಳನ್ನು ಕೊಟ್ಟಿದೆ:

೧. ಪ್ರಾಸಸ್ಥಾನದಲ್ಲಿ 'ನ–ಣ' ಯೋಗ: ಪು.೧೫–ಪಲ್ಲವಿ: – **'ವರ್ಣಿ**ಸುವೆ'; **ನನ್ನ** ಬುದ್ಧಿಯ; ಪು.೬೧೮–ನುಡಿ ೯; **ಮನ**ವನು–ಎಣಿಕೆಗೊಳ್ಳನು.

೨. ಶಾದಿವರ್ಣತ್ರಯ (ಶಷಸ); ಪು.೨೮–ನುಡಿ ೨೮; **ವಾಸು**ದೇವನ–**ದೇಶ**ಕಾಲ–**ಶೇಷ** ತಾ; ಪು.೫೯–ನುಡಿ ೮; **'ಹಸ**ಗೆಡಿಸಲು'–**ವಶ**ದಲ್ಲಿ; ನುಡಿ ೧೧; **ಶೇಷ**–**ಕೋಶ**–ಆ**ಶ**ಶಿ–**ದೋಷ**.

೩. ಟಪ್ರಾಸ, ಷಟಯೋಗ; ಪು.೨೧–ನುಡಿ ೧೭; **ಹುಟ್ಟಿ**–**ಕಷ್ಟ**; ಪು.೫೭–ನುಡಿ ೪೦; **ಘಟ್ಟಿ**ಗ–**ಇಷ್ಟು**; ಪು.೧೦೨–ನುಡಿ ೧೫: ಸೃ**ಷ್ಟಿ**–**ನೆಟ್ಟು**.

೪. 'ಲ–ಳ' ಯೋಗ: ಪುಟ ೮೪–ನುಡಿ ೩೦; **ಮೆಲು**ವಡಿ–ತಿ**ಳಿ**ವರು; ಪು.೨೩೨–ನುಡಿ ೧೦; ಮ**ಲ**ಗಿರೆ–ಎ**ಳೆ**ಯ.

೫. ನಿಜವರ್ಗವರ್ಣ: ಪು.೧೭೭–ನುಡಿ ೩: ಅ**ಖಿ**ಳ–ಸ**ಕ**ಲ; ಪು.೭೩೨–ನುಡಿ ೧೭: ಯಾ**ದ**ವ–ಸಾ**ಧ**ನ.

(ಕೆಲವೆಡೆ ಅನಿವಾರ್ಯವಾಗಿ ಪ್ರಾಸಭಂಗಗಳಾಗಿರುವುದೂ ಉಂಟು. ಆದರೆ, ಬಹಳ ಅಪರೂಪ).

ಇನ್ನೂ ಕೆಲವು ನಿಯಮಗಳ ವಿಚಾರವಾಗಿಯೂ ದಾಸರು ಪ್ರಸ್ತಾವಿಸಿದ್ದಾರೆ. ಅವು ಯಾವುವೆಂದರೆ:

೧. ಅಂತ್ಯನಿಯಮ: ಪ್ರತಿಪಾದಾಂತ್ಯದಲ್ಲಿ ವಾಕ್ಯಾರ್ಥದ ನಿಲುಗಡೆಯಾಗಬೇಕು. ಕಥೆ ದೀರ್ಘವಾಗಿರುವುದರಿಂದ ಈ ನಿಯಮ ಪಾಲನೆಗೆ ಭಂಗ ಬಂದಿರುವುದೂ ಉಂಟು.

೨. ಛಂದಸ್ಸಿನ ಯಾವುದೇ ಗಣ ನಿಯಮವನ್ನು ಕಟ್ಟುನಿಟ್ಟಾಗಿ ಅನುಸರಿಸಿಲ್ಲ. ತಾಳಲಯಕ್ಕೆ ಅನುಗುಣವಾಗಿ ಪದಯೋಜನೆ.

**ಪಾಠಪರಿಷ್ಕರಣ**

ಪಾಠಪರಿಷ್ಕರಣದ ಮೊದಲ ಹಂತವೆಂದರೆ, ಆಧಾರಪ್ರತಿಯನ್ನು ಗುರುತಿಸಿ, ಅದನ್ನು ಯಥಾವತ್ತಾಗಿ ಪ್ರತಿಮಾಡಿಕೊಂಡು, ಅದರಲ್ಲಿಯ ಲಿಪಿಕಾರನ ಲಿಪಿಲೇಖನ ವೈಲಕ್ಷಣ್ಯಗಳನ್ನೂ ಲಿಪಿಸ್ಖಾಲಿತ್ಯಗಳನ್ನೂ ವರ್ಜಿಸಿ, ಮುದ್ರಣಪ್ರತಿಯನ್ನು ಸಿದ್ಧಪಡಿಸಿಕೊಳ್ಳುವುದು.

ಈ ಮೊದಲೇ ತಿಳಿಸಿರುವಂತೆ, ತಿಮ್ಮಪ್ಪದಾಸರ ವಂಶಜರಿಂದ ಪ್ರತಿಷ್ಠಾನಕ್ಕೆ ಬಂದ ಹಸ್ತಪ್ರತಿಗಳ ಸಂಗ್ರಹದಲ್ಲಿ ಶ್ರೀ ಕೃಷ್ಣಬಾಲಲೀಲೆಯ ಎರಡು ಓಲೆಗರಿಯ ಕಟ್ಟುಗಳು ದೊರೆತವು. ಮೊದಲ ಕಟ್ಟಿನಲ್ಲಿ ಕವಿಯ ಪೀಠಿಕಾಪ್ರಕರಣ (ಕೀ.ಸಂ.೧–೫) ಮುಗಿದ ಮೇಲೆ ಕೃಷ್ಣ ಜನನದಿಂದ ತೊಡಗಿ ಅಕ್ರೂರ ಪ್ರಕರಣದವರೆಗಿನ ಕೃಷ್ಣ ಚರಿತವು ನಿರೂಪಿತವಾಗಿದೆ. ಪೂಜಾವಿಧಾನ ಕೀರ್ತನೆಗಳು ಲಿಖಿತವಾಗಿರುವ ಕಾಗದದ ಹಸ್ತಪ್ರತಿ ಮತ್ತು ಓಲೆಗರಿ ಪ್ರತಿಗಳು ಕವಿಯ ಸ್ವಹಸ್ತಾಕ್ಷರ ಪ್ರತಿ ಎಂಬ ತೀರ್ಮಾನಕ್ಕೆ ಬರಲಾಗಿದೆ (ನೋಡಿ: 'ಅರ್ಚನ', ಪೀಠಿಕೆ: ಪು.೨೮–೩೦). ಈ ಪ್ರತಿಗಳ ಹಸ್ತಾಕ್ಷರಕ್ಕೂ 'ಬಾಲಲೀಲೆ'ಯ ಎರಡು ಕಟ್ಟುಗಳ ಹಸ್ತಾಕ್ಷರಕ್ಕೂ ಸಾಮ್ಯ ಕಂಡುಬಂದಿರುವುದರಿಂದ ಈಯೆರಡೂ ಕವಿಯ ಸ್ವಹಸ್ತಾಕ್ಷರ ಪ್ರತಿಗಳೇ ಎಂದು ನಿರ್ಣಯಿಸಲು ಯಾವ ಅಡ್ಡಿಯೂ ಇಲ್ಲ.

ಸ್ವಹಸ್ತಾಕ್ಷರದ ಓಲೆಗರಿ ಪ್ರತಿಯನ್ನು ಆಧಾರಪ್ರತಿಯಾಗಿ ಇಟ್ಟುಕೊಂಡಿದೆ (ಇದರ ಸಂಕೇತಾಕ್ಷರ 'ಓ'). ದಾಸರ ಮೊಮ್ಮಕ್ಕಳು ವೆಂಕಟದಾಸಪ್ಪ ಎಂಬವರು ಓಲೆಗರಿಯ ಪ್ರತಿಯಿಂದ (ಬಹುಶಃ ಸ್ವಂತ ಉಪಯೋಗಕ್ಕಾಗಿ) ನಕಲೆತ್ತಲೂ ತೊಡಗಿ ಪ್ರಾರಂಭದ ೨೫ ಕೀರ್ತನೆಗಳನ್ನು ಮಾತ್ರ ನಕಲು ಮಾಡಿಕೊಂಡಿದ್ದಾರೆ; ಮುಂದೆ ಖಾಲಿ ಹಾಳೆಗಳಿರುವುದರಿಂದ ನಕಲೆತ್ತುವ ಕಾರ್ಯವನ್ನು ಯಾವ ಕಾರಣಕ್ಕೊ ಏನೋ ಕೈಬಿಟ್ಟಿದ್ದಾರೆ. ಇರುವಷ್ಟು ಗ್ರಂಥಭಾಗ ಯಥಾವತ್ತಾಗಿ ನಕಲಾಗಿರುವುದರಿಂದ 'ಪಾಠಸಾಮ್ಯ'ವೇ ಇದ್ದು ಪಾಠಪರಿಷ್ಕರಣಕ್ಕೆ ಇದರಿಂದ ಯಾವ ಬಗೆಯ ಹೆಚ್ಚಿನ ಪ್ರಯೋಜನವೂ ಇಲ್ಲ. 'ಬಾಲಲೀಲೆ'ಯ ಕೆಲವು ಕೀರ್ತನೆಗಳು ತಿಮ್ಮಪ್ಪದಾಸರ ಪೂಜಾವಿಧಾನ ಕೀರ್ತನೆಗಳಲ್ಲಿಯೂ ('ಅರ್ಚನ') ಇವೆ; 'ಅರ್ಚನ' (ಸಂಕೇತಾಕ್ಷರ: ಅ) ಮುದ್ರಿತಪ್ರತಿಗೆ ಆಧಾರಪ್ರತಿಯಾದ ಕಾಗದದ ಪ್ರತಿಯನ್ನು 'ಗ'ಕಾರದಿಂದ ಸಂಕೇತಿಸಿದೆ. 'ಗೋಪಿಕಾ ಗೀತೆ'ಯ ನಾಲ್ಕು ಕೀರ್ತನೆಗಳು (೧೪೬ ರಿಂದ ೧೪೯) ಪೂಜಾವಿಧಾನ ಕೀರ್ತನೆಗಳು ಲಿಖಿತವಾಗಿರುವ ಕಾಗದದ ('ಗ') ಹಸ್ತಪ್ರತಿಯಲ್ಲಿ ಭಾಗವತದ ಮೂಲ

ತಂದೆ ವೆಂಕಟರಮಣನೇ ತನ್ನ ಕೈಹಿಡಿದು ಕೃತಿಯನ್ನು ಬರಸಿದನು, ನಿಜವಾಗಿ ಆತನೆ ಕೃತಿಕರ್ತ; ಓಲೆಯ ಗ್ರಂಥವನ್ನು ಕರದಲ್ಲಿ ಕಂಠ ಹಿಡಿದು ಬರೆದರೂ ಬರೆದವು ಕರಕಂಠ ಅಲ್ಲ, ಬರೆದವನು ಒಬ್ಬ ಮನುಷ್ಯ. ಅದರಂತೆ, ಈ ಕೃತಿಯನ್ನು ಬರೆದವನು ತಾನಾದರೂ ಬರಸಿದವನು ತನ್ನ ಇಷ್ಟದೈವ– ಎಂಬ ಪ್ರಮಾಣವಚನದೊಂದಿಗೆ ತಿಮ್ಮಪ್ಪದಾಸರು ಈ ಪೀಠಿಕಾಪ್ರಕರಣವನ್ನು ಮುಗಿಸಿದ್ದಾರೆ.

ತಿಮ್ಮಪ್ಪದಾಸರು ತಾವು ಕವಿಯಲ್ಲ ಎಂದು ಹೇಳಿಕೊಂಡಿದ್ದರೂ ಕವಿ ಎಂಬ ಒಳಪ್ರಜ್ಞೆಯೊಂದು ಇದ್ದೇ ಇದೆ. 'ಬಾಲಲೀಲೆ' ಪುರಾಣಕಥೆಯನ್ನು ಅನುಸರಿಸಿ ರಚಿಸಿದ್ದಾದರೂ ಪುರಾಣವಲ್ಲ; ಇತ್ತ ಛಂದೋಬದ್ಧವಾದ ಯಾವುದೇ ಕಾವ್ಯಪ್ರಕಾರಕ್ಕೂ ಸೇರಿದ್ದಲ್ಲ. ಈ ಮೊದಲೇ ಸೂಚಿಸಿರುವಂತೆ ಈ ಕೃತಿಯನ್ನು 'ಕೀರ್ತನ ಕಾವ್ಯ' ಎಂದು ಕರೆಯಬಹುದೇನೋ. ತಿಮ್ಮಪ್ಪದಾಸರು ದಾಸರ 'ವರ್ಣ' ಗಳನ್ನು ಧಾಟಿಗೆ ಮಾದರಿಗಳಾಗಿ ಇಟ್ಟುಕೊಂಡಿರುವುದರಿಂದ ಪುರಂದರಾದಿ ದಾಸಪರಂಪರೆಯ 'ವಾಗ್ಗೇಯಕಾರರು' ಎಂದು ಎಣಿಸಬಹುದಾಗಿ ತೋರುತ್ತದೆ. ಸ್ವತಃ ಹಾಡಬಲ್ಲವರಾಗಿ ಹಾಡಿನ ಚೌಕಟ್ಟಿಗೆ ಸಾಹಿತ್ಯವನ್ನು ಅಳವಡಿಸಿರುವವರನ್ನು 'ವಾಗ್ಗೇಯಕಾರರು' ಎಂದು ಹೇಳಬಹುದು. ತಿಮ್ಮಪ್ಪದಾಸರು ತ್ಯಾಗರಾಜರ ಸಮಕಾಲೀನರಾದರೂ ಅವರಿಂದ ಪ್ರಭಾವಿತರಾಗಿಲ್ಲ; ಅವರಂತಹ ವಾಗ್ಗೇಯಕಾರರಲ್ಲ ತಿಮ್ಮಪ್ಪದಾಸರು. 'ಅರ್ಚನ' ಕೀರ್ತನೆಗಳ ಸಂಕಲನಕ್ಕೆ ಡಾ॥ ಡಿ.ವಿ. ಗುಂಡಪ್ಪನವರು ಬರೆದಿರುವ 'ಮುನ್ನುಡಿ'ಯಲ್ಲಿಯ ವಾಕ್ಯಗಳು 'ಬಾಲಲೀಲೆ'ಯ ರಚನೆಗಳಿಗೂ ಬಲುಮಟ್ಟಿಗೆ ಅನ್ವಯಿಸುತ್ತವೆ:

"ಹಾಡುವವರಲ್ಲಿಯೂ ಎರಡು ಜಾತಿ: (೧) ಹೃದಯಕ್ಕಾಗಿ ಹಾಡುವವರು ಮತ್ತು (೨)ಬುದ್ಧಿಗಾಗಿ ಹಾಡುವವರು.

"ಬುದ್ಧಿಗಾಗಿ ಹಾಡುವವರು ಸಂಗೀತದ ಸ್ವರರೂಪ, ಸ್ವರಸಂಚಾರ, ತಾಳಗತಿ ಮೊದಲಾದ ಶಾಸ್ತ್ರನಿಯಮಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಾರೆ. ಇವರ ಸಾಧನ ಬಲವೂ ಪ್ರಯೋಗಚಮತ್ಕಾರವೂ ನಮ್ಮ ಕಲಾಕುತೂಹಲವನ್ನು ಕೆರಳಿಸಿ ನಮ್ಮನ್ನು ಬಹಿರ್ಮುಖಿಗಳನ್ನಾಗಿ ಮಾಡುತ್ತವೆ.

"ಹೃದಯಗಾನವಾದರೋ ನಮ್ಮನ್ನು ಅಂತರ್ಮುಖಿಗಳನ್ನಾಗಿ ಮಾಡಬಲ್ಲದ್ದು. ಅದು ಜೀವನವನ್ನು ತನ್ನ ಅಂತರಂಗದ ಆಳದೊಳಕ್ಕೆ ಕೊಂಡೊಯ್ದು ಧ್ಯಾನದಲ್ಲಿ ನಿಮಗ್ನಪಡಿಸುತ್ತದೆ.

"ತಿಮ್ಮಪ್ಪದಾಸರದು ಈ ದಾರಿ."

['ಬೆಕ್ಕಿಗು', 'ಹೊಕ್ಕಳು', 'ಮೆಲ್ಲನೆ' ಎಂಬ ಶಬ್ದಗಳಲ್ಲಿ ನಾಲ್ಕು ಛಂದೋಮಾತ್ರೆಗಳ ಉಚ್ಚಾರಕಾಲಕ್ಕೆ ಮಿಶ್ರಛಾಪು ತಾಳಾವರ್ತದ ಏಳು ಕಾಲಮಾತ್ರೆಗಳ ಬೆಲೆ ಕೊಡುವುದಕ್ಕಾಗಿ ಸ್ವರಕರ್ಷಣ ಮಾಡಿದೆ.]

ಹೀಗೆ ಬರೆದಿರುವುದರಿಂದ, ಈ ಕೀರ್ತನೆಯನ್ನು 'ಮಿಶ್ರಛಾಪು' ತಾಳದಲ್ಲಿ ಹಾಡಬೇಕೆಂಬುದು ಕೀರ್ತನಕಾರರ ಆಶಯ ಎಂದು ವ್ಯಕ್ತಪಡುತ್ತದೆ. (ಈ ಕೀರ್ತನೆಯನ್ನು ಆದಿತಾಳದಲ್ಲೂ ಹಾಡಬಹುದು. ಆದರೆ, ಮಿಶ್ರಛಾಪುವಿನಲ್ಲಿ ಹಾಡಬೇಕೆಂಬುದು ಕೃತಿಕಾರರ ಆಶಯ; ಆದ್ದರಿಂದಲೇ ಹ್ರಸ್ವಸ್ವರಗಳ ದೀರ್ಘೀಕರಣ.) ಆದರೆ, ಅನೇಕ ಕೀರ್ತನೆಗಳನ್ನು ಮಾತ್ರಾಛಂದಸ್ಸಿನ 'ಲಲಿತ' ಲಯದಲ್ಲಿ (ಪಂಚ ಮಾತ್ರಾಗಣದಲ್ಲಿ) ಹಾಗೂ 'ಭಾಮಿನೀ' ಲಯದಲ್ಲಿ (೩+೪ ಮಾತ್ರೆಗಳ ಗಣ ವಿನ್ಯಾಸದಲ್ಲಿ) ರಚಿಸಿರುವುದೂ ಉಂಟು. ಇಂಥಲ್ಲಿ, ಯಥಾಕ್ಷರವಾಗಿ (ಎಂದರೆ ಹ್ರಸ್ವಸ್ವರಗಳನ್ನು ದೀರ್ಘೀಕರಣ ಮಾಡದೆ) ಬರೆದಿರುತ್ತದೆ. "ಸಲಹು ನಂದಕುಮಾರ" ಎಂಬ ಮೊದಲ ಕೀರ್ತನೆ ಪಂಚಮಾತ್ರೆಗಳ ಛಂದೋಬಂಧ. ಅಂತೆಯೇ ಭಾಮಿನೀಲಯದ ಛಂದೋಬಂಧಗಳೂ ಇವೆ.

ಕೀರ್ತನಕಾರರು ಕೆಲವು ಕೀರ್ತನೆಗಳಿಗೆ ರಾಗನಿರ್ದೇಶನವನ್ನು ಮಾಡಿದ್ದರೂ ಯಾವ ಕೀರ್ತನೆಗೂ ತಾಳನಿರ್ದೇಶನವನ್ನು ಮಾಡಿಲ್ಲ. ಸಂಪಾದಕನು ತನ್ನ ಪರಿಮಿತ ಸಂಗೀತಜ್ಞಾನದಿಂದ (ರಾಗಜ್ಞಾನ ಕೇವಲ ಕೇಳ್ಮೆಯ ಫಲ) ರಾಗನಿರ್ದೇಶನವನ್ನೂ ತಾಳನಿರ್ದೇಶನವನ್ನೂ ಮಾಡಿರುವುದಾಗಿದೆ. ಸಂಪಾದಕನ ರಾಗ ತಾಳ ನಿರ್ದೇಶಗಳನ್ನು ಕಂಸಗಳ ನಡುವೆ ಕಾಣಿಸಿದೆ.[೧೬]

ಹಸ್ತಪ್ರತಿಯ ಬರವಣಿಗೆಯಲ್ಲಿ ಉಚ್ಚಾರಣೆಗೆ ಅನುಗುಣವಾಗಿ ಬರೆದಿರುವ ಇತರ ವೈಲಕ್ಷಣ್ಯಗಳು ಹೀಗಿವೆ: (೧) ಆದಿ ಸ್ವರೋಚ್ಚಾರಣೆಯೊಂದಿಗೆ 'ವ'ಕಾರ 'ಯ'ಕಾರಗಳು ಲಿಖಿತವಾಗಿರುತ್ತವೆ; ಇನಿತು–ಯಿನಿತು; ಈ ತತ್ವ – ಯೀ ತತ್ವ; ಎಲ್ಲ – ಯೆಲ್ಲ; ಉಕ್ಕೂವ – ವುಕ್ಕೂವ; ಒಡತಿ – ವಡತಿ, ಇತ್ಯಾದಿ. (೨) ವರ್ಗಪಂಚಮ ಸಂಯುಕ್ತಾಕ್ಷರಗಳ ಬರವಣಿಗೆಯಲ್ಲಿ ಅನುಸ್ವಾರದ ಬಳಕೆ: ಬನ್ನಿ – ಬಂನಿ, ನಮ್ಮ – ನಂಮ, ಇತ್ಯಾದಿ. (೩) ಅಲ್ಪಪ್ರಾಣಕ್ಕೆ ಮಹಾಪ್ರಾಣ: ಗಳಿಸಿದ – ಘಳಿಸಿದ; ತೆರೆ–ಥೆರೆ. (೪) ಏತ್ವ ಮತ್ತು ಓತ್ವಗಳ ದೀರ್ಘಚಿಹ್ನೆಗಳ

---

೧೬.. ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ 'ಯಕ್ಷಗಾನ' ರಚನೆಗೂ ಪ್ರದರ್ಶನಗಳಿಗೂ ಅಪಾರ ಉತ್ತೇಜನವಿತ್ತು. ಯಕ್ಷಗಾನಗಳ ಸಂಗೀತರಚನೆಗಳ ಪ್ರಭಾವ ತಿಮ್ಮಪ್ಪದಾಸರ ಕೀರ್ತನ ರಚನೆಗಳ ಮೇಲೆ ಆಗಿರಬಹುದಾದ ವಿಚಾರ ಪರಿಶೀಲನಾರ್ಹ.

ಶ್ಲೋಕಗಳ ಸಮೇತ ಅಚ್ಚಾಗಿವೆ.[೧೫]

'ಅರ್ಚನ' ಪ್ರಕಟವಾದ ವೇಳೆಯಲ್ಲೆ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಕೆ.ಬಿ.೨೦೪ ಸಂಖ್ಯೆಯ, 'ಶ್ರೀಕೃಷ್ಣಬಾಲಲೀಲೆ'ಯ ಕೀರ್ತನೆಗಳು' ಎಂಬ ಹಸ್ತಪ್ರತಿ ಇರುವುದು ಗಮನಕ್ಕೆ ಬಂದಿತು. ಇದರ ಪ್ರತಿಯನ್ನು ತರಿಸಿಕೊಂಡು ನೋಡಲಾಗಿ, 'ಬಾಲಲೀಲೆ'ಯಲ್ಲಿಯ ಆಯ್ದ ಹತ್ತು ಕೀರ್ತನೆಗಳು ಮಾತ್ರ ಲಿಖಿತವಾಗಿರುವುದು ಕಂಡುಬಂದಿತು (ಈ ಪ್ರತಿಯನ್ನು 'ಕ'ಎಂದು ಕರೆದಿದೆ.) ಈ ಪ್ರತಿಯಲ್ಲಿ ಸ್ಖಾಲಿತ್ಯಗಳು ಹೆಚ್ಚಾಗಿವೆ.

ಒಟ್ಟಿನಲ್ಲಿ, ದೊರೆತ ಅಲ್ಪಪ್ರಮಾಣದ ಅನ್ಯ ಹಸ್ತಪ್ರತಿಗಳಿಂದ ದೊರೆತ ಪ್ರಯೋಜನವೂ ಅಲ್ಪವೇ. ಹೀಗಿದ್ದರೂ, ಸಮಾಧಾನಕರ ಸಂಗತಿಯೆಂದರೆ, ಆಧಾರ ಪ್ರತಿ ('ಓ') ಬಲುಮಟ್ಟಿಗೆ ಶುದ್ಧವಾಗಿರುವುದು ಖಚಿತವಾಯಿತು. ಹೀಗೆ ಶುದ್ಧವಾಗಿದ್ದರೂ ಕೂಡ, ಮುದ್ರಣಪ್ರತಿಯನ್ನು ಸಿದ್ಧಪಡಿಸುವಾಗ ಸಂಪ್ರತಿಕಾರನಿಗೆ ಒಂದು ದೊಡ್ಡ ಅಡಚಣೆ ಎದುರಾಗುತ್ತದೆ. ತಾಳಲಯಕ್ಕೆ ತಕ್ಕ ಹಾಡುವ ಧಾಟಿಯನ್ನು

ತೋರಿಸುವುದಕ್ಕಾಗಿ ಸ್ವರಕರ್ಷಣ ಮಾಡಬೇಕಾದ ಕಡೆ ಹ್ರಸ್ವಾಕ್ಷರವನ್ನು ದೀರ್ಘಾಕ್ಷರವಾಗಿ ಮಾರ್ಪಡಿಸಿ ಬರೆದಿರುತ್ತದೆ. ಕೃಷ್ಣಬಾಲಲೀಲೆಯ ತಾಡವೋಲೆ ಹಸ್ತಪ್ರತಿಯಲ್ಲಿಯಂತೂ ಈ ಲಿಪಿಲೇಖನ ವೈಲಕ್ಷಣ್ಯ ಅನೇಕ ಕೀರ್ತನೆಗಳಲ್ಲಿ ಕಂಡು ಬಂದಿದೆ. ಇದರಿಂದಾಗಿ, ವ್ಯಾಕರಣ ಸಮ್ಮತವಾದ ಶಬ್ದರೂಪವನ್ನು ಗುರುತಿಸಿ, ಶುದ್ಧಪ್ರತಿಯನ್ನು ತಯಾರಿಸಿಕೊಳ್ಳಬೇಕಾಗಿರುತ್ತದೆ. ಒಂದು ಉದಾಹರಣೆ:

ಬೆಕ್ಕೀಗು ಕೊಡುತ ಭಯಪಡುತಾ ನಿಂದಿರಲು
ಹೊಕ್ಕಾಳು ಮೆಲ್ಲಾನೆ ಹಿಡಿದ ಕೋಲಿನಲೀ
ಉಕ್ಕೂವ ರೋಷದ ವಡತೀಯ ಕಂಡು
ದಕ್ಕಾದೆ ಒರಳಿನಿಂ ಧುಮುಕಿಯೋಡಿದಳು (ಕೀ.೬೨, ನುಡಿ ೨೩)

---

* ೧೫.. ಗೋಪಿಕಾ ಗೀತೆಯ (ಕೀರ್ತನ ಸಂಖ್ಯೆ ೧೪೬) ೧೪ನೆಯ ನುಡಿಯಲ್ಲಿ 'ಬಳಲಿ ಬಾಡುವ' ಎಂಬ ಸ್ವೀಕೃತಪಾಠ 'ಗ' ಪ್ರತಿಯದು. ಅಡಿಟಿಪ್ಪಣಿಯಲ್ಲಿ ಕೊಟ್ಟಿರುವದು 'ಓ' ಪ್ರತಿಯ ಪಾಠ. ಸ್ವೀಕೃತಪಾಠ ಸಂಪಾದಕೀಯ ಪರಿಷ್ಕರಣವಲ್ಲ; ಹಾಗೆಂದು ಚೌಕಕಂಸದಲ್ಲಿ ತೋರಿಸಿರುವುದು ಅನವಧಾನದಿಂದ ಆದ ಪ್ರಮಾದ. ಇದು ಹಾಗಿರಲಿ, ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಏನೆಂದರೆ, ಓಲೆಗರಿಯ 'ಬಳಿಯಲಿ ಬಾಡುವ' ಎಂಬ 'ಸಾಹಿತ್ಯ' ದ್ರುತಗತಿಯ ('ಭಾಮಿನಿ ಷಟ್ಪದೀಲಯದ) ಮಿಶ್ರಛಾಪು ತಾಳಲಯಕ್ಕೆ ಕೂಡಿಬರುವುದಿಲ್ಲವಾದ್ದರಿಂದ ಅದನ್ನು 'ಬಳಲಿ ಬಾಡುವ' (ಮಾತ್ರಾಛಂದಸ್ಸಿನ ೩+೪ರ ಗಣಮಾನಕ್ಕೆ) ಎಂದು ಕಾಗದದ ಪ್ರತಿಯಲ್ಲಿ ತಿದ್ದುಪಾಟು ಮಾಡಿರುವುದು. ಇದು ಕೀರ್ತನಕಾರರೇ ಸ್ವತಃ ಮಾಡಿರುವ ತಿದ್ದುಪಾಟು. ಗೋಪಿಕಾ ಗೀತೆಯ ಎರಡು ಪಾಠಗಳಲ್ಲೂ ಲಿಪಿಸಾಮ್ಯವಿದೆ. ಕೃಷ್ಣಬಾಲಲೀಲೆ ತಿಮ್ಮಪ್ಪದಾಸರು ರಚಿಸಿದ್ದು ಎನ್ನುವುದಕ್ಕೆ ಇದೊಂದು ಹೆಚ್ಚಿನ ಬಲವಾದ ಅಂತರಿಕ ಪ್ರಮಾಣ.

ಸಮಂಜಸಾರ್ಥವು ಬೋಧೆಯಾಯಿತು. (ಹರಿಯ ದನಿಗಳ ಎಂದು ತಪ್ಪಾಗಿ ಅಚ್ಚಾಗಿರುವುದನ್ನು ವಾಚಕರು ದಯವಿಟ್ಟು ತಿದ್ದಿಕೊಳ್ಳಬೇಕು.)

ತಿಮ್ಮಪ್ಪದಾಸರ ಭಾಷಾಶೈಲಿ ಸರಳವಾಗಿದ್ದರೂ ಬಿಗಿಯಾದ ಬನಿಯಾದ ಶೈಲಿ. ಕಾವ್ಯದೃಷ್ಟಿಯಿಂದ ಮೂಲಭಾಗವತದ ಗುಣಮಟ್ಟವನ್ನು ಇದೂ ಕಾದುಕೊಂಡಿದೆ. ಸ್ವೋಪಜ್ಞವಾಗಿ ಮೂಡಿಬಂದಿರುವ ಸೊಗಸುಗಳನ್ನು 'ಟಿಪ್ಪಣಿ'ಗಳಲ್ಲಿ ವಿಶದಪಡಿಸಿದೆ. ಇವರ ಶೈಲಿಗೆ ಒಂದು ಒಳ್ಳೆಯ ಉದಾಹರಣೆಯಾಗಿ ೧೪೬ನೇ ಕೀರ್ತನೆಯಾದ 'ಗೋಪಿಕಾ ಗೀತೆ'ಯನ್ನು ಹೆಸರಿಸಬಹುದು.

ಶೈಲಿಯ ಬಿಗುಪಿನೊಂದಿಗೆ ಮೂಲಭಾಗವತದ ತತ್ತ್ವಾರ್ಥವೂ ಹೆಣೆದುಕೊಂಡಿರುವುದರಿಂದ ಟಿಪ್ಪಣಿಗಳ ನೆರವಿಲ್ಲದೆ ಸಾಮಾನ್ಯ ವಾಚಕರಿಗೆ ಕೀರ್ತನೆಗಳು ಪೂರ್ತಿಯಾಗಿ ಅರ್ಥವಾಗುವುದು ಕಷ್ಟವೆಂಬ ಎಣಿಕೆಯಿಂದ ಸ್ವಲ್ಪ ವಿಸ್ತಾರವಾಗಿಯೇ ಯಥಾಮತಿಯಾಗಿ ಟಿಪ್ಪಣಿಗಳನ್ನು ಬರೆದದ್ದಾಗಿದೆ. ಹಾಗೆ ಟಿಪ್ಪಣಿ ಬರೆಯುವಾಗ ವಿದ್ವಾನ್ ರಾಮಶೇಷಶಾಸ್ತ್ರಿಗಳು ಮೂಲಶ್ಲೋಕಗಳಿಗೆ ಬರೆದಿರುವ ಪ್ರತಿ ಪದಾರ್ಥ ಮತ್ತು ತಾತ್ಪರ್ಯಗಳಿಂದ ಅಪಾರವಾದ ಸಹಾಯವನ್ನು ಸಂಪಾದಕನು ಪಡೆದಿರುತ್ತಾನೆ; ಆ ಮಹಾನುಭಾವರಿಗೆ ಸಂಪಾದಕನು ಭಕ್ತಿಪೂರ್ವಕ ಕೃತಜ್ಞತೆಯ ಪ್ರಣಾಮಗಳನ್ನು ಅರ್ಪಿಸುತ್ತಾನೆ.

ಬಹಳ ಶ್ರಮಪಟ್ಟು ಅಂದವಾದ ಮುದ್ರಣದ ಪ್ರತಿಯನ್ನು ಸಿದ್ಧಪಡಿಸಿಕೊಟ್ಟ ಮಾನ್ಯ ಮಿತ್ರರು ಶ್ರೀ ಎನ್.ಎಸ್.ರಾಮಸ್ವಾಮಿ ಅಯ್ಯರ್ ಅವರ ಅನುಭವಯುಕ್ತ ಪರಿಶ್ರಮವನ್ನು ಎಷ್ಟು ಕೊಂಡಾಡಿದರೂ ಅಲ್ಪವೇ. ಅವರದ್ದು ಕೇವಲ ಯಾಂತ್ರಿಕ, ಮಕ್ಕಿಕಾಮಕ್ಕಿ ಸಂಪ್ರತಿಕರಣವಾಗಿರದೆ ತಕ್ಕಮಟ್ಟಿನ ಪರಿಷ್ಕರಣಕಾರ್ಯವನ್ನೂ ಒಳಗೊಂಡದ್ದಾಗಿದೆ. ಇದರಿಂದಾಗಿ ಸಂಪಾದಕನ ಪರಿಷ್ಕರಣಕಾರ್ಯ ಬಹಳ ಹಗುರವಾಗಿ ಪರಿಣಮಿಸಿತು. ಶ್ರೀ ರಾಮಸ್ವಾಮಿ ಅಯ್ಯರ ಅವರಿಗೆ ನಾನು ಎಷ್ಟು ಕೃತಜ್ಞನಾಗಿದ್ದರೂ ಸಾಲದು.

ಮುದ್ರಣದ ಪ್ರತಿಯನ್ನು ಮೂಲಪ್ರತಿ (ಎಂದರೆ ಓಲೆಗರಿಯ ಪ್ರತಿ)ಯೊಂದಿಗೆ ಹೋಲಿಸಿ ನೋಡುವುದರಲ್ಲಿ ನನ್ನ ವಿದ್ಯಾರ್ಥಿಮಿತ್ರರಾದ ಶ್ರೀ ವಿ.ವೆಂಕಟರಾವ್ ಅವರು ನೆರವಾಗಿದ್ದಾರೆ. ಅವರಿಗೆ ಆಶೀರ್ವಾದಪೂರ್ವಕ ಶುಭಾಶಯಗಳು.

ಅಚ್ಚಾದ ಪ್ರತಿಯಲ್ಲಿ ಹಲಕೆಲವು ತಪ್ಪುಗಳು ಉಳಿದುಕೊಂಡಿವೆ. ಕರಡು ತಿದ್ದುವಲ್ಲಿ ಆಗಿರಬಹುದಾದ ಆಲಸ್ಯವೇ ಅದಕ್ಕೆ ಕಾರಣ. ಅತ್ಯಂತ ಶ್ರದ್ಧೇಯಿಂದ

ಲೋಪ; ಲೋಕೇಶ–ಲೊಕೆಶ. (೫) ಎಕಾರಕ್ಕೆ ಅಕಾರೋಚ್ಚಾರ: ಎಲ್ಲ–ಯಲ್ಲ; ಎರೆದು–ಎರದು; ಕರೆದು–ಕರದು; ಚೆಂದ, ಚೆಲುವು–ಚಂದ, ಚಲುವು. (೬)ಅಂತ್ಯ ವಕಾರವ್ಯಂಜನ ಲೋಪ; ವಸ್ತುಯಿವು–ವಸ್ತುಯಿಉ. (೭)'ಣ'ಕಾರಕ್ಕೆ 'ನ'ಕಾರ: ವರ್ಣ–ವರ್ನ. ಬಹುಮಟ್ಟಿಗೆ ಪೂರ್ವಕಾಲದ ಎಲ್ಲ ಹಸ್ತಪ್ರತಿಗಳ ಬರಹದಲ್ಲೂ ನಿಯತವಾಗಿ ಕಂಡುಬರುವ ಈ ತೆರನ ಲಿಪಿಲೇಖನ ವೈಲಕ್ಷಣ್ಯಗಳನ್ನು ಪಾಠಾಂತರವಾಗಿ ಕೊಡುವ ಗೋಜಿಗೆ ಹೋಗಿಲ್ಲ.

ಟಿಪ್ಪಣಿಗಳನ್ನು ಪಾಠಪರಿಷ್ಕರಣ ಕಾರ್ಯದೊಂದಿಗೆಯೇ ಬರೆದುಕೊಂಡು ಹೋಗುವುದರಲ್ಲಿ ಬಹಳ ಪ್ರಯೋಜನವುಂಟೆಂಬುದು ಅನುಭವದಿಂದ ಸಿದ್ಧವಾದ ಸಂಗತಿ. 'ಬಾಲಲೀಲೆ'ಯಿಂದ ಒಂದೆರಡು ಉದಾಹರಣೆಗಳನ್ನು ಕೊಡಬಹುದು:

೧. ೩೮ನೆಯ ಕ್ರಮಾಂಕದ ಕೀರ್ತನೆಯ ೨೧ನೆಯ ಚರಣದ ೩–೪ನೆಯ ಪಾದಗಳು ಮುದ್ರಣಕ್ಕೆ ಸಿದ್ಧಪಡಿಸಿದ್ದ ನಕಲಿನಲ್ಲಿ – ಇದರಲ್ಲಿ ಲಿಪಿಲೇಖನ ವೈಲಕ್ಷಣ್ಯಗಳನ್ನು ಸರಿಪಡಿಸಲಾಗಿತ್ತು – ಹೀಗಿದ್ದುವು:

ಬಾಲರಿಗೆ ನಾಮವನು ಬೇಗದಿಂದಿಡಿಯೆಂದು
ಲೋಲನಂದನು ಋಷಿಗೆ ಅತಿರೋಕ್ತಿಯಿಂದ

"ಅತಿರೋಕ್ತಿ" ನಿರರ್ಥಕ ಪದವಾಗಿರುವುದು ಅರಿವಾಗಿ, ಪಾಠಾಂತರ ಇಲ್ಲದ್ದರಿಂದ, "ಅತಿಶಯೋಕ್ತಿ" ಎಂದು ಊಹಾತ್ಮಕ ಪರಿಷ್ಕರಣವನ್ನು ಮಾಡಲಾಯಿತು. ಈ ತಿದ್ದುಪಾಟಿನಿಂದ ಅಧಿಕಾಕ್ಷರಗಳು ಸೇರಿಕೊಂಡು ತಾಳಲಯಕ್ಕೆ ಭಂಗವುಂಟಾಯಿತು. ಹಸ್ತಪ್ರತಿಯನ್ನು ಮತ್ತೆ ಪರಿಶೀಲಿಸಿದಾಗ, 'ಅತಿರೋಕ್ತಿ'ಯೇ ಇದ್ದು, ಲಿಪಿಲೇಖನ ಸ್ಖಾಲಿತ್ಯವಿರುವುದು ಖಚಿತವಾಯಿತು. ಪಾದಾದಿಯ 'ಲ'ಕಾರಕ್ಕೆ ಅದೇ ಅಕ್ಷರದ 'ವಡಿ' ಇರಬೇಕಾದ ಅಗತ್ಯ ತೋಚಿದ್ದರಿಂದ, 'ಲಲಿತೋಕ್ತಿ' ಎಂಬ ಕವಿಪಾಠ ಸಿದ್ಧವಾಯಿತು. (ಸ್ವಹಸ್ತಾಕ್ಷರ ಪ್ರತಿಯಲ್ಲಿ ಇಂಥ ಪ್ರಮಾದ ಉಂಟಾಗುವುದು ಸೋಜಿಗವೇ ಸರಿ.)

೨. ೧೫೪ನೆಯ ಕೀರ್ತನೆಯ ೨೨ನೆಯ ಚರಣದ ೩ನೆಯ ಪಾದ ತಾಡವೋಲೆ ಹಸ್ತಪ್ರತಿಯಲ್ಲಿ – "ಹರಿಯದನಿಗಳ" ಎಂಬ ಗ್ರಂಥಭಾಗ ತೆರಪು ಬಿಡದೆ ನಿಬಿಡಾಕ್ಷರವಾಗಿ ಲಿಖಿತವಾಗಿದೆ. ಟಿಪ್ಪಣಿಲೇಖನಾವಸರದಲ್ಲಿ ಪ್ರಕರಣಬಲದಿಂದ, "ಹರಿಯುದ+ನಿಗಳ" ಎಂದು ಓದಿಕೊಳ್ಳಲಾಗಿ, "ಕತ್ತರಿಸಿಹೋಗದ (ಸಂಸಾರಬಂಧನವೆಂಬ) ಸಂಕೋಲೆ (=ನಿಗಳ)" ಎಂಬ

# ಶ್ರೀಕೃಷ್ಣಬಾಲಲೀಲೆ

## ಆ.) ಭಾಗ – ೨ರ ನಮ್ಮ ಮಾತು

೧

ಎಂ.ವಿ.ಸೀ. ಸಮಗ್ರ ಸಾಹಿತ್ಯ ಮಾಲೆಯ ಯೋಜನೆಗಾಗಿ ಪೂಜ್ಯ ಎಂ.ವಿ.ಸೀ. ಅವರ ಪುತ್ರರಾದ ಶ್ರೀಯುತರಾದ ಎಂ.ಎಸ್.ಭಾಸ್ಕರ್, ಎಂ.ಎಸ್.ರಾಮ ಪ್ರಸಾದ್, ಎಸ್.ಟಿ.ರಾಧಾಕೃಷ್ಣ, ಎಂ.ಎಸ್.ಶೇಷಾದ್ರಿನಾಥ್ ಮತ್ತು ಶ್ರೀಮತಿ ಶಾರದಾ ನಾಗರಾಜ್, ಅವರುಗಳು ಸೀತಾರಾಮಯ್ಯನವರ ಸ್ವಂತ ಪ್ರಕಾಶನ ಸಂಸ್ಥೆಯಾದ 'ರಾಘವ ಪ್ರಕಾಶನ'ದ ಹೆಸರಿನಲ್ಲಿ 'ರಾಘವ ಪ್ರಕಾಶನ ದತ್ತಿನಿಧಿ'ಯನ್ನು ಪ್ರತಿಷ್ಠಾನದಲ್ಲಿ ಸ್ಥಾಪಿಸಿದ್ದಾರೆ. ಇದರ ಉದ್ದೇಶ ಎಂ.ವಿ.ಸೀ. ಅವರ ಸಮಗ್ರ ಸಾಹಿತ್ಯ ಸಂಪುಟಗಳನ್ನು ಪ್ರಕಟಿಸುವುದು; ಈ ಸಂಪುಟಗಳ ಮತ್ತು ಎಂ.ವಿ.ಸೀ. ಅವರ ಬಿಡಿ ಕೃತಿಗಳ ಮಾರಾಟದಿಂದಲೇ ಮುಂದಿನ ಸಂಪುಟಗಳಿಗೆ ಸಂಪನ್ಮೂಲವನ್ನು ರೂಪಿಸಿಕೊಳ್ಳುವುದು; ಎಂ.ವಿ.ಸೀ. ಅವರ ಸಾಹಿತ್ಯ ಎಲ್ಲ ಕಾಲದಲ್ಲೂ ಸಾಹಿತ್ಯಾಸಕ್ತರಿಗೆ ದೊರಕುವಂತೆ, ಮುದ್ರಿಸುತ್ತ – ಪುನರ್ಮುದ್ರಿಸುತ್ತ ಹೋಗುವುದು. ಪ್ರತಿಷ್ಠಾನದ ಸಂಸ್ಥಾಪಕರಾದ ಪೂಜ್ಯರನ್ನು ಪ್ರತಿಷ್ಠಾನ ಸದಾ ಸ್ಮರಿಸಿಕೊಳ್ಳಲು ಇದು ಸದವಕಾಶವಾಯಿತು.

ಈ ಮಾಲೆಯಲ್ಲಿ ಈವರೆಗೆ ಈ ಕೆಳಕಂಡ ಮೂರು ಸಂಪುಟಗಳನ್ನು ಪ್ರಕಟಿಸಲಾಗಿದೆ.

೧) ಕದಂಬ (ಸಮಗ್ರ ಸಂಶೋಧನಾ ಸಂಪುಟ ೧೯೯೩)

೨) ಕವಿರಾಜಮಾರ್ಗ (ಪರಿಷ್ಕೃತ ಆವೃತ್ತಿ ೧೯೯೪)

೩) ಕವಿರಾಜಮಾರ್ಗ ವಿವಕ್ಷೆ (ಕವಿರಾಜಮಾರ್ಗ ಕುರಿತ ಲೇಖನ ಸಂಪುಟ ೧೯೯೫)

ಇದೀಗ ನಾಲ್ಕನೆಯ ಸಂಪುಟವಾಗಿ ಶ್ರೀಕೃಷ್ಣ ಬಾಲಲೀಲೆ ಭಾಗ ೨ನ್ನು

ಮುದ್ರಣಕಾರ್ಯವನ್ನು ನಿರ್ವಹಿಸಿರುವ ಶ್ರೀ ಲಕ್ಷ್ಮೀ ಪ್ರಿಂಟರ್ಸ್ ಅವರಿಗೆ – ಶ್ರೀ ನಂಜುಂಡಸ್ವಾಮಿ ಮತ್ತು ಅವರ ಮಕ್ಕಳಿಗೆ – ನಾನು ಬಹಳ ಕೃತಜ್ಞನಾಗಿದ್ದೇನೆ.

**ಎಂ.ವಿ. ಸೀತಾರಾಮಯ್ಯ**
ಸಂಪಾದಕ

## ೨

'ಶ್ರೀಕೃಷ್ಣ ಬಾಲಲೀಲೆ' ಕನ್ನಡ ಸಾಹಿತ್ಯದಲ್ಲೇ ಒಂದು ವಿಶಿಷ್ಟ ಕೃತಿ. ಈವರೆಗೆ ಕೀರ್ತನೆ, ವಚನ ತ್ರಿಪದಿಗಳಲ್ಲಿ ಸಾಹಿತ್ಯ ನಿರ್ಮಾಣವಾಗಿದ್ದರೂ ಕಂದ, ವೃತ್ತ, ಷಟ್ಪದಿ, ಸಾಂಗತ್ಯ ಮುಂತಾದ ಪದ್ಯಜಾತಿಗಳಂತೆ ಒಂದು 'ಪ್ರಕಾರ'ವಾಗಿ ಇಡೀ ಕೃತಿಯೊಂದರ 'ರೂಪ'ವಾಗಿ ಬಳಕೆಯಾಗಿಲ್ಲ. ಇದಕ್ಕೆ ಅಪವಾದವಾಗಿ ಈ ಕೃತಿಯಿದ್ದು ಕೀರ್ತನೆಯನ್ನು ಈ ಗುಂಪಿನಿಂದ ಪ್ರತ್ಯೇಕಿಸಿ ಸಾಹಿತ್ಯ ಪ್ರಕಾರ ಸಾಹಿತ್ಯ ಕೃತಿಯೊಂದರ 'ರೂಪ'ವನ್ನಾಗಿಸುವುದರ ಮೂಲಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ವಿಶೇಷ ಸ್ಥಾನವನ್ನು ಗಳಿಸಿಕೊಂಡಿದೆ.

ಕೃತಿಕಾರರು ಹೇಳುವ 'ಅಂತೂ ಕೀರ್ತನೆ ೨೪೬ಕ್ಕೆ ಪದನು ೬೦೫೧ಕ್ಕೆ ಇತಿ ಶ್ರೀಮದ್ಭಗವದ್ಗೀತೇ ಮಹಾಪುರಾಣೇ ದಶಮಸ್ಕಂದೇ ಬಾಲಲೀಲಾ ಪ್ರಕರಣ ಸಂಪೂರ್ಣಂ' ಎಂಬ ಮಾತಿನಂತೆ ಈ ಕೃತಿಯು ವೇದವ್ಯಾಸ ಪ್ರಣೀತವೆಂದು ಪ್ರಸಿದ್ಧವಾಗಿರುವ ಶ್ರೀಮದ್ಭಾಗವತ ಮಹಾಪುರಾಣದ ದಶಮಸ್ಕಂದದ ಕನ್ನಡಾನುವಾದವಾಗಿದ್ದು ಕೀರ್ತನ ರೂಪದಲ್ಲಿದೆ. ಒಂದು ಕೃತಿಗೆ 'ಕೀರ್ತನೆ'ಯನ್ನು ಛಂದೋಪ್ರಕಾರವಾಗಿಸಿರುವ ಉದಾಹರಣೆ ಈವರೆಗೆ ಕನ್ನಡ ಸಾಹಿತ್ಯದಲ್ಲಿರಲಿಲ್ಲ. ಈ ಕೃತಿಯ ಮೂಲಕ ಅದು ಸಿದ್ಧವಾದಂತಾಗಿದೆ.

ಶ್ರೀಕೃಷ್ಣ ಬಾಲಲೀಲೆಯನ್ನು ತಿಮ್ಮಪ್ಪದಾಸರು ಒಟ್ಟು ೨೬೮ (ಮೊದಲ ಸಂಪುಟ ೧೮೮+ಎರಡನೇ ಸಂಪುಟ ೮೦) ಕೀರ್ತನೆಗಳಲ್ಲಿ ಪೂರ್ಣಗೊಳಿಸಿದ್ದಾರೆ. ಪ್ರತಿಯೊಂದು ಕೀರ್ತನೆಯೂ ಪಲ್ಲವಿ ಮತ್ತು ನುಡಿಗಳನ್ನು ಒಳಗೊಂಡಿದ್ದು ರಾಗ–ತಾಳ ಸಹಿತವಾಗಿದೆ. ಪ್ರತಿ ಕೀರ್ತನೆಯೂ ಕನಿಷ್ಠ ೨ ರಿಂದ ಗರಿಷ್ಠ ೬೩ ನುಡಿಗಳನ್ನು ಒಳಗೊಂಡಿವೆ. ನುಡಿಗಳು ೨ ಸಾಲಿನಿಂದ ಹಿಡಿದು ೨೮ ಸಾಲುಗಳ ವರೆಗೂ ಇವೆ. (೬೧ನೇ ಕೀರ್ತನೆಯಲ್ಲಿ ೭ ನುಡಿಗಳಿದ್ದರೂ ಪ್ರತಿನುಡಿಯೂ ೨೮ ಸಾಲುಗಳ ಲ್ಲಿವೆ.) ೫೦ಕ್ಕೂ ಹೆಚ್ಚು ನುಡಿಗಳನ್ನು ಹೊಂದಿರುವ ಕೀರ್ತನೆಗಳೇ ಈ ಕೃತಿಯಲ್ಲಿ ಅಧಿಕವಾಗಿವೆ. ಒಂದು ಕಾವ್ಯದಲ್ಲಿ ಬರುವ ಎಲ್ಲ ರಸಗಳನ್ನೂ ಎಲ್ಲ ವರ್ಣನೆಗಳನ್ನೂ ಬಹು ಮಟ್ಟಿಗೆ ಅತ್ಯಂತ ಸಮರ್ಥವಾಗಿ ಇಲ್ಲಿ ಬಳಸಲಾಗಿದೆ. ಕೀರ್ತನೆಯನ್ನು ಕಾವ್ಯ ಮಾಧ್ಯಮಕ್ಕೆ ಯಶಸ್ವಿಯಾಗಿ ಬಳಸಿಕೊಂಡು ಶ್ರೀಕೃಷ್ಣ ಬಾಲಲೀಲೆಯನ್ನು ಒಂದು ಅಪರೂಪದ ಕಾವ್ಯಕೃತಿಯನ್ನಾಗಿ ತಿಮ್ಮಪ್ಪದಾಸರು ರೂಪಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಈ ಕೃತಿಯನ್ನು, ಪ್ರಕಾರದ ದೃಷ್ಟಿಯಿಂದ 'ಕೀರ್ತನ ಕಾವ್ಯ' ಎಂಬ ನೂತನ ವಿಭಾಗದಲ್ಲಿ ಪ್ರತ್ಯೇಕವಾಗಿ ಗುರುತಿಸಬೇಕಾಗಿದೆ. ತಿಮ್ಮಪ್ಪದಾಸರನ್ನು ಕೇವಲ ಕೀರ್ತನಕಾರರೆನ್ನದೆ

ಪ್ರಕಟಿಸಲಾಗುತ್ತಿದೆ. ಭಾಗ ೧ ಪ್ರತಿಷ್ಠಾನದಿಂದ ೧೯೮೬ರಲ್ಲಿ ಪ್ರಕಟವಾಗಿದೆ. ಸೀತಾರಾಮಯ್ಯನವರೇ ಇದನ್ನು ಸಂಪಾದಿಸಿದ್ದಾರೆ. ಭಾಗ–೨ನ್ನು ಅವರೇ ಸಂಪಾದಿಸಿ ಪ್ರತಿಷ್ಠಾನದ ಮೂಲಕವೇ ಪ್ರಕಟಿಸಲು ಹಸ್ತಪ್ರತಿಯನ್ನು ಸಿದ್ಧಪಡಿಸುತ್ತಿರುವಾಗ ಇದರ ಪ್ರಕಟನೆಗೆ ಕೇಂದ್ರ ಸರ್ಕಾರದ ಅನುದಾನ ಲಭ್ಯವಾಗಿದ್ದರಿಂದ ಸುದೀರ್ಘವಾದ ಟಿಪ್ಪಣಿಯನ್ನು ಬರೆಯತೊಡಗಿದರು. ಆದರೆ ಕಾರಣಾಂತರದಿಂದ ಟಿಪ್ಪಣಿ ಕಾರ್ಯ ನಿಧಾನವಾಗಿ ಯೋಜನೆಯ ಅವಧಿ ಪೂರ್ಣಗೊಂಡಿದ್ದರಿಂದ ಟಿಪ್ಪಣಿಯನ್ನು ಕೊನೆಯಲ್ಲಿ ಮುದ್ರಿಸುವ ಬದಲಾವಣೆ ಮಾಡಿಕೊಂಡು (ಭಾಗ ೧ ರಲ್ಲಿರುವಂತೆಯೇ ಆಯಾ ಪುಟದಲ್ಲಿಯೇ ಟಿಪ್ಪಣಿ ನೀಡುವುದು ಮೊದಲ ಸಿದ್ಧತೆಯಾಗಿತ್ತು) ಕೀರ್ತನೆಗಳನ್ನು ಪೂರ್ಣವಾಗಿ ಅಚ್ಚು ಮಾಡಿಸಿದರು. ೨೫ ಕೀರ್ತನೆಗಳ ವರೆಗೆ ಸಿದ್ಧವಾಗಿದ್ದ ಟಿಪ್ಪಣಿಯನ್ನೂ ಅಚ್ಚು ಮಾಡಿಸಿದರು. ಆ ವೇಳೆಗೆ ಯೋಜನೆಯನ್ನು ಪೂರ್ಣಗೊಳಿಸುವುದಕ್ಕಾಗಿ ಕೇಂದ್ರ ಸರ್ಕಾರದ ಒತ್ತಡ ಅಧಿಕವಾದ್ದರಿಂದ ೧೯೮೯ರಲ್ಲಿ ಆಗಿರುವಷ್ಟಕ್ಕೇ ಶೀರ್ಷಿಕೆ ಪುಟ ಮತ್ತು ಮೊದಲ ಮಾತನ್ನೂ ಬರೆದು ಕೇವಲ ೫ ಪ್ರತಿಗಳನ್ನು ಮಾತ್ರ ಮಾಡಿಸಿ ಸರ್ಕಾರಕ್ಕೆ ಸಲ್ಲಿಸಿ ಯೋಜನೆಯನ್ನೇನೋ ಪೂರ್ಣಗೊಳಿಸಿದರು. ಆದರೆ ಪುಸ್ತಕ ಮಾತ್ರ ಅಸಮಗ್ರವಾಯಿತು. ಅದಕ್ಕಾಗಿ ತರಿಸಿದ್ದ ಮುದ್ರಣ ಕಾಗದವನ್ನು ಹಾಗೆಯೇ ಕಾಯ್ದಿರಿಸಲಾಯಿತು. ಉಳಿದ ಟಿಪ್ಪಣಿಗಳನ್ನೂ ವಿವರವಾದ ವಿಮರ್ಶಾತ್ಮಕವಾದ ಪೀಠಿಕೆಯನ್ನೂ ಬರೆದ ನಂತರ ಮುದ್ರಿಸಿ ರಟ್ಟುಕಟ್ಟಿಸುವುದಕ್ಕಾಗಿ ಪುಸ್ತಕದ ಅಚ್ಚಾದ ಫಾರಂಗಳನ್ನೂ ಕಾಯ್ದಿರಿಸಲಾಯಿತು. ೩೧ ಜುಲೈ ೮೯ರಂದು ಮೊದಲ ಮಾತು ಬರೆದು ಪುಸ್ತಕ, ಲೆಕ್ಕಪತ್ರ ಸಿದ್ಧಪಡಿಸಿ, ಕೇಂದ್ರ ಸರ್ಕಾರಕ್ಕೆ ಕಳುಹಿಸುವುದರಲ್ಲೇ ೧೯೮೯ ಕಳೆದು ಹೋಯಿತು. ೧೯೯೦ ರಲ್ಲಿ ಬಿಡುವು ಮಾಡಿಕೊಂಡು ಟಿಪ್ಪಣಿ ಪೂರ್ಣಗೊಳಿಸಲು ತೊಡಗಬೇಕೆನ್ನುವಷ್ಟರಲ್ಲೇ ೧೨–೩–೧೯೯೦ ರಂದು (೧೧–೩–೧೯೯೦ ರಂದು ಸಂಜೆ ೮೦ ತುಂಬುವ ಸಂದರ್ಭಕ್ಕೆ ೯–೯–೯೦) ಅಭಿನಂದನೆ ಸಲ್ಲಿಸುವುದಕ್ಕಾಗಿ ರಚಿತವಾಗಿದ್ದ ಅಭಿನಂದನಾ ಸಮಿತಿ ಸಭೆ ಮತ್ತು ಸೀತಾರಾಮಯ್ಯನವರ ಕೃತಿಯೊಂದರ ಬಿಡುಗಡೆ ಸಮಾರಂಭ ನಡೆಸಿ ಅದರ ಗುಂಗಿನಲ್ಲಿರುವಾಗಲೇ) ಮುಂಜಾನೆ ಸೀತಾರಾಮಯ್ಯನವರನ್ನು ವಿಧಿ ನಮ್ಮಿಂದ ದೂರ ಮಾಡಿತು. ಈ ಗ್ರಂಥಕ್ಕೆ ಸಂಪಾದಕರು ಸಿದ್ಧಪಡಿಸಬೇಕಾಗಿದ್ದ ಪಾಂಡಿತ್ಯಪೂರ್ಣ ಪೀಠಿಕೆಯಿಲ್ಲದೆ ಶಾಶ್ವತವಾಗಿ ಅಪೂರ್ಣವಾಗಿಯೇ ಉಳಿಯಿತು.

ಪ್ರಸನ್ನ ವೆಂಕಟದಾಸರ ಭಾಗವತ ಕೀರ್ತನೆಗಳು – ಇವುಗಳ ಹಾಗೂ 'ಕೃಷ್ಣ ಬಾಲಲೀಲೆ'ಯ ಸಂಬಂಧದ ತೌಲನಿಕ ವಿಚಾರ–ವಿಮರ್ಶೆಯನ್ನು ಕೃತಿಯ ದ್ವಿತೀಯ ಸಂಪುಟದ ಪ್ರಸ್ತಾವನೆಯಲ್ಲಿ ಕೈಗೊಳ್ಳಲಾಗುವುದು". ವಿಧಿ ಇದಕ್ಕೆ ಅವಕಾಶ ನೀಡದುದರಿಂದ ಕೃತಿ ಅಪೂರ್ಣವಾಗಿಯೇ ಉಳಿದಿದೆ. ಆದರೆ ಅಸಮಗ್ರವಾಗಿದ್ದ ಮಾಹಿತಿಯನ್ನು ತುಂಬಿ ಸಮಗ್ರಗೊಳಿಸುವ ಕಾರ್ಯವನ್ನು ಮಾತ್ರ ಈ ಕೃತಿಯಲ್ಲಿ ಮಾಡಲಾಗಿದೆ. ಸೀತಾರಾಮಯ್ಯನವರು ಅರ್ಧಕ್ಕೆ ನಿಲ್ಲಿಸಿದ್ದ ಟಿಪ್ಪಣಿಗಳನ್ನು ಪೂರ್ಣ ಮಾಡುವ ಕಾರ್ಯವನ್ನು ಅವರ ನಿಧನಾನಂತರ ಸೀತಾರಾಮಯ್ಯನವರಿಗೆ ಆತ್ಮೀಯರೂ ಭಾಗವತದಲ್ಲಿ ತಕ್ಕಮಟ್ಟಿನ ಅನುಭವವುಳ್ಳವರೂ ಆಗಿದ್ದ ಸ.ವೆಂಕಟಾಚಲಪತಿ ಅವರನ್ನು ಪ್ರತಿಷ್ಠಾನದ ಕಾರ್ಯ ಸಮಿತಿ ಪ್ರಾರ್ಥಿಸಿತ್ತು. ಅವರು ಒಪ್ಪಿಕೊಂಡರಾದರೂ ಅನಾರೋಗ್ಯದ ಕಾರಣದಿಂದ ಸಾಧ್ಯವಾಗಲಿಲ್ಲ (ಇತ್ತೀಚೆಗೆ ಅವರೂ ನಮ್ಮನ್ನಗಲಿದರು). ಅನಂತರ ಈ ಕಾರ್ಯದಲ್ಲಿ ಮೊದಲಿನಿಂದಲೂ ಸಂಪಾದಕರಿಗೆ ಸಹಾಯಕರಾಗಿದ್ದ ಪ್ರತಿಷ್ಠಾನದ ಕೋಶಾಧ್ಯಕ್ಷರೂ ಆಗಿರುವ ಎನ್. ಎಸ್. ರಾಮಸ್ವಾಮಿ ಅಯ್ಯರ್ ಅವರಿಗೇ ವಹಿಸಲಾಯಿತು. ಶ್ರೀಯುತರು ಇದನ್ನು ಕರ್ತವ್ಯವೆಂದು ಭಾವಿಸಿ ಶ್ರಮವಹಿಸಿ ಕೈಲಾದಮಟ್ಟಿಗೂ ೨೬ನೇ ಕೀರ್ತನೆಯಿಂದ ಮುಂದಕ್ಕೆ ಟಿಪ್ಪಣಿಗಳನ್ನು ಸಿದ್ಧಪಡಿಸಿದ್ದಾರೆ. ಕಠಿಣಪದಗಳಿಗೆ ಅರ್ಥವಿವರಣೆಯ ಮಟ್ಟಕ್ಕೆ ಮಾತ್ರ ಈ ಟಿಪ್ಪಣಿಗಳನ್ನು ಸೀಮಿತಗೊಳಿಸಲಾಗಿದೆ ಎಂದು ವಿನಮ್ರದಿಂದ ಸೂಚಿಸುತ್ತೇವೆ.

ಮೊದಲೇ ಸೂಚಿಸಿರುವಂತೆ ಇದೊಂದು ಸುಂದರ ಕಾವ್ಯ. ಅನೇಕ ರಸಘಟ್ಟಗಳನ್ನು ಒಳಗೊಂಡಿರುವ ಸ್ವಾರಸ್ಯವಾದ ಗ್ರಂಥ. ಈ ಕೃತಿಯ ಅಭ್ಯಾಸ ಕಾಲದಲ್ಲಿ ಅನೇಕ ಸಂದರ್ಭಗಳಲ್ಲಿ ರಸಾನುಭವದ ಅನುಭವವಾಗಿದೆ. ಸಾಮಾನ್ಯ ಓದುಗರಾಗಿ ನಾವು ಗ್ರಹಿಸಿರುವ ರಸವತ್ತಾದ ವರ್ಣನಾ ಭಾಗಗಳು, ಕಲ್ಪನಾ ಸೌಂದರ್ಯಗಳು ಹಲವು. ದಾಸರ ಭ್ರಮರ ಗೀತೆಯ ಪ್ರಕರಣ ಒಂದಂತೂ ನಮ್ಮ ಮನಸ್ಸನ್ನು ಸೂರೆ ಮಾಡಿದೆ. ಈ ಬಗೆಯ ಕಲ್ಪನಾ ಸಾಮರ್ಥ್ಯ, ಪ್ರತಿಮಾ ನಿರ್ಮಾಣ, ವರ್ಣನೆಯ ಸೊಬಗು ಯಾವೊಬ್ಬ ಉತ್ತಮ ಕವಿಯ ಪ್ರತಿಭೆಗೆ ಸಮಾನವಾದುದಾಗಿದೆ. ಮತ್ತು ನಾವು ಓದಿರುವ ಸಾಹಿತ್ಯ ಕೃತಿಗಳಲ್ಲಿ ಕಾಣಬರದ ವಿಶಿಷ್ಟ ಸೌಂದರ್ಯವಾಗಿದೆ. ಈ ಉದ್ದೇಶದಿಂದ ಆ ಪ್ರಕರಣದ ಸ್ವಾರಸ್ಯವನ್ನು ಸಂಕ್ಷಿಪ್ತವಾಗಿ ಇಲ್ಲಿ ಸೂಚಿಸ ಬಯಸುತ್ತೇವೆ.

ಪ್ರತಿ ನುಡಿಗಳಲ್ಲಿ ೮ ಸಾಲುಗಳಿರುವ ೫೨ ನುಡಿಗಳ ಸುದೀರ್ಘವಾದ ೫೦ನೇ ಕೀರ್ತನೆ (ಪು: ೧೪೭೮) "ಭ್ರಮರ ಗೀತೆ" ಒಂದು ವಿಶಿಷ್ಟ ಕಲ್ಪನೆ.

ಕನಕದಾಸರಂತೆ 'ಕವಿ' ಎಂದೂ ಗುರುತಿಸಬೇಕಾಗಿದೆ. ಬಾಲಲೀಲೆ ಕೀರ್ತನ ಕಾವ್ಯದ ಜೊತೆಗೆ ಧ್ರುವಚರಿತ್ರೆ ಎಂಬ ಸಾಂಗತ್ಯ ಕೃತಿಯನ್ನೂ ಇವರು ರಚಿಸಿದ್ದು ಪ್ರತಿಷ್ಠಾನವೇ ಇದನ್ನು ಪ್ರಕಟಿಸಿದೆ. ಈ ನಿಟ್ಟಿನಲ್ಲಿ ಸೀತಾರಾಮಯ್ಯನವರು ಮೊದಲ ಸಂಪುಟದಲ್ಲಿ ಹೇಳಿರುವ ಈ ಮಾತನ್ನು ಇಲ್ಲಿ ಗಮನಿಸಬಹುದು.

ತಿಮ್ಮಪ್ಪದಾಸರನ್ನು 'ಕವಿ' ಎಂದು ನಿರ್ದೇಶಿಸುವುದು ಅನುಚಿತವಲ್ಲ. ಏಕೆಂದರೆ ತಿಮ್ಮಪ್ಪದಾಸರು ಸಂಸ್ಕೃತ ಭಾಗವತವನ್ನು ಮಾತಿಗೆ ಮಾತು ಇಟ್ಟು 'ಭಾಷಾಂತರ' ಮಾಡಿಲ್ಲ. ಸಮೀಪವರ್ತಿಯಾಗುವಂತೆ ಮೂಲವನ್ನು ಅನುಸರಿಸಿ ಹೇಳುತ್ತ ಹೋಗಿದ್ದರೂ ಕೃತಿಯನ್ನು 'ಅನುವಾದ' ಎಂದೂ ಹೇಳುವಂತಿಲ್ಲ. 'ಬಾಲಲೀಲೆ'ಯ ಕಥನಕ್ರಮದಲ್ಲಿ 'ಧ್ರುವಚರಿತ್ರೆ'ಯಲ್ಲಿ ಕಾಣಬರುವಷ್ಟು ಪ್ರಮಾಣದಲ್ಲಿ ಅಲ್ಲದಿದ್ದರೂ ತಕ್ಕಮಟ್ಟಿನ 'ಪುನಸ್ಸೃಷ್ಟಿಕಾರ್ಯ'ವನ್ನು ಗುರುತಿಸಬಹುದು. ಕೃತಿ ಕೀರ್ತನೆಗಳ ರೂಪದಲ್ಲಿದ್ದರೂ ಹರಿದಾಸರ ಕೀರ್ತನೆಗಳಂತೆ ಇವು ಬಿಡಿ ರಚನೆಗಳಲ್ಲ. ಪೂರ್ವಾಪರ ಸಂಬಂಧವನ್ನು ಪಡೆದುಕೊಂಡು ಪುರಾಣ ಕಥಾಸರಣಿ ಅನುಸ್ಯೂತವಾಗಿ ಸಾಗಿದೆ. ಎಲ್ಲ ಕೀರ್ತನೆಗಳೂ ಕೃಷ್ಣಸ್ತುತಿಯಾಗಿರದೆ, ಕೃಷ್ಣಚರಿತೆಯನ್ನು ನಿರೂಪಿಸುವುದರಿಂದ ಕೀರ್ತನರೂಪದ ಈ ಕೃತಿಯನ್ನು 'ಕೀರ್ತನ ಕಾವ್ಯ' ಎಂದು ನಿರ್ದೇಶಿಸಲು ಯಾವ ಅಡ್ಡಿಯೂ ಇರದು. ಕೀರ್ತನಕರ್ತೃ ತಿಮ್ಮಪ್ಪದಾಸರು ತಾವು 'ಕವಿತೆಯ ಕೀಲನರಿಯದ ಅಜ್ಞನು' ಎಂದು ಹೇಳಿಕೊಂಡಿದ್ದರೂ, ಸಂಸ್ಕೃತ ಭಾಗವತ ಪುರಾಣವಾದರೂ ಬಹ್ವಂಶದಲ್ಲಿ ಕಾವ್ಯಗುಣವನ್ನು ಹೊಂದಿದೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿರುವುದರಿಂದ ಮೂಲವನ್ನು ಅನುಸರಿಸಿಯೂ ಅಲ್ಲಲ್ಲಿ ಸ್ವೋಪಜ್ಞ ರಚನೆಯನ್ನು ಮೆರೆದಿರುವ ದಾಸರು ಕವಿಮನೋಧರ್ಮದವರೇ ಎಂದು ಧಾರಾಳವಾಗಿ ಹೇಳಬಹುದು." (ಪು. xxvii ಅಡಿಟಿಪ್ಪಣಿ)

೩

ಕವಿ–ಕೃತಿ ವಿಚಾರವನ್ನು ಸಂಪಾದಕರು ಮೊದಲ ಸಂಪುಟದಲ್ಲಿ ವಿವರವಾಗಿ ಚರ್ಚಿಸಿರುವುದರಿಂದ ಇಲ್ಲಿ ಅದನ್ನು ಅಳವಡಿಸಿಕೊಂಡಿಲ್ಲ. ಓದುಗರು ಈ ವಿವರಕ್ಕೆ ಮೊದಲ ಸಂಪುಟವನ್ನು ಗಮನಿಸಬಹುದು. ಈ ಕೃತಿಯ ಬಗ್ಗೆ ವಿವರವಾದ ವಿಮರ್ಶೆಯನ್ನು ೨ನೇ ಸಂಪುಟದಲ್ಲಿ ಬರೆಯಲಾಗುವುದೆಂದು ಸಂಪಾದಕರು ಮೊದಲ ಸಂಪುಟದಲ್ಲಿ ದಾಖಲಿಸಿದ್ದಾರೆ. (ಪುಟ–xxv) "ನಿತ್ಯಾತ್ಮ ಶುಕಯೋಗಿ (ಚಾಟು ವಿಠಲನಾಥ?) ರಚಿಸಿದ ಕನ್ನಡ ಭಾಗವತ, ಹರಿದಾಸರ ಕೀರ್ತನೆಗಳಲ್ಲಿ ಹೆಣೆದುಕೊಂಡಿರುವ ಬಾಲಲೀಲಾ ಸನ್ನಿವೇಶ ಪ್ರಸಂಗಗಳು,

"ಭ್ರಮರಗೀತದ" ಸ್ವಾರಸ್ಯವನ್ನು ಸವಿಯಲು ಓದಿಯೇ ತಿಳಿಯಬೇಕು, ಅನುಭವಿಸಬೇಕು, ಕಿಂಚಿತ್ ಆದರೂ ಜೀವನದ ಸಾರ್ಥಕ್ಯವನ್ನು ಪಡೆಯಬೇಕು. ಮುಂದೆ ಉದ್ಧವನು ಈ ಸಂದರ್ಭವನ್ನು ನೋಡಿ ಚೋದ್ಯ ಮಾನಸನಾಗುತ್ತಾನೆ. ಅವರನ್ನು-ಗೋಪಿಯರನ್ನು-ಪೂರ್ಣಾರ್ಥರು, ಲೋಕಪಾವನರು, ಅತಿಪೂಜ್ಯತಮರು, ಜೀವಿಗಳಲ್ಲಿ ಸಂಜೀವಿತರು, ಶಾಶ್ವತನಾದ ಪರಮಾತ್ಮನ ದಿವ್ಯಾಂಘ್ರಿಗಳ ಧ್ಯಾನದಲ್ಲಿ ದೃಢವಾಗಿ ನಿಂತವರೆಂದು ಮೆಚ್ಚಿ ತಲೆದೂಗುತ್ತಾನೆ. ಸಾಮಾನ್ಯ ಸ್ತರದಿಂದ ವಿಷಯವು ಆಧ್ಯಾತ್ಮಿಕ ಭಾವಗಳ ಶಿಖರವನ್ನು ಮುಟ್ಟಿದೆ, ಇಲ್ಲಿ. ದುಃಖ, ದುಗುಡ, ದುಮ್ಮಾನಗಳ ತೆರೆಯು ಜಾರಿ, ಸಂತೋಷ, ಸಮಾಧಾನ ಸಂತೃಪ್ತಿಗಳ ಬೆಳಕು ಚೆಲ್ಲುತ್ತದೆ. ಇದೇ ರೀತಿ ಪುರ-ಪುರಜನರ ಸೌಭಾಗ್ಯ-ಸಂಭ್ರಮ ವರ್ಣನೆ (ಕೀ.೨೯) ಉದ್ಧವ ಪ್ರಕರಣ (ಕೀ. ೧೨೮) ಅಕ್ರೂರನ ಆತಿಥ್ಯ (ಕೀ. ೪೬), ಅಕ್ರೂರನ ಶ್ರೀಕೃಷ್ಣಸ್ತುತಿ (ಕೀ. ೪೮) ಪಟ್ಟಾಭಿಷೇಕ ಪ್ರಕರಣ (ಕೀ.೫೩) ದ್ವಾರಕಾ ಪ್ರಕರಣ (ಕೀ. ೯೩) ಕಲ್ಯಾಣ ಕೀರ್ತನೆ (ಕೀ. ೭೦) ಮುಂತಾದ ಹಲವು ಕೀರ್ತನೆಗಳು ಸುಂದರವಾದ ವರ್ಣನೆಗಳಾಗಿದ್ದು ನಮ್ಮ ಮನವನ್ನು ಬೇರೆಯ ಲೋಕಕ್ಕೇ ಕೊಂಡೊಯ್ಯುತ್ತವೆ. ಕೃಷ್ಣಮಹಿಮಾ ಪ್ರಪಂಚವನ್ನೇ ನಮ್ಮ ಮುಂದೆ ಪ್ರಕಟಗೊಳಿಸುತ್ತವೆ. ಶಾಸ್ತ್ರಭಾಗವನ್ನು ತೆಗೆದುಕೊಂಡರೆ – ಕೃಷ್ಣ ಬಲರಾಮರ ವಿವಾಹ ಮಹೋತ್ಸವಗಳ ಸವಿಸ್ತಾರವಾದ ವರ್ಣನೆಯಿದೆ. "ಈ ವಿಮಲ ಕಥೆಯಿದ ಕೇಳಿ ಭಕ್ತರು, ಕಮಲಭವನಂದದಲಿ ಸುಖಿಪರು" ಎಂಬ ಉದಾತ್ತ ತಾತ್ವಿಕ ಭಾವನೆಯಿದೆ.

ಇಂತಹ ಉತ್ತಮ ವಿಶಿಷ್ಟ ಕಾವ್ಯಕೃತಿಗೆ ಸೀತಾರಾಮಯ್ಯನವರು ಅಪೂರ್ಣವಾಗಿಸಿರುವ ತೌಲನಿಕ ವಿಶ್ಲೇಷಣೆಯನ್ನೊಳಗೊಂಡ ಮೌಲಿಕ ವಿಮರ್ಶೆಯನ್ನು ಯಾರಾದರೂ ವಿದ್ವಾಂಸರು ಪೂರ್ಣಗೊಳಿಸಿ ಕನ್ನಡ ಸಾಹಿತ್ಯ ಲೋಕದಲ್ಲಿ ಈ ಕೃತಿಗೆ ಸಲ್ಲಬೇಕಾದ ಸ್ಥಾನವನ್ನೂ ದೊರಕಿಸಿ ಕೊಡುವ ಈ ಕಾರ್ಯವನ್ನು ಮಾಡಿದರೆ ಸೀತಾರಾಮಯ್ಯನವರ ಆತ್ಮ ಧನ್ಯತೆಯನ್ನು ಪಡೆಯುತ್ತದೆ ಎಂದು ನಮ್ಮ ಭಾವನೆ.

ಎಂ.ವಿ.ಸೀ. ಸಮಗ್ರ ಸಾಹಿತ್ಯ ಮಾಲೆಯ ಎಲ್ಲಾ ಸಂಪುಟಗಳನ್ನು 'ರಾಘವ ಪ್ರಕಾಶನ ದತ್ತಿನಿಧಿ'ಯ ಮೂಲಕ ಎಂ.ವಿ.ಸೀ. ಸಮಗ್ರ ಸಾಹಿತ್ಯ ಮಾಲೆ'ಯ ರೂಪದಲ್ಲಿ ಪ್ರಕಟಿಸಲು ಮತ್ತು ಅವರ ಎಲ್ಲ ಕೃತಿಗಳ ಗೌರವ ಧನವನ್ನು ದತ್ತಿ ನಿಧಿಗೇ ಬಳಸಿಕೊಳ್ಳಲು ಪ್ರತಿಷ್ಠಾನಕ್ಕೆ ಅನುಮತಿ ನೀಡಿರುವ ಹಾಗೂ ಈ ಸಂಪುಟಗಳನ್ನು ಸಂಯೋಜಿಸಿ ಸಿದ್ಧಪಡಿಸಲು ಅವಕಾಶ ನೀಡಿರುವ ದಿ॥

ಶ್ರೀಕೃಷ್ಣ ಭಕ್ತನಾದ ಉದ್ಧವನನ್ನು ಆ ಗೋಕುಲದ ನಳಿನಾಕ್ಷಿಯರು ಭಕ್ತಿಭಾವದಿಂದ ನುಡಿಸುವರು. ಅವರಲ್ಲಿ ಒಬ್ಬಳು ಕಡು ಜಾಣೆ ಕವಿಯಾಗಿದ್ದಾಳೆ. ಅಲ್ಲಿಗೊಂದು ಭ್ರಮರವು ಗುಂಗುಂಗಾನ ಮಾಡುತ್ತ ಬರುತ್ತದೆ. ಅದರ ಮೈಯೆಲ್ಲ ಕಪ್ಪು, ಮುಖವೆಲ್ಲ ಕೆಂಪು. ಅದನ್ನು ಆ ದೇವಿ ನೋಡಿದಳು. ಅದನ್ನು ತನ್ನ ಪ್ರಾಣವಲ್ಲಭನಾದ ಶ್ರೀಕೃಷ್ಣ ಪರಮಾತ್ಮನು ಕಳುಹಿಸಿದ ದೂತನೆಂದು ಭಾವಿಸಿ, ಕಲ್ಪಿಸಿ, ಭಕ್ತಿ ಪ್ರೇಮಗಳಿಂದ ಆ ದುಂಬಿಯೊಡನೆ ಅದು ಬಂದ ಕಾರಣವನ್ನು ಕೇಳುವಳು, ಅದರೊಡನೆ ಸಂಭಾಷಿಸುವಳು. ಶ್ರೀಕೃಷ್ಣನು ನಮ್ಮನ್ನು ಅಗಲಿ, ವಿರಹತಾಪಕ್ಕೆ ಪಕ್ಕು ಮಾಡಿ, ನಿಷ್ಕರುಣೆಯಿಂದ ಹೊರಟು ಹೋದನೆಂದು, ಬಹುಶಃ ಅವನಿಗೆ ತಮ್ಮ ನೆನಪೇ ಇರಲಾರದೆಂದು ಹೇಳುತ್ತ ತನ್ನ ಮನದಳಲನ್ನು ತೋಡಿಕೊಳ್ಳುವಳು. ಆ ಭ್ರಮರದ ಮುಖ ಕೆಂಪು ಹೇಗಾಯಿತು ಎನ್ನುವುದನ್ನು ಆ ಭಕ್ತೆಯು ವಿವರಿಸುವ ರೀತಿ ಬಲು ಚೆನ್ನು. ಅತ್ಯಂತ ಭಾವಪೂರಿತವಾದ, ಚೇತೋಹಾರಿಯಾದ ವರ್ಣನೆಗಳು ಇಲ್ಲಿ ಮಡುಗಟ್ಟಿನಿಂತಿವೆ.

ಅವನು (ಶ್ರೀ ಕೃಷ್ಣನು) ಎಂದಾದರೂ ಒಮ್ಮೆ ತಮ್ಮನ್ನೂ ನೆನಪಿಸಿಕೊಂಡುದುಂಟೆ, ನಮ್ಮನ್ನು ದುಃಖದ ಮಡುವಿನಲ್ಲಿ ಮುಳುಗಿಸಿ ಹೋದನಲ್ಲ ಎನ್ನುವಳು. ಹಾಗೆ ಹೇಳುತ್ತ 'ಒಂದು ಕಾಲಕ್ಕೆ ಅವನಿಗೆ ನಾವು ಬೇಕಿತ್ತು. ಈಗ ನಾವು ಬೇಡವಾದೆವು.

"ಪ್ರೀತಿಯೆ ಕೃಷ್ಣಗಿಲ್ಲ ಇಲ್ಲ" ಎಂದು ದುಗುಡದಿಂದ ಹೇಳುವಳು. ಅವರ ಅಳಲನ್ನು ಪರಿಹರಿಸಲು, ಕೃಷ್ಣನ ಬಗ್ಗೆ ಅವರಿಗುಂಟಾಗಿರುವ ಕಹಿಭಾವನೆಗಳನ್ನೂ ಕೋಪ ಅಸಮಾಧಾನಗಳನ್ನೂ ತೊಲಗಿಸಿ, ಪರಮಾತ್ಮನು ಅವರನ್ನು ಮರೆತಿಲ್ಲ, ಮರೆಯಲಾರನೆಂದು ನಾನಾ ರೀತಿಯಲ್ಲಿ ಸಾಂತ್ವನದ ಮಾತುಗಳನ್ನಾಡುವುದು. ಶ್ರೀಕೃಷ್ಣನಿಗೆ ಗೋಪಿಯರಲ್ಲಿ ಇದ್ದ ಅಕಳಂಕ ಪ್ರೇಮ, ವಾತ್ಸಲ್ಯಗಳನ್ನು ನಾನಾರೀತಿಯಲ್ಲಿ ವರ್ಣಿಸುತ್ತ ಆಕೆಯ ಮನದ ಸಂಶಯವನ್ನು ನಿವಾರಿಸುವುದು. ಅವಳಿಗೆ ಅವನ ನೆನಹೇ ಸಾಕು. ಅದೇ ಒಂದು ಯೋಗ. ಅವನನ್ನು ನೆನೆಯುವುದೇ ಜೀವನವನ್ನು ಸಾರ್ಥಕಗೊಳಿಸಿಕೊಳ್ಳುವ ಮಾರ್ಗ ಎಂಬ ದೃಢವಾದ ನಂಬಿಕೆ ಮೂಡುವುದು. ದೂತ ಭ್ರಮರದ ಚಿಂತನೆಯೇ ಒಂದು ಸುಂದರ ಕಲ್ಪನೆ. ಕಡೆಗೆ 'ನೂತನದ ಭ್ರಮರ ತಾನಿಲದೆ ನೆಲೆಗೊಂಡಿತು. ನೀತಿ ನಿಜಭಕ್ತಿಗಾಗಿ ನಿಂತಿತು. ಹರಿಯ ಸಾರವೀ ಬಯಕೆ ಸಲೆ ಹಿರಿದು.' ಈ ಅಂಶವನ್ನು ಉದ್ಧವನು ಚೆನ್ನಾಗಿ ಅರಿತು ಆ ಪುಣ್ಯವನಿತೆಯ ಮನವನ್ನು ಹರಿಯಲ್ಲಿ ನಿಲ್ಲಿಸಲು ಯತ್ನಿಸಿದನು.

ಎಂ.ವಿ.ಸೀತಾರಾಮಯ್ಯನವರ ಮಕ್ಕಳಿಗೆ ನಾವು ಆಭಾರಿಗಳಾಗಿದ್ದೇವೆ. ನಮಗೆ ಎಲ್ಲ ರೀತಿಯ ಸಹಕಾರ ನೀಡಿರುವ ಪ್ರತಿಷ್ಠಾನದ ಗೌರವಾಧ್ಯಕ್ಷರಾದ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅಧ್ಯಕ್ಷರಾದ ಪ್ರೊ॥ ಎನ್.ಬಸವಾರಾಧ್ಯ ಅವರಿಗೂ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

**ಎನ್. ಎಸ್. ರಾಮಸ್ವಾಮಿ ಅಯ್ಯರ್**
**ನಾ. ಗೀತಾಚಾರ್ಯ**
ಸಂಪಾದಕಸಹಾಯಕರು



# ೧. ಕನ್ನಡ ಗ್ರಂಥಸಂಪಾದನೆಗೆ ತೀ.ನಂ.ಶ್ರೀ. ಯವರ ಕೊಡುಗೆ*

## ೧

ಪ್ರಾಚೀನ ಭಾರತದ ವಿದ್ವಾಂಸರಿಗೆ ಗ್ರಂಥಗಳ ಪಾಠಶುದ್ಧಿಯನ್ನು ಸಂರಕ್ಷಿಸಿಕೊಳ್ಳುವ, ದುಷ್ಟಪಾಠಗಳನ್ನು ಗುರುತಿಸಿ ಪ್ರಕ್ಷಿಪ್ತ ಭಾಗಗಳನ್ನು ಕಂಡು ಹಿಡಿದು ಪಾಠಪರಿಷ್ಕರಣ ಮಾಡುವ ಶಾಸ್ತ್ರಪ್ರಜ್ಞೆ ಇದ್ದಿತೆಂದೂ ಆದರೆ ಅವರು ಪಾಠ ಪರಿಷ್ಕರಣ ಶಾಸ್ರವನ್ನು ಬರೆದಿಡಲಿಲ್ಲವೆಂದೂ ಡಿ.ಎಲ್. ನರಸಿಂಹಾಚಾರ್ಯರು ತಮ್ಮ 'ಕನ್ನಡ ಗ್ರಂಥ ಸಂಪಾದನೆ' ಎಂಬ ವಿದ್ವತ್ಪೂರ್ಣ ಗ್ರಂಥದಲ್ಲಿ ಆಧಾರ ಪೂರ್ವಕವಾಗಿ ವಿವೇಚಿಸಿದ್ದಾರೆ. ಕನ್ನಡಿಗರಿಗೂ ಈ ವಿಚಾರದಲ್ಲಿ ಅರಿವಿತ್ತು ಎಂಬುದಕ್ಕೆ ಪ್ರಾಚೀನ ಗ್ರಂಥಗಳ ಕೆಲವು ಉಲ್ಲೇಖಗಳು ಸಾಕ್ಷ್ಯ ನೀಡುತ್ತವೆ. ಪಾಠಪರಿಷ್ಕರಣ, ಕವಿಕಾವ್ಯ ವಿಮರ್ಶೆ, ಮುಂತಾದ ಪ್ರಕ್ರಮಗಳಿಂದ ಕೂಡಿದ 'ಗ್ರಂಥ ಸಂಪಾದನಾಶಾಸ್ತ್ರ' ಬೆಳೆದದ್ದು ಪಾಶ್ಚಾತ್ಯ ದೇಶಗಳಲ್ಲಿ. ಆ ಶಾಸ್ತ್ರವನ್ನು ೧೯ನೆಯ ಶತಮಾನದಲ್ಲಿ ಭಾರತಕ್ಕೆ ಪ್ರವೇಶಗೊಳಿಸಿದವರೂ ಪಾಶ್ಚಾತ್ಯ ವಿದ್ವಾಂಸರೇ. ಅವರ ಮೇಲ್ಪಂಕ್ತಿಯನ್ನು ಅನುಸರಿಸಿ, ಭಾರತೀಯ ವಿದ್ವಾಂಸರು ಶಾಸ್ತ್ರೀಯವಾಗಿ ಗ್ರಂಥಸಂಪಾದನೆ ಮಾಡತೊಡಗಿದರು. ಈ ಕೆಲಸ ಪ್ರಧಾನವಾಗಿ ಸಂಸ್ಕೃತ ಭಾಷೆಯ ಗ್ರಂಥಗಳಿಗೆ ಸಂಬಂಧಪಟ್ಟಿತ್ತು. ಈ ಎಲ್ಲ ಕಾರ್ಯಗಳ ಪ್ರಭಾವ ಭಾರತದ ಪ್ರಾಂತೀಯ ಭಾಷೆಗಳ ಮೇಲೂ ಬಿದ್ದು, ಪಾಶ್ಚಾತ್ಯ ವಿದ್ವಾಂಸರೇ, ಈ ಭಾಷೆಗಳಲ್ಲಿನ ಗ್ರಂಥ ಸಂಪಾದನೆಯ ಚಟುವಟಿಕೆಗಳಿಗೆ ಆದ್ಯಪ್ರವರ್ತಕರಾದರು. ಕನ್ನಡಕ್ಕೆ ಸಂಬಂಧಪಟ್ಟಂತೆ, ಶಾಸ್ತ್ರಶುದ್ಧವಾಗಿ ಗ್ರಂಥಸಂಪಾದನೆ ಮಾಡಿ ಒಂದು ಹಿರಿಯ ಸಂಪ್ರದಾಯವನ್ನು ಸ್ಥಾಪಿಸಿದ

---

* . ಶ್ರೀಕಂಠತೀರ್ಥ: ತೀ.ನಂ.ಶ್ರೀಕಂಠಯ್ಯ ಸ್ಮಾರಕ ಸಂಪುಟ; ಬೆಂಗಳೂರು, ೧೯೭೬. ಸಂ.– ಎಂ.ಚಿದಾನಂದ ಮೂರ್ತಿ, ತೀ.ಶ್ರೀ ನಾಗಭೂಷಣ, ತೀ.ನಂ.ಶಂಕರನಾರಾಯಣ; ಪ್ರಕಟಣೆ: ತೀ.ನಂ.ಶ್ರೀ ಸಂಸಾರ ವರ್ಗ. ಬೆಂ.೧೧

ಗ್ರಂಥಸಂಪಾದನಾ ಕ್ಷೇತ್ರಕ್ಕೆ ತೀ.ನಂ.ಶ್ರೀ. ಯವರು ಪ್ರವೇಶ ಮಾಡುವುದಕ್ಕೆ ಮುಂಚೆ ಅಲ್ಲಿ ಆಗಿದ್ದ ಬೆಳವಣಿಗೆಯ ಅತ್ಯಂತ ಸ್ಥೂಲ ಪರಿಚಯ ಇದು.

೨

ಪಾಶ್ಚಾತ್ಯ ವಿದ್ವಾಂಸರು ಲ್ಯಾಟಿನ್, ಗ್ರೀಕ್, ಹೀಬ್ರೂ ಭಾಷೆಗಳಿಗೆ ಸಂಬಂಧಪಟ್ಟಂತೆ ಕಂಡುಕೊಂಡಿದ್ದ ಪಾಠಪರಿಷ್ಕರಣ ಶಾಸ್ತ್ರನಿಯಮಗಳೇನೋ ರೂಪಗೊಂಡಿದ್ದುವು. ಈ ಸಂಬಂಧವಾಗಿ ಕೆಲವು ಪ್ರಮಾಣಭೂತಗ್ರಂಥಗಳು ಕಳೆದ ಶತಮಾನದ ಉತ್ತರಾರ್ಧದಲ್ಲಿಯೂ ಈ ಶತಮಾನದ ಆರಂಭದ ದಶಕಗಳಲ್ಲಿಯೂ ಪ್ರಕಟವಾಗಿದ್ದುವು. ಈ ಗ್ರಂಥಗಳಿಂದ ಇಂದಿಗೂ ನಾವು ಪ್ರಯೋಜನ ಪಡೆಯಬಹುದಾದರೂ ಭಾರತೀಯ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಭಾರತೀಯ ಭಾಷೆಗಳ ಗ್ರಂಥಗಳ ಹಸ್ತಪ್ರತಿಗಳ ಪಾಠಸಮಸ್ಯೆಗಳನ್ನು ಬಿಡಿಸಲು ಅವಕ್ಕೆ ಅನ್ವಯಿಸುವ ವಿಶಿಷ್ಟ ನಿಯಮಗಳ ಅಗತ್ಯವಿದ್ದಿತು. ಮಹಾಭಾರತ ಪರಿಷ್ಕರಣದ ಪ್ರಥಮ ಸಂಪಾದಕರಾದ ವಿ.ಎಸ್. ಸುಕ್ತಂಕರರು ಪ್ರಕಟಿಸಿದ (೧೯೩೩) ಆದಿಪರ್ವಕ್ಕೆ ಬರೆದ ವಿಸ್ತಾರವಾದ ಪೀಠಿಕೆ (Prolegomena) ಆ ಅಗತ್ಯವನ್ನು ಬಹುಮಟ್ಟಿಗೆ ಪೂರೈಸಿಕೊಟ್ಟಿತು; ಇದೊಂದು ಪ್ರತ್ಯೇಕ ಸಂಪುಟವಾಗಿಯೇ ಪ್ರಕಟವಾಯಿತು. ಇದನ್ನೂ, ಇನ್ನು ಕೆಲವು ಇಂಗ್ಲೀಷ್ ಬರವಣಿಗೆಗಳನ್ನೂ ಬಳಸಿಕೊಂಡು ಎಸ್.ಎಂ.ಕತ್ರೆಯವರು 'ಭಾರತೀಯ ಗ್ರಂಥಸಂಪಾದನ ಪರಿಚಯ' (Introduction to Indian Textual Criticism) ಎಂಬ ಗ್ರಂಥವನ್ನು ರಚಿಸಿದರು. ಇದು ಪ್ರಕಟವಾದದ್ದು ೧೯೪೧ರಲ್ಲಿ. ೧೯೩೩ರಕ್ಕೆ ಪೂರ್ವದಲ್ಲಿ ತೀ.ನಂ.ಶ್ರೀ. ಯವರು ಇಂಗ್ಲಿಷ್ ಬರಹಗಳ ಮೂಲಕ ಗ್ರಂಥಸಂಪಾದನಾಶಾಸ್ತ್ರದ ಪರಿಚಯವನ್ನು ಹೊಂದಿದ್ದರೋ ಇಲ್ಲವೋ ನನಗೆ ತಿಳಿಯದು ಆದರೆ, ಪಾಠಪರಿಷ್ಕರಣ ವಿಚಾರದಲ್ಲಿ ಆಸಕ್ತಿಯೂ ತಕ್ಕಮಟ್ಟಿನ ಕಾರ್ಯಾನುಭವವೂ ಅವರಲ್ಲಿ ಬೆಳೆದಿದ್ದುವು. ಟಿ.ಎಸ್. ವೆಂಕಣ್ಣಯ್ಯನವರ ಮತ್ತು ಬಿ.ಎಂ.ಶ್ರೀಕಂಠಯ್ಯನವರ ಮಾರ್ಗದರ್ಶನ ಅವರಿಗೆ ಲಭಿಸಿತ್ತು. ಈ ಇಬ್ಬರು ಮಹನೀಯರು ಗ್ರಂಥ ಸಂಪಾದನೆಯಲ್ಲಿ ಅನುಭವ ಪಡೆದಿದ್ದವರು. ೧೯೨೨ರಲ್ಲಿಯೇ ಪ್ರಾರಂಭವಾದ ಪಂಪಭಾರತದ ಸಂಪಾದನ ಕಾರ್ಯದಲ್ಲಿ ಟಿ.ಎಸ್. ವೆಂಕಣ್ಣಯ್ಯನವರು ಬೆಳ್ಳಾವೆ ವೆಂಕಟನಾರಾಯಣಪ್ಪನವರಿಗೆ ಬಲಗೈಯಾಗಿ ಸಹಾಯ ಮಾಡಿದವರು; ಕಡೆಯ ಸಲದ ಪ್ರೂಫಿಗೆ ಬಿ.ಎಂ. ಶ್ರೀಕಂಠಯ್ಯನವರ ಅನುಮೋದನೆಯ ಮುದ್ರೆ ಬಿದ್ದಹೊರತೂ ಅದು ಅಚ್ಚಾಗುತ್ತಿರಲಿಲ್ಲ. ೧೯೩೩ರಲ್ಲಿ

ಕೀರ್ತಿ ರೆ॥ ಎಫ್.ಕಿಟೆಲ್‌ರವರಿಗೂ ಬಿ.ಎಲ್.ರೈಸ್ ಅವರಿಗೂ ಸಲ್ಲುತ್ತದೆ. ಶಾಸನ ಇಲಾಖೆಯಲ್ಲಿ ರೈಸ್‌ರವರಿಗೆ ಸಹಾಯಕರಾಗಿದ್ದು ಅನಂತರ ಅವರ ಸ್ಥಾನವನ್ನು ಅಲಂಕರಿಸಿದ ಆರ್. ನರಸಿಂಹಾಚಾರ್ಯರು – ರೈಸ್‌ರವರ ಕಾರ್ಯವನ್ನು ಅತ್ಯಂತ ಯಶಸ್ವಿಯಾಗಿ ಮುಂದುವರಿಸಿದರು. ಗ್ರಂಥ ಸಂಪಾದನೆಯ ಕ್ಷೇತ್ರದಲ್ಲಿ ಸ್ವತಂತ್ರವಾಗಿ ಕಾರ್ಯಪ್ರವೃತ್ತರಾಗಿ ಅನೇಕ ಹಳಗನ್ನಡ ಗ್ರಂಥಗಳನ್ನು ತಮ್ಮ ಕರ್ಣಾಟಕ ಕಾವ್ಯ ಮಂಜರಿಯ ಮೂಲಕ ಬೆಳಕಿಗೆ ತಂದ ಮಹನೀಯರು ಎಂ.ಎ.ರಾಮಾನುಜಯ್ಯಂಗಾರ್ಯರು. ಎಸ್.ಜಿ. ನರಸಿಂಹಾಚಾರ್ಯರು ಒಂದು ಕಡೆ ಆರ್.ನರಸಿಂಹಾಚಾರ್ಯರಿಗೂ ಇನ್ನೊಂದು ಕಡೆ ರಾಮಾನುಜಯ್ಯಂಗಾರ್ಯರಿಗೂ ಬೆಂಬಲವಾಗಿದ್ದುಕೊಂಡು, ಸ್ನೇಹದ ತೆರೆಮರೆಯಲ್ಲಿ ನಿಂತು ಈ ಕ್ಷೇತ್ರಕ್ಕೆ ತಮ್ಮ ವಿದ್ವತ್ತನ್ನು ಧಾರೆಯೆರೆದರು. ಇದೇ ಕ್ಷೇತ್ರದಲ್ಲಿ ಗಮನಾರ್ಹವಾಗಿ ದುಡಿದ ಬಿ.ಮಲ್ಲಪ್ಪನವರ ಹೆಸರನ್ನು ಮರೆಯುವಂತಿಲ್ಲ. ಇವರಲ್ಲಿ ಯಾರು ಯಾರು ಎಷ್ಟರಮಟ್ಟಿಗೆ ಪಾಶ್ಚಾತ್ಯ ಪರಿಶ್ರಮದ ಫಲವಾಗಿ ರೂಪಗೊಂಡು ಬೆಳಕಿಗೆ ಬಂದಿದ್ದ ಗ್ರಂಥ ಸಂಪಾದನಾ ಶಾಸ್ತ್ರದ ಪ್ರಕ್ರಿಯೆಗಳನ್ನು ಅಧ್ಯಯನ ಮಾಡಿ ತಮ್ಮ ಗ್ರಂಥಸಂಪಾದನೆಯ ಕಾರ್ಯದಲ್ಲಿ ಅಳವಡಿಸಿಕೊಂಡಿದ್ದರು ಎನ್ನುವುದು ನಮಗೆ ಗೊತ್ತಾಗುವಂತಿಲ್ಲ. ಅಂತೂ, ತೀ.ನಂ.ಶ್ರೀಕಂಠಯ್ಯನವರು ಆಂಗ್ಲ ಭಾಷೆ ಮತ್ತು ಕನ್ನಡ ಭಾಷೆ ಸಾಹಿತ್ಯಗಳಲ್ಲಿ ಎಂ.ಎ., ಪರೀಕ್ಷೆಯನ್ನು ಕೊಟ್ಟು ಕನ್ನಡ ಅಧ್ಯಾಪಕರಾಗಿ ನೇಮಕವಾಗುವ ವೇಳೆಗೆ (೧೯೨೮–೨೯) ಕನ್ನಡದಲ್ಲಿ ಆ ಕಾಲಕ್ಕೆ ಅಚ್ಚುಕಟ್ಟಾಗಿ ಸಂಪಾದಿತವಾದವು ಎನ್ನಬಹುದಾದ ಪಂಪಭಾರತ, ಗದಾಯುದ್ಧ, ಪಂಪರಾಮಾಯಣ, ಕರ್ಣಾಟಕ ಕಾದಂಬರಿ, ಮುಂತಾದ ಕಾವ್ಯಗಳೂ ಕವಿರಾಜಮಾರ್ಗ, ಕಾವ್ಯಾವಲೋಕನ, ಶಬ್ದಮಣಿದರ್ಪಣ, ಭಾಷಾಭೂಷಣ, ಛಂದೋಂಬುಧಿ, ಶಬ್ದಾನುಶಾಸನ, ಮುಂತಾದ ಶಾಸ್ತ್ರಗ್ರಂಥಗಳೂ ಪ್ರಕಟವಾಗಿದ್ದುವು. ಮೈಸೂರಿನ ಓರಿಯಂಟಲ್ ಲೈಬ್ರರಿಯ ಕ್ಯೂರೇಟರುಗಳು ಕುಮಾರವ್ಯಾಸ ಭಾರತದ ಕೆಲವು ಪರ್ವಗಳನ್ನೂ ಇತರ ಕೆಲವು ಹಳಗನ್ನಡದ ಗ್ರಂಥಗಳನ್ನೂ ಸಂಪಾದನೆ ಮಾಡಿ ಪ್ರಕಟಿಸಿದ್ದರು. ಉಭಯಭಾಷಾ ಪಂಡಿತರು ಕೆಲವರು ಪುಸ್ತಕ ವ್ಯಾಪಾರಿಗಳಿಗೆ ಹಳಗನ್ನಡ ಗ್ರಂಥಗಳನ್ನು ಪರಿಶೋಧಿಸಿ ಮುದ್ರಣಕ್ಕೆ ಸಿದ್ಧ ಮಾಡಿ ಕೊಡುತ್ತಿದ್ದರು.; ಇವರುಗಳು ಹಸ್ತಪ್ರತಿಗಳ ಇಲ್ಲವೆ ತಾವು ಆಧಾರವಾಗಿ ಉಪಯೋಗಿಸಿಕೊಂಡ ಹಳೆಯ ಮುದ್ರಿತ ಪ್ರತಿಗಳ ಅಶುದ್ಧ ಪಾಠಗಳನ್ನು ತಮಗೆ ಸರಿ ಕಂಡಂತೆ ತಿದ್ದಿ ಬಿಡುತ್ತಿದ್ದರು. ಅವರು ತಿದ್ದಿದ್ದು, ತಿದ್ದದೆ ಬಿಟ್ಟದ್ದು, ಒಂದೂ ಗೊತ್ತಾಗುವಂತಿರಲಿಲ್ಲ. ಕನ್ನಡ

ಪಾಠದೋಷಗಳನ್ನು ವಿದ್ಯಾರ್ಥಿಗಳ ಗಮನಕ್ಕೆ ತಂದು, ಅವುಗಳನ್ನು ತಿದ್ದುಪಾಟುಮಾಡಿ, ಬೋಧಿಸುತ್ತಿದ್ದರು. ಸಮರ್ಥರಾದ ಅಧ್ಯಾಪಕರೆಲ್ಲರೂ ಮಾಡಬೇಕಾದ ಕಾರ್ಯ ಇದು. ತೀ.ನಂ.ಶ್ರೀ.ಯವರು ಇದನ್ನು ಮಾಡಿದರು.

ಸುಮಾರು ೧೯೨೭ನೆಯ ಇಸವಿಯಿಂದಲೂ ತೀ.ನಂ.ಶ್ರೀ.ಯವರು ನನಗೆ ಪರಿಚಿತರಾಗಿದ್ದು, ನನ್ನನ್ನು ಒಬ್ಬ ತಮ್ಮ ಎಂಬಂತೆ ಪ್ರೀತಿ ವಾತ್ಸಲ್ಯಗಳಿಂದ ನಡಸಿಕೊಂಡು ಬಂದವರು. ೧೯೩೦ರಿಂದ ೧೯೩೩ರ ವರೆಗೆ ನಾನು ಅವರ ಶಿಷ್ಯನಾದದ್ದು ಒಂದು ಅನಿರೀಕ್ಷಿತವಾದ, ಆಕಸ್ಮಿಕವಾದ, ಸುಯೋಗ. ನಾನು ವಿಶೇಷ ಪರಿಚಿತ ಎಂಬ ಕಾರಣದಿಂದ ತರಗತಿಗಳಲ್ಲಿ ಎಂದೂ ಅವರು ನನಗೆ ಸಲಿಗೆ ಕೊಟ್ಟವರಲ್ಲ. ನಾನಾದರೂ ಸಲಿಗೆ ತೆಗೆದುಕೊಂಡು ಅಶ್ರದ್ಧೆಯಿಂದ ನಡೆದುಕೊಂಡವನಲ್ಲ. ಇದರ ಫಲವೇ, ಅವರು ನನಗೆ ಪಾಠ ಹೇಳಿದ 'ಅನಂತನಾಥಪುರಾಣ' ಮತ್ತು 'ರಸರತ್ನಾಕರ'ಗಳಲ್ಲಿ ನಾನು ಗುರುತು ಹಾಕಿಕೊಂಡಿರುವ ಹಲಕೆಲವು ಪಾಠದೋಷಗಳ ತಿದ್ದುಪಾಟುಗಳು; ಸದಾ ಅಧ್ಯಯನಶೀಲನೂ ವಿದ್ವಾಂಸನೂ ಕರ್ತವ್ಯನಿಷ್ಠನೂ ಆದ ಅಧ್ಯಾಪಕನೊಬ್ಬನು ಮಾತ್ರ ಪೂರ್ವಸಿದ್ಧತೆ ಮಾಡಿಕೊಂಡು ಸೂಚಿಸಬಹುದಾದಂಥವು. ಪಾಠಪರಿಷ್ಕರಣದಲ್ಲಿ ಅವರು ಆಗಲೇ ಗಳಿಸಿದ್ದ ಸಾಮರ್ಥ್ಯಕ್ಕೂ ಇವು ನಿದರ್ಶನಗಳಾಗಿವೆ. ಕೆಲವು ಉದಾಹರಣೆಗಳನ್ನು ಮಾತ್ರ ಇಲ್ಲಿ ಕೊಡುವುದು ಸಾಧ್ಯ.

## ಅನಂತನಾಥಪುರಾಣ

ಅನಂತನಾಥಪುರಾಣ ೧೯೩೦ರಲ್ಲಿ ಪ್ರಕಟವಾಯಿತು. ಪ್ರಕಟವಾದ ಕೂಡಲೆ ನಾನು ಕೊಡಬೇಕಾಗಿದ್ದ ೧೯೩೩ರ ಎಂ.ಎ.ಪರೀಕ್ಷೆಗೆ ಪಠ್ಯ ಗ್ರಂಥಗಳಲ್ಲಿ ಒಂದಾಗಿ ನಿಯಮಿತವಾಯಿತು. ಅದರಲ್ಲಿ ಅಧ್ಯಯನ ಮಾಡಬೇಕಾಗಿದ್ದುದು ೧೧–೧೪ ಆಶ್ವಾಸಗಳಲ್ಲಿ ನಿರೂಪಿತವಾದ ಚಂಡಶಾಸನನ ಕಥಾಭಾಗ. ತೀ.ನಂ.ಶ್ರೀ.ಯವರು ೧೧ನೆಯ ಆಶ್ವಾಸದ ವರೆಗಿನ ಪುರಾಣ ವಿಷಯಗವನ್ನು ಸಂಕ್ಷೇಪವಾಗಿ ತಿಳಿಸಿ, ಅಲ್ಲಲ್ಲಿ ಸ್ವಾರಸ್ಯವಾದ ಕೆಲಕೆಲವು ಪದ್ಯಗಳನ್ನು ಓದಿ ಹೇಳಿ, ಪಠ್ಯ ಭಾಗವನ್ನು ವಿವರ ಪೂರ್ಣವಾಗಿ ಆಧ್ಯಾಪನ ಮಾಡತೊಡಗಿದರು. ಅವರು ಎಷ್ಟು ಶ್ರದ್ಧೆಯಿಂದ ಗ್ರಂಥವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿ ತರಗತಿಯಲ್ಲಿದ್ದ ನಾವು ಮೂವರು ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದರು ಎನ್ನುವುದಕ್ಕೆ, ಪಾಠದೋಷಗಳನ್ನು ತಿದ್ದುತ್ತಾ ಪದ್ಯಗಳ ಅರ್ಥವಿವರಣೆ ಮಾಡುತ್ತಿದ್ದುದು ಸ್ಪಷ್ಟ ನಿದರ್ಶನ. 'ಈ ಗ್ರಂಥದಲ್ಲಿ

ಟಿ.ಎಸ್.ವೆಂಕಣ್ಣಯ್ಯನವರು ಬಹು ಸಮರ್ಪಕವಾಗಿ ಸಂಪಾದನೆ ಮಾಡಿದ 'ಕರ್ಣಾಟಕ ಕಾದಂಬರೀ ಸಂಗ್ರಹ'ವು ಹೊರಬಂದಿತು. ಅದರ ಪೀಠಿಕೆಯಲ್ಲಿ, "ನನ್ನ ಸಂಪಾದಕ ಕಾರ್ಯದಲ್ಲಿ ಮೊದಲಿಂದ ಕೊನೆಯವರೆಗೂ ನನಗೆ ನೆರವಾಗಿ ನಿಂತ ಮಹಾರಾಜರವರ ಕಾಲೇಜಿನ ಉಪನ್ಯಾಸಕರೂ ಪಂಡಿತರೂ ಆದ ಶ್ರೀಮಾನ್ ಟಿ.ಎನ್. ಶ್ರೀಕಂಠಯ್ಯ, ಎಂ.ಎ., ಶ್ರೀಮಾನ್ ಡಿ.ಎಲ್., ನರಸಿಂಹಾಚಾರ್, ಎಂ.ಎ.," ಇವರಿಗೆ ವೆಂಕಣ್ಣಯ್ಯನವರು ತಮ್ಮ ಕೃತಜ್ಞತೆಯನ್ನು ಸಲ್ಲಿಸಿದ್ದಾರೆ. ಇದಕ್ಕೂ ಮುಂಚೆಯೇ ಟಿ.ಎಸ್. ವೆಂಕಣ್ಣಯ್ಯನವರಿಂದ ಪ್ರಥಮತಃ ಶಾಸ್ತ್ರೀಯವಾಗಿ ಸಂಪಾದಿತವಾಗಿ ೧೯೩೦ರಲ್ಲಿ ಪ್ರಕಟವಾದ 'ಬಸವರಾಜದೇವರ ರಗಳೆ'ಯ ಸಂಪಾದನಾ ಕಾರ್ಯದಲ್ಲಿ ಈ ಶ್ರೇಷ್ಠ ಶಿಷ್ಯದ್ವಯರು ತಮ್ಮ ಗುರುವರ್ಯರ ಜೊತೆ ದುಡಿದರು.

ಹೀಗೆ, ೧೯೨೮ ರಿಂದ ೧೯೩೫ರ ವರೆಗಿನ ಅವಧಿಯಲ್ಲಿ ತೀ.ನಂ.ಶ್ರೀಕಂಠಯ್ಯನವರು ಗ್ರಂಥಸಂಪಾದನಾ ವಿದ್ಯೆಯಲ್ಲಿ ಡಿ.ಎಲ್.ನರನರಸಿಂಹಾಚಾರ್ಯರು ಹೊರತಾಗಿ ಬಹುಶಃ ಬೇರೆ ಯಾವ ಶಿಷ್ಯನಿಗೂ ಗುರುಗಳಾದ ವೆಂಕಣ್ಣಯ್ಯನವರಿಂದ ದೊರಕದಿದ್ದ – ಪ್ರಾಯೋಗಿಕ ಶಿಕ್ಷಣವನ್ನು ಪಡೆದರು. (ಎಂದರೆ, ಇತರ ಶಿಷ್ಯರನ್ನು ಅವರು ಅನಾದರಣೆ ಮಾಡಿದ್ದರು ಎಂದು ಅರ್ಥವಲ್ಲ. ಶಿಷ್ಯರ ಆಸಕ್ತಿ ವಿಶೇಷಗಳನ್ನು ಗುರುತಿಸಿ, ಅವು ಪ್ರಕಾಶಕ್ಕೆ ಬರುವಂತೆ ಉತ್ತೇಜನ ಕೊಡುತ್ತಿದ್ದುದು ಅವರ ನಿಜವಾದ ಗುರುಲಕ್ಷಣವಾಗಿತ್ತು.)

## ೩

ಕಾವ್ಯರಚನೆಗೆ ಅಗತ್ಯವಾದ ಕವಿಯ ಅರ್ಹತೆಗಳನ್ನು ತಿಳಿಸುತ್ತಾ, ಪ್ರತಿಭೆ, ಪೂರ್ವಕವಿಗಳ ಕೃತಿಗಳ ಪರಿಚಯ, ಸಕಲ ಕಲೆ ಮತ್ತು ಶಾಸ್ತ್ರಗಳ ಜ್ಞಾನ, ಶಾಸ್ತ್ರಜ್ಞರ ಸೇವೆ, ನಿರಂತರವಾದ ಅಭ್ಯಾಸ ಪ್ರಯತ್ನ – ಇವುಗಳನ್ನು ಉಲ್ಲೇಖಿಸುತ್ತಾನೆ (ಎರಡನೆಯ) ನಾಗವರ್ಮ, ತನ್ನ ಕಾವ್ಯಾಲೋಕನದಲ್ಲಿ, ಕವಿಕೃತಿಯ ಮೂಲಪಾಠದ ಅನ್ವೇಷಕನಾದ ಗ್ರಂಥ ಸಂಪಾದಕನಿಗೂ ಈ ಎಲ್ಲ ಇರಬೇಕು. ಹೆಚ್ಚಿನ ವಿವರಣೆಗೆ ಹೋಗದೆ ಹೇಳುವುದಾದರೆ, ತೀ.ನಂ.ಶ್ರೀ.ಯವರಲ್ಲಿ ಈ ಎಲ್ಲ ಅರ್ಹತೆಗಳೂ ಅಗತ್ಯಕ್ಕೆ ತಕ್ಕಷ್ಟು ಇದ್ದುವು. ಟಿ.ಎಸ್.ವೆಂಕಣ್ಣಯ್ಯನವರ ಸಂಪಾದನಾಕಾರ್ಯಗಳಲ್ಲಿ ಸಹಕರಿಸುತ್ತಿದ್ದಾಗ ಸಾಗಿದ ಅವರ 'ಅಭ್ಯಾಸ ಪ್ರಯತ್ನ' ಇನ್ನೊಂದು ರೂಪದಲ್ಲಿ ನಡೆಯುತ್ತಿತ್ತು. ತೀ.ನಂ.ಶ್ರೀ.ಯವರು ಎಂ.ಎ.ತರಗತಿಗಳಿಗೆ ಪಾಠಮಾಡುತ್ತಿದ್ದಾಗ ಮುದ್ರಿತ ಗ್ರಂಥಗಳಲ್ಲಿ ಪರಿಷ್ಕೃತವಾಗದೆ ಉಳಿದಿದ್ದ

'ಗಗನೀ ಚಿತ್ರಿಕೆ ಬಾಲ ಭಾನುಕರಮಂ
ಕಣ್ಣಿಟ್ಟು ತೊಯ್ದಿಟ್ಟ ಬಟ್ಟಿಗೆಯಿಂ ಕಜ್ಜಳಸಜ್ಜಿತಾಬ್ಧಿ
ಫಳಕಪ್ರಾಗ್ಭಾಗದೊಳ್... ಬರೆವವೊಲ್ ಚೆಲ್ವಾದುದಂ
ನೋಡಿದಂ... ... '

[ವರ್ಷ ಋತುವಿನಲ್ಲಿ ಪೂರ್ವದಿಗ್ಭಾಗದಲ್ಲಿ ಗಗನವೆಂಬ ಚಿತ್ರಗಾರ್ತಿ ಬಾಲ ಸೂರ್ಯನ ಕಿರಣವನ್ನೇ ಬಣ್ಣ ಹಾಕುವ ಕುಂಚವನ್ನಾಗಿ ಮಾಡಿಕೊಂಡು ಕಜ್ಜಳದಿಂದ ಸಜ್ಜಾದ ಸಮುದ್ರ ಮತ್ತು ಪೂರ್ವದಿಕ್ಕೆಂಬ ಫಲಕದ ಮೇಲೆ ಬರೆದಂತಿದ್ದ (ಸರ್ಪಾಕಾರದ ಕಾಳಮೇಘವನ್ನು) ನೋಡಿದನು.]

'ಬಟ್ಟಿಗೆ' ಎಂಬ ಪದ ಅರ್ಥವಾಗುವುದಿಲ್ಲ. ಈ ಪ್ರಕರಣದಲ್ಲಿ 'ಬಣ್ಣಿಗೆ' (ವರ್ಣಿಕಾ>ಬಣಿಕೆ, ಬಣ್ಣಿಗೆ) ಎಂಬುದು ಲಿಪಿಕಾರನ ಕೈತಪ್ಪಿನಿಂದ 'ಬಟ್ಟಿಗೆ'ಯಾಗಿದೆ – ಎಂದು ತೀ.ನಂ.ಶ್ರೀ. ಊಹಿಸಿದ್ದು ಸರಿಯಾಗಿದೆ. ಶಾಸ್ತ್ರದ ಪರಿಭಾಷೆಯಲ್ಲಿ ಇದು Scribal error; ಲಿಪಿಕಾರಸ್ಖಾಲಿತ್ಯ.

ಇದೇ ಪದ್ಯಭಾಗದಲ್ಲಿ ಬರೆ**ವ**ವೊಲ್ ಎಂಬುದು ಬರೆ**ದ**ವೊಲ್ ಎಂದಾಗಬೇಕು. ಇದೂ ಅಂಥದೇ ದೋಷ. ಒಂದು ಪ್ರತಿಯನ್ನು ನೋಡಿಕೊಂಡು ನಕಲು ಮಾಡುವಾಗ ಅಕ್ಷರಸಾದೃಶ್ಯ ಭ್ರಾಂತಿಯಿಂದ ಇಂಥ ತಪ್ಪುಗಳಾಗುತ್ತವೆ. (ಈ ತಿದ್ದುಪಾಟನ್ನು ನಾನು ಗುರುತು ಹಾಕಿಕೊಂಡಿಲ್ಲ; ಬಹುಶಃ ಗುರುತುಹಾಕಿಕೊಳ್ಳುವುದನ್ನು ಮರೆತಿರಬಹುದು.)

ii)ಆ. ೧೧–ಪ. ೧೩: – "... ವೀಧಿಗಳ **ಕಾದಲೆ**ಗೊಪ್ಪುವ ಮಂಡಪಂ" **'ಕಾದಲೆ'** ಎಂದರೆ ಅರ್ಥವಾಗುವುದಿಲ್ಲ. ತ–ಕ ಅಕ್ಷರಗಳ ಪರಸ್ಪರ ಭ್ರಾಂತಿ ಹಸ್ತಪ್ರತಿಗಳಲ್ಲಿ ಸರ್ವಸಾಮಾನ್ಯ. ಈ ಪದ **'ತೌದಲೆ'** ಇರಬಹುದೆಂದು ಊಹಿಸಿದ್ದು ತೀ.ನಂ.ಶ್ರೀ.ಯವರ ಸೂಕ್ಷ್ಮಮತಿಗೆಂತೋ ಅಂತೆ ಶಬ್ದಶಾಸ್ತ್ರ ಜ್ಞಾನಕ್ಕೂ ನಿದರ್ಶನ. [ತೌದಲೆ<ತವುದಲೆ Literally, a drooping head: Kittel,=ಪುಟ ೭೦೧. ಬೀದಿಗಳ ಕೊನೆ(?). ಸಂದೇಹ ಸೂಚನೆ (ಪ್ರಶ್ನ ಚಿಹ್ನೆ) ಅವರದ್ದೆ.]

iii)ಆ. ೧೧–ಪ. ೨೪: ಈ ಪದ್ಯದ ಛಂದಸ್ಸಿನ ಹೆಸರನ್ನು 'ಮಲ್ಲಿಕಾ ಮಾಲೆ' ಎಂದು ಬರೆದಿದೆ. ಬಹುಶಃ ಹಸ್ತಪ್ರತಿಗಳಲ್ಲೇ ಹೀಗೆ ಬರೆದಿದ್ದಿರಬಹುದು. ವಾಸ್ತವವಾಗಿ ಇದು 'ತರಳವೃತ್ತ'. ಸಂಪಾದಕರು ಇದನ್ನು ಗಮನಿಸಿಲ್ಲ. ತೀ.ನಂ.ಶ್ರೀ. ಗಮನಿಸಿದರು. ಮಾತ್ರಾಗಣನೆಯ ಪ್ರಕಾರ ಈ ಎರಡೂ ವೃತ್ತಗಳ ನಡೆ ಒಂದೇ ಬಗೆಯದು. (೩+೪+೩+೪+೩+೪+೩+೨ ಅಥವಾ ಗುರು). 'ಮಲ್ಲಿಕಾ

ಅಚ್ಚಿನ ತಪ್ಪುಗಳೂ ಪಾಠದೋಷಗಳೂ ಹೇರಳವಾಗಿವೆ. ಪಾಠಕ್ಲೇಶಗಳೂ ಬೇಕಾದಷ್ಟಿವೆ. ಜನ್ನ ತುಂಬ ವೃದ್ಧನಾದ ಮೇಲೆ ಈ ಕಾವ್ಯವನ್ನು ರಚಿಸಿರುವಂತೆ ಕಾಣುತ್ತದೆ" ಎಂಬ ಪೀಠಿಕಾವಾಕ್ಯದಿಂದಲೇ ಪಾಠವನ್ನು ಪ್ರಾರಂಭಿಸಿದ್ದು ನನಗೆ ಚೆನ್ನಾಗಿ ನೆನಪಿದೆ. ಗ್ರಂಥಸಂಪಾದಕರು, "ಇಷ್ಟು ಪ್ರತಿಗಳ ಸಹಾಯವಿದ್ದರೂ ಅನೇಕ ಕಡೆ ಗ್ರಂಥವು ಅರ್ಥವಾಗದೆ ಇದ್ದುದನ್ನೇ ನಿರ್ವಾಹವಿಲ್ಲದೆ ಮುದ್ರಿಸಬೇಕಾಯಿತು. ಬುದ್ಧಿ ಬಲದಿಂದ ಗ್ರಂಥವನ್ನು ತಿದ್ದಬಹುದಾಗಿದ್ದರೂ ಮಾತೃಕೆಯಲ್ಲಿದ್ದಂತೆ ಪ್ರಕಾಶಿಸುವುದು ಕಾವ್ಯಪ್ರಚಾರಕನ ಧರ್ಮವೆಂದೆಣಿಸಿ ಇದ್ದುದನ್ನು ಇದ್ದಂತೆ ಮುದ್ರಿಸಿರುತ್ತೇವೆ" ಎಂದು ವಿಜ್ಞಾಪಿಸಿಕೊಂಡಿದ್ದಾರೆ. ಮಾತೃಕೆಯಲ್ಲಿ ಇದ್ದಂತೆ ಮುದ್ರಿಸುವುದಷ್ಟೇ ಗ್ರಂಥಸಂಪಾದಕನ ಕೆಲಸವಾದರೆ, ಆ ಕೆಲಸವನ್ನು ಮುದ್ರಣಾಲಯದವರೇ ನಿರ್ವಹಿಸಬಹುದಲ್ಲವೇ? ನಾಲ್ಕು ಹಸ್ತ ಪ್ರತಿಗಳು ಕಣ್ಣ ಮುಂದಿದ್ದು, ಪಾಠಭೇದಗಳಿರುವಾಗ, ಯಾವುದೊಂದೂ ಕವಿಯ ಸ್ವಹಸ್ತಾಕ್ಷರ ಪ್ರತಿಯಲ್ಲದಿರುವಾಗ, ಕವಿಪಾಠಕ್ಕೆ ಸಮೀಪವಾದ ಮೂಲ ಮಾತೃಕೆಯನ್ನು ಪಾಠಾಂತರಗಳ ಸಹಾಯದಿಂದ ಪುನರ್ನಿರ್ಮಾಣ ಮಾಡಬಹುದು; ಪಾಠಾಂತರಗಳೇ ಇಲ್ಲದೆ, ಪಾಠದೋಷವಿದೆಯೆಂದು ಮನವರಿಕೆಯಾದಾಗ ಆ ದೋಷ ಲಿಪಿಕಾರರ ಕೈತಪ್ಪುಗಳಿಂದ ಆದದ್ದು ಎಂದು ನಿರ್ಧರಿಸಿ ಪ್ರಕರಣಬಲದಿಂದಲೂ ವ್ಯಾಕರಣ, ಛಂದಸ್ಸು, ಮುಂತಾದ ಶಾಸ್ತ್ರಗಳ ಜ್ಞಾನದ ಸಹಾಯದಿಂದಲೂ ಸರಿಯಾಗಿರಬಹುದಾದ ಪಾಠವನ್ನು ಊಹೆಯಿಂದ ಕಂಡುಹಿಡಿಯುವುದು ಗ್ರಂಥಸಂಪಾದಕನ ಧರ್ಮವೇ ಎಂಬುದನ್ನು ಆಧುನಿಕ ಗ್ರಂಥ ಸಂಪಾದನಾಶಾಸ್ತ್ರವು ಒಪ್ಪುತ್ತದೆ. ೧೯೩೧ರ ವೇಳೆಗೆ ಇಂಗ್ಲೀಷಿನಲ್ಲಿಯೇ ಆಗಲಿ ಭಾರತೀಯ ಭಾಷೆಗಳಲ್ಲಿಯೆ ಆಗಲಿ ಭಾರತೀಯ ಭಾಷಾಸಾಹಿತ್ಯಗಳಿಗೆ ಅನ್ವಯಿಸುವಂತೆ ಪಾಠ ವಿಮರ್ಶಾಶಾಸ್ತ್ರವು ರೂಪಗೊಂಡು ಪ್ರಕಟವಾಗಿರಲಿಲ್ಲ ಎಂಬುದನ್ನು ನೆನೆದರೆ, ಅನಂತನಾಥಪುರಾಣದ ಸಂಪಾದಕರು ಮಾಡಲಾಗದೆ ಬಿಟ್ಟಿದ್ದ ಕಾರ್ಯವನ್ನು ಪಾಠ ಹೇಳುವ ಅವಸರದಲ್ಲಿ ತೀ.ನಂ.ಶ್ರೀ.ಯವರು ನಿರ್ವಹಿಸಿರುವುದನ್ನು ಗಮನಿಸಿದಾಗ, ಪಾಠ ಪರಿಷ್ಕರಣಶಾಸ್ತ್ರಪ್ರಜ್ಞೆ ಅವರಲ್ಲಿ ಹೇಗೆ ಒಂದು ಸಹಜ ಶಕ್ತಿಯಾಗಿ ವಿಕಾಸಗೊಂಡಿತ್ತು ಎಂಬುದು ಗೊತ್ತಾಗುತ್ತದೆ.

ಆಗ ತೀ.ನಂ.ಶ್ರೀ.ಯವರು ಸೂಚಿಸಿ ನಾನು ಗುರುತು ಹಾಕಿಕೊಂಡಿದ್ದ ಪಾಠ ಪರಿಷ್ಕರಣಗಳಲ್ಲಿ (ಇವು ಸುಮಾರು ೪೦–೫೦ ಇವೆ) ವಿವಿಧ ದೃಷ್ಟಿಗಳಿಂದ ಗಮನಾರ್ಹವಾದ ಕೆಲವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸುವುದು ಸಾಧ್ಯ!)

(ಆಶ್ವಾಸ ೯ – ಪದ್ಯ ೧೭:

vi)ಆ.೧೧-ಪ. ೩, ವಚನ: "**ಚತುರ್ದಶ** ವಾಸುದೇವನೆನಿಸಿದ ಪರಮ ಪುರುಷೋತ್ತಮ." ಜೈನಧರ್ಮದ ಪುರಾಣಗಳ ಪ್ರಕಾರ ಪುರುಷೋತ್ತಮ ನಾಲ್ಕನೆಯ ವಾಸುದೇವ. ವಾಸುದೇವರು ಅಥವಾ ನಾರಾಯಣರು ಒಂಬತ್ತೇ ಮಂದಿ. ಆದ್ದರಿಂದ ಚತುರ್ದಶ ವಾಸುದೇವನಿರಲು ಸಾಧ್ಯವೇ ಇಲ್ಲ. ಇಲ್ಲಿ **ಚತುರ್ಥ(ಕ)** ಎಂದಿರಬೇಕು. ಹಾಗೆಯೇ, ಆ. ೧೨-ಪ. ೩೨ರ ತರುವಾಯದ ವಚನದಲ್ಲಿ, "ಅಂತಾನೃಪಾಲನೊಂದೆ ಮನದೊಳೆತ್ತಿಕೊಂಡ ತಪದೊಳೆರಡುಂ ಪರಿಗ್ರಹಮಂ ತೊರೆದು... ಅಯ್ದು **ಸಮತೆ**ಯೊಳ್ಪೊಕ್ಕು..." ಎಂಬಲ್ಲಿ 'ಸಮತೆ'ಗೆ ಬದಲಾಗಿ **'ಸಮಿತಿ'** ಎಂದಿರಬೇಕು. ತನ್ನ ಶಾರೀರಕ ಕರ್ಮಗಳಿಂದ ಇತರ ಜೀವಿಗಳಿಗೆ ಹಿಂಸೆಯಾಗಬಾರದೆಂದು ಎಚ್ಚರಿಕೆ ವಹಿಸುವುದು 'ಸಮಿತಿ.' ಜೈನಧರ್ಮದ ಪರಿಭಾಷೆಯ ಪರಿಚಯ ಮಾಡಿಕೊಳ್ಳದಿದ್ದರೆ, ಈ ಎರಡೂ ಕಡೆಗಳಲ್ಲಿ (ಬಹುಶಃ ಪಂಡಿತಂಮನ್ಯನಾದ) ಲಿಪಿಕಾರನಿಂದ ಆಗಿರುವ ತಿದ್ದುಪಾಟುಗಳನ್ನು (Scribal emendations) ಸರಿಪಡಿಸುವುದು ಸಾಧ್ಯವೇ ಇಲ್ಲ. ಮೇಲುನೋಟಕ್ಕೆ ಇಲ್ಲಿ ಯಾವ ದೋಷವೂ ಕಂಡುಬರುವುದಿಲ್ಲ. ಈ ತಪ್ಪುಗಳನ್ನು ಆಗ ತೋರಿಸಿಕೊಟ್ಟ ತೀ.ನಂ.ಶ್ರೀ. ಯವರು ಜೈನಧರ್ಮದ ಮೂಲತತ್ತ್ವಗಳನ್ನು ಅಭ್ಯಾಸ ಮಾಡಿದ್ದರೆನ್ನುವುದಕ್ಕೆ ಇವು ನಿದರ್ಶನಗಳು.

### ರಸರತ್ನಾಕರ

'ರಸರತ್ನಾಕರ'ವನ್ನೂ ತೀ.ನಂ.ಶ್ರೀ. ನನಗೆ ಪಾಠಮಾಡಿದರೆಂದು ಈ ಮೊದಲೇ ಸೂಚಿಸಿರುವೆನಷ್ಟೆ. ತಮ್ಮ ಅರಿವಿಗೆ ನಿಲುಕಿದ ಕಡೆಗಳಲ್ಲೆಲ್ಲಾ – ಅದು ಮುದ್ರಣದೋಷವಾಗಿರಲಿ 'ಪಾಠ' ದೋಷವಾಗಿರಲಿ – ತಿದ್ದುಪಾಟು ಸೂಚಿಸದೆ ಅವರು ಮುಂದಕ್ಕೆ ಹೋಗುತ್ತಲೇ ಇರಲಿಲ್ಲ. ಉನ್ನತ ಮಟ್ಟದ ತರಗತಿಗೆ ಪಾಠ ಹೇಳಬೇಕಾದ ಅಧ್ಯಾಪಕ ಕರ್ತವ್ಯನಿಷ್ಠೆಯಿಂದ ಎಷ್ಟು ವಿಧಗಳಲ್ಲಿ ಪೂರ್ವಸಿದ್ಧತೆ ಮಾಡಿಕೊಳ್ಳಬೇಕೆಂಬುದಕ್ಕೂ ನನ್ನ ಈ 'ತರುಣ ಅಧ್ಯಾಪಕ'ರ (ಆಗ ತೀ.ನಂ.ಶ್ರೀ.ತರುಣರು ತಾನೆ!) ಪಾಠಪರಿಷ್ಕರಣದ ಸಂದರ್ಭಗಳು ಇಂದಿನ ತರುಣ ಅಧ್ಯಾಪಕರ ಪೀಳಿಗೆಗೆ ಮಾರ್ಗದರ್ಶಕವಾಗಬಲ್ಲುವು. ತೀ.ನಂ.ಶ್ರೀ. ಸೂಚಿಸಿದ ಸಣ್ಣಪುಟ್ಟ ಕೆಲವು ತಿದ್ದುಪಾಟುಗಳ ವಿಚಾರವನ್ನು ಬಿಟ್ಟು, ವಿಶೇಷವಾಗಿ ಕನ್ನಡದ ಶಾಸ್ತ್ರಗ್ರಂಥಗಳ ಪಾಠಪರಿಷ್ಕರಣ ವಿಧಾನದ ಮೇಲೆ ಮಾರ್ಗದರ್ಶಕವಾದ ಬೆಳಕು ಚೆಲ್ಲುವಂತಹ ಒಂದೆರಡು ನಿದರ್ಶನಗಳನ್ನು ಮಾತ್ರ ಇಲ್ಲಿ ವಿವರಿಸುತ್ತೇನೆ.

ಕನ್ನಡ ಅಲಂಕಾರ ಶಾಸ್ತ್ರಗ್ರಂಥಗಳು – ಅನೇಕ ಕಾವ್ಯಗಳು ಕೂಡ –

ಮಾಲೆ'ಯ ಆದಿಗುರುವನ್ನು ಎರಡು ಲಘುಗಳಾಗಿ ಪರಿವರ್ತಿಸಿದರೆ 'ತರಳ'ವಾಗುತ್ತದೆ.

iv)ಹೀಗೆಯೇ ಮೇಷ ವಿಶೇಷ (ವೇಷ ವಿಶೇಷ); ಕೂರಿಸಿ (ಕೂರಸಿ=ಹರಿತವಾದ ಕತ್ತಿ); ಕಣ್ಬೆರಗು (ಕಣ್ಬೆಱಗು: ಬೆರಗು = ಉಪಾಯ; ಬೆಱಗು = ಆಶ್ಚರ್ಯ. 'ಕ' ಹಸ್ತಪ್ರತಿಯಲ್ಲಿ ಶಕಟರೇಫ ಪ್ರಯೋಗವಿದೆಯೆಂದು ಸಂಪಾದಕರು ತಿಳಿಸಿದ್ದಾರೆ. ಆ ಪ್ರತಿಯಲ್ಲಿ 'ಬೆಱಗು' ಎಂಬ ಪ್ರಯೋಗ ಇದ್ದಿರಬೇಕು. ರೇಫ ಶಕಟರೇಫಗಳ ವ್ಯತ್ಯಾಸದಿಂದ ಅರ್ಥವ್ಯತ್ಯಾಸವಾಗುವುದು ಆಗ್ಗೆ ಸಂಪಾದಕರ ಗಮನಕ್ಕೆ ಬಂದಿರಲಾರದು); ಬಾಳ್ಗೋಟೆ (ಬಾಟ್ಗೋಟೆ); ತಳ್ಕಿಸಿ (ತಟ್ಕಿಸಿ)– ಮುಂತಾದ ಪದಪ್ರಯೋಗಗಳಲ್ಲಿನ ಅಕ್ಷರ ಸ್ಖಾಲಿತ್ಯಗಳನ್ನು (ಕಂಸಗಳಲ್ಲಿ ತೋರಿಸಿರುವಂತೆ) ಪ್ರಕರಣೋಚಿತವಾಗಿ ಊಹಿಸಬಹುದಾದ ಅರ್ಥಸಮಂಜಸತೆಯ ದೃಷ್ಟಿಯಿಂದ ಕಾವ್ಯಕ್ಕೆ ಅಪಚಾರವಾಗದಂತೆ ಸಂಪಾದಕರು ತಿದ್ದಬಹುದಾಗಿತು. ಇಂಥ ಸಂದರ್ಭಗಳಲ್ಲಿ ಪಾಠಪರಿಷ್ಕರಣ ನಿಯಮಗಳ ಜ್ಞಾನಕ್ಕಿಂತ ಹೆಚ್ಚಾಗಿ ಖಚಿತವಾದ ಭಾಷಾಜ್ಞಾನವಿರಬೇಕು; ಅದನ್ನು ವಿವೇಚನೆಯಿಂದ ಉಪಯೋಗಿಸಬೇಕು. ಇವೂ ಸೇರಿದ ಹಾಗೆ ಇಂಥ ಅನೇಕ ತಿದ್ದುಪಾಟುಗಳನ್ನು ಅನಂತನಾಥ ಪುರಾಣದಲ್ಲಿ ತೋರಿಸಿಕೊಟ್ಟರು ತೀ.ನಂ.ಶ್ರೀ.

v)ಚಂಡಶಾಸನನು ಸುನಂದೆಯಲ್ಲಿ ತನಗುಂಟಾದ ಅದಮ್ಯ ಮೋಹವನ್ನು ತನ್ನ ಸಂಗಡ ಬಂದಿದ್ದ ಕೆಳೆಯ ಸುದರ್ಶನನೊಂದಿಗೆ ಹೇಳಿಕೊಂಡಾಗ ಅವನು ತನ್ನ ಸ್ವಾಮಿಗೆ ಹೇಳಿದ ಒಂದು ಮಾತು ಹೀಗೆ ಮುದ್ರಿತವಾಗಿದೆ: "ಪರಿವ ಮನಕ್ಕೆ ಸಗ್ಗ ಮಿಲ್ಲಂ" (ಪಾಠಾಂತರಗಳಿಲ್ಲದಿರುವುದರಿಂದ ಎಲ್ಲ ಹಸ್ತಪ್ರತಿಗಳಲ್ಲಿ 'ಸಗ್ಗ'ವೇ ಇರಬೇಕು.) 'ಸಗ್ಗ' (=ಸ್ವರ್ಗ) ಎಂಬ ಪದ ಅರ್ಥವಾಗುವುದಾದರೂ, ವಾಕ್ಯಾರ್ಥದಲ್ಲಿ ಸ್ವಾರಸ್ಯವೇನೂ ಇಲ್ಲ. ಅದನ್ನು 'ಪಗ್ಗ' ಎಂದು ತಿದ್ದಿದಾಗ ಸ್ವರಸವಾದ ಅರ್ಥ ಹೇಗೆ ಬಂದು ತುಂಬಿಕೊಳ್ಳುತ್ತದೆ ವಾಕ್ಯದಲ್ಲಿ! ಗಾದೆಮಾತಿನಂತೆ ಗೆಲುವಾಗಿದೆ. ಪ್ರತಿಭಾಶಾಲಿಯಿಂದ ಮಾತ್ರ ಈ ಬಗೆಯ ತಿದ್ದುಪಾಟು ಸಾಧ್ಯ. ಇಲ್ಲಿ ತೀ.ನಂ.ಶ್ರೀ. ಮಾಡಿದ ಹಾಗೆ ಸಂಪಾದಕ ಊಹಾತ್ಮಕ ಪರಿಷ್ಕರಣವನ್ನು ಮಾಡಲೇ ಬೇಕಾಗುತ್ತದೆ. ಆದರೂ, ಇಂಥ ತಿದ್ದುಪಾಟನ್ನು ಅಂತಸ್ಸಂಭಾವ್ಯತೆಯ (Interinsic probability) ಬೆಂಬಲವಿಲ್ಲದೆ ಸಾಧಾರಣವಾಗಿ ಮಾಡಕೂಡದು. ಇಲ್ಲಿ ಅಂಥ ಬೆಂಬಲವಿದೆ. 'ಪ' ಕಾರಕ್ಕೂ 'ಸ' ಕಾರಕ್ಕೂ ಅಕ್ಷರ ಸಾದೃಶ್ಯ ಭ್ರಾಂತಿಯಾಗುವ ಸಂಭವವಿದೆ. ತನ್ನ ಮಾತೃಕೆಯ 'ಪ' ಕಾರವನ್ನು ಲಿಪಿಕಾರ'ಸ' ಕಾರವಾಗಿ ಭ್ರಮಿಸಿದ್ದಾನೆ.

ಅನ್ವಯವಾಗುತ್ತದೆ. 'ಆರ್ದ್ರಗುಣವುಳ್ಳ ಸ್ಥಾಯೀಭಾವಸಂಬಂಧವನ್ನು ಹೊಂದಿದ ಸ್ನೇಹರಸ ಇಲ್ಲ' ಎಂಬ ಮೊದಲ ಸಂದರ್ಭದಲ್ಲಿ ಸಂಸ್ಕೃತ ಮೂಲಪಾಠವನ್ನು ಸಾಳ್ವ ಅನುಸರಿಸಿದ್ದಾನೆ. ಆದ್ದರಿಂದ, ಆರ್ದ್ರಸ್ಥಾಯಿ (೧)ಪ್ರಯೋಗವನ್ನು ಇಟ್ಟುಕೊಳ್ಳಬಹುದು. ಆದರೆ, ಆರ್ದ್ರಸ್ಥಾಯಿ (೨)ಪ್ರಕರಣಕ್ಕೆ ಹೊಂದುವುದಿಲ್ಲ. ಮೂಲಪಾಠ 'ಗರ್ಧ' ಸರಿಯಾಗಿದೆ. ಗರ್ಧ ಎಂದರೆ ಲೋಭ, greediness; 'ಗೃಧ್' ಧಾತುವಿನಿಂದ ಸಿದ್ಧಿಸುತ್ತದೆ. ಲೌಲ್ಯ ಎಂದರೂ ಅದೇ ಅರ್ಥ. ಗ್ರಂಥ ಸಂಪಾದಕರು ಮೂಲ ಸಂಸ್ಕೃತ ಪಾಠಕ್ಕೆ ಹೋಲಿಸಿ ನೋಡದೆ, ಮೊದಲ ಸಂದರ್ಭದಲ್ಲಿ 'ಆರ್ದ್ರ' ಇರುವುದರಿಂದ ಎರಡನೆಯ ಸಂದರ್ಭಕ್ಕೂ ಅದೇ ಸರಿಯೆಂಬ ಭಾವನೆಯನ್ನು ಹೊಂದಿ, 'ಗರ್ಧ' ಎಂಬ ಕವಿಪಾಠವನ್ನು ತಿದ್ದಿರುವ ಹಾಗೆ ಕಾಣುತ್ತದೆ. ಹಸ್ತಪ್ರತಿಯಲ್ಲೂ 'ಆರ್ದ್ರ'ವೇ ಇದ್ದಲ್ಲಿ, ಲಿಪಿಕಾರ 'ಗರ್ಧ'ವನ್ನು 'ಆರ್ದ್ರ' ಮಾಡಿರಬೇಕು, ಇಲ್ಲವೆ ಸಾಳ್ವನೇ ತಪ್ಪು ಮಾಡಿರಬೇಕು. ಹೇಗೇ ಆದರೂ, ಎರಡನೆಯ 'ಆರ್ದ್ರ'ವನ್ನು 'ಗರ್ಧ' ಎಂದು ತಿದ್ದಿಕೊಳ್ಳಬೇಕು – ಎಂದು ವಿವರಣೆ ನೀಡಿ, ಪಾಠವನ್ನು 'ಗರ್ಧ' ಎಂದು ತಿದ್ದಿಸಿದರು. ತೀ.ನಂ.ಶ್ರೀ. ಯವರ ಈ ಪಾಠಪರಿಷ್ಕರಣ ಸಮಂಜಸವಾಗಿದೆ.

**(ii) ಸೂತ್ರ ೬೯ :**

ಎರಡುಂ ವಿರುದ್ಧರಸಮೊಡ–
ವೆರಸಿರೆ ತದನಂತರಸ್ಥ ಮೊಂದನ್ಯರಸಂ
ಪರಿಪುಷ್ಟಮಾಗೆಯುಂ ವ್ಯಧಿ
ಕರಣಂ ಮೇಣ್ ಸಮಮುಮಾಗೆಯುಂ ನಿರ್ದೋಷಂ.

ಈ ಸೂತ್ರ, ಹಾಗೂ ಇದಕ್ಕೆ ಕೊಟ್ಟಿರುವ ಎರಡು ಲಕ್ಷ್ಯ ಪದ್ಯಗಳು– ಇವನ್ನು ಸಾಳ್ವ ಕಾವ್ಯಾವಲೋಕನದಿಂದ ಉದ್ಧರಿಸಿದ್ದಾನೆ. (ಕಾವ್ಯಾವಲೋಕನ, ಪದ್ಯಗಳು ೮೩೩, ೮೩೪, ೮೩೫) ಈ ಅಂಶವನ್ನು ರಸರತ್ನಾಕರದ ಸಂಪಾದಕರು ಅಡಿಟಿಪ್ಪಣಿಯಲ್ಲಿ ಕಾಣಿಸಿದ್ದಾರೆ. ಆದರೂ, ಉದ್ದರಿಸಿದ ಪದ್ಯಗಳ ಪಾಠವನ್ನು ಕಾವ್ಯಾವಲೋಕನ ಪದ್ಯಗಳ ಪಾಠದೊಂದಿಗೆ ಹೋಲಿಸಿ ನೋಡುವ ಶ್ರಮವನ್ನು ತೆಗೆದುಕೊಳ್ಳಲಿಲ್ಲ. ಅಲ್ಲದೆ, "ವ॥ ಇಲ್ಲಿ ವಿರುದ್ಧಂಗಳಾದ ಶೃಂಗಾರ ಬೀಭತ್ಸ ರಸಂಗಳ **ನಡುವೆ** ವೀರರಸಂ **ಪೊಕ್ಕು ಪುಷ್ಟಿಯಾದುದು**", ಮತ್ತು, "ವ॥ ಇಲ್ಲಿ

ಮೂಲ ಸಂಸ್ಕೃತ ಗ್ರಂಥಗಳನ್ನು ಅನುಸರಿಸಿ ಬರೆದಂಥವು; ಅನೇಕ ಕಡೆಗಳಲ್ಲಿ ಮೂಲಗ್ರಂಥದ ಭಾಗಗಳ ನೇರ ಭಾಷಾಂತರವಿರುವುದೂ ಉಂಟು. ಆದ್ದರಿಂದ, ಗ್ರಂಥಸಂಪಾದಕನು ಉದ್ದಕ್ಕೂ ಮೂಲದೊಂದಿಗೆ ಹೋಲಿಸಿ ನೋಡುತ್ತಲೇ ಪಾಠಶೋಧನೆ ನಡಸಬೇಕು.

## (i)ಆರ್ದ್ರ – ಗರ್ಧ

ಶೃಂಗಾರರಸದ ಪ್ರಾಮುಖ್ಯವನ್ನು ತಿಳಿಸುವ ೧೩ನೆಯ ಸೂತ್ರದ ವೃತ್ತಿಯಲ್ಲಿ – 'ಶೃಂಗಾರ ರಸಮೆ ಲೋಕಕ್ಕೆ ಸೊಗಯಿಪ್ಪುದಾದ ಕಾರಣದೆ ಮೊದಲೋಳೀ ಶೃಂಗಾರ ರಸಂ ಪೇಟೆಪಟ್ಟುದು. ಅಲ್ಲಿ ಮತ್ತೆ ಕೆಲಂಬರ್ **ಆರ್ದ್ರ ಸ್ಥಾಯಿ**(೧) ಸ್ನೇಹರಸವೆಂಬರ್. ಅದು ರತ್ಯಂತರದೊಳ್ ಅಂತರ್ಭಾವಂ... ಮಾತಾಪಿತೃಗಳೊಳ್ ಬಾಲಕಂ ಮಾಟ್ಪ ಸ್ನೇಹಂ ಭಯದೊಳಂತರ್ಭಾವಂ. ಪುತ್ರಾದಿಕಂಗಳಲ್ಲಿಯುಂ ವೃದ್ಧಂಗಂ ಇಂತಪೆವುದು. **ಆರ್ದ್ರಸ್ಥಾಯಿ**(೨) ಲೌಲ್ಯರಸಮೆಂದೊಡದುವುಂ ಹಾಸದಲ್ಲಿ ಮೇಣ್ ರತಿಯಲ್ಲಿ ಮೇಣನ್ಯತ್ರದಲ್ಲಿ ಅಂತರ್ಭಾವಂ... "

ಮೇಲಿನ ವಿವರಣೆಯಲ್ಲಿ ಬೇರೆ ಬೇರೆ ವ್ಯಕ್ತಿಗಳ ನಡುವೆ ಇರಬಹುದಾದ ವಿವಿಧ ಸ್ನೇಹಭಾವಗಳು ಹೇಗೆ ಅವು ರತಿಸ್ಥಾಯೀಭಾವದಲ್ಲೆ ಅಂತರ್ಗತವಾಗುತ್ತವೆ ಎಂಬುದನ್ನು ಹೇಳಿದೆ. 'ಆರ್ದ್ರಸ್ಥಾಯಿ (೨) ಎಂಬುದು ಕವಿಪಾಠ ಇದ್ದಿರಲಾರದು. ಈ ಪ್ರಯೋಗಕ್ಕೆ ಪಾಠಾಂತರಗಳಿಲ್ಲ. ಇಲ್ಲಿ ಕವಿ ಅನುಸರಿಸುತ್ತಿರುವ ಆಕರವಾದ ಹೇಮಚಂದ್ರನ 'ಕಾವ್ಯಾನುಶಾಸನ'ದ ವಾಕ್ಯಗಳನ್ನು ಸಂಪಾದಕರೆ ಅನುಬಂಧದಲ್ಲಿ ಕೊಟ್ಟಿದ್ದಾರೆ. ಸಂವಾದಿಯಾದ ಸಂಸ್ಕೃತ ವಾಕ್ಯಗಳು ಹೀಗಿವೆ:

"... ಏತೇನವೈವ ಪರಸ್ಪರ ಸಂಕೀರ್ಣಾ ರಸಾಃ, **ತೇನಾದ್ರಸ್ಥಾಯಿಕಃ**(೧) ಸ್ನೇಹೋರಸ ಇತ್ಯಸತ್, ತಸ್ಯ ರತ್ಯಾಯದಾವನ್ತರ್ಭಾವಾತ್, ತಥಾ ಹಿ ಯೂನೋ ಮಿತ್ರೇ ಸ್ನೇಹೋ ರತೌ, ಲಕ್ಷ್ಮಣಾದೇಃ ಬ್ರಾತರಿ ಸ್ನೇಹೋ ಧರ್ಮವೀರೇ, ಬಾಲಸ್ಯ ಮಾತಾಪಿತ್ರಾದೌ ಸ್ನೇಹೋ ಭಯೇ ವಿಶ್ರಾಂತಃ । ಏವಂ ವೃದ್ದಸ್ಯ ಪುತ್ರಾದಾವಿತಿ ದ್ರಷ್ಟವ್ಯಂ, ತಥಾ **ಗರ್ಧಸ್ಥಾಯಿಕಸ್ಯ**(೨) ಲೌಲ್ಯರಸಸ್ಯ ಹಾಸೇವಾ ರತೌ ವಾನ್ಯತ್ರವಾಽನ್ತರ್ಭಾವೋ ವಾಚ್ಯಃ..."

'ಆರ್ದ್ರಸ್ಥಾಯೀ' ಎಂಬ ವಿಶೇಷಣವು 'ಮನಸ್ಸನ್ನು ಅಥವಾ ಹೃದಯವನ್ನು ಕರಗಿಸುವ, ಆರ್ದ್ರಮಾಡುವ, ಸಾಮರ್ಥ್ಯ'ವುಳ್ಳ ಭಾವಕ್ಕೆ ಅಥವಾ ರಸಕ್ಕೆ

ಎಂಬುದನ್ನು ಸೂಚಿಸಿದ್ದಾರೆ. ಇಂಥ ಒಂದು ಸರಳ ರೀತಿಯ ಪ್ರಕಟನೆಯಲ್ಲಿ, ಇದಕ್ಕಿಂತ ಹೆಚ್ಚಿನ 'ಗ್ರಂಥಸಂಪಾದನ' ಕಾರ್ಯ ಅಗತ್ಯವೆನಿಸುವುದಿಲ್ಲ; ಆದ್ದರಿಂದ, ಅದನ್ನು ನಾವು ನಿರೀಕ್ಷಿಸಬೇಕಾಗಿಯೂ ಇಲ್ಲ. ಪುಸ್ತಕದ ಎಲ್ಲ ಪದ್ಯಗಳೂ ತ್ರಿಪದಿಗಳೇ. ಸಾಮಾನ್ಯ ಜನಕ್ಕೆ ತ್ರಿಪದಿಯ ಛಂದಸ್ಸನ್ನು ಪರಿಚಯ ಮಾಡಿಕೊಡುವ ಅಗತ್ಯವಿಲ್ಲದಿದ್ದರೂ, ಅದನ್ನು ಓದುವ ಬಗೆ ಹೇಗೆ ಎಂಬುದನ್ನು ಒಂದು ತ್ರಿಪದಿಯ ಸಾಲುಗಳನ್ನೂ ಮಾತುಗಳನ್ನೂ ಓದುವ ಕ್ರಮದಲ್ಲಿ ಬಿಡಿಸಿ ತೋರಿಸಿರುವುದು ಸ್ವಾಗತಾರ್ಹವಾಗಿದೆ. ಒಂದು ರೀತಿಯಲ್ಲಿ, ಈ ಉದಾಹರಣೆಯ ಮೂಲಕ ತ್ರಿಪದಿ ಛಂದಸ್ಸಿನ ಸ್ವರೂಪವನ್ನು – ಅದರ ಧಾಟಿಯನ್ನು – ಪರಿಚಯ ಮಾಡಿಕೊಟ್ಟಂತೆಯೇ ಆಗಿದೆ. ಅಲ್ಲಲ್ಲಿ, ಸಾಮಾನ್ಯರಿಗೆ ಅರ್ಥವಾಗದಿರಬಹುದಾದ ಪದಗಳಿಗೆ ಅರ್ಥವನ್ನು ಬರೆದಿರುವುದೂ ಒಳ್ಳೆಯದೆ. ಉದಾ, ಕೈಯಲಗು=ಕೈಯಲ್ಲಿ ಇರುವ ಕತ್ತಿ; ನಲ್ಲರಳುಗಣ್ಣು=ಚೆನ್ನಾಗಿ ಅರಳಿದ ಹೂವಿನಂಥ ಕಣ್ಣು. ಉಂಗು=ಉಣ್ಣುವಳು; ತೆವರು=ತಿಟ್ಟು; ಜಕ್ಕಾತಿ–ಸುಂಕ. ಎರವು=ಭೇದ, ವಿರೋಧ; ಇತ್ಯಾದಿ. ಗ್ರಂಥ ಸಂಪಾದಕ ಯಾವ ಸಂದರ್ಭದಲ್ಲಿ ಎಷ್ಟರಮಟ್ಟಿಗೆ ತನ್ನ ಶಾಸ್ತ್ರಜ್ಞಾನವನ್ನು ಉಪಯೋಗಿಸಬೇಕು ಎಂಬುದಕ್ಕೆ ಮಾದರಿಯಾಗಿದೆ ಈ ಪುಟ್ಟ ಪುಸ್ತಕ.

ಆದರೂ, ಶಬ್ದರೂಪಗಳನ್ನು ಮುದ್ರಿಸುವಲ್ಲಿ ಅವರು ಅನುಸರಿಸಿರುವ ವಿಧಾನ ಅನೇಕ ಕಡೆ ಅವರೇ ಒಪ್ಪಿಕೊಂಡ ರೀತಿಗೆ ಅನುಗುಣವಾಗಿಲ್ಲ. 'ಮೊದಲ ಮಾತಿ'ನಲ್ಲಿ ಅವರು ಉದಾಹರಿಸಿರುವ ಪದ್ಯದ ವಿಷಯದಲ್ಲಿ 'ತೆಂಗಿನಕಾಯಿ' ಎನ್ನುವುದನ್ನು 'ತೆಂಗೀನಕಾಯಿ' ಎಂದು ಎಳೆದು ಉಚ್ಚರಿಸಬೇಕೆಂದೂ, 'ಬಂಗಾರದ ಪಾದ' ಎನ್ನುವುದನ್ನು 'ಬಂಗಾರದ್ಪಾದ' ಎಂದು ತೇಲಿಸಿ ಉಚ್ಚರಿಸಬೇಕೆಂದೂ ಸೂಚನೆ ನೀಡಿದ್ದಾರೆ. ಆದರೆ, 'ಮಕ್ಕಳ್ಹಂಗೆ,' 'ಕಾಡಿಗ್ಹಚ್ಚಿದ ಕಣ್ಣು,' 'ಕಟ್ಯಾಳು', 'ಪುಟ್ಹುಡುಗ', 'ಮುಸುಕ್ಹಾಕಿ', 'ಹೊತ್ಕೊಂಡು' ಇತ್ಯಾದಿ ಪ್ರಯೋಗಗಳನ್ನು ಉಚ್ಚಾರಣೆಯಾಗುವ ಹಾಗೆಯೇ ಇಟ್ಟುಕೊಂಡಿದ್ದಾರೆ.'ಮಕ್ಕಳಹಂಗೆ', 'ಕಾಡಿಗೆ ಹಚ್ಚಿದ', 'ಕಟ್ಟಿಯಾಳು', 'ಪುಟ್ಟ ಹುಡುಗ', ಇತ್ಯಾದಿಯಾಗಿ ಪ್ರತಿ ಸಂದರ್ಭದಲ್ಲೂ ಆಯಾ ಪದದ ಬರಹದ (ಗ್ರಾಂಥಿಕ) ರೂಪವನ್ನು ಕೊಡಬಹುದಾಗಿತ್ತಲ್ಲವೆ? ಹಾಗೆ ಕೊಟ್ಟರೆ, ಅಂಶಗಣಮಾನ ಕೆಡುತ್ತದೆ ಎಂಬ ದೃಷ್ಟಿ ಸರಿಯೆ. ಆದರೆ, 'ಹೇಳಿ ಕಳುಹಲಿಬೇಡ', 'ಕಾಲುಂಗುರ ತಂಗಿಯ', 'ತಾಯಿ ತನ್ನ ಮಕ್ಕಳ ಯಾವಾಗಲೂ ನೆನೆವಳೋ' ಇವೇ ಮುಂತಾದ ಪ್ರಯೋಗಗಳನ್ನು ತ್ರಿಪದಿಯ ಧಾಟಿಗೆ ಹೊಂದುವಂತೆ (ಹೇಳಿ ಕಳುವಲಿ ಬೇಡ, ಕಾಲುಂಗ್ರ ತಂಗಿಯ, ತಾಯ್ತನ್ನ

**ವ್ಯಧಿಕ**ರಣಮಾದುದರಿಂ ನಿರ್ದೋಷಂ" ಎಂದು ಲಕ್ಷ್ಯಗಳ ಕೆಳಗೆ ಸಾಳ್ವನು ಕೊಟ್ಟಿರುವ ವಿವರಣೆಗಳನ್ನು ಸೂಕ್ಷ್ಮವಾಗಿ ಗಮನಿಸಿಲ್ಲ; ಗಮನಿಸಿದ್ದರೆ, ಸೂತ್ರಪದ್ಯದಲ್ಲಿ (ಬಹುಶಃ ಲಿಪಿಕಾರಜನ್ಯವಾದ) ಈಗಿನ ಪಾಠದೋಷಗಳನ್ನು ಪರಿಹರಿಸಬಹುದಾಗಿದ್ದಿತು. ಕಾವ್ಯಾವಲೋಕನದಲ್ಲಿ ಸೂತ್ರ ಹೀಗಿದೆ:

ಎರಡುಂ ವಿರುದ್ಧರಸಮೊಡ
ವೆರಸಿರೆ ತದವಾಂತರಸ್ಥಮೊಂದನ್ಯರಸಂ
ಪರಿಪುಷ್ಟಮಾಗೆಯುಂ ವ್ಯತಿ
ಕರಣಂ ಮೇಣ್ ತಾಮವಾಗೆಯುಂ ನಿರ್ದೋಷಂ

ಸಾಳ್ವನ ವಿವರಣೆಯ ವಚನಗಳನ್ನೂ ಕಾವ್ಯಾವಲೋಕನದ ಸೂತ್ರವನ್ನೂ ಸಮನ್ವಯ ಮಾಡಿಕೊಂಡು ಪರಿಶೀಲಿಸಿದರೆ, 'ತದವಾಂತರ', 'ವ್ಯಧಿಕರಣ' ಎಂಬ ಪಾಠಗಳು ಸಮಂಜಸ ಎಂಬುದು ಸ್ಪಷ್ಟಪಡುತ್ತದೆ. 'ಸಮಮುಮಾಗೆಯುಂ', 'ತಾಮವಾಗೆಯುಂ' ಈ ಎರಡು ಪಾಠಗಳಲ್ಲಿ ಯಾವುದನ್ನು ಅಂಗೀಕರಿಸಿದರೂ ಬಾಧಕವಿಲ್ಲ. ತೀ.ನಂ.ಶ್ರೀ. ಈ ಅಂಶಗಳನ್ನು ಪರಿಶೀಲಿಸಿ, 'ತದನಂತರಂ' ಎಂಬ ಪಾಠವನ್ನು ಮಾತ್ರ 'ತದವಾಂತರಂ' ಎಂದು ತಿದ್ದಿಸಿದರು. 'ವ್ಯಧಿಕರಣಂ' ಎಂದರೆ 'ಭಿನ್ನ ಪಾತ್ರಗಳಲ್ಲಿರುವುದು' ಎಂದು ಅರ್ಥವಿವರಣೆಕೊಟ್ಟರು; ಈ ವಿವರಣೆ ಲಕ್ಷ್ಯ ಪದ್ಯದಿಂದ ಸಮರ್ಥಿತವಾಗುತ್ತದೆ. (ಇದರಿಂದ, ಕಾವ್ಯಾವಲೋಕನದ 'ವ್ಯತಿಕರಣ' ಎಂಬ ಪಾಠ ತಪ್ಪು ಎಂದೂ ಸೂಚಿತವಾಗುತ್ತದೆ.)

೪

**ಹೆಣ್ಣು ಮಕ್ಕಳ ಪದಗಳು :** ೧೯೪೧ರಲ್ಲಿ ತೀ.ನಂ.ಶ್ರೀ.ಯವರು ಮೈಸೂರಿನ ಅಕ್ಷರಪ್ರಚಾರ ಸಮಿತಿಯ ವಯಸ್ಕರ ಸಮಿತಿಯ 'ವಯಸ್ಕರ ಶಿಕ್ಷಣದ ಪುಸ್ತಕ ಮಾಲೆ'ಗೆ 'ಹೆಣ್ಣು ಮಕ್ಕಳ ಪದಗಳು' ಎಂಬ ಚಿಕ್ಕ ಪುಸ್ತಕವನ್ನು ಸಿದ್ಧಪಡಿಸಿ ಕೊಟ್ಟಿದ್ದಾರೆ. ಪುಸ್ತಕದ 'ಮೊದಲಮಾತಿ'ನಲ್ಲಿ, ಹಳ್ಳಿಯ ಹಾಡುಗಳ ಸ್ವರೂಪ, ವೈವಿಧ್ಯ, ಅವುಗಳ ಪ್ರಚಾರಕ್ಕೆ ಇರುವ ಅಗತ್ಯ, ಅವುಗಳ ಕಾವ್ಯಗುಣ – ಈ ಅಂಶಗಳನ್ನು ಕುರಿತು ಆಗ ತಾನೆ ಓದುಕಲಿತ ಸಾಮಾನ್ಯ ಜನಕ್ಕೆ ಅರ್ಥವಾಗುವಂತೆ ಕೂಡಿದ ಮಟ್ಟಿಗೂ ತಿಳಿಯಾದ ಭಾಷೆಯಲ್ಲಿ ಪರಿಚಯ ಮಾಡಿಕೊಟ್ಟಿದ್ದಾರೆ. 'ಕೊನೆಯ ಮಾತಿ'ನಲ್ಲಿ, ಯಾವ ಗ್ರಂಥಗಳಿಂದ ಪದ್ಯಗಳನ್ನು ಆರಿಸಿಕೊಂಡಿದೆ

(ಕೆಲವು ವರ್ಷಗಳ ತರುವಾಯ ಇದೇ ಪುಸ್ತಕವನ್ನು ನಾನು ಓದಿದ್ದು.) ಎಂದ ಮೇಲೆ, ಅದು ಪ್ರಕಟವಾದ ಕೂಡಲೆ ಅವರು ಅದನ್ನು ಕೊಂಡು ಓದಿರಬೇಕು. ಅಂದಿನಿಂದ ಅವರ ಗ್ರಂಥಸಂಪಾದನೆಯ ಅನುಭವಕ್ಕೆ ಒಂದು ಶಾಸ್ತ್ರೀಯ ನೆಲೆಗಟ್ಟು ಒದಗಿ, ಅದು ಖಚಿತವಾಯಿತು; ಶಾಸ್ತ್ರಸಂಪನ್ನವಾಯಿತು.

೧೯೩೨ರಲ್ಲಿ ಬರೆದು ಅಚ್ಚಾದ "'ಅಪೂರ್ವ' ಷಟ್ಪದಿಯ ಲಕ್ಷಣ" ಎಂಬ ಅವರ ಲೇಖನದಲ್ಲಿ ಅವರ ಪಾಠಪರಿಷ್ಕರಣ ಶಾಸ್ತ್ರಜ್ಞಾನ ಪ್ರಕಾಶದ ಮೊದಲ ಕಿರಣಗಳು ಗೋಚರಿಸುತ್ತವೆ.[೨] ಈ ಲೇಖನದಲ್ಲಿ ಅವರು ಅಮ್ಮಿನಭಾವಿಯ ಶಾಸನದ (ಕ್ರಿ.ಶ.ಸು.೧೦೭೧) 'ಷಟ್ಪದ' ಪದ್ಯದ ಪಾಠವನ್ನು ಕುರಿತು ಚರ್ಚಿಸಿ, ಕನ್ನಡ ಛಂದಸ್ಸಿನ ದೃಷ್ಟಿಯಿಂದ ಅದರ ವಿಶ್ಲೇಷಣೆ ಮಾಡಿ, ಅದರ ಛಂದಸ್ಸನ್ನೂ ಪಾಠವನ್ನೂ ಅತ್ಯಂತ ತೃಪ್ತಿಕರವಾಗಿ ನಿಷ್ಕರ್ಷೆ ಮಾಡಿದ್ದಾರೆ. ಈ ಪಾಠ ನಿಷ್ಕರ್ಷೆಗೆ ಪೂರಕವಾಗಿ ನಾಗವರ್ಮನ ಛಂದೋಂಬುಧಿಯಲ್ಲಿ ಹೇಳಿರುವ ಷಟ್ಪದಿಯ ಲಕ್ಷಣವನ್ನೂ, ಅದರ ಪಾಠವನ್ನೂ ಪ್ರಾಸಂಗಿಕವಾಗಿ ಚರ್ಚಿಸಿದ್ದಾರೆ. ಬಿ.ಎಂ.ಶ್ರೀ. ಯವರು 'ಕನ್ನಡ ಕೈಪಿಡಿ'ಯಲ್ಲಿ ನಾಗವರ್ಮನ ಪದ್ಯ ಮಾತ್ರಾಗಣಘಟಿತವಾದುದಲ್ಲವೆಂದೂ, ಅಂಶಗಣಘಟಿತವೆಂದೂ ಸೂಚಿಸಿದ್ದರು; ನಾಗವರ್ಮನ ಕಾಲದಲ್ಲಿ ಇದ್ದದ್ದು ಒಂದೇ ಷಟ್ಪದಿ, "ಇದಕ್ಕೆ ಶರಷಟ್ಪದಿ ಎಂಬ ಹೆಸರನ್ನು ಆಮೇಲೆ ಕೊಟ್ಟರೆಂದು ಕಾಣುತ್ತದೆ" ಎಂಬ ಸಕಾರಣವಾದ ಊಹೆಯನ್ನೂ ಮುಂದಿಟ್ಟಿದ್ದರು. ತೀ.ನಂ.ಶ್ರೀ.ಯವರ ಲೇಖನ ಪ್ರಕಟವಾಗುವುದಕ್ಕೆ ತುಸ ಮುಂಚೆ, ತ.ಸು.ಶಾಮರಾಯರು ತಾವು ಸಂಪಾದನೆ ಮಾಡುತ್ತಿದ್ದ 'ಸುಕುಮಾರಚರಿತೆ'ಯಲ್ಲಿ (ಕ್ರಿ.ಶ.ಸು.೧೦೬೦) ತಾವು ಗಮನಿಸಿದ ಒಂದು ಷಟ್ಪದಿಯ ಲಕ್ಷಣವನ್ನು ಅಂಶಗಣಘಟಿತ ಎಂದು ನಿಶ್ಚಯಿಸಿ, ಆ ಬಗೆಗೆ ಒಂದು ಲೇಖನವನ್ನು ಬವರೆದಿದ್ದರು. (ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೩೧-೨). ತೀ.ನಂ.ಶ್ರೀ. ಯವರು ಈ ಬರಹಗಳನ್ನೆಲ್ಲಾ ಗಮನಿಸಿದ್ದಾರೆ. ಆದ್ದರಿಂದ, ಅಂಶಗಣಘಟಿತ ಷಟ್ಪದಿಯ ಸ್ವರೂಪದ ಬಗೆಗೆ ಹೊಸದಾಗಿ ಹೇಳಬೇಕಾದದ್ದು ಏನೂ ಇರಲಿಲ್ಲ. ಆದರೆ, ಶಾಸನ ಪದ್ಯದ ಲಕ್ಷಣವನ್ನು ಪಿ.ಬಿ.ದೇಸಾಯಿಯವರು ತಮ್ಮ ಲೇಖನವೊಂದರಲ್ಲಿ ಚರ್ಚಿಸಿ, ಮಾತ್ರಾಗಣ ಘಟಿತ ಎಂದು ನಿಶ್ಚಯಿಸಿ, ಈ ಷಟ್ಪದಿಯನ್ನು 'ಅಪೂರ್ವ' ಷಟ್ಪದಿ ಎಂದು ಕರೆದಿದ್ದರು. (ಕನ್ನಡನುಡಿ, ೧೫-೨). "ಪಾ.ವೆಂ. ಆಚಾರ್ಯರು ಈ ಷಟ್ಪದಿಯನ್ನು ಪರಿಶೀಲಿಸಿ ಇದು 'ಆರ್ಯಾ ವೃತ್ತ ಪ್ರಭೇದ'ವಾಗಿರಬೇಕೆಂದು ಅಭಿಪ್ರಾಯ" ಪಟ್ಟಿದ್ದರು.[೩] ಹೀಗೆ, ದಾರಿ ತಪ್ಪುತ್ತಿದ್ದ ಚರ್ಚೆಯನ್ನು ಸರಿಯಾದ ದಾರಿಗೆ ಒಯ್ದು, ಒಂದು ಶಾಸನ ಪದ್ಯದ ಛಂದಸ್ಸನ್ನು ಸರಿಯಾಗಿ ಗುರುತಿಸಿ,

ಮಕ್ಕಳ, ಯಾಗಾಳೂ ಅಥವಾ ಯಾವಾಗ್ಲೂ, ಎಂದು ಮುಂತಾಗಿ) ತಿದ್ದಬಹುದಾಗಿತ್ತಲ್ಲ? ತ್ರಿಪದಿಯ ಧಾಟಿ ಗೊತ್ತಿಲ್ಲದವರು ಕೇವಲ 'ಮೊದಲ ಮಾತಿ'ನಲ್ಲಿ ಕೊಟ್ಟಿರುವ ಸೂಚನೆಯನ್ನು ಅನುಸರಿಸಿ ಹಾಡಿಕೊಳ್ಳಬಲ್ಲರು ಎಂದು ಹೇಳುವುದು ಕಷ್ಟ. ಈ ಟೀಕೆಯಿಂದ ತೀ.ನಂ.ಶ್ರೀ.ಯವರ ಕೆಲಸದಲ್ಲಿ ಹುಳುಕು ಹುಡುಕುವುದು ನನ್ನ ಗುರಿಯುಲ್ಲ. ಪದಗಳ ಪಾಠವು ಲಿಖಿತ ಕವಿಪಾಠವಲ್ಲವಾದ್ದರಿಂದ, ದೊರೆತ ಪಾಠವನ್ನು ಕೈಯಾಡದೆ ಹಾಗೇ ಉಳಿಸಿಕೊಳ್ಳುವುದೇ ಸರಿ ಎನ್ನುವುದು ಅವರ ದೃಷ್ಟಿಯಾಗಿರಬಹುದು. ಈಗ, ಜನಪದ ಸಾಹಿತ್ಯ ಸಂಗ್ರಹ, ಸಂಪಾದನೆ, ಮುಂತಾದ ಕೆಲಸಗಳು ಅವರ ದಿನಗಳಲ್ಲಿ ಇದ್ದುದಕಿಂತ ನೂರು ಮಡಿ ಮಿಗಿಲಾಗಿ ನಡೆಯುತ್ತಿದೆ. ಆದರೆ, ಜನಪದಸಾಹಿತ್ಯ ಸಂಪಾದನೆಯ ಕಾರ್ಯದಲ್ಲಿ ಸಾರ್ವತ್ರಿಕವಾಗಿ ಅನ್ವಯವಾಗಬಲ್ಲ ಶಾಸ್ತ್ರೀಯ ವಿಧಾನಗಳು ರೂಪಗೊಂಡಿವೆ ಎಂದು ನನಗನ್ನಿಸುವುದಿಲ್ಲ. ಜನಪದ ಸಾಹಿತ್ಯದ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವವರು ಈ ಅಂಶವನ್ನು ವಿಚಾರ ಮಾಡಬೇಕೆಂದು ಸೂಚಿಸುವುದೇ ಇಲ್ಲಿ ನನ್ನ ಮುಖ್ಯ ಗುರಿ.

೫

ಹೆಣ್ಣು ಮಕ್ಕಳ ಪದಗಳ ಸಂಪಾದನೆಯೊಂದಿಗೆ ಪಾಠಪರಿಷ್ಕರಣ ವಿದ್ಯೆಯಲ್ಲಿ ತೀ.ನಂ.ಶ್ರೀ. ಯವರ ಪ್ರಾರಂಭಿಕ ಪ್ರಯತ್ನಗಳ ಕಾಲ ಮುಗಿದಂತಾಗುತ್ತದೆ. ಈ ಏಳೆಂಟು ವರ್ಷಗಳ ಅವಧಿಯಲ್ಲಿ ಅವರು ಆ ವೇಳೆಗೆ ಪ್ರಕಟವಾಗಿದ್ದ ಪಾಶ್ಚಾತ್ಯ ಇಂಗ್ಲಿಷ್ ಗ್ರಂಥಗಳನ್ನೂ ಲೇಖನಗಳನ್ನೂ ಓದಿದ್ದರೋ ಇಲ್ಲವೋ ಹೇಳಲು ಯಾವ ಸಾಕ್ಷ್ಯಾಧಾರಗಳೂ ಇಲ್ಲ.[೧] ಜ್ಞಾನಾರ್ಜನೆಯಲ್ಲಿ ಆಸಕ್ತರಾದ ಅವರು ಒಂದೆರಡು ಬರಹಗಳನ್ನಾದರೂ ಓದಿಕೊಂಡಿದ್ದರು ಎಂದು ಊಹಿಸಿದರೆ ತಪ್ಪಾಗದು. ಪೂರ್ವವಿದ್ವಾಂಸರು (ಪಾಶ್ಚಾತ್ಯರು ಮತ್ತು ಭಾರತೀಯರು) ಪರಿಷ್ಕರಿಸಿ ಸಂಪಾದನೆ ಮಾಡಿದ್ದ ಸಂಸ್ಕೃತ ಮತ್ತು ಕನ್ನಡ ಗ್ರಂಥಗಳನ್ನು ನೋಡಿ, ಎಷ್ಟೋ ವಿಷಯಗಳನ್ನು ಗ್ರಹಿಸಿದ್ದಿರಬೇಕು. ವೆಂಕಣ್ಣಯ್ಯನವರ ಜೊತೆ ಕೆಲಸ ಮಾಡಿದ ಅನುಭವವಂತೂ ಇದ್ದೇ ಇದ್ದಿತು. ೧೯೪೧ರಲ್ಲಿ ಎಸ್.ಎಂ.ಕತ್ರೆಯವರ Introduction to Indian Textual Criticism ಎಂಬ ಗ್ರಂಥ ಪ್ರಕಟವಾಯಿತು. ನಾನು ಬಲ್ಲಮಟ್ಟಿಗೆ, ಅವರು ಬೆಂಗಳೂರು ಇಂಟರ್ ಮೀಡಿಯಟ್ ಕಾಲೇಜಿಗೆ ಉಪ ಪ್ರಾಧ್ಯಾಪಕರಾಗಿ (ಸು.೧೯೪೨–೪೩ರಲ್ಲಿ) ವರ್ಗವಾಗಿ ಬಂದ ಕೂಡಲೆ, ಅಲ್ಲಿನ ಪುಸ್ತಕ ಭಂಡಾರದ ಕನ್ನಡ ವಿಭಾಗಕ್ಕೆ ಆ ಗ್ರಂಥವನ್ನು ತರಿಸಿದ್ದರು.

ಪರಿಷ್ಕೃತ ಪಾಠ ಹೀಗಿದೆ:

ಮಂ. ದ. ರ। ಧರ. ಗ. ೞಂ।
ಬಂ, ದಿ. ಕ್ಠಾ। ಱಂ. ತ್ಯ. ದೊಳ್!
ಕುಂ. ದ. ದೆ । ನೆಲ. ಸು. ಗೆ। ಮದ. ನ. ಹರಂ॥
ಇಂ. ದು. ನಿ। ಭಾ. ನ. ನೆ।
ಮುಂ. ದ. ೞ। ತಱ. ನು. ಮೀ ।
ಯಂ. ದ. ಮಾ। ದಂ. ದು. ಷ। ಟ್ಪ[ದ]. ಲ.ಕ್ಷ. ೞಂಃ [೪]

೬

**"ಎನಿತ್ತೆನಿತ್ತಂಬುಜ ಪತ್ರನೇತ್ರೆಯಾ..... "**

ಈ ಶೀರ್ಷಿಕೆಯ ಲೇಖನಮೊದಲು 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ'ಯಲ್ಲಿ (೩೧-೨-೧೯೪೬) ಬೆಳಕು ಕಂಡಿದೆ; ಆ ವರ್ಷವೇ ಬರೆದಿದ್ದಿರಬಹುದು. 'ನಂಬಿಯಣ್ಣನ ರಗಳೆ'ಯೂ ೧೯೪೬ರಲ್ಲೇ ಪ್ರಕಟವಾಗಿದ್ದರೂ, ಆರೇಳು ವರ್ಷಗಳ ಹಿಂದೆಯೇ (ಸು. ೧೯೩೯ರಲ್ಲಿ) ಅದರ ಸಂಪಾದನಾ ಕಾರ್ಯ ಮೊದಲಾಗಿತ್ತೆಂದು ಊಹಿಸಲು ಅವಕಾಶವಿದೆ. ಸಂಪಾದಿತ ಗ್ರಂಥಗಳಲ್ಲಿನ ಪಾಠದೋಷಗಳನ್ನು ಕಂಡು ಹಿಡಿಯುವುದಕ್ಕೂ ಪಾಠವಿಮರ್ಶಾ ಶಾಸ್ತ್ರದ ಜ್ಞಾನದ ಅಗತ್ಯವಿದೆ; ಆದರೆ ಗ್ರಂಥ ಸಂಪಾದನೆಯ ಕಾರ್ಯವ್ಯಾಪ್ತಿ ಇನ್ನೂ ಹೆಚ್ಚಿನದು, ಬಹುಮುಖವಾದದ್ದು. ಅದರ ಸ್ವರೂಪವನ್ನು ತೀ.ನಂ.ಶ್ರೀ. 'ನಂಬಿಯಣ್ಣನ ರಗಳೆ'ಗೆ ಬರೆದಿರುವ ಪೀಠಿಕೆಯಲ್ಲಿ ಅತ್ಯಂತ ಸಾರವತ್ತಾಗಿ ವಿವರಿಸಿದ್ದಾರೆ. ಈ ಸಂದರ್ಭದಲ್ಲೇ ಪ್ರಸಕ್ತ ಪೀಠಿಕಾಭಾಗವನ್ನು ಪೂರ್ತಿಯಾಗಿ ಉದ್ಧರಿಸುವುದು ಯುಕ್ತವಾಗಿದೆ:

'ಗ್ರಂಥ ಸಂಪಾದನ ಕಾರ್ಯವು ಈಗ ಒಂದು ಖಚಿತವಾದ ಶಾಸ್ತ್ರವಾಗಿ ಪರಿಣಮಿಸಿದೆ. ಅದರ ನಿಯಮಗಳನ್ನು ಕಟ್ಟುನಿಟ್ಟಾಗಿ ಅನುಸರಿಸಿದಲ್ಲಿ, ಮೂಲಪಾಠವನ್ನು ಬಲುಮಟ್ಟಿಗೆ ಶುದ್ಧವಾಗಿ ನಿರ್ಣಯಿಸುವುದು ಸಾಧ್ಯ. 'ನಂಬಿಯಣ್ಣನ ರಗಳೆ'ಯಂತೂ ಈ ಶಾಸ್ತ್ರ ಪದ್ಧತಿಯ ಅನೇಕ ಸೂಕ್ಷ್ಮಾಂಶಗಳಿಗೆ ಒಳ್ಳೆಯ ನಿದರ್ಶನಗಳನ್ನು ಒದಗಿಸಿಕೊಡುತ್ತದೆ. ಈ ಕಾರ್ಯದಲ್ಲಿ ಅಜ್ಞಾನದಿಂದಲೂ ಅನವಧಾನದಿಂದಲೂ ಪ್ರಮಾದಗಳು ಉಂಟಾಗುವುದು ಸುಲಭ. ನನ್ನ ಸಂಪಾದನೆಯಲ್ಲಿ ಇಂಥ ಕೆಲವು ಸಂಘಟಿಸಿವೆಯೆಂದು ಈಗ

ಕನ್ನಡ ಕಾವ್ಯಗಳ ಪಾಠಪರಿಷ್ಕರಣ ಕಾರ್ಯದಲ್ಲಿ ಛಂದಸ್ಸಿನ ನಿಷ್ಕೃಷ್ಟಜ್ಞಾನ ಎಂಥ ಪ್ರಮುಖ ಪಾತ್ರವನ್ನು ವಹಿಸಬಲ್ಲದು ಎಂದು ತೋರಿಸಿ ಕೊಟ್ಟಿರುವುದು ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ಸಂಗತಿ. ಪದ್ಯದ ಛಂದಸ್ಸಿನ ನಿಷ್ಕರ್ಷೆಗೆ ಅಂಗಭೂತವಾಗಿ ಎತ್ತಿಕೊಂಡು ನಡಸಿರುವ ಅಂಶಲಯಸ್ವರೂಪದ ಚರ್ಚೆ ಬೋಧಪ್ರದವಾಗಿದೆ. ವಾಸ್ತವವಾಗಿ, "ಕನ್ನಡ ಛಂದಸ್ಸಿನ ಚರಿತ್ರೆಯ ದೃಷ್ಟಿಯಿಂದ ಇದರ" (ಶಾಸನ ಪದ್ಯದ) "ಸ್ಥಾನವನ್ನೂ ಲಕ್ಷಣವನ್ನೂ ನಿರ್ದೇಶಿಸುವುದು" ಈ ಲೇಖನದ ಗುರಿ. ಈ ಗುರಿ ಅತ್ಯಂತ ಯಶಸ್ವಿಯಾಗಿ ನೆರವೇರಿದೆ. ಈ ಸಂಬಂಧದಲ್ಲಿ, ನಾಗವರ್ಮನು ಹೇಳಿರುವ ಷಟ್ಪದಿಯನ್ನು ಗಮನದಲ್ಲಿಟ್ಟುಕೊಂಡು ಅವರು ಬರೆದಿರುವ ಈ ವಾಕ್ಯಗಳು ಕನ್ನಡ ಛಂದಸ್ಸಿನ ಚರಿತ್ರೆಯಲ್ಲಿ ಷಟ್ಪದಿಯ ವಿಕಾಸದ ಮೊದಲ ಘಟ್ಟವನ್ನು ಪ್ರಮಾಣಭೂತವಾಗಿ ಚಿತ್ರಿಸುತ್ತವೆ:

> "ಷಟ್ಪದಿ ಎಂದ ಕೂಡಲೆ ಈಗ ನಮಗೆ ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ ಎಂಬ ಆರು ಬಗೆಗಳು ಥಟ್ಟನೆ ನೆನಪಾಗುತ್ತವೆ; ಇವುಗಳ ಧಾಟಿಯೇ ಬಾಲ್ಯದಿಂದಲೂ ಬಳಕೆಯಾಗಿರುವುದರಿಂದ ೩, ೪ ಅಥವಾ ೫ ಮಾತ್ರೆಗಳ ಗಣಗಳಿಂದ ಷಟ್ಪದಿಯ ಪಾದಗಳನ್ನು ಅಳೆದು ನೋಡುವ ಪ್ರವೃತ್ತಿಯೂ ಸಹಜವಾಗಿ ಉಂಟಾಗುತ್ತದೆ. ಆದರೆ ಕನ್ನಡದಲ್ಲಿ ಮೊದಲಿಗೆ ಇದ್ದುದು ಒಂದೇ ಷಟ್ಪದಿ, ಈ ಆರಲ್ಲ. ನಾಗವರ್ಮನು ತನ್ನ 'ಛಂದೋಂಬುಧಿ'ಯಲ್ಲಿ (ಕ್ರಿ.ಶ.ಸು.೯೮೦) 'ಷಟ್ಪದಿ' ಎಂದು ಹೆಸರು ಕೊಟ್ಟು ಹೇಳಿದ್ದುದು ಒಂದೇ ಪದ್ಯಜಾತಿ. ಶರ, ಕುಸುಮ, ಮೊದಲಾದ ಪ್ರಭೇದಗಳು ತಲೆದೋರಿದ್ದು ಈಚೆಗೆ; ಅವುಗಳ ಹೆಸರು, ಲಕ್ಷಣ ಮೊದಲಾದವು ಛಂದೋಂಬುಧಿಯಲ್ಲಿ ಪ್ರಕ್ಷಿಪ್ತವಾದವೆಂಬುದು ಆ ಗ್ರಂಥಮಾತೃಕೆಗಳ ಪರಿಶೀಲನೆಯಿಂದ ವ್ಯಕ್ತವಾಗುತ್ತದೆ. ಕನ್ನಡ ಛಂದಸ್ಸು ವಿಸ್ತರಿಸಿದಂತೆಲ್ಲ, ಮಾರ್ಪಾಡು ಹೊಂದಿದಂತೆಲ್ಲ ಛಂದೋಂಬುಧಿಯ ಪಾಠವೂ ಬಗೆಬಗೆಯಾಗಿ ರೂಪುದಳೆಯಿತು. ಛಂದೋಂಬುಧಿಯ ಪಾಠಭೇದಗಳ ಚರಿತ್ರೆ ಕನ್ನಡ ಛಂದಸ್ಸಿನ ಚರಿತ್ರೆಗೆ ಒಂದು ರೀತಿಯ ಪ್ರತೀಕವಾಗಿದೆಯೆಂದು ಕೂಡ ಹೇಳಬಹುದು."

ಶಾಸನ ಪದ್ಯದ ಪಾಠನಿರ್ಣಯದ ಜೊತೆಗೆ, ಪ್ರಾಸಂಗಿಕವಾಗಿಯೇ ಆದರೂ, ನಾಗವರ್ಮನು ಷಟ್ಪದಿಗೆ ಕೊಟ್ಟಿರುವ ಲಕ್ಷ್ಯಲಕ್ಷಣ ಪದ್ಯದ ಅಂಶಗಣಘಟಿತ ಸ್ವರೂಪವನ್ನು ನಿಷ್ಕರ್ಷಿಸಿರುವುದೂ ಒಂದು ಗಮನಾರ್ಹವಾದ ವಿಷಯ.

ವಂಶಸ್ಥಂ॥ ಎನಿತ್ತೆನಿತ್ತಂಬುಜಪತ್ರ ನೇತ್ರೆಯಾ।
ಘನಸ್ತನಂಗಳ್ ಬಳೆಗುಂ ಕಿರಾತೆಯಾ॥
ಅನಿತ್ತನಿತ್ತಂವನದೊಳ್ ವನೇಚರಂ।
ತನತ್ತು ಬಿಲ್ಲಾನದನಂತೆ ಕೀಸುವಂ॥

ಎಂದು ತೀ.ನಂ.ಶ್ರೀ. ಪದ್ಯವನ್ನು ಪರಿಚಯ ಮಾಡಿಕೊಟ್ಟು, ಅದು ಗಮನಾರ್ಹವಾಗಿರುವುದಕ್ಕೆ ಕಾರಣಗಳನ್ನು ತಿಳಿಸಿದ್ದಾರೆ. ಮುಖ್ಯವಾದವು, (೧)ಶೃಂಗಾರ ಪರವಾಗಿರುವುದರಿಂದ ಅದರ ಅರ್ಥಸ್ವಾರಸ್ಯ; (೨)'ಬಿಲ್ಲಾನ್' ಎಂಬ ಪೂರ್ವದ ಹಳಗನ್ನಡ ಪದಪ್ರಯೋಗದಿಂದಾಗಿ ಅದರ ಪ್ರಾಚೀನತೆ, (೩)ಭಾಷಾಭೂಷಣ, ಶಬ್ದಮಣಿದರ್ಪಣ, ಶಬ್ದಾನುಶಾಸನ–ಈ ವ್ಯಾಕರಣ ಗ್ರಂಥಗಳಲ್ಲಿ ಒಂದೆರಡು ಸೂತ್ರಗಳಿಗೆ ಉದಾಹೃತವಾಗಿದ್ದು, 'ವಿದ್ವತ್‌ಪ್ರಿಯ'ವಾಗಿರುವುದು; ಮತ್ತು (೪)'ಕಾವ್ಯಸಾರ'ದಲ್ಲಿ ಶಬರವರ್ಣನೆಯ ಪ್ರಸಂಗದಲ್ಲಿ ಉದ್ಧೃತವಾಗಿರುವುದು.

ಪಾಠಭೇದಗಲ ವಿಮರ್ಶೆಗೆ ತೊಡಗುವುದಕ್ಕೆ ಮುಂಚೆಅವರು ಪದ್ಯದ 'ಆಶಯ'ವನ್ನು ಹೀಗೆ ವಿವರಿಸಿದ್ದಾರೆ:

"ಅರಣ್ಯವಾಸಿಗಳಾಗಿ ಬಿಲ್ಲಿನ ಬೇಟೆಯಿಂದ ಜೀವನ ನಡಸುವ ಬೇಡರಿಗೆ ಸಂಬಂಧಿಸಿದ ಒಂದು ಸಂಗತಿಯನ್ನು ಇಲ್ಲಿ ಕವಿ ಚಮತ್ಕಾರವಾಗಿ ಚಿತ್ರಿಸಿದ್ದಾನೆ. ಚೆಲುವೆಯಾದ ಬೇಡಿತಿಯ ಯೌವನವು ವರ್ಧಿಸಿದ ಹಾಗೆಲ್ಲ ಅವಳಲ್ಲಿ ಬೇಡನು ಅತ್ಯಾಸಕ್ತನಾಗಿ ದುರ್ಬಲನಾಗುತ್ತಾನೆ. ಮೊದಲು ಲೀಲಾಜಾಲವಾಗಿ ಅವನು ಬಾಗಿಸುತ್ತಿದ್ದ ಬಿಲ್ಲು ಈಗ ಅವನ ಅಳವಿಗೆ ಮೀರುತ್ತದೆ. ಅದನ್ನು ಆಗಿಂದಾಗ ಕೆತ್ತಿ ತೆಳ್ಳತೆಳ್ಳಗೆ ಮಾಡಿಕೊಂಡ ಹೊರತು ಅವನು ಉಪಯೋಗಿಸಲಾರನು. ಹೀಗೆ, ಬೇಡಿತಿಯ ಎದೆ ಎಷ್ಟೆಷ್ಟು ತುಂಬಿಕೊಳ್ಳುವುದೋ ಅಷ್ಟಷ್ಟೂ ತನ್ನ ಬಿಲ್ಲನ್ನು ಬೇಡನು ಹೆರೆಹೆರೆದು ತೆಳುವಾಗಿಸುತ್ತಾನೆ ಎಂಬುದೇ ಇಲ್ಲಿಯ ಅರ್ಥ ಚಮತ್ಕಾರ."

ಪದ್ಯದಲ್ಲಿ ಅಭಿಪ್ರೇತವಾದ "ಈ ಬಗೆಯ ಭಾವ ಭರತಖಂಡದ ಪ್ರಾಚೀನ ಸಾಹಿತ್ಯದಲ್ಲಿ ಅಪೂರ್ವವೇನೂ ಅಲ್ಲ" ಎಂದು ಹೇಳಿ, ಹಾಲನ ಗಾಥಾಸಪ್ತಶತಿಯ ಎರಡು ಪ್ರಾಕೃತ ಪದ್ಯಗಳನ್ನು ಉದಾಹರಿಸಿ, "ಬೇಡನು ಬಿಲ್ಲನ್ನು ಕೆತ್ತಿ ಬೀಳಿಸಿದ ತೆಳುಹೆರೆಗಳು ತನ್ನ 'ತರುಣಿಯಲ್ಲಿ ಅವನಿಗಿರುವ ಅಮಿತಾಸಕ್ತಿಯ ನಿದರ್ಶನವಾಗಿ, ಅವಳ ಸೌಭಾಗ್ಯಾತಿಶಯದ ಪ್ರತೀಕವಾಗಿ ಕವಿಯ ಕಣ್ಣಿಗೆ ತೋರುತ್ತವೆ" ಎಂಬ ಪ್ರಾಕೃತಪದ್ಯಗಳ ಬಾಹ್ಯ ಪ್ರಮಾಣದ ಬೆಂಬಲದಿಂದ ಪ್ರಸಕ್ತ ಪದ್ಯದ ಅರ್ಥ ವಿವರಣೆಗೆ ಪೋಷಕ ಸಾಮಗ್ರಿಯನ್ನು ತೀ.ನಂ.ಶ್ರೀ. ಮುಂದಿಡುತ್ತಾರೆ.

ನನಗೇ ಅರಿವಾಗಿದೆ. ಆದರೂ, ತಿಳಿದಮಟ್ಟಿಗೆ ನೇರವಾದ ದಾರಿಯಲ್ಲಿ ನಡೆದು ಹರಿಹರನ ಮೂಲ ಪಾಠಕ್ಕೆ ಆದಷ್ಟು ಹತ್ತಿರ ಸೇರಲು ಇಲ್ಲಿ ಪ್ರಯತ್ನಿಸಿದ್ದೇನೆ. ವಿಷಯ, ಭಾಷೆ ಮೊದಲಾದವುಗಳ ದೃಷ್ಟಿಯಿಂದ ಗಮನಾರ್ಹವಾದ ಪಾಠಾಂತರಗಳನ್ನು ಆದಷ್ಟು ಸಮಗ್ರವಾಗಿ ಕೊಟ್ಟಿದ್ದೇನೆ. ಇದರಿಂದ ಪುಸ್ತಕಕ್ಕೆ ಹೊರೆಯಾದರೂ ಚಿಂತೆಯಿಲ್ಲ; ಗ್ರಂಥ ವ್ಯಾಸಂಗ ಮಾಡುವವರಿಗೆ ಪ್ರಯೋಜನ ಹೆಚ್ಚಾಗಲೆಂದು ನನ್ನ ಹಾರೈಕೆ.

'ಈ ಸಂಸ್ಕರಣಕ್ಕಾಗಿ ಉಪಯೋಗಿಸಿಕೊಂಡಿರುವ ಮಾತೃಕೆಗಳ ಹೆಚ್ಚಿನ ಪರಿಚಯ, ಪಾಠನಿರ್ಣಯದಲ್ಲಿ ಅನುಸರಿಸುವ ನಿಯಮಗಳು, ಅಲ್ಲಿನ ಸಮಸ್ಯೆಗಳು, ಕಾವ್ಯ ವಿಮರ್ಶೆ, ತಮಿಳು, ತೆಲುಗು, ಸಂಸ್ಕೃತ ಗ್ರಂಥಗಳಲ್ಲಿ ದೊರೆಯುವ ಸುಂದರ ಮೂರ್ತಿಯ ವೃತ್ತಾಂತಗಳಿಗೂ ಹರಿಹರನ ನಿರೂಪಣೆಗೂ ಇರುವ ಸಾಮ್ಯವೈಷಮ್ಯಗಳು, ಕನ್ನಡದಲ್ಲಿ ಸೌಂದರ ಪುರಾಣಗಳನ್ನು ರಚಿಸಿರುವ ಕವಿಗಳ ಮೇಲೆ ಹರಿಹರನ ಪ್ರಭಾವ–ಈ ಮೊದಲಾದ ವಿಷಯಗಳನ್ನೊಳಗೊಂಡ ಸವಿಸ್ತಾರವಾದ ಪೀಠಿಕೆಯನ್ನೂ ಟಿಪ್ಪಣಿ ಶಬ್ದಕೋಶಗಳನ್ನೂ ಮೂಲ ಪಾಠದೊಡನೆ ಒಂದೇ ಸಂಪುಟದಲ್ಲಿ ಕೊಡಬೇಕೆಂಬ ಉದ್ದೇಶ ಮೊದಲಿಗೆ ಇತ್ತು.... ಆದಷ್ಟು ಬೇಗ ಎರಡನೆಯ ಸಂಪುಟವನ್ನೂ ಹೊರಕ್ಕೆ ತರುವ ಉದ್ದೇಶವಿದೆ.'

ಈ ಉದ್ದೇಶ ನೆರವೇರಿದ್ದರೆ, ಗ್ರಂಥಸಂಪಾದನಾಕಾರ್ಯಕ್ಕೆ ಸಂಬಂಧಪಟ್ಟಂತೆ ಈಗಿಗಿಂತ ಉತ್ತಮವಾದ ಮಾದರಿ ನಮ್ಮ ಮುಂದೆ ಇರುತ್ತಿದ್ದಿತು. ಹಾಗೆ ಆಗದಿದ್ದುದು ಈ ಕ್ಷೇತ್ರಕ್ಕೆ ಒದಗಿದ ದೊಡ್ಡ ನಷ್ಟ.

ಈ ಮೇಲ್ಕಂಡ ಉದ್ಧರಣದಿಂದ, 'ಎನಿತ್ತೆನಿತ್ತು....' ಪದ್ಯದ ಪಾಠ ವಿಮರ್ಶೆಯ ವೇಳೆಗೆ ಆ ಶಾಸ್ತ್ರದಲ್ಲಿ ತೀ.ನಂ.ಶ್ರೀ. ಯವರಿಗೆ ಯಥೇಷ್ಟವಾದ ಜ್ಞಾನವೂ ಕಾರ್ಯಾನುಭವವೂ ಬಹುಮಟ್ಟಿಗೆ ಪೂರ್ಣಪ್ರಮಾಣದಲ್ಲಿ ಸ್ವಾಧೀನವಾಗಿದ್ದುವು ಎಂದು ಸ್ಪಷ್ಟವಾಗುತ್ತದೆ. ಈ ಪದ್ಯದ ಪಾಠವಿಮರ್ಶೆಯಲ್ಲಿಯೂ ಅವು ಚೆನ್ನಾಗಿ ವ್ಯಕ್ತಪಟ್ಟಿವೆ.

"ಶಬ್ದಮಣಿದರ್ಪಣದಲ್ಲಿ ಕೇಶಿರಾಜನು ಹಲವು ಪದ್ಯಗಳನ್ನೂ–ತುಣುಕುಗಳನ್ನೂ ಉದಾಹರಿಸಿರುವನಷ್ಟೆ. ೧೧೮ನೆಯ ಸೂತ್ರದ ಕೆಳಗೆ ಬಂದಿರುವ ಒಂದು ಪದ್ಯವು ಅನೇಕ ಕಾರಣಗಳಿಂದ ಗಮನವನ್ನು ಸೆಳೆಯುತ್ತದೆ. ಸಾಹಿತ್ಯ ಪರಿಷತ್ತಿನ ಮುದ್ರಣದಲ್ಲಿ (ಪು.೧೬೩) ಅದು ಹೀಗಿದೆ:

ಮೊದಲನೆಯ ಪಟ್ಟಿಯ 'ಪಾಠಭೇದಗಳ ಸಂತೆ'ಯಲ್ಲಿ ಅವರು 'ಒತ್ತಿ' (ನೊತ್ತಿ) ಎಂಬ ಪಾಠವನ್ನು ಕೊಂಡದ್ದಕ್ಕೆ ಅವರು ಇತ್ತಿರುವ ವಾದ ಬೆಲೆಯುಳ್ಳದ್ದಾದ್ದರಿಂದ, ಅದರ ಪೂರ್ಣ ಪಾಠವನ್ನು ಇಲ್ಲಿ ಎತ್ತಿಕೊಡುವ ಮನಸ್ಸಾಗುತ್ತದೆ. ಅಲ್ಲದೆ, ಈ ಸಂಬಂಧದಲ್ಲಿ ಎದ್ದಿರುವ ವಾದವಿವಾದಗಳ ಪರಿಶೀಲನೆಗೂ ಅದು ಅಗತ್ಯ. ಅವರ ವಾದ:

"ಮೊದಲನೆಯ ಪಟ್ಟಿಯಲ್ಲಿ, ಎಲ್ಲ ಪದಗಳಿಗೂ 'ಅದನ್' ಎಂಬ ಹಿಂದಿನ ಪದದ ಅಂತ್ಯದ ನಕಾರವು ಅಂಟಿಕೊಂಡಿದೆಯಷ್ಟೆ. ಅದನ್ನು ತೆಗೆದರೆ ನಿಲ್ಲುವವು: ಅಂತು (ಅನ್ತು)–ಅಂತೆ–ಎಂತು–ಎತ್ತು–ಎಂತೆ–ಒತ್ತಿ–ಏಕೆ. ಈ ಪಾಠಭೇದಗಳ ಸಂತೆಯಲ್ಲಿ ಯಾವುದು ಸರಿ? 'ಏಕೆ' ಎಂಬುದನ್ನು ಬಿಟ್ಟರೆ, ಮಿಕ್ಕವುಗಳಿಗೆಲ್ಲ ರೂಪದಲ್ಲಿ ಅಲ್ಪಭೇದ ಮಾತ್ರ; ಯಾವುದೊಂದನ್ನಾದರೂ ಮೂಲ ರೂಪವೆಂದು ಅಂಗೀಕರಿಸಿ, ಉಳಿದವು ಅದರ 'ಅಪಪಾಠ'ಗಳೆಂದು ಹೆಚ್ಚು ಶ್ರಮವಿಲ್ಲದೆ ವಾದ ಮಾಡಬಹುದು. ಆದಕಾರಣ, ಗ್ರಂಥ ಸಂಪಾದನಶಾಸ್ತ್ರದ ನಿಯಮವೊಂದನ್ನು ಇಲ್ಲಿಗೆ ಅನ್ವಯಿಸಲು ಅವಕಾಶ ಕಡಿಮೆ.[೬] ಹೆಚ್ಚು ಪ್ರಾಮಾಣಿಕವಾದ ಮಾತೃಕೆಯ ಅಥವಾ ಮಾತೃಕೆಗಳ ಗುಂಪಿನ ಪಾಠವನ್ನು ಸ್ವೀಕರಿಸೋಣ ಎನ್ನುವ ಹಾಗೂ ಇಲ್ಲ. ಶಬ್ದಮಣಿದರ್ಪಣವೇ ಮೊದಲಾದ ಈಚಿನ ಕೃತಿಗಳನ್ನು ಬಿಟ್ಟರೂ ಕಾವ್ಯಾವಲೋಕನ ಭಾಷಾಭೂಷಣಗಳ ಕೈಬರೆಹದ ಮಾತೃಕೆಗಳಿಗೇ ಏಕಕಂಠತೆಯಿಲ್ಲ.[೭] ಅಲ್ಲದೆ, ಕಾಲದ ದೃಷ್ಟಿಯಿಂದ ಇವಕ್ಕೂ ಮೂಲ ಪದ್ಯಕ್ಕೂ ಶತಮಾನಗಳ ಅಂತರವುಂಟು. ಆದಕಾರಣ, ಅರ್ಥಸಾಮಂಜಸ್ಯವನ್ನೇ ಮುಖ್ಯಾಧಾರವಾಗಿಟ್ಟು ಕೊಂಡು ಮೂಲಪಾಠವನ್ನು ನಿರ್ಣಯಿಸಬೇಕಾಗಿದೆ."

ಇಲ್ಲಿ, ತೀ.ನಂ.ಶ್ರೀ. ಯವರು ಪಾಠವಿಮರ್ಶಾಶಾಸ್ತ್ರದ ಒಂದು ನಿಯಮವನ್ನು ರೂಪಿಸಬೇಕೆಂಬ ಉದ್ದೇಶವನ್ನು ಹೊಂದಿರದಿದ್ದರೂ, ಕೆಲವು ಸಂದರ್ಭಗಳಲ್ಲಿ **– ಪಾಠ ಭೇಧಗಳ ಒಂದು 'ಸಂತೆ'ಯನ್ನೇ ಎದುರಿಸಬೇಕಾದಂಥ ಸಂದರ್ಭದಲ್ಲಿ– ಅನಿವಾರ್ಯವಾಗಿ, ಅರ್ಥಸಾಮಂಜಸ್ಯವನ್ನೇ ಮುಖ್ಯಾಧಾರವಾಗಿ ಇಟ್ಟುಕೊಂಡು ಮೂಲಪಾಠವನ್ನು ನಿರ್ಣಯಿಸಬೇಕಾಗುತ್ತದೆ** ಎಂಬ ನಿಯಮ ರೂಪಗೊಂಡಿದೆ ಎಂದು ಹೇಳಬಹುದು. ಎಂದರೆ, ಊಹಾತ್ಮಕಪರಿಷ್ಕರಣಕ್ಕೆ ಸಂವಾದಿಯಾಗಿ ನಿಲ್ಲುತ್ತದೆ ಈ ನಿಯಮ.

ಇನ್ನು, ಅರ್ಥಸಾಮಂಜಸ್ಯವನ್ನು ಆಧಾರವಾಗಿಟ್ಟುಕೊಂಡು ಪದ್ಯದ ನಾಲ್ಕನೆಯ ಪಾದವನ್ನು ತೀ.ನಂ.ಶ್ರೀ. ಹೇಗೆ ಪರಿಷ್ಕರಿಸಿದ್ದಾರೆ ಎಂಬುದನ್ನು ಪರಿಶೀಲಿಸಬಹುದು.

ಅನಂತರ, "ಪದ್ಯದ ಪಾಠಶೋಧನೆಗೆ ಗಮನ" ಕೊಟ್ಟು, "ಇದಕ್ಕಾಗಿ ಉಪಯೋಗಿಸಿಕೊಂಡಿರುವ ಆಕರಗಳನ್ನು" ವಿವರಿಸಿದ್ದಾರೆ. ಆ ವಿವರಣೆ ನಮಗೆ ಅಪ್ರಸಕ್ತ. ಒಟ್ಟು ಹದಿಮೂರು ಆಕರಗಳನ್ನು ಪರಿಶೀಲಿಸಿದ್ದಾರೆ ಎಂಬುದನ್ನು ಗಮನಿಸಿದರೆ ಸಾಕು. "ಪದ್ಯದ ಮೊದಲ ಮೂರು ಪಾದಗಳಲ್ಲಿ ಲೇಖಕರ ಪ್ರಮಾದಗಳೆಂದೋ ಅಚ್ಚಿನ ತಪ್ಪುಗಳೆಂದೋ ನಿಸ್ಸಂದೇಹವಾಗಿ ತೋರುವ ಎರಡು ಮೂರು ಪಾಠಾಂತರಗಳನ್ನು ಇಲ್ಲಿ ... ಉಲ್ಲೇಖಿಸುವುದೂ ಅನಾವಶ್ಯಕ" ಎಂದು ಹೇಳಿ ಅವನ್ನು ಕೈಬಿಡಬಹುದೆಂದು ಅವರೇ ಸೂಚಿಸಿರುವುದರಿಂದ, ಆ ಬಗೆಗೆ ನಾವು ತಲೆಕೆಡಿಸಿಕೊಳ್ಳಬೇಕಾಗಿಲ್ಲ. "ನಿಜವಾದ ಕ್ಲೇಶವಿರುವುದು ನಾಲ್ಕನೆಯ ಪಾದದಲ್ಲಿ. ಅಲ್ಲಿ ದೊರೆಯುವ ಪಾಠವೈಪುಲ್ಯ ಬೆರಗು ತರುವಂಥದು":

'ತನತ್ತು ಬಿಲ್ಲಾನದ**ನಂತೆ ಕೀಸುವಂ**."

ಪಾಠಾಂತರಗಳು–

(i)–**ನಂತೆ**: ನನ್ತು: ನಂತು: ನಂತೆ: ನೆಂತು: ನೆಂತೆ;
ನೆತ್ತು; ನೆತ್ತೆ; ನೊತ್ತಿ; ನೇಕೆ.

(ii)–**ಕೀಸುವಂ**: ಕೀಸುಗುಂ; ಕೀಸುವಂ; ಕೆತ್ತುಗುಂ; ಕೆತ್ತುವಂ

ಈ ಪಾಠಾಂತರಗಳ ಪಟ್ಟಿಯಲ್ಲಿ ಎರಡನೆಯದನ್ನು ಮೊದಲು ತೆಗೆದುಕೊಂಡು, 'ಕೀಸುಗುಂ' ಎಂಬ (ಕಾವ್ಯಾವಲೋಕನ ಹಾಗೂ ಭಾಷಾ ಭೂಷಣಗಳ) ಪಾಠವನ್ನು ಸ್ವೀಕರಿಸಿರುವುದಕ್ಕೆ, ಅವರು ಕೊಡುವ ಸಮರ್ಥನೆ ಹೀಗಿದೆ:

'"ಕೀಸು", "ಕೆತ್ತು" ಈ ಎರಡು ಧಾತುಗಳಲ್ಲಿ ಮೂಲ ಪಾಠಕ್ಕೆ ಸೇರಿದ್ದು ಯಾವುದೆಂದು ನಿರ್ಣಯಿಸುವುದು ಸುಲಭ. "ಕೀಸು" ಎಂದರೆ "ತೆಳ್ಳಗೆ ಮಾಡು, ಹೆರೆ" ಎಂದು ಅರ್ಥ. ("ಕೀಸು"= ಕೃಶೀಕರಣೇ – ಶಬ್ದಮಣಿದರ್ಪಣ, ಧಾತು ಪಾಠ). ಈ ಧಾತುವಿನ ಪ್ರಾಚುರ್ಯ ಕಡಿಮೆಯಾದಾಗ, ಇದಕ್ಕೆ ಬಲುಮಟ್ಟಿಗೆ ಇಂದಿಗೂ ಬಳಕೆಯಲ್ಲಿರುವ "ಕೆತ್ತು" ಎಂಬುದು ಇದರ ಸ್ಥಾನವನ್ನು ಒಂದೆರಡು ಮಾತೃಕೆಗಳಲ್ಲಿ ಆಕ್ರಮಿಸಿದಂತೆ ತೋರುತ್ತದೆ[೫] ಇನ್ನು "ಕೀಸುಗುಂ', "ಕೀಸುವಂ"– ಎಂಬೆರಡಕ್ಕೂ ಒಂದೇ ಅರ್ಥವಾದರೂ, ಪದ್ಯದ ಎರಡನೆಯ ಪಾದದಲ್ಲಿರುವ "ಬಳೆಗುಂ" ಎಂಬುದಕ್ಕೆ ಸಮತೂಕವಾಗಿ ನಿಲ್ಲುವ "ಕೀಸುಗುಂ" ಎಂಬುದೇ ಪ್ರಾಕ್ತನವೆಂದು ಊಹಿಸಬಹುದು.'

(ಈ ಪದ್ಯ ಅನುಪಲಬ್ಧವಾದ ಗುಣವರ್ಮನ ಹರಿವಂಶ ಕಾವ್ಯದ್ದಿರಬಹುದು ಎಂಬ ಸಂದೇಹ ಸೂಚನೆಯೊಂದಿಗೆ ತೀ.ನಂ.ಶ್ರೀ.ಯವರ ಈ ವಿಚಾರಪೂರ್ಣವಾದ, ಸೂಕ್ಷ್ಮ ಸಂಶೋಧನ ದೃಷ್ಟಿಯ ಲೇಖನ ಮುಗಿದಿದೆ.)

'ಸಮಾಲೋಕನ' ಪ್ರಕಟವಾದ ೧೦ ವರ್ಷಗಳಾದ ಮೇಲೆ ಎಚ್.ದೇವೀರಪ್ಪನವರು ತೀ.ನಂ.ಶ್ರೀ. ಯವರ ಪಾಠನಿರ್ಣಯವನ್ನು ಪ್ರಶ್ನಿಸಿ, ಅವರ ವಾದಗಳನ್ನು ಅಲ್ಲಗಳೆದು, ಪದ್ಯದ ನಾಲ್ಕನೆಯ ಪಾದದಲ್ಲಿ (೧) 'ಬಿಲ್ಲಾನದನಂತೆ', (೨)'ಕೀಸುವಂ' ಎಂಬ ಪಾಠಗಳೇ ಸರಿಯಾದ ಮೂಲಪಾಠ ಎಂದು ಪ್ರತಿವಾದವನ್ನು ಹೂಡಿದ್ದಾರೆ.[೮]

ದೇವೀರಪ್ಪನವರ ಪ್ರತಿವಾದದಲ್ಲಿ ಹುರುಳಿಲ್ಲ; ಅದರಲ್ಲಿ ವ್ಯಕ್ತಪಟ್ಟಿರುವ ಕಾಲ್ಪನಿಕತೆ, ರಸಿಕತೆಗಳೇನೋ ಮೆಚ್ಚುವಂಥವೆ. ತೀ.ನಂ.ಶ್ರೀ.ಯವರ ಎರಡನೆಯ ಪದದ ತಿದ್ದುಪಾಟಿನ ಬಗೆಗೆ ದೇವೀರಪ್ಪನವರು ವ್ಯಾಕರಣದೃಷ್ಟಿಯಿಂದ ಮಾಡಿರುವ ಆಕ್ಷೇಪ ಅವರಿಗೇ ಹಿಂಮರಳುತ್ತದೆ.

ದೇವೀರಪ್ಪನವರ ಪ್ರತಿವಾದವನ್ನು ಟೀಕಿಸಿ ಸಿ.ಪಿ.ಕೃಷ್ಣಕುಮಾರರು ತೀ.ನಂ.ಶ್ರೀ.ಯವರ ನಿಲುವನ್ನು ಸಮರ್ಥಿಸಿದ್ದಾರೆ.[೯] ಸಿ.ಪಿ.ಕೆ.ಯವರ ಸಮರ್ಥನೆಯ ಮಾತುಗಳನ್ನು ಪರಿಚಯ ಮಾಡಿಕೊಟ್ಟರೆ, ದೇವೀರಪ್ಪನವರ ವಾದದ ಸಾರಾಂಶವನ್ನೂ ಪರಿಚಯ ಮಾಡಿಕೊಟ್ಟಂತಾಗುವುದರಿಂದ ಆ ಮಾತುಗಳನ್ನು ಮೊದಲು ಗಮನಿಸಬಹುದು:

"ಇವರು ಕೊಟ್ಟಿರುವ ವಿವರಣೆಯೇ ಕವಿಯ ಇಂಗಿತ ಎನ್ನುವುದಕ್ಕೆ ಏನು ಆಧಾರ?" ಎಂಬ ದೇವೀರಪ್ಪನವರ ಪ್ರಶ್ನೆಯನ್ನು ಸಿ.ಪಿ.ಕೆ. ಅವರು ಉಲ್ಲೇಖಿಸಿ; "ಅವುಗಳ ಮಾಟವನ್ನು ದಿನದಿನವೂ ನೋಡುತ್ತಲಿದ್ದ ಕಿರಾತ ಬಿಲ್ಲುಗಾರನು ಆ ಘನಸ್ತನಗಳನ್ನೇ ಮಾದರಿಯಾಗಿಟ್ಟುಕೊಂಡು ಅವುಗಳ ರೂಪನ್ನೇ ಹೋಲುವಂತೆ ತನ್ನ ಬಿಲ್ಲನ್ನು ಮಾಡುತ್ತಿದ್ದನು. ಇಷ್ಟೇ ಆ ಪದ್ಯದ ಮಥಿತಾರ್ಥ" ಎಂಬ ಅವರ ತೀರ್ಮಾನವನ್ನು ಮುಂದಿಟ್ಟು; – "ಮುಗ್ಧಳಾದ ಶಬರ ಬಾಲಿಕೆಯ ಸಹಜ ಸೌಂದರ್ಯವನ್ನು ನೋಡಿ ವನೇಚರನೊಬ್ಬನು ಮೋಹಿಸಿದನೆಂಬುದಕ್ಕೆ ಪದ್ಯದಲ್ಲಿ ಯಾವ ಸೂಚನೆಯೂ ಇಲ್ಲ ಎಂಬುದು ಅವರ ಆಕ್ಷೇಪಣೆ. ಆ ವಿಷಯ ಧ್ವನಿತವಾಗುತ್ತದೆಯೆನ್ನುವುದೇ ಇಲ್ಲಿನ ಸ್ವಾರಸ್ಯವಲ್ಲವೇ? ಬೇಡನೊಬ್ಬ ಯವಳೋ ಒಬ್ಬ ಬಾಲಿಕೆಯನ್ನು ಮೋಹಿಸಿದನೆಂದಲ್ಲ: ಅವಳು ವಾಸ್ತವವಾಗಿ ಅವನ ಹೆಂಡತಿಯೇ; ಅವಳ ಕೂಟದಲ್ಲಿ ಅವನು ದುರ್ಬಲನಾಗುತ್ತಿದ್ದಾನೆ. ಇದನ್ನು ತೀ.ನಂ.ಶ್ರೀ.ಮನಗಾಣಿಸಿದ್ದಾರೆ; ಅವರು ಉದಾಹರಿಸಿರುವ ಎರಡು

ಮೊದಲ ಪಟ್ಟಿಯಲ್ಲಿನ ಪಾಠಾಂತರಗಳಲ್ಲಿ, 'ಎತ್ತು', 'ಎಂತೆ' ಎಂಬ ಪದಗಳನ್ನು ಅನ್ವಯಮಾಡಲಾಗದ್ದರಿಂದ ಅವು 'ಪ್ರಮಾದಜನ್ಯ' ಎಂದು ತೀರ್ಮಾನಿಸಿದ್ದಾರೆ. ಹಾಗೆಯೇ 'ಎಂತು', 'ಏಕೆ' ಎಂಬ ಪ್ರಶ್ನಾರ್ಥಕಗಳಿಗೂ ಸ್ಥಾನವಿಲ್ಲ. ಇನ್ನು ಉಳಿದ ಪದಗಳೆಂದರೆ, 'ಅಂತು', 'ಅಂತೆ', 'ಎತ್ತೆ', 'ಒತ್ತಿ'. "ಅನಿತ್ತನಿತ್ತಂ ವನದೊಳ್ ವನೇಚರಂ.... " ಎಂದು ಆಗಲೇ ಪರಿಮಾಣವಾಚಕವು ಬಂದಿರುವುದರಿಂದ, 'ಅಂತು' (ಅಥವಾ) 'ಅಂತೆ' ಕೇವಲ ಪಾದಪೂರಕಗಳಾಗಿ, ಅಪಾರ್ಥವಾಗುವ ಸಂಭವವನ್ನು ತಪ್ಪಿಸುವ ಸಲುವಾಗಿ, ಮಾತೃಕೆಗಳಲ್ಲಿ ಎಡೆ ಪಡೆದಿವೆ ಎಂದು ಎಣಿಸಿದ್ದಾರೆ. 'ಎತ್ತೆ' ಎಂಬ ಪದಕ್ಕೆ ಸಂಭಾವ್ಯತೆಯಿಲ್ಲದಿಲ್ಲ ಎಂದು ಹೇಳಿ, ಆ ಪದವನ್ನು ಸ್ವೀಕರಿಸಿದರೆ, ಬಿಲ್ಲನ್ನು ಎತ್ತುವುದಕ್ಕಾಗಿ ಅದನ್ನು ಬೇಡನು ಕೆತ್ತಬೇಕಾಯಿತು, ಎತ್ತುವುದಕ್ಕೇ ಆಗದವನಿಗೆ ಕೆತ್ತುವುದು ಹೇಗೆ ಸಾಧ್ಯ ಎಂಬ ಪ್ರಶ್ನೆ ಏಳುತ್ತದೆ, ಎಂದು ವಿವರಿಸಿ ಆ ಪದವನ್ನು ಕೈಬಿಡುತ್ತಾರೆ. ಅದನ್ನು ಕೈಬಿಡಲು ಇನ್ನೊಂದು ಕಾರಣ–"ಪದ್ಯದಲ್ಲಿ ಸೂಚ್ಯವಾಗಿರಬೇಕಾದ ಅಂಶವು ಇಲ್ಲಿ ವಾಚ್ಯವೇ ಆಗಿಬಿಟ್ಟು ಕವಿಗೆ ಇಲ್ಲಿ ಪರಮೋದ್ದೇಶವಾಗಿರುವ ಚಮತ್ಕಾರ ಕೆಲಮಟ್ಟಿಗಾದರೂ ಕಡಿಮೆಯಾಗುತ್ತದೆ" ಎನ್ನುವುದು. ಹೀಗೆ ವಿಚಾರಮಾಡಿ, ತೀ.ನಂ.ಶ್ರೀ.ಯವರು 'ಒತ್ತಿ' ಎಂಬ ಪದವನ್ನು ಅಯ್ಕೆ ಮಾಡುತ್ತಾರೆ. ತಮ್ಮ ಆಯ್ಕೆಯನ್ನು ಹೀಗೆ ಸಮರ್ಥಿಸುತ್ತಾರೆ: "ಇದನ್ನೆಲ್ಲ ಪರಿಭಾವಿಸಿದರೆ, 'ಒತ್ತಿ' ಎಂಬ ಪದವೇ ಇಲ್ಲಿಗೆ ಸಮುಚಿತವೆಂದು ಮನವರಿಕೆಯಾಗದಿರದು. '... ಅಷ್ಟಷ್ಟೂ ತನ್ನ ಆ ಬಿಲ್ಲನ್ನು (ಬಿಲ್ಲಾನ್ ಅದನ್) ಬೇಡನು [ಇನ್ನೂ ಇನ್ನೂ ತೆಳುವಾಗುವಂತೆ] ಒತ್ತಿ ಹೆರೆಯುವನು' – ಇಲ್ಲಿ 'ಒತ್ತಿ' ಎಂಬುದಕ್ಕೆ ಪದಪ್ರಯೋಜನ ಯಥೇಚ್ಛವಾಗಿ ಉಂಟಲ್ಲವೆ? ಕವಿಯ ಆಶಯ ಇಲ್ಲಿ ವ್ಯಂಗ್ಯವಾಗಿಯೇ ಉಳಿಯುವುದರಿಂದ ಪದ್ಯದ ಸೊಗಸು ಎಳ್ಳಷ್ಟೂ ಕುಗ್ಗುವುದಿಲ್ಲ.

ಅಂತೂ ಈ ವಿಚಾರದ ಫಲಿತಾಂಶವಾಗಿ ನಮ್ಮ ಪದ್ಯದ ಮೂಲಪಾಠವನ್ನು ಹೀಗೆ ನಿರ್ದೇಶಿಸಬಹುದು:

ಎನಿತ್ತೆನಿತ್ತಂಬುಜ ಪತ್ರ ನೇತ್ರೆಯಾ
ಘನಸ್ತಂಗಳ್ ಬಳೆಗುಂ ಕಿರಾತೆಯಾ।
ಅನಿತ್ತನಿತ್ತಂ ವನದೊಳ್ ವನೇಚರಂ
ತನತ್ತು ಬಿಲ್ಲಾನದ ನೊತ್ತಿಕೀಸುಗುಂ॥"

ಕೀಸಬೇಕಾದರೆ ಬಲವನ್ನೆಲ್ಲಾ ಬಿಡಬೇಕು. ದುರ್ಬಲನಾಗಿರುವವನು ಒತ್ತಲೂ ಅರ. ಸ್ವಲ್ಪಸ್ವಲ್ಪವಾಗಿ ಹೆರೆಯಲಾರ. ಹೆರೆಯುವುದಕ್ಕೆ ಎತ್ತಲೇಬೇಕು. ಅವನಿಗೀಗ ಎತ್ತುವಷ್ಟು ತ್ರಾಣವಿದೆ; ಬಗ್ಗಿಸುವಷ್ಟು ತ್ರಾಣವಿಲ್ಲ; ಆದ್ದರಿಂದ ಬಿಲ್ಲನ್ನು ಹೆರೆಯ ಬೇಕಾಗಿದೆ. ಹೀಗೆ ಅರ್ಥೈಸಿ, .... "ಬಿಲ್ಲಾನದನೆತ್ತಿ ಕೀಸುಗುಂ (ಅಥವಾ ಕೀಸುವಂ)" ಎಂದು ಇಟ್ಟುಕೊಳ್ಳುವುದು ಹೆಚ್ಚು ಸಮಂಜಸ.

ಪದ್ಯದ 'ಘನಸ್ತನ' ಎಂಬ ಪದದ ಅರ್ಥವನ್ನು ವ್ಯಾಖ್ಯಾನಿಸುತ್ತ ದೇವೀರಪ್ಪನವರು, ಬೇಡಿತಿ ಯೌವನಾವಸ್ಥೆಯಲ್ಲಿ ವರ್ಧಿಸುತ್ತಿರುವವಳು ಎಂಬ ತೀ.ನಂ.ಶ್ರೀ.ಯವರ ದೃಷ್ಟಿಯನ್ನು ಅಲ್ಲಗಳೆದು, "ಘನ ಎಂಬುದಕ್ಕೆ ಇಲ್ಲಿ ಗಟ್ಟಿ ಎಂದೇ ಹೇಳಬೇಕು. ಆ ಬಗೆಯ ಘನತೆ ಮೀಸಲಳಿಯದ ಮುಗುದೆಯರಿಗೆ ಮಾತ್ರ. ಪ್ರೌಢೆಯೋ ಪ್ರಗಲ್ಭೆಯೋ ಅಂತಹ ಸುಸ್ಪಷ್ಟ ಅವಿಚಲಿತ ರೇಖೆಗಳನ್ನು ತಳೆದಿರುವುದು ಅಸಂಭವನೀಯ" ಎಂಬ ತೀರ್ಪನ್ನು ಇತ್ತಿದ್ದಾರೆ. ದೇವೀರಪ್ಪನವರು ರಸಶಾಸ್ತ್ರದ ಪಾರಿಭಾಷಿಕ ಪದಗಳನ್ನು ಉಪಯೋಗಿಸಿರುವರೇ ಹೊರತು, ಅವುಗಳ ಅರ್ಥವ್ಯಾಪ್ತಿಯೆಷ್ಟು ಎಂಬುದನ್ನು ನೆನಹಿಗೆ ತಂದುಕೊಂಡಂತೆ ಕಾಣುವುದಿಲ್ಲ. ಮುಗ್ಧೆ, ಮಧ್ಯೆ (ಪ್ರೌಢೆ), ಪ್ರಗಲ್ಭೆ ಇವರ ಬಗೆಗೆ 'ರಸರತ್ನಾಕರ'ದ ಸೂತ್ರ (೮೭):

ಕ್ರಮದಿಂ ದ್ವಾದಶವರ್ಷ
ಪ್ರಮಾಣದೊಳ್ ಮುಗ್ದೆ, ಮಧ್ಯೆ ತದ್ದ್ವಿಗುಣದೊಳಾ
ಸಮಕಟ್ಟಿಂ, ತದ್ದ್ವಿಗುಣ
ಪ್ರಮಿತಾಬ್ದದೊಳಾ ಪ್ರಗಲ್ಭೆಯೆನೆ ಪೆಸರ್ವಡೆಗುಂ

ಅಲ್ಲದೆ, 'ಘನ' ಎಂಬ ಮಾತಿನ ಅರ್ಥವನ್ನೂ ಸಂದರ್ಭಕ್ಕೆ ತಕ್ಕಂತೆ ಅವರು ಗ್ರಹಿಸಿಲ್ಲ. ಇಲ್ಲಿ, 'ಘನ' ಎಂದರೆ 'ತುಂಬಿ ಬೆಳೆದ', [Fully developed (as breasts): Apte] ಎಂದು ಅರ್ಥಮಾಡಬೇಕು.

ಯಾವ ಪ್ರಾಯದಲ್ಲಿ ಯಾರಿಗೆ 'ಘನಸ್ತನ' ಎಂಬುದನ್ನು ಬಲ್ಲವರು ಸುಲಭವಾಗಿ ಊಹಿಸಿಕೊಳ್ಳಬಹುದು ಎಂದಿಷ್ಟೇ ಹೇಳಿ, 'ಕೀಸುಗುಂ' ಪಾಠದ ಸಮರ್ಪಕತೆಯ ಬಗೆಗೆ ಪರಿಶೀಲಿಸೋಣ. ದೇವೀರಪ್ಪನವರ ಟೀಕೆ ಹೀಗೆ:

"'ಕುಂ', 'ಗುಂ' ಎಂಬುವು ಸಾಧಾರಣವಾಗಿ ನಪುಂಸಕ ಲಿಂಗವನ್ನು ಸೂಚಿಸುವುದರಿಂದಲೂ 'ಕೀಸುವಂ' ಇಲ್ಲಿ ಪುಲ್ಲಿಂಗ ಸೂಚಕವಾಗಿದ್ದು

ಪ್ರಾಕೃತ ಪದ್ಯಗಳು ಇದಕ್ಕೆ ಪೋಷಕವಾಗಿವೆ" ಎಂಬ ಸಮರ್ಥನೆಯನ್ನು ನುಡಿದು; ತೀ.ನಂ.ಶ್ರೀ.ಯವರ ವಾದಕ್ಕೆ ಪೋಷಕವಾಗಿ ತಮ್ಮ ಗಮನಕ್ಕೆ ಬಂದ 'ಗಾಥಾಸಪ್ತಶತಿ'ಯ ಇನ್ನೆರಡು ಪ್ರಾಕೃತ ಪದ್ಯಗಳನ್ನು (೭–೬೩, ೭–೩೦) ಎಸ್.ವಿ.ಪರಮೇಶ್ವರ ಭಟ್ಟರ ಅನುವಾದದೊಂದಿಗೆ ಉದ್ಧರಿಸಿದ್ದಾರೆ.[೧೦] ತೀ.ನಂ.ಶ್ರೀ.ಯವರು ಆಧಾರ ಸಹಿತವಾಗಿ ಊಹಿಸಿರುವ ವನೇಚರನ ವಿಷಯಾಸಕ್ತಿಯನ್ನು 'ಅತಿರತಿ' ಎಂಬ ಶೃಂಗಾರ ಶಾಸ್ತ್ರದ ಪರಿಭಾಷೆಯಿಂದ ಸಿ.ಪಿ.ಕೆ. ನಿರ್ದೇಶಿಸಿರುವುದು ಸರಿಯೆಂದು ಕಾಣುತ್ತದೆ.[೧೦a] ಅವರು ಹೇಳುವಂತೆ, "ಪದ್ಯದಲ್ಲಿರುವುದು ಶೃಂಗಾರ ಪ್ರಸಕ್ತಿಯೇ ಹೊರತು ಸೌಂದರ್ಯಾಭಿಜ್ಞತೆಯಲ್ಲ."

'ಕಾವ್ಯಸ್ವಾರಸ್ಯ' ಎಂಬ ತಮ್ಮ ಇತ್ತೀಚಿನ ಪುಸ್ತಕವೊಂದರಲ್ಲಿ ಡಾ॥ ಡಿ.ವಿ.ಗುಂಡಪ್ಪನವರು ಈ ಪದ್ಯದ ಬಗೆಗೆ ಬರೆಯುತ್ತ 'ಕನ್ನಡದಲ್ಲಿ ವಿದ್ವಾಂಸರ ಚರ್ಚೆಗೆ ಈ ಪದ್ಯ ವಿಷಯವಾಗಿದೆ' ಎಂದು ಸಂದರ್ಭವನ್ನು ವಿವರಿಸಿ, – "ಈ ಪದ್ಯದಲ್ಲಿ 'ಎನಿತ್ತೆನಿತ್ತು, ಅನಿತ್ತನಿತ್ತು' ಮುಂತಾದ ಪದಗಳ ಪುನಃಪೌನ್ಯವು ಕಿವಿಗೆ ಪ್ರಿಯವಾಗುತ್ತದೆ. ಕೆಲವು ಪದಗಳ ಶೃಂಗಾರಸೂಚಕ ಸ್ವಭಾವವು ಸ್ವಲ್ಪಮಟ್ಟಿಗೆ ಮನಸ್ಸನ್ನು ಕೆರಳಿಸುವವಾಗಿರುತ್ತವೆ. ಆದರೆ ಒಟ್ಟಿನಲ್ಲಿ ರಸಪುಷ್ಟಿ ಕಡಿಮೆ" ಎಂದು ಅಭಿಪ್ರಾಯಪಟ್ಟು, ಪದ್ಯದ ಶೃಂಗಾರಭಾವದ ಕಡೆಗೇ ನಮ್ಮ ಗಮನ ಸೆಳೆದಿದ್ದಾರೆ.[೧೧] ಪದ್ಯದ ಶೃಂಗಾರ ಪ್ರಸಕ್ತಿಯ ಬಗೆಗೆ ಚರ್ಚೆಗೆ ಅವಕಾಶವಿಲ್ಲವೆಂದೇ ಹೇಳಬಹುದು.

ಆದರೆ, 'ಒತ್ತಿ', 'ಎತ್ತೆ'ಎಂಬೀ ಎರಡು ಪದಗಳಲ್ಲಿ ಯಾವುದು ಹೆಚ್ಚು 'ಸಮಂಜಸ' ಎಂಬುದನ್ನು ಪುನಃಪರಿಶೀಲನೆ ಮಾಡಲು ಅವಕಾಶವಿದೆ. "'ಇತ್ತೆ' ಎಂಬುದಕ್ಕೇನೋ ಸಂಭಾವ್ಯತೆಯಿಲ್ಲದಿಲ್ಲ' ಎಂದು ತೀ.ನಂ.ಶ್ರೀ.ಯವರೇ ಹೇಳಿದ್ದಾರೆ. ನನ್ನ ಅಭಿಪ್ರಾಯದಲ್ಲಿ, ಮೂಲಪಾಠ 'ಎತ್ತಿ' ಎಂದು ಇದ್ದುದು, ಲಿಪಿಕಾರರ ಕೈಯಲ್ಲಿ 'ಎತ್ತೆ' (–ನೆತ್ತಿ.ನೆತ್ತೆ: ಹಸ್ತಪ್ರತಿಗಳಲ್ಲಿ ಇತ್ವ ಎತ್ವಗಳಿಗೆ ಭ್ರಾಂತಿಯಾಗುವ ಸಂಭವವುಂಟು) ಎಂದು ಒಂದು ಪ್ರತಿಯಲ್ಲೂ, 'ಒತ್ತಿ' ಎಂದು ಮತ್ತೊಂದು ಪ್ರತಿಯಲ್ಲೂ (–ನತ್ತಿ.ನೊತ್ತಿ: 'ನೆ'ಕಾರಕ್ಕೆ ಲೇಖನಾವಸರದಲ್ಲಿ ಅನುದ್ದಿಷ್ಟವಾಗಿಯೋ ಉದ್ದೇಶಪೂರ್ವಕವಾಗಿಯೋ ಒತ್ವ ಬಂದು ಕೂಡಿಕೊಳ್ಳುವ ಸಂಭವವುಂಟು) ಮಾರ್ಪಾಟಾಗಿದೆಯೆಂದು ನನ್ನ **ಊಹೆ** (ದೇವೀರಪ್ಪನವರು ಆಕ್ಷೇಪಿಸುವಂತೆ, ಒಂದೇ ಪ್ರತಿಯಲ್ಲಿದ್ದ ಮಾತ್ರದಿಂದ ಪಾಠ ವರ್ಜ್ಯವೆನಿಸುವುದಿಲ್ಲ. ಸಂದರ್ಭಾನುಸಾರವಾಗಿ, ಪಾಠನಿರ್ಣಯದಲ್ಲಿ ಪಾಠಗಳ ಸಂಖ್ಯಾಬಲಕ್ಕಿಂತ ಔಚಿತ್ಯಕ್ಕೆ ಹೆಚ್ಚಿನ ಪ್ರಾಮುಖ್ಯ ಕೊಡಬೇಕು.) ಬಿಲ್ಲನ್ನು ಕೀಸು (=ಹೆರೆ)ವುದೇಕೆ? ದುರ್ಬಲನಾಗಿರುವ ತಾನು ಅದನ್ನು ಎತ್ತಿ ಬಗ್ಗಿಸಲು ಸಾಧ್ಯವಾಗಲೆಂದು. ಒತ್ತಿ

ತಿದ್ದುಪಾಟನ್ನು ಸೂಚಿಸುವುದು ತೀ.ನಂ.ಶ್ರೀ.ಯವರ ಪದ್ಧತಿ. ಅವರ ಪಾಠಪರಿಷ್ಕರಣ ಪ್ರಜ್ಞೆ ಹೇಗೆ ಸದಾ ಜಾಗೃತವಾಗಿತ್ತು ಎಂಬುದಕ್ಕೆ ಇದು ಸಾಕ್ಷಿ. ಅಗತ್ಯವಾದ ಕಡೆ ಮಾತ್ರ ಅವರ ಪರಿಷ್ಕರಣದ ಬಗೆಗೆ ನನ್ನ ಅಭಿಪ್ರಾಯವನ್ನು ತಿಳಿಸಿ, ನನ್ನ ಗಮನಕ್ಕೆ ಬಂದ ಕೆಲವು ನಿದರ್ಶನಗಳಲ್ಲಿ ಒಂದೆರಡನ್ನು ಮಾತ್ರ ಇಲ್ಲಿ ಕೊಡುತ್ತೇನೆ.[೧೩]

(೧) ದೊರೆಕೊಂಡತ್ತು ಭವದ್ವಯಾಂತರದೊಳೀಗಳ್ ಕಾಣ್ಕೆಕಂಡೇನೊ ಚೆ–
ಚ್ಚರಮೆಳ್ದಿಪ್ಪುವ ಕುಳ್ಳಿರಲ್ ಕುಡುವ ನಿನ್ನೀ ಸೇದೆವಟ್ಟಂಗಮಂ
ಕರದಿಂ(ದೊ)ತ್ತಿ ಬಳಿಲ್ಕೆಯಂ ಕಳೆವುದರ್ಕಾಂ ನೋಂತೆನಿಲ್ಲಣ್ಣ...
(ಕಾದಂಬರೀ ಸಂಗ್ರಹ, viii, ೧೪)

ಸಂಗ್ರಹದಲ್ಲಿ 'ಕರದಿಂದೆತ್ತಿ' ಎಂಬ ಪಾಠವಿದೆ. ತಿದ್ದುಪಾಟಿನ ಔಚಿತ್ಯವನ್ನು ವಿವರಿಸಬೇಕಾದ್ದಿಲ್ಲ. ಸ್ವಯಂಸ್ಪಷ್ಟ. (ಈಚೆಗೆ ಎನ್.ಅನಂತರಂಗಾಚಾರ್ ಅವರು ಸಂಪಾದಿಸಿರುವ 'ಕರ್ಣಾಟಕ ಕಾದಂಬರಿ'ಯಲ್ಲಿ ಈ ತಿದ್ದುಪಾಟಾದ ಪಾಠವೇ ಕಂಡು ಬರುತ್ತದೆ.)

(೨) ನೆನೆನೆನೆದು ಪೆಱರ ಮಾತುಗ–
ಳನೆ ನೆಗಟ್ದಿರೆ ಕೃತಿಯೊಳದು ವ[ಲಂ] ನಗದ ಗುಹಾ–
ಧ್ವನಿಯವೊಲನರ್ಥವಚನಂ
ತನಗಾಗಿಸಲಱೆಯನುಚಿತ ವಾಕ್ಚತುರತೆಯಂ
(ಕವಿರಾಜಮಾರ್ಗ, i–೧೪)

'ಕೃತಿಯೊಳದುವಲಂ' ಎಂದು ತೀ.ನಂ.ಶ್ರೀ.ಯವರು ಸೂಚಿಸಿರುವ ಪಾಠಪರಿಷ್ಕರಣಕ್ಕೆ ಪಾಠಾಂತರಗಳೂ ಉಂಟು. ಅವು ಹೀಗಿವೆ: (i)ಕೃತಿಯೊಳಿಡುವನಂ (ಮೈಸೂರು ಓ.ಲೈಬ್ರರಿಯ ನಂ.೧೨೫ ಹಸ್ತಪ್ರತಿಯ ಪಾಠ.). (ii)ಕೃತಿಯೊಳದುವ[ರಂ](ಮದರಾಸು ವಿಶ್ವವಿದ್ಯಾನಿಲಯದ ಮುದ್ರಿತ ಪ್ರತಿಯಲ್ಲಿನ ತಿದ್ದುಪಾಟಾದ ಪಾಠ). (iii)ಕೃತಿಯೊಳಿಡುವವಂ (ಕೆ.ಬಿ.ಪಾಠಕರು ಸಂಪಾದಿಸಿರುವ ಮುದ್ರಿತ ಪ್ರತಿಯ ಪಾಠ).

ನಾನು ಸಂಪಾದನೆ ಮಾಡಿರುವ ಕವಿರಾಜಮಾರ್ಗದ ಮುದ್ರಣದಲ್ಲಿ (೧೯೬೮)

ಸಾಧಾರಣವಾಗಿ ಎಲ್ಲ ಕೃತಿಗಳಲ್ಲಿಯೂ ಸಿಗುವುದರಿಂದಲೂ 'ಕೀಸುವಂ' ಅನ್ನೇ ಮೂಲಪಾಠವಾಗಿ ಅಂಗೀಕರಿಸಬೇಕಾಗುತ್ತದೆ."

'ಕೀಸುಗುಂ' ಪಾಠವನ್ನು ಏಕೆ ಪುರಸ್ಕರಿಸಬೇಕು ಎಂಬುದಕ್ಕೆ ತೀ.ನಂ.ಶ್ರೀ.ಯವರು ಸರಿಯಾದ ಕಾರಣವನ್ನು ಕೊಟ್ಟಿರುತ್ತಾರೆ. ವ್ಯಾಕರಣ ದೃಷ್ಟಿಯಿಂದ ದೇವೀರಪ್ಪನವರು ಎತ್ತಿರುವ ಆಕ್ಷೇಪ ನಿಲ್ಲತಕ್ಕದ್ದಲ್ಲ. ಇದಕ್ಕೆ ಉತ್ತರ ಶಬ್ದಮಣಿ ದರ್ಪಣದಲ್ಲಿಯೇ ಸಿಕ್ಕುತ್ತದೆ:

ಸವನಾಗಿ ಭೂತಳದೊಳ್ ಲಿಂ–
ಗವಚನದೊಳ್ ತಳ್ತು ವರ್ತಮಾನಭವಿಷ್ಯ –
ದ್ವ್ಯವಹೃತಿಗಳ ಗುಂ ಕುಂ ಸ–
ಸಲ್ವುವು ತಾವನ್ಯೈಕವಚನದೊಳ್ ನೆಲಸಿರ್ದುಂ ೧೨

ವೃತ್ತಿ – ಭೂತಕಾಲವೆನ್ನದೆ ಲಿಂಗತ್ರಯವೆನ್ನದೆ ವಚನತ್ರಯವೆನ್ನದೆ ವರ್ತಮಾನ ಭವಿಷ್ಯತ್ಕಾಲಂಗಳೊಳ್ ವರ್ತಿಸುವ ಗುಂ ಕುಂ ಎಂಬಿವು ಪ್ರಥಮ ಪುರುಷ– ದೇಕವಚನಕ್ಕಮಾದೇಶಮಪ್ಪುವು.

ಪ್ರಯೋಗಂ – ಸಸಿಯಂ ನೋಡಿ ತಳೋದರಿ
ಬಿಸುಸುಯ್ಗುಂ ಬಯ್ಗುಂ...
..... ಭೂವಳಯಾಧಿಪಂ ನುಡಿಗುಂ ಸ್ವಚಿತ್ತ ಗತಾರ್ಥಮಂ.
ಇಂದಿನ ದಿನದೊಳ್ ರಂಭೆ ಕೇಳಿಕುಂ ಪೆಕ್ಕಣಮಂ.

['ಹೆಣ್ಣುಮಕ್ಕಳ ಪದಗಳು' ಪುಸ್ತಕದ ವಿಚಾರವಾಗಿ ಬರೆಯುತ್ತ, ಕೆಲವು ಶಬ್ದಾರ್ಥಗಳನ್ನು ಬರೆದಿದೆಯಷ್ಟೆ ಅಲ್ಲಿ, ಬಳಕೆ ಮಾತಿನ 'ಉಂಗು' [>ಉಣ್ಗು(೦)] ಪ್ರಯೋಗವನ್ನೂ ಗಮನಿಸಬಹುದು.]

**ಸಾಂದರ್ಭಿಕ ಪಾಠಪರಿಷ್ಕರಣ: ಕೆಲವು ಉದಾಹರಣೆಗಳು –**

ಗ್ರಂಥ ಬರೆಯುವಾಗಲೋ ಲೇಖನ ರಚನಾವಸರದಲ್ಲೋ ತಾವು ವಿವರಿಸುತ್ತಿರುವ ಸಂದರ್ಭಕ್ಕೆ ಕೊಡುವ ಉದಾಹರಣ ಪದ್ಯದಲ್ಲಿ ಪಾಠದೋಷವಿದ್ದುದು ಕಂಡುಬಂದಲ್ಲಿ, ಅಗತ್ಯವಿರಲಿ ಇಲ್ಲದಿರಲಿ, ಅದಕ್ಕೆ ತಮ್ಮ

ಸೂಕ್ಷ್ಮದೃಷ್ಟಿಗೆ ಬಾರದೆ ಅದು ಹೇಗೋ ತಪ್ಪಿಸಿಕೊಂಡಿದ್ದರೂ, ಅವರ ಪಾಠಪರಿಷ್ಕರಣಕ್ಕೆ ಸಾಳ್ವನ ಪದ್ಯದ ಸಮರ್ಥನೆಯಿದೆ.

**ನಂಬಿಯಣ್ಣನ ರಗಳೆ – ಗದಾಯುದ್ಧ ಸಂಗ್ರಹಂ**

ನಂಬಿಯಣ್ಣನ ರಗಳೆಯ ಪ್ರಕಟನೆಯ ಕಾಲಕ್ಕೂ (೧೯೪೬) ಗದಾಯುದ್ಧ ಸಂಗ್ರಹದ ಪ್ರಕಟನೆಯ ಕಾಲಕ್ಕೂ (೧೯೪೯) ಕೇವಲ ಮೂರು ವರ್ಷಗಳ ಅಂತರವಿದೆ. ಈ ಮೊದಲೆ ಸೂಚಿಸಿರುವಂತೆ ನಂಬಿಯಣ್ಣನ ರಗಳೆಯ ಸಂಪಾದನಾ ಕಾರ್ಯಾರಂಭ ೧೯೩೯ರಲ್ಲಿ. ಎಂದಮೇಲೆ, ಗದಾಯುದ್ಧ[೧೪] ಸಂಗ್ರಹದ ಸಂಪಾದನಾ ಕಾರ್ಯಕ್ಕೆ ಹಿಡಿದ ಕಾಲದ ಇಮ್ಮಡಿಗೂ ಮಿಕ್ಕ ಕಾಲ ನಂಬಿಯಣ್ಣನ ರಗಳೆಯ ಸಂಪಾದನಾಕಾರ್ಯ ನುಂಗಿದೆ. ಇದು ಸ್ವಾಭಾವಿಕವಾಗಿಯೇ ಇದೆ. ನಂಬಿಯಣ್ಣನ ರಗಳೆ ಮೊದಲ ಬಾರಿಗೆ ಪ್ರಕಟವಾಗಬೇಕಾಗಿದ್ದುದರಿಂದ ಹಸ್ತಪ್ರತಿಗಳ – ಸಂಗ್ರಹದಿಂದಲೇ ಕಾರ್ಯಾರಂಭ ಮಾಡಬೇಕಾಗಿತ್ತು. ಗದಾಯುದ್ಧಕ್ಕೆ ಪರಿಷ್ಕೃತ ಮುದ್ರಣಗಳ ನೆರವೂ ಇದ್ದು, ಹಿನ್ನೆಲೆಯಾಗಿ ಗ್ರಂಥ ಸಂಪಾದನಾ ಕಾರ್ಯದ ಪಕ್ವವಾದ ಅನುಭವವೂ ಇದ್ದದ್ದರಿಂದ ಅದರ ಕಾರ್ಯಕ್ಕೆ ಅಷ್ಟು ದೀರ್ಘಾವಧಿಯ ಕಾಲ ಬೇಕಾಗಲಿಲ್ಲ. ತೀ.ನಂ.ಶ್ರೀ.ಯವರು ಸಿದ್ಧಪಡಿಸಿದ್ದ ನಂಬಿಯಣ್ಣನ ರಗಳೆಯ ಅಚ್ಚುಮನೆಯ ಪ್ರತಿ (Press copy) ಹಾಗೂ ಓಲೆಯ ಪ್ರತಿಗಳಿಂದ ಪಾಠಾಂತರಗಳನ್ನು ಸಂಕಲನ ಮಾಡಿದ್ದ ಆಧಾರ ಹಸ್ತಪ್ರತಿ, ಇವೆರಡರಿಂದ ಈ ಕೆಲಸಕ್ಕೆ ಪಟ್ಟ ಶ್ರದ್ಧಾನ್ವಿತವಾದ ಪರಿಶ್ರಮದ ಒಂದು ಸ್ಥೂಲಚಿತ್ರ ಲಭ್ಯವಾಗಿದೆ. ಪಾಠಾಂತರಗಳನ್ನು ಕೊಡುವಾಗ ಯಾವ ಕ್ರಮವನ್ನು ಅನುಸರಿಸಬೇಕು ಎಂಬ ಬಗೆಗೆ ಅವರ ಟಿಪ್ಪಣಿ ಹಾಳೆಗಳಲ್ಲಿ ಮಾರ್ಗದರ್ಶಕ ಸೂತ್ರಗಳನ್ನು (Guide lines) ಹಾಕಿಕೊಂಡಿದ್ದಾರೆ. ಅವರು ಅಲ್ಲಲ್ಲಿ ಬಳಸಿರುವ dittography (ಪುನರ್ಲೇಖನ) Haplological mistakes(ಸದೃಶಾಕ್ಷರಲೋಪನ ಪ್ರಮಾದಗಳು),Scribal errors (ಲಿಪಿಕಾರಲೇಖನ ಪ್ರಮಾದಗಳು), Substitution (ಪ್ರತಿನಿಧಾನ)– ಎಂಬ ಪಾಠವಿಮರ್ಶಾಶಾಸ್ತ್ರದ (Textual criticism) ಪರಿಭಾಷೆಯನ್ನು ಗಮನಿಸಿದರೆ, ಎಸ್.ಎಂ.ಕತ್ರೆಯವರ ಗ್ರಂಥ ಪ್ರಕಟವಾದ ಕಾಲಕ್ಕೆ ೧೯೪೧ ಮುಂಚೆಯೇ ಬೇರೆಯ ಮೂಲಗಳಿಂದ ಅವರು ಶಾಸ್ತ್ರಜ್ಞಾನವನ್ನು ಗಳಿಸಿದ್ದಿರಬಹುದೇ ಎಂಬ ಸಂದೇಹವಾಗುತ್ತದೆ. ಅದು ಹೇಗಿದ್ದರೂ ಕತ್ರೆಯವರ ಗ್ರಂಥದ ಪ್ರಯೋಜನವನ್ನೂ ಪಡೆದ ಮೇಲೆ, ಅವರು ಗ್ರಂಥದ ಮುನ್ನುಡಿಯಲ್ಲಿ – "ಗ್ರಂಥ ಸಂಪಾದನ ಕಾರ್ಯವು ಈಗ ಒಂದು ಖಚಿತವಾದ ಶಾಸ್ತ್ರವಾಗಿ ಪರಿಣಮಿಸಿದೆ...." ಇತ್ಯಾದಿಯಾಗಿ

ಪಾಠಕರ ಮುದ್ರಿತ ಪ್ರತಿಯ ಪಾಠವನ್ನು ಸ್ವೀಕರಿಸಿರುತ್ತೇನೆ. ತೀ.ನಂ.ಶ್ರೀ.ಯವರ ತಿದ್ದುಪಾಟದ ಪಾಠವನ್ನೂ ಗಮನಿಸಿ ಪಾಠಾಂತರವಾಗಿ ಕೊಟ್ಟಿರುತ್ತೇನೆ. **(ಪು.೪೦೩);** ಅವರ ತಿದ್ದುಪಾಟನ್ನು ನಾನು ಒಪ್ಪಿಲ್ಲವೆಂಬುದು ಸ್ಪಷ್ಟ. 'ಪೆಱರ ಮಾತುಗಳನೆ' ಎಂಬ ದ್ವಿತೀಯಾ ವಿಭಕ್ತಿಯ ನಾಮಪದಕ್ಕೆ ಪ್ರಥಮಾವಿಭಕ್ತಿಯ 'ಇಡುವವಂ' ಎಂಬ ಕೃದಂತವು ಅಗತ್ಯವಾದ್ದರಿಂದ, ಪಾಠಕರ ಪ್ರತಿಯ ಪಾಠ ಸ್ವೀಕಾರಾರ್ಹವಾಗಿದೆ.

(೩) ನಾಗವರ್ಮನು "ರಸಗಳು 'ಎಂಟೆ ವಲಂ' ಎಂದು (ಪ.೭೯೩) ಮೊದಲಲ್ಲಿ ಹೇಳಿ, ಅದ್ಭುತರಸವಾದ ಬಳಿಕ ಕೊನೆಯಲ್ಲಿ ಶಾಂತಕ್ಕೆ ಲಕ್ಷಣವನ್ನೂ ಉದಾಹರಣೆಯನ್ನೂ ಕೊಡುತ್ತಾನೆ" ಎಂದು ತೀ.ನಂ.ಶ್ರೀ.ಯವರು ಈ ಕೆಳಗಿನ ಕಾವ್ಯಾವಲೋಕನದ ಪದ್ಯವನ್ನು ಉದಾಹರಿಸಿ, ಅದರಲ್ಲಿನ ಪಾಠದೋಷವನ್ನು ಅಡಿಟಿಪ್ಪಣಿಯಲ್ಲಿ ಕಾಣಿಸಿದ್ದಾರೆ. (ಭಾರತೀಯ ಕಾವ್ಯಮೀಮಾಂಸೆ, ಪು.೪೪೮):

ಸಮಭಾವ ಪ್ರಭವಂ ಶಾಂ–
ತಮಕ್ಕುಮಂತಾ ಸಮತ್ವಮುಂ ವರ್ತಿಸುಗುಂ
ಸಮನಿಸಿ ಸಮ್ಯಗ್‌ಜ್ಞಾನಂ
ತಮಮಂ ರಾಗಮೂಮನಲೆದು ತೊಲಗಿಸೆ ಮನದಿಂ (ಪ.೮೨೮)

ತೀ.ನಂ.ಶ್ರೀ.ಯವರು ಸೂಚಿಸುರುವ ಪಾಠಪರಿಷ್ಕರಣ: "ಇಲ್ಲಿಯ ಪಾಠವು "[ಶ]ಮಭಾವ... [ಶ]ಮತ್ವಮುಂ" ಎಂದು ಇರಬೇಕಲ್ಲವೆ?" ಈ ಪಾಠಪರಿಷ್ಕರಣ ಒಪ್ಪತಕ್ಕದ್ದೆ. ಏಕೆಂದರೆ, ಸಾಂತರಸದ ಸ್ಥಾಯಿ 'ಶಮ' ಭಾವ. ಭರತನನ್ನು ಅನುಸರಿಸಿ ನಾಗವರ್ಮನು ಸ್ಪಷ್ಟವಾಗಿ ಎಂಟೇ ರಸ ಎಂದು ಹೇಳಿರುವುದರಿಂದ, ಶಾಂತರಸದ ಪ್ರಸಕ್ತಿ ಅಸಂಭವಾಗಿ ಕಾಣುತ್ತದೆ. ಈ ಪದ್ಯ ರಸರತ್ನಾಕರದಲ್ಲಿಯೂ ಇದೆ. (ಸೂ.೬೩). ಸಾಳ್ವನು ಕಾವ್ಯಾವಲೋಕನದ ರಸಪ್ರಕರಣದಿಂದ ಹಲವಾರು ಲಕ್ಷ್ಯ ಲಕ್ಷಣ ಪದ್ಯಗಳನ್ನು ತೆಗೆದುಕೊಂಡಿದ್ದರೂ, ಸಾಂತರಸದ ಪ್ರಸ್ತಾಪ ಬಂದಾಗ ಅದರ ಉಲ್ಲೇಖವಿಲ್ಲದ ಸೂತ್ರವನ್ನು ಮಾರ್ಪಡಿಸಿಕೊಂಡಿದ್ದಾನೆ. (ನೋಡಿ: ಸಾಳ್ವ, ಸೂ.೭–ಕಾವ್ಯಾವ.ಸೂ.೧೯೬). ಪ್ರಸ್ತುತ ಪದ್ಯವನ್ನೂ ಅದಕ್ಕೆ ಸಂಬಂಧಿಸಿದ ವೃತ್ತಿಯನ್ನೂ ಸಾಳ್ವನು ಹೇಮಚಂದ್ರನ ಕಾವ್ಯಾನುಶಾಸನವನ್ನು ಅನುಸರಿಸಿ ಬರೆದಿದ್ದಾನೆ. ಆದ್ದರಿಂದ, ಸಾಳ್ವನ ಸೂತ್ರವನ್ನೇ ಈಚಿನವರು ಕಾವ್ಯಾವಲೋಕನದಲ್ಲಿ ಪ್ರಕ್ಷೇಪ ಮಾಡಿದ್ದಾರೆಂಬುದರಲ್ಲಿ ಸಂದೇಹವಿಲ್ಲ. ಈ ಅಂಶ ತೀ.ನಂ.ಶ್ರೀ.ಯವರ

ಸೂಚಿಸುವ ಪೀಳಿಗೆಯನ್ನು ಕೊಟ್ಟಿದ್ದಾರೆ. ಅಧಿಕ ಸಂಖ್ಯೆಯಲ್ಲಿ ಮಾತೃಕೆಗಳು ದೊರೆತಾಗ ಈ ಪೀಳಿಗೆಯ ರಚನೆಯಿಂದ ಪಾಠ ನಿರ್ಣಯಕ್ಕೆ ವಿಶೇಷ ಸಹಾಯವುಂಟು. ಪ್ರಕೃತಸಂಪಾದಕರ ಪಾಠನಿರ್ಣಯದಲ್ಲಿ ಸಂಘಟಿಸಿರಬಹುದಾದ ಸರಿ ತಪ್ಪುಗಳನ್ನು ಮುಂದೆ ಬರುವ ಸಂಪಾದಕರುಗಳು ಕಂಡುಹಿಡಿಯುವುದಕ್ಕೂ ಇದರಿಂದ ಸಹಾಯವಾಗುತ್ತದೆ.

**೨. ಪಾಠಾಂತರಗಳ ಸಂಕಲನ** (Collation of Variants): ಪಾಠಾಂತರಗಳನ್ನು ಸಂಕಲನ ಮಾಡುವಾಗ ಒಂದನ್ನೂ ಬಿಡದ ಹಾಗೆ ಎಲ್ಲವನ್ನೂ ಗುರುತು ಹಾಕಿಕೊಳ್ಳಬೇಕಾದ ಅಗತ್ಯವಿಲ್ಲವೆಂಬುದು ತೀ.ನಂ.ಶ್ರೀ.ಯವರ ಟಿಪ್ಪಣಿಗಳಿಂದ ಗೊತ್ತಾಗುತ್ತದೆ. ಇದು ಎಲ್ಲ ಸಂಪಾದಕರ ಅನುಭವದ ವಿಷಯವೂ ಆಗಿದೆ. ಗಮನಿಸದೆ ಬಿಡಬೇಕಾದ ಪಾಠಭೇದಗಳನ್ನು ಕೂಡ ಕೆಲವು ನಿಯಮಗಳನ್ನು ಹಾಕಿಕೊಂಡು ಬಿಡಬೇಕಾಗುತ್ತದೆ. ಉದಾಹರಣೆಗೆ – ಅವರ ಟಿಪ್ಪಣಿ ಹಾಳೆಗಳಲ್ಲಿ ತಮ್ಮ ಮಾರ್ಗದರ್ಶನಕ್ಕೆಂದು ತೀ.ನಂ.ಶ್ರೀ.ಯವರೇ ಗುರುತು ಹಾಕಿಕೊಂಡಿರುವ ಕೆಲವು ಮಾತುಗಳನ್ನು ಉದ್ಧರಿಸಿ ಕೊಟ್ಟರೆ, ಸಂಪಾದಕನು ಎದುರಿಸಬೇಕಾದ ಸಮಸ್ಯೆಯ ಜಟಿಲತೆಯ ಸ್ವರೂಪ ಮನವರಿಕೆಯಾಗುತ್ತದೆ:

i)Readings not recorded. (ಚ.ಪ್ರತಿಯವು): ಪುಳಕಿಸು–ಪುಳಿಕಿಸು, ಪುಳುಕಿಸು. ನಿಳಯ–ನಿಳಿಯ, ನಿಳೆಯ. ದನಿ–ಧ್ವನಿ, ದ್ವನಿ. ಆಜ್ಞೆ–ಆಗ್ನೆ, ಆಗ್ಣೆ, ವಾರಿಧಿ–ವಾರುಧಿ. ಪನ್ನಗ–ಪನ್ನೆಗ, ಕಾಳೆಗ–ಕಾಳಗ. ಘಾಳಿ–ಗಾಳಿ. ಭಂಡಿ–ಬಂಡಿ. – ಇತ್ಯಾದಿ.

ii) I haven't noted many non-significant short omissions of ಚ,ಗ, ಮತ್ತು ಖ.

I haven't recorded all the readings that would have over-burdened the footnotes.

ತೀ.ನಂ.ಶ್ರೀ.ಯವರು ಪಾಠಭೇದಗಳೆಲ್ಲವನ್ನೂ ಚೆನ್ನಾಗಿ ಜರಡಿಯಾಡಿ ಗಟ್ಟಿಯಾದವನ್ನು ಮಾತ್ರ ಉಳಿಸಿಕೊಂಡು ಅಡಿಟಿಪ್ಪಣಿಗಳಲ್ಲಿ ಅವನ್ನು ಉಚಿತ ಚಿಹ್ನೆಗಳೊಂದಿಗೆ ಓರಣಗೊಳಿಸಿ ಕಾಣಿಸಿದ್ದರೂ, "ಈ ಗ್ರಂಥದ ಅಚ್ಚಿನ ಹಾಳೆಗಳನ್ನು ನೋಡಿದ ಮಿತ್ರರೊಬ್ಬರು ಹಾಸ್ಯಕ್ಕಾಗಿ, 'ಇದೇನು ಕಾವ್ಯವೋ ಗಣಿತದ ಪುಸ್ತಕವೋ?' ಎಂದು ಕೇಳಿದರು. ಮತ್ತೊಬ್ಬರು, 'ಇದೇನು, ಪುಟದ ತುಂಬ ಅಂಕಿಗಳು–ಮಂತ್ರಾಕ್ಷತೆಯ ಕಾಳು ಎರಚಿದ ಹಾಗೆ!' ಎಂದರು." ಇದಕ್ಕೆ ತೀ.ನಂ.ಶ್ರೀ.ಕೊಡುವ ಸಮಾಧಾನ:

ಹೇಳಲು ಸಾಧ್ಯವಾಗಿ, ಅವರ ಕಾರ್ಯ ಉದ್ದಕ್ಕೂ ಶಾಸ್ತ್ರಶುದ್ಧವಾಗಿ ನಡೆದಿದೆ. ಅಚ್ಚಾಗಿ ಹೊರಬಂದ ಗ್ರಂಥವೇ ಇದಕ್ಕೆ ಪ್ರತ್ಯಕ್ಷ ಪ್ರಮಾಣ.

ತೀ.ನಂ.ಶ್ರೀ. ಯವರು ಉಳಿಸಿಕೊಟ್ಟಿರುವ ಅವರ ಕೈಬರಹದ ಹಸ್ತಪ್ರತಿಗಳು, ಟಿಪ್ಪಣಿ ಹಾಳೆಗಳು – ಇವುಗಳ ಆಧಾರದ ಮೇಲೆ ಸಂಪಾದನಾಕಾರ್ಯದಲ್ಲಿ ಅವರು ಅನುಸರಿಸಿರುವ ಕಾರ್ಯವಿಧಾನ ಹಂತ ಹಂತವಾಗಿ ಹೇಗೆ ನಡೆದಿದೆ ಎಂಬ ಬಗೆಗೆ ಸ್ಪಷ್ಟವಾದ ದಾಖಲೆಯಿಲ್ಲದಿದ್ದರೂ, ಸೂಕ್ಷ್ಮ ಪರಿಶೀಲನೆಯಿಂದ ಒಂದು ಸ್ಥೂಲವಾದ ಗ್ರಹಿಕೆಯನ್ನು ಪಡೆಯಬಹುದು. ಅದನ್ನು ಮುಂದೆ ವಿವರಿಸಿದೆ.

೧. **ಹಸ್ತಪ್ರತಿಗಳ ಸಂಗ್ರಹಣ :** ಐದು ಹಸ್ತಪ್ರತಿಗಳನ್ನು (ಕ, ಖ, ಗ, ಚ, ಜ) ದೊರಕಿಸಿಕೊಂಡು, ಮೊದಲು ಅವುಗಳ ಪರಿಶೀಲನೆ ಮಾಡಿದ್ದಾರೆ. ಆಂತರಿಕ ಪ್ರಮಾಣಗಳಿಂದ ಅವುಗಳ ಪರಸ್ಪರ ಸಂಬಂಧವನ್ನು ನಿರ್ಧರಿಸಿದ್ದಾರೆ. ಹಸ್ತಪ್ರತಿಗಳಿಗೆ ಉಪಯೋಗಿಸಿರುವ ಸಾಮಗ್ರಿ (ಓಲೆಯಗರಿಯೇ, ಕಾಗದವೇ), ಅವುಗಳ ಸ್ವರೂಪ, ಲಿಪಿಕಾರರ ಸ್ವಂತ ಬರಹದ ಪೀಠಿಕಾವಾಕ್ಯಗಳು ಮತ್ತು ಸಮಾಪ್ತಿ ವಾಕ್ಯಗಳು, ಹಸ್ತಪ್ರತಿಗಳ ಸುಸ್ಥಿತಿ ಅಥವಾ ದುಃಸ್ಥಿತಿ, ಅಕ್ಷರಗಳ ಸ್ವರೂಪ, ಬರವಣಿಗೆಯ (ಪಾಠ) ಶುದ್ಧತೆಯ (ಅಥವಾ ಅಶುದ್ಧತೆಯ) ಮಟ್ಟ– ಇವುಗಳನ್ನು ಗುರುತಿಸಿದ್ದಾರೆ.[೧೫] 'ಕ' ಪ್ರತಿ ಕವಿಪಾಠಕ್ಕೆ ಹತ್ತಿರವಾದುದೆಂದು ನಿರ್ಧರಿಸಿ, ಅದನ್ನು ಆಧಾರಪ್ರತಿಯಾಗಿ ಇಟ್ಟುಕೊಂಡು, ಉಳಿದ ಪ್ರತಿಗಳಲ್ಲಿನ ಮುಖ್ಯ ಪಾಠಭೇದಗಳನ್ನು ಮಸಿ, ಬಣ್ಣದ ಪೆನ್ಸಿಲು, ಮುಂತಾದ ಬೇರೆ ಬೇರೆ ಲೇಖನ ಸಾಧನಗಳಿಂದೆಡಬದಿಯಲ್ಲೂ ಪ್ರತಿ ಪಂಕ್ತಿಯ ಮೇಲ್ಗಡೆಯೂ ಗುರುತಿಸಿದ್ದಾರೆ.

ಚಿತ್ರದುರ್ಗದ ಮಠದ ಶ್ರೀಸ್ವಾಮಿಗಳು 'ಹರಿಹರನ ರಗಳೆ'ಗಳು ಎಂಬ ಹಸ್ತಪ್ರತಿ ಯಾದಿಯಲ್ಲಿದ್ದರೂ ದೊರಕಲಿಲ್ಲವೆಂದು೨೧–೧–೧೯೪೧ ರಲ್ಲಿ (ತೀ.ನಂ.ಶ್ರೀ. ಯವರ ೨–೧–೧೯೪೧ರ ಪತ್ರಕ್ಕೆ) ಉತ್ತರಿಸಿದ್ದಾರೆ. ಆದರೆ, ಆಧಾರಪ್ರತಿಯಲ್ಲಿ ಒಂದು ಕಡೆ 'ಚಿತ್ರದುರ್ಗದ ಪ್ರತಿ' (ಶ್ರೀ ತೀರ್ಥರಾಮೇಶ್ವರ ಲಿಂಗಾಯ ನಮಃ) ಎಂಬ ಮಂಗಳವಾಚಕವನ್ನು ನಮೂದಿಸಿ 'ತ' ಎಂಬ ಸಂಕೇತಾಕ್ಷರವನ್ನು ಕೊಟ್ಟು, "೧೧ನೆಯ ಸ್ಥಲ, ೯ನೆಯ ಚರಣದಿಂದ ಮುಂದಕ್ಕೆ" "(ತ) ಪ್ರತಿಯಲ್ಲಿ ಹೆಚ್ಚಿನ ಚರಣಗಳು" ಎಂದು ಹೇಳಿ, ೮೩ ಪಂಕ್ತಿಗಳನ್ನು ಪ್ರತಿಮಾಡಿದ್ದಾರೆ. ಆದರೆ, ಮುದ್ರಿತ ಪ್ರತಿಯಲ್ಲಿ 'ತ' ಪ್ರತಿಯ ವಿಚಾರವಾಗಿ ಏಕೆ ಪ್ರಸ್ತಾಪಿಸಿಲ್ಲವೋ ತಿಳಿಯದು. ಪುಸ್ತಕ ಅಚ್ಚಾದ ಮೇಲೆ ಈ ಹಸ್ತಪ್ರತಿ ದೊರಕಿರಬಹುದೆ?

ಮುದ್ರಿತ ಗ್ರಂಥದ ಪ್ರತಿಯಲ್ಲಿ ಹಸ್ತಪ್ರತಿಗಳ ಪರಸ್ಪರ ಸಂಬಂಧವನ್ನು

ನರ್ತಿಸುತಿರಲ್."

'ಸಕ್ಕಜದ' ಎಂಬ ಪದಕ್ಕೆ ಸಲ್ಕಜದ' (ಚ), 'ಸಕ್ಕಜನದ' (ಜ) ಎಂಬ ಎರಡು ಪಾಠಾಂತರಗಳಿವೆ. ಸಂಪಾದಕರ ಅಭಿಪ್ರಾಯದಲ್ಲಿ ಕ, ಜ ಪ್ರತಿಗಳು ವಿಶ್ವಾಸಾರ್ಹ; ಚ, ಪ್ರತಿಯಲ್ಲಿ ಬಗೆಬಗೆಯಾದ ತಪ್ಪುಗಳು ಹೇರಳವಾಗಿವೆ. 'ಕ' ಪ್ರತಿಯಲ್ಲಿ 'ಸಕ್ಕಜ' ಇದ್ದು ಅದನ್ನು ಸ್ವೀಕರಿಸಿರುವಂತೆ ಕಾಣುತ್ತದೆ. 'ಸಕ್ಕ' 'ಸಖ್ಯ'ದ ತದ್ಭವ. 'ಸಕ್ಕ' ಎಂದರೆ ಸಮ. equal ಎಂದು ಅರ್ಥ. (ನೋಡಿ: ಕಿಟ್ಟೆಲ್ ಕೋಶ, ಪು.೧೪೮೧). 'ಓರಗೆಯ ಮಕ್ಕಳು' ಎಂಬ ಅರ್ಥದಲ್ಲಿ 'ಸಕ್ಕದ', 'ಸಖ್ಯಜನದ,' ಎಂಬ ಎರಡು ಪ್ರಯೋಗಗಳಲ್ಲಿ 'ಕ' – 'ಜ' ಪ್ರತಿಗಳ ಮೂಲ ಮಾತೃಕೆಯಲ್ಲಿ (Exemplar) 'ಸಖ್ಯಜನದ' ಪಾಠವಿದ್ದುದು ಸಂಭಾವ್ಯ. 'ಕ' ಪ್ರತಿಕಾರನ ಕೈಯಲ್ಲಿ 'ನ' ಕಾರ ಲೋಪವಾಗಿದೆ, ಅಷ್ಟೆ. 'ಸಕ್ಕಾಸಕ್ಕಜ' equal and unequal = ಎಂಬ ಪ್ರಯೋಗವಿದೆ. (ಕಿಟ್ಟೆಲ್: ಅದೇ ಪುಟ). 'ಸಕ್ಕಜ'ಕ್ಕೆ 'ಸಮನಲ್ಲದ' ಎಂದು ಅರ್ಥಹೊರಡುವುದರಿಂದ, 'ಸಕ್ಕಜನದ' ಪಾಠ ಹೆಚ್ಚುಸಮಂಜಸ ಎಂದು ತೋರುತ್ತದೆ.

**೩) ಪಾಠಾಂತರದ ಚಿಹ್ನೆಗಳು** : ಪಾಶ್ಚಾತ್ಯ ವಿದ್ವಾಂಸರು ಗ್ರಂಥಸಂಪಾದನೆಯಲ್ಲಿ ಬಳಸುತ್ತಿದ್ದ ಪಾಠಾಂತರ ಸ್ವರೂಪ ನಿರ್ದೇಶಕ ಚಿಹ್ನೆಗಳ ಪರಿಚಯವನ್ನು ಡಿ.ಎಲ್. ನರಸಿಂಹಾಚಾರ್ಯರು ತಮ್ಮ 'ಗ್ರಂಥ ಸಂಪಾದನೆ'ಯಲ್ಲಿ ಮಾಡಿಕೊಟ್ಟಿದ್ದಾರೆ. ಕನ್ನಡದಲ್ಲಿ ರೈಸ್, ಕಿಟ್ಟೆಲ್, ಆರ್. ನರಸಿಂಹಾಚಾರ್, ಮುಂತಾದ ಪೂರ್ವವಿದ್ವಾಂಸರೂ ಕೆಲವು ಚಿಹ್ನೆಗಳನ್ನು ಬಳಕೆಗೆ ತಂದಿದ್ದರು. ಅವರು ಅನುಸರಿಸುತ್ತಿದ್ದ ವಿಧಾನಕ್ಕೆ ಆ ಚಿಹ್ನೆಗಳು ಸಾಕಾಗಿದ್ದುವು. ಶಾಸ್ತ್ರೀಯಮಟ್ಟದಲ್ಲಿ ನಡೆಯುವ ಗ್ರಂಥಸಂಪಾದನೆಗೆ ನಿರ್ದಿಷ್ಟವಾದ ಚಿಹ್ನೆಗಳು ಹೆಚ್ಚಿನ ಸಂಖ್ಯೆಯಲ್ಲಿ ಅಗತ್ಯವಾಗುತ್ತವೆ. ಪಾಶ್ಚಾತ್ಯ ವಿದ್ವಾಂಸರು, ಡಾ॥ ಸುಕ್ತಂಕರ್, ಕತ್ರೆ ಇವರುಗಳು ಸೂಚಿಸಿದ್ದ ಚಿಹ್ನೆಗಳನ್ನು ಪರಿಶೀಲಿಸಿ, ಅವುಗಳ ಆಧಾರದ ಮೇಲೆ ಕನ್ನಡ ಗ್ರಂಥ ಸಂಪಾದನೆಗೆ ಹೊಂದಿಬರುವ ಚಿಹ್ನೆಗಳನ್ನು ಬಹುಶಃ ಮೊತ್ತಮೊದಲಿಗೆ ಸಂಯೋಜಿಸಿ, ನಂಬಿಯಣ್ಣನ ರಗಳೆಯಲ್ಲಿಯೂ ಗದಾಯುದ್ಧ ಸಂಗ್ರಹದಲ್ಲಿಯೂ ತೀ.ನಂ.ಶ್ರೀ. ಯವರು ಬಳಸಿದರು. ಈ ಚಿಹ್ನೆಗಳನ್ನು ಡಿ.ಎಲ್.ನರಸಿಂಹಾಚಾರ್ಯರು ತಮ್ಮ 'ಗ್ರಂಥ ಸಂಪಾದನೆ'ಯಲ್ಲಿ ಉದ್ಧರಿಸಿಕೊಟ್ಟಿರುವುದಲ್ಲದೆ, "ಈ ಚಿಹ್ನೆಗಳನ್ನೂ ಅವಶ್ಯಕವಾದ ಇತರ ಚಿಹ್ನೆಗಳನ್ನೂ ಕನ್ನಡ ಗ್ರಂಥ ಸಂಪಾದಕರು ಉಪಯೋಗಿಸುವುದು ಲೇಸು" ಎಂದು ತಮ್ಮ ಅನುಮೋದನ ಮುದ್ರೆಯೊತ್ತಿದ್ದಾರೆ. (ಪು.೨೧೮). ಡಾ॥

"ಪಾಠಾಂತರಗಳನ್ನು ನಿರುಕಾಗಿ ಅಡಕವಾಗಿ ನಿರ್ದೇಶಿಸಲು ಹೀಗೆ ಬಗೆಬಗೆಯ ಚಿಹ್ನೆಗಳನ್ನೂ ವಿಪುಲವಾಗಿ ಮೇಲಂಕಿಗಳನ್ನೂ ಉಪಯೋಗಿಸಬೇಕಾಯಿತು." (ಅರಿಕೆ, ಪು.ix-x)

ಒಂದು ಗ್ರಂಥವನ್ನು ಮೊತ್ತಮೊದಲಿಗೆ ಸಂಪಾದನೆ ಮಾಡುವ ಸಂಪಾದಕನು ತನ್ನ ಮೂಲಪಾಠ ನಿರ್ಣಯಕ್ಕೆ ಬಾಧಕವಾಗದಂತಹ 'ಚಿಲ್ಲರೆ' ಲಿಪಿಕಾರ ಸ್ಖಾಲಿತ್ಯಗಳನ್ನು ಕೈಬಿಡಬಹುದಾದರೂ, ಉಳಿದೆಲ್ಲ ಪಾಠಭೇದಗಳನ್ನೂ ಉಚಿತ ಪಾಠಸ್ವರೂಪ ಸೂಚಕ ಚಿಹ್ನೆಗಳೊಂದಿಗೆ ಅಡಿಟಿಪ್ಪಣಿಗಳಲ್ಲಿ ಸಮಗ್ರವಾಗಿ ಕಾಣಿಸಬೇಕಾದದ್ದು ಶಾಸ್ತ್ರೀಯವಾದ ಗ್ರಂಥಸಂಪಾದನೆಯ ಅಗತ್ಯಗಳಲ್ಲಿ ಒಂದು. ಏಕೆಂದರೆ, ಎಲ್ಲ ಸಂದರ್ಭಗಳಲ್ಲೂ ಸಂಪಾದಕನ ನಿರ್ಣಯವೇ ಕೊನೆಯ ಮಾತೆಂದು ಹೇಳಲಾಗದು. ಗ್ರಂಥವನ್ನು ವ್ಯಾಸಂಗ ಮಾಡುವವರಿಗೂ, ಅದನ್ನು ಮುಂದೆ ಮತ್ತೆ ಬೇರೆಯವರು ಸಂಸ್ಕರಣ ಮಾಡಬೇಕೆಂದು ಬಯಸಿದಾಗ ಅವರಿಗೂ, ಹಿಂದಿನ ಸಂಪಾದಕನು ಉಪಯೋಗಿಸಿಕೊಂಡ ಮಾತೃಕೆಗಳ ಸ್ವರೂಪಕ್ಕೆ ಪಾಠಾಂತರಗಳು ಕನ್ನಡಿಯಾಗಿರಬೇಕು. ಮುಂಬರುವ ಸಂಪಾದಕರು ಅನುಮಾನ ಬಂದಾಗ ಮಾತ್ರ ಹಸ್ತಪ್ರತಿಯನ್ನು ನೋಡುವ ಅಗತ್ಯವಿರಬೇಕೇ ಹೊರತು ಹೆಜ್ಜೆ ಹೆಜ್ಜೆಗೂ ಹಸ್ತಪ್ರತಿಯನ್ನು ಪರಿಶೀಲಿಸುತ್ತ ಹೋಗುವುದೆಂದರೆ, ವ್ಯರ್ಥ ಪ್ರಯಾಸವೆನಿಸುವುದು. ಮುದ್ರಿತ ಗ್ರಂಥಕ್ಕೇ ಮುಂದೆ ಒಂದು ಹಸ್ತಪ್ರತಿಯ (ಎಂದರೆ ಮಾತೃಕೆಯ) ಬೆಲೆ ಬರುವುದರಿಂದ, ಮುದ್ರಣ ದೋಷಗಳು ಇಲ್ಲದಂತೆ ಸಂಪಾದಕ ಎಚ್ಚರಿಕೆ ವಹಿಸಬೇಕಾಗುತ್ತದೆ. ಈ ದೃಷ್ಟಿಯಿಂದ ನೋಡಿದಾಗ ತೀ.ನಂ.ಶ್ರೀ.ಯವರ ಪರಿಷ್ಕರಣ ಕಾರ್ಯ, ನಂಬಿಯಣ್ಣನ ರಗಳೆಯಲ್ಲಿಯೇ ಆಗಲಿ ಗದಾಯುದ್ಧ ಸಂಗ್ರಹದಲ್ಲಿಯೇ ಆಗಲೀ, ಸರ್ವಾಂಗ ಸುಂದರವಾಗಿದೆ, ಸರ್ವಸಮರ್ಪಕವಾಗಿದೆ ಎಂದು ಹೇಳಲು ಸ್ವಲ್ಪವೂ ಹಿಂತೆಗೆಯಬೇಕಾಗಿಲ್ಲ.

ಸಂಪಾದಕನ ಪಾಠನಿರ್ಣಯವನ್ನು ಸಮದೇಹಿಸಿ ಭಿನ್ನಪಾಠವನ್ನು ಸ್ವೀಕರಿಸಬಹುದೆನ್ನುವ ಸಂದರ್ಭದಲ್ಲಿ, ಪಾಠಾಂತರಗಳಿಂದ ಹೇಗೆ ಸಹಾಯವಾಗುತ್ತದೆ ಎಂಬುದಕ್ಕೆ ನಂಬಿಯಣ್ಣನ ರಗಳೆಯಲ್ಲಿ ಕೂಡ ಒಂದೆರಡು ನಿದರ್ಶನಗಳು ಗೋಚರವಾಗಬಹುದು. ನನ್ನ ಗಮನಕ್ಕೆ ಬಂದ ನಿದರ್ಶನಗಳಲ್ಲಿ ಗಮನಾರ್ಹವಾದ ಒಂದನ್ನು ಮಾತ್ರ ಇಲ್ಲಿ ಉದಾಹರಿಸುತ್ತೇನೆ:

ಎರಡನೆಯ ಸ್ಥಲದ ಪ್ರಾರಂಭದಲ್ಲಿ ನಂಬಿಯಣ್ಣನ ಬಾಲ್ಯದ ವರ್ಣನೆಯಿದೆ. "..... ಈ ತೆರದೊಳೊಂದೆರಡು ಮೂಱುನಾಲ್ಕಯ್ದು ವತ್ಸರಂಬರಂ ನೆಱೆದು ನೆರೆಹೊರೆಯ ಕೆಲದ ಕೇರಿಯ ಸಕ್ಕಜದ ಮಕ್ಕಳೊಡನೊಕ್ಕಲಿಕ್ಕಿ ನಲಿನಲಿದು

ಪ್ರವೃತ್ತವಾಗಿತ್ತು ಎನ್ನುವುದನ್ನು ಅವರ ಟಿಪ್ಪಣಿ ಹಾಳೆಗಳಲ್ಲಿ ನಮೂದಾಗಿರುವ ಒಂದು ಅರ್ಥಪೂರ್ಣ ಉಲ್ಲೇಖದ ಸುಳಿವು ಹಿಡಿದು, ತೋರಿಸಿಕೊಡಲು ಕೆಳಗೆ ಪ್ರಯತ್ನಿಸಿದೆ:

ಟಿಪ್ಪಣಿ ಹಾಳೆಯೊಂದರಲ್ಲಿ ಈ ವಾಕ್ಯ ಕಣ್ಣಿಗೆ ಬಿತ್ತು:

"P. 56-7 (Press copy). Impt. place for textual criticism."

ಅಚ್ಚಿಗೆ ಸಿದ್ಧವಾದ ಪ್ರತಿಯಲ್ಲಿ ಆ ಪುಟವನ್ನು ತೆರೆದು ನೋಡಿದೆ. ಮಾರ್ಜಿನ್ನಿನಲ್ಲಿ, ಕಾಪಿಯಿಂಗ್ ಪೆನ್ಸಿಲಿನಿಂದ, ಬಹು ಸಣ್ಣ ಅಕ್ಷರಗಳಲ್ಲಿ ಕೊರೆದಿತ್ತು:

"This is an impt. place for Textual criticism. Evidently the line had been repeated by mistake in the exemplar.(ಕ)retains the mistake. (ಜ)corrects it, but places the line in the wrong place and to adjust the ಪ್ರಾಸ changes ಶಿವ into ಹರ in the following line."

'ಜ' ಪ್ರತಿಕಾರ ಮಾಡಿದ ಮಾರ್ಪಾಟು press copy ಯಿಂದ ತಿಳಿಯಬರುವುದಿಲ್ಲ. ಅದನ್ನು ತೀ.ನಂ.ಶ್ರೀ.ಯವರ ಆಧಾರಪ್ರತಿಯ (ಕ) ನಕಲಿನಿಂದ ತಿಳಿಯಬಹುದು. ಪ್ರಸಕ್ತ ಪಂಕ್ತಿಗಳು (ಪಾಠಾಂತರ ಮತ್ತು ಇತರ ಸೂಚನೆಗಳ ಸಮೇತ) ಹೀಗಿವೆ:

"೧ ಉರಗನಾಭರಣಂ ಕಂಡಾದ ಲತೆಯಿಲ್ಲಿ
ವ
।
ಹರನ ಚರಣಂಗಂಡು ನೆಗದ ಸರಸಿಜವಿಲ್ಲಿ–
ಳೆ
।
ಹರಹಸ್ತರಾಗದಿಂ ಬೆಳದಶೋಕೆಗಳಿಲ್ಲಿ
।
ಸೋ
ಹರ
ಶಿವನೂರುದಂಡದಿಂದಾದ ಬಾಳೆಗಳಿಲ್ಲಿ
ಹರ
ಶಿವನ ಕರನಖದಿಂದಲಾದ ಕೇತಕಿಯಿಲ್ಲಿ
ಹರಕಾಂತಿಯಿಂದಾದ ವಿಮಳ ಸರಸಿಗಳಿಲ್ಲಿ

ಎಂ.ಎಂ.ಕಲಬುರ್ಗಿಯವರು ತಮ್ಮ 'ಕನ್ನಡ ಗ್ರಂಥ ಸಂಪಾದನ ಶಾಸ್ತ್ರ' (೧೯೭೨)ದಲ್ಲಿ ಈ ಚಿಹ್ನೆಗಳಲ್ಲಿ ಬಹುಸಂಖ್ಯೆಯವನ್ನು ಸ್ವೀಕರಿಸಿ, ಒಂದೆರಡು ಹೊಸ ಚಿಹ್ನೆಗಳನ್ನೂ ಸೂಚಿಸಿದ್ದಾರೆ (ಪು.೧೭೨). ಗ್ರಂಥಪಾತಕ್ಕೆ ತೀ.ನಂ.ಶ್ರೀ.ಯವರು ಸೂಚಿಸಿರುವ ಈ x x x ಚಿಹ್ನೆಗಳ ವಿಷಯದಲ್ಲಿ ಒಂದು ಹೆಚ್ಚಿನ ಸೂಚನೆಯನ್ನು ಇಲ್ಲಿ ಸೇರಿಸಬಹುದು: ಮಾತೃಕೆಯಲ್ಲಿ ಎಷ್ಟು ಅಕ್ಷರಗಳು ಪಾತ (ನಷ್ಟ)ವಾಗಿವೆಯೋ ಅಷ್ಟು ಸಂಖ್ಯೆಯಲ್ಲಿ ಈ ಚಿಹ್ನೆಗಳನ್ನು ಬಳಸುವುದು ಮೇಲು. ವಿಶೇಷವಾಗಿ ಪದ್ಯಗಳ ವಿಷಯದಲ್ಲಿ ಛಂದಸ್ಸನ್ನು ದೃಷ್ಟಿಯಲ್ಲಿಟ್ಟುಕೊಂಡು ಗ್ರಂಥಪಾತವನ್ನು ಊಹಿಸಲು ಕೆಲವೊಂದು ವೇಳೆ ಇದರಿಂದ ಸಹಾಯವಾಗಬಹುದು. ಒಟ್ಟಿನ ಮೇಲೆ, ಪಾಠಾಂತರ ಚಿಹ್ನೆಗಳನ್ನು ಒಂದು ವ್ಯವಸ್ಥಿತ ರೀತಿಯಲ್ಲಿ ಬಳಕೆಗೆ ತಂದದ್ದು ಗ್ರಂಥಸಂಪಾದನ ಶಾಸ್ತ್ರಕ್ಕೆ ತೀ.ನಂ.ಶ್ರೀ.ಯವರ ಒಂದು ಉಪಯುಕ್ತವಾದ ಕೊಡುಗೆ ಎಂದು ಹೇಳಬಹುದು.

**೪) ಪಾಠನಿರ್ಣಯ :** ಗ್ರಂಥಸಂಪಾದಕನು ಪಾಠನಿರ್ಣಯ ಮಾಡುವುದಕ್ಕೆ ಸಂಬಂಧಪಟ್ಟಂತೆ ಬಹುಮುಖವಾದ ಅಧ್ಯಯನವನ್ನು ನಡಸಬೇಕಾಗುತ್ತದೆ. ಬಸವರಾಜ ದೇವರ ರಗಳೆಯನ್ನು ಸಂಪಾದಿಸುವ ಕಾರ್ಯದಲ್ಲಿ ಸಹಕರಿಸಿದ್ದ ತೀ.ನಂ.ಶ್ರೀ. ಯವರಿಗೆ ಹರಿಹರನ ಭಾಷೆ ಶೈಲಿಗಳ ಸ್ವರೂಪ ತಕ್ಕಮಟ್ಟಿಗೆ ಪರಿಚಯವಾಗಿತ್ತು. ನಂಬಿಯಣ್ಣನ ರಗಳೆಯನ್ನು ಹಸ್ತಪ್ರತಿಯಲ್ಲಿ ಓದಿ ಅದಕ್ಕೆ ಮಾರು ಹೋದ ಅವರು ಅದನ್ನು ಸಂಪಾದನೆ ಮಾಡುವ ಸಂಕಲ್ಪವನ್ನು ಕೈಕೊಂಡು, ಒಂದು ದೀರ್ಘ ತಪಶ್ಚರ್ಯೆಯನ್ನು ಮಾಡಬೇಕಾಯಿತು. ಇದಕ್ಕಾಗಿ ಅವರು ಪಟ್ಟ ಶ್ರಮದ ಒಂದು ಇಣುಕುನೋಟ ಅವರ ಟಿಪ್ಪಣಿ ಹಾಳೆಗಳಲ್ಲಿ ದೊರಕುತ್ತದೆ. ಕವಿಹೃದಯದ ಪರಿಚಯ ಪಡೆಯಲು ತಮಗೆ ದೊರೆತ ಎಲ್ಲ ಹರಿಹರನ ರಗಳೆಗಳನ್ನೂ ವ್ಯಾಸಂಗ ಮಾಡಿದ್ದಾರೆ; ಪೆರಿಯಪುರಾಣದ ಭಾಗಗಳನ್ನು ವ್ಯಾಸಂಗ ಮಾಡಿದ್ದಾರೆ; ಸುಂದರಮೂರ್ತಿಯ ಸಂಬಂಧವಾಗಿ ಸಂಸ್ಕೃತ, ತಮಿಳು, ತೆಲುಗು ಭಾಷೆಗಳ ಗ್ರಂಥಗಳನ್ನು ಓದಿಕೊಂಡಿದ್ದಾರೆ; ಹರಿಹರನ ಮತದ ನಿರ್ಣಯಕ್ಕೆ ಸಂಬಂಧಪಟ್ಟಂತೆ ಕೆಲವು ಗ್ರಂಥಗಳನ್ನು ಓದಿದ್ದಾರೆ; ಹರಿಹರನ ಕೆಲವು ಅಪೂರ್ವ ಪದ ಪ್ರಯೋಗಗಳಿಗೆ ಸಂವಾದಿ ಪ್ರಯೋಗಗಳ ಸಮರ್ಥನೆಗಾಗಿ ಅನ್ವೇಷಣೆ ನಡಸಿದ್ದಾರೆ; ಕವಿಕಾವ್ಯ ವಿಮರ್ಶೆಗೆ ಸಂಬಂಧಪಟ್ಟಂತೆ ಒಂದು ಸ್ಥೂಲವಾದ ಟಿಪ್ಪಣಿಯನ್ನು ಸಿದ್ಧ ಮಾಡಿಕೊಂಡಿದ್ದಾರೆ. ಇದೆಲ್ಲದರ ಪರಿಣಾಮಫಲ ನಂಬಿಯಣ್ಣನ **ರಗಳೆಯ ಈಗಿನ ಪರಿಷ್ಕೃತರೂಪ.**

ಪಾಠನಿರ್ಣಯದಲ್ಲಿ ತೀ.ನಂ.ಶ್ರೀ. ಯವರ ಪ್ರತಿಭೆ ಯಾವ ರೀತಿ ಕಾರ್ಯ

ಇಷ್ಟೆಲ್ಲಾ ಶ್ರಮಪಟ್ಟು ಸಂಪಾದಿಸಿದ ಕೃತಿಯಲ್ಲಿಯೂ ಅನೇಕ ಕಾರಣಗಳಿಂದಾಗಿ ಪ್ರಮಾದಗಳು ಉಳಿದುಕೊಂಡಾವು. ಇದನ್ನು ತೀ.ನಂ.ಶ್ರೀ.ಯವರೂ ಬಲ್ಲರು. ಇದಕ್ಕೆ ದೃಷ್ಟಾಂತವಾಗಿ, 'ಗದಾಯುದ್ಧ ಸಂಗ್ರಹ'ದ (೭–೨೭) ಒಂದು ಪದ್ಯವನ್ನು ಆಯ್ದುಕೊಂಡು, ತೀ.ನಂ.ಶ್ರೀ. ಯವರು ಪರಿಷ್ಕರಿಸಿದ ಪದ್ಯದಲ್ಲಿ ಉಳಿದುಕೊಂಡಿರುವ ಪ್ರಮಾದವೊಂದನ್ನು ಡಿ.ಎಲ್.ನರಸಿಂಹಾಚಾರ್ಯರು ತೋರಿಸಿ, ಅದನ್ನು ಸಕಾರಣವಾಗಿ ಪುನಃಪರಿಷ್ಕರಣ ಮಾಡಿದ್ದಾರೆ.[೧೬] ಪಾಠ ವಿಮರ್ಶೆಯಲ್ಲಿ ನುರುಗಿದವರಿಗೆ ಮಾತ್ರ ನಂಬಿಯಣ್ಣನ ರಗಳೆಯಲ್ಲಿಯೂ ಗದಾಯುದ್ಧ ಸಂಗ್ರಹದಲ್ಲಿಯೂ ಇಂಥ ಪ್ರಮಾದಗಳು ವಿರಳವಾಗಿ ಗೋಚರಿಸಬಹುದು. ಒಟ್ಟಿನ ಮೇಲೆ, ಈ ಎರಡೂ ಸಂಪಾದಿತ ಕೃತಿಗಳು ಕನ್ನಡ ಗ್ರಂಥ ಸಂಪಾದನೆಯ ಕ್ಷೇತ್ರಕ್ಕೆ ಮಾತ್ರವಲ್ಲದೆ ಕನ್ನಡ ಸಾಹಿತ್ಯಕ್ಕೂ ಅಭೂತಪೂರ್ವವಾದ, ಅತ್ಯಂತ ಬೆಲೆಯುಳ್ಳ, ಕೊಡುಗೆ: ಈ ಕ್ಷೇತ್ರದಲ್ಲಿ ಕೆಲಸ ಮಾಡಬೇಕೆನ್ನುವವರಿಗೆ ಅತ್ಯುತ್ತಮವಾದ ಮಾದರಿಗಳು. ಈ ಎರಡು ಗ್ರಂಥಗಳಲ್ಲಿಯೂ ಕಂಡುಬರುವ ಲೋಪವೆಂದರೆ, ಕವಿಕಾವ್ಯ ವಿಮರ್ಶೆಯನ್ನೊಳಗೊಂಡ ಪೀಠಿಕೆಗಳು ಇಲ್ಲದಿರುವುದು. ಇದಕ್ಕೆ ಹೊಣೆಗಾರ ತೀ.ನಂ.ಶ್ರೀ.ಯವರಲ್ಲ; ಕಾಲಪುರುಷ, ವಿಧಿ. "ಬೆಂದ ಬಿದಿಗೆ ಕಣ್ಣಿಲ್ಲಕ್ಕುಂ"[೧೭]

## ಟಿಪ್ಪಣಿಗಳು

೧. J.F. Postgate ಅವರ ಲೇಖನ Encyclopaedia Britannica ದಲ್ಲಿ ಬಹು ಹಿಂದೆಯೇ ಪ್ರಕಟವಾಗಿತ್ತು. Introduction to Latin Textual Emendation-W.M. Lindsay (೧೮೯೬), Companion to Classical Texts-F.W.Hall, (೧೯೧೩). ಮುಂತಾದ ಗ್ರಂಥಗಳೂ ಪ್ರಕಟವಾಗಿದ್ದುವು. (ಹೆಚ್ಚಿನ ವಿವರಗಳು ಡಿ.ಎಲ್.ಎನ್. ಅವರ 'ಕನ್ನಡ ಗ್ರಂಥ ಸಂಪಾದನೆ'ಯಲ್ಲಿ ದೊರೆಯುತ್ತವೆ.)

೨. ಈ ಲೇಖನ ೧೯೪೮ರಲ್ಲಿ ಪ್ರಕಟವಾದ 'ಸಮಾಲೋಕನ'ದಲ್ಲಿ ಮತ್ತೆ ಅಚ್ಚಾಗಿದೆ.

೩. ಪಾ.ವೆಂ.ಆಚಾರ್ಯರ ಲೇಖನ ಪ್ರಕಟವಾಗಿರುವುದು ೧೯೪೨ರಲ್ಲಿ. ಆದ್ದರಿಂದ, ಅವರ ಅಭಿಪ್ರಾಯವನ್ನು ತೀ.ನಂ.ಶ್ರೀ. 'ಸಮಾಲೋಕನ' ಗ್ರಂಥ

೨ ಹರನಚರಣವ ಕಂಡುನೆಗೆದ ಸರಸಿಜವಿಲ್ಲಿ"

೧. "This line has crept in in(ಕ), but ಜ has this line in this place only, (Not in ಖ ಚ ಗ)."

೨. "This line occurs in its proper place in (ಕ). This line does not occur here in ಜ."

ಈ ನಿರ್ದೇಶಗಳಿಗನುಗುಣವಾಗಿ ಪಂಕ್ತಿಗಳನ್ನು ಸರಿಯಾಗಿ ಹೊಂದಿಕೆಯಾಗುವಂತೆ ಜೋಡಿಸಿ, ಪರಿಷ್ಕರಿಸಿದ ಪಾಠ: (ಇದು ಕೊನೆಯ ಮುದ್ರಿತ ಪಾಠವೂ ಆಗಿದೆ):

ಪುಟ: ೬೩: "ಉರಗನಾಭರಣಮಂ ಕಂಡಾದ ಲತೆ[೧೬]ಯಿ[೧೬] ಲ್ಲಿ+[೧೭] ೩೧
ಹರಹಸ್ತರಾಗದಿಂ ಬೆಳೆದಶೋಕೆಗಳಿಲ್ಲಿ

ಪು. ೬೪. [೧]ಶಿವ [೧]ನೂರುದಂಡದಿಂದಾದ ಬಾಳೆಗಳಿಲ್ಲಿ
[೧]ಶಿವ[೧]ನ ಕರನಖದಿಂದ[೨]ವಾ[೨]ದ ಕೇತಕಿಯಿಲ್ಲಿ
[೩].ಹರನಚರ[೪]ಣಂಗಂ[೪]ಡು[೫]ನೆಗೆ[೫]ದ ಸರಸಿಜವಿಲ್ಲಿ ೩೫

೧೬. ಯು (ಕಚ). + ೧೭.೩೧, ೩೨ನೆಯ ಪಂಕ್ತಿಗಳ ನಡುವೆ: 'ಹರನಚರಣಂಗಂಡು ನೆಗದಸರಸಿಜವಿ<ವ>ಲ್ಲಿ'(ಕಜ). ಮುಂದೆ ೩೫ನೆಯ ಪಂಕ್ತಿಯನ್ನು ನೋಡಿ.

೧. ಹರ(ಜ). ೨. ಲಾ (ಕಖಗಜ). ೩. ಈಎರಡು ಪಂಕ್ತಿಗಳು (ಕ) ದಲ್ಲಿ ಹಿಂದುಮುಂದಾಗಿವೆ; (ಜ)ದಲ್ಲಿ, 'ಹರನ... ಸರಸಿಜವಿಲ್ಲಿ' ಎಂಬ ಪಂಕ್ತಿ ಇಲ್ಲ (ಹಿಂದಿನ ಪುಟದ ೧೭ನೆಯ ಅಡಿ ಟಿಪ್ಪಣಿಯನ್ನು ನೋಡಿ.) ೪.ಣವ ಕಂ (ಕ). ೫. ಬೆಳ (ಖಗ). ನೆರ (ಚ).

* * * * * *

ಮೇಲೆ ವಿವರಿಸಿರುವ 'ಕಾರ್ಯವಿಧಾನದರ್ಪಣ'ದಲ್ಲಿ ನಂಬಿಯಣ್ಣನ ರಗಳೆಯ ಮೂಲಕ್ಕೆ ಹತ್ತಿರವಾದ 'ಕ' ಪ್ರತಿಯನ್ನು ನಕಲು ಮಾಡಿಕೊಂಡು, ಅದರಲ್ಲಿ ಇತರ ಪ್ರತಿಗಳ (ಖಗಜಚ) ಪಾಠಾಂತರಗಳನ್ನು ಗುರುತು ಮಾಡಿಕೊಂಡು, ಪಾಠವಿಮರ್ಶೆ ಮತ್ತು ಪಾಠನಿರ್ಣಯಗಳನ್ನು ಅದರಲ್ಲಿಯೇ ಉಚಿತ ಚಿಹ್ನೆಗಳಿಂದ ಗುರುತಿಸಿಕೊಂಡು, ಕಟ್ಟಕಡೆಯದಾಗಿ ಮುದ್ರಣದ ಪ್ರತಿಯನ್ನು ಸಿದ್ಧಮಾಡಿರುವ ಗ್ರಂಥ ಸಂಪಾದನಾಕಾರ್ಯದ ಪ್ರಮುಖ ಹಂತಗಳಲ್ಲಿ ಕೆಲವನ್ನು ಕಾಣಬಹುದಾಗಿದೆ. ಎಲ್ಲ ಸಂಪಾದಕರೂ ಹೀಗೆ ಪರಿಶ್ರಮಪಟ್ಟದ್ದಾದರೆ, ಹಸ್ತಪ್ರತಿಗಳ ಸೆರೆಮನೆಯಿಂದ ಕವಿ ಬಿಡುಗಡೆಯಾದ ಹಾಗೆ!

ಡಿ.ಎಲ್.ನರಸಿಂಹಾಚಾರ್ಯರು ತಮ್ಮ ಗುರುಗಳೊಂದಿಗೆ ರಾಘವಾಂಕನ 'ಸಿದ್ಧರಾಮ ಚಾರಿತ್ರ'ವನ್ನು ಸಂಪಾದಿಸಿ ೧೯೪೦ರಲ್ಲಿ ಹೊರತಂದಿದ್ದರು ಎಂಬುದನ್ನು ಇಲ್ಲಿ ನೆನೆಯತಕ್ಕದ್ದು. ಶಾಸ್ತ್ರೀಯವಾದ ಕನ್ನಡ ಗ್ರಂಥಸಂಪಾದನೆಯ ಬೆಳವಣಿಗೆಯಲ್ಲಿ ಈ ಮೂವರ ಸಹಯೋಗ ಒಂದು ಪರಿಣಾಮಕಾರಿಯಾದ ಕ್ರಿಯಾಶಕ್ತಿಯಾಗಿತ್ತು ಎಂದು ನಾನು ಭಾವಿಸುತ್ತೇನೆ. ಇರಲಿ. ಈ ಸಂದರ್ಭದಲ್ಲಿ, ಯಾವ ನಿಯಮ ತೀ.ನಂ.ಶ್ರೀಯವರ ಮನಸ್ಸಿನಲ್ಲಿತ್ತು ಎಂದು ಊಹಿಸುವುದು ಕಷ್ಟ. ಅಥವಾ, ಯಾವ ನಿಯಮದ ಅನ್ವಯವೂ ಇಲ್ಲಿಗೆ ಅನಗತ್ಯ ಎಂದೂ ಅವರ ಮಾತಿಗೆ ಅರ್ಥ ಮಾಡಬಹುದು.

೭. ಇಲ್ಲಿ ತೀ.ನಂ.ಶ್ರೀ. ಯವರು ತಾವು ಉಪಯೋಗಿಸಿಕೊಂಡಿರುವ ಮಾತೃಕೆಗಳಲ್ಲಿ (ಮುದ್ರಿತ ಗ್ರಂಥಗಳ) ಸಂಪಾದಕರುಗಳು ಪಾಠಾಂತರಗಳನ್ನು ಸಕ್ರಮವಾಗಿ ಸಮಗ್ರವಾಗಿ ಕೊಟ್ಟಿಲ್ಲದಿರುವ ಕಡೆಗೆ ಒಂದು ಅಡಿಟಿಪ್ಪಣಿಯಲ್ಲಿ ನಮ್ಮ ಗಮನವನ್ನು ಸೆಳೆದಿದ್ದಾರೆ. ಗ್ರಂಥ ಸಂಪಾದಕನು ಮುಖ್ಯಅಮುಖ್ಯ ಎನ್ನದೆ ಎಲ್ಲ ಪಾಠಾಂತರಗಳನ್ನೂ ಮುಂದಿನ ಪರಿಷ್ಕರಣಕರ್ತರ ಉಪಯೋಗದ ದೃಷ್ಟಿಯಿಂದ ಕೊಡಬೇಕಾದ ಅಗತ್ಯದ ಕಡೆಗೆ ಲಕ್ಷ್ಯ ಪೂರೈಸಬೇಕೆಂಬ ಅಂಶ ಈ ಸಂದರ್ಭದಿಂದ ನಮಗೆ ವೇದ್ಯವಾಗುತ್ತದೆ.

೮. ಪ್ರಬುದ್ಧ ಕರ್ಣಾಟಕ, ೫೦-೪, ೧೯೬೯; ಪು.೧೨೦-೧೨೨.

೯. ಅದೇ, ೫೧-೨, ೧೯೬೯; ಪು.೧೬೫-೧೬೭.

೧೦. ತೀ.ನಂ.ಶ್ರೀ. ಯವರೂ ಸಿ.ಪಿ.ಕೆ. ಯವರೂ ಉದ್ಧರಿಸಿರುವ ಮನೋಜ್ಞವಾದ ಪ್ರಾಕೃತ ಪದ್ಯಗಳನ್ನು ಲೇಖನವಿಸ್ತಾರ ಭಯದಿಂದ ಇಲ್ಲಿ ಉದ್ಧರಿಸಲು ಅವಕಾಶವಿಲ್ಲದ್ದಕ್ಕಾಗಿ ವಿಷಾದಿಸಬೇಕಿದೆ.

೧೦. ಮೂವತ್ತುಮೂರು ಸಂಚಾರಿಭಾವಗಳನ್ನು ವಿವರಿಸುವ ಪ್ರಕರಣದಲ್ಲಿ 'ಗ್ಲಾನಿ'ಯುನ್ನು ನಿರೂಪಿಸುವ'ಶೃಂಗಾರ ರತ್ನಾಕರ'ದ ಸೂತ್ರ (ii-೩೪): "ಉಪವಾಸಾಧ್ವಕ್ಲೇಶಾ-ತಪನ ಪಿಪಾಸಾತಿಪಾನ ಸುರತಾತಿಗಳಿಂ।ಗ್ಲಪನಂ ಪುಟ್ಟು ಗುಮದನತಿ । ನಿಪುಣಂ ಭಾವಿಪುದು ದುಃಖಶಕ್ತಿಕ್ಷಯದಿಂ"ಗ್ಲಪನ, ಗ್ಲಾನಿ, ಎರಡೂ ಒಂದೇ (Debility, Weakness:Apte;= ಶಕ್ತಿಕ್ಷಯ.)

೧೧. 'ಕಾವ್ಯಸ್ವಾರಸ್ಯ'ದಲ್ಲಿ 'ರಸಭ್ರಾಂತಿ' ಎಂಬ ಲೇಖನ, ಪು.೧೬-೧೭. (ಈ ವಾಕ್ಯಗಳನ್ನು ನನ್ನ ಗಮನಕ್ಕೆ ತಂದು ಉಪಕರಿಸಿದವರು ಶ್ರೀ.ಕೇ.ಶ್ರೀಕಂಠಯ್ಯ, ಎಂ.ಎ.,ಎಂ.ಇಡಿ.,).

೧೨. ಡಿ.ಎಲ್. ನರಸಿಂಹಾಚಾರ್ಯರು ಸಂಪಾದಿಸಿರುವ ಪರಿಷ್ಕೃತ ಮುದ್ರಣ:

ಅಚ್ಚಾಗುತ್ತಿರುವ ವೇಳೆಯಲ್ಲಿ ಗಮನಿಸಿ ಅಳವಡಿಸಿಕೊಂಡಂತೆ ಕಾಣುತ್ತದೆ. ೧೯೬೭ರ ಇನ್ನೊಂದು ಶಾಸನದ ಪದ್ಯವೂ ಅಂಶಗಣಘಟಿತ ಎಂಬ ತೀರ್ಮಾನವನ್ನು ತೀ.ನಂ.ಶ್ರೀ. ತಮ್ಮ ಲೇಕನದ ಪರಿಶಿಷ್ಟವಾಗಿ ಕೊಟ್ಟಿರುವುದೂ 'ಸಮಾಲೋಕನ' ಅಚ್ಚಾಗುವ ಕಾಲದಲ್ಲಿ (೧೯೫೮); ಅಥವಾ ಅದಕ್ಕೂ ಮುಂಚೆ ಗಮನಿಸಿರಬಹುದು.

೪. ಈಚೆಗೆ ಡಾ॥ ಎಲ್.ಬಸವರಾಜು ಅವರು ಸಂಪಾದಿಸಿ ಪ್ರಕಟಿಸಿರುವ 'ಕನ್ನಡ ಛಂದಸ್ಸಂ–ಪುಟ'ದಲ್ಲಿ ಕೊಟ್ಟಿರುವ ಪದ್ಯಪಾಠದಲ್ಲಿ ಆರನೆಯ ಪಾದ– 'ಯಂದವಮಾದಂದು ಷಟ್ಪದಿಯೆನಿಕುಂ' ಎಂದಿದೆ. "ಆರನೆಯ ಪಾದವು 'ಯಂದಮೆಯಾಗಲ್ಕೆ ಷಟ್ಪದಿ ಕೇಳ್' ಎಂಬುದು ಇದ್ದಿರುವುದೂ ಅಸಂಭವವಲ್ಲ" ಎಂದು ತೀ.ನಂ.ಶ್ರೀ. ಲೇಖನದ ಅಡಿಟಿಪ್ಪಣಿಯಲ್ಲಿ ಸೂಚಿಸಿದ್ದಾರೆ. ಷಟ್ಪದಿ, ಷಟ್ಪದಿಕಾ, ಷಷ್ಪದ ಎಂಬ ಮೂರು ಬಗೆಯಪ್ರಯೋಗಗಳಿಗೂ ಇತರ ಗ್ರಂಥ ಪ್ರಯೋಗಗಳ ಆಧಾರವಿದೆ. ಜಯಕೀರ್ತಿಯೊಬ್ಬನೇ ಷಟ್ಪದಿಕಾ ಎಂದು ಕರೆದಿರುವುದು. ಬಾಹ್ಯ ಪ್ರಮಾಣದ ಬೆಂಬಲ 'ಷಟ್ಪದ'ದ ಕಡೆಗಿರುವುದನ್ನು ಗಮನಿಸಿ, 'ಅಕಾರಂತದ ಕಡೆಗೇ ಸಂಭಾವ್ಯತೆ ಒಲೆಯುತ್ತದೆ' ಎಂಬ ಸಮರ್ಥನೆಯನ್ನು ಸೂಚಿಸಿ, 'ಷಟ್ಪದ' ಎಂದು ತಿದ್ದುಪಡಿಮಾಡಿದ್ದಾರೆ. 'ಷಟ್ಪದಿ' ಶಬ್ದಪ್ರಯೋಗ ಅಸಾಧುವಲ್ಲದಿರುವುದರಿಂದಲೂ, ತಿದ್ದುಪಡಿಗೆ ಪಾಠಾಂತರಗಳ ಬೆಂಬಲವಿಲ್ಲದಿರುವುದರಿಂದಲೂ, ತೀ.ನಂ.ಶ್ರೀ. ಯವರ ತಿದ್ದುಪಡಿ ಸ್ವೀಕಾರಾರ್ಹವಲ್ಲ. 'ಷಟ್ಪದಿ' ಶಬ್ದ ಪ್ರಯೋಗದ ಸಂಭಾವ್ಯತೆಯನ್ನೂ ಅವರು ಸೂಚಿಸಿದ್ದಾರೆ.

೫. ಈ ಶಬ್ದದ ಪ್ರಾಚುರ್ಯ ಕಡಿಮೆಯಾದಂತೆ ತೋರುವುದಿಲ್ಲ. ಸಾಹಿತ್ಯ ಪರಿಷತ್ತಿನ ನಿಘಂಟುವಿನಲ್ಲಿ 'ಕೀಸಿ ನುಣ್ಣಗೆ ಮಾಡಿದ ಎರಡು ಗಂ(ಗುಂ?)ಡು ಗರಟುಗಳನ್ನೂ ತಂದು ಮುಂದಿಟ್ಟು" ಎಂದು ೧೯೫೩ರಲ್ಲಿ ಪ್ರಕಟವಾದ ಪುಸ್ತಕದಿಂದ ಆಧುನಿಕ ಪ್ರಯೋಗವನ್ನು ಕೊಟ್ಟಿದೆ. (ಪು.೧೮೬೬). ಆದ್ದರಿಂದ, ಪಂಡಿತ ಲಿಪಿಕಾರನೊಬ್ಬ ಕ್ಲಿಷ್ಟ ಪ್ರಯೋಗವನ್ನು ತೆಗೆದುಹಾಕಿ ಸುಲಭವಾಗಿ ಅರ್ಥವಾಗುವ ಮಾತನ್ನು 'ಪ್ರತಿನಿಧಾನ' (Substitution) ಮಾಡಿದ್ದಾನೆ ಎಂದು ಊಹಿಸುವುದು ಹೆಚ್ಚು ಸಕಾರಣವಾಗಿದೆ. ಆದರೆ, ತೀ.ನಂ.ಶ್ರೀ.ಯವರು ಈ ಲೇಖನವನ್ನು ಬರೆದ ಕಾಲಕ್ಕೆ ನಿಘಂಟುವಿನ ಪ್ರಸಕ್ತಭಾಗ (ಸಂಚಿಕೆ ೬, ೧೯೭೩) ಸಿದ್ಧವಾಗಿರಲಿಲ್ಲ ಎಂಬುದನ್ನೂ ಮರೆಯಬಾರದು.

೬. ೧೯೪೬ರ ವೇಳೆಗೆ ತೀ.ನಂ.ಶ್ರೀ.ಗ್ರಂಥಸಂಪಾದನಾಶಾಸ್ತ್ರವನ್ನು ಚೆನ್ನಾಗಿ ವ್ಯಾಸಂಗ ಮಾಡಿದ್ದರು ಎನ್ನುವುದಕ್ಕೆ ಈ ಮಾತೂ ಸಾಕ್ಷಿ. ಇವರ ಜೊತೆ ಜೊತೆಗೇ ಗ್ರಂಥಸಂಪಾದನಕಾರ್ಯದಲ್ಲಿ ಟಿ.ಎಸ್.ವೆಂಕಣ್ಣಯ್ಯನವರೊಂದಿಗೆ ಸಹಕರಿಸುತ್ತಿದ್ದ

ಬಗೆಗೆ ಅವರ ಆಲೋಚನೆಯ ಎಳೆಯನ್ನು ತೋರಿಸುವ ಟಿಪ್ಪಣಿ ಹಾಳೆಗಳಿವೆ. ಅವರ ಟಿಪ್ಪಣಿಗಳ ಆಧಾರದ ಮೇಲೆ ಅವರು ಏನು ಬರೆಯಬೇಕೆಂದಿದ್ದರೆಂಬುದನ್ನು ಊಹಿಸಬಹುದೇ ಹೊರತು, ಅದರ ಸ್ಪಷ್ಟ ಕಲ್ಪನೆ ಮಾಡಿಕೊಡುವುದು ಕಷ್ಟ.

೧೯೬೪; ಸೂತ್ರ ಸಂಖ್ಯೆ ೨೩೮; ಪು.೨೪೬.

೧೩. ಈ ನಿದರ್ಶನಗಳನ್ನು 'ಭಾರತೀಯ ಕಾವ್ಯಮೀಮಾಂಸೆ'ಯಿಂದ ಆಯ್ದುಕೊಂಡಿದೆ. (೧೯೫೩ರ ಪ್ರಥಮ ಮುದ್ರಣ.)

೧೪. ತೀ.ನಂ.ಶ್ರೀ. ಯವರು ನಂಬಿಯಣ್ಣನ ರಗಳೆಯ ಹಸ್ತಪ್ರತಿಗಳ ಸಂಗ್ರಹಕ್ಕಾಗಿ ಮೈಸೂರು ಓರಿಯಂಟಲ್ ಲೈಬ್ರರಿ, ಮದರಾಸು ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್, ರಾವ್‌ಬಹದ್ದೂರ್ ಪಿ.ಜಿ.ಹಳಕಟ್ಟಿ, ಚಿತ್ರದುರ್ಗದ ಶ್ರೀ ಮುರುಘರಾಜೇಂದ್ರ ಮಠದ ಜಗದ್ಗುರುಗಳು ಇವರೊಂದಿಗೆ ಪತ್ರವ್ಯವಹಾರ ನಡಸಿದ್ದರು. ಇವರ ಪರವಾಗಿ ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಭಂಡಾರದ ಮುಖ್ಯಾಧಿಕಾರಿಗಳಾಗಿದ್ದ ಡಾ॥ ಎ.ಎನ್. ನರಸಿಂಹಯ್ಯನವರು ಮದರಾಸಿಗೆ ಬರೆದ ಅತ್ಯಂತ ಮುಂಚಿನ ಪತ್ರದ ತಾರೀಖು ೧೨–೯–೧೯೩೯. ಈ ಪತ್ರವ್ಯವಹಾರ, ಅಚ್ಚಿನ ಮನೆಗೆ ಸಿದ್ಧಪಡಿಸಿದ ಎರಡೂ ಗ್ರಂಥಗಳ ಸ್ವಹಸ್ತಾಕ್ಷರದ ಅಂದವಾದ ಕೈಬರಹದ ಪ್ರತಿಗಳು. ನಂಬಿಯಣ್ಣನ ರಗಳೆಗೆ ಸಂಬಂಧಪಟ್ಟ ಸಂಪಾದನಾಕಾರ್ಯದ ಕೆಲವು ಟಿಪ್ಪಣಿ ಹಾಳೆಗಳು, ಇವೆಲ್ಲವನ್ನು ತೀ.ನಂ.ಶ್ರೀ. ಯವರ ಪುತ್ರ ಚಿ॥ ಟಿ.ಎಸ್. ನಾಗಭೂಷಣ ಒದಗಿಸಿಕೊಟ್ಟು ಉಪಕರಿಸಿದ್ದಾರೆ.

೧೫. ಉದಾ: **ಚ.ಪ್ರತಿ:** "(ಚ) inserts explanations. cp.end of 12th sthala, Press copy. (ಚ)ದಲ್ಲಿ ಸಂಧಿ ಬಿಡಿಸಿ ಬರೆಯುವುದು ಹೆಚ್ಚು. **ಕ–ಪ್ರತಿ:** Many Skt. words like ವೀಥಿ, ಪಂಕ್ತಿ, etc. are spelt correctly...It is a mannerism of (ಕ) to use ಮಹಾಪ್ರಾಣ even where it has no place. I haven't usually noted this in recording Readings.cp. ಇದ್ದ ಸೌಂಧರ, etc. **ಖ–ಪ್ರತಿ:** (ಖ) has a number of scribal mistakes. Of course, it is impossible and even if possible, useless to record them all. Especially in verse portions, where metre is the controlling force, I haven't recorded the omission of or addition of a letter or two or even a word which was evidently a mistake or corruption of simple transposition. cp. i-34, (ಖ) very often confuses between ತ & ಕ, writing ಕ, for ತ. 'ಱ' is used; but sometimes wrongly. cp. ತಳಿಱಂ. Again ರ is sometimes used for ಱ.

೧೬. ಗ್ರಂಥಸಂಪಾದನೆ, ೧೯೬೪; ಪು.೨೦೨–೨೦೩.

೧೭. ನಂಬಿಯಣ್ಣನ ರಗಳೆಗೆ ಬರೆಯಬೇಕೆಂದಿದ್ದ ಕವಿಕಾವ್ಯ ವಿಚಾರ ವಿಮರ್ಶೆಯ

ಸರ್ವಜ್ಞನ ವ್ಯಕ್ತಿತ್ವಕ್ಕೆ ಮಾರು ಹೋಗಿ ಶಿಷ್ಯರಂತೆ ಅವನನ್ನು ಅನುವರ್ತಿಸಿದವರು ಒಬ್ಬಿಬ್ಬರು. ಅವನು ಮತ್ತೆ ಮತ್ತೆ ಹೇಳಿದ ಪದ್ಯಗಳನ್ನು ಬರೆದಿಟ್ಟಿರಬೇಕು; ಇಲ್ಲವೆ ಹೃದ್ಗತ ಮಾಡಿಕೊಂಡು ಮುಖಸ್ಥವಾಗಿ ಸಂರಕ್ಷಿಸಿರಬಹುದು. ಈ ಪದ್ಯಗಳ ಸೊಬಗನ್ನೂ ಬೆಲೆಯನ್ನೂ ಅರಿತವರು ಸರ್ವಜ್ಞನ ಅನುವರ್ತಿಗಳಿಂದ ಹೇಳಿಸಿ ಗ್ರಂಥಸ್ಥವಾಗಿ ಮಾಡಿರಬೇಕು. ಹೀಗೆ ಮುಖಸ್ಥವಾಗಿ ಜನ್ಮಧಾರಣೆ ಮಾಡಿದ ಸರ್ವಜ್ಞನ ಪದಗಳು ಬಾಯಿಂದ ಬರಹಕ್ಕೂ ಮತ್ತೆ ಬರಹದಿಂದ ಬಾಯಿಗೂ, ಒಂದು ಗ್ರಂಥದಿಂದ ಮತ್ತೊಂದು ಗ್ರಂಥಕ್ಕೂ ಪರ್ಯಟನ ಮಾಡಿ, ಅನೇಕ ಹಸ್ತಪ್ರತಿಗಳು ಹುಟ್ಟಿಕೊಂಡಿವೆ. ಪಂಪಾದಿ ಪ್ರತಿಷ್ಠಿತ ಕವಿಗಳ ಸ್ವಹಸ್ತಾಕ್ಷರ ಪ್ರತಿಗಳೇ ಅನ್ಯಲಿಪಿಕಾರರ ಕೈವಾಡದಿಂದ ಪಾಠ ವ್ಯತ್ಯಾಸಗಳಿಗೆ ಎಡೆಗೊಟ್ಟಿರುವಲ್ಲಿ, ಮುಖಸ್ಥವಾಗಿ, ಗ್ರಂಥಸ್ಥವಾಗಿ, ಎರಡೂ ವಿಧಾನಗಳಲ್ಲಿ ಸಾಗಿಬಂದಿರುವ ಸರ್ವಜ್ಞನ ಪದ್ಯಗಳಲ್ಲಿ ಹೇರಳವಾದ ಪಾಠವ್ಯತ್ಯಾಸಗಳಿದ್ದರೆ ಆಶ್ಚರ್ಯಪಡಬೇಕಾಗಿಲ್ಲ. ಜೊತೆಗೆ ಸರ್ವಜ್ಞನೇ ತಾನು ಒಮ್ಮೆ ಹೇಳಿದ ಪದ್ಯವನ್ನು ಮತ್ತೆ ಹೇಳಿದಾಗ ಅಲ್ಪಸ್ವಲ್ಪವೋ ಗಮನಾರ್ಹವೋ ಆದ ವ್ಯತ್ಯಾಸಗಳಾಗಿ, ಒಂದೇ ಪದ್ಯದ ಎರಡುಮೂರು ಪಾಠಭೇದಗಳು ಇರುವ ಸಂದರ್ಭಗಳೂ ಉಂಟು. ಈ ನಿದರ್ಶನಗಳನ್ನು ನೋಡಿ:

ಕಂಡುದನು ನುಡಿದೊಡನೆ ಕೆಂಡವಾಗುವುದೇಕೆ
ಮಂಡಲದ ಒಳಗೆ – ಜಾರದಿಹ ಮನುಜರನು
ಕಂಡಿರುವದುಂಟೆ ಸರ್ವಜ್ಞ

ಕಂಡಂತೆ ಹೇಳಿದರೆ ಕೆಂಡ ಉರಿಯುವುದು ಭೂ–
ಮಂಡಲದ ಒಳಗೆ – ಖಂಡಿತವನಾಡುವರ
ಕಂಡಿಹುದೆ ಕಷ್ಟ ಸರ್ವಜ್ಞ

○ ○ ○ ○ ○ ○

ಸಾಲವನು ತರುವಾಗ ಹಾಲುಬೋನುಂಡಂತೆ
ಸಾಲಿಗನುಬಂದು – ಕೇಳಿದರೆ ಕುಂಡಿಗಂ
ಚೇಳು ಕಡಿದಂತೆ ಸರ್ವಜ್ಞ (ಚು.ಜ.೧೨೬೪)
ಸಾಲವನು ಕೊಂಬಾಗ ಹಾಲು ಹಣ್ಣುಂಡಂತೆ
ಸಾಲಿಗನು ಬಂದು – ಎಳೆವಾಗ ಕಿಬ್ಬದಿಯ
ಕೀಲು ಮುರಿದಂತೆ ಸರ್ವಜ್ಞ (ಚಉ.ಜ.೧೨೬೫)

# ೨. ಸರ್ವಜ್ಞನ ತ್ರಿಪದಿಗಳು; ಪುನಃಪರಿಷ್ಕರಣದ ಅಗತ್ಯ*

ಸರ್ವಜ್ಞ ಜನತೆಯ ಕವಿ; ಆದರೆ ಜಾನಪದ ಕವಿಯಲ್ಲ. ಅವನ ಪದ್ಯಗಳು ಜಾನಪದ ಸತ್ವದಿಂದ ತುಂಬಿವೆ. ಅವನು ಜನತೆಗಾಗಿ ಜನ ಬಳಸುವ ಭಾಷೆಯಲ್ಲಿ, ಜಾನಪದ ಮಟ್ಟದ ತ್ರಿಪದಿಯಲ್ಲಿ ಸಮಯ ಸ್ಫೂರ್ತಿಯಿಂದ ಪದ್ಯಗಳನ್ನು ಕಟ್ಟಿಕೊಂಡು ಹೋದ. ಅವನು ಸಹಜ ಕವಿ; ಅಶುಕವಿ. ಸತತಾಭ್ಯಾಸ ಪ್ರಯತ್ನದಿಂದ, ಪೂರ್ವಕವಿ ಪರಿಚಯದಿಂದ, ಲಕ್ಷಣಕ್ಕೆ ಕಟ್ಟುಬಿದ್ದು, ತಾನು ಕವಿಯಾಗಬೇಕೆಂದು ಬಯಸಿ ಬರೆಯಲಿಲ್ಲ. ಪಂಡಿತರಿರಲಿ, ಪಾಮರರನ್ನು ಮೆಚ್ಚಿಸುವುದು ಕೂಡ ಅವನ ಗುರಿಯಲ್ಲ. ಕವಿಗಜಾರಣ್ಯದಲ್ಲಿ ಅವನು ಹಿಂಡಗಲಿದ ಒಂಟಿ ಸಲಗ; ಅವನು ನಡೆದದ್ದೇ ದಾರಿ. ಲೋಕ ಅವನ ಶಿಕ್ಷಣ ಶಾಲೆ; ಲೋಕಾನುಭವ ಅವನ ಪದ್ಯಗಳ ವಿಷಯ; ಲೋಕಶಿಕ್ಷಣ ಅವನ ಧ್ಯೇಯ. ರಸಾನುಭೂತಿಯಲ್ಲಿ ಸರ್ವಜ್ಞನನ್ನು ಯಾವುದೇ ದೃಷ್ಟಿಯಿಂದ ವಿವೇಚಿಸುವಾಗ, ಈ ಅಂಶಗಳನ್ನು ನೆನಪಿನಲ್ಲಿಡಬೇಕು.

ಸರ್ವಜ್ಞ ಪದ್ಯಗಳನ್ನು ಬರೆಯಲಿಲ್ಲ, ಕಟ್ಟಿಕೊಂಡುಹೋದ ಎಂದು ಹೇಳಿದೆ. ಎಂದರೆ, ಅವನು ಬರಹಬಾರದ ಶುದ್ಧಶುಂಠಿಕಾಯಿ ಎಂದು ಅರ್ಥವಲ್ಲ. ಬರೆದಿಡುವುದರಲ್ಲಿ ಅವನಿಗೆ ನಂಬಿಕೆಯಿಲ್ಲ; ಬರೆಯುವ ಗೋಜಿಗೆ ಅವನು ಹೋಗಿರಲಾರ. "ಬರೆವವರ ಕೂಡೆ ಹಗೆ ಬೇಡ" ಎಂದು ಬಹುಶಃ ವ್ಯಂಗ್ಯವಾಗಿ ಬರೆಯಬಲ್ಲವರ ಶಕ್ತಿಯನ್ನು ಎತ್ತಿ ಆಡಿರುವ ಅವನು ಬರೆಯುವ ಹವ್ಯಾಸದಿಂದ ದೂರವಾದವನೆ.

ಹೇಳಲರಿಯೆ ನಾನು ಹೇಳೆನೆ ಹೇಳಿದೆ
ಭಾಳಲೋಚನನಾ–ಶರಣರ ಆಳಾಗಿ
ಹೇಳಿದೆ ನೋಡ ಸರ್ವಜ್ಞ, (ಪರಿಷ್ಕೃತ ಪಾಠ)

–ಎಂದಿರುವುದರಿಂದ, ಊರೂರು ಕೇರಿಕೇರಿ ತಿರುಗುತ್ತ ಸರ್ವಜ್ಞ ಪದ್ಯಗಳನ್ನು ಹೇಳಿಕೊಂಡು – ಅಥವಾ ಹಾಡಿಕೊಂಡು – ಹೋಗಿರಬೇಕು.

---

* . ಕ.ಸಾ. ಪರಷತ್ಪತ್ರಿಕೆ – ೧೯೭೪, ಸಂಪುಟ: ೬೦, ಸಂಚಿಕೆ: ೧

## ೨

ಸರ್ವಜ್ಞನ ತ್ರಿಪದಿಗಳ ಅಂಕಿತದ ಸಂಬಂಧವಾಗಿಯೇ ಎರಡು ಪಾಠ ಸಂಪ್ರದಾಯ ಗಳಿವೆ. ಒಂದರ ಪ್ರಕಾರ 'ಸರ್ವಜ್ಞ' ಎಂಬುದು ಅಂಕಿತ; ಇನ್ನೊಂದರ ಪ್ರಕಾರ 'ಪರಮಾರ್ಥ'. ಈಚೆಗೆ ಡಾ॥ ಎಲ್.ಬಸವರಾಜು ಅವರು ಅತ್ಯಂತ ಪ್ರಾಚೀನವಾದ ಒಂದು ಓಲೆಗರಿಯ ಹಸ್ತಪ್ರತಿಯ ಆಧಾರದ ಮೇಲೆ, 'ಪರಮಾರ್ಥ' ಎಂಬ ಅಂಕಿತವನ್ನೇ ಸ್ವೀಕರಿಸಿ, ತಮ್ಮ ಪರಿಷ್ಕೃತ ಮುದ್ರಣವನ್ನು 'ಪರಮಾರ್ಥ ವಚನಗಳು' ಎಂದೇ ಹೆಸರಿಸಿದ್ದಾರೆ. ಆದರೆ ಬಹುಸಂಖ್ಯೆಯ ಹಸ್ತಪ್ರತಿಗಳಲ್ಲಿ "ಸರ್ವಜ್ಞ" ಎಂಬ ಅಂಕಿತವಿರುವುದು ವಿದ್ವಾಂಸರಿಂದನಮಗೆ ತಿಳಿದು ಬಂದಿರುವ ಸಂಗತಿ. ಈ 'ಬಹುಸಂಖ್ಯೆ' ಇಂದಿನ ಪ್ರಜಾಪ್ರಭುತ್ವದ ರಾಜಕೀಯದಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಬಹುದೇ ಹೊರತು ಗ್ರಂಥಸಂಪಾದನೆಯಂಥ ಶಾಸ್ತ್ರ ಪ್ರಪಂಚದಲ್ಲಿ ಅಲ್ಲ. ಒಂದೇ ಒಂದು ಹಸ್ತಪ್ರತಿ ಕವಿಪಾಠವನ್ನು ಉಳಿಸಿಕೊಂಡು, ಇತರ ಹಲವು ಹಸ್ತಪ್ರತಿಗಳು ಅಪಪಾಠವನ್ನೇ ಮುಂದುವರಿಸಿಕೊಂಡು ಬಂದಿರುವ ಸಾಧ್ಯತೆ ಉಂಟು. ಹೀಗಿರುವಲ್ಲಿ, ಯಾವ ಅಂಕಿತ ಸರಿ ಎಂದು ನಿರ್ಣಯಿಸುವಾಗ ವಿಚಾರದ ಒರೆಗಲ್ಲನ್ನು ಉಪಯೋಗಿಸಬೇಕು.

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ವಚನಕಾರರೂ ಹರಿದಾಸರೂ ಬಳಸಿರುವ ಅಂಕಿತಗಳನ್ನು ಪರಿಶೀಲಿಸಿದರೆ ಅಂಕಿತ ಸಾಧಾರಣವಾಗಿ ಕೃತಿಕಾರನ ಇಷ್ಟದೈವದ ಹೆಸರಾಗಿರುವುದು ಕಂಡುಬರುತ್ತದೆ. "ಪರಮಾರ್ಥ' ಎಂದರೆ ಪರಮಪುರುಷಾರ್ಥವಾದ 'ಮೋಕ್ಷ' ಎಂದು ಅರ್ಥವಾದೀತೇ ಹೊರತು ಯಾವ ದೈವದ ನಾಮಾಂತರವೂ ಆಗದು. ಒಂದೆರಡು ಹಸ್ತಪ್ರತಿಗಳಲ್ಲಿ 'ಪರಮಾರ್ಥ' ಎಂಬ ಅಂಕಿತ ಏಕೆ ಪ್ರಯೋಗವಾಗಿದೆ ಎಂಬುದನ್ನು ಪರಿಶೋಧಿಸಿ ತಿಳಿಯಬೇಕಾಗಿದೆ.[೧] 'ಪರಮಾರ್ಥ' ಎಂಬ ಪಾಠವನ್ನು ಆರ್. ನರಸಿಂಹಾಚಾರ್ಯರೇ ಗಮನಿಸಿ, "ನಮಗೆ ದೊರೆತ ಒಂದು ಓಲೆಯ ಪ್ರತಿಯಲ್ಲಿ ಪ್ರತಿಪದ್ಯವೂ ಪರಮಾರ್ಥ

---

೧. "ಪರಮಾರ್ಥ" ಪಾಠಸಂಪ್ರದಾಯಕ್ಕೆ ಮೂಲವಾದ ಮಾತೃಕೆಯಲ್ಲಿ 'ಪರಮಾತ್ಮ' ಎಂಬುದು ಲಿಪಿಕಾರನ ಬರಹದಲ್ಲಿ 'ಪರಮಾರ್ತ' ಎಂಬ ಭ್ರಮೆಗೆ ಕಾರಣವಾಗುವಂತೆ ಲಿಖಿತವಾಗಿದ್ದು, ತರುವಾಯದ ಸಂಪ್ರತಿಕಾರರು ಹಾಗೆಯೇ ಭ್ರಮಿಸಿ, ಅಲ್ಪ ಪ್ರಾಣ 'ತ' ಕಾರವನ್ನು ಮಹಾಪ್ರಾಣವಾಗಿಸಿ 'ಪರಮಾರ್ಥ' ಎಂದು ತಿದ್ದಿರಬಹುದು. ಈ ಸಂದರ್ಭದಲ್ಲಿ "ಸರ್ವಜ್ಞ" ಪದದಂತೆ "ಪರಮಾತ್ಮ" ವೂ ದೇವರವಿಶೇಷಣವಾಗುತ್ತದೆ. ಸರ್ವಜ್ಞನು ತನ್ನ ಇಷ್ಟಾನುಸಾರ ಎರಡು ಪದಗಳನ್ನೂ ಪ್ರಯೋಗಿಸಿರಬಹುದು. ಏಕರೂಪತೆಯ ದೃಷ್ಟಿಯಿಂದ ಸಂಪ್ರತಿಕಾರರು ಒಂದನ್ನು ಇಷ್ಟಾನುಸಾರ ಸ್ವೀಕರಿಸಿ, ಎರಡು ಪಾಠಸಂಪ್ರದಾಯಗಳಿಗೆ ಕಾರಣವಾಗಿರಬಹುದು.

ಸಾಲವನು ಕೊಂಬಾಗ ಹಾಲೋಗರುಂಡಂತೆ
ಸಾಲಿಗನು ಬಂದು – ಎಳೆವಾಗ ಕಿಬ್ಬದಿಯ
ಕೀಲು ಮುರಿದಂತೆ ಸರ್ವಜ್ಞ (ಕಿಕೊ. ಪು.೧೫೪೮)

ಇಂಥ ಸಂದರ್ಭಗಳಲ್ಲಿ ಯಾವ ಪದ್ಯವನ್ನು ಸ್ವೀಕರಿಸಬೇಕು, ಅಥವಾ ಎಲ್ಲ ಪದ್ಯಗಳನ್ನೂ ಇಟ್ಟುಕೊಳ್ಳಬೇಕೆ, ಎಂಬ ಸಮಸ್ಯೆ ಗ್ರಂಥ ಸಂಪಾದಕನ ಮುಂದೆ ಪೆಡಂಭೂತವಾಗಿ ನಿಲ್ಲುತ್ತದೆ.

ಸರ್ವಜ್ಞನ ತ್ರಿಪದಿಗಳ ಮೂಲಪಾಠ ನಷ್ಕರ್ಷೆಯ ಸಂಬಂಧವಾಗಿ ಇಂಥ ಹಲವಾರು ಸಮಸ್ಯೆಗಳು ಪರಿಹಾರಕ್ಕಾಗಿ ಕಾದಿವೆ. ಸರ್ವಜ್ಞನ ತ್ರಿಪದಿಗಳ ಸಂಗ್ರಹ ಮತ್ತು ಸಂಪಾದನ ಕಾರ್ಯಗಳನ್ನು ತಮ್ಮ ಜೀವಿತದ ಧ್ಯೇಯವಾಗಿಟ್ಟುಕೊಂಡು, ಅವನ್ನು ಒಂದು ತಪಸ್ಸು ಎಂಬಂತೆ ಸಾಧಿಸಿ ಕೃತಕೃತ್ಯರಾದ ದಿ॥ ರೆ॥ ಚನ್ನಪ್ಪ ಉತ್ತಂಗಿಯವರು ಕನ್ನಡ ಸಾಹಿತ್ಯಕ್ಕೆ ಸಲ್ಲಿಸಿರುವ ಸೇವೆ ಅಮೋಘವಾದುದು. ಸರ್ವಜ್ಞನ ಪದ್ಯಗಳನ್ನು ಅನುಸರಿಸಿರುವ ಅನ್ಯಕರ್ತೃಕ ಪದ್ಯಗಳು ಹೇರಳವಾಗಿ ಪ್ರಕ್ಷೇಪವಾಗಿವೆ ಎಂದು ಹೇಳಿ, ಅವನ್ನು ಗುರುತಿಸುವ ಪ್ರಯತ್ನವನ್ನೂ ಮಾಡಿದ್ದಾರೆ ಅವರು. ಈ ದಿಕ್ಕಿನಲ್ಲಿ ಪುನಃಪರಿಶೀಲನೆಯ ಅಗತ್ಯವೂ ಇದೆ. ಅವರಾಗಲಿ, ಈಚೆಗೆ ಪ್ರಕಟವಾಗಿರುವ ಬೇರೆಬೇರೆ ಪರಿಷ್ಕೃತ ಮುದ್ರಣಗಳ ಸಂಪಾದಕರುಗಳಾಗಲಿ ಖಚಿತವೂ ಶಾಸ್ತ್ರೀಯವೂ ಆದ ಇಲ್ಲ ವಿಧಾನಗಳನ್ನೂ ಅನುಸರಿಸಿ ಮೂಲ ಪಾಠ ನಿಷ್ಕರ್ಷೆಗೆ ಸರ್ವಪ್ರಯತ್ನ ಮಾಡಿದಂತೆ ಕಂಡುಬರುವುದಿಲ್ಲ; ಹಸ್ತಪ್ರತಿಗಳ ಪಾಠಾಂತರಗಳನ್ನು ಪರಿಶೀಲಿಸಿ, ತಮಗೆ ಸರಿಕಂಡ ಪಾಠವನ್ನು ಒಪ್ಪಿಕೊಂಡಂತೆ ತೋರುತ್ತದೆ. ಯಾವುದೇ ಒಂದು ಕವಿಕೃತಿಯ ಸಂಪಾದನಾಕಾರ್ಯದಲ್ಲಿ ದೊರೆತಷ್ಟು ಸಾಕ್ಷ್ಯಾಧಾರಗಳೆಲ್ಲವನ್ನೂ ಉಪಯೋಗಿಸಿಕೊಂಡಮೇಲೂ ಕವಿಪಾಠ ನಿಷ್ಕರ್ಷೆ ಸಮರ್ಪಕವಾಗಿ ಆಗಿಲ್ಲ ಎಂಬ ಅನುಮಾನ ಉಳಿದಾಗ, ಸಂಪಾದಕ ತನ್ನ ಪ್ರತಿಭೆಯ ಬಲದಿಂದ ಕವಿಪಾಠವನ್ನು ಊಹಿಸಬೇಕಾದ ಸಾಹಸವನ್ನು ಕೈಗೊಳ್ಳಬೇಕಾಗುತ್ತದೆ; ಈ ಸಂದರ್ಭದಲ್ಲಿ ಕೂಡ ಅವನು ತನ್ನ ಇಚ್ಛಾನುಸಾರ ಪಾಠವನ್ನು ತಿದ್ದಹೋಗದೆ, ಶಾಸ್ತ್ರಸಿದ್ಧವಾದ ನಿಯಮಗಳನ್ನು ಅನುಸರಿಸಿಯೋ, ಇಲ್ಲವೆ ಶಾಸ್ತ್ರೀಯವೆನ್ನಬಹುದಾದ ಹೊಸ ನಿಯಮವನ್ನು ಕಲ್ಪಿಸಿಕೊಂಡೋ ಪರಿಷ್ಕರಣ ಕಾರ್ಯವನ್ನು ಮಾಡಬೇಕಾಗುತ್ತದೆ. ಸರ್ವಜ್ಞನ ತ್ರಿಪದಿಗಳ ವಿಷಯದಲ್ಲಿ ಇಂಥ ಕಾರ್ಯ ಆಗಬೇಕಾಗಿದೆ. ಅದನ್ನು ಕೆಲವು ನಿದರ್ಶನಗಳಿಂದ ದಿಗ್ದರ್ಶನ ಮಾಡುವುದು ಇಲ್ಲಿನ ನಮ್ರ ಪ್ರಯತ್ನ.

ಪದ್ಯಕಾವ್ಯವಾಗಿದ್ದರೆ, ನಿರ್ದಿಷ್ಟ ಪದ್ಯದ ಒಂದು ಸಂದರ್ಭದಲ್ಲಿ ಉಪಲಬ್ಧವಾಗಿರುವ, ಎಲ್ಲ ಪಾಠಾಂತರಗಳಲ್ಲಿಯೂ ಛಂದೋದೋಷ ಕಂಡುಬಂದರೆ, ಆ ಪದ್ಯದ ಛಂದಸ್ಸನ್ನು ಸರಿಪಡಿಸುವುದರಿಂದ ಕವಿಪಾಠ ದೊರಕುವ ಸಾಧ್ಯತೆಯಿದೆ. ಸರ್ವಜ್ಞನ ತ್ರಿಪದಿಗಳನ್ನು ಪರಿಷ್ಕರಿಸುವ ಸಂದರ್ಭದಲ್ಲಿ ಅವನು ಬಳಸಿರುವ ಛಂದಸ್ಸನ್ನು ಆಧಾರವಾಗಿಟ್ಟುಕೊಂಡು ಪರಿಷ್ಕಾರ ಮಾಡಬೇಕಾದ ಅಗತ್ಯ ಬಹಳವಾಗಿದೆ. ಸರ್ವಜ್ಞನ ಪದ್ಯಗಳ ಛಂದಸ್ಸಿನ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ.

ನಾಗವರ್ಮನ ಛಂದೋಂಬುಧಿ, ಜಯಕೀರ್ತಿಯ ಛಂದೋನುಶಾಸನ, ಮುಂತಾದ ಪ್ರಾಚೀನ ಕನ್ನಡ ಮತ್ತು ಸಂಸ್ಕೃತ ಲಕ್ಷಣ ಗ್ರಂಥಗಳಿಂದಲೂ ಪ್ರಾಚೀನ ಶಾಸನಗಳಲ್ಲಿ ದೊರಕುವ ತ್ರಿಪದಿಗಳಿಂದಲೂ ಪಂಪ ಮೊದಲ್ಗೊಂಡು ಷಡಕ್ಷರದೇವನವರೆಗಿನ ಕಾವ್ಯಗಳಲ್ಲಿನ ತ್ರಿಪದಿಗಳಿಂದಲೂ ಇಂದಿಗೂ ಜನತೆಯ ಬಾಯಲ್ಲಿ ಜೀವಂತವಾಗಿರುವ ತ್ರಿಪದಿಗಳಿಂದಲೂ ತ್ರಿಪದಿಯ ಛಂದಸ್ಸು (ತ್ರಿಮೂರ್ತಿ) ದೇವಗಣಾತ್ಮಕ (ಅಥವಾ ಈಗ ಕರೆಯುವಂತೆ ಅಂಶಗಣಾತ್ಮಕ) ಎಂಬುದು ಸ್ಪಷ್ಟ. ಮೂಲಷಟ್ಪದಿಯೂ ಅಂಶಗಣಾತ್ಮಕವಾಗಿದ್ದು ಕಾಲಕ್ರಮದಲ್ಲಿ ಮಾತ್ರಾಗಣಾತ್ಮಕವಾಗಿ ಪರಿಣಮಿಸಿದ್ದು ಕನ್ನಡ ಛಂದಸ್ಸಿನ ಚರಿತ್ರೆಯನ್ನು ಅರಿತವರಿಗೆ ಗೊತ್ತಿರುವ ವಿಷಯ. ಅದೇ ರೀತಿಯಲ್ಲಿ, ಅಂಶಲಯದ ತ್ರಿಪದಿ ಮಾತ್ರಾಲಯಕ್ಕೆ ತಿರುಗಿರುವುದಕ್ಕೆ ಕನ್ನಡ ಕಾವ್ಯ ಪ್ರಪಂಚದಲ್ಲಿ ಸಾಕಷ್ಟು ನಿದರ್ಶನಗಳು ದೊರಕುತ್ತವೆ. ಈ ಬೆಳವಣಿಗೆ ವಚನಕಾರರ ಕಾಲದಲ್ಲಿಯೆ (ಎಂದರೆ ೧೨ನೆಯ ಶತಮಾನದಲ್ಲಿ) ಪ್ರಾರಂಭವಾಯಿತು. ಇದಕ್ಕೆ ಮುಖ್ಯ ಕಾರಣ, ಅಕ್ಕರ ತ್ರಿಪದಿ ಸಾಂಗತ್ಯ ಮುಂತಾದ ಅಚ್ಚ ಕನ್ನಡ ಮಟ್ಟುಗಳಲ್ಲಿ ಬ್ರಹ್ಮ, ವಿಷ್ಣು, ರುದ್ರ ಎಂಬ ತ್ರಿಮೂರ್ತಿಗಣಗಳ ಪೈಕಿ ಮೂರು ಅಂಶಗಳ ವಿಷ್ಣು ಗಣಕ್ಕಿರುವ ಸಾರ್ವಪ್ರಾಧಾನ್ಯ; ಹಾಗೂ ವಿಷ್ಣು ಗಣ ವಿನ್ಯಾಸದಲ್ಲಿ ಪಂಚಮಾತ್ರಾಗಣಗಳ ಪ್ರಾಮುಖ್ಯ. ವಿಷ್ಣುಗಣದ ಎಂಟು ಬಗೆಯ ಪ್ರಸ್ತಾರಗಳಲ್ಲಿ ಎರಡು ಷಣ್ಮಾತ್ರಾಪ್ರಸ್ತಾರ, ನಾಲ್ಕು ಪಂಚಮಾತ್ರಾ ಪ್ರಸ್ತಾರ, ಎರಡು ಚತುರ್ಮಾತ್ರಾ ಪ್ರಸ್ತಾರ ಕಂಡು ಬರುತ್ತವೆ. ಹೀಗಿರುವುದರಿಂದ, ಅಂಶಗಣಾತ್ಮಕವಾದ ಯಾವುದೇ ಪದ್ಯರಚನೆಯಲ್ಲಿ ಪಂಚಮಾತ್ರಾಗಣಗಳ ಪ್ರಾಚುರ್ಯವಿರುವುದು ಸಹಜ. ಸರ್ವಜ್ಞನ ತ್ರಿಪದಿಗಳಲ್ಲೂ ಈ ಲಕ್ಷಣವಿರುವುದು ಕೇವಲ ಸಹಜ. ಅಂಶಲಯದ ರಹಸ್ಯವನ್ನರಿಯದ ಪ್ರಾಚೀನ ಸಂಪ್ರತಿಕಾರರೇ ಸರ್ವಜ್ಞನ ತ್ರಿಪದಿಗಳಲ್ಲಿ ಚತುರ್ಮಾತ್ರಾಗಣಗಳು ಕಂಡುಬಂದಲ್ಲೆಲ್ಲಾ ಅವನ್ನು ಪಂಚಮಾತ್ರಾಗಣಗಳಾಗಿ ಮಾರ್ಪಡಿಸುವ ಪ್ರಯತ್ನ ಮಾಡಿದ್ದಾರೆ; ಇದರಿಂದಾಗಿ, ಸರ್ವಜ್ಞನ ತ್ರಿಪದಿಗಳನ್ನು ಮೊದಲ ಬಾರಿಗೆ ಒತ್ತಟ್ಟಿಗೆ ಕಲೆಹಾಕಿ ಪ್ರಕಟಿಸಿದ ಚೆನ್ನಪ್ಪ ಉತ್ತಂಗಿಯವರು

ಎಂದು ಮುಗಿವುದಲ್ಲದೆ ಗ್ರಂಥಕ್ಕೆ ಪರಮಾರ್ಥಿಕೆ ಎಂಬ ಹೆಸರೂ ಹೇಳಿದೆ" ಎಂದಿದ್ದಾರೆ. (ಕರ್ಣಾಟಕ ಕವಿಚರಿತೆ, ಸಂಪುಟ೨, ಕ.ಸಾ.ಪರಿಷತ್ತಿನ ತಿದ್ದಿದ ಮುದ್ರಣ, ೧೯೭೩; ಪು.೪೯೯). ಚೆನ್ನಪ್ಪ ಉತ್ತಂಗಿಯವರ ಜನಪದಾವೃತ್ತಿಯ ಮುದ್ರಣದಲ್ಲೂ "ಪರಮಾರ್ಥ" ಅಂಕಿತವುಳ್ಳ ಕೆಲವು ಪದ್ಯಗಳಿವೆ (೪೦೬–೪೧೧). "ಪರಮಾರ್ಥ" ಯಾವ ದೈವದ ಅಂಕಿತವೂ ಅಲ್ಲ. "ಸರ್ವಜ್ಞ" (omniscient) ಭಗವಂತ ಅಥವಾ ಪರಮಾತ್ಮನಿಗೆ ಮಾತ್ರ ಸಲ್ಲುವ ವಿಶೇಷಣ. ಆದ್ದರಿಂದ, ವಚನಕಾರರ ಮೇಲ್ಪಂಕ್ತಿಯನ್ನು ಅನುಸರಿಸಿ ಸರ್ವಜ್ಞನು ಪದ್ಯಗಳ ಕೊನೆಯಲ್ಲಿ ಪರಮಾತ್ಮನ ವಿಶೇಷಣವಾದ "ಸರ್ವಜ್ಞ" ಪದವನ್ನೇ ತನ್ನ ಕೃತಿಮುದ್ರಿಕೆಯಾಗಿ ಇಟ್ಟುಕೊಂಡಿದ್ದಾನೆ ಎಂದು ತಿಳಿಯುವುದು ಸಾಧು. ಸ್ವವಿಚಾರವನ್ನು ತಿಳಿಸುವ ಪದ್ಯಗಳಲ್ಲಿ ಕವಿ ಹೇಗೆ ಸರ್ವಜ್ಞನೆನಿಸಿದ ಎಂಬುದರ ವಿವರಣೆಯಿದೆ. "ಸರ್ವಜ್ಞನೆಂಬುವನು ಗರ್ವದಿಂದಾದವನೆ? ಸರ್ವರೊಳು ಒಂದೊಂದು ನುಡಿಗಲಿತು ಪರ್ವತವೆ ಆದವನು" ಎಂಬವನ ಮಾತಿನಲ್ಲಿ ಹೆಸರಿನ ಸೂಚನೆ ಸ್ಪಷ್ಟವಾಗಿದೆ. ಸರ್ವಜ್ಞನ ಮುಂಚಿನ ಹೆಸರು ಯಾವುದು ಎಂಬುದು ತಿಳಿದು ಬಂದಿಲ್ಲ. ಅವನ ಪ್ರಸಿದ್ಧವಾದ ಹೆಸರು ಸರ್ವಜ್ಞ ಎಂದಿರುವುದರಿಂದಲೂ,

ಒಬ್ಬನಲ್ಲದೆ ಜಗಕೆ ಇಬ್ಬರುಂಟೇ ಮತ್ತೆ
ಒಬ್ಬ ಸರ್ವಜ್ಞ–ಕರ್ತನೀ ಜಗಕೆಲ್ಲ
ಒಬ್ಬನೇ ದೈವ ಸರ್ವಜ್ಞ

ಎಂದು ದೈವವನ್ನು "ಸರ್ವಜ್ಞ" ಎಂದು ನಿರ್ದೇಶಿಸಿರುವುದರಿಂದಲೂ ಒಂದು ವೇಳೆ ಕೆಲವೊಮ್ಮೆ ಸರ್ವಜ್ಞನು ತನ್ನ ಪದ್ಯಗಳನ್ನು 'ಪರಮಾರ್ಥ' (ಅಥವಾ 'ಪರಮಾತ್ಮ') ನಾಮಾಂಕಿತದಿಂದ ಹೇಳಿದ್ದರೂ ಕೂಡ 'ಸರ್ವಜ್ಞ' ಎಂಬ ನಾಮಾಂಕಿತವನ್ನೇ ಅವನ ಪದ್ಯಗಳ ನಾಮಾಂಕಿತ ಎಂದು ಸ್ವೀಕರಿಸುವುದು ಹೆಚ್ಚು ಸಮರ್ಥನೀಯವಾಗಿದೆ.

## ೩

ಸರ್ವಜ್ಞ ವಚನಗಳ ಮೂಲಪಾಠವನ್ನು ನಿಷ್ಕರ್ಷೆ ಮಾಡುವಲ್ಲಿ ಲಿಖಿತ ಕೃತಿಗಳ ವಿಷಯದಲ್ಲಿ ಅನ್ವಯಿಸುವ ಗ್ರಂಥಸಂಪಾದನಾಶಾಸ್ತ್ರದ ನಿಯಮಗಳನ್ನು ಸಂಪೂರ್ಣವಾಗಿ ಅನ್ವಯಿಸುವುದು ಕಷ್ಟವೆಂದು ತೋರುತ್ತದೆ. ಕೃತಿ

ತೃಪ್ತಿಕರವಾಗಿ ನಿರ್ವಹಿಸಿದರೆ, ಸರ್ವಜ್ಞನ ತ್ರಿಪದಿಗಳ ಶುದ್ಧಪಾಠನಿರ್ಣಯದಲ್ಲಿ ಅರ್ಧ ದೂರವಾದರೂ ಸಾಗಿದಂತಾಗುವುದು. ಒಂದೆರಡು ಉದಾಹರಣೆಗಳ ಮೂಲಕ ನನ್ನ ವಾದದ ಸಂಮಜಸತೆಯನ್ನು ವಿಶದಪಡಿಸುತ್ತೇನೆ. ಈ ಹಿಂದೆಯೇ ಉದಾಹರಿಸಿರುವ, ತುಂಬ ಪ್ರಸಿದ್ಧವಾದ, ಸಾಲ ಮತ್ತು ದೈವವನ್ನು ಕುರಿತ ಪದ್ಯಗಳಲ್ಲಿ ಮೂಲಭೂತವಾದ ಮಾರ್ಪಾಟುಗಳನ್ನು ಮಾಡದೆ, ಅವನ್ನು ಅಂಶಗಣಾತ್ಮಕವಾಗಿ ಮಾಡಬಹುದು:

ಸಾಲವ ಕೊಂಬಾಗ ಹಾಲೋಗರುಂಡಂತೆ
ಸಾಲಿಗ ಬಂದು–ಎಳೆವಾಗ ಕಿಬ್ಬದಿ
ಕೀಲ್ಮುರಿದಂತೆ ಸರ್ವಜ್ಞ

ಒಬ್ಬನಲ್ಲದೆ ಜಗಕಿಬ್ಬರುಂಟೇ ಮತ್ತೆ
ಒಬ್ಬ ಸರ್ವಜ್ಞಕರ್ತನು ಜಗಕೆಲ್ಲ
ಒಬ್ಬನೇ ದೈವ ಸರ್ವಜ್ಞ।

ಸರ್ವಜ್ಞನ ತ್ರಿಪದಿಗಳ ಅಂಶಲಯವನ್ನು ಮಾತ್ರಾಲಯಕ್ಕೆ ತಿರುಗಿಸುವಾಗ ಪ್ರಥಮಾ ವಿಭಕ್ತಿ ಪ್ರತ್ಯಯ, ಅನುಸ್ವಾರದ ಬಿಂದು, ಷಷ್ಠಿ ವಿಭಕ್ತಿಯ ದೀರ್ಘೀಕರಣ, ಮುಂತಾದುವು ಉದ್ದೇಶಪೂರ್ವಕವಾಗಿಯೋ ಉದ್ದೇಶರಹಿತವಾಗಿಯೋ ನಡೆದಿರುವ ಪ್ರಕ್ಷೇಪಗಳೇ ಸರಿ; ಇಡಿಯ ಪದ್ಯಗಳೇ ಪ್ರಕ್ಷೇಪವಾಗಿರುವ ಸಂಗತಿಯನ್ನು ಉತ್ತಂಗಿಯವರೇ ತಿಳಿಸಿರುತ್ತಾರೆ. ಇವುಗಳನ್ನೆಲ್ಲ ನಿರ್ಮೂಲ ಮಾಡಿ ಸರ್ವಜ್ಞಮೂರ್ತಿಯ ನಿಜ ಸ್ವರೂಪವನ್ನು ಕನ್ನಡಿಗರಿಗೆ ತೋರಿಸಿಕೊಡಬೇಕಾದದ್ದು ವಿದ್ವಾಂಸರ ಕರ್ತವ್ಯ.*

---

೧. ಈ ಸಂದರ್ಭದಲ್ಲಿ ಒಂದು ಮುಖ್ಯ ಸಂಗತಿಯನ್ನು ಗಮನಿಸಬೇಕು. ಅದೇನೆಂದರೆ, ಪಂಚಮಾತ್ರಾಗಣಗಳ ಲಯಸ್ವರೂಪಕ್ಕೂ ಅಂಶಗಣಗಳ ಲಯಸ್ವರೂಪಕ್ಕೂ ಇರುವ ಮೂಲಭೂತ ವ್ಯತ್ಯಾಸ. ಇದನ್ನು ಲಘುಗುರುಗಳ ಲೆಕ್ಕಾಚಾರದ ಪ್ರಸ್ತಾರದ ಮೂಲಕ ತೋರಿಸಲಾಗುವುದಿಲ್ಲ. ಪಠನ ಮೂಲಕವೇ ತೋರಿಸಬೇಕು. ಸಂಪೂರ್ಣವಾಗಿ ಪಂಚಮಾತ್ರಾಗಣಾತ್ಮಕವಾದ ತ್ರಿಪದಿಯನ್ನು ಅಂಶಲಯದಲ್ಲಿ ಹಾಡಬಹುದು. ವಚನಕಾರರು ಹೀಗೆಯೇ ಹಾಡುತ್ತಿದ್ದರೋ ಏನೋ, ಈ ಸಂದರ್ಭದಲ್ಲಿ, ಕೆಲವೇಳೆ, ಪಂಚಮಾತ್ರಾಗಣ ರುದ್ರಗಣಕ್ಕೆ ಸಂವಾದಿಯಾಗಿದ್ದು, ವಿಷ್ಣು ಗಣದ ಲಯಮಾನಕ್ಕೆ ಕುಗ್ಗುತ್ತದೆ–ಉಚ್ಚಾರಣೆಯಲ್ಲಿ.

ಅವು ಪಂಚಮಾತ್ರಾಗಣಘಟಿತ ಎಂಬ ಭ್ರಮೆಗೆ ಒಳಗಾಗಿ, ಅವನ್ನು ಸಂಪೂರ್ಣವಾಗಿ ಪಂಚಮಾತ್ರಾಗಣಾತ್ಮಕವಾಗಿ ಮಾಡಿಬಿಟ್ಟಂತೆ ತೋರುತ್ತದೆ. ಅವರು ತಮ್ಮ ಪ್ರಸ್ತಾವನೆಯಲ್ಲಿ ಸರ್ವಜ್ಞನ ತ್ರಿಪದಿಗಳ ಛಂದಸ್ಸನ್ನು ಪಂಚಮಾತ್ರಾಗಣಾತ್ಮಕವಾಗಿಯೇ ಲಕ್ಷಣಿಸಿದ್ದಾರೆ. ಬಹುಶಃ ಇದನ್ನು ಗಮನಿಸಿ, ದ್ರಾವಿಡ ಛಂದಸ್ಸಿನ ರಹಸ್ಯವನ್ನು ಕರತಲಾಮಲಕ ಮಾಡಿಕೊಂಡ, ಷಟ್ಪದಿಗಳಲ್ಲಿ ಕೂಡ ಅಂಶದ ನಡೆಯನ್ನು ಗುರುತಿಸಬಹುದು ಎಂದ, ಬಿ.ಎಂ.ಶ್ರೀ.ಯವರು ಕೂಡ ಸರ್ವಜ್ಞನ ತ್ರಿಪದಿಗಳನ್ನು ಪಂಚಮಾತ್ರಾಗಣಾತ್ಮಕ ಎಂದೇ ಅಂಗೀಕರಿಸಿಬಿಟ್ಟಿದ್ದು ಅತ್ಯಂತ ಸೋಜಿಗವಾಗಿದೆ. ಚನ್ನಪ್ಪ ಉತ್ತಂಗಿಯವರು ಹೊರತಂದ ಸರ್ವಜ್ಞ ವಚನಗಳ ಜನಪದಾವೃತ್ತಿಗೆ ಮುನ್ನುಡಿ ಬರೆದಿರುವ ಪಂಡಿತ ಶಿವಮೂರ್ತಿಶಾಸ್ತ್ರಿಗಳೂ ಇವರನ್ನೇ ಅನುಸರಿಸಿದ್ದಾರೆ. ಕನ್ನಡ ಛಂದಸ್ಸನ್ನು ಆಳವಾಗಿ ಅಭ್ಯಾಸ ಮಾಡಿರುವ ಡಾ॥ ಟಿ.ವಿ.ವೆಂಕಟಾಚಲಶಾಸ್ತ್ರಿ ಯವರು, "ಸರ್ವಜ್ಞನ ತ್ರಿಪದಿಗಳು ಪ್ರಾಚೀನವಾದವು,.... ... ಅಂಶಲಯದಲ್ಲದ್ದವು, ಕೆಲವನ್ನು ಮಾತ್ರಾಲಯಕ್ಕೆ ತಿರುಗಿಸಲು ಪ್ರಯತ್ನಿಸಿದಂತೆ ಕಾಣುತ್ತದೆ' ಎಂದು ಸದ್ಯಕ್ಕೆ ಭಾವಿಸಬಹುದು" ಎಂಬ ಸರಿಯಾದ ಅಭಿಪ್ರಾಯವನ್ನೇ ತಳೆದಿದ್ದರೂ, "ಸರ್ವಜ್ಞನ ತ್ರಿಪದಿಗಳ ಶುದ್ಧಪಾಠ ನಿರ್ಣಯವಾದರೆ ಅವುಗಳ ಛಂದಸ್ಸಿನ ವಿಷಯದಲ್ಲೂ ಒಂದು ನಿರ್ಣಯ ಸಾಧ್ಯವಾಗಬಹುದೆಂದು ತೋರುತ್ತದೆ" ಎಂದು ಹೇಳಿರುವುದು ಸ್ವಲ್ಪ ವಿಚಿತ್ರವಾಗಿ ಕಾಣುತ್ತದೆ. ಸರ್ವಜ್ಞನ ತ್ರಿಪದಿಗಳ ಶುದ್ಧಪಾಠ ನಿರ್ಣಯಕ್ಕೆ ಅವು ಅಂಶಲಯದಲ್ಲಿವೆ ಎಂಬ ತಿಳಿವಳಿಕೆಯೇ ಮುಖ್ಯ ಸಾಧನ ಎಂದು ನನ್ನ ಖಚಿತವಾದ ನಂಬಿಕೆ. ಸರ್ವಜ್ಞನ ತ್ರಿಪದಿಗಳು ಅಂಶಗಣಾತ್ಮಕ ಎಂಬ ಮಾತನ್ನು ನಾನು ಹೊಸದಾಗಿ ಹೇಳುತ್ತಿಲ್ಲ. ಶ್ರೀ ಸೇಡಿಯಾಪು ಕೃಷ್ಣಭಟ್ಟರು 'ಸಮರ್ಪಣೆ' ಎಂಬ ಸಂಭಾವನಾ ಗ್ರಂಥದಲ್ಲಿ 'ತ್ರಿಪದಿಯ ಲಕ್ಷಣ'ವನ್ನು ಕುರಿತು ಕೂಲಂಕಷವಾಗಿ ವಿವೇಚನೆ ಮಾಡಿದ್ದಾರೆ. ಅವರು ತಮ್ಮ ಲೇಖನದಲ್ಲಿ ಸರ್ವಜ್ಞನ ತ್ರಿಪದಿಗಳು ಮಾತ್ರಾಗಣದ ಧಾಟಿಗೆ ತಿರುಗಿಲ್ಲ ಎಂಬ ಅಂಶವನ್ನು ಸ್ಪಷ್ಟಪಡಿಸಿದ್ದಾರೆ. ಇದು ವಸ್ತುಸ್ಥಿತಿ. ಸರ್ವಜ್ಞನ ತ್ರಿಪದಿಗಳು ಮಾತ್ರಾಗಣಕ್ಕೆ ತಿರುಗಿವೆ ಎಂದು ಹೇಳುವುದಕ್ಕಿಂತ, ಈ ನಾನ್ನೂರು ವರ್ಷಗಳಲ್ಲಿ ಸಂಪ್ರತಿಕಾರರೂ ಸಂಪಾದಕರುಗಳೂ ಅವುಗಳನ್ನು ಪಂಚಮಾತ್ರಾಗಣಗಳ ಧಾಟಿಗೆ ತಿರುಗಿಸಿದ್ದಾರೆ ಎಂದು ಹೇಳುವುದು ಸರಿಯಾದ ಮಾತು. ಆದ್ದರಿಂದ, ಈಗ ಆಗಬೇಕಾಗಿರುವ ಮುಖ್ಯ ಕಾರ್ಯ ಎಂದರೆ, ಸರ್ವಜ್ಞನ ತ್ರಿಪದಿಗಳನ್ನು ಮಾತ್ರಾಗಣಗಳ ಕೃತಕರೂಪದಿಂದ ಅಂಶಗಣಗಳ ಸಹಜರೂಪಕ್ಕೆ ಹಿಂದಿರುಗಿಸುವುದು. ಇದು ಸುಲಭದ ಕೆಲಸವಲ್ಲ. ಇದನ್ನು

ಎಂಬ ಪದವಿದೆ; ಕವಿಚರಿತ್ರೆಯ ಉದಾಹರಣ ಪದ್ಯದಲ್ಲಿ ಗೊಜ್ಜಲು ಎಂಬ ಪದವಿದೆ. ಈ ಎರಡು ಪ್ರಯೋಗಗಳ ಹಸ್ತಪ್ರತಿಗಳು ಯಾವ ಪ್ರದೇಶಕ್ಕೆ ಸೇರಿದವು ಎಂಬುದನ್ನು ತಿಳಿದು, ಯಾವ ಪದ ಸ್ವಿಕಾರಾರ್ಹ ಎಂಬುದನ್ನು ನಿರ್ಣಯಿಸಬೇಕಾಗುತ್ತದೆ. ರೊಜ್ಜು ಎಂಬ ಪದವೇ ಮೂಲಪಾಠವಿರಬೇಕೆಂದು ತೋರುತ್ತದೆ.

ಚೆನ್ನಪ್ಪ ಉತ್ತಂಗಿಯವರ ಸಂಕಲನವನ್ನು ಆಧಾರ ಗ್ರಂಥವಾಗಿಟ್ಟುಕೊಂಡು ಪಾಠಾಂತರಗಳ ಸಹಾಯದಿಂದ ನಾನು ಈವರೆಗೆ ವಿವರಿಸಿರುವ ವಿಧಾನಗಳಲ್ಲಿ ಹಾಗೂ ಇತರ ವಿಧಾನಗಳಲ್ಲಿ ಸರ್ವಜ್ಞನ ತ್ರಿಪದಿಗಳ ಪಾಠವನ್ನು ಪುನಃಪರಿಷ್ಕರಣ ಮಾಡಿ, ಅವರ ಗ್ರಂಥವನ್ನು ಪುನರ್ಮುದ್ರಣ ಮಾಡಿದರೆ, ಸರ್ವಜ್ಞನಿಗೂ ಅವನ ಹೆಸರಿನೊಂದಿಗೆ ಅವಿನಾಭಾವದಿಂದ ಬೆಸೆದುಕೊಂಡಿರುವ ರೆ॥ ಚನ್ನಪ್ಪ ಉತ್ತಂಗಿ ಯವರಿಗೂ ಮನ್ನಣೆ ಸಲ್ಲಿಸಿದಂತಾಗುತ್ತದೆ, ಈಗಿರುವ ರೂಪದಲ್ಲೇ ಪದ್ಯಗಳನ್ನು ಪುನರ್ಮುದ್ರಣ ಮಾಡುತ್ತ ಹೋದರೆ ಅಪಪಾಠಗಳಿಗೆ ಆಯುಷ್ಯವನ್ನು ದಾನ ಮಾಡಿ, ಸರ್ವಜ್ಞನಿಗೆ ಅನ್ಯಾಯ ಮಾಡಿದಂತಾಗುತ್ತದೆ.*

---

*೧ . ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ನಡೆದ ಸರ್ವಜ್ಞನ ನಾಲ್ಕನೆಯ ಶತಮಾನೋತ್ಸವದಲ್ಲಿ ದಿನಾಂಕ ೨–೧೧–೧೯೭೪ ರಂದು ಓದಿದ ಉಪನ್ಯಾಸ.

ಸರ್ವಜ್ಞನ ತ್ರಿಪದಿಗಳ ಮೂಲಪಾಠ ನಿಷ್ಕರ್ಷೆಯಲ್ಲಿ ಛಂದಸ್ಸಿನ ಆಧಾರದ ಮೇಲೆ ಹೇಗೆ ಪರಿಷ್ಕರಣ ಅಗತ್ಯ ಎಂಬುದನ್ನು ತೋರಿಸಲು ಪ್ರಯತ್ನಪಟ್ಟಿದ್ದೇನೆ. ಇನ್ನೂ ಕೆಲವು ದೃಷ್ಟಿಕೋನಗಳಿಂದ ಪದ್ಯಗಳನ್ನು ಶಾಸ್ತ್ರೀಯವಾದ ಪರೀಕ್ಷೆಗೆ ಒಳಪಡಿಸಬೇಕಾಗಿರುತ್ತದೆ. ಅವುಗಳಲ್ಲಿ, ಪ್ರಾದೇಶಿಕ ಪದಪ್ರಯೋಗದ ವೈಶಿಷ್ಟ್ಯವನ್ನು ಗಮನಿಸಬೇಕಾದದ್ದು ಒಂದು ಮುಖ್ಯವಾದ ದೃಷ್ಟಿಕೋನ. ಒಂದು ಉದಾಹರಣೆ: ಪ್ರಕೃತ ಪರಿಸ್ಥಿತಿಗೆ ಅನ್ವಯಿಸುವ ಸ್ವಾರಸ್ಯವಾದ ಪದ್ಯ:

ಸೊಡರು ಲಂಚವ ಕೊಂಡು ಕೊಡುವ**ದೊಪ್ಪಚಿ** ಬೆಳಗ
ಪೊಡವಿಗಂ ಸೂರ್ಯ–**ಬೆಳಗೀವೊಲ್ಲಂಚವನು**
ಹಿಡಿಯದವ ಧರ್ಮಿ ಸರ್ವಜ್ಞ.

ಉತ್ತಂಗಿಯವರ ಸಂಕಲನದಿಂದ ಆಯ್ದ ಈ ಪದ್ಯದ ಪಾಠ ಕಿಟ್ಟೆಲ್ ಕೋಶದಲ್ಲಿ ಹೀಗಿದೆ:

ಸೊಡರು ಲಂಚವ ಕೊಂಡು ಕೊಡುವು**ದೊಚ್ಚತ**ಬೆಳಗ
ಒಡವಿಗೆ ಸೂರ್ಯ–**ಬೆಳಗೀವೋಲ್ ಲಂಚವ**
ಹಿಡಿಯದವ ಧರ್ಮಿ ಸರ್ವಜ್ಞ.

ಸೊಡರು ಎಣ್ಣೆಯ ಲಂಚವನ್ನು ಪಡೆದು ಬೆಳಕು ಕೊಡುತ್ತದೆ. ಒಂದು ಪಾಠದ ಪ್ರಕಾರ **ಒಪ್ಪಚಿ** ಬೆಳಕು ಎಂದರೆ ಸ್ವಲ್ಪ ಬೆಳಕು; ಇನ್ನೊಂದರ ಪ್ರಕಾರ **ಒಚ್ಚತ** ಬೆಳಕು ಎಂದರೆ ಸೊಗಸಾದ, ಹಿತವಾದ, ಬೆಳಕು. ಉತ್ತಂಗಿಯವರು ಸ್ವೀಕರಿಸಿರುವ ಪಾಠ ಪ್ರಾದೇಶಿಕ ಸ್ವರೂಪದ್ದಾಗಿದ್ದು, ಅರ್ಥಸೌಂದರ್ಯ ಪೋಷಕವೂ ಆಗಿದೆ. ಸೊಡರು ಉರಿಯುವುದಕ್ಕೆ ಅಪಾರ ಎಣ್ಣೆ ಬೇಕು; ಕೊಡುವ ಬೆಳಕಾದರೋ ಸ್ವಲ್ಪ. ಸೂರ್ಯ ಏನನ್ನೂ ಸ್ವೀಕರಿಸದೆ, ಪಕ್ಷಪಾತವಿಲ್ಲದೆ, ಎಲ್ಲರಿಗೂ ಅಪಾರ ಬೆಳಕನ್ನು ಕೊಡುತ್ತಾನೆ. ಧರ್ಮದೃಷ್ಟಿಯುಳ್ಳವನು ಸೂರ್ಯನ ಹಾಗಿರಬೇಕು; ಲಂಚವನ್ನು ಸ್ವೀಕರಿಸದೆ ಕರ್ತವ್ಯಪಾಲನೆ ಮಾಡಬೇಕು, ಶಕ್ತಿಮೀರಿ ಪರೋಪಕಾರ ಮಾಡಬೇಕು. **ಒಪ್ಪಚಿ** ಎನ್ನುವ ಪದಪ್ರಯೋಗ ಒಂದನ್ನು ಬಿಟ್ಟರೆ, ಉಳಿದಂತೆ ಕಿಟ್ಟೆಲ್ ಕೋಶದ ಪದ್ಯಪಾಠ ಪೂರ್ಣವಾಗಿ ಸ್ವೀಕಾರಾರ್ಹ–ಛಂದಸ್ಸಿನ ದೃಷ್ಟಿಯಿಂದ.

ಒಂದು ಪದ್ಯದಲ್ಲಿ ದುರ್ಜನರ ಸಂಗಡದ ಒಡನಾಟವನ್ನು ಬಚ್ಚಲ ಕೊಚ್ಚೆಯ ನೀರಿಗೆ ಹೋಲಿಸಿದೆ. ಉತ್ತಂಗಿಯವರ ಸಂಕಲನದಲ್ಲಿ ಕೊಚ್ಚೆಗೆ ರೊಜ್ಜು(=ರೊಚ್ಚು)

ದ್ವೈತ ಅದ್ವೈತ ವಿಶಿಷ್ಟಾದ್ವೈತ ಎಂಬ ಭೇದ ವಿವಕ್ಷೆಯಿಲ್ಲದೆ, ಹರಿದಾಸ ಸಾಹಿತ್ಯದ ಸಾಮಾನ್ಯ ಲಕ್ಷಣವನ್ನು ಹೀಗೆ ನಿರೂಪಿಸಬಹುದು: "ಹರಿದಾಸ ಸಾಹಿತ್ಯವು ಪ್ರಧಾನವಾಗಿ ಭಕ್ತಿಪರವಾದದ್ದು. ಭಗವದ್ಭಕ್ತನು ತನ್ನ ಆತ್ಮಶೋಧನೆಯನ್ನು ಮಾಡಿಕೊಂಡು ಭಗವಂತನ ಅನುಗ್ರಹಕ್ಕಾಗಿ ಹಗಲಿರುಳೂ ಹಂಬಲಿಸುತ್ತ, ಇಷ್ಟಾರ್ಥಸಿದ್ಧಿಯಾದಮೇಲೆ ತನ್ನ ದಿವ್ಯಾನುಭವವನ್ನುಇತರರಿಗೂ ತಿಳಿಯಹೇಳಿ, ಸಮಸ್ತರನ್ನೂ ಪುನೀತರನ್ನಾಗಿಮಾಡುವುದೇ ಅವನ ಮುಖ್ಯ ಗುರಿ. ಆದ್ದರಿಂದ, ಹರಿದಾಸ ಸಾಹಿತ್ಯವನ್ನು ಸಮಷ್ಟಿದೃಷ್ಟಿಯಿಂದ ಸಮೀಕ್ಷಿಸಿದಾಗ ಇಲ್ಲಿ ಆಯಾ ಹರಿದಾಸರ ಆತ್ಮ ಶೋಧನೆ, ಅಪರೋಕ್ಷಾನುಭವ, ಭಗವಂತನನ್ನು ಅವರು ಆರಾಧಿಸುವ ನಾನಾ ವಿಧಾನಗಳು ಮೊದಲು ನಮ್ಮ ಮನಸ್ಸನ್ನು ಸೆಳೆಯುತ್ತವೆ."[೨] ಕರ್ನಾಟಕದ ಹರಿದಾಸರಲ್ಲಿ ನೂರಕ್ಕೆ ತೊಂಬತ್ತೊಂಬತ್ತು ಮಂದಿ ಶ್ರೀ ಮಧ್ವಾಚಾರ್ಯರ ಅನುಯಾಯಿಗಳಾದುದರಿಂದ ಅವರು ಆ ಮತದ ಪ್ರಮುಖಾಂಶಗಳನ್ನು ತಮ್ಮ ಕೀರ್ತನಮಾಧ್ಯಮದ ಮೂಲಕ ಸರ್ವರಿಗೂ ಸುಲಭವಾಗುವಂತೆ ತಿಳಿಸಹೊರಟರು. ಆದರೆ "ಹರಿದಾಸ ದೀಕ್ಷೆಯನ್ನೇ ಸ್ವೀಕರಿಸಿ ಕೀರ್ತನ ಕೈಂಕರ್ಯವನ್ನು ಕೈಕೊಂಡ ಪುರಂದರ ದಾಸರು, ಕನಕದಾಸರು, ವಿಜಯದಾಸರು, ಗೋಪಾಲದಾಸರು ಮೊದಲಾದ ನೂರಾರು ಹರಿದಾಸರ ವಾಣಿಯಲ್ಲಿ ಸಮಾಜದ ಅನಂತ ಮುಖಗಳ ವೀಕ್ಷಣೆ ಕಂಡು ಬರುತ್ತದೆ."[೩] ಎಂಬ ಅಭಿಪ್ರಾಯವನ್ನು ವಿಜಯದಾಸರ ತರುವಾಯದ ಬಹುಸಂಖ್ಯಾಕ ಹರಿದಾಸರ ವಿಷಯಕ್ಕೆ ಅನ್ವಯಿಸುವುದು ಕಷ್ಟವೆಂದು ತೋರುತ್ತದೆ. ಆದರೆ, ಈ ಉತ್ತರಕಾಲೀನ ಹರಿದಾಸಪರಂಪರೆಯಲ್ಲಿಯೂ ಹರಿಭಕ್ತಿಯ ಅನುಸಂಧಾನ, ಅದರ ಪ್ರಚಾರದ ಸಲುವಾಗಿ ದಾಸವೃತ್ತಿಗೆ ಹೇಳಿದ ಆಚರಣೆಗಳ ಅನುಷ್ಠಾನ, ಮುಂತಾದ ಕಾರ್ಯಕಲಾಪಗಳು ಈ ಶತಮಾನದ ಪ್ರಥಮ ಪಾದ ಪರ್ಯಂತ ಅವ್ಯಾಹತವಾಗಿ ಸಾಗಿಬಂದುವು ಎಂದು ಹೇಳಬಹುದು. ಆದರೆ ಈ ಎಲ್ಲ ಹರಿದಾಸರೂ ತಮ್ಮ ನಾಮದ ಮುಂದೆ 'ದಾಸ' ಎಂಬ ಪದವನ್ನು ಕೂಡಿಸಿಕೊಂಡವರಾದರೂ ಕೃತಿರಚನೆ ಮಾಡಿದ ಹರಿದಾಸರ ಶ್ರೇಣಿಗೆ ಸೇರುವುದಿಲ್ಲ. ಕೃತಿರಚನೆ ಮಾಡಿರುವವರೆಲ್ಲ ಕ್ರಮಬದ್ಧವಾಗಿ ಗುರುವಿನಿಂದ (ಕೆಲವು ಸಂದರ್ಭಗಳಲ್ಲಿ ತಂದೆಯೇ ಗುರುವೂ ಆಗಿರುವುದುಂಟು) ದಾಸದೀಕ್ಷೆಯನ್ನೂ 'ಅಂಕಿತ'ವನ್ನೂ ಪಡೆದಿದ್ದು, ಆ ಅಂಕಿತವನ್ನು ಕೃತಿಯ ಮುದ್ರಿಕೆಯಾಗಿ ಬಳಸಿಕೊಂಡಿರುತ್ತಾರೆ. ಈ ಅಂಕಿತದಲ್ಲಿ 'ವಿಠಲ' ಪದವು ಸಾಮಾನ್ಯವಾಗಿ ಸೇರಿಕೊಂಡಿರುತ್ತದೆ. "ಈ ಭಕ್ತಿಪಂಥಕ್ಕೆ ವಿಠಲನಿಂದ ದೊರೆತ

# ೩. ಉತ್ತರೋತ್ತರಕಾಲೀನ ಹರಿದಾಸರು ಮತ್ತು ಅನುಭಾವ ಕವಿಗಳು*

## ೧
## ಹಿನ್ನೆಲೆ

ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಒಂದು ಪ್ರಮುಖ ಪಾತ್ರವನ್ನು ವಹಿಸಿರುವ ಹರಿದಾಸರ ದೀರ್ಘಪರಂಪರೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ವಿವೇಚಿಸುವಾಗ, ದ್ವೈತಸಿದ್ಧಾಂತವನ್ನು ಪ್ರವರ್ತನ ಮಾಡಿದ ಶ್ರೀ ಮಧ್ವಾಚಾರ್ಯರ ತತ್ತ್ವವಾದದ ಮುಖ್ಯ ಪ್ರಮೇಯಗಳಿಗೆ ಅನುಗುಣವಾಗಿ ಹರಿಭಕ್ತಿಯನ್ನು ಪ್ರತಿಪಾದಿಸುವ ಕೀರ್ತನೆಗಳನ್ನೂ ಇತರ ಕೃತಿಗಳನ್ನೂ ರಚಿಸಿದ ಹರಿಭಕ್ತರನ್ನು ಹರಿದಾಸರು ಎನ್ನುವುದು ರೂಢಿ. ಮಧ್ವಮತಾನುಯಾಯಿಗಳಲ್ಲದ ಹರಿದಾಸರೂ ಕೆಲವರು ಪುರಂದರ ದಾಸರ ಕಾಲದಿಂದಲೂ ಕಂಡುಬಂದಿರುವುದು ಹರಿದಾಸಸಾಹಿತ್ಯದ ವಿವೇಚನೆಯಲ್ಲಿ ಗಮನಿಸಬೇಕಾದ ವಿಶೇಷ ಸಂಗತಿ. ಪುರಂದರದಾಸರ ಸಮಕಾಲೀನರೇ ಆದ ಕನಕದಾಸರು ವ್ಯಾಸರಾಜರ ಶಿಷ್ಯರಾಗುವುದಕ್ಕೆ ಮೊದಲು ಶ್ರೀವೈಷ್ಣವ ಆಚಾರ್ಯರ ಶಿಷ್ಯರಾಗಿದ್ದರು: ಬಿಜಾಪುರ ಜಿಲ್ಲೆಯ ಕಾಖಂಡಕಿಯ ಮಹಿಪತಿ ದಾಸರು ಜನ್ಮತಃ ಮಾಧ್ವ ಸಂಪ್ರದಾಯದವರಾದರೂ ಶಾಂಕರ ಅದ್ವೈತಕ್ಕೂ ಒಲಿದಿದ್ದರು. ಮುಮ್ಮಡಿ ಕೃಷ್ಣರಾಜರ ಆಸ್ಥಾನಕವಿಯಲ್ಲದಿದ್ದರೂ ಅವರ ಕೃಪಾಪೋಷಣಗೆ ಪಾತ್ರರಾಗಿದ್ದ ತಿಮ್ಮಪ್ಪದಾಸರು ಅದ್ವೈತನಿಷ್ಠವಾದ ಸ್ಮಾರ್ತ ಭಾಗವತ ಸಂಪ್ರದಾಯಕ್ಕೆ ಮನ ತೆತ್ತವರು: ತಮ್ಮನ್ನು 'ಹರಿದಾಸ' ಎಂದೇ ಕರೆದುಕೊಂಡಿರತಕ್ಕವರು. ಪುರಂದರ ಕನಕರ ಸಮಕಾಲೀನರಾದ ಬೇಲೂರಿನ ವೈಕುಂಠದಾಸರು ಶ್ರೀ ವೈಷ್ಣವರಾದರೂ ಮಾಧ್ವಹರಿದಾಸಪಂಥದಲ್ಲಿಯೇ ಗಣನೆಗೆ ಬಂದಿರತಕ್ಕವರು.

---

* . ರಾಘವ ಪ್ರಕಾಶನ, ಬೆಂಗಳೂರು; ೧೯೮೮ ಮತ್ತು ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ.೬, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಮತ್ತೆ ವಿಷಯಲೋಲುಪರಾಗಿ ಶ್ರೀಹರಿಯ ಉಪಾಸನೆಯನ್ನು ಮರೆತಿದ್ದ ಜನರಿಗೆ ತಮ್ಮ ಪ್ರೌಢನುಡಿಗಳಿಂದ ಬೋಧಿಸಹತ್ತಿದರೆ."[೬] ಇವರ ತರುವಾಯ ದಾಸವಾಙ್ಮಯದ ಇಳಿಗಡೆ ಮೊದಲಾಯಿತು. ವಿಜಯನಗರ ಸಾಮ್ರಾಜ್ಯದ ಅನುಕೂಲ ಪರಿಸರದಲ್ಲಿ ಸೊಂಪಾಗಿ ಬೆಳೆದ ದಾಸ ಸಾಹಿತ್ಯ ಅದರ ಪತನಾನಂತರ ಕುಂಠಿತವಾದದ್ದು ಸಹಜವಾಗಿಯೇ ಇದೆ. ವಿಜಯದಾಸರ ಮತ್ತು ಅವರ ಶಿಷ್ಯರ ಕಾಲದಲ್ಲಿ ದಾಸಸಾಹಿತ್ಯ ಮತ್ತೆ ಕಳೆಗೂಡಿಕೊಂಡು ಕೆಲಕಾಲ ಮುಂದುವರಿಯಿತು. ಈ ಘಟ್ಟದ ಮುಂದಿನ ಕಾಲದಲ್ಲಿ (ಎಂದರೆ, ಸುಮಾರು ೧೭೫೦ರ ತರುವಾಯ) ಹರಿದಾಸ ಸಾಹಿತ್ಯ ಇಳಿಮುಖವಾಗಲು ಕಾರಣವೇನು? "ಬರಬರುತ್ತ ಬ್ರಾಹ್ಮಣ್ಯಕ್ಕೆ ಪ್ರಾಪ್ತವಾದ ದುರವಸ್ಥೆಯಲ್ಲಿ ದಾಸಜೀವನದ ತೇಜಸ್ವಿತೆ ಕಡಿಮೆಯಾದಂತೆ ದಾಸ ಸಾಹಿತ್ಯವೂ ಕಳೆಗುಂದಿತೆಂದು ಹೇಳಬಹುದು" ಎಂಬ ಅಭಿಪ್ರಾಯ ವಿಚಾರಣೀಯ.[೭] ಸುಮಾರು ೧೭೬೦ರಿಂದ ೧೮೦೦ರ ವರೆಗೆ ಅತ್ತ ಹೈದರಾಬಾದಿನ ನಿಜಾಮ, ಇತ್ತ ಹೈದರ ಮತ್ತು ಟೀಪೂ, ಇವರುಗಳ ಪ್ರಾಬಲ್ಯದಲ್ಲಿ ಬ್ರಾಹ್ಮಣರಿಗೆ ಕೆಲಮಟ್ಟಿಗೆ ದುರವಸ್ಥೆ ಒದಗಿದ್ದಿರಬಹುದು; ಆದರೆ ಬ್ರಾಹ್ಮಣ್ಯಕ್ಕೇ ದುರವಸ್ಥೆ ಒದಗಿತು ಎಂದು ಹೇಳುವುದು ಕಷ್ಟ. (ಬ್ರಾಹ್ಮಣ್ಯ ಎನ್ನುವ ಪದದ ವ್ಯಾಪಕಾರ್ಥದಲ್ಲಿ ಮಾಧ್ವ ಮತವಲ್ಲದೆ ಸ್ಮಾರ್ತ ಶ್ರೀವೈಷ್ಣವ ಮತಗಳೂ ಸೇರುತ್ತವೆ ಎನ್ನುವುದನ್ನು ಗಮನಿಸಬೇಕು.) ಯಾವುದೇ ಒಂದು ಸಾಹಿತ್ಯಪ್ರಕಾರ ಒಂದು ಉನ್ನತಿಯ ಮಟ್ಟವನ್ನು ಮುಟ್ಟಿದಮೇಲೆ, ತನ್ನ ಶಕ್ಯತೆಗಳನ್ನೆಲ್ಲ ಉಪಯೋಗಿಸಿಕೊಂಡು ಸಾಧಿಸಬೇಕಾದುದನ್ನೆಲ್ಲ ಸಾಧಿಸಿ ತನ್ನಿಂದ ತಾನೆ ಸತ್ತ್ವಗುಂದಿ ಕೇವಲ ಆಕಾರ ಮಾತ್ರವಾಗಿ ಮುಂದುವರಿಯುವುದು ಒಂದು ಸಹಜವಾದ ಘಟನೆ. ಚಂಪೂಕಾವ್ಯ, ವಚನ ಸಾಹಿತ್ಯ, ಷಟ್ಪದೀ ಕಾವ್ಯ, ಮುಂತಾದ ಎಲ್ಲ ಸಾಹಿತ್ಯ ಪ್ರಕಾರಗಳಿಗೆ ಒದಗಿದ ಅವಸ್ಥೆಯೇ ಹರಿದಾಸ ಸಾಹಿತ್ಯಕ್ಕೂ ಒದಗಿತು. ಜೊತೆಗೆ, ಚಿಕ್ಕದೇವರಾಜ ಒಡೆಯರ ಆಳ್ವಿಕೆಯಲ್ಲಿ ಶ್ರೀವೈಷ್ಣವ ಮತಕ್ಕೆ ರಾಜರ ಬೆಂಬಲ ದೊರೆತು, ವಿಶಿಷ್ಟಾದ್ವೈತ ಮತ ತತ್ತ್ವಗಳನ್ನು ಕನ್ನಡದಲ್ಲಿ ತಿಳಿಯ ಹೇಳುವ ಕಾರ್ಯಕ್ಕೆ ಇಂಬು ದೊರೆಯಿತು. ಹರಿದಾಸ ಸಾಹಿತ್ಯದ ಕೀರ್ತನ ಪ್ರಕಾರವನ್ನು ಶ್ರೀವೈಷ್ಣವ ಕವಿಗಳು ಬಳಸಿಕೊಂಡರು. ಮಹಲಿಂಗರಂಗ (೧೬೭೫; 'ಅನುಭವಾಮೃತ'), ಚಿದಾನಂದಾವಧೂತ (ಸು. ೧೭೦೦–೧೭೫೦); 'ಜ್ಞಾನಸಿಂಧು' ಮತ್ತು ಹಾಡುಗಳು). ಇವರ ಪ್ರಭಾವದಿಂದಾಗಿ ಅದ್ವೈತ ಸಿದ್ಧಾಂತವನ್ನು ಕನ್ನಡದಲ್ಲಿ ತಿಳಿಯಹೇಳುವ ಪ್ರಯತ್ನಗಳು ಈ ಕಾಲದಲ್ಲಿ ತಕ್ಕಮಟ್ಟಿಗೆ ವ್ಯಾಪಕವಾಗಿ ನಡೆದಂತೆ ಕಂಡುಬರುತ್ತದೆ. ತನ್ನಿಂದ ತಾನೆ ಸತ್ತ್ವಗುಂದಿದ್ದ ಮಾಧ್ವ ಸಂಪ್ರದಾಯದ ಹರಿದಾಸ ಸಾಹಿತ್ಯ ಇನ್ನಷ್ಟು ಹಿಂದೆ ಬೀಳಲು ಈ

ಆಶೀರ್ವಾದವನ್ನು ವರ್ಣಿಸಲಸದಳ. ಹಿಂದೆ ನಡೆದ ಒಂದೊಂದು ಐತಿಹ್ಯದಲ್ಲಿಯೂ ಈ ವಿಠಲೋಪಾಸನೆಯ ಮೂಲಶಕ್ತಿಯನ್ನು ಕಾಣಬಹುದು... ಕನ್ನಡ ಹರಿದಾಸರ ಅಂಕಿತದೊಂದಿಗೆ ವಿಠಲನ ಹೆಸರು ಬಹುಮಟ್ಟಿಗೆ ಅವಿಭಾಜ್ಯವಾದ ಅಂಗವಾಯಿತು," ಎಂಬ ಅಭಿಪ್ರಾಯ[೪] ಒಪ್ಪತಕ್ಕದ್ದು. ಈ ವಿಠಲಾಂಕಿತ ಮಾಧ್ವಸಂಪ್ರದಾಯದ ಹರಿದಾಸಪರಂಪರೆಯಲ್ಲಿ ಇಂದಿಗೂ ವಿರಾಜಮಾನವಾಗಿದೆ.[೫] ವಿರಳಸಂಖ್ಯೆಯ ಮಾಧ್ವೇತರ ಭಾಗವತ ಸಂಪ್ರದಾಯದ ಹರಿದಾಸರು 'ದಾಸ' ಎಂದಷ್ಟೇ ಉಪಲಕ್ಷಿತ ರಾಗಿದ್ದಾರೆ. ಈ ಎರಡು ಬಗೆಯ ಹರಿದಾಸ ವರ್ಗದಿಂದ ಹೊರಗೆ ಭಕ್ತಿಗೀತಗಳನ್ನು ರಚಿಸಿರುವವರನ್ನು ಭಕ್ತಕವಿಗಳ ರಚನೆಗಳು ಎಷ್ಟರಮಟ್ಟಿಗೆ 'ಕಾವ್ಯ' ಅಥವಾ 'ಶುದ್ಧಸಾಹಿತ್ಯ' ಎನ್ನಿಸಿಕೊಳ್ಳಬಲ್ಲವು ಎಂಬ ಪ್ರಶ್ನೆಗೆ, ಒಬ್ಬಿಬ್ಬರನ್ನು ಹೊರತುಪಡಿಸಿ ಹೇಳುವುದಾದರೆ, ಮೊತ್ತದಲ್ಲಿ ದೊರಕುವುದು ನಿರಾಶಾದಾಯಕವಾದ ಉತ್ತರ.

## ೨
## ಹರಿದಾಸ ಸಾಹಿತ್ಯ ಪರಂಪರೆಯ ಘಟ್ಟಗಳು

ಮಾಧ್ವಸಂಪ್ರದಾಯದ ಹರಿದಾಸ ಸಾಹಿತ್ಯ ಪರಂಪರೆಯಲ್ಲಿ ಮೂರು ಅಥವಾ ನಾಲ್ಕು ಘಟ್ಟಗಳನ್ನು ಗುರುತಿಸಬಹುದು. (೧)ಮೊದಲ ಘಟ್ಟದಲ್ಲಿ ಕಂಡುಬರತಕ್ಕವರು ಇಬ್ಬರೆ: ನರಹರಿ ತೀರ್ಥರು (ಸು.೧೩೨೫) ಮತ್ತು ಶ್ರೀಪಾದರಾಜರು (ಇವರಿಬ್ಬರಲ್ಲಿ ಆದ್ಯಪ್ರವರ್ತಕರು ಯಾರು ಎಂಬ ಬಗೆಗೆ ಭಿನ್ನಮತವಿದೆ.); (೨) ಶ್ರೀ ವ್ಯಾಸರಾಯರು ಮತ್ತು ಅವರಿಂದ ದೀಕ್ಷೆ ಪಡೆದ ಪುರಂದರದಾಸರು, ಕನಕದಾಸರು ಮುಂತಾದವರು (ವಿಜಯನಗರ ಸಾಮ್ರಾಜ್ಯದ ಉನ್ನತಿಯ ಕಾಲ ೧೬ನೆಯ ಶತಕದ ಮಧ್ಯಭಾಗ); (೩) ವಾದಿರಾಜರು, ವಿಯದಾಸರು, ಜಗನ್ನಾಥದಾಸರು, ಪ್ರಸನ್ನವೆಂಕಟದಾಸರು ಮೊದಲಾದವರು (ಸು.೧೫೫೦ ರಿಂದ ೧೭೭೫); (೪) ಪ್ರಾಣೇಶದಾಸರು, ಗುರುಪ್ರಾಣೇಶ ದಾಸರು, ಮುಂತಾದವರು (ಇವರಿಬ್ಬರ ಕಾಲ, ಸು.೧೮೦೦ ಮತ್ತು ೧೮೬೦).

"ಮೊದಲನೆಯ ಗುಂಪಿನ ಪ್ರಭಾವವು ಸುಮಾರು ೩೦೦ ವರ್ಷಗಳ ವರೆಗೆ ಮೆರೆದಿದ್ದರೆ ಎರಡನೆಯ ಗುಂಪು ಸುಮಾರು ೨೫೦ ವರ್ಷ ಬಾಳಿತು. ಮೂರನೆಯ ಗುಂಪು ಹುಟ್ಟಿ ಸುಮಾರು ೬೦–೭೦ ವರ್ಷಗಳು ಆಗುವಷ್ಟರಲ್ಲಿ ಪ್ರಾಣೇಶರಾಯರು, ಕದರಮಂಡಲಗಿ ದಾಸರು ಮುಂತಾದ ದಾಸರು ಅಲ್ಲಲ್ಲಿ ಉದಯ ಹೊಂದಿ ಪುರಂದರದಾಸ–ವಿಜಯದಾಸಾಚಾರ್ಯರ ಉಪದೇಶಗಳನ್ನು

'ಫಲಸ್ತುತಿ'ಯನ್ನು ಷಟ್ಪದಿ ಛಂದಸ್ಸಿನಲ್ಲಿ ರಚಿಸಿದ್ದಾರೆ. (೨) **ಮೊದಲಕಲ್ ಶೇಷದಾಸರು:** (ಸು.೧೮೯೦). ಇವರ ಅಂಕಿತ ಗುರು ವಿಜಯ ವಿಠಲ. ಕೀರ್ತನೆಗಳನ್ನೂ ಸುಳಾದಿಗಳನ್ನೂ ರಚಿಸಿದ್ದಾರೆ. (೩)**ಗುರುರಾಮ ವಿಠಲ:** (ಸು.೧೮೮೦), ಇವರು ಯಾರ ಶಿಷ್ಯರೆಂಬುದು ತಿಳಿದುಬಂದಿಲ್ಲ. ಕೀರ್ತನೆಗಳನ್ನಲ್ಲದೆ, ಕನಕದಾಸರ ಕಥೆಯನ್ನು ಪದ್ಯರೂಪದಲ್ಲಿ ಬರೆದಿರುವುದಾಗಿ ತಿಳಿದುಬಂದಿದೆ.

ಹರಿದಾಸ ಪರಂಪರೆಯಲ್ಲಿ ಮುಖ್ಯವಾಗಿ ನಾಲ್ವರನ್ನು ಸ್ಮರಿಸುವ ಶ್ಲೋಕವೊಂದು ಪ್ರಸಿದ್ಧವಾಗಿದೆ. ಶ್ರೀಪಾದರಾಯರು, ವ್ಯಾಸರಾಯರು, ಪುರಂದರದಾಸರು, ವಿಜಯದಾಸರು – ಇವರುಗಳೇ ಆ ನಾಲ್ವರು. ಇವರಲ್ಲಿ ವಿಜಯದಾಸರ (೧೬೮೨–೧೭೫೫) ಶಿಷ್ಯ ಪ್ರಶಿಷ್ಯರ ಪರಂಪರೆ ಬಹುದೊಡ್ಡ ಪ್ರಮಾಣದಲ್ಲಿದೆ; ಹೆಸರು ಗೊತ್ತಿರುವವರ ಸಂಖ್ಯೆಯೆ ಸುಮಾರು ೫೦ರ ಹತ್ತಿರಕ್ಕೆ ಬರುತ್ತದೆ. ಶಿಷ್ಯ ವೇಣುಗೋಪಾಲ ವಿಠಲರ (೧೬೮೮–೧೭೬೮) ಪರಂಪರೆಯಲ್ಲಿ ಒಂಬತ್ತನೆಯವರಾದ ಪರಮಪ್ರಿಯ ಸುಬ್ಬರಾಯದಾಸರ (ತಂದೆ–ಮುದ್ದುಮೋಹನ ವಿಠಲ; ೧೮೬೫–೧೯೪೦) ಶಿಷ್ಯಕೋಟಿ ೧೧೬೫ ಮಂದಿ ಎಂದು ತಿಳಿದುಬರುತ್ತದೆ. ಇವರುಗಳ ವಿಚಾರವಾಗಿ ಏನೂ ತಿಳಿಯದು. ಇವರಲ್ಲಿ ಕೊನೆಯುವರೇ ಗುರುಗೋವಿಂದ ವಿಠಲದಾಸರು (ಎಂ.ಆರ್. ಗೋವಿಂದರಾಯರು). ಈ ಶತಮಾನಕ್ಕೆ ಸೇರಿದ ಈ ಹರಿದಾಸ ಮಹನೀಯರು ಸ್ವತಃ ಅನೇಕ ಕೀರ್ತನೆಗಳನ್ನು ರಚಿಸಿರುವರಲ್ಲದೆ, ಎರಡು ಭಾಗಗಳಲ್ಲಿ 'ಹರಿಭಕ್ತ ವಿಜಯ' ಎಂಬ ಹರಿದಾಸರ ಚರಿತ್ರೆಗಳನ್ನುಳ್ಳ ಗ್ರಂಥವನ್ನು ರಚಿಸಿರುತ್ತಾರೆ.[೮] ಈ ಗ್ರಂಥದ ಎರಡನೆಯ ಭಾಗದಲ್ಲಿ ಉಕ್ತರಾದ ಕೆಲವು ಮಂದಿ ಹರಿದಾಸರ ವಿಚಾರವನ್ನು ಈ ಮುಂದೆ ಪ್ರಸ್ತಾವಿಸಲಾಗಿದೆ.

ವಿಜಯದಾಸರ ಶಿಷ್ಯರಾದ ವೇಣುಗೋಪಾಲ ದಾಸರಿಂದ ಮುಂದುವರೆದ ಪೀಳಿಗೆಯಲ್ಲಿ ವೇಣುಗೋಪಾಲ ವಿಠಲ (ಸು.೧೬೮೮–೧೭೬೮), ವ್ಯಾಸ ವಿಠಲ (ಸು.೧೭೧೦–೧೭೭೫) ಮತ್ತು ರಘುಪತಿ ವಿಠಲ (ಸು.೧೭೩೦–೧೮೧೫) ಈ ಹರಿದಾಸರು ೧೮೫೦ಕ್ಕೆ ಬಲು ಹಿಂದಿನವರಾದ್ದರಿಂದ ಅವರುಗಳ ವಿಚಾರವನ್ನು ಇಲ್ಲಿ ಕೈಬಿಡಲಾಗಿದೆ. ತರುವಾಯದವರೇ **ಭೂವರಹ ರಘುಪತಿ** ವಿಠಲರು (ಸು.೧೭೯೮–೧೮೬೫). ಇವರ ಜನ್ಮಸ್ಥಳ ಕಲಬುರ್ಗಿ ಜಿಲ್ಲೆಯ ಸುರಪುರ ತಾಲ್ಲೂಕಿಗೆ ಸೇರಿದ ಕೆಂಭಾವಿ ಎಂಬ ಗ್ರಾಮ. ಎಂದಿನಿಂದಲೂ ವೈಷ್ಣವ ಬ್ರಾಹ್ಮಣರ ಶ್ರೇಣಿ ಇದ್ದ ಸ್ಥಳ ಇದು. ವೈಷ್ಣವ ವಿದ್ವಾಂಸರ ನೆಲೆವೀಡಾಗಿದ್ದ

ಸಂದರ್ಭಗಳು ಕಾರಣವಾದಂತೆ ಕಾಣುತ್ತದೆ. ಪರವಾದಗಳು ದನಿಯೆತ್ತಿದ್ದ ಈ ಪರಿಸ್ಥಿತಿಯಲ್ಲಿಯೂ ಆ ಸಂಪ್ರದಾಯದ ಹರಿದಾಸರು ಕೃತಿರಚನೆ ಮಾಡಿಕೊಂಡು ಬಂದದ್ದು ಆ ಪಂಥದ ಆಂತರಿಕ ಸತ್ತ್ವದ ದ್ಯೋತಕವಾಗಿದೆ.

## ೩
## ಉತ್ತರಕಾಲೀನ ಹರಿದಾಸರು

ಕವಿಚರಿತೆಯ ೩ನೆಯ ಸಂಪುಟದಲ್ಲಿ (ಪು.೪೫೭ ಮತ್ತು ೪೬೨), ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಆಗಿ ಹೋದ ಕೆಲವು ಕೀರ್ತನಕಾರರ, ಹಾಡುಗಳನ್ನು ಬರೆದವರ, ಹೆಸರುಗಳನ್ನು ಉಲ್ಲೇಖಿಸಿ ಅವರ ಮತ, ವೃತ್ತಿ, ಮತ್ತು ಕೆಲವು ಸಂದರ್ಭಗಳಲ್ಲಿ ಅವರ ಕೃತಿಗಳ ಹೆಸರುಗಳು, ಇವುಗಳ ವಿಚಾರವನ್ನು ಒಂದೊಂದು ಮಾತಿನಲ್ಲಿ ಹೇಳಿ ಮುಗಿಸಿದ್ದಾರೆ. ಗ್ರಂಥ ಪ್ರಮಾಣ ಮತ್ತು ಗುಣದ ಮಟ್ಟ, ಈ ದೃಷ್ಟಿಯಿಂದ ಅವರ ರಚನೆಗಳು ಗಮನಾರ್ಹವಾಗಿಲ್ಲದಿರಬಹುದು. ಅಲ್ಲದೆ, ಈ ಕೃತಿಕಾರರಲ್ಲಿ ಹರಿದಾಸರು ಯಾರು ಎಂದು ಗುರುತಿಸುವುದು ಕಷ್ಟ. ಕವಿಚರಿತೆಯಿಂದ ಸ್ಪಷ್ಟವಾಗಿ ಹರಿದಾಸರು ಎಂದು ತಿಳಿದು ಬಂದ ಒಬ್ಬಿಬ್ಬರ ಮಾಹಿತಿಯನ್ನು ಕೆಳಗೆ ಉದ್ಧರಿಸಿ ಕೊಟ್ಟಿದೆ:

(೧) **ಪ್ರಾಣೇಶ ವಿಠಲ:** "ಈತನು ಕೀರ್ತನೆಗಳನ್ನು ಬರೆದಿದ್ದಾನೆ. ಇವನು ಮಾಧ್ವನು; ಜಗನ್ನಾಥದಾಸರ ಶಿಷ್ಯನು. ಈತನ ಸ್ಥಳ ನಿಜಾಂ ಇಲಾಖಾ ಲಿಂಗಸೂಗೂರು. ಇವನು ೧೮೨೨ ರಲ್ಲಿ ಸತ್ತನೆಂದು ಹೇಳುತ್ತಾರೆ." (ಅನೇಕ ಸುಳಾದಿಗಳನ್ನೂ ಉಗಾಭೋಗಗಳನ್ನೂ ರಚಿಸಿದ್ದಾನೆ.)

(೨)**ಶ್ರೀಶಪ್ರಾಣೇಶ ವಿಠಲ, ಕರ್ಜಗಿ ಸುಖನಿಧಿ ವಿಠಲ, ಬಳ್ಳಾರಿ ವೆಂಕಟೇಶ ವಿಠಲ :** "ಇವರುಗಳೂ ಕೀರ್ತನೆಗಳನ್ನು ಬರೆದಿರುವಂತೆ ತೋರುತ್ತದೆ. ಮೊದಲನೆಯವರು ಶ್ರೀ ಪ್ರಾಣೇಶ ವಿಠಲನ (ಸು.೧೮೩೦) ಸೋದರಳಿಯನು. ಇವನು ೧೮೮೦ರಲ್ಲಿ ಗತಿಸಿದಂತೆ ತಿಳಿಯಬರುತ್ತದೆ. ಎಡನೆಯವನು ಶ್ರೀ ವಿಠಲನ (ಸು.೧೮೦೦) ಸೋದರಳಿಯನು. ಮೂರನೆಯವನು ಬಹಳ ಆಧುನಿಕನು; (೧೯೨೫ರಲ್ಲಿ ಸತ್ತನು")

ಮೇಲೆ ಉಲ್ಲೇಖಿಸಿದ ಹರಿದಾಸರಲ್ಲದೆ, ಇನ್ನು ಮೂವರ ಸಂಬಂಧವಾದ ವಿವರಗಳು ಹೀಗಿವೆ: (೧)**ಶ್ರೀಶ ವಿಠಲ** (ಸು.೧೮೨೦ರಿಂದ ಈಚೆಗೆ): ಇವರು ಜಗನ್ನಾಥದಾಸರ ಶಿಷ್ಯರು. ಇವರು ಕೀರ್ತನೆಗಳನ್ನೂ ಸುಳಾದಿಗಳನ್ನೂ ಬರೆದಿರುವುದರ ಜೊತೆಗೆ, ಜಗನ್ನಾಥದಾಸರ ಹರಿಕಥಾಮೃತಸಾರ'ಕ್ಕೆ

ಕೀರ್ತನೆಗಳು ಮಾತ್ರ ಕೇವಲ ಆರು! ಆದರೆ ಈ ಅಲ್ಪ ಸಂಖ್ಯೆಯ ಕೀರ್ತನೆಗಳು ಈ ದಾಸರ ಕೀರ್ತನರಚನಾ ಸಾಮರ್ಥ್ಯವನ್ನು ಅರಿಯಲು ಸಾಕಾಗಿವೆ. ಕೆಲವು ಕೀರ್ತನೆಗಳಲ್ಲಿ ಭಕ್ತಿ ಭಾವ ಪ್ರಕಟವಾಗಿದೆ; ಅವುಗಳ ಪೈಕಿ, "ನಿನ್ನ ತೊಂಡಾನಂತೆ ತಿಳಿದೆನ್ನಾ ಊಳಿಗ ಪೇಳೋ, ಯನ್ನಾಳುವ(ವನೆ), ಯಿನ್ನೊಂದ ನಾನ್ನೊಲ್ಲೆನೊ" ಎಂಬ ಕೀರ್ತನೆಯಲ್ಲಿ ಭಕ್ತಿಯಲ್ಲಿಯೇ ಮುಕ್ತಿಯನ್ನು ಕಾಣುವ ದಾಸರ ಹಂಬಲ ಒಡೆದು ಕಾಣುತ್ತದೆ. ಸಂಸಾರದಲ್ಲಿ ಸಿಲುಕಿಕೊಂಡು ಅದರಿಂದ ಬಿಸಿಡಿಕೊಳ್ಳಲಾರದ ಪೇಚಾಟವನ್ನು, ಅಶರಣ್ಯತೆಯನ್ನು, ಬಗೆ ಬಗೆಯ ದೃಷ್ಟಾಂತಗಳ ಮೂಲಕ ' 'ಯೆಂಥದೀ ಸಂಸಾರ ಯೆಲೋ ಹರಿ' ಎಂಬ ಕೀರ್ತನೆಯಲ್ಲಿ ಬಿತ್ತರಿಸಿರುವುದು ಮನೋಜ್ಞವಾಗಿದೆ. ಉದಾಹರಣೆಗೆ "ಕಂಬಳಿಯ ಮ್ಯಾಲೆ ಕಣಕವ ನಾದಿಟ್ಟು ಉಂಬುವ ಸಮಯಕ್ಕೆ ಉಣಲಾರದಳುವುದು" ಎಂಬ ದೃಷ್ಟಾಂತವು ಸಂಸಾರದಲ್ಲಿ ಸ್ವಯಂಕೃತಾಪರಾಧದಿಂದ ಮರುಗಬೇಕಾಗಿ ಬರುವ ಸಂದರ್ಭವನ್ನು ಸೂಚ್ಯವಾಗಿ ತಿಳಿಸುತ್ತದೆ. ಹೀಗೆ ಸಂಸಾರದ ತೊಡಕನ್ನು ತಾನು ಬಿಡಿಸಿಕೊಳ್ಳಲಾಗದ್ದರಿಂದ, ಭವಬಂಧವಿಮೋಚನಕ್ಕೆ ಹರಿಕೃಪೆ ಬೇಕೆಂಬುದು ಕೀರ್ತನೆಯ ಧ್ವನಿತಾರ್ಥ. ಮೊದಲು ಉಲ್ಲೇಖಿಸಿದ ಕೀರ್ತನೆಯಲ್ಲಿ, ತಾವು ಬಾಲ್ಯಾರಂಭದಿಂದಲೂ ಪರರನ್ನು ಅನುಸರಿಸಿದ್ದರಿಂದ ಉಂಟಾದ ಪರಿಣಾಮಫಲವನ್ನು – "ಕಲ್ಲು ಆವಿನ ಪಾಲು ಕರು ಬಯಸಿದಂದದಿ" ಆಯಿತು ಎಂದು ಕೊರಗಿ, ದೇವರ ಪಾದಸೇವೆಯನ್ನು ಬೇಡಿದ್ದಾರೆ. ದಾಸರು ತಮ್ಮ ಗುರುಗಳಂತೆಯೇ ಸುಮಾರು ೮೫ ವರ್ಷಗಳ ತನಕ ಜೀವಿಸಿದ್ದರೆಂದು ಹೇಳಲಾಗಿದೆ. ಅಷ್ಟು ದೀರ್ಘಕಾಲ ಅವರು ಸರ್ವಾರ್ಪಣಪೂರ್ವಕವಾದ ದಾಸಜೀವನವನ್ನು ನಡಸಿದರೆಂದು ಶ್ರೀಪತಿದಾಸರ ಗುರುಸ್ತೋತ್ರದಿಂದ ವ್ಯಕ್ತಪಡುತ್ತದೆ.

**ಶ್ರೀಪತಿ ವಿಠಲದಾಸರು** (೧೭೭೮–೧೮೭೦): ಹೈದರಾಬಾದ್ ಸಂಸ್ಥಾನಕ್ಕೆ ಸೇರಿದ್ದ ಗದ್ವಾಲ್ ಎಂಬಾಶ್ರಿತ ಸಂಸ್ಥಾನದ ನಿವಾಸಿಗಳಾದ್ದರಿಂದ ಗದ್ವಾಲಿ ಶ್ರೀಪತಿ ದಾಸರೆಂದೇ ಪ್ರಖ್ಯಾತರು. ಗದ್ವಾಲು ಕೃಷ್ಣಾ ತುಂಗಭದ್ರಾ ನದಿಗಳ ನಡುವೆ ಒಂದು ಪುಣ್ಯ ಕ್ಷೇತ್ರ. ಶ್ರೀಪತಿದಾಸರು ಇಲ್ಲಿ ಜನಿಸಿದರು. ಇವರ ಪೂರ್ವ ನಾಮವಾಗಲಿ ತಂದೆ ತಾಯಿಗಳ ವಿಚಾರವಾಗಲಿ ಏನೂ ತಿಳಿದುಬಂದಿಲ್ಲ. ಅವರನ್ನು ಶ್ರೀಪತಿ ಎಂದೇ ಕರೆಯುತ್ತಿದ್ದರು. ಅವರ ವಂಶೀಯರ ಮನೆಯಲ್ಲಿ ಅವರು ಪೂಜಿಸುತ್ತಿದ್ದ ಶ್ರೀ ವೆಂಕಟೇಶಮೂರ್ತಿಯೂ ಅವರು ಉಪಯೋಗಿಸುತ್ತಿದ್ದ ತಂಬೂರಿಯೂ ಈಗಲೂ ಇವೆ. ತಂಬೂರಿಯ ಮೇಲೆ 'ಶ್ರೀಪತಿ ವಿಠಲ ಪ್ರಸನ್ನ' ಎಂಬ ಬರಹವಿದೆ. ಆಗಿನ ದಿನಗಳಲ್ಲಿ ಗದ್ವಾಲಿ ಸಂಸ್ಥಾನವು ವಿದ್ವನ್ಮಣಿಗಳ

ಈ ಗ್ರಾಮದಲ್ಲಿ ಮುಂದೆ ಭೂವರಹ ರಘುಪತಿ ವಿಠಲರೆಂದು ಹೆಸರಾದ ದಾಸಾಚಾರ್ಯರು ಸು.೧೭೮೦ರಲ್ಲಿ ಹುಟ್ಟಿದರು. ಇವರ ತಂದೆ ತಾಯಿ, ಅವರು ಇವರಿಗೆ ಇಟ್ಟ ಹೆಸರು, ಮುಂತಾದ ಯಥಾರ್ಥ ವಿವರಗಳು ತಿಳಿದುಬಂದಿಲ್ಲ. ಇವರ ಶಿಷ್ಯರಾದ ಶ್ರೀಪತಿದಾಸರು ರಚಿಸಿರುವ, "ದಾಸಾಚಾರ್ಯರ ಪಾದವ ಸ್ಮರಿಪರಿಗೆ ದೋಷ ನಾಶವಹುದು" ಎಂಬ ಗುರುಸ್ತೋತ್ರದಿಂದ ಇವರ ಗುಣಗಣಗಳು ತಿಳಿದುಬರುತ್ತವೆ. ಇವುಗಳ ತಾತ್ಪರ್ಯವಾಗಿ ಹೊರಪಡುವ ವಿಷಯ ಸಾರಾಂಶ ಇಷ್ಟು: ಆಚಾರ್ಯರು ಬಹು ಧನಿಕರೂ, ಪರೋಪಕಾರಿಗಳೂ, ಭೂತದಯಾಪರರೂ, ಅನಾಥರಕ್ಷಕರೂ ಆಗಿದ್ದರು. "ಆಚಾರ್ಯರು ಅನ್ನದಾನ ದೀಪದಾನ, ಗೋದಾನ, ಹಿರಣ್ಯದಾನಾದಿಗಳಿಂದ ಜ್ಞಾನಿಗಳನ್ನು ತೃಪ್ತಿಪಡಿಸಿ, ಕೇವಲ ಅನ್ನದಾನದಿಂದ ಸಾಮಾನ್ಯರನ್ನೂ ಸಂತೋಷಪಡಿಸುತ್ತಿದ್ದರು." ದೊಡ್ಡ ಸಂಸಾರವೊಂದಿಗರಾದ ಇವರು ಬಹುಕಾಲ ಐಹಿಕ ಸುಖಭೋಗಗಳನ್ನು ಅನುಭವಿಸಿದ ಮೇಲೆ, ಜ್ಞಾನಯುಕ್ತವಾದ ಕರ್ಮಾನುಷ್ಠಾನಶೀಲರಾದ್ದರಿಂದ ಸಂಸಾರದ ಅಸಾರತೆಯನ್ನು ಮನಗಂಡು ವೈರಾಗ್ಯ ಹೊಂದಿದರು. ಬಿಂಬೋಪಾಸನಾ ಕ್ರಮವನ್ನು ಅರಿತು ದೇವರನ್ನು ಕಾಣುವ ಹಂಬಲ ಬಲವಾಯಿತು." ಕಲ್ಲೂರಿನ (ಮಾನವಿ ತಾಲ್ಲೂಕು) ನಿವಾಸಿಗಳಾಗಿದ್ದ ವೈರಾಗ್ಯಶಾಲಿ ತಮ್ಮಣ್ಣದಾಸರ (ರಘುಪತಿ ವಿಠಲರು) ದರ್ಶನಕ್ಕಾಗಿ ತೆರಳಿದರು. ವೃದ್ಧರಾದ ತಮ್ಮಣ್ಣದಾಸರೂ ಅಧಿಕಾರ ಸಂಪನ್ನನಾದ ಶಿಷ್ಯನ ನಿರೀಕ್ಷೆಯಲ್ಲಿಯೇ ಇದ್ದರು. ಅವರನ್ನು ಸಂದರ್ಶಿಸಿದ ದಿನವೇ ೩೨ವರ್ಷ ವಯಸ್ಸಿನಲ್ಲಿಯೇ ವಿರಾಗಿಯಾಗಿದ್ದ ದಾಸಾಚಾರ್ಯನ ಅಭೀಪ್ಸೆ ಪೂರ್ತಿಯಾಯಿತು. ಗುರು ಶಿಷ್ಯನಿಗೆ ದೇವರ ಸನ್ನಿಧಿಯಲ್ಲಿ 'ಶ್ರೀನಿವಾಸ ಭೂವರಾಹ ರಘುಪತಿ ವಿಠಲ' ಎಂಬುದಾಗಿ ಅಂಕಿತೋಪದೇಶ ಮಾಡಿ, ಬಿಂಬೋಪಾಸನೆಯನ್ನೂ ಕೀರ್ತನೆಯ ರೂಪದಲ್ಲಿ ಉಪದೇಶ ಮಾಡಿದರು. ಗುರುವಿನಿಂದ ಅನುಗೃಹೀತರಾಗಿ ಸ್ವಗ್ರಾಮಕ್ಕೆ ಹಿಂದಿರುಗಿ ದಾಸಾಚಾರ್ಯರು ಗೃಹಸ್ಥಾಶ್ರಮದಲ್ಲಿದ್ದುಕೊಂಡೇ ನಿಷ್ಕಾಮ ಕರ್ಮಾಚರಣೆ ಯಲ್ಲಿಯೂ, ಭಗವದುಪಾಸನೆಯಲ್ಲಿಯೂ ನಿರತರಾಗಿದ್ದರು. ಇವರು ತಮ್ಮ ಅರುವತ್ತರ ವೃದ್ಧಾಪ್ಯದಲ್ಲಿ ಶಿಷ್ಯರೊಂದಿಗೆ ಗದ್ವಾಲಿಗೆ ಹೋಗಿದ್ದು, ಗದ್ವಾಲದ ಅರಸನಿಂದ ಮನ್ನಣೆ ಪಡೆದರು. ಗದ್ವಾಲಿನ ನಿವಾಸಿಯೇ ಆಗಿದ್ದ ಶ್ರೀಪತಿ ಎಂಬವನಿಗೆ ದಾಸದೀಕ್ಷೆಯನ್ನು ಅನುಗ್ರಹಿಸಿ ಸ್ವಗ್ರಾಮಕ್ಕೆ ಹಿಂದಿರುಗಿದರು. "ದಾಸಸಾಹಿತ್ಯದ ಸಾರಸ್ವತ ಭಂಡಾರಕ್ಕೆ ದಾಸರ ಕೊಡುಗೆಯು ಅಪಾರವಾಗಿರುತ್ತದೆ" ಎಂಬ ಸಾಧಾರಣವಾದ ಊಹೆಗೆ ಅವಕಾಶವಿದ್ದರೂ ಸದ್ಯಕ್ಕೆ ದೊರೆತಿರುವ

೧೮೯೮), **ತಂದೆ ಮುದ್ದು ಮೋಹನ ವಿಠಲ** (ಪರಮಪ್ರಿಯ ಸುಬ್ಬರಾಯದಾಸರು: ೧೮೭೫–೧೯೪೦).

ತಂದೆ ಮುದ್ದುಮೋಹನ ವಿಠಲರು ೧೧೭೫ ಮಂದಿಗೆ ಅಂಕಿತೋಪದೇಶ ಮಾಡಿದರೆಂದು ತಿಳಿದು ಬರುತ್ತದೆ. ಇವರಲ್ಲಿ ಕಡೆಯವರೇ **ಗುರುಗೋವಿಂದ ವಿಠಲರು** (ಎಂ.ಆರ್.ಗೋವಿಂದರಾಯರು); 'ಹರಿಭಕ್ತ ವಿಜಯ' ಎಂಬ ಹೆಸರಿನ ಎರಡು ಸಂಪುಟಗಳಲ್ಲಿ ಈವರೆಗೆ ಉಲ್ಲೇಖಿಸಿದ ಹರಿದಾಸರ ಹಾಗೂ ಇತರ ಕೆಲವು ದಾಸರ ಜೀವನ ವೃತ್ತಾಂತಗಳನ್ನು ಬರೆದಿರುವ ಲೇಖಕರು. ಇವರು ಪ್ರತಿಯೊಬ್ಬರ ವಿಚಾರವಾಗಿಯೂ 'ಏನೂ ತಿಳಿದುಬಂದಿಲ್ಲ' ಎಂದು ಹೇಳಿಯೂ ಉಪಲಬ್ಧವಿರುವಷ್ಟು ಕೀರ್ತನೆಗಳ ಆಧಾರದಿಂದಲೂ, ಸ್ವಕಪೋಲಕಲ್ಪನೆಯಿಂದಲೂ (ಈ ಭಾಗವೇ ಹೆಚ್ಚು) ಕಥೆಗಳನ್ನು ಕಟ್ಟಿರುತ್ತಾರೆ. ಅನೇಕ ಮುಖ್ಯ ವಿಚಾರಗಳಲ್ಲಿ ಪುನರುಕ್ತಿಯೂ ಇದೆ. ಅಂಕಿತೋಪದೇಶ ಮಾಡುವಾಗ, ಗುರು ಶಿಷ್ಯನ ಅಂಕಿತವನ್ನು ಉಲ್ಲೇಖಿಸಿ ಆಶಿಷರೂಪದ ಒಂದು ಕೀರ್ತನೆಯನ್ನು ಆಶುಕವಿತೆಯಾಗಿ ಹೇಳುವುದು, ಉಪದಿಷ್ಟನಾದ ಶಿಷ್ಯನು ಅಂತೆಯೇ ಗುರುಸ್ತೋತ್ರ ಮಾಡುವುದು – ಇದು ಸಂಪ್ರದಾಯ. ಗುರುಸ್ತೋತ್ರದಲ್ಲಿ ಗುರುವಿನ ಮಧ್ವಮತ ಪರಿಣತಿ, ಶಾಸ್ತ್ರಜ್ಞಾನ ಮಹಿಮಾತಿಶಯಗಳು – ಉಕ್ತವಾಗಿರುತ್ತವೆ. ಈ ಶತಮಾನದವರೇ ಆದ ಅಚಿಂತ್ಯಾದ್ಭುತ ವಿಠಲ, ಹಯಗ್ರೀವ ವಿಠಲ, ಪ್ರಾಣನಾಥ ವಿಠಲ, ಮುಂತಾಗಿ ಸಾವಿರಾರು ಅಂಕಿತನಾಮಗಳು ಗಮನಕ್ಕೆ ಬಂದಿವೆಯಂತೆ. ಇವರೆಲ್ಲರೂ ಹರಿದಾಸರೇ ಆದರೂ ಕೀರ್ತನೆಗಳನ್ನು ರಚಿಸಿರುವರೇ, ರಚಿಸಿದ್ದರೆ ಎಷ್ಟು ಕೀರ್ತನೆಗಳನ್ನು ರಚಿಸಿರುವರು, ಎಂಬ ಬಗೆಗೆ ನಿಖರವಾಗಿ ನಮಗೆ ವಿವರಗಳು ದೊರೆವವರೆಗೆ ಹರಿದಾಸ ಸಾಹಿತ್ಯ ಹೇಗೆ ಆಧುನಿಕ ಕಾಲದಲ್ಲೂ ಮುಂದುವರಿದಿದೆ ಎಂಬುದನ್ನು ಗೊತ್ತು ಮಾಡಲು ಸಾಧ್ಯವೇ ಇಲ್ಲ. ಮೇಲೆ ಉಲ್ಲೇಖಿಸಿರುವ ದಾಸರುಗಳು ರಚಿಸಿರುವ ಕೀರ್ತನೆಗಳ ಸಂಖ್ಯೆಯೇ ಅತ್ಯಲ್ಪವಾಗಿದೆ. ತಂದೆ ಶ್ರೀಪತಿ ವಿಠಲರ ಎಂಟು ಕೀರ್ತನೆಗಳು ಮಾತ್ರ ಸಿಕ್ಕಿವೆ. "ಈಗ ಉಪಲಬ್ಧವಾಗಿರುವ ಎಂಟು ಕೀರ್ತನೆಗಳ ರಚನೆಯು ಭಕ್ತಿರಸಪೂರಿತವಾಗಿ ಹೃದಯಕ್ಕೆ ನಾಟುವಂತಿದೆ" (ಹರಿಭಕ್ತವಿಜಯ – ೨, ಪು.೮೧) ಎಂಬ ಅಭಿಪ್ರಾಯವಿದೆ. ಈ ದಾಸರ ಒಂದೆರಡು ಕೀರ್ತನೆಗಳಲ್ಲಿಯ, 'ಆತ್ಮ ನಿವೇದನ' ಮಾರ್ಮಿಕವಾಗಿದ್ದು ಐಹಿಕ ಸುಖದಲ್ಲಿ ಮುಳುಗಿದ ಭಕ್ತನ ಆರ್ತನಾದ ಕೇಳಿ ಬರುತ್ತಿದೆ ಅದರಲ್ಲಿ. "ನಾನಪರಾಧಿ ಖರೇ ಪರಂತು। ನೀನುದ್ಧರಿಸು ದಯಾಳೋ ॥" ಎಂಬ ಕೀರ್ತನೆಯ ಈ ಎರಡು ನುಡಿಗಳನ್ನು ಉದಾಹರಿಸ ಬಹುದು:

ಬೀಡಾಗಿದ್ದುದರಿಂದ ಶ್ರೀಪತಿ ವೇದಶಾಸ್ತ್ರಗಳ ವಿದ್ಯಾಭ್ಯಾಸವಾಗಿತ್ತೆಂದು ತಿಳಿಯಬಹುದು. ಅವರು ಮದುವೆಯಾಗಿ, ಮಕ್ಕಳೊಂದಿಗರಾಗಿ, ಸಂಸಾರ ರಥವನ್ನು ನಡಸುವುದರಲ್ಲಿ ಮಗ್ನರಾಗಿದ್ದ ಸಂಗತಿಯೂ ಒಂದು ಕೀರ್ತನೆಯಿಂದ ವೇದ್ಯ. ("ದೇಶ ದೇಶವ ಸುತ್ತಿ, ರಾಶಿಧನವನೆ ತಂದು, ಈ ಸತಿಸುತರಿಗೆ ಇತ್ತು ಬ್ಯಾಸರಿಕೆಯಿನಿತಿಲ್ಲ.") "ಈ ಸತಿಸುತರು ಸಂತೋಷಪಟ್ಟದ್ದು ಕಾಣೆ" ಎಂದೂ ಅವರು ಕೊರಗಿದ್ದಾರೆ. ಹೀಗೆ ಸುಮಾರು ೪೫ ವರ್ಷಗಳವರೆಗೆ ಸಂಸಾರಿಕ ಜೀವನದಲ್ಲಿ ಬೇಸತ್ತಿದ್ದ ಶ್ರೀಪತಿಗಳಿಗೆ ಗದ್ವಾಲಿಗೆ ಬಂದಿದ್ದ ಭೂವರಹ ವಿಠಲದಾಸರ ಸಮಾಗಮವಾಗಿ, ಅವರಿಂದ ದಾಸದೀಕ್ಷೆಯನ್ನು ಶ್ರೀಪತಿ ವಿಠಲಾಂಕಿತದೊಂದಿಗೆ ಪಡೆದರು. ಶ್ರೀಪತಿದಾಸರು ಭಜನೆ ಮಾಡುತ್ತಿದ್ದಾಗ ಅವರಿಗೆ ವೇಣುಗೋಪಾಲರೂಪಿ ಶ್ರೀಕೃಷ್ಣನ ದರ್ಶನವಾಗುತ್ತಿತ್ತೆಂದೂ, ಅವರ ಕೃಪೆಯಿಂದ ಒಬ್ಬ ಭಕ್ತನಿಗೆ ಕಣ್ಣು ಬಂದಿತೆಂದೂ, ಅನೇಕ ರೋಗಗ್ರಸ್ತರು ರೋಗವಿಮುಕ್ತರಾಗುತ್ತಿದ್ದರೆಂದೂ ದಾಸರ ವಿಚಾರವಾಗಿ ಪವಾಡ ಕಥೆಗಳು ಪ್ರಚಲಿತವಾಗಿವೆ. ಇವರ ವಿಚಾರವಾಗಿ ಬರೆದಿರುವ ಎಂ.ಆರ್.ಗೋವಿಂದರಾಯರು – "ಕೇವಲ ಪವಾಡಗಳಿಂದ ಜ್ಞಾನಿಗಳ ಮಹಾತ್ಮೆಯನ್ನು ಅಳತೆ ಮಾಡತಕ್ಕದ್ದಲ್ಲ. ಅವುಗಳ ಉಪಯೋಗವು ಎಷ್ಟರಮಟ್ಟಿಗೆಂದರೆ ದಾಸರಲ್ಲಿ ಒಂದು ವಿಧ ಭಕ್ತಿಪ್ರಚೋದನೆಗೆ ಕಾರಣವಾಗುವುದಕ್ಕೆ ಮಾತ್ರ" ಎಂಬ ಒಪ್ಪತಕ್ಕ ಮಾತನ್ನು ಹೇಳಿ, ದಾಸರ ಕೃತಿಗಳ ಆಧಾರದ ಮೇಲೆ ಅವರ ವ್ಯಕ್ತಿತ್ವವನ್ನೂ ತತ್ತ್ವಜ್ಞಾನವನ್ನೂ ತಿಳಿದು ಹೇಳಲು ಪ್ರಯತ್ನಿಸಿರುವುದು ಶ್ಲಾಘ್ಯವಾಗಿದೆ. ದಾಸರು ೩೫ ಪದಗಳನ್ನೂ ೩ ಸುಳಾದಿಗಳನ್ನೂ ರಚಿಸಿರುವುದಾಗಿ ತಿಳಿದುಬರುತ್ತದೆ. ಪ್ರಸ್ತುತ ೩ ಸುಳಾದಿಗಳೂ, ಕೆಲವು ಕೀರ್ತನೆಗಳೂ ಮಾತ್ರ ದೊರೆತಿವೆ. ದೊರೆತಷ್ಟು ರಚನೆಗಳಿಂದ ದಾಸರ ತತ್ತ್ವಜ್ಞಾನ ಪೌರಾಣಿಕ ಜ್ಞಾನಗಳ ತುಸ ಪರಿಚಯವಾಗುತ್ತದೆ. ಶ್ರೀಕೃಷ್ಣಪರವಾದ ಕೀರ್ತನೆಗಳ ಅವಲೋಕನದಿಂದ, "ದಾಸರಿಗೆ ಶ್ರೀಕೃಷ್ಣ ರೂಪದಲ್ಲಿ ಅನುರಾಗವೆಷ್ಟಿತ್ತೆಂಬುದು ತಿಳಿಯಬಹುದು." 'ನರಹರೇ ಪಾಹಿ' ಎಂಬ ಕೀರ್ತನೆಯಲ್ಲಿ ಭಾಗವತ ಸಪ್ತಮ ಸ್ಕಂಧದ ಪ್ರಹ್ಲಾದ ಚರಿತ್ರೆ ಸಂಕ್ಷೇಪವಾಗಿ ನಿರೂಪಿತವಾಗಿದೆ. ಕೀರ್ತನೆಗಳ ಬಳಕೆ, ಮಾತಿನ ಗತ್ತು, ತಾಳಲಯಕ್ಕೆ ಹೊಂದಿಕೊಂಡು ಹಾಡಿಕೆಯಲ್ಲಿ ಜೀವಂತವಾಗುವಂತಿದೆ.

**ತಂದೆ ಶ್ರೀಪತಿ ವಿಠಲ** (ಸು. ೧೭೭೮–೧೮೪೦): **ಶ್ರೀನಿಧಿವಿಠಲ** (ಧಾರವಾಡದ ದೀಪದ ಅಣ್ಣಯ್ಯಾಚಾರ್ಯರು: ೧೮೦೦–೧೮೭೫), **ಶ್ರೀವರವಿಠಲ** (ಸೌದೀ ರಾಮಚಂದ್ರಪ್ಪ: ೧೮೦೨–೧೮೭೩), **ಮುದ್ದು ಮೋಹನದಾಸರು** (ಸು.೧೮೩೦–

ಅಂಕಿತೋಪದಿಷ್ಟರಾಗಿ ಒಂದೋ ಎರಡೋ ಹಲವೋ ಕೀರ್ತನೆಗಳನ್ನು ರಚಿಸಿರುವವರು ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲೂ ಆ ತರುವಾಯವೂ ಧಾರಾಳವಾಗಿ ಎರಡು ಸಾವಿರಕ್ಕೂ ಮಿಕ್ಕ ಸಂಖ್ಯೆಯಲ್ಲಿ ಆಗಿ ಹೋಗಿದ್ದಾರೆ ಎಂದು ಊಹಿಸಲು ಅವಕಾಶವಿದೆ. ಕೀರ್ತನೆಗಳ ಸಂಖ್ಯೆಯನ್ನು ಊಹಿಸುವುದು ಕಷ್ಟ. ಈ ಕ್ಷೇತ್ರದಲ್ಲಿ ವ್ಯಾಪಕವಾದ ಕ್ಷೇತ್ರಕಾರ್ಯ (Field Work) ಮತ್ತು ಆಳವಾದ ಸಂಶೋಧನೆ ನಡೆಯಬೇಕಾಗಿವೆ.

## ೪

## ಮಾಧ್ವ ಮತೇತರ ಹರಿದಾಸರು, ಕೀರ್ತನಕಾರರು

ಪಲ್ಲವಿ, ಕೆಲವು ವೇಳೆ ಅನುಪಲ್ಲವಿ, ಮತ್ತು ಚರಣಗಳಿಂದ ಕೂಡಿದ್ದು ವಿವಿಧ (ಸಪ್ತ) ತಾಳಗಳಲ್ಲಿ ಹಾಡಬಹುದಾದ ಕನ್ನಡ ಗೇಯಕೃತಿ ಮಾಧ್ವ ಸಂಪ್ರದಾಯದ ಹರಿದಾಸರ ಕೈಯಲ್ಲಿ ಒಂದು ಸ್ಪಷ್ಟವಾದ ಆಕಾರವನ್ನು ತಳೆದ ಮೇಲೆ ಇತರ ಮತೀಯರು ತಮ್ಮ ಇಷ್ಟದೈವದ ಉಪಾಸನೆಗೂ, ಭಕ್ತ್ಯಾವೇಶ ಪ್ರಕಾಶನಕ್ಕೂ ತಾವು ನಂಬಿದ ಮತತತ್ವಗಳ ಪ್ರತಿಪಾದನೆಗೂ ಮಾಧ್ಯಮವಾಗಿ ಬಳಸಿಕೊಂಡರು. ಇವರುಗಳ ಪೈಕಿ ಅದ್ವೈತ ಸಿದ್ಧಾಂತವನ್ನು ಷಟ್ಪದಿ ಕಾವ್ಯದಲ್ಲಿ ಮೊತ್ತಮೊದಲಿಗೆ ವಿಸ್ತಾರವಾಗಿ ಪ್ರತಿಪಾದಿಸಿದವನು ಮಹಲಿಂಗ ರಂಗ (ಸು.೧೬೫೦–೭೫) – ಜನಪ್ರಿಯನಾದ ತನ್ನ 'ಅನುಭವಾಮೃತ'ದಲ್ಲಿ. ಇವನು ಹಾಡುಗಳನ್ನು ಬರೆಯದಿದ್ದರೂ ಸಂಸ್ಕೃತ ಭಾಷೆಯ ಗ್ರಂಥಗಳಲ್ಲಿ ಅಡಗಿಕೊಂಡು ಸಾಮಾನ್ಯ ಜನಕ್ಕೆ ಕಬ್ಬಿಣದ ಕಡಲೆ ಆಗಿದ್ದ ಅದ್ವೈತ ತತ್ವವನ್ನು ಸುಲಿದ ಬಾಳೆಯ ಹಣ್ಣಿನ್ನಾಗಿ ಮಾಡಿಕೊಟ್ಟು, ಆ ತತ್ವದ ಪ್ರಸಾರಕ್ಕೆ ಆದ್ಯ ಪ್ರವರ್ತಕ ಎನ್ನಿಸಿಕೊಂಡನು. ನಿಜಗುಣ ಶಿವಯೋಗಿಗಳು (ಸು.೧೫೦೦) ತಮ್ಮ 'ವಿವೇಕ ಚಿಂತಾಮಣಿ'ಯಲ್ಲೂ 'ಅನುಭವ ಸಾರ'ದಲ್ಲೂ ಅದ್ವೈತ ವಿಚಾರಗಳನ್ನು ಹೇಳಿದ್ದರೂ ಅವರು ನಂಬಿ ನಡೆದ ಸಿದ್ಧಾಂತ ಅದ್ವೈತ ಪರವಾದ ಶೈವಸಿದ್ಧಾಂತ ಎನ್ನಬಹುದು.[೮] ಅಲ್ಲದೆ ನಿಜಗುಣರಾದ ಮೇಲೆ ಸುಮಾರು ಒಂದೂವರೆ ಶತಕದಷ್ಟು ಕಾಲ ಅದ್ವೈತ ಪರವಾದ ಪ್ರಸಿದ್ಧ ಕೃತಿ ಯಾವುದೂ ಉಪಲಬ್ಧವಿಲ್ಲವಾಗಿ, ನಿಜಗುಣರಿಂದ ಒಂದು ಪರಂಪರೆ ಸೃಷ್ಟಿಯಾಯಿತು ಎನ್ನುವಂತಿಲ್ಲ. ರಂಗನಾಥನು "ಲಲಿತವಹ ಕನ್ನಡದ ನುಡಿಯಲಿ। ತಿಳಿದು ತನ್ನೊಳು ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೇ ಸಂಸ್ಕೃತದಲಿನ್ನೇನು?" ಎಂದು ಘೋಷಿಸಿ, ಶ್ರೀ ಶಾಂಕರ ಅದ್ವೈತಪರವಾದ ಕನ್ನಡ ಕೃತಿರಚನೆಗೆ ಮಾರ್ಗವನ್ನು ಕಲ್ಪಿಸಿದನು. "'ಅನುಭವಾಮೃತ'ವನ್ನು ಬಹಳ

ವರ ಸವಿನೋಟದಿ ಪರಸ್ತ್ರೀಯರ ಸುರುಚಿರ । ಕಚಕುಚಕಾಗಿ।
ಉರುತರ ಮನದಾಕಾಂಕ್ಷೆಯಿಂದ । ದುರುಳರ ಸಹಾಯವಾಗಿ ।
ಕರವಶವಾಗಲು ಅದರೊಳಗೇ ನಾ । ಬೆರೆದು ಮೋಸಕೊಳಗಾಗಿ ।
ಸ್ಮರನಾಟದಿ ಮೈಮರೆದು ಮನದಿ ತ್ವಚ್ಚರಣ ಸ್ಮರಣೆಯ ಮಾಡದ ಪ್ರಯುಕ್ತ॥
ಸದ್ವಿದ್ವಾಂಸರ ಕಂಡರೆ ನಾ ಬಲು । ಬದ್ಧ ಮತ್ಸರನು ಜೀಯಾ।
ಮಧ್ವಶಾಸ್ತ್ರದಾ ಪ್ರವಚನವೆಂಬೋ । ಸುದ್ದಿಯು ಯೆನಗಿಲ್ಲವಯ್ಯ ।
ಇದ್ದರೇನು ಸಾರ್ಥಕವು ನಾನೀ ದು । ರ್ಬುದ್ಧೀಯ ಬಿಡಲಿಲ್ಲವಯ್ಯ ।
ಶುದ್ಧ ಭಾವೀ ಮೋಕ್ಷಪ್ರದ ಅನಿ।ರುದ್ಧ ನಿನ್ನನು ಮರೆಹೋಗದ ಪ್ರಯುಕ್ತ॥

ಶ್ರೀನಿಧಿ ದಾಸರು ರಚಿಸಿದ್ದ ಕೀರ್ತನೆಗಳನ್ನು ಬರೆದಿಟ್ಟಿದ್ದ ಪುಸ್ತಕಗಳೆಲ್ಲವೂ ನಾಶವಾಗಿ ಹೋಗಿದ್ದು ಹತ್ತು ಕೀರ್ತನೆಗಳು ಮಾತ್ರ ಉಳಿದು ಬಂದಿವೆ. "ಸೂರ್ಯಾಂತರ್ಗತ ನಾರಾಯಣ ಪಾಹಿ" ಎಂಬ ಒಂದು ಕೀರ್ತನೆಯಲ್ಲಿ ಶಿವಶರಣ–ಶರಣೆಯರ ಕೆಲವು ವಚನಗಳಲ್ಲಿ ಕಂಡುಬರುವ ಸತಿ–ಪತಿ (ನಾಯಕ–ನಾಯಿಕಾ) ಭಾವದ ಮಧುರ ಭಕ್ತಿ (Bridal Mysticism) ಪ್ರಕಟವಾಗಿರುವುದು ಒಂದು ವಿಶೇಷ. ಈ ಕೆಲವು ಪಂಕ್ತಿಗಳನ್ನು ನೋಡಬಹುದು:

ಹೃದಯ ಮಂಟಪದೊಳಗೆಲ್ಲ । ಪ್ರಾಣದದುಭುತ ಮಹಿಮೆಯ ಬಲ್ಲ।
ಸದಮಲನಾಗಿ ತಾನೆಲ್ಲ। ಕಾರ್ಯ ಮುದದಿ ಮಾಡಿಸುವ ಶ್ರೀ ನಲ್ಲ ।
ಹದುಳ ಕೊಡುತಲಿ ಬದಿಲಿ ತಾನಿದ್ದು। ವದಗಿ ನಿನಗೆನ್ನ ಮದುವೆ ಮಾಡಿದ।
ಪದುಮಜಾಂಡೋದರ ಈ ಸುದತಿಯ।
ಮುದದಿ ರಮಿಸೆಂದು ವದಗಿ ಬೇಡುವೆ॥
ಎನ್ನ ಬಿನ್ನಪವನ್ನು ಕೇಳೋ।ಪ್ರಿಯ। ಮನ್ನಿಸಿ ನೋಡೋ ದಯಾಳೋ।
ಹೆಣ್ಣಬಲೆಯ ಮಾತು ಕೇಳೋ । ನಾನು। ನಿನ್ನವಳಲ್ಲವೇನೋ ಹೇಳೋ।
ನಿನ್ನ ಮನದನುಮಾನ ತಿಳಿಯಿತು। ಕನ್ಯಾವಸ್ಥೆಯು ಎನ್ನದೆನ್ನದೆ।
ಚೆನ್ನ ಶ್ರೀನಿಧಿ ವಿಠಲ ಪ್ರಾಯದ । ಕನ್ಯೆ ಇವಳನು ದೇವ ಕೂಡಿಕೊ॥

ಶ್ರೀವರ ವಿಠಲರ ಒಂದೇ ಕೀರ್ತನೆ ದೊರಕಿದೆ. ಅದು ಕೂಡ ಅಪೂರ್ಣ. ಅಲಿಖಿತವಾಗಿದ್ದ ರಚನೆಯನ್ನು ಒಬ್ಬ ಹೆಣ್ಣುಮಗಳಿಂದ ಹೇಳಿಸಿ ಸಂಗ್ರಹಿಸಿದ್ದು.

ಈವರೆಗಿನ ಪರಿಶೀಲನೆಯ ಆಧಾರದಿಂದ ಹೇಳಬಹುದಾದರೆ,

ಗೋಪಾಲಾರ್ಯರನ್ನು ದಾಸರ ಸೋದರಮಾವ ವೆಂಕಟದಾಸಾರ್ಯರು 'ಶ್ರೀ ವೇಣುಗೋಪಾಲ ವರ ಬಾಲ ಕವಿ' ಎಂದು ಸ್ಮರಿಸಿದ್ದಾರೆ. ಇವರ ಕವಿತ್ವ ಯಾವುದೂ ಸದ್ಯಕ್ಕೆ ಉಪಲಬ್ಧವಿಲ್ಲದ್ದರಿಂದ ಯಾವ ಭಾಷೆಯಲ್ಲಿ ಕವಿತ್ವ ಮಾಡುತ್ತಿದ್ದರು ಎಂದು ಹೇಳಲು ಶಕ್ಯವಿಲ್ಲ. ವೆಂಕಟದಾಸಾರ್ಯರು ವೇದಾಂತ ವಿಷಯಕವಾದ 'ಅಖಂಡಬ್ರಹ್ಮಾನಂದ ಸ್ವರೂಪ' ಎಂಬ ಗದ್ಯಗ್ರಂಥವನ್ನು ರಚಿಸಿರುತ್ತಾರೆ. ಇವರು ತಿಮ್ಮಪ್ಪದಾಸರ ಹಿರಿಯ ಸಮಕಾಲೀನರು. ತಿಮ್ಮಪ್ಪದಾಸರ ಗುರುಪರಂಪರೆಯಲ್ಲಿ ಉಕ್ತರಾದ ಕೃಷ್ಣಯೋಗೀಂದ್ರರು ಅನೇಕ ಕನ್ನಡ ಕೃತಿಗಳನ್ನು ರಚಿಸಿರುವರು. ಇವರೋ ಇಲ್ಲವೆ ಇವರ ಗುರುಗಳಾದ ಗೋಪಾಲರ್ಯರೋ ಅದ್ವೈತನಿಷ್ಠವಾದ ಹರಿದಾಸ ಸಂಪ್ರದಾಯವನ್ನು ಪ್ರವರ್ತನಗೊಳಿಸಿರಬೇಕು. ತಿಮ್ಮಪ್ಪ ದಾಸರು ತಾವು 'ಹರಿದಾಸ' ಎಂದು ಹೇಳಿಕೊಂಡಿರಬೇಕಾದರೆ, ಹಾಗೆ ಹೇಳಿಕೊಳ್ಳುವುದಕ್ಕೆ ಒಂದು ಹಿನ್ನೆಲೆಯೋ ಪರಂಪರೆಯೋ ಇದ್ದಿರಬೇಕು.[೧೩] ಕುಮಾರ–ವ್ಯಾಸಾದಿ ಭಾಗವತ ಕವಿಗಳೆಲ್ಲರೂ ಹರಿಹರಾಭೇದ ದೃಷ್ಟಿಯ ಅದ್ವೈತನಿಷ್ಠ ಭಾಗವತ ಸಂಪ್ರದಾಯದ ಕವಿಗಳಾದರೂ 'ಹರಿದಾಸ' ಎಂದು ಯಾರೂ ಕರೆದುಕೊಂಡಿಲ್ಲ. ಈ ಸಂಪ್ರದಾಯದಲ್ಲಿ ಹಾಗೆ ಕರೆದುಕೊಂಡು, ಕನಕದಾಸರಂತೆ ಕೀರ್ತನೆಗಳನ್ನೂ ಕಾವ್ಯಗಳನ್ನೂ ಒಂದಿಗೆಯೇ ರಚಿಸಿರುವವರು – ಸದ್ಯದ ತಿಳಿವಳಿಕೆಯಂತೆ – ತಿಮ್ಮಪ್ಪದಾಸರು ಒಬ್ಬರೇ. ಸ್ವಲ್ಪ ಹೆಚ್ಚು ಕಡಿಮೆ ತಿಮ್ಮಪ್ಪದಾಸರ ಸಮಕಾಲೀನರೇ ಆದ, ಧಾರವಾಡ ಜಿಲ್ಲೆಯ ಶಿಶುವಿನಹಾಳ (ಶಿಶುನಾಳ) ಗ್ರಾಮದಲ್ಲಿ ಜನ್ಮವೆತ್ತಿದ ಷರೀಫ ಸಾಹೇಬರೂ, ಬೆಂಗಳೂರಿನ ಸರ್ಪಭೂಷಣ ಮಠದ ಸಂಸ್ಥಾಪಕರಾದ ಶ್ರೀ ಸರ್ಪಭೂಷಣ ಶಿವಯೋಗಿಗಳೂ ಅದ್ವೈತವೇದಾಂತಪರವಾದ ಹಾಡುಗಳನ್ನು ರಚಿಸಿದ್ದಾರೆ. ಇನ್ನೂ ಈಚಿನವರು ಮೈಸೂರಿನ ವೇದಾಂತ ಶಿವರಾಮ ಶಾಸ್ತ್ರಿಗಳು (ಇವರ ವಿಚಾರವಾಗಿ ನಾಲ್ಕು ಮಾತನ್ನು ಮುಂದೆ ಹೇಳಲಾಗುವುದು.) ತಿಮ್ಮಪ್ಪದಾಸರ ಗುರುಪರಂಪರೆಯಲ್ಲಿ ನರಸಾರ್ಯರೆಂಬವರು ಒಬ್ಬರು. ಇವರು ಸಂಸ್ಕೃತದಲ್ಲಿ ರಚಿಸಿದ್ದ 'ಜ್ಞಾನಸರ್ವಸ್ವ' ಎಂಬ ವೇದಾಂತ ವಿಷಯಕ ಗ್ರಂಥವನ್ನು ಶಾಲ್ಯದ ಕೃಷ್ಣರಾಜನು 'ವಿವೇಕಾಭರಣ' ಎಂಬ ಹೆಸರಿನಿಂದ ಷಟ್ಪದೀ ಕಾವ್ಯವಾಗಿ ರಚಿಸಿದನು. ಈತನು ಈ ಗ್ರಂಥವಲ್ಲದೆ, 'ಸದಾಶಿವ ಶತಕ', 'ಪ್ರಾಣೇಶ್ವರ ಶತಕ' (ಇವೆರಡೂ ಅಕ್ಷರ ವೃತ್ತಗಳಲ್ಲಿವೆ), 'ಟೀಕಿನ ಕೀರ್ತನೆ' (ಹಾಡುಗಳು), 'ನಿಜದೀಪಿಕಾರತ್ನ' (ಹಾಡು, ವಚನ, ಸಾಂಗತ್ಯ), 'ಅನುಭವರಸಾಯನ' (ಗದ್ಯಗ್ರಂಥ), 'ಭಕ್ತಿಮಾರ್ಗಸರೋವರ' (ಕೀರ್ತನೆ), 'ಜ್ಞಾನಮಾರ್ಗಸರೋವರ'(ಕೀರ್ತನೆ), ಎಂಬ ಕೃತಿಗಳನ್ನೂ ರಚಿಸಿದ್ದಾನೆ. ಇವೆಲ್ಲವೂ

ಮಟ್ಟಿಗೆ ಅನುಸರಿಸಿ ೧೮ನೆಯ ಶತಕದ ಮಧ್ಯದಲ್ಲಿ ಚಿದಾನಂದಾವಧೂತನು 'ಜ್ಞಾನಸಿಂಧು' ಎಂಬ ದೊಡ್ಡ ಗ್ರಂಥವನ್ನು ಭಾಮಿನೀ ಷಟ್ಪದಿಯಲ್ಲಿ ಬರೆದನು. ಅದರಲ್ಲಿ ಅದ್ವೈತವೇದಾಂತವನ್ನು ವಿಸ್ತಾರವಾಗಿ ನಿರೂಪಿಸಲಾಗಿದೆ ... ... ನಿರೂಪಣೆಯ ಸರಣಿ ರಂಗನಾಥನದೇ ಆಗಿದೆ. ಹೀಗೆ ಅವನ ಪ್ರಭಾವವನ್ನು ಗುರುತಿಸಬಹುದು."[೧೦] ಚಿದಾನಂದಾವಧೂತನು 'ಕಾಮವಿಡಂಬನ' ಎಂಬ ಹೆಸರಿನಲ್ಲಿ ನೂರಾರು 'ಪದ'ಗಳನ್ನೂ 'ಚಿದಾನಂದ ವಚನ' ಎಂಬ ಹೆಸರಿನಲ್ಲಿ ಗುರು ಚಿದಾನಂದರನ್ನು ಕೊಂಡಾಡುವ ಅನೇಕ ಹಾಡುಗಳನ್ನೂ ರಚಿಸಿದ್ದಾನೆ.

ಈಚೆಗೆ 'ಅರ್ಚನ' (೧೯೭೧) ಎಂಬ ಕೃತಿಯ ಮೂಲಕ ಬೆಳಕಿಗೆ ಬಂದ ತಿಮ್ಮಪ್ಪದಾಸರ (ಸು.೧೭೭೦–೧೮೬೦) ಗುರುವೂ ಪಿತಾಮಹರೂ ಆದ ವಾಸುದೇವಯತಿ ಚಿದಾನಂದಾವಧೂತರ ಸಮಕಾಲೀನರು."ತಮ್ಮ ಜ್ಞಾನ ಭಕ್ತಿ ವೈರಾಗ್ಯಗಳಿಂದ ಭಕ್ತರನ್ನೂ ಜಿಜ್ಞಾಸುಗಳನ್ನೂ ಮುಮುಕ್ಷುಗಳನ್ನೂ ಆಕರ್ಷಿಸಿಕೊಂಡರು. ಅವರ ಕಾಲದಲ್ಲಿ ಚಿಕ್ಕನಾಯಕನಹಳ್ಳಿ ಚಿಕ್ಕದಾದರೂ ಸುತ್ತಮುತ್ತ ಪ್ರಸಿದ್ಧವಾದ ಆಧ್ಯಾತ್ಮಿಕ ಕೇಂದ್ರವಾಗಿ, ಭಗವದ್ದಾಸರು ಕಲೆಯುವ ಸ್ಥಳವಾಗಿ ಪರಿಣಮಿಸಿದ್ದಂತೆ ಕಾಣುತ್ತದೆ.... ಚಿದಾನಂದ ಅವಧೂತರು ಚಿಕ್ಕನಾಯಕನ ಹಳ್ಳಿಗೆ ಬಂದಿದ್ದು, ಈ ಯೋಗಿಗಳಿಬ್ಬರ ಸಮಾಗಮವಾಗಿದ್ದಿರಬೇಕು ಎಂದು ಊಹಿಸಲು ಅವಕಾಶವಿದೆ."[೧೧] **ವಾಸುದೇವಯತಿ**ಗಳು ಸಂಸ್ಕೃತದಲ್ಲಿ "ವಾಸುದೇವಮನನಂ" ಎಂಬ ಅದ್ವೈತ ವೇದಾಂತ ವಿಷಯಕ ಗ್ರಂಥವನ್ನು ರಚಿಸಿದ್ದಾರೆ. ಇದು ಕುರಿತ ವಿಷಯದಲ್ಲಿ ಬಹಳ ಕಾಲದವರೆಗೆ ಪ್ರಮಾಣಗ್ರಂಥವಾಗಿ, ಪ್ರಭಾವಶಾಲಿಯಾಗಿದ್ದಿರಬೇಕು. ಆರ್.ನರಸಿಂಹಾಚಾರ್ಯರು 'ಕರ್ಣಾಟಕ ಕವಿಚರಿತೆ'ಯ ೩ನೆಯ ಸಂಪುಟದಲ್ಲಿ (೧೯೨೦; ಪು.೩೧೯) 'ಕವಿಗಳು ಗೊತ್ತಿಲ್ಲದ ಕೆಲವು ಗ್ರಂಥಗಳು' ಎಂಬ ಪರ಼ಿಶಿಷ್ಟ (II)ಭಾಗದಲ್ಲಿ"ವೇದಾಂತ ವಿವೇಕಸಾರ, ಸು.೧೭೫೦. ಅದ್ವೈತ ವೇದಾಂತವನ್ನು ಬೋಧಿಸುವ ಗ್ರಂಥ. ಇದರ ಮಾತೃಕೆ ವಾಸುದೇವಯತಿಕೃತ ಸಂಸ್ಕೃತ ಗ್ರಂಥ" ಎಂದು ಹೇಳಿರುತ್ತಾರೆ. ಗ್ರಂಥಕ್ಕೆ ಹೇಳಿರುವ ಕಾಲ ವಾಸುದೇವ ಯತಿಗಳ ಕಾಲವೇ ಆದ್ದರಿಮದ ಆ ಗ್ರಂಥವನ್ನು ಅವರೇ ತಮ್ಮ ಸಂಸ್ಕೃತ ಮೂಲದಿಂದ ಅನುವಾದ ಮಾಡಿದ್ದರೂ ಇರಬಹುದು. ಹಾಗಿಲ್ಲವೋ, ತಿಮ್ಮಪ್ಪದಾಸರೇ ಮುಂತಾದ ಅವರ ಶಿಷ್ಯರಲ್ಲಿ ಒಬ್ಬರು ಮಾಡಿರಬಹುದು. ಅಂತೂ 'ವಾಸುದೇವಮನನ' ಆಗಿನ ಮೈಸೂರು ಸೀಮೆಯಲ್ಲಿ ಮಾತ್ರವಲ್ಲದೆ ತೆಲುಗು ಮತ್ತು ತಮಿಳು ಪ್ರಾಂತಗಳಲ್ಲಿಯೂ ಪ್ರಸಿದ್ಧವಾಗಿರಬೇಕು.[೧೨] ತಿಮ್ಮಪ್ಪದಾಸರು ಹೇಳುವ ಗುರುಪರಂಪರೆಯಲ್ಲಿ ಮೊದಲಿಗರಾದ

ಕವಿಗಳಲ್ಲಿ ಒಬ್ಬರೆಂದು ಅವರು ಗಣ್ಯರಾಗಿ ನಿಲ್ಲುವುದರಲ್ಲಿ ಸಂದೇಹವಿಲ್ಲ.[೧೬]

ತಿಮ್ಮಪ್ಪದಾಸರ ಜ್ಯೇಷ್ಠಪುತ್ರ ನಾರಾಯಣನ (ನಾರಾಯಣದಾಸ) ಜಾತಕ ಸಿಕ್ಕಿರುವುದು ತಂದೆ ಮಕ್ಕಳ ಕಾಲನಿರ್ಣಯಕ್ಕೆ ನಿರ್ವಿವಾದವಾದ ಆಧಾರ ದೊರಕಿದಂತಾಗಿದೆ. ಜಾತಕದಲ್ಲಿ, "ಶಕಾಬ್ದ ೧೭೪೪ನೇ ಸಂದ ಚಿತ್ರಭಾನು ಸಂವತ್ಸರದ ಮಾಘ ಬಹುಳ ೩೦ ಮಂಗಳವಾರ.... ..... ... ಚಿರಂಜೀವಿ ತಿಮ್ಮಪ್ಪಯ್ಯನ ಜ್ಯೇಷ್ಠಪುತ್ರ ನಾರಾಯಣನ ಜನನ" ಎಂದಿರುವುದರಿಂದ, ತಿಮ್ಮಪ್ಪದಾಸರ (ಪೂರ್ಣ ನಿಜನಾಮ ತಿಮ್ಮಪ್ಪಯ್ಯ ಎಂದೂ, ತಿಮ್ಮಪ್ಪಯ್ಯನ ತಂದೆ ಮೊಮ್ಮಗನ ಜನನವಾದಾಗ ತಾವೇ ಜಾತಕವನ್ನು ಬರಸಿಟ್ಟಿರಬೇಕೆಂದೂ ಊಹಿಸಬಹುದಾಗಿದೆ. ಮೇಲೆ ಹೇಳಿದ ಜನ್ಮದಿನ ಕ್ರಿ.ಶ.೧೧-೨-೧೮೨೩ಕ್ಕೆ ಸರಿಹೋಗುತ್ತದೆ. ತಿಮ್ಮಪ್ಪದಾಸರು ಗುರು ವಾಸುದೇವರನ್ನು ನವರಾತ್ರಿಯ ಮಹಾನವಮಿಯ ದಿನದಂದು ಶ್ರೀರಂಗಪಟ್ಟಣದಲ್ಲಿ ಸಂದರ್ಶಿಸಿದ ಸಂದರ್ಭದ ವರ್ಣನೆಯಿರುವ ಷಟ್ಪದೀ ರಚನೆಯ ಆಧಾರದಿಂದ ಆಗ ಇವರು ಶ್ರೀರಂಗಪಟ್ಟಣದಲ್ಲಿ ಆಳುತ್ತಿದ್ದ ಮೈಸೂರು ದೊರೆ ಖಾಸಾ ಚಾಮರಾಜ ಒಡೆಯರ ಕಾಲದಲ್ಲಿ (ಕ್ರಿ.ಶ.೧೭೭೬-೧೭೯೬) ಇದ್ದರೆಂದು ಹೇಳಬಹುದು. ತಿಮ್ಮಪ್ಪದಾಸರ ಇನ್ನೊಬ್ಬ ಪುತ್ರ ವೆಂಕಟರಮಣ ದಾಸರ ಗೃಹಕೃತ್ಯದ ಲೆಕ್ಕಪುಸ್ತಕದಲ್ಲಿ ೧೮೪೯-೫೦ನೆಯ ಸಾಲಿಗೆ ಸಂಬಂಧಪಟ್ಟಂತೆ 'ತಂದೆಗಳ ಯಡೆಕಟ್ಲೆಗೆ' ಎಂಬ ವೆಚ್ಚದ ಉಲ್ಲೇಖವಿದೆ. ತಿಮ್ಮಪ್ಪದಾಸರು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ (೧೭೯೬-೧೮೬೮) ಅವರ ಇಷ್ಟಾನುಸಾರ ಮೈಸೂರು ಅರಮನೆಯಿದ್ದ ಕೋಟೆಯೊಳಗೆ ತ್ರಿನಯನೇಶ್ವರ ದೇವಸ್ಥಾನದ ಆವರಣದಲ್ಲಿ ತಮ್ಮ ಕುಲದೈವವಾದ ಶ್ರೀ ವೆಂಕಟರಮಣ ಸ್ವಾಮಿಯನ್ನು ಆರಾಧಿಸುತ್ತ, ಆಶ್ರಯದಾತರಾದ ಅರಸರ ಶ್ರೇಯಃಪ್ರಾರ್ಥನೆ ಮಾಡುತ್ತ, ದೇವತಾರಾಧನೆ ಭಜನೆ ಮುಂತಾದ ಪಾರಮಾರ್ಥಿಕ ಕಾರ್ಯಗಳಲ್ಲಿ ನಿರತರಾಗಿದ್ದರು. ಹೀಗಿರುತ್ತ, ಇವರ ಕಾಲವನ್ನು ಕ್ರಿ.ಶ. ಸು.೧೭೭೦-೧೮೬೦ ಎಂದು ನಿರ್ಧರಿಸಬಹುದು. ಜನನ ಮರಣದ ವರ್ಷಗಳು ನಿಷ್ಕರ್ಷೆಯಾಗಿ ತಿಳಿದುಬಂದಿಲ್ಲ.

ತಿಮ್ಮಪ್ಪದಾಸರ ವಂಶೀಯರು ತಮ್ಮ ಪೂರ್ವಿಕರು ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿಯವರೆಂದು ಹೇಳುತ್ತಿದ್ದರು. ತಿಮ್ಮಪ್ಪದಾಸರ ಹಾಗೂ ಅವರ ಪುತ್ರ ನಾರಾಯಣದಾಸರ ಕೀರ್ತನೆಗಳಲ್ಲಿ ಚಿಕ್ಕನಾಗಪುರ (ಚಿಕ್ಕನಾಯಕನಹಳ್ಳಿ ಎಂಬುದರ ರೂಪಾಂತರ) ಎಂಬ ಕ್ಷೇತ್ರಮುದ್ರಿಕೆ ಸಾಧಾರಣವಾಗಿ ಕಂಡುಬರುತ್ತದೆ. ಹೀಗಿರುವುದರಿಂದ, ಚಿಕ್ಕನಾಯಕನಹಳ್ಳಿ ತಿಮ್ಮಪ್ಪದಾಸರು ಹುಟ್ಟಿ ಬೆಳೆದು ಪ್ರಾಯದ

ಅದ್ವೈತವೇದಾಂತವನ್ನೇ ಪ್ರತಿಪಾದಿಸತಕ್ಕವು. ಶಾಲ್ಯದ ಕೃಷ್ಣರಾಜನು (ಕ್ರಿ.ಶ. ಸು.೧೭೨೫–೧೭೭೫) ತಿಮ್ಮಪ್ಪದಾಸರಿಗಿಂತ ಸ್ವಲ್ಪ ಹಿಂದಿನವನು. ಮೈಸೂರಿನ ಅರಸು ಸಮುದಾಯಕ್ಕೆ ಸೇರಿದವನು; ತಿಮ್ಮಪ್ಪದಾಸರಂತೆ ಕನ್ನಡ, ಸಂಸ್ಕೃತ, ತೆಲುಗು ಭಾಷೆಗಳಲ್ಲಿ ಕೃತಿರಚನೆ ಮಾಡಿರುವನು.[೧೪]

ಹೀಗೆ, ಅದ್ವೈತ ತತ್ತ್ವ ವಿಚಾರಗಳನ್ನು ಜನಸಾಮಾನ್ಯಕ್ಕೆ ತಿಳಿಯ ಹೇಳುವ ಪರಂಪರೆಯೊಂದು ಬಹಳ ಪ್ರಾಚೀನ ಕಾಲದಿಂದಲೇ (ಸು.೧೦೭೧ರಲ್ಲಿದ್ದ ಅದ್ವೈತಮುನಿ ಗುಣಗಳ್ಳನಿಂದ ತೊಡಗಿ) ಬೆಳೆದುಬರುತ್ತಿದ್ದದ್ದು, ಸಗುಣೋಪಾಸನೆಯ ನೆಲೆಯಲ್ಲಿ ಬಹುತೇಕ ಶೈವವಾಗಿದ್ದಂತೆ ಕಂಡುಬರುತ್ತದೆ. ಕಾಲಕ್ರಮೇಣ ಬಹುಶಃ ಕುಮಾರವ್ಯಾಸನಿಂದ ತೊಡಗಿ, ಭಾಗವತ ಧರ್ಮನಿಷ್ಠವಾಗಿ, ವೈಷ್ಣವಕ್ಕೆ ತಿರುಗಿದಂತೆ ತೋರುತ್ತದೆ. ವೈಷ್ಣವಕ್ಕೆ ತಿರುಗಿದರೂ ಶೈವವಿರೋಧಿಯಲ್ಲ; ಯಾವ ಉಪಾಸನಾಕ್ರಮವನ್ನೂ ವಿರೋಧಿಸುವುದು ಅದ್ವೈತ್ವಕ್ಕೆ ಹೊರತು; ಹರಿಹರಾಭೇದ ದೃಷ್ಟಿ ಈ ಭಾಗವತ ಧರ್ಮದ ನೆಲೆಗಟ್ಟು. ವೈಯಕ್ತಿಕ ಉಪಾಸನಾಸೌಕರ್ಯಕ್ಕೆ ರಾಮ, ಕೃಷ್ಣ, ನೃಸಿಂಹ, ತಿರುಪತಿ ವೆಂಕಟರಮಣ – ಈ ವೈಷ್ಣವ ಅರ್ಚಾವತಾರ ಮೂರ್ತಿಗಳು. ತಾತ್ತ್ವಿಕವಾಗಿ, ಇದು 'ಶುದ್ಧ' ಅದ್ವೈತವಲ್ಲ. ಇದರಲ್ಲಿ, ದ್ವೈತ, ವಿಶಿಷ್ಟಾದ್ವೈತ, ಇವುಗಳ ಸಂಗಡಿಕೆಯೂ ಇದೆ. ಈ ತತ್ವ ವಿಚಾರದ ಶ್ರೇಷ್ಠ ಸಾಹಿತ್ಯ ಪ್ರತಿನಿಧಿಯಾಗಿ ಕಾಣಿಸಿಕೊಂಡಿದ್ದಾರೆ ತಿಮ್ಮಪ್ಪದಾಸರು.[೧೫]

## ೫
## ತಿಮ್ಮಪ್ಪದಾಸರು

ಕೇವಲ ಒಂದು ಗ್ರಂಥದ ಕರ್ತೃವಾದ ವೆಂಕಟದಾಸರು ಕವಿಚರಿತೆಯಲ್ಲಿ ಉಲ್ಲೇಖಗೊಂಡಿದ್ದು (ಸಂ.೩, ಪು.೨೫೬), ಅನೇಕ ಗ್ರಂಥಗಳ ಕರ್ತೃವೂ ಸಾಧಕ ಭಕ್ತಕವಿಯೂ ವಾಗ್ಗೇಯಕಾರನೂ ಆದ, ಅವರ ಸೋದರಳಿಯ ತಿಮ್ಮಪ್ಪದಾಸರ ವಿಚಾರ ಕವಿಚರಿತೆಕಾರರ ಗಮನಕ್ಕೆ ಬಾರದೆ ಹೋದದ್ದು ಒಂದು ಸೋಜಿಗದ ಆಕಸ್ಮಿಕ. ತಿಮ್ಮಪ್ಪದಾಸರ ೧೦೮ ಪೂಜಾ ವಿಧಾನದ ಕೀರ್ತನೆಗಳು 'ಅರ್ಚನ' ಎಂಬ ಹೆಸರಿನಲ್ಲಿ ಈ ಲೇಖಕನಿಂದ ಸಂಪಾದಿತವಾಗಿ ೧೯೭೧ ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಪ್ರಕಟವಾದ ಮೇಲೆ ಅವರು ಬೆಳಕಿಗೆ ಬಂದರು. ಅವರ ಕೃತಿಗಳೆಲ್ಲವೂ ಪ್ರಕಟವಾಗಿ ಅವು ವಿದ್ವಾಂಸರ ಹಾಗೂ ಸಹೃದಯರ ಪರಾಮರ್ಶೆಗೆ ಒಳಪಟ್ಟರೆ, ೧೯ನೆಯ ಶತಮಾನದ ಪ್ರಮುಖ

ಓದುವವರಿಗೆ) ಈಗ ಬೇಸರವಾಗಬಹುದು. ಆದರೆ ದಾಸರ ರಚನೆಗಳಲ್ಲಿ ಬಹುಪಾಲಿನವು ವ್ಯಕ್ತಿಗತವಾಗಿದ್ದು, ಪರಮಾತ್ಮ ಸ್ವರೂಪದ ಗುರುವಿನ ಬಿಂಬದ ಮುಂದೆ ಆತ್ಮನಿವೇದನ ರೂಪದವು; ಹೆರರನ್ನು ದೃಷ್ಟಿಯಲ್ಲಿಟ್ಟುಕೊಂಡು ಹಾಡಿದವರಲ್ಲ. ತಮ್ಮ ಇಷ್ಟದೈವವಾದ ತಿರುಪತಿಯ ವೆಂಕಟರಮಣನೆ ಗುರುರೂಪದಲ್ಲಿ ಕಾಣಿಸಿಕೊಂಡಿದ್ದಾನೆ, ತಮಗೆ ಉಪದೇಶ ಮಾಡಿದ್ದಾನೆ, ತಮ್ಮನ್ನು ಉದ್ಧಾರ ಮಾಡಿದ್ದಾನೆ, ಎಂಬುದು ಅವರ ಅಚಲ ವಿಶ್ವಾಸ. ವಾಸುದೇವಾರ್ಯರು ಮಾತ್ರವಲ್ಲ, ತಮ್ಮ ಇತರ ಗುರುಗಳನ್ನು ಕೀರ್ತಿಸುವಾಗಲೂ ಅದೇ ನಿಲುವು. "ತಿರುಪತಿಯ ವೆಂಕಟನ ತತ್ವದತಿಶಯವನ್ನು ಧರಿಸಿರುವ ಗುರು ವಾಸುದೇವರು"; "ಶ್ರೀ ತಿರುಪತಿಯ ವೆಂಕಟನ ಪ್ರತಿಬಿಂಬ ಗುರುವರ್ಯ ಪರವಾಸುದೇವ ಶ್ರೀರಾಮಕೃಷ್ಣಾರ್ಯರು". ಇದು ನವೀನ ಕಲ್ಪನೆಯೇನಲ್ಲ; ಆರ್ಷೇಯವಾದ ಪರಿಕಲ್ಪನೆ: ಗುರುವೆ ಬ್ರಹ್ಮ, ವಿಷ್ಣು, ಮಹೇಶ್ವರ; ಸಾಕ್ಷಾತ್ ಪರಬ್ರಹ್ಮ. ಆದರೆ ದಾಸರ ಕೀರ್ತನ ರೂಪದ ಒಂದು ಆತ್ಮೀಯವೂ ಸಹಜವೂ ಆದ ನುಡಿಚಿತ್ರ ವಾಸುದೇವಾರ್ಯರ, ಬಹುಶಃ ಸಂನ್ಯಾಸಾಶ್ರಮ ಪೂರ್ವದ, ರೂಪನ್ನು ಸ್ಥೂಲವಾಗಿ ಬಿಡಿಸಿ ತೋರಿಸುತ್ತದೆ; 'ಮಂಗಳಾರತಿ ಎತ್ತುವೆ ಸದ್ಗುರುವಿಗೆ' ಎಂಬ ಕೀರ್ತನೆಯ ಪ್ರಸಕ್ತ ಭಾಗವನ್ನು ಉದ್ಧರಿಸಬಹುದು:

ಮುಗುಳುನಗೆಯ ಮುದ್ದುಮುಖದ ದಯಾರಸ–।
ದಗಲದಂಬುಜಗಳ ಲೋಚನದ।
ಬಿಗಿದ ಶಾಲಿನ ಶಿರದಗಣಿತಕಾಂತಿಯ।
ಬಗೆಯಾದ ಗಂಧಾಕ್ಷತೆಯ ಮುದ್ದುಮೂರ್ತಿಗೆ॥

ವಂದಿಸಲಘಗಳ ಖಂಡಿಸಿ ಸುಖದೊಳು–।
ವೊಂದಿಪ ವಿಶಾಲಾಮೃತವನೆರೆದು।
ಸಂದೇಹಗಳೆಸುವೊ ಜ್ಞಾನಮುದ್ರೆಯ ಕರ–।
ದಿಂದ ಪೊಳೆವೊ ಅತಿ ಸುಂದರಮೂರ್ತಿಗೆ॥[೧೭]

ನೀಲಕಂಠಾರ್ಯರು ತಿಮ್ಮಪ್ಪದಾಸರಿಗೆ ವೇದಾಂತ ಶಾಸ್ತ್ರಗಳನ್ನು ಬೋಧಿಸಿದ ಗುರು. "ಕೌಶಿಕಪುರದಿ ನೆಲಸಿ, ಶಾಸ್ತ್ರ ಮರ್ಯಾದೆಯನ್ನುದ್ಧರಿಸಿ, ಧರೆಯೊಳು ಮಹಿಮೆಯ ಹರಹಿ ಭಕುತಿಮಾರ್ಗವರುಹಿ, ಮೂಢರ ಮುಕ್ತರೆನಿಪ" ಈ ಗುರುವನ್ನು "ಹರಿಹರಾತ್ಮಕ" ಎಂದು ಸಂಬೋಧಿಸಿರುವಲ್ಲಿ ಗುರು ಶಿಷ್ಯರ ಸ್ಮಾರ್ತ

ದಿನಗಳನ್ನು ಕಳೆದ ಸ್ಥಳ ಎನ್ನಬಹುದು.

"ಶರಣು ಶರಣು... ... ವೆಂಕಟರಮಣ ಶರಣು ಸದ್ಗುರುವೆ" ಎಂಬ ಒಂದು ಕೀರ್ತನೆಯಿಂದ ತಾಯಿ ಚೆನ್ನಾಂಬೆಯೆಂದೂ ತಂದೆ ನಾರಾಯಣಾರ್ಯ ಎಂದೂ ತಿಳಿದುಬರುತ್ತದೆ. ಈ ಕೀರ್ತನೆಯಲ್ಲಿ ತಂದೆಯನ್ನು ಹಿತಬೋಧಕನೆ, ಸುಖಕರನೆ, ವೇದಾಂತೋಪದೇಶಕನೆ, ಪೋಷಕನೆ ಎಂದು ಸಂಬೋಧಿಸಿದೆ; ಅಲ್ಲದೆ, ನಾರಾಯಣಾಚಾರ್ಯ ಸದ್ಗುರುವರ್ಯ, ವಾಸುದೇವಾರ್ಯಸದ್ಗುರು, ಕೃಷ್ಣ ಯೋಗಿಂದ್ರ, ವೆಂಕಟದಾಸಾರ್ಯ ಗುರುವರ್ಯ – ಎಂದು ಗುರುಸ್ಮರಣೆ ನಡೆದಿದೆ. ಈ ಗುರುಗಳ ಮೇಲೂ ತಿಮ್ಮಪ್ಪದಾಸರು ಸ್ತೋತ್ರ ರೂಪದ ಕೀರ್ತನೆಗಳನ್ನು ರಚಿಸಿದ್ದಾರೆ. ಇವರುಗಳ ಪೈಕಿ, ವಾಸುದೇವಾರ್ಯ, ರಾಮಕೃಷ್ಣಾರ್ಯ, ನೀಲಕಂಠಾರ್ಯ–ಈ ಮೂವರ ಮೇಲಿನ ಕೆಲವು ಕೀರ್ತನೆಗಳನ್ನು ಪೂಜಾವಿಧಾನ ಕೀರ್ತನೆಗಳ ಸಂಕಲನದಲ್ಲಿ ವಿಶೇಷವಾಗಿ ಸೇರಿಸಿಕೊಂಡಿರುವುದನ್ನು ನೋಡಿದರೆ, ತಂದೆ ನಾರಾಯಣಾರ್ಯ ಮತ್ತು ಮಾತುಲ ವೆಂಕಟದಾಸಾರ್ಯ ಇವರಿಬ್ಬರ ಜೊತೆಗೆ ಆ ಮೂವರೂ ತಿಮ್ಮಪ್ಪದಾಸರಿಗೆ ಒಂದಲ್ಲ ಒಂದು ವಿದ್ಯಾಕ್ಷೇತ್ರದಲ್ಲಿ ಪ್ರತ್ಯಕ್ಷವಾಗಿ ಬೋಧನೆ ಮಾಡಿದ ಗುರುಗಳಾಗಿದ್ದರು ಎನ್ನುವುದು ಸ್ಪಷ್ಟ. ವಾಸುದೇವಾರ್ಯರು ಶಿಷ್ಯನಿಗೆ ಮಂತ್ರೋಪದೇಶ ಮಾಡಿ ಆಧ್ಯಾತ್ಮಿಕ ಸಾಧನೆಯಲ್ಲಿ ಮಾರ್ಗದರ್ಶನ ಮಾಡಿದ ಮಹನೀಯರು; ಅವರು ಪಿತಾಮಹರು ಕೂಡ; ಈ ಸಂಗತಿ, ತಿಮ್ಮಪ್ಪದಾಸರ 'ಧ್ರುವಚರಿತ್ರೆ'ಯ ಸಂಪ್ರತಿಕಾರನು ಅವರ ಬಗೆಗೆ "ವಾಸುದೇವಾರ್ಯರ ಮೊಂಮ್ಮ" (=ಮೊಮ್ಮಗ), "ವಾಸುದೇವ ಪಉತ್ರ" (=ಪವುತ್ರ>ಪೌತ್ರ) ಎಂದು ಮಾಡಿರುವ ಉಲ್ಲೇಖಗಳಿಂದ ಸ್ಪಷ್ಟಪಡುತ್ತದೆ. ವಾಸುದೇವಾರ್ಯರ ಬಗೆಗೆ ಈಗಾಗಲೇ ನಾಲ್ಕು ಮಾತುಗಳನ್ನು ಹೇಳಿಯಾಗಿದೆ. ಆ ಕಾಲದಲ್ಲಿ ವಾಸುದೇವಾರ್ಯರು ಒಬ್ಬ ಮಹಿಮಾಪುರುಷರಾಗಿದ್ದು, ಅನೇಕ ಮಹಿಮೆಗಳನ್ನು ಮೆರೆದರೆಂದು ತಿಮ್ಮಪ್ಪದಾಸರ ಕೆಲವು ಕೀರ್ತನೆಗಳಿಂದ ವ್ಯಕ್ತಪಡುತ್ತದೆ. ಅವರ ಮಹಿಮೆಯನ್ನು ಕೊಂಡಾಡುವ ಕೀರ್ತನೆಗಳು ಹಲವಾರಿವೆ. ತಮ್ಮ ನೆಚ್ಚು–ಮೆಚ್ಚಿನ ಗುರುವನ್ನು ಹಾಡಿ ಹೊಗಳುವುದರಲ್ಲಿ ದಾಸರಿಗೆ ದಣಿವು ತಣಿವುಗಳು ಇದ್ದಂತೆಯೇ ಕಾಣುವುದಿಲ್ಲ. ಈ ಎಲ್ಲ ಕೀರ್ತನೆಗಳಲ್ಲಿ ಗುರುವಿನ ಆಧ್ಯಾತ್ಮಿಕ ಮೂರ್ತಿಸ್ವರೂಪ ಭಕ್ತಿಭಾವದ ಪೀಠದ ಮೇಲೆ ತತ್ವಜ್ಞಾನದ ಪ್ರಭಾವಳಿಯ ನಡುವೆ ನಿರಂಜನವಾಗಿ ಮೂಡಿ ನಿಲ್ಲುತ್ತದೆ. ನಿಲುಗಡೆಯೇ ಇದ್ದಂತೆ ಕಾಣದ ಗುರುವಿನ ಗುಣಗಾನದಲ್ಲಿ ದಾಸರಿಗೆ ಬೇಸರವಿಲ್ಲದಿದ್ದರೂ ಎಡೆವೊಕ್ಕ ಪುನರುಕ್ತಿಯಿಂದಾಗಿ ಕೇಳುವವರಿಗೆ (ಅಥವಾ

ಅಳಿದುಳಿದಿರುವ (ತಿಮ್ಮಪ್ಪದಾಸರ) ಗ್ರಂಥಸಂಗ್ರಹ – ಇವನ್ನೆಲ್ಲಾ ಗಮನಕ್ಕೆ ತಂದುಕೊಂಡರೆ ತಿಮ್ಮಪ್ಪದಾಸರು ಹುಟ್ಟುಕವಿಯಾಗಿದ್ದುದರ ಜೊತೆಗೆ ನಾನಾ ಶಾಸ್ತ್ರಗಳಲ್ಲಿ ಪಾರಂಗತರಾದ ವಿದ್ವಾಂಸರೂ ಆಗಿದ್ದರೆಂದು ಹೇಳಬಹುದು."[೨೨]

ಬಸವೇಶ್ವರ, ದುರ್ಗಸಿಂಹ, ಜನ್ನ, ಮುಂತಾದ ಅನೇಕ ಪ್ರಾಚೀನ ಕನ್ನಡ ಕವಿಗಳ ಕುಲ ಎಂದು ಪ್ರಸಿದ್ಧವಾದ, ಸ್ಮಾರ್ತ ಬ್ರಾಹ್ಮಣರ ಪಂಗಡದ ಕಮ್ಮೆ ಕುಲಕ್ಕೆ ಸೇರಿದವರು ತಿಮ್ಮಪ್ಪದಾಸರು. ಇವರು ('ಅರ್ಚನ'ದಲ್ಲಿನ) ಪೂಜಾವಿಧಾನ ಕೀರ್ತನೆಗಳಲ್ಲಿಯೂ ಇತರ ಅನೇಕ ರಚನೆಗಳಲ್ಲಿಯೂ ಅದ್ವೈತ ತತ್ವದ ಪ್ರತಿಪಾದನೆಯನ್ನು ಮೇಲಿಂದ ಮೇಲೆ ಮಾಡುತ್ತಾರೆ. ಆದರೂ ಇವರ ಕೃತಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಅದ್ವೈತಕ್ಕೆ ಅವಿರೋಧವಾದ ಭಾಗವತ ಧರ್ಮವನ್ನು ಇವರು ಅನುಸರಿಸುತ್ತಿದ್ದರು ಎಂದು ಕಂಡು ಬರುತ್ತದೆ. ಭಾಗವತ ಧರ್ಮವು ಹರಿಹರಾಭೇದಾತ್ಮಕವಾದರೂ, ಅದು ಹರಿಭಕ್ತಿ ಪ್ರವಣವಾದುದು. ಕುಮಾರವ್ಯಾಸ ಲಕ್ಷ್ಮೀಶ ಮುಂತಾದ ಭಾಗವತ ಕವಿಗಳ ದೃಷ್ಟಿ ಇದು. ಆದರೆ ಅವರಲ್ಲಿ ಯಾರೂ ತಾವು 'ಹರಿದಾಸ' ಎಂದು ಹೇಳಿಕೊಂಡಿಲ್ಲ. ತಿಮ್ಮಪ್ಪದಾಸರು 'ಹರಿದಾಸ' ಎನ್ನುವುದಕ್ಕೆ ಅವರ ಕೃತಿಗಳಲ್ಲಿ ಸ್ಪಷ್ಟವಾದ ಆಧಾರವಾಕ್ಯಗಳು ಉಂಟು.[೨೩] ಆದರೂ ಇವರು ಪುರಂದರದಾಸಾದಿಗಳ ಮಾಧ್ವ ವೈಷ್ಣವ ಸಂಪ್ರದಾಯದ ಹರಿದಾಸರಲ್ಲ. ಆದಿಶಂಕರರ ಕಾಲದಿಂದಲೂ ಆವಿಷ್ಕಾರಗೊಂಡು ಬಳಕೆಗೆ ಬಂದ ಮೂಲ ಭಾಗವತಧರ್ಮದ ವೈಷ್ಣವಾಚರಣೆಗಳ ಕೆಲವು ಸ್ಪಷ್ಟ ಕುರುಹುಗಳು ಪೂಜಾ ವಿಧಾನ ಕೀರ್ತನೆಗಳಲ್ಲಿ ಕಂಡುಬರುತ್ತವೆ. ಅವುಗಳನ್ನು ಹೀಗೆ ಸಂಗ್ರಹಿಸಬಹುದು: (೧)ವಾಸುದೇವೋಪಾಸನೆ (ಇದರ ಸಾಂಕೇತಿಕ ಬಿಂಬರೂಪ ಗುರು ವಾಸುದೇವರ್ಯರು. ಇಷ್ಟದೈವ–ಕುಲದೈವ ತಿರುಪತಿ ವೆಂಕಟರಮಣನಾದರೂ, ಪೂಜಾವಿಧಾನ ಕೀರ್ತನೆಗಳಲ್ಲಿ ವಸುದೇವಪುತ್ರ ವಾಸುದೇವನಾದ ಕೃಷ್ಣನ ಸ್ತೋತ್ರಕ್ಕೆ ಪ್ರಾಧಾನ್ಯ); (೨)ಭಾಗವತರಿಗೆ ಹೇಳಿದ ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರ ಮಂತ್ರಪಠನೆ (ಗುರು ವಾಸುದೇವರು ಈ ಮಂತ್ರಪಠನೆಯನ್ನು ಉಪದೇಶಿಸಿದ್ದರು ಎಂಬ ಸಂಗತಿ 'ಅರ್ಚನ'ದ 'ಪೀಠಸಮರ್ಪಣೆ' ಎಂಬ ೧೪ನೆಯ ಕೀರ್ತನೆಯಲ್ಲಿ ಸ್ಪಷ್ಟವಾಗಿದೆ); (೩)'ಜಪೇತ್ ಅಷ್ಟೋತ್ತರ ಶತಮ್' ಎಂಬ ಭಾಗವತದ ನಿರ್ದೇಶ ದಂತೆ, ಪೂಜಾವಿಧಾನಕ್ಕೆ ೧೦೮ ಕೀರ್ತನೆಗಳನ್ನು ಅಳವಡಿಸಿ, ಪ್ರತಿ ಕೀರ್ತನಾನಂತರ ಶ್ರೀಕೃಷ್ಣಾಷ್ಟೋತ್ತರದ ಒಂದೊಂದು ನಾಮವನ್ನು ಜೋಡಿಸಿರುವುದು; (೪) "ಭಗವಂತನ ಮಾನಸಪೂಜೆ, ನಿರಾಕಾರಧ್ಯಾನ, ಬ್ರಹ್ಮಾತ್ಮೈಕ್ಯ; (೫)ಅದ್ವೈತ ಸಿದ್ಧಾಂತದಲ್ಲಿ ನಂಬಿಕೆಯಿದ್ದರೂ, ವೈಷ್ಣವಾಚಾರ

ಭಾಗವತದೃಷ್ಟಿ ಸ್ಪಷ್ಟ ಗೋಚರವಾಗಿದೆ.[೧೮]

"ಶ್ರೀ ರಾಮಕೃಷ್ಣಾರ್ಯರು ತಿಮ್ಮಪ್ಪದಾಸರ ಇನ್ನೊಬ್ಬ ಗುರುಗಳು, ಇವರು 'ಶತಸಹಸ್ರ' ಮಂದಿಗೆ ಕಾವ್ಯಪಾಠವನ್ನು ಹೇಳಿದವರೆಂಬ ಉಲ್ಲೇಖ ಕೀರ್ತನೆಯಲ್ಲಿರುವುದರಿಂದ, ತಿಮ್ಮಪ್ಪದಾಸರು ಅವರ ಸನ್ನಿಧಿಯಲ್ಲಿ ಕಾವ್ಯಪಾಠ ಮಾಡಿರಬಹುದು. ಇವರು ಕೃಷ್ಣಭಕ್ತರೆಂದೂ ಶಿಷ್ಯರಿಗೆ ವೇದವೇದಾಂತಗಳನ್ನು ಬೋಧಿಸುವುದರಲ್ಲಿ ಸಮರ್ಥರಾಗಿದ್ದರೆಂದೂ, ಶ್ರೀ ಶಂಕರಾಚಾರ್ಯ ಕೃತ ಗ್ರಂಥಕ್ಕೆ (ಬಹುಶಃ 'ಬ್ರಹ್ಮಸೂತ್ರಭಾಷ್ಯ'ಕ್ಕೆ) ವ್ಯಾಖ್ಯಾನ ಮಾಡಲು ಇವರು ಸಮರ್ಥರೆಂದು ಸ್ವಪ್ನವಾದುದಾಗಿಯೂ, 'ದೃಷದಪುರ'ದಲ್ಲಿ (ಕಲ್ಲೂರು) ನೆಲಸಿ, ಭಕ್ತರನ್ನು ಉದ್ಧಾರ ಮಾಡುತ್ತ, ಅನೇಕ ಮಹಿಮೆಗಳನ್ನು ಮೆರೆದರೆಂದೂ ಕೀರ್ತನೆಯಿಂದ ತಿಳಿದು ಬರುತ್ತದೆ."[೧೯] ತಿಮ್ಮಪ್ಪದಾಸರು ಸಂಗೀತಶಾಸ್ತ್ರ ಲಕ್ಷಣಜ್ಞರಾಗಿದ್ದುದಲ್ಲದೆ, ತಮ್ಮ ಕಾಲದವರೆಗೆ ಬೆಳೆದು ಬಂದಿದ್ದ ಲಕ್ಷ್ಯಪ್ರಪಂಚದ ಪರಿಚಯವನ್ನೂ ಹೊಂದಿದ್ದರು.[೨೦] ಇವರಿಗೆ ಸಂಗೀತಶಾಸ್ತ್ರವನ್ನೂ ಗಾನವಿದ್ಯೆಯನ್ನೂ ಬೋಧಿಸಿದವರು ಯಾರು ಎನ್ನುವುದು ತಿಳಿದು ಬಂದಿಲ್ಲ. ಶ್ರೀ ತ್ಯಾಗರಾಜರಿಗೆ 'ಸಂಗೀತ ಸುಧಾರ್ಣವ' ಎಂಬ ಗ್ರಂಥವನ್ನು ಶ್ರೀ ರಾಮಕೃಷ್ಣರೆಂಬವರು ಅನುಗ್ರಹಿಸಿದರು ಎಂಬ ಪ್ರತೀತಿಯಿದೆ. ಆ ರಾಮಕೃಷ್ಣರೇ ತಿಮ್ಮಪ್ಪದಾಸರ ಗುರು ರಾಮಕೃಷ್ಣಾರ್ಯ ಎಂಬ ಹೇಳಿಕೆ ವಿಚಾರಾರ್ಹ.[೨೧] ಈ ಗುರುವನ್ನು ಕುರಿತು ರಚಿಸಿರುವ ದಾಸರ ಯಾವ ಕೀರ್ತನೆಯಲ್ಲಿಯೂ ಗುರುವಿನ ಸಂಗೀತ ಶಾಸ್ತ್ರಜ್ಞಾನದ ಬಗೆಗೆ ಉಲ್ಲೇಖವಿಲ್ಲ. ಶ್ರೀ ತ್ಯಾಗರಾಜರಿಗೆ ನಾದೋಪಾಸನೆ ಪ್ರಮುಖವಾಗಿತ್ತು; ತಿಮ್ಮಪ್ಪದಾಸರಲ್ಲಿ ಅದು ಗೌಣ. ಹೀಗಿರುತ್ತ, ರಾಮಕೃಷ್ಣಾರ್ಯರ ಸಂಗೀತ ಶಾಸ್ತ್ರಜ್ಞಾನಕ್ಕೂ ಬೋಧೆಗೂ ತಮ್ಮ ಗುರು ಸ್ತುತಿಯಲ್ಲಿ ತಿಮ್ಮಪ್ಪದಾಸರು ಅಷ್ಟು ಪ್ರಾಮುಖ್ಯವನ್ನು ಕೊಡದಿದ್ದ ಕಾರಣ, ಆ ಸಂಬಂಧದ ಉಲ್ಲೇಖ ಇಲ್ಲ ಎಂದು ತರ್ಕಿಸಬಹುದು. ಇಬ್ಬರು ವ್ಯಕ್ತಿಗಳೂ ಅಭಿನ್ನರು ಎಂದು ತೀರ್ಮಾನಿಸಲು ಪ್ರಮಾಣ ಸಾಲದು. ವಿವಿಧ ರಾಗ ತಾಳಲಯಗಳಲ್ಲಿ ರಚಿತವಾಗಿರುವ ದಾಸರ ಹಲವು ನೂರು ಕೀರ್ತನೆಗಳೇ ಅವರು ವಾಗ್ಗೇಯಕಾರರು ಎಂಬುದಕ್ಕೆ ಸಾಕಷ್ಟು ಪ್ರಮಾಣವಾಗಿವೆ. "ಪಂಡಿತತ್ವಾಭಿಮಾನ (ಅರ್ಚನದ ಕೀರ್ತನೆ ೭೮–೩), 'ವಿದ್ಯದಲ್ಲಿ ನಿರ್ಬಂಧವಾಯಿತು' (ಕೀ.೭೯–೧) 'ವಿದ್ಯವಿಸ್ತರವಾದರದ್ದುವುದು ಗರ್ವದಲಿ' (ಕೀ.೧೦೧–೩) – ಇವುಗಳ ಉಲ್ಲೇಖ; ಸಂಸ್ಕೃತದಲ್ಲಿ ಕೃತಿರಚನಾ ಸಾಮರ್ಥ್ಯ; ಕೆಲವೆಡೆಗಳಲ್ಲಿ ಭಾಷಾಶೈಲಿಯ ಪ್ರೌಢಿಮೆ; ವೇದ, ಉಪನಿಷತ್ತು, ಭಗವದ್ಗೀತೆ, ಭಾಗವತ, ಮುಂತಾದ ಗ್ರಂಥಗಳ ಪರಿಚಯ; ಈಗಲೂ ವಂಶಸ್ಥರ ಬಳಿ

ಶತರೌಪ್ಯದ ಋಣ" (೨೧೦೦ ರೂಪಾಯಿ) ಪುತ್ರ ನಾರಾಯಣದಾಸರ ಪಾಲಿಗೆ ಉಳಿದಿತ್ತು. 'ಸಾಲದ ಪತ್ರ ಮಗನಿಗೆ' ಎಂಬ ಜನಪದೋಕ್ತಿಯನ್ನು ನಿಜಗಾಣಿಸಲೆಂಬಂತೆ, ಈ ಅಂಶ ನಾರಾಯಣದಾಸರ ಒಂದು ಕೀರ್ತನೆಯಿಂದಲೇ ನಮಗೆ ವೇದ್ಯವಾಗುತ್ತದೆ. ಋಣಭಾರದಿಂದ ತಾವು ಪಟ್ಟ ಬವಣೆಯನ್ನು ತಿಮ್ಮಪ್ಪದಾಸರು ಹಲವು ಕೀರ್ತನೆಗಳಲ್ಲಿ ತೋಡಿಕೊಂಡಿದ್ದಾರೆ. ಇವನ್ನು 'ಋಣಕೀರ್ತನೆ'ಗಳೆಂದೇ ಹೆಸರಿಸಿದ್ದಾರೆ. ಈ ಋಣಕೀರ್ತನಮಾಲೆಯನ್ನು ಒಂದು ಕಂದಪದ್ಯದಿಂದ ಆರಂಭಿಸಿದ್ದಾರೆ:

ಶ್ರೀ ಗುರುಚರಣಾರಾಧನೆ–
ಯೋಗದ ಬಲದಿಂದ, ದುಷ್ಕರ್ಮಾನುಭವದಿ ನಾಂ
ರಾಗದಲುಣುತಿರೆ, ಬರಲು ವಿ–
ರಾಗವು ಋಣಮೂಲದಿಂದಲದನನುವದಿಪ್ಪೆಂ

'ಅರ್ಚನ'ದಲ್ಲಿನ ಲಕ್ಷ್ಮೀ ಸ್ತೋತ್ರದ ಕೀರ್ತನೆಗಳಲ್ಲಿ ದಾಸರು ದಾರಿದ್ರ್ಯದಲ್ಲಿ ನರಳಿ ಬಳಿಕ ಸ್ವಲ್ಪ ಉತ್ತಮ ಸ್ಥಿತಿಗೆ ಬಂದ ಅಂಶ ತಿಳಿದುಬರುತ್ತದೆ. ಅನುಕೂಲಸ್ಥಿತಿಯಲ್ಲಿದ್ದಾಗ ಭಜನೆ, ಅನ್ನಸಂತರ್ಪಣೆ, ಮುಂತಾದ ದೇವತಾ ಕಾರ್ಯಗಳಿಗಾಗಿ ಇದ್ದುಬದ್ದುದನ್ನೆಲ್ಲಾ ವ್ಯಯಮಾಡಿ, ವೆಚ್ಚಕ್ಕಾಗಿ ಋಣಮಾಡ ತೊಡಗಿದರು. "ಋಣವ ಮಾಡಿದ ಪತಿತ ನಾನು, ಸ್ಮೃತಿಧನವನಿತ್ತುಳುಹು ಸೀತಾರಾಮ ನೀನು" ಎಂದು ಒಂದು ಕೀರ್ತನೆಯಲ್ಲಿ ಬೇಡಿಕೊಂಡಿದ್ದರೆ; ಇನ್ನೊಂದು ಕೀರ್ತನೆಯಲ್ಲಿ ಎಷ್ಟು ತೀರಿಸಿದರೂ ಕರಗದ ಸಾಲದಿಂದ ಆದ ಸೋಲಿನ ಅನುಭವವನ್ನು ಹೇಳಿಕೊಂಡಿದ್ದಾರೆ: "ಹಿರಿಯರಾರ್ಜಿಸಿದಂಥ ಧನಧಾನ್ಯ ಗೃಹಕ್ಷೇತ್ರ ತುರುಗಳ ಮಾರಿ ಸಾಲದ ಬಡ್ಡಿಗೆ ಕರೆದಿತ್ತು ಮುಂದಕ್ಕು ಕೊಡುವವರನು ನೋಡಿ ತರುತ ದ್ರವ್ಯವನುಂಡು ತಲೆದಾಗದೆ ಕೆಟ್ಟು" ಋಣಮಾಡುತ್ತಲೇ ಹೋದರು. ಇಷ್ಟೆಲ್ಲಾ ಋಣ, ತಮ್ಮ ಹರಿಯ ಆರಾಧನೆಗಾಗಿ! "ಧನಶುದ್ಧಿಯಿಲ್ಲದ ದಾನವು ವ್ಯರ್ಥವು ಎಂಬುದನು ಕೇಳಿ, ಸ್ವಾರ್ಜಿತದಲಿ ಮಾಡದೆ, ಋಣಗೈದು ಸ್ವೋಪಕಾರಿಗೆ ಕೊಟ್ಟು ಹರಿಯಾರಾಧನೆಯನು ದಂಭದ ದಾರಿಯೊಳೆಸಗುತ" ಋಣ ಮಾಡಿದರು. ಋಣ ಮಾಡಿದ್ದಕ್ಕಾಗಿ ಬಹಳ ಪಶ್ಚಾತ್ತಾಪ ಪಟ್ಟಿದ್ದಾರೆ. ನೊಂದಿದ್ದಾರೆ. ಬೆಂದುಬೇಗುದಿಗೊಂಡಿದ್ದಾರೆ. ಈ 'ಋಣಕೀರ್ತನೆ'ಗಳಲ್ಲಿ, ಕೊನೆಗೆ, ಋಣಭಾರದಿಂದ ಕೊರಗಿ ಕೊನೆಯುಸಿರೆಳೆದರು.

ಶೈವಾಚಾರಗಳ ಬೆರಕೆ, ಪಂಚಾಯತನ ಪೂಜೆ, ವೈಷ್ಣವ ಭಾಗವತಗೇಕಾದಶಿಯ ಆಚರಣೆ; (೬)ಹರಿಹರಾಭೇದನಿಷ್ಠ.[೨೪] "ಎಲ್ಲಕ್ಕಿಂತ ಮಿಗಿಲಾಗಿ, ಭಾಗವತ ಧರ್ಮಾಚರಣೆಯಲ್ಲಿ ಭಗವದ್‌ಭಕ್ತಿ ಮುಖ್ಯವಾದುದು. ಆದ್ದರಿಂದ, ದ್ವೈತಾದ್ವೈತ ವಿಶಿಷ್ಟಾದ್ವೈತಾದಿ ಯಾವುದೇ ಸಿದ್ಧಾಂತದ ಅನುಯಾಯಿಗಳಾದರೂ ಸರಿಯೆ, ಭಗವದ್‌ಭಕ್ತರೆಲ್ಲ ಭಾಗವತರು. 'ಹರಿ' ಅಥವಾ 'ವೆಂಕಟರಮಣ' ರೂಪದ ಭಗವಂತನನ್ನು ತಮ್ಮ ಇಷ್ಟದೈವವಾಗಿ ಉಳ್ಳ ತಿಮ್ಮಪ್ಪದಾಸರು ತಮ್ಮ ದೈವಕ್ಕೆ ಅರ್ಪಿಸಿರುವ ಭಕ್ತಿಕುಸುಮಮಾಲೆಗೆ ಅದ್ವೈತ ಸಿದ್ಧಾಂತ ಸೂತ್ರಪ್ರಾಯವಾಗಿದೆ; ಪುರಂದರದಾಸಾದಿ ಹರಿದಾಸರ ಕೀರ್ತನೆಗಳಿಗೆ ದ್ವೈತಸಿದ್ಧಾಂತ ಸೂತ್ರ ಪ್ರಾಯ. ಇವರೂ ಹರಿದಾಸರು; ಅವರೂ ಹರಿದಾಸರು."[೨೫]

ತಿಮ್ಮಪ್ಪದಾಸರ ಜೀವನ ವೃತ್ತಾಂತ ವಿವರಗಳು ಹೆಚ್ಚಾಗಿ ತಿಳಿದುಬಂದಿಲ್ಲ. ಅವರ ಕೀರ್ತನೆಗಳ ಮೂಲಕ ಅವರ ಅಂತರಂಗದ ವ್ಯಕ್ತಿತ್ವವೇನೋ ಚೆನ್ನಾಗಿ ಮೂಡಿನಿಂತು, ಭಕ್ತಿ ಜ್ಞಾನ ವೈರಾಗ್ಯಗಳಲ್ಲಿ ಸಿದ್ಧಿ ಪಡೆಯಲು ನಿರಂತರವೂ ಹೋರಾಟ ನಡೆಸಿದ ಒಬ್ಬ ಮಹಾನ್ ಸಾಧಕರಾಗಿ ಕಂಡುಬರುತ್ತಾರೆ. ಆದರೂ, ಅವರ ಜೀವನಕ್ಕೆ ಸಂಬಂಧಪಟ್ಟ ಕೆಲವೊಂದು ಮುಖ್ಯ ಸಂಗತಿಗಳು ಅವರ ರಚನೆಗಳಲ್ಲಿ ಅನುದ್ದಿಷ್ಟವಾಗಿ ಹೊರಪಟ್ಟಿರುವಂತೆ ಕಂಡುಬರುತ್ತದೆ. ದಾಸರು ಗುರುಹಿರಿಯುರನ್ನೂ ಹುಟ್ಟೂರಾದ ಚಿಕ್ಕನಾಯಕನ ಹಳ್ಳಿಯನ್ನೂ ತೊರೆದುಕೊಂಡು, ಶ್ರೀರಂಗಪಟ್ಟಣಕ್ಕೆ ಹೋಗಿ, ಮೈಸೂರು ದೊರೆಗಳ ಬಳಿ ರಾಯಸದ ವೃತ್ತಿಯನ್ನು ಹಿಡಿದಂತೆ ಕಾಣುತ್ತದೆ. ಇವರು ಶ್ರೀರಂಗಪಟ್ಟಣದಲ್ಲಿದ್ದಾಗ, ಗುರು ವಾಸುದೇವಾರ್ಯರನ್ನು ಸಂದರ್ಶಿಸಿ ಅವರಿಂದ ಮಂತ್ರೋಪದೇಶ ಪಡೆದ ಪ್ರಕರಣ ಒಂದು ಷಟ್ಪದೀ ರಚನೆಯಲ್ಲಿ ಮನೋಜ್ಞವಾಗಿ ವರ್ಣಿತವಾಗಿದೆ. ಶ್ರೀರಂಗಪಟ್ಟಣದ ಪತನವಾದ ಮೇಲೆ ಇವರು ಮತ್ತೆ ಹುಟ್ಟೂರಿಗೆ ಹಿಂದಿರುಗಿದರು. ಆ ವಿಷಮ ಪರ್ವಕಾಲದಲ್ಲಿ ರಾಜಮನೆತನಕ್ಕೆ ಅವರು ಉಪಕಾರ ಮಾಡಿದರೆಂದು ಪ್ರತೀತಿ. ಮುಮ್ಮಡಿ ಕೃಷ್ಣರಾಜ ಒಡೆಯರು ಪಟ್ಟಕ್ಕೆ ಬಂದಮೇಲೆ, ಉಪಕಾರ ಸ್ಮರಣೆಗಾಗಿ ಮಾತ್ರವಲ್ಲದೆ ದಾಸರ ಭಗವದಾರಾಧನೆಗೆ ಅನುಕೂಲ ಕಲ್ಪಿಸಿಕೊಡುವ ಉದ್ದೇಶದಿಂದಲೂ ಕೂಡ ಮುಮ್ಮಡಿಯವರು ಅವರಿಗೆ ಹಾಸನ ಜಿಲ್ಲೆಯ ಅರಕಲಗೂಡು ಬಳಿ 'ಭಟಮಾನ್ಯ' ಹಾಕಿಕೊಟ್ಟು ನೆಮ್ಮದಿಯ ನೆಲೆಯನ್ನು ಕಲ್ಪಿಸಿಕೊಟ್ಟರು. ಆದರೆ, ನೆಮ್ಮದಿಯಾಗಿ ಬದುಕುವುದು ದಾಸರ ಹಣೆಯಲ್ಲಿ ಬರೆದಿರಲಿಲ್ಲ. ಋಣಭಾರದಿಂದ ಕೊರಗಿ ಕೊರಗಿ ಸತ್ತರು. ದಾಸರು ಮಾಡಿದ್ದ ಋಣವನ್ನು ತೀರಿಸುವಷ್ಟು ತೀರಿಸಿ, ತೀರಿಸಲಾರದೆ ಬಿಟ್ಟ ಋಣಶೇಷ, "ದ್ವಿಸಹಸ್ರಾಧಿಕ

ಸಾಲಿನಲ್ಲಿ ಎಲ್ಲರೂ ಬಲ್ಲ ನೈವೇದ್ಯದ ಮಾತೇ ಇದೆ. ನೈವೇದ್ಯ ಸಮರ್ಪಣೆಯ ಪ್ರತ್ಯೇಕ ಕೀರ್ತನೆಯಲ್ಲಿನ ತಾತ್ತ್ವಿಕದೃಷ್ಟಿ – ಸಕಲವಿಶ್ವದೊಂದಿಗೆ ಭಕ್ತನಾದ ತಾನೂ ಆ ಪರಬ್ರಹ್ಮರೂಪಿ ವೆಂಕಟರಮಣನಿಗೆ ನೈವೇದ್ಯ ಎಂಬ ಆತ್ಮಾರ್ಪಣವು ಗಾಢಚಿಂತನಕ್ಕೆ ಮಾತ್ರ ನಿಲುಕತಕ್ಕದ್ದು:

"ಜಡಪ್ರಕೃತಿಯೆ ಪಾದವೆಂಟರ ಪೀಠವು; ಜಡವಿರಹಿತವಾದ ಪ್ರಕೃತಿ ತಾ ಮಣೆಯು; ದೃಢವಿವೇಕವೆ ದಿವ್ಯಹರಿವಾಣ; ಅದರಲ್ಲಿ ಒಡಗೂಡುವನುಭವ ಎಂಬನ್ನ ಬಡಿಸಿದೆ; ಇಪ್ಪತ್ತುನಾಲ್ಕು ತತ್ವಂಗಳೆ ಶಾಕಂಗಳು; ಒಪ್ಪುವ ಬಹು ವಿಷಯಂಗಳೆ ವ್ಯಂಜನವು; ತಪ್ಪದೆ ಮಾಡುವ ಭಕ್ತಿ ತಾ ರಸವು; ತುಪ್ಪವು ಜೀವನ ಬೆರಸುವ ಗುಣವು; ಪರಮನೊಳೈಕ್ಯವಾದನುಭವ ಕ್ಷೀರವು; ನೆರೆ ಪುಟ್ಟಿದಾನಂದ ತಾನೆ ಸಕ್ಕರೆಯು" – ಈ ನೈವೇದ್ಯವನ್ನು 'ಆರೋಗಣೆ ಮಾಡು' ಎಂದು ಶ್ರೀವೆಂಕಟರಮಣನನ್ನು ಬೇಡಿಕೊಳ್ಳುತ್ತಾರೆ ದಾಸರು.

ಇದೇ ರೀತಿಯಲ್ಲಿ, ಅನೇಕ ಕೀರ್ತನೆಗಳು ಅದ್ವೈತ ತತ್ವ ಪ್ರತಿಪಾದನೆಯನ್ನು ಭಕ್ತಿಭಾವದ (ಅರ್ಥಾತ್ ದ್ವೈತದ) ಚೌಕಟ್ಟಿನಲ್ಲಿ ಒಳಕೊಂಡಾಗ ಸಗುಣ–ನಿರ್ಗುಣಗಳ, ದ್ವೈತಾದ್ವೈತಗಳ ಸುಂದರ ಸಮನ್ವಯ ಪ್ರತೀತವಾಗುತ್ತದೆ. ತತ್ತ್ವ ಕೇವಲ ಶಾಸ್ತ್ರಪ್ರಮೇಯವಾಗಿ, ವಾದದ ವಿಷಯವಾಗಿ ಉಳಿಯದೆ, ದಾಸರ ಅನುಭೂತ ಸತ್ಯವಾಗಿ ಪರಿಣಮಿಸಿ, ನಿರ್ಗುಣಬ್ರಹ್ಮೋಪಾಸನೆಗೆ ಸಗುಣ ಬ್ರಹ್ಮೋಪಾಸನೆ ಅವಿರೋಧ ಮಾತ್ರವಲ್ಲ, ಒಂದು ಅಗತ್ಯವಾದ ಪೂರ್ವಭಾವಿ ಸಾಧನಾ ಕ್ರಮ ಎಂಬಸತ್ಯಾಂಶ ತೋರಿಬರುತ್ತದೆ. ಈ ಕೆಳಗಿನ ಪದ್ಯಗಳಲ್ಲಿ ತಿಮ್ಮಪ್ಪದಾಸರು ಭಕ್ತಿಮಾರ್ಗವನ್ನು ಆಚರಿಸುತ್ತ, ಪಂಚಾಯತನ ಪೂಜಾತತ್ತ್ವದಲ್ಲಿ 'ಅಹಂ ಬ್ರಹ್ಮಾಸ್ಮಿತೆ'ಯನ್ನು ಹೇಗೆ ಕಂಡುಕೊಂಡರು, ಹೇಗೆ ಬ್ರಹ್ಮಾನುಭಾವದ ಹಂತವನ್ನು ಮುಟ್ಟಿದರು ಎಂಬುದು ಗೊತ್ತಾಗುತ್ತದೆ:

ಗಣಪತಿ ನಿನ್ನಾಗ್ನೇಯದ–
ಲಿನ ತಾ ನೈರುತ್ಯದೆಶೆಯೊಳಂಬಿಕೆ ಮರುತನೊ–
ಳನುಪಮ ಶಂಕರನೀಶಾ–
ನ್ಯನೊಳರ್ಚಿತರಾದರೈಯ್ಯ ತಿರುಪತಿಯೊಡೆಯಾ.
ನೀನೇ ಗಣಪತಿ ಸೂರ್ಯನು
ನೀನೆ ಸಿವ ನಿನ್ನ ಶಕ್ತಿ ದೇವಿಯು ನಾನೂಝು
ನೀನಾಗಿ ನಿನ್ನ ಭಜಿಸಿದೆ

**ಅರ್ಚನ: ಪೂಜಾವಿಧಾನ ಕೀರ್ತನೆಗಳು:** ವಸ್ತುಸ್ಥಿತಿ ಹೇಗಾದರೂ ಇರಲಿ, 'ಅರ್ಚನ'ದ ಪೂಜಾವಿಧಾನ ಕೀರ್ತನೆಗಳು ನಿರಾಕಾರಧ್ಯಾನವನ್ನೂ ಮಾನಸಪೂಜೆಯನ್ನೂ ವಿವರ ವಿವರವಾಗಿ ನಿರೂಪಿಸುವುದನ್ನು ನೋಡಿದರೆ, 'ದಂಭದ ದಾರಿಯ' ಬಾಹ್ಯಪೂಜೆಯನ್ನು ತ್ಯಜಿಸಿ, ಅದ್ವೈತನಿಷ್ಠವಾದ ಭಾಗವತ ಧರ್ಮಕ್ಕೆ ಸಮ್ಮತವಾದ ನಿರ್ಗುಣೋಪಾಸನೆಯನ್ನು ಸಗುಣಾರಾಧನೆಯ ಕ್ರಮದಲ್ಲಿ ಎಸಗುವ ಭಕ್ತಿಯ ಅನುಸಂಧಾನವನ್ನು ತಿಮ್ಮಪ್ಪದಾಸರು ರಿಕ್ತಹಸ್ತರಾದ ಪರಿಸ್ಥಿತಿಯಲ್ಲಿ ಅನುಸರಿಸಿಕೊಂಡು ಬಂದಂತೆ ಕಾಣುತ್ತದೆ. ತಿಮ್ಮಪ್ಪದಾಸರ ಪೂಜಾ ವಿಧಾನ ಕೀರ್ತನೆಗಳು ವಿಶಿಷ್ಟವಾದವು. "ತ್ಯಾಗರಾಜರ ಉತ್ಸವ ಸಂಪ್ರದಾಯದ ಕೀರ್ತನೆಗಳು, ಪುರಂದರದಾಸರ ಕೃತಿಗಳು, ಮುಂತಾದ ಸಂಗೀತ ಕೃತಿ ರಾಶಿಯಲ್ಲಿ ಪೂಜಾ ಕ್ರಮವನ್ನು ವಿವರಿಸುವ ಕೃತಿಗಳು ಇಲ್ಲದೆ ಇಲ್ಲ. ಆದರೆ, ಎಲ್ಲವನ್ನೂ ಷೋಡಶೋಪಚಾರಗಳ ಒಂದು ಪರಿವಿಡಿಯಲ್ಲಿ ಅಳವಡಿಸಿಕೊಂಡು ಚತುಷ್ಷಷ್ಟ್ಯುಪಚಾರಗಳನ್ನೂ ಕೂಡಿಸಿಕೊಂಡು, ಇಷ್ಟದೇವತೆಗೆ ಅರ್ಪಿಸಲೆಂದು ಭಕ್ತಿಸೂತ್ರದಿಂದ ಕೋದ ಅಷ್ಟೋತ್ತರಶತ ವಾಕ್‌ಪುಷ್ಪಮಾಲಿಕ ಇದೊಂದೇ ಎಂದು ಕಾಣುತ್ತದೆ. ಈ ಕೀರ್ತನಮಾಲಿಕೆಯಲ್ಲಿ ಪ್ರತಿ ಕೀರ್ತನೆಯೂ ತನ್ನದೇ ಆದ ಅಂದಚೆಂದದೊಡನೆ ಒಂದು ಬಿಡಿಹೂವಾಗಿ ಮಾಲೆಗೆ ಸೇರಿ ಮಾಲೆಯ ಒಟ್ಟಂದಕ್ಕೆ ತನ್ನ ಪಾಲಿನ ಅಂದವನ್ನು ಅರ್ಪಿಸಿದೆ. ಕೀರ್ತನೆಗಳ ಅಣಿಪಾಡಿನಲ್ಲಿ ಒಂದು ಬಂಧಕೌಶಲ ಕಂಡುಬರುವುದರಿಂದ, ಇದು 'ಗೇಯ ಪ್ರಬಂಧ' ಎಂಬ ಹೆಸರಿಗೆ ಅರ್ಹವಾಗಿದೆ.

ಈ ಸಂಕಲನದಲ್ಲಿ ಪ್ರತಿಪಾದಿತವಾಗಿರುವ ಮಾನಸಪೂಜೆಯ ಸ್ವರೂಪದಲ್ಲಿ ಹೊಸತನವಿಲ್ಲದಿದ್ದರೂ ಹೇಳಿರುವ ರೀತಿಯಲ್ಲಿ ಹೊಸತನವಿದೆ. "ಮಾನಸಪೂಜೆಯ ವಿರಚಿಸಿ। ಶ್ರೀನಿಲಯನ ಚರಣಗಳಿಗೆ ಪಾವುಗೆಗಳ ನಾಂ। ಅನತನಾಗುತಲೊಪ್ಪಿಸಿ। ಭಾನುವಿನ ಪಥದಲಿಳುಹಿ ಬಿಂಬದಿ ಭಜಿಪೆಂ" ಎಂಬ ಸಂಕಲ್ಪ ಪದ್ಯವನ್ನು ಹೇಳಿ, ಪೀಠಸಮರ್ಪಣೆಯಿಂದ ತೊಡಗಿ ಶಯನೋತ್ಸವದವರೆಗೆ ವಿವಿಧ ಪೂಜೆಗಳನ್ನು ಮಾನಸಿಕವಾಗಿ ಮಾಡುವ ವಿಧಾನವನ್ನು ಕೀರ್ತನೆಗಳಲ್ಲಿ ತಾತ್ತ್ವಿಕ ನೆಲೆಗಟ್ಟಿನಲ್ಲಿ ವರ್ಣಿಸಿದೆ. "ಪೂಜಿಸುವೆನನವರತ ಪರಮ ಪುರುಷನನು। ನೈಜಮೂರ್ತಿಯನೀಗಲಭಿಮುಖಿಸಿ ನಿರ್ಗುಣದಿ", ಎಂಬ ಕೀರ್ತನೆಯಲ್ಲಿ ಷೋಡಶೋಪಚಾರ ಪೂಜಾವಿಧಾನವನ್ನು ಪೀಠಿಕಾ ರೂಪವಾಗಿ ನಿರೂಪಿಸಲಾಗಿದೆ. ಉದಾಹರಣೆಗೆ, ನೈವೇದ್ಯಸಮರ್ಪಣೆಯನ್ನು ಗಮನಿಸಬಹುದು. ಈ ಕೀರ್ತನೆಯಲ್ಲಿ, "ಪರಿಪೂರ್ಣಕಾಮನಿಗೆ ಷಡುರಸಾನ್ನವನಿತ್ತು" ಎಂದು ಒಂದು

ಸಂಗೀತ ರಸ, ಭಕ್ತಿ ರಸ – ಈ ದಿವ್ಯರಸಗಳ ತ್ರಿವೇಣೀ ಪ್ರವಾಹ" ಈ 'ಅರ್ಚನ' ಎಂಬುದು ಡಿ.ವಿ.ಜಿ. ಅವರ ಉಕ್ತಿ.[೨೯]

**ತಿಮ್ಮಪ್ಪದಾಸರ ಇತರ ಕೃತಿಗಳು:** 'ಅರ್ಚನ'ವನ್ನು ಹೊರತುಪಡಿಸಿದರೆ, ಸದ್ಯದಮಟ್ಟಿಗೆ ಉಪಲಬ್ಧವಾಗಿರುವ ಕೃತಿಗಳೆಲ್ಲವೂ ಅಪ್ರಕಟಿತ. ಆದ್ದರಿಂದ ಅವುಗಳ ಬಗೆಗೆ ಸಾಕಷ್ಟು – ವಿಮರ್ಶೆಯ ಮಾತು ಹಾಗಿರಲಿ –ವಿವರಗಳನ್ನು ಸಂಗ್ರಹಿಸಿ ತಿಳಿಯಪಡಿಸುವುದು ಕೂಡ ಕಷ್ಟ. ಅವುಗಳ ಬಗೆಗೆ ತಿಳಿದುಬಂದಷ್ಟು ವಿವರಗಳನ್ನು ಈ ಮುಂದೆ ಸಂಗ್ರಹಿಸಿಕೊಟ್ಟಿದೆ:

**ಶ್ರೀಕೃಷ್ಣ ಬಾಲಲೀಲೆ ಮತ್ತು ಅಕ್ರೂರ ಪ್ರಕರಣ:** ಇದು ಸಂಸ್ಕೃತ ಭಾಗವತ ಮಹಾಪುರಾಣದ ದಶಮಸ್ಕಂಧದ ಆಧಾರದ ಮೇಲೆ, ಕೀರ್ತನೆಗಳ ರೂಪದಲ್ಲಿ ರಚಿತವಾಗಿರುವ ಒಂದು ದೊಡ್ಡ ಕೃತಿ. ಗ್ರಂಥದ ಸಮಾಪ್ತಿವಾಕ್ಯದಲ್ಲಿ "ಅಂತೂ ಕೀರ್ತನೆ ೨೪೬ಕ್ಕೆ ಪದನೂ ೬೦೫೧ ಶ್ರೀ" ಎಂಬ ಉಲ್ಲೇಖದಿಂದ ಗ್ರಂಥಪ್ರಮಾಣವನ್ನು ಅರಿಯಬಹುದು. ಪ್ರತಿ ಕೀರ್ತನೆಯ ಪಲ್ಲವಿ ಅನುಪಲ್ಲವಿ ಈ ಲೆಕ್ಕದಲ್ಲಿ ಸೇರುವುದಿಲ್ಲ. ೧೮ನೆಯ ಶತಮಾನದಲ್ಲಿ ಆಗಿಹೋದ ಪ್ರಸನ್ನ ವೆಂಕಟದಾಸರೂ ಭಾಗವತ ದಶಮ ಸ್ಕಂಧವನ್ನು ಕನ್ನಡ ಕೀರ್ತನೆಗಳ ರೂಪದಲ್ಲಿ ರಚಿಸಿರುತ್ತಾರೆ. ಕೃತಿಯ ಪೂರ್ವಭಾಗ ಮಾತ್ರ ಪ್ರಕಟವಾಗಿದ್ದು, ಕೃಷ್ಣನ ಬಾಲಲೀಲೆಗಳನ್ನು ಒಳಗೊಂಡ ಪೂರ್ವ ಭಾಗದಲ್ಲಿ ೬೭ ಕೀರ್ತನೆಗಳಿರಬಹುದು ಎಂದು ಇಟ್ಟುಕೊಂಡರೆ, ವೆಂಕಟದಾಸರ ಕೃತಿಗಿಂತ ಎರಡು ಪಟ್ಟು ದೊಡ್ಡದಾಗುತ್ತದೆ, ತಿಮ್ಮಪ್ಪದಾಸರ ಈ ಕೃತಿ. ಕುಮಾರ ರಾಮ ಸಾಂಗತ್ಯದ ಪದ್ಯ ಸಂಖ್ಯೆ ಸುಮಾರು ಆರು ಸಾವಿರ; ಭರತೇಶ ವೈಭವದ್ದು ಸುಮಾರು ಹತ್ತು ಸಾವಿರ. ಈ ಸಂಖ್ಯಾ ವಿವರಗಳ ಹಿನ್ನೆಲೆಯಲ್ಲಿ, ತಿಮ್ಮಪ್ಪದಾಸರ ಕೃತಿಯ ಗಾತ್ರಮಹಿಮೆಯ ಅರಿವಾಗುತ್ತದೆ. ಈ ಗ್ರಂಥದ ಪ್ರಕರಣಾಂತ್ಯ ಕೀರ್ತನೆಗಳಲ್ಲಿ ತಿಮ್ಮಪ್ಪದಾಸರ ಇಷ್ಟದೈವವಾದ ತಿರುಪತಿ ವೆಂಕಟರಮಣನ ಮುದ್ರಿಕೆಯಿದೆ.

ದಾಸರು ಮೂಲಭಾಗವತ ಶ್ಲೋಕಗಳ ಸಾರವನ್ನು ಹೀರಿ ಕನ್ನಡ ಮಾತುಗಳಲ್ಲಿ ಹೇಗೆ ತುಂಬಿ ಹರಿಯಬಿಡುತ್ತಾರೆ ಎನ್ನುವುದನ್ನು ಒಂದೆರಡು ಉದಾಹರಣೆಗಳಿಂದ ಅರಿಯಬಹುದು:

ಶರತ್ಕಾಲ. ಬೃಂದಾವನದಲ್ಲಿ ಶ್ರೀಕೃಷ್ಣನ ವೇಣುಗಾನ. ಗೋಪ ಗೋಪಿಯರು ಮಾತ್ರವಲ್ಲ, ಚರಾಚರ ಜಗತ್ತೆಲ್ಲವೂ ಮೋಹನ ಮುರಳೀನಾದಕ್ಕೆ ಪರವಶವಾಗಿರುವ ಸನ್ನಿವೇಶ. ವೇಣುಗಾನದ ಮಹಿಮೆಯನ್ನು ಕುರಿತು ಗೋಪಿಕಾಸ್ತ್ರೀಯರು ಹೊಗಳಿಕೆಯ ಮಾತುಗಳನ್ನು ಹೇಳಿಕೊಳ್ಳುತ್ತಿದ್ದಾರೆ.

ನೀ ನಿರ್ಣಯ ನಿನ್ನ ವಚನ ವೆಂಕಟರಮಣಾ.

('ಅರ್ಚನ', ಪು.೩೯)

['ನಾನೂ ನೀನಾಗಿ' ಎಂಬ ಮಾತು 'ಅಹಂ ಬ್ರಹ್ಮಾಸ್ಮಿ' ಎಂಬ ಮಹಾವಾಕ್ಯದ ಅರ್ಥವನ್ನೂ 'ನಿನ್ನ ವಚನ' ಎಂಬುದು ಶ್ರುತಿಪ್ರಾಮಾಣ್ಯವನ್ನೂ ತಿಳಿಸುತ್ತವೆ.]

ಭಕ್ತಿ ಮಾರ್ಗಕ್ಕೂ (ಎಂದರೆ ಸಗುಣ ಬ್ರಹ್ಮೋಪಾಸನೆಗೂ) ಅದ್ವೈತಕ್ಕೂ ಹೊಂದಿಕೆಯಾಗುವುದಿಲ್ಲ ಎನ್ನುವುದುಂಟು.[೨೬] ಆ ಮಾತಿಗೆ ಆಧಾರವಿಲ್ಲ ಎನ್ನುವುದು ಮೇಲಿನ ಪದ್ಯಗಳಿಂದ ಸ್ಪಷ್ಟಪಡುತ್ತದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ತಿಮ್ಮಪ್ಪದಾಸರ 'ಅರ್ಚನ'ಕ್ಕೆ ಒಂದು ಗಣ್ಯವಾದ ಸ್ಥಾನವಿದೆ. ಡಾ॥ ಜಿ.ಎಸ್.ಶಿವರುದ್ರಪ್ಪನವರು 'ಅರ್ಚನ'ದ ಕೀರ್ತನೆಗಳ ಸ್ವರೂಪವನ್ನು ಸಾರವತ್ತಾಗಿ ಪರಿಚಯ ಮಾಡಿಕೊಟ್ಟಿದ್ದಾರೆ:

"ಈ ಕೀರ್ತನೆಗಳ ವಿಶಿಷ್ಟತೆ ಇರುವುದು, ಇವು ಭಗವದ್‌ಭಕ್ತನೊಬ್ಬನ ಪೂಜಾವಿಧಾನವನ್ನೇ ಪ್ರತ್ಯೇಕವಾಗಿ ಪ್ರಕಟಿಸಿ ತೋರುತ್ತವೆ ಎನ್ನುವುದರಲ್ಲಿ, ತಾನು ತನ್ನ ಇಷ್ಟದೈವ ಇದಲ್ಲದೆ ಬೇರೆಯ ಪರಿಸರ – ಇತರ ಪರಿಚಿತವಾದ ದಾಸರ ಕೀರ್ತನೆಗಳಲ್ಲಿಯಂತೆ – ಇಲ್ಲಿ ಕಾಣದು. ಇಲ್ಲಿ ನಾವು ಕಾಣುವ ವ್ಯಕ್ತಿತ್ವಕ್ಕೆ ಸುತ್ತಣ ಸಮಾಜದ ಗೊಡವೆಯಿಲ್ಲ; ತಾನು ಒಪ್ಪಿಕೊಂಡ ಭಕ್ತಿಪಂಥವೊಂದನ್ನು ಪ್ರಸಾರ ಮಾಡುವ ಕರ್ತವ್ಯದ ಹಂಗಿಲ್ಲ. ಇಲ್ಲಿರುವುದು ಭಕ್ತನೊಬ್ಬನು ತನ್ನ ಉತ್ಕಟ ಅವಸ್ಥೆಯಲ್ಲಿ, ಏಕಾಂತ ಆರಾಧನೆಯಲ್ಲಿ, ದೈವೀಸಾನ್ನಿಧ್ಯದ ಪೂಜಾರತಿಯಲ್ಲಿ ಎಷ್ಟೆಷ್ಟು ವಿಧವಾಗಿ ತೊಡಗಬಹುದು ಎನ್ನುವುದರ ಚಿತ್ರಣ. ತನ್ನ ಇಷ್ಟದೈವದ ನೆನಹಿನ ಕೇಂದ್ರದಲ್ಲಿ ನೆಲೆನಿಂತ ಭಕ್ತಹೃದಯ ತನ್ನ ಪೂಜೆಯನ್ನೆ ಕೀರ್ತನೆಯ ವಸ್ತುವನ್ನಾಗಿ ಮಾಡಿಕೊಂಡಿದೆ. ಪೂಜೆಯ ಆನಂದ ಸ್ತೋತ್ರರೂಪವಾಗಿ ಪ್ರವಹಿಸಿ ಇಲ್ಲಿನ ಕೀರ್ತನೆಗಳಿಗೆ ಏಕವಸ್ತುರೂಪತೆಯನ್ನು ತಂದುಕೊಟ್ಟು ಪೂಜಾವಿಧಾನದ ಶಾಸ್ತ್ರೀಯವಾದ ಅನುಕ್ರಮವನ್ನೂ ಪ್ರತಿಪಾದಿಸುವ ಕಾರಣ. ಈ ಕೀರ್ತನ ಸಂಗ್ರಹಕ್ಕೆ 'ಅರ್ಚನ' ಎಂದು ಹೆಸರಿಸಿರುವುದು ಅತ್ಯಂತ ಉಚಿತವಾಗಿದೆ."[೨೭]

ಭಕ್ತಿವಾಙ್ಮಯದಲ್ಲಿ 'ಅರ್ಚನ'ದ ಸ್ಥಾನವನ್ನು ಕುರಿತು ಡಾ॥ರಂ.ಶ್ರೀ. ಮುಗಳಿಯವರು–"ಅದ್ವೈತ ತತ್ವವನ್ನು ಒಪ್ಪಿಕೊಂಡು ಹರಿಭಕ್ತಿಸಾಧನೆಯನ್ನು ಮಾಡಿ ಕೃತಾರ್ಥರಾದ ತಿಮ್ಮಪ್ಪದಾಸರ ಪೂಜಾ ವಿಧಾನದ ಕೀರ್ತನೆಗಳು ಭಕ್ತಿ ವಾಙ್ಮಯಕ್ಕೆ ಹೊಸ ಮೆರುಗನ್ನು ನೀಡುತ್ತವೆ" ಎಂದು ಅಭಿಪ್ರಾಯಪಟ್ಟಿದ್ದಾರೆ.[೨೮]

"ತಿಮ್ಮಪ್ಪದಾಸರ ಸಾಹಿತ್ಯ ಶೈಲಿ ಲಲಿತವಾಗಿದೆ... ... ಸಾಹಿತ್ಯ ರಸ,

ವನರಾಜಿ, ತುಂಬಿ, ಬೆಟ್ಟಗಳ ವಿವರಗಳು ಬಿಟ್ಟುಹೋಗಿವೆ. ಹಂಸದ ಉಲ್ಲೇಖ, ಕೃಷ್ಣನಿಗೆ 'ಪ್ರಾಣಭೂತನು ಜಗದ' ಎಂಬ ವಿಶೇಷಣವನ್ನು ತೊಡಿಸಿರುವುದು – ಹೊಸ ಅಂಶಗಳು. ಮೂಲದಲ್ಲಿನ 'ಸ್ಮರೋದಯ' ಎಂಬ ಮಾತನ್ನು ಹಾಗೆಯೇ ಉಳಿಸಿಕೊಂಡಿದೆ ಅನುವಾದದಲ್ಲಿ. ಇನ್ನು ಒಂದೆರಡು ಉದಾಹರಣೆಗಳು:

ಗಾವಶ್ಚ ಕೃಷ್ಣಮುಖನಿರ್ಗತ ವೇಣುಗೀತಪೀಯೂಷಮುತ್ತಭಿತಕರ್ಣಪುಟೈಃ ಪಿಬಂತ್ಯಃ।
ಶಾಬಾಸ್ಸ್ನುತಸ್ನು ತಪಯಃಕಬಳಾಸ್ಸ್ಮತಸ್ಥುರ್ಗೋವಿಂದಮಾತ್ಮನಿ
ದೃಶಾಶ್ರುಕಳಾಸ್ಸ್ಪೃಶಂತ್ಯಃ ॥೧೩॥

ಗೋವುಗಳಿವೆ ಸಖಿಯೇ। ಕರ್ಣಗಳೆತ್ತಿ । ತಾವು ಕೇಳುತಲಲ್ಲಿಯೆ।
ಆವುದೊಂದನರಿಯದೆ। ಭಾವವೆಲ್ಲೀ ಬೆರೆಯದೆ। ಮೇವ ಬಿಟ್ಟು ಕಣ್ಣ ಮುಚ್ಚದೆ।
ಹೆಜ್ಜೆಯಿಕ್ಕದೆ ॥೮॥

ಕರುಗಳಂದವ ನೋಡಕ್ಕ । ತಾಯ ಮೊಲೆಗೆ । ಎರಗಿ ಹೀರುವ ಕಾಲಕ್ಕೆ।
ಮುರಳಿನಾದವನು ಕೇಳಿ। ಸುರಿವ ಬಾಯ ಹಾಲಿನಲ್ಲಿ । ಹರಿಯ ಮೂರ್ತಿಯನೆ।
ಧ್ಯಾನಿಸಿ । ಕಂಬನಿ ಸೂಸಿ ॥೯॥

ಕೃಷ್ಣನ ಕೊಳಲನ್ನು ಕಿವಿಯೆತ್ತಿ ಆಲಿಸುತ್ತಿರುವ ಗೋವುಗಳ ಚಿತ್ರ ಕನ್ನಡ ರೂಪದಲ್ಲಿ ವಿಸ್ತಾರಗೊಂಡಿದೆ. ಗೋವುಗಳು ತಮ್ಮ ಸುತ್ತಮುತ್ತಿನ ಬೇರೆ ಯಾವುದಕ್ಕೂ ಗಮನ ಕೊಡದೆ, ತಮ್ಮ ಮನಸ್ಸನ್ನು ಬೇರೆಲ್ಲಿಯೂ ಇಡದೆ (ಗಾನದಲ್ಲೇ ತನ್ಮಯವಾಗಿ), ಮೇಯುವುದನ್ನೂ ಮರೆತು, ಕಣ್ಣ ಮುಚ್ಚದೆ, ಹೆಜ್ಜೆಯಿಕ್ಕದೆ (ಸ್ವಲ್ಪವೂ ಚಲಿಸದೆ ನಿಂತ ಕಡೆ ನಿಂತು) ತದೇಕ ಚಿತ್ತವಾಗಿದ್ದುವು ಎನ್ನುವುದು ದಾಸರ ಹೆಚ್ಚಿನ ಭಾವವಿಸ್ತರಣ. ಕರುಗಳ ಚಿತ್ರ: ಮೂಲದಲ್ಲಿ, 'ಕರುಗಳು ಮೊಲೆಹಾಲನ್ನು ಬಾಯಲ್ಲಿ ತುಂಬಿಕೊಂಡು' ಎಂದಷ್ಟೇ ಹೇಳಿದೆ. ಎಂದರೆ, ಹಾಲನ್ನು ಕುಡಿಯಲೂ ಇಲ್ಲ, ಹೊರಕ್ಕೂ ಸುರಿಸಲಿಲ್ಲ, ಎಂಬ ಭಾವ ಧ್ವನಿತ. ಕನ್ನಡದ 'ಸುರಿವ ಬಾಯ ಹಾಲಿನಲ್ಲಿ' ಎನ್ನುವ ಮಾರ್ಪಾಟು ಹೆಚ್ಚು ಸಹಜ ಎಂದು ತೋರುತ್ತದೆ. ಕನ್ನಡದ ಕವಿ ಮೂಲವನ್ನೂ ಮೀರಿಸುತ್ತಾನೆ ಎನ್ನುವುದು ಇಲ್ಲಿನ ಆಶಯವಲ್ಲ; ಕವಿಸಹಜವಾದ ಸ್ವಾತಂತ್ರ್ಯವನ್ನು ವಹಿಸುತ್ತಾನೆ, ಪದಶಃ ಭಾಷಾಂತರ ಮಾಡುವುದು ಇಲ್ಲವೆ ತಾತ್ಪರ್ಯವನ್ನು ಮಾತ್ರ ಹೇಳುವುದು ಆತನ ಉದ್ದೇಶವಲ್ಲ, ಎಂದು ಸೂಚಿಸುವುದಷ್ಟೆ ನಮ್ಮ ಆಶಯ.

(೧೦–೨೧)

ಇತ್ಥಂ ಶರತ್ಸ್ವಚ್ಛಜಲಂ ಪದ್ಮಾಕರ ಸುಗಂಧಿನಾ।
ನ್ಯವಿಶದ್ವಾಯುನೋಪೇತಂ ಸಗೋಗೋಪಾಲಕೋಽಚ್ಯುತಃ ॥೧॥

ಕುಸುಮಿತ ವನರಾಜಿ ಶುಷ್ಮಿ ಭೃಂಗ ದ್ವಿಜಕುಲ ಘುಷ್ಟಸರಸ್ಸರಿನ್ಮಹೀಧ್ರಂ।
ಯದುಪತಿರವಗಾಹ್ಯ ಚಾರಯನ್ ಗಾಸ್ಸಹಪಶುಪಾಲಬಲಶ್ಚಕೂಜ ವೇಣುಂ॥೨॥

ತದ್ವ್ರಜಸ್ತ್ರಿಯ ಆಶ್ರುತ್ಯ ವೇಣುಗೀತಂ ಸ್ಮರೋದಯಂ।
ಕಾಶ್ಚಿತ್ಪರೋಕ್ಷಂ ಕೃಷ್ಣಸ್ಯ ಸ್ವಸಖೀಭ್ಯೋನ್ಯವರ್ಣಯನ್ ॥೩॥

ರಾಗ:ಮಾರವಿ (ತಾಳನಿರ್ದೇಶವಿಲ್ಲ)

ವೇಣುನಾದವ ಮಾಡಿದ।ಗೋಪಾಲಕೃಷ್ಣ। ಪ್ರಾಣಭೂತನು ಜಗದ।
ಕಾಣಬಂತು ಶರತ್ಕಾಲ। ಬಾಣವೈದರವ ನೀಲ। ವೇಣಿಯರ ಮನದಲೀತ।
ಬಂದು ಕುಳಿತ ॥ಪಲ್ಲವಿ॥
ತಿಳಿದವು ನದೀಜಲವು। ಪಾಪಿ ತಟಾಕ। ಕೊಳಗಳು ರಮ್ಯವಾದುವು।
ನಳಿನಗಳು ಬಿರಿದವು। ಸುಳಿದು ಹಂಸ ಸೇರಿದವು। ಇಳೆಯ
ಸೊಂಪು ಸೂಸುತಿರಲು। ಹೀಗೆ ಇರಲು ॥೧॥
ನಳಿನನಾಭನು ಕೃಷ್ಣನು। ಆ ವ್ರಜದಿಂದ। ಬಲರಾಮ ಸಹ ಬಂದನು।
ಬಳಸಿ ಬಂದ ಗೋವುಗಳನು । ನಲಿವ ಗೋಪ ಜನವನ್ನು। ಇಳಿಸುತಲ್ಲಿ
ನೋಡುತಿದ್ದನು । ಎಲ್ಲವ ತಾನು ॥೨॥

ಕಾಣುತಾ ವನರಮ್ಯವ । ವೇಣುನಾದವ । ತಾನು ಮಾಡಿದ ಮಾಧವ ।
ಮಾನಿನಿಯರದ ಕೇಳಿ । ಮಾಡಿದರು ಮನದಲ್ಲಿ । ಏನನೆಂಬೆನು ಸ್ಮರೋದಯವು।
ಸೇರಲು ಮನವು ॥೩॥

ಮೇಲಿನ ಸರಳಾನುವಾದದಲ್ಲಿ ಮೂಲದ ಒಂದೆರಡು ಅಂಶಗಳು ಬಿಟ್ಟು ಹೋಗಿರುವುದೂ ಹೊಸ ಅಂಶಗಳು ಸೇರಿರುವುದೂ ಸಹೃದಯರ ಗಮನಕ್ಕೆ ಬಾರದಿರವು. ಅನುವಾದದಲ್ಲಿ 'ನಳಿನಗಳು ಬಿರಿದವು' ಎಂಬ ಮಾತುಗಳಲ್ಲಿ 'ಪದ್ಮಾಕರ ಸುಗಂಧಿನಾ ವಾಯುನೋಪೇತಂ' ಎಂಬ ಭಾವಸೌರಭ ಕಾಣದಾಗಿದೆ.

ತೌಲನಿಕವಾಗಿ ಅಧ್ಯಯನಯೋಗ್ಯವಾಗಿದೆ, ಸಾಹಿತ್ಯಕೃತಿ ಎನಿಸಿ, ಅಲ್ಲದೆ, ಪ್ರವಚನ ಮತ್ತು ಗಾಯನಗಳ ಮೂಲಕ ಪ್ರಸ್ತುತಪಡಿಸಬಹುದಾದ ಗೇಯಪ್ರಬಂಧವೂ ಆಗಿದೆ.

**ಧ್ರುವಚರಿತ್ರೆ:** ತಿಮ್ಮಪ್ಪದಾಸರಿಗಿಂತಲೂ ಮೊದಲು ಪ್ರಾಚೀನರು ಎನ್ನಬಹುದಾದ ಗಣ್ಯಕವಿಗಳು ಯಾರೂ ಭಾಗವತಪುರಾಣಾಂತರ್ಗತವಾದ ಧ್ರುವನ ಕಥೆಯನ್ನು ಆಧರಿಸಿ ದೀರ್ಘಕಾವ್ಯವೊಂದನ್ನು ಬರೆದಿರುವುದು ನಮ್ಮ ಗಮನಕ್ಕೆ ಬಂದಿಲ್ಲ. ಕೇವಲ ಹದಿನೆಂಟು ವಾರ್ಧಿಕ ಷಟ್ಪದಿ ಪದ್ಯಗಳನ್ನುಳ್ಳ ಒಂದು ಕೃತಿ ಸುಮಾರು ೧೭೦೦ರಲ್ಲಿ ಹುಟ್ಟಿರುವುದಾಗಿ ತಿಳಿದು ಬರುತ್ತದೆ.[೩೦] ೧೯ನೆಯ ಶತಮಾನದಲ್ಲಿ, ಭಾಮಿನಿ ಷಟ್ಪದಿಯಲ್ಲಿ ರಚಿತವಾದ ಒಂದು 'ಧ್ರುವಚರಿತ್ರೆ', ಇದೇ ಹೆಸರಿನ ಎರಡು ಯಕ್ಷಗಾನ ಕೃತಿಗಳು, 'ಧ್ರುವನ ಹುಟ್ಟು' ಎಂಬ ಒಂದು ಹಾಡು, ದೇವಶಿಖಾಮಣಿ ಶ್ರೀನಿವಾಸಯ್ಯಂಗಾರ್ ಅವರಿಂದ ರಚಿತವಾದ 'ಧ್ರುವೋಪಖ್ಯಾನ' (ಯಕ್ಷಗಾನ)–ಈ ಐದು ಕೃತಿಗಳು ರಚಿತವಾಗಿದ್ದು, ಹಸ್ತಪ್ರತಿಯ ರೂಪದಲ್ಲೇ ಇವೆ. ಇವುಗಳನ್ನೂ ತಿಮ್ಮಪ್ಪದಾಸರ 'ಧ್ರುವಚರಿತ್ರೆ'ಯನ್ನೂ ಸ್ಥೂಲವಾಗಿ ಪರಿಶೀಲಿಸಿದ ವಿದ್ವಾಂಸರು, ಈ ಅಭಿಪ್ರಾಯಕ್ಕೆ ಬಂದಿದ್ದಾರೆ: "ಧ್ರುವ ಚರಿತ್ರೆ ಎಂಬ ಹೆಸರಿನ ನಾಲ್ಕು ಹಸ್ತಪ್ರತಿಗಳಲ್ಲಿ ಒಂದು ಯಕ್ಷಗಾನರೂಪದ ಕೃತಿ (KB ೪೦೫ರ ಕ್ರಮಾಂಕದ್ದು) ಅತ್ಯುತ್ತಮವಾದದ್ದು ಎನ್ನಬಹುದು. ಸುರುಚಿ ಧ್ರುವನನ್ನು ಕೊಲ್ಲಿಸಲು ಅನೇಕ ತಂತ್ರಗಳನ್ನು ಹೂಡುವ ವಿಷಯ ಇದರಲ್ಲಿ ಬರುತ್ತದೆ; ಇವು ಕವಿ ಹೊಸದಾಗಿ ಕಲ್ಪಿಸಿಕೊಂಡವು: ವಿಷದ ಕಜ್ಜಾಯ ತಿನ್ನಿಸುವುದು, ಅವನನ್ನು ಕೊಲ್ಲಿಸಿ ಮೈಯ ಮಾಂಸವನ್ನು ಗಂಡನಿಗೂ ಸುನೀತಿಗೂ ಉಣಬಡಿಸುವುದು, ಮುಂತಾದುವು. ಆದರೂ ಹರಿಯ ಕೃಪೆಯಿಂದ ಧ್ರುವ ಬದುಕಿ ಬರುತ್ತಾನೆ. ತಿಮ್ಮಪ್ಪದಾಸರ ಧ್ರುವಚರಿತ್ರೆ ಇವೆಲ್ಲಕ್ಕಿಂತ ಹೆಚ್ಚು ವಿವರಗಳಿಂದ ಕೂಡಿದ, ಪೂರ್ಣಪ್ರಮಾಣದ ಕಾವ್ಯ ರೂಪಕ್ಕೆ ಬೆಳೆದ ಕೃತಿ. ನಗರ ವರ್ಣನೆ, ಕೋಟೆಯ ವರ್ಣನೆ, ವನವರ್ಣನೆ, ಜನರ ವರ್ಣನೆ, ಮೊದಲಾದುವೆಲ್ಲ ಉಂಟು." ಒಟ್ಟಿನಲ್ಲಿ, ಮಾರ್ಗಕಾವ್ಯದ ಲಕ್ಷಣಗಳನ್ನು ಅನುಸರಿಸಿ ಬರೆದ ವರ್ಣಕಕಾವ್ಯ ಎನ್ನಬಹುದು ಇದನ್ನು. ಹರಿಭಕ್ತಿಯ ಮಹಿಮೆಯನ್ನು ಎತ್ತಿಹಿಡಿಯುವುದೇ ಕೃತಿಯ ಗುರಿ. ಕಥೆಯ ವಿಷಯಕ್ಕೆ ಭಾಗವತದ ಚತುರ್ಥಸ್ಕಂಧವನ್ನು ಅವಲಂಬಿಸಿದ್ದರೂ, ವರ್ಣನೆಗಳೆಲ್ಲವೂ ಸ್ವತಂತ್ರವಾಗಿದ್ದು, ಕನ್ನಡದ ಪೂರ್ವಕವಿಗಳ ಪ್ರಭಾವಕ್ಕೆ ಒಳಗಾಗಿವೆ. ತಿಮ್ಮಪ್ಪದಾಸರ ಚಮತ್ಕಾರಯುತ ಕಲ್ಪನೆಗಳನ್ನು ಈ ಕೆಳಗಿನ ಉದಾಹರಣೆಗಳಲ್ಲಿ ಕಾಣಬಹುದು.

ಹಂತಾಯಮದ್ರಿರಬಲಾ ಹರಿದಾಸವರ್ಯೋಽಯದ್ರಾಮಕೃಷ್ಣ ಚರಣಸ್ಪರ್ಶ ಪ್ರಮೋದಃ।
ಮಾನಂ ತನೋತಿ ಸಹ ಗೋಗಣಯೋಸ್ತಯೋರ್ಯತ್ಪಾನೀಯ
ಸೂಯವಸ ಕಂದಮೂಲೈ। ॥೧೮॥

ಹರಿದಾಸವರ್ಯನಿವನು । ಗೋವರ್ಧನಾದ್ರಿ । ಹಿರಿದು ಪೂಜಿಸುತಿಹನು ।
ಇರುವ ಕಂದಮೂಲಫಲವ । ಹರಿಗೆ ಕೊಟ್ಟು ಮನ್ನಿಸುವ । ಬರುವ ಗೋವು
ಬಾಲಕರನು । ಭಾವಿಸುತಿಹನು। ॥೧೩॥

ದಾಸರಿಗೆ ಮೂಲದ 'ಹರಿದಾಸವರ್ಯ' ಎಂಬ ಮಾತನ್ನು ಬಿಡಲು ಇಷ್ಟವಿಲ್ಲ; ಹಾಗೆಯೇ ಉಳಿಸಿಕೊಂಡಿದ್ದಾರೆ: ಬಲರಾಮನ ಪ್ರಸಕ್ತಿಯನ್ನು ಬಹುಶಃ ಉದ್ದೇಶಪೂರ್ವಕವಾಗಿಯೇ ಬಿಟ್ಟುಬಿಟ್ಟಿದ್ದಾರೆ, ಬಾಲಕರಲ್ಲಿ ಅವನೂ ಒಬ್ಬ. ಮೂಲದಲ್ಲಿ ಗೋವರ್ಧನಗಿರಿ ಗೋವುಗಳನ್ನು ಎಳೆಹುಲ್ಲು ನೀರುಗಳಿಂದಲೂ, ರಾಮಕೃಷ್ಣರನ್ನು ಕಂದಮೂಲಗಳಿಂದಲೂ ಸತ್ಕರಿಸುತ್ತದೆ. 'ಮಾನಂ ತನೋತಿ' – ಇಲ್ಲಿ 'ಹರಿಗೆ ಕೊಟ್ಟು ಮನ್ನಿಸುವ' ಎಂದಾಗಿದೆ; 'ಗೋವು ಬಾಲಕರನು ಭಾವಿಸುತಿಹನು'. 'ಭಾವಿಸು' ಎಂಬ ಪದವನ್ನೂ ಬಹುಶಃ 'ಮನ್ನಿಸು' ಎಂಬ ಅರ್ಥದಲ್ಲಿಯೇ ಬಳಸಿರುವಂತಿದೆ.

ಈ ಪ್ರಕರಣದ ಕಡೆಯ ಪದ್ಯ:

ನರರೆಲ್ಲ ಬೆರಗಾದರು । ವೇಣುನಾದಕೆ । ಮರಗಳೊಳಗೆ ಬೆವರು।
ಹೊರಡೆ, ನಮಿಸಲು ಸುರರು । ತಿರುಪತೀಶ ವೆಂಕಟೇಶ ।
ಹರುಷವಿತ್ತ ಜಗದೀಶ ॥೧೫॥

ನರರು ಬೆರಗಾಗುವುದು, ಸುರರು ನಮಿಸುವುದು, ಮೂಲಶ್ಲೋಕದಲ್ಲಿ ಇಲ್ಲ. ಮೂಲದ 'ಪುಲಕಃ ತರೂಣಾಂ' – ಇದು, 'ಮರಗಳೊಳಗೆ ಬೆವರು ಹೊರಡೆ' ಎಂದು ಮಾರ್ಪಾಡಾಗಿದೆ.

ಅಂತೂ, ಒಟ್ಟಿನಲ್ಲಿ, ತಿಮ್ಮಪ್ಪದಾಸರ 'ಬಾಲಕೃಷ್ಣಲೀಲೆ' ಮೂಲದೊಂದಿಗೂ, ರುದ್ರಭಟ್ಟನ 'ಜಗನ್ನಾಥ ವಿಜಯ', ನಿತ್ಯಾತ್ಮ ಶುಕಯೋಗಿಯ ಕನ್ನಡ ಭಾಗವತದ ಪ್ರಸಕ್ತ ಭಾಗ, ಪ್ರಸನ್ನ ವೆಂಕಟದಾಸರ ಕೀರ್ತನೆಗಳು, – ಇವುಗಳೊಂದಿಗೆ

ಪಥಿಕ ಕೇಳುವುದು ಕುಡಿಯಲು ನೀರನ್ನು (ನೀರನು – ನೀರಾನು+ಈ=ಕೊಡು). ಅರವಟ್ಟಿಗೆಯ ಹೆಣ್ಣುಮಗಳು, 'ನನ್ನನ್ನು ನೀರಾನೆ'(=ನೀರಾನಿ) ಎನ್ನುತ್ತಿಯಾ? ನಿನ್ನ ದೃಷ್ಟಿ ಎಲ್ಲೋ ಸರಿಯಾಗಿಲ್ಲ ಎಂದು ಅವನಾಡಿದ ಮಾತನ್ನು ತಪ್ಪಾಗಿ ಅರ್ಥ ಮಾಡಿಕೊಳ್ಳುತ್ತಾಳೆ. ಇಲ್ಲಿಯದು ಕೇವಲ ಶಬ್ದಚಮತ್ಕಾರ.

ಈ ಧ್ರುವಚರಿತ್ರೆಯನ್ನು ಮಧ್ಯಮ ಮಟ್ಟಕ್ಕಿಂತ ಸ್ವಲ್ಪ ಕೆಳಗಿನ ಒಳ್ಳೆಯ ಕೃತಿ ಎನ್ನಬಹುದು.

ತಿಮ್ಮಪ್ಪದಾಸರ ಇನ್ನುಳಿದ ಕೀರ್ತನೆಗಳು ಮತ್ತು ಕೃತಿಗಳು:

(೧)ಗುರುಸ್ತುತಿಪರ ಕೀರ್ತನೆಗಳು; (೨)ಋಣ ವಿಷಯ ಕೀರ್ತನೆಗಳು; (೩)ಸದ್ಗುರು ಬೋಧಾನುವಾದಸುಧೆ (ಕೀರ್ತನೆಗಳು); (೪)ಆತ್ಮನಿವೇದನ, ಮುಂತಾದ ಸಂಕೀರ್ಣ ವಿಷಯದ ಕೀರ್ತನೆಗಳು; (೫)ಜೀವಕಾಯ ಸಂವಾದ (ವೈರಾಗ್ಯಪರ ಕೀರ್ತನೆಗಳು ಮತ್ತು ಕಂದಪದ್ಯಗಳು); (೬)ಭಗವದ್ವಿಲಾಸದ ಆಟ (ಅಸಮಗ್ರ ಗದ್ಯ ಕೃತಿ); (೭)ಪರಬ್ರಹ್ಮಪ್ರಕಾಶಿಕೆ (ಗದ್ಯಕೃತಿ).

ಗುರುಸ್ತುತಿಯ ಕೀರ್ತನೆಗಳಲ್ಲಿಯೂ 'ಸದ್ಗುರುಬೋಧಾನುವಾದ'ದ ಕೀರ್ತನೆಗಳಲ್ಲಿಯೂ ಸ್ವನಾಮಾಂಕಿತ ಅಲ್ಲಲ್ಲಿ ಕಾಣಿಸಿಕೊಂಡಿದ್ದು, ಗುರುಸ್ಮರಣೆಯೂ ಇಷ್ಟದೇವತಾಮುದ್ರಿಕೆಯೂ ಸಾಧಾರಣವಾಗಿ ಇದ್ದೇ ಇರುವುದರಿಂದ, ಈ ಕೀರ್ತನೆಗಳೆಲ್ಲವೂ ತಿಮ್ಮಪ್ಪದಾಸಕೃತ ಎಂಬುದರಲ್ಲಿ ಸಂದೇಹಕ್ಕೆ ಎಡೆಯಿಲ್ಲ.

'ಭಗವದ್ವಿಲಾಸದಾಟ' ಎಂಬ ಕೃತಿಯ ಪ್ರಾರಂಭ ವಾಕ್ಯಗಳು ಹೀಗಿವೆ:

"ಶ್ರೀ ಗಣನಾಥನ ಬಲವಂದು ನಮಸ್ಕರಿಸಿ ಶಾರದಾಂಬೆಯಂ ಬೇಡಿಕೊಂಡು ಶ್ರೀ ಚಿಕ್ಕನಾಗಪುರ ನಿವಾಸ ಶ್ರೀಮದ್ ವಾಸುದೇವಾರ್ಯ ಸದ್ಗುರು ಚರಣಾರವಿಂದಗಳಿಗೆ ನಮಸ್ಕರಿಸಿ ತತ್ಕೃಪಾಬಲದಿಂದ ಶ್ರೀ ರಾಮಚಂದ್ರ ಚರಣಾರಾಧಕನಾಗಿಯಿರುತಿರುವಲ್ಲಿ ಹಿರಿಯರಾದವರು ಬಂದು ಚಿದಾನಂದಾವಧೂತರು ಜ್ಞಾನಪಗಡೆಯೆಂದು ಜೀವನ್ಮುಕ್ತಿಯಾಟವೆಂಬುದುದಾಗಿ ನಿರ್ಮಾಣವ ಮಾಡಿದ್ದ ಪಟವಂ ತಂದು ತೋರಿಸಿ ಈ ರೀತಿಗೆ ಸ್ಮೃತಿ ಪುರಾಣೇತಿಹಾಸ ಭಾರತಾದಿ ಸಂಮತಿಯಾಗಿ ತತ್ತದ್ವಚನ ಸಮೇತವಾಗಿ .... ಶ್ರೀಮದ್ಭಗವದ್‌ವಿಲಾಸದಾಟವೆಂದು ನಾಮವನುಂಟು ಮಾಡಿಕೊಂಡು ಶ್ರೀಮದ್ ಭಗವದ್ ದಾಸಾನುದಾಸ ತಿಂಮದಾಸನು ಆಡುತಿದೇನಾಗಿಯೂ ಆಟವಂ ಕಂಡವರು ಬೇಕಾಗಿ ಸಂಗ್ರಹಿಸಿಕೊಂಡು ಆಡುವಲ್ಲಿ... ಹಿರಿಯರೆಡೆಗೆ ಬಂದಲ್ಲಿ

ಪುರವರ್ಣನೆ –

ಶೇಷನೆಂಬುಜಭವ ಲೋಕವ ನೋಳ್ಪೆನೆಂ–
ಬಾಸೆಯಿಂ ಪಾತಾಳ[ದಿಂ]ದ
ತಾ ಸಾಗುವನೊ ಮೇಲಕೆಂಬಂತೆ ಕೋಟೆ ಸಂ–
ಕಾಶಿಸುತಿತ್ತು ನೋಳ್ಪರಿಗೆ.

○ ○ ○

ಗಗನದೊಳ್ ತಾರಕಿರಾತ್ರಿ ಕಂಗೊಳಿಪುದು
ಜಗದೊಳಗೆಲ್ಲಿಯು ಇಲ್ಲಿ
ಹಗಲು ಭೂಮಿಯೊಳಿಹವೆಂಬಂತೆ ಯುದುರ್ದ ಪು–
ಷ್ಪಗಳೊಪ್ಪಿರ್ದವು ನೋಳ್ಪ ಜನಕೆ

(ಉದುರಿದ್ದ ಹೂವುಗಳನ್ನು ನೆಲದ ನಕ್ಷತ್ರಗಳು ಎಂದು ಸಂಭಾವಿಸಿರುವ ಉತ್ಪ್ರೇಕ್ಷಾಲಂಕಾರ ಮನೋಜ್ಞವಾಗಿದೆ.)

ಅಡವಿಯೊಳೆಲ್ಲವು ಪರಿವ ಹಳ್ಳಂಗಳ
ಕಡು ಡೊಂಕ ತಿದ್ದಲುಬಹುದು;
ಮಡದಿಯಾ[ದವಳ ಚಿ]ತ್ತದ ಡೊಂಕ ತಿದ್ದಲ್ಕೆ
ಮೃಡಗಳವಲ್ಲವು, ಸಿದ್ಧ

(ನಾರದನು ಧ್ರುವನಿಂದ ನಡೆದ ಸಂಗತಿಯನ್ನು ತಿಳಿದು, ಸುರುಚಿಯ ವರ್ತನೆಯ ಬಗೆಗೆ ತನಗೆ ತಾನೇ ಹೇಳಿಕೊಳ್ಳುವ ಮಾತು.)

'ನೀರನೀ'ಯೆಂದೊರ್ವ ಪಥಿಕ ಕೇಳಿದಡಲ್ಲಿ
ನಾರಿ ನುಡಿದಳವನೊಡನೆ:
'ನೀರೆಯಾದೆನ್ನನು ನೀರಾನೀಯೆಂಬೆ ಕ–
ಣ್ಣೋರೆಯೆ ನೋಡೆಂದಳು.

ನಾರಾಯಣದಾಸರು ತಮ್ಮ ಒಂದು ಕೀರ್ತನೆಯಲ್ಲಿ ಶೃಂಗೇರಿಯ ಜಗದ್ಗುರುಗಳಾದ ಶ್ರೀ ನೃಸಿಂಹ ಭಾರತಿಗಳನ್ನು (೧೮೧೮–೧೮೭೯) ಸ್ತುತಿಸಿದ್ದಾರೆ; ಮೈಸೂರರಸರ ಕುಲದೇವತೆಯಾದ ಶ್ರೀ ಚಾಮುಂಡೇಶ್ವರಿಯನ್ನು ಸ್ತುತಿಸುವ ಒಂದು ಕೀರ್ತನೆಯಲ್ಲಿ – "ನವರಾತ್ರಿಯು ಬಂತೆನ್ನುವ ಜನಗಳು। ತವಕಿಸುತಿಹರಮ್ಮ । ಅವನೀಶಾಧಿಪನ ಸಿಂಹಾಸನವೇರಿಸಿ । ನವರಾತ್ರಿಯುತ್ಸವಮಂ ಮಾಡಿಸು ತಾಯೆ" ಎಂದು ಬೇಡಿಕೊಂಡಿದ್ದರೆ, ಅಂಥದೇ ಇನ್ನೊಂದು ಕೀರ್ತನೆಯಲ್ಲಿ "ನಿನ್ನ ಸನ್ನಿಧಿಗೆ ನಾ ಬಂದು ಪ್ರಾರ್ಥಿಸೆ।" (ಬಹುಶಃ ಚಾಮುಂಡಿಯ ಬೆಟ್ಟಕ್ಕೇ ಹೋಗಿ ದೇವಿಯ ಸನ್ನಿಧಿಯಲ್ಲಿ ಪ್ರಾರ್ಥನೆ ಸಲ್ಲಿಸಿದರು ಎಂದು ಕಾಣುತ್ತದೆ) "ಪ್ರಸನ್ನಳಾಗಿ ನೃಪನ । ರನ್ನದ ಸಿಂಹಾಸನವೇರಿಸಿ, ಎನಗುನ್ನ ತೋನ್ನತವಾದಾನಂದವನಿತ್ತೆ" ಎಂದು ದೊರೆಗೆ (ಎಂದರೆ ಶ್ರೀ ಚಾಮರಾಜ ಒಡೆಯರಿಗೆ) ರಾಜ್ಯಾಭಿಷೇಕವಾದ ಸಂದರ್ಭವನ್ನು ಉಲ್ಲೇಖಿಸಿದ್ದಾರೆ. ಚಾಮರಾಜ ಒಡೆಯರು ಪಟ್ಟಕ್ಕೆ ಬಂದದ್ದು ೧೮೮೧ರಲ್ಲಿ. ಮುಂದಿನ ಮೂರು ಕೀರ್ತನೆಗಳಲ್ಲಿ ಚಾಮರಾಜ ಒಡೆಯರನ್ನು ರಕ್ಷಿಸಬೇಕೆಂದು ದೇವಿಯನ್ನೂ, ಇಷ್ಟಮೂರ್ತಿ ಶ್ರೀರಾಮನನ್ನೂ, ನಂಜನಗೂಡಿನ ಶ್ರೀಕಂಠೇಶ್ವರ ಸ್ವಾಮಿಯನ್ನೂ ಪ್ರಾರ್ಥಿಸಿಕೊಂಡಿದ್ದಾರೆ. ಈಗ ಉಪಲಬ್ಧವಿರುವ ನಾರಾಯಣದಾಸಕೃತ ಕೀರ್ತನ ಮಾಲಿಕೆಯಲ್ಲಿ (ಇವುಗಳ ಸಂಖ್ಯೆ ೩೭ ಮಾತ್ರ) ಕೊನೆಯದಾದ ಮಂಗಳಾಚರಣ ಕೀರ್ತನೆಯಲ್ಲಿ – "ನವರಾತ್ರೋತ್ಸವದಿಂದಾನಂದಭರಿತಳಾಗಿ। ನಲಿಯುತಂಬಾವಿಲಾಸದ ಮಧ್ಯದೊಳಗೆ। ಅವನೀಶಾಧಿಪ ಕೃಷ್ಣನೃಪತಿಗೆ ವರಗಳ ತವಕದಿಂದೀವ ಶ್ರೀಗೌರಿಗೆ" ಮಂಗಳ ಹಾಡಿದ್ದಾರೆ. ಈ ಕೀರ್ತನೆಯಲ್ಲಿ ಹೊಗಳಿದ 'ಕೃಷ್ಣನೃಪತಿ' ನಾಲ್ಮಡಿ ಕೃಷ್ಣರಾಜ ಒಡೆಯರು ಎಂಬುದು ಸ್ಪಷ್ಟ. ಶ್ರೀ ಚಾಮರಾಜ ಒಡೆಯರು ೧೮೯೪ರಲ್ಲಿ ಸ್ವರ್ಗಸ್ಥರಾದ ಮೇಲೆ, ೧೯೦೨ರ ವರೆಗೆ ಕೃಷ್ಣರಾಜರ ಮಾತೃಶ್ರೀಯವರಾದ ವಾಣೀವಿಲಾಸ ಸನ್ನಿಧಾನದವರು ರೀಜೆಂಟರಾಗಿದ್ದರು; ನಾಲ್ಮಡಿ ಕೃಷ್ಣರಾಜರು ೧೯೦೨ರಲ್ಲಿ ಪಟ್ಟಕ್ಕೆ ಬಂದರು. ಹೀಗೆ, ಕೀರ್ತನೆಗಳ ಆಧಾರದಿಂದ ನಾರಾಯಣದಾಸರ ಕಾಲವನ್ನು ಕ್ರಿ.ಶ.೧೮೨೩–೧೯೦೨ ಎಂದು ಹೇಳಬಹುದು. ಸುಮಾರು ೮೦ ವರ್ಷಕಾಲ ಬದುಕಿ ಬಾಳಿದ ದಾಸರು ಎಂದು ನಿಧನರಾದರು ಎಂಬುದು ತಿಳಿದುಬಂದಿಲ್ಲ.

"ನಾರಾಯಣದಾಸರ ಜೀವನ ವೃತ್ತಾಂತದ ಬಗೆಗೆ ಹೆಚ್ಚಿನ ವಿವರಗಳು ತಿಳಿದುಬಂದಿಲ್ಲ. ವೆಂಕಟರಮಣಯ್ಯ ಮತ್ತು ಸುಬ್ಬಯ್ಯ ಎಂಬ ಇಬ್ಬರು ತಮ್ಮಂದಿರೂ, ಇಬ್ಬರು ತಂಗಿಯರೂ ಅವರಿಗೆ ಇದ್ದರು. ನಾರಾಯಣದಾಸರ

... ಸಂತೋಷದಿಂದಾಶೀರ್ವಚನವ ದಯಮಾಡಬೇಕೆಂದು ನಮಸ್ಕರಿಸಿದೆನೊ."

'ಪರಬ್ರಹ್ಮಪ್ರಕಾಶಿಕೆ'ಯಲ್ಲಿ ಐದು ಭಾಗಗಳಿವೆ. ಕೃತಿ ಗುರುಶಿಷ್ಯ ಸಂವಾದರೂಪದಲ್ಲಿದೆ. "ಶ್ರೀ ಸಿದ್ಧಿವಿನಾಯಕನಡಿಗೆರಗಿ ಶಾರದಾಂಬೆಯಂ ಬಲಗೊಂಡು ಸದ್ಗುರುಚರಣರಜಃಪ್ರಭಾವದಿಂ ಮುಮುಕ್ಷುಗಳ ಸಂಶಯ ಹೋಗಿ ಸಂಸಾರ ತಾರಣೋಪಾಯ ಭೂತವಾದ ಜೀವಭ್ರಾಂತಿಯಳಿದು ತಾನೆ ಬ್ರಹ್ಮವೆಂಬ ಜ್ಞಾನದೃಢವಾಗುವಂತೆ ಪರಬ್ರಹ್ಮಪ್ರಕಾಶಮಂ ಪೇಳ್ವೆನು. ಪರಬ್ರಹ್ಮ ಸ್ವರೂಪವ ತಿಳಿವದಕ್ಕೆ ಸಾಧನಚತುಷ್ಟಯ ಸಂಪನ್ನನೆ ಅಧಿಕಾರಿಯು" ಎಂದು ಪ್ರಾರಂಭಿಸಿ, ಪ್ರಥಮ ಭಾಗದಲ್ಲಿ ಸಾಧನ ಚತುಷ್ಟಯವನ್ನು ಗುರುಶಿಷ್ಯನಿಗೆ ವಿವರಿಸುತ್ತಾನೆ. ಎರಡನೆಯ ಭಾಗದಲ್ಲಿ, ತನುಮನಃ ಪ್ರಾಣಾದಿಗಳ ಉತ್ಪತ್ತಿಯನ್ನು ಪಂಚೀಕರಣ ತತ್ವಪ್ರಕ್ರಿಯೆಯ ಮೂಲಕ ವಿವರಿಸಿದೆ. ಅಷ್ಟಾಂಗ ಯೋಗನಿರ್ಣಯ ಎಂಬ ಮೂರನೆಯ ಭಾಗದಲ್ಲಿ, "ಅಷ್ಟಾಂಗ ಯೋಗಾಭ್ಯಾಸದಿಂದ ಧ್ಯಾತೃಧ್ಯೇಯ ಧ್ಯಾನವೆಂಬ ಭೇದವಳಿದು ಅಖಂಡಬ್ರಹ್ಮ ತಾನಾಗಿ ನಿಲ್ಲುವನು" ಎಂದು ಜೀವಬ್ರಹ್ಮೈಕ್ಯವನ್ನು ವಿವರಿಸಿದೆ. 'ಸಕಲಸಾಧನ ನಿರೂಪಣೆ' ಎಂಬ ನಾಲ್ಕನೆಯ ಭಾಗದಲ್ಲಿ, ಜೀವಬ್ರಹ್ಮೈಕ್ಯಸಿದ್ಧಿಗೆ ಸಾಧನಗಳನ್ನು ನಿರೂಪಿಸಿದೆ. ಐದನೆಯ ಭಾಗದಲ್ಲಿ 'ಸಪ್ತಭೂಮಿಕೆ'ಗಳ ವಿಚಾರವಿದೆ.

ತಿಮ್ಮಪ್ಪದಾಸರು ಪರಬ್ರಹ್ಮಪ್ರಕಾಶಿಕೆಯಲ್ಲಿ ಅದ್ವೈತ ಸಿದ್ಧಾಂತದ ಮುಖ್ಯ ಪ್ರಮೇಯಗಳನ್ನು ತಿಳಿಯಾದ ಗದ್ಯದಲ್ಲಿ ನಿರೂಪಿಸಿದ್ದಾರೆ. ಸಂಸ್ಕೃತ ಭಾಷೆಯ ಜ್ಞಾನವಿಲ್ಲದ ಅದ್ವೈತಮಾರ್ಗದ ಜಿಜ್ಞಾಸುಗಳಿಗೂ ಮುಮುಕ್ಷುಗಳಿಗೂ ಉಪಯುಕ್ತವಾದ ಕೈಪಿಡಿ ಈ ಪ್ರಕರಣ ಗ್ರಂಥ.

ತಿಮ್ಮಪ್ಪದಾಸರು ವಾಗ್ಗೇಯಕಾರ ಹಾಗೂ ಕವಿ ಆಗಿದ್ದುದಲ್ಲದೆ, ಶಾಸ್ತ್ರಕಾರರೂ ಆಗಿದ್ದರು. ಅವರ ಕೀರ್ತನೆಗಳಲ್ಲಿ ಜ್ಞಾನ ಭಕ್ತಿ ವೈರಾಗ್ಯಗಳ ಅಭಿವ್ಯಕ್ತಿಯಲ್ಲಿ ಅಲ್ಲಲ್ಲೆ ಅನುಭಾವದ ಹೊಳಹುಗಳನ್ನು ಗುರುತಿಸಬಹುದು.

## ನಾರಾಯಣ ದಾಸರು
## (ಕ್ರಿ.ಶ.ಸುಮಾರು ೧೮೨೩–೧೯೦೨)

ನಾರಾಯಣದಾಸರು ತಿಮ್ಮಪ್ಪದಾಸರ ಜ್ಯೇಷ್ಠಪುತ್ರ. ತಿಮ್ಮಪ್ಪದಾಸರ ಕಾಲವನ್ನು ಗೊತ್ತುಪಡಿಸುವ ಸಂದರ್ಭದಲ್ಲಿ ಇವರ ಜನ್ಮದಿನ (ಕ್ರಿ.ಶ.೧೮೨೩, ಫೆಬ್ರುವರಿ ೧೧) ಸಹಾಯಕವಾದ ಸಂಗತಿಯನ್ನು ಇಲ್ಲಿ ನೆನೆಯಬಹುದು.

ಮನಸ್ಸಿಗೆ ನೆಮ್ಮದಿಯೂ ದೊರಕಿರಬೇಕು. "ಈ ಸುಖವ ಬಿಟ್ಟಿನ್ನು ಬೇರೆ ಸುಖವುಂಟೆ" ಎಂದು ನಿಷ್ಕಾಮವಾಗಿ ಮಾಡುವ ಪೂಜೆಯ ಸುಖವನ್ನು ಮಾತ್ರ ಬಯಸಿದ್ದಾರೆ. "ಒಂದೆ ಸಾಕೆನಗೆ ನಿನ್ನಯ ಸೇವೆಯೊಂದೆ ಸಾಕು" ಎಂಬ ಪರಮ ತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ. ನಾರಾಯಣದಾಸರು ತಮ್ಮ ತಂದೆ ತಿಮ್ಮಪ್ಪದಾಸರಂತೆ ನೂರಾರು ಕೀರ್ತನೆಗಳನ್ನು ರಚಿಸಿಲ್ಲದಿರಬಹುದು; ರಚಿಸಿರುವಷ್ಟು ಕೀರ್ತನೆಗಳಲ್ಲಿ ಅನನ್ಯ ಭಕ್ತಿಯಿಂದ ಭಗವದಾರಾಧನೆ ಮಾಡಿದ ಭಕ್ತನ ಹೃದಯಸ್ಪಂದನಗಳು ಚೆನ್ನಾಗಿ ಕೇಳಿಬರುತ್ತವೆ. ಭಕ್ತಿಮಾರ್ಗದ ಯಾತ್ರಿಕರಿಗೆ ಈ ಕೀರ್ತನೆಗಳಲ್ಲಿ ಕೆಲವಾದರೂ ಹಿಡಿಸದೆ ಇರುವುದಿಲ್ಲ. ತಿಮ್ಮಪ್ಪದಾಸರ ಪೂಜಾವಿಧಾನದ ಕೀರ್ತನೆಗಳಲ್ಲಿ ಕಂಡುಬರುವ ತತ್ತ್ವಚಿಂತನೆ ಇವರ ಕೀರ್ತನೆಗಳಲ್ಲಿ ಕಂಡು ಬರುವುದಿಲ್ಲ; ಅವುಗಳಿಗಿಂತ ಇವು ಹೆಚ್ಚು ಸರಳವಾಗಿವೆ. ಸಾಹಿತ್ಯ ದೃಷ್ಟಿಯಿಂದ ಇವು ಮೇಲು ಮಟ್ಟದವು ಎಂದು ಹೇಳುವುದು ಕಷ್ಟ. ಎಲ್ಲೆಲ್ಲಿ ವ್ಯಕ್ತಿನಿಷ್ಠ ನಿವೇದನವಿದೆಯೋ ಅಲ್ಲೆಲ್ಲ ಭಾವಗೀತೆಯ ಗುಣಲೇಪನವನ್ನು ಗುರುತಿಸಬಹುದು. ಕೆಲವು ಕೀರ್ತನೆಗಳಂತೂ ಗೇಯದೃಷ್ಟಿಯಿಂದ ತುಂಬ ಅಚ್ಚುಕಟ್ಟಾಗಿದ್ದು, ಗೇಯಕಾರರು ಹಾಡಲು ತಕ್ಕವಾಗಿವೆ."[೩೪]

೫

## ಶಿಶುನಾಳ ಶರೀಫ ಸಾಹೇಬರು

ಉತ್ತರ ಭಾರತದಲ್ಲಿ ಹಿಂದೂ ಮುಸ್ಲಿಮ ಬಾಂಧವ್ಯದ ಸಂಕೇತವಾಗಿ ಸಂತ ಕಬೀರನಿದ್ದರೆ ದಕ್ಷಿಣ ಭಾರತದಲ್ಲಿ ಕರ್ನಾಟಕದ ಶಿಶುನಾಳ ಶರೀಫ ಸಾಹೇಬರು ಹಿಂದೂ ಮುಸ್ಲಿಮ ಬಾಂಧವ್ಯದ ಸಂಕೇತವಾಗಿದ್ದಾರೆ. ಸಹಜ ಪ್ರತಿಭೆ, ತಾನು ಕೇಳಿ ಕಲಿತ ತತ್ತ್ವಗಳನ್ನು ಸಾಮಾನ್ಯ ಜನಕ್ಕೆ ತಿಳಿಸಬೇಕೆಂಬ ಒಳ ಒತ್ತಡದಿಂದ ತಾಳಲಯಬದ್ಧವಾದ ಪದಗಳನ್ನು ಕಟ್ಟಿ ಹಾಡಿದ ಈತನನ್ನು ಹರಿದಾಸ ಎನ್ನಲಾಗದು. ಅದ್ವೈತವೇದಾಂತಿಯಾದ ಗುರುಗೋವಿಂದ ಭಟ್ಟರಲ್ಲಿ ಶಿಷ್ಯವೃತ್ತಿ ಮಾಡಿ ವೇದಾಂತಸಾರವನ್ನು ಬದುಕಿಗೆ ಹೊಂದಿಸಿ, ಧಾರವಾಡ ಜನಪದದ ಬಳಕೆ ಮಾತಿನಲ್ಲಿಯೇ ಹಾಡು ಕಟ್ಟಿದ ಈ ಅಪೂರ್ವ ವ್ಯಕ್ತಿಯನ್ನು ಶಿಷ್ಟ ಕವಿವರ್ಗಕ್ಕೆ ಸೇರಿಸುವುದೂ ಸಲ್ಲದು. ವೇದಾಂತ ತತ್ತ್ವಸಾರವನ್ನು ಮೈಗೂಡಿಸಿಕೊಂಡು ತನ್ನ ಗುರುವಿನಂತೆಯೇ ವರ್ಣಾಶ್ರಮ ಜಾತಿ, ಮತ ಪಂಗಡಗಳ ಎಲ್ಲೆಕಟ್ಟುಗಳನ್ನು ಮೀರಿ ನಿಂತು ಬ್ರಹ್ಮವಿಹಾರಿಯಾಗಿ ಅವಧೂತನಂತೆ ಇದ್ದ ಈತನನ್ನು ಅನುಭಾವ ಕವಿ ಎಂದು ಗುರುತಿಸುವುದು ಸಮಂಜಸ ಎನ್ನಿಸುತ್ತದೆ.

ತರುವಾಯ ವೆಂಕಟರಮಣಯ್ಯ ದಾಸದೀಕ್ಷೆ ವಹಿಸಿ ತಿಮ್ಮಪ್ಪದಾಸರ ದೇವಸ್ಥಾನದ ಉತ್ತರಾಧಿಕಾರಿ ಆದದ್ದರಿಂದ, ನಾರಾಯಣದಾಸರಿಗೆ ಸಂತಾನ ಪ್ರಾಪ್ತಿ ಇರಲಿಲ್ಲವೇನೋ ಎಂದು ಶಂಕಿಸಬೇಕಾಗುತ್ತದೆ. 'ಈ ಸುಖ' ಎಂಬ ಕೀರ್ತನೆಯಲ್ಲಿ "ಸೂನು ಮನೆ ಮೊದಲಾದ ಮಮಕಾರವನು ಬಿಟ್ಟು" ಎಂಬ ಮಾತಿನಿಂದ ಅವರಿಗೆ ಪುತ್ರನೊಬ್ಬನಿದ್ದು, ಅವನು ಅಕಾಲ ಮರಣಹೊಂದಿರಬಹುದೆಂದು ಊಹಿಸಬಹುದಾಗಿದೆ. ಅವರ ವಂಶಸ್ಥರು ಯಾರೂ ಇಲ್ಲದಿರುವುದು ಈ ಊಹೆಗೆ ಸಮರ್ಥನೆ ಕೊಡುತ್ತದೆ.[೩೩]

"ನಾರಾಯಣದಾಸರ ಜೀವನದಲ್ಲಿ ಸುಖಭೋಗಗಳಿಗಿಂತ ಕಷ್ಟಕಾರ್ಪಣ್ಯಗಳೇ ಹೆಚ್ಚಾಗಿದ್ದುವು. ತಂದೆ ತೀರಿಕೊಂಡ ಕೂಡಲೆ ಅವರು ತಮ್ಮ ಜೀವಿತ ಕಾಲದಲ್ಲಿ ದೇವಕಾರ್ಯ ಗೃಹಕೃತ್ಯ ಕಾರ್ಯಗಳಿಗಾಗಿ ಮಾಡಿದ್ದ 'ದ್ವಿಸಹಸ್ರಶತಾಧಿಕರೌಪ್ಯ" (೨೧೦೦ ರೂ.) ಗಳ ಋಣ ಭಾರವು ನಾರಾಯಣದಾಸರ ಹೆಗಲೇರಿತು. ಋಣಬಾಧೆಯನ್ನು ಪರಿಹರಿಸಿ ಮನಸ್ಸಿಗೆ ಸಮಾಧಾನ ನೀಡುವಂತೆ ದೇವರನ್ನು ಬೇಡಿಕೊಂಡಿದ್ದಾರೆ. ಆ ಸಮಾಧಾನ ಸ್ವಂತಕ್ಕಾಗಿ ಆಗಿರಲಿಲ್ಲ; ಭಗವಂತನನ್ನು ಪೂಜಿಸುವುದಕ್ಕಾಗಿ. 'ಪೂಜಾರ್ಹತೆ'ಗಾಗಿ, ಪೂಜೆಗೆ ಬೇಕಾದ ಅರ್ಹತೆ ಎಂದರೆ, ದೇವರನ್ನು ಚಿನ್ನದ ಮಂಟಪದಲ್ಲಿ ಕೂರಿಸಿ, ಪಂಚಭಕ್ಷ್ಯ ಪರಮಾನ್ನಗಳನ್ನು ನೈವೇದ್ಯ ಮಾಡಿ, ತನ್ನ ಭಕ್ತಿಯನ್ನು ವೈಭವಯುತವಾಗಿ ವಿಶಾಲ ಲೋಕಕ್ಕೆ ಪ್ರದರ್ಶನ ಮಾಡಲು ಅಗತ್ಯವಾದ ಧನಕನಕ ವಸ್ತುಗಳ ಒಡೆತನವಲ್ಲ; ಏಕಾಗ್ರಚಿತ್ತ, ಮನಶ್ಶಾಂತಿ. ಅವರಿಗೆ ಹಣವೂ ಬೇಕಾಗಿದ್ದಿತು; ಆದರೆ, ಋಣಪರಿಹಾರಕ್ಕಾಗಿ ಮಾತ್ರ. ಈ ಉದ್ದೇಶದಿಂದ ಅವರು, "ಕನಕದ್ರವ್ಯವನಿತ್ತು ಋಣವ ತೀರಿಸಿ ಬೇಗ ಮನವ ಸಂತೋಷಿಸು" ಎಂದು "ಮನಸಿಜಪಿತ ದೇವ"ನನ್ನು ಮೊರೆಹೊಕ್ಕರು. ದೇವರು ಅವರ ಮೊರೆಯನ್ನು ಕೇಳಿದನೆಂದು ಕಾಣುತ್ತದೆ. ಒಂದೇ ಒಂದಾದ ತೆಲುಗಿನ ಕೀರ್ತನೆಯಲ್ಲಿ, ತಮ್ಮ ಸಾಲವನ್ನು ತೀರಿಸುವುದಕ್ಕಾಗಿಯೇ ರಾಮ ಮನೆಗೆ ಬಂದಿದ್ದಾನೆ ('ಇಂಟಿಕಿವಚ್ಚಿನ್ನಾಡು)। ಶ್ರೀರಾಮುಡು') ಎಂದು ಹರ್ಷಪಟ್ಟಿದ್ದಾರೆ. ಹೇಗೆ ಅವರಿಗೆ ಅಷ್ಟು ದ್ರವ್ಯ ದೊರಕಿತು ಎನ್ನುವುದರ ವಿವರ ತಿಳಿಯಬರುವುದಿಲ್ಲ. ಯಾವ ಬಗೆಯ ಪವಾಡವೂ ನಡೆಯದೆ, ಸಹಜವಾದ ರೀತಿಯಲ್ಲಿ ಅವರಿಗೆ ದೇವರ ವರ ದೊರಕಿರಬೇಕು. ಬಹುಶಃ, ಆಶ್ರಯದಾತರಾಗಿದ್ದ ದೊರೆಗೆ ಆಶ್ರಿತನ ಪರಿಸ್ಥಿತಿ ತಿಳಿದುಬಂದು, ದ್ರವ್ಯ ದಾನ ಮಾಡಿರಬೇಕೆಂದು ಊಹಿಸಿದರೆ ತಪ್ಪಾಗದು. ಏಕೆಂದರೆ, ಮುಂದಿನ ಕೀರ್ತನೆಗಳು ಕೆಲವಲ್ಲಿ, ಪ್ರಭುವಿನ ಶ್ರೇಯಸ್ಸನ್ನು ಕೋರಿದ್ದಾರೆ.

ಒಲಿದವರು. ಶರೀಫನಿಗೆ ಚಿಕ್ಕಂದಿನಲ್ಲೆ ರಾಮಾಯಣ ಮಹಾಭಾರತ ಶಿವಶರಣರ ಹಾಡುಗಳು ಪರಿಚಿತವಾಗಿದ್ದವು. ಹಿಂದೂ ಸಂಸ್ಕೃತಿಯ ಹಿನ್ನೆಲೆಯಲ್ಲಿ ಬೆಳೆದ ಶರೀಫ ಗೋವಿಂದ ಭಟ್ಟರ ಶಿಷ್ಯನಾದ. ಗುರುವಿನ ಅದ್ವೈತ ನಿಷ್ಠ ಅನುಭಾವ ಪ್ರವೃತ್ತಿ ಮತ್ತು ಅವಧೂತ ಚರ್ಯೆಯ ಲಕ್ಷಣಗಳು ಕ್ರಮವಾಗಿ ಇವನಲ್ಲಿಯೂ ಮೈಗೂಡಿಕೊಂಡವು. ಗುರುವಿನ ಪ್ರಭಾವದಿಂದ ಪ್ರಾಪಂಚಿಕ ಪ್ರಲೋಭನೆಗಳು ಶರೀಫರ ಬಳಿ ಸುಳಿಯುತ್ತಲೂ ಇರಲಿಲ್ಲ. ಶಿಕ್ಷಕ ವೃತ್ತಿ ನಡಸುತ್ತ ಕೆಲಕಾಲ ಗೃಹಸ್ಥಾಶ್ರಮದ ಬಂಧನವನ್ನೂ ಸ್ವೀಕರಿಸಿದ್ದರು. ಒಬ್ಬಳೇ ಹೆಣ್ಣುಮಗಳು ತೀರಿಕೊಂಡಮೇಲೆ ಕೆಲಕಾಲಾನಂತರ ಹೆಂಡತಿಯೂ ತೀರಿಕೊಂಡಳು. ಶರೀಫರು ಶಿಕ್ಷಕನ ಉದ್ಯೋಗವನ್ನು ತ್ಯಜಿಸಿ, ಗುರುವಿನ ಜೊತೆ ಅವಧೂತ ಜೀವನವನ್ನು ನಡಸತೊಡಗಿದರು. ಅವಧೂತ ಜೀವನ ಎಂದರೆ, ಕುಲ ಜಾತಿ ಮತ ಪಂಥಗಳ ಭೇದವನ್ನು ಮೆಟ್ಟಿ ನಿಂತು ಅನ್ನ ಪಾನಗಳ ವಿಷಯದಲ್ಲಿ ನಿರ್ಲಕ್ಷ್ಯ; 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಉಪನಿಷದ್ವಾಕ್ಯವನ್ನು ಅಕ್ಷರಶಃ ಅನುಸರಿಸಿ, ಅನುಷ್ಠಾನದಲ್ಲಿಟ್ಟುಕೊಂಡು, ಸರ್ವಸಮತಾ ಭಾವವನ್ನು ನಿತ್ಯಜೀವನದಲ್ಲಿ ಆಚರರಿಸಿ – ಈ ಜೀವ ಬ್ರಹ್ಮೈಕ್ಯದ ಅನುಭಾವದಲ್ಲಿ ಸದಾನಂದಭರಿತನಾಗಿರುವುದು. ಮತ್ತು ಈ ಅನುಭವ–ಅನುಭಾವಗಳನ್ನು ಜನತೆಯ ಮುಂದೆ ಒಂದು ಉಚ್ಚ ಆದರ್ಶವಾಗಿ ಇರಿಸಿ ಅದನ್ನು ಜನಕ್ಕೆ ಅವರ ಭಾಷೆಯಲ್ಲೆ ಬೋಧಿಸುವುದು. ಶಿವಶರಣರ ಒಡನಾಟದಲ್ಲಿ ಇದ್ದುದರಿಂದ ಶರೀಫರಿಗೆ ಈ ಕಾರ್ಯ ಒಂದು ಸಹಜ ಕ್ರಿಯೆಯಾಗಿ ಪರಿಣಮಿಸಿತು. ಶರೀಫರ ತತ್ತ್ವಪದಗಳಿಗೆ ಕರ್ನಾಟಕ ಸಂಗೀತ ಪದ್ಧತಿಯ ರಾಗ–ತಾಳ ನಿರ್ದೇಶಗಳಿದ್ದು – ಇವನ್ನು ಅವರೇ ಸೂಚಿಸಿದರೋ ಇಲ್ಲವೆ ಅವರ ತರುವಾಯದವರು ಹಾಗೆ ಮಾಡಿದರೋ, ನಿಶ್ಚಿತವಾಗಿ ಹೇಳಲು ಆಧಾರವಿಲ್ಲ. ಶರೀಫರ ಒಂದು ಹಾಡಿನ ಆಧಾರದ ಮೇಲೆ ಹೇಳುವುದಾದರೆ, ಅವರು ಇತರರು ಹಾಡುವುದನ್ನು ಕೇಳಿ ಕೇಳಿ ಹಾಡುವುದನ್ನು ಕಲಿತರು ಎಂದು ಹೇಳಬಹುದು. ಆ ಹಾಡು ಹೀಗಿದೆ;

ಪದವ ಬೇಗನೆ ಕಲಿ ಕಲಿ।
ಶಿವಶರಣರ ಹೃದಯದ ಕೀಲಿ ॥ಪ॥

ಅಡಿಗಣ ಪ್ರಾಸಕೆ ದೊರಕದ ಪದವು।
ನುಡಿ ಶಬ್ದಕೆ ತಾ ನಿಲುಕದ ಪದವು।

ಆರ್.ನರಸಿಂಹಾಚಾರ್ಯರು ತಮ್ಮ ಕವಿಚರಿತೆಯ ಮೂರನೆಯ ಸಂಪುಟದಲ್ಲಿ (ಪು.೪೬೧) ಶಿಶುನಾಳ ಶರೀಫ ಸಾಹೇಬರ ಬಗ್ಗೆ ಹೀಗೆ ಬರೆದಿದ್ದಾರೆ:–

"ಈತ ಪದ್ಯಗಳನ್ನು ಬರೆದಿದ್ದಾನೆ. ಇವನು ಮುಸಲ್ಮಾನನು; ಹಿಂದೂಮತ ದೀಕ್ಷೆಯನ್ನು ತೆಗೆದುಕೊಂಡಂತೆ ತೋರುತ್ತದೆ. ಈತನ ಗುರು ಗೋವಿಂದ; ಸ್ಥಳ ಧಾರವಾಡದ ಜಿಲ್ಲೆಗೆ ಸೇರಿದ ಶಿಶುನಾಳ. ಇವನು ಸುಮಾರು ೭೦–೮೦ ವರ್ಷಗಳ ಹಿಂದೆ ಇದ್ದನೆಂದು ಹೇಳುತ್ತಾರೆ. ಇವನ ಪದಗಳಲ್ಲಿ ಒಂದೆರಡನ್ನು ತೆಗೆದು ಬರೆಯುತ್ತೇವೆ:–

ಶ್ರೀಗುರುನಾಥ ನಿರಾಲಯನಾಲಯದೊಳು ।
ನಾವು ಈರ್ವರು ನಲಿದಾಡುವ ಬಾ॥
ಬಾರದಿದ್ದರೆ ನಿನ್ನ ಮೋರೆಗೆ ಹೊಡೆವೆನು॥
ಸಾರಿ ಈರ್ವರು ನಲಿದಾಡುವ ಬಾ॥
ಯೋಗದ ಕುದುರೆಯ ಬೇಗನೆ ಏರುತ।
ಮೇಗೇರಿಯ ಮಠಖೋಗುವ ಬಾ॥
ನಡೆ ನಡೆ ಶಿಶುವಿನಾಳಧೀಶನ ಗುಡಿಯೊಳು।
ಅಡಗಿಹ ಪ್ರಣಮವ ನೋಡುವ ಬಾ॥"

ಕವಿಚರಿತೆಕಾರರು ಶರೀಫರ ಕಾಲವನ್ನು ಸು.೧೮೪೦ ಎಂದು ಊಹಿಸುತ್ತಾರೆ.

ಶರೀಫರ ಜೀವನ ವೃತ್ತಾಂತ ವಿಚಾರವಾಗಿ ಹೆಚ್ಚು ವಿವರಗಳು ತಿಳಿದು ಬಂದಿಲ್ಲ. ಆತನ ಹುಟ್ಟೂರು ಶಿಶುನಾಳ ಎಂಬುದು 'ಶಿಶುವಿನ ಹಾಳ' ಎಂಬುದರ ಸಂಕ್ಷಿಪ್ತರೂಪ. ತಂದೆ ಮುಸ್ಲಿಮನಾದರೂ ಹಿಂದೂ ಶಾಸ್ತ್ರ ತಂತ್ರ ಮಂತ್ರಗಳ ಪರಿಚಯ ಹೊಂದಿದ್ದನೆಂದು ತಿಳಿದುಬರುತ್ತದೆ. ತಂದೆಯ ಗುರು ಕೂಡ ಶಿವಯೋಗ ಸಾಧಕನಾಗಿದ್ದನೆಂದೂ ಹಿಂದೂ ಮುಸ್ಲಿಮ ಧರ್ಮಗಳ ಸಂಯೋಗದಿಂದ ನೂತನ ಧರ್ಮವೊಂದನ್ನು ಸ್ಥಾಪಿಸಬೇಕೆಂದು ಚಿಂತಿಸುತ್ತಿದ್ದನೆಂದೂ ಹೇಳಿಕೆಯಿದೆ. ಧಾರವಾಡ ಪ್ರಾಂತದಲ್ಲಿ ಮುಸಲ್ಮಾನರು ಉರ್ದು ಮಾತನಾಡುವವರಾದರೂ ಧಾರವಾಡದ ದೇಸಿ ಕನ್ನಡವನ್ನೂ ಮೈಗೂಡಿಸಿಕೊಂಡ ಜನ. ಶರೀಫ ಹಾಗೂ ಆತನ ತಂದೆ ಕನ್ನಡಕ್ಕೆ ಸಹಜವಾಗಿ

ಮೂರು ಮಕ್ಕಳನು (ಮೂರು ಮಕ್ಕಳು=ಈಷಣತ್ರಯ*) ಬಿಟಗೊಟ್ಟೆ।
ಇವನ ಮೇಲೆ ನಾ ಮನಸಿಟ್ಟೆ।
ನನ್ನ ಬದುಕು ಬಾಳ್ವೆಯಲಿ ಬಿಟಗೊಟ್ಟೆ ॥೧॥

ಒಂದನಾಡಿದರೆ ಕಡಿಮೆಂದೆ।
ಮತ್ತೆರಡನಾಡಿದರೆ ಹೆಚ್ಚೆಂದೆ॥
ಬಗಡ ಮಾತಿಗೆ ನಿಜವುಂಟೆ।
ಇದು ಸುಜ್ಞಾನಿಗೆ ತಿಳಿ[ಯ]ದುಂಟೆ ॥೨॥

ಶಿವನ ಹಾದಿಯ ಬೇಡಿಕೊಂಡೆ।
ಗುರು ಉಪದೇಶವ ಪಡಕೊಂಡೆ।
ಈ ಭವಕೆ ಬರದಂತೆ ಮಾಡಿಕೊಂಡೆ।
ಗುರು ಗೋವಿಂದ ಪಾದ ಹಿಡಕೊಂಡೆ ॥೩॥

ಅಚ್ಚಾದ ಪದಗಳ ಪ್ರತಿಯಲ್ಲಿ ಶರೀಫರ ಅಧ್ಯಾತ್ಮಸಾಧನಾ ಸ್ವರೂಪವನ್ನು ಗುರುತಿಸಬಹುದಾದರೂ ಒಂದು ಅನುಕ್ರಮ ಗೋಚರಕ್ಕೆ ಬರುವುದಿಲ್ಲ. ಬಹುಶಃ ಒಂದು ಅನುಕ್ರಮದಲ್ಲಿ ಹಾಡಿರಲೂ ಆರರು. ಮೇಲೆ ಉದಾಹರಿಸಿದ ಪದದಲ್ಲಿ ಗುರು ದೊರೆತಮೇಲೆ ಶರೀಫರು ಕಾಮಕ್ರೋಧಾದಿ ಅರಿಷಡ್ವರ್ಗವನ್ನು ಜಯಿಸಿದರು; ಹೆಣ್ಣು ಹೊನ್ನು ಮಣ್ಣುಗಳ ಬಯಕೆಯನ್ನು ಬಿಟ್ಟರು. (ಹೊನ್ನು ಹೆಣ್ಣು ಮಣ್ಣು ಈ ಮೂರು ಸುಳ್ಳಣ್ಣಾ। ತಿಳಿದು ನೋಡು ಗುರುವು ಕೊಟ್ಟ ಅವು ಮೂರು ಕಣ್ಣಾ"). ತತ್ವಸಾಕ್ಷಾತ್ಕಾರ ಆಗಬೇಕಾದರೆ, ದ್ವೈತಭಾವವನ್ನು ಉಳಿದು, ಅದ್ವೈತಾನಂದದಲ್ಲಿ ನೆಲಸಬೇಕಾದರೆ, 'ನಾನು-ನೀನು' ಎಂಬ ಭೇದಬುದ್ಧಿಯ ಅಹಂಕಾರ ಮಮಕಾರಗಳು ಸಂಪೂರ್ಣವಾಗಿ ನಾಶವಾಗಬೇಕು. ಶರೀಫರು ಈ ತತ್ತ್ವವನ್ನು "ನಾನಾ ಎಂಬುದು ನಾನಲ್ಲ। ಈ ಮಾನವಜನ್ಮವು ನಾನಲ್ಲ" ಎಂಬ ಪದದಲ್ಲಿ ಸ್ಪಷ್ಟಪಡಿಸಿದ್ದಾರೆ. "ನಾರಾಯಣ, ಬ್ರಹ್ಮ, ಸದಾಶಿವ" ಮುಂತಾಗಿ "ನಾನಾ ರೂಪವು ನಾನಲ್ಲ". "ಜರೆ, ಮರಣ, ಧರೆ, ವೈಭವ, ಸಂಸಾರ ಸಿರಿ ಸುಖ, ಓದುವ ವೇದ, ಸಾಧಕ, ಮಾತಾ ಪಿತ ಸುತ, ಜಾತಿ ಗೋತ್ರ - ಇವು ಒಂದೂ ನಾನಲ್ಲ". "ನಾನಳಿಯಲ್ಕಿದು ನಾ ತಿಳಿಯಲ್ಕಿದು। ನೀ ಎನಿಸುವ ಗುಣ ನಾನಲ್ಲ" - ಇದೇ ವೇದಾಂತದ ನಿರಾಕಾರ ನಿರ್ಗುಣ ಪರಬ್ರಹ್ಮ ಐಕ್ಯಾನುಭವ;

ಕೂಚುಭಟ್ಟನ ಕೈ ತಾಳ ಮಾತ್ರೆಯಲಿ।
ಬಡಿವಾರಕೆ ಬಯಲಾಗುವ ಬ್ರಹ್ಮನ [ಪದವು] ॥೧॥

ಗುಣ (ಗಣ?) ದೇವನ ಗುಣಗೆಡಿಸುವ ಪದವು।
ತುಣುಕು ಪ್ರಾಸಕೆ ಮಣಿಯದ ಪದವು।
ಗುಣಿಸಿಕೊಂಡು ಸಂಗೀತಸ್ವರಗಳು।
ಎಣಿಸಿ ಎಣಿಸಿ ಕುಣಿಸ್ಯಾಡುವ ಪದವು ॥೨॥

ನೀಲಿಯದಲಿ (ನಿಲಯದಲಿ?) ನಿಜನಿಲಿಸುವ ಪದವು।
ಒಲಿದು ಶಿಶುನಾಳಾಧೀಶನ ಕೇಳದೆ।
ಸುಲಭದಿಂದ ನಿನಗ್ಹೇಳಿದ ಪದವು ॥೩॥

ಉಪಲಬ್ಧವಾಗಿರುವ ಸುಮಾರು ಇನ್ನೂರು ಪದಗಳು ಶರೀಫರು ಬರೆದಿಟ್ಟ ಹಾಡುಗಳಲ್ಲ, ಸಹಜ ಸ್ಫೂರ್ತಿಯಿಂದ ಹೇಳಿದವು. ಅವರ ಶಿಷ್ಯರು ನೆನಪಿನಲ್ಲಿ ಉಳಿಸಿಕೊಂಡು ಹಾಡುತ್ತಿದ್ದವು ಬರಹಕ್ಕಿಳಿದು ಈಗ ಮುದ್ರಣಗೊಂಡಿವೆ. ಈ ಕಾರಣದಿಂದ ಅನೇಕ ಕಡೆ ಅರ್ಥಕ್ಲೇಶಗಳಿರುವುದು ಸಹಜವೇ ಆಗಿದೆ. ಹೀಗಿದ್ದರೂ ಕೂಡ ಶರೀಫರ ಮನೋಧರ್ಮವನ್ನೂ ಅವರ ತಾತ್ತ್ವಿಕ ನಿಲುವನ್ನೂ ಬೋಧೆಯನ್ನೂ ವ್ಯಕ್ತಿತ್ವಮಹಿಮೆಯನ್ನೂ ಅರ್ಥಮಾಡಿಕೊಳ್ಳಲು ಕಷ್ಟವಾಗದು.

ಎಲ್ಲ ತಾತ್ತ್ವಿಕ, ಭಕ್ತಕವಿಗಳಂತೆ ಶರೀಫರು ತಮ್ಮ ಗುರು ಗೋವಿಂದ ಭಟ್ಟರಲ್ಲಿ ಅನನ್ಯ ಭಕ್ತಿಯುಳ್ಳವರು; ಅವರ ಪ್ರಸ್ತಾವ ಅನೇಕ ಪದಗಳಲ್ಲಿ ಬರುತ್ತದೆ; ಅಂಥವುಗಳಲ್ಲಿ ಈ ಪದ ಗಮನಾರ್ಹ:

ನನ್ನೊಳಗೆನಾ ತಿಳಕೊಂಡೆ।
ನನಗೆ ಬೇಕಾದ ಗಂಡನ ಮಾಡಿಕೊಂಡೆ ॥ಪ॥

ಆಜ್ಞೆ ಪ್ರಕಾರ ನಡಕೊಂಡೆ।
ನಾ ಎಲ್ಲರ ಹಂಗೊಂದು ಹರಕೊಂಡೆ।
ಆರು ಮಕ್ಕಳನು ಅಡವಿಗಟ್ಟಿದೆ॥ (ಆರು ಮಕ್ಕಳು= ಅರಿಷಡ್ವರ್ಗ)

ರಾಗ: ಕೇದಾರಗೌಳ – ತಾಳ: ರೂಪಕ

**ನಾನಾ** ವಿದ್ಯೆಗಳೆಲ್ಲಾ ಕಲಿಯದೆ [**ನಾ?**] ನರಿಯದಲ್ಲಾ।
**ನಾ** ಸತ್ತು ನೀನಾಗುವ ದಿನವೆಂದಿಗೆ ॥ಪ॥

**ನಾ** ಬಂದು **ನಾ** ನಿನ್ನ।
**ನಾ**ನೇನು।
ಮಾಡಿದ್ದೆ **ನಾ** ಸುಳ್ಳು ನೀನಾಗು ಇನ್ನೆ[ನ್ನಿಂ?]ದಿಗೆ ॥೧॥

**ನಾ** ಬ್ರಹ್ಮ **ನಾ** ವಿಷ್ಣು **ನಾ** ರುದ್ರನೆಂಬಂತೆ।
**ನಾನಾ**ನಳಿಸುವದಿನ್ನೆಂದಿಗೆ।
**ನಾ** ಧರ್ಮ **ನಾ** ಪುಣ್ಯ **ನಾ** ರೂಪ।
ಅನಿಸುವದಿನ್ನೆಂದಿಗೆ ॥೨॥

**ನಾ** ಹುಟ್ಟಿ **ನಾ** ಬೊಟ್ಟಿ **ನಾ**ಯಟ್ಟಿ **ನಾ** ಮುಟ್ಟಿ ಮುರಿಸುವದಿನ್ನೆಂದಿಗೆ।
**ನಾ** ಬಿಟ್ಟು **ನಾ** ಸುಟ್ಟು **ನಾ** ಶಿಶುನಾಳಧೀಶನ।
**ನಾ** ಹೋಗಿ ಹೊಂದುವದಿನ್ನೆಂದಿಗೆ ॥೩॥

ಕಡೆಯದಾಗಿ, ಒಂದು ಮಾತು: ಶಿಶುನಾಳ ಶರೀಫರ ಪದಗಳಿಗೆಲ್ಲ ಅಚ್ಚ ಕರ್ನಾಟಕ ಸಂಗೀತದ ರಾಗ ನಿರ್ದೇಶನವಿದೆ. ಅವರೇ ಆ ರಾಗಗಳಲ್ಲಿ ಹಾಡಿದರೋ ಇಲ್ಲವೆ ಅವರ ತರುವಾಯದ ಸಂಗೀತಜ್ಞರು ಅವರು ಹಾಡುತ್ತಿದ್ದ ಧಾಟಿಯನ್ನು ಅನುಲಕ್ಷಿಸಿ ಕರ್ನಾಟಕ ಸಂಗೀತದ ರಾಗತಾಳಗಳನ್ನು ನಿರ್ದೇಶಿಸಿದರೋ, ಹೇಳುವುದು ಕಷ್ಟ. ಶರೀಫರ ಒಂದು ಪದದಲ್ಲಿ ಕಂಪನಿ ಸರ್ಕಾರದ ಉಲ್ಲೇಖವಿದೆ. (ವಿಕ್ಟೋರಿಯಾ ರಾಣಿಗೂ ಹಿಂದೆ ಶರೀಫರು ಇದ್ದುದು ಸ್ಪಷ್ಟ.) ಆದ್ದರಿಂದ ಕ್ರಿ.ಶ.೧೮೦೦ ಶರೀಫರ ಕಾಲ ಇದ್ದಿರಬಹುದು. ಅಂದಮೇಲೆ ಉತ್ತರಾದಿ ಸಂಗೀತದ ಪ್ರಭಾವ ಕರ್ನಾಟಕದ ಮೇಲೆ ಆಗುವ ಮುನ್ನ, ದಾಸಸಾಹಿತ್ಯದ ಪ್ರಭಾವ ದಟ್ಟವಾಗಿದ್ದ ಕಾಲದಲ್ಲಿ, ಶಿಶುನಾಳರು ತಮ್ಮ ಪದಗಳನ್ನು ಹಾಡಿರಬೇಕೆಂದು ತೋರುತ್ತದೆ. ಈ ಅಂಶ ಹೆಚ್ಚಿನ ಸಂಶೋಧನೆಗೆ ಅರ್ಹವಾದ ವಿಚಾರ.

ಶಿವಶರಣರ ಶೂನ್ಯ ಸಂಪಾದನೆ. ಶಿವಶರಣರಲ್ಲಿ ಅಲ್ಲಮಪ್ರಭು ಬಸವಣ್ಣ ಇವರ ಪ್ರಸ್ತಾವವೂ ಶರೀಫರ ಪದಗಳಲ್ಲಿ ಬರುತ್ತದೆ. "ಗುರುವಿನ ಮರುಳು ಮಾಡುವರೇನೆ, ಮಾನಿನಿ" ಎಂಬ ಪದದಲ್ಲಿ ಅಲ್ಲಪ್ರಭು, ಮಧುಕೇಶ್ವರ ದೇವಾಲಯದಲ್ಲಿ ತಾಮಸರೂಪದಿ ಬಂದ ಮಾಯಾ ದೇವಿಯನ್ನು ಗೆದ್ದ ಪ್ರಸಂಗವನ್ನು ಬಣ್ಣಿಸಿ, "ತನ್ನ ನಿಜದಿ ತಾನು ಲೀಲೆಯಿಂದಿರುವನು, ಶೂನ್ಯಕೆ ಶೂನ್ಯ ತಾನಿರುತಿಹನು" ಎಂದು ಪ್ರಭುವಿನ ಮಹಿಮೆಯನ್ನು ತಿಳಿಸಿದ್ದಾರೆ ಶರೀಫರು. ಶರಣರ ಸತಿ–ಪತಿ ಭಾವದ ರೀತಿಯಲ್ಲೂ ಪದಗಳಿವೆ. "ಎಲ್ಲರಂಥವನಲ್ಲಾ ನನ ಗಂಡ, ಸೊಲ್ಲುಸೊಲ್ಲಿಗೆ ಬೈದು ಎನ್ನನು ಎಲ್ಲಿಗ್ಹೋಗದಂತೆ ಮಾಡಿಟ್ಟಾ, ಕಾಲ್ಮುರಿದುಬಿಟ್ಟಾ."

ಶರೀಫರು ತಮ್ಮ ಒಂದು ಪದದಲ್ಲಿ, "ಬಾಯಲೆ ಬ್ರಹ್ಮವ ನುಡಿವಾತನು ಮುಂದು। ಮಾಯದ ಮನೆಯೊಳು ಮಲಗಿದವನ ಕಂಡು। ನಗೆಯು ಬರುತಿದೆ" ಎಂದು ವೇದಾಂತಜ್ಞಾನವನ್ನು ಬೋಧಿಸಿ ಅದರಂತೆ ನಡೆಯದವರನ್ನು ಕಂಡು ವಿಕಟ ನಗೆಯನ್ನು ನಕ್ಕಿದ್ದಾರೆ; "ನಡೆ ನುಡಿಯಿಂದ ನಡಿಬೇಕಣ್ಣಾ" ಎಂದು ಕಳಕಳಿಯಿಂದ ಕೇಳಿಕೊಂಡಿದ್ದಾರೆ.

ಶರೀಫರ ಬಹು ಸಂಖ್ಯೆಯ ಪದಗಳು ಭಕ್ತಿ ಜ್ಞಾನ ವೈರಾಗ್ಯಗಳನ್ನು ಆಡುನುಡಿಯಲ್ಲಿ ಜನಕ್ಕೆ ಸರಳವಾಗಿ ಬೋಧಿಸುವಂಥವು; ಹಲಕೆಲವು ಕುದುರೆ, ಕೋಳಿ, ಕೋಡಗ, ನರಿ, ಹುಲಿ, ನಾಯಿ, ಕಬ್ಬಕ್ಕಿ, ಬೆಳವ ಮುಂತಾಗಿ ಪ್ರಾಣಿಗಳನ್ನೂ ವಾಸದ ಮನೆ, ಗಿರಣಿ (mill) ಯಂಥ ಅಚೇತನಗಳನ್ನೂ ಕೂಡ ಪ್ರತೀಕಗಳನ್ನಾಗಿ (symbols) ಮಾಡಿಕೊಂಡು ಒಗಟುಗಳ ರೀತಿಯಲ್ಲಿ ತತ್ವಬೋಧೆ ಮಾಡುತ್ತವೆ. ಮೊದಲ ಓದಿಗೆ ಅಥವಾ ಕೇಳ್ಮೆಗೆ ಅವು ಅರ್ಥವಾಗುವುದು ಕಷ್ಟ. ಪ್ರತೀಕದ ಭಾಷೆಯೂ ಒಂದು ವಿಧವಾದ ಅಲಂಕಾರಿಕ ಭಾಷೆಯೇ ಆದ್ದರಿಂದ, ಇಂಥ ಪದಗಳು ವಾಚ್ಯದ ಮಟ್ಟದಲ್ಲೇ ಧ್ವನಿರಮ್ಯವಾಗಿದ್ದು ಕಾವ್ಯಗುಣವನ್ನು ಪಡೆಯುತ್ತವೆ.

'ನಾ(ನು)' (=ಮಮಕಾರ, ಅಹಂಕಾರ) ಪದವನ್ನು ಅತ್ಯಂತ ತಾತ್ತ್ವಿಕವಾಗಿ ಹಾಗೂ ಚಾಮತ್ಕಾರಿಕವಾಗಿ ಬಳಸಿ ಕಟ್ಟಿರುವ ಪದದೊಂದಿಗೆ ಈ ಶರೀಫರ ಕುರಿತಾದ ವಿವೇಚನೆಯನ್ನು ಮುಗಿಸಬಹುದು:

---

* . ದಾರೇಷಣ, ಧಾರುಣೀಷಣ, ವಿತ್ತೇಷಣ (ಹೆಂಡತಿ, ಹೊಲ ಮನೆ, ಹಣ).

ಅವನಲ್ಲಿ ತಾತ್ಸಾರಭಾವನೆಯಿಂದ ವರ್ತಿಸತೊಡಗಿದರು. ತಮ್ಮ ಹತ್ತನೆಯ ವಯಸ್ಸಿನಲ್ಲಿ ಪಿತೃವಿಯೋಗವಾದಾಗ ವೈರಾಗ್ಯದಿಂದ ಯಾತ್ರಾರ್ಥಿಗಳ ಜೊತೆ ಊರನ್ನು ತ್ಯಜಿಸಿ ಹೊರಟುಹೋದರು. ಈ ರೀತಿ ಹೊರಟ ಇವರು ಕೆಲಸಮಯದ ಬಳಿಕ ಗೌಡಸಾರಸ್ವತ ವಿಪ್ರಸಮಾಜದ ಧರ್ಮಗುರುಗಳಾಗಿದ್ದ ಕಾಶೀಮಠಸ್ಥ ಶ್ರೀ ಭುವನೇಂದ್ರತೀರ್ಥ ಸ್ವಾಮೀಜಿಯವರ ಆಶ್ರಯವನ್ನು ಸಂಪಾದಿಸಿದರು. ಶ್ರೀ ಸ್ವಾಮಿಯವರು ಈ ಬಾಲಕನಲ್ಲಿ ಸುಪ್ತವಾಗಿದ್ದ ಕಲಾಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹಿಸಿದರು. ಗುರುಗಳ ತುಂಬುಹೃದಯದ ವಾತ್ಸಲ್ಯವನ್ನು ಗಳಿಸಿದ ಹರಿದಾಸರು ಅವರಿಂದಲೇ ಸಂಸ್ಕೃತ ಭಾಷೆ, ಕಾವ್ಯಾದಿಗಳ ಅಭ್ಯಾಸವನ್ನು ಪರಿಪೂರ್ಣವಾಗಿ ಅಭ್ಯಸಿಸಿದರು." (ತಮ್ಮ ಗುರುವರ್ಯರನ್ನು ಮೂರು ಕೀರ್ತನೆಗಳಲ್ಲಿ ಸ್ತುತಿಸಿದ್ದಾರೆ.)

ಅನಂತರ ಆ ಕಾಲದಲ್ಲಿ ಸುಪ್ರಸಿದ್ಧ ಕಥನಕಾರರಾಗಿದ್ದ ಸಿದ್ಧಾಪುರ ಶ್ರೀ ವೆಂಕಟರಮಣ ಪ್ರಭುಗಳಿಂದ ಹರಿಕಥೆಯ ಉಪದೇಶವನ್ನು ಪಡೆದರು. ಕ್ರಿ.ಶ.೧೮೮೨ರಲ್ಲಿ ಈ ಹರಿಕಥಾದಾಸರು ಕಾರ್ಕಳದ ಶ್ರೀ ವೆಂಕಟರಮಣನ ಸನ್ನಿಧಿಗೆ ಬಂದರು. "ಪೊಡವಿಯೊಳಗೆ ಪಡುತಿರುಪತಿಯೆಂಬ। ದೃಢ ಕಾರ್ಕಳದೊಡೆಯ ಶ್ರೀನಿವಾಸನೆ", "ನೀಲಗಿರಿಸಮವಾಗಿ ಕಾರ್ಕಳದಾಲಯವ ನೀ ಮಾಡಿದೆ। ಲೋಲ ಲಕ್ಷ್ಮೀನಾರಾಯಣಾಶ್ರಿತಪಾಲ ಪಡು ತಿರುಪತಿ ಪುರೇಶನೆ" ಎಂದು ಮುಂತಾಗಿ ಅನೇಕ ಕೀರ್ತನೆಗಳಲ್ಲಿ ಕಾರ್ಕಳವನ್ನು 'ಪಶ್ಚಿಮದ ತಿರುಪತಿ' ಎಂದು ಹೆಸರಿಸಿ ಅಲ್ಲಿನ ಅಧಿದೈವ ವೆಂಕಟರಮಣಸ್ವಾಮಿಯನ್ನು ಸ್ಮರಿಸಿದ್ದಾರೆ. ಇವರು ಕಾರ್ಕಳದಲ್ಲಿಯೆ ನೆಲಸಿದವರಾದರೂ ಶ್ರೀನಿವಾಸ, ಲಕ್ಷ್ಮೀನಾರಾಯಣ, ಗಣಪತಿ, ಸರಸ್ವತಿ ಮೊದಲಾದ ದೇವ ದೇವಿಯರನ್ನು ಕುರಿತು ಕೀರ್ತನೆಗಳನ್ನು ಕಟ್ಟಿ, ಅವುಗಳನ್ನು ಹಾಡುತ್ತ ಊರೂರು ತಿರುಗುತ್ತಿದ್ದರು. "ಸ್ಫೂರ್ತಿ ಬಂದಾಗ ನಿಂತಲ್ಲಿಯೇ ಅಶುಕವಿತೆಗಳನ್ನು ಹಾಡುವ, ಒಂದೆಡೆ ಕುಳಿತರೆ ಸಮಾಧಿಯಲ್ಲಿದ್ದಂತೆ ಕಾಣುವ, ತಿನ್ನಬೇಕೆನಿಸಿದಾಗ ಕೊಟ್ಟುದೆಲ್ಲವನ್ನು ತಿನ್ನುತ್ತಿದ್ದ, ಒಮ್ಮೊಮ್ಮೆ ಏನೂ ತಿನ್ನದೆ ಉಪವಾಸವಿರುತ್ತಿದ್ದ ಇವರು ಊರವರ ಬಾಯಿಯಿಂದ ಅವಧೂತ, ಅರೆಹುಚ್ಚ ಎನಿಸಿಕೊಂಡಿದ್ದುದರಲ್ಲಿ ಆಶ್ಚರ್ಯವಿಲ್ಲ." ಕಾರ್ಕಳದ ಗೌಡಸಾರಸ್ವತ ವಿಪ್ರಸಮಾಜದವರು ಅವರ ಕವಿತಾಸಾಮರ್ಥ್ಯ, ಹಾಡಿಕೆ, ಕಥನಕುಶಲತೆ, ಇವನ್ನು ಗುರುತಿಸಿ ಅವರನ್ನು ಪ್ರೋತ್ಸಾಹಿಸಿದರು. ಕಾಲಕ್ರಮದಲ್ಲಿ, ದಕ್ಷಿಣಕನ್ನಡ ಜಿಲ್ಲೆಯ ಮುಲ್ಕಿ, ಬಂಟ್ವಾಳ, ಕುಮಟಾ ಮುಂತಾದ ಅನೇಕ ಕಡೆಗಳಿಂದ ಇವರಿಗೆ ಆ ಸಮಾಜದ ಜನರಿಂದ ಹರಿಕಥೆ ಮಾಡಲು ಕರೆ ಬರುತ್ತಿತ್ತು. ಸಂಚಾರಕಾಲದಲ್ಲಿ

## ೬

## ಪಾವಂಜೆ ಹರಿದಾಸ ಲಕ್ಷ್ಮೀನಾರಣಪ್ಪಯ್ಯ

ದಾಸಪರಂಪರೆಯಲ್ಲಿ ಎಷ್ಟೋ ಮಂದಿ ಹರಿದಾಸರು ಅಜ್ಞಾತವಾಗಿರುವ ಸಂಗತಿಯನ್ನು ಹಿಂದೆಯೇ ಪ್ರಸ್ತಾವಿಸಿದೆ. ಹರಿದಾಸರು ಸಾಧಾರಣವಾಗಿ ಕೀರ್ತನೆಗಳನ್ನು ರಚಿಸಿ, ಹಾಡಿ, ಜನಸಾಮಾನ್ಯರನ್ನು ಭಕ್ತಿಮಾರ್ಗಕ್ಕೆ ತಿರುಗಿಸಿ ಜನ್ಮಸಾರ್ಥಕ್ಯ ಮಾಡಿಕೊಂಡಿರುವುದು ಸರಿಯಷ್ಟೆ. ಇನ್ನೊಂದು ವರ್ಗದ ಹರಿದಾಸರಿದ್ದಾರೆ: ಅವರು ಸ್ವತಃ ಕೀರ್ತನೆಗಳನ್ನು ರಚಿಸದಿದ್ದರೂ ಇತರ ಹರಿದಾಸರ ಕೀರ್ತನೆಗಳನ್ನು ಹಾಡುತ್ತ, ಬರೆದಿಟ್ಟುಕೊಳ್ಳುತ್ತ, ದಾಸವೃತ್ತಿಯನ್ನು ಅನುಸರಿಸುತ್ತ, ದಾಸಸಾಹಿತ್ಯವನ್ನು ಜೀವಂತವಾಗಿ ಕಾಪಾಡಿಕೊಂಡು ಬರುವುದರಲ್ಲಿ ಒಂದು ಗಣ್ಯ ಪಾತ್ರವನ್ನು ವಹಿಸಿದ್ದಾರೆ. ಅವರ ವಿಚಾರ ಇಲ್ಲಿ ಅಪ್ರಸಕ್ತ. ಬೇರೊಂದು ವರ್ಗದ ಹರಿದಾಸರು ಹರಿಕಥೆ ಮಾಡುವ ದಾಸರು, ಕೀರ್ತನಕಾರರು; ಈ ವರ್ಗದಲ್ಲಿ ಅನೇಕರು ಕವಿತಾ ಸಾಮರ್ಥ್ಯ ಹೊಂದಿದ್ದರು. ಈ ಹರಿಕಥೆ ದಾಸರು ಸಾಧಾರಣವಾಗಿ ಅಂದೂ, ಇಂದೂ, ವೈಷ್ಣವ ಸಂಪ್ರದಾಯದವರು. ಪಾವಂಜೆ ಲಕ್ಷ್ಮೀನಾರಾಯಣದಾಸರು ಈ ವರ್ಗಕ್ಕೆ ಸೇರಿದವರು. ಇವರು ಸುಮಾರು ಎರಡು ಸಾವಿರಕ್ಕೂ ಮಿಕ್ಕು ಕೀರ್ತನೆಗಳನ್ನೂ ಪದ–ಪದ್ಯಗಳನ್ನೂ ರಚಿಸಿರುವುದಾಗಿ ತಿಳಿದುಬರುತ್ತದೆ. ಈಗ ಸದ್ಯಕ್ಕೆ ಪಾವಂಜೆದಾಸರ ಅಭಿಮಾನಿಗಳಿಂದ ೨೩೭ ರಚನೆಗಳು ಮಾತ್ರ ಸಂಗೃಹೀತವಾಗಿ 'ಪಾವಂಜೆ ಹರಿದಾಸವಾಣಿ' ಎಂಬ ಶೀರ್ಷಿಕೆಯೊಡನೆ ಪ್ರಕಟವಾಗಿದೆ.[೩೫]

"ಹರಿದಾಸ ಪಾವಂಜೆ ಶ್ರೀ ಲಕ್ಷ್ಮೀನಾರ್ಣಪ್ಪಯ್ಯನವರು ಕ್ರಿ.ಶ. ೧೮೫೪ನೆಯ ಇಸವಿ ಆನಂದ ಸಂವತ್ಸರದ ಕುಂಭಮಾಸ ದಿನ ೧೮ಕ್ಕೆ ಸಲ್ಲುವ ಬುಧವಾರ ದಕ್ಷಿಣ ಕನ್ನಡದ ಮುಲ್ಕಿಯ ಸಮೀಪ ಅತ್ತೂರು ಎಂಬಲ್ಲಿ ಸ್ಥಾನಿಕ ಬ್ರಾಹ್ಮಣ ಸಮಾಜದ ಶ್ರೀ ವೆಂಕಟಕೃಷ್ಣಯ್ಯ ಎಂಬವರ ಎರಡನೆಯ ಮಗನಾಗಿ ಜನಿಸಿದರು. ಈ ವಿಷಯುವನ್ನು ಹರಿದಾಸರು ತಮ್ಮ ಕವಿತೆಯೊಂದರಲ್ಲಿ ಹೀಗೆ ಹೇಳಿಕೊಂಡಿರುವರು:

"…. ಮೂಲಿಕಾಪುರದೊಳಗೆಯಿಹ ವಿಶ್ವಾ। ಮಿತ್ರ ಗೋತ್ರ ಶಿವದ್ವಿಜ ಧನಂಜಯಪ್ರವರವೆತ್ತ ವೆಂಕಟಕೃಷ್ಣನಾ ಪುತ್ರ ಲಕ್ಷ್ಮೀನಾರಾಯಣ…"

"ಇವರ ಎಂಟನೆಯ ಹರೆಯದಲ್ಲಿ ವೆಂಕಟಕೃಷ್ಣಯ್ಯನವರು ಇವರನ್ನು ತಮ್ಮ ಅಗ್ರಜ ಸೀತಾರಾಮಯ್ಯನವರಿಗೆ ದತ್ತುಪುತ್ರನನ್ನಾಗಿ ವಹಿಸಿಕೊಟ್ಟು ಬ್ರಹ್ಮೋಪದೇಶ ಮಾಡಿಸಿದರು. ಆದರೆ ಬಾಲಕನು ಜಡಭರತನಂತಿದ್ದ ಕಾರಣ ಹಿರಿಯರೆಲ್ಲರೂ

ಕೀರ್ತಿತನಾದ ಹನುಮಂತನ ಮೇಲೆ ಅನೇಕ ಕೀರ್ತನೆಗಳನ್ನು ರಚಿಸಿ, ಒಂದು ಕೀರ್ತನೆಯಲ್ಲಿ – "ಹರಿಸರ್ವೋತ್ತಮನೆಂದು ಧರೆಗೆ ಸಾರುತ ಬಂದು। ವರವೈಷ್ಣವ ಮತವ ಸ್ಥಿರವ ಮಾಡಿ। ಧರಣಿಯೊಳಗೆ ತಾತ್ಪರ್ಯನಿರ್ಣಯವೆಂಬ। ಪರಮಗ್ರಂಥವ ಗೈದ ಗುರು ಮಧ್ವಾಚಾರ್ಯನೆ" ಎಂದು ಸ್ತೋತ್ರ ಮಾಡಿರುವುದರಿಂದ, ಪಾವಂಜೆ ದಾಸರನ್ನು ವೈಷ್ಣವ ಸಂಪ್ರದಾಯದ ಹರಿದಾಸರೆಂದು ಭಾವಿಸಲಡ್ಡಿಯಿಲ್ಲ. "ಕನಕ ಪುರಂದರ ಮುಖ್ಯ ದಾಸರಂತೆ। ಗುಣವೆನಗಿನಿತಿಲ್ಲ॥ ಜನರ ವಿಡಂಬಕೆ ದಾಸನಾದರೂ। ಘನಕೃಪಾರ್ಣವನೆ ಕನಕಾಂಬರಧರ, ಕರುಣಿಸಬಾರದೆ ಕಂಜನಾಭನೆ" ಎಂಬ ಮಾತಿನಿಂದ ಇವರು ಹರಿದಾಸಪರಂಪರೆಗೆ ಸೇರತಕ್ಕವರೇ ಎಂದು ನಿಶ್ಚಯವಾಗಿ ಹೇಳಬಹುದು. ಹೀಗಿದ್ದರೂ, ಇವರ ಪ್ರಕಟಿತ ಕೀರ್ತನೆಗಳಲ್ಲಿ ಮಾಧ್ವಮತದ ಪ್ರಮೇಯಗಳ ಉಲ್ಲೇಖ ಬಲುಮಟ್ಟಿಗೆ ಇಲ್ಲವೆಂದೇ ಹೇಳಬೇಕು. ದೇವರುಗಳನ್ನು ಕೀರ್ತಿಸುವುದರಲ್ಲಿಯೇ ಅವರಿಗೆ ಪರಮಾನಂದ. ಇವರ ಹಾಡುಗಳೆಲ್ಲವೂ ಭಕ್ತಿರಸಾನಂದದ ಪ್ರವಾಹದ ತರಂಗಗಳು.

'ಪಾವಂಜೆ ಹರಿದಾಸವಾಣಿ'ಯಲ್ಲಿ ೨೩೭ ಕೀರ್ತನೆಗಳಿವೆ ಎಂದು ಹೇಳಿತಷ್ಟೆ. ಇವುಗಳಲ್ಲಿ, ಕೀರ್ತನೆಗಳ ವಿವರಗಳು ಹೀಗಿವೆ:

ಭಾಗ ೧: ಗಣಪತಿಪರ ೧೫, ಸರಸ್ವತಿಪರ ೧೪, ವಿಷ್ಣುಪರ ೮೮, ದುರ್ಗಾಪರ ೨೨, ಮುಖ್ಯಪ್ರಾಣಪರ ೧೩, ರುದ್ರಪರ ೧೫, ಸುಬ್ರಹ್ಮಣ್ಯಪರ ೧೯ (ಈ ಭಾಗದಲ್ಲಿ, ಸರ್ವೋತ್ತಮನಾದ ಹರಿಗೆ ಎರಡನೆಯ ಕಕ್ಷದವಳಾದ ಶ್ರೀ ರಮಾ (ಲಕ್ಷ್ಮೀ) ದೇವಿಯನ್ನು ಸ್ತುತಿಸಿಲ್ಲ. ಅನುಪಲಬ್ಧ ಕೀರ್ತನೆಗಳಲ್ಲಿ ಅದು ಇದ್ದರೂ ಇರಬಹುದು). (ಒಟ್ಟು ೧೮೬)

ಭಾಗ ೨: ಗಣೇಶ ೧, ಕಾಲಭೈರವ ೩, ನಾಗರಾಜ ೨, ಗರುಡ ೧, ಬ್ರಹ್ಮ ೧, ಷಣ್ಮಹಿಷಿಯರು (ಆರುಮಂದಿ ಹರಿಮಾನಿನಿಯರು) ೧, ಸಂಕ್ಷಿಪ್ತ ವಿರಾಟ ಪರ್ವ ೧, ಕಾಶೀಮಠಸ್ಥಯತಿವರ್ಯ ೩, ದ್ರೌಪದೀ ವಸ್ತ್ರಾಪಹರಣ ೧, ಧ್ರುವಚರಿತ್ರೆಯ ಹಾಡು ೧, ಜೋಗುಳಪದ ೧, ಶೋಭಾನೆ ಹಾಡು ೧, ಪತ್ರ ಲೇಖನಗಳು ೫, ದೂರುವ ಹಾಡುಗಳು ೧೩, ತುಳು ಹಾಡುಗಳು ೪. (ಒಟ್ಟು ೩೯)

ಭಾಗ ೩: ಕಾರ್ಕಳ ಲಕ್ಷದೀಪೋತ್ಸವದ ಪದಗಳು ೧೨

೦ ೦ ೦

ಅತ್ಯಂತ ಹೆಚ್ಚಿನ ಸಂಖ್ಯೆಯವು ವಿಷ್ಣುಪರವಾಗಿರುವುದು ಗಮನಾರ್ಹ ಹಾಗೂ ಸಹಜ. ಎಲ್ಲ ಕೀರ್ತನೆಗಳ ಮುದ್ರಿಕೆಯೂ 'ಲಕ್ಷ್ಮೀನಾರಾಯಣ' ಎಂದಿರುವುದು

ಆಯಾ ಸ್ಥಳಗಳ ದೇವಾಲಯಗಳನ್ನು ಸಂದರ್ಶಿಸಿ ಅಲ್ಲಲ್ಲಿಯ ದೇವರನ್ನು ಕುರಿತು ಕೀರ್ತನೆಗಳನ್ನು ರಚಿಸಿ ಹಾಡುತ್ತಿದ್ದರು. ಬರುಬರುತ್ತ ಅವರೊಬ್ಬ ಜನಪ್ರಿಯ ಕೀರ್ತನಕಾರರಾದರು.

ಲಕ್ಷ್ಮೀನಾರಾಣಪ್ಪನವರು ಹರಿಸಂಕೀರ್ತನದ ಕೈಂಕರ್ಯವನ್ನು ನಡಸುತ್ತ ಹೋದಂತೆ, ಭಕ್ತಿ ವೈರಾಗ್ಯಗಳು ಬಲಿತು, ತಮ್ಮ ೩೫ನೆಯ ವಯಸ್ಸಿನವರೆಗೂ ಅವಿವಾಹಿತರಾಗಿಯೇ ಇದ್ದರು. ಬಂಧುಗಳ ಒತ್ತಾಯಕ್ಕೆ ಮಣಿದು ಮದುವೆ ಮಾಡಿಕೊಂಡರು; ನಾಲ್ಕು ವರ್ಷಗಳ ಬಳಿಕ ಪತ್ನೀ ವಿಯೋಗವನ್ನು ಅನುಭವಿಸಬೇಕಾಯಿತು. ನಲವತ್ತನೆಯ ವಯಸ್ಸಿನಲ್ಲಿ ಮತ್ತೆ ಮದುವೆಯಾಗಿ, ಎರಡನೆಯ ಸಂಬಂಧದಿಂದ ಇಬ್ಬರು ಹೆಣ್ಣುಮಕ್ಕಳನ್ನೂ ಒಂದು ಗಂಡುಮಗುವನ್ನೂ ಪಡೆದರು. ಈ ಗಂಡುಮಗು ಕುಡಿಯಾಗಿದ್ದಾಗಲೇ ಜವರಾಯ ಅದನ್ನು ಚಿವುಟಿಹಾಕಿದ. ಇಲ್ಲಿಂದ ಅವರ ಮುಂದಿನ ಬದುಕು – ಸುಮಾರು ಎಂಟು ವರ್ಷಕಾಲ, ವಿರಕ್ತಜೀವನದ ಅಲೆದಾಟ. ೧೯೧೪ರ ಸುಮಾರಿನಲ್ಲಿ ಪಾವಂಜೆಯ ವಾಸುಭಟ್ಟರೆಂಬವರು ಪಾವಂಜೆಯಲ್ಲಿ ಸುಬ್ರಹ್ಮಣ್ಯಸ್ವಾಮಿಯ ದೇವಾಲಯವನ್ನು ಕಟ್ಟತೊಡಗಿ ೧೯೨೦ರಲ್ಲಿ ನಿರ್ಮಾಣಕಾರ್ಯ ಮುಗಿಯಿತು. ಈ ಅವಧಿಯಲ್ಲಿ ಲಕ್ಷ್ಮೀನಾರಾಯಣದಾಸರು ಪಾವಂಜೆಯಲ್ಲಿಯೆ ತಮ್ಮ ಸ್ವಜನ ಬಂಧುಬಾಂಧವರೊಡನೆ ನಿಯಮಿತ ಜೀವನವನ್ನು ನಡಸಿದರು. ಸುಬ್ರಹ್ಮಣ್ಯಸ್ವಾಮಿಯ ಪ್ರತಿಷ್ಠಾಪನ ಕಾರ್ಯದ ಸನ್ನಿವೇಶದಲ್ಲಿ ನೂರಾರು ಸಂದರ್ಭೋಚಿತ ಕೀರ್ತನೆಗಳನ್ನು ರಚಿಸಿ ಹಾಡಿದರು. ೧೯೨೨ರಲ್ಲಿ, ತಮ್ಮ ಸಕಲ ಸ್ಥಿರಚರ ಆಸ್ತಿಯೆಲ್ಲವನ್ನೂ ಪಾವಂಜೆ ಶ್ರೀ ಜ್ಞಾನಶಕ್ತಿ ಸುಬ್ರಹ್ಮಣ್ಯಸ್ವಾಮಿಯ ಸ್ವತ್ತು ಎಂದು ಮರಣಶಾಸನವನ್ನು ಬರೆದಿಟ್ಟರು; ಆ ಆಸ್ತಿಯಲ್ಲಿ ತಮ್ಮ ಪುತ್ರಿಯರಿಗೆ ಅಶನವಸನಾರ್ಥ ಒಂದು ಅಂಶ ಸಲ್ಲಬೇಕೆಂದೂ ಅದರಲ್ಲಿ ಕಾಣಿಸಿದರು. ಇವರು ತಮ್ಮ ಕೊನೆಗಾಲವನ್ನು ಪಾವಂಜೆಯಲ್ಲಿ ಕಳೆದದ್ದರಿಂದ 'ಪಾವಂಜೆ ಹರಿದಾಸ'ರೆಂದು ಆ ಪ್ರಾಂತದಲ್ಲಿ ಪ್ರಖ್ಯಾತರಾಗಿರಬೇಕು.

ಪಾವಂಜೆ ಹರಿದಾಸರು ಇತರ ಹರಿದಾಸರಂತೆ ಗುರುವಿನಿಂದ ದಾಸದೀಕ್ಷೆಯನ್ನೂ ಅಂಕಿತವನ್ನೂ ಪಡೆದದ್ದಕ್ಕೆ ಅವರ ಕೀರ್ತನೆಗಳಲ್ಲಿಯಾಗಲಿ ಬೇರೆಯೆಡೆಯಲ್ಲಾಗಲಿ ಉಲ್ಲೇಖವಿಲ್ಲ. ತಂದೆ 'ಶಿವದ್ವಿಜ' ಎಂದು ಇವರೇ ಹೇಳಿಕೊಂಡಿರುವುದರಿಂದ ಇವರು ಶೈವಬ್ರಾಹ್ಮಣರೆಂದು ತಿಳಿಯಬೇಕಾಗುತ್ತದೆ. ವೈಷ್ಣವ ಮಠಾಧೀಶರಾದ ಶ್ರೀ ಭುವನೇಂದ್ರರ ಶಿಷ್ಯರಾದ ಮೇಲೆ, ವೈಷ್ಣವಮತಸ್ವೀಕಾರ ಮಾಡಿರಬೇಕು. ಮಾಧ್ವಮತದಲ್ಲಿ ಮುಖ್ಯಪ್ರಾಣನೆಂದು

"ದೊಡ್ಡ ದಾರಿದ್ರ್ಯದ ಗುಡ್ಡೆ ಬಿದ್ದುದರಿಂದ। ದುಡ್ಡೆಲ್ಲ ತೆಗೆದೆ ನಾ ದಡ್ಡನಾಗಿ।
ಅಡ್ಡಬಿದ್ದು ಕೈಯೊಡ್ಡಿ ಬೇಡುವೆ ಸ್ವರ್ಣ। ಗುಡ್ಡೆಯ ಮೇಲಿರುವ ಮಹಾನುಭಾವ॥"

ಎಂದು 'ಪಡುತಿರುಪತೀಶ'ನಲ್ಲಿ ತಪ್ಪೊಪ್ಪಿಕೊಂಡು "ದೃಢಭಕ್ತಿಯನು ಕೊಟ್ಟು ಸಲಹು" ಎಂದು ಬೇಡಿಕೊಂಡಿದ್ದಾರೆ. ದಾಸರ ದೃಷ್ಟಿ ಆತ್ಮಶೋಧನೆ, ಭಗವದ್ದರ್ಶನಾಪೇಕ್ಷೆ, ಇವುಗಳ ಕಡೆಗಿದ್ದರೂ ಎದುರಿನ ಸಮಾಜದ ಕಡೆಗೆ ಬಹು ವಿರಳವಾಗಿ ದೃಷ್ಟಿ ಹೊರಳಿದಾಗ, – "ಉತ್ತಮ ಗುಣಗಳು ಬತ್ತಿಹೋದುವೈ। ದೈತ್ಯರ ಗುಣವು ಪ್ರವರ್ಧಿಪುದು", "ಶುದ್ಧ ತಮೋಗುಣಬದ್ಧ ದೈತ್ಯಪ್ರ। ಸಿದ್ಧರಾಗಿಹರು ಮದ್ಯಪರು" ಎಂಬಂಥ ಮಾತುಗಳೂ ಅವರ ಬಾಯಿಂದ ಹೊರಡುವವು. ತಮ್ಮ ಕೆಲವು ಆಪ್ತೇಷ್ಟರಿಗೆ ಪದ್ಯರೂಪದಲ್ಲಿ ಬರೆದ ಪತ್ರಗಳು ಸ್ವಾರಸ್ಯವಾಗಿವೆ; ಅವುಗಳಲ್ಲಿ ಅವರ ದೈವಭಕ್ತಿ, ಬಂಧುಪ್ರೇಮ, ಆತ್ಮೀಯತೆ, ನೈತಿಕ ದೃಷ್ಟಿ ನಿಚ್ಚಳವಾಗಿ ಎದ್ದುಕಾಣುತ್ತವೆ; ವ್ಯಾವಹಾರಿಕ ಪತ್ರಗಳೂ ಉಂಟು. ಇವನ್ನು ಓದಿದಾಗ ನಮ್ಮ ಇಂದಿನ ಕವಿಗಳು ಈ ರೀತಿಯ, ಕಾವ್ಯಲೇಪ ಹೊಂದಿದ ಪತ್ರಸಾಹಿತ್ಯವನ್ನು ಬೆಳಸಬಾರದೇಕೆ ಎನ್ನಿಸುತ್ತದೆ. ಒಂದೇ ಒಂದಾದ ಶೋಭಾನೆ ಹಾಡಿನಲ್ಲಿ ಶ್ರೀರಾಮನ ಮಡದಿ ಜಾನಕಿಗೆ ಹೇಳಿದ ಬುದ್ಧಿಮಾತು. 'ಶಾಕುಂತಲ'ದ ಕಣ್ವರು ಶಕುಂತಲೆಗೆ ಹೇಳಿದ ಬೀಳ್ಕೊಡುವ ಸಂದರ್ಭೋಚಿತ ಉಪದೇಶವನ್ನು ಒಳಗೊಂಡ ಆಶೀರ್ವಾದದ ಮಾದರಿಯಲ್ಲಿ, ಯಾವ ಹೆಣ್ಣು ಮಗಳಿಗೂ ಅನ್ವಯಿಸುವಂತಿದೆ; 'ಬುದ್ದಿಯ ಮಾತ ಪೇಳಿದರೆ ಕೇಳಬೇಕಮ್ಮಾ ಮಗಳೆ' ಎಂಬ ಪುರಂದರದಾಸರ ಹಾಡೊಂದನ್ನು ನೆನಪಿಗೆ ತರುತ್ತದೆ. 'ದೂರುವ ಹಾಡು'ಗಳಲ್ಲಿ ದಾಸರ ಹಾಸ್ಯದೃಷ್ಟಿ ಮೆಚ್ಚುವಂತಿದೆ. ಇವುಗಳಲ್ಲಿ ಸಾಧಾರಣವಾಗಿ ಕಾಲ್ಪನಿಕ ಅತ್ತಿಗೆ ಮತ್ತು ಬೀಗಿತ್ತಿಯರ ಕೃಪಣತನ, ಹೊಟ್ಟೆಬಾಕತನ, ಇವನ್ನು ಲೇವಡಿ ಮಾಡಿ ಬಣ್ಣಿಸುವ ಮಾತಿನ ಧೋರಣೆ ಹಾಡು ಕೇಳಿದವರ ಮುಖವನ್ನು ನಗೆಯಿಂದ ಅರಳಿಸಲಾರದೆ ಇರದು. "ಉಂಡು ದೂರುವುದ್ಯಾಕೆ ಲಜ್ಜೆ ಭಂಡೆಯರ ಗುಣದಾಕೆ ಸಂಡಿಗೆ ಪಾಯಸ ಹೋಳಿಗೆ ತುಪ್ಪದ ಭಾಂಡವೆ ನಿನ್ನ ಹೊಟ್ಟೆ, ಏ ದುಷ್ಟೆ"; "ಹೆಸರುಪಾಯಸ ತಿಂದುಬ್ಬಸವ ತಾಳಿ। ಇವಳ ಬಸುರಿನೊಳಿಹುದಯ್ಯ ಪಂಜುರಳಿ"; "ಹೆಂಗಸರಂತಲ್ಲ ಇವಳ ಹೊಟ್ಟೆ। ದೊಡ್ಡ। ಮಂಗಳೂರಿನೊಳಿಹ ಕೆರೆಕಟ್ಟೆ" – ಈ ವಿನೋದವಾಕ್ಯಗಳನ್ನು ಕೇಳಿದಾಗ ಬೀಗಿತ್ತಿ ಮುನಿಸಿಕೊಂಡರೂ ಉಳಿದವರು ನಗದೆ ಇರಲಾರರು.

ಪಾವಂಜೆ ದಾಸರ ಭಾಷೆ ಶೈಲಿಗಳ ಬಗೆಗೆ ಎರಡು ಮಾತು ಹೇಳಿ ಈ

ಸ್ವನಾಮಮುದ್ರಿಕೆಯೂ ಆಗಬಹುದು. ವಿಷ್ಣುದೇವರ ಮುದ್ರಿಕೆಯೂ ಆಗಬಹುದು. ಕೀರ್ತನೆಗಳ ವಸ್ತುವೈವಿಧ್ಯವೂ ಗಮನಿಸತಕ್ಕದ್ದೆ. ಕೆಲವು ಕೀರ್ತನೆಗಳಲ್ಲಿ ದಾಸರ ಜೀವನದ ಸುಖದುಃಖಗಳ, ಕಷ್ಟಕಾರ್ಪಣ್ಯಗಳ, ಮನಸ್ಸಿನ ವಿವಿಧ ಭಾವಗಳ ಹೊಯ್ದಾಟದ ಹೊಳಹುಗಳು ಮಿಂಚಿ, ಎಲ್ಲ ಸಂದರ್ಭಗಳಲ್ಲಿಯೂ ಅವರ ಚಿತ್ತವು ಭಗವದಭಿಮುಖವಾಗಿದ್ದು, ಪಾವಂಜೆ ದಾಸರು ಭಕ್ತಶ್ರೇಷ್ಠರೆಂಬುದನ್ನು ಸ್ಪಷ್ಟಪಡಿಸುತ್ತವೆ. ಕೆಲವು ಉದಾಹರಣೆಗಳು:

"... ಚಾತುರ್ಥಿಕ ಜ್ವರದಿ। ಭ್ರಾಮಕನಾದೆ ಪಾಲಿಸೊ, ದಾರಿದ್ರ್ಯವೆಂಬ
ಸೀಮೆಯಿಂದಲಿ ದಾಡಿಸೊ..." (ಕೀರ್ತನೆ ೭೧–೨)

"ವಾತಪಿತ್ತಕಫಾದಿ ಕರ್ಮದಿಂದಲಿ ಬನ್ನಪಟ್ಟೆನು ಶ್ರೀಹರಿ।
ಧಾತುಬಲವತಿತಗ್ಗಿ ಉಷ್ಣೋಪೇತದಿಂದಲಿ ಬೆಂದೆನು॥

ಚಾತುರ್ಥಿಕ ಜ್ವರಾತಿಶಯದಲಿ ಶೀತಸ್ಥಾನದಿ ನಿಂದೆನು।
ಈ ತೆರದ ಕಷ್ಟಗಳು ಬಾರದ ರೀತಿಯಲಿ ಪರಿಹರಿಸು ಸಂತತ॥"

ತಮ್ಮ ಮಗಳ ಕನ್ಯಾಸೆರೆಯನ್ನು ಬಿಡಿಸೆಂದು ಹೀಗೆ ಬೇಡಿದ್ದಾರೆ:
"ತರುಣೀಮಣಿಯಳ ಸೆರೆಯನು ಬಿಡಿಸುವುದಿನ್ನು।
ಕರುಣಾಕರ, ನಿನ್ನ ಸ್ಮರಿಸುವಳನುದಿನ॥" (ಕೀ.೬೭–೨)

ದೇವರಿಗೆಂದು ಮುಡುಪಿಟ್ಟು ಕೂಡಹಾಕಿದ್ದ ದ್ರವ್ಯವನ್ನು ಸ್ವಂತಕ್ಕೆ ಬಳಸಿಕೊಂಡಾಗ, ಉಪವಾಸದ ನೇಮವನ್ನು ಮುರಿದಾಗ, ಶ್ರೀನಿವಾಸನಲ್ಲಿ ಹೀಗೆ ತಪ್ಪೊಪ್ಪಿಕೊಂಡಿದ್ದಾರೆ:

"ತ್ರಾಣವಿರುವಾಗ ಕಾಣಿಕೆ ಹಾಕಿದೆ। ದೀನದಾರಿದ್ರ್ಯದ ಹೊತ್ತಿನಲಿ।
ಮೇಣದರಿಂದಲಿ ತೆಗೆದು ತೆಗೆದು ಪಂಚ। ಪ್ರಾಣಕ್ಕಾಹುತಿಯ ಕೊಟ್ಟೆ।
ಅಪರಾಧಪಟ್ಟೆ॥"

"ಮಂದವಾರ ದಿನಕ್ಕೊಂದೂಟವ ಸತ್ತ್ವ। ದಿಂದಿರುವಾಗ ನೇಮಗೈದೆ॥
ಮಂದಭಾಗ್ಯ ಜ್ವರದಿಂದ ಪೀಡಿತನಾದ। ರಿಂದೆರಡೂಟವನೂ। ಮಾಡಿದೆ ನಾನು"

(ಕ್ರಿ.ಶ.೧೮೮೯–೧೯೫೭) ತಮ್ಮ ತಿಳಿವಳಿಕೆಗೆ, ಸಂಗಸಹವಾಸಕ್ಕೆ, ಲಭಿಸಿದ ಹಲವು ಸಮಕಾಲೀನ ಅನುಭಾವಿ ಕವಿಗಳ ಹಾಗೂ ಅವರ ಕೃತಿಗಳಿಂದ ವ್ಯಕ್ತಪಡುವ ಅವರ ಅನುಭಾವ ಪಥಗತಿಯ ವಿಶ್ಲೇಷಣಾತ್ಮಕ ಸವಿವರ ಪರಿಚಯವನ್ನು ತಮ್ಮ ಆಂಗ್ಲಗ್ರಂಥವೊಂದರಲ್ಲಿ ಮಾಡಿಕೊಟ್ಟು, ಕನ್ನಡದ ಅನುಭಾವ ಸಾಹಿತ್ಯವು ಪ್ರಪಂಚದ ಮತ್ತು ಭಾರತದ ಇತರ ಪ್ರಾಂತಗಳ ಅನುಭಾವಿಗಳ ಸಾಹಿತ್ಯಕ್ಕೆ ಹೆಗಲೆಣೆಯಾಗಿ ನಿಲ್ಲಬಲ್ಲುದೆಂದು ತಿಳಿಸಿ, ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.[೩೬] ಅವರ ಅಧ್ಯಯನದ ವ್ಯಾಪ್ತಿಗೆ ಸೇರಿದ ಶಿವಶರಣರು (ಅಲ್ಲಮ, ಬಸವೇಶ್ವರ, ಮಹಾದೇವಿಯಕ್ಕ, ಚೆನ್ನಬಸವಣ್ಣ ಮುಂತಾದವರು). ನಿಜಗುಣ ಶಿವಯೋಗಿ, ಹರಿದಾಸರು (ಪುರಂದರದಾಸ, ಕನಕದಾಸ, ವಿಜಯದಾಸ ಮುಂತಾದವರು). 'ಅನುಭವಾಮೃತ'ದ ಮಹಲಿಂಗರಂಗ, ಸರ್ಪಭೂಷಣ ಶಿವಯೋಗಿ ಇವರುಗಳ ವಿಚಾರವು ಪ್ರಸ್ತುತ ಗ್ರಂಥದ ಪರಿಮಿತ ವ್ಯಾಪ್ತಿ ಮತ್ತು ಕಾಲಾವಧಿಯ ವ್ಯಾಪ್ತಿಗೆ ಒಳಪಟ್ಟಿಲ್ಲವಾದ್ದರಿಂದ, ಇವರನ್ನುಳಿದು ಇನ್ನು ಕೆಲವರ ವಿಚಾರವಾಗಿ ನಾಲ್ಕು ಮಾತನ್ನು ಹೇಳಬಹುದು; ಪ್ರಾಯಿಕನಾಗಿ ಇವರೆಲ್ಲರೂ ಉತ್ತರ ಕರ್ನಾಟಕಕ್ಕೆ ಸೇರಿದವರು.

ಮುಪ್ಪಿನ ಮುನಿ (ಸು.ಕ್ರಿ.ಶ.೧೮೧೦) ನಿಂಬರ್ಗಿಯ ಸಂತನ ಗುರು. ಈತನ ವಿಚಾರವಾಗಿ ಹೆಚ್ಚಿನ ಸಂಗತಿ ತಿಳಿದುಬರುವುದಿಲ್ಲ. ನಿಂಬರ್ಗಿಯ ಸಂತಕವಿ (ಈತನ ಹೆಸರೂ ಅಜ್ಞಾತ) ತನ್ನ ಒಂದು ಹಾಡಿನಲ್ಲಿ, "ಮುಪ್ಪಿನ ಮುನಿಯ ವಚನ ಕಪ್ಪುಗೊರಳ ಕಾಡಸಿದ್ಧನಿದ್ದೆಡೆಗೆ ಹೋಗಿ ಸಾಷ್ಟಾಂಗನಾಗೊ ನೀ" ಎಂದು ಹೇಳಿರುವುದರಿಂದ ಮುಪ್ಪಿನ ಮುನಿ ಹಿಂದೆ ಕಾಡಸಿದ್ಧನ ತಪೋಭೂಮಿಯಾಗಿದ್ದ ಸಿದ್ಧಗಿರಿಯಲ್ಲಿ ವಾಸವಾಗಿದ್ದನು ಎಂದು ಊಹಿಸಲಾಗಿದೆ. ಈ ಕಾಡುಸಿದ್ಧನು ನವನಾಥರಲ್ಲಿ ಒಬ್ಬನೆಂದು ಸಂಸ್ಕೃತ ಶ್ಲೋಕವೊಂದರಲ್ಲಿ ಉಕ್ತನಾದ ರೇವಣ(ಸಿದ್ಧ)ನಿರಬಹುದೇ ಎಂಬ ಬಗೆಗೆ ವಾದವಿವಾದಗಳಿವೆ. ಆ ವಿಚಾರ ಇಲ್ಲಿ ಅಪ್ರಸಕ್ತ. ಸಿದ್ಧಗಿರಿ ಮೀರಜ್ ಬಳಿಯಲ್ಲಿಯ ಒಂದು ಬೆಟ್ಟ ಎನ್ನಲಾಗಿದೆ.[೩೭]

ಮುಪ್ಪಿನ ಮುನಿಯ ಶಿಷ್ಯ ನಿಂಬರ್ಗಿಯ ಸಂತ. ರಾನಡೆಯವರ ಅಭಿಪ್ರಾಯದಂತೆ ಈ ಸಂತ ಅರ್ವಾಚೀನ ಕಾಲದ ಅತ್ಯಂತ ಮಹತ್ವದ ಸಂತರಲ್ಲಿ ಒಬ್ಬ. ಈತನ ಜನ್ಮವರ್ಷ ೧೭೮೯; ತನ್ನ ೨೫ನೆಯ ವರ್ಷದಲ್ಲಿ ಗುರೂಪದಿಷ್ಟನಾಗಿ, ೯೫ ವರ್ಷಗಳ ಕಾಲ ಜೀವಿಸಿದ್ದನು (ಎಂದರೆ, ೧೮೮೪ರವರೆಗೆ). ಈ ಸಂತ ಅನೇಕ ಸೊಗಸಾದ ಪದಗಳನ್ನು ರಚಿಸಿರುವನು. "ಗುರುಚರಣ ಕಮಲದಲ್ಲಿ ಭೃಂಗವಾಗೊ ನೀ" ಎಂಬ ಸಾಲಿನಿಂದ ಮೊದಲಾಗುವ ಕೃತಿಯಲ್ಲಿ, ಪರತತ್ವದಲ್ಲಿ

ಪರಿಚಯವನ್ನು ಮುಗಿಸಬಹುದು. ದಾಸರು ಉಭಯ ಭಾಷಾ ಪಂಡಿತರು, ಸಂಗೀತ ಶಾಸ್ತ್ರಜ್ಞರು, ಗಾಯನಪಟು ಎಂಬುದು ಅವರ ರಚನೆಗಳನ್ನು ಪರಿಶೀಲಿಸಿದರೆ ಸ್ವಯಂವೇದ್ಯವಾಗುತ್ತದೆ. ಅವು ವಿವಿಧ ರಾಗತಾಳಗಳಿಗೆ ಅತ್ಯಂತ ಅಚ್ಚುಕಟ್ಟಾಗಿ ಕೂಡಿಬರುತ್ತವೆ. ದಾಸರು ಹರಿಕಥೆ ಮಾಡುವವರಾದ್ದರಿಂದ ಅನೇಕ ವೇಳೆ ಅರ್ಥಭಾವಗಳಿಗಿಂತ ಹೆಚ್ಚಾಗಿ ಶ್ರವಣಸುಭಗತೆಗೆ ಹೆಚ್ಚಿನ ಪ್ರಾಧಾನ್ಯ ಕೊಟ್ಟಿರುವಂತೆ ಕಾಣುತ್ತದೆ. ಈ ಶ್ರವಣಸುಭಗತೆಯ ಪರಿಣಾಮರಮಣೀಯತೆಗೆ ಅವರು ಲಯವೈವಿಧ್ಯವನ್ನೂ ಪ್ರಾಸಾನುಪ್ರಾಸಗಳನ್ನೂ ಭಾಷೆಯ ನಾದಗುಣವನ್ನೂ ಪರಿಣಾಮಕಾರಿಯಾಗಿ ಉಪಯೋಗಿಸಿಕೊಂಡಿದ್ದಾರೆ.

ಸುಮಾರು ಆರು ಶತಕಗಳಷ್ಟು ದೀರ್ಘವಾದ ಹರಿದಾಸ ಪರಂಪರೆಯ ಅಜ್ಞಾತ ಅರ್ವಾಚೀನರಲ್ಲಿ ಇದೀಗ ಬೆಳಕಿಗೆ ಬಂದ ಪಾವಂಜೆ ಲಕ್ಷ್ಮೀನಾರಣಪ್ಪಯ್ಯನವರು ಹರಿದಾಸ ಸಾಹಿತ್ಯದಲ್ಲಿ ಒಂದು ಗಣ್ಯಸ್ಥಾನಕ್ಕೆ ಅರ್ಹರಾಗಿದ್ದಾರೆ. "ಇವರ ಕೀರ್ತನೆಗಳು ಜನಸಾಮಾನ್ಯರ ಮನಮಿಡಿಯುವಂತಿದ್ದು ತಲ್ಲೀನತೆಯ ಪರಾಕಾಷ್ಠೆಯನ್ನು ತಲುಪಿಸಿ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳುವಲ್ಲಿ ಸಾರ್ಥಕ ಸಾಧನೆಯನ್ನು ಪಡೆದಿವೆ."

## ೭
## ಅನುಭಾವ ಕವಿಗಳು

ಹರಿದಾಸರ ಕೃತಿಗಳ ಮಾದರಿಯಲ್ಲಿ ಹಲವೋ ಕೆಲವೋ ಗೇಯಕೃತಿಗಳನ್ನು ರಚಿಸಿ, ಪ್ರಮುಖ ಹರಿದಾಸರಂತೆ ಅಷ್ಟಾಗಿ ಪ್ರಸಿದ್ಧಿಗೆ ಬಾರದ ಗಣ್ಯ ಸಂಖ್ಯೆಯ ಅನುಭಾವ ಕವಿಗಳು (ಶಿವಶರಣರಂತೆ ಹರಿದಾಸರೂ ಅನುಭಾವ ಕವಿಗಳೇ) ೧೯ನೆಯ ಶತಮಾನದ ಉತ್ತರಾರ್ಧದಲ್ಲೂ ಈ ಶತಮಾನದ ಪೂರ್ವಾರ್ಧದಲ್ಲೂ ಆಗಿಹೋಗಿದ್ದಾರೆ. ಕೆಲವರನ್ನು ಈ ಮೊದಲೆ ಗಮನಿಸಿ ಆಗಿದೆ. ಅವರಲ್ಲಿ ಬಹುಸಂಖ್ಯೆಯವರ ರಚನೆಗಳ ಸಂಗ್ರಹ ಕಾರ್ಯವಾಗಲಿ ಪ್ರಕಟನಾ ಕಾರ್ಯವಾಗಲಿ ನಡೆಯದಿರುವುದರಿಂದ, ಅವರ ಹಾಗೂ ಅವರ ಕೃತಿಗಳ ಪರಿಚಯ ಮಾಡಿಕೊಡುವುದಕ್ಕೆ ಆಧಾರ ಸಾಮಗ್ರಿಯೆ ಇಲ್ಲವಾಗಿದೆ. ಈ ಪೂರ್ವಭಾವಿ ಕಾರ್ಯದ ಅಭಾವದಿಂದಾಗಿ, ಈ ಹರಿದಾಸ ಸಾಹಿತ್ಯ ಚರಿತ್ರೆಯ ಈ ಪ್ರಕರಣ ಅಸಮಗ್ರವಾಗಿಯೆ ಉಳಿಯಬೇಕಾಗಿದೆ. ಕನ್ನಡದ ಅನುಭಾವ ಸಾಹಿತ್ಯದ (ಶಿವಶರಣರ, ಹರಿದಾಸರ ಹಾಗೂ ಇತರ ಅನುಭಾವಿ ಕವಿಗಳ ಕೃತಿಗಳ) ವಿವೇಚನೆ ಮಾಡಿರುವ, ದಿವಂಗತ ಆರ್.ಡಿ.ರಾನಡೆಯವರು

ಉರ್ದು ಭಾಷೆಯಲ್ಲಿರುವುದರಿಂದ ಅವುಗಳ ವಿಚಾರ ನಮಗೆ ಪ್ರಸ್ತುತವಲ್ಲ. ಭಗವಂತಪ್ಪ ನಿತ್ಯವೂ ಧ್ಯಾನಾಸಕ್ತನಾಗಿರುತ್ತ, ನಿಂಬಳಕ್ಕೆ ಬಂದವರೆಲ್ಲರ ಸೇವೆಮಾಡುವುದೇ ಈತನ ದಿನಚರಿಯಾಗಿತ್ತು. ರಾನಡೆಯವರ ಅಭಿಪ್ರಾಯದಲ್ಲಿ ಆತ ಒಳ್ಳೆಯ ಕವಿ. ಆತನ ಕೃತಿಗಳ ಮುದ್ರಿಕೆ 'ಚಿದಾನಂದ,' ೧೯೪೨ರ ಎರಡನೆಯ ಮಹಾಯುದ್ಧದ ಕಾಲದಲ್ಲಿ ಈ ಸಂತಕವಿ ನಿಂಬಳದಲ್ಲೂ ಅಲಹಾಬಾದಿನಲ್ಲೂ ರಾನಡೆಯವರ ಜೊತೆಗಿದ್ದು, ಯುದ್ಧದ ಜ್ವಾಲೆ ಭಾರತಕ್ಕೂ ವ್ಯಾಪಿಸುವ ಭಯ ಇದ್ದಾಗ, ಬೆಳಗಿನ ಮೊದಲ ಜಾವದಲ್ಲಿ ಅನುಭಾವದ್ಯೋತಕವಾದ ಆಧ್ಯಾತ್ಮಿಕ ಗೀತಗಳನ್ನು ಹಾಡುತ್ತಿದ್ದನಂತೆ. ರಾನಡೆಯವರು, "ಹ್ಯಾಂಗ ಮರೆಯಲಿ ಗುರುವಿನ", "ಎಂಥ ಗಾರುಡಿಗ ಸದ್ಗುರು" ಎಂಬ ಗುರುಮಹಿಮೆಯನ್ನು ವರ್ಣಿಸುವ ಎರಡು ಹಾಡುಗಳ ವಿಷಯವನ್ನು ಪ್ರಸ್ತಾಪಿಸಿದ್ದಾರೆ.[೮೧]

ರಾನಡೆಯವರು ತಮ್ಮ ಗ್ರಂಥದಲ್ಲಿ ಇನ್ನೂ ಕೆಲವರು ಅನುಭಾವಿ ಸಂತ ಕವಿಗಳ ಕೃತಿಗಳನ್ನು ವಿಶ್ಲೇಷಿಸಿ,[೮೨] ಕರ್ನಾಟಕದ ಅನುಭಾವಿ ಕವಿಗಳ ಸ್ಥಾನ ಬಲು ದೊಡ್ಡದು ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ಈ ಎಲ್ಲ ಅನುಭಾವಿ ಕವಿಗಳ ಕೃತಿರಾಶಿ ವ್ಯವಸ್ಥಿತ ರೀತಿಯಲ್ಲಿ ಪ್ರಕಟಗೊಳ್ಳಬೇಕಾಗಿರುವುದರ ಅಗತ್ಯವನ್ನು ಎಷ್ಟು ಒತ್ತಿ ಹೇಳಿದರೂ ಕಡಿಮೆಯೆ.

## ೮
## ಮೈಸೂರು ವೇದಾಂತ ಶಿವರಾಮಶಾಸ್ತ್ರೀ

ಈ ಕವಿಯ ವಿಚಾರವಾಗಿ 'ಕರ್ಣಾಟಕ ಕವಿಚರಿತೆ'ಯ ಮೂರನೆಯ ಸಂಪುಟದಲ್ಲಿ (೧೯೨೯, ಪು.-೨೩೫) ನಮಗೆ ದೊರಕುವ ಮಾಹಿತಿ ಅತ್ಯಲ್ಪ:

"ಈತನು ಸ್ಮಾರ್ತನು. ಗ್ರಂಥಗಳು – ವೇದಾಂತ ಮುಕ್ತಿಮಾರ್ಗ ಪ್ರದೀಪಿಕೆ, ಬ್ರಹ್ಮಾನಂದ ಬೋಧೆ, ಶಂಕರಾನಂದ ತತ್ವ."

ಇವರ ಕಾಲವನ್ನು ೧೯ನೆಯ ಶತಮಾನ ಎಂದು ಸ್ಥೂಲವಾಗಿ ಹೇಳಿದೆ ಕವಿಚರಿತೆಯಲ್ಲಿ.

ಶಿವರಾಮ ಶಾಸ್ತ್ರಿಗಳು ಜೀವಂತರಾಗಿದ್ದ ಕಾಲದಲ್ಲಿ ಮೈಸೂರು ಬೆಂಗಳೂರು ಪ್ರಾಂತಗಳ ಪಂಡಿತ ಪಾಮರ ವರ್ಗಗಳಲ್ಲಿ ಬಲ್ಲ ವ್ಯಕ್ತಿಯಾಗಿದ್ದರೆಂದು ಕಂಡುಬರುತ್ತದೆ. ಈಗ ತಿಳಿದುಬಂದಿರುವ ಮಟ್ಟಿಗೆ ಇವರ ಹತ್ತು ಗ್ರಂಥಗಳು ಪ್ರಕಟವಾಗಿವೆ: (೧)ಶಂಕರ ಗುರುವಿಲಾಸ (೧೯೩೪); (೨)ಶಂಕರಾನಂದ ತತ್ವ (೧೯೩೪; ೧೯೬೮); (೩)ವೇದಾಂತ ಜ್ಞಾನ ರತ್ನಪ್ರಭಾ (ಐದನೆಯ

ಒಂದಾಗುವ ಧ್ಯಾನಸಂವಿಧಾನವನ್ನು (methodology of meditation) ವಿವರಿಸಿರುವನು. ಈ ವಿಧಾನ ಗುರುವಿನ ಪಾದಸೇವೆಯಿಂದ ಮಾತ್ರ ದೊರಕತಕ್ಕದ್ದು. ಗುರುವಿನ ಉಪದೇಶವಿಲ್ಲದೆ ಪರತತ್ವಜ್ಞಾನ ಸಿದ್ಧಿಯಾಗದು. ಧ್ಯಾನ ವಿಧಾನದ ನಾಲ್ಕು ಮುಖ್ಯ ಲಕ್ಷಣಗಳು: "ಮೌನ ಹಿಡಿದು, ಮುದ್ರೆ ಬಲಿದು, ಜ್ಞಾನಜ್ಯೋತಿಯೊಳಗೆ ನಲಿದು, ಸ್ವಾನುಭವಾಮೃತವ ಸವಿದು, ಗುರುಚರಣ..." (ತ್ರಿಮಾತ್ರಾ ಗಣಗಳ ಲಯವನ್ನು ಇಲ್ಲಿ ಕಾಣಬಹುದು). ಪರತತ್ವಜ್ಞಾನ ಸಿದ್ಧಿಯಾದ ಮೇಲೆ, ಆತ್ಮಜ್ಞಾನವನ್ನು ಬಲಿಯಿಸಿಕೊಳ್ಳುವುದಕ್ಕೂ ಗಳಿಸಿದ ಜ್ಞಾನಾನುಭವವನ್ನು ಜನತೆಯಲ್ಲಿ ಬಿತ್ತರಿಸುವುದಕ್ಕೂ ಅನುವಾಗುವಂತೆ, "ಪರತತ್ತ್ವ ತಿಳಿದು, ಸಾಧುರ ಸಂಗಿಯಾಗೊ ನೀ" ಎಂದು ಸಂತ ಹೇಳುತ್ತಾನೆ.[೩೮] "ಕಲ್ಲು ಮೆತ್ತಗೆ ಮಾಡಿಕೊಳ್ಳಣ್ಣ" ಎಂಬ ರಚನೆಯಲ್ಲಿ ನಿಂಬರ್ಗಿಯ ಸಂತನ ಕವಿತಾ ಶಕ್ತಿ ಮತ್ತು ಅನುಭಾವಸಿದ್ಧಿ ಒಂದೆಡೆ ಸಂಗಮಿಸಿರುವುದನ್ನು ಕಾಣಬಹುದು. ಪಾಷಾಣದಂತಹ ಹೃದಯವನ್ನು ಮೃದು ಮಾಡಿಕೊಳ್ಳದಿದ್ದಲ್ಲಿ ಅಧ್ಯಾತ್ಮಿಕ ಜೀವನಕ್ಕೆ ಪ್ರವೇಶ ದೊರಕದೆಂದು ಈ ಪಲ್ಲವಿಯ ಧ್ವನಿತಾರ್ಥ. ಕಲ್ಲನ್ನು ಮೆದುಮಾಡುವುದು, ಒಡೆಯುವುದು ಹೇಗೆ? ಅಲ್ಲಮಪ್ರಭುವಿನಂತಹ ಆಚಾರ್ಯನನ್ನು ಮೊರೆಹೋಗಬೇಕು. ಏಕೆಂದರೆ, "ಅಲ್ಲಮಪ್ರಭು ಶಿಲೆಯ ಒಡೆದು ಸೆಲೆಯ ತೆಗೆದ." ಆಗ ಅನುಭವಾಮೃತವು ಚಿಲುಮೆ ಚಿಮ್ಮುವುದು. ಇಂಥ ಧ್ಯಾನಕಾಲದಲ್ಲಿ ಭಗವಂತನು ಕಲ್ಪವೃಕ್ಷವಾಗಿಯೋ ಪರುಷಮಣಿಯಾಗಿಯೋ ಮೈದೋರುವನು; ಸಕಲ (ಆಧ್ಯಾತ್ಮಿಕ) ಇಷ್ಟಾರ್ಥಗಳೂ ಆಗ ಕೈಗೂಡುವುವು. ಅನುಭಾವಿಯ ಈ ಸ್ಥಿತಿಯಲ್ಲಿ, "ನೀರು ನೀರು ಕೂಡಿದ ಬಳಿಕ ಭೇದಭಾವಗಳ್ಯಾಕ ಬೇಕೊ?" ಎಂದು ಪ್ರಶ್ನಿಸುತ್ತಾನೆ ಸಂತ.[೩೯] "ನೆಲ್ಲು ಕುಟ್ಟೋಣು ಬಾರಮ್ಮ" ಎಂಬ ಇನ್ನೊಂದು ಶ್ರೇಷ್ಠವಾದ ಕೃತಿಯಲ್ಲಿ, ಬತ್ತವನ್ನು ಕುಟ್ಟಿ ಹೊಟ್ಟು ತೆಗೆದು ಅಕ್ಕಿಯನ್ನು ಬೇರ್ಪಡಿಸಿ ಒಲೆಯ ಮೇಲಿಟ್ಟು ಪಾಯಸ ಮಾಡಿ ಎಲ್ಲರೊಂದಿಗೆ ಅದನ್ನು ಸವಿಯಬೇಕು ಎಂಬ ಸಂಕೀರ್ಣಸ್ವರೂಪದ ಪಾಕರೂಪಕದ ಮೂಲಕ ಅಂತರಂಗ ಬಹಿರಂಗ ಶೋಧನೆಮಾಡಿ ಆಧ್ಯಾತ್ಮಿಕ ಅನುಭವದ ಆನಂದವನ್ನು ಸಾಧಕರೆಲ್ಲರೂ ಕಲೆತು ಆಸ್ವಾದಿಸುವ ಬಗೆಯನ್ನು ತಿಳಿಸಿದೆ.[೪೦]

ಭಗವಂತಪ್ಪ ಒಬ್ಬ ಬಡ ಬ್ರಾಹ್ಮಣ. ಈತನ ಕಾಲ ಸು.೧೯೨೦ ಎಂದು ಇಟ್ಟುಕೊಳ್ಳಬಹುದು. ೧೯೪೬ ರ ವರೆಗೂ ರಾನಡೆಯವರ ಜೊತೆಯಲ್ಲಿದ್ದನು. ಉಮಡಿಯ ಸಂತನ ಶಿಷ್ಯ ಈತ. ಎಂದಮೇಲೆ, ಉಮಡಿ ಸಂತನ ಕಾಲವನ್ನು ೧೯ನೆಯ ಶತಕದ ಉತ್ತರಾರ್ಧ ಎಂದು ಇಟ್ಟುಕೊಳ್ಳಬಹುದು. ಈತನ ಕೃತಿಗಳು

ಪಾಲ ಶಿವರಾಮ ನಾಮಕ ಶಂಕರದಾಸ ವಿರಚಿತ ಪರಮಾರ್ಥ ಸಾರ." ಈ ಕೃತಿಯ ಪ್ರಾರಂಭದಲ್ಲಿ "ಜಯತು ಗುರು ಶಂಕರಾನಂದ ಯೋಗೀಂದ್ರ" ಎಂದೂ, ಕೊನೆಯಲ್ಲಿ "ಪರಮಾರ್ಥ ಸಾರದರ್ಥವನು ತಿಳಿದವನು। ಗುರು ಶಂಕರಾರ್ಯನೊಳಗೆರಕನಾಗುವನು" ಎಂದು ಹೇಳಿರುವುದು, ಶಿವರಾಮ ಶಾಸ್ತ್ರಿಗಳಿಗೆ 'ಶಂಕರಾರ್ಯ' ಅಥವಾ 'ಶಂಕರಾನಂದ' ಎಂಬ ಗುರು ನಿಜವಾಗಿಯೂ ಇದ್ದಿರಬಹುದೆಂಬ ಊಹೆಗೂ ಆಸ್ಪದವೀಯುತ್ತದೆ. ಇದಿಷ್ಟು ಹೊರತಾಗಿ ಅವರ ಜೀವನ ವೃತ್ತಾಂತ ವಿವರಗಳೇನೂ ಅವರ ಕೃತಿಗಳಿಂದ ತಿಳಿದು ಬರುವುದಿಲ್ಲ.

ಶಿವರಾಮಶಾಸ್ತ್ರಿಗಳ ಕಾಲದ ವಿಚಾರವಾಗಿ ಊಹೆ ಮಾಡಲು ಅವಕಾಶವಿದೆ: 'ಶಂಕರಾನಂದ ತತ್ವ' ಎಂಬ ಪದಗಳ ಸಂಕಲನದ ಮೂರನೆಯ ಪದದಲ್ಲಿ – "ಶ್ರಿಮದದ್ವೈತ ಸದ್ಗುರು ಪರಂಪರೆಯ ನಾಮ ಪ್ರೇಮದಿಂ ಪೇಳ್ವೆ" ಎಂದು ತಿಳಿಸಿ, "ಶ್ರೀ ಮಹಾದೇವನಿಂ" ಪ್ರಾರಂಭಮಾಡಿ ವಿಜಯನಗರ (ವಿದ್ಯಾನಗರ)ವನ್ನು ಸ್ಥಾಪಿಸಿ ಬುಕ್ಕನಿಗೆ ಪಟ್ಟವನ್ನು ಕಟ್ಟಿ ವಿದ್ಯಾರಣ್ಯ ಎಂಬ ಸಾರ್ಥಕ ನಾಮವನ್ನು ಪಡೆದ ವಿದ್ಯಾರಣ್ಯ ಮುನಿಯವರೆಗೆ ಶ್ರೀ ಶೃಂಗೇರಿ ಮಠದ ಗುರು ಪರಂಪರೆಯನ್ನು ನಿರೂಪಣೆ ಮಾಡಿ, "ಈತನಿಂ ಮುಂದಕಿಪ್ಪತ್ತೈದು ತಲೆಗಳೆದು ಪೂತಮಾಯ್ತಿದರಿಂದಲೀ ಧರಾತಳವು" ಎಂದು ಹೇಳಿರುವುದರಲ್ಲಿ ಶಾಸ್ತ್ರಿಗಳ ಕಾಲದ ಸುಳಿವು ಮಿಂಚುತ್ತದೆ. ವಿದ್ಯಾರಣ್ಯ ಮುನಿಗಳಿಂದ ೨೫ ತಲೆ ಎಂದರೆ ಈಗ ಶ್ರೀ ಶೃಂಗೇರಿ ಪೀಠಸ್ಥ ಜಗದ್ಗುರುಗಳವರೆಗೆ ಕಾಲವ್ಯಾಪ್ತಿ ಸಾಗಿಬರುತ್ತದೆ. ಶಾಸ್ತ್ರಿಗಳು ತಲೆಗಳ ಲೆಕ್ಕ ಹಿಡಿದಿರುವುದರಲ್ಲಿ ಒಂದು ಅಧಿಕವಾಗಿರುವಂತೆ ತೋರುತ್ತದೆ. ಆದ್ದರಿಂದ, ಬ್ರಹ್ಮೀಭೂತರಾದ ಶ್ರೀ ಚಂದ್ರಶೇಖರ ಭಾರತಿಯವರ ಕಾಲದಲ್ಲಿ ಶಾಸ್ತ್ರಿಗಳು ಇದ್ದರು ಎಂದು ಊಹಿಸಬಹುದು. ಶ್ರೀ ಚಂದ್ರಶೇಖರ ಭಾರತಿಯವರ ಕಾಲ, ೧೮೯೨–೧೯೫೪. ಅವರು ೧೯೧೩–೧೪ರಲ್ಲಿ ಸಂನ್ಯಾಸ ಸ್ವೀಕಾರ ಮಾಡಿದ್ದರು. ೧೯೩೪ರಲ್ಲಿ ಅಚ್ಚಾದ 'ಶಂಕರ ಬೋಧಾಮೃತ'ದ ಮೇಲು ಹೊದಿಕೆ ಹಾಳೆಯ ಹಿಂಬದಿಯಲ್ಲಿ 'ಶಂಕರಾನಂದ ತತ್ವ'ದ ಹೆಸರೂ ಶಾಸ್ತ್ರಿಗಳ ಇತರ ಅಚ್ಚಾದ ಕೃತಿಗಳ ಹೆಸರುಗಳೂ ಪಟ್ಟಿಯಲ್ಲಿ ಸೇರಿವೆ. ನಮಗೆ ತಿಳಿದುಬಂದ ಐತಿಹ್ಯದ ಪ್ರಕಾರ ಶ್ರೀ ಚಂದ್ರಶೇಖರ ಭಾರತಿಯವರ ಹಿಂದಿನ ಜಗದ್ಗುರುಗಳಾದ ಶ್ರೀ ನೃಸಿಂಹ ಭಾರತಿಯವರ ಕಾಲದಲ್ಲಿ ಶಾಸ್ತ್ರಿಗಳು ಸಂಪ್ರದಾಯಕ್ಕೆ ವಿರುದ್ಧವಾಗಿ ಬ್ರಾಹ್ಮಣರಲ್ಲದವರಿಗೂ ವೇದಾಂತ ಪ್ರವಚನ ಮಾಡುತ್ತಿದ್ದು, ಕೆಲವು ಬ್ರಾಹ್ಮಣ ವರ್ಗಗಳ ಆಗ್ರಹಕ್ಕೆ ಪಾತ್ರರಾದರಂತೆ. ಶಾಸ್ತ್ರಿಗಳ ಕ್ರಾಂತಿಕಾರಿ ವರ್ತನೆಯ ಬಗೆಗೆ ಜಗದ್ಗುರುಗಳಿಗೂ ದೂರು ಹೋಯಿತು. ಜಗದ್ಗುರುಗಳು ಶಾಸ್ತ್ರಿಗಳನ್ನು

ಮುದ್ರಣ, ೧೯೫೦; ೧೯೬೮); (೪)ಶಂಕರಾನಂದ ಪದ್ಧತಿ (೧೯೩೪; ೧೯೬೮); (೫)ಶಂಕರಬೋಧಾಮೃತ (೧೯೩೪; ೧೯೬೮); (೬)ಶಂಕರಾನಂದ ಕಂದ (೧೯೬೮); (೭)ಪರಮಾರ್ಥ ಸಾರ (೧೯೬೮); (೮)ಮುಕ್ತಿಮಾರ್ಗಪ್ರದೀಪಿಕೆ (೧೯೬೮); (೯)ಸಂನ್ಯಾಸಿ ಲಕ್ಷಣ (೧೯೬೮); (೧೦)ಬ್ರಹ್ಮಾನಂದ ಬೋಧೆ (೧೯೬೮), ಪ್ರಾಯಿಕವಾಗಿ ಎಲ್ಲವೂ ಅದ್ವೈತ ವೇದಾಂತವನ್ನೂ ಆ ತತ್ವಕ್ಕೆ ಅನುಗುಣವಾದ ನೈಷ್ಠಿಕ ಜೀವನಕ್ಕೆ ಅಗತ್ಯವಾದ ನೀತಿ ನಿಯಮಗಳನ್ನೂ ಹಾಡು ಮತ್ತು ಪದ್ಯರೂಪಗಳಲ್ಲಿ ಪ್ರತಿಪಾದಿಸುತ್ತವೆ.

ಮೇಲ್ಕಂಡ ಗ್ರಂಥಗಳಲ್ಲಿ ೧೯೩೪ಕ್ಕಿಂತ ಹಿಂದಿನ ಮುದ್ರಣಗಳಾವುವೂ ಉಪಲಬ್ಧವಿಲ್ಲ; ೧೯೬೮ನೆಯ ವರ್ಷದಲ್ಲಿ ಮುದ್ರಿತವಾದವೇ ಅತ್ಯಂತ ಈಚಿನ ಮುದ್ರಣಗಳು. 'ವೇದಾಂತ ಜ್ಞಾನ ರತ್ನಪ್ರಭಾ' ಆರನೆಯ ಮುದ್ರಣ ಎಂಬುದನ್ನು ಗಮನಿಸಿದರೆ, ಪ್ರತಿಯೊಂದು ಗ್ರಂಥವೂ ಎರಡು ಮೂರು ಸಲಕ್ಕಿಂತ ಹೆಚ್ಚು ಸಲ ಮುದ್ರಣಗೊಂಡಿರಬೇಕು. ಬೆಂಗಳೂರು ಆಕಾಶವಾಣಿಯ ಮೂಲಕ ಪ್ರಸಾರವಾಗುವ 'ಶಂಕರಾನಂದರ ತತ್ವಪದಗಳು' ವೇದಾಂತ ಶಿವರಾಮ ಶಾಸ್ತ್ರಿಗಳವು ಎನ್ನುವ ಸಂಗತಿ ಬಹುಶಃ ಬಹು ಜನಕ್ಕೆ ತಿಳಿದಿರಲಾರದು; ಅವು 'ಜನಪದ ಸಾಹಿತ್ಯ' ವರ್ಗಕ್ಕೆ ಸೇರಿದವು ಎಂಬ ಭ್ರಮಾಕಲ್ಪನೆ ಕೆಲಮಟ್ಟಿಗೆ ನಿಜ. ಏಕೆಂದರೆ, ನಾವು ಕೇಳಿ ಬಲ್ಲ ಐತಿಹ್ಯವನ್ನೂ ಅವುಗಳ ಭಾಷಾಶೈಲಿಯನ್ನೂ ಗಮನಿಸಿದರೆ, ವೇದಾಂತದ ಗಹನ ತತ್ತ್ವಗಳನ್ನು ಪಾಮರಜನಕ್ಕೆ ತಿಳಿಯಹೇಳುವುದೇ ಶಾಸ್ತ್ರಿಗಳ ಉದ್ದೇಶ ಎನ್ನುವುದು ಸ್ಪಷ್ಟಪಡುತ್ತದೆ. ಇವರ ಕೃತಿಗಳು ಉದ್ದೇಶ ಮತ್ತು ಸ್ವರೂಪದಲ್ಲಿ ಕೆಲಮಟ್ಟಿಗೆ ಚಿದಾನಂದಾವಧೂತರ ಕೆಲವು ಕೃತಿಗಳನ್ನು ಹೋಲುತ್ತವೆ.

ಶಂಕರಾನಂದ, ಶಂಕರದಾಸ, ಎಂಬಿವು ಶಿವರಾಮಶಾಸ್ತ್ರಿಗಳ ಕೃತಿ ಮುದ್ರಿಕೆ. ಇದು ಗುರುವಿನ ಹಾಗೂ ಇಷ್ಟದೈವದ ಮುದ್ರಿಕೆಯೂ ಹೌದು. ಶಾಸ್ತ್ರಿಗಳು ಪ್ರತ್ಯಕ್ಷಗುರು ಯಾರನ್ನೂ ಪಡೆದಿದ್ದಂತೆ ಕಂಡುಬರುವುದಿಲ್ಲ. ಆದಿ ಶಂಕರಾಚಾರ್ಯರು ಮಹಾದೇವ ಶಂಕರನ ಅವತಾರ ಎಂಬ ನಂಬಿಕೆ ಇದೆಯಷ್ಟೆ. ಇವರು ಶಂಕರಾಚಾರ್ಯರನ್ನೇ ಗುರು ಎಂದು ಭಾವಿಸಿ ಗುರುವನ್ನೂ – ದೇವ ಶಂಕರನನ್ನೂ ಸಮೀಕರಿಸಿ, 'ಶಂಕರ' ಮುದ್ರಿಕೆಯನ್ನು (ಅಪರನಾಮವನ್ನು) ಧರಿಸಿರುವಂತೆ ಕಂಡುಬರುತ್ತದೆ. 'ಪರಮಾರ್ಥ ಸಾರ', 'ಶಂಕರಾನಂದ ಪದ್ಧತಿ', ಮುಂತಾದ ಕೃತಿಗಳಲ್ಲಿ ಸಮಾಪ್ತಿವಾಕ್ಯ ಒಂದೇ ರೀತಿಯಲ್ಲಿದೆ. 'ಪರಮಾರ್ಥ ಸಾರ'ದ ಸಮಾಪ್ತಿವಾಕ್ಯ ಹೀಗಿದೆ: "ಇತ ಶ್ರೀಮದಧ್ಯಾತ್ಮ ವಿದ್ಯಾಮೂರ್ತಿ ಜನನ ಮರಣ ಹರಣ ಪ್ರವೀಣ ಕೀರ್ತಿ ಶ್ರೀಮದ್ಗುರು ಶಂಕರ ಚರಣ ಕಮಲಪರಾಗ ಭೂಸುರ

ನೂಲುಗಳು। ಸರಿ ಸರಿ ನೀ ಮಾಡುವ ಭಕ್ತಿಗೆ। ಹುರಿವರು ನಿನ್ನೆಮನಾಳುಗಳು" ಎಂದಿರುವಲ್ಲಿ ಶುಷ್ಕ ಭಕ್ತಿಯ ವಿಡಂಬನೆ ಪರಿಣಾಮಕಾರಿಯಾಗಿ ವ್ಯಕ್ತಪಟ್ಟಿರುವುದು ಕಂಡುಬರುತ್ತದೆ. "ತಿಳಿಯದೆ ತತ್ವವ ಕಳೆಯದೆ ಮೋಹವ। ಸುಳಿಯದೆ ಸುಖದೊಳು। ಥಳಿಯೊಳು ಮುಳುಗುವುದ್ಯಾವ ಕರ್ಮವೋ"; "ಗಾತ್ರದೊಳಿಹ ನಿಜಸೂತ್ರವ ಕಾಣದೆ। ಪಾತ್ರೆಯ ತೊಳೆಯುತ ಮೂತ್ರದೊಳುರುಳುವುದ್ಯಾವ ಕರ್ಮವೊ" ಎಂದು ಬಗೆಬಗೆಯಲ್ಲಿ ನಿಜವಾದ ಭಕ್ತಿ ವೈರಾಗ್ಯಗಳಿಲ್ಲದ ಬಾಹ್ಯ ಕರ್ಮಗಳನ್ನು ಒಂದು ಪದದಲ್ಲಿ ಚುಚ್ಚುಮಾತುಗಳಿಂದ ವಿಡಂಬಿಸಿದೆ. ತತ್ವವಿಚಾರ ಪ್ರಕರಣದ ಹಲವು ಪದಗಳಲ್ಲಿ ಜ್ಞಾನದ ಪ್ರಾಧಾನ್ಯವನ್ನು ನಿರೂಪಿಸಲಾಗಿದೆ; ಆ ವಿಚಾರಕ್ಕೆ ಸಂಬಂಧಪಟ್ಟ ಕೆಲವು ವಿಡಂಬನಾತ್ಮಕ ಉಕ್ತಿಗಳು ಗಮನಾರ್ಹ; "ತನ್ನ ನಿಜವನು ತಿಳಿಯಲಾರದೆ ಭಿನ್ನಭಾವನೆಯಿಂದ ಕಲ್ಮರ ಮಣ್ಣು ಬೊಂಬೆಗಳನು ಪೂಜಿಸೆ। ಜನ್ಮಬಾಧೆಯು ತೊಲಗದು"; "ಕಂದ ಮೂಲವ ತಿಂದು। ನದಿಯೊಳು ಮಿಂದು। ಬೂದಿಯ ಧರಿಸಿ। ಪಿಟಿಪಿಟಿ। ಯೆಂದು ಮಂತ್ರವ ಜಪಿಸಿದರು ಭವಬಂಧವೆಂದಿಗು ಹರಿಯದು"; "ನದಿಯೊಳು ಮುಳುಗಿದರೇನುಂಟು। ಬಳಿಕದರಿಂ ನಡುಗುವ ಥಳಿಯುಂಟು". ಪರಬ್ರಹ್ಮನ ನಿರ್ಗುಣ ಸಗುಣ ಸ್ವರೂಪಗಳನ್ನು – "ಎಸೆವ ಕೈಕಾಲವನಿಗಿಲ್ಲ, ನೀ ಕಲ್ಪಿಸಿದೊಡೆ ಬ್ಯಾಡೆಂಬೋನಲ್ಲ" ಎಂಬ ಮಾತಿನಲ್ಲಿ ಸಮದೃಷ್ಟಿಯಿಂದ ಕಂಡಿದ್ದಾರೆ. ಆದರೂ, ಶಾಸ್ತ್ರಿಗಳ ಒಲವು ನಿರ್ಗುಣ ಬ್ರಹ್ಮದ ಕಡೆಗೇ: "ನಿರ್ಗುಣಾದ್ವಯ ವಸ್ತುವನು ಹರಿಭರ್ಗನಾವಮಾದಿಗಳ ಪೂಜಿಸುವರಿಗಪವರ್ಗವೆಂದಿಗು ದೊರೆಯದು" ಎಂಬುದು ಅವರ ನಿಲುವು. ಅವರು ಕಟ್ಟಾ ವರ್ಣಾಶ್ರಮ ಧರ್ಮ ವಿರೋಧಿ; ಜಾತಿಭೇದ ವಿರೋಧಿ; ದೇಹವೇ ನಾನು ಎಂಬ ದೃಷ್ಟಿಯಿಂದ ಕರ್ಮತತ್ವ, ಜಾತಿಕುಲ ಮುಂತಾದ ಸಂಕುಚಿತ ಭೇದ ಭಾವನೆಗಳು ಹೇಗೆ ಉಂಟಾಗುತ್ತವೆ; ದೇಹ ನಾನಲ್ಲ, ದೇಹದಿಂದ ಭಿನ್ನವಾದ ಆತ್ಮ ನಾನು ಎಂಬ ಜ್ಞಾನದಿಂದ ಅಖಂಡ ಬ್ರಹ್ಮಾನಂದ ಹೇಗೆ ಲಭಿಸುತ್ತದೆ, ಎಂಬ ಅದ್ವೈತದೃಷ್ಟಿಯ ಸ್ವರೂಪವನ್ನು ಬಹು ಮಾರ್ಮಿಕವಾಗಿ ತಿಳಿಸಿದ್ದಾರೆ ಈ ವೇದಾಂತಿ:

ಎಲೆ ದೇಹವೇ, ನಿನ್ನೊಳು ನಾ ಸೇರಲು । ಮುಳುಗಿಸಿಯೆನ್ನನು ನೀ ಬೆಳೆದೆ।
ಕಳೆಯಲು ನಿನ್ನನು ಘನಸುಖಮಯ ನಿರ್ಮಲನಾಗುತ ನಾ ಬೇರುಳಿದೆ॥

০ ০ ০ ০

ಕರೆಸಿಕೊಂಡು, "ನೀವು ಬ್ರಾಹ್ಮಣೇತರರಿಗೆ ವೇದಾಂತ ಪ್ರವಚನ ನಡಸುವುದು ಸಾಧುವೆ?" ಎಂದು ಕೇಳಿದರಂತೆ. ಅದಕ್ಕೆ ಶಾಸ್ತ್ರಿಗಳು, "ಹಾಗೆ ನಡಸುವುದು ತಪ್ಪೆಂದು ಯಾವ ಧರ್ಮಶಾಸ್ತ್ರವೂ ಹೇಳುವುದಿಲ್ಲ. ಆತ್ಮನಿಗೆ ಕುಲಗೋತ್ರಾದಿಗಳಾಗಲಿ, ಜಾತಿಭೇದಗಳಾಗಲಿ ಇರುವುದಿಲ್ಲ – ನ ಸ್ತ್ರೀ ಪುಮಾನ್, ನ ಚ ಜಾತಿಭೇದಃ ಎಂದು ಶಂಕರರೇ ಹೇಳಿರುವರು. ಆತ್ಮವಿಚಾರವನ್ನು ಕೇಳುವುದಕ್ಕೆ ವೈರಾಗ್ಯ ಸಂಪನ್ನರಾದ ಎಲ್ಲಾ ಮುಮುಕ್ಷುಗಳೂ ಅರ್ಹರು" ಎಂದರಂತೆ. ಶಾಸ್ತ್ರಿಗಳ ವಾದವು ತಪ್ಪೆಂದು ಹೇಳಲು ಗುರುಗಳಿಗೆ ಸಾಧ್ಯವಾಗಲಿಲ್ಲವಂತೆ. "ನೀವು ಅವರ ತಂಟೆಗೆ ಹೋಗಬೇಡಿ. ಅವರ ಕೆಲಸ ಅವರು ಮಾಡಿಕೊಳ್ಳಲಿ" ಎಂದು ದೂರಿತ್ತವರಿಗೆ ಗುರುಗಳು ಆದೇಶ ನೀಡಿದರಂತೆ. ಇದೇ ಕ್ರಾಂತಿಕಾರಿ ದೃಷ್ಟಿ ಶಾಸ್ತ್ರಿಗಳ ರಚನೆಗಳಲ್ಲಿ ವ್ಯಾಪಿಸಿಕೊಂಡಿರುವುದನ್ನು ನೋಡಿದರೆ, ಐತಿಹ್ಯದಲ್ಲಿ ಸ್ವಲ್ಪವಾದರೂ ನಿಜಾಂಶವಿರಬೇಕು ಎನ್ನಿಸುತ್ತದೆ. ಶಾಸ್ತ್ರಿಗಳು ಮುಲುಕನಾಡು (ತೆಲುಗು) ಬ್ರಾಹ್ಮಣರೆಂದೂ, ಚಾಮರಾಜೇಂದ್ರ ಒಡೆಯರವರ ಕಾಲದಲ್ಲಿ ಆದವಾನಿಯಿಂದ ಮೈಸೂರಿಗೆ ಬಂದು ನೆಲಸಿದರೆಂದೂ ತಿಳಿದುಬರುತ್ತದೆ. ಶಾಸ್ತ್ರಿಗಳವರು ತಕ್ಕಮಟ್ಟಿಗೆ ದೀರ್ಘಕಾಲ ಬದುಕಿದ್ದರೆಂದು ಇಟ್ಟುಕೊಂಡರೆ, ಅವರು ೧೯ನೆಯ ಶತಮಾನದ ಕೊನೆಯ ನಾಲ್ಕು ದಶಕಗಳಲ್ಲೂ ೨೦ನೆಯ ಶತಮಾನದ ಮೊದಲ ನಾಲ್ಕು ದಶಕಗಳಲ್ಲೂ ಜೀವಿಸಿದ್ದರೆಂದು ಊಹಿಸಬಹುದು.

## ಶಿವರಾಮಶಾಸ್ತ್ರಿಗಳ ಕೃತಿಗಳು:

**ಶಂಕರಾನಂದತತ್ವ:** ಈ ಚಿಕ್ಕ ಗ್ರಂಥದಲ್ಲಿ ಭಕ್ತಿ ವೈರಾಗ್ಯ ಪ್ರಕರಣ, ತತ್ವವಿಚಾರ ಪ್ರಕರಣ, ಅತಿ ತೀವ್ರತರ ಸಂಸ್ಕಾರ ಲಕ್ಷಣ, ಮಹಾಪೂಜಾ ಕ್ರಮ (ಸೀಸಪದ್ಯ), ಎಂಬ ವಿಷಯಾನುಗುಣವಾದ ನಾಲ್ಕು ಭಾಗಗಳಿವೆ. ಮೊದಲ ಭಾಗದಲ್ಲಿ, ಭಕ್ತಿ–ವಿರಕ್ತಿ–ಮುಮುಕ್ಷತ್ವ ಇವುಗಳ ಕಡೆಗೆ ಮನಸ್ಸು ಕೊಡದೆ ಸಂಸಾರದ ಜಂಜಡದಲ್ಲಿ ಸಿಲುಕಿ ತೊಳಲುವುದನ್ನು ವಿಡಂಬನಾತ್ಮಕವಾಗಿ ಖಂಡಿಸಿದೆ. "ಇನ್ನಾದರೀ ಜನ್ಮಕೆ। ಬೇಸರಿಕೆ ನಿನ್ನೊಳಗೆ ತೋರದೇಕೆ" ಎಂಬ ಪಲ್ಲವಿಯ ಪದದಲ್ಲಿ ಜೀವನನ್ನು ಕುರಿತು – "ನಿನ್ನ ಸುಡದಿರುವ ಸುಡುಗಾಡೇ ಇಲ್ಲ॥ ನೋಡಿದುದನೇ ನೋಡುವೆ। ತಿಂದು ತೇಗಾಡಿದುದನೇ ತಿನ್ನುವೆ। ಬೇಡಿದುದನೇ ಬೇಡುವೆ" ಎಂದಿರುವ ಮಾತಿನಲ್ಲಿ ಜೈನಪುರಾಣಗಳ ಭವಾವಳಿಯ ದೃಷ್ಟಿ ವಾಚ್ಯವಾಗಿದೆ. "ತರುಣಿಗೆ ಮುತ್ತಿನ ಮಾಲೆಗಳು। ಪುರಹರನಿಗೆ ಹತ್ತಿಯ

ಒಂದು ವಿಶ್ವರೂಪದರ್ಶನ ಮಾಡಿಸಿ, ಕಾವ್ಯಾನುಭವವನ್ನು ದೊರಕಿಸಿಕೊಡುತ್ತಾರೆ:

"ಶ್ರೀ ಸಚ್ಚಿದಾನಂದ ನಿತ್ಯನಿರ್ಮಲ ಪರಾಖಂಡ ವಸ್ತುವನು ಮೂಲವನು ಮಾಡಿ। ನಿರಘ ನಿರ್ಗುಣ ನಿತ್ಯನಿರುಪಮಿತ ನಿರ್ಮಾಯ। ನಿರತಿಶಯನೆಂದು ಧ್ಯಾನವನು ಮಾಡಿ॥ ಪೂರ್ಣಮಂತರ್ಬಹಿಃ ಪೂರ್ಣಮೂರ್ಧ್ವಂಚ ಪರಿಪೂರ್ಣಮಾದಾವಾಹನೆಯನು ಮಾಡಿ। ವತ್ಸರಾದ್ಯಂತ ಮಧ್ಯಾಂತರದಿ ವರ್ಷಿಸುವ ವರ್ಷಧಾರೆಯನು ಪಾದ್ಯವನು ಮಾಡಿ। ನಿರ್ಝರಕಾಸಾರವರ ನದೀನದ ಸಮುದ್ರಾದಿಗಳನಭಿಷೇಕ ಜಲವ ಮಾಡಿ। ಅಷ್ಟಿಷ್ಟು ಯೆನಲಾಗದಷ್ಟು ಗಜಾಧಿಷ್ಠಿತಾಷ್ಟ ದಿಕ್ಕುಗಳ ವೇಷ್ಟನವ ಮಾಡಿ। ಗಂಧಗುಣಾಧಾರ ಬಂಧುರಾ ಶೇಷ ವಸುಂಧರೆಯನೆಲ್ಲ ಗಂಧವನು ಮಾಡಿ। ತಾರಕಾಗ್ರಹರಾಶಿ ಪುಂಜರಂಜಿತ ಮಂಜುಳಾಕಾಶವನು ಪುಷ್ಪಮಾಲೆ ಮಾಡಿ॥ ಹರಿಹರ ಬ್ರಹ್ಮೇಂದ್ರ ಭೈರವವೀರ ಮೊದಲಾದ ನಾಮಗಳನಾಭರಣ ಮಾಡಿ। ಉತ್ಫುಲ್ಲ ಕುಸುಮಾಳಿ ಸೌರಭ ಸಂಭಾರ ಭರಿತ ಮಾರುತನ ಧೂಪವ ಮಾಡಿ। ತ್ರೇತಾಗ್ನಿ ಬಡಬಾಗ್ನಿ ದಾವಾಗ್ನಿಯೆಂಬ ಪಂಚಾಗ್ನಿ ಉರಿಗಳನು ದೀಪವನು ಮಾಡಿ। ವಿವಿಧ ಫಲಭಕ್ಷ್ಯ ಭೋಜ್ಯಂಗಳೊಳಗಿನ ಸಾರತರ ಮಹಾರಸವ ನೈವೇದ್ಯ ಮಾಡಿ। ಪ್ರಜ್ವಲಚಂದ್ರ ಭಾಸ್ಕರ ತಟಿದ್ಗಣ ದೀಪ್ತಿಜಾಲವನು ನೀರಾಜನವನು ಮಾಡಿ। ವಿವಿಧ ವರ್ಣಾಳಿಗಳನು ತಾಂಬೂಲ ಮಾಡಿ। ನೀನೇ ನಾನಾದೆನೆಂಬ ವಂದನೆಯ ನೀಡಿ। ವಿಪುಲ ಕೈವಲ್ಯವಿಂತೆಂಬ ಫಲವ ಬೇಡಿ। ಮುಕ್ತರಾಗುವರು ಗುರು ಶಂಕರನೊಳು ಕೂಡಿ॥"

ಸಾಧಾರಣವಾಗಿ ಎಲ್ಲ ಅನುಜಭಾವಿಗಳಲ್ಲೂ ಕಂಡುಬರುವ ಸತಿಪತಿ ಭಾವದ ಪ್ರಕಟನೆ ಶಾಸ್ತ್ರಿಗಳ ರಚನೆಗಳಲ್ಲೂ ಉಂಟು:

"ನೀರೆ ನೀ ತೋರೆ ನಾ ಕೋರುವ ವರನಾ, ಮೂರು ಗುಣಂಗಳ ಮೀರಿ ಬೆಳಗುವನ, ರಚಿಸಿಯೆಲ್ಲವನು ತಾ ಶುಚಿಯಾಗಿರುವನ, ವರಿಸಲು ಶ್ರುತಿಗನಿರ್ವಚನೀಯ ವರನ" ಎಂದು ಒಂದು ಹಾಡಿನಲ್ಲಿ ಬೇಡಿಕೊಂಡರೆ, "ಪರಿಣಯವು ಎನಗಾಯ್ತು ಮರಣವಿಲ್ಲದ ವರನ ವರಿಸಿ। ನಾ ನಿತ್ಯ ಮುತ್ತೈದೆಯಾದೆನು, ಸಖಿಯೆ, ಬಹು ಪುಣ್ಯದಿ" ಎಂಬ ಹಾಡಿನಲ್ಲಿ ಬ್ರಹ್ಮೈಕ್ಯ ಸಿದ್ಧಿಯ ಆನಂದವನ್ನು ವಿವಾಹರೂಪಕದಲ್ಲಿ ವ್ಯಕ್ತಪಡಿಸಿದ್ದಾರೆ.

'ಶಂಕರಾನಂದ ಪದ್ಧತಿ'ಯಲ್ಲಿ ೭೫ ಹಾಡುಗಳಿವೆ. ಗುರು ವಂದನ, ಗುರುವಿನ ಅಗತ್ಯ, ಗುರು ಮಹಿಮೆ, ಗುರುಸೇವೆ ಕೊನೆ ಮೊದಲಿಲ್ಲದಿರುವಿಕೆ, ಮುಂತಾಗಿ

ಎಂದಿಗು ಕುಂದನು ಹೊಂದದ ಬ್ರಹ್ಮಾನಂದದ ಯೋಗವು ಎನಗಾಯ್ತು।
ನಿಂದನ ಮದನ ಬಂಧನ ಸಂಧ್ಯಾವಂದನರೋಗವು ನಿನಗಾಯ್ತು॥

○ ○ ○ ○

ನಿರುಪಮ ನಿರ್ಗುಣ ನಿತ್ಯನಿರಾಶ್ರಯ ವರಚಿನ್ಮಾತ್ರನು ನಾನಾದೆ।
ಕುರುಡನು ಕುಂಟನು ಬಧಿರನು ಭಂಟನು ತಿರುಕನು ಮೂಗನು ನೀನಾದೆ॥
ಭೌತಿಕ ಪಾತಕವಿಲ್ಲದ ತ್ರಿಗುಣಾತೀತ ಶ್ರೇಷ್ಠನು ನಾನಾದೆ।
ಸೂತಕ ಬಂದರೆ ಕುಲದಲಿ ಕೂಡದ ಜಾತಿಭ್ರಷ್ಟನು ನೀನಾದೆ॥
ಕರ್ಮಕೆ ಸಿಲುಕದ ನಿಜಸುಖಪದವಿಯ ಧರ್ಮವು ಯೆನ್ನೊಳಗುಂಟಾಯ್ತು।
ಮರ್ಮವನರಿಯದೆ ಜಾತಿಗೆ ಕೊರಗುವ ಕರ್ಮವು ನಿನ್ನೊಳಗುಂಟಾಯ್ತು॥

○ ○ ○ ○

ಕುಲಚಲವೆಂಬೀ ಮೊಳೆ(ರೆ?)ಯಿಲ್ಲದ ನಿರ್ಮಲತನವೆನಗಾಯ್ತು।
ಹೊಲೆಯ ವಿಪ್ರನು ಶೂದ್ರನುಯೆಂಬುವ ಕುಲಶೀಲದ ಮೊಳೆ ನಿನಗಾಯ್ತು॥

ಆತ್ಮನಿಗೆ ಜಾತಿ ಕುಲಗಳ ಸೋಂಕಿಲ್ಲ; ಆ ಉಪಾಧಿಗಳೆಲ್ಲ ದೇಹಕ್ಕೆ ಅಂಟಿಕೊಂಡು ಬಂದಿವೆ. ತತ್ತ್ವತಃ ಎಲ್ಲರೂ ಸಮಾನರು ಎಂಬ ಅದ್ವೈತದ ನಿಲುವನ್ನು ಶಾಸ್ತ್ರಿಗಳು ಪರಿಣಾಮಕಾರಿಯಾಗಿ ಹೇಳಿದ್ದಾರೆ.

"ಜಯಗುಣಗುಣಗಂಧಾತೀತ ಜಯ ಜಯ ನಾಮಾಕೃತಿರಹಿತ। ಜಯ ನಿಗಮಾವಳಿ ವಿನುತ ಜಯ ಜಯ ಜಗದ್ಭರಿತ" ಎಂದು ಮೊದಲಾಗುವ 'ಉರುಟಣೆ ಹಾಡಿನಲ್ಲೂ' ವಿಷಯವನ್ನು –

ಜಾತಿಕುಲ ವರ್ಣಾಶ್ರಮಗಳೆಂಬುದೆಲ್ಲ। ಜಾತಮಾದೀ ತೋರ ತನುವಿನೊಳಗೆಲ್ಲ।
ಖ್ಯಾತಿಯಲಿ ಕಲ್ಪಿತವಿದೊಂದು ನಿಜವಲ್ಲ। ಆತ್ಮ ನೀನಿದರ ಸಂಪರ್ಕ ನಿನಗಿಲ್ಲ॥

ಎಂದು ಇನ್ನೂ ಸ್ಪಷ್ಟವಾಗಿಯೇ ಹೇಳಿದ್ದಾರೆ. ಅನೇಕ ದಶಕಗಳ ಹಿಂದೆಯೆ ಹೀಗೆಂದಿರುವುದು ಮಹತ್ವದ ಸಂಗತಿ.

"ಮಹಾಪೂಜಾಕ್ರಮ" ಎಂಬ ಕೃತಿಯಲ್ಲಿ ಶಾಸ್ತ್ರಿಗಳು ವಿರಾಡ್ರೂಪನಾದ ಪರಮಾತ್ಮನಿಗೆ ಸಲ್ಲಿಸಬೇಕಾದ ಪೂಜಾವಿಧಾನವನ್ನು ವರ್ಣಿಸುವಲ್ಲಿ ಓದುಗರಿಗೆ

ಬ್ರಹ್ಮನ ತೋರುವನೇ ಸದ್।ಬ್ರಾಹ್ಮಣನೆನಿಸುವನು ಮೃತ್ಯುಹರ ತಾನಪ್ಪಂ॥
ಬ್ರಹ್ಮನ ಕಾಣದೆ ವೇಷ। ಬ್ರಾಹ್ಮಣ್ಯನ ಪೊತ್ತು ತಿರುಗುವನು ನಿಲ್ಲುವನೇ॥
ಧನ್ಯತೆ ತನ್ನೊಳು ತೋರದೆ। ಚಿನ್ಮಯ ತಾನಾಗಿ ತಾನು ನಿಲ್ಲದೆ ಶಿವನೊಳ್॥
ಹೊನ್ನಿನ ಸಂಪತ್ತುಗಳಿಗೆ। ಸಂನ್ಯಾಸವು ಹೆಚ್ಚಿ ಜಗಕೆ ಬಂದಳು ಮಾರೀ॥
ಇಲ್ಲದಿರಲಾಸ್ತಿ ಮಠದೊಳ। ಗಿಲ್ಲದಿರಲ್ ಮಾನ್ಯ ವೃತ್ತಿ ಜಹಗೀರುಗಳಿ–॥
ನ್ನಿಲ್ಲದಿರಲ್ ಸಂಬಳಗಳು। ನಿಲ್ಲುವನಾರಲ್ಲಿ ತೊರೆದು ಸನ್ಯಾಸದಲಿ॥
ಹೊನ್ನಂ ಹೆಣ್ಣಂ ತನ್ನವ। ರೆನ್ನುವರಂ ಮರೆತು ಬೆರೆತು ಪರಶಿವಪದದೊಳ್।
ತನ್ನಾನಂದದಿ ರಮಿಸುವ। ಸಂನ್ಯಾಸದ ಗುರುಗಳಿರಲು ಸಂಕಟಮುಂಟೇ॥

ಇಂಥ ತೀವ್ರವಾದ ಅಭಿಪ್ರಾಯಗಳನ್ನು ಕೃತಿರೂಪದಲ್ಲಿ ಹೇಳಿರುವುದು ಮಾತ್ರವಲ್ಲದೆ ತಮ್ಮ ಪ್ರವಚನಗಳಲ್ಲೂ ಶಾಸ್ತ್ರಿಗಳು ಬೋಧಿಸುತ್ತಿದ್ದಿರಬೇಕು. ಇದರಿಂದಾಗಿ, ಸಮಕಾಲೀನ ಆಚಾರನಿಷ್ಠ ಬ್ರಾಹ್ಮಣ ವರ್ಗದೊಂದಿಗೆ ಅವರು ವಿರೋಧವನ್ನು ಕಟ್ಟಿಕೊಂಡಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಅಲ್ಲದೆ, ತಿಮ್ಮಪ್ಪದಾಸರ ಅದ್ವೈತದ ಭಾಗವತದೃಷ್ಟಿಗೂ ಸಗುಣ ನಿರ್ಗುಣೋಪಾಸನೆಗಳ ಸಮನ್ವಯ ದೃಷ್ಟಿಗೂ, ಸಗುಣ ಬ್ರಹ್ಮೋಪಾಸನೆಯನ್ನೂ ಕರ್ಮಾಚರಣೆಯನ್ನೂ ಖಂಡಿಸುವ ಶಾಸ್ತ್ರಿಗಳ ಅದ್ವೈತಕ್ಕೂ ಇರುವ ಸ್ಪಷ್ಟವಾದ ವ್ಯತ್ಯಾಸ ಗಮನಾರ್ಹ. ಈ ವಿಷಯದಲ್ಲಿ ಇನ್ನೂ ಹೆಚ್ಚಿನ ಪರಾಮರ್ಶೆಗೆ ಅವಕಾಶವಿದೆ.

**'ಪರಮಾರ್ಥಸಾರ'**ವು ಲಲಿತರಗಳೆಯ ಛಂದೋಲಯದ ೨೬೬ ದ್ವಿಪದಿಗಳನ್ನುಳ್ಳ ಲಲಿತ ಶೈಲಿಯ ಕೃತಿ. ನಿರ್ಮಲಾನಂದನೆಂಬ ಒಬ್ಬ (ಕಾಲ್ಪನಿಕ) ಮುನಿ ಶೀಲೆ ಎಂಬ ಹೆಸರಿನ ತನ್ನ ಅರ್ಧಾಂಗಿಗೆ ಪರಬ್ರಹ್ಮನ ಸ್ವರೂಪವನ್ನು ತಿಳಿಯ ಹೇಳಿದ ರೀತಿಯಲ್ಲಿ ಈ ದೀರ್ಘ ತಾತ್ವಿಕ ಕವಿತೆ ಮೂಡಿ ಬಂದಿದೆ. "ತನುವಿನೊಳು ತನುವು ಜನಿಸುವ ಚಿತ್ರವೆಂತು। ಘನವಾದ ಚೈತನ್ಯವದಕೆಲ್ಲಿ ಬಂತು?... ಮಲಮೂತ್ರ ಮಾಂಸರೇತೋರುಧಿರ ಬೃಂದ। ಇದರ ರೂಪವನು ನೋಡಲೆನಗೆ ಭಯವಾಯ್ತು। ಇದನಾವ ತೆರದಿಂದ ನಾ ಕಳೆಯಬೇಕು? ಅದನೀಗ ಕೃಪೆಮಾಡಿ ನೀ ತೋರಬೇಕು" ಎಂದು ಸತಿ ಕೇಳಿದ ಪ್ರಶ್ನೆಗೆ ಪತಿಯಾದ ಮುನಿ ವಿಸ್ತಾರವಾಗಿ ಉತ್ತರಿಸುತ್ತಾನೆ.

**ವೇದಾಂತ ಜ್ಞಾನ ರತ್ನಪ್ರಭಾ** – ಇದು ಒಂದು ಗದ್ಯ ಪ್ರಬಂಧ, ತಿಳಿಯಾದ ಗದ್ಯದಲ್ಲಿ, ವೇದಾಂತ ಜ್ಞಾನದ ಸಾರವನ್ನು ಭಟ್ಟಿಯಿಳಿಸಿ ಕೊಟ್ಟಿದ್ದಾರೆ. ಮೇಲೆ ಗಮನಿಸಿದ ಕೃತಿಯಲ್ಲೂ ಈ ಕೃತಿಯಲ್ಲೂ ವಿಡಂಬನೆಯ ಸೋಂಕೂ ಇಲ್ಲ;

ಗುರುಪರವಾಗಿರುವ ಹಲವು ಹಾಡುಗಳು ಅಧ್ಯಾತ್ಮ ಸಾಧನೆಯಲ್ಲಿ ಗುರುವಿನ ಮಹತ್ವವನ್ನು ಎತ್ತಿ ಹೇಳುತ್ತವೆ. "ಐದು ಸುತ್ತಿನ ಕೋಟೆಯ ಪುರಕನಾದಿಯಿಂ ತಾನರಸನಾಗಿ ಬಾಧೆಯಿಲ್ಲದೆ ಒಬ್ಬನೆ ನೆಲಸಿರುವ, ವಾದವಡಗಿದ ಜನರಿಗೆ ಕಾಣಿಸುವ" ಎನ್ನುವಂಥ ಶಾಸ್ತ್ರಸಮಯದ ಪರಿಭಾಷೆಯುಳ್ಳ ರಚನೆಗಳಲ್ಲಿ ಆತ್ಮನ, ಜೀವನ, ಸ್ವರೂಪವನ್ನು ತಿಳಿಸಿದೆ. ಕೆಲವು ಅರ್ಥಪೂರ್ಣ ಹೇಳಿಕೆಗಳು ತಾತ್ತ್ವಿಕ ಪ್ರಮೇಯಗಳನ್ನು ಮಾರ್ಮಿಕವಾಗಿ ತಿಳಿಸುತ್ತ, ಕವಿಯ ತಾತ್ತ್ವಿಕ ನಿಲುವನ್ನು ಪರಿಣಾಮಕಾರಿಯಾಗಿ ಪರಿಚಯ ಮಾಡಿಕೊಡುತ್ತವೆ; ಮೊದಲ ರಚನೆಯಲ್ಲಿ, "ಶರಣು ಹರಿಹರ ವಂದಿತ", "ಶರಣು ಭೇದ ಭಯಂಕರ", "ಶರಣು ದೃಗ್ವಶಂಕರ", "ಶರಣು ಶ್ರೀಗುರು ಶಂಕರ", "ತ್ಯಜಿಸು ಎಲೊ ಎರಡೆಂಬ ಮಾತನು" ಎಂಬ ಉಕ್ತಿಗಳಲ್ಲಿ ನಿರ್ಗುಣ ಪರಬ್ರಹ್ಮೋಪಾಸನೆಯಲ್ಲಿರುವ ವೀರ ನಿಷ್ಠೆ ವ್ಯಕ್ತಪಟ್ಟಿದೆ; ಈ ಸಂದರ್ಭದಲ್ಲೂ, ಬೇರೆಯೆಡೆಯಲ್ಲೂ, ("ಭಿನ್ನವೆಂಬುವ ನುಡಿ ಶೂನ್ಯವಾಯಿತು", "ಭೇದವಾದವ ಮಾಡಿದೊಡೆ ನಿ ಜಗದೊಳು ದನುಜ", ಇತ್ಯಾದಿ) ದ್ವೈತ ಸಿದ್ಧಾಂತವನ್ನು ಖಂಡಿಸುವ ದೃಷ್ಟಿಯಿದೆ. ಇವರು ಅಲ್ಲಲ್ಲಿ 'ಭವಿ', 'ಕರ್ಮ ಭವಿ' ಇತ್ಯಾದಿ ಮಾತುಗಳನ್ನೂ; 'ಹರಶರಣರನು ಕೂಡು', 'ಪ್ರಾಣಲಿಂಗ' 'ಭಾವಲಿಂಗ', ಮುಂತಾದ ಪ್ರಯೋಗಗಳನ್ನೂ ಬಳಸಿರುವುದನ್ನು ನೋಡಿದರೆ, ಇವರು ವೀರಶೈವದ ಕಡೆಗೆ ವಾಲುತ್ತಿರುವರೇನೋ ಎಂಬ ಸಂದೇಹವುಂಟಾಗುತ್ತದೆ. ಆಳವಾಗಿ ಪರಿಶೀಲಿಸಿದಾಗ, ಇವರು ಕೇವಲ ಬ್ರಹ್ಮವಾದಿಗಳೆಂಬುದು ಸ್ಪಷ್ಟಪಡುತ್ತದೆ.

'ವೇದಾಂತ ಶಂಕರ ಬೋಧಾಮೃತ' ಎಂಬ ಚಿಕ್ಕ ಗ್ರಂಥದಲ್ಲಿ ೧೩೦ ಕಂದಪದ್ಯಗಳೂ, 'ಶಾರ್ದೂಲವೃತ್ತ ಪಂಚಕ'ವೂ, 'ಇಂದ್ರಜಾಲ ವೃತ್ತ' ಎಂಬ ಛಂದಸ್ಸಿನ ೮ ಅಕ್ಷರ ವೃತ್ತಗಳೂ ಇವೆ. ಹಲಕೆಲವು ಪದ್ಯಗಳಲ್ಲಿ ಸೋಗಿನ ಜೀವನ ವಿಧಾನವನ್ನು ವಿಡಂಬಿಸುವ ರೀತಿ ಚುರುಕು ಮುಟ್ಟಿಸುವಂತಿದೆ. ವ್ಯಾಖ್ಯಾನದ ಅಗತ್ಯವಿಲ್ಲದ, ಸ್ವಯಂಸ್ಪಷ್ಟವಾಗಿರುವ ನಾಲ್ಕಾರು ಗಮನಾರ್ಹ ಪದ್ಯಗಳನ್ನು ಉದಾಹರಿಸಬಹುದು:

ಜನ್ಮವ ಕಳೆಯದ ಕರ್ಮಕೆ। ಧನ್ಯನು ನಾನೆಂದು ತಿಳಿದ ಪುರುಷನ ಪುಣ್ಯಂ॥
ಬಣ್ಣದ ಮಣ್ಣಿನ ಬೊಂಬೆಯ। ಹೆಣ್ಣೆನುತಾಲಂಗಿಸುವನ ಸುಖಮುಂ ವೊಂದೇ॥
ಸುಳ್ಳಿನ ಕಥೆಗಳ ಪುಣ್ಯವ। ಬಳ್ಳಗಳಿಂದಳೆದು ತುಂಬಿಕೊಂಡರು ಫಲವೇ–॥
ನುಳ್ಳ ನಿಜತತ್ವದ ಬೋಧೆಯ।ನೆಳ್ಳಿನ ಮೊನೆಯಷ್ಟು ಪಡೆದೊಡದು
ಬಹು ಭಾಗ್ಯಂ॥

## ಟಿಪ್ಪಣಿಗಳು

೧. ಹರಿದಾಸ ಮತ್ತು ಅನುಭಾವ ಕವಿ ಎಂಬ ವಿಂಗಡನೆ ಬಹು ಸ್ಥೂಲವಾದದ್ದು. ಅನುಭಾವಿ ಎನ್ನಬಹುದಾದ ಶರೀಫ್ ಸಾಹೇಬರು ಯಾವ ಕಾವ್ಯವನ್ನೂ ರಚಿಸಿಲ್ಲ. ಈ ಕಾಲದ ಇತರ ಕವಿಗಳು ಆರ್.ನರಸಿಂಹಾಚಾರ್ಯರ ಕವಿಚರಿತೆಯ ೩ನೆಯ ಸಂಪುಟದಲ್ಲಿ ಉಲ್ಲೇಖಗೊಳ್ಳುವಮಟ್ಟಿಗೆ ಗಣ್ಯರೆನಿಸಿದ್ದಾರೆ. ವಿಶಾಲವಾದ ಅರ್ಥದಲ್ಲಿ ಅವರ ಗದ್ಯಪದ್ಯ ರಚನೆಗಳು ಸಾಹಿತ್ಯವಾಗಬಹುದಷ್ಟೆ. ಕಾವ್ಯದ ಲೇಪವೂ ಇಲ್ಲದ ಕೃತಿಗಳಲ್ಲಿ ಅನುಭಾವದ ಅನುಸಂಧಾನ ಇರಲು ಶಕ್ಯವಿಲ್ಲವೆ, ಈ ಲಕ್ಷಣವನ್ನು ಗುರುತಿಸುವುದು ಹೇಗೆ, ಇದನ್ನು ಮುಂದೆ ವಿಚಾರಮಾಡಿದೆ.

೨. ಜಿ. ವರದರಾಜ ರಾವ್: "ಶ್ರೀಪಾದರಾಜರ ಕೃತಿಗಳು", ಪೀಠಿಕೆ, ಪು.xx

೩. ಅದರಲ್ಲಿಯೇ, ಪು.xxi

೪. ಅದೇ, ಪು.xx

೫. ಶ್ರೀ ವಿಜಯದಾಸರ (ಕ್ರಿ.ಶ.೧೬೮೨–೧೭೫೫) ಶಿಷ್ಯರಲ್ಲಿ ಒಬ್ಬರಾದ ವೇಣುಗೋಪಾಲದಾಸರ ಶಿಷ್ಯ ಪ್ರಶಿಷ್ಯರ ಪೀಳಿಗೆಗೆ ಸೇರಿದ ಎಮ್.ಆರ್.ಗೋವಿಂದರಾಯರು ಗುರುಗೋವಿಂದ ವಿಠಲಾಂಕಿತರು. ಇವರು ಬಹಳ ಪರಿಶ್ರಮವಹಿಸಿ, 'ಹರಿ ಭಕ್ತವಿಜಯ' ಎಂಬ ಎರಡು ಸಂಪುಟಗಳ ಗ್ರಂಥಗಳಲ್ಲಿ, "ಇತರರು ವಿಸ್ತಾರವಾಗಿ ಪ್ರತಿ ಸಾದಿಸಿಲ್ಲದ ಅನೇಕ ಹರಿದಾಸರ ಜೀವನ ವೃತ್ತಾಂತವನ್ನು ಮೊದಲ ಬಾರಿಗೆ ಆದಷ್ಟು ಸಮಗ್ರವಾಗಿ ಪರಿಚಯ ಮಾಡಿಕೊಡಲು ಪ್ರಯತ್ನಿಸಿರುತ್ತಾರೆ;" ಹೀಗೆ ಪರಿಚಯ ಮಾಡಿಕೊಟ್ಟಿರುವ ಹರಿದಾಸರ ಪೈಕಿ, ಒಂದು ಸಂಪುಟದಲ್ಲಿ ಉಕ್ತರಾದ ಕೆಲವು ಹರಿದಾಸರ ಸಂಬಂಧದ ಮಾಹಿತಿಗೆ ಆ ಗ್ರಂಥದಿಂದ ಬಹಳ ಉಪಕಾರವಾಗಿದೆ.

೬. ರಾ.ಸ್ವಾ.ಪಂಚಮುಖಿ: "ಹರಿದಾಸ ಸಾಹಿತ್ಯ', ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆ, ೧೯೫೨; ಪು.೫೦.

೭. ರಂ.ಶ್ರೀ.ಮುಗಳಿ; 'ಕನ್ನಡ ಸಾಹಿತ್ಯ ಚರಿತ್ರೆ', ೧೯೫೩, ಪು.೨೮೭.

೮. ಎಂ.ಆರ್.ಗೋವಿಂದರಾವ್ (ಗುರುಗೋವಿಂದ ವಿಠಲ); 'ಶ್ರೀ ಹರಿಭಕ್ತ ವಿಜಯ' (ಭಾಗ ೨); ೧೯೬೯; ಗುರುಕೃಪಾ ಗ್ರಂಥಮಾಲಾ, ಗುರು ಗೋವಿಂದ ನಿವಾಸ, ೧೪೨೩. ಕೃಷ್ಣಮೂರ್ತಿಪುರಂ, ಮೈಸೂರು–೪.

ಸರ್ವರಿಗೂ ಉಪಾದೇಯವಾಗುವಂತಿವೆ. ಗದ್ಯ ಶೈಲಿಯನ್ನೂ, ಪ್ರಬಂಧದ ಕೊನೆಯಲ್ಲಿ ದೃಷ್ಟಾಂತ ರೂಪದಲ್ಲಿ ವರ್ಣಿಸಿರುವ ಸರ್ಕಸ್ಸಿನ ಕಸರತ್ತುಗಳನ್ನೂ ಗಮನಿಸಿದರೆ ಐದನೆಯ ಮುದ್ರಣವನ್ನು ಕಂಡಿರುವ ಈ ಗ್ರಂಥವು ಬಲುಮಟ್ಟಿಗೆ ಈ ಶತಮಾನದ ಮೊದಲ ದಶಕಗಳಲ್ಲಿ ರಚಿತವಾಗಿರಬೇಕು ಎನ್ನಿಸುತ್ತದೆ.

ಶಿವರಾಮಶಾಸ್ತ್ರಿಗಳು ಪಾಮರಜನಕ್ಕೆ ಪ್ರವಚನ ಮಾಡುತ್ತಿದ್ದಿರಬಹುದು. ಅವರ ಕೃತಿಗಳಂತೂ ಪೇಟೆ ಪ್ರಕಾಶಕರ ಸ್ವಾಮ್ಯಕ್ಕೆ ಹೋಗಿ, ಅಸಂಖ್ಯಾತ ಮುದ್ರಣ ದೋಷಗಳಿಂದಲೂ ಇತರ ಸ್ಖಾಲಿತ್ಯಗಳಿಂದಲೂ ತುಂಬಿಹೋಗಿವೆ. ವಿದ್ವಾಂಸರಿಂದ ಪರಿಷ್ಕೃತವಾದ ಮುದ್ರಣಗಳು ಸಿದ್ಧವಾದರೆ, ವೇದಾಂತ ವಿಷಯಗಳಲ್ಲಿ ಆಸಕ್ತರಾದ ಕನ್ನಡ ಸಾಹಿತ್ಯಾಭಿಮಾನಿಗಳು ಅವುಗಳನ್ನು ಸ್ವಾಗತಿಸುವುದರಲ್ಲಿ ಸಂದೇಹವಿಲ್ಲ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶಾಸನೋಕ್ತ ಗುಣಗಳ್ಳ (ಅದ್ವೈತ ಮುನಿ)(೧೦೭೧) ನಿಂದ ಪ್ರಾರಂಭವಾಗಿ ಬಲುಮಟ್ಟಿಗೆ ಗುಪ್ತಗಾಮಿ ನದಿಯಂತೆ ಸದ್ದುಗದ್ದಲವಿಲ್ಲದೆ ಸಾಗಿ ಬಂದ ಮತ್ತು ಅದ್ವೈತ ಸಿದ್ಧಾಂತವನ್ನು ಸಾಹಿತ್ಯ ದೃಷ್ಟಿಯಿಂದ ಪ್ರತಿಪಾದಿಸುವ, ವಿರಳ ಗ್ರಂಥಗಳ ಪಂಕ್ತಿಯಲ್ಲಿ ಶಿವರಾಮಶಾಸ್ತ್ರಿಗಳ ಕೃತಿಗಳಿಗೆ ಗಮನಾರ್ಹ ಸ್ಥಾನವಿದೆ.

(೨೦–೪–೧೯೭೯)

ವಿವರಗಳಿಗೆ, ನೋಡಿ: ಡಾ॥ ವಿ.ರಾಘವನ್ ಅವರ The Number of Rasa-s, ೧೯೬೭, ಪು.೧೪೧–೧೪೩). ಶಿವ ಶರಣರಿಗಿಂತಲೂ ಬಲು ಹಿಂದೆಯೇ (ಕ್ರಿ.ಶ.೭–೯ನೆಯ ಶತಕ) ತಮಿಳು ನಾಡಿನಲ್ಲಿ ಆಗಿಹೋದ ಆಳ್ವಾರುಗಳಲ್ಲಿ ಕೆಲವರ ಭಕ್ತಿಯಲ್ಲಿ ಈ ಸತಿ–ಪತಿ (ಅಥವಾ ಪ್ರಿಯ–ಪ್ರಿಯೆ) ಭಾವದ ಆವಿಷ್ಕಾರವನ್ನು ಕಾಣಬಹುದು. "ಭಗವಂತನನ್ನು ಪ್ರಿಯನೆಂದು ಭಾವಿಸಿ ಪ್ರೇಯಸಿಯ ಭಾವವನ್ನು ಒಳಗೊಂಡ ಭಕ್ತಿ ಒಂದು ರೀತಿಯದು. ಈ ರೀತಿಯ ಮಧುರ ಭಕ್ತಿ ಭಾವ ನಮ್ಮಾಳ್ವಾರರ ಕೃತಿಗಳಲ್ಲಿ ಸ್ಪಷ್ಟ ರೂಪವನ್ನು ತಾಳಿದೆ." (ಎಂ.ಯಾಮುನಾಚಾರ್ಯ: 'ಆಳ್ವಾರರುಗಳು', ಮೈಸೂರು, ೧೯೪೨; ಪು.೪೩). (ಈ ಶೃಂಗಾರಭಕ್ತಿ ಸ್ವರೂಪವನ್ನು ರಾ.ಸ್ವಾ.ಪಂಚಮುಖಿ ಅವರು 'ಹರಿದಾಸ ಸಾಹಿತ್ಯ'ದಲ್ಲಿ – ಪು.೯೦–೯೩ – ಪ್ರಸ್ತಾವಿಸಿದ್ದಾರೆ. ಆದರೆ ಯಾವಲ್ಲಿಯೂ ಶೃಂಗಾರಭಕ್ತಿಯ ಉದಾಹರಣೆಯನ್ನು ಎತ್ತಿಕೊಟ್ಟಿಲ್ಲ)

೯. ನಿಜಗುಣರ ತಾತ್ತ್ವಿಕ ನಿಷ್ಠೆಯ ಬಗೆಗೆ ಭಿನ್ನಾಭಿಪ್ರಾಯಕ್ಕೂ ಅವಕಾಶವಿದೆ. "'ಇಂತುಪಾಧಿಗೆ ಸತ್ಯ। ವೆಂದು ಘಟಿಸುವುದು ವೇ। ದಾಂತ ಮತದಲ್ಲಿ ಪೇಟ್ದಿಂತೆ ಸರ್ವಮಂ। ಭ್ರಾಂತಿಮಯವೆಂದು ತಿಳಿ ಪುತ್ರ', 'ಅದ್ವೈತ ತತ್ವವನು ಪ್ರಕಟಿಸುವೆನು ಬೋಧಗತಿಯಿಂದ' ಎಂಬಂಥ ಕವಿಯ ನಿಸ್ಸಂದಿಗ್ಧವಾದ ಹಲವು ಹೇಳಿಕೆಗಳಿಂದಲೇ ನಿಜಗುಣರು ವೀರಶೈವ ನಿಷ್ಠರಾದರೂ ಅದ್ವೈತ ತತ್ತ್ವದಲ್ಲಿ ಅಚಲವಾದ ಶ್ರದ್ಧೆಯುಳ್ಳವರು ಎಂಬುದು ಸ್ವಯಂ ವೇದ್ಯ" ಎಂಬುದು ಒಂದು ಅಭಿಪ್ರಾಯ (ಎಂ.ವಿ.ಸೀತಾರಾಮಯ್ಯ: 'ಶಾಸ್ತ್ರಸಾಹಿತ್ಯ', ಪು.೨೧೮). ಇನ್ನೊಂದು ಅಭಿಪ್ರಾಯ ಹೀಗಿದೆ:"ನಿಜಗುಣರು ವಿಶೇಷವಾಗಿ ಅದ್ವೈತ ವೇದಾಂತಕ್ಕೆ ಸಂಬಂಧಿಸಿದ ಗ್ರಂಥಗಳನ್ನು ರಚಿಸಿದ್ದರೂ ಅವರು ಶಿವಾದ್ವೈತ ಪಂಥಕ್ಕೆ ಸೇರಿದವರು." ('ನಿಜಗುಣಶಿವಯೋಗಿ ಹಾಗೂ ಅವರ ಕೃತಿಗಳು'; ಕರ್ನಾಟಕ ವಿಶ್ವವಿದ್ಯಾಲಯ, ೧೯೬೯, ಪು.೬)

೧೦. ರಂ.ಶ್ರೀ.ಮುಗಳಿ; 'ಕನ್ನಡ ಸಾಹಿತ್ಯ ಚರಿತ್ರೆ' (೧೯೫೩), ಪು.೩೨೩.

೧೧. ಎಂ.ವಿ.ಸೀತಾರಾಮಯ್ಯ (ಸಂ.); 'ಅರ್ಚನ' (೧೯೭೧) (ತಿಮ್ಮಪ್ಪದಾಸರ ಪೂಜಾ ವಿಧಾನ ಕೀರ್ತನೆಗಳು), ಪೀಠಿಕೆ, ಪು.ix.

೧೨. ಕುಂಭಕೋಣದ ಥಿಯಸಾಫಿಕಲ್ ಸೊಸೈಟಿಯ ಸದಸ್ಯರುಗಳಾದ ಕೆ.ನಾರಾಯಣಸ್ವಾಮಿ ಅಯ್ಯರ್ ಮತ್ತು ಆರ್.ಸುಂದರೇಶ್ವರ ಶಾಸ್ತ್ರಿ, ಬಿ.ಎ.

(ಈ ಗ್ರಂಥವನ್ನು ದೊರಕಿಸಿಕೊಟ್ಟು, ಹರಿದಾಸರ ವಿಚಾರವಾಗಿ ಕೆಲವು ಉಪಯುಕ್ತ ವಿವರಗನ್ನು ತಿಳಿಸಿದ ಡಾ॥ ಕೆ.ಗೋಕುಲನಾಥ ಇವರ ಉಪಕಾರ ಸ್ಮರಣೀಯ.) ಭೂವರಹ ವಿಠಲರಿಂದ ಹಿಡಿದು ಶ್ರೀವರ ವಿಠಲರವರೆಗಿನ ಹರಿದಾಸರ ಸಂಬಂಧವಾದ ವಿವರಗಳಿಗೆ 'ಹರಿಭಕ್ತ ವಿಜಯ'ಕ್ಕೆ ಲೇಖಕನು ಋಣಿಯಾಗಿದ್ದಾನೆ. ಗೋವಿಂದರಾಯರು ಮುದ್ದುಮೋಹನದಾಸರು ಹಾಗೂ ತಂದೆ ಮುದ್ದುಮೋಹನ ದಾಸರು ಇವರುಗಳ ವಿಚಾರವಾಗಿ ಪ್ರತ್ಯೇಕ ಗ್ರಂಥಗಳನ್ನು ರಚಿಸಿರುತ್ತಾರೆ.

೮a. ಶಿವಶರಣರ ಭಕ್ತಿಸಾಧನೆಯಲ್ಲಿ ಕಂಡುಬರುವ ಸತಿ–ಪತಿಭಾವ ವಿಷ್ಣುಭಕ್ತಿಯಲ್ಲಿಯೂ ಕಂಡುಬರುತ್ತದೆ. ಇದೇ ಇಬ್ಬರಿಗೂ ಸಮಾನವಾದ ಮಧುರಭಕ್ತಿ ಅಥವಾ ಶೃಂಗಾರಭಕ್ತಿ, ಭಕ್ತಿಯನ್ನೂ ನವರಸಗಳಿಂದ ಭಿನ್ನವಾದ ಒಂದು ರಸವೆಂದು ಮೊತ್ತಮೊದಲಿಗೆ ಪ್ರತಿಪಾದಿಸಿದವರು, 'ಭಾಗವತ ಮುಕ್ತಾಫಲದ' ಕರ್ತೃ ಬೋಪದೇವ (ಸು.೧೩ನೆಯ ಶತಮಾನದ ಮಧ್ಯಭಾಗ) ಮತ್ತು ಅದರ ಮೇಲೆ ವ್ಯಾಖ್ಯಾನವನ್ನು ('ಕೈವಲ್ಯದೀಪಿಕಾ') ಬರೆದಿರುವ ಹೇಮಾದ್ರಿ (ಅದೇ ಕಾಲದವನು). ಇವರೂ, ಇವರ ಅನುಯಾಯಿಗಳೂ, ನವರಸಗಳ ಜೊತೆಯಲ್ಲಿ ಹತ್ತನೆಯದೆಂದು ಭಕ್ತಿರಸವನ್ನು ವಿಸ್ತಾರವಾಗಿ ಪ್ರತಿಪಾದಿಸಿ, ಅದನ್ನು ಸ್ಥಾಪಿಸಲು ಪ್ರಯತ್ನಪಟ್ಟು ಯಶಸ್ವಿಗಳಾದರೆಂದೇ ಹೇಳಬೇಕು. ಭಕ್ತಿರಸವನ್ನು ಪ್ರಧಾನವನ್ನಾಗಿ ಮಾಡಿ, ಅದು ನವರಸಗಳ ರೂಪದಲ್ಲಿಯೂ ಪ್ರಕಟವಾಗುವ ಅಂಶವನ್ನು ಬೋಪದೇವನು ಹೀಗೆ ಹೇಳಿದ್ದಾನೆ: "ಸ ನವಧಾ ಭಕ್ತಃ। ಭಕ್ತಿ ರಸಸ್ಯೈವ ಹಾಸ್ಯ–ಶೃಂಗಾರ–ಕರುಣ–ರೌದ್ರ–ಭಯಾನಕ–ಭೀಭತ್ಸ–ಶಾನ್ತ–ಅದ್ಭುತ–ವೀರ–ರೂಪೇಣಾನು ಭಾವಾತ್." ಬಹುಶಃ ಮಧ್ವಾಚಾರ್ಯರ ಪ್ರಭಾವದಿಂದಾಗಿಯೇ ೧೩ನೆಯ ಶತಮಾನದ ಮಧ್ಯಭಾಗದಿಂದ ಬಂಗಾಳದಲ್ಲಿ ವೈಷ್ಣವ ಭಕ್ತಿ ಬಲವಾಗಿ ಬೇರೂರಿತು; ಚೈತನ್ಯ ದೇವನು ವೈಷ್ಣವ ಭಕ್ತಿ ಬಂಗಾಳದಲ್ಲಿ ವ್ಯಾಪಕವಾಗಿ ಹರಡುವಂತೆ ಮಾಡಿದನು. ಚೈತನ್ಯದೇವನ ಅನುಯಾಯಿಗಳಾದ ಅಲಂಕಾರಿಕರಲ್ಲಿ ಪ್ರಮುಖನಾದ ರೂಪಗೋಸ್ವಾಮಿ ಭಕ್ತಿರಸವನ್ನು ಎತ್ತಿಹಿಡಿದು, ಶೃಂಗಾರ, ಶಾಂತ, ದಾಸ್ಯ, ಸಖ್ಯ, ಮತ್ತು ವಾತ್ಸಲ್ಯ–ಈ ಐದು ರಸಗಳನ್ನು ಮುಖ್ಯ ಭಕ್ತಿ ರಸಗಳೆಂದು ಕರೆದನು. ದೈವ ಅಥವಾ ಭಗವಂತನಲ್ಲಿ ತೋರುವ ರತಿಯೆ (ಪ್ರೇಮವೆ) ಶೃಂಗಾರ ಭಕ್ತಿ ಅಥವಾ ಮಧುರ ಭಕ್ತಿ. (ಈ ವಿಚಾರದಲ್ಲಿ ಹೆಚ್ಚಿನ

ಪು.೯೧) ನೋಡಿದರೆ, ಭಾಗವತ ಧರ್ಮದ ಪ್ರಧಾನ ಲಕ್ಷಣವಾದ ಹರಿ (ವಿಷ್ಣು) ಭಕ್ತಿಯ ಸಗುಣೋಪಾಸನೆಯನ್ನೂ ಅದ್ವೈತದ ನಿರ್ಗುಣೋಪಾಸನೆಯನ್ನೂ ಸಮನ್ವಯಗೊಳಿಸಿ, ವೈಷ್ಣವ ಹರಿದಾಸ ಪಂಥದಿಂದ ಭಿನ್ನವಾದ 'ಭಾಗವತ ಹರಿದಾಸ' ಪಂಥವನ್ನು ಗೋಪಾಲಾರ್ಯರೋ ಅವರ ಶಿಷ್ಯರಾದ ಕೃಷ್ಣಯೋಗೀಂದ್ರರೋ ಪ್ರವರ್ತನಗೊಳಿಸಿರಬಹುದೆಂದು ತೋರುತ್ತದೆ.

೧೪. ಹೆಚ್ಚಿನ ವಿವರಗಳಿಗೆ, ಕವಿಚರಿತ್ರೆ, ಸಂ. III, ಪು.೧೨೭–೧೨೯ ನೋಡಿ. (ಈತನ ವಿಷಯವಾಗಿ ವಿಸ್ತಾರವಾಗಿ ವಿವೇಚನೆ ಮಾಡುವ ಅಗತ್ಯವಿದೆ. ಈತನ ಗ್ರಂಥಗಳು ಬಹುತರ ಅಪ್ರಕಟಿತ.)

೧೫. ಈ ತಾತ್ತ್ವಿಕ ದೃಷ್ಟಿಯನ್ನು ವೆಂಕಟದಾಸರು ತಮ್ಮ 'ಅಖಂಡಾನಂದ ಸ್ವರೂಪ ಪ್ರಕರಣ'ದಲ್ಲಿ (ಅಪ್ರಕಟಿತ; ಹಸ್ತಪ್ರತಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿದೆ) ಹೀಗೆ ವಿವರಿಸಿದ್ದಾರೆ: "... ದ್ವೈತವೆಂದರೆ ಮಾಯಾದಿ ಪ್ರಪಂಚ। ವಿಶಿಷ್ಟಾದ್ವೈತವೆಂದರೆ ಅದವಿಚಾರಿ[ಸಿ] ಶ್ರುತ್ಯರ್ಥಗಳಿಂ ನಿಶ್ಚೈಸುವ ಸಾಧನ। ಅದ್ವೈತವೆಂದರೆ, ಆ ಸಾಧನದಿಂ ಮೊದಲು ಆಭರಣದಂತೆ ತೋರಿದ ಸ್ವ[ರ್ಣ] ವಿಕಾರವ ಕರಗಿಸಿದಲ್ಲಿ ಘಟ್ಟಿಯೇ ಹ್ಯಾಗೋ ಹಾಗೆ ಸಾಧ್ಯವೆಂಬ ವಸ್ತುವು ತಾನೇಯಾಗಿ ಯಿವಿಷ್ಟೂ ತನ್ನಲ್ಲಿ ಕಲ್ಪಿತವಾದ್ದರಿಂ। ಪುಸಿ[ಯೆಂ]ದು ತದ್ವೃತ್ತಿಯನ್ನು ಕ[ಳೆ]ದು ತಾನ[ಪ್ಪು]ದೇ ಅದ್ವೈತವಾದ್ದರಿ ಈ ದ್ವೈತಾದ್ವೈತ ವಿಶಿಷ್ಟಾದ್ವೈತ ಮೂರಕ್ಕೂ ಯೇಕಾರ್ಥವೆಂದು ತಿಳಿವುದು। ಮತ್ತು ಮೂರೂ [ವೊಂ]ದೇಯೆಂಬುದಕ್ಕೆ ಆಕಾಶ ದೃಷ್ಟಾಂತದಿಂದ, [ಒಂ]ದು ಆಕಾಶವೇ – 'ಆಕಾಶಾದ್ವಾಯುಃ। ವಾಯೋರಗ್ನಿಃ। ಆಗ್ನೇರಾಪಃ। ಅದ್ಭ್ಯಃ ಪೃಧಿವೀ' ಎಂಬವಾಕ್ಯದಿಂ [ಒಂ]ದು ಆಕಾಶವೇ ಪರಂಪರಯಾ ಪೃಥ್ವ್ಯಾದಿಯೂ ತಾನೇಯಾಗಿ। ತತ್ಕರಣವೂ ಆಗಿ। ಯೇಕವಾಗಿ। ಪೃಥ್ವಾದಿ ಉಪಾಧಿಯಿಂದ ಅನೇಕವೂ ಆಗಿ। ಆ ತನ್ನ ಅಂಶದಿಂದಾದ ಉಪಾಧಿಗಳು ತಾನೇಯಾಗಿರುವಂತೆ [ಒಂ]ದು ಬ್ರಹ್ಮವೆ ದ್ವೈತಾದ್ವೈತ ವಿಶಿಷ್ಟಾದ್ವೈತ ಸಕಲವೂ [ಯೆಂ]ದು ತಿಳಿವುದು। ಮತ್ತು ಈ ಭೂತಗಳೇ ತಮ್ಮೊಳಗೆ ತಾವೇ [ಒಂ]ದಕ್ಕೊಂದು ಕಾರಣವಾಗಿ। [ಒಂ]ದಕ್ಕೊಂದು ಆಧಾರವಾಗಿ। [ಒಂ]ದರ ಲಯಕ್ಕೂ ಒಂದು ಕಾರಣವಾಗಿ ತಮಗೆ ತಾವೇ ಆಧಾರ ಆಧೇಯಗಳಾಗಿ, ಯೇಕಾನೇಕವಾಗಿಪ್ಪಂತೆಯೀ ಕರ್ಮಕಾಂಡ ಪ್ರಪಂಚ ಸಕಲ ಸಾಧನ ಸಾ[ಧ್ಯ] ದ್ವೈತಾದ್ವೈತ ವಿಶಿಷ್ಟಾದ್ವೈತ

ಎಂಬವರು 'ವಾಸುದೇವ ಮನನ'ವನ್ನು ಇಂಗ್ಲಿಷಿಗೆ ಭಾಷಾಂತರ ಮಾಡಿರುತ್ತಾರೆ. ಈ ಭಾಷಾಂತರಗೊಂಡ ಕೃತಿ ಅದೇ ಸಂಘದಿಂದ ೧೮೯೩ರಲ್ಲಿ ಪ್ರಕಟವಾಗಿರುತ್ತದೆ. ದೊಡ್ಡ ಬೆಲೆ ನಾರಾಯಣಶಾಸ್ತ್ರಿಗಳ ಕನ್ನಡ ಭಾಷಾಂತರ ೧೮೯೭ರಲ್ಲಿ ಪ್ರಕಟವಾಗಿದೆ.

೧೩. ತಿಮ್ಮಪ್ಪದಾಸರು ಸಂಸ್ಕೃತ, ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಗುರು ಪರಂಪರಾ ಸ್ತೋತ್ರರೂಪದ ಹಲವಾರು ಕೀರ್ತನೆಗಳನ್ನು ರಚಿಸಿರುತ್ತಾರೆ. ಇವು ಸದ್ಯದಲ್ಲಿ ಅಪ್ರಕಟಿತವಾಗಿದ್ದು, ಈ ಲೇಖಕನ ಬಳಿ ಇರುವ ಹಸ್ತಪ್ರತಿ ಒಂದರಲ್ಲಿ ಲಿಖಿತವಾಗಿವೆ. ಗೋಪಾಲಾರ್ಯರನ್ನು ಸ್ತುತಿಸಿದ ಮೇಲೆ ಅವರಿಗೆ ಮಂಗಳ ಹೇಳುವ ಕೀರ್ತನೆಯಲ್ಲಿ, "ಮಂಗಳಂ ಗೋಪಾಲ ಯತಿವರ್ಯ" ಎಂದು ಹೇಳುವ ಸಂದರ್ಭದಲ್ಲಿ – ಮಂಗಳಂ ಮಚ್ಚಿತ್ತ ವಸತಯೇ ಮಹನೀಯ **ಸುಮತಯೇ**" ಎಂದು ಹೇಳಿರುವಲ್ಲಿ '**ಸುಮತಿಃ**' ಎಂಬ ಪದಪ್ರಯೋಗವಿದೆಯಷ್ಟೆ. ಆರ್.ನರಸಿಂಹಾಚಾರ್ಯರ ಕರ್ಣಾಟಕ ಕವಿಚರಿತೆಯಲ್ಲಿ (ಸಂಪುಟ III, ೧೯೨೯, ಪು.೬೦–೬೧) 'ಗೋಪಾಲಾರ್ಯ ಯತಿಯ ಶಿಷ್ಯ' ಎಂದು ವ್ಯಕ್ತಪಟ್ಟಿರುವ ಗ್ರಂಥಕರ್ತನ ಹೆಸರು 'ಸುಮತಿ' ಇರಬಹುದು ಎಂದು ಆತನ 'ಸೊಬಗಿನ ಸೋನೆ' ಎಂಬ ಕೃತಿಯ ಪದ್ಯವೊಂದರ ಆಧಾರದಿಂದ ಊಹಿಸಿದ್ದಾರೆ. ತಿಮ್ಮಪ್ಪದಾಸರು ಗೋಪಾಲಾರ್ಯರನ್ನು ಸ್ತುತಿಸಿದ ಮೇಲೆ ಕೃಷ್ಣ ಯೋಗೀಂದ್ರನನ್ನು ಸ್ತುತಿಸಿರುವುದರಿಂದ, ಈ ಕೃಷ್ಣ ಯೋಗೀಂದ್ರರೇ ಗೋಪಾಲಾರ್ಯ ಶಿಷ್ಯರಿರಬಹುದೇ ಎನ್ನಿಸುತ್ತದೆ. ಗುರುವಿನ 'ಸುಮತಿ' ಎಂಬ ವಿಶೇಷಣವನ್ನು ಕೃಷ್ಣ ಯೋಗೀಂದ್ರರು ತಮ್ಮ ಅಪರನಾಮವಾಗಿ ಸ್ವೀಕರಿಸಿರಬಹುದು. ಗೋಪಾಲಾರ್ಯಶಿಷ್ಯ 'ಸುಮತಿ' (ಕೃಷ್ಣಯೋಗೀಂದ್ರ?)'ಜೀವೇಶ್ವರ ಸಾಂಗತ್ಯ' (೧೦೦ ಪದ್ಯಗಳು), 'ತತ್ವದ ಸೊಬಗಿನ ಸೋನೆ' (೬೭ ಪದ್ಯಗಳು), 'ತತ್ತ್ವ ಪದಗಳು' (ಹಾಡುಗಳು, ಕಂದ ಪದ್ಯಗಳು) ಎಂಬ ಮೂರು ಕೃತಿಗಳನ್ನು ರಚಿಸಿರುವುದಾಗಿ ಕವಿಚರಿತೆಯಿಂದ ತಿಳಿದು ಬರುತ್ತದೆ. "ಇವನ ಗ್ರಂಥಗಳೆಲ್ಲಾ ಗುರು ಶಿಷ್ಯ ಸಂವಾದ ರೂಪವಾಗಿ ಅದ್ವೈತ ವೇದಾಂತವನ್ನು ಬೋಧಿಸುತ್ತವೆ." 'ಜೀವೇಶ್ವರ ಸಾಂಗತ್ಯ'ದಲ್ಲಿನ – "ಹರಿಭಕ್ತ ಸಂಗದಿಂದ ಹರಿಕಥೆಗಳ ಕೇಳಿ। ನಿರುತ ನಿಷ್ಕಾಮ ಕರ್ಮಗಳ। ಹರಿಗರ್ಪಿತವಾಗಿ ಮಾಡುತ್ತ ಮನುಜರು। ದುರಿತಗಳನು ದಾಂಟುವರು" ಎಂಬ ಪದ್ಯವನ್ನು (ಕವಿಚರಿತೆ, III ,

ಹಸ್ತಪ್ರತಿಗಳಲ್ಲಿ ಸದಾಶಿವ ಬ್ರಹ್ಮೇಂದ್ರರು (ಸಂಸ್ಕೃತ), ಭದ್ರಾಚಲ ರಾಮದಾಸರು (ತೆಲುಗು), ನಿಜಗುಣ ಶಿವಯೋಗಿ, ಪುರಂದರದಾಸರು, ಶ್ರೀಪಾದರಾಯರು,ಕನಕದಾಸರು – ಇವರ ಹಲಕೆಲವು ರಚನೆಗಳು ಲಿಖಿತವಾಗಿವೆ. ಸಮಕಾಲೀನರಾದ ತ್ಯಾಗರಾಜರ ಒಂದು ಕೃತಿಯೂ ಕಂಡು ಬರುವುದಿಲ್ಲ. ಮುತ್ತುಸ್ವಾಮಿ ದೀಕ್ಷಿತರು, ಶ್ಯಾಮ ಶಾಸ್ತ್ರಿಗಳು, ಸ್ವಾತಿ ತಿರುನಾಳ್, ಇವರ ಕೃತಿಗಳೂ ಇಲ್ಲ. ಇದರಿಂದ, ಆ ವೇಳೆಗೆ ಈ ವಾಗ್ಗೇಯಕಾರರ ಕೃತಿಗಳು ಮೈಸೂರು ಪ್ರಾಂತದಲ್ಲಿ ಇನ್ನೂ ಪ್ರಾಚುರ್ಯಕ್ಕೆ ಬಂದಿರಲಿಲ್ಲ ಎಂದು ಹೇಳಬಹುದೆ?

೨೧. "... ತಿಮ್ಮಪ್ಪದಾಸರೂ (೧೭೭೦–೧೮೬೦) ತ್ಯಾಗರಾಜರೂ ಸಮಕಾಲೀನರು. ಇಬ್ಬರೂ ವಾಗ್ಗೇಯಕಾರರು, ದಾಸರು, ಕನ್ನಡಿಗರು. ತ್ಯಾಗರಾಜರು ತೆಲುಗರು. ಆದರೆ, ತ್ಯಾಗರಾಜರು ಹುಟ್ಟಿನಿಂದ ಸಂಗೀತ ಕಲಾಪ್ರವೃತ್ತಿಯುಳ್ಳವರು; ತಿಮ್ಮಪ್ಪದಾಸರಲ್ಲಿ ಕಲಾಪ್ರವೃತ್ತಿ ಅಷ್ಟಾಗಿ ಕಂಡುಬಾರದು. ಈ ಕಾರಣದಿಂದಲೇ ದಾಸರು ತಮ್ಮ ಪುರಂದರದಾಸಾದಿಗಳ ಕೀರ್ತನೆಗಳ ಧಾಟಿಯನ್ನು ಅನುಸರಿಸಿದ್ದಾರೆ. ಕೀರ್ತನೆಗಳಿಗೆ ರಾಗತಾಳಗಳ ನಿರ್ದೇಶವಿಲ್ಲ.* ಸಂಗೀತ ಶಾಸ್ತ್ರದಕೆಲವು ವಿಷಯಗಳಲ್ಲಿ ಸಂದೇಹ ತೋರಿದಾಗ, ಶ್ರೀರಾಮನ ಅನುಗ್ರಹದಿಂದ, ಶ್ರೀರಾಮಕೃಷ್ಣಾನಂದರೆಂಬ ಮಹಾಯತಿಗಳು ರಾಮತಾರಕ ಮತ್ತು ನಾರದ ಮಹಾಮಂತ್ರಗಳ ಉಪದೇಶವಿತ್ತು. 'ಸ್ವರಾರ್ಣವ' ಎಂಬ ಸಂಗೀತ ಶಾಸ್ತ್ರ ಗ್ರಂಥವನ್ನು ತ್ಯಾಗರಾಜರಿಗೆ ಕೊಟ್ಟರೆಂದೂ, ಅದರ ಅಧ್ಯಯನದಿಂದ ತ್ಯಾಗರಾಜರು ಹೇರಳವಾಗಿ ಕೃತಿಗಳನ್ನು ರಚಿಸಿ, ಅನೇಕ ರಾಗಗಳನ್ನು ಬಳಕೆಗೆ ತಂದು, ಸಂಗೀತ ಕಲೋದ್ಧಾರ ಮಾಡಿದರೆಂದೂ ತಿಳಿದುಬಂದಿದೆ. ವಾಸುದೇವಾರ್ಯರು ತಿಮ್ಮಪ್ಪದಾಸರ ಆದಿಗುರುಗಳಾದರೂ ಅವರ ಇತರ ಗುರುಗಳಲ್ಲಿ ಶ್ರೀ ರಾಮಕೃಷ್ಣಾರ್ಯರು ಒಬ್ಬ ಪ್ರಮುಖರು. ಈ ಮಹಾನುಭಾವರ ಅನುಗ್ರಹ ಮತ್ತು ಬೋಧೆಯಾದನಂತರ

---

* ಹಸ್ತಪ್ರತಿಗಳಲ್ಲಿ ಕೀರ್ತನೆಗಳಿಗೆ ಮುಂದೆ ರಾಗ ತಾಳಗಳ ನಿರ್ದೇಶ ಮಾಡುವ ಉದ್ದೇಶದಿಂದ ತೆರಪೆಡೆ ಬಿಟ್ಟುಕೊಂಡಿದ್ದರೂ, 'ಅರ್ಚನ'ದಲ್ಲಿ ಮುದ್ರಿಸಿರುವಂತೆ ೧–೯, ೧೦, ೧೯–೪೨, ೧೦೧, ಈ ಸಂಖ್ಯೆಯ ಕೀರ್ತನೆಗಳಿಗೆ ಕ್ರಮವಾಗಿ ನಾಟ, ತೋಡಿ, ಕಲ್ಯಾಣಿ, ಕಾಂಬೋದಿ (ಕಲ್ಯಾಣಿ)–ಈ ಪ್ರಸಿದ್ಧ ರಾಗಗಳನ್ನೂ ೧೩, ೪೨, ೯೩–೯೪, ಈ ಕೀರ್ತನೆಗಳಿಗೆ ಅಪೂರ್ವಗಳಾದ ರೇಗುಪ್ತಿ, ಧವಳಾ, ಘಂಟಾ ಎಂಬ ರಾಗಗಳನ್ನೂ ಸೂಚಿಸಿದ್ದಾರೆ ದಾಸರು.

ಸಕಲವೂ [ವೊಂ]ದು ಅದ್ವೈತ ಬ್ರಹ್ಮವೇ[ಯೆಂ]ದು ತಿಳಿವುದು.

ಏಕೋ ದೇವೋ ಸರ್ವಭೂತೇಷು ಗೂಢಃ
ಸರ್ವವ್ಯಾಪೀ ಸರ್ವಭೂತಾನ್ತರಾತ್ಮಾ
ಕರ್ಮಾಧ್ಯಕ್ಷ(ಸ್ಸ)ರ್ವ ಭೂತಾಧಿವಾ[ಸಃ]
ಸಾಕ್ಷೀಚೇ[ತಃ] ಕೇವಲೋ ನಿರ್ಗುಣಶ್ಚ
ಏಕೋ ರಶ್ಮಿಃ ಸರ್ವಭೂತಾನ್ತರಾತ್ಮಾ
ಏಕಂ ರೂಪಂ ಬಹುಧಾಯಃ ಕರೋಶಿ

ಎಂಬ ಶ್ರೂತಿಯಿರುವುದರಿಂದ ಈ ಸಕಲವಾದ ದ್ವೈತಾದ್ವೈತ ವಿಶಿಷ್ಟಾದ್ವೈತ ಬ್ರಹ್ಮವೇ ತನ್ನೊಳಗೆ ತನ್ನ ತಾನೇ ಈ ರೀತಿಯಿರುವುದೆಂದು ತಿಳಿಯೆ ಮೂರೂ [ವೊಂ]ದೇಯಾಗುವುದು." [ವೆಂಕಟದಾಸರ ಬರವಣಿಗೆಯನ್ನು ಪರಿಚಯ ಮಾಡಿಕೊಡುವ ಉದ್ದೇಶದಿಂದ ಈ ಗಮನಾರ್ಹ ಭಾಗವನ್ನು ಇಲ್ಲಿ ಎತ್ತಿಕೊಡಲಾಗಿದೆ.]

೧೬. ಈಗ ಉಪಲಬ್ಧವಾಗಿರುವ ಗ್ರಂಥಗಳ ಹಸ್ತಪ್ರತಿಗಳೆಲ್ಲವೂ ಬಹುತರ ಈ ಲೇಖಕನ ವಶದಲ್ಲಿದ್ದು* ಪರಾಮರ್ಶೆಯಾಗುತ್ತಿವೆ. ಇವುಗಳ ಪೈಕಿ ಒಂದಾದ 'ಪರಬ್ರಹ್ಮ ಪ್ರಕಾಶಿಕೆ'ಯ ಎರಡು ಹಸ್ತಪ್ರತಿಗಳೂ, ತಿಮ್ಮ ಪ್ಪದಾಸ ಕೃತ ಎಂದು ಊಹಿಸಬಹುದಾದ ಕೀರ್ತನೆಗಳ ಎರಡು ಹಸ್ತ ಪ್ರತಿಗಳೂ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿವೆ. (ವಿವರಗಳಿಗೆ, ನೋಡಿ: 'ಅರ್ಚನ', ಅನುಬಂಧ ೬; ಪು. ೨೯೪–೨೯೫).

೧೭. ಅಪ್ರಕಟಿತ ಕೀರ್ತನೆ; ದಾಸರ ವಂಶೀಯರೊಬ್ಬರಿಂದ ಪಡೆದದ್ದು.

೧೮. 'ಅರ್ಚನ'; ಗುರುಸ್ತುತಿ–ನೀಲಕಂಠಾರ್ಯರು. ಪು.೧೦.

೧೯. ಅದೇ: ಟಿಪ್ಪಣಿಗಳು (ಅನುಬಂಧ ೩). ಪು.೧೭೭–೧೭೮.

೨೦. ತಿಮ್ಮಪ್ಪದಾಸರ ಕೀರ್ತನೆಗಳು ಮುಂತಾದ ಕೃತಿಗಳು ಲಿಖಿತವಾಗಿರುವ

---

*ಈಚೆಗೆ ಈ ಹಸ್ತಪ್ರತಿಗಳೆಲ್ಲವನ್ನೂ ತಿಮ್ಮಪ್ಪದಾಸರ ಪ್ರಪೌತ್ರರು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನಕ್ಕೆ ದಾನಮಾಡಿರುತ್ತಾರೆ.

ತರುಣನಾಗಪುರಪತಿ ವೆಂಕಟೇಶನು। ಗುರುವಾಸುದೇವ ತಾನಾಗಿ।
ಕರುಣದಿಂ ತಿಂಮದಾಸನ ಪರಿಪಾಲಿಪ। ನಿಮಗೀಯ್ಯುವ ಸುಖವಾ॥

'ವಲ್ಲದಿದ್ದರೆ ವಾಸಿಯಾಯ್ತು ಮನವೆ' ಎಂಬ ಕೀರ್ತನೆಯಲ್ಲಿ (ಸದ್ಯಕ್ಕೆ ಅಪ್ರಕಟಿತ), "ಹರಿಸ್ಮರಣೆಯ ಮಾಡು ಹರಿಕಥೆಗಳ ಕೇಳು। ಹರಿಯನರ್ಚಿಸಿ ನೋಡಿ ಹರುಷದಿ ಕೊಂಡಾಡು॥ ಹರಿಸರ್ವೋತ್ತಮನೆಂದು ಹಸನಾಗಿ ಬಾಳುವೆ। ಹಿರಿಯರೊಪ್ಪುವ ಮಾರ್ಗ ಹೀಗಿರು ನೀನೆಂದೆ ॥೧೦॥ ದೂಷಿಸುವವರಿಂದ ದೋಷವಪ್ಪುದು ನಿನ್ನ। ಪೋಷಿಸುವವರಿಗೆ ಪುಣ್ಯ ಕೈಸಾರ್ವದು। ರೋಷಹರ್ಷಗಳ ದೂರದಿ ಬಿಟ್ಟು ಶ್ರೀಹರಿದಾಸರ ದಾಸ ನೀನಾಗೆಂದೆ ॥೧೧॥ – ಎಂದು ತಮ್ಮ ಮನಸ್ಸು ತಮಗೆ ಬೋಧೆ ಮಾಡಿದ ಹಾಗೆ ನಿರೂಪಿಸಿದ್ದಾರೆ.
['ಹರಿಸರ್ವೋತ್ತಮತ್ವ' ಮಾಧ್ವವೈಷ್ಣವ ಸಿದ್ಧಾಂತದ ಒಂದು ಮುಖ್ಯ ಪ್ರಮೇಯ ಎಂಬುದಿಲ್ಲಿ ಗಮನಾರ್ಹ.]

೨೪. ಕೆಲವು ವೈಷ್ಣವಾಚಾರಣೆಗಳು: (೧)'ಅರ್ಚನ'ದ ೯೩ನೆಯ ಕೃಷ್ಣಸ್ತೋತ್ರದಲ್ಲಿ 'ನೀನೊಬ್ಬನೇ ದೇವನೆಂದು ಪೇಳುತಲಿಹುದು ಸಾನುನಯವುಳ್ಳ ಶ್ರುತಿಯು' ಎಂದಿರುವುದೂ, ಸುಮಾರು ೧೩ ಕೀರ್ತನೆಗಳು ಕೃಷ್ಣಪರವಾಗಿರುವುದೂ, ಭಾಗವತದ ದಶಮಸ್ಕಂಧದ ಕೃಷ್ಣಚರಿತೆಯನ್ನು ಕನ್ನಡಿಸಿರುವುದೂ ಕೃಷ್ಣದೇವೋಪಾಸನೆಗೆ ನಿದರ್ಶನಗಳು. (೨)ದ್ವಾದಶಾಕ್ಷರೀ ಮಂತ್ರಪಠನೆ: 'ಅರ್ಚನ'ದ ಪೀಠಸಮರ್ಪಣೆಯ ಕೀರ್ತನೆಯಲ್ಲಿ–"ಪುರುಷಸೂಕ್ತದಿಂದೆನ್ನ ಶರೀರದೊಳ್ ಪೂಜಿಪ ವರಬಿಂಬದೊಳು ನ್ಯಾಸಗೈದಿಹೆನು ಪರಮ ಮಂತ್ರಾಧಿದೇವತೆಗಳನೆಂಟು **ಪನ್ನೆರಡಕ್ಕರದ ವಿದ್ಯೆ**ಯಿಂದಲು" ಎಂಬ ವಾಕ್ಯ. (೩)ಪಂಚಾಯತನ ಪೂಜೆಯಲ್ಲಿ ಶೈವಾಚರಣೆಯವರು ಮಧ್ಯದಲ್ಲಿ ಶಿವನನ್ನೂ, ವೈಷ್ಣವಾಚರಣೆಯವರು ಮಧ್ಯದಲ್ಲಿ ವಿಷ್ಣುವನ್ನೂ ಸ್ಥಾಪಿಸುವರು. ಇಲ್ಲಿನದು ವಿಷ್ಣು ಪಂಚಾಯತನ.

ಗಣಪತಿ ನಿನ್ನಾಗ್ನೇಯದ–
ಲಿನ ತಾ ನೈರುತ್ಯದೆಶೆಯೊಳಂಬಿಕೆ ಮರುತನೊ–
ಳನುಪಮ ಶಂಕರನೀಶಾ–
ನ್ಯನೊಳರ್ಚಿತರಾದರೈಯ್ಯ ತಿರುಪತಿಯೊಡೆಯಾ

ತಿಮ್ಮಪ್ಪದಾಸರು ಸಂಗೀತಶಾಸ್ತ್ರದ ವಿಷಯಗಳನ್ನು ಸಮಗ್ರವಾಗಿ ಪ್ರತಿಪಾದಿಸುವ 'ವೀಣಾನಾದ', 'ತಾಳ', 'ಮದ್ದಳೆ', 'ನೃತ್ಯ', 'ವಾದ್ಯ', ಮುಂತಾದ ಕೀರ್ತನೆಗಳನ್ನು ರಚಿಸಿರಬೇಕೆಂಬ ಊಹೆಗೆದಾರಿಯಾಗುತ್ತದೆ. ಸಂಪಾದಕರೇ ಪೀಠಿಕೆಯಲ್ಲಿ, 'ಅವರ ಕಾಲದಲ್ಲಿ ಚಿಕ್ಕನಾಯಕನಹಳ್ಳಿ ಚಿಕ್ಕದಾದರೂ ಸುತ್ತಮುತ್ತ ಪ್ರಸಿದ್ಧರಾದ ಆಧ್ಯಾತ್ಮಿಕ ಕೇಂದ್ರವಾಗಿ, ಭಗವದ್ದಾಸರು ಕಲೆಯುವ ಸ್ಥಳವಾಗಿ ಪರಿಣಮಿಸಿದ್ದಂತೆ ಕಾಣುತ್ತದೆ. ಆದರೆ, ಕೀರ್ತನೆ, ಕಾವ್ಯ ಮುಂತಾದ ಕೃತಿರಚನೆಗೆ ಅಗತ್ಯವಾದ ವ್ಯುತ್ಪತ್ತಿ ಈ ಮಹನೀಯರ ಬೋಧೆಯಿಂದ ದಾಸರ ವಶವಾಗಿದೆ ಎಂಬಲ್ಲಿ ಸಂದೇಹವಿಲ್ಲ', ಎಂದು ಹೇಳಿದ್ದಾರೆ, ಅನೇಕ ಕೀರ್ತನೆಗಳಿಗೆ ರಾಗ ತಾಳಗಳ ನಿರ್ದೇಶನವಿಲ್ಲದೆ, ಹರಿದಾಸ ಕೀರ್ತನೆಗಳ ಧಾಟಿಯಲ್ಲಿ ಹಾಡಲಾಗುತ್ತಿದ್ದ ರಚನೆಗಳು ಬರುಬರುತ್ತಾ, ಸಂಗೀತಶಾಸ್ತ್ರ ವಿಷಯಗಳನ್ನು ಸಮಗ್ರವಾಗಿ ಹಾಗೂ ಸ್ಪಷ್ಟವಾಗಿ ನಿರೂಪಿಸುವ ಕೀರ್ತನೆಗಳಾಗಿ ಪರಿಣಮಿಸಿರುವುದನ್ನು ಗಮನಿಸಿದರೆ, ತ್ಯಾಗರಾಜರಿಗೆ 'ಸ್ವರಾರ್ಣವ' ಗ್ರಂಥವನ್ನು ಕೊಟ್ಟ ಶ್ರೀ ರಾಮಕೃಷ್ಣಾನಂದ ಯತಿಗಳೇ ಚಿಕ್ಕನಾಯಕನ ಹಳ್ಳಿಗೆ ಬಂದು ನೆಲಸಿ, ತಿಮ್ಮಪ್ಪದಾಸರಿಗೆ ಇತರ ವೇದಾಂತ ವಿಷಯಗಳೊಂದಿಗೆ ಸಂಗೀತಶಾಸ್ತ್ರ ವಿಷಯಗಳನ್ನೂ ಬೋಧಿಸಿರಬಹುದೆಂದು ಊಹಿಸಲು ಸಾಧ್ಯವಾಗಿದೆ." (ವೈಣಿಕ ವಿದ್ವಾನ್ ಎಲ್.ರಾಜಾರಾಯರು ೧೪–೨–೧೯೭೨ ರ 'ಕನ್ನಡ ಪ್ರಭ' ಪತ್ರಿಕೆಯಲ್ಲಿ ಬರೆದಿರುವ 'ಅರ್ಚನ'ದ ಮೇಲಿನ ವಿಮರ್ಶೆಯಿಂದ ಎತ್ತಿಕೊಟ್ಟಿದೆ, ಈ ಅಭಿಪ್ರಾಯವನ್ನು).

೨೨. 'ಅರ್ಚನ', ಪೀಠಿಕೆ, ಪು.x

೨೩. ತಿಮ್ಮಪ್ಪದಾಸರು ರಚಿಸಿರುವ 'ಧ್ರುವಚರಿತ್ರೆ'ಯ* ಕೊನೆಯ ಪದ್ಯಗಳಲ್ಲಿ ಈ ವಿಚಾರ ಸ್ಪಷ್ಟವಾಗಿದೆ. 'ಧ್ರುವ ಚರಿತ್ರೆ'ಯ ಕರ್ತೃತ್ವಕ್ಕೂ ಈ ಪದ್ಯಗಳು ನಿರ್ವಿವಾದವಾದ ಸಾಕ್ಷ್ಯಗಳು:

ಹರಿಯ ದಾಸರ ದಾಸ ದಾಸರ ದಾಸ ಚರಣದಾಸರುಗಳಾ॥
ನಿರುತಸೇವಿಪ ತಿಂಮದಾಸ ಪೇಳಿದ ಧ್ರುವ। ಚರಿತೆಯನಿದನು ಲಾಲಿಪುದೂ॥

---

* ಈ ಕೃತಿ ಈಚೆಗೆ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದಿಂದ ಪ್ರಕಟವಾಗಿದೆ. ಶ್ರೀ ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟರು ಇದರ ಸಂಪಾದಕರು.

ಅದ್ವೈತದ ಅಥವಾ ಬ್ರಹ್ಮೈಕ್ಯದ ಜೋಡನ್ನು ಕೊಟ್ಟದ್ದು ಅಪ್ರಾಸಂಗಿಕವೂ ವ್ಯರ್ಥವೂ ಆಗಿರುವದು."– ಈಸಂದರ್ಭದಲ್ಲಿ, ಮಾಧ್ವದ್ವೈತ ಸಂಪ್ರದಾಯದ ಹರಿದಾಸರೇ ಆದ ಪುರಂದರದಾಸರ ಅಧ್ಯಾತ್ಮಸಾಧನೆ–ಸಿದ್ಧಿಗಳ ಬಗೆಗೆ ಆರ್.ಡಿ.ರಾನಡೆ ಅವರು ವ್ಯಕ್ತಪಡಿಸಿರುವ ಅಭಿಪ್ರಾಯ ಅತ್ಯಂತ ಗಮನಾರ್ಹ: "ಅವರ ಚಿಂತನದ ಮೂರು ಹಂತಗಳನ್ನು ಪೃಥಕ್ಕರಿಸಲು ಸಹಾಯಕವಾಗುವ ಅವರ ಕವಿತೆಗಳಲ್ಲಿ ಕೆಲವನ್ನು ಓದುವ ಅವಕಾಶಗಳು ನನಗೆ ಈಚೆಗೆ ಲಭಿಸಿದ್ದುವು. ಅವರು ಸಗುಣದಿಂದ ಪ್ರಾರಂಭಿಸಿದರು, ಆಮೇಲೆ ಸಗುಣವನ್ನು ನಿರ್ಗುಣದೊಂದಿಗೆ ಸಮೀಕರಿಸಿದರು; ಕಡೆಯಲ್ಲಿ, ಒಬ್ಬ ದೊಡ್ಡ ಯೋಗಿಯೂ ಅನುಭಾವಿಯೂ ಆದರು." ["I recently had opportunities of reading some of his poems, which enable us to demarcate the three stages of his thought. He began with Saguna, later equated the Saguna with the Nirguna and ultimately he became a great yogi and a mystic."- R.D.Ranade; *Pathways to God in Kannada Literature*, ೧೯೬೦; ಪು.೮] ಈ ಮಾತಿನ ಜೊತೆಗೆ, "ಆತ್ಮಸಾಕ್ಷಾತ್ಕಾರ ಬಹುಶಃ ದೈವ ಸಾಕ್ಷಾತ್ಕಾರಕ್ಕಿಂತ ಉಚ್ಚತರ" ಎಂಬ ಮಾತಿನ ಅಭಿಪ್ರಾಯವೂ ಗಮನಾರ್ಹ. ["Vision of Self is probably higher than the vision of God."– ಅದೇ ಗ್ರಂಥದಲ್ಲಿ; ಪು.೧೧೫]

೨೭. ಡಾ॥ ರಂ.ಶ್ರೀ.ಮುಗಳಿ; ಅದೇ; ಹೊದಿಕೆ ಹಾಳೆಯ ಒಳಗೆ ಮುದ್ರಿಸಿರುವ ಅಭಿಪ್ರಾಯದಿಂದ.

೨೯. ಡಾ॥ ಡಿ.ವಿ.ಜಿ.; ಅದೇ; ಮುನ್ನುಡಿ, ಪು.xi.

೩೦. ಆರ್.ನರಸಿಂಹಾಚಾರ್; ಕವಿಚರಿತ್ರೆ, ಸಂಪುಟ ೩, ಪು. ೩೦೯.

೩೧. ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಹಸ್ತಪ್ರತಿಗಳನ್ನು ಪರಿಶೀಲಿಸಿ, ತಮ್ಮ ಅಭಿಪ್ರಾಯವನ್ನುಳ್ಳ ಟಿಪ್ಪಣಿಯನ್ನು ಒದಗಿಸಿ ಉಪಕಾರ ಮಾಡಿದವರು, ಶ್ರೀ ಎನ್.ಎಸ್.ಲಕ್ಷ್ಮೀನಾರಾಯಣಭಟ್ಟರು. ಕವಿಚರಿತೆಯ ೩ನೆಯ ಸಂಪುಟದಲ್ಲೂ ವೀರನಗೆರೆ ಪುಟ್ಟಣನಿಂದ ರಚಿತವಾದ 'ಧ್ರುವಚರಿತ್ರೆ' (ಪು.೨೨೦), ಲೋಕನಾಥ ಕವಿಯ 'ಧ್ರುವಚರಿತ್ರೆ', (ಪು.೨೨೭), ಹಟ್ಟಿಯಂಗಡಿ ರಾಮಭಟ್ಟನ ಯಕ್ಷಗಾನ 'ಧ್ರುವಚರಿತ್ರೆ' (ಪು.೩೯೨), ಶ್ರೀನಿವಾಸಯ್ಯಂಗಾರರ ಯಕ್ಷಗಾನ 'ಧ್ರುವೋಪಾಖ್ಯಾನ'

(೪)ವೈಷ್ಣವ ಏಕಾದಶಿಯ ಆಚರಣೆಯ ಬಗೆಗೆ ದಾಸರೇ ಹೀಗೆ ಹೇಳಿಕೊಂಡಿದ್ದಾರೆ:

ಹರಿದಿನದೇಕಾದಶಿಯೊಳು
ಹರಿಯರ್ಚನೆಗೈದುಪಾಡಿ ಪೊಗಳುತ ಜಾಗರ–
ವಿರುವದಕಾಸ್ಪದ ಕೀರ್ತನೆ
ಬರೆದೋದಲು ಪೊರೆವ ನಮ್ಮ ವೆಂಕಟರಮಣಾ

ಹರಿಹರಾಭೇದದೃಷ್ಟಿ 'ಅರ್ಚನ'ದ ಅನೇಕ ಕೀರ್ತನೆಗಳಲ್ಲಿ ಕಂಡು ಬರುತ್ತದೆ. (೪೭–೪,೫, ೬೬–೫, ೭೨–೨, ೭೩–೭). ಗುರುನೀಲಕಂಠಾರ್ಯರನ್ನು 'ಹರಿಹರಾತ್ಮಕ' ಎಂಬ ವಿಶೇಷಣದಿಂದ ಸಂಬೋಧಿಸಿದ್ದಾರೆ. 'ಶರಣು ಶರಣು' ಎಂಬ ಗುರುಪರಂಪರಾಸ್ತುತಿರೂಪದ ಒಂದು ಕೀರ್ತನೆಯಲ್ಲಿ ಶರಣು ಹರಿಹರಭಕ್ತರೆ ಮಹಾತ್ಮರ' ಎಂದು ಅವರಲ್ಲಿ ವಿಶೇಷ ಗೌರವ ತೋರಿದ್ದಾರೆ. 'ಅರ್ಚನ'ದಲ್ಲಿ ಭಕ್ತಿಯ ಅಭಿವ್ಯಕ್ತಿಯ ದೃಷ್ಟಿಯಿಂದ ಮಾತ್ರವಲ್ಲದೆ ಕೀರ್ತನ ಸಂಖ್ಯಾದೃಷ್ಟಿಯಿಂದಲೂ ಹರಿಹರ ಸಾಮ್ಯಸೃಷ್ಟಿ ಗಮನಾರ್ಹ. ಇತರ ದೇವತೆಗಳನ್ನು ಸ್ತುತಿಸುವಾಗಲೂ ಎಲ್ಲ ದೇವತೆಗಳೂ ಇಷ್ಟದೈವ ವೆಂಕಟರಮಣನ ರೂಪ ಎನ್ನುವಂತೆ ಭಾವಿಸಿರುವ ಸರ್ವದೇವತಾ ಸಮನ್ವಯ ದೃಷ್ಟಿಯೂ ಇಲ್ಲಿ ಗಮನಾರ್ಹ. ದ್ವೈತಸಂಪ್ರದಾಯದ ಭಾಗವತ ಧರ್ಮದಲ್ಲಿ ಹರಿಗೆ ಉಚ್ಚಸ್ಥಾನವನ್ನು ಕೊಟ್ಟು ಇತರ ದೇವತೆಗಳಿಗೆ ಅವರೋಹಣ ಕ್ರಮದಲ್ಲಿ ಸ್ಥಾನನಿರ್ದೇಶ ಮಾಡುವ ತಾರತಮ್ಯ ಪರಿಗಣನೆ ಕಂಡುಬರುತ್ತದೆ.

೨೫. 'ಅರ್ಚನ', ಪೀಠಿಕೆ, ಪು. xvii

೨೬. ರಾ.ಸ್ವಾ.ಪಂಚಮುಖಿಯವರು ತಮ್ಮ"ಹರಿದಾಸ ಸಾಹಿತ್ಯ"ದಲ್ಲಿ (ಪು. ೯೦–೯೧) ವ್ಯಕ್ತಪಡಿಸಿರುವ ಅಭಿಪ್ರಾಯ ಇದು: "ಮಹಾರಾಷ್ಟ್ರದ ಸಂತರು ಅದ್ವೈತ ಭಕ್ತಿಯನ್ನು ಉಪದೇಶಿಸಿದರು. ಇದರಲ್ಲಿ ಶೃಂಗಾರ ರಸಕ್ಕೆ ಪ್ರಾಧಾನ್ಯವಿರದೆ ಭಕ್ತಿಗೆ ಉಳಿದ ಎಲ್ಲ ರಸಗಳು ಪೋಷಕವಾಗಿವೆ. ಆದರೆ ತತ್ವವಿವೇಚನೆಯ ದೃಷ್ಟಿಯಿಂದ ಅದ್ವೈತ ಭಕ್ತಿಯು ಸ್ವರೂಪದಲ್ಲಿ ಅಸಂಗತವಿರುವುದು. ನಿರ್ಗುಣ ಬ್ರಹ್ಮನೂ ಉಪಾಸನೆಯೂ ಕತ್ತಲೆ ಬೆಳಕಿನಂತೆ ಒತ್ತಟ್ಟಿಗೆ ಸೇರಲಾರವು. ಸಗುಣ ಬ್ರಹ್ಮೋಪಾಸನೆಯೇ ಮಹಾರಾಷ್ಟ್ರ ಸಂತರ ಪರಮ ಧ್ಯೇಯವಾಗಿದ್ದಂತೆ ತೋರುತ್ತದೆ. ಅದಕ್ಕೆ

೩೭. ಮೇಲೆ ಉಲ್ಲೇಖಿಸಿರುವ ಗ್ರಂಥದಲ್ಲಿ ಉಕ್ತರಾದ ಅನುಭಾವ ಕವಿಗಳ ವಿಚಾರಕ್ಕೆ ಸಂಬಂಧಪಟ್ಟಂತೆ, 'ಅನುಭಾವ' ಎಂದರೇನು ಎನ್ನುವುದನ್ನು ಜತಿಳಿದುಕೊಳ್ಳುವುದು ಅಗತ್ಯವೆಂದು ಕಾಣುತ್ತದೆ. ರಾನಡೆಯವರು ತಮ್ಮ ಗ್ರಂಥದಲ್ಲಿ ಅನುಭಾವದ ಸ್ವರೂಪವನ್ನು ಹಂತಹಂತವಾಗಿ, ವಿವರ ಪೂರ್ಣವಾಗಿ, ದೃಷ್ಟಾಂತಪೂರ್ವಕವಾಗಿ ವಿವರಿಸಿದ್ದಾರೆ. ಅವರೇ ಸ್ವತಃ ಅನುಭಾವ ಸಾಧನೆಯಲ್ಲಿ ಯತ್ನಶೀಲರಾಗಿದ್ದವರು ಎಂದು ತಿಳಿದುಬರುತ್ತದೆ. ಅನುಭವಸಿದ್ಧ ಪ್ರಾಮಾಣ್ಯವುಳ್ಳ ಇವರ ಹೇಳಿಕೆಗಳು ಬೆಲೆಯುಳ್ಳವು. ಅವರ ವಿಸ್ತಾರವಾದ ವಿವೇಚನೆಯನ್ನು ಸಂಕ್ಷೇಪಿಸಿ ತಿಳಿಯಹೇಳುವುದು ಅಸಾಧ್ಯವೆಮದೇ ಹೇಳಬೇಕು. ಆದರೂ, ಕೆಲವು ಮುಖ್ಯಾಂಶಗಳನ್ನು ಮಾತ್ರ ತಿಳಿಸಲು ಪ್ರಯತ್ನಿಸಬಹುದು.

ಸಾಮಾನ್ಯ ಮನುಷ್ಯನ ದಿನನಿತ್ಯದ ಅನುಭವ ಇಂದ್ರಿಯಜನ್ಯಜ್ಞಾನ; ಅನುಭವಿಯ ಸಾಧನಾಬಲದಿಂದ ಸಿದ್ಧಿಸುವ ಅತೀಂದ್ರಿಯವಾದ ಅಧ್ಯಾತ್ಮಿಕ ಜ್ಞಾನ 'ಅನುಭಾವ' ಎಂಬ ಹೆಸರಿನಿಂದ ವ್ಯವಹರಿಸಲ್ಪಡುತ್ತದೆ. ಅನುಭಾವ ಪರಮಾತ್ಮ ಸಾಕ್ಷಾತ್ಕಾರ ತತ್ತ್ವ. ಇದು ಸಾಧನಾಮಾರ್ಗದಲ್ಲಿ ಒಂದು ವಿಧವಾದ ಅಂತರ್ಬೋಧೆಯಿಂದ (intuition) ಲಭಿಸತಕ್ಕದ್ದು. ಈ ಅನುಭವ ಕ್ಷಣಿಕವಲ್ಲ; ನಿರಂತರವಾಗಿದ್ದು, ವೃದ್ಧಿಶೀಲವಾದದ್ದು. ಅನುಭಾವ ಸಾಧನೆಸಿದ್ಧಿಗಳಿಗೆ ಗುರುವಿನ ಉಪದೇಶ ಅಗತ್ಯ. ಸಾಧನೆಯಲ್ಲಿ ಸಿದ್ಧಿಯನ್ನು ಪಡೆದವನೇ ಅನುಭಾವಿ. ಅನುಭಾವಿಗಳು ಯಾವ ದೇಶದವರೇ ಆಗಲಿ, ಯಾವ ಭಾಷೆಯವರೇ ಆಗಲಿ, ಅವರ ಅನುಭವಪ್ರಕಾಶದಲ್ಲಿ ಸಾರ್ವತ್ರಿಕಾನ್ವಯದ ಸಮಾನಲಕ್ಷಣಗಳನ್ನು ಗುರುತಿಸಬಹುದು. ಒಬ್ಬ ಅನುಭಾವಿ ಇನ್ನೊಬ್ಬ ಅನುಭಾವಿಯನ್ನು ಸಂಧಿಸಿದಾಗ ವಿಚಾರ ವಿನಿಮಯ ಮಾಡಿಕೊಂಡ ಸಂದರ್ಭದಲ್ಲಿ, ಇಬ್ಬರ ಅನುಭವವೂ ಒಂದೇ ಬಗೆಯದಾಗಿರುವುದು ಕಂಡುಬಂದಿದೆ. ಅಭಿವ್ಯಕ್ತಿಯಲ್ಲಿ ಕೂಡ ಸಮಾನಲಕ್ಷಣಗಳನ್ನು ಗುರುತಿಸಬಹುದು. ಉದಾಹರಣೆಗೆ, ಸತಿಪತಿಭಾವ, ಯೋಗಸಾಧನೆ, ಆ ವೇಳೆಯಲ್ಲಿ ವರ್ಣಪಟಲಗಳನ್ನು ಕಾಣೋಣ. 'ದಶನಾದ'ಗಳನ್ನು ಕೇಳೋಣ, ಇತ್ಯಾದಿ. ಕನಸಿನಲ್ಲಿ ಇಷ್ಟದೈವದರ್ಶನ. ಪರಮಾತ್ಮನನ್ನು ಸಗುಣವಾಗಿ ಆರಾಧಿಸಲಿ, ನಿರ್ಗುಣವಾಗಿ ಆರಾಧಿಸಲಿ, ಅನುಭಾವಿಯ ಪರಮಲಕ್ಷ್ಯ ನಿರಂತರವಾದ, ಶಾಶ್ವತವಾದ, ಅನುಭವೈಕವಾದ ಪರಮಾನಂದ, ಸುಗುಣಾರಾಧಕರನ್ನು ನಮ್ಮ ದೇಶದಲ್ಲಿ ಶೈವ, ವೈಷ್ಣವ,

– ಈ ಕೃತಿಗಳ ಉಲ್ಲೇಖವಿದೆ. ಇವೆಲ್ಲವೂ ಮೇಲೆ ಸೂಚಿಸಿದ ಹಸ್ತಪ್ರತಿಗಳೇ ಇರಬೇಕು. ಆದರೆ ವಾರ್ಧಕ ಷಟ್ಪದಿಯ ಪದ್ಯಗಳನ್ನುಳ್ಳ ಕೃತಿಯ ಹಸ್ತಪ್ರತಿ ಅಧ್ಯಯನ ಸಂಸ್ಥೆಯಲ್ಲಿ ಇದ್ದಂತಿಲ್ಲ.

೩೨. ತಿಮ್ಮಪ್ಪದಾಸರ ಪೂಜಾವಿಧಾನ ಕೀರ್ತನೆಗಳು ಲಿಖಿತವಾಗಿರುವ ಕಾಗದದ ಹಸ್ತಪ್ರತಿಯಲ್ಲಿಯೆ 'ನಾರಾಯಣದಾಸ' ಎಂದು ಸ್ವನಾಮ ಮುದ್ರಿಕೆಯಿರುವ ೩೭ ಕೀರ್ತನೆಗಳು, ಸಹಸ್ತಾಕ್ಷರದಲ್ಲಿ, ಬಹುಶಃ ರಚಿತವಾದ ಕಾಲಾನುಕ್ರಮದಲ್ಲಿ, ಲಿಖಿತವಾಗಿವೆ. ತಿಮ್ಮಪ್ಪದಾಸರ ಹಾಗೂ ಇತರ ದಾಸರ ಕೃತಿಗಳು ಲಿಖಿತವಾದ ಮೇಲೆ, "ಯಿಲ್ಲಿಂದ ಮುಂದೆ ನಾರಾಯಣದಾಸ ಕೃತ ಕೀರ್ತನೆಗಳು" ಎಂಬ ಬರಹವಿರುವುದರಿಂದ ಕೀರ್ತನೆಗಳ ಕರ್ತೃತ್ವದ ಬಗೆಗೆ ಯಾವ ಬಗೆಯ ಸಂದೇಹಕ್ಕೂ ಎಡೆಯಿಲ್ಲ.

೩೩. ತಿಮ್ಮಪ್ಪದಾಸರ ಪುತ್ರಪೌತ್ರ ಸಂತತಿಯ ವಿವರಗಳನ್ನು 'ಅರ್ಚನ' ಗ್ರಂಥದ ೩೦೦ನೆಯ ಪುಟದಲ್ಲಿ ಕೊಟ್ಟಿರುವ ವಂಶವೃಕ್ಷದಲ್ಲಿ (ಅನುಬಂಧ ೫) ಕಾಣಬಹುದು.

೩೪. ಇದೇ ಲೇಖಕನು ಸಂಪಾದಿಸಿ ಪ್ರಕಟಿಸಿರುವ ನಾರಾಯಣದಾಸರ ಕೀರ್ತನೆಗಳ ಸಂಕಲನದ ಪೀಠಿಕೆಯಿಂದ ಈ ಉದ್ಧೃತಿಯನ್ನು ತೆಗೆದುಕೊಂಡಿದೆ. ಈ ಸಂಕಲನದ ಕೀರ್ತನೆಗಳ ಬಗೆಗೆ ವೈಣಿಕ ವಿದ್ವಾನ್ ಶ್ರೀ ಎಲ್.ರಾಜಾರಾಯರ ಅಭಿಪ್ರಾಯ: "ಕೀರ್ತನೆಗಳ ಕೂಲಂಕೂಷ ಪರಿಶೀಲನೆಯಿಂದ ನಾರಾಯಣದಾಸರು ರಾಗತಾಳಗಳೊಡನೆ ಹಾಡಿಕೊಂಡೇ ತಮ್ಮ ಕೀರ್ತನೆಗಳನ್ನು ರಚಿಸಿದ್ದಾರೆಂದು ನನಗೆ ಅನ್ನಿಸುತ್ತದೆ. ಕೀರ್ತನೆಗಳು ಸಂಗೀತಶಾಸ್ತ್ರದ ರಾಗ ತಾಳ ನಿಯಮಗಳಿಗೆ ಮುದ್ದಾಗಿ ಹೊಂದಿಕೊಂಡಿವೆ. ಕೀರ್ತನೆಗಳ ಸಾಹಿತ್ಯ, ಭಾಗವತಧರ್ಮದ ಭಕ್ತನೊಬ್ಬನ ಹೃದಯಾಂತರಾಳದಿಂದ ಉಕ್ಕಿ ಹರಿದ ಸರ್ವಸಮರ್ಪಣ ಭಾವದ ಹೊನಲಾಗಿದೆ. ಆ ಕಾರಣ, ನಾರಾಯಣದಾಸರ ಕೀರ್ತನೆಗಳು ಸಂಗೀತಗಾರರಿಂದಲೂ ಹಾಗೂ ಗಾಯಕ ಭಕ್ತರಿಂದಲೂ ಹಾಡಲ್ಪಡಲು ಸರ್ವಥಾ ಯೋಗ್ಯವಾಗಿವೆ."

೩೫. ಪಾವಂಜೆ ಹರಿದಾಸವಾಣಿ: ಪ್ರಕಾಶಕರು, – ಸತ್ಸಂಗ ಸೇವಾ ಸಮಿತಿ, ಹಳೆಯಂಗಡಿ, ದಕ್ಷಿಣ ಕನ್ನಡ, ೧೯೭೩. (ಈ ಲೇಖನದಲ್ಲಿ ಪ್ರಸ್ತಾವಿಸಲಾದ ದಾಸರ ಜೀವನ ವಿವರಗಳನ್ನೂ ಉದ್ಧೃತಿಗಳನ್ನೂ ಗ್ರಂಥದ ಮುನ್ನುಡಿಯಿಂದ ಪಡೆದಿದೆ.)

೩೭. ಮೇಲೆ ಉಲ್ಲೇಖಿಸಿದ ರಾನಡೆಯವರ ಗ್ರಂಥ, ಪು.೧೫.

೩೮. ಅದೇ: ಪು. ೧೦೪–೫.

೩೯. ಅದೇ: ಪು. ೨೪೧–೨.

೪೦. ಅದೇ: ಪು.೨೪೫–೬.

೪೧. ಅದೇ: ಪು. ೧೧೧–೧೨.

೪೨. ಭವತಾರಕ, ಕೂಡಲೂರೇಶ, ಮಡಿವಾಳಯೋಗಿ, ಮಹಂತ, ನರಸಪ್ಪ (ತಿಮ್ಮಪ್ಪದಾಸರು ಹೊಗಳಿರುವ ನರಸಾರ್ಯ ಇರಬಹುದೇ?), ನಿರಾಳಕೇರಿ, ರಾಮರಾವ್ ಹೊರ್ಟಿ, ರುದ್ರಯ್ಯಸ್ವಾಮಿ, ಶಿವಲಿಂಗವ್ವ, ಇವರ ಕಾಲವಿಚಾರ, ಜೀವನವೃತ್ತಾಂತ, ಮುಂತಾದ ವಿವರಗಳ ಉಲ್ಲೇಖ ಕೂಡ ರಾನಡೆಯವರ ಗ್ರಂಥದಲ್ಲಿ ಇಲ್ಲದಿರುವುದರಿಂದ ಇವರ ವಿಚಾರವನ್ನು ಗಮನಕ್ಕೆ ತೆಗೆದುಕೊಂಡಿಲ್ಲ.

೪೩. ಮೈಸೂರಿನಲ್ಲಿ ಶಿವಾನಂದ ಎಂಬ ಸಾಧು ಈಗಲೂ ಒಂದು ಕಟ್ಟಡದಲ್ಲಿ (ಹಿಂದೆ ಶಿವರಾಮಶಾಸ್ತ್ರಿಗಳು ಪ್ರವಚನ ನಡಸುತ್ತಿದ್ದ ಸ್ಥಳ, ಶಂಕರಮಠ) ಶಾಸ್ತ್ರಿಗಳ ಫೋಟೋವನ್ನೂ ಶಂಕರಾಚಾರ್ಯರ ಚಿತ್ರಪಟವನ್ನೂ ಇಟ್ಟುಕೊಂಡು ಪೂಜಾದಿಗಳನ್ನು ನಡಸುತ್ತಿರುವನು. ನನ್ನ ಬಂಧುಗಳಾದ, ವೇದಾಂತ ವಿಷಯಕ ಗ್ರಂಥಕರ್ತರಾದ, ಮೈಸೂರಿನ ಶ್ರೀ ಬಿ.ಎಸ್.ಕಪನೀಪತಯ್ಯನವರು ಆ ಸಾಧುವನ್ನು ಭೇಟಿಮಾಡಿ, ಶಾಸ್ತ್ರಿಗಳ ವಿಚಾರವಾಗಿ ಆತನು ತಿಳಿಸಿದ ವಿಷಯವನ್ನು ಪತ್ರಮುಖೇನ (೩೦–೧೦–೧೯೭೮) ನನಗೆ ತಿಳಿಸಿ ಉಪಕಾರ ಮಾಡಿರುತ್ತಾರೆ. ಅವರು ತಿಳಿಸಿದ ಸಂಗತಿಗಳಲ್ಲಿ ಮುಖ್ಯವಾದವನ್ನು ಮಾತ್ರ ಇಲ್ಲಿ ಪ್ರಸ್ತಾವಿಸಿದೆ.

○ ○ ○ ○ ○

ಎಂದು ವಿಭಾಗ ಮಾಡಬಹುದು. ರಾನಡೆಯವರ ಅಭಿಪ್ರಾಯದಲ್ಲಿ, "ನಿಜವಾದ ಅನುಭಾವಿ ವೈಷ್ಣವನೂ ಅಲ್ಲ, ಶೈವನೂ ಅಲ್ಲ." (ಪು.೬). ಅನುಭಾವದ ಸಾಧನೆಯ ಸೋಪಾನದಲ್ಲಿ ಮುಖ್ಯವಾದ ಹಂತಗಳು, ಅಧ್ಯಾತ್ಮಿಕ ಜೀವನಕ್ಕೆ ಅಗತ್ಯವಾದ ಪ್ರೇರಣೆಗಳು (ಪ್ರಾಪಂಚಿಕವಾದ ಎಲ್ಲವೂ ನಶ್ವರ ಎಂಬ ತಿಳಿವಳಿಕೆ; ಇದರ ಪರಿಣಾಮವಾದ ವೈರಾಗ್ಯ; ಗುರುವಿನ ಮಹತ್ವ, ಆತನ ಉಪದೇಶ ದೀಕ್ಷೆಗಳ ಅಗತ್ಯ, ಗುರುವಿನಂತೆಯೇ ಆಗಬೇಕೆಂಬ ಹಂಬಲ ಇತ್ಯಾದಿ); ನೈತಿಕ ಸಿದ್ಧತೆ, ಅದರ ಅಗತ್ಯ, ಆಧ್ಯಾತ್ಮಿಕ ಗುರುವಿನ ಅವಶ್ಯಕತೆ, ಗುರುಶಿಷ್ಯ ಸಂಬಂಧ; ಸಾಧಕ ಮತ್ತು ಆತ ವರಿಸಿದ ದೈವದ ಸಂಬಂಧ; ಇಷ್ಟದೇವತಾನಾಮದ ಮುಖ್ಯತೆ; ದೈವ ಸಾಕ್ಷಾತ್ಕಾರ ಸಾಧನಾಕ್ರಮ.

ರಾನಡೆಯವರು ಈ ಪ್ರಣಾಳಿಕೆಯ ಹಿನ್ನೆಲೆಯಲ್ಲಿ ಪ್ರಮುಖ ಶಿವ–ಶರಣರು ಮತ್ತು ಪ್ರಮುಖ ಹರಿದಾಸರು ರಚಿಸಿರುವ ಕೃತಿಗಳಲ್ಲಿ ಅವರ ಸಾಧನಪಥವನ್ನು ಹೇಗೆ ಗುರುತಿಸಬಹುದು ಎಂಬುದನ್ನು ಸೋದಾಹರಣವಾಗಿ ವಿವೇಚಿಸಿದ್ದಾರೆ. ಇವರುಗಳ ವಿಚಾರ ಪ್ರಸ್ತುತ ಲೇಖನದ ವ್ಯಾಪ್ತಿಗೆ ಒಳಪಡುವುದಿಲ್ಲ. ನಮ್ಮ ಲೇಖನದಲ್ಲಿ ಗಮನಿಸಲಾದ ಹಲವು ಹರಿದಾಸರುಗಳ ಕೃತಿಗಳು ವಿಪುಲ ಸಂಖ್ಯೆಯಲ್ಲಿ ದೊರೆತು ಪ್ರಕಟವಾಗಿಲ್ಲದಿರುವ ಕಾರಣ ಅವರುಗಳ ಅನುಭಾವಸಾಧನಪಥದ ಬಗೆಗೆ ಏನು ಹೇಳಲೂ ಸಾಧ್ಯವಿಲ್ಲ. ಪಾವಂಜೆ ಹರಿದಾಸರ ಕೃತಿಗಳಲ್ಲೂ – ಅವು ಸಂಖ್ಯಾದೃಷ್ಟಿಯಿಂದ ಗಣ್ಯವಾಗಿದ್ದರೂ–ಅನುಭಾವದ ಸ್ಪಷ್ಟವಾದ ಲಕ್ಷಣಗಳು ಕಾಣಸಿಕ್ಕುವುದಿಲ್ಲ. ತಿಮ್ಮಪ್ಪದಾಸರ 'ಅರ್ಚನ'ದ ಕೃತಿಗಳಲ್ಲೂ ಅವರ ಅಪ್ರಕಟಿತ ಗುರುಸ್ತವ ರೂಪದ ಕೀರ್ತನೆಗಳಲ್ಲೂ ಕೆಲವು ಅನುಭವಸಿದ್ಧಿಯ ಲಕ್ಷಣಗಳನ್ನು ಗುರುತಿಸಬಹುದು. ತನ್ನ ಇಷ್ಟದೈವವೇ ಗುರುರೂಪದಲ್ಲಿ ಉಪದೇಶ ಮಾಡಿ ಅನುಗ್ರಹಿಸಿದ್ದಾನೆ ಎಂಬ ನಿಚ್ಚಳವಾದ ಅರಿವು; ಗುರು ಮತ್ತು ದೈವಗಳಲ್ಲಿ ಅವಿನಾಭಾವ, 'ನಾನೇ ನೀನು ನೀನೇ ನಾನು' ಎಂಬ ಅಹಂ ಬ್ರಹ್ಮಾಸ್ಮಿ ತತ್ತ್ವಸಿದ್ಧಿ; ಷಟ್‌ಚಕ್ರೋಪಾಸನಾ ಪ್ರವಣತೆ; ದಶನಾದದ ಕೇಳ್ಮೆ – ಇವೆಲ್ಲವುಗಳ ಕಾವ್ಯರೂಪದ ನಿರೂಪಣೆ 'ಅರ್ಚನ' ಗ್ರಂಥದ 'ರಾಜೋಪಚಾರ' ಎಂಬ ಕೀರ್ತನೆಯಲ್ಲಿ ಮನೋಜ್ಞವಾಗಿ ಮೂಡಿಬಂದಿದೆ. ಲೇಖನವಿಸ್ತಾರ ಭಯದಿಂದ ಕೀರ್ತನೆಯನ್ನು ಉದ್ಧರಿಸದೆ ಕೈಬಿಡಬೇಕಾಗಿದೆ.

ಕನಕದಾಸರು ವ್ಯಾಸರಾಜರ ಶಿಷ್ಯರಾಗುವುದಕ್ಕೆ ಮೊದಲು ಶ್ರೀವೈಷ್ಣವ ಆಚಾರ್ಯರ ಶಿಷ್ಯರಾಗಿದ್ದರು; ಕನಕದಾಸರು ಜಾತಿಯಲ್ಲಿ ಕುರುಬರು. ಹರಿದಾಸರೆಲ್ಲರೂ ಪ್ರಾಯಿಕವಾಗಿ ಜನ್ಮತಃ ಬ್ರಾಹ್ಮಣರು. ಗುರು ವ್ಯಾಸರಾಯರು ಕನಕದಾಸರನ್ನು ತಮ್ಮ ಶಿಷ್ಯವರ್ಗಕ್ಕೆ ಸೇರಿಸಿಕೊಂಡರು. ದಿಟ, ಆದರೆ ಪುರಂದರದಾಸರಿಗೆ ಕೊಟ್ಟಂತೆ ಅವರಿಗೆ ಅಂಕಿತವನ್ನಾಗಲಿ ದಾಸದೀಕ್ಷೆಯನ್ನಾಗಲಿ ಕೊಟ್ಟುದಕ್ಕೆ ಪ್ರಮಾಣಗಳಿಲ್ಲ. ವಾಸ್ತವವಾಗಿ ಶಿಷ್ಯವರ್ಗ ಕನಕದಾಸರನ್ನು ಕಡೆಗಣಿಸಿತ್ತು. ಹಾಗಲ್ಲದಿದ್ದರೆ – ವ್ಯಾಸರಾಯರು ಕನಕನ ಮೇಲೆ ಕೃಪೆಮಾಡಿದಾಗ ಶಿಷ್ಯವರ್ಗದಲ್ಲಿ ಅಸಮಾಧಾನದ ಗುಸುಗುಸು ಕೇಳಿಬರದೆ ಇದ್ದಿದ್ದರೆ – "ಕನಕದಾಸರ ಮೇಲೆ ದಯೆಮಾಡಲು – ವ್ಯಾಸ। ಮುನಿಯ ಮಠದವರೆಲ್ಲ ದೂರಿಕೊಳ್ಳುವರು।" ಎಂದೂ, "ಕನಕದಾಸರು ಕಬ್ಬಲಿಗನು ಎಂದು। ಅಣಕಿಸಿ ನುಡಿ ಬೇಡಿರಣ್ಣ॥ ಜನರಂತೆ ನರನಲ್ಲ ತುಂಬುರನೀತನು। ಜನಕಜೆರಮಣನ ಪಾದಸೇವಕನು॥" ಎಂದು ಪುರಂದರದಾಸರು ಘೋಷಿಸಲು ಅವಕಾಶವೇ ಇರುತ್ತಿರಲಿಲ್ಲ. ಹೀಗಿದ್ದರೂ, "ಕನ್ನಡ ನಾಡಿನ ಹರಿದಾಸರ ಪೀಳಿಗೆಯನ್ನು ಸಾಂಪ್ರದಾಯಿಕವಾಗಿ ಹೇಳುವವರು ಕನಕದಾಸರ ಹೆಸರನ್ನು ಆ ಪೀಳಿಗೆಯಿಂದ ಹೊರಗೇ ಇರಿಸುವರು. ಆದರೆ, ಒಬ್ಬ ವ್ಯಕ್ತಿಯಾಗಿ, 'ಅಪರೋಕ್ಷಜ್ಞಾನಿ' ಎಂದು ಕನಕರಿಗೆ ಗೌರವವನ್ನು ತೋರಿಸುವರು. ಬಿಜಾಪುರ ಜಿಲ್ಲೆಯ ಕಾಖಂಡಕಿಯ ಮಹಿಮಪತಿದಾಸರು ಜನ್ಮತಃ ಮಾಧ್ವಸಂಪ್ರದಾಯದವರಾದರೂ ಅದ್ವೈತದರ್ಶನವನ್ನು ಒಪ್ಪಿಕೊಂಡವರು. ಮನ್ನಿಸಿದವರು. ಅನ್ಯದರ್ಶನವನ್ನು, ವಿಶೇಷತಃ ಅದ್ವೈತದರ್ಶನವನ್ನು, ಖಂಡಿಸುವ ಸಲುವಾಗಿಯೇ ಮಧ್ವಮತದ ದ್ವೈತ ಸಿದ್ಧಾಂತ ಹುಟ್ಟಿತು ಎಂದರೂ ತಪ್ಪಾಗದು. ಹೀಗಿದ್ದರೂ ಮಹಿಪತಿದಾಸರನ್ನು ಹರಿದಾಸರ ಪೀಳಿಗೆಯಿಂದ ಸಂಪ್ರದಾಯಸ್ಥರು ಹೊರತುಪಡಿಸಿಲ್ಲ. ನಮ್ಮ ಗಮನಕ್ಕೆ ಬರುವ ಇನ್ನೊಂದು ಅಪವಾದದ ನಿದರ್ಶನ ಎಂದರೆ, ಮೊನ್ನೆ ಮೊನ್ನೆ ಬೆಳಕಿಗೆ ಬಂದ ತಿಮ್ಮಪ್ಪದಾಸರು. ಇವರು ಸ್ಮಾರ್ತಭಾಗವತ ಸಂಪ್ರದಾಯಕ್ಕೆ ಸೇರಿದವರು; ತಮ್ಮ ರಚನೆಗಳಲ್ಲಿ ಅದ್ವೈತವನ್ನು ಪ್ರತಿಪಾದಿಸಿರತಕ್ಕವರು. ಆದರೆ ಇವರು ತಮ್ಮನ್ನು 'ಹರಿದಾಸ' ಎಂದು ಸ್ಪಷ್ಟವಾಗಿ ಕರೆದುಕೊಂಡಿರುವವರು. ಪುರಂದರ ಕನಕರ ಸಮಕಾಲೀನರಾದ ಬೇಲೂರಿನ ವೈಕುಂಠದಾಸರು ಶ್ರೀವೈಷ್ಣವರು; ಆದರೂ ಮಾಧ್ವ ಹರಿದಾಸ ಪರಂಪರೆಯಲ್ಲಿಯೇ ಪರಿಗಣಿತರಾಗಿದ್ದಾರೆ ಎಂದು ತಿಳಿದುಬರುತ್ತದೆ. ಈ ಮೂವರ ನಿದರ್ಶನಗಳು ನಮ್ಮ ಗಮನಕ್ಕೆ ಬಂದಿರತಕ್ಕವು. ಇವರಂತೆ ಇನ್ನೂ ಕೆಲವರೋ ಹಲವರೋ ಮಾಧ್ವಸಂಪ್ರದಾಯಕ್ಕೆ ಸೇರದವರು ಹರಿಭಕ್ತಿಯನ್ನೂ ಹರಿಯ ಪರಿವಾರಕ್ಕೆ

# ೪. ಹರಿದಾಸ ಪರಂಪರೆ*

ಕನ್ನಡ ನಾಡಿನ ಹರಿದಾಸ ಪರಂಪರೆ ಶಿವಶರಣ ಪರಂಪರೆಯಂತೆ ಕರ್ನಾಟಕದ ಸಾಹಿತ್ಯ ಸಂಸ್ಕೃತಿಗಳ ಬೆಳವಣಿಗೆಯಲ್ಲಿ ಅತ್ಯಂತ ಪ್ರಮುಖ ಪಾತ್ರವನ್ನು ವಹಿಸಿದೆ. ಅಲ್ಲದೆ, ಕರ್ನಾಟಕ ಸಂಗೀತ ಪ್ರಪಂಚ ಹರಿದಾಸ ಸಾಹಿತ್ಯದಿಂದ ಬಲುಮಟ್ಟಿಗೆ ಪುಷ್ಟಿಗೊಂಡಿದೆ. ಮೂರು ದಿಕ್ಕುಗಳಲ್ಲಿ ಕನ್ನಡ ನಾಡಿನ ಜನಜೀವನದ ಉತ್ಕರ್ಷಕ್ಕೆ ಕಾರಣವಾದ ಹರಿದಾಸ ಪರಂಪರೆಯ ಹುಟ್ಟು, ಬೆಳವಣಿಗೆ ಮತ್ತು ಅದು ಸಲ್ಲಿಸಿರುವ ಸೇವೆ, ಇವನ್ನು ಪರಿಚಯ ಮಾಡಿಕೊಡುವುದು ಈ ಲೇಖನದ ಉದ್ದೇಶ.

ಹರಿದಾಸರು ಯಾರು? ನವವಿಧ ಭಕ್ತಿಗಳಲ್ಲಿ ದಾಸ್ಯಭಾವದ ಭಕ್ತಿಯೂ ಒಂದು. ಹರಿ ಅಥವಾ ವಿಷ್ಣುವಿನಲ್ಲಿ ವಿಶೇಷವಾಗಿ ದಾಸ್ಯಭಾವದ ಭಕ್ತಿಯನ್ನು ಒಂದು ಆಧ್ಯಾತ್ಮಿಕ ಸಾಧನೆಯಾಗಿ ಅಂಗೀಕರಿಸಿದ ಭಕ್ತನನ್ನು ವಿಶಾಲವಾದ ಅರ್ಥದಲ್ಲಿ ಹರಿದಾಸ ಎಂದು ಹೇಳಬಹುದು. ಆದರೆ, ಕರ್ನಾಟಕದ ಹರಿದಾಸ ಪರಂಪರೆಯನ್ನು ಗಮನಿಸಿ ಹೇಳುವಾಗ, ದ್ವೈತ ಸಿದ್ಧಾಂತದ ಪ್ರವರ್ತಕರಾದ ಶ್ರೀ ಮಧ್ವಾಚಾರ್ಯರ ತತ್ತ್ವವಾದ ಮುಖ್ಯ ಪ್ರಮೇಯಗಳಿಗೆ ಅನುಗುಣವಾಗಿ ಹರಿಭಕ್ತಿಯನ್ನು ಪ್ರತಿವಾದಿಸುವ ಕನ್ನಡ ಭಾಷೆಯ ರಚನೆಗಳನ್ನು – ದೇವರನಾಮಗಳು ಅಥವಾ ಪದಗಳು, ಸುಳಾದಿಗಳು, ಉಗಾಭೋಗಗಳು, ಮುಂತಾದುವನ್ನು – ರಚಿಸಿದ ಹರಿಭಕ್ತರನ್ನು ಹರಿದಾಸರು ಎನ್ನುವುದು ರೂಢಿ. ಹೀಗಿದ್ದರೂ ಮಧ್ವಮತವನ್ನು ಅನುಸರಿಸದ ಹರಿದಾಸರು ಕೆಲವರು ಪುರಂದರದಾಸರ ಕಾಲದಿಂದಲೂ ಕಂಡುಬಂದಿರುವುದು ಹರಿದಾಸ ಸಾಹಿತ್ಯದ ನಿರ್ಮಾಪಕರಾದ ಹರಿದಾಸರ ಪರಂಪರೆಯನ್ನು ಕುರಿತು ವಿವೇಚನೆ ಮಾಡುವಾಗ ಗಮನಿಸಬೇಕಾದ ವಿಶೇಷ ಸಂಗತಿ. ಪುರಂದರದಾಸರ ಸಮಕಾಲೀನರೇ ಆದ

---

* 'ಕಲಾಚೇತನ' – ಸಂಪಾದಕರು: ಅರಳುಮಲ್ಲಿಗೆ ಪಾರ್ಥಸಾರಥಿ. – ಪ್ರಭಾತ್ ಕಲಾವಿದರ ಶ್ರೀ ಟಿ.ವಿ. ದ್ವಾರಕಾನಾಥ್ ಅರವತ್ತನೆಯ ಹುಟ್ಟುಹಬ್ಬದ ಅಭಿನಂದನಾ ಸಮಿತಿ ಅರ್ಪಿಸುವ 'ದ್ವಾರಕಿ' ಅಭಿನಂದನಾ ಗ್ರಂಥ.

ಎಂಬ ತಿಳಿವಳಿಕೆ ರೂಢಮೂಲವಾಯಿತು. ಇವರು ಬೋಧಿಸಿದ ಧರ್ಮವೇ ಭಾಗವತಧರ್ಮ ಎಂಬ ನಂಬಿಕೆ ಸಹಜವಾಗಿಯೇ ಬೆಳೆಯಿತು. ಈ ಆಚಾರ್ಯದ್ವಯರಿಗೂ ಪೂರ್ವದಲ್ಲಿ ಅದ್ವೈತ ಸಿದ್ಧಾಂತ ಪ್ರವರ್ತಕರಾದ ಶ್ರೀ ಶಂಕರಾಚಾರ್ಯರು – "ಭಗವಾನೇವೈಕೋ ವಾಸುದೇವೋ ನಿರಂಜನ ಜ್ಞಾನಸ್ವರೂಪಃ ಪರಮಾರ್ಥತತ್ತ್ವಮ್" ಎಂದು ಸಾರಿ, ಅದ್ವೈತಕ್ಕೆ ಅವಿರುದ್ಧವಾದ ಭಾಗವತಧರ್ಮಕ್ಕೆ ಪುರಸ್ಕಾರ ಕೊಟ್ಟಿದ್ದರು. ಶ್ರೀ ಶಂಕರರು ಶೈವರೋ ವೈಷ್ಣವರೋ ಎಂಬ ಸಂದೇಹ ಉಂಟಾದರೆ ಅದರಲ್ಲಿ ಆಶ್ಚರ್ಯವೇನಿಲ್ಲ. ಅದ್ವೈತದ ಸಗುಣೋಪಾಸನೆಯಲ್ಲಿ ಸರ್ವದೇವತಾ ಸಾಮ್ಯ–ಸಮನ್ವಯದಲ್ಲಿ ಹರಿ–ಹರ ಸಾಮ್ಯ, ಅಥವಾ ಹರಿಹರಾಭೇದದೃಷ್ಟಿ ಪ್ರಾಮುಖ್ಯವನ್ನು ಪಡೆದಿದೆ. ಷಣ್ಮತಸ್ಥಾಪನಾಚಾರ್ಯರೆಂದು ಪ್ರಸಿದ್ಧರಾದ ಇವರು ಶಿವ, ವಿಷ್ಣು, ದೇವೀ, ಕುಮಾರ, ಗಣಪತಿ, ಸೂರ್ಯದೇವತೆಗಳ ಪರವಾಗಿ ನೂರಾರು ಸ್ತೋತ್ರಗಳನ್ನು ರಚಿಸಿದರು. ಇವರು ಕಲ್ಪಿಸಿದ ಪಂಚಾಯತನ ಪೂಜೆ ಶಿವಪಂಚಾಯತನ ವಿಷ್ಣುಪಂಚಾಯತನ ಎಂದು ಇಬ್ಭಾಗವಾಗಿ, ಹರಿ–ಹರ ಸಾಮ್ಯ ಕಲ್ಪನೆಗೆ ಪುಷ್ಟಿ ನೀಡಿತು. ಅದ್ವೈತ ಪರವಾದ ಭಾಗವತಧರ್ಮ ಹರಿಹರಾಭೇದವನ್ನು ಒಪ್ಪಿಕೊಂಡು, ವಿಷ್ಣು ಭಕ್ತಿಗೆ ಅಗ್ರಸ್ಥಾನವನ್ನು ಕೊಟ್ಟಿತು.

ಹೀಗೆ, ಶಂಕರಾಚಾರ್ಯರು ಮತ್ತು ಮಧ್ವಾಚಾರ್ಯರು ಇವರಿಬ್ಬರ ಬೋಧೆಗಳು ಸ್ಮಾರ್ತ ಭಾಗವತಧರ್ಮ ಮತ್ತು ವೈಷ್ಣವ ಭಾಗವತಧರ್ಮಗಳು ಪ್ರಾಚುರ್ಯಕ್ಕೆ ಬರಲು ಕಾರಣವಾದುವು. ಶ್ರೀ ಶಂಕರರ ಪ್ರಿಯ ಶಿಷ್ಯರಾದ ಪದ್ಮಪಾದಾಚಾರ್ಯರು ಸ್ಮಾರ್ತಭಾಗವತ ಸಂಪ್ರದಾಯದ ಪ್ರವರ್ತಕರು. ಕನ್ನಡ ಕವಿಗಳಾದ ರುದ್ರಭಟ್ಟ, ಕುಮಾರವ್ಯಾಸ, ಲಕ್ಷ್ಮೀಶ, ನಿತ್ಯಾತ್ಮಶುಕಯೋಗಿ, ಇವರುಗಳು ಸ್ಮಾರ್ತಭಾಗವತರು. ಈ ಸಂಪ್ರದಾಯಕ್ಕೆ ಸೇರಿದ ಭಾಗವತರಲ್ಲಿ ಕೀರ್ತನೆಗಳನ್ನು ರಚಿಸಿದವರು ಎಂದರೆ, 'ಜಯನೃಪ' ಕಾವ್ಯವನ್ನು ರಚಿಸಿದ ಕೆಳದಿ ಲಿಂಗಣ ಕವಿಯ ಪುತ್ರ ವೆಂಕಣ್ಣ ಕವಿ. ಈ ಹಿಂದೆ ಉಲ್ಲೇಖಿಸಿದ ತಿಮ್ಮಪ್ಪದಾಸರು, ಹಾಗೂ ಅವರ ಪುತ್ರ ನಾರಾಯಣದಾಸರು ಬೆಳಕಿಗೆ ಬಾರದ ಇನ್ನು ಹಲವರು ಇದ್ದಾರು.

## II

ಹರಿದಾಸರ ಪರಂಪರೆಯಲ್ಲಿ ವೈಷ್ಣವ ಹರಿದಾಸರ ಸಂಖ್ಯೆ, ಹಾಗೂ ಅವರು ರಚಿಸಿರುವ ಕೃತಿಗಳ ಬಾಹುಳ್ಯ, ನೂರಕ್ಕೆ ತೊಂಬತ್ತೊಂಬತ್ತು ಪಾಲಿಗೂ ಮಿಕ್ಕಿರುವುದರಿಂದ ವೈಷ್ಣವ ಹರಿದಾಸರ ವಿಚಾರಕ್ಕೆ ಅಗ್ರಸ್ಥಾನ ಸಲ್ಲಬೇಕು. ಇವರ

ಸೇರಿದ ಇತರ ದೇವತೆಗಳ ವಿಚಾರವನ್ನೂವಿಷಯವಾಗಿ ಮಾಡಿಕೊಂಡು ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿರಬಹುದಾದ ಸಾಧ್ಯತೆಯಿದೆ. ಈ ನಿಟ್ಟಿನಲ್ಲಿ ಸಂಶೋಧನೆಯಾಗಬೇಕು. ಧ್ರುವ ಪ್ರಹ್ಲಾದ ಅಜಾಮಿಳ ವಿದುರ ಮುಂತಾದ ಪೌರಾಣಿಕ ವ್ಯಕ್ತಿಗಳೆಲ್ಲರೂ ಹರಿದಾಸರ ದೃಷ್ಟಿಯಲ್ಲಿ ಪರಮಭಾಗವತರು. ಪೌರಾಣಿಕಯುಗ ಮಾತ್ರವಲ್ಲದೆ ಎಲ್ಲ ಈಚಿನ ಯುಗಗಳಲ್ಲೂ ಭಾಗವತರು ಇರಬಹುದಲ್ಲ. ಭಾಗವತರೆಲ್ಲರೂ ವಿಶಾಲಾರ್ಥದಲ್ಲಿ ಹರಿದಾಸರು, ಹರಿದಾಸರ ಧರ್ಮ ಭಾಗವತಧರ್ಮ; ಭಾಗವತಧರ್ಮದ ಪ್ರಧಾನ ಲಕ್ಷಣ ವೈಷ್ಣವನಿಷ್ಠೆ.

ಚಾರಿತ್ರಿಕವಾಗಿ ಪರಿಶೀಲಿಸಿದರೆ, ಈ ಭಾಗವತಧರ್ಮ ಬಹಳ ಪುರಾತನವಾದುದು ಎಂದು ಕಂಡುಬರುತ್ತದೆ. ಕ್ರಿ.ಪೂ.೨ನೆಯ ಶತಮಾನದಲ್ಲಿ, ಶಾತವಾಹನರ ಕಾಲದ ಶಾಸನಗಳಲ್ಲಿ, ವೈದಿಕ ದೇವತೆಗಳು, ವೇದೋಕ್ತ ಯಜ್ಞಗಳು ಇವುಗಳ ಹೆಸರುಗಳ ಜೊತೆಗೆ ವಿಷ್ಣುಸಂಬಂಧದ ಹೆಸರುಗಳು ಕಂಡುಬರುತ್ತವೆ. ಇವು ಭಾಗವತಧರ್ಮದ ಪ್ರಾಚುರ್ಯವನ್ನು ಸೂಚಿಸುತ್ತವೆ ಎಂದು ವಿದ್ವಾಂಸರ ಅಭಿಪ್ರಾಯ. ಇದೇ ಕಾಲದ ಬೆಸ್ನಗರ ಶಾಸನ, ಘೋಸುಂಡಿ ಶಾಸನಗಳಿಂದ ಗ್ರೀಕರು ಕೂಡ ಭಾಗವತಮತವನ್ನು ಸ್ವೀಕರಿಸಿದರೆಂದು ತಿಳಿದು ಬಂದಿದೆ. ಗುಪ್ತ ವಂಶದವರು ಪರಮ ಭಾಗವತರಾಗಿದ್ದರು. ದಕ್ಷಿಣದ ಅನೇಕ ರಾಜವಂಶಗಳು ವಿಷ್ಣುಭಕ್ತವಾಗಿದ್ದವು. ಚಾರಿತ್ರಿಕಯುಗಕ್ಕೂ ಹಿಂದೆ ವೇದೋಪನಿಷತ್ತುಗಳಲ್ಲಿ ವಿಷ್ಣು–ನಾರಾಯಣ ಕಲ್ಪನೆಗೆ ಪರಮ ಪ್ರಾಧಾನ್ಯವಿತ್ತು. ಮಹಾಭಾರತದ ಕಾಲದಲ್ಲಿ ವಸುದೇವಪುತ್ರ ವಾಸುದೇವ ಕೃಷ್ಣನು ವಿಷ್ಣುವಿನ ಅವತಾರ ಎಂಬ ಕಲ್ಪನೆ ಬೆಳೆಯಿತು. ಮಹಾಭಾರತದ ನಾರಾಯಣೀಯ ಪ್ರಕರಣ, ಭಾರತಾಂತರ್ಗತವಾದ ಭಗವದ್ಗೀತೆ, ವಿಷ್ಣುಪುರಾಣ, ಭಾಗವತ ಮಹಾಪುರಾಣ, ನಾರದ ಭಕ್ತಿಸೂತ್ರ, ಪಾಂಚರಾತ್ರಾಗಮ, ವೈಖಾನಸಾಗಮ, ಬ್ರಹ್ಮಸೂತ್ರಗಳು – ದಕ್ಷಿಣ ಭಾರತದಲ್ಲಿ ವೈಷ್ಣವಧರ್ಮದ ಬೆಳವಣಿಗೆಗೆ ಇಂಬು ಕೊಟ್ಟುವು. ಹನ್ನೊಂದನೆಯ ಶತಮಾನದಲ್ಲಿ ಶ್ರೀ ರಾಮಾನುಜರು ವಿಶಿಷ್ಟಾದ್ವೈತ ಸಿದ್ಧಾಂತದ ವೈಷ್ಣವ ಮತವನ್ನೂ, ೧೨–೧೩ನೆಯ ಶತಮಾನದವರಾದ ಶ್ರೀ ಮಧ್ವಾಚಾರ್ಯರು ದ್ವೈತ ಸಿದ್ಧಾಂತದ ವೈಷ್ಣವ ಮತವನ್ನೂ ಪ್ರಚಾರ ಮಾಡಿದರು. ಮಧ್ವಾಚಾರ್ಯರು ಕನ್ನಡ ನಾಡಿನಲ್ಲಿಯೇ ಜನಿಸಿದವರಾದ್ದರಿಂದ ಅವರ ಶಿಷ್ಯಪರಂಪರೆಯೂ ಕನ್ನಡ ನಾಡಿನಲ್ಲಿ ಬೆಳೆಯಿತು. ಈ ಶಿಷ್ಯಪರಂಪರೆಯಲ್ಲಿ ನೂರಾರು ಮಂದಿ ಕನ್ನಡ ನುಡಿಯ ಮೂಲಕ ಮಧ್ವಾಚಾರ್ಯರು ಬೋಧಿಸಿದ ಮತವನ್ನೂ ಹರಿಭಕ್ತಿಯನ್ನೂ ಪ್ರಚಾರ ಮಾಡಿದರು. ಇದರಿಂದಾಗಿ ಹರಿದಾಸರು ಎಂದರೆ ಮಧ್ವಮತಾನುಯಾಯಿಗಳು

ಸೋಗಿನ ದಾಸರನ್ನು ತೆಗಳಿರುವುದೇ ಸಾಕ್ಷಿ. ಹೀಗಿರುವುದರಿಂದ, ಕೃತಿರಚನೆ ಮಾಡಿರುವವರನ್ನು ಮಾತ್ರ ನಾವು ಹರಿದಾಸ ಪರಂಪರೆಯಲ್ಲಿ ಗಣನೆಗೆ ತಂದುಕೊಳ್ಳಬೇಕಾಗುತ್ತದೆ. ಕೃತಿರಚನೆ ಮಾಡಿದ ಹರಿದಾಸರು ಸಾಧಾರಣವಾಗಿ ಗುರುವಿನಿಂದ ದಾಸದೀಕ್ಷೆಯನ್ನೂ 'ಅಂಕಿತ'ವನ್ನೂ ಪಡೆದಿದ್ದು, ಆ ಅಂಕಿತವನ್ನು ಕೃತಿಯ ಮುದ್ರಿಕೆಯಾಗಿ ಇಟ್ಟುಕೊಂಡಿರುತ್ತಾರೆ. ಈ ಅಂಕಿತದಲ್ಲಿ 'ವಿಠಲ'ಪದವು ಸಾಮಾನ್ಯವಾಗಿ ಕೂಡಿಕೊಂಡಿರುತ್ತದೆ. ಕನಕದಾಸರ ರಚನೆಗಳಲ್ಲಿ ವಿಠಲಾಂಕಿತವಿಲ್ಲ. ಆದ್ಯಹರಿದಾಸರು ಎನ್ನಬಹುದಾದ ನರಹರಿತೀರ್ಥರು, ಮತ್ತು ಅವರ ತರುವಾಯ ಹರಿದಾಸ ಪರಂಪರೆಯಲ್ಲಿ ಮಠಾಧಿಪತಿಗಳಾಗಿದ್ದ ವ್ಯಾಸ ರಾಯರು, ವಾದಿರಾಜರು, ರಾಘವೇಂದ್ರ ಯತಿಗಳು, ವಿಠಲಾಂಕಿತವನ್ನು ಬಳಸಿಕೊಂಡಿಲ್ಲ. ಈ ಮೂವರ ಅಂಕಿತ ಕ್ರಮವಾಗಿ 'ಶ್ರೀ ಕೃಷ್ಣ', 'ಶ್ರೀ ಹಯವದನ', 'ವೇಣುಗೋಪಾಲ' ಎಂದಿವೆ. ಈ ವಿಠಲಾಂಕಿತ ಮಾಧ್ವ ಸಂಪ್ರದಾಯದ ಹರಿದಾಸ ಪರಂಪರೆಯಲ್ಲಿ ಇಂದಿಗೂ ವಿರಾಜಮಾನವಾಗಿದೆ. ವಿರಳ ಸಂಖ್ಯೆಯ ಮಾಧ್ವೇತರ ಭಾಗವತ ಸಂಪ್ರದಾಯದ ಹರಿದಾಸರು 'ದಾಸ' ಎಂದಷ್ಟೇ ಪ್ರಸಿದ್ಧರು.

ಮಾಧ್ವ ಸಂಪ್ರದಾಯದ ಹರಿದಾಸ (ಸಾಹಿತ್ಯ) ಪರಂಪರೆಯಲ್ಲಿ ಮೂರು ಅಥವಾ ನಾಲ್ಕು ಘಟ್ಟಗಳನ್ನು ಗುರುತಿಸಬಹುದು.

(೧)ಮೊದಲ ಘಟ್ಟದಲ್ಲಿ ಕಂಡುಬರತಕ್ಕವರು ಇಬ್ಬರೇ: ನರಹರಿತೀರ್ಥರು (ಸು.೧೩೨೫) ಮತ್ತು ಶ್ರೀಪಾದರಾಜರು. ಇವರಿಬ್ಬರಲ್ಲಿ ಆದ್ಯಪ್ರವರ್ತಕರು ಯಾರು ಎಂಬ ಬಗೆಗೆ ಮತಭೇದವಿದೆ. ಕಾಲದೃಷ್ಟಿಯಿಂದ ಅಚಲಾನಂದರೆಂಬುವರು ಆದ್ಯರು ಎಂದು ಭಾವಿಸಲಾಗಿತ್ತು. ಆದರೆ ಕೃತಿಸಂಖ್ಯಾಬಾಹುಳ್ಯದ ದೃಷ್ಟಿಯಿಂದಲೂ ವ್ಯಕ್ತಿಪ್ರಭಾವ ದೃಷ್ಟಿಯಿಂದಲೂ ಹೇಳುವುದಾದರೆ, ಹದಿನೈದನೆಯ ಶತಮಾನದುದ್ದಕ್ಕೂ (ಕ್ರಿ.ಶ.೧೪೦೪–೧೫೦೨) ಬಹುಕಾಲ ಮುಳಬಾಗಿಲ ಮಠದ ಅಧಿಪತಿಗಳಾಗಿ ವೈಭವದಿಂದ ಬಾಳಿದ ಶ್ರೀಪಾದರಾಯರನ್ನು ಆದ್ಯಪ್ರವರ್ತಕರು ಎನ್ನಬೇಕಾಗುತ್ತದೆ.

(೨)ಎರಡನೆಯ ಘಟ್ಟದಲ್ಲಿ, ಹದಿನಾರನೆಯ ಶತಮಾನದ ಪೂರ್ವಾರ್ಧದಲ್ಲಿ, ವ್ಯಾಸರಾಯರಿಂದ ದೀಕ್ಷೆ ಪಡೆದ ಪುರಂದರದಾಸರು ಮತ್ತು ಕನಕದಾಸರು ಪ್ರಮುಖರು.

(೩)ಮೂರನೆಯ ಘಟ್ಟದಲ್ಲಿ, ಮಹಿಪತಿದಾಸರು (೧೬೫೫), ಪ್ರಸನ್ನ ವೆಂಕಟದಾಸರು (೧೬೮೦–೧೭೫೨) ಹಾಗೂ ವಿಜಯದಾಸರು (೧೬೮೨–೧೭೫೫), ಇವರು ಪ್ರಮುಖರು.

ಪರಿಚಯವನ್ನು ಮಾಡಿಕೊಳ್ಳುವುದಕ್ಕೆ ಮುಂಚೆ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಎಂಬ ಭೇದಗಳನ್ನು ಗಮನಿಸದೆ, ಸರ್ವಸಾಮಾನ್ಯವಾಗಿ ಹರಿದಾಸ ಸಾಹಿತ್ಯದ ಲಕ್ಷಣವನ್ನು ಹೀಗೆ ಗುರುತಿಸಬಹುದು.

"ಹರಿದಾಸ ಸಾಹಿತ್ಯವು ಪ್ರಧಾನವಾಗಿ ಭಕ್ತಪರವಾದದ್ದು. ಭಾಗವದ್ಭಕ್ತನು ತನ್ನ ಆತ್ಮಶೋಧನೆಯನ್ನು ಮಾಡಿಕೊಂಡು ಭಗವಂತನ ಅನುಗ್ರಹಕ್ಕಾಗಿ ಹಗಲೂ ಇರುಳೂ ಹಂಬಲಿಸುತ್ತ, ಇಷ್ಟಾರ್ಥ ಸಿದ್ಧಿಯಾದ ಮೇಲೆ ತನ್ನ ದಿವ್ಯಾನುಭವವನ್ನು ಇತರರಿಗೂ ತಿಳಿಯಹೇಳಿ, ಸಮಸ್ತರನ್ನೂ ಪುನೀತರನ್ನಾಗಿ ಮಾಡುವುದೇ ಅವನ ಮುಖ್ಯಗುರಿ. ಆದ್ದರಿಂದ, ಹರಿದಾಸ ಸಾಹಿತ್ಯವನ್ನು ಸಮಷ್ಟಿದೃಷ್ಟಿಯಿಂದ ಸಮೀಕ್ಷಿಸಿದಾಗ ಇಲ್ಲಿ ಆಯಾ ಹರಿದಾಸರ ಆತ್ಮಶೋಧನೆ, ಅಪರೋಕ್ಷಾನುಭವ, ಭಗವಂತನನ್ನು ಅವರು ಆರಾಧಿಸುವ ನಾನಾ ವಿಧಾನಗಳು ಮೊದಲು ನಮ್ಮ ಮನಸ್ಸನ್ನು ಸೆಳೆಯುತ್ತದೆ." ಕರ್ನಾಟಕದ ಹರಿದಾಸರಲ್ಲಿ ಬಹುಸಂಖ್ಯಾತರು ಮಧ್ವಮತಾನುಯಾಯಿಗಳಾದ್ದರಿಂದ ಅವರು ಆ ಮತದ ತತ್ತ್ವವನ್ನು ತಮ್ಮ ಕೀರ್ತನ ಮಾಧ್ಯಮದ ಮೂಲಕ ಎಲ್ಲ ಜನಕ್ಕೂ ತಿಳಿಗನ್ನಡದಲ್ಲಿ ತಿಳಿಸತೊಡಗಿದರು. ಆದರೆ, "ಹರಿದಾಸ ದೀಕ್ಷೆಯನ್ನೇ ಸ್ವೀಕರಿಸಿ ಕೀರ್ತನ ಕೈಂಕರ್ಯವನ್ನು ಕೈಕೊಂಡ ಪುರಂದರದಾಸರು, ಕನಕದಾಸರು, ವಿಜಯದಾಸರು, ಗೋಪಾಲದಾಸರು ಮೊದಲಾದ ನೂರಾರು ಹರಿದಾಸರ ವಾಣಿಯಲ್ಲಿ ಸಮಾಜದ ಅನಂತ ಮುಖಗಳ ವೀಕ್ಷಣೆ ಕಂಡು ಬರುತ್ತದೆ" ಎಂಬ ಅಭಿಪ್ರಾಯವನ್ನು ವಿಜಯದಾಸರ ತರುವಾಯದ ಬಹುಸಂಖ್ಯಾತ ಹರಿದಾಸರ ವಿಷಯಕ್ಕೆ ಅನ್ವಯಿಸುವುದು ಕಷ್ಟವೆಂದು ತೋರುತ್ತದೆ. ಆದರೆ, ಈ ಉತ್ತರಕಾಲೀನ ಹರಿದಾಸಪರಂಪರೆಯಲ್ಲಿಯೂ ಹರಿಭಕ್ತಿಯ ಅನುಸಂಧಾನ, ಅದರ ಪ್ರಚಾರದ ಸಲುವಾಗಿ ದಾಸತನಕ್ಕೆ ಹೇಳಿದ ಆಚರಣೆಗಳ ಅನುಷ್ಠಾನ, ಮುಂತಾದ ಕಾರ್ಯಕಲಾಪಗಳು ಈ ಶತಮಾನದ ಎರಡು ಮೂರು ದಶಕಗಳವರೆಗೆ ನಡೆದು ಬಂದವು. ಆದರೆ ಈ ಎಲ್ಲ ಹರಿದಾಸರೂ ತಮ್ಮ ನಾಮದ ಮುಂದೆ 'ದಾಸ' ಪದವನ್ನು ಸೇರಿಸಿಕೊಂಡವರಾದರೂ ಕೃತಿರಚನೆ ಮಾಡಿದ ಹರಿದಾಸರ ಶ್ರೇಣಿಗೆ ಸೇರುವುದಿಲ್ಲ. ಇವರು ಹೇಳಿಕೇಳಿ ಹೊಟ್ಟೆಯಪಾಡಿನ ವೇಷದ ದಾಸರು ಎಂದರೂ ದಾಸ ಸಾಹಿತ್ಯವನ್ನೂ, ಅದರ ಪರಂಪರೆಯನ್ನೂ, ಜೀವಂತವಾಗಿ ಉಳಿಸಿಕೊಟ್ಟ ಉಪಕಾರಿಗಳು; ನಮ್ಮ ಕೃತಜ್ಞತೆಗೆ ಪಾತ್ರರು. ಪುರಂದರದಾಸರ ಕಾಲದಲ್ಲೂ, ಅದಕ್ಕೂ ಹಿಂದೆ ಬೂಟಾಟಿಕೆ ದಾಸರು ಇದ್ದರು ಎನ್ನುವುದಕ್ಕೆ, "ದಾಸರೆಂದರೆ ಪುರಂದರ ದಾಸರಯ್ಯ" ಎಂಬವ್ಯಾಸರಾಯರ ಕೀರ್ತನೆಯಲ್ಲಿ ಅವರು ಪುರಂದರ ದಾಸರನ್ನು ಹೊಗಳುವ ಸಂದರ್ಭದಲ್ಲಿ

ವಿಠಲ, ಮುಂತಾಗಿ ಸಾವಿರಾರು ಅಂಕಿತಗಳು ಗಮನಕ್ಕೆ ಬಂದಿರುವುದಾಗಿ ತಿಳಿದುಬರುತ್ತದೆ. ಇವರೆಲ್ಲರೂ ಹರಿದಾಸರೇ ಆದರೂ ಕೀರ್ತನೆಗಳನ್ನು ರಚಿಸಿರುವರೇ, ರಚಿಸಿದ್ದರೆ ಅವುಗಳ ಸಂಖ್ಯೆ ಎಷ್ಟು, ಅವು ಗ್ರಂಥಸ್ಥರೂಪದಲ್ಲಿ ಉಳಿದು ಬಂದಿವೆಯೇ ಎಂಬ ಬಗೆಗೆ ಖಚಿತವಾಗಿ ವಿವರಗಳು ದೊರೆಯುವವರೆಗೆ ಹರಿದಾಸಸಾಹಿತ್ಯ ಆಧುನಿಕಯುಗದಲ್ಲೂ ಹೇಗೆ ಮುಂದುವರೆದಿದೆ ಎನ್ನುವುದನ್ನು ಗೊತ್ತುಪಡಿಸಲು ಸಾಧ್ಯವಿಲ್ಲ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಶಿವಶರಣರ ಪ್ರಾಚೀನ ವಚನಗಳ ಮಾದರಿಯಲ್ಲಿ ಸಮಕಾಲೀನ ಪ್ರಜ್ಞೆಯಿಂದ ರೂಪಗೊಂಡ ವಚನಗಳು ಇರುವಂತೆಯೇ ಹರಿದಾಸರ ಕೀರ್ತನೆಗಳ ಮಾದರಿಯಲ್ಲಿ ರಚಿತವಾದ ಭಕ್ತಿಗೀತಗಳೂ ಭಾವಗೀತೆಗಳೂ ವಿಪುಲ ಪ್ರಮಾಣದಲ್ಲಿ ಕಂಡುಬರುತ್ತವೆ. ಆಧುನಿಕ ಗೀತಪ್ರಕಾರಕ್ಕೆ ಹರಿದಾಸರ ಕೃತಿಗಳು ಪ್ರೇರಕಶಕ್ತಿಯಾಗಿ ಪರಿಣಮಿಸಿರುವುದು ಗಮನಾರ್ಹ ಸಂಗತಿ.

## III

ಮಾಧ್ವಸಂಪ್ರದಾಯದ ಹರಿದಾಸ ಪರಂಪರೆಗೆ ಸೇರದಿದ್ದರೂ ತಾವು ಹರಿದಾಸರು ಎಂದು ಕರೆದುಕೊಂಡ ಹರಿದಾಸರು – ೧೯ನೆಯ ಶತಮಾನಕ್ಕೆ ಸೇರಿದವರು – ಕೆಲವರು ಇದ್ದಾರೆ. ಇವರು ಆ ಪರಂಪರೆಗೆ ತಾತ್ತ್ವಿಕವಾಗಿ ಸೇರದಿದ್ದರೂ ತಾವು ಹರಿದಾಸರು ಎಂದು ಕರೆದುಕೊಂಡಿರುವುದರಿಂದಲೂ ಕೃತಿರಚನೆಯಲ್ಲಿ ಮಾಧ್ವಹರಿದಾಸರ ಪ್ರಭಾವವನ್ನು ಗುರುತಿಸಬಹುದಾಗಿರುವುದರಿಂದಲೂ ಅವರನ್ನು ಹರಿದಾಸ ಪರಂಪರೆಗೇ ಸೇರಿದವರು ಎಂದು ಭಾವಿಸುವುದರಲ್ಲಿ ತಪ್ಪೇನಿಲ್ಲ. ಇವರಲ್ಲಿ ಪ್ರಮುಖರಾದವರೆಂದರೆ ತಿಮ್ಮಪ್ಪದಾಸರು, ಅವರ ಪುತ್ರ ನಾರಾಯಣದಾಸರು, ಮತ್ತು ಪಾವಂಜೆ ಹರಿದಾಸರು.

ತಿಮ್ಮಪ್ಪದಾಸರು ಕ್ರಿ.ಶ.೧೭೮೪ರಲ್ಲಿ ಜನಿಸಿದರು. ಅವರ ಜ್ಯೇಷ್ಠಪುತ್ರ ನಾರಾಯಣದಾಸರು ೧೮೨೨ ರಲ್ಲಿ ಜನಿಸಿದರು. ತಿಮ್ಮಪ್ಪದಾಸರ ಹುಟ್ಟೂರು ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ. ತಿಮ್ಮಪ್ಪದಾಸರ ಪಿತಾಮಹರಾದ ವಾಸುದೇವಾರ್ಯರು ಸಂನ್ಯಾಸ ಸ್ವೀಕಾರ ಮಾಡಿ, ವಾಸುದೇವಯತಿ ಎಂದು ಪ್ರಸಿದ್ಧರಾಗಿದ್ದರು. ಇವರು ಅದ್ವೈತ ವೇದಾಂತ ವಿಷಯವಾಗಿ ರಚಿಸಿರುವ 'ವಾಸುದೇವಮನನ' ಎಂಬ ಗ್ರಂಥ ೧೯ನೆಯ ಶತಮಾನದ ಮಧ್ಯಭಾಗದಲ್ಲಿ

(೪)ನಾಲ್ಕನೆಯ ಘಟ್ಟದಲ್ಲಿ, ವಿಜಯದಾಸರ ಶಿಷ್ಯ–ಪ್ರಶಿಷ್ಯರ ಪರಂಪರೆ ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನಗಳಲ್ಲಿ ಸುಮಾರು ನೂರೈವತ್ತು ವರ್ಷಕಾಲ ಕಾರ್ಯಮುಖವಾಗಿತ್ತು. ಆಗಿನ ಕಾರ್ಯಕ್ಷೇತ್ರ ರಾಯಚೂರು ಜಿಲ್ಲೆ. ಈ ಕಾಲದ ಪ್ರಮುಖ ಹರಿದಾಸರುಗಳೆಂದರೆ ಗೋಪಾಲದಾಸರು, ಮೋಹನದಾಸರು, ಜಗನ್ನಾಥದಾಸರು, ಪ್ರಾಣೇಶ ವಿಠಲದಾಸರು. ಇದೇ ಕಾಲಕ್ಕೆ ಸೇರಿದ ಶ್ರೀದ ವಿಠಲರು ಮತ್ತು ಮೊದಲಕಲ್ ಶೇಷದಾಸರು ಗಮನಾರ್ಹರು.

ವಿಜಯದಾಸರ ಶಿಷ್ಯಪರಂಪರೆಯ ವೃಕ್ಷಶಾಖೆ ಈ ಶತಮಾನಕ್ಕೂ ಚಾಚಿಕೊಂಡು ಬೆಳೆದುಬಂದಿದೆ. ವಿಜಯದಾಸರ ಶಿಷ್ಯಪ್ರಶಿಷ್ಯರ ಪ್ರಮಾಣ ಬಲು ದೊಡ್ಡದು. ಹೆಸರುಗಳು ತಿಳಿದುಬಂದಿರುವವರ ಸಂಖ್ಯೆಯೇ ಸುಮಾರು ೫೦ರ ಹತ್ತಿರಕ್ಕೆ ಬರುತ್ತದೆ. ವಿಜಯದಾಸರ ಶಿಷ್ಯರಾದ ವೇಣುಗೋಪಾಲದಾಸರಿಂದ ಮುಂದುವರಿದ ಪೀಳಿಗೆಯಲ್ಲಿ ೧೮೫೦ಕ್ಕೂ ಹಿಂದೆ ವೇಣುಗೋಪಾಲ ವಿಠಲ (೧೬೮೮–೧೭೬೮), ವ್ಯಾಸ ವಿಠಲ (೧೭೧೦–೧೭೭೫), ರಘುಪತಿ ವಿಠಲ (ಸು.೧೭೩೦–೧೮೧೫) ಎಂಬವರು ಮುಖ್ಯರು. ವೇಣುಗೋಪಾಲ ವಿಠಲರ (೧೬೮೮–೧೭೬೮) ಪೀಳಿಗೆಯಲ್ಲಿ ಒಂಬತ್ತನೆಯವರಾದ 'ಪರಮಪ್ರಿಯ ಸುಬ್ಬರಾಯದಾಸರ ('ತಂದೆ ಮುದ್ದುಮೋಹನ ವಿಠಲ', ೧೮೬೫–೧೯೪೦) ಶಿಷ್ಯಕೋಟಿ ೧೧೬೫ ಮಂದಿ ಎಂದು ತಿಳಿದು ಬರುತ್ತದೆ. ಇವರಲ್ಲಿ ಕೊನೆಯವರೇ ಗುರುಗೋವಿಂದ ವಿಠಲದಾಸರು (ಎಂ.ಆರ್.ಗೋವಿಂದರಾಯರು). ಈ ಶತಮಾನಕ್ಕೆ ಸೇರಿದ ಈ ಹರಿದಾಸ ಮಹನೀಯರು ಸ್ವತಃ ಅನೇಕ ಕೀರ್ತನೆಗಳನ್ನು ರಚಿಸಿರುವರಲ್ಲದೆ, ಎರಡು ಭಾಗಗಳಲ್ಲಿ 'ಹರಿಭಕ್ತ ವಿಜಯ' ಎಂಬ ಹರಿದಾಸರ ಚರಿತ್ರೆಗಳನ್ನುಳ್ಳ ಗ್ರಂಥವನ್ನು ರಚಿಸಿದ್ದಾರೆ. ಈ ಗ್ರಂಥದಲ್ಲಿ ಉಕ್ತರಾದವರಲ್ಲಿ, ಕಲಬುರ್ಗಿ ಜಿಲ್ಲೆಯ ಕೆಂಭಾವಿ ಗ್ರಾಮದವರಾದ ಭೂವರಾಹ ವಿಠಲರು (ಸು.೧೭೯೮–೧೮೬೫); ಗದ್ವಾಲಿನ ಶ್ರೀಪತಿದಾಸರು (೧೭೯೮–೧೮೭೦); ತಂದೆ ಶ್ರೀಪತಿ ವಿಠಲ (೧೭೯೮–೧೮೯೦); ಶ್ರೀನಿಧಿ ವಿಠಲ (೧೮೦೦–೧೮೭೫), ಶ್ರೀವರ ವಿಠಲ (೧೮೨೩–೧೮೭೩), ತಂದೆ ಮುದ್ದುಮೋಹನ ವಿಠಲ (೧೮೬೫–೧೯೪೦) –ಇವರುಗಳು ಪ್ರಮುಖರು. ಈ ಎಲ್ಲರೂ ಕೆಲಕೆಲವು ಕೀರ್ತನೆಗಳನ್ನು ರಚಿಸಿದ್ದು ಅವು ದೊರಕಿವೆಯಾದರೂ ಯಾರೊಬ್ಬರೂ ಗಣ್ಯ ಪ್ರಮಾಣದಲ್ಲಿ ಕೀರ್ತನೆಗಳನ್ನು ರಚಿಸಿರುವುದು ತಿಳಿದುಬಂದಿಲ್ಲ. ಇವರುಗಳ ಜೀವನವೃತ್ತಾಂತ ವಿವರಗಳೂ ತಿಳಿಯದಾಗಿವೆ. ಇವರುಗಳಲ್ಲದೆ ಈ ಶತಮಾನದವರೇ ಆದ ಅಚಿಂತ್ಯಾದ್ಭುತ ವಿಠಲ, ಕರುಣಾಕರ ವಿಠಲ, ಪ್ರಾಣನಾಥ

ಈ ಇಬ್ಬರು ಹರಿದಾಸರ ಕೀರ್ತನರೂಪದ ಭಾಗವತಗಳ ತೌಲನಿಕ ಸಮೀಕ್ಷೆ ನಡೆಯಬೇಕಾಗಿದೆ. ಈ ಎಲ್ಲ ಕೀರ್ತನೆಗಳೂ ಬೇರೆ ಬೇರೆ ರಾಗ ತಾಳಗಳಲ್ಲಿ ರಚಿತವಾಗಿವೆ.

ನಾರಾಯಣದಾಸರು ತಮ್ಮ ತಂದೆಯಿಂದಲೇ ದಾಸದೀಕ್ಷೆಯನ್ನು ಪಡೆದರು. ಇವರು ರಚಿಸಿರುವ ೩೭ ಕೀರ್ತನೆಗಳು ಮಾತ್ರ ದೊರಕಿವೆ. ಇವರ ಕೀರ್ತನೆಗಳಲ್ಲಿ ಯಾವ ತತ್ತ್ವಪ್ರತಿಪಾದನೆಯ ಲೇಪವೂ ಇಲ್ಲ. ಎಲ್ಲವೂ ಭಗವಂತನಲ್ಲಿ ಆತ್ಮ ನಿವೇದನ ರೂಪದವು, ಇಲ್ಲವೇ ದೇವತಾ ಸ್ತೋತ್ರ ರೂಪದವು.

ಪಾವಂಜೆ ಹರಿದಾಸರು ಇನ್ನೂ ಈಚಿನವರು. ಇವರು ಕೀರ್ತನಕಾರರು ಅಥವಾ ಹರಿಕಥಾದಾಸರು ಎಂಬ ಹರಿದಾಸರ ವರ್ಗಕ್ಕೆ ಸೇರಿದವರು. ಪಾವಂಜೆ ಹರಿದಾಸರು ಎಂದು ಪ್ರಸಿದ್ಧರಾದ ಇವರ ಹೆಸರು ಪಾವಂಜೆ ಹರಿದಾಸ ಲಕ್ಷ್ಮೀನಾರಣಪ್ಪಯ್ಯ. ಇವರ ವೈಷ್ಣವ ಸಂಪ್ರದಾಯಕ್ಕೆ ಸೇರಿದವರಾದರೂ ಮಾಧ್ವಬ್ರಾಹ್ಮಣ ಕುಲೋತ್ಪನ್ನರಲ್ಲ. ಇವರು ೧೮೫೪ರಲ್ಲಿ ದಕ್ಷಿಣಕನ್ನಡದ ಮೂಲ್ಕಿಯ ಸಮೀಪದಲ್ಲಿರುವ ಅತ್ತೂರು ಎಂಬಲ್ಲಿ ಸ್ಥಾನಿಕ ಬ್ರಾಹ್ಮಣ ಸಮಾಜದ ಶ್ರೀ ವೆಂಕಟಕೃಷ್ಣಯ್ಯನೆಂಬವರ ಪುತ್ರರು. ಇವರು ಇತರ ಹರಿದಾಸರಂತೆ ದಾಸ ದೀಕ್ಷೆಯನ್ನೂ ಅಂಕಿತವನ್ನೂ ಪಡೆದದ್ದಕ್ಕೆ ಯಾವ ಸಾಕ್ಷ್ಯಾಧಾರವೂ ಇಲ್ಲ. ತಂದೆ 'ಶಿವದ್ವಿಜ' ಎಂದು ತಾವೇ ಹೇಳಿಕೊಂಡಿರುವುದರಿಂದ ಪಾವಂಜೆ ಹರಿದಾಸರು ಮೊದಲು ಶೈವ ಬ್ರಾಹ್ಮಣರು ಎಂಬುದು ಸ್ಪಷ್ಟ. ಕಾಶಿಯ ವೈಷ್ಣವ ಮಠಾಧೀಶರಾಗಿದ್ದ, ಗೌಡಸಾರಸ್ವತ ಬ್ರಾಹ್ಮಣ ಸಮಾಜದ ಧರ್ಮಗುರುಗಳಾಗಿದ್ದ ಭುವನೇಂದ್ರರ ಶಿಷ್ಯರಾದಮೇಲೆ ವೈಷ್ಣವಮತ ಸ್ವೀಕಾರಮಾಡಿದಂತೆ ಕಂಡು ಬರುತ್ತದೆ. ಪಾವಂಜೆಯವರು ಮಾಧ್ವಮತದಲ್ಲಿ ಮುಖ್ಯಪ್ರಾಣನೆಂದು ಪ್ರಸಿದ್ಧನಾದ ಹನುಮಂತನ ಮೇಲೆ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. "ಹರಿಸರ್ವೋತ್ತಮನೆಂದು ಧರೆಗೆ ಸಾರುತ ಬಂದು। ವರ ವೈಷ್ಣವಮತವ ಸ್ಥಿರಮಾಡಿ। ಧರಣಿಯೊಳಗೆ ತಾತ್ಪರ್ಯನಿರ್ಣಯವೆಂಬ। ಪರಮಗ್ರಂಥವ ಗೈದ ಗುರು ಮಧ್ವಾಚಾರ್ಯ"ರನ್ನು ಒಂದು ಕೀರ್ತನೆಯಲ್ಲಿ ಸ್ತುತಿಸಿರುವುದರಿಂದ ಪಾವಂಜೆ ದಾಸರನ್ನು ವೈಷ್ಣವ ಸಂಪ್ರದಾಯದ ಹರಿದಾಸರೆಂದು ಎಣಿಸಲು ಅಡ್ಡಿಯಿಲ್ಲ. ಅಲ್ಲದೆ, "ಕನಕಪುರಂದರ ಮುಖ್ಯ ದಾಸರಂತೆ ಗುಣವೆನಗಿನಿತಿಲ್ಲ, ಜನರ ವಿಡಂಬಕೆ ದಾಸನಾದರೂ ಘನ ಕೃಪಾರ್ಣವನೆ, ಕರುಣಿಸಬಾರದೆ" ಎಂಬ ಮಾತಿನಿಂದ ಇವರು ಹರಿದಾಸ ಪರಂಪರೆಗೆ ಸೇರತಕ್ಕವರೆ. ಹೀಗಿದ್ದರೂ ಇವರ ಕೀರ್ತನೆಗಳಲ್ಲಿ ಮಾಧ್ವಮತದ ಪ್ರಮೇಯಗಳ ಉಲ್ಲೇಖ ಬಲುಮಟ್ಟಿಗೆ ಇಲ್ಲವೆಂದೇ ಹೇಳಬಹುದು.

ಇಂಗ್ಲಿಷಿಗೂ ಕನ್ನಡಕ್ಕೂ ಅನುವಾದಗೊಂಡಿದೆ, ವಾಸುದೇವಯತಿಗಳಿಗೂ ತಿಮ್ಮಪ್ಪದಾಸರಿಗೂ ನಡುವೆ ರಕ್ತಬಾಂಧವ್ಯಕ್ಕಿಂತ ಹೆಚ್ಚಾಗಿ ಗುರು–ಶಿಷ್ಯ ಸಂಬಂಧವೇ ಹೆಚ್ಚಾಗಿ ಕಂಡುಬರುತ್ತದೆ. ತಿಮ್ಮಪ್ಪದಾಸರು ವೇದಾಂತವನ್ನೂ ಕಾವ್ಯಶಾಸ್ತ್ರ ಸಂಗೀತ ಶಾಸ್ತ್ರಗಳನ್ನೂ ನೀಲಕಂಠಾರ್ಯ ಮತ್ತು ರಾಮಕೃಷ್ಣಾರ್ಯ ಎಂಬವರಲ್ಲಿ ವ್ಯಾಸಂಗ ಮಾಡಿದಂತೆ ದಾಸರ ಕೀರ್ತನೆಗಳಿಂದಲೇ ವ್ಯಕ್ತಪಡುತ್ತದೆ. ಈ ಹಿಂದೆಯೇ ತಿಳಿಸಿದಂತೆ ಇವರು ಹರಿಹರಾಭೇದ ದೃಷ್ಟಿಯ ಭಾಗವತ ಸಂಪ್ರದಾಯಕ್ಕೆ ಸೇರಿದವರಾಗಿದ್ದು, ತಿರುಪತಿ ವೆಂಕಟರಮಣನ ಪರಮಭಕ್ತರಾಗಿದ್ದರು. ಇವರು ತಮ್ಮ ಗುರುಗಳನ್ನು ಸ್ತುತಿಸುವ ಕೀರ್ತನೆಗಳಲ್ಲಿ ತಿರುಪತಿ ವೆಂಕಟರಮಣನೇ ಗುರುರೂಪದಲ್ಲಿ ತಮಗೆ ಅನುಗ್ರಹ ಮಾಡಿದ್ದಾನೆ ಎಂಬ ನಂಬಿಕೆ ಒಡಮೂಡಿದೆ. 'ಧ್ರುವಚರಿತ್ರೆ' ಎಂಬ ತಮ್ಮ ಸಾಂಗತ್ಯ ಗ್ರಂಥದಲ್ಲಿ –

ಹರಿಯ ದಾಸರ ದಾಸ ದಾಸರ ದಾಸ ಚರಣ ದಾಸರುಗಳಾ
ನಿರುತ ಸೇವಿಪ ತಿಂಮದಾಸ ಪೇಳಿದ ಧ್ರುವ ಚರಿತೆಯನಿದನು ಲಾಲಿಪುದು॥

–ಎಂದು ಸ್ಪಷ್ಟವಾಗಿ ಘೋಷಿಸಿದ್ದಾರೆ. ಹೀಗಿರುವಾಗ, ಇವರನ್ನು ಹರಿದಾಸರಲ್ಲ ಎನ್ನುವುದು ಹೇಗೆ?

ತಿಮ್ಮಪ್ಪದಾಸರು ವಿವಿಧ ವೇದಾಂತ ವಿಚಾರಗಳನ್ನು ತಮ್ಮ ಕೀರ್ತನೆಗಳಲ್ಲಿ ಪ್ರತಿಪಾದಿಸಿದ್ದಾರೆ. ತಮ್ಮ ಕೀರ್ತನೆಗಳಲ್ಲಿ ನೂರೆಂಟು ಕೀರ್ತನೆಗಳನ್ನು ಆಯ್ದು 'ಪೂಜಾವಿಧಾನ ಕೀರ್ತನೆಗಳು' ಎಂದು ಸಂಕಲಿಸಿದ್ದಾರೆ. ಇವುಗಳಲ್ಲಿ ಅದ್ವೈತ ತತ್ತ್ವ ಪ್ರತಿಪಾದನೆ ಇದ್ದರೂ, ಅದು ಏನಿದ್ದರೂ ಸೂತ್ರಪ್ರಾಯ; ಕೀರ್ತನೆಗಳು, ಹರಿಭಕ್ತಿಯನ್ನು ಪರಿಮಳಿಸುವ ಭಕ್ತಿ ಕುಸುಮಗಳು. ಈ ಕೀರ್ತನೆಗಳು 'ಅರ್ಚನ' ಎಂಬ ಹೆಸರಿನಿಂದ ಅಚ್ಚಾಗಿದೆ. ಇವರ ಇನ್ನೊಂದು ಗಮನಾರ್ಹ ಕೃತಿ, ಭಾಗವತ ದಶಮ ಸ್ಕಂಧದ ಕನ್ನಡ ಅನುವಾದ. ಇದು ಕೀರ್ತನೆಗಳ ರೂಪದಲ್ಲಿದೆ. 'ಶ್ರೀ ಕೃಷ್ಣ ಬಾಲಲೀಲೆ' ಎಂಬ ಈ ಕೃತಿಯಲ್ಲಿ ಮುನ್ನೂರಕ್ಕೂ ಮೇಲ್ಪಟ್ಟು ಕೀರ್ತನೆಗಳಿವೆ. ಇದೇ ಸಂದರ್ಭದಲ್ಲಿ ೧೭ನೆಯ ಶತಮಾನದವರಾದ ಪ್ರಸನ್ನ ವೆಂಕಟದಾಸರ ಕೀರ್ತನರೂಪದ ಭಾಗವತವನ್ನು ನೆನೆಯಬಹುದು. ಈ ಕೃತಿಯ ಪೂರ್ವಭಾಗ ಮಾತ್ರ ಪ್ರಕಟವಾಗಿದ್ದು, ಅದರಲ್ಲಿ ೬೭ ಕೀರ್ತನೆಗಳಿವೆ. ಇವು ಒಂದು ಕಾಲದಲ್ಲಿ –ಎಂದರೆ ಮೊನ್ನೆಮೊನ್ನೆಯವರೆಗೂ ಉತ್ತರ ಕರ್ನಾಟಕದ ಹೆಣ್ಣುಮಕ್ಕಳ ನಾಲಗೆಯ ಮೇಲೆ ನಲಿಯುತ್ತಿದ್ದವು ಎಂದು ತಿಳಿದುಬರುತ್ತದೆ.

ಮಾಡಿಕೊಡುವ ಪ್ರಯತ್ನಕ್ಕೆ ಕೈಹಾಕುವುದಿಲ್ಲ. ಏಕೆಂದರೆ, ದಾಸಸಾಹಿತ್ಯದಲ್ಲಿ ಆಸಕ್ತರಾದವರಿಗೆ ಅವರ ವಿಚಾರದ ಬಗ್ಗೆ ತಕ್ಕಮಟ್ಟಿಗೆ ತಿಳಿವಳಿಕೆ ಇದೆ ಎಂದು ನನ್ನ ನಂಬಿಕೆ. ಈಚೆಗೆ ಬೆಳಕಿಗೆ ಬಂದವರ ಬಗೆಗೆ ಮಾತ್ರ ನಾಲ್ಕು ಮಾತನ್ನು ಹೇಳಿದ್ದಾಗಿದೆ. ದಾಸಸಾಹಿತ್ಯದ ಸ್ವರೂಪವನ್ನು ಕುರಿತು ನಾಲ್ಕು ಮಾತನ್ನು ಹೇಳಲು ಪ್ರಯತ್ನಿಸುತ್ತೇನೆ.

ದಾಸಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಅತ್ಯಂತ ಪ್ರಸಿದ್ಧವಾದದ್ದು ದಾಸರ ಪದ ಅಥವಾ ದೇವರನಾಮ. ದೇವರನಾಮ ಎನ್ನುವುದು ವಿಷಯವನ್ನು ಸೂಚಿಸಿದರೆ, ಪದ ದಾಸಸಾಹಿತ್ಯದ ಪ್ರಮುಖ ಪ್ರಕಾರದ ಅಂಗರಚನೆಯನ್ನು ಸೂಚಿಸುತ್ತದೆ, ಪದ, ಪಾದ, ಚರಣ, ಇವು ಪರ್ಯಾಯ ಪದಗಳು. ಪಾದ ಎಂದರೆ ನಾಲ್ಕನೆಯ ಒಂದು ಭಾಗ. ಪಾದ ಅಥವಾ ಪದಗಳನ್ನು ಉಳ್ಳದ್ದು ಪದ್ಯ. ಆದ್ದರಿಂದ, ಪದ್ಯಕ್ಕೆ ನಾಲ್ಕು ಪಾದಗಳು ಅಥವಾ ಪಂಕ್ತಿಗಳು. ಒಂದರಿಂದ ಹಿಡಿದು ಅನೇಕ ಪದ್ಯಗಳ ಅಥವಾ ಚತುಷ್ಪದಿಗಳ ಗುಂಪಿಗೂ ಪದ ಎಂಬ ಹೆಸರೇ ಕಾಲಕ್ರಮದಲ್ಲಿ ರೂಢಿಗೆ ಬಂದಿರಬೇಕು. ಇದಕ್ಕೆ ಪಲ್ಲವಿ ಮತ್ತು ಅನುಪಲ್ಲವಿ ಕೂಡಿಕೊಂಡು ನಮಗೆ ಈಗ ಪರಿಚಿತವಾಗಿರುವ ದಾಸರ ಪದಗಳೂ, ತ್ಯಾಗರಾಜಾದಿಗಳ ಸಂಗೀತ ಕೃತಿಗಳೂ ಬೆಳೆದು ರೂಪಗೊಂಡುವು. ಈ ಪದಗಳು ದೇವರನಾಮ ಸಂಕೀರ್ತನೆಯನ್ನು ಒಳಗೊಂಡದ್ದರಿಂದ ಕೀರ್ತನೆಗಳು ಎಂದೂ ರೂಢಿಯಾದುವು. ಕೀರ್ತನೆಗಳಲ್ಲಿ ಮಾತಿನ ಪ್ರಾಧಾನ್ಯ ಕಡಿಮೆಯಾಗಿ ಧಾತು ಪ್ರಧಾನವಾದಾಗ ಕೃತಿ ಎನ್ನಿಸಿಕೊಂಡಿತು.

ದಾಸಸಾಹಿತ್ಯದಲ್ಲಿ ಕಂಡುಬರುವ ಇತರ ಪ್ರಕಾರಗಳು ಯಾವುವೆಂದರೆ – ಸುಳಾದಿ, ಉಗಾಭೋಗ, ತತ್ತ್ವಸುವಾಲಿ, ಶ್ಲೋಕ, ಕಂದ, ವಚನ, ವೃತ್ತನಾಮ, ದ್ವಿಪದಿ, ತ್ರಿಪದಿ, ಚೌಪದಿ, ಷಟ್ಪದಿ, ಅಷ್ಟಪದಿ, ರಗಳೆ, ಯಾಲಪದ, ಇವುಗಳಲ್ಲದೆ, ಶ್ರೀಪಾದರಾಜರು ರಚಿಸಿರುವ ಗೋಪಿಕಾಗೀತೆ, ಭ್ರಮರಗೀತೆ ಮತ್ತು ದಂಡಕ ಎಂಬ ಪ್ರಕಾರಗಳೂ ಇವೆ.

ಸಂಶೋಧಕ ಪ್ರವೃತ್ತಿಯುಳ್ಳ ವಿದ್ವಾಂಸರಲ್ಲಿ ಹೆಚ್ಚು ಜಿಜ್ಞಾಸೆಗೆ ಒಳಗಾಗಿರುವ ಎರಡು ಪ್ರಕಾರಗಳೆಂದರೆ, ಸುಳಾದಿ ಮತ್ತು ಉಗಾಭೋಗ. ಇವೆರಡರಲ್ಲಿ ಉಗಾಭೋಗವು ಶಿವಶರಣರ ವಚನಗಳನ್ನು ಹೋಲುತ್ತಿದ್ದು, ಸುಳಾದಿಗಿಂತ ಹೆಚ್ಚು ಪ್ರಾಚೀನವಾದ ಗೇಯಪ್ರಕಾರ ಎಂದು ಹೇಳಬಹುದು. ಸುಳಾದಿಗಳಿಗಿಂತ ಇವು ಹೆಚ್ಚು ಜನಪ್ರಿಯವೂ ಪ್ರಸಿದ್ಧವೂ ಆಗಿದ್ದವು. ಗೇಯ ಪ್ರಬಂಧಗಳನ್ನು ನಿಬದ್ಧ ಎಂದರೆ ತಾಳಯುಕ್ತ ರಚನೆ, ಅನಿಬದ್ಧ ಎಂದರೆ ತಾಳರಹಿತ ರಚನೆ

ದೇವರುಗಳನ್ನು ಕೀರ್ತಿಸುವುದರಲ್ಲಿಯೇ ಅವರಿಗೆ ಆನಂದ. ಇವರ ಹಾಡುಗಳೆಲ್ಲವೂ ಭಕ್ತಿರಸಾನಂದ ಪ್ರವಾಹದ ತರಂಗಗಳು. ಇವರ ೨೩೭ ಕೀರ್ತನೆಗಳು ಇತ್ತೀಚೆಗೆ (೧೯೭೮ರಲ್ಲಿ) 'ಪಾವಂಜೆ ಹರಿದಾಸವಾಣಿ' ಎಂಬ ಹೆಸರಿನಿಂದ ಸಂಕಲಿತವಾಗಿ ಪ್ರಕಟವಾಗಿವೆ. ಪಾವಂಜೆಯಲ್ಲೆ ಕೊನೆಗಾಲವನ್ನು ಕಳೆದ ಇವರು 'ಪಾವಂಜೆ ಹರಿದಾಸರು' ಎಂದೇ ಪ್ರಸಿದ್ಧರಾಗಿದ್ದರು. ೧೯೨೪ರಲ್ಲಿ ವೈಕುಂಠವಾಸಿಗಳಾದ ಇವರು ಹರಿದಾಸ ಪರಂಪರೆಯಲ್ಲಿ ಗಣ್ಯರಾದ ಅರ್ವಾಚೀನರು.

## IV

ಹರಿದಾಸ ಸಂಪ್ರದಾಯದಲ್ಲಿ ಆದ್ಯರು ಯಾರು, ಪ್ರವರ್ತಕರು ಯಾರು, ಪ್ರಮುಖರು ಯಾರು ಎಂಬ ಚರ್ಚೆ ವಿಜಯದಾಸರ ಕಾಲದ ತರುವಾಯ ನಡೆದಿರಬೇಕು ಎಂದು ಕಾಣುತ್ತದೆ. ಈ ಚರ್ಚೆಯ ಪರಿಣಾಮವಾಗಿ ಒಂದು ಒಮ್ಮತ (Consensus) ರೂಪಗೊಂಡಂತೆ ತೋರುತ್ತದೆ. ಆ ಒಮ್ಮತವನ್ನು ಪ್ರತಿಬಿಂಬಿಸುವಂತಿದೆ ಪ್ರಚಾರದಲ್ಲಿರುವ ಈ ಸ್ತುತಿರೂಪದ ಶ್ಲೋಕ:

ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ।
ನಮಃ ಪುರಂದರಾರ್ಯಾಯ ವಿಜಯಾರ್ಯಾಯತೇ ನಮಃ॥

ಈ ನಾಲ್ವರು ಹರಿದಾಸ ಸಾಹಿತ್ಯ ಮಂಟಪದ ನಾಲ್ಕು ಸ್ತಂಭಗಳು. "ಹರಿದಾಸ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಪ್ರಯೋಗ ನಡೆಸಿ ಜಯಶಾಲಿಗಳಾದವರು ಶ್ರೀಪಾದರಾಜರು. ಅವರ ಮಾರ್ಗದಲ್ಲಿಯೇ ನಡೆದು ಹರಿದಾಸರ ಒಂದು ಬಳಗವನ್ನೆ ಕಟ್ಟಿದವರು ಶ್ರೀ ವ್ಯಾಸರಾಯರು. ಹರಿದಾಸ ಸಾಹಿತ್ಯದ ಮೊದಲನೆಯ ಪರಂಪರೆಗೆ ಕಳಶಪ್ರಾಯರಾದವರು ಪುರಂದರದಾಸರು. ತಟಸ್ಥವಾಗಿದ್ದ ಹರಿದಾಸ ಸಾಹಿತ್ಯಕ್ಕೆ ಮತ್ತೆ ಚೇತನವನ್ನಿತ್ತು ಎರಡನೆಯ ಪರಂಪರೆಯನ್ನು ಪುನರುಜ್ಜೀವನಗೊಳಿಸಿದ ಮಹಿಮರು ವಿಜಯದಾಸರು. ಈ ಪ್ರಮುಖ ಶಕ್ತಿಗಳ ಚಾಲನೆಯಿಂದ ಸಾಹಿತ್ಯದ ಸಂಪತ್ತು ಸಮೃದ್ಧವಾಯಿತು." ವಿಜಯದಾಸರ ಪರಂಪರೆ ಹೇಗೆ ಶಾಖೋಪಶಾಖೆಯಾಗಿ ಬೆಳೆದು ಬಂದಿತು ಎನ್ನುವುದನ್ನು ಪರಿಶೀಲಿಸಿದ್ದೇವೆ.

ಈ ದಾಸ ಚತುಷ್ಟಯದ ಜೀವನ ವೃತ್ತಾಂತ ವಿವರಗಳನ್ನು ಇಲ್ಲಿ ಪರಿಚಯ

ಪ್ರಚಾರದಲ್ಲಿದ್ದಿರಬೇಕು. ಏಕೆಂದರೆ, ೧೨ನೆಯ ಶತಮಾನದ ಅಗ್ಗಳನೆಂಬ ಕನ್ನಡ ಕವಿ ಸುಳಾದಿಯ ಪ್ರಸ್ತಾಪ ಮಾಡಿದ್ದಾನೆ, ಇತರ ಕನ್ನಡ ಕವಿಗಳೂ ಒಬ್ಬಿಬ್ಬರು ಪ್ರಾಚೀನರು ಇದರ ಪ್ರಸ್ತಾಪ ಮಾಡಿದ್ದಾರೆ. ಆದ್ದರಿಂದ, ಸುಳಾದಿ ಎಂಬ ಗೇಯಪ್ರಬಂಧ ಪ್ರಕಾರವು ಕನ್ನಡ ಭಾಷೆಗೂ ಕರ್ನಾಟಕಕ್ಕೂ, ಕರ್ನಾಟಕ ಸಂಗೀತಕ್ಕೂ ವಿಶಿಷ್ಟವಾದದ್ದು ಎಂದು ಹೇಳಬಹುದು. ಸ್ಥೂಲ ಲಕ್ಷಣ ಮತ್ತು ಸುಳಾದಿಯ ನಾಮ ನಿರ್ದೇಶ ಬಹಳ ಪ್ರಾಚೀನವಾದರೂ ಲಕ್ಷ್ಯಗಳು ದೊರಕುವುದು ಶ್ರೀಪಾದರಾಜರಿಂದ ಆರಂಭವಾದ ಹರಿದಾಸ ಸಾಹಿತ್ಯದಲ್ಲಿಯೇ. ಅನ್ಯತ್ರ ಅವು ದೊರಕವು ಎಂದು ಬಲ್ಲವರು ಹೇಳುತ್ತಾರೆ. ಪ್ರಮುಖ ಹರಿದಾಸರೆಲ್ಲ ಈ ಪ್ರಕಾರಕ್ಕೆ ಗಮನಾರ್ಹವಾಗಿ ಕಾಣಿಕೆ ಸಲ್ಲಿಸಿದ್ದಾರೆ. ಲಕ್ಷ್ಯಗಳಲ್ಲಿ, ರಾಗನಿರ್ದೇಶ ತಾಳನಿರ್ದೇಶಗಳು ಪರಂಪರಾಗತವಾಗಿ ಉಳಿದುಬಂದಿದೆ. ಈ ಲಕ್ಷ್ಯಗಳನ್ನು ಗಮನಿಸಿಯೇ ಲಕ್ಷಣಕಾರರು ಸುಳಾದಿ ಪ್ರಬಂಧವು ಕರ್ನಾಟಕ ಸಂಗೀತದಲ್ಲಿ ಪ್ರಸಿದ್ಧವಾದ ಸಪ್ತತಾಳಗಳಿಂದ ನಿಬದ್ಧವಾದದ್ದು ಎಂದು ಹೇಳಿದ್ದಾರೆ.

ಧ್ರುವೋಮಠ್ಯೋ ರೂಪಕಶ್ಚ ಝಂಪಾ ತ್ರಿಪುಟ ಏವ ಚ
ಅಟ್ಟತಾಲೈಕತಾಲಶ್ಚೇತ್ಯಷ್ಟಾಲಂಕೃತಯಸ್ಸ್ಮೃತಾ
ಏತಾನ್ ಧ್ರುವಾದಿಕಾನ್ ಸಪ್ತತಾಲಾನ್ ಸೂಡಾದಿ ಸಂಜ್ಞಿಕಾನ್

ಎಂಬ ವೆಂಕಟಮಖಿಯ ಹೇಳಿಕೆ ಲಕ್ಷ್ಯಗಳ ಆಧಾರದ ಮೇಲೆಯೇ ಹೇಳಿದ್ದಾಗಿದೆ.

ಸುಳಾದಿ ಶಬ್ದದ ನಿಷ್ಪತ್ತಿ ವಿಚಾರಾರ್ಹ, 'ಸೂಡಾದಿ'ಯೇ 'ಸುಳಾದಿ'ಯಾಗಿದೆ ಎಂಬ ಅಭಿಪ್ರಾಯ ಭಾಷಾವಿಜ್ಞಾನ ದೃಷ್ಟಿಯಿಂದ ಸಮ್ಮತವಾಗಿದೆ. ಆದರೆ, ಸೂಡ ಎಂಬುದರ ಯೌಗಿಕಾರ್ಥವು ಮಾತ್ರ ಬಗೆಹರಿದಿಲ್ಲ. ಇದು ದೇಶ್ಯ ಶಬ್ದವೆಂದೇ ಅನೇಕರ ಮತ. 'ಸುಳು+ಹಾದಿ' – ಸುಳಾದಿ ಎಂದರೆ ಶ್ರೀಹರಿಯನ್ನು ಒಲಿಸಿಕೊಳ್ಳಲು ಸುಲಭವಾದ ಮಾರ್ಗ ಎಂಬ ವಿವರಣೆಯೂ ಉಂಟು. ಇದು ಕೇವಲ ಕಲ್ಪನಾವಿಲಾಸವಾಗಿ ಕಾಣುತ್ತದೆ. 'ಸೂಳ್(ೞ್)' ಎಂಬ ಹಳಗನ್ನಡ ಪದಕ್ಕೆ ಸಲ, ಸರತಿ, turn, ಎಂಬ ಅರ್ಥವಿದೆ. ಏಳು ತಾಳಗಳಿಗೆಂದು ರಚಿತವಾದ ಬಿಡಿರಚನೆಗಳನ್ನು ಒಂದಾದಮೇಲೆ ಒಂದರಂತೆ ಸರತಿಯಲ್ಲಿ ಹಾಡತಕ್ಕದು ಎಂದು ಅರ್ಥಮಾಡಬಹುದೇ ಎಂಬುದನ್ನು ಪರಿಶೀಲಿಸಬಹುದು. ಡಕಾರ ಳ(ೞ) ಕಾರವಾಗುವಂತೆ ಳಕಾರ (ೞ) ಡಕಾರವಾಗುವುದೂ ಧ್ವನಿಶಾಸ್ತ್ರಕ್ಕೆ ಸಮ್ಮತ.

ಎಂದು ಸ್ಥೂಲವಾಗಿ ವಿಂಗಡಿಸಬಹುದು. ಬಸವಣ್ಣನವರ ಒಂದು ವಚನದಲ್ಲಿ ಉಗಾಭೋಗದ ಅನಿಬದ್ಧ ಸ್ವರೂಪ ಸುವ್ಯಕ್ತವಾಗಿದೆ. ಅವರು ಹೇಳುತ್ತಾರೆ: "ತಾಳಮಾನಸರಿಸವನರಿಯೆ, ಓಜೆ ಬಜಾವಣೆಯ ಲೆಕ್ಕವನರಿಯೆ, ಅಮೃತಗಣ ದೇವಗಣವನರಿಯೆ, ಕೂಡಲ ಸಂಗಮದೇವಾ, ನಿನಗೆ ಕೇಡಿಲ್ಲವಾಗಿ ಆನೊಲಿದಂತೆ ಹಾಡುವೆ" ಎಂದು ವಚನಗಳನ್ನು ಹಾಡುತ್ತಿದ್ದರು. ತಾವು ಒಲಿದಂತೆ ಹಾಡುತ್ತಿದ್ದರು ಶಿವಶರಣರು ಎಂದಾಯಿತು. ಹೀಗಿದ್ದರೂ, ಉಗಾಭೋಗಕ್ಕೆ ತಾಳಮಾನದ ಕಟ್ಟು ಇಲ್ಲದಿದ್ದರೂ ಗೇಯ ಕ್ರಮದ ಕಟ್ಟು ಇದ್ದಂತೆ ಕಂಡುಬರುತ್ತದೆ. ಸಂಗೀತ ಶಾಸ್ತ್ರ ಗ್ರಂಥಗಳಲ್ಲಿ ಸಧಾತುಕ ಪ್ರಬಂಧಗಳನ್ನು ಹಾಡುವ ಕ್ರಮವನ್ನು ವಿವರಿಸುವಲ್ಲಿ, ಧಾತುವಿಗೆ ಮೂರು ಅಥವಾ ನಾಲ್ಕು ಅವಯವಗಳನ್ನು ಹೇಳಿದೆ. ಅವು ಯವುವೆಂದರೆ: ಉದ್ಗ್ರಾಹ, ಮೇಳಾಪಕ, ಧ್ರುವ, ಆಭೋಗ; ಇದಕ್ಕೆ ಕೆಲವರು 'ಅಂತರ'ವನ್ನೂ ಸೇರಿಸಿದ್ದಾರೆ. ಉದ್ಗ್ರಾಹ–ಆಭೋಗಗಳ ಸಂಕ್ಷಿಪ್ತ ರೂಪವೇ ಉಗಾಭೋಗ ಎಂದು ಹೇಳಬಹುದು. ಉಗಾಭೋಗದ ಧಾತುವಿನ್ಯಾಸಕ್ರಮವನ್ನು ಬೇಲೂರು ಕೇಶವದಾಸರು ಹೀಗೆ ವಿವರಿಸುತ್ತಾರೆ: "ಉದ್ಗ್ರಾಹ, ಮೇಲಾಪಕ, ಧ್ರುವ, ಅಂತರ, ಆಭೋಗ ಎಂಬಿವುಗಳು ಉಗಾಭೋಗದ ಐದು ಧಾತುಗಳು. ಒಂದು ರಾಗವನ್ನು ಗ್ರಹಿಸಿ, ಮೇಳದಲ್ಲಿ ನಿಲ್ಲಿಸಿ, ರಾಗವನ್ನು ಧ್ರುವಗೊಳಿಸಿ ಸಮೀಪ ರಾಗಗಳ ಸೂಕ್ಷ್ಮಸ್ಥಾನಗಳಲ್ಲಿ ವಿನ್ಯಾಸಗೊಳಿಸಿ ರಾಗಸಮಾರೋಪಣ ಮಾಡುವುದೆ ಧಾತುಗಳ ತಾತ್ಪರ್ಯ." ಈ ವಿವರಣೆಯನ್ನು ಪರಿಭಾವಿಸಿದರೆ ಉಗಾಭೋಗವು ರಾಗಮಾಲಿಕೆಯಲ್ಲಿ ಹಾಡತಕ್ಕದ್ದಾಗಿರಬಹುದು, ಎಂಬ ಸಂದೇಹವುಂಟಾಗುತ್ತದೆ. ಸ್ವರೂಪದಲ್ಲಿ ಉಗಾಭೋಗಕ್ಕೂ ಶಿವಶರಣರ ವಚನಕ್ಕೂ ಏನೂ ವ್ಯತ್ಯಾಸವಿಲ್ಲ. ಹೀಗಿರುವಲ್ಲಿ, ವಚನಗಳನ್ನು ಇಂದಿನ ಪದ್ಧತಿಯಂತೆ ತಾಳಸಹಿತವಾಗಿ ಹಾಡುವುದು ಸರಿಯಲ್ಲ ಎನ್ನಿಸುತ್ತದೆ.

ಉಗಾಭೋಗವು ರಾಗಮಾಲಿಕೆ ಹೌದೋ ಅಲ್ಲವೋ ಎಂಬುದು ವಿಚಾರಣೀಯ. ಆದರೆ ಸುಳಾದಿ ಒಂದೇ ರಾಗದಲ್ಲಿ ಹಾಡತಕ್ಕ ತಾಳಮಾಲಿಕೆ ಎಂಬುದು ಹರಿದಾಸ ಸಾಹಿತ್ಯದ ಲಕ್ಷ್ಯಗಳಿಂದ ಸ್ಪಷ್ಟಪಡುತ್ತದೆ, ಪ್ರಾಚೀನ ಸಂಗೀತ ಶಾಸ್ತ್ರಗ್ರಂಥಗಳಲ್ಲಿ 'ಸಾಲಗಸೂಡ' ಎಂಬ ಪ್ರಬಂಧ ಪ್ರಭೇದದ ಉಲ್ಲೇಖವಿದೆ. ಇದು ಏಳು ಬಿಡಿರಚನೆಗಳ ಒಂದು ಗೀತಗುಚ್ಛವಾಗಿದ್ದು, ಕಾಲಕ್ರಮದಲ್ಲಿ ಸುಳಾದಿ ಎಂಬ ಒಂದೇ ಪ್ರಬಂಧವಾಗಿ ರೂಪಗೊಂಡಂತೆ ಕಂಡುಬರುತ್ತದೆ. ಹರಿದಾಸ ಸಾಹಿತ್ಯದಲ್ಲಿ ಸುಳಾದಿಯುನ್ನು ರಚಿಸಿದವರಲ್ಲಿ ಶ್ರೀಪಾದರಾಜರೇ ಮೊದಲಿಗರಾದರೂ ಅವರಿಗೂ ಪೂರ್ವದಲ್ಲಿ ಅದು ಕರ್ನಾಟಕದಲ್ಲಿ

'ಆದಿ' ಪದಕ್ಕೆ ಔಚಿತ್ಯ ಕಲ್ಪಿಸುವುದು ಹೇಗೆ? 'ಸುಳಾದಿ'ಯ ನಿರ್ವಚನ ಇನ್ನೂ ತೆರೆದ ಪ್ರಶ್ನೆಯಾಗಿಯೇ ಉಳಿಯುತ್ತದೆ ಎನ್ನಬೇಕಾಗುತ್ತದೆ.

ಸುಳಾದಿಗಳನ್ನು ಹಾಡುವಾಗ ಹರಿದಾಸರು ವಿವಿಧ ತಾಳಗತಿಗಳನ್ನು ಗೆಜ್ಜೆ ಕಟ್ಟಿದ ಪದಾಘಾತದಿಂದ ನಿರ್ದೇಶಿಸುತ್ತ ನರ್ತನ ಮಾಡುತ್ತಿದ್ದಿರಬೇಕು. ಪದಗಳನ್ನು ಹಾಡುವಾಗಲೂ ಗೆಜ್ಜೆಯ ಘಲಿರು ಮೊಳಗುತ್ತಿದ್ದಿರಬೇಕು. ಹಾಗಿಲ್ಲದ ಮೇಲೆ, ಹರಿದಾಸರು ಗೆಜ್ಜೆ ಕಟ್ಟಿ ಪ್ರಯೋಜನ ಏನು? ದಾಸರ ಯಾವುದೋ ಒಂದೆರಡು ಕೃತಿಗಳಲ್ಲಿ ನರ್ತನದ ಪ್ರಸಕ್ತಿ ಬಂದಿರುವಂತಿದೆ. ನೆನಪಿಗೆ ಬರಲೊಲ್ಲದು.

ಹರಿದಾಸರ ರಚನೆಗಳಲ್ಲಿ ಯಾವುದಾದರೂ ಛಂದೋಲಯಗಳು ಪ್ರಯುಕ್ತವಾಗಿವೆಯೇ ಎಂಬ ಪ್ರಶ್ನೆಯೂ ವಿಚಾರಾರ್ಹ, ಹರಿದಾಸರು ಅನೇಕರು ತ್ರಿಪದಿ, ಸಾಂಗತ್ಯ, ಷಟ್ಪದಿಗಳನ್ನು ಸ್ಪಷ್ಟವಾಗಿ ಬಳಸಿದ್ದಾರೆ. ಬಸವಣ್ಣನವರು 'ದೇವಗಣ'ವನರಿಯೆ ಎಂಬ ಮಾತಿನಿಂದ, ದೇವಗಣಗಳಲ್ಲಿ ಹಾಡುಗಳು, ಮುಖ್ಯವಾಗಿ ವಚನಗಳು, ರಚಿತವಾಗುತ್ತಿದ್ದವು ಎಂದು ಕಂಡುಬರುತ್ತದೆ. ಈ ದೇವಗಣಗಳು ಕನ್ನಡದಲ್ಲಿ ಬ್ರಹ್ಮ, ವಿಷ್ಣು, ರುದ್ರ ಎಂಬ ಹೆಸರುಗಳಿಂದ ಕನ್ನಡ ಛಂದೋಗ್ರಂಥಗಳಲ್ಲಿ ನಿರ್ದಿಷ್ಟವಾಗಿವೆ. ಈ ಗಣಗಳ ಲಯಕ್ಕೆ ಬಿ.ಎಂ.ಶ್ರೀ.ಯವರು ಅಂಶಲಯ ಎಂಬ ಹೆಸರನ್ನು ಕೊಟ್ಟಿದ್ದಾರೆ. ನಾನು ಬಲ್ಲಮಟ್ಟಿಗೆ, ಅಂಶಲಯದ ರಚನೆಯನ್ನು ಆದಿತಾಳ, ರೂಪಕತಾಳ, ಮಿಶ್ರಗತಿಯ ತ್ರಿಪುಟತಾಳಗಳಲ್ಲಿ ಹಾಡಬಹುದು. ನಿರ್ದಿಷ್ಟ ಅಂಶಗಣಗಳನ್ನು ಪ್ರಯೋಗಿಸಿದರೆ, ಇನ್ನುಳಿದ ತಾಳಗಳಲ್ಲೂ ಹಾಡಬಹುದು. ಹರಿದಾಸರ ಕೆಲವು ಕೀರ್ತನೆಗಳಲ್ಲಿ ಅಂಶಲಯವನ್ನು ಗುರುತಿಸಬಹುದು. ಸುಳಾದಿಗಳು ಈ ಅಂಶಲಯದ ತಳಹದಿಯ ಮೇಲೆ ರಚಿತವಾಗಿವೆಯೆ ಎಂಬುದನ್ನು ಪ್ರಯೋಗಾತ್ಮಕವಾಗಿ ಪರಿಶೀಲಿಸಬೇಕು. ಸುಳಾದಿಯ ಗಾನಪದ್ಧತಿ ನಷ್ಟಪ್ರಾಯವಾಗಿರುವ ಇಂದಿನ ಪರಿಸ್ಥಿತಿಯಲ್ಲಿ ಆ ಕ್ಷೇತ್ರದಲ್ಲಿ ಆಳವಾದ ಪ್ರಯೋಗಾತ್ಮಕ ಸಂಶೋಧನೆ ನಡೆಯಬೇಕಾಗಿದೆ ಎಂದು ಮಾತ್ರ ಹೇಳಬಲ್ಲೆ. ಈ ಮಾತು ಹರಿದಾಸ ಸಾಹಿತ್ಯದ ಅನೇಕ ಕ್ಷೇತ್ರಗಳಿಗೂ ಅನ್ವಯಿಸುತ್ತದೆ.

# ೧. ಹಸ್ತಪ್ರತಿಶಾಸ್ತ್ರದ ಸಮಸ್ಯೆಗಳು*

(ಹಸ್ತಪ್ರತಿ ಶಾಸ್ತ್ರ ವಿಚಾರಗೋಷ್ಠಿಯ ಪ್ರಾರಂಭ ದಿನದಂದು ಪ್ರತಿಷ್ಠಾನದ ಸಂಸ್ಥಾಪಕ ಕಾರ್ಯದರ್ಶಿಗಳೂ ಅಧ್ಯಯನ ನಿರ್ದೇಶಕರೂ ಆದ ಪ್ರೊ॥ ಎಂ.ವಿ.ಸೀತಾರಾಮಯ್ಯ ನವರು ಮಾಡಿದ ಭೂಮಿಕಾ ಭಾಷಣದ ಲಿಖಿತರೂಪ.)

ಹಸ್ತಪ್ರತಿ ಶಾಸ್ತ್ರ (Manuscriptology) ಎಂಬ ಪಾರಿಭಾಷಿಕ ಶಬ್ದ ಈವರೆಗೆ ವಿಶೇಷವಾಗಿ ಬಳಕೆಯಲ್ಲಿದ್ದುದು ನನ್ನ ಗಮನಕ್ಕೆ ಬಂದಿಲ್ಲ. ವ್ಯಾಪಕಾರ್ಥದ ಪದ ಇದು. ಹಸ್ತಪ್ರತಿಗಳ ಸಂಗ್ರಹ ಕಾರ್ಯದಿಂದ ಅದು ಮೊದಲಾಗುತ್ತದೆ. ಸಂಗ್ರಹಿಸಿದ ಹಸ್ತಪ್ರತಿಗಳನ್ನು ಜೋಪಾನ ಮಾಡುವುದು, ಸಂಗ್ರಹಕಾರ್ಯ ಒಂದು ಹಂತವನ್ನು ಮುಟ್ಟಿದ ಮೇಲೆ ಹಸ್ತಪ್ರತಿಗಳ ಸೂಚಿಯನ್ನು ತಯಾರಿಸುವುದು, ಇವೂ ಹಸ್ತಪ್ರತಿ ಶಾಸ್ತ್ರದ ಅಂಗವೇ. ಹಸ್ತಪ್ರತಿ ರೂಪದ ಕೃತಿಯನ್ನು ಪರಿಷ್ಕರಿಸಿ ಕವಿಪಾಠಕ್ಕೆ ಸಮೀಪತಮವಾದ ಪಾಠವನ್ನು ಸಕಲ ವಿದ್ವತ್‌ಪರಿಕರಗಳೊಂದಿಗೆ ಪ್ರಕಟಿಸುವುದರಲ್ಲಿ ಈ ಶಾಸ್ತ್ರ ತನ್ನ ಕಡೆಯ ಹಂತವನ್ನು ಮುಟ್ಟುತ್ತದೆ, ಎಂದು ನಾನು ತಿಳಿದಿದ್ದೇನೆ. ಗ್ರಂಥಸಂಪಾದನಾ ಶಾಸ್ತ್ರ (Textual Criticism) ಹಸ್ತಪ್ರತಿ ಶಾಸ್ತ್ರದಲ್ಲಿಯೇ ಸಮಾವೇಶಗೊಳ್ಳುತ್ತದೆ ಎಂದು ನನ್ನ ಭಾವನೆ. ಒಂದು ಪೂರ್ವಕಾಂಡ, ಇನ್ನೊಂದು ಉತ್ತರಕಾಂಡ.

**ಸಂಗ್ರಹಕಾರ್ಯ:** ಈ ಕಾರ್ಯ ಎಷ್ಟು ಕಷ್ಟಸಾಧ್ಯ ಎಂಬುದನ್ನು ತಾವೆಲ್ಲ ಚೆನ್ನಾಗಿ ಬಲ್ಲಿರಿ. ಗೋಷ್ಠಿಯ ಸಂದರ್ಭದಲ್ಲಿ ನಾವು ಹಸ್ತಪ್ರತಿಗಳನ್ನು ದಾನ ಮಾಡಿ, ಇಲ್ಲವೆ ಪ್ರದರ್ಶನಕ್ಕಾದರೂ ಕಳಿಸಿ, ಎಂದು ಪತ್ರಿಕೆಗಳ ಮೂಲಕ ಮನವಿ ಮಾಡಿಕೊಂಡೆವು. ನಮ್ಮ ಮನವಿಗೆ ನಿರೀಕ್ಷಿಸಿದ ಮಟ್ಟದಲ್ಲಿ ಅನುಕೂಲ ಪ್ರತಿಕ್ರಿಯೆ ಕಂಡುಬಂದಿಲ್ಲ. ಸುಮಾರು ೪೫ ಹಸ್ತಪ್ರತಿಗಳು ಕೊಡುಗೆಯಾಗಿ ಬಂದಿವೆ; ೪ ಮಾತ್ರ ಪ್ರದರ್ಶನಕ್ಕೆ.

ಇದೇ ಊರಿನ ಶ್ರೀ ಎಂ.ಆರ್.ಕೃಷ್ಣಸ್ವಾಮಿ ಎಂಬವರು ೩೬ ಸಂಸ್ಕೃತದ ಹಸ್ತಪ್ರತಿಗಳನ್ನು ಕೊಟ್ಟಿರುತ್ತಾರೆ. ಈಚನೂರು ಎಚ್.ಬಿ.ತಮ್ಮಯ್ಯ ಎಂಬವರಿಂದ

---

* ಹಸ್ತಪ್ರತಿ ಶಾಸ್ತ್ರ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂ. ೧೯೮೩

ಖಂಡಿತ. ರೋಗಿಷ್ಠನಾದ ತಂದೆಯ ಫೋಟೋ ತೆಗೆದಿಟ್ಟುಕೊಂಡು ಔಷಧೋಪಚಾರವನ್ನು ಮಾಡದೆ ಆತನನ್ನು ಸಾಯಗೊಟ್ಟಂತಾಗುವುದಿಲ್ಲವೆ? ಖಾಸಗಿ ಒಡೆತನದಲ್ಲಿ ಹತ್ತು ಹನ್ನೆರಡು ಪ್ರತಿಗಳಿಗಿಂತ ಹೆಚ್ಚಾಗಿದ್ದು ಆತ ಅವನ್ನು ಕೊಡಲೊಪ್ಪದಿದ್ದಾಗ, ಆತನಿಗೆ ಸಂರಕ್ಷಣಾ ವಿಧಾನವನ್ನು ತಿಳಿಸಿಕೊಡುವುದೊಂದೇ ಈ ಪ್ರಶ್ನೆಗೆ ಪರಿಹಾರ ಮಾರ್ಗ ಎಂದು ನನಗೆ ತೋರುತ್ತದೆ. ಹಾಗಲ್ಲವೋ, ಅವುಗಳನ್ನು ಸಂರಕ್ಷಿಸಬಲ್ಲ ಸಂಸ್ಥೆಗೆ ದಾನ ಮಾಡುವುದು ನಾಡಿಗೆ ನುಡಿಗೆ ಆತ ಸಲ್ಲಿಸಬೇಕಾದ ಋಣ ಎಂಬ ಅಂಶವನ್ನು ಆತನಿಗೆ ಮನವರಿಕೆ ಮಾಡಿಕೊಡಬೇಕು. ಇದಕ್ಕೆ ಬಗೆಬಗೆಯಲ್ಲಿ ಪ್ರಚಾರಕಾರ್ಯ ನಡೆಯಬೇಕು. ಈ ದಿಸೆಯಲ್ಲಿ, ಪ್ರಸ್ತುತ ಗೋಷ್ಠಿ ಒಂದು ಮೊದಲ ಹೆಜ್ಜೆ. ಇಂಥ ಕಾರ್ಯಕ್ಕೆ ಪತ್ರಿಕೆಗಳೂ ಆಕಾಶವಾಣಿಯೂ ಹೆಚ್ಚುಹೆಚ್ಚಾಗಿ ನೆರವಾಗಬೇಕು. ಇದು ನನ್ನ ಬಿನ್ನಹ.

ಸಂಗ್ರಹಕಾರ್ಯಕ್ಕೆ ಸಂಬಂಧಪಟ್ಟಂತೆ ಇನ್ನೂ ಸಮಸ್ಯೆಗಳು ಇದ್ದಾವು. ನಿದರ್ಶನಾರ್ಥವಾಗಿ ಒಂದೆರಡನ್ನು ತಮ್ಮ ಮುಂದಿಟ್ಟಿದ್ದೇನೆ.

**ಸಂರಕ್ಷಣೆ:** ನಮ್ಮ ಪೂರ್ವಿಕರು 'ದೇಸಿ' ವಿಧಾನದಲ್ಲಿ ಹಸ್ತಪ್ರತಿಗಳನ್ನು ಸಂರಕ್ಷಿಸುತ್ತಿದ್ದರು ಎಂದು ಕೇಳಿ, ಓದಿ, ಬಲ್ಲೆವು. ಹಾಗೆ ಸಂರಕ್ಷಿಸದೆ ಹೋಗಿದ್ದರೆ ಲಕ್ಷಾಂತರ ಹಸ್ತಪ್ರತಿಗಳು ಇಂದಿನವರೆಗೂ ಉಳಿದು ಬರುತ್ತಿರಲಿಲ್ಲ. ಅವೇ ವಿಧಾನಗಳನ್ನು ಪ್ರಯೋಗಾತ್ಮಕವಾಗಿ ಪರೀಕ್ಷೆಗೊಳಪಡಿಸಿ, ಪರಿಣಾಮಕಾರಿಯಾಗಿ ಕಂಡು ಬಂದರೆ, ಏಕೆ ವ್ಯಾಪಕವಾಗಿ ಬಳಸಬಾರದು? ಎಲ್ಲ ಸಂಸ್ಥೆಗಳೂ ಸೂಕ್ಷ್ಮಪಟಲ ಛಾಯಾಗ್ರಾಹಕ (ಮೈಕ್ರೊ ಫಿಲ್ಮ್ ಕ್ಯಾಮೆರ), ಸೂಕ್ಷ್ಮ ಛಾಯಾಪಟಲ ವಾಚಕ ಯಂತ್ರ (ಮೈಕ್ರೊ ಫಿಲ್ಮ್ ರೀಡರ್), ಹೊಗೆ ಕೊಡುವ ನಿರ್ವಾತ ಕೋಣೆ (ಫ್ಯೂಮಿಗೇಶಣ ಛೇಂಬರ್) ಇವನ್ನು ಹೊಂದಿರಲು ಸಾಧ್ಯವೆ? ಮೈಸೂರು ವಿಶ್ವವಿದ್ಯಾನಿಲಯ ಬಳಸುತ್ತಿದೆ ಎಂದು ಗೊತ್ತಾಗಿರುವ ತಯಾರಿಕೆ ಗುಟ್ಟಿನ ತೈಲ ನಿಜವಾಗಿ ಪರಿಣಾಮಕಾರಿಯೆ? ಪರಿಣಾಮಕಾರಿಯಾಗಿದ್ದರೆ ಅದನ್ನು ತಯಾರಿಸುವವರಿಗೆ ಉಚಿತ ಗೌರವಸಂಭಾವನೆ ನೀಡಿ ಅದರ ರಹಸ್ಯವನ್ನು ಹೊರತೆಗೆದು, ಆ ತೈಲವನ್ನು ವಾಣಿಜ್ಯಪ್ರಮಾಣದಲ್ಲಿ ತಯಾರು ಮಾಡಿ, ಸುಲಭ ಬೆಲೆಗೆ ಹಸ್ತಪ್ರತಿ ಭಂಡಾರಗಳೂ ಖಾಸಗಿ ವ್ಯಕ್ತಿಗಳೂ ಪಡೆಯಲು ಅನುಕೂಲ ಕಲ್ಪಿಸಲಾಗುವುದಿಲ್ಲವೆ? ಹಾಗಿಲ್ಲವೋ, ರಾಸಾಯನಿಕ ದ್ರವ್ಯಗಳನ್ನು ಕಂಡುಹಿಡಿಯುವ ಪ್ರಯತ್ನವನ್ನು ವಿಶ್ವವಿದ್ಯಾನಿಲಯಗಳ ವಿಜ್ಞಾನ ವಿಭಾಗಗಳು ಮಾಡಬಾರದೇಕೆ? ಕಾಗದ ಪತ್ರಗಳನ್ನು ಸಂರಕ್ಷಿಸುವ ರಾಸಾಯನಿಕ ವಿಧಾನಗಳಲ್ಲಿ ಶಿಕ್ಷಣ ಕೊಡುವ ರಾಷ್ಟ್ರೀಯ ಪತ್ರಾಗಾರಕ್ಕೆ ತಾಳೆಗರಿಯ ಹೆಸರು ಕೂಡ

೭ ಬಂದುವು. ಡಾ॥ ಎನ್.ಅನಂತರಂಗಾಚಾರ್ಯರು 'ಸೂಕ್ತಿ ಸುಧಾರ್ಣವ'ದ ಹಸ್ತಪ್ರತಿಯನ್ನು ಕಳಿಸಿರುತ್ತಾರೆ;*೧ ಇವರೆಲ್ಲರಿಗೆ ನಾವು ಕೃತಜ್ಞರು.

ಸಂಗ್ರಹ ಕಾರ್ಯದ ಕಷ್ಟದ ಮಾತು ಹಾಗಿರಲಿ, ಕನ್ನಡ ಭಾಷೆಯ ಹಸ್ತಪ್ರತಿಗಳನ್ನು ಮಾತ್ರ ಸ್ವೀಕರಿಸಬೇಕೆ? ಸಂಸ್ಕೃತವೇ ಮುಂತಾದ ಕನ್ನಡೇತರ ಭಾಷೆಗಳ ಹಸ್ತಪ್ರತಿಗಳನ್ನು ನಿರಾಕರಿಸಬೇಕೆ? ಇವನ್ನು ಸ್ವೀಕರಿಸಿದರೂ, ಕಾಲಕ್ರಮದಲ್ಲಿ ಸಂಸ್ಕೃತ ಹಸ್ತಪ್ರತಿ ಭಾಂಡಾಗಾರ ಯಾವುದಕ್ಕಾದರೂ ವರ್ಗಾಯಿಸಬೇಕೆ? ಇದು ನಾವು ಆಲೋಚಿಸಬೇಕಾದ ವಿಚಾರ. ನನ್ನ ಮಟ್ಟಿಗೆ ಹೇಳುವುದಾದರೆ, ಭಾರತೀಯ ಭಾಷೆಗಳಲ್ಲಿ ಯಾವ ಭಾಷೆಯದೇ ಆಗಲಿ, ಅಮೂಲ್ಯವಾದ ಹಸ್ತಪ್ರತಿ ಒಂದು ನಮ್ಮ ಕಡೆಗೆ ಬಂದರೆ ಅದು ನಮ್ಮ ಸ್ವತ್ತಾಗಿಯೇ ಉಳಿಯತಕ್ಕದ್ದು. ಉದಾಹರಣೆಗೆ, ನಮ್ಮ ಸ್ವಂತ ಸಂಗ್ರಹದಲ್ಲಿ ರಾಮಕವಿಯ 'ಸಂಗೀತ ರಾಘವ' ಎಂಬ ಸಂಸ್ಕೃತ ಭಾಷೆಯ ಕೃತಿ ಇದೆ. ಇದರ ಇನ್ನೊಂದು ಪ್ರತಿ ತಾವು ಬಲ್ಲ ಮಟ್ಟಿಗೆ ಇನ್ನೆಲ್ಲಿಯೂ ಇಲ್ಲ ಎಂದು ಡಾ॥ ಕೃಷ್ಣಮೂರ್ತಿ ತಿಳಿಸಿದ್ದಾರೆ. ಇದನ್ನು ನಮ್ಮಲ್ಲಿಯೇ ಇಟ್ಟುಕೊಳ್ಳುವುದು ಮಾತ್ರ ಅಲ್ಲ, ನಾವೇ ಪ್ರಕಟಿಸಲೂ ನಿರ್ಧರಿಸಿದ್ದೇವೆ.*೨ ಪುಣೆಯ ಡೆಕನ್ ಕಾಲೇಜು ಚೆನ್ನವೀರ ಕವಿಯ 'ಕಾಶಕೃತ್ಸ್ನ'ದ ಕನ್ನಡ ವ್ಯಾಖ್ಯಾನವನ್ನು ಪ್ರಕಟಿಸಿಲ್ಲವೆ?

ಈ ಸಂಬಂಧದ ಇನ್ನೊಂದು ಪ್ರಶ್ನೆ – ಹಣ ಕೊಟ್ಟು ಹಸ್ತಪ್ರತಿಯನ್ನು ಕೊಳ್ಳುವ ಕಾರ್ಯನೀತಿ, ಇದು ಪರಿಶೀಲನಾರ್ಹ. ಪಾಶ್ಚಾತ್ಯ ದೇಶಗಳಲ್ಲಿ ಅಪೂರ್ವ ಹಸ್ತಪ್ರತಿಗೋ ಪತ್ರಸಂಕಲನಕ್ಕೊ ಅಪಾರ ಹಣವನ್ನು ಕೊಟ್ಟು ಕೊಂಡುಕೊಳ್ಳುವ ಪರಿಪಾಠ ಇದೆ. ನಾವು ಅಷ್ಟು ಹಣ ಕೊಡಲಾರೆವು. ನಾವು ಒಂದು ಪ್ರತಿಗೆ ಕೊಡುವ ಅಲ್ಪಕ್ರಯದಿಂದ ಒಡೆಯ ಬಡವನಾಗಿದ್ದರೆ ಅವನ ಬಡತನ ನೀಗುವುದಿಲ್ಲ. ಇಷ್ಟರ ಜೊತೆಗೆ, ಮನೆತನದ ಆಸ್ತಿ, ಪೂಜ್ಯ ವಸ್ತು, ಯಾರಿಗೂ ಕೊಡಬಾರದು – ಎಂಬ ಭಾವನೆ ನಮ್ಮ ಜನದಲ್ಲಿ ಬಲವಾಗಿ ಬೇರೂರಿದೆ. ಮೈಕ್ರೋ ಫಿಲ್ಮ್ ಮಾಡಿಕೊಂಡು ಅಮೂಲ್ಯ ಪ್ರತಿ ಒಂದರ ಪ್ರಯೋಜನವನ್ನು ನಾವು ಪಡೆಯಬಹುದು. ಆದರೆ, ಖಾಸಗಿ ಒಡೆತನದಲ್ಲಿ ಅದು ಜೀರ್ಣವಾಗುವುದು

---

೧. ಈ ಸೂಕ್ತಿ ಸುಧಾರ್ಣವದ ಕಟ್ಟಿನಲ್ಲಿ 'ಭಾರತ ನಿಘಂಟು' ಎಂಬ ಕೃತಿಯೂ ಅಡಕವಾಗಿದೆ.

೨. ಈ ಕೃತಿಯ ಹಸ್ತಪ್ರತಿ ಒಂದು ಮೈಸೂರು ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್‌ನಲ್ಲಿ ಇದ್ದು ಅದು ಈಚೆಗೆ ಪ್ರಕಟವಾಗಿದೆ.

ಪ್ರತಿಷ್ಠಾನಕ್ಕೆ ದಾನ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.) ಅವುಗಳ ಮೈಕ್ರೊ ಫಿಲ್ಮ್ ಪ್ರತಿಗಳನ್ನು ಶೇಖರಿಸುವುದಷ್ಟೆ ಪ್ರತಿಷ್ಠಾನದ ಉದ್ದೇಶವಾಗಿರಬೇಕು.

ಈ ಸಂದರ್ಭದಲ್ಲಿ ಒಂದು ಸಂಗತಿಯನ್ನು ನಾವು ಗಮನಿಸಬಹುದಾಗಿದೆ. ಅಮೆರಿಕದ ಫೋರ್ಡ್ ಫೌಂಡೇಷನ್ನಿನವರು ಮೈಸೂರಿನ ಪ್ರಾಚ್ಯ ಸಂಶೋಧನ ಸಂಸ್ಥೆಗೆ (Oriental Research Institute) ಸಂಸ್ಕೃತ ಹಸ್ತ ಪ್ರತಿಗಳ ಸಂರಕ್ಷಣೆಗಾಗಿ ಆರು ಲಕ್ಷ ರೂಪಾಯಿಗಳ ಸಹಾಯ ಧನವನ್ನು ನೀಡಿದ್ದಾರೆ. ಕನ್ನಡ ಹಸ್ತಪ್ರತಿಗಳ ಸಂರಕ್ಷಣೆಯ ಕೆಲಸದಲ್ಲಿ ನಿರತರಾಗಿರುವ ಸಂಸ್ಥೆಗಳಿಗೂ ಆಯಾ ಸಂಸ್ಥೆಯ ಕೆಲಸಕ್ಕೆ ಅನುಗುಣವಾಗಿ ಫೋರ್ಡ್ ಪ್ರತಿಷ್ಠಾನ ಸಹಾಯಧನ ಕೊಡಲು ಮುಂದಾಗುವಂತೆ ಕೇಂದ್ರ ಸರ್ಕಾರದ ಮೂಲಕ ಕಾರ್ಯಪ್ರಯತ್ನ ನಡೆಯುವಂತೆ ಕರ್ನಾಟಕ ರಾಜ್ಯ ಸರ್ಕಾರ ಕೇಂದ್ರ ಸರ್ಕಾರವನ್ನು ಕೇಳಿಕೊಳ್ಳಬೇಕು. ಈ ಸಂದರ್ಭದಲ್ಲೂ ಕೇಂದ್ರ ಹಸ್ತಪ್ರತಿಗಳ ಭಂಡಾರದ ಸ್ಥಾಪನೆಯ ಅಗತ್ಯ ಎದ್ದು ಕಾಣುತ್ತದೆ. ಈ ದಿಸೆಯಲ್ಲಿ ಪ್ರಯತ್ನ ಮಾಡುವ ಗುರಿಯನ್ನೂ ಪ್ರತಿಷ್ಠಾನ ಹೊಂದಿದೆ.

## ಹಸ್ತಪ್ರತಿ ಸೂಚಿಗಳ ಸಮಗ್ರ ಸೂಚಿ

ಕೇಂದ್ರ ಹಸ್ತಪ್ರತಿ ಭಂಡಾರವನ್ನು ಸ್ಥಾಪಿಸುವುದಕ್ಕೆ ಪೂರ್ವಭಾವಿಯಾಗಿ ಆಗಬೇಕಾದ ಪೂರ್ವಸಿದ್ಧತೆಯ ಕಾರ್ಯ ಇದು. ಈ ವರೆಗೆ ಪ್ರಕಟವಾಗಿರುವ ಎಲ್ಲ ಹಸ್ತಪ್ರತಿ ಸೂಚಿಗಳನ್ನೂ ತರಿಸಿಕೊಳ್ಳುವುದರ ಜೊತೆಗೆ, ಪ್ರತಿಷ್ಠಾನ ಈವರೆಗೆ ಸಂಗ್ರಹಿಸಿರುವ ಹಸ್ತಪ್ರತಿಗಳ ಸೂಚಿ ತಯಾರಾಗಬೇಕು.* ಸೂಚಿಗಳನ್ನು ತಯಾರಿಸದೆ ಇರುವ ಸಂಘಸಂಸ್ಥೆಗಳು, ಖಾಸಗಿ ಒಡೆತನದ ಹಸ್ತಪ್ರತಿ ಭಂಡಾರಗಳು, ಇವು ಬೇಗನೆ ಸೂಚಿಗಳನ್ನು ತಯಾರಿಸುವ ಕಾರ್ಯದಲ್ಲಿ ಸಹಕರಿಸಿ ಆ ಸೂಚಿಗಳ ಮುದ್ರಿತ ಪ್ರತಿಗಳಲ್ಲದಿದ್ದರೆ ಹಸ್ತಪ್ರತಿಯನ್ನಾದರೂ ಪಡೆದುಕೊಂಡು ಸಮಗ್ರ ಸೂಚಿಯ ತಯಾರಿಕೆಯಲ್ಲಿ ಉಪಯೋಗಿಸಿಕೊಳ್ಳಬೇಕು. ಒಂದೋ ಎರಡೋ ಹಸ್ತಪ್ರತಿಗಳನ್ನು ಉಳ್ಳವರಿಂದಲೂ ಅವುಗಳ ಪೂರ್ಣ ವಿವರಗಳನ್ನು ಪಡೆಯಲು ಪ್ರಯತ್ನಿಸಬೇಕು. ಕರ್ನಾಟಕದ ಹೊರಗೂ ಕನ್ನಡ ಹಸ್ತಪ್ರತಿಗಳು ಇರುವುದರಿಂದ ಅಖಿಲ ಭಾರತ ಮಟ್ಟದಲ್ಲಿ ಒಂದು ವ್ಯಾಪಕವಾದ

* ಈಚೆಗೆ ಪ್ರತಿಷ್ಠಾನದಲ್ಲಿರುವ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯನ್ನು ತಯಾರಿಸಲಾಗಿದೆ. ಇದನ್ನು ಪ್ರಕಟಿಸುವ ಸಿದ್ಧತೆ ನಡೆಯುತ್ತಿದೆ. (ಸಂ: ೧, ೧೯೮೭ರಲ್ಲಿ ಪ್ರಕಟವಾಗಿದೆ, ೨ ಮತ್ತು ೩ನೇ ಸಂಪುಟಗಳ ಹಸ್ತಪ್ರತಿಗಳು ಸಿದ್ಧವಾಗಿದ್ದು ಡಾ॥ ನಾ. ಗೀತಾಚಾರ್ಯರು ಸಂಪಾದಿಸಿದ್ದಾರೆ.)

ಗೊತ್ತಿಲ್ಲವಂತೆ! ರಾಜ್ಯ ಪತ್ರಾಗಾರದ ವಿಷಯ ನನಗೆ ತಿಳಿಯದು. ಬಹುಶಃ ಇಲ್ಲಿ ತಾಳೆಗರಿಯ ಹಸ್ತಪ್ರತಿಗಳ ಅಸ್ತಿತ್ವದ ಅರಿವು ಅಧಿಕಾರಿಗಳಿಗೆ ಇದ್ದರೂ ಅವುಗಳ ಸಂರಕ್ಷಣೆಯ ವಿಧಾನದ ಬಗೆಗೆ ಅವರು ಚಿಂತಿಸುವ ಅಗತ್ಯ ಬಿದ್ದಿರಲಾರದು. ಅಂತೂ ಈ ವಿಷಯದಲ್ಲಿ ತುರ್ತಾಗಿ ನಾವೆಲ್ಲ ಚಿಂತಿಸಿ, ರಾಜ್ಯಮಟ್ಟದಲ್ಲಿ ಸಂರಕ್ಷಣೆಯ ಒಂದು ವ್ಯಾಪಕ ಕಾರ್ಯಕ್ರಮವನ್ನು ಕೈಗೊಳ್ಳದೆ ಹೋದರೆ, ಮೈಸೂರು ವಿಶ್ವವಿದ್ಯಾನಿಲಯ ಮತ್ತು ಓರಿಯೆಂಟಲ್ ರಿಸರ್ಚ್ ಇನ್ಸ್‌ಟಿಟ್ಯೂಟ್‌ಗಳಂತಹ ಸಂಸ್ಥೆಗಳನ್ನು ಬಿಟ್ಟರೆ ಖಾಸಗಿ ವ್ಯಕ್ತಿಗಳ ಮಾತಿರಲಿ, ಉಳಿದ ಸಂಸ್ಥೆಗಳ ಸ್ವಾಧೀನದಲ್ಲಿರುವ ಹಸ್ತಪ್ರತಿಗಳೂ ಇನ್ನು ಕೆಲವೇ ವರ್ಷಗಳಲ್ಲಿ ಕ್ರಿಮಿಕೀಟಗಳ ಪಾಲಾಗಬಹುದು.

ಇಷ್ಟೇ ಅಲ್ಲದೆ, ಈ ಶತಮಾನದ ಪೂರ್ವಾರ್ಧದಲ್ಲಿದ್ದ ಲೇಖಕರ ಮತ್ತು ವಿದ್ವಾಂಸರ ಬರಹಗಳ, ಹಾಗೂ ಸಮಕಾಲೀನ ಪ್ರಮುಖ ಬರಹಗಾರರ ಬರಹಗಳ ಹಸ್ತಪ್ರತಿಗಳನ್ನು ಶೇಖರಿಸುವ ಕಡೆಗೂ ನೀವು ತಡಮಾಡದೆ ಗಮನಹರಿಸಬೇಕು.

**ಕೇಂದ್ರ ಹಸ್ತಪ್ರತಿ ಭಂಡಾರ**

ನಾನು, ಈ ವರೆಗೆ ಪ್ರಸ್ತಾಪಿಸಿದ ವಿಷಯಗಳಿಗೆಲ್ಲ ಒಂದು ಸಮನ್ವಿತ ಕಾರ್ಯಕ್ರಮವನ್ನು ರೂಪಿಸುವ ಅಗತ್ಯ ಇದೆ ಎಂಬ ಹಿನ್ನೆಲೆಯಲ್ಲಿ ಕರ್ನಾಟಕ ಕೇಂದ್ರ ಹಸ್ತಪ್ರತಿ ಭಂಡಾರದ ಸ್ಥಾಪನೆಯ ಕಡೆಗೆ ಈಗಿನಿಂದಲೇ ಗಮನ ಹರಿಸಬೇಕು. ಇಲ್ಲಿ ನೆರೆದಿರುವ ವಿದ್ವಾಂಸರೆಲ್ಲ ಕೂಡಿ ಸಮಾಲೋಚನೆ ನಡಸಿ ಕಾರ್ಯ ಸಾಧ್ಯವಾದ ಸಲಹೆ ಸೂಚನೆಗಳನ್ನು ನೀಡಿದರೆ, ಪ್ರತಿಷ್ಠಾನ ಈ ವಿಚಾರದಲ್ಲಿ ಕೆಲಸ ಮಾಡುವುದೆಂಬ ನಂಬಿಕೆ ನನಗಿದೆ. **ಬಿ.ಎಂ.ಶ್ರೀ. ಪ್ರತಿಷ್ಠಾನವೇ ಆ ಒಂದು ಕೇಂದ್ರ ಹಸ್ತಪ್ರತಿ ಭಂಡಾರವನ್ನು ಒಳಗೊಳ್ಳಬೇಕು ಎನ್ನುವುದು ನನ್ನ ತೀವ್ರವಾದ ಆಶೆ.** ಈ ಸಂದರ್ಭದಲ್ಲಿ ಒಂದು ಸ್ಪಷ್ಟೀಕರಣ ಅಗತ್ಯ; ಕೇಂದ್ರ ಭಂಡಾರ ಎಂದಕೂಡಲೆ ದೇಶ ವಿದೇಶಗಳಲ್ಲಿ ಚೆದರಿರುವ ಎಲ್ಲ ಹಸ್ತಪ್ರತಿ ಭಂಡಾರಗಳ ಹಸ್ತಪ್ರತಿಗಳನ್ನೆಲ್ಲ ಬೇಡಿಯೋ ಕಾಡಿಯೋ ತಂದು ಒಟ್ಟಿಕೊಳ್ಳಬೇಕು ಎನ್ನುವುದು ನನ್ನ ಅಭಿಪ್ರಾಯವಲ್ಲ. ತಮ್ಮ ತಮ್ಮ ಸಂಗ್ರಹದ ಹಸ್ತಪ್ರತಿಗಳನ್ನು ಬಿಟ್ಟುಕೊಡಲು ಯಾವ ಸಂಸ್ಥೆಯೂ ಸಿದ್ಧವಿಲ್ಲ. (ಆದರೆ, ಯಾವುದಾದರೂ ಸಂಸ್ಥೆಯಲ್ಲಿ ಹಸ್ತಪ್ರತಿ ಸಂಗ್ರಹ ಇದ್ದು, ಅದರ ಸಂರಕ್ಷಣೆ–ಪ್ರಕಟನೆ ಸಂಸ್ಥೆಯ ಅಂಗರಚನೆಯ ಮೂಲೋದ್ದೇಶಗಳಲ್ಲಿ ಸೇರಿರದಿದ್ದರೆ ಅಂಥ ಸಂಸ್ಥೆಗಳು ತಮ್ಮ ಸಂಗ್ರಹವನ್ನು

ಹಸ್ತಪ್ರತಿಗಳು ಹುಳು ತಿಂದುಹೋಗುವುದಕ್ಕೆ ಮೊದಲೇ ಒಂದು ಸಲವಾದರೂ ಅವನ್ನು ಪ್ರಕಟಿಸಬೇಕಾದ್ದು ಅಗತ್ಯ. ಇಲ್ಲಿ ಸ್ವಲ್ಪ ವಿವೇಚನೆ ಬೇಕಾಗುತ್ತದೆ. ಸಾಹಿತ್ಯದೃಷ್ಟಿಯಿಂದ, ಇಲ್ಲವೆ ಸಾಂಸ್ಕೃತಿಕ ದೃಷ್ಟಿಯಿಂದ, ಇಲ್ಲವೆ ಐತಿಹಾಸಿಕ ದೃಷ್ಟಿಯಿಂದ ಬೆಲೆಬಾಳುವಂಥವುಗಳಿಗೆ ಆದ್ಯತೆಯ ಅನುಕ್ರಮದಲ್ಲಿ ಪ್ರಾಶಸ್ತ್ಯ ಕೊಟ್ಟು ಪ್ರಕಟಿಸಬೇಕಾಗುತ್ತದೆ. ಈ ಕೆಲಸ ಯಶಸ್ವಿಯಾಗಬೇಕಾದಲ್ಲಿ ಹಸ್ತಪ್ರತಿಗಳ ಮೌಲ್ಯ ನಿರ್ದೇಶನ (evaluation) ಉಳ್ಳವರ್ಣನಾತ್ಮಕ ಹಸ್ತಪ್ರತಿಸೂಚಿ ಮೂಲಭೂತ ಅಗತ್ಯವಾಗಿ ಪರಿಣಮಿಸುತ್ತದೆ. ಹಸ್ತಪ್ರತಿಸೂಚೀ ನಿರ್ಮಾಣಕ್ಕೂ ಬೆಲೆಯುಳ್ಳ ಹಸ್ತಪ್ರತಿಗಳನ್ನು ಪ್ರಕಟನೆಗಾಗಿ ಆಯ್ಕೆ ಮಾಡುವುದಕ್ಕೂ ಪಾಠಪರಿಷ್ಕರಣ ಮಾಡಿ ಸವಿಮರ್ಶ ಪೀಠಿಕೆ, ಅರ್ಥಕೋಶ, ಮುಂತಾದ ವಿದ್ವತ್ ಪರಿಕರಗಳನ್ನು ಒಳಗೊಂಡಂತೆ ಗ್ರಂಥಸಂಪಾದನೆ ಮಾಡುವುದಕ್ಕೂ ಈ ಕ್ಷೇತ್ರದಲ್ಲಿ ತಕ್ಕಮಟ್ಟಿನ ಜ್ಞಾನಾನುಭವವನ್ನು ಗಳಿಸಿರುವ ಗ್ರಂಥಸಂಪಾದಕರ ಪಡೆಯೇ ಸಿದ್ಧವಾಗಬೇಕು. ಈ ವಿಚಾರಕ್ಕೆ ವಿಶ್ವವಿದ್ಯಾನಿಲಯಗಳು ತೀವ್ರಗಮನ ಹರಿಸಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ. ಅನುಕೂಲ ಸ್ಥಿತಿ ಉಂಟಾದಾಗ ಗ್ರಂಥಸಂಪಾದನೆಯನ್ನೂ ಒಳಗೊಂಡಂತೆ ಹಸ್ತಪ್ರತಿ ಶಾಸ್ತ್ರದಲ್ಲಿ ಪೂರ್ವಭಾವಿ ಯೋಗ್ಯತೆಯುಳ್ಳ ಅಭ್ಯರ್ಥಿಗಳಿಗೆ ಶಿಕ್ಷಣ ಕೊಡುವ ವ್ಯವಸ್ಥೆಯನ್ನು ಓದುವುದು, ನಕಲು ಮಾಡುವುದು, ಪಾಠ ಪರಿಷ್ಕರಣ, ಉನ್ನತ ವಿಮರ್ಶೆ, ಮುಂತಾದ ಹಸ್ತಪ್ರತಿ ಶಾಸ್ತ್ರದ ಎಲ್ಲ ಮುಖಗಳನ್ನೂ ಅಳವಡಿಸಬೇಕಾಗುವುದು.) ಮಹಾಜನರೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳೂ ಮುಂದೆ ಬಂದು ಉದಾರವಾಗಿ ಧನಸಹಾಯ ನೀಡಿದರೆ ಮಾತ್ರ ಕರ್ನಾಟಕದ ಈ ಪ್ರಾಚೀನ ಸಾಂಸ್ಕೃತಿಕ ಪರಂಪರೆಯ ಜ್ಞಾನ ನಿಕ್ಷೇಪವನ್ನು ಮುಂದಿನ ಪೀಳಿಗೆಗಳಿಗೆ ದೊರಕಿಸಿಕೊಡುವುದು ಸಾಧ್ಯವಾದೀತು. ಕೇವಲ ಹಣದಿಂದ ಎಲ್ಲ ಕೆಲಸವನ್ನೂ ಮಾಡಲಾಗುವುದಿಲ್ಲ. ಸೃಷ್ಟ್ಯಾತ್ಮಕ ಕ್ಷೇತ್ರದಲ್ಲಿ ಕೆಲಸ ಮಾಡುವ ಸಾಹಿತಿಗಳಿಗೆ ದೊರಕುವ ಕ್ಷಿಪ್ರವೂ ವ್ಯಾಪಕವೂ ಆದ ಕೀರ್ತಿ, ಲಾಭಗಳು ಹಸ್ತಪ್ರತಿಶಾಸ್ತ್ರ ಕ್ಷೇತ್ರದಲ್ಲಿ ಕಾರ್ಯನಿರತರಾದ ವಿದ್ವಾಂಸರಿಗೆ ದೊರಕದು. ವಿದ್ವಾಂಸರು ತ್ಯಾಗಬುದ್ಧಿಯಿಂದ ಈ ಕ್ಷೇತ್ರದಲ್ಲಿ ಕೆಲಸ ಮಾಡಬೇಕಾಗುತ್ತದೆ. ಈ ವಿಚಾರಗೋಷ್ಠಿಯಲ್ಲಿ ಭಾಗವಹಿಸಲು ಬಂದಿರುವ ವಿದ್ವಾಂಸಮಿತ್ರರೆಲ್ಲರೂ ತ್ಯಾಗಶೀಲರಾಗಿ ಹಸ್ತಪ್ರತಿ ಶಾಸ್ತ್ರದಲ್ಲಿ ಅನುಭವ ಪಡೆದಿರುವ ಮಹನೀಯರು. ಅವರು ಪಾಲುಗೊಳ್ಳುತ್ತಿರುವ ಗೋಷ್ಠಿ ಅತ್ಯಂತ ಯಶಸ್ವಿಯಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲ.

–೦೦೦–

ಸಮೀಕ್ಷಣ ಕಾರ್ಯ ಕೈಗೊಂಡರೆ ಮಾತ್ರ ಸಮಗ್ರವಾದ ಮಾಹಿತಿಯನ್ನು ಪಡೆಯುವುದು ಸಾಧ್ಯ.

**ಗ್ರಂಥಸಂಪಾದನೆ – ಪಾಠಪರಿಷ್ಕರಣ**

ಈವರೆಗೆ ಪ್ರಸ್ತಾವಿಸಿದ ಹಸ್ತಪ್ರತಿ ಶಾಸ್ತ್ರದ ಸಮಸ್ಯೆಗಳನ್ನು ಧನಸಹಾಯ–ಜನಸಹಾಯಗಳಿಂದ ಸಂಸ್ಥೆಗಳು ಪರಿಹರಿಸಿಕೊಳ್ಳಬಹುದು. ಸಂಗ್ರಹ ಕಾರ್ಯಕ್ಕೂ ಸಂರಕ್ಷಣಾ ಕಾರ್ಯಕ್ಕೂ ಅಪಾರ ವಿದ್ವತ್ತು ಬೇಕಿಲ್ಲ. ಆದರೆ ಗ್ರಂಥಸಂಪಾದನೆ ಮಾಡಲು ಪ್ರಾಚೀನ ಕನ್ನಡ ಕಾವ್ಯಗಳ ತಕ್ಕಮಟ್ಟಿನ ಪರಿಚಯ ಪಾಂಡಿತ್ಯಗಳ ಜೊತೆಗೆ ವ್ಯಾಕರಣ, ಛಂದಸ್ಸು, ಅಲಂಕಾರಶಾಸ್ತ್ರ–ಈ ಕಾವ್ಯಾಂಗಶಾಸ್ತ್ರಗಳ ಹಾಗೂ ವಾಸ್ತುಶಿಲ್ಪ, ನಾಟ್ಯ ಶಾಸ್ತ್ರ. ಸಂಗೀತಶಾಸ್ತ್ರ, ಆಯುರ್ವೇದ, ಜ್ಯೋತಿಷ್ಯ–ಇತ್ಯಾದಿ ಶಾಸ್ತ್ರಗಳಪರಿಚಯ ಇದ್ದರೆ ಮೇಲು. ಗ್ರಂಥಸಂಪಾದನೆ–ಬಹುಶ್ರುತತ್ವವನ್ನು, ಬಹುಶಾಸ್ತ್ರಪರಿಜ್ಞಾನವನ್ನು ಅಪೇಕ್ಷಿಸುವ, ಶಾಸ್ತ್ರಾಂತರ ಸಾಪೇಕ್ಷಕ ಶಾಸ್ತ್ರ (Inter-disciplinary Science). ಎಂ.ಎ. ತರಗತಿಗಳ ವಿದ್ಯಾರ್ಥಿಗಳಿಗೆ ಗ್ರಂಥ ಸಂಪಾದನಾ ಶಾಸ್ತ್ರದ ಆಳವಾದ ಪರಿಚಯುವನ್ನು ಮಾಡಿಕೊಡಲು ವಿಶ್ವವಿದ್ಯಾನಿಲಯಗಳ ಕನ್ನಡ ಶಾಖೆಗಳಿಗೆ ಸಾಧ್ಯವಾಗುತ್ತಿಲ್ಲ. ಇದಕ್ಕೆ ಕಾರಣಗಳು ಹಲವು. ಆದ್ದರಿಂದ, ತರಬೇತಿ ಕೊಟ್ಟು ಸಮರ್ಥರಾದ ಗ್ರಂಥಸಂಪಾದಕರನ್ನು ತಯಾರು ಮಾಡಬೇಕಾದ ಅಗತ್ಯ ಬಹಳವಾಗಿದೆ. ಸಂಗ್ರಹವಾಗದ ಕತ್ತಲೆಯಲ್ಲಿ ಅಡಗಿಕೊಂಡಿರುವ ಸಹಸ್ರಸಂಖ್ಯೆಯ ಹಸ್ತಪ್ರತಿಗಳ ಮಾತು ಒತ್ತಟ್ಟಿಗಿರಲಿ. ಬೇರೆ ಬೇರೆ ವಿಶ್ವವಿದ್ಯಾನಿಲಯಗಳಲ್ಲಿ ಸಂಗ್ರಹವಾಗಿರುವ ಹಸ್ತಪ್ರತಿಗಳಲ್ಲಿ ಪ್ರಕಟನ ಯೋಗ್ಯವಾಗಿರುವ ಹಸ್ತಪ್ರತಿಗಳ ಪೈಕಿ ಶೇಕಡ ೯೦ ಭಾಗ ಕೂಡ ಪ್ರಕಟವಾಗಿಲ್ಲ ಎಂದು ಧಾರಾಳವಾಗಿ ಹೇಳಬಹುದು. ಪರಿಸ್ಥಿತಿ ಹೀಗೆ ಶೋಚನೀಯವಾಗಿರುವಾಗ, ಹಸ್ತಪ್ರತಿಗಳನ್ನು ಸಂಗ್ರಹಿಸಿ ಅವುಗಳನ್ನು ಅತ್ಯಂತ ಆಧುನಿಕ ವೈಜ್ಞಾನಿಕ ವಿಧಾನಗಳಿಂದ ಕಾಪಾಡುತ್ತ ಕಾವಲು ಕುಳಿತರೆ ನಾವು ನಿಧಿನಾಗರರಂತಾಗುತ್ತೇವೆ; ಅಕ್ಷರ ಶಾರದೆಯ ಅಂಧಪೂಜಾರಿಗಳಾಗುತ್ತೇವೆ. ಇಂಥ ನಿಷ್ಫಲ ಗ್ರಂಥಭಕ್ತಿಯಿಂದ ಏನೂ ಪ್ರಯೋಜನವಿಲ್ಲ. ಆದ್ದರಿಂದ ನಾವು ಮಾಡಲೇಬೇಕಾಗಿರುವ ತುರ್ತಿನ ಕೆಲಸ ಎಂದರೆ – ಒಂದೆರಡು ವಿಶ್ವವಿದ್ಯಾಲಯಗಳನ್ನು ಬಿಟ್ಟರೆ ಉಳಿದಂತೆ, ಹಸ್ತಪ್ರತಿಗಳನ್ನು ಹೊಂದಿರುವ ಎಲ್ಲ ಸಂಘ ಸಂಸ್ಥೆಗಳೂ ಖಾಸಗಿ ವ್ಯಕ್ತಿಗಳೂ ವೈಜ್ಞಾನಿಕ ವಿಧಾನಗಳಲ್ಲಿ ಹಸ್ತಪ್ರತಿಗಳನ್ನು ಸಂರಕ್ಷಿಸಲು ಸಾಧ್ಯವಿಲ್ಲವಾದ್ದರಿಂದ, ಬಿ.ಎಂ.ಶ್ರೀ. ಅವರು ೧೯೧೧ರಷ್ಟು ಹಿಂದೆಯೇ ಅಪ್ಪಣೆ ಕೊಡಿಸಿದ ಪ್ರಕಾರ–

ಬರಹದ ಪುಸ್ತಕವನ್ನೂ ಕಾನೂನಿನ ವ್ಯಾಪ್ತಿಗೆ ಒಳಪಡಿಸಿತ್ತು; ಆದರೆ, ಅನಂತರ ಕಾನೂನನ್ನು ತಿದ್ದುಪಡಿ ಮಾಡಿ ಹಸ್ತಪ್ರತಿಗಳನ್ನು ಕಾನೂನಿನ ವ್ಯಾಪ್ತಿಯಿಂದ ಹೊರಪಡಿಸಿತು. ಹಸ್ತಪ್ರತಿ ಪ್ರಾಚ್ಯವಸ್ತುವಲ್ಲ, ಅದಕ್ಕೆ ಬೆಲೆಯಿಲ್ಲ ಎಂದು ಅದರ ಅರ್ಥವಲ್ಲ. ಹಸ್ತಪ್ರತಿಗಳ ಸ್ವರೂಪನಿಷ್ಕರ್ಷೆ ತೊಡಕಿನ ಕೆಲಸವಾದ್ದರಿಂದ ತಿದ್ದುಪಡಿ ಮಾಡಲಾಯಿತೆಂದು ಕಾಣುತ್ತದೆ. ಹಸ್ತಪ್ರತಿಗಳು ದೇಶಬಿಟ್ಟು ಹೊರಗೆ ಹೋಗುವ ಸಂಭವ ಕಡಿಮೆ ಎಂಬ ನಂಬಿಕೆ ಕಾನೂನನ್ನು ತಿದ್ದುಪಡಿ ಮಾಡಲು ಇನ್ನೊಂದು ಕಾರಣವಾಗಿರಬಹುದು. ಬ್ರಿಟಿಷರ ಆಡಳಿತ ಕಾಲದಲ್ಲಿ ಬ್ರಿಟಿಷ್ ಅಧಿಕಾರಿಗಳೂ ಪಾಶ್ಚಾತ್ಯ ವಿದ್ವಾಂಸರೂ ಭಾರತದಿಂದ ಸಾವಿರಾರು ಅಮೂಲ್ಯ ಪ್ರಾಚೀನ ಹಸ್ತಪ್ರತಿಗಳನ್ನು ತಂತಮ್ಮ ದೇಶಗಳಿಗೆ ಕೊಂಡೊಯ್ದಿರುವುದನ್ನು ಇಲ್ಲಿ ನೆನೆಯಬಹುದು. ಬ್ರಿಟಿಷ್ ಮ್ಯೂಸಿಯಮ್ಮಿನಲ್ಲಿ ಹಾಗೆ ಒಯ್ದ ನೂರಾರು ಹಸ್ತಪ್ರತಿಗಳಿವೆ. ಈಗ ಆ ಭಯವಿಲ್ಲ. ಈ ಹಿನ್ನೆಲೆಯಲ್ಲಿ ವಿಚಾರಮಾಡಿ ನೋಡಿದರೆ ಪ್ರಾಚೀನ ಹಸ್ತಪ್ರತಿಗಳ ಸಂಗ್ರಹಣ ಮತ್ತು ಸಂರಕ್ಷಣಗಳ ವಿಚಾರದಲ್ಲಿ ಸಾರ್ವಜನಿಕರಾದ ನಮ್ಮ ಹೊಣೆಗಾರಿಕೆ ಎಂದಿಗಿಂತ ಈಗ ಹೆಚ್ಚಾಗಿದೆ ಎನ್ನಬೇಕು. ಈಗ ನಾಡಿನ ಎಲ್ಲ ಕಡೆಯೂ ಅಡಗಿಕೊಂಡಿಸಿರುವ ಹಸ್ತಪ್ರತಿಗಳು ನಷ್ಟವಾದರೆ ಅದಕ್ಕೆ ಹೊರಗಿನವರು ಕಾರಣ ಎನ್ನುವಂತಿಲ್ಲ; ಕಾರಣ ನಾವೇ; ನಮ್ಮ ಅಸಡ್ಡೆ, ಅಜ್ಞಾನ, ಮೌಢ್ಯ.

ಪರಕೀಯರು ನಮ್ಮ ದೇಶಕ್ಕೆ ಕಾಲಿಡುವ ಮುನ್ನವೇ ಲೆಕ್ಕವಿಲ್ಲದಷ್ಟು ಹಸ್ತ ಪ್ರತಿಗಳು ನಷ್ಟವಾಗಿ ಹೋಗಿವೆ. ಅವುಗಳಲ್ಲಿ ಲಿಖಿತವಾಗಿರುವ ಕಾವ್ಯಗಳು ನಮ್ಮ ಪಾಲಿಗೆ ಇಲ್ಲವಾಗಿವೆ. ಈ ನಷ್ಟದ ಪ್ರಮಾಣವನ್ನು ಊಹಿಸುವುದು ಮಾತ್ರ ಸಾಧ್ಯ; ನಷ್ಟಕ್ಕೆ ಒಂದೆರಡು ಕಾರಣಗಳನ್ನೂ ಊಹಿಸಬಹುದು.

ಈಗ ನಮಗೆ ಪರಿಚಿತವಿರುವ ಪ್ರಾಚೀನ ಕಾವ್ಯಗಳ ಹಸ್ತಪ್ರತಿಗಳು ಈವರೆಗೂ ಉಳಿದುಕೊಂಡುಬಂದಿದ್ದರೆ, ಅದರ ಶ್ರೇಯಸ್ಸಿನ ಬಹುಪಾಲು, ಬರೆಯುವ ಉಕ್ಕಿನ ಕಂಠವನ್ನು ಮುಷ್ಟಿಯಿಂದ ಬಲವಾಗಿ ಹಿಡಿದು, "ಬೆನ್ನನ್ನು ಬಗ್ಗಿಸಿ, ಕೊರಳನ್ನು ಕುಗ್ಗಿಸಿ ಕಣ್ಣನ್ನು ಅರಳಿಸಿ ಮುಖವನ್ನು ತಗ್ಗಿಸಿ ಬಹುಕಷ್ಟದಿಂದ ಬರೆದ" ಲಿಪಿಕಾರರಿಗೆ, ಅವರಿಂದ ಬರೆಯಿಸಿದ ಅಭಿಮಾನಿಗಳಿಗೆ, ಸಲ್ಲಬೇಕು.

ಪ್ರಾಚೀನಕಾಲದ ಹಸ್ತಪ್ರತಿ ಎಂದರೆ, ಕನ್ನಡನಾಡಿನ ಮಟ್ಟಿಗೆ ಹೇಳುವುದಾದರೆ, ಕೈಬರಹದ ತಾಳೆಗರಿಗಳ ಕಟ್ಟು. ದಕ್ಷಿಣ ಭಾರತದಲ್ಲಿ ತಾಳೆಯ ಮರಗಳು ವಿಶೇಷವಾಗಿ ಬೆಳೆಯುವುದರಿಂದ ನಮ್ಮ ಕವಿಗಳೂ ಲಿಪಿಕಾರರೂ ತಾಳೆಯಗರಿಗಳನ್ನೇ ಕೃತಿಗಳನ್ನು ಬರೆಯುವುದಕ್ಕೆ ಉಪಯೋಗಿಸುತ್ತಿದ್ದರು. ನಮ್ಮ

# ೨. ಹಸ್ತಪ್ರತಿಗಳ ಸಂಗ್ರಹಣ ಮತ್ತು ಸಂರಕ್ಷಣ*

ನಮ್ಮ ನಾಡಿನ ಪ್ರಾಚೀನ ವಸ್ತುಗಳನ್ನು ಸ್ಥಾವರ (ಇದ್ದಕಡೆ ಇರುವವು) ಮತ್ತು ಜಂಗಮ (ಒಂದು ಕಡೆಯಿಂದ ಇನ್ನೊಂದು ಕಡೆಗೆ ಒಯ್ಯಬಹುದಾದವು) ಎಂದು ಎರಡು ವಿಧವಾಗಿ ವಿಂಗಡಿಸಬಹುದು. ಪುರಾತನ ದೇವಾಲಯಗಳು, ಮಸೀದಿಗಳು, ಚರ್ಚುಗಳು ಮುಂತಾದ ಧರ್ಮ ಮಂದಿರಗಳು; ಸಾಧುಸಂತರ ಸಮಾಧಿಗಳು ಮತ್ತು ಇತರ ಮಹಾಪುರುಷರ ಸ್ಮಾರಕಗಳು; ಶಿಲಾಶಾಸನಗಳು– ಇಂತಹ ಎಲ್ಲ ನಿರ್ಮಿತಿಗಳೂ ಸ್ಥಾವರಗಳು. ಇವುಗಳ ಸಂರಕ್ಷಣೆಗಾಗಿ ಭಾರತ ಸರಕಾರ ಬಹಳ ಹಿಂದೆಯೇ ಕಾನೂನು ಮಾಡಿದೆ. ಲೋಹ ಮತ್ತು ಮರಗಳಿಂದ ಮಾಡಿದ ವಿಗ್ರಹಗಳು, ಚಿತ್ರಪಟಗಳು, ಸಂಗೀತ ವಾದ್ಯಗಳು, ಆಯುಧಗಳು, ನಾಣ್ಯಗಳು, ತಾಮ್ರ ಫಲಕಗಳು, ಸಂಸ್ಕೃತಿ ಮತ್ತು ಕಲೆಯ ದೃಷ್ಟಿಯಿಂದ ಬೆಲೆಬಾಳುವ ಎಲ್ಲ ಸಣ್ಣ–ದೊಡ್ಡ ವಸ್ತುಗಳು ಮುಂತಾದವು ಜಂಗಮಗಳು. ಈ ಜಂಗಮ ವಸ್ತುಗಳ ಸಂರಕ್ಷಣೆಗೆ ಸರ್ಕಾರ ಕಾನೂನು ಮಾಡಿರಲಿಲ್ಲ. ಲೋಹದ ವಿಗ್ರಹಗಳು, ಮುಂತಾದ ಕಲಾವಸ್ತುಗಳು ಕಳ್ಳಸಾಗಾಣಿಕೆಯ ಮೂಲಕ ವಿದೇಶಗಳಲ್ಲಿ ವಿಕ್ರಯವಾಗುವ ದುರ್ವ್ಯಾಪಾರ ಹೆಚ್ಚಾದಾಗ ಭಾರತ ಸರ್ಕಾರ ಅದನ್ನು ತಡೆಗಟ್ಟುವ ಉದ್ದೇಶದಿಂದ ಈ ಬಗೆಯ ಪ್ರಾಚೀನ ವಸ್ತುಗಳ ಸಂಬಂಧವಾಗಿಯೂ ಕಾನೂನು ಮಾಡಿತು. ಕಾನೂನಿನ ಪ್ರಕಾರ ನೂರು ವರ್ಷಕ್ಕೆ ಹಿಂದಿನ ಪ್ರಾಚ್ಯವಸ್ತುಗಳನ್ನು ಹೊಂದಿರತಕ್ಕವರು ನಿರ್ದಿಷ್ಟ ಸರ್ಕಾರದ ಅಧಿಕಾರಿಗಳಲ್ಲಿ ಅವುಗಳ ವರ್ಣನಾತ್ಮಕ ವಿವರಗಳೊಂದಿಗೆ ಅವುಗಳನ್ನು ದಾಖಲಾತಿ ಮಾಡಿಸಬೇಕು. ಈ ಕಾನೂನಿನಂತೆ ಪ್ರಾಚ್ಯವಸ್ತು (Antiquity) ಎಂದರೆ ಒಂದು ನೂರು ವರ್ಷ ಹಿಂದಿನದು. (ಅಮೆರಿಕದ ಕಾನೂನಿನಲ್ಲಿಯೂ ನೂರು ವರ್ಷಗಳ ಹಿಂದಿನದು ಮಾತ್ರ ಪ್ರಾಚ್ಯವಸ್ತು.) ಭಾರತ ಸರ್ಕಾರ ಕಾನೂನು ಮಾಡಿದಾಗ, ಹಸ್ತಪ್ರತಿ ಎಂದರೆ ಕೈ

---

* ಮಣಿಹ, ಫ.ಗು. ಹಳಕಟ್ಟಿ ಸಂಸ್ಮರಣ ಸಂಪುಟ, ಬಿ.ಎಂ.ಶ್ರೀ. ಪ್ರತಿಷ್ಠಾನ, ಬೆಂ. ೧೯೮೨

ಎರಡು ಕಡೆಯೂ ಮರದ ಫಲಕಗಳು ರಕ್ಷಣೆ ನೀಡುತ್ತಿದ್ದವು; ಗರಿಗಳಿಗೂ ಫಲಕಗಳಿಗೂ ಒಂದೇ ಕಡೆ ಎರಡು ರಂಧ್ರಗಳಿದ್ದು, ಈ ರಂಧ್ರಗಳ ಮೂಲಕ ದಪ್ಪ ದಾರಗಳನ್ನು ಉಪಯೋಗಿಸಿ, ಗರಿಗಳನ್ನು ಮಗುಚಿ ಮಗುಚಿ ಓದುವುದಕ್ಕೂ ಗ್ರಂಥವನ್ನು ಕಟ್ಟಿಡುವುದಕ್ಕೂ ಅವಕಾಶ ಕಲ್ಪಿಸಿದ್ದರು. ಜಿರಲೆಗಳೂ ಇಲಿಗಳೂ ಪ್ರವೇಶ ಮಾಡದಂತಹ, ಸಂದುಬಿಡದ, ಮುಚ್ಚಳ ಇರುವ ಮರದ ಪೆಠಾರಿಗಳಲ್ಲಿ ಗ್ರಂಥಗಳನ್ನು ಓರಣವಾಗಿ ಇಡುತ್ತಿದ್ದರು. ಪ್ರತಿಯೊಂದು ಗ್ರಂಥದ ಕಟ್ಟನ್ನು ಕೆಂಪು ಇಲ್ಲವೆ ಹಳದಿಬಣ್ಣದ ರೇಶಿಮೆ ವಸ್ತ್ರಗಳಿಂದ ಸುತ್ತಿಡುತ್ತಿದ್ದರು. ಈ ಬಣ್ಣಗಳ ಬಟ್ಟೆ ನುಸಿ ಹುಳು ಮುಂತಾದ ಕ್ರಿಮಿಕೀಟಗಳನ್ನು ದೂರವಿಡುತ್ತದೆ ಎಂದು ಅನುಭವದಿಂದ ಕಂಡುಕೊಂಡಿದ್ದರು. ಬಟ್ಟೆಯ ಒಳಗಡೆ ಕಟ್ಟುಗಳ ಸುತ್ತಲೂ ಒಣಗಿದ ಹೊಂಗೆಯ ಮತ್ತು ಬೇವಿನ ಎಲೆಯ ಪುಡಿಯನ್ನು ಉದುರಿಸುತ್ತಿದ್ದರು. ಪ್ರತಿವರ್ಷವೂ ಸರಸ್ವತೀ ಹಬ್ಬದ ದಿವಸ ಓಲೆಯ ಗರಿಯ ಕಟ್ಟುಗಳನ್ನು ಪೆಠಾರಿಯಿಂದ ಹೊರಕ್ಕೆ ತೆಗೆದು, ಪ್ರತಿಗರಿಯನ್ನೂ ಆಗತಾನೆ ಹುಟ್ಟಿದ ಮಗುವನ್ನು ಎತ್ತಿಕೊಳ್ಳುವಂತೆ ಎಚ್ಚರಿಕೆಯಿಂದ ಸರಿಸಿ, ಶುಭ್ರವಾದ ಮೃದುವಾದ ಬಟ್ಟೆಯಿಂದಲೋ ಕೂರ್ಚದಿಂದಲೋ ಒರಸಿ, ಕ್ರಿಮಿನಾಶಕ ತೈಲ ಲೇಪನಮಾಡಿ ಕಟ್ಟುಗಳನ್ನು ಯಥಾಸ್ಥಾನದಲ್ಲಿರಿಸಿ, ಗ್ರಂಥಸ್ಥ ಸರಸ್ವತಿಯನ್ನು ಯಥಾವಿಧಿಯಾಗಿ ಧೂಪದೀಪ ನೈವೇದ್ಯನಿರಾಜನಾದಿಗಳಿಂದ ಪೂಜೆಮಾಡುತ್ತಿದ್ದರು. ಇಂಥ ಪೂಜೆಯ ವೇಳೆಯಲ್ಲೇ ಗ್ರಂಥಗಳಿಗೆ ಎಣ್ಣೆ ಬೆಂಕಿಗಳಿಂದ ಹಾನಿ ತಟ್ಟುವ ಭಯದ ಶಂಕೆ ಇದ್ದದ್ದು. ಬಿಚ್ಚಿದ ಕಟ್ಟುಗಳನ್ನು ಮತ್ತೆ ಕಟ್ಟುವಾಗ ಸಡಿಲವಾಗಿ ಕಟ್ಟುವುದರಿಂದ ಹುಳುಹುಪ್ಪಟೆ ಸೇರಿಕೊಳ್ಳುವ ಸಂಭವ ಇರುತ್ತಿತ್ತು ಎಂದೇ "ತೈಲಾದ್ರಕ್ಷೇಜ್ಜಲಾದ್ರಕ್ಷೇತ್ ರಕ್ಷೇತ್ ಶಿಥಿಲ ಬಂಧನಾತ್" ಎಂದು ಲಿಪಿಕಾರರು ಮೊರೆಯಿಟ್ಟಿರುವುದು.

ನಮ್ಮ ಪೂರ್ವಿಕರು ಶತಮಾನಗಳ ಹಿಂದಿನಿಂದಲೂ ಇಷ್ಟೆಲ್ಲ ಎಚ್ಚರಿಕೆ ವಹಿಸುತ್ತಿದ್ದರೂ ಲೆಕ್ಕವಿಲ್ಲದಷ್ಟು ಗ್ರಂಥಗಳು ನಾಶವಾಗಿ ಹೋಗಿವೆ. ೯ನೆಯ ಶತಮಾನದ 'ಕವಿರಾಜಮಾರ್ಗ'ದಲ್ಲಿ ವಿಮಲೋದಯ, ನಾಗಾರ್ಜುನ, ಜಯಬಂಧು ಇತ್ಯಾದಿ ಅನೇಕ ಗದ್ಯ ಪದ್ಯ ಗ್ರಂಥಕರ್ತರ ಹೆಸರುಗಳು ಉಕ್ತವಾಗಿವೆ. ಆದರೆ ಇವರ ಯಾವ ಗ್ರಂಥಗಳೂ ಸಿಕ್ಕಿಲ್ಲ. ಇವು ಎಲ್ಲವೂ ನಷ್ಟವಾಗಿವೆ ಎಂದೂ ಹೇಳಬರುವುದಿಲ್ಲ. ಎಲ್ಲೋ ಯಾರ ಬಳಿಯೋ ಅಡಗಿಕೊಂಡಿರಬಹುದು. 'ಕಾವ್ಯಾವಲೋಕ'ನವನ್ನು ಬರೆದ ನಾಗವರ್ಮನು ಒಂದು ಜೈನ ಪುರಾಣವನ್ನು ಬರೆದಿರಬಹುದು ಎಂಬ ಸಂಗತಿ ನಮಗೆ ತಿಳಿದಿತ್ತು. ಆದರೆ ಅವನ ಪುರಾಣಗ್ರಂಥ

ದೇಶದಲ್ಲಿ ಕಾಗದದ ಉಪಯೋಗವನ್ನು ಮಹಮ್ಮದೀಯರೂ, ಆಮೇಲೆ ಬ್ರಿಟಿಷರೂ ಬಳಕೆಗೆ ತಂದರು. ಕನ್ನಡನಾಡಿನಲ್ಲಿ ಕಾಗದದ ಉಪಯೋಗ ವಿಶೇಷವಾಗಿ ೧೫ನೆಯ ಶತಮಾನದಿಂದ ಬಳಕೆಗೆ ಬಂದಂತೆ ಕಾಣುತ್ತದೆ. ತಾಳೆಯೋಲೆಯ ಪ್ರತಿಗಳು ಒಂದು ಸಾವಿರವರ್ಷ ತಾಳಿಕೆ ಬರುತ್ತವೆ ಎಂದು ತಿಳಿದು ಬರುತ್ತದೆ. ಈ ಕಾರಣದಿಂದ, ಕಾಗದ ವಿಶೇಷವಾಗಿ ಬಳಕೆಗೆ ಬಂದ ೧೯ನೆಯ ಶತಮಾನದಲ್ಲಿ ಕೂಡ ಕಾವ್ಯಗಳನ್ನೂ, ಇತರ ಶಾಸ್ತ್ರಗ್ರಂಥಗಳನ್ನೂ–ಕಡೆಗೆ ಪಂಚಾಂಗಗಳನ್ನೂ ಜಾತಕಗಳನ್ನೂ ಕೂಡ–ಓಲೆಗರಿಯ ಮೇಲೆ ಬರೆದಿಡುತ್ತಿದ್ದರು. ತಾಳಿಕೆ ಬರುವ ಸಂಗತಿ ಮಾತ್ರವಲ್ಲದೆ, ಓಲೆಗರಿಯ ಮೇಲೆ ಬರೆದದ್ದು ಪವಿತ್ರ ಎಂಬ ಧಾರ್ಮಿಕ ಭಾವನೆಯೂ ತಾಳೆಯೋಲೆಯ ಬಳಕೆಗೆ ಕಾರಣವಾಗಿದ್ದಿರಬೇಕು.

ಪೂರ್ವಕಾಲದಲ್ಲಿ ಸ್ವಂತ ವ್ಯಾಸಂಗಕ್ಕಾಗಿ, ಮಕ್ಕಳ ಮೊಮ್ಮಕ್ಕಳ ವಿದ್ಯಾಭ್ಯಾಸಕ್ಕಾಗಿ, ಆಚಾರ್ಯರು ಶಿಷ್ಯರಿಗೆ ಬೋಧಿಸುವುದಕ್ಕಾಗಿ ತಾಳೆಯೋಲೆಯ ಗ್ರಂಥಗಳನ್ನು ಸ್ವತಃ ಬರೆದಿಟ್ಟುಕೊಳ್ಳುತ್ತಿದ್ದರು; ಇಲ್ಲವೆ ಬರೆಯುವ ಕಲೆಯಲ್ಲಿ ಪಳಗಿದ್ದ ಲಿಪಿಕಾರರಿಂದ ಪ್ರತಿಮಾಡಿಸಿ, ಬೇಕಾದ ಗ್ರಂಥಗಳನ್ನು ದೊರಕಿಸಿಕೊಳ್ಳುತ್ತಿದ್ದರು. ಅಲ್ಲದೆ, ಧಾರ್ಮಿಕ ಗ್ರಂಥಗಳನ್ನು ತಾವೇ ಪ್ರತಿಮಾಡಿಯೋ, ಮಾಡಿಸಿಯೋ ಪಾತ್ರರಾದವರಿಗೆ ದಾನಮಾಡುತ್ತಿದ್ದರು. ಇದು 'ಶಾಸ್ತ್ರದಾನ' ಎಂದು ಪ್ರಸಿದ್ಧವಾಯಿತು. ಕನ್ನಡ ಸಾಹಿತ್ಯ ರಾಶಿಯಲ್ಲಿ ಧಾರ್ಮಿಕ ಗ್ರಂಥಗಳೇ ಬಹುಸಂಖ್ಯೆಯುವಾದ್ದರಿಂದ, ಸಾಹಿತ್ಯಾಭಿಮಾನಿಗಳಾದ ರಾಜರುಗಳು ವಿದ್ವಾಂಸರಿಗೂ, ಕವಿಗಳಿಗೂ ಆಶ್ರಯ ಕೊಡುತ್ತಿದ್ದುದರಿಂದ ಅರಮನೆಗಳೂ ಗುರುಮನೆಗಳೂ ಅಕ್ಷರಶಃ ಸರಸ್ವತೀ ಭಂಡಾರಗಳಾದವು. ಇವುಗಳನ್ನು ಅನ್ವರ್ಥವಾಗಿ ಸರಸ್ವತೀ ಭಂಡಾರಗಳೆಂದು ಕರೆಯುತ್ತಿದ್ದರು. ಇವಲ್ಲದೆ ಪ್ರತಿಯೊಂದು ಊರಿನಲ್ಲಿಯೂ ಒಬ್ಬರ ಮನೆಯಲ್ಲಾದರೂ ಗ್ರಂಥಸಂಗ್ರಹ ಇರುತ್ತಿತ್ತು. ಪ್ರತಿಗಳನ್ನು ಮಾಡಿಸುವುದು ಬಹಳ ಕಷ್ಟದ ಕೆಲಸವಾದ್ದರಿಂದ, ಗ್ರಂಥಗಳೆಲ್ಲವೂ ಧಾರ್ಮಿಕ ವಿಷಯಗಳನ್ನೋ ಶಾಸ್ತ್ರ ವಿಚಾರಗಳನ್ನೋ ಒಳಗೊಂಡಿದ್ದು; ಧರ್ಮಾರ್ಥ ಕಾಮ ಮೋಕ್ಷಸಾಧಕಗಳು ಎಂಬ ನಂಬಿಕೆ ಇಟ್ಟಿದ್ದುದರಿಂದ ತಾಡವೋಲೆಯ ಗ್ರಂಥಗಳ ಸಂರಕ್ಷಣೆಯಲ್ಲಿ ನಮ್ಮ ಜನ ಅಪಾರ ಶ್ರದ್ಧಾಭಕ್ತಿಗಳನ್ನು ತೋರಿಸುತ್ತಿದ್ದರು.

ನಮ್ಮ ಪೂರ್ವಿಕರ ಗ್ರಂಥಭಕ್ತಿ ಮೂಢಭಕ್ತಿಯಾಗಿರಲಿಲ್ಲ. ಬಹಳ ಅರ್ಥಪೂರ್ಣವಾಗಿದ್ದು ಅತ್ಯಂತ ಜಾಗರೂಕವಾದ ಗ್ರಂಥಸಂರಕ್ಷಣೆಯಲ್ಲಿ ವ್ಯಕ್ತಪಡುತ್ತಿತ್ತು. ತಾಳೆಗರಿಯ ಕಟ್ಟುಗಳ ಗರಿಗಳು ಮುರಿದು ಹೋಗದಂತೆ

ಮಾತ್ರ ಬರೆದು ಕಾವ್ಯಬರೆಯುವುದನ್ನು ಮುಂದುವರಿಸದೆ ಅದೇ ಶ್ರೀವಿಜಯನ 'ಕವಿರಾಜಮಾರ್ಗ'ವನ್ನು ಸಂಪ್ರತಿಸತೊಡಗಿ ಪೂರೈಸಿದ್ದಾನೆ ಎಂದು ಊಹಿಸಲಡ್ಡಿಯಿಲ್ಲ. ಊಹೆಯಷ್ಟೆ. ಪೊನ್ನನು ಬರೆದಿರಬಹುದೆಂದು 'ಶಬ್ದಮಣಿದರ್ಪಣ'ದ ಆಧಾರದಿಂದ ಊಹಿಸಲಾದ 'ಭುವೈಕರಾಮಾಭ್ಯುದಯ' ನಮ್ಮ ಕುತೂಹಲವನ್ನು ಕೆರಳಿಸಿರುವ ಇನ್ನೊಂದು ಕೃತಿ. ಶ್ರೀವಿಜಯನ ಒಂದು ಪುರಾಣಕಾವ್ಯ ಒಂದು ಲೌಕಿಕ ಕಾವ್ಯ ಇಂಥ ಜೋಡಿಕೃತಿಗಳ ರಚನೆ ಪಂಪ, ಪೊನ್ನ, ರನ್ನರಿಗೆ ಮಾದರಿಯಾಗಿರಬಹುದು. ಪಂಪ ಹೇಳಿಕೊಂಡಿದ್ದಾನೆ – ತನ್ನ ಕೃತಿಗಳು "ಮುನ್ನಿನ ಕಬ್ಬಮೆಲ್ಲಮನ್ ಇಕ್ಕಿ ಮೆಟ್ಟಿದುವು" ಎಂದು. 'ಕವಿಗೆ ಕವಿ ಮುನಿವಂ' ಎಂದು ಶಬ್ದಮಣಿದರ್ಪಣದಲ್ಲಿ ಒಂದು ಉದಾಹರಣ ವಾಕ್ಯವಿದೆ. ಹೀಗೆ ಹಲವು ಕೃತಿಗಳು ಸಿಕ್ಕದಿರುವುದು, ಈ ಕವಿ ವಾಕ್ಯಗಳು, ಇವನ್ನು ಗಮನಿಸಿದರೆ ಕವಿಗಳ ಅಸೂಯೆ, ಅನ್ಯಮತೀಯ ಗ್ರಂಥದ್ವೇಷ, ಅನೇಕ ಗ್ರಂಥಗಳ ನಷ್ಟಕ್ಕೆ ಕಾರಣವಾಗಿರಬಹುದು ಎಂದು ತೋರುತ್ತದೆ.

'ರಾಮನಾಥ ಚರಿತೆ'ಯ (ಕುಮಾರರಾಮನ ಸಾಂಗತ್ಯ) ಪೀಠಿಕಾ ಪ್ರಕರಣದಲ್ಲಿ ನಂಜುಂಡಕವಿ

ಕಾದಂಬರಿಯ ಸುಡಿಸಿ ಲೀಲಾವತಿ। ಗಾದರದಿಂ ಕಪ್ಪನಿಟ್ಟು
ಮೇದನಿಯನು ಮೆಚ್ಚಿಸಿದ ನೇಮಿಚಂದ್ರನ। ವಾದಗಳನು ಬಲಗೊಂಬೆ॥

ಎಂದು ನೇಮಿಚಂದ್ರನನ್ನು ಹೊಗಳಿದ್ದಾನೆ. ನಾಗವರ್ಮನ ಕನ್ನಡ ಕಾದಂಬರಿಯ ಹಸ್ತಪ್ರತಿಯನ್ನು ಸುಡಿಸಿ, ಸುಟ್ಟ ಕರಿಕಿನಿಂದ ನೇಮಿಚಂದ್ರ ತನ್ನ ಕಾವ್ಯದ ಓಲೆಗರಿಯ ಪ್ರತಿಯಲ್ಲಿ ಕೊರೆದ ಅಕ್ಷರಗಳನ್ನು ಕಪ್ಪಾಗಿಸಿದ ಎಂಬ ಮಾತು 'ಲೀಲಾವತಿ' 'ಕಾದಂಬರಿ'ಗಿಂತ ಮೇಲು ಎನ್ನುವುದಕ್ಕೆ ಅಲಂಕಾರಿಕ ಭಾಷೆಯಾಗಿರಬಹುದು. ಆದರೆ ಮತಗಳ ಪೈಪೋಟಿಯ ಹಿಂದಿನ ಕಾಲದಲ್ಲಿ ಅಂಧಶ್ರದ್ಧೆಯ ಮಾತಾನುಯಾಯಿಗಳು ಅನ್ಯಮತದ ಕವಿಕೃತಿಗಳನ್ನು ಧ್ವಂಸಮಾಡುವುದಕ್ಕೆ ಹಿಂಜರಿಯುತ್ತಿರಲಿಲ್ಲ ಎಂದು ಹೇಳಬಹುದು. ಹಸ್ತಪ್ರತಿಗಳ ನಷ್ಟಕ್ಕೆ ಬೇರೆಯ ಕಾರಣಗಳೂ ಇರಬಹುದು. ಅದು ಹಾಗಿರಲಿ, ನಾಮಾವಶೇಷವಾಗಿರುವ ಈ ಕೃತಿಗಳು 'ವರ್ಧಮಾನ ಪುರಾಣ' ಸಿಕ್ಕಿದಂತೆ ಸಿಕ್ಕಲೂಬಹುದು. ಈ ಕಾರಣಕ್ಕಾಗಿ ಹಸ್ತಪ್ರತಿಗಳ ಅನ್ವೇಷಣ, ಸಂಗ್ರಹಣ ಅತಿ

ಯಾವುದೂ ಸಿಕ್ಕಿರಲಿಲ್ಲ. ಈಚೆಗೆ ಅನಿರೀಕ್ಷಿತವಾಗಿ ಅವನ 'ವರ್ಧಮಾನ ಪುರಾಣ' ಸಿಕ್ಕಿದೆ; ಮೈಸೂರು ವಿಶ್ವವಿದ್ಯಾನಿಲಯ ಅದನ್ನು ಅಚ್ಚು ಮಾಡಿಸಿದೆ. ಈ ಗ್ರಂಥ ದೊರೆತಮೇಲೆ ಈ ನಾಗವರ್ಮನ ಕಾಲ ಅದರಲ್ಲಿಯ ಕಾಲ ಸೂಚಕ ಪದ್ಯದಿಂದ ಕ್ರಿ.ಶ.೧೦೪೨ ಎಂದು ಖಚಿತವಾಗಿ ತಿಳಿಯಿತು; ೧೧೫೦ ಎಂಬ ಕವಿಚರಿತೆಕಾರರ ನಿರ್ಣಯ ಬಿದ್ದು ಹೋಯಿತು! ಈ ಗ್ರಂಥದಲ್ಲಿ ಕವಿರಾಜಮಾರ್ಗಕಾರ ಶ್ರೀವಿಜಯನು **'ರಘುವಂಶ ಮಹಾಪುರಾಣ'**ವನ್ನು ಬರೆದಿರುವುದಾಗಿ ತಿಳಿದುಬರುತ್ತದೆ. ಅವನು 'ಚಂದ್ರಪ್ರಭ ಪುರಾಣ'ವನ್ನೂ ಬರೆದಿರುವನೆಂದು ಊಹಿಸಲವಕಾಶವಿದೆ. ಆದರೆ 'ಚಂದ್ರಪ್ರಭ ಪುರಾಣ' ಬರೆದಿದ್ದಾನೆಂದು ಹೇಳಲು ೧೬ನೆಯ ಶತಕದ ದೊಡ್ಡಯ್ಯ ಮುಂತಾದವರ ಹೇಳಿಕೆ ಅಷ್ಟು ವಿಶ್ವಸನೀಯವಲ್ಲ. ಈ ಎರಡೂ ನಷ್ಟವಾಗಿವೆಯೋ ಎಲ್ಲಾದರೂ ಅಡಗಿಕೊಂಡಿವೆಯೋ ಯಾರು ಬಲ್ಲರು? 'ನೃಪತುಂಗಾಭ್ಯುದಯು'ವೆಂಬ ಗ್ರಂಥವೂ ಆತನಿಂದ ರಚಿತವಾಗಿರುವಂತಿದೆ, ಪ್ರತಿ ಸಿಕ್ಕಿಲ್ಲ, ಎಂದು ಊಹಿಸಲು ಒಂದು ಆಧಾರ ದೊರಕಿದೆ. ಕರ್ನಾಟಕ ವಿಶ್ವವಿದ್ಯಾಲಯ ಕೆಲಕಾಲದ ಹಿಂದೆ ಕಂಡುಹಿಡಿದ **'ನೃಪತುಂಗಾಭ್ಯುದಯ'** ಎಂಬ ಹೆಸರನ್ನುಳ್ಳ 'ಕವಿರಾಜಮಾರ್ಗ'ದ ಹಸ್ತಪ್ರತಿ ಈ ಊಹೆಗೆ ಆಧಾರ. 'ಕವಿರಾಜಮಾರ್ಗ'ಕ್ಕೇ 'ನೃಪತುಂಗಾಭ್ಯುದಯ' ಎಂಬ ನಾಮಾಂತರ ಎಂಬುದಿದು ಡಾ॥ ಎಂ.ಎಂ.ಕಲಬುರ್ಗಿ ಅವರ ಅಭಿಪ್ರಾಯ. ಈ ಸಂದರ್ಭದಲ್ಲಿ 'ಶಬ್ದಮಣಿ ದರ್ಪಣ'ದಲ್ಲಿ ಉದಾಹೃತವಾಗಿರುವ –

"ವೀರನುದಾರಂ ಶುಚಿ ಗಂ–
ಭೀರಂ ನಯಶಾಲಿ ಕೈದುವೊತ್ತರ ದೇವಂ–
ಗಾರೆಜಗಲ್ ನೃಪತುಂಗಂಗೆ" (ಪು. ೧೫೧–೧)

ಎಂಬ ಪದ್ಯಖಂಡವನ್ನೂ, ಕೇಶಿರಾಜನು ಶ್ರೀವಿಜಯನ ಸುಮಾರ್ಗವನ್ನು ನೆನೆದಿರುವುದನ್ನೂ; 'ಶಬ್ದಮಣಿದರ್ಪಣ'ದಲ್ಲಿ 'ಕವಿರಾಜಮಾರ್ಗ'ದ ಪದ್ಯಗಳೂ ಉದಾಹೃತವಾಗಿದ್ದರೂ ಮೇಲ್ಕಂಡ ಪದ್ಯಖಂಡ ಈ ವರೆಗೆ ದೊರೆತ ಯಾವ 'ಕವಿರಾಜಮಾರ್ಗ'ದ ಹಸ್ತಪ್ರತಿಯುಲ್ಲೂ ಇಲ್ಲದಿರುವುದರಿಂದಲೂ; 'ನೃಪತುಂಗಾಭ್ಯುದಯ' ಎಂಬ ನಾಮ 'ಕವಿರಾಜಮಾರ್ಗ'ದ ಹೊಸ ಹಸ್ತಪ್ರತಿಯಲ್ಲಿ ಅಕಾರಣವಾಗಿ ಎಂಬಂತೆ ಲಿಖಿತವಾಗಿರುವುದರಿಂದಲೂ; ಈ ಪ್ರತಿಯ ಸಂಪ್ರತಿಕಾರ 'ನೃಪತುಂಗಾಭ್ಯುದಯ'ವನ್ನು ಪ್ರತಿಮಾಡಲುದ್ದೇಶಿಸಿ ಆ ಕಾವ್ಯದ ಹೆಸರನ್ನು

ಫಲವಾಗಿ ಮೈಸೂರಿನ ಓರಿಯಂಟಲ್ ಲೈಬ್ರರಿ ೧೮೮೦ರಲ್ಲಿ ಸ್ಥಾಪನೆಯಾಗಿ ಬೆಳೆಯಿತು. ಅದರಲ್ಲಿದ್ದ ಕನ್ನಡ ಹಸ್ತಪ್ರತಿಗಳು ಈಗ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸುರಕ್ಷಿತವಾಗಿವೆ. ರೈಸ್ ಅವರಂತೆ ಕರ್ನಲ್ ಮೆಕಂಜಿ ಮದರಾಸು ಪ್ರಾಂತದಲ್ಲಿ ಹಸ್ತಪ್ರತಿಗಳ ಸಂಗ್ರಹ ಮಾಡಿದರು. ಈಚೆಗೆ ಕರ್ನಾಟಕ ವಿಶ್ವವಿದ್ಯಾನಿಲಯ, ಬೆಂಗಳೂರು ವಿಶ್ವವಿದ್ಯಾನಿಲಯಗಳೂ ಕೂಡ ಅತ್ಯಲ್ಪ ಕಾಲದಲ್ಲಿ ಗಣ್ಯವಾಗಿ ಸಂಗ್ರಹ ಮಾಡಿವೆ. ಮೈಸೂರು ವಿಶ್ವವಿದ್ಯಾನಿಲಯ ಹಸ್ತಪ್ರತಿಗಳು ಇರುವ ಕಡೆಗೆ ತನ್ನ ಪ್ರತಿನಿಧಿಗಳನ್ನು ಕಳಿಸಿ, ಅವುಗಳ ಮೈಕ್ರೋಫಿಲಂ ತೆಗೆಸಿಡುವ ಸ್ತುತ್ಯ ಕಾರ್ಯಕ್ರಮ ಹಾಕಿಕೊಂಡಿದೆ. ಹಸ್ತಪ್ರತಿಗಳ ಸಂಗ್ರಹಣ ಹಾಗೂ ಸಂಸ್ಕರಣ ಈಗ ವಿಜ್ಞಾನದ ನೆರವಿನಿಂದ ಅತ್ಯಂತ ಸಮರ್ಪಕವಾಗಿ ನಡೆಯುವುದು ಸಾಧ್ಯ. ಆದರೆ ಎಲ್ಲ ಸಂಸ್ಥೆಗಳೂ ಈ ಕೆಲಸ ಮಾಡುವುದು ಬಹಳ ಕಷ್ಟಸಾಧ್ಯ. ಆದ್ದರಿಂದ ಆಧುನಿಕ ವೈಜ್ಞಾನಿಕ ರೀತಿಯಲ್ಲಿ ಸಜ್ಜಾದ ಹಸ್ತಪ್ರತಿಗಳ ಕೇಂದ್ರಭಂಡಾರವೊಂದು ಕರ್ನಾಟಕ ಸರ್ಕಾರದಿಂದ ಸ್ಥಾಪಿತವಾಗಬೇಕು. ಇದರಲ್ಲಿ ಹೊಸದಾಗಿ ಸಂಗ್ರಹವಾಗುವ ಹಸ್ತಪ್ರತಿಗಳಲ್ಲದೆ ಕರ್ನಾಟಕದ ಒಳಗೂ, ಹೊರಗೂ ಇರುವ ಎಲ್ಲ ಹಸ್ತಪ್ರತಿಗಳ ಸಂಗ್ರಹಣ ಕೇಂದ್ರಗಳ ಹಾಗೂ ಖಾಸಗಿ ವ್ಯಕ್ತಿಗಳ ಬಳಿಯಿರುವ ಹಸ್ತಪ್ರತಿಗಳ ಮೈಕ್ರೋಫಿಲ್ಮ್ ತೆಗೆದು ಶೇಖರಿಸಬೇಕು. ಮೈಕ್ರೋಫಿಲ್ಮ್ ರೀಡರ್ ಯಂತ್ರ, ಧೂಪೋಪಚಾರಗೃಹ (Fumigation chamber) ಮುಂತಾದ ಆಧುನಿಕ ಯಂತ್ರಸಲಕರಣೆಗಳನ್ನು ಇಲ್ಲಿ ಅಳವಡಿಸಬೇಕು. ಇಂಥ ಕೇಂದ್ರ ಹಸ್ತಪ್ರತಿ ಭಂಡಾರ ಎಲ್ಲಿ ಸ್ಥಾಪನೆಯಾಗಬೇಕು ಎಂಬುದು ಆ ಸಂದರ್ಭದಲ್ಲಿ ನಿರ್ಣಯಿಸಬೇಕಾದ ಪ್ರಶ್ನೆ. (ಹಸ್ತಪ್ರತಿಗಳ ಸಂಗ್ರಹಣೆ, ಸಂರಕ್ಷಣೆ, ಪ್ರಕಟನೆ–ಈ ಮುಮ್ಮೊಗದ ಮಣಿಹವನ್ನು ಮುಂದಿಟ್ಟುಕೊಂಡಿರುವ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನದಲ್ಲಿಯೇ ಅಂಥ ಭಂಡಾರ ಏಕೆ ಸ್ಥಾಪನೆಯಾಗಬಾರದು?) ಎಲ್ಲ ಹಸ್ತಪ್ರತಿಗಳೂ ಸರ್ಕಾರದ ಸ್ವತ್ತು ಎಂಬ ಕಾನೂನನ್ನು ಜಾರಿಗೆ ತರುವ ವಿಷಯವನ್ನೂ ಪರ್ಯಾಲೋಚಿಸಬೇಕು. ಇಷ್ಟೆಲ್ಲ ಮಾಡಿ, ಹಸ್ತಪ್ರತಿಗಳು ಕಾಲಗರ್ಭದ ಕತ್ತಲೆಕೋಣೆಯಲ್ಲಿ ಕೊಳೆಯುವಂತಾಗಬಾರದು. ರಾಘವಾಂಕನು ತನ್ನ 'ಸಿದ್ಧರಾಮ ಚರಿತೆ'ಯನ್ನು ಕುರಿತು ಅದು 'ನೆಟ್ಟ ಕಲ್ಲೆನಿಸದೆ ಇಳೆಯೊಳು ಸುಳಿವ ಶಾಸನ' ಆಗಲಿ ಎಂದಿರುವ ಮಾತು ಸಂಗ್ರಹವಾದ ಹಸ್ತಪ್ರತಿಗಳಿಗೆ ಅನ್ವಯಿಸುವಂತಾಗಬೇಕು. ಎಂದರೆ ಗ್ರಂಥಸಂಪಾದನ ಶಾಸ್ತ್ರಜ್ಞರಿಂದ ಹಸ್ತಪ್ರತಿಗಳ ಬಂಧನದಿಂದ ಕನ್ನಡ ಶಾರದೆಯ ಬಿಡುಗಡೆಯಾಗಿ ನಾಡವರಿಗೆ ಆಕೆಯ ನಿತ್ಯದರ್ಶನವಾಗಬೇಕು. ಆಗಮಾತ್ರ ಹಸ್ತಪ್ರತಿಗಳ ಸಂಗ್ರಹಣ ಮತ್ತು ಸಂರಕ್ಷಣೆ ಸಾರ್ಥಕವಾಗುವುದು.

ಮಹತ್ವದ ಕಾರ್ಯಗಳು ಎಂದು ಒತ್ತಿ ಹೇಳಬಯಸುತ್ತೇನೆ. ಸಂಗ್ರಹಿಸಿದ ಅನುಪಯುಕ್ತ ಗ್ರಂಥರಾಶಿಯಲ್ಲಿ ಒಂದು ಕೃತಿರತ್ನ ಅಡಗಿರಬಹುದು.

ಪೂರ್ವಿಕರ ಸಂರಕ್ಷಣೆಯ ವಿಧಾನಗಳಿಂದ ಅಸಂಖ್ಯಾತ ಹಸ್ತಪ್ರತಿಗಳು ನಷ್ಟವಾಗದೆ ನಮಗೆ ಉಳಿದು ಬಂದಿವೆ. ಇವುಗಳಲ್ಲಿ ಒಂದು ಗಣ್ಯಭಾಗ ಜೈನ, ವೀರಶೈವ, ವೈದಿಕ ಮತಗಳ ಬೇರೆಬೇರೆ ಮಠಗಳಲ್ಲಿ ತಕ್ಕಮಟ್ಟಿಗೆ ಸುರಕ್ಷಿತವಾಗಿವೆ ಎಂದು ಹೇಳಬಹುದು. ಆದರೆ ಖಾಸಗಿ ವ್ಯಕ್ತಿಗಳ ವಶದಲ್ಲಿರುವ ಅನೇಕ ಸಹಸ್ರ ಸಂಖ್ಯೆಯ ಹಸ್ತಪ್ರತಿಗಳು ಸುರಕ್ಷಿತವಾಗಿವೆ ಎಂದು ಹೇಳಲು ಸಾಧ್ಯವಿಲ್ಲ. ಸರಸ್ವತೀ ಪೂಜೆಯ ನಿಮಿತ್ತದಲ್ಲಿ ನಡೆಯುತ್ತಿದ್ದ ಹಸ್ತಪ್ರತಿ ಸಂರಕ್ಷಣೆಯ ವಿಧಿವಿಧಾನಗಳ ಅನುಸರಣೆ ಈ ಶತಮಾನದ ಆದಿಭಾಗದಿಂದಲೇ ನಿಂತುಹೋದಂತೆ ಕಾಣುತ್ತದೆ. ಓಲೆಗರಿ ಕಟ್ಟುಗಳು ತುಂಬಿದ್ದ ಪೆಟ್ಟಿಗೆಯ ಮೇಲೆ ನಾಲ್ಕು ಹೂವನ್ನು ಏರಿಸಿ, "ಧೂಪದೀಪ ಸಕಲಾರಾಧನೈಸ್ಸ್ವರ್ಚಿತಂ" ಎನ್ನುವ ಶುಷ್ಕೋಪಚಾರ ಪೂಜೆ ಮಾತ್ರ ಇಂದಿಗೂ ಉಳಿದು ಬಂದಿದೆ. ಪೆಟ್ಟಿಗೆಯೊಳಗೇ ಹಸ್ತಪ್ರತಿಗಳಿಗೆ ಧೂಳಿನ ಸ್ನಾನವಾಗಿ, ಅವು ಗೆದ್ದಲು ಹುಳುವಿಗೋ ನುಸಿ ಮುಂತಾದ ಕ್ರಿಮಿಕೀಟಗಳಿಗೋ ನೈವೇದ್ಯವಾಗಿರಬಹುದು! ಈ ಪರಿಸ್ಥಿತಿಯಲ್ಲಿ ಈಗ ಜರೂರಾಗಿ ಆಗಬೇಕಾಗಿರುವುದು ಹಸ್ತಪ್ರತಿಗಳ ಅನ್ವೇಷಣೆ, ಸಂಗ್ರಹಣ ಮತ್ತು ಸಂರಕ್ಷಣ; ಕಾಲಕ್ರಮದಲ್ಲಿ ಅವುಗಳ ಪ್ರಕಟನೆ, ಇದೇ ಅಂತಿಮ ಗುರಿ. ಈ ಕೆಲಸವನ್ನು ನಾವು ಮಾಡದೆ ಹೋದರೆ ಉಳಿದು ಬಂದಿರುವಷ್ಟು ಹಸ್ತಪ್ರತಿಗಳು ಕೂಡ ಒಲೆಯ ಪಾಲೋ ಹೊಳೆಯ ಪಾಲೋ ಆಗಬಹುದು; ಅರಿಯದ ಅಜ್ಞಾನಿ ಮನೆಮಕ್ಕಳ ಕೈಗೆ ಸಿಕ್ಕಿ ಪುಡಿಪುಡಿಯಾಗಬಹುದು. ಅಕ್ಷರಸರಸ್ವತಿ ಅಂತರ್ಧಾನಳಾಗಬಹುದು.

ಹಸ್ತಪ್ರತಿಗಳ ಸಂಗ್ರಹಣ, ಸಂರಕ್ಷಣ ಮತ್ತು ಪ್ರಕಟನ ಕಾರ್ಯಗಳಲ್ಲಿ ನಮಗೆ ಮೇಲ್ಪಂಕ್ತಿ ಹಾಕಿ ಮಾರ್ಗದರ್ಶಕರಾಗಿರುವವರು, ಲ್ಯೂಯಿ ರೈಸ್ ಸಾಹೇಬರು, ಆರ್.ನರಸಿಂಹಾಚಾರ್ಯರು, ಎಂ.ಎ.ರಾಮಾನುಜಯ್ಯಂಗಾರ್ಯರು, ಫ.ಗು.ಹಳಕಟ್ಟಿ ಮತ್ತು ಚೆನ್ನಪ್ಪ ಉತ್ತಂಗಿಯವರು. ರೈಸ್‌ರವರು ೧೮೯೦ರಲ್ಲಿ ಪ್ರಕಟಿಸಿದ 'ಶಬ್ದಾನುಶಾಸನ'ದ ಮುನ್ನುಡಿಯಲ್ಲಿ ೧೮೭೦ರಿಂದ ತಾವು ಹಸ್ತಪ್ರತಿಗಳ ಅನ್ವೇಷಣೆ ಮತ್ತು ಸಂಗ್ರಹ ಕಾರ್ಯದಲ್ಲಿ ತೊಡಗಿದ ಸಂಗತಿಯನ್ನು ಉಲ್ಲೇಖಿಸಿದ್ದಾರೆ; ಶ್ರವಣಬೆಳುಗೊಳದ ಬ್ರಹ್ಮಸೂರಿ ಶಾಸ್ತ್ರಿಗಳು, ಚಾಮರಾಜನಗರದ ಪಂಡಿತರು ಕಿಟ್ಟಲ್ಲರು, ಬಿ.ಮಲ್ಲಪ್ಪನವರು ಮುಂತಾದ ವಿದ್ವಾಂಸರು ಈ ಕಾರ್ಯದಲ್ಲಿ ತಮಗೆ ನೆರವಾದದ್ದನ್ನು ಸ್ಮರಿಸಿದ್ದಾರೆ. ರೈಸ್ ಮತ್ತು ನರಸಿಂಹಾಚಾರ್ಯರ ದುಡಿಮೆಯ

ದ್ವೇಷಿಗಳಲ್ಲಿ ವಿಶ್ವಾಸ – ಈ ಐದೂ ಕಾವ್ಯಕ್ಕೆ ಮಹಾವಿಪತ್ತುಗಳು."

"ಮುಂದೆ ಬರೆದು ಮುಗಿಸುತ್ತೇನೆ, ಮತ್ತೆ ತಿದ್ದಿ ಸರಿಮಾಡುತ್ತೇನೆ, ಸ್ನೇಹಿತರೊಂದಿಗೆ ಕೂಡಿ ಪರಿಶೀಲಿಸುತ್ತೇನೆ, ಎಂದು ಮುಂತಾದ ಕವಿಯ ಆಲಸ್ಯ, ರಾಷ್ಟ್ರಕ್ಕೆ ಬಂದ ವಿಪತ್ತು– ಇವು ಪ್ರಬಂಧದ ವಿನಾಶಕ್ಕೆ ಕಾರಣಗಳು."

**–ಡಾ॥ ಕೆ.ಕೃಷ್ಣಮೂರ್ತಿ: 'ಕನ್ನಡ ಕಾವ್ಯಮೀಮಾಂಸೆ', ೧೯೬೯, ಪು.೧೧೩–೧೪.**

ಹಸ್ತಪ್ರತಿಗಳ ಕೇಂದ್ರಭಂಡಾರ ಸ್ಥಾಪನೆಯಾಗುವವರೆಗೆ ನಾವು ಸುಮ್ಮನಿರುವುದು ಸಲ್ಲದು. ಹಸ್ತಪ್ರತಿಗಳನ್ನು ಹೊಂದಿರುವವರು ಹಸ್ತಪ್ರತಿಗಳ ಸಂಗ್ರಹಣ ಮತ್ತು ಸಂರಕ್ಷಣ ಕಾರ್ಯದಲ್ಲಿ ನಿರತರಾಗಿರುವ ಸಂಸ್ಥೆಗಳಿಗೂ ವಿಶ್ವಾಸಾರ್ಹ ಗ್ರಂಥ ಸಂಪಾದಕರಿಗೂ ಅವುಗಳನ್ನು ಹಿಂದೆ ಮುಂದೆನೋಡದೆ ಒಪ್ಪಿಸಿ, ತವರುನಾಡಿನ ಋಣದಿಂದ ಮುಕ್ತರಾಗಬೇಕು, ಅವುಗಳ ಸಂರಕ್ಷಣೆಯಲ್ಲಿ ಭಾಗಿಗಳಾದ ಪುಣ್ಯಕಟ್ಟಿಕೊಳ್ಳಬೇಕು. ಏಕೆಂದರೆ, 'ಕಾಲೋ ಜಗದ್ಭಕ್ಷಕಃ'. ಎಚ್ಚರಿಕೆ ವಹಿಸದಿದ್ದರೆ, ಹಸ್ತಪ್ರತಿಗಳನ್ನು ಕಾಲಪುರುಷ ಖಂಡಿತ ಉಳಿಯಗೊಡುವುದಿಲ್ಲ.

○ ○ ○ ○ ○

## ಹಸ್ತಲಿಖಿತ ಪ್ರಬಂಧನಾಶಕ್ಕೆ ಕಾರಣಗಳು

ಸಿದ್ದಂ ಚ ಪ್ರಬನ್ಧಮನೇಕಾದರ್ಶಗತಂ ಕುರ್ಯಾತ್। ಯದಿತ್ಥಂ ಕಥಯನ್ತಿ–

"ನಿಕ್ಷೇಪೋ ವಿಕ್ರಯೋ ದಾನಂ ದೇಹತ್ಯಾಗೋಽಲ್ಪಜೀವಿತಾ।
ತ್ರುಟಿಕೋ ವಹ್ನಿರಂಭಶ್ಚ ಪ್ರಬಂಧೋಚ್ಛೇದಹೇತವಃ॥
ದಾರಿದ್ರಂ ವ್ಯಸನಾಸಕ್ತಿರವಜ್ಞಾ ಮಂದಭಾಗ್ಯತಾ।
ದುಷ್ಟೇದ್ವಿಷ್ಟೇ ಚ ವಿಶ್ವಾಸಃ ಪಞ್ಚ ಕಾವ್ಯಮಹಾಪದಃ॥ (ಇತಿ)

ಪುನಃ ಸಮಾಪಯಿಷ್ಯಾಮಿ, ಪುನಃ ಸಂಸ್ಕರಿಷ್ಯಾಮಿ, ಸುಹೃದ್ಭಿಃ ಸಹ ವಿವೇಚಯಿಷ್ಯಾಮೀತಿ ಕರ್ತುರಾಕುಲತಾ ರಾಷ್ಟ್ರೋಪಪ್ಲವಶ್ಚ ಪ್ರಬಂಧವಿನಾಶ ಕಾರಣಾಸಿ।

**–ರಾಜಶೇಖರ: 'ಕಾವ್ಯಮೀಮಾಂಸೆ', ಅಧ್ಯಾಯ ೧೦.**
**(ಗಾಯಕವಾಡ ಓರಿಯಂಟಲ್ ಸೀರಿಸ್ ಮುದ್ರಣ, ಪು.೫೩)**

○ ○ ○ ○ ○

ಸಿದ್ಧವಾದ ಪ್ರಬಂಧವನ್ನು ಅನೇಕ ಪ್ರತಿಗಳಲ್ಲಿ ಬರೆಯಿಸಬೇಕು. ಏಕೆಂದರೆ, ಹಿಂದಿನವರು ಹೇಳಿರುವಂತೆ–

"ಒತ್ತೆ ಇಡುವುದು, ಮಾರಾಟ, ದಾನ, ದೇಶತ್ಯಾಗ, ಅಲ್ಪಾಯುಷ್ಯ, ಗೆದ್ದಲು, ಬೆಂಕಿ, ನೀರು – ಈ ಎಂಟೂ ಕಾವ್ಯವನ್ನು ಹಾಳುಮಾಡುವ ನಿಮಿತ್ತಗಳು".

"ಬಡತನ, ವ್ಯಸನಾಸಕ್ತಿ, ತಿರಸ್ಕಾರ, ದುರದೃಷ್ಟ ಮತ್ತು ದುಷ್ಟರಲ್ಲಿ ಹಾಗೂ

ಪತ್ರಗಳನ್ನಿತ್ತು ಸಹಕರಿಸಿದ್ದಾರೆ. ನಾವು ಇಲ್ಲಿ ಪ್ರಕಟಿಸಿರುವ ಹಳಕಟ್ಟಿಯವರ ಪತ್ರಗಳು ಹಸ್ತಪ್ರತಿಗಳ ಬಗ್ಗೆ, ಗ್ರಂಥ ಸಂಪಾದನೆಯ ಬಗ್ಗೆ ಅವರಿಗಿದ್ದ ಅದಮ್ಯ ಉತ್ಸಾಹ; ಅದಕ್ಕಾಗಿ ಅವರು ಪಟ್ಟ ಪಾಡು; ಹೀಗೆ ಅವರ ಬದುಕಿನ ವಿವಿಧ ಮುಖಗಳನ್ನು ತಿಳಿಸುವ ಮೂಲ ಸಾಮಗ್ರಿಗಳಾಗಿವೆ. ಈ ದಿಸೆಯಲ್ಲಿ ನಮ್ಮ ಈ 'ಮಣಿಹ'ಕ್ಕೆ ವಿಶೇಷವಾದ ಮಹತ್ತ್ವವಿದೆ ಎಂದರೆ ಆತ್ಮಪ್ರಶಂಸೆಯಾಗಲಾರದು.

ಹಿರಿಯರಿಗೆ ನಾವು ನಿಜವಾಗಿ ಸಲ್ಲಿಸುವ ಗೌರವವೆಂದರೆ ಅವರಿಗೆ ಆಸಕ್ತಿಯಿದ್ದ ಕ್ಷೇತ್ರದಲ್ಲಿ ಅವರಿಗಿಂತ ಒಂದು ಹೆಜ್ಜೆ ಮುಂದಿಡುವುದು; ಅದು ನಮ್ಮಿಂದ ಆಗದೆ ಹೋದರೆ ಆ ಕ್ಷೇತ್ರದಲ್ಲಿ ಏನೇನು ಕೆಲಸ ನಡೆದಿದೆ ಎಂಬುದನ್ನಾದರೂ ತಿಳಿಯುವುದು– ಎಂಬುದಾಗಿ ನಾವು ಭಾವಿಸಿದ್ದೇವೆ.

ದಿವಂಗತ ಫ.ಗು. ಹಳಕಟ್ಟಿಯವರಿಗೆ ತುಂಬಾ ಪ್ರಿಯವಾದ ಕಾರ್ಯಕ್ಷೇತ್ರವೆಂದರೆ ಹಸ್ತಪ್ರತಿಗಳ ಸಂಗ್ರಹಣ ಮತ್ತು ಅವುಗಳ ಸಂಪಾದನ ಕಾರ್ಯ. ಹಸ್ತಪ್ರತಿಗಳ ಸಂಗ್ರಹ ಕಾರ್ಯದಲ್ಲಿ ಮೊದಲಿಗೆ ದುಡಿದ ಅಗ್ರಗಣ್ಯರು ಅವರು. ಹಸ್ತಪ್ರತಿಗಳ ಬಗ್ಗೆ ಜನಸಾಮಾನ್ಯರಲ್ಲಿ ಅಭಿಮಾನ, ಜಾಗೃತಿ ಮೂಡಬೇಕೆಂಬ ಉದ್ದೇಶದಿಂದ ಹಲವಾರು ದಶಕಗಳ ಹಿಂದೆಯೇ ಹಸ್ತಪ್ರತಿಗಳ ಪ್ರದರ್ಶನವನ್ನು ಮಾಡಿ ಜಾಗೃತಗೊಳಿಸಿದವರು.

ಈ ಎಲ್ಲಾ ಅಂಶಗಳನ್ನು ಮನಗಂಡು ಸಂಪಾದಕ ಮಂಡಳಿ ದಿವಂಗತ ಹಳಕಟ್ಟಿಯವರಿಗೆ ತುಂಬಾ ಪ್ರಿಯವಾಗಿದ್ದ 'ಹಸ್ತಪ್ರತಿ ಶಾಸ್ತ್ರ'ಕ್ಕೆ ಈ ಸ್ಮಾರಕ ಕೃತಿಯಲ್ಲಿ ಆದ್ಯತೆಯನ್ನು ನೀಡಬೇಕೆಂದು ತೀರ್ಮಾನಿಸಿತು. ಹಸ್ತಪ್ರತಿ ಶಾಸ್ತ್ರದ ಎಲ್ಲಾ ಮುಖಗಳನ್ನೂ ಪರಿಚಯಿಸಿ ಕೊಡುವಹಾಗೆ ಮುಖ್ಯವಾಗಿ ನಾಲ್ಕು ವಿಭಾಗಗಳನ್ನು ಮಾಡಿಕೊಂಡು ಅದರಲ್ಲಿ ಉಪವಿಭಾಗಗಳನ್ನು ರೂಪಿಸಿತು. ಆಯಾ ವಿಷಯದಲ್ಲಿ ಪರಿಣತರಾದ ವಿದ್ವಾಂಸರಿಗೆ ವಿಷಯಗಳನ್ನು ಸೂಚಿಸಿ ಲೇಖನಗಳನ್ನು ಬರೆದು ಕೊಡುವಂತೆ ಕೋರಲಾಯಿತು. ಈ ದಿಸೆಯಲ್ಲಿ ಎಲ್ಲಾ ವಿದ್ವಾಂಸರೂ ಹಳಕಟ್ಟಿಯವರ ಬಗೆಗಿನ ಅಭಿಮಾನದಿಂದ, ಬಿ.ಎಂ.ಶ್ರೀ. ಪ್ರತಿಷ್ಠಾನದ ಬಗೆಗಿನ ಆದರದಿಂದ ಸಹಕರಿಸಿದ್ದಾರೆ.

ನಾವು ಈಗಾಗಲೇ ಅರಿಕೆ ಮಾಡಿಕೊಂಡಿರುವಂತೆ ನಮ್ಮ ಈ 'ಮಣಿಹ' ಆಕರ ಗ್ರಂಥವಾಗಬೇಕು ಎಂಬುದಷ್ಟೇ ಅಲ್ಲ; ಈ ದಿಸೆಯುಲ್ಲಿ ಕಾರ್ಯಪ್ರವೃತ್ತರಾಗುವವರಿಗೆ ತೀರಾ ಅಗತ್ಯವಾಗಿ ತಿಳಿದಿರಬೇಕಾದ ಮಾಹಿತಿಯನ್ನೊಳಗೊಂಡ ಕೈದೀವಿಗೆಯೂ ಈ ಸ್ಮಾರಕ ಗ್ರಂಥವಾಗಬೇಕು ಎಂಬುದೂ ಇತ್ತು. ಆದ್ದರಿಂದಲೇ ಈ ಕ್ಷೇತ್ರದಲ್ಲಿ ಕೆಲಸ ಮಾಡುವವರು

# ೩. ಮಣಿಹ

## ನಮ್ಮ ಮಾತು

ಬಿ.ಎಂ.ಶ್ರೀ. ಪ್ರತಿಷ್ಠಾನವು ದಿವಂಗತ ಫ.ಗು.ಹಳಕಟ್ಟಿಯವರ ಶತಮಾನೋತ್ಸವ ಸಂದರ್ಭದಲ್ಲಿ, ಹಳಕಟ್ಟಿಯವರು ಕನ್ನಡ ನಾಡು ನುಡಿಗಳಿಗೆ ಸಲ್ಲಿಸಿದ ಸೇವೆಯನ್ನು ಸ್ಮರಿಸಿ, ಅವರ ಬದುಕು ಮತ್ತು ಸಾಧನೆಗಳನ್ನು ನಾಡಿನ ಜನತೆಗೆ ತಿಳಿಸುವ 'ಮಣಿಹ' ವನ್ನು ತುಂಬುಹೃದಯದಿಂದ ಆರಂಭಿಸಿತು. ಹಲವಾರು ಜನರ ಬೆಂಬಲದಿಂದ ಈ ಸ್ಮಾರಕ ಗ್ರಂಥ ಹೊರಬರುತ್ತಿರುವುದು ಪ್ರತಿಷ್ಠಾನಕ್ಕೆ ಹೆಮ್ಮೆಯ ಸಂಗತಿ.

ಈ ಕೃತಿಯ ರೂಪರೇಷೆಗಳನ್ನು ರೂಪಿಸುವಾಗ ಈ ಸ್ಮಾರಕ ಗ್ರಂಥ ಶತಮಾನೋತ್ಸವ ಸಂದರ್ಭಕ್ಕೆಂದು ಹೊರತಂದ ಸಾಂದರ್ಭಿಕ ಕೃತಿಯಾಗಬಾರದು. ಹಲವಾರು ವರ್ಷಗಳ ಕಾಲ ಉಳಿಯಬೇಕಾದ ಕೃತಿಯಾಗಬೇಕು ಎಂಬುದು ನಮ್ಮ ಉದ್ದೇಶವಾಗಿತ್ತು. ಆ ದಿಸೆಯಲ್ಲಿ ನಡೆದಿದ್ದೇವೆ ಎಂಬ ಭರವಸೆ ನಮಗಿದೆ.

ಈ ಕೃತಿಯಲ್ಲಿ ದಿವಂಗತ ಫ.ಗು.ಹಳಕಟ್ಟಿಯವರ ಜೀವನದ ಪರಿಚಯ ಭಾಗವನ್ನು ಉದ್ದೇಶಪೂರ್ವಕವಾಗಿಯೇ ನಾವು ಕಡಿಮೆ ಮಾಡಿದ್ದೇವೆ. ಹಳಕಟ್ಟಿಯವರ ಜೀವನ ಪರಿಚಯವನ್ನು ಮಾಡಿಕೊಡುವ 'ವಚನ ಪಿತಾಮಹ' – ಮುಂತಾದ ಕೃತಿಗಳು ಈಗಾಗಲೇ ಹೊರಬಂದಿರುವುದರಿಂದ ನಾವೂ ಆ ಕೆಲಸವನ್ನು ಮಾಡುವುದು ಪುನರುಕ್ತಿಯಷ್ಟೇ ಅಲ್ಲ, ಅನಗತ್ಯ ಶ್ರಮವೆನ್ನಿಸೀತು. ಆದರೂ ಈ ದಿಸೆಯಲ್ಲಿ ಏನಾದರೂ ಮಾಡಬೇಕೆಂದು ಭಾವಿಸಿ ಹಳಕಟ್ಟಿಯವರ ಪತ್ರಗಳನ್ನು ಪ್ರಕಟಿಸುವ ಯೋಜನೆಯನ್ನು ಹಾಕಿಕೊಂಡೆವು. ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಹಳಕಟ್ಟಿಯವರ ಪತ್ರಗಳನ್ನು ಕೋರಿ ಮನವಿ ಮಾಡಿಕೊಂಡೆವು. ನಮ್ಮ ಮನವಿಗೆ ಪ್ರೋತ್ಸಾಹದಾಯಕ ಉತ್ತರಗಳು ಬಾರದೆ ಹೋದರೂ ತಿಪಟೂರಿನ ಶ್ರೀ ಎಸ್.ಆರ್.ಮಲ್ಲಪ್ಪನವರು ತಮ್ಮ ಬಳಿಯಿದ್ದ ಬಹು ಸಂಖ್ಯೆಯ ಕಾಗದಗಳನ್ನು ಪ್ರಕಟನೆಗಿತ್ತು ಸಹಕರಿಸಿದರು. ಹಾಗೆಯೇ ತೀ.ನಂ.ಶ್ರೀ. ಅವರ ಪುತ್ರರಾದ ಶ್ರೀ ತೀ.ಶ್ರೀ.ನಾಗಭೂಷಣರೂ ತಮ್ಮ ಬಳಿ ಇದ್ದ ಹಳಕಟ್ಟಿಯವರ

ಆಗಿದ್ದರೆ ಅದು ಮುಂದಿನ ಜನಾಂಗಕ್ಕೆ ದಾರಿದೀವಿಗೆಯಾಗುತ್ತದೆ. ಹಸ್ತಪ್ರತಿಗಳ ಸಂಗ್ರಹ ಕಾರ್ಯ, ಗ್ರಂಥಸಂಪಾದನೆಯನ್ನು ಕುರಿತಂತೆ ನಮ್ಮ ಹಿಂದಿನ ತಲೆಮಾರಿನ ವಿದ್ವಾಂಸರು ಮಾಡಿದ ಸೇವೆಯನ್ನು ಪರಿಚಯ ಮಾಡಿಕೊಡುವ, ಅವರ ಸೇವೆಯನ್ನು ಗುರುತಿಸುವ ಪ್ರಯತ್ನವೂ ಇಲ್ಲಿ ನಡೆದಿದೆ. ಆ ಹಿರಿಯರು ತಮ್ಮ ಸೀಮಿತ ವ್ಯಾಪ್ತಿಯಲ್ಲಿ, ಮಿತಿಗಳಲ್ಲಿಯೂ ಅಪಾರವಾಗಿ ದುಡಿದು ಹಸ್ತಪ್ರತಿಶಾಸ್ತ್ರಕ್ಕೆ ಸಲ್ಲಿಸಿದ 'ಮಣಿಹ' ನಮ್ಮ ಮುಂದಿದೆ. ಅದು ನಮ್ಮ ಜವಾಬ್ದಾರಿಯನ್ನು, ನಾವು ಮುಂದೆ ಮಾಡಬೇಕಾದ ಕೆಲಸಗಳನ್ನು ಬೆರಳಿಟ್ಟು ತೋರಿಸುತ್ತಿದೆ.

ದಿವಂಗತ ಹಳಕಟ್ಟಿಯವರಿಗೆ ನಾವು ಸಲ್ಲಿಸಿದ ಈ 'ಮಣಿಹ' ಹಸ್ತಪ್ರತಿ ಶಾಸ್ತ್ರದ ಬಗ್ಗೆ ಹಲವರ ಗಮನವನ್ನಾದರೂ ಸೆಳೆದರೆ ಹಳಕಟ್ಟಿಯವರ ಆತ್ಮಕ್ಕೆ ತೃಪ್ತಿ. ತನ್ಮೂಲಕ ಎಲ್ಲರ ಶ್ರಮವೂ ಸಾರ್ಥಕ.

ನಾಡಿನ ವಿದ್ವಾಂಸರ ಸಹಕಾರದಿಂದ ದಿವಂಗತ ಪೂಜ್ಯ ಹಳಕಟ್ಟಿಯವರಿಗೆ ಪರೋಕ್ಷ ಗೌರವ ಸಮರ್ಪಣೆಯಾಗಿ ನಮ್ಮ ಈ ಮಣಿಹವನ್ನು ಸಲ್ಲಿಸುವಲ್ಲಿ ನಮಗೆ ತುಂಬಾ ಹೆಮ್ಮೆ ಎನ್ನಿಸುತ್ತದೆ.

## ಕೃತಜ್ಞತೆ

ನಮ್ಮ ಯೋಜನೆಗೆ ಮೊದಲಿನಿಂದಲೂ ಉತ್ತೇಜನ ಕೊಟ್ಟು ಬೆಂಬಲವಾದ ಪ್ರತಿಷ್ಠಾನದ ಅಧ್ಯಕ್ಷರು – ಶ್ರೀ ನಿಟ್ಟೂರು ಶ್ರೀನಿವಾಸ ರಾವ್ ಅವರಿಗೆ; ಅಮೂಲ್ಯವಾದ ಸಲಹೆ ಸೂಚನೆಗಳನ್ನು ಕೊಟ್ಟು ಸಹಕರಿಸಿರುವ ಸಂಪಾದಕ ಮಂಡಲಿಯ ಸದಸ್ಯರಿಗೆ; ಬೆಲೆಯುಳ್ಳ ಲೇಖನಗಳನ್ನು ಸಕಾಲಕ್ಕೆ ನೀಡಿ 'ಮಣಿಹ'ಕ್ಕೆ ಮೂರ್ತ ಸ್ವರೂಪವನ್ನು ಕೊಟ್ಟಿರುವ ವಿದುಷ–ವಿದುಷಿಯರಿಗೆ; ನಮ್ಮ ಮನವಿಯನ್ನು ಮನ್ನಿಸಿ 'ಮಣಿಹ'ದ ಪ್ರಧಾನ ಸಂಪಾದಕರಾಗಿ ಮಾರ್ಗದರ್ಶನ ನೀಡಿದ ಡಾ॥ ಸಿದ್ಧಯ್ಯ ಪುರಾಣಿಕ ಅವರಿಗೆ; ಪ್ರಕಟನಪೂರ್ವ ಬೆಲೆಚೀಟಿಗಳನ್ನು ವಿಕ್ರಯ ಮಾಡುವ ಮುಜುಗರದ ಕೆಲಸವನ್ನು ಪ್ರೀತಿಯಿಂದ ಮಾಡಿಕೊಟ್ಟಿರುವ ಸದಸ್ಯರಿಗೆ, ಅಭಿಮಾನಿಗಳಿಗೆ; ಕರಡು ತಿದ್ದುವುದು, ಪತ್ರವ್ಯವಹಾರ ಮುಂತಾದ ಅಗತ್ಯ ಕೆಲಸ ಕಾರ್ಯಗಳಲ್ಲಿ ಸಹಕರಿಸಿದ ಶ್ರೀ ವಿ.ವೆಂಕಟ ರಾವ್ ಮತ್ತು ಶ್ರೀ ನಾ.ಗೀತಾಚಾರ್ಯ ಅವರಿಗೆ; ಅಂದವಾದ ಹೊದಿಕೆ ಚಿತ್ರ ಬರೆದುಕೊಟ್ಟ ಚಿತ್ರಕಾರರಿಗೆ; ಸಾಂದರ್ಭಿಕ ಚಿತ್ರ, ನಕ್ಷೆ, ಛಾಯಾಚಿತ್ರ, ಪಡಿಯಚ್ಚುಗಳನ್ನು ಒದಗಿಸಿಕೊಟ್ಟ ಲೇಖಕಮಿತ್ರರಿಗೆ; 'ಮಣಿಹ'ದ ವೆಚ್ಚವನ್ನು ಸರಿದೂಗಿಸಲು ಸಹಾಯಧನ ನೀಡಿ

ಎದುರಿಸಬಹುದಾದ ಸಿಹಿ ಕಹಿ ಅನುಭವಗಳನ್ನೂ, ಅವರಿಗೆ ಇರಬೇಕಾದ ಪಾಂಡಿತ್ಯದ ಅಗತ್ಯವನ್ನೂ ಒತ್ತಿ ತಿಳಿಸುವ ಲೇಖನಗಳನ್ನು ಸೇರಿಸಿದ್ದೇವೆ.

ಕನ್ನಡ ಹಸ್ತಪ್ರತಿಗಳ ಸಂಪೂರ್ಣ ಪರಿಚಯವಾಗಬೇಕಾದರೆ ಇತರ ದೇಶ ಭಾಷೆಗಳ ಹಸ್ತಪ್ರತಿಗಳ ಬಗ್ಗೆಯೂ ತಿಳಿಯಬೇಕಾದ ಅವಶ್ಯಕತೆ ಇದೆ. ಈ ಉದ್ದೇಶದಿಂದ ತೆಲುಗು, ತಮಿಳು ಮತ್ತು ಸಂಸ್ಕೃತ ಹಸ್ತಪ್ರತಿಗಳ ಪರಿಚಯವನ್ನು ಮಾಡಿಕೊಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಹಸ್ತಪ್ರತಿಗಳು ಆಯಾ ದೇಶದ ಅಮೂಲ್ಯ ಆಸ್ತಿಗಳು. ಅವುಗಳನ್ನು ಹಿಂದಿನವರು ಹೇಗೆ ಸಂರಕ್ಷಿಸಿಕೊಂಡು ಬಂದರು ಎಂಬುದನ್ನೂ, ಅವುಗಳ ಬಗ್ಗೆ ಅವರಿಗಿದ್ದ ಪೂಜ್ಯ ಭಾವನೆಯನ್ನೂ ತಿಳಿಯುವುದು ಸೂಕ್ತ. ಈ ದಿಸೆಯಲ್ಲಿ 'ಸರಸ್ವತಿ ಪೂಜೆ' ಮತ್ತು 'ಪುರಾಣಗಳಲ್ಲಿ ಗ್ರಂಥಲೇಖನದ ವಿಚಾರ'– ಎಂಬ ಲೇಖನಗಳು ತುಂಬಾ ಮಹತ್ವದವು ಎಂಬ ಭರವಸೆ ನಮಗಿದೆ.

ಹಸ್ತಪ್ರತಿಗಳು ಕೇವಲ ಬರವಣಿಗೆಯನ್ನೊಳಗೊಂಡ ಬರಹಗಳ ಕಟ್ಟುಗಳಲ್ಲ. ಅವು ಸುಂದರ ಕಲಾಕೃತಿಗಳೂ ಸಹ. ಅವುಗಳ ಲಿಪಿವಿನ್ಯಾಸ, ಅವುಗಳಲ್ಲಿನ ಚಿತ್ರಕಲೆ ಮುಂತಾದುವುಗಳನ್ನು ಆಳವಾಗಿ ಅಭ್ಯಾಸ ಮಾಡಬೇಕಾದ ಅವಶ್ಯಕತೆ ಇದೆ ಎಂಬ ಅಂಶವನ್ನು ಇಲ್ಲಿನ ಆ ವಿಭಾಗದ ಲೇಖನಗಳು ಒತ್ತಿ ಹೇಳುತ್ತವೆ.

ಹಸ್ತಪ್ರತಿಗಳೆಂದರೆ ತಾಳೆಯೋಲೆಗಳಷ್ಟೇ ಎಂಬ ಅಭಿಪ್ರಾಯವು ಜನಸಾಮಾನ್ಯರಲ್ಲಿ ಮೂಡಿದೆ. ಇದರಲ್ಲಿಯೇ ಮತ್ತೊಂದು ಅಂಶವೆಂದರೆ ನಮ್ಮ ವಿದ್ವಾಂಸರು ಸಾಹಿತ್ಯಿಕ ಹಸ್ತಪ್ರತಿಗಳತ್ತ ಗಮನ ಕೊಡುತ್ತಿರುವಷ್ಟು ಇತರ ಹಸ್ತಪ್ರತಿಗಳತ್ತ ಗಮನ ನೀಡುತ್ತಿಲ್ಲ. ಈ ದಿಸೆಯಲ್ಲಿ ಜನಸಾಮನ್ಯರ, ವಿದ್ವಾಂಸರ ಗಮನವನ್ನು ಕೈಫಿಯತ್ತು, ಕಡತ ಮತ್ತು ಉಪೇಕ್ಷಿತ ಹಸ್ತಪ್ರತಿಗಳತ್ತ ಸೆಳೆಯುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಹಸ್ತಪ್ರತಿಗಳಲ್ಲಿನ ಸಾಮಗ್ರಿಗಳ ಪರಿಚಯದಷ್ಟೆ ಮುಖ್ಯವಾದುದು ಆ ಹಸ್ತಪ್ರತಿಗಳಲ್ಲಿನ ಲಿಪಿಗಳೂ ಸಹ. ಇದುವರೆಗೆ ಲಿಪಿಶಾಸ್ತ್ರವೆನ್ನುವುದು ಶಾಸನಗಳ ಲಿಪಿಯ ಜಾಡನ್ನೇ ಹಿಡಿದು ನಡೆದಿದೆ. ಹಸ್ತಪ್ರತಿಗಳಲ್ಲಿನ ಲಿಪಿಗಳ ಬಗ್ಗೆ ಆಗಿರುವ ಕೆಲಸ ತೀರಾ ಕಡಿಮೆ. ನಮ್ಮ ಸೀಮಿತ ವ್ಯಾಪ್ತಿಯಲ್ಲಿ ಈ ಕೊರತೆಯನ್ನು ತುಂಬುವ ಪ್ರಾಮಾಣಿಕ ಪ್ರಯತ್ನ ನಡಸಿದ್ದೇವೆ.

ಪ್ರತಿಯೊಂದು ತಲೆಮಾರೂ ತನ್ನ ದೇಶದ ಇತಿಹಾಸವನ್ನು ಪುನರ್ವಿರಚಿಸುತ್ತದೆ. ಈ ರೀತಿಯ ಪುನರ್ವಿರಚನೆ ವಿಮರ್ಶಾತ್ಮಕವೂ ಕ್ರಿಯಾತ್ಮಕವೂ

# ೪. 'ಮಣಿಹ' ದ ಬಿಡಿ ಟಿಪ್ಪಣಿಗಳು

## ೧.ಫ.ಗು. ಹಳಕಟ್ಟಿಯವರ ಕೆಲವು ಪತ್ರಗಳು

[ಇತಿಹಾಸವನ್ನು ಸ್ಪಷ್ಟವಾಗಿ ಗುರುತಿಸುವಲ್ಲಿ ಪತ್ರವ್ಯವಹಾರಗಳು ಸಂಶೋಧಕರಿಗೆ ಮೂಲ ಸಾಮಗ್ರಿಗಳಾಗುತ್ತವೆ ಎಂಬುದರಲ್ಲಿ ಸಂಶಯವಿಲ್ಲ. ಈ ತೆರನ ಮೂಲ ಸಾಮಗ್ರಿಗಳ ಪ್ರಕಟನೆ ಕನ್ನಡದಲ್ಲಿ ಸ್ವಲ್ಪ ಮಟ್ಟಿಗೆ ನಡೆದಿದೆಯಾದರೂ ಆ ಬಗ್ಗೆ ಅತೃಪ್ತಿ ಉಳಿದಿದೆ. ಈ ಕಾರ್ಯವು ತೃಪ್ತಿಕರವಾಗಿ ನಡೆಯಲು ಸಂಶೋಧಕರ ಸತತ ಪ್ರಯತ್ನದ ಜೊತೆಗೆ ಪತ್ರಗಳನ್ನು ಹೊಂದಿರುವ ವ್ಯಕ್ತಿಗಳ ಸಹಕಾರವೂ ತೀರಾ ಮುಖ್ಯವೆಂದು ಈ ಸಂದರ್ಭದಲ್ಲಿ ಹೇಳಬಯಸುತ್ತೇವೆ.]

ಶ್ರೀ ಎಸ್.ಆರ್.ಮಲ್ಲಪ್ಪನವರ ಬಳಿ ಈಗ ಶ್ರೀ ಹಳಕಟ್ಟಿಯವರು ಶ್ರೀ ಮಲ್ಲಪ್ಪನವರಿಗೆ ಬಂದ ಪತ್ರಗಳು ಒಂದು ನೂರರಷ್ಟು ಇವೆ. ಇಲ್ಲಿ ಕೇವಲ ಐವತ್ತು ಪತ್ರಗಳನ್ನು ಮಾತ್ರ ಪ್ರಕಟಿಸಿರುತ್ತೇವೆ. ಉಳಿದವುಗಳನ್ನು ಶ್ರೀ ಎಸ್.ಆರ್.ಮಲ್ಲಪ್ಪನವರು ಪ್ರಕಟನೆಗೆ ನೀಡಿಲ್ಲ. ಕಾರಣ: ಆ ಪತ್ರಗಳ ಕೊನೆಯಲ್ಲಿ ಶ್ರೀ ಹಳಕಟ್ಟಿಯವರೇ 'ಈ ಸಂಗತಿಗಳನ್ನು ಪ್ರಕಟಿಸಬೇಡಿ' ಎಂದು ಬರೆದಿರುವುದು. ಶ್ರೀ ಎಸ್.ಆರ್.ಮಲ್ಲಪ್ಪನವರು ಶ್ರೀ ಹಳಕಟ್ಟಿಯುವರ ಮಾತನ್ನು ಮೀರಲಾರದವರಾಗಿದ್ದಾರೆ. ತಮ್ಮ ಮತ್ತು ಶ್ರೀ ಹಳಕಟ್ಟಿಯವರ ಪತ್ರವ್ಯವಹಾರವನ್ನು ಕುರಿತು "ಶಿವೈಕ್ಯ ಫ.ಗು.ಹಳಕಟ್ಟಿ ಯವರಿಗೂನನಗೂ ಪತ್ರಗಳ ಮೂಲಕವಾಗಿಯೇ ಮೊದಲ ಪರಿಚಯವಾಯಿತು. ಬಹುಶಃ ೧೯೩೮ರಿಂದಲೂ ಪತ್ರವ್ಯವಹಾರ ನಡೆದಿರಬಹುದು. ೧೯೦೪ರಲ್ಲಿ ಅವರು ಬರೆದ ಪತ್ರವೂ ಇದೆ. ಈ ಸ್ನೇಹ ಅಂತ್ಯದವರೆಗೂ ಇತ್ತು. ಅವರು ನೂರಾರು ಪತ್ರಗಳನ್ನು ಬರೆದಿದ್ದಾರೆ" ಎಂಬುದಾಗಿ ದಿನಾಂಕ ೧೨-೬-೮೧ ರಲ್ಲಿ ನಮಗೆ ಬರೆದ ಪತ್ರವೊಂದರಲ್ಲಿ ಮಲ್ಲಪ್ಪನವರು ತಿಳಿಸಿದ್ದಾರೆ.

ಪೂಜ್ಯ ಶ್ರೀ ಹಳಕಟ್ಟಿಯವರ ಪತ್ರಗಳನ್ನು ಜೋಪಾನವಾಗಿ ಕಾಪಾಡಿಕೊಂಡು ಬಂದುದಷ್ಟೇ ಅಲ್ಲ; ನಮ್ಮ ಕರೆಗೆ ಮನ್ನಣೆ ನೀಡಿ ಅವುಗಳನ್ನು ಪ್ರಕಟಿಸಲು ನೆರವಾದ ಶ್ರೀ ಎಸ್.ಆರ್.ಮಲ್ಲಪ್ಪನವರ ಮನೋವೈಶಾಲ್ಯಕ್ಕೆ ನಮ್ಮ

ಬೆಂಬಲವಾಗಿರುವ ಮಹನೀಯರಿಗೆ, ಸಹಾಯಧನದ ಭರವಸೆ ನೀಡಿರುವ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ವಿಭಾಗದ ನಿರ್ದೇಶಕರಿಗೆ –

ಪ್ರತಿಷ್ಠಾನದ ಪರವಾಗಿ ನಮ್ಮ ಕೃತಜ್ಞತೆಯ ವಂದನೆಗಳನ್ನು ಸಲ್ಲಿಸುತ್ತೇವೆ.

೧–೧–೧೯೮೨ **ಎಂ.ವಿ. ಸೀತಾರಾಮಯ್ಯ**
ಬೆಂಗಳೂರು–೧೯ **ಆರ್. ಶೇಷಶಾಸ್ತ್ರಿ**
**ಸಂಪಾದಕರು.**

## ೩. ಪಾಠಾಂತರಗಳಿಗೆ ಕವಿ ಕಾರಣ

**ಕುವೆಂಪು: ಮೊದಲ ಪಾಠ**

ಶಂಕರ ರಾಮಾನುಜ ವಿದ್ಯಾರಣ್ಯ
ಬಸವೇಶ್ವರರಿಹ ದಿವ್ಯಾರಣ್ಯ (ಧರ್ಮಾರಣ್ಯ)
ರನ್ನ ಷಡಕ್ಷರಿ ಪೊನ್ನ
ಪಂಪ ಲಕುಮಿಪತಿ ಜನ್ನ
ಕಬ್ಬಿಗರುದಿಸಿದ ಮಂಗಳಧಾಮ
ಕವಿಕೋಗಿಲೆಗಳ ಪುಣ್ಯಾರಾಮ.

ತಿದ್ದಿದ ಪಾಠ (ಈಗ ಆಯ್ಕೆಯಾದ ನಾಡಗೀತೆಯ ಬಗ್ಗೆ ಕನ್ನಡ ನಾಡಿನ ನಾನಾ ಕಡೆಗಳಿಂದ ಪರಿಷತ್ತಿನ ಅಭಿಮಾನಿಗಳನೇಕರು ಕೊಟ್ಟ ಸೂಚನೆಗಳನ್ನು ಕ್ರೋಢೀಕರಿಸಿ ರಾಷ್ಟ್ರಕವಿ ಕುವೆಂಪು ಅವರ ಗಮನಕ್ಕೆ ತಂದಾಗ, ಅವರು ಮಧ್ವಾಚಾರ್ಯ ಮತ್ತು ಕುಮಾರವ್ಯಾಸರ ಹೆಸರುಗಳನ್ನು ಈ ಗೀತೆಯಲ್ಲಿ ಅಳವಡಿಸಲು ಒಪ್ಪಿ ಗೀತೆಯ ಎರಡು ಸಾಲುಗಳನ್ನು ಪರಿಷ್ಕರಿಸಿ ಕೊಟ್ಟಿದ್ದಾರೆ,
– ಕ. ನುಡಿ. ೧೬–೨–೭೧

ಶಂಕರ ರಾಮಾನುಜ ವಿದ್ಯಾರಣ್ಯ
ಬಸವೇಶ್ವರ ಮಧ್ವರ ದಿವ್ಯಾರಣ್ಯ
ರನ್ನ ಷಡಕ್ಷರಿ ಪೊನ್ನ
ಪಂಪ ಲಕುಮಿಪತಿ ಜನ್ನ
ಕುಮಾರವ್ಯಾಸರ ಮಂಗಳಧಾಮ
ಕವಿಕೋಗಿಲೆಗಳ ಪುಣ್ಯಾರಾಮ.

ಕೃತಜ್ಞತಾಪೂರ್ವಕ ವಂದನೆಗಳು. ಶ್ರೀ ಮಲ್ಲಪ್ಪನವರಂತೆಯೇ ಶ್ರೀ ಹಳಕಟ್ಟಿಯವರ ಪತ್ರಗಳನ್ನು ಕಾಪಾಡಿಕೊಂಡು ಬಂದ ಇತರರೂ ಅವುಗಳನ್ನು ಪ್ರಕಟನೆಗೆ ನೀಡಿದ್ದರೆ ಈ ಕೃತಿಯ ಮೌಲ್ಯ ಇನ್ನೂ ಹೆಚ್ಚುತ್ತಿತ್ತು. ಶ್ರೀ ಮಲ್ಲಪ್ಪನವರ ಮೇಲ್ಪಂಕ್ತಿಯನ್ನು ನಮ್ಮ ಜನ ಅನುಸರಿಸುತ್ತಾರೆಂದು ನಂಬುತ್ತೇವೆ.

ತಮ್ಮ ತಂದೆ ದಿ॥ ತೀ.ನಂ.ಶ್ರೀ. ಯವರ ಪತ್ರಸಂಗ್ರಹದಲ್ಲಿದ್ದ ಹಳಕಟ್ಟಿಯವರ ಎರಡು ಪತ್ರಗಳನ್ನು ಶ್ರೀ ತೀ.ಶ್ರೀ. ನಾಗಭೂಷಣ ಅವರು ಕೊಟ್ಟಿರುತ್ತಾರೆ. ಅವರಿಗೂ ನಮ್ಮ ವಂದನೆಗಳು. –ಸಂ.]

## ೨. ಹಸ್ತಪ್ರತಿ ಸಂಗ್ರಹ ಕಾರ್ಯ

[ಹಸ್ತಪ್ರತಿಗಳ ಸಂಗ್ರಹಕಾರ್ಯ ಇಮ್ಮೊಗವಾದುದು: (೧) ತಾನು ಸಂಪಾದನ ಮಾಡುತ್ತಿರುವ ನಿರ್ದಿಷ್ಟ ಕೃತಿಯ ಪರಿಷ್ಕರಣ ಕಾರ್ಯದಲ್ಲಿ ಪಾಠಾಂತರ ಪರಿಶೀಲನೆಗೆ ಅಗತ್ಯವಾದ ಪ್ರತ್ಯಂತರಗಳನ್ನು ಗ್ರಂಥಸಂಪಾದಕನು ಸಂಗ್ರಹಿಸುವ ಕಾರ್ಯ; ದೊರಕಿಸಿಕೊಂಡ ಹಸ್ತ ಪ್ರತಿಗಳನ್ನು ಸಂಪಾದಕ ಅವುಗಳ ಮಾಲಿಕರಿಗೆ ಹಿಂಮರಳಿಸುತ್ತಾನೆ. ಈ ದಿಸೆಯಲ್ಲಿ ತಮ್ಮ ಅನುಭವವನ್ನು ಶ್ರೀಯುತರು ತಮ್ಮ ಲೇಖನದಲ್ಲಿ ನಿವೇದಿಸಿಕೊಂಡಿರುವರು (೨) ಹಸ್ತಪ್ರತಿಗಳನ್ನು ಸಂರಕ್ಷಿಸುವ, ಪ್ರಕಟಿಸುವ, ಪರಿಷ್ಕರಿಸಿ ಪ್ರಕಾಶನಗೊಳಿಸಬೇಕೆನ್ನುವವರಿಗೆ ಎರವಲು ನೀಡುವ ಉದ್ದೇಶಗಳನ್ನು ಹೊಂದಿದ್ದು ವ್ಯಾಪಕವಾದ ರೀತಿಯಲ್ಲಿ – ದಾನವಾಗಿ ಪಡೆದೋ ಯಥೋಚಿತ ಮೌಲ್ಯ ನೀಡಿ ಕೊಂಡುಕೊಂಡೋ ಸಂಸ್ಥೆಗಳು ನಡಸುವ ಸಂಗ್ರಹಕಾರ್ಯ. ಸಂಸ್ಥೆಗಳು ಖಾಸಗಿಯವರಿಗೆ ಹಸ್ತಪ್ರತಿಗಳನ್ನು ಎರವಲು ನೀಡುವಲ್ಲಿ ಕೆಲವು ಕಟ್ಟುಪಾಡುಗಳನ್ನು ವಿಧಿಸಲೇಬೇಕಾಗುತ್ತದೆ. ಏಕೈಕ ಹಸ್ತಪ್ರತಿಯನ್ನು, ತಾಳೆಗರಿ ಹಸ್ತಪ್ರತಿಗಳನ್ನು ಸಾಮಾನ್ಯವಾಗಿ ಎರವಲು ನೀಡಲಾಗದು. ಹಸ್ತಪ್ರತಿಯನ್ನು ನಕಲು ಮಾಡಿಸಿ ಒದಗಿಸುವುದು, ಮೈಕ್ರೋಫಿಲ್ಮ್ ಪ್ರತಿಯನ್ನು ಒದಗಿಸುವುದು, ಸ್ಥಳದಲ್ಲೆ ಪರಿಶೀಲಿಸಲು ಅವಕಾಶ ಕಲ್ಪಿಸುವುದು, ಮುಂತಾದ ರೀತಿಯಲ್ಲಿ – ಸಂಸ್ಥೆಗಳು ಎರವಲು ನೀಡಲು ಅಡ್ಡಿಯಿಲ್ಲ. ಮೈಸೂರು ವಿಶ್ವವಿದ್ಯಾನಿಲಯ ಉದಾರವಾದ ನೀತಿಯನ್ನು ಅನುಸರಿಸುತ್ತಿದೆ ಎಂದು ನನ್ನ ತಿಳಿವಳಿಕೆ, ಅನುಭವ – ಎಂ.ವಿ.ಸೀ.]

# ೫. ಹಸ್ತಪ್ರತಿಶಾಸ್ತ್ರ

## ಬಿನ್ನಹ*

ಎರಡು ವರ್ಷಗಳ ಹಿಂದೆ ಎಂದರೆ ೧೯೮೧ರಲ್ಲಿ ಜನವರಿ ೩೦ರಿಂದ ತೊಡಗಿ ಮೂರು ದಿನಗಳ ಕಾಲ ಹಸ್ತಪ್ರತಿ ಶಾಸ್ತ್ರ ವಿಷಯವಾಗಿ ಒಂದು ವಿಚಾರಗೋಷ್ಠಿಯನ್ನು ರಾಜ್ಯ ಸಾಹಿತ್ಯ ಅಕಾಡೆಮಿ, ಮೈಸೂರು ವಿಶ್ವವಿದ್ಯಾನಿಲಯ, ಮಿತಿಕ್ ಸೊಸೈಟಿ ಇವುಗಳು ಉದಾರವಾಗಿ ನೀಡಿದ ಧನಸಹಾಯದಿಂದ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ಯಶಸ್ವಿಯಾಗಿ ನಡಸಿತು. ಅತ್ಯಂತ ಈಚಿನ ಶಾಸ್ತ್ರ ಎನ್ನಬಹುದಾದ ಹಸ್ತಪ್ರತಿ ಶಾಸ್ತ್ರವನ್ನು ಕುರಿತು ಕರ್ನಾಟಕದ ಮಾತು ಹಾಗಿರಲಿ, ಅಖಿಲ ಭಾರತದಲ್ಲಿಯೆ ಇಂಥ ಒಂದು ವಿಚಾರಗೋಷ್ಠಿ ನಡೆದದ್ದು ಇಲ್ಲ. ಹಸ್ತಪ್ರತಿಗಳ ಸಂಗ್ರಹಕಾರ್ಯದಿಂದ ತೊಡಗಿ ಗ್ರಂಥಸಂಪಾನೆಯಲ್ಲಿ ತುದಿ ಮುಟ್ಟುವ ಹಸ್ತಪ್ರತಿ ಶಾಸ್ತ್ರದಲ್ಲಿ ನುರುಗಿದ ೧೩ ಮಂದಿ ವಿದ್ವಾಂಸರು ಗೋಷ್ಠಿಯ ಬೇರೆ ಬೇರೆ ಸಭೆಗಳಲ್ಲಿ ವೈದುಷ್ಯಪೂರ್ಣ ಪ್ರಬಂಧಗಳನ್ನು ಮಂಡಿಸಿದರು. ಪ್ರಸಕ್ತ ಜ್ಞಾನಕ್ಷೇತ್ರದಲ್ಲಿ ಕೆಲಸ ಮಾಡಿಯೋ ಪಾಠ ಹೇಳಿಯೋ ಇಲ್ಲವೆ ಆಸಕ್ತರಾಗಿಯೋ ಇದ್ದ ಸುಮಾರು ೩೦ ಮಂದಿ ವಿಶೇಷ ಆಹ್ವಾನಿತರು ಎಂದು ಪರಿಗಣಿಸಲ್ಪಟ್ಟ ವಿದ್ವಾಂಸರಲ್ಲದೆ ಇತರ ವಿದ್ವದಭಿಮಾನಿಗಳು ಹಲವರು – ಮಹನೀಯರು, ಮಹಿಳೆಯರು – ಪ್ರತಿದಿನವೂ ಗೋಷ್ಠಿಗೆ ಬಂದು, ವಿಚಾರವಿನಿಮಯಗಳ ಲಾಭವನ್ನು ಪಡೆದರು, ದೊರಕಿಸಿಕೊಟ್ಟರು. ಗೋಷ್ಠಿಯ ನಿರ್ದೇಶಕರಾಗಿದ್ದುಕೊಂಡು ಅದನ್ನು ಯಶಸ್ವಿಯಾಗಿ ನಡಸಿಕೊಟ್ಟವರು ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರಾಧ್ಯಾಪಕ ಡಾ॥ ಎಂ.ಚಿದಾನಂದಮೂರ್ತಿ ಅವರು.

ಗೋಷ್ಠಿಯಲ್ಲಿ ಮಂಡಿಸಿದ ಪ್ರಬಂಧಗಳನ್ನು ವಿದ್ವಾಂಸರು ಬರೆದುಕೊಟ್ಟು ಉಪಕರಿಸಿದ್ದಾರೆ; ಪ್ರಕಟನೆಗಾಗಿ ಒಪ್ಪಿಸಿದ್ದಾರೆ. ಈ ಸಹಕಾರ ಅವರಿಂದ ದೊರೆಯದೆ ಹೋಗಿದ್ದರೆ ಈ ಅಮೂಲ್ಯವಾದ ಶಾಸ್ತ್ರಗ್ರಂಥವನ್ನು ಹೊರತರಲಾಗುತ್ತಿರಲಿಲ್ಲ. ಪ್ರಬಂಧಕರ್ತರಾದ ವಿದ್ವಾಂಸರಿಗೆ ಪ್ರತಿಷ್ಠಾನ ಋಣಿಯಾಗಿದೆ.

---

* ಹಸ್ತಪ್ರತಿಶಾಸ್ತ್ರ, ಸಂ: ಎಂ.ವಿ.ಸೀತಾರಾಮಯ್ಯ. ಡಾ.ಎಂ.ಚಿದಾನಂದಮೂರ್ತಿ, ಪ್ರಕಾಶಕರು: ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರು ೧೯೮೩

## ೪. ಕಡಿತ: ಕಿರುಟಿಪ್ಪಣಿ

'ಮೋಹನ ತರಂಗಿಣಿ'ಯ ಪೀಠಿಕಾ ಭಾಗದಲ್ಲಿ ಕನಕದಾಸರು ತಮ್ಮ ಮತ್ತು ತಮ್ಮ ಕೃತಿಯ ಬಗ್ಗೆ ತಿಳಿಸುತ್ತಾ–

ಬರಹವ ತಿಳಿಯಬೇಡೆನ್ನುತೆನ್ನ ನೊಸಲೊಳು
ಬರೆದು ನಿರ್ಮಿಸಲದಜೆಂದ
ಬರಹವನಜೆಯೆ ನಾ ಪದವಿಟ್ಟು **ಕಡಿತ**ದೊಳ್
ಬರೆದು ಮಾಡಿದ ಕೃತಿಯಲ್ಲ – ಎಂಬುದಾಗಿ ಹೇಳಿದ್ದಾರೆ.

(ಕನಕದಾಸರ 'ಮೋಹನ ತರಂಗಿಣೀ' ಸಂಗ್ರಹ. ಸಂಪಾದಕ ಬಿ.ಎಸ್.ಸಣ್ಣಯ್ಯ, ಗೀತಾ ಬುಕ್ ಹೌಸ್, ಮೈಸೂರು, ೧೯೭೦, ಪು.೩)

ಕನಕದಾಸರ ಈ ಪದ್ಯದ ಉತ್ತರಭಾಗವು ಸ್ವಾರಸ್ಯವಾದ ವಿಷಯವನ್ನು ತಿಳಿಸುತ್ತದೆ. ತಾನು ಹುಟ್ಟುವಾಗಲೇ ಹೀನ ಜಾತಿಯಲ್ಲಿ ಹುಟ್ಟಿದುದರಿಂದ ನೀನು ಬರಹವನ್ನೆ ತಿಳಿಯಬೇಡ ಎಂದು ಬ್ರಹ್ಮ ಹಣೆಯಬರಹವನ್ನು ಬರೆದ. ಆದಕಾರಣ ನನಗೆ ಬರಹವೇ ತಿಳಿಯದು. ಈ ಕೃತಿಯು ಮೊದಲು 'ಕಡಿತ'ದಲ್ಲಿ ಬರೆದು ತಿದ್ದಿ ಮತ್ತೆ ಬರೆದುದಲ್ಲ – ಎಂಬುದು ಈ ಪದ್ಯದ ಭಾವಾರ್ಥ. ಅಂದರೆ ಕವಿಗಳು ತಮ್ಮ ಕಾವ್ಯದ ಮೊದಲ ಪ್ರತಿಯನ್ನು ಕಡಿತದಲ್ಲಿ ಬರೆದು ಅನಂತರ ಪರಿಷ್ಕರಿಸಿ ತಿದ್ದಿದ ಪ್ರತಿಯನ್ನು ಓಲೆಗರಿಗಳಿಗೆ ಬರೆಯಲು ಅನುವು ಮಾಡುತ್ತಿದ್ದರೆಂದು ನಾವು ಊಹಿಸಬಹುದು. ಇದೇ ಸಂದರ್ಭದಲ್ಲಿ ಹಲಗೆ ಬಳಪದ ಪಿಡಿಯದೊಂದಗ್ಗಳಿಕೆಎಂಬ ಕುಮಾರವ್ಯಾಸನ ಮಾತಿನಿಂದ ಫಲಕದ ಮೇಲೆ ಕಾವ್ಯವನ್ನು ಮೊದಲು ಬರೆದು ಬರೆದ ಬರಹವನ್ನು ಪರಿಷ್ಕಾರಮಾಡುವುದಿದ್ದರೆ ಪರಿಷ್ಕರಿಸಿ ಓಲೆಯಲ್ಲಿ ಪ್ರತಿಮಾಡುತ್ತಿದ್ದರು ಎಂದು ವಿದಿತವಾಗುತ್ತದೆ. –ಸಂ.

# ೭. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ*

## ಮುನ್ನುಡಿ

ಭಾರತ ಸರ್ಕಾರ ಈಗ ಕೆಲವು ವರ್ಷಗಳಿಂದ ತನ್ನ ಸಂಸ್ಕೃತಿ ಇಲಾಖೆಯ (Department of Culture) ಮೂಲಕ ಅಭಿನಂದನೀಯವಾದ ಅತ್ಯವಶ್ಯವಾದ ಹಾಗೂ ಬಹು ಮುಖ್ಯವಾದ ಒಂದು ಯೋಜನೆಯನ್ನು ರೂಪಿಸಿ, ಜಾರಿಗೆ ತಂದಿದೆ. ಪ್ರಾಚೀನ ಹಸ್ತಪ್ರತಿಗಳ ಸಂಗ್ರಹಣ, ಸಂರಕ್ಷಣ ಮತ್ತು ಪ್ರಕಟನ ಕಾರ್ಯಗಳಲ್ಲಿ ನಿರತವಾದ ಸ್ವಾಯತ್ತ ಸಂಸ್ಥೆಗಳಿಗೆ ಪ್ರತಿವರ್ಷ ಅನುದಾನ ನೀಡುವುದಕ್ಕೆ ಸಂಬಂಧಪಟ್ಟದ್ದು ಆ ಯೋಜನೆ.

ಪ್ರಾಚ್ಯ ವಸ್ತುಗಳು ಅನೇಕ ಬಗೆಯವು. ಪ್ರಾಚೀನ ಕಾಲದ ಲೋಹ ಮತ್ತು ಮರಗಳಿಂದ ಮಾಡಿದ ವಿಗ್ರಹಗಳು, ಚಿತ್ರಪಟಗಳು, ನಾಣ್ಯಗಳು, ತಾಮ್ರಶಾಸನ ಫಲಕಗಳು, ಮುಂತಾದವು ಪ್ರಾಚ್ಯವಸ್ತುಗಳು ಎನ್ನಿಸಿಕೊಳ್ಳುತ್ತವೆ. ಈ ಪ್ರಾಚ್ಯ ವಸ್ತುಗಳಲ್ಲಿ ಹಿಂದಿನ ಕಾಲದ ಓಲೆಗರಿಯ ಮತ್ತು ಕಾಗದದ ಹಸ್ತಪ್ರತಿಗಳೂ ಸೇರುತ್ತವೆ. ಈ ಯಾವುದೇ ವಸ್ತು ಪ್ರಾಚೀನ ಎನ್ನಿಸಿಕೊಳ್ಳಬೇಕಾದರೆ, ಕಡೆಯ ಪಕ್ಷ ಅದು ಒಂದು ನೂರು ವರ್ಷಗಳಷ್ಟಾದರೂ ಹಳೆಯದಾಗಿರಬೇಕು ಎಂದು ಪ್ರಾಚ್ಯ ವಸ್ತು ಸಂರಕ್ಷಣ ಸಂಬಂಧವಾಗಿ ಕಾನೂನು ಮಾಡಿದಾಗ ಭಾರತ ಸರ್ಕಾರ ನಿಗದಿ ಮಾಡಿದೆ. ಇನ್ನು ಹನ್ನೆರಡು ವರ್ಷ ಸಂದರೆ, ಈ ಶತಮಾನ ಮುಗಿದಮೇಲೆ, ಹತ್ತೊಂಬತ್ತನೆಯ ಶತಮಾನದ ಅಂತ್ಯದವರೆಗಿನ ಎಲ್ಲ ಹಸ್ತಪ್ರತಿಗಳೂ ಪ್ರಾಚ್ಯ ವಸ್ತುಗಳು ಎನ್ನಿಸಿಕೊಳ್ಳುತ್ತವೆ. ಹೀಗಿರುತ್ತ, ಸದ್ಯದ ಮಟ್ಟಿಗೆ ಆ ಗಡುವಿನವರೆಗಿನ ಹಸ್ತಪ್ರತಿಗಳನ್ನು ಸಂಗ್ರಹಿಸಿ ಸಂರಕ್ಷಿಸುವುದು ನಮ್ಮ ಪವಿತ್ರ ಕರ್ತವ್ಯವಾಗಿರುತ್ತದೆ.

ಕರ್ನಾಟಕದ ಅರಮನೆ ಗುರುಮನೆಗಳ ಶಾಸ್ತ್ರಭಕ್ತಿ, ಭಾಷಾಸಾಹಿತ್ಯ ಪ್ರೇಮ ಇವುಗಳಿಂದಾಗಿ ಶಾಸ್ತ್ರಗ್ರಂಥಗಳ ಮತ್ತು ಸಾಹಿತ್ಯಗ್ರಂಥಗಳ ಸಂಗ್ರಹಣ ಸಂರಕ್ಷಣ

---

* ಕನ್ನಡ ಹಸ್ತ ಪ್ರತಿಗಳ ವರ್ಣನಾತ್ಮಕ ಸೂಚಿ, ಸಂ: ಕೆಳದಿಗುಂಡಾ ಜೋಯಿಸ್, ನಾ. ಗೀತಾಚಾರ್ಯ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಪ್ರಕಾಶನ, ಬೆಂಗಳೂರು. ೧೯೮೭

ಲೇಖನಗಳ ಹಸ್ತಪ್ರತಿಯನ್ನು ಅಚ್ಚಿನ ಮನೆಗೆ ಕಳಿಸಲು ತಕ್ಕುದಾಗುವಂತೆ ಅದನ್ನು ಯಥೋಚಿತವಾಗಿ ಒಪ್ಪಮಾಡಿಕೊಟ್ಟವರು, ಗೋಷ್ಠಿಯ ನಿರ್ದೇಶಕರಾಗಿದ್ದ ಡಾ॥ ಎಂ.ಚಿದಾನಂದ ಮೂರ್ತಿ. ಈ ಸಹಕಾರಕ್ಕಾಗಿ ಅವರಿಗೆ ವಂದನೆಗಳು.

ಕೇಂದ್ರ ಸರ್ಕಾರದ ವಿದ್ಯಾ ಮತ್ತು ಸಂಸ್ಕೃತಿ ಇಲಾಖೆಯವರು ಪ್ರಾಚೀನ ಹಸ್ತ ಪ್ರತಿಗಳ ಸಂಗ್ರಹಣ, ಸಂರಕ್ಷಣ ಮತ್ತು ಪ್ರಕಟನ ಕಾರ್ಯಗಳಿಗೆಂದು ವ್ಯವಸ್ಥೆ ಮಾಡಿರುವ ಯೋಜನೆಯ ಮೇರೆಗೆ ೧೯೮೨–೮೩ನೆಯ ಸಾಲಿಗೆ ನೀಡಿದ ವಿಶೇಷ ಅನುದಾನ ದೊರೆಯದೆ ಹೋಗಿದ್ದರೆ ಈ ಪುಸ್ತಕವನ್ನು ಪ್ರಕಟಿಸುವುದು ಸಾಧ್ಯವಾಗುತ್ತಿರಲಿಲ್ಲ. ಈ ಧನಸಹಾಯಕ್ಕಾಗಿ ಬಿ.ಎಂ.ಶ್ರೀ. ಪ್ರತಿಷ್ಠಾನ ಕೇಂದ್ರ ಸರ್ಕಾರಕ್ಕೆ ಋಣಿಯಾಗಿದೆ.

ಪುಸ್ತಕವನ್ನು ಶೀಘ್ರವಾಗಿಯೂ ಅಂದವಾಗಿಯೂ ಅಚ್ಚು ಮಾಡಿಕೊಟ್ಟಿರುವ ಶ್ರೀ ಲಕ್ಷ್ಮೀ ಪ್ರಿಂಟರ್ಸ್ ಅವರಿಗೆ ನಮ್ಮ ವಂದನೆಗಳು.

ಬೆಂಗಳೂರು–೧೯
ಜುಲೈ ೧, ೧೯೮೩

**ಎಂ.ವಿ.ಸೀತಾರಾಮಯ್ಯ**
ಸಂಸ್ಥಾಪಕ ಕಾರ್ಯದರ್ಶಿ
ಹಾಗೂ ಅಧ್ಯಯನ ನಿರ್ದೇಶಕ

ಸರ್ಕಾರದವರೂ, ಕಾವ್ಯಮಂಜರಿ, ಕಾವ್ಯಕಲಾನಿಧಿಗಳ ಸಂಪಾದಕರೂ ಆಗಲೇ ಮಾಡುತ್ತಲೇ ಇದ್ದಾರೆ. ಇವರಿಗೆ ಎಲ್ಲರೂ ಕೃತಜ್ಞರು" ಎಂದು ಹೇಳಿದ್ದಾರೆ.

ಈಗ ಕಾವ್ಯಮಂಜರಿ, ಕಾವ್ಯಕಲಾನಿಧಿಗಳು ಇಲ್ಲ. ಆ ಗ್ರಂಥಮಾಲೆಗಳ ಪ್ರಾಣಸ್ವರೂಪರಾಗಿದ್ದ ದಿ॥ ಮಂ.ಅ.ರಾಮಾನುಜ ಅಯ್ಯಂಗಾರ್ ಮತ್ತು ದಿ॥ ಎಸ್.ಜಿ.ನರಸಿಂಹಾಚಾರ್ ಪ್ರಾತಃಸ್ಮರಣೀಯರು. ಮೈಸೂರು ಸರ್ಕಾರದ ಪರವಾಗಿ ಅಂದು ಹಸ್ತಪ್ರತಿಗಳ ಸಂಗ್ರಹಣೆಗೆ ದೇಶವನ್ನೆಲ್ಲ ಸುತ್ತಿ ಅವನ್ನು ಶೇಖರಿಸಿ, ಪಂಪಭಾರತ, ಪಂಪರಾಮಾಯಣ ಶಬ್ದಮಣಿದರ್ಪಣ, ಛಂದೋಂಬುಧಿಗಳಂತಹ ಉದ್ಗ್ರಂಥಗಳನ್ನು ಮುದ್ರಣಕ್ಕೆ ಅಣಿಮಾಡಿದವರು ಬಿ.ಲ್ಯೂಯಿ ರೈಸ್ ಅವರು, ಅವರ ತರುವಾಯ ಆರ್.ನರಸಿಂಹಾಚಾರ್ಯರು – ಆರ್ಕಿಯಾಲಜಿ ಇಲಾಖೆಯ ಮೂಲಕ. ಈ ಕಾರ್ಯಕ್ಕೆ ಸ್ಪಷ್ಟ ಸ್ವರೂಪ ಬಂದದ್ದು ಮೈಸೂರು ಓರಿಯಂಟಲ್ ಲೈಬ್ರರಿ ಸ್ಥಾಪನೆ ಆದಾಗ. ಈ ಸಂಸ್ಥೆಯಲ್ಲಿ ಕೆಲಸ ಮಾಡಿದ ದಿ॥ ಡಾ॥ ಎನ್.ಅನಂತರಂಗಾಚಾರ್ ಮತ್ತು ದಿ॥ ಎಚ್.ದೇವೀರಪ್ಪನವರು ಈ ಕ್ಷೇತ್ರಕ್ಕೆ ಸಲ್ಲಿಸಿರುವ ಸೇವೆ ನೆನೆಯತಕ್ಕದ್ದು. ಓರಿಯಂಟಲ್ ಲೈಬ್ರರಿ, ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಆಗಿ ಪರಿವರ್ತನೆಗೊಂಡು ಮೈಸೂರ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಸ್ಥಾಪನೆ ಆದಾಗ ಮಾತ್ರ ಸಂಸ್ಥೆಯ ಕನ್ನಡ ಹಸ್ತಪ್ರತಿಗಳ ಸಂಗ್ರಹವೆಲ್ಲವೂ ಅಧ್ಯಯನ ಸಂಸ್ಥೆಯ ಸಂಶೋಧನ ವಿಭಾಗಕ್ಕೆ ವರ್ಗಾವಣೆ ಆಯಿತು. ಈ ವಿಭಾಗ ಹಿಂದಿನ ವಿದ್ವಾಂಸರ ಕಾರ್ಯವನ್ನು ಶ್ಲಾಘ್ಯವಾದ ರೀತಿಯಲ್ಲಿ ಮುಂದುವರಿಸಿಕೊಂಡು ಬರುತ್ತಿದೆ. ದೇವೀರಪ್ಪನವರು ರಸರ್ಚ್ ಇನ್‌ಸ್ಟಿಟ್ಯೂಟ್‌ನ ನಿರ್ದೇಶಕರಾಗಿದ್ದ ಕಾಲದಲ್ಲೇ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಗ್ರಂಥಸೂಚಿಯನ್ನು ನಾಲ್ಕು ಸಂಪುಟಗಳಲ್ಲಿ ಹೊರತಂದು ಮಹೋಪಕಾರ ಮಾಡಿರುತ್ತಾರೆ. ಈ ಘನವಾದ ಕಾರ್ಯದಲ್ಲಿ ಜ್ಞಾತಾಜ್ಞಾತವಾಗಿ ದುಡಿದವರೆಲ್ಲರೂ ಕೃತಜ್ಞತೆಗೆ ಪಾತ್ರರು.

ಪ್ರತಿಷ್ಠಾನ ಈಗ ಹೊರತರುತ್ತಿರುವ ಈ ಗ್ರಂಥಸೂಚಿಗೂ ಮೇಲ್ಕಂಡ ಸಂಪುಟಗಳು ಮಾದರಿಯಾಗಿವೆ, ಮಾರ್ಗದರ್ಶಕವಾಗಿವೆ. ನಮ್ಮ ನಾಡಿನಲ್ಲಿ ಹಸ್ತಪ್ರತಿಗಳ ಶೇಖರಣೆ ಉಳ್ಳ ಪ್ರತಿಯೊಂದು ಸಂಸ್ಥೆಯೂ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯನ್ನು ತಯಾರಿಸಿ ಪ್ರಕಟಿಸಬೇಕಾದದ್ದು ಅತ್ಯಗತ್ಯ. ಅಪ್ರಕಟಿತವಾದ ಹಸ್ತಪ್ರತಿಗಳು ಯಾವುವು ಎಲ್ಲಿ ಇವೆ ಎಂದು ತಿಳಿದು ಅವುಗಳಲ್ಲಿ ಮಹತ್ವದ ಗ್ರಂಥಗಳನ್ನು ಆದ್ಯತೆಯ ಆಧಾರದ ಮೇಲೆ ಮುದ್ರಿಸುವುದಕ್ಕೂ, ಗ್ರಂಥಸಂಪಾದನೆಮಾಡುವವರು ಒಂದು ಗ್ರಂಥದ ಬೇರೆ ಬೇರೆ ಪ್ರತಿಗಳು ದೊರಕುವ

ಕಾರ್ಯಗಳು ಪ್ರಾಚೀನ ಕಾಲದಿಂದಲೂ ನಡೆದು ಬರುತ್ತಿದೆ. ಹಾಗಿಲ್ಲದೆ ಹೋಗಿದ್ದರೆ, ಈ ಶ್ರೀಮಠಗಳಲ್ಲಿ, ಖಾಸಗಿ ಸಂಗ್ರಹಾಲಯಗಳಲ್ಲಿ, ಹಳ್ಳಿಹಳ್ಳಿಗಳಲ್ಲೂ ಜಾತಿಮತ ಭೇದವನ್ನೆಣಿಸದೆ ಸರಸ್ವತೀ ಆರಾಧನೆ (ಹಸ್ತಪ್ರತಿ ಸಂರಕ್ಷಣ ಸರಸ್ವತೀ ಆರಾಧನೆಯೆ) ಯಲ್ಲಿ ನಿರತರಾದ ಗ್ರಂಥಭಕ್ತರ ಮನೆಗಳಲ್ಲಿ ಸಹಸ್ರ ಸಹಸ್ರ ಸಂಖ್ಯೆ ತಾಡಪತ್ರ ಹಸ್ತಪ್ರತಿಗಳು ಉಳಿದು ಬರುತ್ತಲೇ ಇರಲಿಲ್ಲ. ಇದು ನಮ್ಮ ನಾಡಿನ ಪುಣ್ಯ. ಆದರೆ, ಈ ಗ್ರಂಥಭಕ್ತಿ ಮೂಢಭಕ್ತಿಯಲ್ಲಿ ಪರ್ಯವಸಾನವಾಗಿ ಹಸ್ತಪ್ರತಿಗಳು ಕುಂಕುಮಾರ್ಚನೆ, ಗಂಧಲೇಪನ, ಕ್ಷೀರಾಭಿಷೇಚನ ಇವುಗಳಿಂದಾಗಿ ನಿರುಪಯುಕ್ತವಾಗಿಪರಿಣಮಿಸಿರುವ ಸಂದರ್ಭಗಳೂ ಉಂಟು. ಬರುಬರುತ್ತ, ಪ್ರಾಚೀನರು ಹಸ್ತಪ್ರತಿ ಸಂರಕ್ಷಣೆಯಲ್ಲಿ ವಹಿಸುತ್ತಿದ್ದ ಶ್ರದ್ಧೆ ಪರಿಶ್ರಮಗಳು ಮಾಯವಾಗಿ, ಸಾಮಾನ್ಯ ಜನರ ವರ್ಗದಲ್ಲಿ ಮಾತ್ರವಲ್ಲ, ಮಠಗಳಂತಹ ಪವಿತ್ರ ಸ್ಥಳಗಳಲ್ಲಿಯೂ ಹಸ್ತಪ್ರತಿಗಳು ನಷ್ಟವಾಗಿವೆ, ಇಲ್ಲವೆ ನಷ್ಟಪ್ರಾಯವಾಗಿವೆ.

ಬಹಳ ಪ್ರಾಚೀನ ಕಾಲದಲ್ಲಿ ಅಮೂಲ್ಯ ಹಸ್ತಪ್ರತಿಗಳು ವಿದೇಶ ಪ್ರಯಾಣ ಮಾಡಿರುವುದೂ ಉಂಟು. ಈಚಿನ ದಿನಗಳಲ್ಲಿ ದೇವತಾ ವಿಗ್ರಹಗಳು, ಅಪೂರ್ವ ವರ್ಣ ಚಿತ್ರಗಳು, ನಾಣ್ಯಗಳು, ಐತಿಹಾಸಿಕ ಸ್ಮಾರಕ ವಸ್ತುಗಳು ಮುಂತಾದವುಗಳು ಪರದೇಶಗಳ ಸಂಗ್ರಹಕಾರರು ತೋರುವ ಹಣದಾಸೆಗಾಗಿ ನಡೆಯುವ ಕಳ್ಳಸಾಗಾಣಿಕೆಯಲ್ಲಿ ದೇಶದಿಂದ ಕಣ್ಮರೆಯಾಗುತ್ತಿರುವಂತೆ ಹಸ್ತಪ್ರತಿಗಳೂ ಕಣ್ಮರೆಯಾಗುವ ಕಾಲ ದೂರವೇನಿಲ್ಲ.

ಈ ವಿಷಮ ಪರಿಸ್ಥಿತಿಯಲ್ಲಿ ಕೇಂದ್ರ ಸರ್ಕಾರ ರೂಪಿಸಿ ಜಾರಿಗೆ ತಂದಿರುವ ಹಸ್ತಪ್ರತಿಗಳ ಸಂಗ್ರಹಣ, ಸಂರಕ್ಷಣ ಮತ್ತು ಪ್ರಕಟನೆಗಳ ಯೋಜನೆ ಎಷ್ಟು ಮಹತ್ವದ್ದು ಎಂಬುದು ಸ್ಪಷ್ಟವಾಗುತ್ತದೆ. ಇದಕ್ಕಾಗಿ ಸಂಸ್ಕೃತಿ ಪ್ರೇಮಿಗಳೆಲ್ಲರೂ ಕೇಂದ್ರ ಸರ್ಕಾರವನ್ನು ಅಭಿನಂದಿಸಬೇಕು.

ಈ ಮೂರು ನಾಲ್ಕು ವರ್ಷಗಳಿಂದಲೂ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಈ ಯೋಜನೆಯನ್ನು ಸದುಪಯೋಗಪಡಿಸಿಕೊಳ್ಳುತ್ತಿದೆ. ಈ ಸಂದರ್ಭದಲ್ಲಿ ಸಂಗ್ರಹಣ ಕಾರ್ಯದ ಬಗೆಗೆ ವಿಷಾದದಿಂದ ಒಂದು ಮಾತು ಹೇಳಬೇಕಾಗಿದೆ.

ಬಿ.ಎಂ.ಶ್ರೀ. ಯವರು ೧೯೧೧ ರಷ್ಟು ಹಿಂದೆಯೇ "ಕನ್ನಡ ಮಾತು ತಲೆಯೆತ್ತುವ ಬಗೆ" ಎಂಬ ತಮ್ಮ ಐತಿಹಾಸಿಕ ಮಹತ್ವವುಳ್ಳ ಧಾರವಾಡದ ಭಾಷಣದಲ್ಲಿ–

"ದೇಶದಲ್ಲಿ ಹುಳುತಿಂದು ಹೋಗದೆ ಉಳಿದಿರುವ ಗ್ರಂಥಗಳನ್ನೆಲ್ಲಾ ಶೇಖರಿಸಿ ಒಂದನ್ನೂ ಬಿಡದಂತೆ ಅಚ್ಚು ಹಾಕುವುದು. ಈ ಕೆಲಸವನ್ನು ಮೈಸೂರು

ವಿವರಗಳನ್ನು ಈ ನಮ್ಮ ಪ್ರಥಮ ಸೂಚಿಯಲ್ಲಿ ಅಳವಡಿಸಲಾಗಿದೆ. ಇದರ ಸ್ವರೂಪದ ಬಗೆಗೆ ಸಂಪಾದಕದ್ವಯರು ಅಗತ್ಯ ವಿವರಣೆಗಳನ್ನು ಒದಗಿಸಿರುವದರಿಂದ ಆ ಬಗೆಗೆ ನಾನು ಹೇಳುವುದು ಏನೂ ಉಳಿದಿಲ್ಲ. ಕನ್ಯಾಪಿತೃ ತನ್ನ ಮಗಳನ್ನು ಒಳ್ಳೆಯ ವರನಿಗೆ ಕೊಟ್ಟರೆ ಯಾವ ಸಂತೃಪ್ತಿಯುಂಟಾಗುವುದೋ ಆ ಸಂತೃಪ್ತಿ ನನಗೆ ಉಂಟಾಗಿದೆ–ನಮ್ಮ ಪೂರ್ವಜರ ಹಸ್ತಪ್ರತಿಗಳನ್ನು ಪ್ರತಿಷ್ಠಾನಕ್ಕೆ ನೀಡಿ. ಇತರರೂ ಈ ರೀತಿ ಮುಂದೆ ಬಂದು ದಾನ ಮಾಡಲಿ ಎನ್ನುವುದೇ ನನ್ನ ಸವಿನಯದ ಅರಿಕೆ. ಅನೇಕರು ಈಗಾಗಲೇ ಆ ರೀತಿ ಮಾಡಿದ್ದಾರೆ; ಅವರಿಗೆ ಸಂಸ್ಥೆ ಋಣಿಯಾಗಿದೆ.

ತಜ್ಞರು ಈ ಸೂಚಿಯಲ್ಲಿಯ ಲೋಪದೋಷಗಳನ್ನು ತೋರಿಸಿಕೊಟ್ಟರೆ, ಸಿದ್ಧವಾಗುತ್ತಿರುವ ಎರಡನೆಯ ಸಂಪುಟದ ಪ್ರಕಟನೆಗೆ ಸಹಾಯವಾಗುವುದು. ಎರಡನೆಯ ಸಂಪುಟದಲ್ಲಿ ಸಂಸ್ಕೃತ ಮುಂತಾದ ಇತರ ಭಾಷೆಗಳ ತಾಡವೋಲೆ ಹಸ್ತಪ್ರತಿಗಳ ಹಾಗೂ ಕಾಗದದ ಹಸ್ತಪ್ರತಿಗಳ ವಿವರಗಳನ್ನೂ ಸೇರಿಸುವ ಉದ್ದೇಶವಿದೆ.

ಕೊನೆಯದಾಗಿ, ಈ ಹಸ್ತಪ್ರತಿಗಳ ಸೂಚಿಯನ್ನು ಅತ್ಯಂತ ತಾಳ್ಮೆಯಿಂದ ಶ್ರಮವಹಿಸಿ ಸಿದ್ಧಪಡಿಸಿದ ನನ್ನ ಮಾನ್ಯ ಮಿತ್ರರಾದ ಶ್ರೀ ಕೆಳದಿ ಗುಂಡಾ ಜೋಯಿಸ್, ಅವರಿಗೂ ಪ್ರತಿಷ್ಠಾನದ ನಿಷ್ಠಾವಂತ ಕಾರ್ಯಕರ್ತರಾದ ಶ್ರೀ ನಾ.ಗೀತಾಚಾರ್ಯರಿಗೂ ನನ್ನ ಶುಭಾಶಯಪೂರ್ವಕವಾದ ನೆನಕೆಗಳು ಸಲ್ಲುತ್ತವೆ.

೧೬–೧೨–೧೯೮೭ **ಎಂ.ವಿ. ಸೀತಾರಾಮಯ್ಯ**

ಅಧ್ಯಕ್ಷ

ಹಾಗಿದ್ದಲ್ಲಿ ಪಾಠಾಂತರ ಸಂಕಲನ ಕಾರ್ಯಕ್ಕೆ ಅವುಗಳನ್ನು ಉಪಯೋಗಿಸಿಕೊಂಡು ಕವಿಪಾಠವನ್ನು ಶಾಸ್ತ್ರೀಯವಾಗಿ ನಿರ್ಧರಿಸುವುದಕ್ಕೂ, ಈಗಾಗಲೇ ಮುದ್ರಿತವಾಗಿರುವ ಗ್ರಂಥಗಳನ್ನು ಹೊಸದಾಗಿ ಬೆಳಕಿಗೆ ಬಂದಿರಬಹುದಾದ ಹಸ್ತಪ್ರತಿಗಳ ಸಹಾಯದಿಂದ ಪರಿಷ್ಕರಣ ಮಾಡಿ ಪುನರ್ಮುದ್ರಣ ಮಾಡಿಸುವುದಕ್ಕೂ ಹಸ್ತಪ್ರತಿ ಸೂಚಿಗಳು ನೀಡುವ ವಿವರಪೂರ್ಣ ಮಾಹಿತಿ ಅಗತ್ಯವಾದ ತಿಳಿವಳಿಕೆ ನೀಡುತ್ತವೆ. ಎಷ್ಟೇ ಶಾಸ್ತ್ರೀಯ ವಿಧಾನಗಳಿಂದ ಹಸ್ತಪ್ರತಿಗಳನ್ನು ಜೋಪಾನ ಮಾಡಿದರೂ ಅವುಗಳ ಆಯುಷ್ಯಕ್ಕೆ ಒಂದು ಮಿತಿಯುಂಟೇ ಉಂಟು. (ಕಾಗದಕ್ಕಿಂತ ಓಲೆಗರಿ ದೀರ್ಘಾಯುಷಿ ಎಂಬ ಅಭಿಪ್ರಾಯವೂ ಇದೆ. ಆದರೆ ಅದರ ಪ್ರಸಾರಕ್ಕೆ ಮುದ್ರಣ ಕಾರ್ಯ ಅಗತ್ಯ.) ಹೀಗಿರುವುದರಿಂದ, ಹಸ್ತಪ್ರತಿಗಳ ಮುದ್ರಣ ಮರುಮುದ್ರಣಗಳು ಪರೋಕ್ಷವಾಗಿ ಅವುಗಳ ಸಂರಕ್ಷಣಕಾರ್ಯವೇ ಆಗುತ್ತದೆ.

ಮುದ್ರಣವಾಗುವವರೆಗೂ ಆಮೇಲೂ ಹಸ್ತಪ್ರತಿಗಳ ಸಂರಕ್ಷಣೆ ಅವುಗಳ ಮಾಲಿಕರ ಮೇಲೆ ಬಿದ್ದ ದೊಡ್ಡ ಹೊಣೆಗಾರಿಕೆ. ಸಂಸ್ಥೆಗಳು, ಮಠಗಳು, ಈ ದಿಸೆಯಲ್ಲಿ ತುರ್ತು ಗಮನ ಹರಿಸಿ ಅವುಗಳ ಸಂರಕ್ಷಣೆಗೂ ವರ್ಣನಾತ್ಮಕ ಸೂಚಿ ನಿರ್ಮಾಣಕ್ಕೂ ವ್ಯವಸ್ಥೆ ಮಾಡಬೇಕು. "ದಾನಾತ್ ಶ್ರೇಯಃ ಅನುಪಾಲನಂ" ಎಂಬುದೊಂದು ಪ್ರಾಚೀನ ಸೂಕ್ತಿ. ಇದು ಹಸ್ತಪ್ರತಿಗಳಿಗೆಂದೇ ಹೇಳಿದ ಮಾತು ಎನ್ನುವಷ್ಟು ಅಕ್ಷರಶಃ ಯಥಾರ್ಥವಾದದ್ದು. ದಾನಕ್ಕಿಂತ ಅನುಪಾಲನ ಶ್ರೇಯಸ್ಕರ ಎಂದದ್ದರಿಂದ ದಾನ ಮಾಡಬಾರದು ಎಂದೇನಿಲ್ಲ. ಸಂರಕ್ಷಣಕಾರ್ಯ ಮಾಡಲಾಗದಂಥ ಸಂಸ್ಥೆಗಳೂ ಮಠಗಳೂ ಖಾಸಗಿ ಜನರೂ ದಾನ ಮಾಡುವುದೇ ಶ್ರೇಯಸ್ಕರ. (ಸಾಂಕೇತಿಕ ಮೌಲ್ಯವನ್ನು ಪಡೆದು ಬೆಲೆಗೆ ಕೊಟ್ಟರೂ ದೋಷವಿಲ್ಲ). ದಾನ ಮಾಡುವಾಗ ಅಪಾತ್ರರಿಗೂ ಮೂರ್ಖರಿಗೂ ಸರಿಯಾಗಿ ಉಪಯೋಗ ಮಾಡಿಕೊಳ್ಳಲಾಗದವರಿಗೂ, ದಳ್ಳಾಳಿಗಳಿಗೂ ದಾನ ಮಾಡುವುದಾಗಲಿ ಮಾರುವುದಾಗಲಿ ಖಂಡಿತ ಕೂಡದು. ಹಸ್ತಪ್ರತಿಗಳ ಸಂರಕ್ಷಣೆ ಮತ್ತು ಪ್ರಕಟನೆಗಳನ್ನು ತನ್ನ ಮುಖ್ಯ ಕಾರ್ಯಚಟುವಟಿಕೆಗಳಲ್ಲಿ ಒಂದನ್ನಾಗಿ ಹೊಂದಿರುವ ಪ್ರತಿಷ್ಠಾನದಂತಹ ಸರ್ಕಾರದಲ್ಲಿ ನೊಂದಾವಣೆ (ರಿಜಿಸ್ಟರ್) ಆಗಿರುವ ಸಂಸ್ಥೆಗಳು, ಕೆಲವು ವಿಶ್ವವಿದ್ಯಾಲಯಗಳ ಹಸ್ತಪ್ರತಿ ವಿಭಾಗಗಳು, ಇವುಗಳಿಗೆ ಹಸ್ತಪ್ರತಿಗಳನ್ನು ದಾನವಾಗಿ ಮಾಡಿದರೆ ದಾನ ಸಾರ್ಥಕವಾಗುವುದು. ಹಸ್ತಪ್ರತಿಗಳನ್ನು ಉಳ್ಳವರು ಪ್ರತಿಷ್ಠಾನದ ಹಸ್ತಪ್ರತಿ ಭಂಡಾರಕ್ಕೆ ದಯವಿಟ್ಟು ಅವುಗಳನ್ನು ದಾನ ಮಾಡಿ ಸರಸ್ವತೀ ದೇವಿಯ ಕೃಪೆಗೆ ಪಾತ್ರರಾಗಿ ಎಂದು ಕಳಕಳಿಯಿಂದ ಪ್ರಾರ್ಥಿಸುತ್ತೇನೆ.

ಪ್ರತಿಷ್ಠಾನದ ಹಸ್ತಪ್ರತಿ ಸಂಗ್ರಹದ ಸುಮಾರು ಒಂದು ನೂರು ಕೃತಿಗಳ



# ಶಾಸ್ತ್ರ ಸಾಹಿತ್ಯ

ಶಾಸ್ತ್ರ ಸಾಹಿತ್ಯ, ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ, ಸಂಪುಟ–೩
ಬೆಂಗಳೂರು ವಿಶ್ವವಿದ್ಯಾಲಯ, ೧೯೭೫, ದ್ವಿ.ಮು.೨೦೦೦

**ಸೂಚನೆ (ಮೊದಲ ಮುದ್ರಣ)**

ಈ ಸಂಪುಟಗಳ ಒಬ್ಬೊಬ್ಬ ಲೇಖಕರೂ, ತಾವು ವಿವೇಚಿಸುವ ಸಾಹಿತ್ಯ ಪ್ರಕಾರದಲ್ಲಿ ರಚಿತವಾದ ಒಟ್ಟು ಕೃತಿಗಳ ಸಂಖ್ಯೆಯ ಬಗ್ಗೆ ಕೊಡುವ ಅಂಕಿ–ಅಂಶಗಳಲ್ಲಿ ವ್ಯತ್ಯಾಸಗಳಿರುವ ಸಂಭವವಿದೆ. ಆದುದರಿಂದ ಮೊದಲ ಸಂಪುಟದ ಅನುಬಂಧವಾಗಿ, ಶ್ರೀ.ಎಸ್. ಶಿವಣ್ಣ ಅವರು ಸಿದ್ಧಪಡಿಸಿರುವ 'ಗ್ರಂಥ ಸಂಖ್ಯಾ ವಿವರ ಸೂಚಿ'ಯು, ಈ ಎಲ್ಲ ವ್ಯತ್ಯಾಸಗಳಿಗೆ ಒಂದು ತಿದ್ದುಪಡಿಯೂ ಮತ್ತು ಸದ್ಯಕ್ಕೆ ಅಧಿಕೃತವೂ ಆದದ್ದಾಗಿದೆ. ಓದುಗರು ದಯಮಾಡಿ ಅದನ್ನು ಗಮನಿಸಬೇಕು.

[ಈ ಗ್ರಂಥವು ಸಪ್ನ ಬುಕ್ ಹೌಸ್, ಬೆಂಗಳೂರು, ಇವರಿಂದಲೂ ಪುನರ್ಮುದ್ರಣವಾಗಿದ್ದು (೨೦೧೦) ಅದರ ಅನುಬಂಧದಲ್ಲಿ ಗ್ರಂಥಸಂಖ್ಯ ವಿವರ ಸೂಚಿಯು ಅಲ್ಲಿಯವರೆಗೆ ಪರಿಷ್ಕೃತವಾಗಿದೆ. –ಸಂ]

# ೧. ಹಿನ್ನೆಲೆ

## ಕಾವ್ಯ ಕವಿತ್ವ – ಶಾಸ್ತ್ರ ಕವಿತ್ವ – ಶಾಸ್ತ್ರ ಸಾಹಿತ್ಯ

'ಶಾಸ್ತ್ರ ಸಾಹಿತ್ಯ' ಎಂಬ ಸಮಾಸಪದದಲ್ಲಿ 'ಶಾಸ್ತ್ರ' ಮತ್ತು 'ಸಾಹಿತ್ಯ' ಎಂಬ ಎರಡು ಪದಗಳಿವೆ. ಈ ಗ್ರಂಥದ ಉದ್ದೇಶಕ್ಕೆ ಅನುಗುಣವಾಗಿ ಈ ಸಮಾಸಪದಕ್ಕೆ ಅರ್ಥಮಾಡಿದರೆ, ಶಾಸ್ತ್ರ ವಿಚಾರಗಳನ್ನು ತಿಳಿಸುವ ಬರವಣಿಗೆ ಅಥವಾ ವಾಙ್ಮಯ ಅಥವಾ ಗ್ರಂಥರಾಶಿ ಎಂದು ಅರ್ಥಮಾಡಬೇಕಾಗುತ್ತದೆ.

ಆದರೆ, ನಮ್ಮ ಪ್ರಾಚೀನ ಶಾಸ್ತ್ರಕಾರರೂ ಕವಿಗಳೂ 'ಸಾಹಿತ್ಯ' ಎಂಬ ಶಬ್ದವನ್ನು 'ಕಾವ್ಯ' ಎಂಬ ಅರ್ಥದಲ್ಲಿಯೇ ಬಳಸುತ್ತ ಬಂದಿದ್ದಾರೆ. ಈಗಲೂ ಕೂಡ, ಕವಿತೆ ಕಾದಂಬರಿ ಕಥೆ ನಾಟಕ ಮುಂತಾದ ಮನೋರಂಜಕ ರಚನೆಗಳನ್ನು ಒಟ್ಟುಗೂಡಿಸಿ ಹೇಳುವಾಗ 'ಸಾಹಿತ್ಯ' ಎಂಬ ಶಬ್ದವನ್ನು ಕಾವ್ಯಾರ್ಥದಲ್ಲಿ ಬಳಸುತ್ತೇವೆ. 'ಪದ್ಯ ಕಾವ್ಯ'ವನ್ನು ಮಾತ್ರ 'ಕಾವ್ಯ' ಎಂದು ಹೇಳುತ್ತೇವೆ.

ಕನ್ನಡದ ಮೊಟ್ಟಮೊದಲಿನ ಗ್ರಂಥವಾದ ಕವಿರಾಜ ಮಾರ್ಗದ ಕರ್ತೃ ಶ್ರೀವಿಜಯನು ಸ್ವವಿಷಯವನ್ನು ಹೇಳಿಕೊಳ್ಳುವಾಗ – "ಉಕ್ತಿ ಕಲಾಕಲಾಪಕಂ ಉಪಾಹಿತ ಸಾಹಿತ (=ಸಾಹಿತ್ಯ) ವಿದ್ಯೆಯೊಳ್"* (೩–೨೧೮) ಎಂದಿದ್ದಾನೆ. ಇಲ್ಲಿ ಸಾಹಿತ್ಯ ವಿದ್ಯೆ ಎಂದರೆ ಕಾವ್ಯ ಲಕ್ಷಣ, ಕಾವ್ಯ ವಿದ್ಯೆ, ಕಾವ್ಯಶಾಸ್ತ್ರ ಎಂದು ಅರ್ಥಮಾಡಿಕೊಳ್ಳಬೇಕು. ಅಭಿನವ ಪಂಪನೆಂದು ಪ್ರಸಿದ್ಧನಾದ ನಾಗಚಂದ್ರನ ಬಿರುದುಗಳಲ್ಲಿ 'ಸಾಹಿತ್ಯ ವಿದ್ಯಾಧರ' ಎಂಬುದೂ ಒಂದು. ಕಾವ್ಯ ಲಕ್ಷಣವನ್ನು ವಿವರಿಸುವ ಅನೇಕ ಸಂಸ್ಕೃತ ಗ್ರಂಥಗಳು ಸಾಹಿತ್ಯ ಮೀಮಾಂಸಾ, ಸಾಹಿತ್ಯ ದರ್ಪಣ, ಸಾಹಿತ್ಯಸಾರ, ಸಾಹಿತ್ಯರತ್ನಾಕರ ಎಂಬ ಹೆಸರುಗಳಿಂದಲೇ ಪ್ರಸಿದ್ಧವಾಗಿವೆ. ಆದ್ದರಿಂದ ಶಾಸ್ತ್ರ, ಸಾಹಿತ್ಯ, ಕಾವ್ಯ ಎಂಬ ಪದಗಳ ಅರ್ಥದ ಹರಹನ್ನು

---

* ಈ ವಾಕ್ಯದ ತಾತ್ಪರ್ಯ: "ತನ್ನಲ್ಲಿರುವ ಸಾಹಿತ್ಯ ವಿದ್ಯೆಯಲ್ಲಿ ಚೆನ್ನಾಗಿ ಹೇಳುವ ವಿಧಾನಗಳನ್ನು ಬಲ್ಲವನು". ನಾನು ಬಲ್ಲಮಟ್ಟಿಗೆ, ಭಾರತೀಯ ಕಾವ್ಯ ಮಿಮಾಂಸೆಯಲ್ಲಿ, 'ಕಾವ್ಯ' ಎಂಬ ಅರ್ಥದಲ್ಲಿ 'ಸಾಹಿತ್ಯ' ಎಂಬ ಮಾತು ಮೊದಲಿಗೆ ಪ್ರಯೋಗವಾಗಿರುವುದು ಇಲ್ಲಿಯೆ ಎಂದು ಕಾಣುತ್ತದೆ.

# ಪರಿವಿಡಿ

ಸುಭಗ ವಚಂ ಕಾವ್ಯ ಕವಿ–
ತ್ವಭೂಷಣಂ ಶ್ರೀಧರಾರ್ಯ ರಚಿತಂ ಚಂದ್ರ–
ಪ್ರಭಚರಿತಂ', ಶಾಸ್ತ್ರ ಕವಿ–
ತ್ವಭೂಷಣಂ ಧರೆಗೆ ನೆಗಳ್ದ ಜಾತಕ ತಿಲಕಂ.

ಅದಿದೆನ್ನದೆ ಜಾತಕ ತಿಲ–
ಕದೊಳರಿವುದು ಗಣಿತ ಧರ್ಮಮಂ; ಸಕಳ ಜಗ–
ದ್ವಿದಿತಂ ಚಂದ್ರಪ್ರಭ ಚರಿತ –
ದೊಳರಿವುದು ಕಾವ್ಯ ಧರ್ಮಮಂಬುಧನಿವಹಂ.

[ಶ್ರೀಧರಾಚಾರ್ಯನು ರಚಿಸಿದ ಚಂದ್ರಪ್ರಭ ಚರಿತವು ಸುಂದರವಾದ ಮಾತುಗಾರಿಕೆಯಿಂದ ಹೇಳಿದ ಕಾವ್ಯ ಕವಿತ್ವಕ್ಕೆ ಒಡವೆಯಂತಿದೆ; ಲೋಕ ಪ್ರಸಿದ್ಧವಾದ ಜಾತಕ ತಿಲಕವು ಶಾಸ್ತ್ರಕವಿತ್ವಕ್ಕೆ ಒಡವೆ. ಜಾತಕ ತಿಲಕದಲ್ಲಿ ಜ್ಯೋತಿಷ್ಯಕ್ಕೆ ಸಂಬಂಧಪಟ್ಟ ಎಲ್ಲ ಬಗೆಯ ಗಣಿತ ಸ್ವರೂಪವನ್ನೂ ತಿಳಿಯಬಹುದು; ವಿದ್ವಾಂಸರು ಜಗತ್ಪ್ರಸಿದ್ಧವಾದ ಚಂದ್ರಪ್ರಭ ಚರಿತದಲ್ಲಿ ಕಾವ್ಯಧರ್ಮವನ್ನು ತಿಳಿಯಬಹುದು.]

ಜಾತಕ ತಿಲಕದಲ್ಲಿ ದೊರೆಯತಕ್ಕದ್ದು ಜ್ಯೋತಿಷ್ಯದ ಜ್ಞಾನ; ಚಂದ್ರಪ್ರಭ ಚರಿತದಲ್ಲಿ ಕಾವ್ಯದ ರಸ, ಎರಡಕ್ಕೂ ವಿಷಯದಲ್ಲಿ ದೊರೆಯುವ ಫಲದಲ್ಲಿ ಅಜಗಜಾಂತರದಷ್ಟು ವ್ಯತ್ಯಾಸವಿದ್ದರೂ ಎರಡೂ ಕವಿತ್ವವೆ.

ಶಾಸ್ತ್ರಗ್ರಂಥವನ್ನು ಸಾರ್ಥಕವಾಗಿ ಆಕರ್ಷಕವಾಗಿ ಪದ್ಯರೂಪದಲ್ಲಿ ಬರೆಯಬೇಕಾದರೆ ಶ್ರೀಧರಾಚಾರ್ಯನಂಥ ಸಹಜಕವಿಗಲ್ಲದೆ ಬೇರೆಯವರಿಗೆ ಸಾಧ್ಯವಾಗದು ಎಂಬ ಸಂಗತಿ ತನ್ನ 'ಜಾತಕ ತಿಲಕ'ದ ವಿಶೇಷ ಗುಣದ ಬಗೆಗೆ ಅವನು ಹೇಳಿಕೊಂಡಿರುವ ಮಾತಿನಿಂದ ತಿಳಿದು ಬರುತ್ತದೆ:

ಪದ ಪೂರಣಮಂ ಅಣಂ ಪುಗಿ –
ಸದೆ, ಕುದಿದು ವೃಥಾಕ್ಷರಂಗಳಂ ಪ್ರಾಸದೊಳಿ–
ಕ್ಕದೆ, ಶಾಸ್ತ್ರದರ್ಥಮಂ ಬಿಸು–
ಡದೆ, ಪೂಣ್ಕೆಯಿಂ ಓದುವೇಳ್ದೊಡೆ, ಆರ್‌ಮೆಚ್ಚರ್ ಇದಂ.

[ಪದ್ಯದ ಪಾದಗಳನ್ನು ಭರ್ತಿ ಮಾಡುವುದಕ್ಕೆಂದೇ ಪದಗಳನ್ನು ತುಂಬದೆ, ಯೋಚನೆ ಮಾಡಿ ಮಾಡಿ ಪ್ರಾಸಸ್ಥಾನಗಳಲ್ಲಿ ವ್ಯರ್ಥವಾಗಿ ಅಕ್ಷರಗಳನ್ನು ಇಡದೆ, ಶಾಸ್ತ್ರದ ಅರ್ಥವನ್ನು ತೊರೆಯದೆ, 'ಪರೀಕ್ಷೆ ಮಾಡಿ ನೋಡಿ' ಎಂದು ಪ್ರತಿಜ್ಞೆ

ವಿಚಾರಮಾಡಿ, ಶಾಸ್ತ್ರಕ್ಕೂ ಕಾವ್ಯಕ್ಕೂ ಇರುವ ಪರಸ್ಪರ ಸಂಬಂಧವನ್ನೂ ವ್ಯತ್ಯಾಸವನ್ನೂ ತಿಳಿದುಕೊಳ್ಳಬೇಕಾದದ್ದು ಅಗತ್ಯ.

ನಾವು ಬಲ್ಲಮಟ್ಟಿಗೆ ಸಂಸ್ಕೃತದ ಶಾಸ್ತ್ರ ಗ್ರಂಥಗಳೆಲ್ಲವೂ ಸಾಧಾರಣವಾಗಿ ಪದ್ಯರೂಪದಲ್ಲಿಯೇ ಇವೆ. ಬಹುಶಃ ಸಂಸ್ಕೃತದ ಮಾದರಿಯನ್ನು ಅನುಸರಿಸಿ, ಪ್ರಾಚೀನ ಕನ್ನಡ ಶಾಸ್ತ್ರ ಗ್ರಂಥಗಳು ಕೂಡ ಪದ್ಯ ರೂಪದಲ್ಲಿಯೇ ರಚಿತವಾಗಿವೆ. ಕಾವ್ಯವನ್ನು ನೆನಪಿನಲ್ಲಿ ಇಟ್ಟುಕೊಳ್ಳಬೇಕಾದ ಅಗತ್ಯವಿಲ್ಲ. ಆದರೆ ಶಾಸ್ತ್ರಗಳ ವಿಷಯ ಹಾಗಲ್ಲ. ಮುದ್ರಣ ಸೌಕರ್ಯವಿಲ್ಲದಿದ್ದ ಹಿಂದಿನ ಕಾಲದಲ್ಲಿ ಶಿಷ್ಯರು ಶಾಸ್ತ್ರಜ್ಞಾನವನ್ನು ಗುರುಮುಖದಿಂದ ಕಲಿತು, ಬಾಯಿ ಪಾಠ ಮಾಡಿ ನೆನಪಿನಲ್ಲಿ ಉಳಿಸಿಕೊಳ್ಳಬೇಕಾದ ಅಗತ್ಯವಿದ್ದಿತು. ಆದ್ದರಿಂದ ಶಾಸ್ತ್ರ ವಿಷಯಗಳನ್ನು ಕೂಡಿದ ಮಟ್ಟಿಗೂ ಅಡಕವಾಗಿ, ಸಂದೇಹಕ್ಕೆ ಎಡೆಯಿಲ್ಲದಂತೆ, ಬಳಸಿಲ್ಲದಂತೆ, ನೇರವಾಗಿ ಶ್ಲೋಕಗಳಲ್ಲಿ ರಚಿಸುವ ಪದ್ಧತಿಯನ್ನು ಶಾಸ್ತ್ರಕಾರರು ಅನುಸರಿಸುತ್ತ ಬಂದರು. ಕನ್ನಡದಲ್ಲಿಯೂ ಇದೇ ಪದ್ಧತಿ ನಡೆದು ಬಂದಿತು.

ಕಾವ್ಯಗಳು ಗದ್ಯರೂಪದಲ್ಲಿರಬಹುದಾದರೂ, ಸಾಧಾರಣವಾಗಿ ಅವು ಪದ್ಯರೂಪದಲ್ಲಿರುವುದೇ ಹೆಚ್ಚು. 'ಕವಿ' ಎಂದರೆ ಪದ್ಯ ರೂಪದ ಕಾವ್ಯ ಬರೆಯುವವನು ಎಂಬ ಭಾವನೆಯೇ ಬೆಳೆದು ಬಂದಿತು. ಹೀಗಾಗಿ, ಕಾವ್ಯ ಬರೆಯುವವನೂ ಶಾಸ್ತ್ರಗ್ರಂಥ ರಚನೆ ಮಾಡುವವನೂ ಪದ್ಯರಚನೆಗೆ ಅಗತ್ಯವಾದ ಶಬ್ದ ಸಂಪತ್ತು, ವ್ಯಾಕರಣ, ಛಂದಸ್ಸು – ಇವುಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಬೇಕಾಗಿದ್ದಿತು. ಶಾಸ್ತ್ರಕಾರರು ತಾವು ಹೇಳಬೇಕಾದ ವಿಷಯಗಳನ್ನು ಆಕರ್ಷಕವಾಗಿ ಹೇಳಿದರೆ ವಿಷಯವು ಮಂದಟ್ಟಾಗುವುದೆಂದೂ ಆದ್ದರಿಂದ ನೆನಪಿನಲ್ಲಿ ಉಳಿಯಲು ಹೆಚ್ಚು ಅನುಕೂಲವೆಂದೂ ಎಣಿಸಿ, ಸಾಧ್ಯವಾದ ಕಡೆಗಳಲ್ಲಿ ಅಲಂಕಾರದಿಂದ ಕೂಡಿದ ಭಾಷಾಶೈಲಿಯಲ್ಲಿ ಗ್ರಂಥ ರಚನೆ ಮಾಡುತ್ತಿದ್ದರು. 'ಕವಿ' ಎಂಬ ಪದಕ್ಕೆ 'ಕಾವ್ಯ ನಿರ್ಮಾಣ ಮಾಡುವವನು' ಎಂಬ ಅರ್ಥವಲ್ಲದೆ 'ವಿದ್ವಾಂಸ' ಎಂಬ ಅರ್ಥವೂ ಉಂಟು. ಈ ಕಾರಣದಿಂದಲೇ, ರಾಜಶೇಖರನೆಂಬ ಅಲಂಕಾರಿಕನು ಕವಿಜನವನ್ನು ಬೇರೆ ಬೇರೆ ದೃಷ್ಟಿಗಳಿಂದ ವಿಂಗಡಿಸುವಲ್ಲಿ 'ಶಾಸ್ತ್ರಕವಿ' ಎಂಬ ಒಂದು ವರ್ಗವನ್ನೂ ಕಲ್ಪಿಸಿದನು. 'ಚಂದ್ರಪ್ರಭಚರಿತ'ವೆಂಬ ಕಾವ್ಯವನ್ನೂ 'ಜಾತಕತಿಲಕ'ವೆಂಬ ಜ್ಯೋತಿಷ್ಯ ಶಾಸ್ತ್ರದ ಗ್ರಂಥವನ್ನೂ ಬರೆದಿರುವ ಶ್ರೀಧರಾಚಾರ್ಯ ಕವಿ (೧೦೪೯) ಕವಿತ್ವವನ್ನು 'ಕಾವ್ಯ ಕವಿತ್ವ', 'ಶಾಸ್ತ್ರ ಕವಿತ್ವ', ಎಂದು ವಿಭಾಗ ಮಾಡಿ ಅವುಗಳ ಸ್ವರೂಪವನ್ನು ಸ್ಪಷ್ಟಪಡಿಸಿರುವುದನ್ನು ಈ ಸಂದರ್ಭದಲ್ಲಿ ಗಮನಿಸತಕ್ಕದ್ದಾಗಿದೆ:

ಶಾಸ್ತ್ರ ಗ್ರಂಥ ಕಾವ್ಯವಲ್ಲದಿದ್ದರೂ ವಿಶಾಲವಾದ ಅರ್ಥವನ್ನು ಹೊಂದಿರುವ 'ಸಾಹಿತ್ಯ' ಎಂದು ಕರೆಯಿಸಿಕೊಳ್ಳಲು ಅರ್ಹವಾಗುತ್ತದೆ. ಇದು ಹೇಗೆಂಬುದು ವಿಚಾರ ಯೋಗ್ಯವಾಗಿದೆ.

**ಶಾಸ್ತ್ರ – ಸಾಹಿತ್ಯಗಳ ಪರಸ್ಪರ ಸಂಬಂಧ**

'ಆಹಾರ, ನಿದ್ರೆ, ಭಯ, ಮೈಥುನ ಇವು ಪಶುಗಳಿಗೂ ಮನುಷ್ಯನಿಗೂ ಸಾಮಾನ್ಯ ಲಕ್ಷಣಗಳು; ಮನುಷ್ಯನಲ್ಲಿ ಇರುವ ಹೆಚ್ಚಿನ ಲಕ್ಷಣವೆಂದರೆ ಜ್ಞಾನ, "ಜ್ಞಾನಹೀನನು ಪಶುವಿಗೆ ಸಮಾನ" ಎಂದು ತಿಳಿಸುತ್ತದೆ ಒಂದು ಪ್ರಸಿದ್ಧವಾದ ಸುಭಾಷಿತ. ಭಯವೊಂದನ್ನು ಬಿಟ್ಟರೆ ಉಳಿದ ಮೂರು ಇಂದ್ರಿಯ ಅಥವಾ ವಿಷಯ ಸುಖವನ್ನು ಒದಗಿಸುತ್ತವೆ. ಈ ಸುಖ ಸಾಧನೆ, ಸುಖಾನುಭವ, ಎರಡೂ ಇಂದ್ರಿಯಗಳ ಮೂಲಕವೇ ಸಾಗಬೇಕು. ಭಯವೂ ಒಂದು ವಿಧದಲ್ಲಿ ಸುಖ ಸಾಧಕವೇ: ರೋಗಭಯವಿರುವುದರಿಂದಲೇ ಆರೋಗ್ಯದ ಕಡೆಗೆ ಗಮನ; ರೋಗ ತಡೆಯುವ ಪ್ರಯತ್ನ – ಆರೋಗ್ಯ ಒಂದು ಭಾಗ್ಯ, ಸಹಜವಾದ ಸುಖಸ್ಥಿತಿ ಎಂದು ಗೊತ್ತಿರುವುದರಿಂದ, ಪಶುವಿನ ಸುಖಕ್ಕೆ ಸಮಾನವಾದ ಸುಖಕ್ಕಿಂತ ನೂರು ಮಡಿ ಮಿಗಿಲಾದ, ಬಗೆ ಬಗೆಯಾದ, ಸುಖಸಾಧನೆ – ಸಿದ್ಧಿಗಳ ಕಥೆಯೇ ಮಾನವನ ನಾಗರಿಕತೆ ಮತ್ತು ಸಂಸ್ಕೃತಿಗಳ ಚರಿತ್ರೆ ಎನ್ನಬಹುದು. ಈ ಸುಖದ ಕಲ್ಪನೆಯನ್ನು ನಮ್ಮವರು 'ಪುರಷಾರ್ಥ' ಎಂದರು. ಅದು ನಾಲ್ಕು ಬಗೆ: ಧರ್ಮ, ಅರ್ಥ, ಕಾಮ, ಮೋಕ್ಷ. ಧರ್ಮವನ್ನು ಬಿಟ್ಟು ಅರ್ಥ (=ಪ್ರಯೋಜನಕರ ವಸ್ತುಗಳು, ದ್ರವ್ಯ) ಕಾಮಗಳು (=ಸ್ತ್ರೀ ಪುರುಷ ಸಂಗದ ಅಪೇಕ್ಷೆ ಮಾತ್ರವಲ್ಲದೆ, ಅದನ್ನೂ ಒಳಗೊಂಡ, ಮಾನವ ಸಹಜವಾದ ಎಲ್ಲ ಬಗೆಯ ಇಷ್ಟಗಳು) ಐಹಿಕ ಸುಖಸಾಧಕಗಳೇ ಹೊರತು, ಮೋಕ್ಷ ಸಾಧಕಗಳಲ್ಲ; ಮೋಕ್ಷವೊಂದೇ ತುತ್ತತುದಿಯ ಪರಮ ಸುಖ. ಹಾಗೆಂದು, ಅರ್ಥ ಕಾಮಗಳು ಬಿಡತಕ್ಕವಲ್ಲ. ಧರ್ಮಕ್ಕೆ ವಿರುದ್ಧವಾಗದಂತೆ ಅರ್ಥಕಾಮಗಳ ಪೂರೈಕೆಯೂ ಮೋಕ್ಷ ಸಾಧಕವಾಗಬಲ್ಲದು. ನಿತ್ಯದ ಬದುಕಿಗಾಗಿ ಹಣದ ಗಳಿಕೆ ಅಧರ್ಮವಲ್ಲ; ಕನ್ನ ಹಾಕಿ ಕಳವು ಮಾಡುವುದು ಅಧರ್ಮ; ಕಳ್ಳನ ಹೆಂಡತಿ ಎಂದಿದ್ದರೂ ವಿಧವೆ. ಈ ಅನುಭವ ಸತ್ಯವನ್ನು ತಿಳಿಸಲು ದೃಷ್ಟಾಂತ ಕಥೆಗಳನ್ನು ಕಟ್ಟಬಹುದು, ನಡೆದ ಸಂಗತಿಯನ್ನೇ ರಂಜಕವಾಗಿ ತಿಳಿಸಿ, ಸುಲಭ ಮಾರ್ಗದಲ್ಲಿ ಸುಖಜೀವನ ನಡೆಸಬಯಸುವ ಮನೋವೃತ್ತಿಯನ್ನು ನೇರ ನಡತೆಯ ಕಡೆಗೆ ತಿರುಗುವಂತೆ – ಸೂಚ್ಯವಾಗಿ ಪರಿಣಾಮ ಬೀರಬಹುದು; ಹಾಗೆ ನಡೆದರೆ ಸುಖ, ಹೀಗೆ

ಮಾಡಿ ಹೇಳಿದರೆ ಯಾರು ತಾನೆ ಈ ಕೃತಿಯನ್ನು ಮೆಚ್ಚುವುದಿಲ್ಲ.]

ಪದ್ಯರೂಪದಲ್ಲಿ ರಚಿತವಾಗಿರುವ ಪ್ರಾಚೀನ ಕನ್ನಡ ಶಾಸ್ತ್ರ ಗ್ರಂಥಗಳೆಲ್ಲವೂ ಸಮರ್ಥರಾದ ಕವಿಗಳಿಂದ ರಚಿತವಾಗಿಲ್ಲದಿರಬಹುದು; ಅವುಗಳಲ್ಲಿ ಹಲಕೆಲವಾದರೂ ಕನ್ನಡ ಸಂಸ್ಕೃತ ಭಾಷೆಗಳಲ್ಲಿ ವಿದ್ವಾಂಸರಾದವರೂ ಪದ್ಯ ರಚನೆಯಲ್ಲಿ ಕೈ ಪಳಗಿದವರೂ ಆದ ಶಾಸ್ತ್ರಕಾರರಿಂದ ಒಳ್ಳೆಯ ಕಾವ್ಯ ಶೈಲಿಯಲ್ಲಿ ರಚಿತವಾಗಿವೆ. ಇಂತಹ ಮುಖ್ಯವಾದ ಆಯ್ದ ಗ್ರಂಥಗಳ ಹಾಗೂ ಅವುಗಳನ್ನು ಬರೆದವರ ಪರಿಚಯವನ್ನು ಮುಂದಿನ ಪ್ರಕರಣಗಳಲ್ಲಿ ಮಾಡಿಕೊಟ್ಟಿದೆ.

ಆದ್ದರಿಂದ, ಇಂತಹ ಶಾಸ್ತ್ರ ಗ್ರಂಥಕರ್ತರನ್ನು ಒಂದು ಮಿತವಾದ ಅರ್ಥದಲ್ಲಿ ಕವಿಗಳೆಂದು ಭಾವಿಸುವುದರಲ್ಲಿ ತಪ್ಪೇನೂ ಇಲ್ಲ. ದಿವಂಗತ ಆರ್.ನರಸಿಂಹಾಚಾರ್ಯರು ಶಾಸ್ತ್ರ ಗ್ರಂಥಗಳನ್ನು ರಚಿಸಿರುವ ಎಲ್ಲ ಕೃತಿಕಾರರನ್ನೂ ತಮ್ಮ ಕವಿ ಚರಿತೆಯ ಮೂರು ಸಂಪುಟಗಳಲ್ಲಿ ಸೇರಿಸಿಕೊಂಡಿರುವುದನ್ನು ಇಲ್ಲಿ ಗಮನಿಸಬಹುದು. ದಿವಂಗತ ಬಿ.ಎಂ.ಶ್ರೀಕಂಠಯ್ಯನವರು ಕೂಡ 'ಕನ್ನಡ ಕೈಪಿಡಿ'ಯ ಒಂದು ಭಾಗವಾಗಿ ತಾವು ರಚಿಸಿರುವ (ಪೂರ್ಣವಾಗಿಲ್ಲದ) ಸಾಹಿತ್ಯ ಚರಿತ್ರೆಯಲ್ಲಿ ಈ ಜಾತಿಯ ಗ್ರಂಥಗಳನ್ನೂ ಪರಿಚಯ ಮಾಡಿಕೊಡುವ ಔಚಿತ್ಯದ ಬಗೆಗೆ ಹೀಗೆ ಹೇಳಿದ್ದಾರೆ;

"..... ಈ ಸಣ್ಣ ಉಪನ್ಯಾಸದಲ್ಲಿ ಕಾವ್ಯಜಾತಿಗೆ ಸೇರಿದ ಸಾರವತ್ತಾದ ಪ್ರಧಾನ ಕವಿಗಳ ಕಾವ್ಯಗಳಿಲ್ಲದೆ ಮಿಕ್ಕುವಕ್ಕೆ ಅವಕಾಶವಿಲ್ಲ... ಇಂಥಾ ಗ್ರಂಥಗಳಲ್ಲದೆ, ಕನ್ನಡದಲ್ಲಿ ಸಾಹಿತ್ಯಕ್ಕೆ ಸಂಬಂಧಪಟ್ಟ ಶಬ್ದ ಕೋಶ, ವ್ಯಾಕರಣ, ಛಂದಸ್ಸು, ಅಲಂಕಾರ, ರಸ, ಕಾವ್ಯಲಕ್ಷಣ ಮುಂತಾದ ವಿಷಯಗಳನ್ನು ಪ್ರತಿಪಾದಿಸುವ ಗ್ರಂಥಗಳು ಎಷ್ಟೋ ಇವೆ. ಇವು ನ್ಯಾಯವಾಗಿ ಸಾಹಿತ್ಯಕ್ಕೆ ಸೇರುವುದಿಲ್ಲವಾದರೂ, ಸಾಹಿತ್ಯಕ್ಕೆ ಮುಖ್ಯವಾದ ಅಂಗಗಳಾಗಿರುವುದರಿಂದ ಇವುಗಳಲ್ಲಿ ಪ್ರಸಿದ್ಧಿಯಾದುವನ್ನು ಇಲ್ಲಿ ಹೇಳಬೇಕಾಗಿದೆ. ಇವಲ್ಲದೆ ಸಾಹಿತ್ಯಕ್ಕೆ ಸಂಬಂಧವೇ ಇಲ್ಲದೆ, ಕೇವಲ ಶಾಸ್ತ್ರ ವಿಷಯಗಳನ್ನು ಪ್ರೌಢವಾದ ಪದ್ಯಗದ್ಯಶೈಲಿಯಲ್ಲಿ ತಿಳಿಸುವ ಅನೇಕ ಶಾಸ್ತ್ರ ಗ್ರಂಥಗಳಿರುತ್ತವೆ... ದಿಕ್‌ಪ್ರದರ್ಶನಾರ್ಥವಾಗಿ, ಈ ಚರಿತೆಯ ಒಂದು ಭಾಗದಲ್ಲಿ, ಈ ಲಕ್ಷಣ ಗ್ರಂಥಗಳು, ಶಾಸ್ತ್ರ ಗ್ರಂಥಗಳು, ಶಾಸನಗಳು ಇವುಗಳ ವಿಷಯವಾಗಿ ಸ್ವಲ್ಪ ಮಟ್ಟಿಗೆ ಹೇಳಿರುತ್ತದೆ."*

---

* 'ಕನ್ನಡ ಕೈಪಿಡಿ'ಯ ಸಾಹಿತ್ಯ ಚರಿತ್ರೆಯನ್ನು ಬಿ.ಎಂ.ಶ್ರೀ.ಯವರು ಪೂರ್ತಿಯಾಗಿ ಬರೆದಿದ್ದರೆ ಶಾಸ್ತ್ರ ವಿಭಾಗವೂ ಅದರಲ್ಲಿ ಸೇರುತ್ತಿತ್ತು. ಅವರು ಅದನ್ನು ಬರೆದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು!

ಉಪಕರಣ ವಾಗಿಯಾಗಲಿ, – ಎಲ್ಲ ವಿದ್ಯೆ, ಎಲ್ಲ ಕಲೆ, ಎಲ್ಲ ಶಾಸ್ತ್ರಗಳ ಅಂಶಗಳೂ ಸೇರಿರುವುದಾದುದರಿಂದ ಅವುಗಳೆಲ್ಲವುಗಳ 'ಸಹಿತತ್ವ'ವಿರುವುದರಿಂದ ಗ್ರಂಥರಾಶಿಗೆ ಸಾಹಿತ್ಯವೆಂಬ ಹೆಸರು ರೂಢಿಯಾಗಿದೆ. ಅಥವಾ ಜಗತ್ತಿನ ನಾನಾ ವಸ್ತು, ನಾನಾ ಜೀವ, ನಾನಾ ವ್ಯಾಪಾರಗಳ ಛಾಯಾನುಕರಣೆಗಳೂ ವರ್ಣನೆ ವಿವರಣೆಗಳೂ ಗ್ರಂಥಗಳಲ್ಲಿ ಒಟ್ಟುಗೂಡಿರುವುದರಿಂದ – 'ಸಹಿತ'ವಾಗಿರುವುದರಿಂದ – ಕಾವ್ಯ ಸಾಮಾನ್ಯಕ್ಕೆ ಸಾಹಿತ್ಯವೆಂಬ ಹೆಸರು ಹೀಗೆಯೂ ಅನ್ವರ್ಥವಾಗಿದೆ. ನಾನಾ ವಿಧದ ಗ್ರಂಥರಾಶಿಯನ್ನು ವಾಙ್ಮಯ**ವೆಂದೂ ಕರೆಯುವುದುಂಟು.*೨

ಪ್ರಾಚೀನ ಲಕ್ಷಣಕಾರರು ಉಪದೇಶ ದೃಷ್ಟಿಯಿಂದ ಗ್ರಂಥರಾಶಿಯನ್ನು ಮೂರು ವಿಭಾಗಗಳಾಗಿ ಮಾಡಿರುವುದನ್ನು ಮೇಲೆ ವಿವರಿಸಿದೆ. ಗ್ರಂಥ ವಿಷಯ ಶಾಸ್ತ್ರವಾಗಲಿ ರಸವತ್ತಾದುದಾಗಿರಲಿ, ಅದು ಉಪದೇಶವನ್ನು ಮಾಡಲೇಬೇಕೆಂದು ಎಲ್ಲಾ ಜಾತಿಯ ಗ್ರಂಥಕ್ಕೂ ಅನ್ವಯಿಸುವುದು ತಪ್ಪಾಗುತ್ತದೆ. ಈ ಉಪದೇಶದ ಗುರಿ ಮಾನವನ ಹಿತಸಾಧನೆ ಎಂಬ ಅಂಶವನ್ನು ಗಮನದಲ್ಲಿಟ್ಟುಕೊಂಡರೆ, ನೇರವಾಗಿ ಉಪದೇಶ ಮಾಡದಿದ್ದರೂ ಎಲ್ಲ ಸದ್ಗ್ರಂಥಗಳೂ ಪ್ರತ್ಯಕ್ಷವಾಗಿಯಲ್ಲದಿದ್ದರೂ ಪರೋಕ್ಷವಾಗಿ (ಎಂದರೆ ಗೊತ್ತಾಗದ ಹಾಗೆ) ಮಾನವ ಹಿತಸಾಧನೆಗೆ ಸಾಧಕಗಳಾಗಬಲ್ಲವು ಎಂಬುದನ್ನು ಒಪ್ಪಬೇಕಾಗುತ್ತದೆ. ಕೆಲವು ಉದಾಹರಣೆಗಳಿಂದ ಈ ದೃಷ್ಟಿಯನ್ನು ಪರಿಶೀಲಿಸಬೇಕಾದದ್ದು ಅಗತ್ಯ. ವ್ಯಾಕರಣದಿಂದ ಏನು ಪ್ರಯೋಜನ? "ಭಜಗೋವಿಂದಂ ಭಜಗೋವಿಂದಂ ಭಜಗೋವಿಂದಂ ಮೂಢಮತೇ! ಸಂಪ್ರಾಪ್ತೆ ಸನ್ನಿಹಿತೇ ಕಾಲೇ ನಹಿ ನಹಿ ರಕ್ಷತಿ ಡುಕೃಙ್ಞ ಕರಣೇ"* ಎಂದು ಹೇಳಿ, ವ್ಯಾಕರಣ ಶಾಸ್ತ್ರದಿಂದ ಮೋಕ್ಷ ಪ್ರಾಪ್ತಿಯಾಗದೆಂದು ಶಂಕರಾಚಾರ್ಯರು ಸಾರಿದ್ದಾರೆ. ವೇದಶಾಸ್ತ್ರಗಳ ಮುಖ್ಯ ಗುರಿಯನ್ನು ಮರೆತು, ಅವುಗಳ ಶುಷ್ಕ ಶಬ್ದ ಪಾಂಡಿತ್ಯದ ಕಡೆಗೆ ಲಕ್ಷ್ಯ ಹರಿಸುತ್ತಿದ್ದ ವೇದಭ್ಯಾಸ ಜಡರನ್ನು ಕುರಿತು ಹೇಳಿದ ಸಂದರ್ಭದಲ್ಲಿ ಶಂಕರಾಚಾರ್ಯರ ಮಾತು ಯುಕ್ತವಾಗಿಯೆ ಇದೆ. ಸಂಸ್ಕೃತ ಭಾಷೆಯಲ್ಲಿ ಉದ್ದಾಮ ಪಾಂಡಿತ್ಯವಿಲ್ಲದೆ ಅವರು ರಚಿಸಿರುವ 'ಬ್ರಹ್ಮ ಸೂತ್ರಗಳ ಭಾಷ್ಯ'ವನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಹಳಗನ್ನಡ ವ್ಯಾಕರಣ ಮರ್ಯಾದೆಯನ್ನು ಅಭ್ಯಾಸ ಮಾಡದೆ ಜೈನ ಧರ್ಮದ

** ವಾಙ್ಮಯ: ವಾಕ್+ಮಯ. ಎಂದರೆ ಮಾತುಗಳಿಂದ ಕೂಡಿರುವುದು, ತುಂಬಿರುವುದು.

* "ಮಂದ ಬುದ್ದಿಯುಳ್ಳ ಮಾನವನೇ, ಮರಣ ಕಾಲವು ಹತ್ತಿರವಾಗಿರುವಾಗ 'ಡುಕೃಙ್ಞ ಕರಣೇ' ಎಂಬ ವ್ಯಾಕರಣ ಶಾಸ್ತ್ರದ ಸೂತ್ರವನ್ನು ಪಠಿಸಿದರೆ ಅದು ನಿನ್ನನ್ನು ರಕ್ಷಿಸುವುದಿಲ್ಲ. ಆದ್ದರಿಂದ ಗೋವಿಂದನನ್ನು ಭಜಿಸು, ಗೋವಿಂದನನ್ನು ಭಜಿಸು."

ನಡೆದರೆ ದುಃಖ ಎಂದು ತಿಳಿಯ ಹೇಳಬಹುದು, ಕಾಂತೆಯ ಹಾಗೆ, ಕಿವಿ ಸವಿಯಾಗುವಂತೆ. ಹೀಗೆ ಹೇಳುವ ಕೆಲಸ ಸಾಹಿತ್ಯ ಪ್ರಪಂಚಕ್ಕೆ, ಕಾವ್ಯ ಪ್ರಪಂಚಕ್ಕೆ, ಸೇರಿದ್ದು. "ಕಳಬೇಡ ಕೊಲಬೇಡ, ಹುಸಿಯ ನುಡಿಯಲು ಬೇಡ, ಅನ್ಯರಿಗೆ ಅಸಹ್ಯಪಡಬೇಡ, ಇದೇ ಅಂತರಂಗದ ಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲ ಸಂಗನನ್ನೊಲಿಸುವ ಪರಿ* ಎಂದು ನೇರವಾಗಿ ನೀತಿ ಹೇಳಬಹುದು. ಇದು ಶಾಸ್ತ್ರದ ಮಾರ್ಗ; ವಿಧಿಸುವ ಬಗೆ: ಒಡೆಯ ಆಳಿಗೆ ಹೇಳುವ, ದೊರೆ ಪ್ರಜೆಗಳಿಗೆ ಶಾಸನ ಮಾಡುವ, ಅಧಿಕಾರದ ವಿಧಾನ. ಹೀಗೆ, ಶಾಸ್ತ್ರ ಗ್ರಂಥಗಳ ಗುರಿಯೂ ಸಾಹಿತ್ಯ ಗ್ರಂಥಗಳ ಗುರಿಯೂ ಒಂದೇ; ವಿಧಾನ ಮಾತ್ರ ಬೇರೆ ಬೇರೆ. ಈ ವಿಷಯವನ್ನು ಶಾಸ್ತ್ರದ ಪರಿಭಾಷೆಯಲ್ಲಿ ಹೀಗೆ ತಿಳಿಸಬಹುದು:

"ಅಲಂಕಾರಿಕರು ಗ್ರಂಥ ರಾಶಿಯನ್ನು ಉಪದೇಶ ದೃಷ್ಟಿಯಿಂದ ಪ್ರಭು ಸಮ್ಮಿತ ಮಿತ್ರಸಮ್ಮಿತ ಕಾಂತಾಸಮ್ಮಿತ ಎಂಬ ಮೂರು ಭಾಗ ಮಾಡುವವರು. 'ಹೀಗೆ ಮಾಡಬೇಕು, ಹೀಗೆ ಮಾಡಕೂಡದು' ಎಂದು ಕರ್ತವ್ಯಾಕರ್ತವ್ಯಗಳನ್ನು* ವಿಧಿಸುವ ಮತ್ತು ನಿಷೇಧಿಸುವ ವೇದ ಶಾಸ್ತ್ರಾದಿಗಳು 'ಪ್ರಭು ಸಮ್ಮಿತ', ಅವು ನಮಗೆ ಪ್ರಿಯವಾಗಿರಲಿ ಇಲ್ಲದಿರಲಿ, ರಾಜ ಶಾಸನದಂತೆ, ಅವುಗಳನ್ನು ಅನುಸರಿಸಿ ಭಾದಕಗಳು ಕಂಡು ಬರುವಂಥ ಕಥೆಗಳನ್ನು ರಸಪ್ರಾಧಾನ್ಯವಿಲ್ಲದೆ ಹೇಳಿ ನೀತಿಯನ್ನು ಸೂಚಿಸುವ ಪುರಾಣಾದಿಗಳು 'ಮಿತ್ರ ಸಮ್ಮಿತ'. ಇವು 'ಅರ್ಥಪ್ರಧಾನ'. ಮನಸ್ಸಿಗೆ ಸಂತೋಷವಾಗುವ ವಿಷಯಗಳನ್ನು ರಮಣೀಯವಾದ ರೀತಿಯಲ್ಲಿ ಹೇಳುತ್ತ ನಮ್ಮ ಮನಸ್ಸನ್ನು ಸೆಳೆದುಕೊಂಡು ಕರ್ತವ್ಯಾಕರ್ತವ್ಯಗಳನ್ನು ಸತ್ಫಲ ದುಷ್ಫಲಗಳು ನಮ್ಮ ನಮ್ಮ ಮನಸ್ಸಿಗೇ ತಾವಾಗಿಯೇ ಅಂಟುವಂತೆ ಪ್ರತಿಪಾದಿಸುವ ಕಾವ್ಯ ನಾಟಕಾದಿಗಳು 'ಕಾಂತಾಸಮ್ಮಿತ', ಇವು ರಸ ಪ್ರಧಾನ".

ಈ ಕಾರಣದಿಂದ, ನಮ್ಮ ಪ್ರಾಚೀನ ಲಾಕ್ಷಣಿಕರು ವೇದ ಪುರಾಣ ಕಾವ್ಯಗಳೆಲ್ಲ ವನ್ನೂ 'ಸಾಹಿತ್ಯ' ಎಂದೇ ಗೊತ್ತು ಮಾಡಿದರು. ಈ ಸಂದರ್ಭಕ್ಕೆ ಹೊಂದುವಂತೆ ಸಾಹಿತ್ಯ ಶಬ್ದದ ನಿರ್ವಚನವನ್ನು* ವಿದ್ವಾಂಸರು ಹೀಗೆ ವಿವರಿಸಿದ್ದಾರೆ:

"ಗ್ರಂಥಗಳಲ್ಲಿ – ವರ್ಣನೆಗಾಗಲಿ, ವಿವರಣೆಗಾಗಲಿ, ಪ್ರಾಸ್ತವಿಕವಾಗಿಯಾಗಲಿ, ದೃಷ್ಟಾಂತಕ್ಕಾಗಿಯಾಗಲಿ, ಮುಖ್ಯ ವಿಷಯದ ಉಂಪಾಂಗವಾಗಿಯಾಗಲಿ,

---

* 'ಸತ್ಯಂ ವದ, ಧರ್ಮ ಚರ' ಎಂದು ವಿಧಿಸುವ ಶಾಸ್ತ್ರವಾಕ್ಯದಂತೆಯೇ ಇದ್ದರೂ ಬಸವಣ್ಣನವರ ವಚನದಲ್ಲಿ ಪದಬಂಧದ ಅಂದವಿದೆ; ಇದು ಕಾವ್ಯದ ಒಂದು 'ಗುಣ'.

* ಕರ್ತವ್ಯಾಕರ್ತವ್ಯ (ಕರ್ತವ್ಯ+ಅಕರ್ತವ್ಯ)= ಮಾಡಬೇಕಾದದ್ದು ಮತ್ತು ಮಾಡಬಾರದ್ದು. ನಿರ್ವಚನ=ಅರ್ಥ ವಿವರಣೆ.

'ಸಾಹಿತ್ಯ' ಶಬ್ದಕ್ಕೆ ಇನ್ನೊಂದು ರೀತಿಯಲ್ಲೂ ಅರ್ಥವನ್ನು ಹೇಳಲಾಗುತ್ತದೆ: "ಹಿತೇನ ಯುಕ್ತಂ – ಸಹಿತಂ, ತಸ್ಯ ಭಾವಃ ಸಾಹಿತ್ಯಂ" – ಎಂದರೆ, ಮಾನವನಿಗೆ ಯಾವುದು ಹಿತವೋ ಅಂಥ ಹಿತದಿಂದ ಕೂಡಿರುವುದೇ ಸಾಹಿತ್ಯ. ಈ ದೃಷ್ಟಿಯಿಂದ ಶಾಸ್ತ್ರ ಗ್ರಂಥಗಳು ಹೇಗೆ ಹಿತಕಾರಿಗಳು ಎಂಬುದನ್ನು ಈಗಾಗಲೇ ವಿವೇಚಿಸಿದೆ.

ಕವಿಗಳು ರಚಿಸುವ ಕೃತಿಗಳು 'ರಸಪ್ರಧಾನ'ವಾದರೂ ಮಾನವ ಹಿತವನ್ನೂ ಕಾಂತಾ ಸಮ್ಮಿತ ಮಾರ್ಗದಲ್ಲಿ ಸೂಚ್ಯವಾಗಿ ಉಪದೇಶ ಮಾಡುವುದರಿಂದ ಅವೂ 'ಸಾಹಿತ್ಯ' ಎಂಬ ಹೆಸರಿಗೆ ಪಾತ್ರವಾಗಿವೆ. ಕಾವ್ಯಶಾಸ್ತ್ರ ಗ್ರಂಥಗಳಲ್ಲಿ ಕಾವ್ಯ ಸ್ವರೂಪವನ್ನು ವಿವರಿಸುವಾಗ ಲಾಕ್ಷಣಿಕರು ಕಾವ್ಯವೂ ಚತುರ್ವಿಧ ಪುರುಷಾರ್ಥಗಳನ್ನು ದೊರಕಿಸಿ ಕೊಡುತ್ತದೆ ಎಂದು ಹೇಳಿದ್ದಾರೆ. ಈ ವಿಷಯವನ್ನು 'ಕವಿರಾಜಮಾರ್ಗ'ದ ಈ ಕೆಳಗಿನ ಪದ್ಯಗಳು ಬಹು ಚೆನ್ನಾಗಿ ತಿಳಿಸುತ್ತವೆ:

ಪಾಪವಿದು ಪುಣ್ಯಮಿದು, ಹಿತ–
ರೂಪಮಿದು ಅಹಿತ ಪ್ರಕಾರಮಿದು, ಸುಖಮಿದು ದುಃ–
ಖೋಪಾತ್ತಮಿದು, ಎಂದು ಅರಿಪುಗುಂ
ಆ ಪರಮ ಕವಿ ಪ್ರಧಾನರಾ ಕಾವ್ಯಂಗಳ್ (i–೧೮)

ಅಧಿಕೃತ ಸತ್ಪುರುಷಾರ್ಥ
ಪ್ರಧಾನ ಧರ್ಮಾರ್ಥ ಕಾಮಮೋಕ್ಷಂಗಳ್ ಅವು, ಆ
ಬುಧಜನ ವಿವಕ್ತ ಕಾವ್ಯ
ಪ್ರಧಾರಿತ ಅರ್ಥಂಗಳ್, ಅಖಿಳ ಭುವನ ಹಿತಂಗಳ್ (i–೨೦)

[ಕವಿಶ್ರೇಷ್ಠರ ಕಾವ್ಯಗಳು ಇದು ಪಾಪ, ಇದು ಪುಣ್ಯ, ಇದು ಹಿತಕರ ಇದು ಅಹಿತಕರ ಇದು ಸುಖಕರ ಇದು ದುಃಖಕರ ಎಂದು ತಿಳಿಸುತ್ತವೆ (i–೧೮). ವಿದ್ವಾಂಸರು ವಿವೇಚನೆ, ಮಾಡಿರುವಂತೆ, ಸಕಲ ಲೋಕಕ್ಕೂ ಹಿತವನ್ನುಂಟು ಮಾಡುವ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಮುಖ್ಯ ಪುರುಷಾರ್ಥಗಳು ಕಾವ್ಯದ ಪ್ರಯೋಜನಗಳಲ್ಲಿ ಅಡಕವಾಗಿವೆ (i–೨೦).]

ಹೀಗಿದ್ದರೂ, ರಸಾನುಭವದಿಂದ ದೊರಕುವ ಅಲೌಕಿಕ ಆನಂದವೇ ಕಾವ್ಯದ ಪರಮ ಪ್ರಯೋಜನ ಎಂಬುದು ಅಲಂಕಾರ ಶಾಸ್ತ್ರಜ್ಞರ ಅಭಿಪ್ರಾಯ. ಈ ಕಾವ್ಯಾನಂದ ಬ್ರಹ್ಮಾನುಭವದಿಂದ ದೊರಕುವ ಆನಂದಕ್ಕೆ ಸಮವೆಂದೂ ಅವರು ಹೇಳುತ್ತಾರೆ. ಎಲ್ಲ ಮತಧರ್ಮಗಳು ಬೋಧಿಸುವ ಮೋಕ್ಷವೂ ನಿತಯವಾದ ಆನಂದ ಸ್ಥಿತಿಯನ್ನೇ ಕುರಿತಿದೆ.

ಸಾರಸತ್ವವನ್ನು ಹಿಡಿದಿಟ್ಟಿರುವ ಪಂಪರನ್ನರ 'ಆದಿಪುರಾಣ' 'ಅಜಿತಪುರಾಣ'ಗಳನ್ನು ಅರ್ಥಮಾಡಿಕೊಳ್ಳುವುದು ಅಷ್ಟೇ ಕಷ್ಟ. ಹೀಗಿರುವುದರಿಂದ ಪ್ರಸಿದ್ಧ ಕನ್ನಡ ವ್ಯಾಕರಣ ಕರ್ತನಾದ ಕೇಶಿರಾಜನು:

ವ್ಯಾಕರಣದಿಂದೆ ಪದಂ, ಆ
ವ್ಯಾಕರಣದ ಪದದಿಂ ಅರ್ಥ, ಅರ್ಥದೆ ತತ್ವಾ
ಲೋಕಂ, ತತ್ವಾಲೋಕದಿಂ
ಆಕಾಂಕ್ಷಿಪ ಮುಕ್ತಿಯಕ್ಕುಂ – ಇದೆ ಬುಧರ್ಗೆ ಫಲಂ (ಪೀಠಿಕೆ – ೧೦)

[ವ್ಯಾಕರಣದಿಂದ ಪದಗಳ ತಿಳಿವಳಿಕೆ; ಪದಗಳ ತಿಳಿವಳಿಕೆಯಿಂದ ಅರ್ಥಜ್ಞಾನ; ಅರ್ಥಜ್ಞಾನದಿಂದ ತತ್ವವಿಚಾರ; ತತ್ವಜ್ಞಾನದಿಂದ ಮೋಕ್ಷ; ಆದ್ದರಿಂದ ವಿದ್ವಾಂಸರಿಗೆ ವ್ಯಾಕರಣ ಮೋಕ್ಷ ಫಲವನ್ನು ಕೊಡಬಲ್ಲದು.]

ವೈದ್ಯ ಶಾಸ್ತ್ರವನ್ನು ನಮ್ಮವರು 'ಆಯುರ್ವೇದ' ಎಂದು ಕರೆದಿದ್ದಾರೆ. ನಾವು ಆರೋಗ್ಯದಿಂದಿರಬೇಕಾದರೆ ಔಷಧೋಪಚಾರಗಳ ಅಗತ್ಯದ ವಿಷಯವಾಗಿ ಇಲ್ಲಿ ವಿವರಣೆ ಅನಾವಶ್ಯಕ. ಔಷಧೋಪಚಾರಕ್ಕಿಂತ ಮುಖ್ಯವಾದದ್ದು ನಮ್ಮ ನಿತ್ಯದ ಆಹಾರ. ಇದಕ್ಕೆ ಸಂಬಂಧ ಪಟ್ಟ ಶಾಸ್ತ್ರಗಳು – ಈಗಿನ ಕಾಲದ ಕೃಷಿವಿಜ್ಞಾನ (Agricultural Science), ಆಹಾರ ವಿಜ್ಞಾನ (Dietetics), ಪ್ರಾಚೀನ ಪದ್ಧತಿಯ ಮತ್ತು ಇಂದಿನ ಪಾಕಶಾಸ್ತ್ರ ಮುಂತಾದವು. ನಮ್ಮ ದೇಹ ಗಟ್ಟಿ ಮಟ್ಟಾಗಿದ್ದು ಸ್ವಸ್ಥವಾಗಿಲ್ಲದಿದ್ದರೆ, ಮೋಕ್ಷ ಸಂಪಾದನೆಯ ಮಾತು ದೂರವೇ ಉಳಿಯಿತು. ಕಾಳಿದಾಸನ ಉಕ್ತಿ ಶರೀರಸ್ವಾಸ್ಥ್ಯದ ಮಹತ್ವವನ್ನು ಚೆನ್ನಾಗಿ ಕನ್ನಡಿಸುತ್ತದೆ: "ಶರೀರಂ ಆದ್ಯಂ ಖಲು ಧರ್ಮ ಸಾಧನಂ" – "ಧರ್ಮವನ್ನು ಗಳಿಸಬೇಕೆನ್ನುವವರು ದೇಹ ಸೌಖ್ಯಕ್ಕೆ ಮೊತ್ತ ಮೊದಲು ಗಮನ ಕೊಡಬೇಕು".

ಈ ರೀತಿಯಲ್ಲಿ, ಅದು ಪ್ರಾಚೀನ ಶಾಸ್ತ್ರವಾಗಲಿ, ಆಧುನಿಕ ಶಾಸ್ತ್ರವಾಗಲಿ, ಅದು ನಮಗೆ ಒದಗಿಸುವ ಜ್ಞಾನಭಂಡಾರದಿಂದ ಮನುಷ್ಯನ ಇಹಲೋಕದ ಜೀವನವು ಸುಖಮಯವಾಗುವುದರಲ್ಲಿ ಸಂದೇಹವಿಲ್ಲ. ಒಟ್ಟಿನ ಮೇಲೆ, ಇಹಪರ ಸೌಖ್ಯಕ್ಕೆ ಸಾಧನವಾದ ಸರ್ವವಿಷಯಗಳನ್ನೂ ಒಳಗೊಂಡು, ಅವುಗಳನ್ನು ತಿಳಿಯ ಹೇಳುವ – ಶಾಸ್ತ್ರದ ಪರಿಭಾಷೆಯಲ್ಲಿ ಹೇಳುವುದಾದರೆ – ಚತುರ್ವಿಧ ಪುರುಷಾರ್ಥ ಬೋಧಕವಾದ – ಜ್ಞಾನವನ್ನು ನೀಡುವ ಶಾಸ್ತ್ರಗ್ರಂಥಗಳನ್ನು 'ಸಾಹಿತ್ಯ' ಎಂದು ಕರೆಯಲು ಅಡ್ಡಿಯಿಲ್ಲ.

ಒಬ್ಬ ಪುರುಷ ಇದರ ಪ್ರತಿಪಾದಕನಲ್ಲ. ಆದ್ದರಿಂದ ಅಪೌರುಷೇಯ. ಗುರು ಶಿಷ್ಯ ಪರಂಪರೆಯಿಂದ–(ಗುರು ಬೋಧಿಸುವುದು, ತಿಳಿಯ ಹೇಳುವುದು; ಶಿಷ್ಯ ಕೇಳುವುದು)–ಕಿವಿಯಿಂದ ಕಿವಿಗೆ ಸಾಗಿ ಬಂತು. ಈ ಸಾಗಣೆಗೆ ಸಹಾಯಕವಾದ ಕರಣ, (=ಸಾಧನ ವಾಕ್)–ಬಾಯಿಮಾತು. ವೇದಗಳನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಸಹಾಯವಾಗಿ ಶಿಕ್ಷಾ (ಉಚ್ಚಾರಣಾ ಶಾಸ್ತ್ರ), ವ್ಯಾಕರಣ, ಛಂದಸ್ಸು, ನಿರುಕ್ತ (ಶಬ್ದಗಳ ಅರ್ಥವನ್ನು ಕುರಿತ ಶಾಸ್ತ್ರ), ಜ್ಯೋತಿಷ, ಕಲ್ಪ (ಆಚರಣೆಯ ಕ್ರಮ) ಎಂಬ ಆರು ಶಾಸ್ತ್ರಗಳು ಬೆಳೆದು ಬಂದವು. ಒಟ್ಟಿನಲ್ಲಿ ಇವು 'ವೇದಶಾಸ್ತ್ರ' ಎಂದೇ ಪ್ರಸಿದ್ಧ. ಶಾಸ್ತ್ರ ಎನ್ನುವ ಮಾತಿನ ಅರ್ಥ – ಶಾಸನ ಮಾಡುವುದು, ವಿಧಿಸುವುದು, ಕಟ್ಟಳೆ ಮಾಡುವುದು. ಅಪ್ಪಣೆ ಮಾಡುವುದರಲ್ಲಿ ಎರಡು ವಿಧ: 'ಹೀಗೆ ಮಾಡಬೇಕು' ಎನ್ನುವುದು ವಿಧಿ 'ಹೀಗೆ ಮಾಡಬಾರದು' ಎನ್ನುವುದು ನಿಷೇಧ: ಶಾಸ್ತ್ರಗಳು ವಿಧಿ ನಿಷೇಧಗಳೆರಡನ್ನೂ ಒಳಗೊಂಡಿರುತ್ತವೆ. ಉದಾಹರಣೆಗೆ, ಶಿಕ್ಷಾ ಶಾಸ್ತ್ರವು ವೇದವಾಕ್ಯಗಳನ್ನು ಹೇಗೆ ಉಚ್ಚಾರ ಮಾಡಿದರೆ ಸರಿ, ಹೇಗೆ ಉಚ್ಚಾರ ಮಾಡಿದರೆ ತಪ್ಪು ಎನ್ನುವುದನ್ನು ತಿಳಿಸುತ್ತದೆ. ಛಂದಸ್ಸು (ಛಂದಶಾಸ್ತ್ರ) ವೇದಗಳಲ್ಲಿ ಉಪಯೋಗಿಸಿರುವ ಪದ್ಯಗಳ ರಚನೆಗಳ ಸ್ವರೂಪವನ್ನು ವಿವರಿಸುತ್ತದೆ. ವೇದಗಳಲ್ಲಿ ಉಪಯೋಗಿಸಿರುವ ಛಂದಸ್ಸು 'ವೈದಿಕ ಛಂದಸ್ಸು' ಎಂದು ಪ್ರಸಿದ್ಧವಾಗಿದೆ. ಈ ವೈದಿಕ ಛಂದಸ್ಸಿನ ಆಧಾರದ ಮೇಲೆ ಸಂಸ್ಕೃತ ಕಾವ್ಯಗಳಲ್ಲಿಯೂ ಇತರ ಗ್ರಂಥಗಳಲ್ಲಿಯೂ ಉಪಯೋಗಿಸುವ 'ಲೌಕಿಕ' ಛಂದಸ್ಸು ಬೆಳೆಯಿತು. ಸಂಸ್ಕೃತದಲ್ಲಿ ರಚನೆ ಮಾಡುವದಕ್ಕೂ ಹಾಡುವುದಕ್ಕೂ ಅತ್ಯಂತ ಸುಲಭವಾದ ಪದ್ಯರೂಪ 'ಶ್ಲೋಕ'. ರಾಮಾಯಣ ಮಹಾಭಾರತ ಕಾವ್ಯಗಳೂ (ಭಾರತದಲ್ಲಿ ಸೇರಿರುವ) ಭಗವದ್ಗೀತೆಯೂ ಶ್ಲೋಕ ಛಂದಸ್ಸಿನಲ್ಲಿಯೇ ಇವೆ. ಭಗವದ್ಗೀತೆ ಮೋಕ್ಷ ಶಾಸ್ತ್ರವೆಂದೂ ಪ್ರಸಿದ್ಧವಾಗಿದೆ. ವೈದಿಕ ಸಂಸ್ಕೃತಿ ಬೆಳೆದಂತೆ ಶಾಸ್ತ್ರ ಪ್ರಪಂಚವೂ ವಿಸ್ತಾರವಾಯಿತು; ತರ್ಕಶಾಸ್ತ್ರ, ನ್ಯಾಯಶಾಸ್ತ್ರ, ನಾಟ್ಯಶಾಸ್ತ್ರ, ಗಣಿತಶಾಸ್ತ್ರ ಮುಂತಾಗಿ ಹಲವಾರು ಶಾಸ್ತ್ರಗಳು ಬೆಳೆದವು. ವೇದದ ಜ್ಞಾನವೇ ನಿಜವಾದ ಜ್ಞಾನವೆಂದೂ, ಇನ್ನುಳಿದ ಶಾಸ್ತ್ರಗಳ ಜ್ಞಾನ 'ವಿಜ್ಞಾನ' ಎಂದರೆ ನಿಜವಾದ ರೀತಿಯ ಜ್ಞಾನವೆಂದೂ* ತಿಳಿಯಲಾಯಿತು. ಸಂಸ್ಕೃತಿ ಭಾಷೆಯಲ್ಲಿರುವ

* ಪಾಶ್ಚಾತ್ಯ ದೇಶಗಳಲ್ಲಿ ಹುಟ್ಟಿ ಬೆಳೆದು, ಈಗ ನಮ್ಮ ದೇಶದಲ್ಲಿಯೂ ವಿದ್ಯಾಭ್ಯಾಸದ ಒಂದು ಪ್ರಧಾನ ಭಾಗವಾಗಿ ಬೆಳೆಯುತ್ತಿರುವ ಭೌತಶಾಸ್ತ್ರ, ರಸಾಯನಶಾಸ್ತ್ರ, ಯಂತ್ರಶಾಸ್ತ್ರ ಮುಂತಾದ ಶಾಸ್ತ್ರಗಳನ್ನು ಒಟ್ಟಿನಲ್ಲಿ 'ಸೈನ್ಸ್'(science) ಅಥವಾ 'ವಿಜ್ಞಾನ' ಎಂದು ಕರೆಯುತ್ತೇವೆ. 'ಸೈನ್ಸ್' ಪದದ ಮೂಲಾರ್ಥ ಜ್ಞಾನ. ಅದರ ಬೇರೆ ಬೇರೆ ವಿಭಾಗಗಳನ್ನು ವಿಜ್ಞಾನ ಎಂದು ಕರೆಯುವುದು ಸರಿಯಾಗಿಯೆ ಇದೆ. ಶಾಸ್ತ್ರ ಎಂದರೂ ತಪ್ಪಿಲ್ಲ

ಹೇಗೆ ವಿಚಾರ ಮಾಡಿದರೂ ಶಾಸ್ತ್ರಗ್ರಂಥಗಳೂ ಕಾವ್ಯಗಳೂ ಕೂಡಿಯೇ 'ಸಾಹಿತ್ಯ' ಎಂಬ ವಿಶೇಷಾರ್ಥದ ಹಾಗೂ ವಿಶಾಲಾರ್ಥದ ವ್ಯಾಪ್ತಿಗೆ ಒಳಪಡತಕ್ಕವಾಗಿವೆ.

### ಶಾಸ್ತ್ರಗ್ರಂಥಗಳ ಬೆಳವಣಿಗೆ, ಧಾರ್ಮಿಕ ಶಾಸ್ತ್ರ ಗ್ರಂಥಗಳು

'ಸಾಹಿತ್ಯ' ಎನ್ನುವ ಮಾತಿಗಿಂತ 'ವಾಙ್ಮಯ' ಎಂಬ ಮಾತು ಎಲ್ಲ ಬಗೆಯ ಗ್ರಂಥಗಳಿಗೂ ಅತಿವ್ಯಾಪ್ತಿ ಅವ್ಯಾಪ್ತಿ ದೋಷಗಳಿಗೆ ಅವಕಾಶವಿಲ್ಲದಂತೆ ಅನ್ವಯಿಸ ತಕ್ಕದ್ದಾಗಿದೆ. (ಒಂದು ಗುಂಪಿಗೆ ಸೇರತಕ್ಕವಲ್ಲವನ್ನು ಸೇರಿಸಿಕೊಂಡರೆ ಅತಿ ವ್ಯಾಪ್ತಿಯೂ ಸೇರತಕ್ಕವನ್ನು ಸೇರಿಕೊಳ್ಳದೆ ಬಿಡುವಂತಿದ್ದರೆ ಅವ್ಯಾಪ್ತಿ ದೋಷವೂ ಉಂಟಾಗುತ್ತವೆ.) ಶಾಸ್ತ್ರ ವಿಷಯವಾಗಲಿ ಕಾವ್ಯ ವಿಷಯವಾಗಲಿ, ಅಭಿವ್ಯಕ್ತಿಯ (ಎಂದರೆ ಹೊರಗಾಣಿ ಸುವ) ಮಾಧ್ಯಮ (=ಮುಟ್ಟಿಸುವ ಬಗೆ, ಸಾಧನ) ಒಂದೇ:ವಾಕ್ ಅಥವಾ ಮಾತು.

ಪಶುವಿಗೂ ಮಾನವನಿಗೂ ಇರುವ ಮುಖ್ಯ ವ್ಯತ್ಯಾಸ ಮಾನವನ ಜ್ಞಾನ ಎಂದು ಹೇಳಿತಷ್ಟೆ. ಈ ಜ್ಞಾನಲಾಭ ಅವನ ಜ್ಞಾನೇಂದ್ರಿಯಗಳ ಮೂಲಕ, ವಿಶೇಷವಾಗಿ ಕಣ್ಣಿನ ಎಂದರೆ ದರ್ಶನೇಂದ್ರಿಯದ ಮೂಲಕ ಉಂಟಾಗತಕ್ಕದ್ದು. ಪ್ರಾಚೀನ ಋಷಿಗಳು ಬಾಹ್ಯ ಪ್ರಪಂಚವನ್ನು ಹೊರಗಣ್ಣಿನಿಂದ (ಬಾಹ್ಯ ಚಕ್ಷುಸ್ಸು) ನೋಡಿ ('ದರ್ಶನ' ಮಾಡಿ) ವಿಚಾರ ಶಕ್ತಿಯಿಂದ (ಎಂದರೆ ಬುದ್ಧಿ ಶಕ್ತಿಯಿಂದ) ಅದರ ರಹಸ್ಯವನ್ನು ಭೇದಿಸಿ, ಒಳಗಣ್ಣಿನಿಂದ (ಧ್ಯಾನಲಭ್ಯವಾದ ಅಂತರ್ ದೃಷ್ಟಿಯಿಂದ) 'ಸತ್ಯದರ್ಶನ' ಮಾಡಿದರು. ಹೀಗೆ, ಸತ್ಯವನ್ನು ಕಂಡು (ಕಾಣ್) ಕೊಂಡವರಾದ್ದರಿಂದ ಅವರು ದಾರ್ಶನಿಕರು, ದ್ರಷ್ಟಾರರು (ನೋಡಿದವರು, ನೋಡಿ ತಿಳಿದವರು, ಜ್ಞಾನಿಗಳು) ಎನ್ನಿಸಿಕೊಂಡರು; ಅವರು ಕಂಡ ಸತ್ಯಸ್ವರೂಪದ ವಿವಿಧ ಮುಖಗಳ ಸಮಷ್ಟಿಯೆ ದರ್ಶನ (ಕಾಣ್ಕೆ, ನೋಟ). ಬಹು ದೀರ್ಘಕಾಲದ ಕಾಣ್ಕೆಯ, ವಿಚಾರ ಮಥನದ, ಪರಿಣಾಮ ಫಲ ಈ 'ದರ್ಶನ'. ಸಾರಭೂತವಾದ ಜ್ಞಾನನಿಧಿಯಾದ ಈ ದರ್ಶನ ವೇದ (ತಿಳುವಳಿಕೆ, ಜ್ಞಾನ<ವಿದ್=ತಿಳಿ). ಈ ವೇದಗಳನ್ನು* ಯಾರೂ ಬರೆದಿಡಲಿಲ್ಲ, ಯಾರೊಬ್ಬರ ರಚನೆಯಲ್ಲ; ಯಾವ

---

* ನಮ್ಮವರ ನಂಬಿಕೆಯ ಪ್ರಕಾರ ವೇದಗಳು (ವೇದತ್ರಯೀಃ ಋಗ್ವೇದ, ಯಜುರ್ವೇದ, ಸಾಮವೇದ; ಆಮೇಲೆ ಸೇರಿದ್ದು, ಅಥರ್ವಣವೇದ) ಸೃಷ್ಟಿಕರ್ತನಾದ ಬ್ರಹ್ಮನಿಂದ ಪ್ರಕಟವಾಗಿ, ಋಷಿಗಳಿಗೆ ಕೇಳಿಬಂದವು. ಆದ್ದರಿಂದ ಇವುಗಳಿಗೆ ಶ್ರುತಿ ಎಂದು ಹೆಸರು. ಋಷಿಗಳು ದ್ರಷ್ಟಾರರೇ ಹೊರತು ಸ್ರಷ್ಟಾರರು (ಸೃಷ್ಟಿ ಮಾಡಿದವರು) ಅಲ್ಲ; ಕರ್ತಾರರಲ್ಲ.

ಧರ್ಮಗ್ರಂಥಗಳನ್ನೂ ಇತರ ಶಾಸ್ತ್ರಗ್ರಂಥಗಳನ್ನೂ ಪುರಾಣಗಳನ್ನೂ ಆಧಾರವಾಗಿಟ್ಟುಕೊಂಡು, ಜೈನ ಧರ್ಮ ಪ್ರಚಾರವನ್ನೇ ಮುಖ್ಯ ಗುರಿಯಾಗಿಟ್ಟುಕೊಂಡು, ಕನ್ನಡದಲ್ಲಿ ಶಾಸ್ತ್ರ ಗ್ರಂಥಗಳನ್ನೂ ಕಾವ್ಯಗಳನ್ನೂ ರಚಿಸುತ್ತ ಬಂದರು. ಹೀಗೆ ಕನ್ನಡದಲ್ಲಿ ಶಾಸ್ತ್ರಗ್ರಂಥ ರಚನೆಯನ್ನು ಪ್ರಾರಂಭಿಸಿ, ಬೆಳೆಸಿದವರು ಜೈನರು. ನಮಗೆ ಈವರೆಗೆ ದೊರಕಿರುವ ಕನ್ನಡ ಗ್ರಂಥರಾಶಿಯಲ್ಲಿ ಮೊದಲನೆಯ ಗ್ರಂಥ ಮಾತ್ರವಲ್ಲದೆ ಮೊದಲನೆಯ ಶಾಸ್ತ್ರ ಗ್ರಂಥವೆಂದು ಸಾಹಿತ್ಯ ಚರಿತ್ರೆಯಲ್ಲಿ ಪ್ರಖ್ಯಾತವಾಗಿರುವ 'ಕವಿರಾಜಮಾರ್ಗ'ವನ್ನು ಬರೆದವನು ಜೈನ ಮತೀಯನಾದ ಶ್ರೀ ವಿಜಯ.

೧೨ನೆಯ ಶತಮಾನದಲ್ಲಿ ಬಸವಣ್ಣನವರ ಕಣ್ಣಿಟ್ಟಿನಲ್ಲಿ ವೀರಶೈವ ಧರ್ಮದ ಉದಯವಾಗಿ, ಅದರ ತತ್ತ್ವಗಳ ಪ್ರಚಾರ ಕಾರ್ಯ ಬಿರುಸಿನಿಂದ ಸಾಗತೊಡಗಿತು. ವೇದೋಪನಿಷತ್ತುಗಳ ಜ್ಞಾನಕಾಂಡದಿಂದ ಜೀವಸತ್ತ್ವವನ್ನು ಪಡೆದುಕೊಂಡಿದ್ದರೂ, ತನ್ನದೇ ಆದ ನೆಲೆಯನ್ನೂ ಬೆಲೆಯನ್ನೂ ಹೊಂದಿದ್ದ ವೀರಶೈವ ಧರ್ಮ ಹೊಸ ಬಗೆಯ ಸಾಹಿತ್ಯ ಸೃಷ್ಟಿಗೆ ದಾರಿ ಮಾಡಿಕೊಟ್ಟಿತು. ಹೆಣ್ಣು ಗಂಡು ಎಂಬ ಲಿಂಗ ಭೇದ, ಹಾರುವ ಹೊಲೆಯ ಕಮ್ಮಾರ ಬಡಗಿ ಎಂಬಿವೇ ಮುಂತಾದ ಹುಟ್ಟು, ಕಸುಬುಗಳಿಗೆ ಸಂಬಂಧಿಸಿದ ಭೇದಗಳು – ಇವೆಲ್ಲವನ್ನೂ ತೊಡೆದು ಹಾಕಿ, ಎಲ್ಲರೂ ಸಮಾನರು ಎಂಬ ತತ್ತ್ವದ ಆಧಾರದ ಮೇಲೆ ತನ್ನ ಅಂತರಂಗದಲ್ಲಿಯೇ ಶಿವನಲ್ಲಿ ಒಂದಾಗುವ ಶಿವಯೋಗ ಅಥವಾ ಶಿವಾನುಭವದ ಹಾದಿಯನ್ನು ತೋರಿಸುವುದೇ ಈ ಹೊಸ ಧರ್ಮದ ಮುಂದಾಳುಗಳಾದ ಶಿವಶರಣರ ಗುರಿಯಾಗಿತ್ತು. ವೇದ ಉಪನಿಷತ್ತುಗಳು ಬೋಧಿಸಿದ್ದ, ಎಲ್ಲ ಕಾಲಕ್ಕೂ ಎಲ್ಲರೂ ಒಪ್ಪಿಕೊಂಡು ತಮ್ಮ ಇಹಪರ ಸುಖವನ್ನು ಸಾಧಿಸಬಹುದಾದಂತಹ ನಿತ್ಯಸತ್ಯಗಳನ್ನು ತಮ್ಮ ಅನುಭವದ ಒರೆಗಲ್ಲಿನಲ್ಲಿ ಪರೀಕ್ಷೆ ಮಾಡಿ, ಅನುಭವಕ್ಕೆ ಬಂದ ವಿಚಾರಗಳನ್ನು ಸಾಮಾನ್ಯ ಜನಕ್ಕೆ ಅರ್ಥವಾಗುವಂತಹ ತಿಳಿಯಾದ ಚೆನ್ನುಡಿಗಳಲ್ಲಿ ಅವರು ತಿಳಿಯ ಹೇಳಿದರು. ಜ್ಞಾನ ಮತ್ತು ಅನುಭವಗಳ ಜೇನನ್ನು ತುಂಬಿಕೊಂಡು ಹಾಡಿನಂತೆ ಇಂಪಾದ ಶಿವಶರಣರ ನುಡಿತುಂಬಿಗಳು ಅವರು. ವೇದಕಾಲದ ಋಷಿಗಳಂತೆ, ಬರೆದಿಡದೆ ಬಾಯಿಮಾತಾಗಿ ಹೇಳಿದ್ದರಿಂದ, ಹಾಡಿದ್ದರಿಂದ 'ವಚನ'ಗಳು ಎಂದು ಪ್ರಸಿದ್ಧವಾದವು. ಹೇಗೆ ನುಡಿದರೆ ನಡೆದರೆ ಇಹಕ್ಕೆ ಪರಕ್ಕೆ ಒಳಿತು ಎಂದು ಈ ವಚನಗಳು ಹೃದಯಂಗಮವಾಗಿ ಬೋಧ ಮಾಡುವುದರಿಂದ 'ಸಾಹಿತ್ಯ'ದ ಗುಣವನ್ನು ಹೊಂದಿ 'ವಚನ ಧರ್ಮ', 'ವಚನ ಶಾಸ್ತ್ರ' ಎಂದು ಹೆಸರಾದವು.

ಶಾಸ್ತ್ರಗ್ರಂಥಗಳೆಲ್ಲವೂ ಬಹುಮಟ್ಟಿಗೆ ಶ್ಲೋಕ ರೂಪದಲ್ಲಿಯೇ ರಚಿತವಾಗಿವೆ.

ಭಾರತದ ಜನಜೀವನದಲ್ಲಿ ಬಹಳ ಕಾಲದವರೆಗೆ ವೇದಗಳ ಪ್ರಾಬಲ್ಯವೇ ನೆಲಸಿತ್ತು. ಕಾಲಕ್ರಮದಲ್ಲಿ ವೇದಗಳ ಜ್ಞಾನ ಭಾಗಕ್ಕೆ ಬೆಲೆ ಕಡಿಮೆಯಾಗಿ, ಅದು ವಿಧಿಸಿದ ಯಜ್ಞಯಾಗಾದಿ ಕರ್ಮಗಳಿಗೇ ಹೆಚ್ಚು ಬೆಲೆ ಕೊಡುವುದು ರೂಢಿಯಾಯಿತು. ದೇವತೆಗಳ ಸಂಖ್ಯೆಯೂ, ಅವರ ಆರಾಧನೆಯೂ, ಅದರ ಪರಿಣಾಮವಾಗಿ ನಿಷ್ಪ್ರಯೋಜಕವಾದ ಆಚಾರಗಳೂ ಮೂಢ ಭಕ್ತಿಯೂ ಬೆಳೆಯತೊಡಗಿದವು. ಯಜ್ಞದ ಹೆಸರಿನಲ್ಲಿ ಪ್ರಾಣಿ ಹಿಂಸೆ ನಡೆಯತೊಡಗಿತು. ಹೀಗೆ, ವೈದಿಕ ಸಂಸ್ಕೃತಿಯ ತತ್ತ್ವದ ನೆಲಗಟ್ಟು ಸಡಿಲವಾಗಿ ಅದರ ಕಟ್ಟಡ ಶಿಥಿಲವಾಗತೊಡಗಿತು. ವೈದಿಕ ಸಂಸ್ಕೃತಿಯನ್ನು ಪ್ರತಿಭಟಿಸಿ ಬುದ್ಧನು ಬೌದ್ಧಮತವನ್ನೂ ವರ್ಧಮಾನ ಮಹಾವೀರನು ಜೈನ ಮತವನ್ನೂ ಪ್ರಚಾರ ಮಾಡಿದರು. ತಮ್ಮ ಪ್ರಚಾರ ಕಾರ್ಯದಲ್ಲಿ ಅವರು ಸಾಮಾನ್ಯ ಜನರ ಭಾಷೆಗಳಾಗಿದ್ದ ಪ್ರಾಕೃತ, ಅಪಭ್ರಂಶ, ಪಾಳಿ – ಇವನ್ನು ಬಳಸಿದರು. ಅವರು ಪ್ರಚಾರ ಮಾಡಿದ ತತ್ತ್ವ ವಿಚಾರಗಳು ಕಾಲ ಕ್ರಮದಲ್ಲಿ ಸಾಮಾನ್ಯವಾಗಿ ಮೇಲೆ ಹೇಳಿದ ಜನ ಭಾಷೆಗಳಲ್ಲಿ ಆಯಾ ಮತದ 'ಶಾಸ್ತ್ರ' ಗ್ರಂಥಗಳಾಗಿ ರೂಪುಗೊಂಡವು; ಸಂಸ್ಕೃತದಲ್ಲೂ 'ಶಾಸ್ತ್ರ' ಗ್ರಂಥಗಳು ರಚಿತವಾದವು.

ಜೈನ, ಬೌದ್ಧ ಧರ್ಮಗಳು ಭಾರತದಲ್ಲೆಲ್ಲಾ ಹರಡಿ, ವೈದಿಕ ಧರ್ಮವು ಖಿಲವಾಗುತ್ತಿದ್ದ ಕಾಲದಲ್ಲಿ ಅದರ ಅವನತಿಯನ್ನು ತಡೆಗಟ್ಟಿದವರು ಶಂಕರಾಚಾರ್ಯರು. ಪ್ರಸ್ಥಾನತ್ರಯ ಎಂದು ಪ್ರಸಿದ್ಧವಾದ ಬ್ರಹ್ಮ ಸೂತ್ರಗಳು, ಉಪನಿಷತ್ತು, ಭಗವದ್ಗೀತೆ – ಇವುಗಳಿಗೆ ಸಂಸ್ಕೃತದಲ್ಲಿ ಅದ್ವೈತ ಪರವಾಗಿ ಭಾಷ್ಯ (ಎಂದರೆ ವಿವರಣೆ) ಬರೆದರು. ಅವರ ತರುವಾಯ ಅದ್ವೈತ ವೇದಾಂತವನ್ನು ವಿವರಿಸುವ ಶಾಸ್ತ್ರ ಗ್ರಂಥಗಳ ಪರಂಪರೆ ನಿರ್ಮಾಣವಾಯಿತು. ವೈದಿಕ ಧರ್ಮದ ಚೌಕಟ್ಟಿನಲ್ಲಿಯೇ ಅದ್ವೈತದ ನಿಲುವನ್ನು ಒಪ್ಪದ ದ್ವೈತ ವಿಶಿಷ್ಟಾದ್ವೈತ ಪಂಥಗಳು ಹುಟ್ಟಿಕೊಂಡುವು. ಈ ಪಂಥಗಳ ಧಾರ್ಮಿಕ ಗ್ರಂಥಗಳೂ ಸಂಸ್ಕೃತದಲ್ಲಿಯೇ ರಚಿತವಾದುವು.

ಕನ್ನಡ ನಾಡಿನಲ್ಲಿ ಕ್ರಿ.ಶ. ೫ನೆಯ ಶತಕಕ್ಕೂ ಹಿಂದಿನಿಂದಲೇ ಜೈನ ಧರ್ಮ ಪ್ರಚಾರವಾಗತೊಡಗಿತು. ಕನ್ನಡ ನಾಡಿನ ಜೈನ ವಿದ್ವಾಂಸರು ಮೊದಮೊದಲಿನಲ್ಲಿ ಸಂಸ್ಕೃತ ಪ್ರಾಕೃತಗಳಲ್ಲಿ ಧಾರ್ಮಿಕ ಗ್ರಂಥಗಳನ್ನು ರಚಿಸತೊಡಗಿದರೂ, ಧರ್ಮ ಪ್ರಸಾರಕ್ಕೆ ಜನರ ಭಾಷೆಯಾದ ಕನ್ನಡವನ್ನು ಬಳಸಿಕೊಳ್ಳುವ ಅಗತ್ಯ ಅವರಿಗೆ ಕಂಡು ಬಂದಿತು. ಅವರು ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿದ್ದ ಜೈನ

ಹರಿಹರರಲ್ಲಿ ಅಭೇದ ಭಾವನೆಯಿರುವುದರಿಂದ 'ವೀರವೈಷ್ಣವ'ಕ್ಕಾಗಲಿ 'ವೀರಶೈವ'ಕ್ಕಾಗಲೀ ಎಡೆಯಿಲ್ಲ. ಹೀಗಿರುವುದರಿಂದ, ಅದರಲ್ಲಿ ಪ್ರಚಾರದೃಷ್ಟಿ ಕಡಿಮೆ. ಅದ್ವೈತ ಮತದಲ್ಲಿ ಭಕ್ತಿಗೆ ಪ್ರಾಧಾನ್ಯ ಕೊಟ್ಟ ಭಾಗವತ ಪಂಥದವರು (ಉದಾ: 'ಜಗನ್ನಾಥ ವಿಜಯ'ದ ರುದ್ರಭಟ್ಟ, ಕುಮಾರವ್ಯಾಸ) ಭಕ್ತಿರಸ ಪ್ರಧಾನವಾದ ಕಾವ್ಯಗಳನ್ನು ರಚಿಸಿದರು; ಹರಿದಾಸರ ಮಾದರಿಯಲ್ಲಿ ಕೀರ್ತನೆಗಳನ್ನು ಬರೆದರು; ಅದ್ವೈತವೇದಾಂತವನ್ನು ನೇರವಾಗಿ ಬೋಧಿಸುವ ಗ್ರಂಥಗಳೂ ಹುಟ್ಟಿಕೊಂಡುವು. ವಿಶಿಷ್ಟಾದ್ವೈತವು ತಮಿಳು ನಾಡಿನಲ್ಲಿ ಹುಟ್ಟಿ ಅಲ್ಲಿ ವಿಶೇಷವಾಗಿ ಪ್ರಚಾರಕ್ಕೆ ಬಂದ ಕಾರಣ, ಕನ್ನಡ ಭಾಷೆಯ ಮೇಲೆ ಅದರ ಪ್ರಭಾವ ಬಹುಕಾಲದವರೆಗೆ ಗಮನಾರ್ಹವಾಗಿ ಆಗಲಿಲ್ಲ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ವಿಶಿಷ್ಟಾದ್ವೈತ ಮತಕ್ಕೆ ರಾಜಾಶ್ರಯ ದೊರೆತದ್ದರಿಂದ ಅದರ ಪ್ರಭಾವಕ್ಕೆ ಒಳಗಾದ ಗ್ರಂಥಗಳು ಕನ್ನಡದಲ್ಲಿ ಕಾಣಿಸಿಕೊಂಡವು.

ಈ ಸಂದರ್ಭದಲ್ಲಿ, ಮತ ಧರ್ಮ ಗ್ರಂಥಗಳ ರಚನೆಗೂ ರಾಜಾಶ್ರಯಕ್ಕೂ ಬೇರ್ಪಡಿಸಲಾಗದಂಥ ಸಂಬಂಧವೇನೂ ಇಲ್ಲವೆಂಬುದನ್ನು ಗಮನಿಸುವುದು ಉಚಿತ. ರಾಷ್ಟ್ರಕೂಟ ವಂಶದ ದೊರೆಗಳು ನೃಪತುಂಗನ ಕಾಲದವರೆಗೂ ವೈದಿಕ ಮತಾನುಯಾಯಿಗಳಾಗಿದ್ದರೂ, ಜೈನ ಗ್ರಂಥಕಾರರಿಗೆ ಪ್ರೋತ್ಸಾಹವಿತ್ತರು. ಹೊಯ್ಸಳರ ಕಾಲದಲ್ಲಿ ಎಲ್ಲ ಮತಧರ್ಮಗಳವರೂ ಗ್ರಂಥರಚನೆ ಮಾಡಿದ್ದಾರೆ. ವಿಜಯನಗರದರಸರು ವೈದಿಕ ಮತಾವಲಂಬಿಗಳಾಗಿದ್ದರೂ, ೧೫–೧೬ನೆಯ ಶತಮಾನಗಳಲ್ಲಿ ವೀರಶೈವ ಮತ ಸಂಬಂಧವಾದ ಶಾಸ್ತ್ರಗ್ರಂಥಗಳು ಹೆಚ್ಚಿನ ಪ್ರಮಾಣದಲ್ಲಿ ಸೃಷ್ಟಿಯಾದುವು. ಈ ನಿದರ್ಶನಗಳು, ಕರ್ನಾಟಕ ರಾಜವಂಶಗಳವರ ಉದಾರವಾದ ಧಾರ್ಮಿಕ ದೃಷ್ಟಿಯನ್ನು ಎತ್ತಿ ಹಿಡಿಯುತ್ತವೆ. "ಕಸವರಮೆಂಬುದು ನೆರೆ ಸೈರಿಸಲಾರ್ಪೊಡೆ ಪರವಿಚಾರಮಂ ಧರ್ಮಮುಮಂ" ('ಇತರರ ವಿಚಾರಗಳನ್ನೂ ಧರ್ಮವನ್ನೂ ಸಹಿಸಿಕೊಳ್ಳುವುದು ಸಾಧ್ಯವಾದರೆ ಅಂಥ ನಡತೆ ಚಿನ್ನ') ಚಿನ್ನದಂಥ ಈ ಮಾತನ್ನು ಹೇಳಿದವನು ನೃಪತುಂಗನ ಆಶ್ರಯದಲ್ಲಿ 'ಕವಿರಾಜಮಾರ್ಗ'ವನ್ನು ರಚಿಸಿದ ಶ್ರೀವಿಜಯ.

### ಲೌಕಿಕ ಶಾಸ್ತ್ರ ಗ್ರಂಥಗಳು

ಈವರೆಗೆ, ಧಾರ್ಮಿಕ ಹಿನ್ನೆಲೆಯನ್ನು ಸ್ವಲ್ಪ ವಿಸ್ತಾರವಾಗಿಯೇ ವಿವರಿಸಿದ್ದಕ್ಕೆ ಮುಖ್ಯ ಕಾರಣವೇನೆಂದರೆ, ನಮ್ಮ ದೇಶದ ಜನಜೀವನದಲ್ಲಿ ಮತಧರ್ಮ ಅತ್ಯಂತ ಪ್ರಭಾವಶಾಲಿಯಾದ ಪಾತ್ರವನ್ನು ವಹಿಸಿದೆ. ಪಂಪ, ಪೊನ್ನ, ರನ್ನ,

ಕರ್ನಾಟಕದಲ್ಲಿ ಮಧ್ವಾಚಾರ್ಯರೂ ತಮಿಳುನಾಡಿನಲ್ಲಿ ಶ್ರೀ ರಾಮಾನುಜಾಚಾರ್ಯರೂ ತಮ್ಮ ತಮ್ಮ ಮತ ಸಿದ್ಧಾಂತಗಳನ್ನು ಸ್ಥಾಪಿಸಿದ ಮೇಲೆ, ಬಹಳ ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿದ್ದ ಭಾಗವತ ಧರ್ಮದ ವೈಷ್ಣವ ಭಕ್ತಿಗೆ ಪುಟವೇರಿತು. ಇದರ ಪರಿಣಾಮವಾಗಿ, ವೈಷ್ಣವ ಭಕ್ತಿ ಪ್ರಧಾನವಾದ ವೈದಿಕ ಧರ್ಮವನ್ನು ಪುನರುಜ್ಜೀವನಗೊಳಿಸುವ, ಪ್ರಚಾರ ಮಾಡುವ ದೃಷ್ಟಿ ವೈದಿಕ ಮತ ಪಂಥಗಳ ಜನರಲ್ಲಿಯೂ ಉಂಟಾಯಿತು. ಭಕ್ತಿ ಪ್ರಧಾನವಾದ ಕೀರ್ತನೆಗಳೂ ಕಾವ್ಯಗಳೂ ರಚಿತವಾಗತೊಡಗಿದುವು. ಇವುಗಳನ್ನು ರಚಿಸಿದವರೆಲ್ಲಾ ಸಾಧಾರಣವಾಗಿ ಬ್ರಾಹ್ಮಣರು. ಈ ಬ್ರಾಹ್ಮಣ ಸಾಹಿತ್ಯದಲ್ಲಿ ಮತ ತತ್ತ್ವಗಳನ್ನು ನೇರವಾಗಿ ವಿವರಿಸುವ ಗ್ರಂಥಗಳು ಬಹುಮಟ್ಟಿಗೆ ಸಂಸ್ಕೃತದಲ್ಲಿ ರಚಿತವಾಗುತ್ತಿದ್ದುವು. ವ್ಯಾಸರಾಯರ (೧೬ನೆಯ ಶತಮಾನ) ಕಾಲದಲ್ಲಿ ಈ ಬಗೆಯ ಧಾರ್ಮಿಕ ಸಾಹಿತ್ಯಕ್ಕೆ ಬೆಂಬಲ ಕೊಡುತ್ತಿದ್ದ ಪಂಗಡ 'ವ್ಯಾಸಕೂಟ'ವೆಂದು ಪ್ರಸಿದ್ಧವಾಯಿತು. ಮಾಧ್ವಮತ ತತ್ತ್ವಗಳನ್ನೂ ಹರಿಭಕ್ತಿಯನ್ನೂ ಸಾಮಾನ್ಯ ಜನಕ್ಕೆ ಕನ್ನಡದಲ್ಲಿ ಪ್ರಚಾರ ಮಾಡುವುದಕ್ಕೆಂದೇ 'ದಾಸ ಕೂಟ' ವ್ಯಾಸರಾಯರ ಕಾಲದಲ್ಲಿ ರೂಪುಗೊಂಡಿತು. ಹರಿದಾಸರು ಹಿಂದೆಯೂ ಇದ್ದರೂ, ವ್ಯಾಸರಾಯರ ಶಿಷ್ಯರಾದ ಪುರಂದರದಾಸರ ಕಾಲದಿಂದ ಹರಿದಾಸ ಸಾಹಿತ್ಯ ಒಂದು ವ್ಯವಸ್ಥಿತವಾದ ರೀತಿಯಲ್ಲಿ ಬೆಳೆಯತೊಡಗಿತು. ವಚನ ಸಾಹಿತ್ಯದಲ್ಲಿ ಹಾಡಿನ ಛಾಯೆ ಕಂಡು ಬಂದರೂ ಅವುಗಳು ಹಾಡುಗಳಲ್ಲ; ಪುರಂದರದಾಸರು ರೂಢಿಯಲ್ಲಿದ್ದ ಕೀರ್ತನೆಯ ಪ್ರಕಾರಕ್ಕೆ ಲಕ್ಷಣಬದ್ಧವಾದ ಸಂಗೀತ ಶಾಸ್ತ್ರದ ಚೌಕಟ್ಟನ್ನು ಒದಗಿಸಿ, ಕರ್ನಾಟಕ ಸಂಗೀತ ಪಿತಾಮಹರೆಂದು ಪ್ರಖ್ಯಾತರಾಗಿದ್ದಾರೆ. ಉಪನಿಷತ್ತಿನ ಸಾರವನ್ನು ಒಳಗೊಂಡು ಅವರ ರಚನೆಗಳು 'ಪುರಂದರೋಪನಿಷತ್ತು' ಎಂದು ಮನ್ನಣೆ ಪಡೆದಿವೆ. ಹರಿದಾಸ ಸಾಹಿತ್ಯ ಸಂಗೀತ ಶಾಸ್ತ್ರಕ್ಕೆ ಒತ್ತಾಸೆ ಕೊಟ್ಟ ಪರಿಣಾಮವಾಗಿ, ಸಂಗೀತ ಶಾಸ್ತ್ರಗ್ರಂಥಗಳು ರಚನೆಯಾದುವು. ಇವು ಸಂಸ್ಕೃತದಲ್ಲಿ ಇರುವುದೇ ಹೆಚ್ಚು; ಕನ್ನಡದಲ್ಲಿ ವಿರಳ. ಆದರೆ, ಗ್ರಂಥಕಾರರಲ್ಲಿ ಅನೇಕ ಮಂದಿ ಕನ್ನಡಿಗರಾಗಿದ್ದುದು ಗಮನಿಸಬೇಕಾದ ಸಂಗತಿ.

ವೈದಿಕ ಧರ್ಮದ ಪ್ರಧಾನ ಶಾಖೆಗಳಾದ ಅದ್ವೈತ ಮತ್ತು ವಿಶಿಷ್ಟಾದ್ವೈತ ಮತಗಳ ಬಗೆಗೆ ಎರಡು ಮಾತು ಹೇಳಬೇಕಾದದ್ದು ಅಗತ್ಯ. ಅದ್ವೈತದಲ್ಲಿ ಸಗುಣೋಪಾಸನೆ (ಎಂದರೆ ಆಕಾರವುಳ್ಳ ಪರಮಾತ್ಮನ ಆರಾಧನೆ) ನಿರ್ಗುಣೋಪಾಸನೆ (ಎಂದರೆ ನಿರಾಕಾರ ಪರಮಾತ್ಮನ ಅನುಭವ ಸಾಧನೆಗೆ) ಒಂದು ಮಾರ್ಗವೇ ಹೊರತು, ಅದೇ ಗುರಿಯಲ್ಲ; ಭಕ್ತಿಗಿಂತ ಜ್ಞಾನಕ್ಕೇ ಪ್ರಾಧಾನ್ಯ;

ಶಾಸ್ತ್ರಗ್ರಂಥಗಳೆಂದು ವಿಂಗಡಿಸಬಹುದು. ಶಾಸ್ತ್ರವಾಗಲಿ ಕಾವ್ಯವಾಗಲಿ, ಎಲ್ಲ ಶ್ರೇಷ್ಠಗ್ರಂಥಗಳೂ ಮನುಷ್ಯನ 'ಹಿತ'ವನ್ನೇ ಸಾಧಿಸುವುದರಿಂದ 'ಸಾಹಿತ್ಯ' ಎಂಬ ಮಾತಿಗೆ ಹೇಗೆ ಅರ್ಹವಾಗುತ್ತವೆ ಎಂಬುದನ್ನು ಹಿಂದೆಯೇ ನೋಡಿದ್ದೇವೆ.

ಕಾವ್ಯದಂತೆ ಆನಂದವನ್ನು ಕೊಡುವ ಬೇರೆಯ ಕಲೆಗಳೂ ಇವೆ. ಅವುಗಳ ನಿರ್ಮಾಣ ಕಾರ್ಯದಲ್ಲಿ ಮಾತು (ವಾಕ್) ಉಪಯೋಗವಾಗುವುದಿಲ್ಲ. ಚಿತ್ರಕಲೆಯಾದರೆ ರೇಖೆ, ಬಣ್ಣ; ನಾಟ್ಯ ನೃತ್ಯಗಳಾದರೆ ಅಭಿನಯ; ಸಂಗೀತವಾದರೆ ಸ್ವರಗಳು. ಇವುಗಳು ಸಾಹಿತ್ಯದಂತೆಯೇ ಮನುಷ್ಯನ ಭಾವನೆಗಳನ್ನು ಪ್ರಕಾಶಪಡಿಸುವ ಕಲೆಗಳು; ಸಾಹಿತ್ಯ ಗ್ರಂಥಗಳಂತೆ ತಿಳಿವಳಿಕೆಯನ್ನು ನೀಡಲಾರವು. ಇವುಗಳ ಸ್ವರೂಪವನ್ನೂ ಲಕ್ಷಣವನ್ನು ನಿಯಮಗಳನ್ನೂ ತಿಳಿಸುವ ಗ್ರಂಥಗಳೂ ಉಂಟು. ಈ ಗ್ರಂಥಗಳೂ ಶಾಸ್ತ್ರಗ್ರಂಥಗಳೆ.

ನಿತ್ಯದ ಬದುಕಿಗೆ ಉಪಯುಕ್ತವಾದ ಎಷ್ಟೋ ಕಲೆಗಳಿವೆ. ಇವುಗಳಲ್ಲಿ ಹಲಕೆಲವು ಹೆಚ್ಚಾಗಿಯೋ ಕಡಿಮೆಯಾಗಿಯೋ ಮನಸ್ಸಿಗೆ ಸಂತೋಷವನ್ನು ಕೊಡತಕ್ಕವು. ಉಪಯುಕ್ತತೆಯ ಅಂಶದಲ್ಲಿಯೂ ಹೆಚ್ಚು ಕಡಿಮೆಗಳುಂಟು. ನಮ್ಮ ಪೂರ್ವಿಕರು ಇವುಗಳನ್ನು ವಿದ್ಯೆಗಳೆಂದು ಕರೆದು; ಇವುಗಳನ್ನು ೬೪ ಎಂದು ಪಟ್ಟಿ ಮಾಡಿದರು; ಚತುಷಷ್ಟಿ ಕಲೆಗಳು ಎಂದರು. ಉದಾಹರಣೆಗೆ, ಬಟ್ಟೆ ಹೊಲಿಯುವ ಕಲೆ; ಪುಸ್ತಕ ವಾಚನ ಕಲೆ – ಇವುಗಳಲ್ಲಿ ಕೆಲವು ಕಲೆಗಳ ಸಂಬಂಧವಾಗಿ ಶಾಸ್ತ್ರ ಗ್ರಂಥಗಳು ಹುಟ್ಟಿದರೂ, ಒಟ್ಟಿನ ಮೇಲೆ ಇವೆಲ್ಲವೂ ಪ್ರಯೋಗ ಪ್ರಧಾನವಾದವು. ಎಂದರೆ, ಮಾಡಿದ್ದನ್ನು ನೋಡಿ, ಮಾಡಿ ಮಾಡಿ, ಕಲಿಯಬೇಕಾದವು. ಕಲೆಗಳಲ್ಲಿ ಈ 'ಮಾಡುವುದು' ಎಂದರೆ ಸೃಷ್ಟಿಕಾರ್ಯ ಮುಖ್ಯ. ಈ ಮಾಡುವುದರಲ್ಲಿ ಮಾಡುವವನ ಹಾಗೂ ಮಾಡಿದ್ದನ್ನು ನೋಡುವವನ ಅಥವಾ ಕೇಳುವವನ ಆನಂದಾನುಭವವೇ ಮುಖ್ಯವಾದರೆ, ಈ ಲಕ್ಷಣವುಳ್ಳ ಕಲೆಗಳನ್ನು ಕುಶಲಕಲೆ ಅಥವಾ ಲಲಿತಕಲೆ (Fine Art) ಎಂದು ಕರೆಯಬಹುದು; ಈ ದೃಷ್ಟಿಯಿಂದ, ಸೃಷ್ಟಿಕಾರ್ಯವುಳ್ಳ ಕಾವ್ಯ ಒಂದು ಲಲಿತಕಲೆ. ಸೃಷ್ಟಿಕಾರ್ಯವಿಲ್ಲದ ಶಾಸ್ತ್ರಗಳು ಕಲೆಯಲ್ಲ. ಸೃಷ್ಟಿಕಾರ್ಯವುಳ್ಳ ಕಲೆಗಳಿಗೆ ಮಾತು, ಬಣ್ಣ, ನಾದ (ಸ್ವರ) ಮತ್ತು ಅನೇಕ ಪದಾರ್ಥಗಳು ಉಪಯೋಗವಾಗುತ್ತವೆ. ಶಾಸ್ತ್ರಗಳ ನಿರೂಪಣೆಗೆ ಮಾತೊಂದೇ ಉಪಯೋಗಕ್ಕೆ ಬರತಕ್ಕದ್ದು. ಜ್ಞಾನೇಂದ್ರಿಯಗಳ ಮೂಲಕ ಪಡೆದ ಅನುಭವವನ್ನು ಶಾಸ್ತ್ರಗಳು ಮಾತಿನ ಮೂಲಕ ತಿಳಿಸುತ್ತವೆ,ಅಥವಾ ಬೋಧಿಸುತ್ತವೆ. ಬುದ್ಧಿಪೂರ್ವಕ ವಿಚಾರ ದೃಷ್ಟಿಯಿಂದ ನೋಡುವುದು (ದರ್ಶನ) ಮತ್ತು ಅದರ ಫಲವಾದ ವಸ್ತುಜ್ಞಾನವನ್ನೋ ಅಧ್ಯಾತ್ಮ ಜ್ಞಾನವನ್ನೊ ಹೇಳುವುದು

ಹರಿಹರ, ರಾಘವಾಂಕ, ಕುಮಾರವ್ಯಾಸ, ಚಾಮರಸ, ರತ್ನಾಕರ, ಷಡಕ್ಷರಿ ಮುಂತಾದ ಶ್ರೇಷ್ಠ ಕನ್ನಡ ಕವಿಗಳ ಕಾವ್ಯಗಳಿಗೆ ಧರ್ಮವೇ ಸ್ಫೂರ್ತಿಯ ಸೆಲೆ; ಅವರ ಕೃತಿಗಳಲ್ಲಿ – ಪುರಾಣ ಕಾವ್ಯಗಳಲ್ಲಿ – ಕವಿತೆಯೂ ಮತಧರ್ಮಕ್ಕೆ ಸಂಬಂಧಪಟ್ಟ ಶಾಸ್ತ್ರ ವಿಚಾರಗಳೂ ಹಾಸು ಹೊಕ್ಕಾಗಿ ನೆಯ್ದುಕೊಂಡಿವೆ. ನಮ್ಮ ಕವಿಗಳ ಈ ದೃಷ್ಟಿಯನ್ನು 'ಅರಿವುದಿಲ್ಲಿ ಕಾವ್ಯ ಧರ್ಮಮಂ ಧರ್ಮಮುಮಂ' ಎಂದು ಪಂಪ ತನ್ನ ಆದಿಪುರಾಣದಲ್ಲಿ ಹೇಳಿರುವ ಮಾತು ಚೆನ್ನಾಗಿ ಪ್ರತಿಬಿಂಬಿಸುತ್ತದೆ. 'ಕಾವ್ಯವನ್ನು ನೆಪವಾಗಿಟ್ಟುಕೊಂಡು ಉಪದೇಶ ಮಾಡಬೇಕು' ಎಂಬುದು, ಪಂಪರಾಮಾಯಣದ ಕವಿಯಾದ ನಾಗಚಂದ್ರನ ನಂಬಿಕೆ. ಕನ್ನಡ ಭಾರತ 'ದ್ವಿಜರಿಗೆ ಪರಮ ವೇದದ ಸಾರ, ಯೋಗೀಶ್ವರರ ವಿಚಾರ, ಮಂತ್ರಿಜನಕ್ಕೆ ಬುದ್ಧಿಗುಣ' ಎಂದು ಕುಮಾರವ್ಯಾಸ ಘೋಷಿಸಿದ್ದಾನೆ; ವೇದಶಾಸ್ತ್ರ, ಯೋಗಶಾಸ್ತ್ರ, ರಾಜನೀತಿಶಾಸ್ತ್ರ ಇವುಗಳ ಬೆರೆಕೆಯನ್ನು ಕಾವ್ಯದುದ್ದಕ್ಕೂ ಗುರುತಿಸಬಹುದು. 'ಅಕ್ಕರಮನರಿಯದ ಒಕ್ಕಲಿಗರಿಗೂ, ವೇದಾಂತ ತತ್ವಗಳನ್ನು ಹೇಳಬೇಕೆಂಬುದು ಚಿಕ್ಕದೇವರಾಯ ಒಡೆಯರ 'ಬಿನ್ನಪ'ದ ಗುರಿ. ಈ ಬಗೆಯ ಸಂಬಂಧಗಳನ್ನು ಧಾರ್ಮಿಕ ಕಾವ್ಯಗಳು ಎಂದು ಕರೆಯಬಹುದು. ಪ್ರತಿಭೆಯುಳ್ಳ ಕವಿಗಳು ಬರೆದ ಇಂಥ ಕಾವ್ಯಗಳಲ್ಲಿ ಕಾವ್ಯಾಂಶವೇ ಹೆಚ್ಚಾಗಿದ್ದರು, ಧಾರ್ಮಿಕ ವಿಚಾರಗಳು ಕಾವ್ಯದ ಭಾಗವಾಗಿ ಬಂದಿರುತ್ತದೆ. ಈ ಧಾರ್ಮಿಕ ಕಾವ್ಯಗಳಿಂದ ಬೇರೆಯಾಗಿ ನಿಲ್ಲುವ, ಸಂತೋಷಕೊಡುವುದನ್ನೆ ಗುರಿಯಾಗುಳ್ಳ ಲೌಕಿಕ ಕಾವ್ಯಗಳೂ ಉಂಟು, ಕಾವ್ಯ ಧಾರ್ಮಿಕವಾಗಲಿ ಲೌಕಿಕವಾಗಲಿ, "ಸಾಹಿತ್ಯಕ್ಕೆ ಸಂಬಂಧಪಟ್ಟ ಶಬ್ದಕೋಶ, ವ್ಯಾಕರಣ ಛಂದಸ್ಸು, ಅಲಂಕಾರ, ರಸ, ಕಾವ್ಯಲಕ್ಷಣ ಮುಂತಾದ ವಿಷಯಗಳನ್ನು ಪ್ರತಿಪಾದಿಸುವ ಗ್ರಂಥಗಳು ಎಷ್ಟೋ ಇವೆ. ಇವು ನ್ಯಾಯವಾಗಿ ಸಾಹಿತ್ಯಕ್ಕೆ ಸೇರುವುದಿಲ್ಲವಾದರೂ, ಸಾಹಿತ್ಯಕ್ಕೆ ಮುಖ್ಯವಾದ ಅಂಗಗಳಾಗಿರುವುದರಿಂದ ಇವುಗಳ ವಿಚಾರವಾಗಿ ತಮ್ಮ ಸಾಹಿತ್ಯ ಚರಿತ್ರೆಯಲ್ಲಿ ಹೇಳಲಾಗುವುದೆಂದು ಬಿ.ಎಂ.ಶ್ರೀಕಂಠಯ್ಯನವರು ಅಭಿಪ್ರಾಯಪಟ್ಟಿದ್ದಾರೆ. ಇವುಗಳನ್ನು ಒಟ್ಟಿನಲ್ಲಿ 'ಸಾಹಿತ್ಯ ಶಾಸ್ತ್ರ' ಗ್ರಂಥಗಳೆಂದೂ, ಕಾವ್ಯಾಂಗಗಳೆಂದೂ ವರ್ಗ ಮಾಡಬಹುದು. ಸಾಹಿತ್ಯಕ್ಕೆ ಸ್ವಲ್ಪವೂ ಸಂಬಂಧಪಡದೆ, ಬಾಹ್ಯ ಪ್ರಪಂಚದ ವಿಚಾರವಾಗಿಯೂ ಮನುಷ್ಯ ಜೀವನದ ವಿವಿಧ ಕಾರ್ಯಕ್ಷೇತ್ರಗಳ ವಿಚಾರವಾಗಿಯೂ ತಿಳಿವಳಿಕೆಯನ್ನು ಕೊಡುವ ಗ್ರಂಥಗಳೂ ಇರುತ್ತವೆ. ಆಧುನಿಕ ವಿಜ್ಞಾನದ ಗ್ರಂಥಗಳೆಲ್ಲವೂ ಈ ಗುಂಪಿಗೆ ಸೇರುತ್ತವೆ. ಇವನ್ನು ಲೌಕಿಕ ಅಥವಾ ವ್ಯಾವಹಾರಿಕ ಶಾಸ್ತ್ರಗ್ರಂಥಗಳೆಂದು ಗುರುತಿಸಬಹುದು. ಕಾವ್ಯದ ಮೂಲಕವಾಗಿಯಲ್ಲದೆ ನೇರವಾಗಿ ಮತಧರ್ಮ ವಿಚಾರಗಳನ್ನು ತಿಳಿಸುವ ಗ್ರಂಥಗಳನ್ನು ಪಾರಮಾರ್ಥಿಕ

ಕಾರ್ಯನಿರ್ವಹಣೆಯ ಕಾಲದಲ್ಲಿ ಒಂದರ ಪ್ರಭಾವ ಇನ್ನೊಂದರ ಮೇಲೆ ಉಂಟಾಗಿ, ಇದರ ಲಕ್ಷಣ ಅದರ ಸ್ವರೂಪದ ಮೇಲೂ ಅದರ ಲಕ್ಷಣ ಇದರ ಸ್ವರೂಪದ ಮೇಲೂ ಕಾಣಿಸಿಕೊಳ್ಳಬಹುದು.

**ಶಾಸ್ತ್ರ – ಕಾವ್ಯ**

ಶಾಸ್ತ್ರಗಳೂ – ಕಾವ್ಯಗಳೂ ಒಂದೇ ಮಾಧ್ಯಮವಾದ ಮಾತನ್ನು ಬಳಸಿಕೊಳ್ಳುವುದರಿಂದಲೂ, ಶಾಸ್ತ್ರಕಾರನಲ್ಲಿ ಕವಿಯ ಸಾಮರ್ಥ್ಯವೂ ಕವಿಯಲ್ಲಿ ಶಾಸ್ತ್ರ ಜ್ಞಾನವೂ ಇರಬಹುದಾದ್ದರಿಂದಲೂ, ಎರಡೂ ಒಂದಕ್ಕೊಂದು ಹೊಂದಿಕೊಂಡು ಮಾನವನ ಕಲ್ಯಾಣವನ್ನು ಸಾಧಿಸಬಲ್ಲವಾಗಿವೆ.

ಈ ಚರ್ಚೆಯ ಸಾರಾಂಶವೆಲ್ಲವೂ ಡಿ.ವಿ.ಗುಂಡಪ್ಪನವರು ಹೇಳಿರುವ ವಾಕ್ಯಗಳಲ್ಲಿ ಬಹು ಚೆನ್ನಾಗಿ ಅಡಕವಾಗಿರುವುದರಿಂದ, ಅವುಗಳನ್ನು ಇಲ್ಲಿ ಎತ್ತಿ ಕೊಡಬಹುದು.

"ವಾಙ್ಮಯದಲ್ಲಿ ಕಾವ್ಯವೆಂದೂ ಶಾಸ್ತ್ರವೆಂದೂ ಸ್ಥೂಲವಾಗಿ ಎರಡು ಜಾತಿಗಳು ಕಾಣಬರುತ್ತವೆ. ಯಾವ ಗ್ರಂಥಗಳು ವಾಚಕರಿಗೆ ಚಿತ್ತಸಮುನ್ನತಿಯನ್ನುಂಟುಮಾಡಿ ಧರ್ಮಾಧರ್ಮ ಜ್ಞಾನ ಪ್ರವೇಶಕ್ಕೆ ದಾರಿ ಬಿಡಿಸುವವೋ ಅವುಗಳನ್ನು ಕಾವ್ಯವರ್ಗಕ್ಕೆ ಸೇರಿಸಬಹುದು. ಯಾವ ಗ್ರಂಥಗಳು ವಾಚಕರ ವಸ್ತುಜ್ಞಾನವನ್ನು ಹೆಚ್ಚು ಮಾಡಿ ಅವರ ಬಹಿರಂಗದ ಆಚಾರ ವ್ಯವಹಾರಗಳಿಗೆ ಸಾಕ್ಷಾತ್ತಾಗಿ ಉಪಯುಕ್ತವಾಗುವ ತಿಳಿವಳಿಕೆಯನ್ನು ಉಂಟುಮಾಡಿಕೊಡುವುವೋ ಅವುಗಳನ್ನು ಶಾಸ್ತ್ರವರ್ಗಕ್ಕೆ ಸೇರಿಸಬಹುದು. ಕಾವ್ಯದ ಕಾರ್ಯಕ್ಷೇತ್ರವು ಮನಸ್ಸು; ಶಾಸ್ತ್ರದ ಕಾರ್ಯಕ್ಷೇತ್ರವು ಬುದ್ಧಿ. ಮನೋಬುದ್ಧಿಗಳೆರಡನ್ನೂ ಸಂಪೂರ್ಣವಾಗಿ ಪ್ರತ್ಯೇಕಗೊಳಿಸಲು ಕೆಲವು ಸಂದರ್ಭಗಳಲ್ಲಿ ಆಗುವುದಿಲ್ಲ. ಅಂತಹ ಸಂದರ್ಭಗಳಿಗೆ ಸಂಬಂಧಪಡುವ ಗ್ರಂಥಗಳು ಕಾವ್ಯ ವರ್ಗಕ್ಕೆ ಸೇರತಕ್ಕವಾಗಿಯೂ ಇರಬಹುದು. ಅಥವಾ ಶಾಸ್ತ್ರವರ್ಗಕ್ಕೆ ಸೇರತಕ್ಕವಾಗಿಯೂ ಇರಬಹುದು; ಆದಕಾರಣ ಕಾವ್ಯವನ್ನು (೧) ಶುದ್ಧ ಕಾವ್ಯ (೨) ಮಿಶ್ರಕಾವ್ಯ ಎಂದು ಎರಡು ಬಗೆಯಾಗಿಯೂ, ಶಾಸ್ತ್ರವನ್ನು (೧) ಲೌಕಿಕ ಶಾಸ್ತ್ರ (೨) ಆಧ್ಯಾತ್ಮಿಕ ಶಾಸ್ತ್ರ ಎಂದು ಎರಡು ಬಗೆಯಾಗಿಯೂ ವಿಂಗಡಿಸಬಹುದು.

(೧) ಶುದ್ಧ ಕಾವ್ಯವು ರಾಮಾಯಣ, ಶಾಕುಂತಲಗಳಂತೆ ರಸ ಪ್ರಧಾನವಾದುದು;

(ಜ್ಞಾನಪ್ರಕಾಶ)– ಇದು ಶಾಸ್ತ್ರದ ಪ್ರಪಂಚ; ಭಾವಪರವಶನಾಗಿ ನೋಡುವುದು, ನೋಡಿದ್ದನ್ನು 'ಅನುಕರಣ'ದ ಮೂಲಕ ತನ್ನ ಭಾವ ಪ್ರಕಾಶವಾಗುವಂತೆ ('ಅನುಸೃಷ್ಟಿ') ಮಾಡುವುದು – ಇದು ಕಲೆಯ ಪ್ರಪಂಚ. ತನ್ನ ಹೃದಯದ ಅನುಭವವನ್ನು ಮಾತಿನ ರೂಪದಲ್ಲಿ ಪ್ರಕಾಶಪಡಿಸತಕ್ಕದ್ದು ಕಾವ್ಯ.

**ಕಲೆ–ಶಾಸ್ತ್ರ; ವ್ಯತ್ಯಾಸ ಮತ್ತು ಸಂಬಂಧ**

ಕಾವ್ಯವೂ ಒಂದು ಕಲೆಯಷ್ಟೆ. ಎಲ್ಲ ಕಲೆಗಳಿಗೂ ಸಾಮಾನ್ಯವಾದ ಲಕ್ಷಣ ಏನೆಂದರೆ, ಅವು ಮನಗಾಣಿಸುವ ಸೌಂದರ್ಯ ವಿಶೇಷ. ಪ್ರತಿಯೊಂದು ಕಲೆಯೂ ತನ್ನ ತನ್ನ ರೀತಿಯಲ್ಲಿ ಸೌಂದರ್ಯವನ್ನು ಪ್ರಕಟಪಡಿಸುವುದರಿಂದಲೂ, ಅಲ್ಲದೆ ಪ್ರತಿಯೊಬ್ಬ ಕಲೆಗಾರನೂ ಹೊರಗಣ ಪ್ರಪಂಚದ ಸೌಂದರ್ಯವನ್ನು ನೋಡಿ ಗ್ರಹಿಸುವುದರಲ್ಲಿಯೂ ಅದನ್ನು ಪ್ರಕಾಶಪಡಿಸುವುದರಲ್ಲಿಯೂ ತನ್ನತನವನ್ನು ಹೊಂದಿರುವುದರಿಂದ, ಒಂದು ಕಲಾಕೃತಿ ಇದ್ದಂತೆ ಇನ್ನೊಂದು ಕಲಾಕೃತಿ ಇರುವುದು ಸಾಧ್ಯವಿಲ್ಲ. ಒಂದೇ ವಿಷಯವನ್ನು ಕುರಿತು ಇಬ್ಬರು ಕವಿಗಳು ಮಾಡುವ ವರ್ಣನೆಯಲ್ಲಿ ವ್ಯತ್ಯಾಸವಿರುತ್ತದೆ. ಕಲಾಕೃತಿಯ ಸೌಂದರ್ಯವನ್ನು ಸವಿಯುವುದರಲ್ಲಿಯೂ ಭೇದವುಂಟು; ಒಬ್ಬನಿಗೆ ಹಿಡಿಸಿದ್ದು ಇನ್ನೊಬ್ಬನಿಗೆ ಹಿಡಿಸುವುದಿಲ್ಲ. ಶಾಸ್ತ್ರದ ವಿಷಯ ಹಾಗಲ್ಲ. ಗಣಿತ ಶಾಸ್ತ್ರದಲ್ಲಿ, ೨+೨ ಒಬ್ಬನಿಗೆ ೪ ಆದರೆ, ಇನ್ನೊಬ್ಬನಿಗೆ ೩ ಆಗುವುದು ಸಾಧ್ಯವಿಲ್ಲ; ಒಂದು ಲೆಕ್ಕ ಸರಿಯಾಗಿದ್ದರೆ, ಹತ್ತು ಮಂದಿ ಪರೀಕ್ಷೆ ಮಾಡಿದರೂ ಅದು ಸರಿಯಾಗಿರುತ್ತದೆ; ಒಬ್ಬನಿಗೆ ತಪ್ಪು, ಇನ್ನೊಬ್ಬನಿಗೆ ಸರಿ ಎನ್ನುವಂತಿಲ್ಲ. ಒಟ್ಟಿನಲ್ಲಿ ಕಲೆಗಳ ಸೌಂದರ್ಯ ಹಿಡಿತಕ್ಕೆ ಸಿಕ್ಕುವ ವಿಷಯವಲ್ಲ; ವಿಷಯ ಖಚಿತವಾದದ್ದು, ಎಲ್ಲರಿಗೂ ಒಂದೇ ವಿಧವಾದ ಸತ್ಯವನ್ನು ತಿಳಿಸ ತಕ್ಕದ್ದು.

ಹೀಗೆ, ಕಲೆಗಳೂ ಶಾಸ್ತ್ರಗಳೂ ಬೇರೆ ಬೇರೆಯಾಗಿ ಕಂಡರೂ ಎಲ್ಲಕ್ಕೂ ಮೂಲ ಒಂದೇ. ಶಾಸ್ತ್ರ–ಕಾವ್ಯ ಕಲೆ–ಇತರ ಕಲೆಗಳು, ಇವುಗಳಿಗಿರುವ ಪರಸ್ಪರ ಸಂಬಂಧವನ್ನು ರೇಖಾಚಿತ್ರಗಳ ಮೂಲಕ ಸ್ಪಷ್ಟಪಡಿಸಬಹುದು. (ಅನುಬಂಧವನ್ನು ನೋಡಿ: ಚಿತ್ರ ೧, ೨) ಆ ಚಿತ್ರಗಳಲ್ಲಿ ತೋರಿಸಿರುವಂತೆ ಕಂಡುಬರುವ ಮಾನುಷ ಕಾರ್ಯಕಲಾಪಗಳನ್ನು ಸ್ಥೂಲವಾಗಿ ವಿಭಾಗ ಮಾಡಬಹುದಾದ ಹೆಗ್ಗುರುತುಗಳನ್ನು ಅಲ್ಲಿ ಕಾಣಿಸಿದೆ, ಅಷ್ಟೆ. ಆ ಕಾರ್ಯಕಲಾಪಗಳು ಒಂದಕ್ಕೊಂದು ವಿರುದ್ಧ, ಸಂಬಂಧವನ್ನೇ ಹೊಂದಿಲ್ಲ, ಎಂದು ತಿಳಿಯಬಾರದು. ಇಂದ್ರಿಯಾನುಭವವೆಂಬ ಒಂದೇ ಮೂಲದಿಂದ ಎಲ್ಲವೂ ಹುಟ್ಟಿರುವುವಲ್ಲದೆ,

# ಅಡಿ ಟಿಪ್ಪಣಿಗಳು

೧. ಕನ್ನಡ ಕೈಪಿಡಿ, ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣೆ, ೨ನೆಯ ಮುದ್ರಣ, ೧೯೩೬; ೩ನೆಯ ಭಾಗ – ಅಲಂಕಾರ, ಪು.೧೯೯–೨೦೦ರಲ್ಲಿ ಅಡಿ ಟಿಪ್ಪಣಿ ೨.

೨. ಡಿ.ವಿ.ಗುಂಡಪ್ಪ: 'ಜೀವನ ಸೌಂದರ್ಯ ಮತ್ತು ಸಾಹಿತ್ಯ' ೪ನೆಯ ಆವೃತ್ತಿ (ಕಾವ್ಯಾಲಯ, ಮೈಸೂರು), ೧೯೬೭; ಪು.೧೮೦.

೩. ಬಿ.ಎಂ.ಶ್ರೀಕಂಠಯ್ಯ: 'ಕನ್ನಡ ಕೈಪಿಡಿ', ಮೈ.ವಿ.ವಿ.ನಿ., ಸಂಪುಟ ೨; ೧೯೪೭; ಪು. ೪೫೬.

೪. ಡಿ.ವಿ.ಗುಂಡಪ್ಪ; 'ಜೀವನ ಸೌಂದರ್ಯ ಮತ್ತು ಸಾಹಿತ್ಯ', ೧೯೬೭; ಪು.೧೮೦–೧೮೨.

(೨) ಮಿಶ್ರಕಾವ್ಯವು* ಭಾರತ ಹಿತೋಪದೇಶಗಳಂತೆ ಪ್ರಾಸ್ತವಾವಿಕವಾಗಿ ಆಧ್ಯಾತ್ಮ ವಿಷಯ ನೀತಿ ವಿಷಯಗಳನ್ನೂ ಸಹ ಸರಳ ರೀತಿಯಲ್ಲಿ ಬೋಧಿಸುವುದು.

(೧) ಲೌಕಿಕ ಶಾಸ್ತ್ರಗಳೆಂಬುದು ಭೌತ ರಾಸಾಯನಿಕ ಖಗೋಳೀಯ ಮೊದಲಾದವುಗಳಂತೆ ಬಾಹ್ಯ ಪ್ರಪಂಚದ ವಸ್ತುಗಳನ್ನು ಕುರಿತು ವಿಚಾರ ಮಾಡತಕ್ಕವು. ಅಥವಾ ಅರ್ಥಶಾಸ್ತ್ರ ವ್ಯವಹಾರಶಾಸ್ತ್ರ ರಾಜ್ಯ ಮೀಮಾಂಸೆ ಮೊದಲಾದವುಗಳಂತೆ ಸಮಾಜ ವ್ಯವಸ್ಥೆಗಳನ್ನು ಕುರಿತು ವಿಚಾರ ಮಾಡತಕ್ಕವು....

(೨) ಆಧ್ಯಾತ್ಮಿಕ ಶಾಸ್ತ್ರಗಳಾದರೋ ಧರ್ಮಾಧರ್ಮಗಳು, ಭಗವದುಪಾಸನಾ ಕ್ರಮಗಳು, ಜೀವನೂರ್ಧ್ವಗತಿ ಆಧೋಗತಿಗಳು – ಇವುಗಳನ್ನೆ ಕುರಿತವು. ವೇದ ವೇದಾಂತಗಳೂ ಸ್ಮೃತಿ ಪುರಾಣಗಳೂ ಈ ಭಾಗಕ್ಕೆ ಸೇರತಕ್ಕವು. ಈ ಆಧ್ಯಾತ್ಮ ಶಾಸ್ತ್ರಕ್ಕೂ ಸಾಹಿತ್ಯ ಅಥವಾ ಕಾವ್ಯಕ್ಕೂ ಗಾಢವಾದ ಸಂಬಂಧವಿರುವುದು; ಏಕೆಂದರೆ, ಅವರೆಡೂ ಮಾನವನ ಆಶಯಗಳನ್ನೂ ಗುಣಗಳನ್ನೂ ನಡತೆಯನ್ನೂ ತಿದ್ದಲು ಬೇರೆ ಬೇರೆ ವಿಧಗಳಲ್ಲಿ ಪ್ರಯತ್ನಿಸುತ್ತವೆ. ಯಾವ ಗ್ರಂಥವು ಕಾವ್ಯದ ಸಾಧನ ಸಾಮಗ್ರಿಗಳಿಂದ ಮನಸ್ಸಿನಲ್ಲಿ ರಸೋತ್ಪಾದನೆ ಮಾಡಿ ಆ ಮೂಲಕ ಬುದ್ಧಿಯನ್ನೆಚ್ಚರಿಸಿ, ಅನಂತರ ಧರ್ಮ ವಿಷಯ ಭಗವದ್ವಿಷಯಗಳನ್ನು ಬೋಧಿಸುವುದೋ ಅದನ್ನು ಮಿಶ್ರಕಾವ್ಯವೆನ್ನಬಹುದು.*[೪]

---

* ಕಾವ್ಯ ಶಾಸ್ತ್ರದಲ್ಲಿ ಕಾವ್ಯವನ್ನು ಗದ್ಯಕಾವ್ಯ, ಪದ್ಯಕಾವ್ಯ, ಮಿಶ್ರಕಾವ್ಯ – ಎಂದು ಸಾಧಾರಣವಾಗಿ ವಿಂಗಡಿಸಲಾಗುತ್ತದೆ. ಗದ್ಯ ಪದ್ಯಗಳ ಮಿಶ್ರಣವುಳ್ಳದ್ದು ಮಿಶ್ರಕಾವ್ಯ. ಇದನ್ನು 'ಚಂಪೂ' ಎಂದು ಕರೆಯಲಾಗಿದೆ. ಗದ್ಯಪದ್ಯಗಳುಳ್ಳ ದೃಶ್ಯ ಕಾವ್ಯಗಳೂ (ನಾಟಕಗಳು) ಮಿಶ್ರಕಾವ್ಯಗಳೆನಿಸುತ್ತವೆ.

ಸಂಬಂಧದಲ್ಲಿ 'ಅಲಂಕಾರ' ಎಂಬ ಮಾತಿನ ಅರ್ಥವೂ ಕಾವ್ಯವನ್ನು ಅಲಂಕರಿಸುವುದು' (=ಅಲಂಕರಣ) ಅಥವಾ ಅಂದಗೊಳಿಸುವುದು, ಚೆಂದಗೊಳಿಸುವುದು, ಎಂದೇ ಆಗುತ್ತದೆ. ಪ್ರಾಚೀನ ಕಾಲದಿಂದಲೂ ಮನುಷ್ಯರಿಗೆ ತಾವು ಇರುವುದಕ್ಕಿಂತಲೂ ಚೆನ್ನಾಗಿ ಕಾಣಬೇಕೆಂದು ಆಸೆ. ಅದರಲ್ಲಿ, ಹೆಂಗಸಿಗೆ ಈ ಬಯಕೆ ಹೆಚ್ಚು. ಉಡುಪು ತೊಡಪು, ಕೂದಲನ್ನು ಒಪ್ಪ ಓರಣ ಮಾಡಿಕೊಳ್ಳುವುದು, ಇವು ಗಂಡಸರಿಗೂ ಹೆಂಗಸರಿಗೂ ಸಮಾನವಾದ ಅಲಂಕಾರದ ವಿಧಾನಗಳು. ಆದರೆ, ಹೆಂಗಸರು ಬಳಸುವ ಅಲಂಕಾರ ವಸ್ತುಗಳಿಗೆ ಕೊನೆ ಮೊದಲೇ ಇಲ್ಲ. ಅವುಗಳಲ್ಲಿ ಮುಖ್ಯವಾದವು ಕೆಲವು; ಮೂಗುತಿ, ಓಲೆ, ಸರ, ತೋಳಬಂದಿ, ಕೈಬಳೆ, ಮುಂತಾದುವು. ಕಾವ್ಯವನ್ನು ಮದುಮಗಳಿಗೆ ಹೋಲಿಸಿ, ಕಾವ್ಯದಲ್ಲಿ ಅದರ ಅಂದಚೆಂದಕ್ಕಾಗಿ ಉಪಯೋಗಿಸುವ ಅಲಂಕಾರಗಳು ಅವಳಿಗೆ ಹಾಕುವ ಒಡವೆಗಳಂತೆ ಎಂದು ಅಲಂಕಾರಿಕರು, ಎಂದರೆ ಅಲಂಕಾರ ಶಾಸ್ತ್ರಕಾರರು ಹೇಳಿದ್ದಾರೆ. (ಕಾವ್ಯದ ಅಲಂಕಾರಗಳನ್ನು ಕನ್ಯೆಯ ಒಡವೆಗಳಿಗೆ ಹೋಲಿಸಿರುವುದೇ ಒಂದು 'ಅಲಂಕಾರ' – ಉಪಮಾಲಂಕಾರ; ಉಪಮೆ ಎಂದರೆ ಹೋಲಿಕೆ.) ಭರತಮುನಿ (ಕ್ರಿ.ಶ. ಸುಮಾರು ೧ನೆಯ ಶತಮಾನ) ತನ್ನ ನಾಟ್ಯ ಶಾಸ್ತ್ರದಲ್ಲಿ ನಾಟ್ಯಕ್ಕೆ (ಎಂದರೆ ಅಭಿನಯಕ್ಕೆ) ಸಂಬಂಧಪಟ್ಟಂತೆ 'ರಸ' ವಿಚಾರವನ್ನು ವಿಸ್ತಾರವಾಗಿ ಹೇಳಿದ್ದನು; ಕಾವ್ಯದಲ್ಲಿ ರಸವು ಮುಖ್ಯವೆಂದೂ ಹೇಳಿದ್ದನು.* ಆದರೆ ಕಾವ್ಯದ ಲಕ್ಷಣವನ್ನು ಕುರಿತು ಏನನ್ನೂ ಹೇಳಿರಲಿಲ್ಲ. ಅವನ ತರುವಾಯ ಬಂದ ಭಾಮಹ, ದಂಡಿ, ಮುಂತಾದವರು (ಕ್ರಿ.ಶ. ೭ ಮತ್ತು ೮ನೆಯ ಶತಮಾನ) ಕಾವ್ಯದಲ್ಲಿ ಅಲಂಕಾರಗಳಿಗೆ ಪ್ರಾಶಸ್ತ್ಯವನ್ನು ಕೊಟ್ಟರು; ಹಿಂದಿನ ಕಾವ್ಯಗಳಲ್ಲಿ ಕಂಡು ಬಂದ ೩೫ ಅಲಂಕಾರಗಳನ್ನು ಗುರುತಿಸಿ, ಅವುಗಳನ್ನು ತಮ್ಮ ಗ್ರಂಥಗಳಲ್ಲಿ ವಿವರಿಸಿದರು. ಒಟ್ಟಿನ ಮೇಲೆ, 'ಕಾವ್ಯಕ್ಕೆ ಶೋಭೆ ಅಥವಾ ಸೊಗಸು ಕೊಡತಕ್ಕದೇ ಅಲಂಕಾರ"[೨] ಎಂಬುದು ಅವರ ಅಭಿಪ್ರಾಯವಾಗಿತ್ತು. ಹೆಂಗಸರಾಗಲಿ ಗಂಡಾಸರಾಗಲಿ, ಹುಟ್ಟು ಚೆಲುವು ಉಳ್ಳವರಿಗೆ ಒಡವೆಗಳೇ ಬೇಕಿಲ್ಲ; ಒಡವೆಗಳೇನಿದ್ದರೂ ಅವರ

---

* ಊಟ ಷಟ್ (ಆರು) ರಸಗಳಿಂದ ಕೂಡಿರುತ್ತದೆ ಎಂದು ಹೇಳುವುದು ರೂಢಿ. ಸಿಹಿ, ಹುಳಿ, ಕಾರ, ಉಪ್ಪು, ಕಹಿ, ಒಗರು – ಇವೇ ಆ ಷಡ್ರಸಗಳು (ಕಟು, ಆಮ್ಲ, ಮಧುರ, ಲವಣ, ತಿಕ್ತ, ಕಷಾಯ). ಇವು ನಾಲಗೆಗೆ ಬಿದ್ದು ಸವಿದಾಗಲೇ ಅನುಭವಕ್ಕೆ ಬರುವುದು. ಕಾವ್ಯದ ಭಾವಗಳನ್ನು ನಾವು ಅನುಭವಿಸಿ ಆನಂದಪಟ್ಟಾಗ ಅವು 'ರಸ'ದ ಸ್ಥಿತಿಯನ್ನು ಪಡೆಯುತ್ತವೆ. ಈ ವಿಚಾರ ಮುಂದೆ ಬರುತ್ತದೆ.

# ೨. ಅಲಂಕಾರ ಶಾಸ್ತ್ರ

## ಪೂರ್ವ ಪೀಠಿಕೆ

ಸಾಹಿತ್ಯ ಮತ್ತು ಕಾವ್ಯ – ಈ ಶಬ್ದಗಳು ಹೊಂದಿರುವ ಅರ್ಥದ ವಿಚಾರವಾಗಿ ಹಿಂದಿನ ಅಧ್ಯಾಯದಲ್ಲಿ ವಿಚಾರ ಮಾಡಿದೆಯಷ್ಟೆ. ಪೂರ್ವಿಕರು ಕವಿಗಳು ಬರೆದ ಕೃತಿಗಳಿಗೆ ಮಾತ್ರ ಕಾವ್ಯ ಎಂಬ ಪದವನ್ನು ಉಪಯೋಗಿಸುತ್ತಿದ್ದರು. ಓದುಗರಿಗೆ ಆನಂದವುಂಟು ಮಾಡುವುದೇ ಮುಖ್ಯ ಗುರಿಯಾಗುಳ್ಳ ಗ್ರಂಥಗದ್ಯದಲ್ಲಿದ್ದರೂ ಅದನ್ನು ಕಾವ್ಯ ಎಂದೇ ಎಣಿಸುತ್ತಿದ್ದರು. ಈಗ, ಈ ಜಾತಿಯ ಗ್ರಂಥಗಳು ಪದ್ಯದಲ್ಲಿದ್ದರೆ ಮಾತ್ರ ಕಾವ್ಯ, ಕವಿತೆ, ಎಂಬ ಮಾತುಗಳನ್ನು ಬಳಸುವುದು ರೂಢಿಯಾಗಿದೆ; ಈ ಪದ್ಯ ಕೃತಿಗಳನ್ನೂ ಕಥೆ, ಕಾದಂಬರಿ, ನಾಟಕ ಮುಂತಾದ ಗದ್ಯ ಕೃತಿಗಳನ್ನೂ ಒಟ್ಟುಗೂಡಿಸಿ ಸಾಹಿತ್ಯ ಎನ್ನುತ್ತೇವೆ. ಅಲಂಕಾರ ಶಾಸ್ತ್ರ ಎಂಬ ಮಾತನ್ನು ಪ್ರಾಚೀನ ಗದ್ಯ ಪದ್ಯ ಮತ್ತು ಮಿಶ್ರ ಕಾವ್ಯಗಳಿಗೆ ಮಾತ್ರ ಸಂಬಂಧ ಪಟ್ಟಂತೆ ಬಳಸುವುದು ರೂಢಿ.

ಅಲಂಕಾರ ಶಾಸ್ತ್ರಕ್ಕೆ ಸಂಬಂಧಪಟ್ಟ ಕನ್ನಡ ಲಕ್ಷಣ ಗ್ರಂಥಗಳ ಪರಿಚಯವನ್ನು ಮಾಡಿಕೊಳ್ಳುವುದಕ್ಕೆ ಮೊದಲು ಅಲಂಕಾರ ಶಾಸ್ತ್ರದ ಕೆಲವು ಮುಖ್ಯ ತತ್ತ್ವಗಳ ವಿಷಯವಾಗಿ ಸ್ವಲ್ಪ ತಿಳಿವಳಿಕೆ ಅಗತ್ಯ.

**ಅಲಂಕಾರಶಾಸ್ತ್ರ ಎಂದರೇನು?**

"ಕನ್ನಡಿಗರಾದ ಅಲಂಕಾರ ವಿದ್ಯಾರ್ಥಿಗಳು ಅಲಂಕಾರ ವಿದ್ಯಾರ್ಥಿಗಳು ಆದರಲ್ಲಾ" ಎಂದು ಒಬ್ಬರು ಅಲಂಕಾರಶಾಸ್ತ್ರ ಪ್ರೇಮಿಗಳು ಆಡಿದ ಮಾತು ಈ ಸಂದರ್ಭದಲ್ಲಿ ಗಮನಾರ್ಹವಾಗಿದೆ.[೧] ಅವರು 'ಅಲಂಕಾರ' ಎಂಬ ಮಾತನ್ನು ಎರಡು ಅರ್ಥಗಳಲ್ಲಿ (ಇದಕ್ಕೆ ಶ್ಲೇಷೆ ಎನ್ನುತ್ತಾರೆ) ಚಮತ್ಕಾರವಾಗಿ ಬಳಸಿದ್ದರು. "ಅಲಂಕಾರ ಶಾಸ್ತ್ರವನ್ನು ಕಲಿಯಬೇಕಾದ ವಿದ್ಯಾರ್ಥಿಗಳು ಅದರ ಕಡೆಗೆ ಸಾಕಷ್ಟು ಗಮನ ಕೊಡದೆ ಸೊಗಸಾದ ಉಡುಪು ತೊಡಪುಗಳಿಂದ ತಮ್ಮನ್ನು ಅಲಂಕರಿಸಿಕೊಳ್ಳುವುದರಲ್ಲೇ, ಎಂದರೆ ಸಿಂಗರಿಸಿಕೊಳ್ಳುವುದರಲ್ಲೇ ಕಾಲ ಕಳೆಯುವರಲ್ಲಾ" ಎಂಬುದು ಅವರ ಮಾತಿನ ಅಭಿಪ್ರಾಯ. ಅಲಂಕಾರ ಶಾಸ್ತ್ರದ

"ಕಾಲು ಬಂದ ಮಗು ಮನೆಯ ತುಂಬ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಸುಳಿದಾಡುತ್ತಿದ್ದರೆ ಬೀಸಣಿಗೆಯಿಂದ ಗಾಳಿ ಹಾಕಿದಂತೆ ಮನೆಯೊಳಗೆಲ್ಲ ಗಾಳಿ ಹರಿದಾಡುತ್ತದೆ. ಕವಿಯ ಪ್ರತಿಭೆ ಮಗುವಿನ ಚರ್ಯೆಯನ್ನು ಇಲ್ಲಿ ಎಷ್ಟು ಚೆನ್ನಾಗಿ ರೂಪಿಸಿದೆ! ಮಗು ಸತತವಾಗಿ ಹಿಂದಕ್ಕೂ ಮುಂದಕ್ಕೂ ಸುಳಿದಾಡುವುದರ ಸೊಗಸೂ, ಇದರಿಂದ ಮನೆಯವರಿಗೆ ಒದಗುವ ಸುಖಾನುಭವವೂ ಇಲ್ಲಿ ಸುವ್ಯಕ್ತವಾಗುತ್ತವೆ."[೪] ಇಲ್ಲಿ ಸ್ಪಷ್ಟವಾಗಿ ಕಾಣುವ ಅಲಂಕಾರ ಇಲ್ಲ. ಬೀಸಣಿಗೆ ಗಾಳಿಗೂ ಮಗುವಿನ ಹರಿದಾಟದಿಂದ ಹೊರಡುವ ಗಾಳಿಗೂ ತುಂಬ ವ್ಯತ್ಯಾಸವುಂಟು. ನಿಜವಾಗಿ ಬೀಸಣಿಗೆ ಗಾಳಿಯೇ ಹೆಚ್ಚು, ಮೈಗೆ ಹಿತ, ತಂಪು. ಮಗುವಿನ ಓಡಾಟದ ಗಾಳಿ ಕಡಿಮೆಯಾದರೂ ತಾಯಿಯ ಕಣ್ಣಿಗೆ ಮಗುವಿನ ಹರಿದಾಟ ಸೊಗಸುವುದರಿಂದ ತುಸುಗಾಳಿಯೇ ಆಕೆಯ ಮನಸ್ಸಿಗೆ ಅತಿಶಯವೆನಿಸಿ ಬೀಸಣಿಗೆಯ ಗಾಳಿಗೆ ಸಮವಾಗಿ ಕಾಣುತ್ತದೆ. ಇಲ್ಲಿ ಅಲಂಕಾರಿಕರು ಹೇಳುವ 'ಅತಿಶಯೋಪಮೆ' ಎಂಬ ಅಲಂಕಾರವನ್ನು ನಾವು ಗುರುತಿಸಬಹುದು.

ತವರು ಮನೆಯಿಂದ ಗಂಡನ ಮನೆಗೆ ಪ್ರಯಾಣ ಮಾಡುತ್ತಿರುವ ಹೆಣ್ಣುಮಗಳ ಅಗಲಿಕೆಯ ನೋವು ಎಷ್ಟು ಮನಮುಟ್ಟುವಂತೆ ಹೊರಪಟ್ಟಿದೆ ನೋಡಿ, ಈ ಕೆಳಗಿನ ಪದ್ಯದಲ್ಲಿ:

> ತೊಟ್ಟಿಲ ಹೊತ್ಕೊಂಡು ತೌರ್‍ಬಣ್ಣ ಉಟ್ಕೊಂಡು
> ಅಪ್ಪ ಕೊಟ್ಟೆಮ್ಮೆ ಹೊಡ್ಕೊಂಡು – ತಂಗ್ಯಮ್ಮ
> ತಿಟ್ಹತ್ತಿ ತಿರುಗಿ ನೋಡ್ಯಾಳು

ಬಹುಶಃ ಚೊಚ್ಚಲು ಹೆರಿಗೆಗೆ ಬಂದಿದ್ದ ಮಗಳನ್ನು ತವರು ಮನೆಯವರು ಉಡುಗೊರೆ ಬಳಿವಳಿ ಕೊಟ್ಟು ವಾತ್ಸಲ್ಯದಿಂದ ಕಳಿಸಿಕೊಟ್ಟಿರುವುದು, ಬಿಟ್ಟು ಬಂದ ತವರನ್ನು ಕೊನೆಯ ಬಾರಿಗೆ ನೋಡುವುದರಲ್ಲಿ ಅವಳ ತವರಿನ ಒಲವು – ಈ ಸಂಗತಿ ಅಣ್ಣನ ಮಾತಿನಲ್ಲಿ ಸೂಚಿತವಾಗಿದೆ, ಅಷ್ಟೆ. ಎಷ್ಟೋ ವೇಳೆ ಕವಿ ತನ್ನ ಮನಸ್ಸಿನಲ್ಲಿರುವ ಭಾವವನ್ನು ಉಪಯೋಗಿಸುವ ಮಾತಿನಲ್ಲಾಗಲಿ ಅದರ ಸಾಮಾನ್ಯವಾದ ಅರ್ಥದಲ್ಲಾಗಲಿ ನೇರವಾಗಿ ತಿಳಿಸದೆ ಓದುಗರಿಗೆ ಆ ಭಾವ ಹೊಳೆಯುವಂತೆ ಮಾಡಿಬಿಡುತ್ತಾನೆ. ಹೀಗೆ ಹೇಳುವುದನ್ನು ಅಲಂಕಾರ ಶಾಸ್ತ್ರದಲ್ಲಿ 'ವ್ಯಂಗ್ಯ' ಅಥವಾ 'ಧ್ವನಿ' ಎಂದು ಕರೆದಿದೆ. ಮೊದಲಿನ ಎರಡು ಪದ್ಯಗಳಲ್ಲಿ ಮಗುವಿನ ಎರಡು ಚಿತ್ರಗಳು 'ಅಲಂಕಾರ'ಗಳ ಸಹಾಯದಿಂದ ಸುಂದರವೆನಿಸಿ

ಚೆಲುವನ್ನು ಹೆಚ್ಚಿಸಬಲ್ಲುವು. ಕುರೂಪಿಗಳು ಎಷ್ಟು ಒಡವೆಗಳನ್ನು ಹೇರಿಕೊಂಡರೂ ಅವರ ಚೆಲುವೇನೂ ಹೆಚ್ಚುವುದಿಲ್ಲ. ಹಾಗೆಯೇ ಕಾವ್ಯಗಳ ವಿಚಾರ. ಅವಕ್ಕೆ ಅಲಂಕಾರಗಳು ಅವಶ್ಯಕವೇನಲ್ಲ. ಅವು ಇಲ್ಲದೆಯೇ ಕಾವ್ಯ ಸುಂದರವಾಗಿರಬಹುದು. ಈ 'ಸೌಂದರ್ಯವೇ ಅಲಂಕಾರ' ಎಂದು ಹೇಳಿ, ಅಲಂಕಾರ ಶಬ್ದದ ಅರ್ಥವನ್ನು ಹಿಗ್ಗಿಸಿದರು.

[ಹೀಗೆ, ಕಾವ್ಯದ ಹೊರ ರೂಪ, ಒಳ ತಿರುಳು – ಎರಡಕ್ಕೂ ಅಲಂಕಾರ ಎಂಬ ಮಾತನ್ನು ಅನ್ವಯಿಸಬಹುದು. ಕಾವ್ಯದ ಈ ಲಕ್ಷಣವನ್ನು ವಿವರಿಸುವ ಶಾಸ್ತ್ರಕ್ಕೆ 'ಅಲಂಕಾರಶಾಸ್ತ್ರ' ಎಂಬ ಹೆಸರು ರೂಢಿಗೆ ಬಂದಿತು. ಈ ಶಾಸ್ತ್ರಕ್ಕೆ 'ಕಾವ್ಯಮೀಮಾಂಸೆ' ಎಂಬ ಹೆಸರೂ ಬಳಕೆಯಲ್ಲಿದೆ. 'ಮೀಮಾಂಸೆ' ಎಂಬ ಶಬ್ದಕ್ಕೆ 'ತಿಳಿಯಬೇಕೆಂಬ ಇಚ್ಛೆ' ಎಂದು ಅರ್ಥ. 'ಕಾವ್ಯ ಮೀಮಾಂಸೆ' ಎಂದರೆ, 'ಕಾವ್ಯ ವಿಚಾರವನ್ನು ತಿಳಿಯುವ ಪ್ರಯತ್ನ' ಎಂದು ಹೇಳಬಹುದು. ಕಾವ್ಯಶಾಸ್ತ್ರ, ಸಾಹಿತ್ಯ ಶಾಸ್ತ್ರ ಎಂಬ ಹೆಸರುಗಳೂ ರೂಢಿಯಲ್ಲಿವೆ.]

ಮೇಲೆ ವಿವರಿಸಿದ ಅಲಂಕಾರ ಶಬ್ದ ಎರಡು ಅರ್ಥಗಳಿಗೂ ಜನಪದ ಸಾಹಿತ್ಯದಿಂದ ಸೊಗಸಾದ ಉದಾಹರಣೆಗಳನ್ನು ಎತ್ತಿಕೊಡಬಹುದು:

ಅಳುವ ಕಂದನ ತುಟಿ ಹವಳದ ಕುಡಿಯಂತೆ
ಕುಡಿಹುಬ್ಬು ಬೇವಿನೆಸಳಂತೆ – ಕಣ್ನೋಟ
ಶಿವನ ಕೈಯಲಗು ಹೊಳೆವಂತೆ

ಈ ಪದ್ಯದ ಹೆಚ್ಚಿನ ಸೊಗಸನ್ನು ವಿವರಿಸುವ ಗೋಜಿಗೆ ಹೋಗದೆ, ಈ ತ್ರಿಪದಿಯ ಅಲಂಕಾರವನ್ನು ಮಾತ್ರ ಗಮನಿಸೋಣ. ಅಳುತ್ತಿರುವ ಮಗುವಿನ ಕೆಂಪು ತುಟಿಯನ್ನು ಕೆಂಪಾದ ಹವಳದ ಕುಡಿಗೂ, ಬಾಗಿದ ಹುಬ್ಬನ್ನು ಬೇವಿನೆಲೆಗೂ, ಕಣ್ಣೀರು ತುಂಬಿ ಫಳಫಳನೆ ಹೊಳೆಯುವ ಕಣ್ಣಿನ ನೋಟವನ್ನು ಈಶ್ವರನ ಕೈ ಕತ್ತಿಯ ಹೊಳಪಿಗೂ ಹೋಲಿಸಿದೆ. ಉಚಿತವಾದ ಹೋಲಿಕೆಗಳಿಂದ ಪದ್ಯಕ್ಕೆ ಸೊಗಸುಂಟಾಗಿದೆ. ಮಗುವಿನ ಹುಟ್ಟು ಚೆಲುವಿನ ಅಂಶಗಳು ಅಳುವ ಕಾಲದಲ್ಲಿ ಹೆಚ್ಚಿರುವುದನ್ನು ಹೋಲಿಕೆಗಳು ಸ್ಪಷ್ಟಪಡಿಸುತ್ತವೆ.

ಕೂಸು ಇದ್ದ ಮನೆಗೆ ಬೀಸಣಿಗೆ ಯಾತಕೆ
ಕೂಸು ಕಂದಯ್ಯ ಒಳಹೊರಗೆ – ಆಡಿದರೆ
ಬೀಸಣಿಗೆ ಗಾಳಿ ಸುಳಿದಾವು

ಸ್ತ್ರೀಪುರುಷರಿಗೆ ಅಲಂಕಾರವೇಕೆ? ಎಷ್ಟು ಬೇಕೋ ಅಷ್ಟನ್ನು ಇಟ್ಟುಕೊಂಡರೆ ಭಾದಕವೇನಿಲ್ಲ.

ಕಾವ್ಯ ವಧುವಿನ ಶರೀರ ಸೌಂದರ್ಯವೆಂದರೆ ಶಬ್ದಾರ್ಥಗಳ ಸೌಂದರ್ಯ ಅಕ್ಷರಗಳನ್ನೂ ಪದಗಳನ್ನೂ ಸ್ಥೂಲವಾಗಿ ಕಿವಿಗೆ ಹಿತಕರವಾದವು, ಅಷ್ಟು ಹಿತಕರವಲ್ಲದವು ಎಂದು ಎರಡು ಬಗೆಯಾಗಿ ವಿಂಗಡಿಸಬಹುದು. ಇವುಗಳ ನಡುವಣ ಪ್ರಭೇದಗಳು ಎಷ್ಟೋ ಇವೆ. ಪದಗಳನ್ನು ಜೊತೆಗೂಡಿಸಿ ಎಂದರೆ ಸಮಾಸ ಮಾಡಿಯೂ ಪ್ರಯೋಗಿಸಬಹುದು. ಅಕ್ಷರ, ಪದ, ಪದಬಂಧ, ಸಮಾಸ ಇವುಗಳ ಬೇರೆ ಬೇರೆ ರೀತಿಯ ಪ್ರಯೋಗಗಳ ಜೊತೆಗೆ ಅಲಂಕಾರವೂ ಸೇರಿ ಬಿಟ್ಟರೆ, ಕಾವ್ಯವನ್ನು ಬರೆಯುವ 'ಮಾತಿನ ಬಗೆ' ಅಥವಾ 'ಉಕ್ತಿರೀತಿ' ಅನೇಕ ಬಗೆಯಾಗುತ್ತದೆ. ಬಹುಶಃ ಮೊತ್ತ ಮೊದಲಿಗನಾದ ಅಲಂಕಾರಿಕ ಎನ್ನಬಹುದಾದ ಭಾಮಹನೆಂಬುವನು* ಈ ಅನೇಕ ಪ್ರಕಾರಗಳನ್ನು ಗುರುತಿಸುವ ಗೋಜಿಗೆ ಹೋಗದೆ, ಎರಡು ಪ್ರಕಾರಗಳನ್ನು ಮಾತ್ರ ಹೇಳಿದ. ಅವನ ಅಭಿಪ್ರಾಯದಂತೆ, "ಲೋಕೋತ್ತರವಾದ ಚಮತ್ಕಾರವು ಕಂಡು ಬರುವ ಕಾವ್ಯ ಮಾರ್ಗಗಳು ಮಾತ್ರ ಅಲಂಕೃತವೆನ್ನಬಹುದು. ಈ ಲೋಕೋತ್ತರವಾದ ಚಮತ್ಕಾರವನ್ನೇ ಭಾಮಹನು ಸಾಮಾನ್ಯವಾಗಿ 'ವಕ್ರೋಕ್ತಿ' ಎನ್ನುತ್ತಾನೆ. ಆದ್ದರಿಂದ ವಕ್ರೋಕ್ತಿ ಅಥವಾ ಅತಿಶಯೋಕ್ತಿ ಭಾಮಹನ ಪ್ರಕಾರ ಅಲಂಕಾರಗಳೆಲ್ಲಕ್ಕೂ ಅನ್ವಯಿಸುವ ಸಾಮಾನ್ಯ ಲಕ್ಷಣ. ಲೋಕದಲ್ಲಿದ್ದಂತೆಯೇ ವಸ್ತುವನ್ನು ವಿವರವಾಗಿ ವರ್ಣಿಸುವುದರಿಂದ ಚಮತ್ಕಾರ ಬಂದರೆ ಸ್ವಭಾವೋಕ್ತಿಯೆನಿಸುತ್ತದೆ."[೭] ದಂಡಿಯೂ ಈ ಎರಡು ಭೇದಗಳನ್ನು ಗಮನಿಸಿದ; ಅವುಗಳನ್ನು 'ಮಾರ್ಗ'ಗಳೆಂದು ಹೇಳಿದ; ಸಾಲಂಕೃತ ಮಾರ್ಗವನ್ನು (ಉತ್ತರದ) 'ಗೌಡ' ಮಾರ್ಗವೆಂದೂ ಸ್ವಾಭಾವಿಕವಾಗಿ ನಿರೂಪಿಸುವ ಮಾರ್ಗವನ್ನು (ದಕ್ಷಿಣ) 'ವೈದರ್ಭ' ಮಾರ್ಗವೆಂದೂ ಕರೆದ; ಈ ಹಿಂದೆ ಸೂಚಿಸಿದಂತೆ, ಅಕ್ಷರ ಮತ್ತು ಪದಗಳು ಒಂದು ಗೊತ್ತಾದ ರೀತಿಯಲ್ಲಿ ಸೇರ್ಪಡೆಯಾಗುವುದರಿಂದ (ಪದಬಂಧದಿಂದ) ಉಂಟಾಗುವ ಪರಿಣಾಮವನ್ನು 'ಗುಣ' ಎಂದು ಗುರುತಿಸಿ, ಅಂಥ ಹತ್ತು ಗುಣಗಳು ವೈದರ್ಭ ಮಾರ್ಗದ ಹತ್ತು ಪ್ರಾಣಗಳು ಎಂದ ('ವೈದರ್ಭ ಮಾರ್ಗಸ್ಯ ಪ್ರಾಣಾ ದಶಗುಣಾಃ'). ಇದರಿಂದ, ಮುಖ್ಯ ಕಾವ್ಯ

---

* ಸಂಸ್ಕೃತ ಅಲಂಕಾರ ಶಾಸ್ತ್ರದ ಚರಿತ್ರೆಯಲ್ಲಿ ಭಾಮಹ ಮತ್ತು ದಂಡಿ ಸು.೬–೭ನೆಯ ಶತಮಾನಗಳಲ್ಲಿ ಇದ್ದವರು. ಇವರಲ್ಲಿ ಯಾರು ಮೊದಲು ಎಂಬ ಬಗ್ಗೆ ಭಿನ್ನಾಭಿಪ್ರಾಯವಿವೆ. ಈ ವಿಚಾರವಿವೆ ಚರ್ಚೆ ಇಲ್ಲಿ ಬೇಕಿಲ್ಲ. ಭಾಮಹ ಮೊದಲಿನವನು ಎಂದು ಇಲ್ಲಿ ಭಾವಿಸಲಾಗಿದೆ, ಅಷ್ಟೆ.

ನಮ್ಮ ಒಳಗಣ್ಣಿಗೆ ಕಾಣುವಂತಾಗಿವೆ; ಆ ಚಿತ್ರಗಳ ಪರಿಭಾವನೆಯಲ್ಲಿ ಮನಸ್ಸು ನಿಲ್ಲುತ್ತದೆ, ನಲಿಯುತ್ತದೆ, ಲೀನವಾಗುತ್ತದೆ. ಚಿತ್ರ ಕಣ್ಣಿಗೆ ಕಟ್ಟುವುದಕ್ಕಿಂತ ಮುಂದೆ ಹೋಗಿ, ನಮ್ಮ ಮನಸ್ಸು – ಹೃದಯ ಚಲಿಸಿ, ಕರಗುವುದಿಲ್ಲ. ಮೂರನೆಯ ಪದ್ಯದಲ್ಲಿ, ಮಗಳ ಅಗಲಿಕೆಯ ನೋವು ನಮ್ಮ ಮನಸ್ಸನ್ನು ಕರಗಿಸಿ, ಹೃದಯವನ್ನು ಕಲಕಿ, ಅವಳ ನೋವಿನಲ್ಲಿ ಭಾಗಿಯಾಗಿಯೂ ಒಂದು ಬಗೆಯ ಆನಂದವನ್ನೂ ನಾವು ಪಡೆಯುವಂತಾಗಿದೆ. ಇದನ್ನೇ ಕಾವ್ಯದ 'ರಸ', 'ರಸಾನುಭವ' ಎನ್ನುವುದು. ರಸಕ್ಕೆ ನಮ್ಮ ಮನಸ್ಸನ್ನು ಆರ್ದ್ರಮಾಡುವ ಅಥವಾ ಕರಗಿಸುವ ಶಕ್ತಿ ಇದೆ. ಈ ಕರಗಿಸುವ ಶಕ್ತಿಯೂ ಸೌಂದರ್ಯವೇ. 'ಸೌಂದರ್ಯ' ಎನ್ನುವ ಸಂಸ್ಕೃತ ಪದಕ್ಕೆ ಅದೇ ಅರ್ಥ. ಮನುಷ್ಯನ ಸೊಗಸಾದ ವಸ್ತ್ರಾಲಂಕಾರ, ಒಡವೆ, ಒಳ್ಳೆಯ ಮೈಕಟ್ಟು, ಬಣ್ಣ ಇವು ಇತರರನ್ನು ಆಕರ್ಷಿಸುವಂತೆ ಅವನ ಒಳ್ಳೆಯ ಶೀಲ (ನಡತೆ), ಸದ್ಗುಣ, ಮುಂತಾದ ಕಣ್ಣಿಗೆ ಕಾಣದ ವಿಷಯಗಳೂ ಆಕರ್ಷಿಸುತ್ತವೆ. ಮೇಲಿನ ಮೊದಲೆರಡು ಉದಾಹರಣೆಗಳಲ್ಲಿ ಹೋಲಿಕೆಗಳು (ಉಪಮೆಗಳು) ಅರ್ಥಕ್ಕೆ ಸಂಬಂಧಪಟ್ಟಿವೆ; ಅರ್ಥಕ್ಕೆ ಸಂಬಂಧಪಟ್ಟ ಅಥವಾ ಅರ್ಥದ ಸೊಗಸನ್ನು ಹೆಚ್ಚಿಸುವ ಅಲಂಕಾರಗಳು ಅರ್ಥಾಲಂಕಾರಗಳು, ಎರಡನೆಯ ಪದ್ಯದಲ್ಲಿ ಕೂಸು, ಬೀಸು ಎಂಬ ಪದಗಳಲ್ಲಿ 'ಸ'ಕಾರ ಒಂದು ಗೊತ್ತಾದ ಕಡೆ ಮತ್ತೆ ಮತ್ತೆ ಬರುವುದು, ಮೂರನೇಯ ಪದ್ಯದಲ್ಲಿ 'ತ'ಕಾರ ಕೆಲವು ಪದಗಳ ಮೊದಲಕ್ಷರವಾಗಿ ಬರುವುದು – ಇವು ಪದ್ಯದ ನಡೆಯಲ್ಲಿ ಅಲ್ಲಲ್ಲೆ ನಿಲುಗಡೆಯನ್ನು ಸೂಚಿಸುತ್ತವೆ; ಒಂದು ಬಗೆಯ ಅಂದವನ್ನು ಸಾಧಿಸುತ್ತವೆ. ಇವುಗಳಿಂದ ಅರ್ಥಕ್ಕೆ ಯಾವ ಹೆಚ್ಚಿನ ಪ್ರಯೋಜನವಾಗಲಿ ಸೊಗಸಾಗಲಿ ಉಂಟಾಗಿಲ್ಲ. ಇವು ಕಿವಿಗೆ ಹಿತ, ಶಬ್ದಕ್ಕೆ ಮಾತ್ರ ಸಂಬಂಧಪಟ್ಟ ಶಬ್ದಾಲಂಕಾರಗಳು. ಕಾಲಿಗೆ ಗೆಜ್ಜೆ ಕಟ್ಟಿಕೊಂಡು ನಡೆದರೆ, ಕುಣಿದರೆ, ವ್ಯಕ್ತಿಯ ಸೌಂದರ್ಯ ಹೆಚ್ಚುವುದಿಲ್ಲ. ಪ್ರಾಸ, ಅನುಪ್ರಾಸ, ಯಮಕ ಎಂದು ಅಲಂಕಾರ ಶಾಸ್ತ್ರದಲ್ಲಿ ವಿಂಗಡಿಸಿರುವ ಈ ಶಬ್ದಾಲಂಕಾರಗಳು ಕಾವ್ಯಕ್ಕೆ ಅಗತ್ಯವೇನಲ್ಲ. ಶಬ್ದ ಮತ್ತು ಅರ್ಥಗಳನ್ನು ಕಾವ್ಯದ ಶರೀರ ಎನ್ನಬಹುದು; ಅವಿಲ್ಲದೆ ಕಾವ್ಯವೇ ಆಗದು. ಆದ್ದರಿಂದಲೇ, 'ಶಬ್ದಾರ್ಥಗಳು ಹೊಂದಿಕೊಂಡು ಒದಗಿರುವುದು ಕಾವ್ಯ' (ಶಬ್ದಾರ್ಥೌಸಹಿತೌ ಕಾವ್ಯಂ')[೬] ಎಂಬ ಕಾವ್ಯ ಲಕ್ಷಣ ಸೂತ್ರ ಪ್ರಸಿದ್ಧವಾಯಿತು. (ಇಲ್ಲಿ ಕೂಡ, ಕವಿ ಮನಸ್ಸಿನಲ್ಲಿ ಕುರಿತಿರುವ ಅರ್ಥ ಎಂದು ತಿಳಿಯಬೇಕು.) ಶರೀರಕ್ಕೆ ಒಡವೆಗಳು ಅಗತ್ಯವೇನಲ್ಲ; ಹಾಕಿಕೊಂಡರೆ ಹಾಕಿಕೊಳ್ಳಬಹುದು, ಬಿಟ್ಟರೆ ಬಿಡಬಹುದು. ಶರೀರ ಸೌಂದರ್ಯವನ್ನು ಅವು ಹೆಚ್ಚಿಸಬಲ್ಲವೇ ಹೊರತು ಅವೇ ಶರೀರ ಸೌಂದರ್ಯವಲ್ಲ. ಸುಂದರವಾಗಿರುವ

ಕಾವ್ಯದ ಆತ್ಮದ ವಿಚಾರವಾಗಿ ಒಂದು ಹೊಸ ದೃಷ್ಟಿಯಿಂದ ವಿಚಾರ ಮಾಡಿ, 'ಧ್ವವನಿ'ಯೇ ಕಾವ್ಯದ ಆತ್ಮವೆಂದು ಹೇಳಿ, ಕಾವ್ಯದಲ್ಲಿ ಗುಣ ಅಲಂಕಾರ ರಸಗಳಿಗೆ ಉಚಿತವಾದ ಸ್ಥಾನವನ್ನು ಕಲ್ಪಿಸಿದವನು ಸಂಸ್ಕೃತ ಅಲಂಕಾರಿಕ ಆನಂದವರ್ಧನಾಚಾರ್ಯ. 'ಧ್ವನಿ' ಎಂಬ ಕಾವ್ಯ ತತ್ತ್ವದ ಮಾತು ತನಗಿಂತಲೂ ಹಿಂದೆ ಇದ್ದುದೇ ಎಂದು ಆತನೇ ಹೇಳಿದ್ದಾನೆ. ಧ್ವನಿ ತತ್ತ್ವವನ್ನು ವಿರೋಧಿಸುವವರೂ ಇದ್ದರು. ಕವಿರಾಜಮಾರ್ಗದಲ್ಲಿಯೇ 'ಧ್ವನಿಯೆಂಬುದಲಂಕಾರಂ' (iii–೨೦೮) ಎಂಬ ಮಾತು ಬಂದಿದೆ. ಈ ಧ್ವನಿವಾದ ರಸದ ಪ್ರಾಶಸ್ತ್ಯವನ್ನು ಕುಗ್ಗಿಸಲಿಲ್ಲ. ಕಾವ್ಯದಲ್ಲಿ ಒಂದು ವಿಷಯ (ವಸ್ತು)ವೇ ಆಗಲಿ, ಹೋಲಿಕೆ ಮುಂತಾದ ಅಲಂಕಾರಗಳೇ ಆಗಲಿ, ಶೃಂಗಾರಾದಿ ರಸಗಳೇ ಆಗಲಿ – ಯಾವುದನ್ನೂ ಬಿಡಿಸಿ ಹೇಳದೆ, ಓದುಗನ ಊಹೆಗೆ ಬಿಟ್ಟು ಅದು ಸೂಚಿಸುವಂತೆ ಹೇಳುವುದೇ 'ಧ್ವನಿ' ಮಾರ್ಗ. ಈ ಮೊದಲೇ ಉದಾಹರಿಸಿರುವ ಮೂರನೆಯ ಪದ್ಯದಲ್ಲಿ ಹೆಣ್ಣು ಮಗಳ ತವರಿನ ಅಗಲಿಕೆಯ ನೋವನ್ನು ಬಿಡಿಸಿ ತಿಳಿಸಿಲ್ಲ; ಆದರೂ ನಮ್ಮ ಅನುಭವಕ್ಕೆ ಬರುತ್ತದೆ. ಅವಳ ವೇದನೆಯಲ್ಲಿ ನಾವು ಭಾಗಿಯಾಗುತ್ತೇವೆ. ಕೊನೆಗೂ ನಾವು ಅನುಭವಿಸುವುದು ರಸವೇ. ಅದಕ್ಕೇ ಕಾವ್ಯದಲ್ಲಿ ಪಟ್ಟ. ಹೀಗಿರುವುದರಿಂದ, ಧ್ವನಿ ತತ್ವವನ್ನು ಅಲ್ಲಗಳೆಯದಿದ್ದರೂ 'ವಾಕ್ಯಂ ರಸಾತ್ಮಕಂ ಕಾವ್ಯ' (ರಸವತ್ತಾಗಿರುವ ವಾಕ್ಯ ಕಾವ್ಯ) ಎಂಬ ಪ್ರಸಿದ್ಧವಾದ ಹೇಳಿಕೆಯೂ ಮುಂದೆ ಬಂದಿತು.[೯]

ಕೆಲವು ವೇಳೆ, ಯಾವ ರಸದ ಸೋಂಕೂ ಇಲ್ಲದ, ಧ್ವನಿಯೂ ಇಲ್ಲದ, ಕಣ್ಣಿಗೆ ಕಟ್ಟುವಂಥ ಸುಂದರವಾದ ವರ್ಣನೆ ಇರಬಹುದು. ನಮ್ಮ ಪ್ರಾಚೀನ ಕನ್ನಡ ಕಾವ್ಯಗಳಲ್ಲಿಯೇ ಇಂಥ ವರ್ಣನೆಗಳು ಲೆಕ್ಕವಿಲ್ಲದಷ್ಟು ಇವೆ. ಇವುಗಳ ಗತಿಯೇನು? ಇವು ಕಾವ್ಯವಲ್ಲವೆ? ಎಂಬ ಪ್ರಶ್ನೆಗೆ ಉತ್ತರವಾಗಿ ಎಂಬಂತೆ ಒಬ್ಬ ಅಲಂಕಾರಿಕ – 'ರಮಣೀಯವಾದ ಅರ್ಥವನ್ನು ಪ್ರತಿಪಾದಿಸುವ ಶಬ್ದವೂ ಕಾವ್ಯ' ಎಂಬ ಸಿದ್ಧಾಂತವನ್ನು ಮುಂದಿಟ್ಟನು.[೧೦]

ಕಾವ್ಯದಲ್ಲಿ ಎಲ್ಲವೂ ಮುಖ್ಯವೇ. ಆತ್ಮಕ್ಕೆ ಶರೀರವೇ ವಾಸಸ್ಥಾನ. ಶಬ್ದಾರ್ಥಗಳನ್ನು ಬಿಟ್ಟು ರಸವೂ ಇಲ್ಲ, ಧ್ವನಿಯೂ ಇಲ್ಲ. ಅಲಂಕಾರ ಅಗತ್ಯವಲ್ಲದಿದ್ದರೂ ಅದಕ್ಕೂ ಸ್ಥಾನವಿದೆ. ಎಲ್ಲವೂ ಉಚಿತವಾದ ರೀತಿಯಲ್ಲಿ ಬಂದಿರಬೇಕು, ಅಷ್ಟೆ. ಈ ವರೆಗೆ ವಿವರಿಸಿದ ಮುಖ್ಯ ಕಾವ್ಯ ಲಕ್ಷಣಗಳನ್ನು ಪರಸ್ಪರ ಹೊಂದಾಣಿಕೆ ಮಾಡಿ, ಹೀಗೆ ಹೇಳಬಹುದು:

"…. ಅರ್ಥಾಲಂಕಾರಗಳು ರಸಪುಷ್ಟಿಯನ್ನುಂಟು ಮಾಡುವ ಕಡೆಗಳಲ್ಲಿ

ತತ್ತ್ವವನ್ನು ನಿಶ್ಚಯಿಸುವುದರಲ್ಲಿ ದಂಡಿ ಒಂದು ಹೆಜ್ಜೆ ಮುಂದೆ ಇಟ್ಟಂತಾಯಿತು. ಕನ್ನಡದ ಪ್ರಥಮ ಅಲಂಕಾರ ಗ್ರಂಥ ಕರ್ತನಾದ ಶ್ರೀವಿಜಯನು ಭಾಮಹನ ವಿಂಗಡನೆಯನ್ನು ಒಪ್ಪಿಕೊಂಡರೂ ಅವನು ದಂಡಿಯನ್ನು ಅನುಸರಿಸಿ, ಹತ್ತು ಶಬ್ದ ಗುಣಗಳು ಮತ್ತು ದಕ್ಷಿಣೋತ್ತರ ಮಾರ್ಗಗಳ ವಿಚಾರವನ್ನು ತನ್ನ 'ಕವಿರಾಜಮಾರ್ಗ'ದಲ್ಲಿ ವಿಸ್ತಾರವಾಗಿ ವಿವರಿಸಿದ್ದಾನೆ.

ಕಾವ್ಯಶರೀರಕ್ಕೆ ಸೇರದ ಅಂದರೆ ಅದರ ಅಂಗವಲ್ಲದ – ಅಲಂಕಾರಕ್ಕಿಂತ ಬೇರೆಯಾಗಿ ಶರೀರವನ್ನೆಲ್ಲಾ (ಎಂದರೆ ಶಬ್ದಾರ್ಥಗಳನ್ನು) ವ್ಯಾಪಿಸಿರುವ ಗುಣವೇ ಕಾವ್ಯದ ಪ್ರಾಣ ಎಂಬುದನ್ನು ಒಪ್ಪಿಕೊಳ್ಳಬೇಕು* ದಂಡಿ ಶಬ್ದಕ್ಕೆ ಸಂಬಂಧಪಟ್ಟಂತೆ ಮಾತು ಗುಣಗಳ ವಿಶ್ಲೇಷಣೆ ಮಾಡಿದ್ದ. ಅವನ ತರುವಾಯದ ಅಲಂಕಾರಿಕನಾದ ವಾಮನ ಶಬ್ದ ಗುಣಗಳು ಹತ್ತು, ಅರ್ಥ ಗುಣಗಳು ಹತ್ತು ಎಂದು ವಿಭಜನೆ ಮಾಡಿದನು. "ವಾಮನನು ಗುಣಗಳಿಗೆ ದಂಡಿಯ ಗ್ರಂಥದಲ್ಲಿ ದೊರೆತಿದ್ದ ಸ್ಥಾನವನ್ನು... ದೃಢಪಡಿಸಿ, ಅಲಂಕಾರಗಳ ಪ್ರಾಶಸ್ತ್ಯವನ್ನು ತಗ್ಗಿಸಿದನು. 'ಕಾವ್ಯ ಸೌಂದರ್ಯವನ್ನು ಉಂಟು ಮಾಡತಕ್ಕ ಧರ್ಮಗಳು ಗುಣಗಳು; ಅದನ್ನು ಹೆಚ್ಚಿಸತಕ್ಕವು ಮಾತ್ರ ಅಲಂಕಾರಗಳು. ಮೊದಲಿನವು ಇರಲೇ ಬೇಕಾದವು' ಎಂಬ ವಾಮನನ ಸೂತ್ರಗಳು ಪ್ರಸಿದ್ಧವಾಗಿವೆ.... ದಂಡಿ ಮಾರ್ಗವೆನ್ನುವುದನ್ನು ವಾಮನನು 'ರೀತಿ' ಎಂಬ ಹೊಸ ಪದದಿಂದ ಕರೆದಿರುವುದನ್ನೂ ಇಲ್ಲಿ ಗಮನಿಸಬೇಕು. ಪದವೊಂದೇ ಅಲ್ಲ; ಅದರ ಪದವಿಯೂ ಹೊಸದು: "ರೀತಿರಾತ್ಮಾ ಕಾವ್ಯಸ್ಯ" ("ರೀತಿಯೇ ಕಾವ್ಯದ ಆತ್ಮ"). ವಾಮನನಿಗೆ ಹಿಂದಿನ ಯಾವ ಅಲಂಕಾರಿಕನೂ ಹೀಗೆ ಕಾವ್ಯದ 'ಆತ್ಮ'ವನ್ನೂ ವಿಚಾರ ಮಾಡಲು ಹೊರಟಿರಲಿಲ್ಲ. ರೀತಿಯೆಂದರೆ ಗುಣಾತ್ಮಕವಾದ ಪದರಚನೆ.[೮] ಇಂದಿನ ಸಾಹಿತ್ಯ ವಿಮರ್ಶೆಯಲ್ಲಿ ಯಾವುದನ್ನು 'ಶೈಲಿ'ಯೆನ್ನುತ್ತೇವೆಯೋ ಅದಕ್ಕೂ ಈಗ ಪ್ರಸ್ತಾಪ ಮಾಡಿದ ರೀತಿಗೂ ಸ್ವಲ್ಪ ವ್ಯತ್ಯಾಸವಿದೆ. ಅದರ ವಿವರಣೆ ಸದ್ಯಕ್ಕೆ ಬೇಡ.

---

* ಇಲ್ಲಿ ಒಂದು ಸಂಗತಿಯನ್ನು ಗಮನಿಸಬೇಕು; ಒಡವೆಗಳನ್ನು ಮೈಮೇಲೆ ಹಾಕಿಕೊಂಡು ಕಳಚಿಡುವಂತೆ, ಕವಿ ಅಲಂಕಾರಗಳನ್ನು ಪ್ರತ್ಯೇಕವಾಗಿ ರಚಿಸಿ ಕಾವ್ಯಕ್ಕೆ ಸೇರಿಸುತ್ತಾನೆ ಎಂದು ತಿಳಿಯಬಾರದು. ಕರ್ಣನು ಹುಟ್ಟುವಾಗಲೇ ಕವಚಕುಂಡಲಗಳನ್ನು ಧರಿಸಿಕೊಂಡು ಹುಟ್ಟಿದಂತೆ, ಕಾವ್ಯ ನಿರ್ಮಾಣ ಕಾಲದಲ್ಲಿ ಅಲಂಕಾರಗಳು ಕಾವ್ಯ ಶರೀರದ ಒಂದು ಜೀವಂತ ಭಾಗವಾಗಿ ಅದರೊಂದಿಗೆ ರೂಪುಗೊಂಡಿರುತ್ತದೆ. ಹೂವು ಗಿಡದಲ್ಲಿಯೆ ಬಿಟ್ಟು ಗಿಡಕ್ಕೆ ಅಲಂಕಾರವಾಗಿರುವಂತೆ; ಅರಳುವಾಗ ಹೂವಿನ ಜೊತೆಯೇ ಅದರ ಬಣ್ಣ ಇರುವಂತೆ, ಕಾವ್ಯದ ಅಲಂಕಾರ ಗಿಡಕ್ಕೆ ಸಿಕ್ಕಿಸಿದ ಬಣ್ಣದ ಕಾಗದದ ಹೂವಲ್ಲ.

ಹೊಂದಿದ್ದರು. ಹೀಗೆ ಕನ್ನಡದ 'ಲಕ್ಷ್ಯ'ಗಳು (ಲಕ್ಷಣಕ್ಕೆ ಮಾದರಿಯಾದ ಕಾವ್ಯಗಳು) ಸಂಸ್ಕೃತ ಕಾವ್ಯ ಲಕ್ಷಣವನ್ನೇ ಅನುಸರಿಸಿ ರಚಿತವಾದವು. ಲಕ್ಷ್ಯಗಳನ್ನು ಅವಲಂಬಿಸಿ ಲಕ್ಷಣ ಗ್ರಂಥಗಳು ಹುಟ್ಟಬೇಕಾದದ್ದು ಒಂದು ಸ್ವಾಭಾವಿಕ ಬೆಳವಣಿಗೆ. ಕನ್ನಡ ಲಕ್ಷಣ ಗ್ರಂಥಕಾರರು ಕನ್ನಡ ಲಕ್ಷ್ಯಗಳನ್ನು ಗಮನದಲ್ಲಿರಿಸಿಕೊಂಡಿದ್ದರೂ, ಬಹು ಮಟ್ಟಿಗೆ ಸಂಸ್ಕೃತ ಲಕ್ಷಣ ಗ್ರಂಥಗಳ ಜಾಡನ್ನೇ ಹಿಡಿದು ನಡೆದರು. ಕಾವ್ಯ ಲಕ್ಷಣ ಸಂಸ್ಕೃತದ್ದೇ ಆದರೂ ಕನ್ನಡದ ಎರಕಕ್ಕೆ ಬಿದ್ದು, ಕನ್ನಡದಲ್ಲೇ ಸ್ವತಂತ್ರವಾಗಿ ಸೃಷ್ಟಿಯಾಯಿತೋ ಏನೋ ಎಂಬಂತೆ ಸ್ವಂತ ಕಳೆಯಿಂದ ಕೂಡಿ ಒಂದು ಪುನರ್ನಿರ್ಮಾಣ ಕಾರ್ಯವೇ ನಡೆಯಿತು. ಇದು ಸಂತೋಷದ ಸಂಗತಿ. ಕನ್ನಡ ಲಕ್ಷಣ ಗ್ರಂಥಗಳನ್ನು ಸಂಪಾದನೆ ಮಾಡಿ ಪ್ರಕಟಿಸಿದ ವಿದ್ವಾಂಸರು ಅವು ಎಷ್ಟರ ಮಟ್ಟಿಗೆ ಸಂಸ್ಕೃತ ಮೂಲಗಳಿಗೆ ಋಣಿಯಾಗಿವೆ ಎಂಬುದನ್ನು ತಮ್ಮ ಪೀಠಿಕೆಗಳಲ್ಲಿ ಸೂಚಿಸುತ್ತ ಬಂದಿದ್ದಾರೆ. ಈಚೆಗೆ ಕೆ.ಕೃಷ್ಣಮೂರ್ತಿಗಳಂಥ ಸಂಸ್ಕೃತ ವಿದ್ವಾಂಸರು ಅನೇಕ ಮೂಲ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿ ಮಹೋಪಕಾರ ಮಾಡಿದ್ದಾರೆ. ಇದರಿಂದ, ಕನ್ನಡ ಗ್ರಂಥಗಳನ್ನು ಸಂಸ್ಕೃತ ಮೂಲಗಳೊಡನೆ ಹೋಲಿಸಿ, ಅವುಗಳ ಬೆಲೆ ಕಟ್ಟಲು ಸಾಧ್ಯವಾಗುತ್ತದೆ. ಈ ಕೆಲಸಕ್ಕೆ ಪ್ರತ್ಯೇಕವಾದ, ಆಳವಾದ, ಅಧ್ಯಯನಗಳು ನಡೆಯಬೇಕು. ಈ ಗ್ರಂಥದ ಇತಿಮಿತಿಯಲ್ಲಿ ಅದು ಸಾಧ್ಯವಿಲ್ಲ; ಅದು ಈ ಗ್ರಂಥದ ಉದ್ದೇಶವೂ ಅಲ್ಲ. ಮುಂದೆ, ಕನ್ನಡ ಕಾವ್ಯ ಲಕ್ಷಣ ಗ್ರಂಥಗಳ ಒಂದು ಸಂಕ್ಷೇಪವಾದ ಪರಿಚಯವನ್ನು ಮಾಡಿಕೊಟ್ಟಿದೆ. ಅಗತ್ಯವಾದ ಕಡೆಗಳಲ್ಲಿ ಅವುಗಳ ವಿಶೇಷ ಗುಣಗಳನ್ನು ತೋರಿಸಲಾಗಿದೆ. ಪ್ರಾಚೀನ ಕನ್ನಡ ಕಾವ್ಯಗಳ ಸ್ವಾರಸ್ಯವನ್ನು ಪೂರ್ತಿಯಾಗಿ ಸವಿಯಬೇಕಾದರೆ, ಈ ಲಕ್ಷಣ ಗ್ರಂಥಗಳ ವ್ಯಾಸಂಗ ಅಗತ್ಯ ಎಂದು ಬೇರೆ ಹೇಳಬೇಕಾಗಿಲ್ಲ.

ಸಂಸ್ಕೃತ ಅಲಂಕಾರ ಶಾಸ್ತ್ರಗ್ರಂಥಗಳ ಮತ್ತು ಅವುಗಳ ಕರ್ತೃಗಳ ಪಟ್ಟಿಯನ್ನು ಅನುಬಂಧವಾಗಿ ಕೊಟ್ಟಿದೆ.

## ಕನ್ನಡ ಲಕ್ಷಣ ಗ್ರಂಥಗಳು

### ಶ್ರೀ ವಿಜಯನ ಕವಿರಾಜಮಾರ್ಗ

ಈಗ ತಿಳಿದು ಬಂದಿರುವ ಮಟ್ಟಿಗೆ ಕವಿರಾಜಮಾರ್ಗವೇ ಕನ್ನಡದಲ್ಲಿ ಮೊತ್ತ ಮೊದಲನೆಯ ಕೃತಿ, ಹಾಗೂ ಮೊತ್ತ ಮೊದಲನೆಯ ಲಕ್ಷಣ ಗ್ರಂಥ. ಇದು ರಾಷ್ಟ್ರಕೂಟ ವಂಶದ ಒಂದನೆಯ ಅಮೋಘವರ್ಷ ನೃಪತುಂಗನ ಕಾಲದಲ್ಲಿ

ಮಾತ್ರ ಅವುಗಳಿಂದ ಕಾವ್ಯಾನಂದವು ಉಂಟಾಗುತ್ತದೆ. ಗುಣಗಳೂ ಅಷ್ಟೆ... ಪ್ರಾಚೀನರು ಪ್ರಾಶಸ್ತ್ಯ ಕೊಡುವ ರೀತಿ ಗುಣಾಲಂಕಾರಗಳು ಬೊಂಬೆಗೆ ಮಾಡುವ ಶೃಂಗಾರಗಳ ಹಾಗೆ! ಆದ್ದರಿಂದ ರೀತಿ ಗುಣಾಲಂಕಾರಗಳಿಂದ ಮಾತ್ರ ಕೂಡಿದ ಶಬ್ದಾರ್ಥಗಳು ಒಂದು ವೇಳೆ ಕಾವ್ಯವಾದರೂ 'ಚಿತ್ರ ಕಾವ್ಯ'ವಾಗಬಹುದೇ* ಹೊರತು ಉತ್ತಮ ಕಾವ್ಯವಾಗಲಾರವು. ಉತ್ತಮ ಕಾವ್ಯದಲ್ಲಿ ರಸವತ್ತಾದ ಅರ್ಥವಿರಬೇಕು. ಕಾವ್ಯದಲ್ಲಿ 'ರಸ'ವೇ ರಮಣೀಯವೆಂದೂ, ಅದಿದ್ದರೇ ಅರ್ಥವು 'ಇಷ್ಟ'ವಾಗುವುದೆಂದೂ ರಸವು ಯಾವಾಗಲೂ 'ವ್ಯಂಗ್ಯ' ಅಥವಾ 'ಧ್ವನಿತ'ವಾಗುವುದೆಂದೂ ಹೇಳಿಬಿಟ್ಟರೆ ಕಾವ್ಯಾತ್ಮ ವಿಚಾರವಾಗಿ ಇರತಕ್ಕ ಪರಸ್ಪರ ಭಿನ್ನಾಭಿಪ್ರಾಯಗಳು ಹೋದಂತಾಗುತ್ತದೆ.[೧೧] ಆದರೂ, "ನಮ್ಮ ಕಾವ್ಯಮೀಮಾಂಸೆಯ ತಿರುಳೆಲ್ಲ ರಸ–ಧ್ವನಿ–ಔಚಿತ್ಯ ಎಂಬ ಮಾತುಗಳಲ್ಲಿ ಅಡಗಿದೆ"[೧೨] ಎಂಬುದನ್ನು ಮರೆಯುವಂತಿಲ್ಲ.

ಅಲಂಕಾರ ಶಾಸ್ತ್ರದಲ್ಲಿ, ಅಲಂಕಾರ ಪ್ರಸ್ಥಾನ, ರೀತಿ ಪ್ರಸ್ಥಾನ, ಧ್ವನಿ ಪ್ರಸ್ಥಾನ ಎಂದು ಮೂರು ಪ್ರಸ್ಥಾನಗಳನ್ನು ಹೇಳಿದೆ. ಕೆಲವರು 'ರಸ ಪ್ರಸ್ಥಾನ'ವನ್ನೂ ಸೇರಿಸುತ್ತಾರೆ. ಪ್ರಸ್ಥಾನ ಎಂದರೆ ಒಂದು ನಿಶ್ಚಿತ ಸ್ಥಳದಿಂದ ಇನ್ನೊಂದು ನಿಶ್ಚಿತ ಸ್ಥಳಕ್ಕೆ ಪ್ರಯಾಣ ಹೊರಡುವುದು ಎಂದು ಅರ್ಥ. ಕಾವ್ಯದ ಸ್ವರೂಪವನ್ನು ನಿರ್ಣಯಿಸಲು ಹೊರಟಾಗ ಕೆಲವರು ಅಲಂಕಾರದ ನೆಲೆಯನ್ನು ತಲಪಿ, ಅದಕ್ಕೇ ಪ್ರಾಶಸ್ತ್ಯ ಕೊಟ್ಟರು. ಇದೇ ಅಲಂಕಾರ ಪ್ರಸ್ಥಾನ. ಹೀಗೆಯೇ ಇತರ ಪ್ರಸ್ಥಾನಗಳನ್ನೂ ಅರ್ಥ ಮಾಡಿಕೊಳ್ಳಬೇಕು. ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಈ ಪ್ರಸ್ಥಾನದ ವಿಷಯವನ್ನೇ ಮುಖ್ಯವಾಗಿಟ್ಟುಕೊಂಡು ಗ್ರಂಥಗಳು ಹುಟ್ಟಿವೆ. ಕೆಲವು ಪ್ರಸಿದ್ಧ ಅಲಂಕಾರ ಗ್ರಂಥಗಳಲ್ಲಿ ಕಾವ್ಯ ಲಕ್ಷಣ ಸಂಬಂಧವಾದ ಎಲ್ಲ ವಿಚಾರಗಳನ್ನೂ ಚರ್ಚಿಸಿದೆ. ಕನ್ನಡದಲ್ಲಿ ಅಲಂಕಾರ ಶಾಸ್ತ್ರದ ವಿಚಾರಗಳನ್ನು ಕುರಿತು ಗ್ರಂಥ ರಚನೆ ಮಾಡಿರುವವರೆಲ್ಲ ಬಹುಮಟ್ಟಿಗೆ ಸಂಸ್ಕೃತ ಮೂಲ ಗ್ರಂಥಗಳಲ್ಲಿ ಹೇಳಿರುವ ವಿಚಾರಗಳನ್ನು ಸಂಪೂರ್ಣವಾಗಿ ಸ್ವೀಕರಿಸಿ ಕನ್ನಡದಲ್ಲಿ ನಿರೂಪಿಸಿದ್ದಾರೆ. ಇದಕ್ಕೆ ಮುಖ್ಯ ಕಾರಣವೇನೆಂದರೆ, ಪ್ರಾಚೀನ ಕನ್ನಡ ಕವಿಗಳು ಸಂಸ್ಕೃತ ಕಾವ್ಯಗಳನ್ನೇ ಮಾದರಿಯಾಗಿಟ್ಟುಕೊಂಡು ಕಾವ್ಯಗಳನ್ನು ರಚಿಸಿದರು. ಅಲ್ಲದೆ, ಅವರು ತಮ್ಮ ತಮ್ಮ ಕಾಲದವರೆಗೆ ಬೆಳೆದು ಬಂದಿದ್ದ ಸಂಸ್ಕೃತ ಅಲಂಕಾರ ಶಾಸ್ತ್ರದಲ್ಲಿ ಪಾಂಡಿತ್ಯ

---

* 'ಚಿತ್ರಕಾವ್ಯ' ಎಂದರೆ ಚಮತ್ಕಾರವಾದ ಅಲಂಕಾರಗಳು ಮುಖ್ಯವಾಗಿರುವ ಸಾಧಾರಣ ಕಾವ್ಯ, ಮೂರನೆಯ ದರ್ಜೆಯದು.

ಸ್ಮರಿಸುತ್ತಾನೆ; ಪದ್ಯಕವಿಗಳಾದ ಗುಣಸೂರಿ, ನಾರಾಯಣ, ಭಾರವಿ, ಕಾಳಿದಾಸ, ಮಾಘ, ಇವರನ್ನು ನೆನೆಯುತ್ತಾನೆ. ಕನ್ನಡದಲ್ಲಿಯೂ ಶ್ರೇಷ್ಠರಾದ ಗದ್ಯ ಕವಿಗಳಿದ್ದರು; ಅವರು ಗದ್ಯ ಪದ್ಯ ಮಿಶ್ರವಾದ ಕಾವ್ಯಗಳನ್ನು ರಚಿಸುತ್ತಿದ್ದರು; ಅವು 'ಗದ್ಯ ಕಥೆ'* ಎಂದು ಪ್ರಸಿದ್ಧವಾಗಿದ್ದುವು. ಈ ಶ್ರೇಷ್ಠರಾದ ಗದ್ಯ ಕವಿಗಳಲ್ಲಿ ವಿಮಲ, ಉದಯ, ನಾಗಾರ್ಜುನ, ಜಯಬಂಧು, ದುರ್ವಿನೀತ, ಮುಂತಾದವರು ಮುಖ್ಯರು. ಕನ್ನಡದ ಪದ್ಯಕವಿಗಳಲ್ಲಿ ಶ್ರೀ ವಿಜಯ, ಕವೀಶ್ವರ, (ಪಂಡಿತ) ಚಂದ್ರ, ಲೋಕಪಾಲ, ಮುಂತಾದವರು ಘನವಾದ ಪುರಾಣ ವಸ್ತುಗಳನ್ನು ನಿರೂಪಿಸುವ ಕಾವ್ಯಗಳನ್ನು ಬರೆದಿದ್ದರು. ಶ್ರೇಷ್ಠ ಕಾವ್ಯಕ್ಕೆ ಇವರ ಕೃತಿಗಳೇ ಲಕ್ಷ್ಯ, ಮಾದರಿ. ಈ ಪುರಾತನ ಕವಿಗಳು ಸಂಸ್ಕೃತ ಕಾವ್ಯಮಾರ್ಗವನ್ನು ಅನುಸರಿಸಿ ರಚಿಸಿದ ಕಾವ್ಯಗಳಲ್ಲಿ 'ಚತ್ತಾಣ' ಮತ್ತು 'ಬೆದೆಂಡೆ' ಎಂಬ, ಬಹುಶಃ 'ಹಾಡುಗಬ್ಬ' ಎಂದು ಕನ್ನಡದಲ್ಲಿ ಹೆಚ್ಚುಗಾರಿಕೆ ಪಡೆದಿದ್ದ ಕಾವ್ಯ ಜಾತಿಗಳನ್ನು ಸೇರ್ಪಡೆ ಮಾಡಿದರು. ಶ್ರೀ ವಿಜಯನ ಹೇಳಿಕೆಯಂತೆ, ಕಂದವೂ (ಅಕ್ಷರ) ವೃತ್ತವೂ ಒಂದಾದ ಮೇಲೆ ಒಂದರಂತೆ ಕ್ರಮವಾಗಿ ಬಂದಿದ್ದು, ಇವುಗಳ ಜೊತೆಗೆ ಮಾತ್ರಾ ಛಂದಸ್ಸಿನ ಪದ್ಯ ('ಜಾತಿ')ಗಳೂ ಕೂಡಿಕೊಂಡಿದ್ದರೆ, 'ಸುಂದರ ರೂಪದ' ಬೆದಂಡೆ–ಗಬ್ಬವಾಗುವುದು. ಕಂದಗಳು ಹೆಚ್ಚಿನ ಸಂಖ್ಯೆಯಲ್ಲೂ ಇದ್ದು, (ಅಕ್ಷರ) ವೃತ್ತಗಳೂ, ಅಕ್ಕರ ಚೌಪದಿ ಗೀತಿಕೆ ತ್ರಿಪದಿ – ಈ ಅಚ್ಚಗನ್ನಡದ ಪದ್ಯ ಜಾತಿಗಳೂ ಇರುವ ಕಾವ್ಯ ಚತ್ತಾಣ ಎನ್ನಿಸಿಕೊಳ್ಳುವುದು. ಈ ಜಾತಿಯ ಕಾವ್ಯಗಳು ಯಾವುವೂ ಈ ವರೆಗೆ ಸಿಕ್ಕಿಲ್ಲ. ಅನೇಕ ಕವಿಗಳು ಇವುಗಳ ಪ್ರಸ್ತಾಪವನ್ನೇನೋ ಮಾಡಿದ್ದಾರೆ.

ಈ ವಿಷಯಗಳನ್ನು ತಿಳಿಸುವುದಕ್ಕೆ ಮುಂಚೆ ಕಾವ್ಯದ ಸ್ವರೂಪವನ್ನು ಕುರಿತು ಶ್ರೀವಿಜಯನು ಹೇಳಿರುವ ಮಾತುಗಳು ಗಮನಾರ್ಹವಾಗಿವೆ. ಇವನಿಗೆ ಹಿಂದಿನ ಯಾವ ಸಂಸ್ಕೃತ ಲಕ್ಷಣ ಗ್ರಂಥಗಳಲ್ಲಿಯೂ ಈ ವಿಚಾರ ಸರಣಿ ಕಂಡು ಬರುವುದಿಲ್ಲ. ಕಾವ್ಯ ಸೃಷ್ಟಿಗೆ ಮಾತೇ ಮೂಲವಷ್ಟೆ. ಮೃಗ ಪಕ್ಷಿಗಳ 'ಭಾಷೆ'ಗೂ ಮನುಷ್ಯರ ವಚನ ಪ್ರವೃತ್ತಿಗೂ ಇರುವ ವ್ಯತ್ಯಾಸವನ್ನು ಸೂಚಿಸಿ, ಮೆಟ್ಟಿಲು ಮೆಟ್ಟಿಲಾಗಿ 'ನುಡಿಬಲ್ಮೆ'ಯನ್ನು ವಿವರಿಸಿ:

---

* 'ಗದ್ಯಪದ್ಯ ಮಿಶ್ರಕಾವ್ಯವನ್ನು ದಂಡಿ 'ಚಂಪೂ' ಎಂದು ಕರೆದಿದ್ದಾನೆ. ಶ್ರೀ ವಿಜಯ ಅದನ್ನು ಗದ್ಯಕಥೆ ಎಂದು ಕರೆದಿರುವುದನ್ನು ನೋಡಿದರೆ, ಇದರಲ್ಲಿ ಗದ್ಯದ ಭಾಗ ಬಹಳ ಹೆಚ್ಚಾಗಿತ್ತೆಂದು ಕಾಣುತ್ತದೆ. ಈ ಗದ್ಯ ಕಥೆಯ ಪ್ರಕಾರಕ್ಕೆ ಚತ್ತಾಣ ಬೆದಂಡೆಗಳು ಬೆರೆತು, ಬಹುಕಾಲದ ಮೇಲೆ ಈ ವಿಶೇಷ ಕನ್ನಡ ಕಾವ್ಯ ಪ್ರಕಾರಕ್ಕೆ 'ಚಂಪು' ಎಂಬ ಹೆಸರು ಕನ್ನಡದಲ್ಲಿ ಬಳಕೆಗೆ ಬಂದಂತೆ ಕಾಣುತ್ತದೆ. ಈ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ.

(ಕ್ರಿ.ಶ.೮೧೪–೮೭೭) ರಚಿತವಾಯಿತು. ಇದನ್ನು ರಚಿಸಿದವನು ನೃಪತುಂಗನೇ, ಅಥವಾ ಅವನ ಆಸ್ಥಾನದಲ್ಲಿದ್ದ ಶ್ರೀವಿಜಯನೇ, ಎಂಬ ವಿಷಯದಲ್ಲಿ ಬಹಳ ಚರ್ಚೆ ನಡೆದಿದೆ. ಗ್ರಂಥದ ಪ್ರತಿ ಅಧ್ಯಾಯದ ಕೊನೆಯಲ್ಲೂ 'ನೃಪತುಂಗ ದೇವನ ಒಪ್ಪಿಗೆ ಪಡೆದ ಕವಿರಾಜಮಾರ್ಗದಲ್ಲಿ' (ನೃಪತುಂಗದೇವಾನುಮತಮಪ್ಪ ಕವಿರಾಜಮಾರ್ಗದೊಳ್) ಎಂಬ ಮಾತು ಬರುತ್ತದೆ. ಅಲ್ಲದೆ, ಅಲಂಕಾರ ಶಾಸ್ತ್ರದ ಕೆಲವು ವಿಚಾರಗಳನ್ನು ತಿಳಿಸುವಾಗ 'ಇದು ನೃಪತುಂಗದೇವನ ಅಭಿಪ್ರಾಯ', 'ನೃಪತುಂಗದೇವನ ಮಾರ್ಗ', ಅತಿಶಯಧವಳನ ಕ್ರಮ', ಎಂದು ಮುಂತಾಗಿ ಹತ್ತಿಪ್ಪತ್ತು ಸಲ ನೃಪತುಂಗನ ಹೆಸರು ಹೇಳಿದೆ. ಮುಖ್ಯವಾಗಿ ಈ ಹೇಳಿಕೆಗಳ ಆಧಾರದ ಮೇಲೆ ಕವಿರಾಜಮಾರ್ಗವನ್ನು ಮೊದಲು ಸಂಪಾದಿಸಿ ಪ್ರಕಟಿಸಿದ ಕೆ.ಬಿ. ಪಾಠಕ ಎಂಬ ವಿದ್ವಾಂಸರು ನೃಪತುಂಗನೇ ಗ್ರಂಥಕರ್ತ ಎಂದು ತೀರ್ಮಾನಿಸಿದರು. ಪ್ರತಿ ಅಧ್ಯಾಯದ ಕಡೆಯ ಪದ್ಯದಲ್ಲಿಯೂ 'ಶ್ರೀ ವಿಜಯನಿಂದ ಪ್ರಭೂತವಾದದ್ದು' (ಎಂದರೆ ಉಂಟಾದದ್ದು) ಎಂಬ ಮಾತೂ ಇದೆ. ದುರ್ಗಸಿಂಹನೆಂಬ ಕವಿ (ಕ್ರಿ.ಶ.೧೦೩೧) 'ಶ್ರೀ ವಿಜಯರ ಕವಿರಾಜಮಾರ್ಗವು, ಕವಿಜನಕ್ಕೆ ಕನ್ನಡಿಯೂ ಕೈದೀವಿಗೆಯೂ ಆಯಿತು' ಎಂದು ಕೊಂಡಾಡಿದ್ದಾನೆ. ಕವಿರಾಜ ಮಾರ್ಗದ ಕಡೆಯ ಹತ್ತಾರು ಪದ್ಯಗಳಲ್ಲಿ ನೃಪತುಂಗನ ಸಭಾಸದನ ವರ್ಣನೆಯೂ ಬರುತ್ತದೆ. ಇನ್ನು ಅನೇಕ ಸಾಕ್ಷ್ಯಗಳನ್ನು ಚೆನ್ನಾಗಿ ಪರೀಕ್ಷೆ ಮಾಡಿ ಟಿ.ಎಸ್. ವೆಂಕಣ್ಣಯ್ಯನವರೇ ಮುಂತಾದ ಈಚಿನ ಹಲವು ವಿದ್ವಾಂಸರು ಶ್ರೀ ವಿಜಯನೇ ಗ್ರಂಥಕರ್ತ ಎಂದು ಸ್ಥಾಪಿಸಿದ್ದಾರೆ.

ಕವಿರಾಜಮಾರ್ಗವು ಮೊತ್ತ ಮೊದಲನೆಯ ಅಲಂಕಾರ ಗ್ರಂಥ ಎಂಬ ಕಾರಣದಿಂದ ಮಾತ್ರವಲ್ಲದೆ, ಕನ್ನಡ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದಲೂ ಆ ಕಾಲದ ಕನ್ನಡ ನಾಡು ನುಡಿ ಜನಗಳ ವಿಚಾರವಾಗಿ ತುಂಬ ಉಪಯುಕ್ತವಾದ ತಿಳಿವಳಿಕೆಯನ್ನು ಕೊಡತಕ್ಕದ್ದು ಎಂಬ ಕಾರಣದಿಂದಲೂ, ಒಂದು ಮಹತ್ವದ ಗ್ರಂಥವೆನಿಸಿದೆ. ಛಂದಸ್ಸು ಮತ್ತು ವ್ಯಾಕರಣಗಳ ವಿಚಾರವಾಗಿಯೂ ಕೆಲವು ಮುಖ್ಯ ಸಂಗತಿಗಳು ತಿಳಿದು ಬರುತ್ತವೆ.

ದುರ್ಗಸಿಂಹನೆಂಬ ಕವಿ ಹೇಳಿರುವಂತೆ, ಕಾವ್ಯ ರಚನೆ ಮಾಡಬೇಕೆನ್ನುವವರಿಗೆ ಕವಿರಾಜಮಾರ್ಗ ಒಂದು ಕನ್ನಡಿ, ದಾರಿದೀಪ. ಶ್ರೀ ವಿಜಯನು ಲಕ್ಷಣ ವಿಚಾರಗಳನ್ನು ವಿವರಿಸುವುದಕ್ಕೆ ಮುಂಚೆ ಕವಿಗಳಾಗಬೇಕೆನ್ನುವವರಿಗೆ ಒಂದು ಉನ್ನತ ಆದರ್ಶವನ್ನು ಮುಂದಿಡಬೇಕೆಂಬ ಉದ್ದೇಶದಿಂದ, ಸಂಸ್ಕೃತ ಗದ್ಯದಲ್ಲಿ ಬಾಣನ ಹರ್ಷಚರಿತ ಕಾದಂಬರಿಗಳನ್ನು

ಎಂಬುದು ದಂಡಿಯ ವಿವರಣೆ.[೧೩] ಶ್ರೀ ವಿಜಯನು, "ಕಾವ್ಯವು ಕವಿಭಾವದಿಂದ ನಿರ್ಮಿತವಾದದ್ದು; ಬೇರೆ ಬೇರೆ ವಿಧಾನಗಳಲ್ಲಿ ಚೆನ್ನಾಗಿ ಹೇಳಿದ ವಚೋಮಾರ್ಗ (ಮಾತಿನ ರೀತಿ); ಅದು ಒಂದು ವಿಶೇಷ ರೀತಿಯ ಶಬ್ದ ರಚನೆ; ನಾನಾ ಬಗೆಯ ಅರ್ಥಗಳಿಂದ ರೂಪುಗೊಂಡ ಅಲಂಕಾರ," (i–೨೨) ಎಂದು ಹೇಳಿರುವುದು ಸೂತ್ರರೂಪದಲ್ಲಿ ಸಂಕ್ಷೇಪವಾಗಿಲ್ಲದಿದ್ದರೂ ಬಹುಮಟ್ಟಿಗೆ ಪರಿಪೂರ್ಣವಾಗಿದೆ. ಕಾವ್ಯದ ಎಲ್ಲ ಅಂಗ ಗಳಿಗೂ ಕವಿಯ ಭಾವವೇ ಮೂಲವೆಂಬುದನ್ನು ಗಮನಿಸತಕ್ಕದಾಗಿದೆ. ಹಾಗೆಯೇ, ಇಡಿಯ ಕಾವ್ಯವನ್ನೇ ಒಂದು 'ಅಲಂಕಾರ' ಎಂದಿರುವುದರಿಂದ ಕಾವ್ಯದ ಸೌಂದರ್ಯ ಅದರ ಹೊರಭಾಗ (ಶಬ್ದ, ಅರ್ಥ, ಅಲಂಕಾರ, ಗುಣ ರೀತಿ) ಮತ್ತು ಒಳಭಾಗ (ರಸ)ಗಳೆರಡನ್ನೂ ವ್ಯಾಪಿಸಿರತಕ್ಕದ್ದು ಎಂಬ ಆಶಯವನ್ನು ನಾವು ಗ್ರಹಿಸಬಹುದು.

ಈ ವಿಷಯಗಳನ್ನು ಹೇಳಿ, ಶ್ರೀವಿಜಯನು ಕನ್ನಡ ನಾಡಿನ ವಿಸ್ತಾರವನ್ನು ಈ ಕೆಳಗಿನ ಪದ್ಯದಲ್ಲಿ ಹೆಮ್ಮೆಯಿಂದಲೇ ತಿಳಿಸಿದ್ದಾನೆ:

ಕಾವೇರಿಯಿಂದಂ ಆ ಗೋ
ದಾವರಿವರಂ ಇರ್ಪ ನಾಡದು ಆ ಕನ್ನಡದೊಳ್
ಭಾವಿಸಿದ ಜನಪದಂ, ವಸು–
ಧಾವಲಯ ವಿಲೀನ ವಿಶದ ವಿಷಯ ವಿಶೇಷಂ (i–೩೬)

[ಕಾವೇರಿಯಿಂದ ಗೋದಾವರಿಯ ವರೆಗೆ ಇರುವ ಆ ನಾಡು ಕನ್ನಡದ್ದೆಂದು ಮಾನ್ಯವಾದ ದೇಶ; ಭೂಮಂಡಲದಲ್ಲಿ ಸೇರಿಕೊಂಡು, ತನ್ನ ವಿಶೇಷತೆಯಿಂದ ಪ್ರಸಿದ್ಧವಾಗಿರುವ ದೇಶ.]

ಇಲ್ಲಿ 'ಕನ್ನಡ'ವೆಂಬ ಮಾತು 'ಕನ್ನಡ ನಾಡು' ಎಂಬ ಅರ್ಥದಲ್ಲಿಯೇ ಬಂದಿದೆ. ಆಂಡಯ್ಯನೆಂಬ ಕವಿ ಇದೇ ಅರ್ಥದಲ್ಲಿ ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು' ಎಂದು ಹೇಳಿರುವುದನ್ನೂ ಇಲ್ಲಿ ನೆನೆಯಬಹುದು. ಮೇಲಿನ ಪದ್ಯದ "ವಸುಧಾವಲಯ ವಿಲೀನ ವಿಶದ ವಿಷಯ ವಿಶೇಷಂ" ಎಂಬ ಮಾತಿಗೆ ಒಂದು ಹೊಸ ಅರ್ಥವನ್ನು ಕಲ್ಪಿಸಿ, ಅದು "ಈಗ ನಾವು ಫೆಡರಲ್ (Federal) ಎನ್ನುವ ರಾಜ್ಯಘಟನೆಯ ತತ್ತ್ವವನ್ನು ಸೂಚಿಸತಕ್ಕದ್ದಾಗಿದೆ" ಎಂದು ವಿದ್ವಾಂಸರೊಬ್ಬರು ವಿವರಿಸಿರುವುದು ಹೊಸ ಬೆಳಕನ್ನು ಚೆಲ್ಲಿದೆ. ನೃಪತುಂಗನ ಕುಲದಲ್ಲಿ ಕರ್ನಾಟಕ ಸಾಮ್ರಾಜ್ಯ ಬೇರೆ ಬೇರೆ ಅಧೀನ ರಾಜ್ಯಗಳನ್ನು ಒಳಗೊಂಡಿತ್ತಷ್ಟೆ. ಬೇರೆ ಬೇರೆ

ಕುರಿತಂತು ಪೆರರ ಬಗೆಯಂ
ತೆರೆದಿರೆ ಪೆರರ್ಗೆ ಅರಿಪಲಾರ್ಪವಂ ಮಾತರಿವಂ;
ಕಿರಿದರೊಳೆ ಪಿರಿದುಂ ಅರ್ಥಮಂ
ಅರಿಪಲ್ ನೆರವಾತನ್ ಆತನಿಂದಂ ನಿಪುಣಂ (i–೧೫)

ನುಡಿಯಂ ಛಂದದೊಳ್ ಒಂದಿರೆ
ತೊಡರ್ಚಲ್ ಅರಿವಾತನ್ ಆತನಿಂದಂ ಜಾಣಂ;
ತಡೆಯದೆ ಮಹಾಧ್ವಕೃತಿಗಳಂ
ಒಡರಿಸಲ್ ಆರ್ಪಾತನ್ ಎಲ್ಲರಿಂದಂ ಬಲ್ಲಂ (i–೧೬)

[ತಾನು ಹೇಳಬೇಕೆಂದಿರುವುದನ್ನು ಇತರರ ಮನಸ್ಸಿಗೆ ಹಿಡಿಸುವ ರೀತಿಯಲ್ಲಿ ತಿಳಿಸಬಲ್ಲವನು ಮಾತುಬಲ್ಲವನು; ಹಿರಿದಾದ ಅರ್ಥವನ್ನು ಕೆಲವೇ ಮಾತುಗಳಲ್ಲಿ ತಿಳಿಸಲು ಸಮರ್ಥನಾದವನು ಆತನಿಗಿಂತ ನಿಪುಣ. ಇವನಿಗಿಂತಲೂ ಜಾಣನಾದವ ನೆಂದರೆ, ನುಡಿಗಳನ್ನು ಛಂದಸ್ಸಿನಲ್ಲಿ ಕೂಡಿಸಿ ಹೇಳಬಲ್ಲವನು (ಎಂದರೆ, ಪದ್ಯರಚನೆ ಮಾಡಬಲ್ಲವನು). ಮಹಾಮಾರ್ಗ ಕಾವ್ಯಗಳನ್ನು ರಚಿಸಬಲ್ಲವನು ಎಲ್ಲರಿಗಿಂತಲೂ ಸಮರ್ಥ.]

–ಎಲ್ಲರಿಗಿಂತಲೂ ಮಹಾಕವಿ ಶ್ರೇಷ್ಠನೆನ್ನುತ್ತಾನೆ. ಅನಂತರ ಉತ್ತಮ ಕಾವ್ಯದ ಕಾರ್ಯವನ್ನೂ ಪ್ರಯೋಜನವನ್ನೂ ಮನಮುಟ್ಟುವಂತೆ ತಿಳಿಸಿದ್ದಾನೆ (ಪುಟ ೬ನ್ನು ನೋಡಿ).

ಇಂಥ 'ನುಡಿಬಲ್ಮೆ' ಯಾರಿಗೆ ಕೂಡಿ ಬರುತ್ತದೆ? ದಂಡಿಯನ್ನು ಅನುಸರಿಸಿ ಶ್ರೀವಿಜಯ ಹೀಗೆ ಹೇಳುತ್ತಾನೆ: "ಪ್ರತಿಭೆ, ಸ್ವಾಭಾವಿಕವಾದ ಚತುರತೆ, ವಿದ್ವಾಂಸರ ಸೇವೆ (ಎಂದರೆ ಅವರ ಬಳಿ ಶಿಷ್ಯತ್ವ), ಶಾಸ್ತ್ರ ವಿದ್ಯೆಗಳ ಪರಿಚಯ – ಇವು ಮಾತಿನ ಬಲ್ಮೆಯನ್ನೂ ನಿಪುಣತೆಯನ್ನೂ ತಂದು ಕೊಡುತ್ತವೆ". (೧–೧೧)

ಕಾವ್ಯದ ಸ್ವರೂಪವನ್ನು (ಎಂದರೆ ಅದರ ಲಕ್ಷಣವನ್ನು) ಕುರಿತು ಭಾಮಹನೂ ದಂಡಿಯೂ ಸಂಕ್ಷೇಪವಾಗಿ ಸೂತ್ರರೂಪದಲ್ಲಿ ಹೇಳಿರುವುದನ್ನೇ ಶ್ರೀವಿಜಯನು ವಿಶದಪಡಿಸಿ ಇನ್ನೂ ಚೆನ್ನಾಗಿ ಹೇಳಿದ್ದಾನೆ. "ಶಬ್ದ, ಅರ್ಥ ಎರಡೂ ಕೂಡಿ ಕಾವ್ಯ" ಎಂಬುದು ಭಾಮಹನ ಸೂತ್ರವಾದರೆ "ಕಾವ್ಯದ ಶರೀರ ಅದರ ಅಲಂಕಾರಗಳು – ಇವು ಯಾವುವೆಂಬುದನ್ನು ವಿದ್ವಾಂಸರು ತೋರಿಸಿಕೊಟ್ಟಿದ್ದಾರೆ. 'ಇಷ್ಟ'ವಾದ ಅರ್ಥದಿಂದ ಕೂಡಿರುವ ಪದಗಳ ಸಮೂಹವೇ ಆ ಶರೀರ"

ಅವುಗಳನ್ನು ಕೇಳಿ ಅವುಗಳ ಸಾರವತ್ತಾದ ಭಾಗಗಳನ್ನು ಬಲ್ಲವರಾಗಿದ್ದರು ಎಂದು ಅರ್ಥ.) (i–೩೮) ಮೇಲೆ ಕುರಿತು ಹೇಳಿದಂಥವರಲ್ಲದೆ ಉಳಿದವರೂ ಕೂಡ ತಾವು ಆಡುವ ಮಾತಿನಲ್ಲಿ ಬಹು ಜಾಣರು. ಚಿಕ್ಕ ಮಕ್ಕಳು ಹಾಗೂ ಮೂಗರು ಕೂಡ ಬುದ್ಧಿವಾದ ಹೇಳುವುದಕ್ಕೂ ಸರಿಯಾಗಿ ಮಾತಾಡುವುದನ್ನು ಹೇಳಿಕೊಡುವುದಕ್ಕೂ ಶಕ್ತಿಯುಳ್ಳವರಾಗಿದ್ದರು. (i–೩೯)

ಹಾಗೆ ಜಾಣರಲ್ಲದವರೂ ಕೂಡ ಗಟ್ಟಿಗರೇ; ಕಾವ್ಯದ ಗುಣದೋಷಗಳ ವಿಚಾರವಾಗಿ (ಕಾವ್ಯ ಶಾಸ್ತ್ರವನ್ನು ಬಲ್ಲವರಂತೆ) ತಿಳಿವಳಿಕೆಯಿಲ್ಲದಿದ್ದರೂ ತಿಳಿದವ ರಂತೆ, ಕಾವ್ಯಗಳಲ್ಲಿ ಎಲ್ಲಿಯಾದರೂ ನಡುವೆ ಅಲ್ಪಸ್ವಲ್ಪ ದೋಷ ಕಂಡುಬಂದರೂ ಬಿಡದೆ ಅದನ್ನು ಎತ್ತಿ ತೋರಿಸಿ ಕಾವ್ಯಗಳನ್ನು ಟೀಕಿಸುತ್ತಿದ್ದರು.(i–೪೦)]

ಇದಿಷ್ಟು ಕನ್ನಡ ಜನರ ಮಾತುಗಾರಿಕೆ, ಕಾವ್ಯವಿಚಾರದಲ್ಲಿ ಅವರಿಗಿದ್ದ ಅಭಿರುಚಿ ಸಾಮರ್ಥ್ಯ–ಇವುಗಳ ವಿಷಯವಾಯಿತು. ಇನ್ನೂ ಅನೇಕ ಬಗೆಯಲ್ಲಿ ಅವರು ಅನೇಕ ಗುಣಗಳ ಗಣಿಯಾಗಿದ್ದರು. ಈ ಪದ್ಯದಲ್ಲಿ ಅವರ ಗುಣಸಂಪನ್ನತೆಯನ್ನು ವರ್ಣಿಸಿದೆ:

ಸುಭಟರ್ಕಳ್ ಕವಿಗಳ್ ಸು–
ಪ್ರಭುಗಳ್ ಚೆಲ್ವರ್ಕಳ್ ಅಭಿನಜರ್ಕಳ್ ಗುಣಿಗಳ್
ಅಭಿಮಾನಿಗಳ್ ಅತ್ಯುಗ್ರರ್
ಗಭೀರಚಿತ್ತರ್ ವಿವೇಕಿಗಳ್ – ನಾಡವರ್ಗಳ್ (ii–೨೮)

[ಕನ್ನಡ ನಾಡಿನ ಜನ ಯುದ್ಧವೀರರು, ಕವಿಗಳು, ಒಳ್ಳೆಯ ಒಡೆತನ ಮಾಡಬಲ್ಲವರು, ಚೆಲುವರು, ಮೇಲುಮಟ್ಟದ ಜನ, ಗುಣವಂತರು, ಮಾನಿಷ್ಠರು, ಭಯಂಕರರು, ಗಂಭೀರವಾದ ಮನಸ್ಸುಳ್ಳವರು, ವಿವೇಕವುಳ್ಳವರು. (ii–೨೮)

ಮೇಲಿನ ವರ್ಣನೆಗಳಲ್ಲಿ ಸ್ವಲ್ಪ ಉತ್ಪ್ರೇಕ್ಷೆಯಿರಬಹುದು. ಆದರೆ, ಒಟ್ಟಿನಲ್ಲಿ ಅಂದಿನ ಕನ್ನಡಿಗರು ಸುಸಂಸ್ಕೃತರು, ಬುದ್ಧಿವಂತರು, ಗುಣಸಂಪನ್ನರು ಸಾಹಸಿಗಳು. ಇಂದಿನ ಸಾಮಾನ್ಯ ಜನ ಅಂದಿನ ಜನರಂತೆ ಇರುವರೆ? ಪ್ರತಿಯೊಬ್ಬನೂ ತನ್ನನ್ನು ತಾನು ಪರೀಕ್ಷೆ ಮಾಡಿಕೊಂಡು ಆ ಗುಣಮಟ್ಟದಲ್ಲಿದ್ದರೆ ಸಂತೋಷಪಡಬೇಕು; ಇಲ್ಲದಿದ್ದರೆ, ಆ ಮಟ್ಟಕ್ಕೇರಲು ಪ್ರಯತ್ನಪಡಬೇಕು. ಇದು, ಕವಿರಾಜಮಾರ್ಗ ಎಲ್ಲ ಕಾಲದ ಕನ್ನಡಿಗರಿಗೂ ಹಾಕಿಕೊಟ್ಟಿರುವ ನಡೆ ನುಡಿಗಳ ಮೇಲ್ಪಂಕ್ತಿ.

ದೇಶ ಭಾಷೆಗಳನ್ನು ಮಾತಾಡುವ ಜನವರ್ಗಗಳೂ ಸಾಮ್ರಾಜ್ಯದಲ್ಲಿ ಇದ್ದಿರಬೇಕು. ಕನ್ನಡ ಜನ ಇತರರೊಂದಿಗೆ ಹೊಂದಿಕೊಂಡು ಬಾಳುತ್ತಿದ್ದಿರಬೇಕು. ಈ ಹೊಂದಿಕೊಳ್ಳುವ ಗುಣವಲ್ಲದೆ, ಕನ್ನಡ ಜನ ಸಾಮಾನ್ಯದಲ್ಲಿ ಕೂಡ ಕಾವ್ಯಗಳ ಜ್ಞಾನ, ಭಾಷಾ ಜ್ಞಾನ, ಕಾವ್ಯಗಳನ್ನು ವಿಮರ್ಶೆ ಮಾಡುವ ಶಕ್ತಿ – ಇವು ನೆಲಸಿದ್ದುವು ಎಂಬುದನ್ನು ಈ ಪದ್ಯಗಳು ಸಾರಿ ಹೇಳುತ್ತವೆ:

ಪದನರಿದು ನುಡಿಯಲುಂ, ನುಡಿ
ದುದನ್ ಅರಿದು ಆರಯಲುಂ ಆರ್ಪರ್ ಆ ನಾಡವರ್ಗಳ್;
ಚದುರರ್ ನಿಜದಿಂ; ಕುರಿತು ಓ–
ದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್ (i–೩೮)

ಕುರಿತವರಲ್ಲದೆ ಮತ್ತಂ
ಪೆರರುಂ ತಂತಮ್ಮ ನುಡಿಯೊಳ್ ಎಲ್ಲರ್ ಜಾಣರ್,
ಕಿರುವಕ್ಕಳುಂ ಆ ಮೂಗರುಂ
ಅರಿಪಲ್ಕೆ ಅರಿವರ್ ವಿವೇಕಮಂ ಮಾತುಗಳಂ (i–೩೯)

ಜಾಣರ್ಕಳಲ್ಲದವರುಂ
ಪೂಣಿಗರ್; ಅರಿಯದೆಯುಂ ಅರಿವವೋಲ್ ಅವಗುಣದಾ
ತಾಣಮನ್ ಇನಿಸು ಎಡೆವೆತ್ತೊಡೆ,
ಮಾಣದೆ, ಪಿಡಿದದನೆ, ಕೃತಿಗಳಂ ಕೆಡೆನುಡಿವರ್, (i–೪೦)

[ಆ ನಾಡಿನ ಜನ (ಹೆಚ್ಚು ಕಡಿಮೆಗಳಾಗದಂತೆ ಸಂದರ್ಭಕ್ಕೆ ತಕ್ಕ ಹಾಗೆ) ಹದವರಿತು ಮಾತಾಡುವುದಕ್ಕೂ, (ಇತರರು) ಆಡಿದ್ದನ್ನು ಅರ್ಥಮಾಡಿಕೊಂಡು ವಿಚಾರಮಾಡುವುದಕ್ಕೂ, ಸಮರ್ಥರಾಗಿದ್ದರು. ಅವರು ಕಾವ್ಯಗಳನ್ನು ಉದ್ದೇಶ ಪೂರ್ವಕವಾಗಿ ಓದಿ ಅಭ್ಯಾಸ ಮಾಡದಿದ್ದರೂ, ಕವಿಗಳು ಉಪಯೋಗಿಸಿದ್ದ (ಸ್ವಾರಸ್ಯ ವಾಗಿದ್ದ) ವಾಕ್ಯಗಳನ್ನು ಚೆನ್ನಾಗಿ ಬಲ್ಲವರಾಗಿದ್ದರು.* (ಎಂದರೆ,

* 'ಕುರಿತತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್' ಎಂಬ ವಾಕ್ಯಕ್ಕೆ 'ವಿದ್ಯಾವಂತರಲ್ಲದಿದ್ದರೂ ಕಾವ್ಯರಚನೆ ಮಾಡಬಲ್ಲವರಾಗಿದ್ದರು' ಎಂದೂ ವಿದ್ವಾಂಸರು ಅರ್ಥ ಹೇಳುತ್ತಾ ಬಂದಿದ್ದಾರೆ.

ಅಭಿಮಾನಿಯೂ ಸ್ವತಃ ವಿದ್ವಾಂಸನೂ ಆಗಿದ್ದ ನೃಪತುಂಗ ಚಕ್ರವರ್ತಿಯನ್ನು ಭಾದಿಸಿರಬೇಕು. ಕವಿಶ್ರೇಷ್ಠರಾಗ ಬಯಸುವವರಿಗೆ ಮಾರ್ಗದರ್ಶನ ಮಾಡಲು ಒಂದು ಲಕ್ಷಣಗ್ರಂಥದ ರಚನೆಯ ಕಾರ್ಯಭಾರವನ್ನು ಆತ ತನ್ನ ಸಭಾಸದನೂ ಅಲಂಕಾರಶಾಸ್ತ್ರ ಪಂಡಿತನೂ ಆಗಿದ್ದ ಶ್ರೀವಿಜಯನಿಗೆ ವಹಿಸಿದನು; ಹೆಜ್ಜೆ ಹೆಜ್ಜೆಗೂ ಮಾರ್ಗದರ್ಶನ ಮಾಡಿದನು. ಹೀಗೆ ರಚಿತವಾಯಿತು 'ಕವಿರಾಜಮಾರ್ಗ'.

ಕವಿರಾಜಮಾರ್ಗದಲ್ಲಿ ದೋಷ–ಅದೋಷಗಳ ವರ್ಣನ ನಿರ್ಣಯ, ಶಬ್ದಾಲಂಕಾರ ವರ್ಣನ ನಿರ್ಣಯ, ಅರ್ಥಾಲಂಕಾರ ಪ್ರಕರಣ – ಎಂಬ ಮೂರು ಪರಿಚ್ಛೇದಗಳಿವೆ. ಕಾವ್ಯದೋಷಗಳನ್ನು ವಿವರಿಸುವಲ್ಲಿ ವಿಶೇಷವಾಗಿ ಭಾಮಹನನ್ನೂ, ಶಬ್ದಾಲಂಕಾರ ಅರ್ಥಾಲಂಕಾರಗಳನ್ನು ನಿರೂಪಿಸುವ ಪ್ರಕರಣಗಳಲ್ಲಿ ಸಾಮಾನ್ಯವಾಗಿ ದಂಡಿಯನ್ನೂ ಶ್ರೀವಿಜಯನು ಅನುಸರಿಸಿದ್ದಾನೆ. ಗುಣ ದೋಷಗಳನ್ನು ವಿವರಿಸುವ ಸಂದರ್ಭಗಳಲ್ಲಿ ಕನ್ನಡ ನುಡಿಯ ಜಾಯಮಾನವನ್ನೂ, ಕನ್ನಡ ಕಾವ್ಯರಚನೆಯನ್ನೂ ದೃಷ್ಟಿಯಲ್ಲಿಟ್ಟುಕೊಂಡು, ಸಂಸ್ಕೃತ ಅಲಂಕಾರಿಕರು ಹೇಳಿರುವ ಲಕ್ಷಣಗಳನ್ನು ಕನ್ನಡಕ್ಕೆ ಹೊಂದಿಸಿ ಹೇಳಿದ್ದಾನೆ; ಕೆಲವು ಸಂದರ್ಭಗಳಲ್ಲಿ ಸ್ವತಂತ್ರವಾಗಿ ಆಲೋಚನೆ ಮಾಡಿ ಲಕ್ಷಣಗಳನ್ನು ಹೇಳಿದ್ದಾನೆ. ತಾನು ತಿಳಿಸುವ ವಿಚಾರಗಳು ಓದುಗರ ಮನಸ್ಸಿಗೆ ಚೆನ್ನಾಗಿ ನಾಟಬೇಕೆಂಬ ಉದ್ದೇಶದಿಂದ ಅವುಗಳನ್ನು ದೃಷ್ಟಾಂತ ಮತ್ತು ಹೋಲಿಕೆಗಳ ಮೂಲಕ ವಿಶದಪಡಿಸುತ್ತಾನೆ; ಸೊಗಸುಗೊಳಿಸುತ್ತಾನೆ. ಅಲಂಕಾರಗಳ ಉದಾಹರಣೆಗಳು ಅವು ಸಂಸ್ಕೃತ ಮೂಲಗಳ ಭಾಷಾಂತರವಾಗಿರಲಿ, ಸ್ವಂತದವಾಗಿರಲಿ – ಸಾಧಾರಣವಾಗಿ ಕಾವ್ಯಗಳಲ್ಲಿ ಬರುವಂಥ ವರ್ಣನಾ ಪದ್ಯಗಳಂತೆ ಸುಂದರವಾಗಿಯೇ ಇರುತ್ತವೆ. ಕವಿರಾಜಮಾರ್ಗದ ಶೈಲಿ ಸಾಧಾರಣವಾಗಿ ಸೊಗಸಾಗಿಯೇ ಇದೆ ಎಂಬುದಕ್ಕೆ ಇಲ್ಲಿ ನಾವು ಆಯ್ದು ಕೊಡುತ್ತಿರುವ ಪದ್ಯಗಳೇ ಸಾಕ್ಷಿ. ಕೆಲವು ಸಂದರ್ಭಗಳಲ್ಲಿ ಸಂಸ್ಕೃತ ಪದಗಳ ಬಳಕೆ ಹೆಚ್ಚಾಗಿರಬಹುದು. ಈ ಮಾತು ಪೂರ್ವದ ಎಲ್ಲ ಕನ್ನಡ ಕವಿಗಳಿಗೂ ಅನ್ವಯಿಸುತ್ತದೆ. ಒಟ್ಟಿನ ಮೇಲೆ, ಕವಿರಾಜಮಾರ್ಗ ಲಕ್ಷಣ ಗ್ರಂಥವಾದರೂ ಅಲ್ಲಲ್ಲಿ ಕಾವ್ಯ ಗುಣದಿಂದಲೂ ಕೂಡಿದೆ.

ಚಾರಿತ್ರಿಕವಾಗಿ ಕವಿರಾಜಮಾರ್ಗದ ಪ್ರಾಮುಖ್ಯ ಏನು ಎಂಬುದನ್ನು ಸ್ವಲ್ಪಮಟ್ಟಿಗೆ ಹೇಳಿದ್ದಾಯಿತು. ಶಾಸ್ತ್ರ ವಿಚಾರವನ್ನು ಹೇಳುವಾಗ ಶ್ರೀವಿಜಯ ಮುಖ್ಯವಾಗಿ ದಂಡಿ ಭಾಮಹರನ್ನು ಅನುಸರಿಸುತ್ತಿದ್ದರೂ, ಕನ್ನಡವನ್ನು ದೃಷ್ಟಿಯಲ್ಲಿಟ್ಟುಕೊಂಡು, ಸ್ವತಂತ್ರವಾಗಿ ವಿಚಾರ ಮಾಡಿ, ಕೆಲವು ಹೊಸ

ಶಾಸ್ತ್ರಗ್ರಂಥದಲ್ಲಿ ಕನ್ನಡ ಜನದ ಶೀಲಸಂಪತ್ತಿನ ವರ್ಣನೆ ಯಾಕೆ? ಎಂಬ ಸಂದೇಹ ಯಾರಿಗಾದರೂ ಹುಟ್ಟಬಹುದು. ಅದಕ್ಕೆ ಈ ರೀತಿ ಸಮಾಧಾನ ಹೇಳಬಹುದು; ನೃಪತುಂಗನ ಕಾಲದ ಕನ್ನಡ ನುಡಿಯ ಪರಿಸ್ಥಿತಿಯೇ ಕವಿರಾಜಮಾರ್ಗದ ರಚನೆಗೆ ಕಾರಣ. ಕನ್ನಡದಲ್ಲಿ ಕಾವ್ಯ ಲಕ್ಷಣವನ್ನು ತಿಳಿಯ ಹೇಳುವ ಗ್ರಂಥವೇ ಇರಲಿಲ್ಲ. ಹಿಂದೆ ರಚಿತವಾದ ಗ್ರಂಥಗಳನ್ನೇ ಮಾದರಿಯಾಗಿಟ್ಟುಕೊಂಡು ಕವಿಗಳು ಕಾವ್ಯ ರಚನೆ ಮಾಡುತ್ತಿದ್ದಂತೆ ಕಾಣುತ್ತದೆ. ಈ ಹಿಂದಿನ ಕಾವ್ಯಗಳು (ಅಂದಿನ) 'ಹಳಗನ್ನಡ'ದಲ್ಲಿದ್ದವು; ಶಾಸ್ತ್ರಜ್ಞಾನವಿಲ್ಲದವರು, ಹಳಗನ್ನಡದ ಪರಿಚಯವಿಲ್ಲದವರು, ಆ ಕಾರ್ಯಗಳನ್ನು ಅನುಕರಣ ಮಾಡಿ ಬರೆದಾಗ ಬೇಕಾದಷ್ಟು ದೋಷಗಳು ಕಾಣಿಸಿಕೊಳ್ಳುತ್ತಿದ್ದವು. ಜೊತೆಗೆ, ಕನ್ನಡದ ಆಡುಮಾತಿನಲ್ಲಿ ಕೂಡ ಹಲವು ಪ್ರಾಂತ ಭೇದಗಳಿದ್ದುವು. ಈಗಲೂ ಮೈಸೂರು ಕನ್ನಡ, ಧಾರವಾಡದ ಕನ್ನಡ, ಮಂಗಳೂರು ಕನ್ನಡ, ಕೊಡಗಿನ ಕನ್ನಡ, ಕೊಯಮತ್ತೂರು ಕನ್ನಡ, ಹಳ್ಳಿಗಾಡಿನವರ ಕನ್ನಡ, ಪಟ್ಟಣವಾಸದವರ ಕನ್ನಡ, ಇಂಗ್ಲೀಷು ಓದಿದವರ ಕನ್ನಡ ಎಂದು ಮುಂತಾಗಿ ಭೇದಗಳು ಉಳಿದುಕೊಂಡು ಬಂದಿರುವಂತೆ. ಇಂತಹ ಪರಿಸ್ಥಿತಿಯನ್ನು ಶ್ರೀ ವಿಜಯ ಬಹು ಚೆನ್ನಾಗಿ ನಿರೂಪಿಸಿದ್ದಾನೆ:

ದೋಸಂ ಇನಿತೆಂದು ಬಗೆದು ಉದ್–
ಭಾಸಿಸಿ ತರಿಸಂದು ಕನ್ನಡಂಗಳೊಳ್ ಎಂದುಂ
ವಾಸುಗಿಯುಂ ಅರಿಯಲಾರದೆ
ಬೇಸರುಗುಂ, ದೇಶಿ ಬೇರೆ ವೇರಪುದರಿಂ (i–೪೬)

[ದೇಸಿ (ಎಂದರೆ ಆಡುಮಾತು) ಬೇರೆ ಬೇರೆಯಾಗಿರುವುದರಿಂದ, ಕನ್ನಡಗಳಲ್ಲಿ ಎಂದರೆ, ಹಲವು ಪ್ರಕಾರಗಳಲ್ಲಿರುವ ಕನ್ನಡದಲ್ಲಿ, ದೋಷದ ಪ್ರಮಾಣ ಅಷ್ಟಿಷ್ಟೆಂದು ವಿಚಾರಮಾಡಿ, ಸ್ಪಷ್ಟವಾಗಿ ಎತ್ತಿತೋರಿಸಿ, ನಿರ್ಣಯ ಮಾಡಿ, ತಿಳಿಯಲಾರವನಾಗಿ, ಸಾವಿರ ನಾಲಗೆಯುಳ್ಳ ಆದಿಶೇಷ ಕೂಡ ತಿಳಿಯ ಹೇಳಲು ಬೇಸರಪಡುವನು. (ಎಂದರೆ, ಕನ್ನಡ ಭಾಷೆಯಲ್ಲಿ ದೋಷ ಅಪಾರವಾಗಿತ್ತು ಎಂದು ಭಾವ).]

ಈ ಪರಿಸ್ಥಿತಿಯಲ್ಲಿ, ಸಂಸ್ಕೃತ ಮಹಾಕಾವ್ಯಗಳಂತಹ ಕೃತಿಗಳು ಕನ್ನಡದಲ್ಲಿಯೂ ರಚಿತವಾಗಬೇಕಾದರೆ ಏನು ಮಾಡಬೇಕೆಂಬ ಚಿಂತೆ ಕನ್ನಡದ

ಅರ್ಥವನ್ನು ಎಳೆದು ತಂದು ಹೇಳಬೇಕಾದಂತ ರಚನೆ), ಆಗಮವಿರುದ್ಧ (ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿರುವುದು), ಸಮಯವಿರುದ್ಧ (ಜೈನ, ಬೌದ್ಧ, ವೈದಿಕ, ಮುಂತಾದ ಮತದರ್ಶನಗಳಿಗೆ ವಿರುದ್ಧವಾಗಿರುವುದು), ನ್ಯಾಯ ವಿರುದ್ಧ (ನ್ಯಾಯಶಾಸ್ತ್ರದ ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದ ಎಂಬ ಪ್ರಮಾಣಗಳಿಗೆ ವಿರುದ್ಧವಾಗಿರುವುದು), ಕಲಾವಿರುದ್ಧ (ಪ್ರಸಿದ್ಧವಾದ ಸಂಗೀತ, ನಾಟ್ಯ, ಶಿಲ್ಪ, ಮುಂತಾದ ಕಲೆಗಳ ಸರಿಯಾದ ಜ್ಞಾನವಿಲ್ಲದೆ ಅವುಗಳ ವಿಚಾರವಾಗಿ ತಪ್ಪು ತಿಳಿವಳಿಕೆಯಾಗುವಂತೆ ಹೇಳುವುದು), ಕಾಲವಿರುದ್ಧ (ಹಗಲು ಇರುಳು, ಆರು ಋತು, ಮುಂತಾದ ಕಾಲ ವಿಷಯಕ್ಕೆ ಹೊಂದದಂತೆ ವರ್ಣಿಸುವುದು), ದೇಶವಿರುದ್ಧ (ವರ್ಣಿಸುತ್ತಿರುವ ದೇಶಕ್ಕೆ ಹೊಂದದ ಸಂಗತಿಗಳನ್ನು ಹೇಳುವುದು) – ಎಂಬ ೧೬ ವಿಶೇಷ ಕಾವ್ಯದೋಷಗಳನ್ನೂ ಉದಾಹರಣೆಗಳ ಸಮೇತ ಶ್ರೀವಿಜಯ ವಿವರಿಸಿದ್ದಾನೆ. ಇವಲ್ಲದೆ, ಕಾರಕ ದೋಷ, ವಚನ ದೋಷ, ಗುರು ದೋಷ, ಲಘು ದೋಷ, ಸಮುಚ್ಚಯ ದೋಷ, ವಿಕಲ್ಪ ದೋಷ, ಅವಧಾರಣಾ ದೋಷ, ವಿಶಂಕಾ ದೋಷ – ಎಂಬಿವನ್ನು ವಿಶೇಷವಾಗಿ ಕನ್ನಡ ಭಾಷೆಗೆ ಅನ್ವಯವಾಗುವಂತೆ ಉಚಿತ ಉದಾಹರಣೆಗಳೊಂದಿಗೆ ವಿವರಿಸಿದ್ದಾನೆ. ಇಲ್ಲಿ ಕನ್ನಡದ ಜೀವಾಳವನ್ನು ಹಿಡಿದು ಮಿಡಿದಿದ್ದಾನೆ. ಈ ದೋಷಗಳಲ್ಲಿ ಹಲವು ಎಲ್ಲ ಕಾಲಕ್ಕೂ ಅನ್ವಯವಾಗತಕ್ಕವು. ಆದ್ದರಿಂದ, ಇಂದು ಕಾವ್ಯ ರಚನೆ ಮಾಡುವವರು ಕೂಡ ಈ ದೋಷ ಪ್ರಕರಣವನ್ನು ಅಧ್ಯಯನ ಮಾಡುವುದರಿಂದ ಲಾಭವುಂಟು. ಶ್ರೀವಿಜಯ ಮಾತ್ರವಲ್ಲ, ಎಲ್ಲ ಲಾಕ್ಷಣಿಕರೂ ಕಾವ್ಯದಲ್ಲಿ ಸ್ವಲ್ಪವೂ ದೋಷವಿರಕೂಡದೆಂದು ಅಭಿಪ್ರಾಯ ಪಟ್ಟಿದ್ದಾರೆ. ಶ್ರೀವಿಜಯನು ಹೇಳಿರುವ ರೀತಿ ಸುಂದರವಾಗಿದೆ, ಅರ್ಥವತ್ತಾಗಿದೆ:

ದೋಸಮೇನಾನುಂ ಸ್ವಲ್ಪ ಮಾದೊಡಂ
ಮಾಸಿಸಿರ್ಕು ಅಣಂ ಕೃತಿವಧುವಂ
ಪೇಸದೆ ದುರ್ಜನದೊಳಾದ ಪರಿಚಯಂ
ಮಾಸಿಸಿ ಕಿಡಿಸುವವೋಲ್ ಒಪ್ಪುವ ಕುಲವಧುವಂ

[ಒಳ್ಳೆಯ ವಂಶದಲ್ಲಿ ಹುಟ್ಟಿದ ಹೆಣ್ಣುಮಗಳು ಎಷ್ಟೇ ಗುಣವತಿಯಾಗಿದ್ದರೂ ಕೆಟ್ಟ ಜನ ಪರಿಚಯವಾದರೆ ಅವಳ ಹೆಸರು ಕೆಡುವಂತೆ, ದೋಷ ಎಷ್ಟೇ ಸ್ವಲ್ಪವಾದರೂ ಕೃತಿ ಎಂಬ ಹೆಣ್ಣಿನ ಹೆಸರನ್ನು ಮಾಸಿಸಿ ಬಿಡುತ್ತದೆ.]

ವಿಷಯಗಳನ್ನು ತಿಳಿಸುತ್ತಾನೆ. ಇಲ್ಲಿ ಒಂದೆರಡು ಉದಾಹರಣೆಗಳನ್ನು ಮಾತ್ರ ಗಮನಿಸಲು ಸಾಧ್ಯ:

ಸಂಸ್ಕೃತ ಛಂದಸ್ಸಿನಿಂದ ಕನ್ನಡಕ್ಕೆ ಬಂದ ಅಕ್ಷರ ವೃತ್ತಗಳು, ಆರ್ಯಾ ಎಂಬ ವೃತ್ತದಿಂದ ಹುಟ್ಟಿದ ಕಂದಪದ್ಯ, ಇವುಗಳಲ್ಲಿ 'ಯತಿ' ನಿಯಮವನ್ನು ಪಾಲಿಸಬೇಕು. ಯತಿ ಎಂದರೆ, ಶ್ರೀವಿಜಯ ಹೇಳುವ ಪ್ರಕಾರ 'ಉಸಿರ್‌ದಾಣ'; ಎಂದರೆ, ಪದ್ಯದ ಸಾಲುಗಳನ್ನು ಉಚ್ಚಾರಣೆ ಮಾಡುವಾಗ ಉಸಿರು ಸಹಜವಾಗಿ ನಿಲ್ಲುವ ಸ್ಥಳ. ಯತಿಯುನ್ನು ಪಾಲಿಸದಿದ್ದರೆ 'ಯತಿಭಂಗ' ಎಂಬ ದೋಷವುಂಟಾಗುತ್ತದೆ. ಕವಿರಾಜಮಾರ್ಗಕ್ಕಿಂತಲೂ ಹಿಂದಿನ 'ಪೂರ್ವಾಚಾರ್ಯರು' (ಲಕ್ಷಣವನ್ನು ಬಲ್ಲ ಕವಿಗಳು) ಕನ್ನಡದಲ್ಲಿ ಬಳಕೆಗೆ ಬಂದಿದ್ದ, ಸಂಸ್ಕೃತದಲ್ಲಿ ಇಲ್ಲದಿದ್ದ, ಆದಿಪ್ರಾಸವನ್ನು ಇಟ್ಟುಕೊಂಡು, ಯತಿ ನಿಯಮ ಪಾಲನೆಯನ್ನು ಮೀರಿದ್ದರು. ಶ್ರೀವಿಜಯನೂ ಈ ಪದ್ಧತಿಯನ್ನು ಒಪ್ಪಿಕೊಂಡು, ಈ ರೀತಿ ಹೇಳಿದ್ದಾನೆ:

ಗೀತಿಕೆ:
ದೋಸ ಮನೆ ಗುಣದವೋಲ್ ಉ–
ದ್ಭಾಸಿಸಿ, ಕನ್ನಡದೊಳ್ ಒಲ್ದು, ಪೂರ್ವಾಚಾರ್ಯರ್
ದೇಸಿಯನೆ ನಿರಿಸಿ ಖಂಡ–
ಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್, (i–೭೫)

ಭಾಮಹನು ಹೇಳಿರುವ – ಶ್ರುತದುಷ್ಟ (ಉಪಯೋಗಿಸಿರುವ ಮಾತು ಸರಿಯಾಗಿದ್ದರೂ ಕೇಳಿದಾಗ ಅಸಭ್ಯವಾದಂಥ ಅರ್ಥವನ್ನು ಕೊಡುವ ಪದ್ಯ ರಚನೆ), ಅರ್ಥದುಷ್ಟ (ಕೆಟ್ಟ ಅರ್ಥವನ್ನೂ ಕೊಡುವ ಪದಗಳ ಬಳಕೆ), ಶ್ರುತಿಕಷ್ಟ (ಕೇಳುವುದಕ್ಕೆ ಕರ್ಕಶವಾದ ಪದಗಳ ಬಳಕೆ), ಕಲ್ಪನೋಕ್ತಿಕಷ್ಟ (ಕವಿಯ ಅಭಿಪ್ರಾಯ ಏನು ಎಂಬುದೇ ಗೊತ್ತಾಗದಂಥ ಪದ್ಯರಚನೆ), ಎಂಬ ನಾಲ್ಕು ಸಾಮಾನ್ಯ ದೋಷಗಳನ್ನೂ; ಯತಿಭಂಗ, ಅರ್ಥಶೂನ್ಯ, ವಿರುದ್ಧಾರ್ಥ, ಪುನರುಕ್ತ(ಕ್ತಿ), ಚ್ಯುತ ಯಾಥಾಸಂಖ್ಯ (ಕ್ರಮಭಂಗ), ವ್ಯವಹಿತ (ಅನ್ವಯದ ತೊಡಕಿನಿಂದ ಅಪಾರ್ಥವಾಗುವುದು), ಅಚ್ಛಂದ (ಛಂದಸ್ಸಿನ ದೋಷ), ವಿಸಂಧಿ (ಸಂಧಿಮಾಡಬೇಕಾದಲ್ಲಿ ಸಂಧಿ ಮಾಡದಿರುವುದು), ನೇಯಾರ್ಥ (ಹೇಳಬೇಕಾದ ಮುಖ್ಯಪದವನ್ನು ಹೇಳದೆ ಇರುವುದರಿಂದ ಅದನ್ನು ಅಧ್ಯಾಹಾರ ಮಾಡಿಕೊಂಡು

ದಕ್ಷಿಣೋತ್ತರ ಮಾರ್ಗಗಳ ಭೇದಕ್ಕೆ ಒಂದು ಉದಾಹರಣೆ:

ಶರದಮಲಾಂಬರದೊಳ್ ಹಿಮ-
ಕರನೆಸೆದತ್ತು, ಎಂಬುದು, ಆ ಪ್ರಸನ್ನಂ ಇದು ಅಕ್ಕುಂ

[ಶರತ್ಕಾಲದ ತಿಳಿಯಾದ ಆಕಾಶದಲ್ಲಿ ಚಂದ್ರ ಮೆರೆಯಿತು. ಇದು ಪ್ರಸನ್ನ ಗುಣ. (ಕೇಳಿದ ಕೂಡಲೆ ಅರ್ಥವಾಗುವುದು ಪ್ರಸನ್ನ ಅಥವಾ ಪ್ರಸಾದ ಗುಣ)].

ಮೇಲ್ಕಂಡ ರೀತಿಯ ಬರವಣಿಗೆ ದಕ್ಷಿಣ ಮಾರ್ಗದ್ದು; ಲೋಕ ಪ್ರಸಿದ್ಧವಾದ ಸಂಗತಿಯನ್ನು ಇಲ್ಲಿ ಅರ್ಥವಾಗುವಂತೆ ನೇರವಾಗಿ ತಿಳಿಸಿದೆ, ಅದೇ ವಿಷಯವನ್ನು ಕಷ್ಟವಾದ ಪದಗಳಿಂದ ತಿಳಿಸಿದ್ದು ಉತ್ತರ ಮಾರ್ಗ ಅದು ಹೀಗೆ:

ಕರಮೊಪ್ಪಿತ್ತು ಉಷ್ಣೇತರ
ಕಿರಣಂ ವರ್ಷಾಂತ ಸಮಯದೊಳ್ ಜಳಧರ ಪಥದೊಳ್.

[ಉಷ್ಣೇತರ ಕಿರಣ=ತಂಪಾದ ಕಿರಣವುಳ್ಳವನು, ಚಂದ್ರ. ವರ್ಷಾಂತ ಸಮಯ=ಮಳೆಗಾಲದ ಕೊನೆ, ಎಂದರೆ ಶರತ್ಕಾಲದ ಮೊದಲು. ಜಲಧರ ಪಥ=ಮೋಡಗಳ ದಾರಿ, ಎಂದರೆ ಆಕಾಶ, ಕರಂ=ಹೆಚ್ಚಾಗಿ.]

ಕವಿರಾಜಮಾರ್ಗದಲ್ಲಿ ಗುಣ ಮತ್ತು ಮಾರ್ಗ ವಿಚಾರಗಳನ್ನು ಶಬ್ದಾಲಂಕಾರ ಪ್ರಕರಣದಲ್ಲಿಯೇ ಸೇರಿಸಿದೆ. ಈ ಪರಿಚ್ಛೇದದಲ್ಲಿ ಹೇಳಿರುವ ಇತರ ಶಬ್ದಾಲಂಕಾರಗಳು ಇವು: ಗತಪ್ರತ್ಯಾಗತ, ಗೂಢಚತುರ್ಥ, ಏಕಾಕ್ಷರ, ದ್ವ್ಯಕ್ಷರ, ಅತಾಲವ್ಯ, ನಿರೋಷ್ಠ್ಯ, ಸರ್ವತೋಭದ್ರ, ನಿರುತ್ತರ, ಗೋಮೂತ್ರಿಕೆ, ಯಮಕ, ಅರ್ಥಭ್ರಮಣ, ಮುರಜ ಬಂಧ, ಕ್ರಿಯಾಗೋಪಕ, ಚಕ್ರಬಂಧ, ಭಾವೆ, ನುಸುಳ್, ಅಸ್ಪಷ್ಟಾಕ್ಷರ, ವರ್ಣವ್ಯತ್ಯಯ ಬಿಂದುಚ್ಯುತಕ ಒರ್ನುಡಿ, ವರ್ಣಚ್ಯುತಕ, ಸುಮಂತಿ, ಇವುಗಳಲ್ಲಿ ಹಲಕೆಲವನ್ನು ಕಾವ್ಯಾವಲೋಕನ ಮುಂತಾದ ಆಮೇಲಿನ ಲಕ್ಷಣ ಗ್ರಂಥಗಳಲ್ಲೂ ಹೇಳಲಾಗಿದೆ. ರಚಿಸಲು ಕಷ್ಟವಾದ ಇವನ್ನು 'ದುಷ್ಕರ ಕಾವ್ಯ' ಎಂದು ಕರೆಯಲಾಗಿದೆ; ಚಕ್ರ, ಮುರಜ, ಮುಂತಾದ ಚಿತ್ರಾಕೃತಿಗಳಲ್ಲಿ ಅಳವಡಿಸಬಹುದಾದುದನ್ನು 'ಚಿತ್ರಬಂಧ' ಎಂದೂ ಹೆಸರಿಸಬಹುದು.

ಮೂರನೇಯ ಪರಿಚ್ಛೇದದಲ್ಲಿ, ದಂಡಿಯನ್ನು ಅನುಸರಿಸಿ ೩೫

ಮಹಾಕವಿ ಕೂಡ ದೋಷ ಮಾಡಬಹುದು. ಮಹಾಕವಿಯಾಗಬೇಕೆಂಬ ಬಯಕೆ ಸಾಮಾನ್ಯ ಕವಿಗೂ ಉಂಟು. ಅವನು ಮಾಡಿದ ತಪ್ಪು ಅವನ ಗಮನಕ್ಕೆ ಬರುವುದಿಲ್ಲ. ಅವನು ಏನು ಮಾಡಬೇಕು? ಶ್ರೀವಿಜಯನು ಹೇಳುತ್ತಾನೆ:

ಗೀತಿಕೆ:
ಕಾಣನ್ ಏಗೆಯ್ದುಂ ಏಗೆಯ್ದುಂ ತನ್ನ ದೋಷಮಂ
ಕಾಣದಂತೆ ಎಂದುಂ ಕಣ್ಗಳ್ ತಮ್ಮ ಕಾಡಿಗೆಯಂ
ಪೂಣೆಗನ್ ಆದುದರಿಂ ಪೆರರಿಂ
ಜಾಣರಿಂ ಓದಿಸಿ ಪೇಳ್ವುದು ಕಬ್ಬಮಂ.

[ಕಣ್ಣುಗಳಿಗೆ ಹಚ್ಚಿದ ಕಾಡಿಗೆ ಅದಕ್ಕೆ ಕಾಣಿಸುವುದಿಲ್ಲ. (ಆದರೆ, ಇತರರಿಗೆ ಕಾಣಿಸುತ್ತದೆ). ಅದೇ ರೀತಿ, ಕವಿ ಏನು ಮಾಡಿದರೂ ತನ್ನ ಕಾವ್ಯದ ದೋಷವನ್ನು ತಾನು ಅರಿಯಲಾರ. ಆದ್ದರಿಂದ, ತನ್ನ ಕಾವ್ಯದ ದೋಷವನ್ನು ಹೊಂದಿರಕೂಡದು. ಉತ್ತಮವಾಗಿರಬೇಕು, ಎಂದು ಬಯಸುವ ಕವಿ ಇತರ 'ಜಾಣ'ರಿಂದ (ಎಂದರೆ ಕಾವ್ಯಲಕ್ಷಣ ಬಲ್ಲವರಿಂದ) ಓದಿಸಿ, ತಪ್ಪುಗಳನ್ನು ಅವರಿಂದ ಅರಿತು ತಿದ್ದಿಕೊಂಡು, ಕಾವ್ಯವನ್ನು ರಚಿಸಬೇಕು.]

ಕವಿರಾಜಮಾರ್ಗದ ಎರಡನೆಯ ಪರಿಚ್ಛೇದದಲ್ಲಿ ಶಬ್ದ ಗುಣಗಳನ್ನೂ ಅಕ್ಷರ ಮತ್ತು ಪದಗಳ ಕೂಡಿಕೆಯ ಬಗೆಯಿಂದ ಅವು ಉಂಟಾಗುವ ರೀತಿಯನ್ನೂ, ಈ ಗುಣಗಳಿಂದ ಏರ್ಪಡುವ ಗೌಡ (ಉತ್ತರ) ಮತ್ತು ವೈದರ್ಭ ಎಂಬ ಎರಡು ಕಾವ್ಯ ಮಾರ್ಗಗಳನ್ನೂ ದಂಡಿಯ ಕಾವ್ಯದರ್ಶನವನ್ನು ಅನುಸರಿಸಿ ಬಹಳ ವಿವರಪೂರ್ಣವಾಗಿ, ತಕ್ಕ ಉದಾಹರಣೆಗಳೊಡನೆ, ಬಹು ತೃಪ್ತಿಕರವಾಗಿ ನಿರೂಪಣೆ ಮಾಡಿದ್ದಾನೆ, ಶ್ರೀವಿಜಯ. ಗುಣಗಳು ಹತ್ತು ಬಗೆ: ಸಮ, ಮಧುರ, ನಿಬಿಡ, ಕಾಂತಗ, ಸುಕುಮಾರ, ಸಮಾಹಿತ, ಪ್ರಸನ್ನ, ಉದಾರ, ಪ್ರಮಿತಗ್ರಾಮ್ಯ, ಓಜಸ್ವಿ. ಈ ಹತ್ತು ಗುಣಗಳು, ದಂಡಿಯ ಪ್ರಕಾರ, ವೈದರ್ಭ ಮಾರ್ಗದ ಪ್ರಾಣಗಳು. ಶ್ರೀವಿಜಯನು ವೈದರ್ಭ ಮಾರ್ಗವನ್ನು ದಕ್ಷಿಣ ಮಾರ್ಗ ಎಂದೂ, ಗೌಡಮಾರ್ಗವನ್ನು ಉತ್ತರ ಮಾರ್ಗ ಎಂದೂ ಕರೆದಿದ್ದಾನೆ. ದಕ್ಷಿಣ ಮಾರ್ಗಕ್ಕೆ ವ್ಯತಿರಿಕ್ತವಾದ ಮಾರ್ಗ ಅಥವಾ ರಚನಾ ರೀತಿಯೆ ಉತ್ತರ ಮಾರ್ಗ. ಈ ದಕ್ಷಿಣೋತ್ತರ ಮಾರ್ಗಗಳ ವಿಚಾರವನ್ನು ಮುಂದಿನ ಯಾವ ಕನ್ನಡ ಲಕ್ಷಣ ಗ್ರಂಥವೂ ವಿವರಿಸಿಲ್ಲ; ಇದು ಕವಿರಾಜಮಾರ್ಗದ ಒಂದು ಹೆಚ್ಚುಗಾರಿಕೆ.

ಆಯ್ದುಕೊಂಡವಾಗಿರಬಹುದು. ಈ ರಾಮಾಯಣ ಪದ್ಯಗಳಲ್ಲಿ ಕೆಲವು ಶ್ಲೋಕ ಛಂದಸ್ಸಿನಲ್ಲಿರುವುದೂ ಗಮನಿಸತಕ್ಕ ಸಂಗತಿ.

ಒಂದು ಉದಾಹರಣೆ:

ತಾರಾ ಜಾನಕಿಯಂ ಪೋಗಿ ತಾರಾ ತರಳನೇತ್ರೆಯಂ
ತಾರಾಧಿಪತಿ ತೇಜಸ್ವಿ ತಾರಾದಿ ವಿಜಯೋದಯಾ

(ಇದು ಬಹುಶಃ ಸುಗ್ರೀವಾದಿಗಳು ರಾಮನಿಗೆ ಹೇಳಿದ ಮಾತು.)

ನಿದರ್ಶನಾಲಂಕಾರದ ಲಕ್ಷ್ಯ:

ತಲೆಸೂಡಿ ಮುನ್ನೆ, ಕಜ್ಜದ
ಫಲಮಂ ಬೆಸಗೊಂಡಂ ಏವನ್ ಅಲ್ಲಿಂ ಬಳಿಯಂ?
ತಲೆಯಂ ಕಿರಿಯಿಸಿ, ದಿವಸಮಂ
ಅಲಸದೆ ಬೆಸಗೊಳ್ವನಂತು ಗಾವಿಲನಕ್ಕು.

[(ಕಾರ್ಯಕ್ಕೆ) ಮೊದಲೇ ತಲೆಕೊಟ್ಟು, ಆಮೇಲೆ ಕಾರ್ಯದ ಫಲವನ್ನು ಕುರಿತು ಕೇಳಿದರೆ ಏನು ಪ್ರಯೋಜನ? ತಲೆಯನ್ನು ಕೆರೆಸಿಕೊಂಡು (ಕ್ಷೌರಮಾಡಿಸಿಕೊಂಡು), ಆಮೇಲೆ ಅಲಸಿಕೆಯಿಲ್ಲದೆ (ಎಂದರೆ, ಆಸಕ್ತಿಗೊಂಡು) ಅಂದಿನ ತಿಥಿ ಏನು ಎಂದು ಪ್ರಶ್ನಿಸುವವನ ಹಾಗೆ ದಡ್ಡನಾಗುತ್ತಾನೆ.]

ಗ್ರಂಥದ ಕೊನೆಯಲ್ಲಿ, ಶ್ರೀವಿಜಯ ಮಹಾಕಾವ್ಯದ ಲಕ್ಷಣಗಳನ್ನು ತಿಳಿಸಿ, ತನ್ನ ಗುಣಶೀಲಗಳನ್ನು ಹೇಳಿ, ಗ್ರಂಥವನ್ನು ಸಮಾಪ್ತಿಗೊಳಿಸಿದ್ದಾನೆ.

**(ಎರಡನೆಯ) ನಾಗವರ್ಮನ ಕಾವ್ಯಾವಲೋಕನ**

ಬಹು ಈಚಿನ ಕಾಲದವರೆಗೂ 'ನಾಗವರ್ಮ' ಎಂಬ ಹೆಸರಿನಲ್ಲಿ ೮ ಕೃತಿಗಳ ಹೆಸರುಗಳು ಪ್ರಸಿದ್ಧವಾಗಿದ್ದವು. ಅವು ಯಾವುವೆಂದರೆ: (೧)ಕಾದಂಬರಿ (ಪ್ರಣಯ ಕಾವ್ಯ), (೨)ಛಂದೋಬುಧಿ (ಛಂದಸ್ಸು), (೩)ಕಾವ್ಯಾವಲೋಕನ (ಕಾವ್ಯಲಕ್ಷಣ), (೪)ಛಂದೋವಿಚಿತಿ (ಛಂದಸ್ಸು), (೫)ಅಭಿಧಾನ ವಸ್ತು ಕೋಶ (ನಿಘಂಟು), (೬)ಕರ್ಣಾಟಕ ಭಾಷಾಭೂಷಣ (ವ್ಯಾಕರಣ), (೭)ಅಭಿಧಾನ ರತ್ನಮಾಲಾ (ಟೀಕು), (೮)ಚಂದ್ರಚೂಡಾ ಮಣಿ ಶತಕ (ಅದ್ವೈತ ವೇದಾಂತ). ಇವುಗಳ ಪೈಕಿ ಮೊದಲನೆಯ ಎರಡು ಗ್ರಂಥಗಳನ್ನು ಬ್ರಾಹ್ಮಣ ಕವಿಯಾದ ನಾಗವರ್ಮನೆಂಬುವನು ಬರೆದಿರುವನೆಂದೂ, ಇವನ ಕಾಲ ಸುಮಾರು ೯೯೦ ಎಂದೂ ಬಹು ಜನ ವಿದ್ವಾಂಸರು ಒಪ್ಪಿಕೊಂಡು ಬಂದಿದ್ದಾರೆ. ಕಾದಂಬರಿಯ ನಾಗವರ್ಮನೇ ಬೇರೆ, ಛಂದೋಬುಧಿಯ ನಾಗವರ್ಮನೇ ಬೇರೆ ಇದ್ದರೂ

ಅರ್ಥಾಲಂಕಾರಗಳನ್ನು ನಿರೂಪಿಸಿದೆ. ಅವು ಯಾವುವೆಂದರೆ, – ಜಾತಿ (ಇದರಲ್ಲಿ ನಾಲ್ಕು ಬಗೆ; ಇದನ್ನು ಸ್ವಭಾವಾಖ್ಯಾನ ಅಥವಾ ಸ್ವಭಾವೋಕ್ತಿ ಎಂದೂ ಕರೆಯುವುದುಂಟು); ರೂಪಕ (ಇದರಲ್ಲಿ ೧೪ ಬಗೆ); ಅರ್ಥಾಂತರ ನ್ಯಾಸ (ಇದರಲ್ಲಿ ೮ ಬಗೆ); ವ್ಯತಿರೇಕ (ಎರಡು ಬಗೆ); ಅತಿಶಯೋಕ್ತಿ; ಸದೃಶಯೋಗಿತಾ; ಆಕ್ಷೇಪ (೬ ಬಗೆ); ಶ್ಲೇಶೆ; ಉತ್ಪ್ರೇಕ್ಷೆ; ಸೂಕ್ಷ್ಮ; ವಿಶೇಷ; ಸಮಾಹಿತ; ಸಮಾಸೋಕ್ತಿ; ಪರ್ಯಾಯೋಕ್ತ; ವಿರೋಧ; ಅಪ್ರಸ್ತುತ (ಪ್ರಶಂಸೆ); ನಿದರ್ಶನ; ಸಹೋಕ್ತಿ; ಸಂಕೀರ್ಣ; ಪರಿವೃತ್ತಿ; ವ್ಯಾಜಸ್ತುತಿ; ಹೇತೂಕ್ತಿ; ವಿಭಾವನಾ; ಲೇಶ; ಉದಾತ್ತ; ಅಪಹ್ನುತಿ (೩ ಬಗೆ) ರಸವದಲಂಕಾರ (೯ ರಸಗಳ ಸಂಬಂಧವಾಗಿ ೯ ಬಗೆ); ಊರ್ಜಿತ; ವ್ಯಾವೃತ್ತಿ; ಪ್ರಿಯತರ; ಆಶೀರಲಂಕಾರ; ಭಾವಿಕಾಲಂಕಾರ.

ರಸವದಲಂಕಾರ ಸಂಬಂಧದಲ್ಲಿ ದಂಡಿ ಎಂಟೇ ರಸಗಳನ್ನು ಲೆಕ್ಕಕ್ಕೆ ತೆಗೆದುಕೊಂಡಿದ್ದಾನೆ. ರಸವಿಚಾರವನ್ನು ವಿಸ್ತಾರವಾಗಿ ಹೇಳಿರುವ ಭರತನೂ ನಾಟ್ಯ ಶಾಸ್ತ್ರದಲ್ಲಿ ಹೇಳಿರುವುದು ಎಂಟೇ ರಸಗಳನ್ನು. ಕವಿರಾಜಮಾರ್ಗಕಾರನಿಗಿಂತ ಹಿಂದಿನವರಾದ ಉದ್ಭಟ ರುದ್ರಟರೇನೋ ಶಾಂತರಸದ ಪ್ರಸ್ತಾಪ ಮಾಡಿದ್ದಾರೆ. ಕಾಳಿದಾಸನ ಗಮನದಲ್ಲಿರುವುದೂ ಅಷ್ಟರಸಗಳೇ. ಇದು ಹೇಗಿದ್ದರೂ, ಕನ್ನಡ ಸಾಹಿತ್ಯದಲ್ಲಿ 'ನವರಸ'ಗಳ ಪ್ರಸ್ತಾಪಕ್ಕೆ ಶ್ರೀವಿಜಯನದೇ ಶ್ರೀಕಾರ.

'ಧ್ವನಿ' ಕಾವ್ಯದ ಆತ್ಮ ಎಂಬ ಮಾತು ಹಿಂದೆಯೇ ಬಂದಿದೆ. ಅದು ಆತ್ಮವಲ್ಲ, ಅದೂ ಒಂದು ಅಲಂಕಾರವೇ ಎಂಬ ದೃಷ್ಟಿ ಶ್ರೀವಿಜಯನದ್ದು ಎಂದು ಕಾಣುತ್ತದೆ. 'ಧ್ವನಿಯೇಂಬುದಲಂಕಾರಂ' ಎಂದು ಹೇಳಿ, ಧ್ವನ್ಯಲಂಕಾರವನ್ನು ಅಲಂಕಾರಗಳ ಪಟ್ಟಿಗೆ ಅವನು ಸೇರಿಸಿದ. ಇದು ಒಂದು ಗಮನಿಸಬೇಕಾದ ಸಂಗತಿ. ಆದರೆ, ತರುವಾಯದ ಕನ್ನಡ ಅಲಂಕಾರಿಕರು ಯಾರೂ ಈ ಅಲಂಕಾರವನ್ನು ಪುರಸ್ಕರಿಸಿಲ್ಲ ಎಂಬುದೂ ಅಷ್ಟೇ ಗಮನಾರ್ಹ.

ಅಲಂಕಾರ ಲಕ್ಷಣಗಳಿಗೆ ಲಕ್ಷ್ಯಗಳನ್ನು (ಉದಾಹರಣೆಗಳನ್ನು) ಕೊಡುವಾಗ ಶ್ರೀವಿಜಯ ಅನೇಕವನ್ನು ದಂಡಿಯ ಗ್ರಂಥದಿಂದ ತೆಗೆದುಕೊಂಡು ಕನ್ನಡಿಸಿದ್ದಾನೆ. ಸ್ವಂತ ಲಕ್ಷ್ಯಪದ್ಯಗಳೂ ಇವೆ. ಇವುಗಳ ಪೈಕಿ ಹಲಕೆಲವು ರಾಮಾಯಣದ ಕಥೆಗೆ ಸಂಬಂಧಪಟ್ಟವು. ಈಚೆಗೆ ದೊರೆತ ನಾಗವರ್ಮನ ವರ್ಧಮಾನ ಪುರಾಣದಿಂದ ಶ್ರೀವಿಜಯ 'ರಘುವಂಶ ಮಹಾ ಪುರಾಣ'ವನ್ನು ಬರೆದಿರುವುದಾಗಿ ತಿಳಿದು ಬಂದಿದೆ; ಈತ ಕವಿರಾಜಮಾರ್ಗವನ್ನು ಬರೆದವನೇ ಇರಬಹುದು. ಕವಿರಾಜ ಮಾರ್ಗದ ರಾಮಾಯಣ ಪದ್ಯಗಳು 'ರಘುವಂಶ ಮಹಾಪುರಾಣ'ದಿಂದ

ನಾಗವರ್ಮನ ಹೆಸರನ್ನೂ ಅವನು ಹೇಳಿರುವುದರಿಂದ, ನಾಗವರ್ಮನೆಂಬ ಕವಿ ಒಂದು ಜೈನ ಪುರಾಣವನ್ನೂ ಬರೆದಿದ್ದನೆಂಬ ಸಂಗತಿ ಮಾತ್ರ ತಿಳಿದು ಬಂದಿತ್ತು. ಆದರೆ, ಅದನ್ನು ಬರೆದವನು ಯಾವ ನಾಗವರ್ಮ, ಪುರಾಣ ಯಾವುದು, ಎಂಬ ಸಂಗತಿಗಳನ್ನು ತಿಳಿಯಲು ಆಧಾರಗಳಿರಲಿಲ್ಲ. ಕೇವಲ ಎರಡು ವರ್ಷಗಳ ಹಿಂದೆ, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಗ್ರಂಥ ಸಂಪಾದನಾ ವಿಭಾಗದ ವಿದ್ವಾಂಸರಾದ ಶ್ರೀ ಬಿ.ಎಸ್.ಸಣ್ಣಯ್ಯನವರು 'ವರ್ಧಮಾನ ಪುರಾಣ' ಎಂಬ ಚಂಪೂ ಕಾವ್ಯವನ್ನು ಕಂಡುಹಿಡಿದು, ಬೆಳಕಿಗೆ ತಂದರು. ಕಾವ್ಯಾವಲೋಕನ ಮುಂತಾದ ಕೃತಿಗಳನ್ನು ಬರೆದವನೇ ವರ್ಧಮಾನ ಪುರಾಣದ ಕರ್ತೃ, ಇದರ ರಚನೆಯ ಕಾಲ ಕ್ರಿ.ಶ.೧೦೪೨ – ಎಂದು ಸಂದೇಹಕ್ಕೆ ಎಡೆಯೇ ಇಲ್ಲದಂತೆ ತೀರ್ಮಾನ ಮಾಡಿದ್ದಾರೆ. ವರ್ಧಮಾನ ಪುರಾಣದಲ್ಲಿಯೇ ನಾಗವರ್ಮನು ಶ್ರೀವಿಜಯ ಮುಂತಾದ ಹಿಂದಿನ ಕವಿಗಳನ್ನು ನೆನೆಯುವ ಸಂದರ್ಭದಲ್ಲಿ 'ವತ್ಸರಾಜಚರಿತಾಗಮ'ವನ್ನು ಬರೆದ ಒಬ್ಬ ನಾಗವರ್ಮನನ್ನು ಹೆಸರಿಸಿದ್ದಾನೆ. ಈ ನಾಗವರ್ಮ ಯಾರು ಎಂಬುದು ನಿರ್ಧಾರವಾಗಬೇಕಾಗಿದೆ.

ಕವಿರಾಜಮಾರ್ಗಕ್ಕೂ ಕಾವ್ಯಾವಲೋಕನಕ್ಕೂ ನಡುವೆ ೨೦೦ ವರ್ಷಗಳ ಅಂತರವಿದೆ. ಈ ನಡುವಣ ಕಾಲದಲ್ಲಿ, ಪಂಪ, ರನ್ನ, ಪೊನ್ನ ಈ ಕವಿ ರತ್ನತ್ರಯರ ಕಾವ್ಯಗಳು ರಚಿತವಾಗಿದ್ದುವು. ಲಕ್ಷಣ ಸೂತ್ರಗಳಿಗೆ ಉದಾಹರಣೆಗಳನ್ನು ಕೊಡಲು ಅವನು ಸಂಸ್ಕೃತ ಲಕ್ಷಣಗ್ರಂಥಗಳ ಉದಾಹರಣ ಪದ್ಯಗಳನ್ನು ಅನುವಾದ ಮಾಡುವ, ಇಲ್ಲವೆ ಸ್ವಂತವಾಗಿ ಅವುಗಳನ್ನು ರಚಿಸಬೇಕಾದ ಅಗತ್ಯ ನಾಗವರ್ಮನಿಗೆ ಇರಲಿಲ್ಲ. ಆದ್ದರಿಂದ, ನಾಗವರ್ಮನು ಮೇಲೆ ಹೇಳಿದ ಮತ್ತು ಇತರ ಪೂರ್ವ ಕವಿಗಳ ಕಾವ್ಯಗಳಿಂದ ಧಾರಾಳವಾಗಿ ಉದಾಹರಣ ಪದ್ಯಗಳನ್ನು ತೆಗೆದುಕೊಂಡಿದ್ದಾನೆ; ಎಂಟೊಂಬತ್ತು ಪದ್ಯಗಳು ಅವನ ವರ್ಧಮಾನ ಪುರಾಣದಿಂದಲೇ ಆಯ್ದುವಾಗಿವೆ. ಇದರಿಂದ ವರ್ಧಮಾನ ಪುರಾಣವನ್ನು ಬರೆದ ಮೇಲೆ ಕಾವ್ಯಾನುಭವ ಒಂದು ಹದಕ್ಕೆ ಬಂದಿದ್ದಾಗ, ಕಾವ್ಯಾವಲೋಕನವನ್ನು ಬರೆದನೆಂದು ಹೇಳಬಹುದು. ಈ ಕಾರಣದಿಂದ, ಕಾವ್ಯಾವಲೋಕನದಲ್ಲಿ ಉತ್ತಮವಾದ ನೂರಾರು ಪದ್ಯಗಳ ಒಂದು ಕೋಶವೇ (ಆಂತ್ಯಾಲಜಿ, ಸಂಕಲನ) ಅಡಕವಾಗಿದೆ ಎನ್ನಬಹುದು. ಇದು ಕಾವ್ಯಾವಲೋಕನದ ಹೆಚ್ಚುಗಾರಿಕೆ; ಇವನ ತರುವಾಯ ಬಂದ ಲಕ್ಷಣಕಾರರು ಇವನ ಮೇಲುಪಂಕ್ತಿಯನ್ನು ಅನುಸರಿಸಿದರು.

ನಾಗವರ್ಮನ ಕೃತಿಗಳಿಂದ ಅವನ ವಿಚಾರವಾಗಿ ನಮಗೆ ಈ ಅಂಶಗಳು

ಇರಬಹುದು ಎಂಬ ಸಂದೇಹವನ್ನು ಕವಿ ಚರಿತೆಕಾರರಾದ ಆರ್. ನರಸಿಂಹಾಚಾರ್ಯರೇ ವ್ಯಕ್ತಪಡಿಸಿದ್ದರು. ಈ ವಿಚಾರದಲ್ಲಿ ನಿಶ್ಚಿತವಾಗಿ ತೀರ್ಮಾನ ಮಾಡಲು ಹೊಸ ಆಧಾರಗಳು ಸಿಕ್ಕಿಲ್ಲ. ಕಾವ್ಯಾವಲೋಕನದ ನಾಗವರ್ಮನು – "ಛಂದೋವಿಚಿತಿ, ಅಲಂಕೃತಿ, ಸಂದ ಅಭಿಧಾನ ವಸ್ತುಕೋಶಂ, ನಾಗವರ್ಮನ ಕೃತಿಗಳ್, ವಾಕ್‌ಶ್ರೀ ಸುಂದರಿಗೆ ರತ್ನಮಂಡನದಂದದೊಳ್ ಇರ್ದಪುವು" ಎಂದು ತಾನೇ ಹೇಳಿಕೊಂಡಿರುವುದರಿಂದ, ಈ ಮೂರು ಕೃತಿಗಳನ್ನು ಬರೆದವನು ಅವನೇ ಎಂಬುದು ಖಂಡಿತ. ಇವುಗಳಲ್ಲಿ 'ಛಂದೋವಿಚಿತಿ' ಸಿಕ್ಕಿಲ್ಲ. 'ಅಲಂಕೃತಿ' (=ಅಲಂಕಾರ ಗ್ರಂಥ) ಎಂಬುದೇ ಕಾವ್ಯಾವಲೋಕನ. ಕರ್ಣಾಟಕ ಭಾಷಾ ಭೂಷಣದ ಮೊದಲಿನಲ್ಲಿ ಕಾವ್ಯಾವಲೋಕನದಲ್ಲಿರುವಂತೆ ಜಿನಸ್ತುತಿ ಇರುವುದರಿಂದಲೂ, ಕೊನೆಯಲ್ಲಿ 'ಕರ್ಣಾಟ ಶಬ್ದ ಸೂತ್ರಗಳ ಕೃತಿ ನಾಗವರ್ಮನಿಂದ ರಚಿತವಾದದ್ದು' ಎಂದು ಹೇಳಿರುವುದರಿಂದಲೂ 'ಭಾಷಾಭೂಷಣ'ವೂ ಈ ನಾಗವರ್ಮನದ್ದೇ ಎಂಬುದು ಸ್ಪಷ್ಟ. ಹಲಾಯುಧನ 'ಅಭಿಧಾನ ರತ್ನಮಾಲೆ' ಎಂಬ ಸಂಸ್ಕೃತದ ಕೃತಿಯ ಕನ್ನಡ ಟೀಕು ಒಬ್ಬ ನಾಗವರ್ಮನಿಂದ ರಚಿತವಾಗಿದೆ. ಇವನು ಯಾರು ಎಂದು ಖಂಡಿತವಾಗಿ ಹೇಳಲು ಸಾಧ್ಯವಿಲ್ಲ. 'ಚಂದ್ರಚೂಡಾಮಣಿ ಶತಕ' ನಾಗವರ್ಮಾಚಾರ್ಯ ಎಂಬ ಬ್ರಾಹ್ಮಣ ಕವಿಯಿಂದ (೧೦೭೦ರ ಸುಮಾರಿನಲ್ಲಿ) ರಚಿತವಾಗಿದೆ. ಒಟ್ಟಿನ ಮೇಲೆ, ಕಾದಂಬರಿ–ಛಂದೋಬುಧಿಗಳನ್ನು ಬರೆದವನು ಒಬ್ಬ ನಾಗವರ್ಮ (ಒಂದನೆಯವನು); ಭಾಷಾಭೂಷಣ, ಕಾವ್ಯಾವಲೋಕನ, ಛಂದೋವಿಚಿತಿ, ವಸ್ತುಕೋಶ – ಈ ನಾಲ್ಕನ್ನು ಬರೆದವನು ಇನ್ನೊಬ್ಬ ನಾಗವರ್ಮ (ಎರಡನೆಯವನು); ಇವನ ಕಾಲ ಸು.೧೧೫೦ ಎಂಬ ಆರ್.ನರಸಿಂಹಾಚಾರ್ಯರ ತೀರ್ಮಾನವನ್ನು ಸಾಧಾರಣವಾಗಿ ಎಲ್ಲ ವಿದ್ವಾಂಸರೂ ಒಪ್ಪಿಕೊಂಡು ಬಂದಿದ್ದರು.*

ಯಶೋಧರ ಚರಿತ್ರೆಯನ್ನೂ ಅನಂತನಾಥ ಪುರಾಣವನ್ನೂ ಬರೆದಿರುವ ಜನ್ನ ಕವಿ (೧೨೦೯) ತನ್ನ ಪುರಾಣ ಕಾವ್ಯದಲ್ಲಿ ತನಗಿಂತ ಹಿಂದೆ ಜಿನೇಂದ್ರ ಪುರಾಣಗಳನ್ನು ಬರೆದಿರುವ ಪುರಾಣ ಕವಿಗಳ ಹೆಸರುಗಳನ್ನು ಹೇಳಿದ್ದಾನೆ.

---

* ಡಾ. ಎ. ವೆಂಕಟಸುಬ್ಬಯ್ಯ ಎಂಬ ಪ್ರಸಿದ್ಧ ವಿದ್ವಾಂಸರು, ದೊರಕಿಲ್ಲದ ಛಂದೋವಿಚಿತಿಯನ್ನು ಬಿಟ್ಟು ಉಳಿದ ಐದು ಕೃತಿಗಳನ್ನು ಒಬ್ಬನೇ ನಾಗವರ್ಮ ರಚಿಸಿರುವನೆಂದೂ ಅವನ ಕಾಲ "ಕ್ರಿ.ಶ.೧೦೧೫–೧೦೪೨ ವರೆಗೆ ಆಳಿದ (ಜಯಸಿಂಹ) ಜಗದೇಕಮಲ್ಲನೆಂದು ಚಾಲುಕ್ಯ ಚಕ್ರವರ್ತಿಯ" ಕಾಲ ಎಂದೂ ಅಭಿಪ್ರಾಯಪಟ್ಟರು.

ವಿದ್ವಾಂಸರು; ಸಂಸ್ಕೃತ ಯಶೋಧರ ಚರಿತೆಯನ್ನು ಬರೆದ ಕವಿ.

ಇನ್ನು, ಕಾವ್ಯಾವಲೋಕನದ ಪರಿಚಯಕ್ಕೆ ತೊಡಗಬಹುದು. ನಾಗವರ್ಮನೇ ಅದರ ಬಗೆಗೆ ಹೀಗೆ ಹೇಳಿದ್ದಾನೆ:

ಕವಿಗಳ್ಗೆ ಇದು ಕೈಗನ್ನಡಿ,
ಕವಿತೆಗೆ ಬಾಳ್ಮೊದಲ್, ವಾಗ್ದೇವತೆಗೆ ಉದ್–
ಭವಹೇತು ಕೋಶಗೃಹಂ....
ಸಮುಚಿತ ಶಬ್ದಸ್ಮೃತಿ ಕಾ–
ವ್ಯಮಲವ್ಯಾವೃತ್ತಿ, ಗುಣವಿವೇಕಂ, ರೀತಿ
ಕ್ರಮ ರಸನಿರೂಪಣಂ, ಕವಿ –
ಸಮಯಂ, ಇವು ಇಂತು ಅಯ್ದುಂ ಇದರೊಳ್
ಅಧಿಕರಣಂಗಳ್.

['ಕವಿಗಳಿಗೆ ಇದು ಕೈಗನ್ನಡಿ; ಕವಿತೆಗೆ ಜನ್ಮಸ್ಥಾನ; ಸರಸ್ವತಿಯ ಅವತಾರಕ್ಕೆ (ಹುಟ್ಟಿಗೆ) ಕಾರಣ; (ಕಾವ್ಯಸಂಪತ್ತಿನ) ಕೋಶಾಗಾರ, ಎಂದರೆ, ಭಂಡಾರ (ಕಾವ್ಯಾವಲೋಕನ ಹೇಗೆ ಕಾವ್ಯಕೋಶ ಎಂಬ ಅಂಶವನ್ನು ಹಿಂದೆಯೇ ಹೇಳಿದಿದೆ.)

ಶಬ್ದಸ್ಮೃತಿ, ಕಾವ್ಯದೋಷ ವಿವರಣೆ, ಗುಣವಿವೇಚನೆ, ರೀತಿ ಮತ್ತು ರಸನಿರೂಪಣೆ, ಕವಿಸಮಯ ಇವು ಈ ಗ್ರಂಥದ ಐದು ಅಧಿಕರಣಗಳು ಅಥವಾ ಅಧ್ಯಾಯಗಳು.]

ಮೊದಲ ಅಧಿಕರಣವಾದ 'ಶಬ್ದಸ್ಮೃತಿ' ಯಲ್ಲಿ ಕನ್ನಡ ವ್ಯಾಕರಣವನ್ನು ಸಂಗ್ರಹವಾಗಿ ನಾಗವರ್ಮ ನಿರೂಪಿಸಿದ್ದಾನೆ. ಇದರ ವಿಚಾರವಾಗಿ ವ್ಯಾಕರಣ ವಿಭಾಗದಲ್ಲಿ ನಾಲ್ಕು ಮಾತನ್ನು ಹೇಳಲಾಗುವುದು.

ಉಳಿದ ನಾಲ್ಕು ಅಧಿಕರಣಗಳು ಕಾವ್ಯಮೀಮಾಂಸೆಗೆ ಸಂಬಂಧಪಟ್ಟಿವೆ. ಗ್ರಂಥದ ಕೊನೆಯಲ್ಲಿ:

ವಾಮನನುಂ ರುದ್ರಟನುಂ
ಭಾಮಹನುಂ ದಂಡಿಯುಂ ಮನಂಗೊಳೆ ಪೇಳ್ದಂ
ತೀಮಹಿಗೆ ನೆಗಳೆ ಪೇಳ್ದಂ
ದಾಮೋದರ ತನಯನೀ ವಚೋಲಂಕೃತಿಯಂ.

–ಎಂದು ಅಲಂಕಾರ ಶಾಸ್ತ್ರ ರಚನೆಯಲ್ಲಿ ತಾನು ಯಾರು ಯಾರಿಗೆ ಋಣಿ ಎಂಬುದನ್ನು ನಾಗವರ್ಮ ತಿಳಿಸಿದ್ದಾನೆ. ಐದನೆಯ ಅಧಿಕರಣದಲ್ಲಿ

ತಿಳಿದು ಬರುತ್ತವೆ: ಕಾವ್ಯಾವಲೋಕನದಿಂದ ಇವನು ಧ್ವಜವಂಶಕ್ಕೆ ಸೇರಿದವನು, ದಾಮೋದರನ ಮಗ ಎಂದಿಷ್ಟೇ ತಿಳಿಯುತ್ತದೆ. ವರ್ಧಮಾನ ಪುರಾಣದ ಈ ಕೆಳಗಿನ ಪದ್ಯ ಕವಿಯ ವಿಷಯವಾಗಿ ಇನ್ನಷ್ಟು ಬೆಳಕು ಚೆಲ್ಲುತ್ತದೆ.

ಜನಕಂ ವಿಪ್ರಕುಳಪ್ರದೀಪಂ ಅನಘಂ ದಾಮೋದರಂ; ಪೆತ್ತ ತಾಯ್
ವಿನಯಾಳಂಕೃತೆ ವೀರಕಬ್ಬೆ; ವರಣಂ ಶ್ರೀ ವೀರಭಟ್ಟಾರಕಂ;
ತನಯಂ ಸದ್ಗುಣಮಂಡನಂ ಮಧು ವಲಂ ತಾನ್ – ಎಂದೊಡೆ
ಅದೊಂದು ಸೈ
ಪಿನ ಮಾನ್ಯೋನ್ನತಿಗಿಂತು ನೋಂತ ನರಂ ಆರ್ ಈ ನಾಗವರ್ಮಂಬರಂ.

ನಾಗವರ್ಮನ ಇಷ್ಟದೈವ ವೀರಭಟ್ಟಾರಕ (ಮಹಾವೀರ ಜಿನ); ಆದ್ದರಿಂದಲೇ ಅವನು ತೀರ್ಥಂಕರರಲ್ಲಿ ಮಹಾವೀರಸ್ವಾಮಿಯನ್ನು ಕುರಿತ ವರ್ಧಮಾನ ಪುರಾಣವನ್ನು ರಚಿಸಿದ್ದು. ಕವಿ ಜನ್ನನು ತನ್ನ ಅನಂತನಾಥ ಪುರಾಣದಲ್ಲಿ ಜಿನೇಂದ್ರ ಪುರಾಣ ಕರ್ತೃಗಳ ಪಂಕ್ತಿಯಲ್ಲಿ ನಾಗವರ್ಮನನ್ನು ಸೇರಿಸಿ, 'ನಾಗವರ್ಮನ ಬಹುಜ್ಞತೆ'ಯನ್ನು ಎತ್ತಿ ಹೇಳಿದ್ದಾನೆ. ನಾಗವರ್ಮನ ಶಾಸ್ತ್ರಗ್ರಂಥಗಳನ್ನು ಗಮನಿಸಿಯೇ ಜನ್ನ ಈ ಮಾತನ್ನು ಹೇಳಿರುವುದು ಸ್ಪಷ್ಟ. ಇದೇ ಜನ್ನನು, 'ನಾಗವರ್ಮನು ಜಗದೇಕನಲ್ಲಿ ಕಟಕೋಪಾಧ್ಯಾಯನಾಗಿದ್ದನು" ಎಂದೂ ಹೇಳಿದ್ದಾನೆ. ಈ ಜಗದೇಕ ಪಶ್ಚಿಮ ಚಾಳುಕ್ಯರಾಜ್ಯದ ಚಕ್ರವರ್ತಿ ಎರಡನೆಯ ಜಗದೇಕಮಲ್ಲ (೧೧೩೮–೧೧೫೦) ಎಂದು ಆರ್.ನರಸಿಂಹಾಚಾರ್ಯರು ಊಹಿಸಿದ್ದರು. ಈಗ ನಾಗವರ್ಮನ ವರ್ಧಮಾನ ಪುರಾಣದಿಂದ ಅದರ ರಚನಾ ಕಾಲ ೧೦೪೨ ಎಂದು ಖಚಿತವಾಗಿ ತಿಳಿದು ಬಂದಿರುವುದರಿಂದ, ನಾಗವರ್ಮನು ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲ ೨ನೆಯ ಜಯಸಿಂಹನ ಬಳಿ ಕಟಕೋಪಾಧ್ಯಾಯನಾಗಿದ್ದನು* ಎಂದು ಹೇಳಬೇಕಾಗುತ್ತದೆ. ತನ್ನ ವರ್ಧಮಾನ ಪುರಾಣವನ್ನು ವಾದಿರಾಜ ಪಂಡಿತರು ಶೋಧಿಸಿದರು ಎಂದು ನಾಗವರ್ಮ ಹೇಳಿದ್ದಾನೆ. ಈ ವಾದಿರಾಜರು ಜಯಸಿಂಹನ ಆಸ್ಥಾನದ

---

* 'ಕಟಕ' ಎಂದರೆ 'ಸೈನ್ಯ', 'ರಾಜಧಾನಿ' ಎಂಬ ಎರಡು ಮುಖ್ಯವಾದ ಅರ್ಥಗಳು ಸಂದರ್ಭಕ್ಕೆ ಹೊಂದುತ್ತದೆ. ಕಟಕಾಚಾರ್ಯ=ಸೈನ್ಯಕ್ಕೆ ವಿದ್ಯಾಭ್ಯಾಸ ಮಾಡಿಸುವವನು ರಾಜಧಾನಿಯ ಮುಖ್ಯೋಪಾಧ್ಯಾಯ, ಮಹಾ ಮಹೋಪಾಧ್ಯಾಯ ಎಂದು ಅರ್ಥವಾಗಬಹುದು.

ಪ್ರತಿಭಾನಂ ಕಾವ್ಯವಿದ್ಯಾಪ್ರಚಯಪರಿಚಯಂ, ವೃದ್ಧ ಸೇವಾನುರಾಗಂ,
ಸತತಾಭ್ಯಾಸಪ್ರಯತ್ನಂ – ಕವಿತೆಗೆ ನಿಯತಂ ಕಾರಣಂ; ಪೇಳ್ವೊಡೆ ಅಂತಾ
ಪ್ರತಿಭಾನಂ ಶಕ್ತಿ, ಲೋಕಾಗಮ ಸಕಲ ಕಲಾವೇದನಂ ವಿದ್ಯೆ, ಶಾಸ್ತ್ರಾ
ನ್ವಿತಂ ಅಪ್ಪಂ ವೃದ್ಧಂ; ಆಲಸ್ಯಮನುಳಿದೆಸಪುದ್ಯೋಗಂ ಅಭ್ಯಾಸಕರ್ಮಾಳಿಂ
(ಪ.೪೨೪)

[ಪ್ರತಿಭೆ, ಕಾವ್ಯರಚನೆಗೆ ಅಗತ್ಯವಾದ ವಿದ್ಯೆಗಳ ಪರಿಚಯ, ವೃದ್ಧರ ಸೇವೆಯಲ್ಲಿ ಪ್ರೀತಿ, ಕಾವ್ಯ ರಚನೆಯಲ್ಲಿ ಎಡೆಬಿಡದೆ ಅಭ್ಯಾಸ ಮತ್ತು ಪ್ರಯತ್ನ – ಇವು ಕವಿತಾ ಸೃಷ್ಟಿಗೆ ಇದ್ದೇ ತೀರಬೇಕಾದ ಕಾರಣಗಳು. ಪ್ರತಿಭೆ ಎಂದರೆ ಒಂದು ವಿಶೇಷ ಶಕ್ತಿ; ಲೋಕಾನುಭವ, ಧಾರ್ಮಿಕ ಶಾಸ್ತ್ರ, ಸಕಲ ಕಲೆಗಳು (ಇವು ೬೪), ಇವುಗಳ ತಿಳಿವಳಿಕೆಯೇ ವಿದ್ಯೆ; ವೃದ್ಧನೆಂದರೆ ಶಾಸ್ತ್ರಜ್ಞಾನವುಳ್ಳವನು (ವಯಸ್ಸಿನಿಂದ ಹಿರಿಯನಾದವನಲ್ಲ); ಬೇಸರಪಡದೆ ಯಾವಾಗಲೂ ಕಾವ್ಯಕರ್ಮದಲ್ಲಿ ತೊಡಗಿರುವುದು ಅಭ್ಯಾಸ ಪ್ರಯತ್ನ.]

ಇದರ ಮುಂದಿನ ೫ ಪದ್ಯಗಳಲ್ಲಿ – ಕವಿತಾರತ್ನ ದೊರಕುವುದು ಪುಣ್ಯಶಾಲಿಗೆ, ಕವಿತೆಯಿಲ್ಲದ ಪಾಂಡಿತ್ಯ ಮನೋಹರವೆನಿಸದು; ಇಹಲೋಕದ ಇಷ್ಟಾರ್ಥಗಳನ್ನೂ ಶಾಶ್ವತವಾದ ಕೀರ್ತಿಯನ್ನೂ ದೊರಕಿಸಿಕೊಡುವುದಾದ್ದರಿಂದ, ಇಹಪರ ಸುಖಗಳೆರಡಕ್ಕೂ ಕಾವ್ಯಕ್ಕಿಂತ ಹಿತಕರವಾದದ್ದು ಬೇರೆ ಯಾವುದೂ ಇಲ್ಲ; ಕಾವ್ಯವಧುವಿನ ಮೈಯಲ್ಲಿ ಸ್ವಲ್ಪ ದೋಷವಿದ್ದರೂ ಕೀರ್ತಿಗೆ ಕುಂದು; ಆದ್ದರಿಂದ, ಕೀರ್ತಿಯನ್ನು ಬಯಸುವ ಕವಿ ಉಪೇಕ್ಷೆ ಮಾಡದೆ ಕಾವ್ಯದ ಶಬ್ದದೋಷ ವಾಕ್ಯದೋಷಗಳನ್ನು ಹೋಗಲಾಡಿಸಬೇಕು–ಎಂಬ ಅಂಶಗಳನ್ನು ನಾಗವರ್ಮನು ಮನಮುಟ್ಟುವಂತೆ ತಿಳಿಸಿ, ಈ ಎರಡನೆಯ ಅಧಿಕರಣದಲ್ಲಿ ಆ ಕಾವ್ಯದೋಷಗಳನ್ನು ವಿವರಿಸಿದ್ದಾನೆ.

**ಕೆಲವು ದೋಷಗಳ ವಿಚಾರ:**

ನ್ಯಾಯ, ಆಗಮ, ನೃಪ ವಿದ್ಯಾ, ಆ–
ಮ್ನಾಯ, ಕಲಾ, ಕಾಮತಂತ್ರ ವಿಷಯ ವಿರೋಧ–
ಪ್ರಾಯಂ ಶಾಸ್ತ್ರವಿರುದ್ಧಂ;
ಶ್ರೇಯಂ ಅದಂತು ಎಲ್ಲಿಯಾನುಂ ಉಕ್ತಿಕ್ರಮದಿಂ (ಸೂತ್ರ ೧೧೨)

ನಿರೂಪಿಸಿರುವ 'ಕವಿಸಮಯ' ಎಂಬ ವಿಚಾರಕ್ಕೆ ಇವನು ಸುಮಾರು ೧೦ನೆಯ ಶತಮಾನದಲ್ಲಿ ಇದ್ದ ಅಮರಚಂದ್ರ ('ಕಾವ್ಯಕಲ್ಪಲತಾ' ಎಂಬ ಅಲಂಕಾರ ಗ್ರಂಥದ ಕರ್ತೃ) ಹಾಗೂ ರಾಜಶೇಖರ ('ಕಾವ್ಯಮೀಮಾಂಸೆ'ಯ ಕರ್ತೃ), ಇವರಿಗೆ ಋಣಿಯಾಗಿದ್ದಾನೆ. ಆದರೂ, ಈ ಇಬ್ಬರ ಹೆಸರುಗಳನ್ನು ನೆನೆಯದಿರುವುದು ಸೋಜಿಗದ ಸಂಗತಿ. ಭರತಮುನಿಯ ನಾಟ್ಯ ಶಾಸ್ತ್ರವನ್ನೂ ಅನುಸರಿಸಿದ್ದಾನೆ; ಮೇಲಿನ ಪದ್ಯದಲ್ಲಿ ಅವನ ಹೆಸರಿಲ್ಲದಿದ್ದರೂ. ರಸದ ನಿಷ್ಪತ್ತಿಯ ವಿಚಾರವನ್ನು ಹೇಳುವಾಗ 'ಭರತಶಾಸ್ತ್ರಕ್ರಮದಿಂ' ಎಂದು ಹೇಳಿರುವುದರಿಂದ, ರಸತತ್ತ್ವ ನಿರೂಪಣೆಯಲ್ಲಿ ಭರತನ ಪ್ರಭಾವವನ್ನು ಸ್ಪಷ್ಟವಾಗಿ ಗುರುತಿಸಬಹುದು. ಧ್ವನಿಸಿದ್ಧಾಂತವನ್ನು ಸ್ಥಾಪಿಸಿದ ಆನಂದವರ್ಧನನು ೯ನೆಯ ಶತಮಾನದಷ್ಟು ಪೂರ್ವದವನಾದರೂ, "ಧ್ವನಿತತ್ತ್ವವೂ ಅವನನ್ನು ಸೋಂಕಲಿಲ್ಲ; "ಧ್ವನಿಯನ್ನು ಒಂದು ಅಲಂಕಾರವೆಂದಾದರೂ ಗಣಿಸಿ ಹೆಸರಿಸುವಷ್ಟು ದೂರ ಕೂಡ ಅವನು ಹೋಗಲಿಲ್ಲ.* ಧ್ವನಿಪ್ರತಿಪಾದನೆ ಮಾಡುವ ಗ್ರಂಥಗಳನ್ನು ಅವನು ನೋಡಿಯೇ ಇರಲಿಲ್ಲವೆಂದು ತೋರುತ್ತದೆ."[೧೩] ನಾಗವರ್ಮನು ಅನುಸರಿಸಿರುವುದು ಮೇಲೆ ಹೇಳಿದ ಪ್ರಾಚೀನ ಅಲಂಕಾರಿಕರನ್ನು ಮಾತ್ರ. ಆರ್.ನರಸಿಂಹಾಚಾರ್ಯರು ಅಭಿಪ್ರಾಯ ಪಟ್ಟಿರುವಂತೆ – "ಮೇಲೆ ಹೇಳಿರುವ ಸಂಸ್ಕೃತ ಲೇಖಕರಲ್ಲಿ ಪ್ರತಿಯೊಬ್ಬನಿಗೂ ನಾಗವರ್ಮನು ಹೆಚ್ಚಾಗಿಯೋ ಕಡಿಮೆಯಾಗಿಯೋ ಋಣಿಯಾಗಿದ್ದರೂ, ಕಾವ್ಯಾವಲೋಕನವನ್ನು ಬರಿಯ ಸಂಕಲನಗ್ರಂಥ ಎಂದು ಭಾವಿಸುವುದು ತಪ್ಪು. ಗ್ರಂಥದ ಬಹುಪಾಲಿನ ಭಾಗ ಕೃತಿಕಾರನ ಮುದ್ರೆಯನ್ನು ತಳೆದಿದೆ; ಗ್ರಂಥದ ವಿಷಯಗಳನ್ನು ಜೋಡಿಸಿರುವ ಕ್ರಮವೂ ನಿರೂಪಣೆಯ ವಿಧಾನವೂ ಅವನ ಸ್ವಂತದ್ದಾಗಿದೆ.[೧೪]

ಕಾವ್ಯ ದೋಷಗಳನ್ನು ವಿವರಿಸುವ ೨ನೆಯ ಅಧಿಕರಣದ ಪ್ರಾರಂಭದಲ್ಲಿ, ಕವಿತಾರಚನೆಗೆ ಅಗತ್ಯವಾದ ಸಂದರ್ಭಗಳು ಯಾವುವು ಎಂಬುದನ್ನು ವಿವರಿಸುವ ಈ ಕೆಳಗಿನ ಪದ್ಯ ತುಂಬ ಪ್ರಸಿದ್ಧವಾಗಿದೆ.:

---

* ಕವಿರಾಜಮಾರ್ಗದಲ್ಲಿ 'ಧ್ವನಿ'ಯನ್ನು ಒಂದು ಅಲಂಕಾರ ಎಂದು ಹೇಳಿರುವುದನ್ನು ಹಿಂದೆಯೇ ಪ್ರಸ್ತಾಪಿಸಿದೆ. ನಾಗವರ್ಮನು ಬಹುಶಃ ಕವಿರಾಜಮಾರ್ಗವನ್ನು ನೋಡಿದ್ದಿರಲಾರ.

ಗತಾನುಗತಿಕ' (ಎಂದರೆ, ಹಿಂದಿನವರು ತುಳಿದ ದಾರಿಯನ್ನು ಕಣ್ಣು ಮುಚ್ಚಿ ತುಳಿಯುವುದು) ಎಂದು ಈ ಪ್ರಕರಣವನ್ನು ಮುಗಿಸುತ್ತಾನೆ. ಎರಡನೆಯದು ಶಬ್ದಾಲಂಕಾರದ ಪ್ರಕರಣ – ಇದರಲ್ಲಿ ಯಮಕ, ಅನುಪ್ರಾಸ, ಚಿತ್ರ, ವಕ್ರೋಕ್ತಿ ಎಂಬ ನಾಲ್ಕನ್ನು ಹೆಸರಿಸಿ, ಅವುಗಳ ಒಳಭೇದಗಳನ್ನು ತಿಳಿಸಿದ್ದಾನೆಂದು ಗೊತ್ತಾದ ಕ್ರಮದಲ್ಲಿ ಜೋಡಿಸುವುದರಿಂದ ಶರ (ಬಾಣ), ಶೂಲ, ಚಾಪ (ಬಿಲ್ಲು), ಚಕ್ರ, ಖಡ್ಗ, ಮುಂತಾದ ಚಿತ್ರಗಳ ಆಕಾರಗಳು ಮೂಡಿ ನಿಲ್ಲುತ್ತವೆ.

ಅರ್ಥಾಲಂಕಾರಗಳನ್ನು – ವಾಸ್ತವ, ಉಪಮೆ, ಅತಿಶಯ, ಶ್ಲೇಷ ಎಂದು ಸ್ಥೂಲವಾಗಿ ನಾಲ್ಕು ಗುಂಪುಗಳಾಗಿ ವಿಂಗಡಿಸಿದೆ. ಪ್ರತಿ ಗುಂಪಿನಲ್ಲಿ ಆಯಾ ಗುಂಪಿನ ಸಾಮಾನ್ಯ ಲಕ್ಷಣವನ್ನುಳ್ಳ ಅಲಂಕಾರಗಳನ್ನು ಉದಾಹರಣೆಗಳ ಸಮೇತ ವಿವರಿಸಲಾಗಿದೆ. ಉದಾಹರಣೆಗೆ, 'ಅತಿಶಯ'ದ ಗುಂಪಿನಲ್ಲಿ – ವಿರೋಧ, ಉತ್ಪ್ರೇಕ್ಷೆ, ವಿಭಾವನೆ, ತಿರೋಹಿತ, ಪೂರ್ವಕ, ಅಹೇತು, ತದ್ಗುಣ, ಪರಸ್ಪರಾಸಂಗತಿಕ, ವಿಶೇಷ, ಎಂಬ ಒಂಬತ್ತು ಅಲಂಕಾರಗಳು ಸೇರಿವೆ. ಹೀಗೆ ಒಂದು ತತ್ವಕ್ಕೆ ಅನುಗುಣವಾಗಿ ಅಲಂಕಾರಗಳನ್ನು ವಿಭಜನೆ ಮಾಡುವಲ್ಲಿ ನಾಗವರ್ಮನು ರುದ್ರಟನನ್ನು ಅನುಸರಿಸಿದ್ದಾನೆ. ಈ ನಾಲ್ಕು ಗುಂಪುಗಳಿಗೂ ಸೇರದ ಪ್ರೇಯ, ಊರ್ಜಸ್ವಿ, ಆಶೀ, ಭಾವಿಕ, ಎಂಬ ನಾಲ್ಕು ಹೆಚ್ಚಿನ ಅಲಂಕಾರಗಳನ್ನು ಪ್ರತ್ಯೇಕವಾಗಿ ವಿವರಿಸಿದ್ದಾನೆ. ಕವಿರಾಜಮಾರ್ಗದಲ್ಲಿ ಹೇಳಿರುವುದು ೩೬ ಅಲಂಕಾರಗಳು; ಇಲ್ಲಿ ಅಲಂಕಾರಗಳ ಸಂಖ್ಯೆ ೫೮ಕ್ಕೆ ಏರಿದೆ.

(i) 'ವಾಸ್ತವ'ದ ಗುಂಪಿಗೆ ಸೇರಿದ 'ಪರಿವೃತ್ತಿ' ಎಂಬ ಅಲಂಕಾರ. 'ಒಂದನ್ನು ಕೊಟ್ಟು ಪ್ರತಿಯಾಗಿ ಇನ್ನೊಂದನ್ನು ಪಡೆಯುವುದು' ಈ ಅಲಂಕಾರದ ಲಕ್ಷಣ. ('ಪರಿವೃತ್ತಿ' ಎಂಬ ಮಾತಿಗೆ 'ವಿನಿಮಯ', 'ಅದಲು ಬದಲು ಮಾಡುವುದು' ಎಂಬ ಅರ್ಥವೂ ಉಂಟು.)

ಬಿಳಿಯಲರ್ಗಣ್ಗಳ್ ಬೆಳ್ಪಂ
ಲಲನಾಜನದ ಅಧರ ಮಣಿಗ ಕೊಟ್ಟು, ಅದರ ಪುದುಂ–
ಗೊಳಿಸಿದ ಕೆಂಪಂ ನೀರ್ವೋ
ಕುಳಿಯೊಳ್ ಮಾರಾಡಿಕೊಂಡ ತೆರದಿಂ ತೋರ್ಕುಂ

[ಇದು ಜಲಕ್ರೀಡೆಯಾಡುತ್ತಿರುವ ಸ್ತ್ರೀಯರ ವರ್ಣನೆ; ಅವರ ಕಣ್ಣುಗಳು ಅರಳಿದ ಬಿಳಿಯ ಹೂವಿನಂತಿವೆ; ತುಟಿ ಕೆಂಪು ಮಣಿ, ಮಾಣಿಕ್ಯ (=ಅಧರಮಣಿ);

[ನ್ಯಾಯ, ಆಗಮ, ಮುಂತಾದ ಶಾಸ್ತ್ರಗಳಲ್ಲಿ ಹೇಳಿರುವ ವಿಷಯಕ್ಕೆ ವಿರುದ್ಧವಾಗಿದ್ದರೆ, ಅದು ಶಾಸ್ತ್ರವಿರುದ್ಧವೆಂಬ ದೋಷ. ಆದರೆ, ಎಲ್ಲಿಯಾದರೂ ಹೇಳತಕ್ಕ ರೀತಿಯಿಂದ ಅದು ದೋಷವಾಗದೆ ಇರಬಹುದು.]

ನಾಗವರ್ಮನು ಕೆಳಗಿನ ಉದಾಹರಣೆಯನ್ನು ತನ್ನ ವರ್ಧಮಾನ ಪುರಾಣದಿಂದಲೇ ಆಯ್ದುಕೊಟ್ಟಿದ್ದಾನೆ:

ಉಪನಯನಂ ಗೆಯ್ಯದೆಯುಂ
ಸ್ವಪೂರ್ವಜನ್ಮ ವಾಸನೆಯ ಬಲದಿಂ ಇಂತು ಈತಂ ವೇ–
ದ ಪುರಾಣ ವೇದಿಯಾದಂ;
ವ್ಯಪೇಕ್ಷೆಗೆಯ್ಗುಮೆ ವಿಶುದ್ದಮಣಿ ಸಂಸ್ಕೃತಿಯಂ

[ವೇದಾಧ್ಯಯನ ಮಾಡುವುದಕ್ಕೆ ೧೬ ಸಂಸ್ಕಾರ ಕರ್ಮಗಳಲ್ಲಿ ಒಂದಾದ ಉಪನಯನ ಸಂಸ್ಕಾರವಾಗಿರಬೇಕು. 'ಈ ಸಂಸ್ಕಾರವಿಲ್ಲದೆಯೇ ಈತ ವೇದ ಪುರಾಣಗಳನ್ನು ಬಲ್ಲವನಾದನು' – ಎಂದು ಹೇಳಿದ್ದರೆ, 'ಶಾಸ್ತ್ರ ವಿರುದ್ಧ' ದೋಷ ಸಂಭವಿಸುತ್ತಿತ್ತು. ಆದರೆ, ಪೂರ್ವಜನ್ಮದ ಸಂಸ್ಕಾರ ಬಲದಿಂದ ವೇದಪಾರಂಗತನಾದ ಎಂದು ಹೇಳಿರುವುದರಿಂದಲೂ, ಈ ಹೇಳಿಕೆಯನ್ನು ಸಹಜವಾಗಿಯೇ ಶುದ್ಧವಾಗಿರುವ ರತ್ನ ಸಂಸ್ಕಾರವನ್ನು (ಸಾಣೆ ಹಿಡಿಯುವುದರ ಮೂಲಕ ಶುದ್ಧಗೊಳಿಸುವುದನ್ನು) ಅಪೇಕ್ಷಿಸುತ್ತದೆಯೇ? (ಇಲ್ಲ)' – ಎಂಬ ಹೇಳಿಕೆಯಿಂದ ಸಮರ್ಥನೆ ಮಾಡಿರುವುದರಿಂದಲೂ, ದೋಷವುಂಟಾಗಿಲ್ಲ.

ಮೂರನೆಯ ಗುಣ ವಿವೇಕಾಧಿಕರಣದಲ್ಲಿ, 'ಮಾರ್ಗ ವಿಭಾಗ ದರ್ಶನ' ಮತ್ತು 'ಶಬ್ದಾಲಂಕಾರ ನಿರ್ಣಯ', 'ಅರ್ಥಲಂಕಾರ' ಎಂಬ ಮೂರು ವಿಭಾಗಗಳಿವೆ. 'ಕಾವ್ಯಕ್ಕೆ ಶೋಭೆ (ಮೆರುಗು, ಸೊಬಗು) ಕೊಡುವ ಧರ್ಮವೇ 'ಗುಣ' ಎಂದು ಹೇಳಿ, – ಸಮ, ಸಂಶ್ಲಿಷ್ಟ, ಅರ್ಥವ್ಯಕ್ತಿ, ಮಧುರ ಪ್ರಸನ್ನ, ಕಾಂತ, ಸುಕುಮಾರ, ಓಜಸ್ಸು, ಉದಾರ, ಸಮಾಧಿ – ಎಂಬ ಹತ್ತು ಕಾವ್ಯಗುಣಗಳನ್ನು ಉದಾಹರಣೆಗಳೊಂದಿಗೆ ವಿವರಿಸಿದ್ದಾನೆ. ಇವುಗಳ ವಿವರಣೆ ಒಟ್ಟಿನಲ್ಲಿ ದಂಡಿಯನ್ನು ಅನುಸರಿಸಿದೆ. ಈ ಗುಣಗಳು ದಕ್ಷಿಣ ದೇಶದ (ವಿದರ್ಭ) ಕವಿಮಾರ್ಗದಲ್ಲಿ ರೂಢಿಯಾಗಿವೆ; ಇವುಗಳ ವಿಪರ್ಯಯ (ವ್ಯತ್ಯಸ್ತವಾದ) ಕ್ರಮ ಉತ್ತರ ಮಾರ್ಗದ್ದು – ಎಂದಿರುವುದೂ ದಂಡಿಯ ಮಾತೇ. ಭಾಮಹನ ಅಭಿಪ್ರಾಯವನ್ನು ಅನುಮೋದಿಸಿ, 'ವೈದರ್ಭಗೌಡ ಎಂಬ ಮಾರ್ಗ ಭೇದಗಳು

ಈ ಅತಿಶಯಮಾಡಿ ಹೇಳುವುದರಿಂದ ಯಾವ ವರ್ಣನೆಯೂ ಬಹಳ ಆಕರ್ಷಕವಾಗಿರುತ್ತದೆ.' (ಸೂತ್ರ ೧೬೯).

ಈ ಗುಂಪಿನ ಅಲಂಕಾರಗಳಲ್ಲಿ ಒಂದಾದ 'ಪೂರ್ವ' ಎಂಬ ಅಲಂಕಾರ: "ಜನಕಕ್ಕಿಂತ (ಕಾರಣಕ್ಕಿಂತ) ಮೊದಲೇ ಜನ್ಯವು (ಕಾರ್ಯ) ಉಂಟಾಯಿತೆಂದು ಹೇಳಿದರೆ 'ಪೂರ್ವ' ಎಂಬ ಅಲಂಕಾರವಾಗುತ್ತದೆ." (ಸೂತ್ರ ೧೭೩).

ಸ್ಮರನ ಶರಗಳ್ ಇವು ಎನೆ, ತರ–
ತರದಿಂ ಪೊರನೆಗೆದು, ಮೆಲ್ಲ ಮೆಲ್ಲನೆ ಬಳಿಯಂ
ಬಿರಿದುವು ಮಲ್ಲಿಗೆ; ಮುನ್ನಮೆ
ಬರಿದುವು ಬಿಬ್ಬಿರನೆ ಬಿರಯಿಜನದ ಅಳ್ಪೆರ್ದೆಗಳ್.

[ಇವು ಮನ್ಮಥನ ಬಾಣಗಳೋ ಎನ್ನುವಂತೆ, ಮಲ್ಲಿಗೆ ಮೊಗ್ಗುಗಳು ತರತರವಾಗಿ ಹೊರಕ್ಕೆ ಹೊಮ್ಮಿ, ಮೆಲ್ಲಮೆಲ್ಲನೆ ಆಮೇಲೆ ಅರಳಿದವು; ಅದಕ್ಕೂ ಮೊದಲೇ (ತಮ್ಮ ಪ್ರಿಯರಿಂದ ಅಗಲಿದ) ವಿರಹಿ ಜನರ ಅಂಜಿದ ಎದೆಗಳು ಬಿರಿದು ಬಿಟ್ಟಿದ್ದವು–ಮನ್ಮಥನ ಹೂ ಬಾಣಗಳು ವಿರಹಿಗಳ ಅಗಲಿಕೆಯ ನೋವಿಗೆ ಕಾರಣವಷ್ಟೆ; ಅವು ಅವರ ಹೃದಯಗಳನ್ನು ಭೇದಿಸುವುವು. ಮನ್ಮಥನ ಐದು ಹೂಬಾಣಗಳಲ್ಲಿ ಮಲ್ಲಿಗೆಯದೂ ಒಂದು. ಅರಳಿದ ಮಲ್ಲಿಗೆಯನ್ನು ಕಂಡಮೇಲೆ ವಿರಹಿಗಳ ಎದೆ ಬಿರಿಯುವುದು ಸಹಜ; ಅದಕ್ಕೆ ಮೊದಲೇ ಎದೆ ಬಿರಿದುವು ಎಂದು ಹೇಳಿರುವುದು ವಿಸ್ಮಯಕರ, ಅತಿಶಯವಾದ ಸಂಗತಿ. ಕಾರಣಕ್ಕೂ ಮೊದಲೇ ಕಾರ್ಯವಾಗಿದೆ.]

(iv) ಶ್ಲೇಷ ಮೂಲಕವಾದ ಅಲಂಕಾರಗಳು: ಇವುಗಳಲ್ಲಿ ಅರ್ಥಶ್ಲೇಷ; ಶಬ್ದಶ್ಲೇಷ ಎಂದು ಎರಡು ಬಗೆ. 'ಒಂದೇ ಪದವನ್ನು ಒಡೆಯದೆ ಎರಡು ಅರ್ಥ ಹೊರಡುವಂತೆ ಹೇಳುವುದು ಅರ್ಥಶ್ಲೇಷ; ಪದವನ್ನು ಒಡೆದು, ಅದರ ಅವಯವಗಳಿಂದ ಎರಡು ಅರ್ಥ ಹೊರಡುವಂತಿದ್ದರೆ ಶಬ್ದ ಶ್ಲೇಷ' (ಸೂತ್ರ ೧೭೬). ಈ ಎರಡು ಪ್ರಕಾರಗಳಲ್ಲಿ ಮತ್ತೆ ಒಳಭೇದಗಳಿವೆ. ಪ್ರಸಿದ್ಧವಾದ ವ್ಯಾಜಸ್ತುತಿ, ವಿರೋಧಾಭಾಸ, ಇವು ಅರ್ಥಶ್ಲೇಷಗಳು.

'ವಿರೋಧಾಭಾಸ'ಕ್ಕೆ ಉದಾಹರಣೆ:

ಅನುಗತಕರ್ಣ, ಕೃಷ್ಣಾ–
ರ್ಜುನಾನುರಕ್ತಂ ವಿಲೋಚನಂ; ದೋರ್ದಂಡಂ

ನೀರಾಟದಲ್ಲಿ ಕಣ್ಣು ತುಸು ಕೆಂಪಾಗಿವೆ; ತುಟಿ ತುಸ ಬಿಳಿಚಿಕೊಂಡಿವೆ. ಇದು ವಾಸ್ತವ ಸಂಗತಿ. ಇದನ್ನು ನೋಡಿದರೆ, ಕಣ್ಣುಗಳು ತಮ್ಮ ಬಿಳುಪನ್ನು ತುಟಿಗೆ ಕೊಟ್ಟು ಅದರ ಕೆಂಪನ್ನು ತಾವು ಪಡೆದುಕೊಂಡಿರುವಂತೆ ಕಾಣುತ್ತದೆ.]

(ii) 'ಉಪಮಾ' ಮೂಲವಾದ ಅಲಂಕಾರ ವರ್ಗದಲ್ಲಿ 'ವಿಪರ್ಯಾಸೋಪಮೆ'ಗೆ ಲಕ್ಷ್ಯ; ಇದು ಪಂಪನ ಆದಿಪುರಾಣದಿಂದ (೬–೮೫) ಆಯ್ದ ಪದ್ಯ:

ಮೊಗಮಂ ತಾವರೆ, ಕಣ್ಣಂ ಉತ್ಪಲದಳಂ, ಧಮ್ಮಿಲ್ಲಮಂ ಸೋಗೆ, ಸೆ–
ಳ್ಳುಗುರಂ ಕೇದಗೆ, ಪುರ್ಬಂ ಅಂಗಜನ ಬಿಲ್, ದಂತಾಳಿಯಂಮುತ್ತು ಕೈ–
ಮುಗಿದು ಆರಾಧಿಸಿ ಪೋಲ್ತುವು ಎನ್ನದೆ, ಸರೋಜಾತಾದಿ ನಿಸ್ಸಾರ
ವಸ್ತುಗಳೊಳ್ ಪೋಲಿಪರ್, ಅಂತು ಅದೇಂ ಮರುಳರೋ, ರೂಪಂ
ವಿಚಿತ್ರಾಂಗಿಯಾ

[ಆಶ್ಚರ್ಯಕರವಾದ ದೇಹವುಳ್ಳವಳ ಮುಖವನ್ನು ತಾವರೆ, ಕಣ್ಣನ್ನು ನೈದಿಲೆಯ ಎಸಳು, ಮುಡಿಯನ್ನು ನವಿಲ ತೋಕೆ, ಚೂಪಾದ ಉಗುರನ್ನು ತಾಳೆಯ ಹೂವು, ಹುಬ್ಬನ್ನು ಮನ್ಮಥನ ಬಿಲ್ಲು, ಹಲ್ಲುಗಳನ್ನು ಮುತ್ತು, ಕೈಮುಗಿದು ಪೂಜಿಸಿ, (ಅವುಗಳ ಗುಣಗಳನ್ನು ತಾವು ಪಡೆದು) ಹೋಲಿಕೆಗೊಂಡವು ಎನ್ನಬೇಕು; ಹಾಗೆನ್ನದೆ, ಅವಳ ರೂಪನ್ನು ಆ ರೀತಿ ಕೆಲಸಕ್ಕೆ ಬಾರದ ಕಮಲ ಮುಂತಾದ ವಸ್ತುಗಳಿಗೆ ಹೋಲಿಸುವವರು ಅದೇನು ಮರುಳರೋ!]

ಇದಿಷ್ಟು ಪದ್ಯದ ಅರ್ಥ. ಮುಖಕ್ಕೂ ತಾವರೆಗೂ, ಕಣ್ಣಿಗೂ ನೈದಿಲೆಗೂ, ಮುಂತಾಗಿ ಪರಸ್ಪರ ಹೋಲಿಕೆ ಇರುವುದರಿಂದ ಇದು ಉಪಮಾಲಂಕಾರ. ಆದರೆ 'ಮುಖ ತಾವರೆಯನ್ನು ಹೋಲುತ್ತದೆ' ಎಂದರೆ ತಾವರೆಗೆ ಪ್ರಾಧಾನ್ಯ ಕೊಟ್ಟ ಹಾಗಾಯಿತು. ವರ್ಣಿಸುತ್ತಿರುವ ವಿಷಯಕ್ಕೆ ಪ್ರಾಧಾನ್ಯ ಕೊಡಬೇಕಾದರೆ, ತಾವರೆ ಮುಖವನ್ನು ಸೇವಿಸಿ ಅದರ ಚೆಲುವಿಕೆಯನ್ನು ಪಡೆಯಿತು ಎನ್ನಬೇಕು. ಮೊದಲ ರೀತಿಯಲ್ಲಿ ಹೇಳುವುದು ವಿಪರ್ಯಾಸವಾದ, ಎಂದರೆ ವ್ಯತ್ಯಾಸಗೊಂಡ, ಹೋಲಿಕೆಯ ಕ್ರಮ. ಇದನ್ನು ಸೂತ್ರ ರೂಪದಲ್ಲಿ ಹೇಳುವುದಾದರೆ, ಉಪಮಾನಕ್ಕೆ ಉಪಮೇಯದಿಂದಲೇ ಹೋಲಿಕೆಯನ್ನು ತಿಳಿಸುವುದು. ಉಪಮಾನ ಎಂದರೆ ಹೋಲಿಸುವ ವಸ್ತು; ಉಪಮೇಯ ಎಂದರೆ ಹೋಲಿಸಲ್ಪಡುವ ವಸ್ತು.

(iii) 'ಅತಿಶಯ'ದಿಂದ ಹುಟ್ಟುವ ಅಲಂಕಾರಗಳ ಸಾಮಾನ್ಯ ಲಕ್ಷಣ; 'ಸಾಮಾನ್ಯನಿಗೂ ತಿಳಿಯುವ ಹಾಗೆ ಮಾಡಿದ ವಸ್ತುವಿನ ವರ್ಣನೆ ವಿಸ್ಮಯವನ್ನು (ಸೋಜಿಗವನ್ನು) ಉಂಟು ಮಾಡುವಂತಿದ್ದರೆ, ಅದು ಅತಿಶಯ.

ಹೊಂದಿಕೆಯಾಗುತ್ತದೆ. ಒಟ್ಟಿನಲ್ಲಿ ರಚನೆ ಕಿವಿಗೆ 'ಪರುಷಪ್ರಾಯ' (ಕರ್ಕಶ).

ಈ ಲಕ್ಷಣ ಅವನು ಕೊಡುವ ಉದಾಹರಣೆಯಲ್ಲಿ ಹೇಗೆ ನಿದರ್ಶನಕ್ಕೆ ಬಂದಿದೆ ಎಂಬುದನ್ನು ನೋಡಿ:

ವಂಗಾಂಗಾಂಧ್ರ ಕಳಿಂಗ ಕೊಂಗ ವಿಸರತ್ ಪಾದಾತಾ ಪಾಠೀನಮು–
ದ್ರಂಗತ್ತುಂಗ ತುರಂಗ ಭಂಗುರ ತರಂಗಾಕೀರ್ಣಂ ಉಚ್ಚೃಂಖಳೋ
ತ್ತುಂಗೋನ್ಮತ್ತ ಮತಂಗಜ ಪ್ರಕರ ಯಾದಸ್ಸಂಕುಳಂ ಕೂಡೆ ನೋ
ಳ್ಪಂಗದದ್ಭುತಮಾಗಿ ತೋರಿ ಮಸಗಿತ್ತುರ್ವೀಶ ಸೈನ್ಯಾರ್ಣವಂ

(ಪದ್ಯ ೭೮೭)

[ಇದು ಒಬ್ಬ ರಾಜನ ಸೇನಾ ಸಮುದ್ರ ಅದ್ಭುತವಾಗಿ ಕಾಣಿಸಿಕೊಂಡು ವಿಜೃಂಭಿಸಿತ್ತು ಎಂಬುದರ ವರ್ಣನೆ. ಪದ್ಯ ಕಿವಿಗೆ ಬಿದ್ದ ಕೂಡಲೆ ಅದು ಅರ್ಥವಾಗದಿದ್ದರೂ ಅದ್ಭುತರಸವು ಹೇಗೆ ಬೋಧೆಯಾಗುತ್ತದೆ ಎಂಬುದನ್ನು ಗಮನಿಸಬಹುದು.]

ಹೀಗೆಯೇ, ಉಳಿದ ಎರಡು ರೀತಿಗಳ ವಿಚಾರ.

ಈ ಪ್ರಕರಣದಲ್ಲಿಯೇ ನಾಗವರ್ಮನು ರಸ ತತ್ವದ ವಿಚಾರವನ್ನು ಭರತ ಮುನಿಯನ್ನು ಅನುಸರಿಸಿ ಸಂಕ್ಷೇಪವಾಗಿ ವಿಚಾರ ಮಾಡಿದ್ದಾನೆ. ಎಂಟೇ ರಸಗಳೆಂಬುದು ಅವನ ಅಭಿಪ್ರಾಯ. ಶಾಂತ ರಸವನ್ನು ಕುರಿತ ಪದ್ಯವನ್ನು ಈಚೆಗೆ ಯಾರಾದರೂ ಸೇರಿಸಿರಬಹುದೇ ಎಂಬ ಅನುಮಾನವುಂಟಾಗುತ್ತದೆ.

ಈ ಅಧಿಕರಣದ ಮೊದಲ ಪದ್ಯ ಕಾವ್ಯಾವಲೋಕನದಲ್ಲಿ ಅತ್ಯಂತ ಗಮನಾರ್ಹವಾದ ಪದ್ಯ:

ರೀತಿ ವಿನೂತನವಸ್ತು ಕೃತಿಗೊಪ್ಪುವ ಮೈ: ರಸಭಾವ ವೃತ್ತಿ ನಿ–
ರ್ಣೀತಿಯೆ ಜೀವಂ; ಅಂತದರಿಂ ಅನ್ವಿತನಪ್ಪ ಕವೀಶ್ವರಂ ಬುಧ–
ವ್ರಾತಮ ಒರಲದು ಬಿಚ್ಚಳಿಸಿ ನಚ್ಚುವಳಂಕೃತಿ ಕೂಡದಿರ್ದೊಡಂ
ರೀತಿಯೊಳೊಂದೆ ಪೇಳ್ವುದು ರಸಂಬಿಡೆ ಬಂಧುರ ಕಾವ್ಯಬಂಧಮಂ

(ಪದ್ಯ ೭೮೦)

[ರೀತಿಯೇ ವಸ್ತು ಪ್ರಧಾನವಾದ (ಧಾರ್ಮಿಕ ಪುರಾಣ?) ಕಾವ್ಯಕ್ಕೆ ಒಪ್ಪುವ ಶರೀರ; ರಸಭಾವ ವೃತ್ತಿ ಅದರ ಜೀವ; ಆದ ಕಾರಣ, ವಿದ್ವಾಂಸರು

'ಘನದೃಢಬಲಂ ಪ್ರಲಂಬಂ
ತನಗೆನೆ, ಪರಿದುಂ ವಿರುದ್ಧಮೀ ನೃಪನ ಅಂದಂ.

ಈ ಪದ್ಯದಲ್ಲಿ ರಾಜನೊಬ್ಬನ ಅಂದವನ್ನು (ಸ್ವರೂಪವನ್ನು) ವರ್ಣಿಸಿದೆ. ಕರ್ಣನನ್ನು ಹಿಂಬಾಲಿಸುತ್ತ (=ಅನುಗತ ಕರ್ಣಂ), ಪರಮ ಮಿತ್ರರಾದ ಕೃಷ್ಣಾರ್ಜುನರಲ್ಲಿ ಅನುರಕ್ತವಾದ (ಎಂದರೆ ಪ್ರೀತಿಯುಳ್ಳ) ಕಣ್ಣು; ಬಾಹುದಂಡವು ಬಹಳ ಬಲಿಷ್ಠವಾಗಿ ನೀಳವಾಗಿತ್ತು. ಹೀಗೆ, ರಾಜನ ಅಂದ ಪರಸ್ಪರ ವಿರೋಧ ಗುಣಗಳಿಂದ ಕೂಡಿತ್ತು. ಕರ್ಣ ಮತ್ತು ಅರ್ಜುನ ಕೃಷ್ಣರು ವೈರಿಗಳು; ಏಕಕಾಲದಲ್ಲಿ ಇವರಲ್ಲಿ ಸಂಬಂಧವಿಟ್ಟುಕೊಳ್ಳುವುದರಲ್ಲಿ ವಿರೋಧ ಅಭಾಸವಾಗುತ್ತದೆ (=ತೋರಿ ಬರುತ್ತದೆ). ಈ ವಿರೋಧ ಕೇವಲ ತೋರಿಕೆಯದು. ಕರ್ಣ ಮುಂತಾದ ಪದಗಳಿಗೆ ಬೇರೆಯಾಗಿ ಅರ್ಥ ಮಾಡಿದರೆ ವಿರೋಧವು ಪರಿಹಾರವಾಗುತ್ತದೆ. ಕಣ್ಣು ಕಿವಿಯವರೆಗೆ ಚಾಚಿತ್ತು (=ಅನುಗತಕರ್ಣ), ಕೃಷ್ಣ=ಕಪ್ಪಾಗಿಯೂ, ಅರ್ಜುನ=ಬೆಳ್ಳಗೂ, ಅನುರಕ್ತಂ=ಕೆಂಪಾಗಿಯೂ ಇದ್ದಿತು, ಎಂದರೆ ಬೇರೆಯ ಅರ್ಥ ಹೇಳುವುದರ ಮೂಲಕ ನಿಜಸ್ಥಿತಿಯನ್ನು ತಿಳಿಸಿದ ಹಾಗಾಯಿತು. (ಶ್ಲೇಷ ಎಂದರೆ ಒಡಗೂಡಿರುವುದು ಎಂದು ಪದದ ಅರ್ಥ; ಇಲ್ಲಿ ಎರಡು ಅರ್ಥಗಳು ಒಟ್ಟಿಗೆ ಕೂಡಿಕೊಂಡಿವೆ; ವಿರುದ್ಧವಾದ ಅರ್ಥ ತೋರುವಂತೆ ಪದಗಳನ್ನು ಉಪಯೋಗಿಸಿದೆ.)

ನಾಲ್ಕನೆಯದು 'ರೀತಿ ಕ್ರಮ ರಸ ನಿರೂಪಣಾಧಿಕರಣ'. ನಾಗವರ್ಮನ ಪ್ರಕಾರ 'ರೀತಿ'ಯೆಂದರೆ, 'ಪದರಚನೆಯಲ್ಲಿ ಅತಿಶಯ' (ಪದರಚನಾತಿಶಯಂ ರೀತಿ'). ಗೊತ್ತಾದ ರೀತಿಯಲ್ಲಿ ಅಕ್ಷರಗಳ ವಿನ್ಯಾಸ, ಗುಣ ಕೂಡಿ ಬರುವುದು, ಸಮಾಸಗಳು ಬಂದಿರುವುದು – ಇವುಗಳನ್ನು ಅನುಸರಿಸಿ ವೈದರ್ಭ, ಗೌಡೀಯ, ಪಾಂಚಾಲೀ ಎಂದು ರೀತಿಗಳು ಮೂರು ತೆರನಾಗಿವೆ. (ಪದ್ಯ ೭೮೧). ಅರ್ಥಾಲಂಕಾರ ಪ್ರಕರಣದಲ್ಲಿ ನಾಗವರ್ಮ ವಿಶೇಷವಾಗಿ ರುದ್ರಟನನ್ನು ಅನುಸರಿಸಿದ್ದರೂ ಅವರು ಹೇಳುವ 'ಲಾಟೀಯಾ' (ಲಾಟ ದೇಶದ ರೀತಿ) ಎಂಬ ರೀತಿಯನ್ನು ಹೇಳಿಲ್ಲ. ರೀತಿಗಳಲ್ಲಿ ಸಮಾಸಸ್ವರೂಪ, ಪದರಚನೆಯ ಬಗೆ, ರಸದೃಷ್ಟಿ ಹೇಗೆ ಒಂದನ್ನೊಂದು ಹೊಂದಿಕೊಂಡಿರುತ್ತವೆ ಎಂದು ಹೇಳಿರುವುದೂ ಗಮನಿಸಬೇಕಾದ ಸಂಗತಿ. ಇವನ ಅಭಿಪ್ರಾಯದಂತೆ, ಗೌಡ ರೀತಿಯಲ್ಲಿ ಅತಿ ದೀರ್ಘ ಸಮಾಸಗಳು, ಶಬ್ದಾಡಂಬರ, ಇವು ಎದ್ದು ಕಾಣುತ್ತವೆ; ಅದ್ಭುತ, ರೌದ್ರ, ವೀರರಸಗಳಿಗೆ ಇದು ಸಂಗತವಾಗಿರುತ್ತದೆ, ಎಂದರೆ

ಆವುದು ಅಶೇಷ ಲೋಕ ವಿಷಯಸ್ಥಿತಿ ಅಲ್ತು. ಅಖಿಳ ಆಗಮಾರ್ಥಮುಂ
ಭಾವಿಪೊಡೆ ಅಲ್ತು. ಸತ್ಕವಿಪರಂಪರೆಯಿಂ ಪರಿಗೀತವಾಗಿ ನಿ–
ಷ್ಕೇವಳಮಾದ ರೂಢಿವಶದಿಂ ಸಲೆ ಸಲ್ವುದು ಇದಲ್ತೆ ಶಿಷ್ಟ ಸಂ–
ಭಾವಿತಮಪ್ಪ ಕಾವ್ಯ ಸಮಯಂ ಭುವನತ್ರಯವಸ್ತು ಗೋಚರಂ

(ಪದ್ಯ ೮೪೪)

[ಯಾವುದು ಸಮಸ್ತಲೋಕದಲ್ಲಿಯೂ ವಾಸ್ತವವಾಗಿ ಇಲ್ಲವೋ, ಯಾವುದನ್ನು ಯಾವ ಶಾಸ್ತ್ರದಲ್ಲಿ ಹೇಳಿಲ್ಲವೋ, ಯಾವುದನ್ನು ಒಳ್ಳೆಯ ಕವಿಗಳು ಎಂದಿನಿಂದಲೂ ಕೇವಲ ರೂಢಿಯಿಂದ ಹೇಳಿಕೊಂಡು ಬಂದಿದ್ದಾರೋ, ಯಾವುದನ್ನು ಲಾಕ್ಷಣಿಕರು ಮನ್ನಿಸಿದ್ದಾರೆಯೋ, ಯಾವುದು ಮೂರು ಲೋಕಗಳ ವಸ್ತುಗಳಲ್ಲಿ ಕಂಡುಬಂದೀತೋ ಅದು ಕವಿಸಮಯ ಅಥವಾ ಕಾವ್ಯಸಮಯ.]

ನಾಗವರ್ಮನು ವಿವರಿಸಿರುವಂತೆ, ಕವಿಸಮಯವು ಅಸದಾಖ್ಯಾತಿ, ಸದಕೀರ್ತನ, ನಿಯಮ, ಐಕ್ಯ ಎಂದು ನಾಲ್ಕು ಬಗೆ. ಈ ಪ್ರತಿಯೊಂದು ಬಗೆಯಲ್ಲೂ ಜಾತಿ, ದ್ರವ್ಯ, ಕ್ರಿಯಾ, ಗುಣ ಎಂದು ನಾಲ್ಕು ಒಳಭೇದಗಳಿವೆ.

ಅಸದಾಖ್ಯಾತಿ ಎಂದರೆ, ಇಲ್ಲದಿರುವುದನ್ನು ಹೇಳುವುದು. ಉದಾಹರಣೆಗೆ, 'ಸದಾಖ್ಯಾತಿ'ಯಲ್ಲಿ 'ದ್ರವ್ಯ' ಎಂಬ ಭೇದ: ಕತ್ತಲೆಯ ಮೊತ್ತವನ್ನು ಹಿಡಿಯಲ್ಲಿ ಹಿಡಿಯಬಹುದು, ಸೂಜಿಯಿಂದ ಕೂಡ ಭೇದಿಸಲಾಗದ್ದು, ಎಂದು ವರ್ಣಿಸುವುದು; ಬೆಳುದಿಂಗಳನ್ನು ನಾವೆಯಲ್ಲಿ ದಾಟಬಹುದು, ಬೊಗಸೆಯಿಂದ ಮೊಗೆಯಬಹುದು, ಎಂದು ಹೇಳುವುದು. ಸದಕೀರ್ತನ ಎಂದರೆ, ಲೋಕದಲ್ಲಿ ಜಾತಿ ದ್ರವ್ಯ ಕ್ರಿಯೆ ಗುಣಗಳ ರೂಪದಲ್ಲಿ ಇದ್ದರೂ ಇಲ್ಲವೆಂದು ವರ್ಣಿಸುವುದು. (ಉದಾ: ವಸಂತ ಮಾಸದಲ್ಲಿ ಜಾಜಿಯ ಹೂ ಅರಳುವುದಿದ್ದರೂ ಅರಳುವುದಿಲ್ಲ, ಎಂದು ವರ್ಣಿಸುವುದು.) ಲೋಕದಲ್ಲಿ ಅನೇಕ ಕಡೆಗಳಲ್ಲಿ ಇರಬಹುದಾದರೂ ಒಂದೇ ಕಡೆ ಇರತಕ್ಕದ್ದು, ಎಂದು ಹೇಳುವುದು ನಿಯಮಾರ್ಥ. (ಉದಾ: ಮುತ್ತು ತಾಮ್ರಪರ್ಣಿ ನದಿಯಲ್ಲಿ ಮಾತ್ರ ದೊರಕುತ್ತದೆ ಎಂದು ಹೇಳುವುದು). ವಾಸ್ತವವಾಗಿ ಭಿನ್ನ ಭಿನ್ನವಾಗಿರುವ ವಸ್ತುಗಳನ್ನು ಒಂದೇ ಎಂದು ಭಾವಿಸಿ ವರ್ಣಿಸುವುದು ಐಕ್ಯ. (ಉದಾ: ಮೊಲವು ಜಿಂಕೆಯೂ ಬೇರೆ ಬೇರೆ ಪ್ರಾಣಿಗಳು. ಚಂದ್ರಮಂಡಲದ ಕಪ್ಪು ಗುರುತನ್ನು ಒಮ್ಮೆ ಮೊಲವೆಂದೂ, ಇನ್ನೊಮ್ಮೆ ಜಿಂಕೆಯೆಂದೂ ವರ್ಣಿಸುವುದು) ಸತ್ಕೀರ್ತಿ ಬಿಳುಪು, ಅಪಕೀರ್ತಿ ಕಪ್ಪು; ಹಾವಿನ ಹೆಡೆಯಲ್ಲಿ ರತ್ನವಿರುತ್ತದೆ; ಚಾತಕ ಪಕ್ಷಿ ಮಳೆಯ ನೀರನ್ನು ಕುಡಿಯುತ್ತದೆ; ಚಕೋರ ಪಕ್ಷಿಗೆ ಬೆಳದಿಂಗಳು ಇಷ್ಟ– ಇವು ಕೆಲವು ಕವಿಸಮಯದ ಇತರ ಉದಾಹರಣೆಗಳು.

ತುಂಬ ಮೆಚ್ಚಿಕೊಂಡು ನೆಚ್ಚಿಕೊಂಡಿರುವ ಶಬ್ದಾರ್ಥಾಲಂಕಾರಗಳನ್ನು ಉಪಯೋಗಿಸಲಾಗಿದ್ದರೂ, ರೀತಿ ಸಿದ್ಧಿಸುವಂತೆ ರಸದಿಂದ ಕೂಡಿರುವಂತೆ, ಲಕ್ಷಣವನ್ನು ಬಲ್ಲ ಕವಿ ಸುಂದರವಾದ ಕಾವ್ಯವನ್ನು ರಚಿಸಬೇಕು.]*

ಈ "ಪದ್ಯವು ಕಾವ್ಯಾವಲೋಕನದ ಉಪದೇಶಸಾರ. ರೀತಿ ಕಾವ್ಯದ ಶರೀರ, ರಸ ಅದರ ಜೀವ – ಇದೇ ಈ ಉಕ್ತಿಯ ತಿರುಳು. 'ರಸ' ಎಂಬ ಮಾತುಗಳನ್ನು ವಿಶಾಲಾರ್ಥದಲ್ಲಿ ಗ್ರಹಿಸಿದರೆ ಆಧುನಿಕರು ಕೂಡ ನಾಗವರ್ಮನ ಅಭಿಪ್ರಾಯವನ್ನು ಒಪ್ಪಬಹುದು. ವಾಮನನು 'ರೀತಿ ಕಾವ್ಯದ ಆತ್ಮ' ಎಂದು ಹೇಳಿದ್ದನ್ನು ನಾಗವರ್ಮನು ಅಂಗೀಕರಿಸದೆ, ಅದು ಕಾವ್ಯದ ಶರೀರ ಎಂದು ಹೇಳಿ ಅದಕ್ಕೆ ಸಮಂಜಸವಾದ ಸ್ಥಾನವನ್ನು ಕೊಟ್ಟದ್ದು ಭಾರತೀಯ ಕಾವ್ಯ ಮೀಮಾಂಸೆಗೇ ಅವನ ಕಾಣಿಕೆಯೆನ್ನಬಹುದು. ಅವನಿಗಿಂತ ಹಿಂದೆ ಸಂಸ್ಕೃತದಲ್ಲಿ ಕೂಡ ಯಾರೂ ಹೀಗೆ ಹೇಳಿಲ್ಲ. ಪಂಡಿತರಿಗೆ ಅಲಂಕಾರಗಳು ಪರಮಪ್ರಿಯವೆಂದೂ, ಅವುಗಳನ್ನೇ ಅವರು ಮೆಚ್ಚಿ ಕೊಂಡಾಡುವರೆಂದೂ ನಾಗವರ್ಮನು ಬಲ್ಲನು; ಅವರ ಆ ಪ್ರವೃತ್ತಿಯನ್ನು ಅವನು ಇಲ್ಲಿ ಟೀಕಿಸಿಯೂ ಇದ್ದಾನೆ. ಇಂಥ ಅಲಂಕಾರಗಳಿಗೆ ಹೆಚ್ಚು ಗಮನ ಕೊಡದೆ, ರೀತಿಯ ಮೇಲೆ ಕಣ್ಣಿಟ್ಟು ರಸವುಕ್ಕುವಂತೆ ಕಾವ್ಯರಚನೆ ಮಾಡಬೇಕೆಂಬುದು ನಾಗವರ್ಮನ ಸದುಪದೇಶ.[೧೫]

ಕಾವ್ಯಾವಲೋಕನದ ಐದನೆಯ ಅಧಿಕರಣ 'ಕವಿಸಮಯ'ಕ್ಕೆ ಬಹು ಮಟ್ಟಿಗೆ ಮೀಸಲಾಗಿದೆ. ಈ ಅಧ್ಯಾಯದಲ್ಲಿ, ಈ ಹಿಂದೆಯೆ ತಿಳಿಸಿದಂತೆ, ಸಂಸ್ಕೃತ ಅಲಂಕಾರಿಕ ರಾಜಶೇಖರನ ಕಾವ್ಯ ಮೀಮಾಂಸೆಯ ಸ್ಪಷ್ಟವಾದ ಪ್ರಭಾವವನ್ನು ಕಾಣಬಹುದು.

ಕವಿಸಮಯ ಎಂದರೇನು? ನಾಗವರ್ಮ ಹೀಗೆ ವಿವರಿಸಿದ್ದಾನೆ:

---

* ಪದರಚನೆಯಿಂದ ರೂಪಿತವಾಗುವ 'ಮಾರ್ಗ' ಅಥವಾ 'ರೀತಿ' (=ಇಂದಿನ ಶೈಲಿ) ಹಳಗನ್ನಡಕ್ಕೆ ಮಾತ್ರವಲ್ಲದೆ ಹೊಸಗನ್ನಡದ 'ಸಾಹಿತ್ಯ' ಸೃಷ್ಟಿಗೂ ಅನ್ವಯಿಸುವ ಕಾವ್ಯ ತತ್ತ್ವ. ಇಂದು ಕಥೆ, ಕಾದಂಬರಿ, ಕವಿತೆ, ನಾಟಕ, ಮುಂತಾದ ಎಲ್ಲ ಸಾಹಿತ್ಯ ಪ್ರಕಾರಗಳಲ್ಲಿ ಈ 'ರೀತಿ'ಯ ಪಾತ್ರ ಕುಗ್ಗುತ್ತಿರುವುದು ಸಾಹಿತ್ಯ ಶರೀರದ ಬಲವನ್ನೂ ಅದರ ಅಂಗ–ಉಪಾಂಗಗಳ ಚೆಲುವನ್ನೂ ಕುಗ್ಗಿಸುತ್ತಿದೆ ಎಂದು ತೋರುತ್ತದೆ. ವೈಜ್ಞಾನಿಕ ಅಥವಾ ವಿಚಾರ ಸಾಹಿತ್ಯಕ್ಕೆ ಈ ಮಾತು ಅನ್ವಯಿಸುವುದಿಲ್ಲ.

ಶ್ರೀವಿಜಯ ಕವಿರಾಜಮಾರ್ಗದಲ್ಲಿ ಹೇಳುವ ಚಿತ್ತಾಣ ಇದ್ದರೂ ಇರಬಹುದು. ಬಾಜನೆಗಬ್ಬ ಎಂದರೆ ವಾದ್ಯ ಸಮೇತ ಹಾಡುವ ಕಾವ್ಯವೆಂದೂ, ವಾಚನ (=ಭಾಜನೆ) ಮಾಡುವ 'ಓದುಗಬ್ಬ' ಎಂದೂ ಬೇರೆ ಬೇರೆ ಅಭಿಪ್ರಾಯಗಳಿವೆ.]

ಈ ಕಾವ್ಯ ಪ್ರಕಾರಗಳನ್ನು ವಿವರಿಸಿಯಾದ ಮೇಲೆ, ಮಹಾಕಾವ್ಯದಲ್ಲಿ ಬರುವ (ಹದಿನೆಂಟು) ವರ್ಣನೆಗಳ ವಿಷಯವನ್ನು ಹೇಳಿ, ಸಾಮಾನ್ಯವಾಗಿ ದೃಶ್ಯಕಾವ್ಯಗಳ ಸಂದರ್ಭದಲ್ಲಿ ಹೇಳುವ ಐದು 'ಸಂಧಿಗಳನ್ನೂ, ಐದು 'ಸಂಧ್ಯಂಗ'ಗಳನ್ನೂ ಹೆಸರಿಸಿ ನಾಗವರ್ಮನು ಕಾವ್ಯಾವಲೋಕನವನ್ನು ಮುಗಿಸಿದ್ದಾನೆ.

**ಉದಾಯಾದಿತ್ಯಾಲಂಕಾರ**

ಇದು ಒಂದು ಚಿಕ್ಕ ಅಲಂಕಾರ ಗ್ರಂಥ. ಇದರಲ್ಲಿ ಕೇವಲ ೭೨ ಪದ್ಯಗಳು ಮಾತ್ರ ಇವೆ. ಕಂದ ಪದ್ಯಗಳೇ ಹೆಚ್ಚು; ಕೆಲವು ವೃತ್ತಗಳೂ ಉಂಟು. ಕವಿರಾಜಮಾರ್ಗ ಮತ್ತು ಕಾವ್ಯಾವಲೋಕನಗಳಲ್ಲಿ ಕಂಡು ಬರುವ ವಿಷಯದ ಹರುಹು, ಉದಾಹರಣೆಗಳ ಸೊಬಗು ಮತ್ತು ಹೆಚ್ಚಳ, ಸ್ವತಂತ್ರವಾದ ವಿಚಾರದ ದೃಷ್ಟಿ – ಈ ಗುಣಗಳು ಯಾವುವೂ ಕಂಡುಬರುವುದಿಲ್ಲ. "ಕಿರಿದರಿಂ ತಿಳಿಸಿದಪೆಂ ಶ್ರೀಭರಿತ ಬಾಲಕರ್ ಕವಿತಾಭಣಿತೆಯೊಳ್ ಅಮರ್ದು ನಿಮಿರ್ದು ನೆರೆ ಮೆರೆವಿನೆಗಂ" ["ಕಾವ್ಯ ವಿಚಾರದಲ್ಲಿ ಬಾಲಕರಾಗಿರುವವರು ಕಾವ್ಯ ಹೇಳುವ ಕಲೆಯಲ್ಲಿ ನಿಪುಣರಾಗಿ ಮೆರೆಯುವಂತೆ (ಅಲಂಕಾರ ಶಾಸ್ತ್ರವನ್ನು) ತಿಳಿಸುತ್ತೇನೆ"] ಎಂದು ಕವಿ ತನ್ನ ಕೃತಿ ರಚನೆಯ ಉದ್ದೇಶವನ್ನು ಮೊದಲೇ ತಿಳಿಸಿದ್ದಾನೆ. ಅವನ ಉದ್ದೇಶ ಚೆನ್ನಾಗಿ ಕೈಗೂಡಿದೆ. ಅಲಂಕಾರಗಳನ್ನೂ ಇತರ ವಿಚಾರಗಳನ್ನೂ ತಿಳಿಸುವ ಪದ್ಯಗಳು ತಿಳಿಯಾದ ಭಾಷೆಯಲ್ಲಿಯೇ ಇವೆ. ಆದ್ದರಿಂದ, ಇದನ್ನು ಅಲಂಕಾರಶಾಸ್ತ್ರದ ಪ್ರಥಮ ಪಾಠ ಪುಸ್ತಕ ಎಂದು ಎಣಿಸಬಹುದು; ಹಾಗೆ ಉಪಯೋಗ ಮಾಡಿಕೊಳ್ಳಬಹುದು.

ಗ್ರಂಥದಲ್ಲಿನ ಈ ಪದ್ಯ ಗ್ರಂಥಕರ್ತನ ಬಗೆಗೆ ಕೆಲವು ಸಂಗತಿಗಳನ್ನು ತಿಳಿಸುತ್ತದೆ:

ಎಸೆವ ಈ ಕಾವ್ಯಶರೀರಮಂ ಪೊಸಯಿಸಿರ್ದ ಅಷ್ಟಾದಶಾಂಗಂಗಳಂ,
ರಸರೀತಿ ಕ್ರಮದಿಂದಂ ಒಂದಿದ ದಶಪ್ರಾಣಂಗಳ ಒಂದಂದಮಂ,
ವಸುಧಾನಾಥನ ಸೋಮನಾಥನ ಸುತಂ ಚೋಳೋದಯಾದಿತ್ಯಂ ಇಂ–
ತುಸಿರ್ದಂ; ಪೇಳ್ದಪಂ ಇನ್ ಅಲಂಕೃತಿಗಳಂ ಸಾಹಿತ್ಯ ರತ್ನಾಕರಂ.

(ಪದ್ಯ ೨೪)

ಕವಿಸಮಯದಲ್ಲಿ ವರ್ಣಿತವಾಗುವ ವಿಷಯಗಳು ಸತ್ಯವೇ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಕವಿಸಮಯದ ಕೆಲವು ಕಲ್ಪನೆಗಳ ಹಿಂದೆ ಸತ್ಯಾಂಶವು ಬೀಜರೂಪದಲ್ಲಿ ಇರುವ ಸಂಭವವೂ ಉಂಟು, ಕವಿಸಮಯದ ವಿಷಯ ಒಂದೇ ಆದರೂ ಪ್ರತಿಭಾಶಾಲಿಗಳಾದ ಕವಿಗಳು ಅದನ್ನು ತಮ್ಮದೇ ಆದ ರೀತಿಯಲ್ಲಿ ಸ್ವಾರಸ್ಯವಾಗಿ ವರ್ಣಿಸಿದ್ದಾರೆ. ಒಟ್ಟಿನ ಮೇಲೆ, ಕಾವ್ಯ ಪ್ರೇಮಿಗಳು ಕವಿಸಮಯದ ವಿವರಗಳನ್ನು ಚೆನ್ನಾಗಿ ಅರಿತುಕೊಂಡರೆ, ಪ್ರಾಚೀನ ಕಾವ್ಯಗಳ ಚೆಲುವಿನ ಒಂದು ಮುಖವನ್ನು ಅರ್ಥಮಾಡಿಕೊಂಡು, ಆ ಚೆಲುವನ್ನು ಸವಿಯಲು ಸಹಾಯವಾಗುವುದು. ಈ ದೃಷ್ಟಿಯಿಂದ ನೋಡಿದಾಗ, ನಾಗವರ್ಮನು ಕನ್ನಡದಲ್ಲಿ ಅಲಂಕಾರ ಶಾಸ್ತ್ರವನ್ನು ಒಂದು ಮಜಲು ಮುಂದಕ್ಕೆ ಒಯ್ದನು ಎಂದು ಧಾರಾಳವಾಗಿ ಹೇಳಬಹುದು.

ನಾಗವರ್ಮನು ಕವಿಸಮಯ ಪ್ರಕರಣದಲ್ಲಿಯೇ ಬಗೆಬಗೆಯ ಕಾವ್ಯಗಳ ಸ್ವರೂಪಗಳನ್ನೂ ವಿವರಿಸಿದ್ದಾನೆ. ದಂಡಿಯನ್ನು ಅನುಸರಿಸಿ, ಕಾವ್ಯವನ್ನು ಗದ್ಯ, ಪದ್ಯ, ಮಿಶ್ರ ಎಂದು ಮೂರಾಗಿ ವಿಂಗಡಿಸಿದ್ದಾನೆ. ಕಥೆ, ಆಖ್ಯಾಯಿಕೆಗಳು ಗದ್ಯದಲ್ಲಿರುತ್ತವೆ. ಪದ್ಯದಿಂದ ಆದದ್ದು 'ಸರ್ಗಬಂಧ' (ಎಂದರೆ ಸರ್ಗಗಳನ್ನು ಅಥವಾ ಅಧ್ಯಾಯಗಳನ್ನು ಉಳ್ಳದ್ದು) ಕಾವ್ಯ. ಗದ್ಯಪದ್ಯ ಮಿಶ್ರವಾದ ಪ್ರಬಂಧವನ್ನು ಶ್ರೀವಿಜಯ ಗದ್ಯಕಥೆ ಎಂದು ಕರೆದರೆ, ಇವನು ಮೊತ್ತ ಮೊದಲಿಗೆ ಚಂಪೂ ಎಂಬ ಹೆಸರಿನಿಂದ ಕರೆದಿದ್ದಾನೆ. ತನ್ನ ಮಟ್ಟಿಗೆ ತಾನು ಪೂರ್ಣವಾದ ಬಿಡಿ ಪದ್ಯವನ್ನು ಸಂಸ್ಕೃತದಲ್ಲಿ ಮುಕ್ತಕ ಎನ್ನುತ್ತಾರೆ. ನಾಗವರ್ಮನು ಇದನ್ನು ಕನ್ನಡದಲ್ಲಿ ಇಡುಕುಂಗಬ್ಬ ಎಂದು ಹೆಸರಿಸಿರುವುದು ಒಂದು ವಿಶೇಷ. ಇಂಥ ಕೆಲವು ಮುಕ್ತಕಗಳು ಒಂದೇ 'ಕ್ರಿಯೆ'ಯನ್ನು ಒಳಗೊಂಡಿದ್ದರೆ ಅದಕ್ಕೆ ಕುಳಕವೆಂದೂ, ಅನೇಕ ವಿಷಯಗಳನ್ನು ಒಳಗೊಂಡ ಬಿಡಿ ಪದ್ಯಗಳ ಸಂಕಲನಕ್ಕೆ ಕೋಶವೆಂದೂ (anthology ಆಂತ್ಯಾಲಜಿ) ಹೆಸರು.

ಕನ್ನಡಕ್ಕೆ ವಿಶಿಷ್ಟವಾದ ಕೆಲವು ಕಾವ್ಯ ಜಾತಿಗಳನ್ನೂ ನಾಗವರ್ಮನು ವಿವರಿಸಿದ್ದಾನೆ: ಒಂದು ಕಂದ ಪದ್ಯ, ಮತ್ತೊಂದು ಪ್ರಸಿದ್ಧವಾದ ವೃತ್ತ ಇದ್ದರೆ ಪದ; ೧೨ 'ಪದ'ಗಳು ಕೂಡಿ ಒಂದೆ ಮೆಲ್ವಾಡು; ೧೫ ಅಥವಾ ೨೫ 'ಪದ'ಗಳು ಒಟ್ಟುಗೂಡಿ ಕಾವ್ಯದಲ್ಲಿ ಅಳವಟ್ಟಿದ್ದರೆ, ಅದು ಪಾಡು; ಈ ಪಾಡುಗಳಿಂದ ಆದದ್ದು ಪಾಡುಗಬ್ಬ. ಇದರಿಂದ ಮೆಲ್ವಾಡದ, ರೂಢಿಯಲ್ಲಿರುವ ಬೆದಂಡೆಗಬ್ಬವೂ ಆಗುತ್ತವೆ. ಹಲವು ತೆರೆದ ಪದ್ಯಗಳು, ಪದ್ಧಿಕೆಗಳು (ಎಂದರೆ ರಗಳೆಗಳು), ಸಮಸ್ತ ವರ್ಣನೆಗಳು ಇವುಗಳಿಂದ ಕೂಡಿದ್ದು ಬಾಜನೆಗಬ್ಬ. [ಈ ಬಾಜನೆಗಬ್ಬವೇ

ಸ್ವತಂತ್ರ ರಾಜನಾಗಿದ್ದಿರಲಾರನು. ಆವ ದೊರೆಯಲ್ಲಿಯೋ ಸಾಮಂತ ರಾಜನಾಗಿದ್ದಿರಬೇಕು. ಇವನು ಸುಮಾರು ೧೧೫೦ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.[೧೬] ಎಂದು ಆರ್.ನರಸಿಂಹಾಚಾರ್ಯರು ಅಭಿಪ್ರಾಯಪಟ್ಟಿದ್ದಾರೆ.

ಆದರೆ, "ನಿನ್ನ ಉದಯದಿಂದಂ, ಉದಯಧರಿ ಶ್ರೀಕಾಂತ, ದಿನಕಾಂತ ಕುಲ, ಕೇಳ್, ಈ ಲೋಕಮೆ ಕೃತಾರ್ಥಂ", "ಕಾವ್ಯಕನ್ಯೆಗೆ ನಿನ್ನಂಪ್ರಿಯನಂಪಡೆದೆಂ," ಎಂಬಂತಹ ಕೆಲವು ಮಾತುಗಳು ಬೇರೊಬ್ಬ ವ್ಯಕ್ತಿ (ಕವಿ) ಉದಯಾದಿತ್ಯರಾಜನನ್ನು ಕುರಿತು ಹೇಳಿದಂತೆ ಇವೆ. ಆದ್ದರಿಂದ, ಉದಯಾದಿತ್ಯನ ಹೆಸರಿನಲ್ಲಿ ಅವನ ಆಸ್ಥಾನದ ಕವಿಯೊಬ್ಬನು ಈ ಅಲಂಕಾರ ಗ್ರಂಥವನ್ನು ಬರೆದಿರಬಹುದೆಂದು ಊಹಿಸಲು ಅವಕಾಶವಿದೆ.

ಕರ್ನಾಟಕದ ಹಾಗೂ ದಕ್ಷಿಣದೇಶದ ಚರಿತ್ರೆಯಲ್ಲಿ ಅನೇಕ ಉದಯಾದಿತ್ಯರುಗಳು ಆಗಿ ಹೋಗಿದ್ದಾರೆ. ಆದರೆ 'ಚೋಳೋದಯಾದಿತ್ಯ' ಎಂಬ ಹೆಸರಿನ ದೊರೆ ಯಾರೂ ಇಲ್ಲ. ಚೋಳರು ಕರ್ನಾಟಕದ ಹಾಗೂ ಆಂಧ್ರದ ಕೆಲವು ಭಾಗಗಳನ್ನು ೧೨ನೆಯ ಶತಮಾನದವರೆಗೂ ತಮ್ಮ ಆಧೀನದಲ್ಲಿ ಇಟ್ಟುಕೊಂಡಿದ್ದರು. ಕೆಲವು ತೆಲುಗು ಸಾಮಂತ ದೊರೆಗಳು ಚೋಳರೊಡನೆ ವಿವಾಹ ಸಂಬಂಧ ಬೆಳಸಿ, ತಮ್ಮ ಹೆಸರಿನ ಹಿಂದೆ ಚೋಡ (ಳ)' ಎಂಬ ಉಪನಾಮವನ್ನೂ ಸೇರಿಸಿಕೊಳ್ಳುತ್ತಿದ್ದರು. ತೆಲುಗು ಸೀಮೆಯ ಒಂದು ಶಾಸನದಲ್ಲಿ ಒಬ್ಬ ಚೋಡೋ(ಳೋ)ದಯನ ಹೆಸರು ಕಂಡು ಬರುತ್ತದೆ. ಈತನ ಕಾಲ ಸು. ೧೧೦೦–೧೧೬೦. ಇವನೆ ಈ ಅಲಂಕಾರ ಗ್ರಂಥದಲ್ಲಿ ಹೇಳಿರುವ ಚೋಳೋದಯಾದಿತ್ಯ ಎಂದು ಸದ್ಯದ ಮಟ್ಟಿಗೆ ಇಟ್ಟುಕೊಳ್ಳಬಹುದು. ಹೇಗೂ, ಈ ಗ್ರಂಥದ ಕಾಲವನ್ನು ೧೧೫೦ ಎಂದು ಕವಿಚರಿತೆಕಾರರು ಊಹಿಸಿರುವುದು ಸರಿಯಾಗಿದೆ ಎನ್ನಬಹುದು.

ಅಲಂಕಾರ ಮತ್ತು ಗುಣಗಳ ನಿರೂಪಣೆಯಲ್ಲಿ ಈ ಗ್ರಂಥದ ಕವಿ ಬಹುಮಟ್ಟಿಗೆ ದಂಡಿಯನ್ನೆ ಅನುಸರಿಸಿದ್ದಾನೆ. ಕವಿರಾಜಮಾರ್ಗ ಮತ್ತು

---

* ದಂಡಿಯನ್ನು ಅನುಸರಿಸಿ ಹೇಳಿರುವ ಈ ಪದ್ಯದಲ್ಲಿ ೧೭ ಅಂಗಗಳನ್ನು ಮಾತ್ರ ಹೇಳಿದೆ; ಅವನು ಹೇಳಿರುವ 'ನಾಯಕಾಭ್ಯುದಯ' ಇದರಲ್ಲಿ ಬಿಟ್ಟುಹೋಗಿದೆ. ಕವಿರಾಜಮಾರ್ಗದಲ್ಲಿಯೂ ಹೀಗೆ ಇದೆ. ನಾಗವರ್ಮನು ನಗರ, ಅರ್ಣವ (ಸಮುದ್ರ), ಸರಿತ್ (ನದಿ), ಅಟವೀ (ಕಾಡು), ನಗ (ಪರ್ವತ), ಚಂದ್ರೋದಯ, ಸುರ್ರ್ಯೋದಯ, ಋತು, ಸಲಿಲ (ಜಲ) ಕ್ರೀಡೆ – ಇಷ್ಟನ್ನು ಹೇಳಿ, ಇವೇ ಮುಂತಾಗಿ 'ವರ್ಣಿಕ' ವರ್ಣಿಕ' (ವರ್ಣನೆ) ಗಳನ್ನು ಅದರಲ್ಲಿ ವರ್ಣಿಸಬೇಕು ಎಂದು ಹೇಳಿದ್ದಾನೆ.

ಈ ಪದ್ಯದ ಆಧಾರದ ಮೇಲೆ, "ಈತನು ಆವನೋ ಒಬ್ಬ ಸೋಮನಾಥನೆಂಬ ಚೋಳರಾಜನ ಮಗನೆಂದು ತಿಳಿಯುತ್ತದೆ.... ಈತನು ಪಟ್ಟಾಭಿಷಿಕ್ತನಾಗಿ ಆಳುತ್ತಿದ್ದಂತೆ ತೋರುತ್ತದೆ. ತನ್ನ ಹೆಸರನ್ನು ಉದಯ, ಉದೆಗ, ಎಂದೂ ಹೇಳಿಕೊಂಡಿದ್ದಾನೆ. ಈತನಿಗೆ ಕವಿರತ್ನಶೇಖರ, ಸಾಹಿತ್ಯ ರತ್ನಾಕರ ವಿದ್ಯಾಧರ, ರಾಜಸುಕವಿರತ್ನಾಭರಣ, ಕವಿರಾಜಶೇಖರ, ಸಾಹಿತ್ಯ ರತ್ನಾಕರ ಎಂಬ ಬಿರುದುಗಳು ಇದ್ದಂತೆ ತಿಳಿಯುತ್ತದೆ. ಒದವಿದ ಮುಂಜನ ಭೋಜನ ವಿಧಿತ ಶ್ರೀಹರ್ಷನ ಉದಯ ಮತ್ಕೃತಿಯೊಳ್, ಎಂಬ ಪದ್ಯದಲ್ಲಿ ಭೋಜನ ಹೆಸರನ್ನು ಹೇಳುತ್ತಾನೆ. ಭೋಜನು ೯೯೭ ರಿಂದ ೧೦೫೩ ರವರೆಗೆ ಆಳಿದುದಾಗಿ ತಿಳಿವುದರಿಂದ ಕವಿ ಆ ಕಾಲಕ್ಕೆ ಈಚೆಯವನಾಗಿರಬೇಕು. ಅಲ್ಲದೆ, ಮಲ್ಲಿಕಾರ್ಜುನು (ಸು. ೧೨೪೫) 'ಸೂಕ್ತಿಸುಧಾರ್ಣವ'ದಲ್ಲಿ ಮಹಾಕಾವ್ಯದ ಹದಿನೆಂಟಂಗವನ್ನು ಹೇಳುವ:

ಉದಧಿ, ಪುರಾಧಿಪ, ಸುತ, ಮಂ–

ತ್ರ, ದೂತ, ಗಮನ, ಆಜಿ, ವಿರಹ, ಪರಿಣಯ ಸುರತ ಋ–
ತು, ದಿನೇಶ, ಚಂದ್ರ, ಮಧು, ಕುಭೃ–
ತ್, ಉದಕ, ವನಸ್ಪತಿಯೆ – ಕೃತಿಗೆ ಪದಿನೆಂಟಂಗಂ–

[ಉಧದಿ=ಸಮುದ್ರ; ಪುರಾದಿಪ=ರಾಜ; ಸುತ=(ರಾಜ) ಕುಮಾರ; ಮಂತ್ರ=ಮಂತ್ರಾಲೋಚನೆ; ದೂತ=ಹರಿಕಾರ; ಗಮನ=ಪ್ರಯಾಣ; ಆಜಿ=ಯುದ್ಧ; ವಿರಹ=ನಾಯಕ ನಾಯಕಿಯರ ಅಗಲಿಕೆ (ವಿಪ್ರಲಂಭ ಶೃಂಗಾರ); ಪರಿಣಯ=ವಿವಾಹ; ಸುರತ (ನಾಯಕ ನಾಯಕಿಯರ); ದಾಂಪತ್ಯ ಸುಖ (ಸಂಭೋಗ ಶೃಂಗಾರ); ಋತು=ಆರು ಋತುಗಳು; ದಿನೇಶ=ಸೂರ್ಯ (ಎಂದರೆ, ಸುರ್ಯೋದಯ ಸೂರ್ಯಾಸ್ತಗಳು); ಚಂದ್ರ (ಚಂದ್ರೋದಯ, ಬೆಳುದಿಂಗಳು); ಮಧು+ಮಧುಪಾನ; ಕುಭೃತ್=ಪರ್ವತ; ಉದಕ=ನೀರು (ಎಂದರೆ ನೀರಾಟ, ಜಲಕ್ರೀಡೆ); ವನಸ್ಪತಿ=ಉದ್ಯಾನ, ವನ (ಕಾಡು)]

–ಎಂಬೀ ಪದ್ಯವನ್ನು ಈ ಕವಿಯ ಗ್ರಂಥದಿಂದ ಉದ್ಧರಿಸಿ ಬರೆದಿರುವುದರಿಂದ ಈತನು ೧೨೪೫ಕ್ಕೆ ಹಿಂದೆ ಇದ್ದನೆಂಬುದು ವ್ಯಕ್ತವಾಗುತ್ತದೆ. ಕರ್ನಾಟಕ ದೇಶದಲ್ಲಿ ಚೋಳರ ಪ್ರಾಬಲ್ಯಯವು ೧೨ನೆಯ ಶತಮಾನಕ್ಕೆ ಹಿಂದೆಯೇ ಕ್ಷೀಣದೆಶೆಗೆ ಬಂದಂತೆ ಶಾಸನಗಳಿಂದ ತಿಳಿವುದರಿಂದ ಈತನು

ಈ ಗ್ರಂಥದಲ್ಲಿಯೂ ಚಂಪೂಕೃತಿ, ಚತ್ತಾಣ, ವೈದಂಡಿಕ ಎಂಬ ಕಾವ್ಯ ಜಾತಿಗಳ ಹೆಸರುಗಳನ್ನು ಹೇಳಿ, ಚಂಪೂ ಕಾವ್ಯವನ್ನು ವಚನಕಾವ್ಯ ಎಂದು ವಿಶ್ಲೇಷಿಸಿ ಹೇಳಿದೆ. ಗದ್ಯಪದ್ಯ ಮಿಶ್ರವಾದ ಚಂಪೂಕಾವ್ಯವನ್ನು ವಸ್ತುಕ ಅಥವಾ ಓದುಗಬ್ಬ ಎಂದೂ, ವಿಶೇಷವಾಗಿ ಷಟ್ಪದಿ ಸಾಂಗತ್ಯ ತ್ರಿಪದಿ ಛಂದಸ್ಸುಗಳಲ್ಲಿ ರಚಿತವಾದ ಪದ್ಯಕಾವ್ಯಗಳನ್ನು ವರ್ಣಕ ಅಥವಾ ಹಾಡುಗಬ್ಬ ಎಂದು ಗುರುತಿಸುವುದು ಕಾಲಕ್ರಮದಲ್ಲಿ ರೂಢಿಗೆ ಬಂದಿತು. ಉದಯಾದಿತ್ಯಾಲಂಕಾರದಲ್ಲಿ 'ವಚನಕಾವ್ಯ' ಎನ್ನುವ ಮಾತನ್ನು 'ಓದುಗಬ್ಬ' ಎಂಬ ಅರ್ಥದಲ್ಲಿ ಬಳಸಿರುವಂತೆ ಕಾಣುತ್ತದೆ.

ಉದಯಾದಿತ್ಯಾಲಂಕಾರದಲ್ಲಿ ಕವಿ ಸ್ವಂತವಾಗಿ ಹೇಳಿರುವ ವಿಚಾರಗಳು ಏನೂ ಇಲ್ಲವೆಂದರೂ ಸಲ್ಲುತ್ತದೆ; ಆದರೆ, ಕಾವ್ಯದರ್ಶದಲ್ಲಿ ಹೇಳಿರುವ ೩೫ ಅಲಂಕಾರಗಳನ್ನು ಸುಲಭವಾಗಿ ಅರ್ಥಮಾಡಿಕೊಳ್ಳಬೇಕೆಂದು ಬಯಸುವವರಿಗೆ, ಗ್ರಂಥಕರ್ತನೇ ಹೇಳಿರುವ ಹಾಗೆ, ಇವೊತ್ತಿಗೂ (ಇಲ್ಲಿನ ೩೫) 'ಅಲಂಕಾರಗಳ ಪ್ರಥಮ ಪಾಠ ಪುಸ್ತಕವಾಗಿ ಪ್ರಯೋಜನಕ್ಕೆ ಬರುವಂತಿದೆ.

**ಮಾಧವಾಲಂಕಾರ**

ಕವಿರಾಜಮಾರ್ಗ, ಕಾವ್ಯಾವಲೋಕನ, ಉದಯಾದಿತ್ಯಾಲಂಕಾರ – ಈ ಗ್ರಂಥಗಳಲ್ಲಿ ಕಾವ್ಯದೋಷ, ಗುಣ, ಮಾರ್ಗ (ಅಥವಾ ರೀತಿ), ಕೆಲವು ಕಾವ್ಯ ಜಾತಿಗಳು, ಮುಂತಾದ ಕಾವ್ಯಶಾಸ್ತ್ರ ವಿಚಾರಗಳನ್ನು ಕುರಿತು ತಿಳಿಯ ಹೇಳಿದ್ದರೂ, ಶಬ್ದಾಲಂಕಾರ ಅರ್ಥಾಲಂಕಾರಗಳ ನಿರೂಪಣೆಯೇ ಆ ಗ್ರಂಥಗಳಲ್ಲಿ ಮುಖ್ಯವಾಗಿದೆ ಎನ್ನಬಹುದು. ಆದ್ದರಿಂದ, ವಿಶೇಷವಾಗಿ ಅಲಂಕಾರಗಳ ವಿವರಣೆಗೇ ಮೀಸಲಾದ ಗ್ರಂಥಗಳ ವಿಚಾರವಾಗಿ ಸಂಕ್ಷೇಪವಾಗಿ ಪರಿಶೀಲನೆ ಮಾಡಿ, ಅನಂತರ ರಸ ಮತ್ತು ಧ್ವನಿ ತತ್ತ್ವಗಳನ್ನು ವಿವರಿಸುವ ಗ್ರಂಥಗಳ ಸಮೀಕ್ಷೆ ಮಾಡುವುದು ಉಚಿತವಾಗಿ ಕಾಣುತ್ತದೆ.

ಉದಯಾದಿತ್ಯಾಲಂಕಾರದ ಮೇಲೆ ಕಾಲಕ್ರಮದಲ್ಲಿ ಅಲಂಕಾರ ವಿಷಯಕವಾಗಿ ಮೊದಲು ನಮ್ಮ ಕಣ್ಣಿಗೆ ಬೀಳುವ ಗ್ರಂಥ, 'ಮಾಧವಾಲಂಕಾರ'. ಇದು ದಂಡಿಯ ಕಾವ್ಯಾದರ್ಶದ ಭಾಷಾಂತರ; ಇದರಲ್ಲಿ ಮೂರು ಪರಿಚ್ಛೇದಗಳಿವೆ. ಪ್ರತಿ ಪರಿಚ್ಛೇದದ ಕಡೆಯ ಗದ್ಯ ಭಾಗದಲ್ಲಿ, 'ಶ್ರೀ ಯದುಗಿರಿ ಸದನ ನಾರಾಯಣ ಚರಣ ಕಮಲ ಭ್ರಮರಾಯಮಾಣ ಸುಕವಿ ಮಾಧವ ಪ್ರಣೀತಾಲಂಕಾರ' ಎಂದಿರುವುದರಿಂದ ಈ ಮಾಧವನು ಮೇಲುಕೋಟೆಯ ಚೆಲುವ ನಾರಾಯಣನ

ಕಾವ್ಯಾವಲೋಕನಗಳ ಸಮೀಕ್ಷೆಯಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿರುವುದರಿಂದ, ಆ ಬಗೆಗೆ ಹೆಚ್ಚಿನ ವಿವರಣೆ ಅನಗತ್ಯ. 'ರೀತಿ'ಗಳ ವಿಷಯದಲ್ಲಿ ಇವನು ರುದ್ರಟನ ಮತವನ್ನು ಅನುಸರಿಸಿ, ಯಾವ ಯಾವ ರೀತಿಗಳಲ್ಲಿ ಯಾವಯಾವ ರಸಗಳು ಪ್ರಕಟವಾಗುವುವು ಎಂದು ಹೇಳಿದ್ದಾನೆ; ವಾಮನ ಮತ್ತು ನಾಗವರ್ಮರಂತೆ ವೈದರ್ಭೀ, ಗೌಡೀಯ, ಪಾಂಚಾಲೀ ಎಂದು ಮೂರು ರೀತಿಗಳನ್ನು ಒಪ್ಪಿದ್ದಾನೆ. ಉದಯಾದಿತ್ಯಾಲಂಕಾರದ ಕವಿಯೂ ಚಂಪೂ, ಚತ್ತಾಣ ಮತ್ತು ಬೆದಂಡೆ ಎಂಬ ಕಾವ್ಯ ಪ್ರಕಾರಗಳನ್ನು ಹೆಸರಿಸಿದ್ದಾನೆ; ಹೆಚ್ಚಿನ ವಿವರಣೆಯನ್ನು ಕೊಟ್ಟಿಲ್ಲ; ಅವನ ಅಭಿಪ್ರಾಯದಂತೆ ಚಂಪೂಕೃತಿ ಎಂದರೆ  ವಚನ ಕಾವ್ಯ; ಎಂದರೆ, ಬಹುಶಃ, 'ಓದುಗಬ್ಬ'. ಚತ್ತಾಣ ಬೆದಂಡೆಗಳನ್ನು 'ಸರ್ಗಬಂಧಕೃತಿ' ಎಂದು ಹೇಳಿರುವುದರಿಂದ, ಇವು ಪದ್ಯ ಕಾವ್ಯಗಳು. ಉದಯಾದಿತ್ಯಾಲಂಕಾರದ ಕಾಲದ ವೇಳೆಗೆ ಕನ್ನಡದಲ್ಲಿ ಚಂಪೂ ಕಾವ್ಯ ಜಾತಿ ಪ್ರಸಿದ್ಧವಾಗಿ ನೆಲಸಿಬಿಟ್ಟಿತ್ತು.

'ಉದಯಾದಿತ್ಯಲಂಕಾರ'ದಲ್ಲಿ ಸಾಧಾರಣವಾಗಿ ಒಂದೇ ಪದ್ಯದಲ್ಲಿ ಲಕ್ಷಣವನ್ನೂ ಉದಾಹರಣೆಯನ್ನೂ ಹೇಳಿರುವುದರಿಂದಲೂ, ಪದ್ಯರಚನೆ ಬಿಗಿಯಾಗಿ ಸೂತ್ರಪಾಯವಾಗಿದ್ದು ಹೆಚ್ಚು ಕಷ್ಟಕರವಾಗಿಲ್ಲದಿರುವುದರಿಂದಲೂ ನೆನಪಿಟ್ಟುಕೊಳ್ಳಲು ಲಕ್ಷಣ ಪದ್ಯಗಳು ಸುಲಭವಾಗಿವೆ.

'ಅರ್ಥಾಂತರನ್ಯಾಸ' ಎಂಬ ಅಲಂಕಾರದ ಈ ಪದ್ಯವನ್ನು ನೋಡಿ:

ಪುರುಳ್ ಒಂದಂ ಆಡಿ ನೆರಪುವ
ಪುರುಳಂ ಬೇರೊಂದಂ ಒಪ್ಪಲ್ ಆಡುವುದು ಅರ್ಥಾಂ–
ತರವಿನ್ಯಾಸಂ – ನಿಜಧನಂ
ಎರೆವರ್ಗೆ ಎನೆ, ತಮಗೆ ಪಡೆವರೇ ಸತ್ಪುರುಷರ್.

[ಒಂದು ಅರ್ಥವನ್ನು ಕೊಡುವ ವಾಕ್ಯವನ್ನು ಹೇಳಿ, ಅದನ್ನು ಸಮರ್ಥಿಸುವ ಅರ್ಥವುಳ್ಳ ಇನ್ನೊಂದನ್ನು ಹೇಳುವುದು, ಅರ್ಥಾಂತರನ್ಯಾಸ. 'ತನ್ನ ಐಶ್ವರ್ಯ ಬೇಡಿದವರಿಗೆ (ಮೀಸಲಾಗಿದೆ)' ಎಂದ ಮೇಲೆ, 'ಸತ್ಪುರುಷರು ತಮಗಾಗಿ ಧನವನ್ನು ಹೊಂದುತ್ತಾರೆಯೇ?' (ಎಂದಿಗೂ ಇಲ್ಲ, ದಾನಮಾಡುವುದೇ ಸತ್ಪುರುಷರ ಸ್ವಭಾವ ಎಂದು ಭಾವ').]

ಕೂಡಿದ ಮಟ್ಟಿಗೂ ಅರ್ಥವಾಗುವಂತೆ ಅಡಕವಾಗಿ ಹೇಳುವುದೇ ಈ ಗ್ರಂಥದ ವಿಶೇಷ ಗುಣ.

ಚಿಕ್ಕದೇವರಾಜನ ಕಾಲದಲ್ಲಿ ಆತನ ಮಾರ್ಗದರ್ಶನ ಮತ್ತು ಪ್ರೋತ್ಸಾಹಗಳಿಂದ ಹಳಗನ್ನಡ ಶೈಲಿಯ ಪ್ರೌಢ ಗ್ರಂಥರಚನೆ ಹೊಸ ಹುರುಪಿನಿಂದ ನಡೆಯಿತು. ಅರಸನು ಸ್ವತಃ ಕವಿಯಾಗಿದ್ದುದಲ್ಲದೆ ವಿದ್ವಾಂಸರಿಗೂ ಕವಿಗಳಿಗೂ ಆಶ್ರಯ ಕೊಟ್ಟಿದ್ದನು. ಇವನ ಆಸ್ಥಾನದಲ್ಲಿದ್ದುಕೊಂಡು ಸಿಂಗರಾರ್ಯನು 'ಮಿತ್ರವಿಂದಾಗೋವಿಂದ' ಎಂಬ ಕನ್ನಡದ ಮೊದಲ ನಾಟಕವನ್ನೂ, ರಾಣಿಯ ಊಳಿಗದಲ್ಲಿದ್ದ ಸಂಚಿಯ ಹೊನ್ನಮ್ಮನ 'ಹದಿಬದೆಯ ಧರ್ಮ'ವನ್ನೂ ಬರೆದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಗಣ್ಯವಾದ ಸ್ಥಾನವನ್ನು ಪಡೆದಿದ್ದಾರೆ. ಅದೇ ರೀತಿ, ಚಿಕ್ಕದೇವರಾಜನ ಆಪ್ತಮಿತ್ರನೂ ಮಂತ್ರಿಯೂ ಆಗಿದ್ದ ತಿರುಮಲಾರ್ಯನು 'ಅಪ್ರತಿಮ ವೀರಚರಿತೆ'ಯನ್ನಲ್ಲದೆ 'ಚಿಕ್ಕದೇವರಾಜ ವಿಜಯ' ಎಂಬ ಚಂಪೂ ಕಾವ್ಯವನ್ನೂ 'ಚಿಕ್ಕದೇವರಾಯ ವಂಶಾವಳಿ' ಎಂಬ ಗದ್ಯ ಗ್ರಂಥವನ್ನೂ ಹಳಗನ್ನಡ ಭಾಷೆಯಲ್ಲಿ ಬರೆದಿದ್ದಾನೆ. ಸಂಸ್ಕೃತದಲ್ಲಿಯೂ ಅನೇಕ ಸ್ತೋತ್ರಗಳನ್ನು ರಚಿಸಿ, 'ಉಭಯ ಭಾಷಾ ಕವಿ' ಎಂಬ ಕೀರ್ತಿಗೆ ಪಾತ್ರನಾಗಿದ್ದಾನೆ. ಚಿಕ್ಕದೇವರಾಜನು ಬರೆದವೆಂದು ಪ್ರಸಿದ್ಧವಾಗಿರುವ 'ಗೀತಗೋಪಾಲ', 'ಚಿಕ್ಕದೇವರಾಯ ಬಿನ್ನಪ' ಎಂಬ ಗ್ರಂಥಗಳನ್ನೂ ಈತನೇ ಬರೆದಿರುವನೆಂಬ ಹೇಳಿಕೆಯೂ ಇದೆ. ಈತ ಶ್ರೀ ವೈಷ್ಣವ ಮತಕ್ಕೆ ಸೇರಿದವನು. ಈತನು ೧೬೪೫ರಲ್ಲಿ ಶ್ರೀರಂಗಪಟ್ಟಣದಲ್ಲಿ ಹುಟ್ಟಿ, ೧೭೦೬ರಲ್ಲಿ ಕಾಲವಾದನೆಂದು ತಿಳಿದುಬರುತ್ತದೆ.

ಚಿಕ್ಕ ದೇವೇಂದ್ರನು ತಿರುಮಲಾರ್ಯನನ್ನು ಕರೆದು "ನಿರವಿಸು ನೀಂ ಕಬ್ಬದ ನುಡಿವುರುಳ್ಗಳ ಒಳ್ತೊಡವಿನ ಇರವಂ" (ಕಾವ್ಯದ ಶಬ್ದ ಮತ್ತು ಅರ್ಥಗಳ ಒಳ್ಳೆಯ ಅಲಂಕಾರದ ಬಗೆಯನ್ನು ನೀನು ವಿವರಿಸು') ಎಂದು ಪ್ರೀತಿಯಿಂದ ಅಪ್ಪಣೆ ಮಾಡಲು, ತಾನು ಅದರಂತೆ ಈ ಗ್ರಂಥವನ್ನು ಬರೆದುದಾಗಿ ಹೇಳಿಕೊಂಡಿದ್ದಾನೆ. ಮತ್ತು "ವಿದ್ವಾಂಸರ ಮನಸ್ಸಿಗೆ ಸಂತೋಷವಾಗಲಿ ಎಂದು 'ಅಪ್ರತಿಮವೀರ ಚರಿತ್ರೆ' ಎಂಬ ಹೆಸರಿನಿಂದ ಸಂಸ್ಕೃತ ಭಾಷೆಯಲ್ಲಿ ಲಕ್ಷಣವನ್ನೂ 'ಒಳ್ಗನ್ನಡಂಗಳಿಂ' (ಎಂದರೆ, ಅಚ್ಚಗನ್ನಡ ನುಡಿಯಲ್ಲಿ) ಲಕ್ಷ್ಯವನ್ನೂ ವಿವರಿಸಿದ್ದೇನೆ" ಎಂದು ತಾನು ಗ್ರಂಥವನ್ನು ಬರೆದಿರುವ ರೀತಿಯನ್ನು ತಿಳಿಸಿದ್ದಾನೆ. ಸಂಸ್ಕೃತದಲ್ಲಿರುವ ಲಕ್ಷಣ ಸೂತ್ರಗಳೆಲ್ಲವೂ ಮಮ್ಮಟನ 'ಕಾವ್ಯಪ್ರಕಾಶ', ವಾಮನನ 'ಕಾವ್ಯಾಲಂಕಾರ ಸೂತ್ರವೃತ್ತಿ'. ವಿದ್ಯಾನಾಥನ 'ಪ್ರತಾಪರುದ್ರ ಯಶೋಭೂಷಣ', ಅಪ್ಪಯ್ಯ ದೀಕ್ಷಿತನ 'ಕುವಲಯಾನಂದ' ಇವುಗಳಿಂದ ತೆಗೆದುಕೊಂಡವಾಗಿವೆ. ಈ ಸೂತ್ರವಾಕ್ಯಗಳಿಗೆ ಬರೆದಿರುವ ವೃತ್ತಿಗಳು (ಎಂದರೆ ವಿವರಣೆಗಳು), ಮತ್ತು ಲಕ್ಷ್ಯಗಳು (ಎಂದರೆ ಉದಾಹರಣ ಪದ್ಯಗಳು) ತಿರುಮಲಾರ್ಯನು ಸ್ವಂತವಾಗಿ

ಭಕ್ತನೆಂದು ಊಹಿಸಬಹುದು; ಅಲ್ಲಿನ ನಿವಾಸಿಯಾಗಿದ್ದರೂ ಇರಬಹುದು. ಗ್ರಂಥದ ಮೊದಲಿನಲ್ಲಿ ಈಶ್ವರ, ಗಣೇಶ, ಸರಸ್ವತಿ ಇವರುಗಳನ್ನು ಸ್ತುತಿಸುವುದರಿಂದ ಇವನು ಸ್ಮಾರ್ತ ಬ್ರಾಹ್ಮಣನೆಂದೂ ಊಹಿಸಬಹುದು. ದಂಡಿಯ ಅಲಂಕಾರ ಗ್ರಂಥವನ್ನು ತನ್ನ ಕಾಂತೆಗೆ ಕನ್ನಡದಲ್ಲಿ ವಿವರಿಸಿದಂತೆ ಅವನು ಒಂದು ಪದ್ಯದಲ್ಲಿ ಹೇಳಿಕೊಂಡಿದ್ದಾನೆ. (ಪ.೧೫). 'ಕವಿಕುಲ ತಿಲಕ', 'ಶಾರದಾ ಕರ್ಣಪೂರ' ಎಂದು ತನ್ನ ಬಿರುದುಗಳನ್ನು ತಿಳಿಸಿದ್ದಾನೆ. 'ಕುಂತಳ ದೇಶದ ಹರಗಟನಾಡ ಹಿರಿಯೂರ ಪ್ರಭು'ಗಳ ವಂಶಕ್ಕೆ ಸೇರಿದ ಇವನೂ ಆ ಊರಿನ 'ಪ್ರಭು' ಎಂದು ತಿಳಿಯುತ್ತದೆ. 'ಪ್ರಭು' ಎಂದರೆ ಗ್ರಾಮದ ಮುಖಂಡ ಅಥವಾ ಹೆಗ್ಗಡೆ ಇರಬಹುದು. 'ರಿಪುಸೈನ್ಯ ಶೈಲಸುರಪ' (ಶತ್ರುಸೈನ್ಯವೆಂಬ ಪರ್ವತಕ್ಕೆ ಇಂದ್ರ) ಎಂಬ ಒಂದು ವಿಶೇಷಣದಿಂದ, ಇವನು ಯುದ್ಧಮಾಡಿದ ವೀರನೆಂದೂ ಗೊತ್ತಾಗುತ್ತದೆ. ಇವನ ಕಾಲವನ್ನು ೧೫೦೦ ಎಂದು ಕವಿಚರಿತೆಕಾರರು ಊಹಿಸಿದ್ದಾರೆ.

ಮಾಧವನು ದಂಡಿಯ ಕಾವ್ಯಾದರ್ಶದ ಶ್ಲೋಕಗಳನ್ನು ಬಹುಮಟ್ಟಿಗೆ ಅವು ಹೇಗಿವೆಯೋ ಹಾಗೆ ಪ್ರೌಢವಾದ ಭಾಷೆಯಲ್ಲಿ ಭಾಷಾಂತರ ಮಾಡಿದ್ದಾನೆ. ಉದಾಹರಣೆಗೆ, 'ಕಾವ್ಯಶೋಭಕಾರನ್ ಧರ್ಮಾನ್ ಅಲಂಕಾರಾನ್ ಪ್ರಚಕ್ಷತೇ' (ಕಾವ್ಯಾದರ್ಶ; ೨–೧) ('ಕಾವ್ಯಕ್ಕೆ ಶೋಭೆಯನ್ನುಂಟು ಮಾಡುವ ಧರ್ಮಗಳನ್ನು ಅಲಂಕಾರಗಳು ಎಂದು ಹೇಳುವರು') ಎಂಬ ದಂಡಿಯ ವಾಕ್ಯವನ್ನು ಮಾಧವನು ಒಂದು ಕಂದ ಪದ್ಯದಲ್ಲಿ ಹೀಗೆ ಭಾಷಾಂತರ ಮಾಡಿದ್ದಾನೆ:

ನಿರುಪಮ ಕಾವ್ಯ ಶರೀರ –
ಕ್ಕುರುತರ ಶೋಭಾಕರಂಗಳೆನಿಸುವ ಧರ್ಮೋ–
ತ್ಕರಮೆಲ್ಲವಳಂಕೃತಿ ಪರಿ–
ಕರಮೆನಿಸುಗೆ ಸಕಳ ವಿಬುಧಜನಮತದಿಂದಂ.

[ಎಲ್ಲಾ ವಿದ್ವಾಂಸ ಜನರ ಅಭಿಪ್ರಾಯದಂತೆ, ಎಣೆಯಿಲ್ಲದ ಕಾವ್ಯದ ಮೈಗೆ ಹೆಚ್ಚಿನ ಸೊಬಗನ್ನುಂಟು ಮಾಡುವ ಧರ್ಮಗಳು ಅಲಂಕಾರ ಸಾಮಗ್ರಿ ಎನ್ನಿಸುತ್ತವೆ.]

**ಅಪ್ರತಿಮ ವೀರಚರಿತೆ**

ಮೈಸೂರು ರಾಜ್ಯವನ್ನು ೧೬೭೨ ರಿಂದ ೧೭೦೪ರವರೆಗೆ ಆಳಿದ

ಒಂದು ಉದಾಹರಣೆಯಿಂದ ಈ ಕ್ರಮವನ್ನು ಪರಿಚಯ ಮಾಡಿಕೊಳ್ಳಬಹುದು:

೮೨. ಅನ್ಯೋನ್ಯಾಲಂಕಾರ ಮೆಂಬುದು:–

ಸೂ॥ "ಅನ್ಯೋನ್ಯಂ ನಾಮ ಯತ್ರ ಸ್ಯಾದುಪಕಾರಃ ಪರಸ್ಪರಂ".

ವೃತ್ತಿ – ಎರಡುಂ ವಸ್ತುಗಳ್ಗೊಂದೊಂದರ ಕಜ್ಜಂ ಒಂದರ್ಕುಪಕಾರಮಾಗೆ ಅದು ಅನ್ಯೋನ್ಯಾಲಂಕಾರಂ.

[ಎರಡು ವಸ್ತುಗಳಿಗೂ ಒಂದೊಂದರ ಕಾರ್ಯ ಒಂದಕ್ಕೆ ಉಪಕಾರವಾಗಲು ಅದು ಅನ್ಯೋನ್ಯಾಲಂಕಾರ].

"ಬಲದೊಳ್ ಕೃಷ್ಣಪ ಗಾಯಕ–
ನಿನಿಯಳ್, ಪಸುಗೂಸು ಪಸಿಯೆ, ಕಣ್ಣೀರ್ಗರೆದಳ್;
ಪೊನಲಿಡೆ ಚೂಚುಕದಿಂ, ಅದಂ
ತನಿವಾಲ್ಗೆತ್ತು, ಈಂಟಿ, ತೆಪ್ಪನಿರ್ದುದು ಮಗುವುಂ"

[ವನದಲ್ಲಿ ಕೃಷ್ಣಪ್ಪಗಾಯಕನ ಪ್ರಿಯೆ ತನ್ನ ಹಸುಗೂಸು ಹಸಿದಿರಲು ಕಣ್ಣೀರನ್ನು ಸುರಿಸಿದಳು; ಅದು ಅವಳ ಮೊಲೆತೊಟ್ಟಿನಿಂದ ಹರಿದು ಬರಲು, ಅದನ್ನು ಒಳ್ಳೆಯ ಹಾಲೆಂದು ಭ್ರಮಿಸಿ ಕುಡಿದು, ಆ ಮಗುವೂ ತೆಪ್ಪಗಾಯಿತು.]

"ಇದರೊಳ್ ತಾಯ ಕಣ್ಣೀರಂ ಪಾಲೆಂದೀಟುವುದರಿಂ ತಾಯಿಂದೆ ಮಗುವಿಂಗುಪಕಾರಂ, ಕಣ್ಣೀರನೀಂಟುತ್ತೆ ಅಳದಿರ್ಪುದರಿಂ ಮಗುವಿಂದೆ ತಾಯ್ಗುಪಕಾರಂ".

[ಇದರಲ್ಲಿ ತಾಯ ಕಣ್ಣೀರನ್ನು ಹಾಲೆಂದು ಕುಡಿಯುವುದರಿಂದ ತಾಯಿಂದ ಮಗುವಿಗೆ ಉಪಕಾರ. ಕಣ್ಣೀರನ್ನು ಕುಡಿಯುತ್ತ ಅಳದೆ ಇರುವುದರಿಂದ ಮಗುವಿಂದ ತಾಯಿಗೆ ಉಪಕಾರ.]

ಚಿಕ್ಕದೇವರಾಜನು ಮೈಸೂರು ಸಿಂಹಾಸನವನ್ನು ಏರಿದ ತರುಣದಲ್ಲಿಯೇ ಅನೇಕ ಶತ್ರುಗಳನ್ನು ಎದುರಿಸಬೇಕಾಯಿತು. ಅವರ ಪೈಕಿ ಮರಾಠರು ಅತ್ಯಂತ ಪ್ರಬಲರಾಗಿದ್ದರು. ಶಿವಾಜಿ ಸ್ವತಃ ಮೈಸೂರಿನ ಮೇಲೆ ದಂಡೆತ್ತಿ ಬಂದಿದ್ದನು. ಅನಂತರ ಸಾಂಬಾಜಿ ತನ್ನ ದಳಪತಿಗಳನ್ನು ದಂಡಿನೊಡನೆ ಕಳಿಸಿದ್ದನು. ಇವರಲ್ಲದೆ ಮಧುರೆಯ ನಾಯಕರು, ಕೆಳದಿಯ ನಾಯಕರು, ಇಕ್ಕೇರಿಯ ಅರಸರು – ಇವರೆಲ್ಲರ ಸೊಕ್ಕನ್ನೂ ಚಿಕ್ಕದೇವರಾಜ ಅಡಗಿಸಿದನು. ಶತ್ರುಗಳನ್ನೆಲ್ಲ ಸೋಲಿಸಿದ

ಕನ್ನಡದಲ್ಲಿ ಬರೆದಿದ್ದಾನೆ. ಇವನ ಕನ್ನಡ 'ಪಕ್ಕಾ' ಹಳಗನ್ನಡವಾದ್ದರಿಂದ ಸಾಮಾನ್ಯರಿಗೆ ಅರ್ಥವಾಗುವುದು ಕಷ್ಟ.

ಈ ಗ್ರಂಥದಲ್ಲಿ ನಾಲ್ಕು ಪ್ರಕರಣಗಳಿವೆ. ಅವುಗಳಲ್ಲಿ ವಿವರಿಸಿರುವ ವಿಷಯದ ಹಂಚಿಕೆ ಹೀಗಿದೆ:

(೧)ಕಾವ್ಯದ ಲಕ್ಷಣ, ಉತ್ತಮ ಕಾವ್ಯ, ಮಧ್ಯಮಕಾವ್ಯ, ಸಾಧಾರಣ ಕಾವ್ಯ ಎಂಬ ಕಾವ್ಯಭೇದಗಳು; ಕಾವ್ಯದ ಶಬ್ದಗುಣಗಳು ಹತ್ತು ಮತ್ತು ಅರ್ಥಗುಣಗಳು ಹತ್ತು;

(೨)[ಪಾಂಚಾಲಿ, ವೈದರ್ಭಿ, ಗೌಡೀ ಎಂಬ ರೀತಿಗಳು; ಶಯ್ಯೆ: ದ್ರಾಕ್ಷಾಪಾಕ, ನಾಳಿಕೇರ ಪಾಕ; ಕೈಶಿಕೀ, ಆರಭಟೀ, ಸಾತ್ವತೀ, ಭಾರತೀ, ಎಂಬ ವೃತ್ತಿಗಳು; ಛೇಕಾನುಪ್ರಾಸ, ವೃತ್ಯಾನಪ್ರಾಸ ಎಂಬ ಅನುಪ್ರಾಸಗಳು; ಯಮಕ;

(೩)ನೂರು ಬೇರೆ ಬೇರೆ ಅರ್ಥಾಲಂಕಾರಗಳು;

(೪)'ಹೊಸಬರು' ವಿವರಿಸಿರುವ ಹದಿನೈದು ಹೆಚ್ಚಿನ ಅಲಂಕಾರಗಳು, ಮತ್ತು ಐದು 'ಬೆರೆಕೆ'ಯ (ಸಂಕರ ಅಥವಾ ಮಿಶ್ರ) ಅಲಂಕಾರಗಳು.*

ವಿಷಯ ನಿರೂಪಣೆಯಲ್ಲಿ ತಿರುಮಲಾರ್ಯನು ಮಮ್ಮಟನನ್ನು ಅನುಸರಿಸಿ ಕಾವ್ಯ ಲಕ್ಷಣವನ್ನೂ, ವಾಮನನ್ನು ಅನುಸರಿಸಿ ಶಬ್ದಾರ್ಥಗುಣಗಳನ್ನೂ, ವಿದ್ಯಾನಾಥನ ಪ್ರಕಾರ ರೀತಿ ಶಯ್ಯೆಪಾಕ ಮುಂತಾದ ವಿಚಾರಗಳನ್ನೂ, ಅಪ್ಪಯ್ಯ ದೀಕ್ಷಿತನನ್ನು ಅನುಸರಿಸಿ ಅರ್ಥಾಲಂಕಾರಗಳನ್ನೂ ವಿವರಿಸಿದ್ದಾನೆ.

ಅಪ್ರತಿಮ ವೀರಚರಿತೆಯಲ್ಲಿ ವಿಷಯ ನಿರೂಪಣೆಯ ಭಾಷೆ ಕ್ಲಿಷ್ಟವಾಗಿದೆ ಎಂಬ ಅಂಶವನ್ನು ಬಿಟ್ಟರೆ, ನಿರೂಪಣೆ ಬಹಳ ಅಡಕವಾಗಿ ಅಚ್ಚುಕಟ್ಟಾಗಿ ಶಾಸ್ತ್ರೀಯವಾಗಿದೆ, ಮೊದಲು ಸಂಸ್ಕೃತ ಲಕ್ಷಣ ಗ್ರಂಥಗಳಿಂದ ಸೂತ್ರಗಳನ್ನು ಎತ್ತಿಕೊಡುವುದು, ಅದಕ್ಕೆ ಕನ್ನಡದಲ್ಲಿ ವೃತ್ತಿ, ಅನಂತರ ಲಕ್ಷಣಕ್ಕೆ ಸ್ವಂತ ಲಕ್ಷ್ಯವನ್ನು ಕೊಡುವುದು, ಕಡೆಯಲ್ಲಿ (ಅಗತ್ಯವಾದ ಸಂದರ್ಭಗಳಲ್ಲಿ) ಲಕ್ಷ್ಯಲಕ್ಷಣ ಸಮನ್ವಯ (ಎಂದರೆ ಉದಾಹರಣೆ ಹೇಗೆ ಲಕ್ಷಣಕ್ಕೆ ಅನುಗುಣವಾಗಿದೆ ಎಂದು ತೋರಿಸಿಕೊಡುವುದು) – ಇದು ತಿರುಮಲಾರ್ಯನ ವಿಷಯ ನಿರೂಪಣೆಯ ಕ್ರಮ.

---

* ಒಟ್ಟು ಅಲಂಕಾರಗಳ ಸಂಖ್ಯೆ ೧೨೦ ಆದರೂ, ಇದರಲ್ಲಿ ಒಳಭೇದಗಳೂ ಸೇರುತ್ತವೆ. ಉದಾಹರಣೆಗೆ, ಉಪಮಾಲಂಕಾರದಲ್ಲಿ ಪೂರ್ಣೋಪಮೆ, ರುಪ್ತೋಪಮೆ ಎಂದು ಎರಡು ವಿಧ. ಲುಪ್ತೋಪಮೆಯಲ್ಲೆ ಮತ್ತೆ ಎಂಟು ಒಳಭೇದಗಳಿವೆ.

ಬರುವ 'ಛೇಕಾನುಪ್ರಾಸ' ಎಂಬ ಶಬ್ದಾಲಂಕಾರಕ್ಕೆ ಉದಾಹರಣೆಯಾಗಿ ಕೊಟ್ಟಿರುವ ಕೆಳಗಿನ ಕಂದ ಪದ್ಯದಲ್ಲಿ ತಿರುಮಲಾರ್ಯನಿಗೆ ಕಂದಪದ್ಯದ ಛಂದಸ್ಸಿನ ಮೇಲಿರುವ ಅಕ್ಕರೆ ಉಕ್ಕಿರುವುದು ಕಂಡು ಬರುತ್ತದೆ:

ಕಂದಂ ಕವಿಕೋಕಿಲ ಮಾ–
ಕಂದಂ ಕೋಮಲವಿಕಾಸಿ ಕೃತಿಕಲ್ಪಲತಾ
ಕಂದಂ ವಿಸ್ಸೃಮರ ರಸದು
ಕ್ಕಂದಂ ಚಿಕದೇವರಾಯ ಚಂದನ ಚಂದಂ

[ಕಂದ ಪದ್ಯವು ಕವಿಕೋಗಿಲೆಗಳ ಸಿಹಿ ಮಾವಿನ ಮರ; ಕೋಮಲವಾಗಿ ಬೆಳೆಯುವ ಕಾವ್ಯವೆಂಬ ಕಲ್ಪರತೆಯ ಗೆಡ್ಡೆ; ಎಲ್ಲ ಕಡೆಯೂ ಹರಡುವ ರಸದ ಹೆಚ್ಚಳ; ಚಿಕ್ಕದೇವರಾಯನ (ಹಣೆಯಲ್ಲಿ ಮೆರೆಯುವ) ಗಂಧದ (ಬಟ್ಟಿನ) ಸೌಂದರ್ಯ.]*

ತಿರುಮಲಾರ್ಯನು ಚಿಕ್ಕದೇವರಾಜನ ಗುಣಕಥನ ಮಾಡುವಾಗ ಆತನ ಪರಾಕ್ರಮ ವರ್ಣನೆಗೆ ಪ್ರಾಧಾನ್ಯ ಕೊಟ್ಟಿರುವುದು ಸ್ವಾಭಾವಿಕವಾಗಿದೆ. ಆತ ಗರಡಿ ಸಾಧನೆ ಮಾಡಿ ಬಲಶಾಲಿಯಾಗಿದ್ದನೆಂಬ ಸಂಗತಿ ಓಜೋಗುಣವುಳ್ಳ ಗೌಡೀ ರೀತಿಯ ಉದಾಹರಣ ಪದ್ಯದಲ್ಲಿ ಸ್ವಾಭಾವಿಕವಾದ ಮಾತುಗಳಲ್ಲಿ ಚಿತ್ರಿತವಾಗಿದೆ:

ಕಟ್ಟಿದ, ದಟ್ಟಿ ಕೈದೆಳೆದ ಪೊಂಗಿರುಗಟ್ಟಿಗೆ, ರನ್ನಬಂದಿಗೋ–
ಲ್, ಬಟ್ಟಿತೆನಿಪ್ಪ ಚೊಲ್ಲೆಯದ ಮಟ್ಟಿಯ, ಸೀಸಕ ಮಿಟ್ಟಿನಾಮದ ಒಳ್–
ಬಟ್ಟು ಮನಂಗೋಳಲ್ ಗರುಡಿಗೆಯ್ಮೆಯೊಳ್ ಈ ಚಿಕ್ಕದೇವರಾಯನಂ
ನಿಟ್ಟಿಪ, ಜಟ್ಟಿಗಳ್ ಗರುಡಿಗೋವಳಂ ಈ ನೃಪಂ ಎಂದು ವಂದಿಪರ್.

---

* ಈ ಪದ್ಯವು ಹರಿಹರನ ಗಿರಿಜಾ ಕಲ್ಯಾಣದಲ್ಲಿರುವ ಪದ್ಯವನ್ನು ಹೋಲುತ್ತದೆ. ಆ ಪದ್ಯದ ಪ್ರಭಾವವನ್ನು ಇದರಲ್ಲಿ ಚೆನ್ನಾಗಿ ಗುರುತಿಸಬಹುದು. ಗಿರಿಜಾ ಕಲ್ಯಾಣದ ಪದ್ಯ:

ಕಂದಂಗಳ್, ಅಮೃತಲತಿಕಾ–
ಕಂದಂಗಳ್, ಅನೂನ ವಾಕ್ಯಫಲ ವಿಲಸತ್ ಮಾ–
ಕಂದಂಗಳ್, ತನಿರಸದು–
ಕ್ಕಂದಂಗಳ್–ಸೊಗಯಿಸಿರ್ಪುವು, ಈ ಸತ್ಕೃತಿಯೊಳ್ (೧–೧೨)

[ಅಮೃತಲತಿಕಾಕಂದ=ಅಮೃತವಲ್ಲಿಯ ಗಡ್ಡೆ, ಅನೂನ=ಊನವಾಗಿಲ್ಲದ, ತುಂಬಿಕೊಂಡಿರುವ, ವಿಸಲತ್=ಶೋಭಿಸುವ]

ಮೇಲೆ ಚಿಕ್ಕದೇವರಾಜನು 'ಕರ್ನಾಟಕ ಚಕ್ರವರ್ತಿ' 'ಅಪ್ರತಿಮವೀರ', 'ತೆಂಕಣರಾಜ' ಎಂಬ ಬಿರುದುಗಳನ್ನು ತಳೆದನು. ಈ 'ಅಪ್ರತಿಮವೀರನ' ಶೌರ್ಯ ಔದಾರ್ಯಾದಿ ಸದ್ಗುಣಗಳನ್ನೂ ವ್ಯಕ್ತಿ ಮಹಿಮೆಯನ್ನೂ ತಿರುಮಲಾರ್ಯನು ಅನೇಕ ಲಕ್ಷ್ಯ ಪದ್ಯಗಳಲ್ಲಿ ವರ್ಣಿಸಿದ್ದಾನೆ; ಉಳಿದ ಹಲವಾರು ಪದ್ಯಗಳಲ್ಲಿ ಚಿಕ್ಕದೇವರಾಜನ ಆಳಿಕೆಗೆ ಸಂಬಂಧಪಟ್ಟ ಸಂಗತಿಗಳೂ, ಆತನನ್ನು ಎದುರಿಸಿ ಸೋಲುಂಡ ಇಲ್ಲವೆ ಸತ್ತ ಶತ್ರುಗಳ ವಿಷಯವೂ ವರ್ಣಿತವಾಗಿವೆ. ಒಟ್ಟಿನಲ್ಲಿ, ಬಹುಸಂಖ್ಯೆಯ ಉದಾಹರಣ ಪದ್ಯಗಳಲ್ಲಿ ಚಿಕ್ಕದೇವನ ಗುಣ ಕಥನವೇ ಸಾಗಿದ್ದು, ಆತ ಕಥಾನಾಯಕನಂತೆ ಶೋಭಿಸುವುದರಿಂದ, 'ಅಪ್ರತಿಮವೀರ ಚರಿತೆ' ಎಂಬ ಗ್ರಂಥನಾಮ ಸಾರ್ಥಕವಾಗಿದೆ. ಇದರಲ್ಲಿ ಶಾಸ್ತ್ರಕವಿತ್ವ, ಕಾವ್ಯಕವಿತ್ವ ಇವೆರಡೂ ತುಂಗಭದ್ರೆಯರಂತೆ ಸಂಗಮಿಸಿವೆ.

ಶತ್ರುಗಳ ಪೈಕಿ ಮರಾಠರು ಅತ್ಯಂತ ಪ್ರಬಲರಾಗಿದ್ದರಷ್ಟೆ. ಅವರು ಭಂಗಪಟ್ಟದ್ದನ್ನು ವರ್ಣಿಸುವುದಕ್ಕೆ ಹೆಚ್ಚಿನ ಸಂಖ್ಯೆಯ ಪದ್ಯಗಳು ಮೀಸಲಾಗಿರುವುದು ಸಹಜವಾಗಿಯೇ ಇದೆ. 'ಸಾತ್ವತೀ' ವೃತ್ತಿಯಲ್ಲಿ ಭಯಾನಕ ಸಂದರ್ಭಕ್ಕೆ ಕೊಟ್ಟಿರುವ ಒಂದು ಉದಾಹರಣ ಪದ್ಯದಲ್ಲಿ (ii–೧೫) ಕವಿ ಮರಾಠಿ ಪದಗಳನ್ನು ಸಂದರ್ಭೋಚಿತವಾಗಿ ಬಳಸಿದ್ದಾನೆ. ಚಿಕ್ಕದೇವನ 'ಧಾಟಿ'ಗೆ (ಎಂದರೆ ದಾಳಿಗೆ) ಹೆದರಿದ ಮರಾಠರು ಹೀಗೆ ಉದ್ಗಾರ ತೆಗೆದರಂತೆ:

ದೇವ ನಿನ್ನ ಧಾಟಿಯೊಳ್ ಮರಾಟಿಗಳ್ ಬಿಗುರ್ಪಿನಿಂ
ರಾವು ರಾವು ಜೀವು ಜೀವು ಗಾವು ಮೀ ತುಝೂ ಘರೇ
ದೇವು ದೇವು ಚಾರು ಪಾಯಿ ದೋನುಸಿಂಗ ಭೇವು ಭೇವ್
ಜೀವು ರಾವು ವೆಂಬರಳ್ಕಿ ಚಿಕ್ಕದೇವರಾಯ ಕೇಳ್.

[ದೇವ, ನಿನ್ನ ದಾಳಿಯಲ್ಲಿ ಮರಾಟಿಗಳು ಹೆದರಿಕೆಯಿಂದ, "ರಾಯನೇ ರಾಯನೇ ಜೀವಸಹಿತ ಉಳಿಸು, ಉಳಿಸು, ನಾವು ನಿನ್ನ ಮನೆಯಲ್ಲಿ ಹಸುಗಳು, ನಾಲ್ಕು ಕಾಲು ಎರಡು ಕೊಂಬುಗಳನ್ನು ಕೊಡು, ದಯೆ ತೋರು, ದಯೆ ತೋರು, ದಯೆ ತೋರು, ಕಾಪಾಡು ರಾಯನೇ ಎಂದು ಹೆದರಿಕೊಂಡು ಹೇಳುತ್ತಾರೆ. ಚಿಕ್ಕದೇವರಾಯನೆ, ಕೇಳು" (ನಮಗೆ ಎರಡು ಕೊಂಬು ನಾಲ್ಕು ಕಾಲು ಇಲ್ಲ. ಅಷ್ಟೆ, ನೀನು ಅವನ್ನು ಕೊಟ್ಟರೆ, ಹಸುಗಳಂತೆ ನಿನ್ನ ಮನೆಯಲ್ಲಿ ಇದ್ದು ನಿನ್ನ ಸೇವೆ ಮಾಡುತ್ತೇವೆ, ಕಾಪಾಡು – ಎಂದು ತಾತ್ಪರ್ಯ.)]

ಒಂದು ಪದ್ಯದಲ್ಲಿ ಎರಡೆರಡಕ್ಷರಗಳು ಜೊತೆಜೊತೆಯಾಗಿ ಅನುಗೂಡಿ

ಚಂದ್ರಾಲೋಕದಲ್ಲಿ ಇತರ ಕಾವ್ಯ ಲಕ್ಷಣಗಳೊಂದಿಗೆ ೧೦೦ ಅಲಂಕಾರಗಳನ್ನು ನಿರೂಪಿಸಿದೆ. ಕುವಲಯಾನಂದದಲ್ಲಿ ಈ ಸಂಖ್ಯೆ ೧೧೫ಕ್ಕೆ ಏರಿದೆ.

ಕನ್ನಡ ಕುವಲಯಾನಂದವನ್ನು ರಚಿಸಿದ ಕವಿ "ತೊರಗಲ ಸೀಮೆಗರಸಾದ ಲಿಂಗಭೂವರನ ಸತ್ಪುತ್ರ ಜಾಯೇಂದ್ರನು." ಇವನ ವಂಶದವರು ಬೆಳವಲ ಎರೆನಾಡಿಗೆ ದೊರೆಗಳಾಗಿ ಪ್ರಭುತ್ವ ಮಾಡಿಕೊಂಡು ಬಂದರು. ವಂಶದ ಮೂಲಪುರುಷನಾದ ಅವರಾದಿಯ ವಿಟ್ಟಪ್ಪಗೌಡನು ೧೬ನೆಯ ಶತಮಾನದ ಉತ್ತರಾರ್ಧದಲ್ಲಿ ಬಿಜಾಪುರದ ಸುಲ್ತಾನನಾಗಿದ್ದ ಅದಿಲಷಾಹನ ಸರದಾರನಾಗಿ ಸೇವೆ ಸಲ್ಲಿಸಿ, ಆತನಿಂದ ತೊರೆಗಲ್ ಸೀಮೆಯನ್ನು ಜಹಗೀರಾಗಿ ಪಡೆದನು. ಸ್ವಭುಜಬಲದಿಂದ ತನ್ನ ನಾಡನ್ನು ವಿಸ್ತರಿಸಿಕೊಂಡು, ಬಿಜಾಪುರದ ಸುಲ್ತಾನನ ಸಾಮಂತನೆನಿಸಿಕೊಂಡಿದ್ದನು. ಬಿಜಾಪುರದ ಬಾದಷಾಹಿಯು ನಷ್ಟವಾದ ಮೇಲೆ ಸವಣೂರಿನ ನವಾಬನು ಬೆಳವಲನಾಡನ್ನು ವಶಪಡಿಸಿಕೊಂಡನು. ಆಗ ತೊರೆಗಲನಾಡು ಅವನ ಆಳಿಕೆಗೆ ಒಳಪಟ್ಟಿತು.

ವಿಟ್ಟಪ್ಪಗೌಡನಿಂದ ನಾಲ್ಕನೆಯ ತಲೆಯವನಾದ 'ಲಿಂಗಭೂವರ'ನ ಮಗನೇ ಕುವಲಯಾನಂದ ಗ್ರಂಥಕರ್ತನಾದ ಜಾಯೇಂದ್ರ. ಈತ ಜಾಯಗೌಂಡ, ಜಾಯಗೊಂಡ, ಎಂದೂ ಹೆಸರುಗೊಂಡಿದ್ದನು. ತಂದೆ ಲಿಂಗಗೌಡನು ತೀರಿಕೊಂಡ ವರ್ಷದಲ್ಲಿಯೇ (೧೭೧೬) ಹುಟ್ಟಿದ ಜಾಯಗೌಂಡನು ರಾಜ್ಯ ಪ್ರತಿನಿಧಿಯಾದ ಹಿರಿಯ ತಾಯಿ ಚೆನ್ನಾಂಬೆಯ ಪೋಷಣೆ ಶಿಕ್ಷಣಗಳಲ್ಲಿ ಬೆಳೆದನು. "ಸ್ವಭಾವತಃ ಬುದ್ಧಿವಂತನಾದ ಜಾಯಗೌಂಡನು ತನಗೆ ದೊರೆತ ಶಿಕ್ಷಣವನ್ನು ಬೆಳೆಸಿಕೊಂಡು

ವಿದ್ಯಾವಂತ, ಧೈರ್ಯಶಾಲಿ, ಶೂರ ಮೇಧಾವಿ, ರಾಜಕಾರಣ ನಿಪುಣನೆಂದು ಆ ಕಾಲದಲ್ಲಿ ಹೆಸರಾಗಿದ್ದನು... ಪ್ರಜೆಗಳ ಹಿತವನ್ನೇ ಲಕ್ಷ್ಯದಲ್ಲಿಟ್ಟು ಅವರನ್ನು ನ್ಯಾಯದಿಂದ ಪಾಲಿಸುತ್ತಿದ್ದನು... ಆತನು ಆರು ಭಾಷೆಗಳಲ್ಲಿ ನಿಪುಣನಾಗಿದ್ದನು. ಸ್ವತಃ ಕವಿಯಾಗಿದ್ದನು. ಅವನು ರಚಿಸಿದ 'ಕನ್ನಡ ಕುವಲಯಾನಂದ'ವೂ ನವರಸಗಳನ್ನು ವಿವರಿಸುವ 'ರಸಮಂಜರಿ'ಯೂ ಅವನು ಸಾಹಿತಿಯೂ ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಪರಿಣತನೂ ಆಗಿದ್ದನೆಂಬುದನ್ನು ವಿಶದಪಡಿಸುವುವು. ವಿದ್ಯಾವಂತರನ್ನೂ ಪಂಡಿತರನ್ನೂ ಮನ್ನಿಸುತ್ತಿದ್ದನು. ಇವನ ವಿದ್ವತ್ತೆಗೂ ಜಾಣತನಕ್ಕೂ ಮೆಚ್ಚಿ ಮೂರನೆಯ ಪೇಶ್ವೆ ಬಾಜೀರಾಯನು ಇವನನ್ನು ಒಳ್ಳೇ ಗೌರವದಿಂದ ಕಾಣುತ್ತಿದ್ದನು.[೧೮] ಈ ಆದರ್ಶ ಜನಪ್ರಿಯ ಪ್ರಭು ೧೭೫೮ ರಲ್ಲಿ ನರಗುಂದದಲ್ಲಿ ಕಾಲವಾದನು. ಅವನ ಸಮಾಧಿ ನವಿಲುಗುಂದದಲ್ಲಿದೆ.

'ಕುವಲಯಾನಂದ'ದಲ್ಲಿ ಅರ್ಥಾಲಂಕಾರಗಳನ್ನು ವಿವರಿಸುವುದೇ

[ಕೈದಳೆದ=ಕೈಯಲ್ಲಿ ಧರಿಸಿದ. ಪೊಗಿರುಗಟ್ಟಿಗೆ (ಪೊನ್+ಕಿರು+ಕಟ್ಟಿಗೆ)=ಚಿನ್ನದ ಚಿಕ್ಕ ಕೋಲು. ಬಟ್ಟಿತೆನಿಪ್ಪ=ಗುಂಡಾಗಿರುವ. ಚೊಲ್ಲೆಯ=ಜುಟ್ಟಿನ ತುದಿಗಂಟು. ಮಟ್ಟಿ=ಗರುಡಿ ಸಾಧನೆ ಮಾಡುವ ಕೆಮ್ಮಣ್ಣು ಹರಡಿದ ಸ್ಥಳ. ಸೀಸಕ=(ಸಂ. ಶೀರ್ಷಕ) ತಲೆಯನ್ನು ಕಾಪಾಡುವ ಸಾಧನ, ಕುಲಾವಿ. ಮಿಟ್ಟಿ=ಮಣ್ಣು. ಮನಂಗೊಳ್=ಆಕರ್ಷಕವಾಗಿರು. ಗರುಡಿಗೆಯ್ಮೆ=ಗರುಡಿಯ ಸಾಧನೆ. ನಿಟ್ಟಿಪ=ನೋಡುವ. ಗೋವಳ=ಗೋಪಾಲ, ಶ್ರೀಕೃಷ್ಣ]

ಚಿಕ್ಕದೇವರಾಜ ಸಂಗೀತ ಬಲ್ಲವನು, ವೀಣಾವಾದನ ಚತುರ, ಎಂದೂ ಒಂದೆರಡು ಪದ್ಯಗಳಲ್ಲಿ ವರ್ಣಿಸಿದೆ. ಆತನ ಕವಿತಾ ಸಾಮರ್ಥ್ಯವನ್ನಾಗಲೀ ಪಾಂಡಿತ್ಯವನ್ನಾಗಲಿ ಎಲ್ಲೂ ಪ್ರಸ್ತಾಪಿಸದೆ ಇರುವುದು ಗಮನಾರ್ಹವಾಗಿದೆ. ಇದರಿಂದ, 'ಚಿಕ್ಕದೇವರಾಜ ಬಿನ್ನಪ' ಮತ್ತು 'ಗೀತಗೋಪಾಲ' ಎಂಬೀ ಕೃತಿಗಳನ್ನು ಆತನ ಹೆಸರಿನಲ್ಲಿ ತಿರುಮಲಾರ್ಯನೇ ರಚಿಸಿರಬಹುದೆಂಬ ಅನುಮಾನ ಬಲಪಡುತ್ತದೆ.

ಅಲಂಕಾರ ಶಾಸ್ತ್ರಕ್ಕೆ ಸಂಬಂಧಪಟ್ಟಂತೆ ಅಪ್ರತಿಮ ವೀರ ಚರಿತೆಯಲ್ಲಿ ಹೊಸ ವಿಷಯಗಳೇನೂ ಇಲ್ಲದಿದ್ದರೂ, ಚಿಕ್ಕದೇವರಾಜನ ವ್ಯಕ್ತಿತ್ವ ಮತ್ತು ಚರಿತ್ರೆಯ ಸಂಗತಿಗಳ ದೃಷ್ಟಿಯಿಂದ ಈ ಗ್ರಂಥಕ್ಕೆ ಬೆಲೆಯಿದೆ.

## ಕನ್ನಡ ಕುವಲಯಾನಂದ

ಕನ್ನಡ ಕುವಲಯಾನಂದವು ಅದೇ ಹೆಸರಿನ ಸಂಸ್ಕೃತ ಕುವಲಯಾನಂದವನ್ನು ಆಧರಿಸಿ ಬರೆದದ್ದು. ಸಂಸ್ಕೃತದ ಕುವಲಯಾನಂದದ ಕರ್ತೃ ಅಪ್ಪಯ್ಯ ದೀಕ್ಷಿತ. ಈತನ ಕಾಲ ಸು.೧೫೦೦. ಈತ ತನಗಿಂತಲೂ ಹಿಂದಿನ ಜಯದೇವನ 'ಚಂದ್ರಾಲೋಕ' (ಸು.೧೨೦೦)* ಎಂಬ ಅಲಂಕಾರ ಗ್ರಂಥವನ್ನು ಅನುಸರಿಸಿ ತನ್ನ ಗ್ರಂಥವನ್ನು ರಚಿಸಿದನು. ಉದಯಾದಿತ್ಯಾಲಂಕಾರದಂತೆ ಚಂದ್ರಲೋಕ ಕುವಲಯಾನಂದಗಳು ಪಾಠ ಪುಸ್ತಕಗಳ ಮಾದರಿಯಲ್ಲಿ ರಚಿತವಾದ ಗ್ರಂಥಗಳು.

---

* ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ 'ಕನ್ನಡ ಕೈಪಿಡಿ'ಯಲ್ಲಿ ದಿವಂಗತ ಪಂಡಿತ ಕಾನಕಾನಹಳ್ಳಿ ವರದಾಚಾರ್ಯರು 'ಅರ್ಥಾಲಂಕಾರ'ಗಳನ್ನು (ಸು.೫೦) ಚಂದ್ರಾಲೋಕವನ್ನು ಅನುಸರಿಸಿ ವಿವರಿಸಿರುವುದನ್ನು ಇಲ್ಲಿ ನೆನೆಯಬಹುದು. ವರದಾಚಾರ್ಯರು ಲಕ್ಷಣಗಳಿಗೆ ಕನ್ನಡ ಕಾವ್ಯಗಳಿಂದ ಉದಾಹರಣ ಪದ್ಯಗಳನ್ನು ಆಯ್ದುಕೊಟ್ಟಿರುವುದು ಮಾತ್ರವಲ್ಲದೆ, ಲಕ್ಷ್ಯಲಕ್ಷಣ ಸಮನ್ವಯ ಮಾಡಿ ವಿವರಿಸಿರುವುದು ಅಲಂಕಾರ ವಿದ್ಯಾರ್ಥಿಗಳಿಗೆ ಬಹಳ ಉಪಯುಕ್ತವಾಗಿದೆ.

ಬಂದಿವೆ. ಉಳಿದವರಾರೂ ಷಟ್ಪದಿಗಳನ್ನು ಉಪಯೋಗಿಸಿ ಗ್ರಂಥ ಬರೆದಿಲ್ಲ. ಕನ್ನಡ ಸಾಹಿತ್ಯದಲ್ಲಿ ಪ್ರಖ್ಯಾತವಾದ ಷಟ್ಪದಿ ಗ್ರಂಥಗಳಿಂದ ಉದಾಹರಣೆಯನ್ನು ಆರಿಸಿ ತೋರಿಸಿದ ಮತ್ತು ಲಕ್ಷ್ಯಲಕ್ಷಣಗಳನ್ನು ವಿವರಿಸಲು ಷಟ್ಪದಿಯನ್ನೇ ಉಪಯೋಗಿಸಿದ ಗ್ರಂಥವು ಜಾಯಗೌಂಡನ ಕುವಲಾಯನಂದ ಒಂದೇ ಎಂದು ಹೇಳಬಹುದು. ಆದುದರಿಂದ ಈ ಗ್ರಂಥಕ್ಕೆ ಮಹತ್ವ ಬಂದಿದೆ" ಎಂದು ಈ ಗ್ರಂಥವನ್ನು ಮೊದಲಬಾರಿಗೆ ಸಂಪಾದನೆ ಮಾಡಿ ಪ್ರಕಟಿಸಿರುವ (೧೯೭೦) ಶಿ.ಚೆ. ನಂದಿಮಠ ಅವರು ಪೀಠಿಕೆಯಲ್ಲಿ ಹೇಳಿರುವ ಮಾತುಗಳು ಒಪ್ಪತಕ್ಕವಾಗಿವೆ. ಷಟ್ಪದಿ ಕಾವ್ಯಗಳನ್ನು 'ವರ್ಣಕಕಾವ್ಯ' (ಹಾಡುಗಬ್ಬ) ಗಳ ಗುಂಪಿನಲ್ಲಿ ಸೇರಿಸುವುದು ರೂಢಿಯಾಗಿದೆ. ಈ ಗ್ರಂಥವು ಷಟ್ಪದಿಗಳನ್ನೇ ಒಳಗೊಂಡು, ಉದಾಹರಣ ಪದ್ಯಗಳೂ ಕೂಡ ಷಟ್ಪದಿ ಕಾವ್ಯಗಳಿಂದಲೇ ತೆಗೆದುಕೊಂಡುವಾದ್ದರಿಂದ ಜಾಯಗೊಂಡನು ತನ್ನ ಕೃತಿಯನ್ನು 'ವರ್ಣಕ ಕಾವ್ಯ' ಎಂದು ಗ್ರಂಥದ ಸಮಾಪ್ತಿ ಪದ್ಯದಲ್ಲಿ ಕರೆದುಕೊಂಡಿರುವ ಹಾಗೆ ಕಾಣುತ್ತದೆ. ಅವನೇ ಬರೆದಿರುವ ಟೀಕೆ ಟಿಪ್ಪಣಿಗಳೆಲ್ಲವೂ ಗದ್ಯದಲ್ಲಿವೆ.

ಜಾಯಗೊಂಡನ ನಿರೂಪಣ ಪದ್ಧತಿಯನ್ನು ವಿಷದಪಡಿಸಲು 'ದೀಪಕಾಲಂಕಾರ'ದ ವಿವರಣೆಯನ್ನು ಮಾದರಿಯಾಗಿ ಇಟ್ಟುಕೊಳ್ಳಬಹುದು:
ದೀಪಕಾಲಂಕಾರ:

"ಇನ್ನು ಪ್ರಸ್ತುತಾಪ್ರಸ್ತುತ ಧರ್ಮೈಕ್ಯಪ್ರ–
ಸನ್ನ ಪೆಸರಾದ ದೀಪಕವು;
ಉನ್ನತ ಮದದಿಂದಲಿ ಗಜ, ಭೂಪ ಕೀರ್ತಿಯಿಂ
ಮಾನ್ಯರಾಗಿ ಯೊಪ್ಪುತ್ತಿಹರು,"

"ಟಿ.॥ ಪ್ರಸ್ತುತ ಅಪ್ರಸ್ತುತಗಳಿಗೆ ಧರ್ಮೈಕ್ಯಪೇಳೆ ದೀಪಕವು 'ಉನ್ನತಮದ'ವೆಂಬುದುದಾಹರಣ. ಮದದಿಂದ ಗಜ, ಬಳಿಕ ಕೀರ್ತಿಯಿಂ ಪ್ರಸ್ತುತನಾದ ರಾಜನು ಒಪ್ಪುತಿಹನೆಂದು ಪೇಳಿಹುದರಿಂದ ಶೋಭಾ ರೂಪಧರ್ಮೈಕ್ಯವೊಂದೇ ಪೇಳಿಹುದು."

ಮೂಲ ಶ್ಲೋಕದಲ್ಲಿ ಲಕ್ಷಣ ಲಕ್ಷ್ಯ ಎರಡೂ ಉಂಟು. ಶರಷಟ್ಪದಿಯಲ್ಲಿರುವ ಕನ್ನಡ ಪದ್ಯ ಅದರ ಭಾಷಾಂತರ.

[ಅಲಂಕಾರಗಳಲ್ಲಿ, ವರ್ಣಿಸಬೇಕಾದ ವಿಷಯವನ್ನು 'ವರ್ಣ್ಯ' ಅಥವಾ

ಗ್ರಂಥಕರ್ತನ ಮುಖ್ಯ ಗುರಿ. ಆದರೂ ಗ್ರಂಥಾರಂಭದಲ್ಲಿ ಮಂಗಳಾಚರಣೆಯ ಒಂಬತ್ತು ದೇವತಾಸ್ತೋತ್ರಗಳಾದ ಮೇಲೆ, "ಪ್ರಥಮತಃ ಕಾವ್ಯ ರೀತಿ ಪದ್ಧತಿಯಂ ವಿವರಿಸುವೆನು" ಎಂದು ಹೇಳಿ, ಧ್ವನಿಪ್ರಧಾನವಾದ ಕಾವ್ಯ, ಧ್ವನಿ ಗೌಣವಾಗಿರುವ (ಎಂದರೆ ಅಪ್ರಧಾನವಾಗಿರುವ) ಕಾವ್ಯ, ಚಿತ್ರಕಾವ್ಯ (ಎಂಬ ಉತ್ತಮ, ಮಧ್ಯಮ, ಸಾಧಾರಣ) ಪ್ರಕಾರಗಳನ್ನು ಉದಾಹರಣಪೂರ್ವಕ ವಿವರಿಸಿದ್ದಾನೆ; ಬಳಿಕ ಚಿತ್ರಕಾವ್ಯದಲ್ಲಿ ಶಬ್ದಚಿತ್ರ, ಅರ್ಥಚಿತ್ರ, ಶಬ್ದಾರ್ಥೋಭಯ ಚಿತ್ರ ಎಂಬ ಮೂರು ಪ್ರಕಾರಗಳನ್ನು ಉದಾಹರಣ ಪೂರ್ವಕ ವಿವರಿಸಿದ್ದಾನೆ. ಅನಂತರ, "ಮೂರು ಬಗೆಯಿಂದ ಪೇಳ್ದ ಕಾವ್ಯದೊಳು ಪ್ರಾಯಶಃ ಧ್ವನಿ ಗುಣೀಭೂತಧ್ವನಿ ಶ್ರೇಷ್ಠವಾಗಿಹುವು. ಬಳಿಕ ಮೂರು ಪ್ರಕಾರದ ಚಿತ್ರದೊಳು ಶಬ್ದ ಚಿತ್ರವುಬಾಹುಲ್ಯದಿಂದ ನೀರಸವಾಗಿಹುದೆಂದು ಸತ್ಕವಿಗಳು ಆದರಣೆಯುಳ್ಳವರಾಗದಿದ್ದರಿಂದ ನ್ಯೂನತ್ವ ಹೇಳಿದ್ದಾಯಿತು. ಅತಃ ಶಬ್ದ ಚಿತ್ರಾಂಶು ರೂಪವಾದ ಕಾವ್ಯ ಮಂಬಿಟ್ಟುಳಿದ ಅರ್ಥಚಿತ್ರಾದಿ ರೂಪವಾದ ಕಾವ್ಯ ವಿಸ್ತಾರಮಂ ಶ್ರೀಗುರು ಪ್ರಸಾದ ಮಹಿಮೆಯಿಂ ಪೇಳ್ವೆ" ಎಂದು ಹೇಳಿ 'ಅರ್ಥಾಲಂಕಾರ ಪ್ರಕರಣ'ವನ್ನು ಕವಿ ಪ್ರಾರಂಭಿಸುತ್ತಾನೆ. ಮೇಲ್ಕಂಡ ಪೀಠಿಕಾಪ್ರಕರಣ ಬಹು ಸಂಕ್ಷೇಪವಾಗಿದೆ. ಇದಕ್ಕೂ ಅಪ್ಪಯ್ಯ ದೀಕ್ಷಿತನ 'ಚಿತ್ರಮೀಮಾಂಸೆ' ಎಂಬ ಗ್ರಂಥ ಆಧಾರವಾಗಿದೆ.

ಮೊದಲೇ ಹೇಳಿದಂತೆ, ಅಪ್ಪಯ್ಯ ದೀಕ್ಷಿತನ ಕುವಲಯಾನಂದವನ್ನು ಅನುಸರಿಸಿ ರಚಿತವಾದ ಗ್ರಂಥ, ಈ ಕನ್ನಡ ಕುವಲಯಾನಂದ; ಜಾಯಗೊಂಡನು ಗ್ರಂಥದಲ್ಲಿ ಮೂಲಗ್ರಂಥಕ್ಕೆ ತಾನು ಋಣಿ ಎಂದು ಎಲ್ಲಿಯೂ ಒಪ್ಪಿಕೊಳ್ಳದಿದ್ದರೂ, ಅದರ ಹೆಸರನ್ನೇ ಇಟ್ಟುಕೊಂಡಿರುವುದರಿಂದ ಒಂದು ರೀತಿಯಲ್ಲಿ ಒಪ್ಪಿಕೊಂಡ ಹಾಗೆಯೇ ಆಗಿದೆ. "ಕುವಲಯಾನಂದ ಎಂಬ ಅಲಂಕಾರ ಶಾಸ್ತ್ರವನು, ಕನ್ನಡ ಕವಿತೆಯನು, ಶರಕುಸುಮ ಭೋಗ ಭಾಮಿನಿಯ ಪರಿವರ್ಧಿನಿಯ ವಾರ್ಧಕವನು" ಎಂದು ಜಾಯಗೊಂಡ 'ಸೂಚನೆ'ಯಲ್ಲಿ ತಿಳಿಸಿದ್ದಾನೆ; ಈ "ಪ್ರತಿಜ್ಞೆ" ಅನುಸಾರವಾಗಿ ಮೂಲ ಸಂಸ್ಕೃತ ಶ್ಲೋಕಗಳನ್ನು ಈ ಆರು ಬಗೆಯ ಷಟ್ಪದಿಗಳಲ್ಲಿ ಕನ್ನಡಿಸಿದ್ದಾನೆ. ಲಕ್ಷಣಗಳಿಗೆ ಉದಾಹರಣೆಯಾಗಿ ಕೊಡುವ ಪದ್ಯಗಳು ಕೂಡ ಲಕ್ಷ್ಮೀಶನ ಜೈಮಿನಿ ಭಾರತ, ರಾಘವಾಂಕನ ಕಾವ್ಯ, ಉದ್ಭಟ ಕಾವ್ಯ, ಚಾಯಣ ಭಾರತ, ಚಿತ್ರಭಾರತ, ಮುಂತಾದ ಷಟ್ಪದಿ ಕಾವ್ಯಗಳಿಂದ ಆರಿಸಿದವೇ ಆಗಿವೆ. ಹಲಕೆಲವು ಉದಾಹರಣ ಪದ್ಯಗಳು ಮೂಲ ಸಂಸ್ಕೃತ ಪದ್ಯಗಳ ಅನುವಾದಗಳು. "ಕನ್ನಡ ಸಾಹಿತ್ಯದಲ್ಲಿರುವ ಎಲ್ಲ ಅಲಂಕಾರ ಗ್ರಂಥಗಳು ಲಕ್ಷ್ಯಲಕ್ಷಣಗಳನ್ನು ಕಂದವೃತ್ತದಲ್ಲಿ ಹೇಳಿರುವವು. ತಿಮ್ಮನ ನವರಸಾಲಂಕಾರದಲ್ಲಿ ಮಾತ್ರ ಎರಡು ಷಟ್ಪದಿಗಳೂ ಒಂದು ತ್ರಿಪದಿ

ಒಂದು ದಿನಂ ನೃಪಸುತೆಯರ
ಪೊಂದಿದ ಅಲಂಕಾರತತ್ವದಿಚ್ಚೆಯ ತಿಳಿದು ಆ–
ನಂದದೆ ತನು ಪೊಂಪುಳಿವೆ–
ತ್ತು ಇಂದದಂ ಉಸುರಲ್ಕೆ ತೊಡಗಿದಂ ಲಿಂಗನೃಪಂ.

ಸ್ಫುರತ್ ಉಪಮಾ ಪ್ರಮುಖಾಲಂ–
ಕರಣದ ಅದೊಂದು ಲಕ್ಷ್ಯಪದ್ಯಮ ಒಲವಿಂ
ನೆರೆ ಲಕ್ಷಣ ಪದ್ಯದ ಉದಾ–
ಹರಣಕೆ ಕೃಷ್ಣಕ್ಷಿತೀಂದ್ರನ ಗುಣಮನೆ ಪೇಳ್ದಂ.

[ತನು+ಶರೀರ, ಪೊಂಪುಳಿವೆತ್ತು=ರೋಮಾಂಚನ ಹೊಂದಿ, ಸ್ಫುರತ್=ಪ್ರಕಾಶಮಾನ, ಶೋಭಿಸುವ.]

ಕೃಷ್ಣ ರಾಜನನ್ನು ಕಥಾನಾಯಕನನ್ನಾಗಿ ಮಾಡಿಕೊಂಡಿರುವ ವಿಷಯದಲ್ಲಿ ಲಿಂಗರಾಜನು ತಿರುಮಲಾರ್ಯನ ಮಾದರಿಯನ್ನು ಅನುಸರಿಸಿದ್ದಾನೆ. ಆದರೆ, ಅಪ್ರತಿಮ ವೀರ ಚರಿತೆಯಲ್ಲಿ ಚಿಕ್ಕದೇವರಾಜನ ಅನೇಕ ಗುಣಗಳಿಂದ ಕೂಡಿದ ವ್ಯಕ್ತಿಚಿತ್ರ ಅಲ್ಲಲ್ಲಿ ಜೀವಂತವಾಗಿ ಕಣ್ಣಿಗೆ ಕಟ್ಟಿದಂತೆ ತೋರಿಬರುವಂತೆ ಈ ಗ್ರಂಥದಲ್ಲಿ ಕೃಷ್ಣರಾಜನ ಗುಣವರ್ಣನೆ ಹಾಗೆ ತೋರಿಬರುವುದಿಲ್ಲ. ಲಿಂಗರಾಜನ ಬರವಣಿಗೆಯ ಶೈಲಿ ಸಂಸ್ಕೃತಪದಗಳಿಂದ ತುಂಬಿ, ಸಾಮಾನ್ಯನ ದೃಷ್ಟಿಯಿಂದ ಕಠಿನವಾಗಿಯೇ ಇದೆ.

ಗದ್ಯಪದ್ಯ ಮಿಶ್ರಿತವಾದ ಈ ಗ್ರಂಥದಲ್ಲಿ ಮೂರು ಅಧ್ಯಾಯಗಳಿದ್ದು, ಅವನ್ನು ಉಲ್ಲಾಸಗಳೆಂದು ಕರೆದಿದೆ. 'ಪೀಠಿಕಾ ರಚನ'ವೆಂಬ ಮೊದಲನೆಯ ಉಲ್ಲಾಸದಲ್ಲಿ ಕೃಷ್ಣರಾಜನ ವಂಶವಿಚಾರವನ್ನು ಸಂಗ್ರಹವಾಗಿ ತಿಳಿಸಿ, ಗ್ರಂಥ ರಚನಾ ಸಂದರ್ಭವನ್ನು ವಿವರಿಸಿದೆ. "ಈ ಅಲಂಕಾರ ಗ್ರಂಥದೊಳ್ ಲಕ್ಷ್ಯ ಲಕ್ಷಣ ಪದ್ಯಂಗಳ್ ಸ್ತ್ರೀಪುರಷ ಪ್ರಶ್ನೋತ್ತರ ಮಾಲಾರೂಪಮಾಗಿಯೇ ಪೇಳಿರ್ಪುದು" ಎಂದು ಹೇಳಿರುವುದು ಗಮನಿಸತಕ್ಕ ಸಂಗತಿ. ಛಂದೋಂಬುಧಿಯಲ್ಲಿ ನಾಗವರ್ಮನು ಲಕ್ಷಣ ಪದ್ಯಗಳನ್ನು ತನ್ನ ಹೆಂಡತಿಗೆ ಹೇಳಿದಂತೆ ಬರೆದಿದ್ದಾನೆ. ಈ ಗ್ರಂಥದಲ್ಲಿಯೂ ಅದೇ ಪದ್ಧತಿ ಕಂಡು ಬರುತ್ತದೆ.

ಎರಡನೆಯ ಉಲ್ಲಾಸದಲ್ಲಿ, ಮೂರು ಬಗೆಯ ಅನುಪ್ರಾಸಗಳು, ಮೂರು ಬಗೆಯ ಯಮಕ, ಪುನರುಕ್ತವದಾಭಾಸ ಮತ್ತು ಹಾರಬಂಧ,

'ಪ್ರಸ್ತುತ' ಎಂದೂ, ವರ್ಣ್ಯವನ್ನು ಯಾವುದಾದರೂ ಒಂದು ರೀತಿಯಲ್ಲಿ ಹೋಲುತ್ತಿದ್ದು ವರ್ಣಿಸಬೇಕಾಗಿಲ್ಲದಿರುವುದನ್ನು 'ಅವರ್ಣ್ಯ' ಅಥವಾ 'ಅಪ್ರಸ್ತುತ' ಎಂದೂ ಅಲಂಕಾರಶಾಸ್ತ್ರದಲ್ಲಿ ಹೇಳಲಾಗುತ್ತದೆ. ರಾಜನು ಕೀರ್ತಿಯಿಂದ ಶೋಭಿಸುತ್ತಾನೆ; ಆನೆ ತನ್ನ ಮದದಿಂದ ಶೋಭಿಸುತ್ತದೆ. ಶೋಭಿಸುವುದು ಎರಡು ವಸ್ತುಗಳಲ್ಲಿಯೂ ಇರುವ ಸಮಾನಧರ್ಮ.]

**ನರಪತಿ ವಿಜಯ**

ಇದನ್ನು ಬರೆದವನು 'ಅಳಿಯ ಲಿಂಗರಾಜ' ಎಂದು ಪ್ರಸಿದ್ಧನಾಗಿದ್ದಾನೆ. ಮೈಸೂರು ಅರಸನಾದ ಮುಮ್ಮಡಿ ಕೃಷ್ಣರಾಜನ ಪೋಷಣೆಯಲ್ಲಿ ಬೆಳೆದು ವಿದ್ಯಾವಂತನಾಗಿ, ಆತನ ಇಬ್ಬರು ಹೆಣ್ಣುಮಕ್ಕಳನ್ನು ಮದುವೆಯಾದನು. ಈ ಕಾರಣದಿಂದ ಆ ಹೆಸರು ಬಂದಿತು. ಲಿಂಗರಾಜನ ಜನ್ಮವರ್ಷ ೧೮೨೩; ಮರಣಹೊಂದಿದ್ದು ೧೮೭೪ರಲ್ಲಿ. ಈತನು "ಮಹದೈಶ್ವರ್ಯವಂತನಾಗಿದ್ದರೂ ಸರ್ವದಾ ವಿದ್ವಜ್ಜನ ಸಹವಾಸ, ಪಾಠಪ್ರವಚನ, ನೂತನ ಗ್ರಂಥರಚನಾದಿಗಳಲ್ಲಿಯೇ ಆಸಕ್ತನಾಗಿದ್ದು ಸಂಸ್ಕೃತ ಕರ್ಣಾಟಕ ವಿಶ್ವದಲ್ಲಿ ಉದ್ದಾಮ ಪಾಂಡಿತ್ಯವನ್ನು ಸಂಪಾದಿಸಿ ಆ ಕಾಲದ ಕರ್ಣಾಟ ಕವಿಗಳಲ್ಲಿ ಅಗ್ರೇಸರನೆನಿಸಿಕೊಂಡಿದ್ದನು. ಸಂಗೀತದಲ್ಲಿಯೂ ಅದ್ವಿತೀಯ ಪಾಂಡಿತ್ಯವನ್ನು ಸಂಪಾದಿಸಿಕೊಂಡಿದ್ದನು. ಯಾವಾಗಲೂ ಈತನ ಸಭೆಯಲ್ಲಿ ಪ್ರಸಿದ್ಧರಾದ ಅನೇಕ ಜನ ವಿದ್ವಾಂಸರು ಸೇರಿ ನಾನಾ ವಿಧ ಗ್ರಂಥಾವಲೋಕನ, ತದರ್ಥಾನುವಾದಗಳನ್ನು ಮಾಡುತ್ತ ಇದ್ದುದರಿಂದ ಆತನ ಸೇವಾವೃತ್ತಿ ಜನಗಳೂ ಸಾಮಾನ್ಯವಾಗಿ ಕವಿತ್ವಗಳನ್ನು ಮಾಡುತ್ತಾ ಇದ್ದರು." (ಕವಿಚರಿತೆ, ಸಂ.೩, ೧೯೨೯; ಪು.೧೯೯–೨೦೦). ಮುಮ್ಮಡಿ ಕೃಷ್ಣರಾಜನು ಈ ಗ್ರಂಥವನ್ನು ತನ್ನ ಸಭೆಯಲ್ಲಿ ಓದಿಸಿ ಕೇಳಿ, ಸುಪ್ರೀತನಾಗಿ, ಈತನಿಗೆ 'ಉಭಯ ಕವಿತಾ ವಿಶಾರದ' ಎಂಬ ಬಿರುದನ್ನು ಕೊಟ್ಟನು. ಲಿಂಗರಾಜನ ಪತ್ನಿಯರಿಬ್ಬರೂ ಸಾಹಿತ್ಯ ಸಂಗೀತಾದಿ ಕಲೆಗಳಲ್ಲಿ ನಿಪುಣೆಯರಾಗಿದ್ದರು. ತಮಗೆ ಅಲಂಕಾರ ತತ್ತ್ವಗಳನ್ನು ತಿಳಿಯಹೇಳಬೇಕೆಂದು ಅವರು ಪ್ರಾರ್ಥಿಸಿಕೊಳ್ಳಲು ಪ್ರಭುವೂ ಮಾವನೂ ಆದ ದೊರೆಯನ್ನೇ ನಾಯಕನನ್ನಾಗಿ ಮಾಡಿಕೊಂಡು 'ಅಳಿಯ' ಲಿಂಗರಾಜನು ಈ ಲಕ್ಷಣಗ್ರಂಥವನ್ನು ರಚಿಸಿದುದಾಗಿ ಗ್ರಂಥದಿಂದ ತಿಳಿದು ಬರುತ್ತದೆ. ಸ್ವಾರಸ್ಯವಾಗಿ ತಿಳಿಸಿರುವ ಆ ಚಿಕ್ಕ ಸರಸ ಪ್ರಸಂಗದ ಕಡೆಯ ಎರಡು ಪದ್ಯಗಳು:

ಲಕ್ಷ್ಯ॥

"ಊರಿದ ಮಂಡಿ, ಬಲ್ಕುಣಿವ ಮುಂಗುರುಳ್, ಒಯ್ಯನೆ
ತೋರ್ವ ಸೇದೆಗಳ್,
ಜಾರಿದ ಮೇಲುದ, ಆ ತೊಳಲ್ವ ದಿಟ್ಟಿ ಸಡಿಲ್ದ ನವಿರಳ ಓಳಿ ತಾಂ
ತೋರಿರೆ ದುಂಡುಚಂಡ ಪಿಡಿದಾಡೆ ನಿರೀಕ್ಷಿಸಿ ಕೃಷ್ಣಮೇದಿನೀ
ದಾರಂ, 'ಉದಾರೆ, ಬಾಪು!' ಎನುತಂ ಅಪ್ಪಲ್, ಅದೇನನೆ
ನೋಂತೆಯೌ ಸಖೀ."

ವೃತ್ತಿ॥ಇದರೊಳ್ ಕಂತುಕಕ್ರಿಡಾಕಾಲೋಚಿತ ಸ್ತ್ರೀ ಜಾತಿ ಸ್ವಭಾವಮಂ ಪೇಳಿರ್ಪುದರಿಂ ಸ್ವಭಾವೋಕ್ತ್ಯಲಂಕಾರಂ.

**ಇತರ ಗ್ರಂಥಗಳು:**

ಜಯದೇವನ ಚಂದ್ರಾಲೋಕವನ್ನು ಸಿದ್ಧಾಂತಿ ಶಿವಶಂಕರಶಾಸ್ತ್ರಿಗಳೂ ಅಕ್ಕಲೆ ನರಸಿಂಹಾಶಾಸ್ತ್ರಿಗಳೂ 'ಕರ್ಣಾಟಕ ಚಂದ್ರಾಲೋಕ' ಎಂಬ ಹೆಸರಿನಿಂದ ಕನ್ನಡಿಸಿದ್ದಾರೆ. ಇದರಿಂದ ಆ ಕಾಲದಲ್ಲಿ ಚಂದ್ರಾಲೋಕವು ಎಷ್ಟು ಪ್ರಸಿದ್ಧವಾಗಿತ್ತು ಎಂಬುದು ಗೊತ್ತಾಗುತ್ತದೆ.

"ಕನ್ನಡ ಭಾಷೆಯಲ್ಲಿ ನಾಗವರ್ಮ, ಉದಯಾದಿತ್ಯ ಮೊದಲಾದ ಮಹಾಕವಿಗಳು ರಚಿಸಿರುವ ಅಲಂಕಾರ ಗ್ರಂಥಗಳಲ್ಲಿ ಪದ್ಯಗಳ ಅರ್ಥವೂ, ಲಕ್ಷ್ಯ ಲಕ್ಷಣಗಳೂ ದುರವಗಾಹವಾಗಿರುವುದರಿಂದ ಕನ್ನಡಿಗರಾದ ಅಲಂಕಾರ ವಿದ್ಯಾರ್ಥಿಗಳು ಅಲಂಕಾರ ವಿದ್ಯಾರ್ಥಿಗಳೇ ಆದರಲ್ಲಾ! ಇದನ್ನು ಹೇಗಾದರೂ ಸುಲಭ ಪಡಿಸಬೇಕೆಂಬ ಉದ್ದೇಶದಿಂದ ಕೆಲವು ಶಬ್ದಾಲಂಕಾರಗಳೊಡನೆ ಈ ಚಂದ್ರಾಲೋಕವನ್ನು ಸುಲಭವೇದ್ಯವಾಗಿ ಕನ್ನಡದಲ್ಲಿ ರಚಿಸಿದೆನು." ಎಂಬ, ಗ್ರಂಥಕರ್ತ ಅಕ್ಕಲೆಯವರ ಪ್ರಯತ್ನದ ಹಿಂದಿರುವ ಕಳಕಳಿಯಿಂದಾಗಿ ಅವರ ಅಲಂಕಾರ ಶಾಸ್ತ್ರ ಗ್ರಂಥ ಗಮನಾರ್ಹವಾಗಿದೆ. ಇಂದಿನ ವಿದ್ಯಮಾನಕ್ಕೆ ಅನ್ವಯಿಸಿ ಹೇಳುವುದಾದರೆ ಇದು, 'ಅಲಂಕಾರ ವಿದ್ಯಾರ್ಥಿ'ಗಳಿಗಿರುವುದೇ ಹೊರತು 'ಅಲಂಕಾರಶಾಸ್ತ್ರ ವಿದ್ಯಾರ್ಥಿಗಳಿಗಲ್ಲ. ಅಲಂಕಾರಗಳ ವಿವರಣೆಗೆ ಇಂದಿನ ಪಾಠಕ್ರಮದ ಯಾವ ಹಂತದಲ್ಲಿಯೂ ಉಚಿತ ಸ್ಥಾನವಿಲ್ಲ. ಪ್ರಾಚೀನ ಕಾವ್ಯಗಳ ಸೌಂದರ್ಯವನ್ನು ಪೂರ್ಣವಾಗಿ ಅರಿಯಬೇಕಾದರೆ ಅವರು ಪ್ರಯೋಗಿಸಿರುವ

ಷೋಡಶದಳಪದ್ಮಬಂಧ, ತ್ರಿಶೂಲಬಂಧ, ಷಡರ (ಆರು ಆರೇಕಾಲಿನ) ಚಕ್ರಬಂಧ ಎಂಬ ಚಿತ್ರಾಲಂಕಾರಗಳು – ಈ ಶಬ್ದಾಲಂಕಾರಗಳನ್ನು ವಿವರಿಸಿದೆ. ಚಿತ್ರಲಂಕಾರಗಳ ಕಲ್ಲಚ್ಚಿನ ಚಿತ್ರಗಳೂ ಇವೆ. (ಹಾರಬಂಧದ ಪ್ರತಿಚಿತ್ರವನ್ನು ಅನುಬಂಧದಲ್ಲಿ ಕೊಟ್ಟಿದೆ.)

ಮೂರನೆಯ ಉಲ್ಲಾಸವು ಅರ್ಥಾಲಂಕಾರಗಳ ವಿವರಣೆಗೆ ಮೀಸಲಾಗಿದೆ. ಮುಖ್ಯವಾದ ಅಲಂಕಾರಗಳು, ಅವುಗಳ ಒಳಭೇದಗಳು, ಎಲ್ಲವೂ ಸೇರಿ ಸುಮಾರು ೧೯೦ ಅಲಂಕಾರಗಳನ್ನು ನಿರೂಪಿಸಿದೆ. ಲಕ್ಷಣಪದ್ಯಗಳೆಲ್ಲ ಕಂದಗಳು. ಲಕ್ಷ್ಯಪದ್ಯಗಳು ಸಾಮಾನ್ಯವಾಗಿ ಕಂದಗಳಾಗಿದ್ದರೂ, ಕೆಲವು ವೃತ್ತಗಳೂ ಇವೆ. ವೃತ್ತಿ ಗದ್ಯದಲ್ಲಿದೆ. ಲಕ್ಷ್ಯಪದ್ಯಗಳು ಸ್ವಂತ ರಚನೆಗಳೆಂಬುದು ಸ್ಪಷ್ಟವಾಗಿಯೇ ಇದೆ. ಲಕ್ಷಣ ನಿರೂಪಣೆಯಲ್ಲಿ ಅನೇಕ ಸಂಸ್ಕೃತ ಮೂಲ ಗ್ರಂಥಗಳನ್ನು ಅನುಸರಿಸಿರುವಂತೆ ಕಂಡು ಬರುತ್ತದೆ.

ಒಂದು ಉದಾಹರಣೆಯೊಂದಿಗೆ ಈ ಗ್ರಂಥವಿಚಾರವನ್ನು ಮುಗಿಸಬಹುದು:

ಸ್ವಭಾವೋಕ್ತಿ:

"ಜಾತ್ಯಾದಿಯಾ ಸ್ವಭಾವಮಂ
ಅತ್ಯಂತದೆ ಪೇಳೆ ತಾಂ ಸ್ವಭಾವೋಕ್ತಿ ಕರಂ;
ಸ್ತುತ್ಯೋನ್ನತ ಕುಚಮಂಡಲ
ನೃತ್ಯನ್ನವರತ್ನಹಾರೇ ಸರಸ ವಿಹಾರೇ"

[ಸ್ತುತ್ಯವಾದ ದೊಡ್ಡವಾದ ಗುಂಡನೆಯ ಮೊಲೆಗಳ ಮೇಲೆ ಕುಣಿಯುವ ನವರತ್ನ ಹಾರವುಳ್ಳವಳೇ, ಸರಸವಾಗಿ ವಿಹಾರ ಮಾಡುವವಳೇ, ಕೇಳು; ವಸ್ತುಗಳ ಜಾತಿ ದ್ರವ್ಯ ಗುಣ ಕ್ರಿಯೆ, ಇವುಗಳ ಸ್ವಭಾವವನ್ನು ಪೂರ್ತಿಯಾಗಿ ತಿಳಿಸುವುದು ಸ್ವಭಾವೋಕ್ತಿ.]

"ವೃತ್ತಿ॥ ಜಾತಿಕ್ರಿಯಾದಿ ಸ್ವಭಾವಮಂ ರೆಯ್ಯುವಾಗಿ ಬಣ್ಣಿಸಲ್ಕೆ ಸ್ವಭಾವೋಕ್ತ್ಯಲಂಕಾರಂ."

**ಗೀತ ಬಂಧ:**

(ಅನುಷ್ಟುಪ್ ಶ್ಲೋಕ)

"ಸಾಪಗಂ ಗಾನಿಮಾ ಮಾಮಾ
ಸಮಾಮಾನಿನಿ ಪಾಪಮಂ॥
ಪಾರಿಷ್ಪರೀಪಂ ಸಾಪನಿಸಂ
ನಿಗಮಾಗಮ ಮಾಗಧಂ॥"

"ಮೇಘ ವಾಹನನಾದ ಇಂದ್ರನೂ, ಗಾತ್ರುಮಾತೃವಾದ ಸರಸ್ವತಿಯೂ, ಮಹಾಲಕ್ಷ್ಮಿಯೂ, ಗಣೇಶ ಮಾತೃವಾದ ಪಾರ್ವತಿಯೂ, ವೇದಶಾಸ್ತ್ರಗಳೇ ಸ್ತುತಿಪಾಠಕರಾಗಿಯುಳ್ಳ ಬ್ರಹ್ಮ, ವಿಷ್ಣು, ಮಹೇಶ್ವರ, ಇವರುಗಳು ಪಾಪ ಪರಿಹಾರಕರೆಂದು ತಾತ್ಪರ್ಯ. ಇದರಲ್ಲಿರುವ ಅಕ್ಷರಗಳೆಲ್ಲಾ ಸಂಗೀತ ಶಾಸ್ತ್ರಕ್ಕೆ ಸಂಬಂಧಪಟ್ಟಿರುವುದರಿಂದ ಇದು ಗೀತಬಂಧ."

"ಮಹಾ ಮಾ ಎನ್ನುವುದರ ತದ್ಭವ ಮಾಮಾ. ಈ=ಸರಸ್ವತಿ. ಸಾ+ಲಕ್ಷ್ಮಿ. ಸಾಪ=ನೀರಿನಿಂದ ಕೂಡಿದುದು."

[ಮೇಲಿನ ಶ್ಲೋಕದಲ್ಲಿ ಸಂಗೀತದ ಸಪ್ತ ಸ್ವರಗಳಾದ ಸರಿಗಮಪದನಿ ಎಂಬ ಅಕ್ಷರಗಳನ್ನು ಮಾತ್ರ ಉಪಯೋಗಿಸಿದೆ.]

ಚಿತ್ರಾಲಂಕಾರಗಳು ಬಗೆಬಗೆಯ ಚಮತ್ಕಾರಗಳಿಂದ ಕೂಡಿರುತ್ತವೆ. ಓದುಗರಲ್ಲಿ ಬೆರಗನ್ನು ಉಂಟು ಮಾಡುತ್ತವೆ. ರಚನೆಯ ರಹಸ್ಯವು ಗೊತ್ತಾದಾಗ ಬೌದ್ಧಿಕವಾದ ಸಂತೋಷವುಂಟಾಗುತ್ತದೆ. ಇದು ಹೃದ್ಯವಾದ ರಸಾನಂದಕ್ಕೆ ಸಮವಾಗಲಾರದು. ಅಲ್ಲದೆ, ಇವು ರಸಗಳನ್ನು ಪೋಷಿಸಲೂ ಆರವು. ಇವನ್ನು ರಚಿಸುವುದಕ್ಕೆ ಪಾಂಡಿತ್ಯ ಬೇಕು. ರಚಿಸುವುದಕ್ಕೆ ಕಷ್ಟವಾದ್ದರಿಂದ, ಚಿತ್ರಾಲಂಕಾರಗಳನ್ನು 'ದುಷ್ಕಕರ ಕಾವ್ಯ'ಗಳೆಂದೂ ಲಾಕ್ಷಣಿಕರು ಕರೆದಿದ್ದಾರೆ.

ಕಂದ ಪದ್ಯಗಳ ರಚನೆಯಲ್ಲಿ ಹಳಗನ್ನಡ ನುಡಿಗಟ್ಟು ಅಗತ್ಯವಾದ್ದರಿಂದ, ಅಕ್ಕಲೆಯವರ ಸುಲಭವೆನ್ನಲಾದ ಪದ್ಯಗಳೂ ತಕ್ಕಮಟ್ಟಿಗೆ ಕಠಿನವಾಗಿಯೇ ಇವೆ. ಆದರೆ, ಮೇಲೆ ಉದ್ಧರಿಸಿರುವ ಅವರ ಗದ್ಯ ವಾಕ್ಯಗಳು ಈಗಿನ ಹೊಸಗನ್ನಡದಂತೆಯೇ ಇರುವುದು ಗಮನಾರ್ಹ.

ಇನ್ನೊಂದು ಅಪೂರ್ವ ರೀತಿಯ ಅಲಂಕಾರ ಗ್ರಂಥ ಗಮನಾರ್ಹವಾಗಿದೆ. ಅದು ಎಸ್.ಎನ್. ನರಹರಯ್ಯನವರ 'ಶ್ರೀ ಲಕ್ಷ್ಮೀನೃಸಿಂಹ ಸ್ತೋತ್ರಂ'. ಹೆಸರು

ಅಲಂಕಾರಗಳನ್ನು ಅಭ್ಯಾಸ ಪೂರ್ವಕವಾಗಿ ಅರ್ಥಮಾಡಿಕೊಳ್ಳಬೇಕಾದದ್ದು ಅತ್ಯಗತ್ಯ. ಇಂದಿನ ವಿದ್ಯಾರ್ಥಿಗಳಿಗೆ ಅರ್ಥವಾಗುವಂತೆ ಇಂದಿನ ಭಾಷೆ ನುಡಿಗಟ್ಟುಗಳಲ್ಲಿ ನಮ್ಮ ಲಾಕ್ಷಣಿಕರು ನಿರೂಪಿಸಿರುವ ಪ್ರಮುಖ ಅಲಂಕಾರಗಳನ್ನು ತಿಳಿಯ ಹೇಳುವುದರ ಜೊತೆಗೆ, ಆಧುನಿಕ ಕವಿತೆಯಲ್ಲಿ ಕೂಡ ಕೆಲವು ಮುಖ್ಯ ಅಲಂಕಾರಗಳನ್ನು ಗುರುತಿಸುವ ರೂಢಿ ಬೆಳೆಯಬೇಕಾಗಿದೆ. ಈ ದೃಷ್ಟಿಯಿಂದ, ಅಕ್ಕಲೆ ನರಸಿಂಹ ಶಾಸ್ತ್ರಿಗಳ ಅಂದಿನ ಪ್ರಯತ್ನ ಹೊಸ ರೂಪದಲ್ಲಿ ಮತ್ತೆ ನಡೆಯ ಬೇಕಾಗಿದೆ.

ಈ ಗ್ರಂಥದಲ್ಲಿ, ಹಿಂದಿನ ಯಾವ ಕನ್ನಡ ಅಲಂಕಾರ ಶಾಸ್ತ್ರ ಗ್ರಂಥದಲ್ಲಿಯೂ ಕಂಡುಬರದ ಎರಡು ಚಿತ್ರಾಲಂಕಾರಗಳಿವೆ. ಅವು ಅಪೂರ್ವವಾಗಿರುವುದರಿಂದ, ಗಮನಾರ್ಹವಾಗಿವೆ. ಅವುಗಳನ್ನು ಗ್ರಂಥಕರ್ತರ ವಿವರಣೆಯೊಂದಿಗೆ ಕೆಳಗೆ ಎತ್ತಿಕೊಟ್ಟಿದೆ:

**ಜ್ಯೋತಿಷ ಬಂಧ:**

(ಸಂಸ್ಕೃತ ಅನುಷ್ಟುಪ್ ಶ್ಲೋಕ)

"ಮೀನ ಕೇತು ಗುರೋಚಾಪ
ಕರಭೌಮ ತಮೋರವೇ॥
ಯಾಮ್ಯಾನಿಲೈಂದ್ರಾಶ್ವಿನೇಯ
ಜೀವ ಚಿತ್ತೇ ಶನ್ಶೈಶ್ವರ॥"

"ಧನುರ್ಧಾರಿಯಾದ ನರಕಾಸುರನನ್ನು ಸಂಹರಿಸಿದ, ಪಂಚಪಾಂಡವರೇ ಪ್ರಾಣವಾಗಿಯುಳ್ಳ, ಎಲೈ ಕೃಷ್ಣನೇ, ನನ್ನ ಚಿತ್ತದಲ್ಲಿ ನೆಲೆಯಾಗೆಂದು ತಾತ್ಪರ್ಯ. ಇದರಲ್ಲಿರುವ ಪದ್ಯಗಳೆಲ್ಲಾ ಜ್ಯೋತಿಷಕ್ಕೆ ಸಂಬಂಧಪಟ್ಟಿರುವುದರಿಂದ ಇದು ಜ್ಯೋತಿಷ ಬಂಧ."

"ಭೌಮ – ನರಕಾಸುರ, ತಮಃ – ಅಂಧಕಾರ, ಅಶ್ವಿನ ಶಬ್ದದಿಂದ ಅಶ್ವಿನೇಯ. ಅನಿಲದಿಂದ ಅನಿಲ."

[ಕೇತು, ಗುರು: ಭೌಮ (–ಕುಜ, ಮಂಗಳ), ರವಿ (=ಸೂರ್ಯ), ಶನೈಶ್ವರ– ಇವು ಗ್ರಹಗಳು. ಮೀನ, ಚಾಪ (ಧನುಸ್ಸು), ಇವು ರಾಶಿಗಳ ಹೆಸರುಗಳು. ಯಮ, ಅನಿಲ (=ವಾಯು), ಇಂದ್ರ – ಇವು ದಿಕ್ಪತಿಗಳ ಹೆಸರುಗಳು. ಅಶ್ವಿನಿ, ಚಿತ್ತೆ–ನಕ್ಷತ್ರಗಳ ಹೆಸರುಗಳು.]

'ಅಪ್ರತಿಮ ವೀರಚರಿತೆ' ಮತ್ತು 'ನರಪತಿ ವಿಜಯ'ಗಳಲ್ಲಿ ಗ್ರಂಥ ರಚನೆಗೆ ರಾಜಭಕ್ತಿ ಪ್ರೇರಣೆ ಕೊಟ್ಟಿರುವಂತೆ, ಈ ಗ್ರಂಥದಲ್ಲಿ ಕುಲದೇವತಾ ಭಕ್ತಿ ಸ್ಫೂರ್ತಿಕೊಟ್ಟಿದೆ.

**ರಸಪ್ರಕರಣ**

ಕಾವ್ಯಶಾಸ್ತ್ರದಲ್ಲಿ 'ರಸ' ಎಂಬ ಮಾತಿಗೆ ಅತ್ಯಂತ ಹೆಚ್ಚಿನ ಬೆಲೆಯಿದೆ. ಕಾವ್ಯ ರಸವತ್ತಾಗಿರಬೇಕು ಎಂಬ ಮಾತನ್ನು ಎಲ್ಲ ಲಾಕ್ಷಣಿಕರೂ ಒಪ್ಪಿಕೊಂಡಿದ್ದಾರೆ. ತಾನು ಬರೆದದ್ದು ರಸವತ್ತಾಗಿರಬೇಕು, 'ರಸಿಕ'ರು (ಎಂದರೆ ಕಾವ್ಯದ ಸ್ವರೂಪವನ್ನು ಅರಿತು, ಆನಂದ ಹೊಂದಬಲ್ಲವರು) ಇದನ್ನು ಕೇಳಿಯೋ ಓದಿಯೋ ಸಂತೋಷಪಡಬೇಕು, ಎಂದು ಎಲ್ಲ ಕವಿಗಳೂ ಬಯಸುತ್ತಾರೆ.

ವೇದ ಮತ್ತು ಉಪನಿಷತ್ತುಗಳಲ್ಲಿ ಸೋಮರಸ ಎಂಬ ಮಾತು ಬರುತ್ತದೆ. ನೀರಿಗೂ ರಸ ಎಂಬ ಮಾತು ಬಳಕೆಯಾಗಿದೆ. ಬ್ರಹ್ಮ ಸಾಕ್ಷಾತ್ಕಾರವನ್ನು (ಎಂದರೆ ಬ್ರಹ್ಮ ಸಾಕ್ಷಾತ್ಕಾರದ ಆನಂದವನ್ನು) ರಸ ಎಂದಿದೆ. (ರಸೋ ವೈ ಸಃ = ರಸವೇ ಅವನು).

'ರಸ' ಎನ್ನುವ ಮಾತು ಎಲ್ಲರಿಗೂ ಪರಿಚಿತವಾದುದು. ಭೋಜನ 'ಷಡ್ರಸೋಪೇತವಾಗಿರಬೇಕು (ಎಂದರೆ ಸಿಹಿ, ಉಪ್ಪು, ಹುಳಿ, ಕಾರ ಮುಂತಾದ 'ಆರು ಬಗೆಯ ರುಚಿಕರ ಗುಣ'ದಿಂದ ಕೂಡಿರಬೇಕು) ಎಂಬ ಮಾತು ರೂಢಿಯಾಗಿದೆ. ಹಾಗೆಯೇ ಕಾವ್ಯವನ್ನು ರುಚಿಕರವಾಗಿ ಮಾಡಬಲ್ಲ ಅದರ ಗುಣ ಅಥವಾ ಸ್ವಭಾವವನ್ನು ಕಾವ್ಯದ ರಸ ಎನ್ನಬಹುದು. ರಸವಿಲ್ಲದ ಕಾವ್ಯ ರುಚಿಕರವಾಗಿರುವುದಿಲ್ಲ. ಕಾವ್ಯದ ರಸವನ್ನು ಗುರುತಿಸಿ, ಅದನ್ನು ಸವಿಯುವ ಸಾಮರ್ಥ್ಯವೇ 'ಅಭಿರುಚಿ'. ಈ ಅಭಿರುಚಿಯನ್ನು ಅಭ್ಯಾಸದಿಂದ ಬೆಳಸಿಕೊಳ್ಳಬೇಕು.

ಶಾಸ್ತ್ರ ಗ್ರಂಥಗಳು ರಸವತ್ತಾಗಿರುವುದಿಲ್ಲ; ಹಾಗೆ ಇರಬೇಕಾದದ್ದೂ ಇಲ್ಲ. ಅವು ತಿಳುವಳಿಕೆ ಕೊಡತಕ್ಕವು. ಕಾವ್ಯಕ್ಕೂ ಶಾಸ್ತ್ರಗ್ರಂಥಕ್ಕೂ ಇರುವ ಮುಖ್ಯ ವ್ಯತ್ಯಾಸ ಈ ರಸವಂತಿಕೆ.

ಕ್ರೌಂಚ ಪಕ್ಷಿಗಳ ಜೋಡಿಯಲ್ಲಿ ಗಂಡು ಹಕ್ಕಿ ಬೇಡನೊಬ್ಬನ ಬಾಣದ ಹೊಡತದಿಂದ ಸತ್ತು ಕೆಳಕ್ಕೆ ಬಿದ್ದಾಗ, ಇನ್ನೊಂದು ಪಕ್ಷಿಯ ಸಂಕಟವನ್ನು ಕಂಡು ವಾಲ್ಮೀಕಿಗೆ ಶೋಕ ಉಕ್ಕಿ ಬಂತು. ಈ ಶೋಕವೇ ಶ್ಲೋಕ ರೂಪದಲ್ಲಿ ಹೊರಹೊಮ್ಮಿತು ಎಂಬ ರಾಮಾಯಣದ ಪ್ರಸಂಗ ಪ್ರಸಿದ್ಧವಾಗಿದೆ. ವಾಲ್ಮೀಕಿಯ ಶೋಕಕ್ಕೆ ಕಾರಣ ಪಕ್ಷಿಯ ಶೋಕ; ಈ ಶೋಕದ ಭಾವ ಶ್ಲೋಕದ ಕವಿತೆಯಲ್ಲಿ

ಕೇಳಿದ ಕೂಡಲೆ ಇದು ಸ್ತೋತ್ರ ಗ್ರಂಥವೆಂದು ಭಾಸವಾಗುತ್ತದೆ. ಈ ಗ್ರಂಥ ಪ್ರಕಟವಾದದ್ದು ೧೯೧೯ರಲ್ಲಿಯಾದರೂ, ೧೮೯೫ರ ಸುಮಾರಿನಲ್ಲಿ ರಚಿತವಾದಂತೆ ಕಂಡು ಬರುತ್ತದೆ. ಗ್ರಂಥಕರ್ತರು ತಮ್ಮ ವಿದ್ಯಾರ್ಥಿ ದೆಶೆಯಲ್ಲಿ ಸಂಸ್ಕೃತ 'ಕುವಲಯಾನಂದ'ವನ್ನು ಅಧ್ಯಯನ ಮಾಡುವ ಕಾಲದಲ್ಲಿ ಗುರುಗಳಾದ ವಿಶ್ವೇಶ್ವರ ಶಾಸ್ತ್ರಿಗಳ ಪಾಠ ಸಾಗುತ್ತಿದ್ದಂತೆ, "ಆ ಆ ದಿವಸದ ಪಾಠಕ್ಕೆ ಲಕ್ಷ್ಯವಾಗುವಂತೆ ಕುಲದೇವತೆಯಾದ ಲಕ್ಷ್ಮೀನೃಸಿಂಹನನ್ನು ಅಧಿಕರಿಸಿ ಕಂದ ಪದ್ಯಗಳನ್ನು "ರಚಿಸಿಕೊಂಡು ಬಂದರು. "ಹಾಗೆ ರಚಿತವಾದ ಪದ್ಯಗಳೆಲ್ಲವೂ ಸೇರಿ ಒಂದು ಗ್ರಂಥದಂತೆ ಆದುದರಿಂದ ಅದಕ್ಕೇನಾದರೂ ಒಂದು ಹೆಸರು ಬೇಡವೇ ಎಂದು ಲಕ್ಷ್ಮೀನೃಸಿಂಹ ಸ್ತೋತ್ರವೆಂದು ಕರೆದನು" ಎಂದು ಗ್ರಂಥಕರ್ತರು ತಿಳಿಸಿದ್ದಾರೆ. ಲಾಕ್ಷಣಿಕರು ತಮ್ಮ ಆಶ್ರಯದಾತರಾದ ರಾಜರನ್ನೇ ನಾಯಕರನ್ನಾಗಿ ಮಾಡಿಕೊಂಡು, ಅವರ ಗುಣಕಥನ ಮಾಡುವ ಲಕ್ಷ್ಯಪದ್ಯಗಳನ್ನು ರಚಿಸುತ್ತಿದ್ದ ಪದ್ಧತಿಯನ್ನು ಹಿಂದೆ ನೋಡಿದ್ದೇವೆ. ಎಲ್ಲ ಅಲಂಕಾರಗಳಿಗೂ ದೇವತಾಪರವಾದ ಉದಾಹರಣ ಪದ್ಯಗಳಿರುವುದು ಇದೊಂದು ಗ್ರಂಥದಲ್ಲಿಯೇ ಎಂದು ಕಾಣುತ್ತದೆ. ಲಕ್ಷಣಪದ್ಯಗಳಿಲ್ಲದಿರುವ ಕೊರತೆಯನ್ನು ನೀಗುವುದಕ್ಕಾಗಿ ಪ್ರತಿ ಅಲಂಕಾರದ ಲಕ್ಷಣವನ್ನೂ ಅತ್ಯಂತ ಸಂಕ್ಷೇಪವಾಗಿ, ತಿಳಿಯಾದ ಗದ್ಯದಲ್ಲಿ, ಗ್ರಂಥದ ಕಡೆಯಲ್ಲಿ 'ಅಲಂಕಾರ ಲಕ್ಷಣಂ' ಎಂಬ ಅನುಬಂಧದಲ್ಲಿ ಸೇರಿಸಿದ್ದಾರೆ.

ಗ್ರಂಥದಲ್ಲಿ ಅರ್ಥಾಲಂಕಾರದ ಲಕ್ಷ್ಯ ಪದ್ಯಗಳು ೧೦೦; ರಸಾಲಂಕಾರಗಳವು ೭; ಪ್ರಮಾಣಾಲಂಕಾರಗಳು ೮; ಸಂಸೃಷ್ಟಿ–ಸಂಕರಗಳು ೫ – ಹೀಗೆ ಒಟ್ಟು ೧೨೦ ಲಕ್ಷ್ಯ ಪದ್ಯಗಳೂ, ಇವಕ್ಕೆ ವಿವರಣೆಗಳೂ ನಿರೂಪಿತವಾಗಿವೆ.

'ಅನುಮಾನವೆಂಬ ಪ್ರಮಾಣದ ಲಕ್ಷ್ಯ ಪದ್ಯ:
"ಪಸರಿಸೆ ಕಳ್ತಲೆವೊಗೆ, ದಶ–
ದಿಶೆಗಳೊಳಂ ಮೆರೆಯೆ ತಾರಕಾಗ್ನಿ ಕಣಂಗಳ್
ಎಸೆಯಂ, ನೃಹರಿಶಿಖೆ ದಿವಿಜ–
ದ್ವಿಷರೊಡ್ಡಿಗೆ ಬಿಳ್ದುದರಿವೆನಗ್ನಿಯೆನುತ್ತುಂ."

[ಕತ್ತಲೆಯೆಂಬ ಹೊಗೆ ಹರಡಲು, ನಕ್ಷತ್ರಗಳೆಂಬ ಬೆಂಕಿಯ ಕಿಡಿಗಳು ಹತ್ತು ದಿಕ್ಕುಗಳಲ್ಲೂ ಮೆರೆಯಲು, ದೇವತೆಗಳ ಶತ್ರುಗಳ (ಎಂದರೆ ರಾಕ್ಷಸರ) ಸಮುದಾಯಕ್ಕೆ ನೃಸಿಂಹನ ಜುಟ್ಟು ಎಂಬ ಅಗ್ನಿ ಬಿದ್ದಿದೆಯೆಂದು ತಿಳಿಯುತ್ತೇನೆ.

ಕ್ರೋಧ, ಉತ್ಸಾಹ, ಭಯ, ಜಿಗುಪ್ಸೆ (ಅಸಹತೆ), ವಿಸ್ಮಯ (ಆಶ್ಚರ್ಯ); ಈ ಎಂಟು ಸ್ಥಾಯಿ ಭಾವಗಳೇ ಕ್ರಮವಾಗಿ ಈ ಹಿಂದೆ ಹೇಳಿದ ಎಂಟು ರಸಗಳಾಗಿ ಪರಿಮಿಸುತ್ತವೆ. ಶಮ (ಶಾಂತಿ) ದಿಂದ ಶಾಂತರಸ, ಸಂಚಾರಿ ಭಾವಗಳು ಮೂವತ್ತುಮೂರು.

ನಮ್ಮ ಚಿತ್ತವು ಕಲಕಿ 'ಭಾವ'ಗಳು ಉದ್ರೇಕಗೊಳ್ಳಬೇಕಾದರೆ, ಕಾರಣ ಬೇಕು. ಹೊರ ಜಗತ್ತಿನಲ್ಲಿ ನಡೆಯುವ ಸಂಗತಿಗಳು ಅಂತಹ ಕಾರಣಗಳು. ಇವುಗಳನ್ನು 'ವಿಭಾವ' ಎಂದು ಕರೆದಿದೆ. ಹುಲಿಯನ್ನು ಕಂಡಾಗ ನಮಗೆ ಭಯವಾಗುತ್ತದೆ. ಹುಲಿ ಭಯಕ್ಕೆ ಕಾರಣ, ಅಥವಾ ವಿಭಾವ; ಭಯ ಒಂದು ಚಿತ್ತವೃತ್ತಿ, ಭಾವ. ಭಯಪಡುವಿಕೆ ನಮ್ಮ ಮುಖ ಬಿಳಿಚಿಕೊಳ್ಳುವುದು (ವಿವರ್ಣತೆ), ಬೆವರುವುದು (ಸ್ವೇದ), ಕೈಕಾಲು ನಡುಗುವುದು (ವೇಪಥು) ಮುಂತಾದ ಕಾರ್ಯರೂಪದಲ್ಲಿ ಪ್ರಕಟವಾಗುತ್ತವೆ. ಈ ಭಾವಪ್ರಕಟನೆಯ ಕಾರ್ಯ 'ಸಾತ್ವಿಕ ಭಾವ' ಎಂದು ಹೆಸರು ಪಡೆದಿದೆ. ಇದಿಷ್ಟು ಲೋಕದ ವಿದ್ಯಮಾನ.

ಇವೇ ನಾಟ್ಯ ನಾಟಕಗಳಲ್ಲಿ ಅಭಿನಯಾದಿಗಳ ಮೂಲಕವೂ ಕಾವ್ಯಗಳಲ್ಲಿ ವರ್ಣನೆಯ ಮೂಲಕವೂ ಅನುಕರಣ ರೂಪದಲ್ಲಿ ಗೋಚರವಾಗುತ್ತವೆ. ಕಾವ್ಯ ಜಗತ್ತಿನಲ್ಲಿ ಸ್ಥಾಯಿ ಭಾವಗಳ ಕಾರಣ, ಸಹಚಾರಿ, ಕಾರ್ಯ ಇವುಗಳನ್ನು ವಿಭಾವ, ಸಂಚಾರಿ ಭಾವ, ಅನುಭಾವ ಎಂದು ಕರೆಯಲಾಗಿದೆ. ಸ್ಥಾಯಿ ಭಾವಗಳನ್ನು ಉಂಟುಮಾಡುವ ವಸ್ತು 'ಆಲಂಭನ ವಿಭಾವ' ಎಂದೂ, ಅದನ್ನು ಉದ್ರೇಕಗೊಳಿಸುವ ವಸ್ತು 'ಉದ್ದೀಪನ ವಿಭಾವ' ಎಂದು ನಿರ್ದಿಷ್ಟವಾಗಿವೆ.

ಈ ವಿಭಾವ, ಅನುಭಾವ, ಸಂಚಾರಿ ಭಾವಗಳ ಯಥೋಚಿತವಾದ ಸಂಯೋಗ ಅಥವಾ ಒಡಗೂಡುವಿಕೆ ರಂಗದ ಮೇಲೆ ಅಥವಾ ಕಾವ್ಯದಲ್ಲಿ ಏರ್ಪಟ್ಟಾಗ, ಅಲ್ಲಿನ ರತಿ ಮೊದಲಾದ ಸ್ಥಾಯಿ ಭಾವಗಳು ಗೋಚರಕ್ಕೆ ಬಂದು, ಪ್ರೇಕ್ಷಕ ಅಥವಾ ವಾಚಕನಲ್ಲೂ ಸಂಸ್ಕಾರ ರೂಪದಲ್ಲಿ ಹುದುಗಿರುವ ಆ ಭಾವಗಳು ಮೇಲಕ್ಕೆ ಬಂದು, ಅವನ್ನು 'ರಸ' ರೂಪದಲ್ಲಿ ಅವನು ಸವಿಯುತ್ತಾನೆ. ಕಾವ್ಯದ ರತಿ ಮುಂತಾದ ಭಾವಗಳು ಅವನಿಗೆ ನೇರವಾಗಿ ಸಂಬಂಧಪಡದೆ ಇರುವುದರಿಂದ (ಎಂದರೆ 'ಮಮತೆ' ಅಡ್ಡಿಯಾಗದೆ ಇರುವುದರಿಂದ) ಅವುಗಳನ್ನು 'ಸವಿ'ಯುವುದು ಸಾಧ್ಯ. ರಸ ಅನುಭವಕ್ಕೆ ಬರುವುದು ಕವಿ ಮತ್ತು ವಾಚಕರಲ್ಲಿ ಮಾತ್ರ.]

ಕಾಳಿದಾಸನೂ ಎಂಟೇ ರಸಗಳನ್ನು ಹೇಳಿದ್ದಾನೆ. ಕವಿರಾಜಮಾರ್ಗಕ್ಕಿಂತ ಹಿಂದೆ ಸಂಸ್ಕೃತ ಲಕ್ಷಣಕಾರರಾದ ದಂಡಿಮಹಾದಿಗಳು ಕೂಡ 'ನವರಸ'ಗಳ ಪ್ರಸ್ತಾಪ ಮಾಡಿಲ್ಲ. ಎಂಟು ರಸಗಳ ಜೊತೆಗೆ ಶಾಂತಸವನ್ನೂ ಒಂಬತ್ತನೆಯ

ಪ್ರಕಟವಾಯಿತು. ಆ ಶೋಕಭಾವವನ್ನು ನಾವು ಕವಿತೆಯಲ್ಲಿ ಅನುಭವಿಸಿದಾಗ, ವಾಲ್ಮೀಕಿ ಬೇಡನ ವಿಚಾರದಲ್ಲಿ ಕೋಪಗೊಂಡು ಹೆಣ್ಣು ಹಕ್ಕಿಯನ್ನು ಸಂತವಿಟ್ಟ ಹಾಗೆ ಸಂತವಿಡಲಾರೆವು. ಆದರೆ, ಎಂದೋ ಸತ್ತ ಹಕ್ಕಿಯ ಬಗ್ಗೆ ಮರುಕವುಂಟಾಗುತ್ತದೆ; ನಾವು ವಾಲ್ಮೀಕಿಯಂತೆ ಕಾರ್ಯಪ್ರವೃತ್ತವಾಗುವುದಿಲ್ಲ; ನಾವು ಅನುಭವಿಸುವ ಶೋಕದ ಭಾವ ಲೋಕದಲ್ಲಿ ಅನುಭವಿಸುವುದಾಗಿರದೆ, ಅನುಭವಿಸಿದ್ದು ಕರುಣರಸ. (ಆದಿಕಾವ್ಯವೆನಿಸಿದ ರಾಮಾಯಣವು ಕರುಣರಸ ಪ್ರಧಾನವಾದುದು.)

ಈ ರಸದ ವಿಚಾರವನ್ನು ಮೊತ್ತ ಮೊದಲು ಶಾಸ್ತ್ರೀಯವಾಗಿ ತಿಳಿಸಿದವನು ಭರತಮುನಿ; ತನ್ನ ನಾಟ್ಯಶಾಸ್ತ್ರದಲ್ಲಿ. ಆತ ರಸದ ವಿಚಾರವನ್ನೆಲ್ಲ ನಾಟ್ಯಕ್ಕೆ ಸಂಬಂಧಪಟ್ಟಂತೆ ವಿವರಿಸಿದ್ದಾನೆ. ಅವನ ಮತದಂತೆ ರಸಗಳು ಎಂಟು. ಅವು ಯಾವುವೆಂದರೆ – ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಭೀಭತ್ಸ, ಅದ್ಭುತ,. ಭರತನ ಅಭಿಪ್ರಾಯದಂತೆ ವಿಭಾವ, ಅನುಭಾವ, ವ್ಯಭಿಚಾರಿ (ಅಥವಾ ಸಂಚಾರಿ) ಭಾವಗಳ ಸಂಯೋಗದಿಂದ ರಸವು ಉತ್ಪತ್ತಿಯಾಗುತ್ತದೆ.

[ಭರತನು ತನ್ನ ಸೂತ್ರದಲ್ಲಿ ಸ್ಥಾಯೀಭಾವವನ್ನು ಸೇರಿಸಿಲ್ಲ. ಅದಕ್ಕೆ ಕಾರಣ ಏನೆಂಬ ವಿವರಣೆ ತೊಡಕಿನದಾದ್ದರಿಂದ, ಇಲ್ಲಿ ಅದರ ಚರ್ಚೆ ಭಾರವಾಗಬಹುದು. ಆದರೆ ಬೇರೆಯ ಸಂದರ್ಭದಲ್ಲಿ ಅದನ್ನವನು ಪ್ರಸ್ತಾಪಿಸುತ್ತಾನೆ. ರಸ ವಿಷಯಕವಾದ ಕನ್ನಡ ಲಕ್ಷಣ ಗ್ರಂಥಗಳ ಬಗೆಗೆ ವಿಚಾರ ಮಾಡುವಾಗ ಈ ಶಾಸ್ತ್ರೀಯ ಶಬ್ದಗಳು ಕಾಣಿಸಿಕೊಳ್ಳುವುದರಿಂದ ಅವುಗಳ ಸ್ವರೂಪವನ್ನು ಸಂಕ್ಷೇಪವಾಗಿ ಇಲ್ಲಿ ವಿವರಿಸಿದೆ:

ನಾವು ಸುಖದುಃಖಗಳನ್ನು ಅನುಭವಿಸುವಾಗ ನಮ್ಮ ಚಿತ್ತವು ಸಮುದ್ರದಂತೆ ಕಲುಕುತ್ತದೆ. ಅಲೆಗಳಂತೆ ವಿವಿಧ ವಿಕಾರಗಳು ಕಾಣಿಸಿಕೊಳ್ಳುತ್ತವೆ. ಚಿತ್ತವಿಕಾರವೇ 'ಚಿತ್ತವೃತ್ತಿ' ಅಥವಾ 'ಭಾವ'. ಸ್ಥಿರವಾಗಿ ಇರತಕ್ಕ ಇವು 'ಸ್ಥಾಯೀ ಭಾವಗಳು.' ಈ ಭಾವಗಳಲ್ಲಿ ಕೆಲವು ದೊಡ್ಡವು; ಇವುಗಳನ್ನು ಅನುಗೂಡಿ ಸಣ್ಣವು ಬಂದು ಹೋಗಿ ಮಾಡುತ್ತವೆ, ಸಂಚರಿಸುತ್ತಿರುತ್ತವೆ; ಇವು 'ಸಂಚಾರಿ' ಅಥವಾ 'ವ್ಯಭಿಚಾರಿ'ಭಾವಗಳು. ಉದಾಹರಣೆಗೆ ರಿತಿ (ಪ್ರೀತಿ) ಒಂದು ಸ್ಥಾಯೀ ಭಾವ; ಲಜ್ಜೆ, ಹರ್ಷ, ಅಸೂಯೆ, ಇವು ಅದನ್ನು ಅನುಸರಿಸಿ ಬರಬಹುದು. ಈ ಸ್ಥಾಯೀ ಭಾವಕ್ಕೂ ಸಂಚಾರಿ ಭಾವಕ್ಕೂ ಇರುವ ಸಂಬಂಧವನ್ನು ಭರತನು ರಾಜ–ಪ್ರಜೆಗಳ, ಗುರು–ಶಿಷ್ಯರ ಸಂಬಂಧಕ್ಕೆ ಹೋಲಿಸಿದ್ದಾನೆ. ಸ್ಥಾಯೀ ಭಾವಗಳು ಎಂಟು (ಅಥವಾ ಒಂಬತ್ತು); ರತಿ (ಪ್ರೀತಿ) ಹಾಸ್ಯ (ವಿನೋದ), ಶೋಕ,

ಪ್ರಾರ್ಥನೆಯಿದೆ. ಇದರಲ್ಲಿ ಗ್ರಂಥಕರ್ತನು ತನ್ನ ವಿಚಾರವನ್ನು ಸೂಚಿಸಿದ್ದಾನೆ. ಕವಿಕಾಮನು ರಮ್ಯವಾದ ಆಕಾರವುಳ್ಳವನು; ರಾಜರಿಗೆ ಪ್ರಿಯನಾದವನು; ಕಾಮತತ್ತ್ವವನ್ನು ಬಲ್ಲವನು. ಇವನು ಇನ್ನು ಕೆಲವು ಹೇಳಿಕೆಗಳಿಂದ, ಇವನು ಅನೇಕ ರಾಜರ ಆಸ್ಥಾನಗಳಲ್ಲಿ ಮನ್ನಣೆಗೆ ಪಾತ್ರನಾಗಿದ್ದನೆಂದು ಊಹಿಸಬಹುದು; ಅಲ್ಲದೆ, ಅವನು ಅಶುಕವಿಯೂ ವಾಗ್ಮಿಯೂ ಆಗಿದ್ದನು. ತಾನು, "ಶ್ರೀನಿಧಿ, ವಿವೇಕನಿಧಿ, ಕವಿತಾನಿಧಿ, ವಿದ್ಯಾನಿಧಿ, ಮಾನನಿಧಿ, ದಾನನಿಧಿ' ಎಂದು ಹೊಗಳಿಕೊಂಡಿದ್ದಾನೆ. ಕಾಮದೇವನು ವೈದಿಕ ಮತಾನುಯಾಯಿಯಾದ ಶೈವನೆಂದು ತೋರುತ್ತದೆ. ಶೃಂಗಾರ ಪರವಾದ ಅನೇಕ ಉದಾಹರಣ ಪದ್ಯಗಳಲ್ಲಿ ಕವಿಕಾಮನೇ ವರ್ಣಿತನಾದ ನಾಯಕನಾಗಿದ್ದಾನೆ. ಈ ವರ್ಣನೆಗಳ ವಿಷಯವೆಲ್ಲ ಕವಿಗೇ ಅನ್ವಯಿಸುತ್ತದೆಯೋ ಇಲ್ಲವೋ ಹೇಳುವುದು ಕಷ್ಟ. ಉದಾಹರಣೆಯಾಗಿ, ನಾಯಕನ (ಕವಿಯ) 'ಅವಧಾನ' (ಗಮನವಿಡುವುದು) ಸಾಮರ್ಥ್ಯವನ್ನು ವರ್ಣಿಸುವ ಈ ಪದ್ಯ ಸ್ವಾರಸ್ಯವಾಗಿದೆ. ನಾಯಿಕೆ ತನ್ನ ಚೇಟಿಗೆ ಹೀಗೆ ಹೇಳುತ್ತಾಳೆ:

"ಎಸೆಕಂಬೆತ್ತ ಮತಿ ಪ್ರಕಾಶಮಮಂ ಅದಂ ಇನ್ನೇನೆಂದೆಪೆಂ, ಚೇಟಿ; ನಾ-
ಲ್ದೆಸೆಯೊಳ್ ನಾಲ್ವರ ಕಂಠದೊಳ್ ಬರಯೆ ಕಬ್ಬಂಬೇಳ್ವಂ; ಒಲ್ದತ್ತಲ್ ಆ-
ಡಿಸುವಂ ನೆತ್ತಮಂ; ಇತ್ತಲೋದಿದೊಡೆ ತಪ್ಪಂ ಪೇಳದ್ದುದಂ ತಿರ್ದಿ, ಆ-
ಲಿಸುವಗೀತಮಂ; ಎನ್ನುವಂ, ನಗಿಸುವಂ, ಶೃಂಗಾರರತ್ನಾಕರಂ (೧-೫೮)

[ಎಲೆ ಚೇಟಿ, ಶೃಂಗಾರ ರತ್ನಾಕರನಲ್ಲಿ ಪ್ರಕಟವಾಗುವ ಬುದ್ಧಿಯ ಪ್ರಕಾಶವನ್ನು ಏನೆಂದು ಹೇಳಲಿ! ನಾಲ್ಕು ದಿಕ್ಕಿನಲ್ಲಿ ನಾಲ್ಕು ಮಂದಿ ಲೇಖಕರು ಕಂಠವನ್ನು ಹಿಡಿದು ಕುಳಿತಿರುವಾಗ ನಾಲ್ವರಿಗೂ ಏಕಕಾಲದಲ್ಲಿ ನಾಲ್ಕು ಕವಿತೆಯನ್ನು ಹೇಳಿ ಬರೆಯಿಸುವನು; ಆ ಕಡೆಯಲ್ಲಿ ಪಗಡೆ ಕಾಯಿ ನಡಸುವನು; ಈ ಕಡೆಯಲ್ಲಿ ಓದಿ ಹೇಳಿದ್ದರಲ್ಲಿ ತಪ್ಪನ್ನು ತಿದ್ದುವನು; ಗೀತವನ್ನು ಹಾಡುವನು; ಹಾಸ್ಯದ ಮಾತಾಡಿ ನನ್ನನ್ನೂ ನಗಿಸುವನು]

ನಮ್ಮ ನಾಡಿನಲ್ಲಿ 'ಅವದಾನಿ'ಗಳು, 'ಅಷ್ಟಾವದಾನಿ'ಗಳು, 'ಶತಾವದಾನಿ'ಗಳು ಇದ್ದರು; ಈಗಲೂ ಅಲ್ಲೊಬ್ಬರು ಇಲ್ಲೊಬ್ಬರು ಇದ್ದಾರೆ; ರಾಜಾಸ್ಥಾನಗಳಲ್ಲಿಯೂ ವಿದ್ವಾಂಸರ ಸಭೆಗಳಲ್ಲಿಯೂ ಇವರು ತಮ್ಮ ಸಾಮರ್ಥ್ಯವನ್ನು ಮೆರೆದು ಬಹುಮಾನ ಪಡೆಯುತ್ತಿದ್ದರು. ಆದ್ದರಿಂದ ಮೇಲ್ಕಂಡ ಪದ್ಯದಲ್ಲಿ ಕವಿ ಕಾಮನು ತನ್ನ ಸಾಮರ್ಥ್ಯವನ್ನೇ ವರ್ಣಿಸಿಕೊಂಡಿದ್ದರೆ ಆಶ್ಚರ್ಯವಿಲ್ಲ.

ಕವಿ ಮುಖಮಣಿಮುಕುರಂ, ನವರಸವಿಭಾಸಿ ಕವಿಮುಖ ಮುಕುರಂ, ಮದನಾಗಮ ಸೂತ್ರಧಾರ, ಕವಿತಾಪಿತಾಮಹ, ಸರಸ್ವತೀ ಮುಖತಿಲಕ, ವಾಚಕ

ರಸವಾಗಿ ಮೊತ್ತ ಮೊದಲು ಹೇಳಿದವನು ಕವಿರಾಜಮಾರ್ಗಕಾರನೆ. ಈ ಗ್ರಂಥಗಳಲ್ಲಿ ರಸತತ್ತ್ವದ ವಿವರಣೆ ಇಲ್ಲ. 'ರಸವತ್' ಎಂಬ ಅಲಂಕಾರವನ್ನು ಮಾತ್ರ ಹೇಳಿ, ಪ್ರತಿಯೊಂದಕ್ಕೂ ಒಂದೊಂದು ಉದಾಹರಣೆಯನ್ನು ಕೊಡಲಾಗಿದೆ. "ನವವಿಧ ರಸಂಗಳಂ ಮನಕೆವರೆ ನಿರೂಪಿಸುವ ವಚನವಿರಚನೆ ರಸವದ್ ವಿವಿಧಾಳಂಕಾರಂ"–ಎಂಬುದಿಷ್ಟೇ ಕವಿರಾಜಮಾರ್ಗದಲ್ಲಿ ಕೊಟ್ಟಿರುವ ರಸವದಲಂಕಾರದ ವಿವರಣೆ. ರೌದ್ರರಸದ ಈ ಉದಾಹರಣೆಯನ್ನು ನೋಡಿ:

ಕೊಂದು ಜಟಾಯುವಂ ಆತಂ
ಮುಂದಿಟ್ಟು ಆ ಜನಕ ಸುತಯಂ ಒಯ್ದುಂ ಮತ್ತಾ
ಪಂದೆಯಂ ಅಂತಕಮೂಕದೊಳ್
ತಂದಿಟ್ಟಂದಲ್ಲದೆ, ಉಳಿಗುಮೇ ರೌದ್ರರಸಂ.

[ಪಂದೆ=ಹೇಡಿ; ಅಂತಕ ಮುಖ=ಯಮನ ಬಾಯಿ.]

ರಾಮಾಯಣದ ಕಥೆಗೆ ಸಂಬಂಧಿಸಿದ ಈ ಪದ್ಯದಲ್ಲಿ (ಬಹುಶಃ) ರಾವಣನ ಬಗೆಗೆ ರಾಮನು ಉಗ್ರ ಕ್ರೋಧ (ಕೋಪ) ವನ್ನು ತಳೆದು ಪ್ರತಿಜ್ಞೆ ಮಾಡಿದ್ದನ್ನು ವರ್ಣಿಸಿದೆ.

ನಾಗವರ್ಮನು ರಸ ವಿಚಾರವನ್ನು ಚರ್ಚಿಸದಿದ್ದರೂ ರಸವೇ ಕಾವ್ಯದ ಜೀವ ಎಂದು ಹೇಳಿರುವುದನ್ನು ಈ ಮೊದಲೇ ಗಮನಿಸಿದ್ದೇವೆ. ಅವನು ಎಂಟು ರಸಗಳನ್ನೂ, ಅವುಗಳ ಸ್ಥಾಯಿಭಾವಗಳನ್ನೂ ತಿಳಿಸಿ, ಅವಕ್ಕೆ ಉದಾಹರಣೆಗಳನ್ನೂ ಕೊಟ್ಟು, ರಸ ವಿಚಾರವನ್ನು ಭರತನೆ ನಾಟ್ಯ ಶಾಸ್ತ್ರದಲ್ಲಿ ತಿಳಿಯಬೇಕು ಎಂದು ಸೂಚಿಸಿದ್ದಾನೆ, ಅಷ್ಟೆ.

### ಶೃಂಗಾರ ರತ್ನಾಕರ

ಮೊತ್ತ ಮೊದಲಿಗೆ ರಸತತ್ತ್ವವನ್ನು ವಿವರಿಸುವ ಗ್ರಂಥವೆಂದರೆ ಕವಿ ಕಾಮನ 'ಶೃಂಗಾರ ರತ್ನಾಕರ'. ಇದಕ್ಕೆ 'ರಸವಿವೇಕ' ಎಂಬ ಇನ್ನೊಂದು ಹೆಸರೂ ಉಂಟು. ಇವನ ಕಾಲವನ್ನು ಸುಮಾರು ೧೧೦೦–೧೨೦೦ ರ ನಡುವಣ ಕಾಲ ಎಂದು ಊಹಿಸಬಹುದು. ಕಾಮನ ಪೂರ್ತಿಯಾದ ಹೆಸರು ಕಾಮದೇವ. ಗ್ರಂಥದ ಮೊದಲ ಮಂಗಳ ಶ್ಲೋಕದಲ್ಲಿ ಪ್ರೇಮದ ಅಧಿದೇವತೆಯಾದ ಕಾಮನ

ಎಣಿಕೆಯಾಗಿದೆ. ಭೋಜನ ಅಭಿಪ್ರಾಯದಂತೆ, ಶೃಂಗಾರವೇ ಎಲ್ಲ ರಸಗಳಿಗೂ ಮೂಲ. ಈ ವಿಚಾರಸಾರ ಕವಿ ಕಾಮನ ಮಾತುಗಳಲ್ಲಿ ಚೆನ್ನಾಗಿ ವ್ಯಕ್ತ ಪಟ್ಟಿದೆ:

ಶೃಂಗಾರರಸಂ ಮಿಕ್ಕ ರ–
ಸಂಗಳ್ಗೆ ಅಧಿದೈವಂ, ಅದನೆ ನರರ್ ಓಲಗಿಪರ್;
ಪಂಗದೆ ರೂಪಾಯವ ಸು–
ಸಂಗತ ಯೌವನ ಮಹತ್ತುರಂಗಾರೂಢಂ (೧–೨೩)

[ಶೃಂಗಾರರಸವೇ ಉಳಿದೆಲ್ಲ ರಸಗಳಿಗೂ ಅಧಿದೈವ. ಮನುಷ್ಯರು ಸೇವಿಸುವುದು ಅದನ್ನೇ, ಒಳ್ಳೆಯ ರೂಪ, ಪುಷ್ಟವಾದ ಅವಯವಗಳು, ಇವಕ್ಕೆ ಹೊಂದಿಕೊಂಡ ಯೌವನ ಎಂಬ ಕುದುರೆಯ ಮೇಲೆ ಕುಳಿತಿದೆ.]

ಇದು ಕೇವಲ ಶಾಸ್ತ್ರದ ಮಾತಲ್ಲ. ಲೋಕಾನುಭವದ, ಪ್ರಕೃತಿ ನಿಯಮದ ಅರಿವಿನ, ಮಾತು ಕೂಡ ಆಗಿದೆ.

"ಆದ್ದರಿಂದ, ಶೃಂಗಾರ ರಸ ಪ್ರೀತಿ ಸಕಲ ಜನಕ್ಕೂ ಸಾಧಾರಣವಾಗಿರುವುದರಿಂದ, ಮೊದಲಲ್ಲೆ ಶೃಂಗಾರರಸದ ಬೇರೆ ಬೇರೆ ವಿಭಾಗಗಳನ್ನು ವರ್ಣಿಸುತ್ತೇನೆ." ಎಂದು ಶೃಂಗಾರರಸಕ್ಕೆ ಪ್ರಾಶಸ್ತ್ಯ ಕೊಟ್ಟಿರುವುದಕ್ಕೆ ಕಾರಣವನ್ನು ತಿಳಿಸುತ್ತಾನೆ ಕವಿಕಾಮ.

ರಸೋತ್ಪತ್ತಿಯ ವಿಚಾರದಲ್ಲಿ ಇವನು ಈ ಹಿಂದೆಯೇ ಪ್ರಸ್ತಾಪಿಸಿರುವ ಭರತನ ಅಭಿಪ್ರಾಯವನ್ನು ಅನುಸರಿಸಿಲ್ಲ. ಕೆಲವು ಅಂಶಗಳಲ್ಲಿ ಭೋಜನ ಮತವನ್ನು ಅಂಗೀಕರಿಸಿರುವಂತೆ ಕಾಣುತ್ತದೆ.

ಕವಿಕಾಮನ ವಿಚಾರಮಾರ್ಗ ಹೀಗಿದೆ:

ಶೃಂಗಾರದಿಂದ ಹಾಸ್ಯವೂ, ರೌದ್ರದಿಂದ ಕರುಣವೂ, ವೀರದಿಂದ ಅದ್ಭುತವೂ, ಭೀಭತ್ಸದಿಂದ ಭಯಾನಕವೂ ಹುಟ್ಟುವವು ಎಂದು ಹೇಳಿ, ಈ ರಸಗಳ ವರ್ಣಗಳನ್ನೂ ಅಧಿದೈವಗಳನ್ನೂ ಹೆಸರಿಸುತ್ತಾನೆ. ಉದಾಹರಣೆಗೆ ಶೃಂಗಾರದ ಬಣ್ಣ ಕಪ್ಪು, ದೈವ ಹರಿ, ಬಳಿಕ, ರಸೋತ್ಪತ್ತಿಯ ವಿಚಾರ ತಿಳಿಸುತ್ತಾನೆ.

ಪಂಚಭೂತಗಳಿಂದ ಆಗಿರುವ ಶರೀರದಲ್ಲಿ ಜೀವ (ಆತ್ಮ); ಆ ಜೀವನು ಅಂತಃಕರಣದ ಮೂಲಕ ಕಾರ್ಯ ಮಾಡುತ್ತಾನೆ. ಆ ಅಂತಃಕರಣ ಮನಸು, ಬುದ್ಧಿ, ಅಹಂಕಾರ, ಚಿತ್ತಗಳಿಂದ ಕೂಡಿದೆ; ಚಿತ್ತದಿಂದ ಭಾವ; ಭಾವದಿಂದ ರಸಗಳು; ರಸವನ್ನು ವಕ್ತ್ರ (ಮುಖ) ಪ್ರಕಟಿಸುತ್ತದೆ; ಮುಖಭಂಗಿಯ ಭೇದದಿಂದ

ವಾಚಸ್ಪತಿ, ಗದ್ಯಪದ್ಯವಿದ್ಯಾಧರ, ಶೃಂಗಾರರತ್ನಾಕರ, ಎಂದು ಮೊದಲಾಗಿ ಕವಿಕಾಮನು ಅನೇಕ ಬಿರುದುಗಳನ್ನು ಹೇಳಿಕೊಂಡಿದ್ದಾನೆ. ತನ್ನ ಒಂದು ಬಿರುದನ್ನೇ ಗ್ರಂಥದ ಹೆಸರಾಗಿ ಇಟ್ಟಿದ್ದಾನೆ. ಸಂಸ್ಕೃತದಲ್ಲಿ 'ಶೃಂಗಾರ ಪ್ರಕಾಶ' ಎಂಬ ಅಲಂಕಾರ ಗ್ರಂಥವನ್ನು ಬರೆದಿರುವ ಭೋಜರಾಜನೂ (೧೦೧೦–೧೦೬೩) ತನ್ನ ಒಂದು ಬಿರುದನ್ನೇ ಗ್ರಂಥನಾಮವನ್ನಾಗಿ ಮಾಡಿದ್ದಾನೆ. ಈ ವಿಚಾರದಲ್ಲಿ, ಮತ್ತು ಇನ್ನೂ ಕೆಲವು ವಿಚಾರಗಳಲ್ಲಿ ಕವಿಕಾಮನು ಭೋಜನನ್ನು ಅನುಸರಿಸಿರುವಂತೆ ಕಾಣುತ್ತದೆ. ಸಾಳ್ವನು ತನ್ನ 'ರಸರತ್ನಾಕರ'ದಲ್ಲಿ ಶೃಂಗಾರ ರತ್ನಾಕರದಿಂದ ಸುಮಾರು ೬೫ ಪದ್ಯಗಳನ್ನು ತೆಗೆದುಕೊಂಡಿದ್ದಾನೆ. 'ನವರಸಾಲಂಕಾರ'ವನ್ನು ಬರೆದಿರುವ ತಿಮ್ಮನೂ ಈ ಕೃತಿಯಿಂದ ಅನೇಕ ಪದ್ಯಗಳನ್ನು ಸ್ವೀಕರಿಸಿರುವುದಾಗಿ ತಿಳಿದು ಬರುತ್ತದೆ. ಇದರಿಂದ, ಮುಂದಿನ ರಸ ಶಾಸ್ತ್ರಗ್ರಂಥಕರ್ತರ ಮೇಲೆ ಕವಿಕಾಮನು ಬೀರಿರುವ ಪ್ರಭಾವ ಎಷ್ಟೆಂಬುದು ಗೊತ್ತಾಗುತ್ತದೆ... ಈ ಕಾರಣದಿಂದಲೂ, ಶೃಂಗಾರರತ್ನಾಕರವು ಮೊತ್ತ ಮೊದಲನೆಯ ರಸಶಾಸ್ತ್ರಗ್ರಂಥವಾಗಿರುವುದರಿಂದಲೂ ಕನ್ನಡ ಲಕ್ಷಣ ಗ್ರಂಥಗಳ ಚರಿತ್ರೆಯಲ್ಲಿ ಇದರ ಸ್ಥಾನ ವಿಶೇಷ ರೀತಿಯದು; ಬೆಲೆಯುಳ್ಳದ್ದು. ಪಾರ್ಶ್ವಪಂಡಿತನು (ಕ್ರಿ.ಶ.೧೨೦೫) ಕವಿಕಾಮನನ್ನು ಹೊಗಳುವ ಪದ್ಯವೊಂದರಲ್ಲಿ ಅವನ 'ಸ್ತನಶತಕ' ಎಂಬ ಗ್ರಂಥದ ಹೆಸರು ಹೇಳಿದ್ದಾನೆ. ಈ ಕೃತಿ ದೊರೆತಿಲ್ಲ. ತಾನು 'ಗದ್ಯಪದ್ಯ ವಿದ್ಯಾಧರ' ಎಂದು ಹೇಳಿಕೊಂಡಿರುವುದರಿಂದ, ಕವಿಕಾಮನು ಇನ್ನೂ ಕೆಲವು ಕೃತಿಗಳನ್ನು ರಚಿಸಿರಬಹುದು.

**ಕೃತಿಪರಿಚಯ**: ರಸತತ್ತ್ವವನ್ನು ನಿರೂಪಿಸಿರುವ ಈ ಗ್ರಂಥದಲ್ಲಿ "ರಸಮಂ ಕಾವ್ಯಂಗಳೊಳ್ ರಂಜಿಸಬಲ್ಲಾತನೆ... ವಿಖ್ಯಾತಿಯಂ ತಾಳ್ದುಗುಂ". "ರಸಮೆ ಮೊದಲ್ ಕವಿತೆಗೆ", "ರಸಯುಕ್ತರ ಸಭೆಯೊಳ್ ರಂಜಿಸಲರಿಯದ, ಕವಿತೆ ವಿರಸಮಂ ಪುಟ್ಟಿಸುಗುಂ", – ಎಂದು ಮುಂತಾಗಿ ಕಾವ್ಯದಲ್ಲಿ ರಸದ ಪ್ರಾಶಸ್ತ್ಯವನ್ನು ಎತ್ತಿ ಹಿಡಿದಿರುವುದು ಉಚಿತವಾಗಿದೆ. ಕನ್ನಡದಲ್ಲಿ ಆಗಿ ಬಂದ ಅಲಂಕಾರಶಾಸ್ತ್ರದ ಬೆಳವಣಿಗೆಯಲ್ಲಿ ಈ ಮಾತು ಒಂದು ಬಹು ಮುಖ್ಯವಾದ ಘಟ್ಟವನ್ನು ಗುರುತಿಸುತ್ತದೆ. ಅಲ್ಲದೆ, ಈ ಕೃತಿಯಲ್ಲಿ ಶೃಂಗಾರರಸಕ್ಕೆ ಪ್ರಾಧಾನ್ಯ ಕೊಟ್ಟಿರುವುದು ಕವಿ ಶೃಂಗಾರರಸಪ್ರಿಯ ಎನ್ನುವುದನ್ನು ಸೂಚಿಸುವುದಲ್ಲದೆ, ೧೦–೧೧ ನೆಯ ಶತಮಾನಗಳಲ್ಲಿ ವೀರರಸಕ್ಕೂ ಶಾಂತರಸಕ್ಕೂ ಇದ್ದ ಪ್ರಾಧಾನ್ಯ ಕುಗ್ಗಿ, ಶೃಂಗಾರರಸ ಕವಿಗಳಿಗೂ ಜನಕ್ಕೂ ಹೆಚ್ಚು ಪ್ರಿಯವಾಗಿ ಪರಿಣಮಿಸಿದ್ದನ್ನೂ ಸೂಚಿಸುತ್ತದೆ. ವಿಚಾರಮಾಡಿ ನೋಡಿದರೆ, ಶೃಂಗಾರ ಎಲ್ಲ ಕಾಲಗಳಲ್ಲಿಯೂ ಜನಪ್ರಿಯವಾದ ರಸ, ಧರ್ಮ ಅರ್ಥ ಕಾಮ ಮೋಕ್ಷಗಳಲ್ಲಿ, ಕಾಮವೂ ಒಂದು ಪುರುಷಾರ್ಥವಾಗಿ

ಎಂಟು ಸಾತ್ವಿಕ ಭಾವಗಳ, ಮೂವತ್ತು ಮೂರು ಸಂಚಾರಿ ಭಾವಗಳ ನಿರೂಪಣೆಗೆ ಮೀಸಲಾಗಿದೆ. ಕೊನೆಯಲ್ಲಿ, ಹತ್ತು ವಿಧಗಳಾದ ಶೃಂಗಾರ ಚೇಷ್ಟೆಗಳ ವಿವರಣೆಯಿದೆ. ಮೊದಲ ಪರಿಚ್ಛೇದದಲ್ಲಿ ನವರಸಗಳ ಪ್ರಸ್ತಾಪವಿದ್ದರೂ, ಶಾಂತರಸ ಶಾಸ್ತ್ರ ಸಮ್ಮತವಲ್ಲ ಎಂದು ಸ್ಪಷ್ಟವಾಗಿ ಹೇಳಿಬಿಟ್ಟಿದ್ದಾನೆ. ಸಾತ್ವಿಕ ಭಾವಗಳನ್ನು ಶೃಂಗಾರಕ್ಕೆ ಸಂಬಂಧಪಟ್ಟ ಲಕ್ಷ್ಯ ಪದ್ಯಗಳ ಮೂಲಕವೇ ನಿರೂಪಿಸಿರುವುದು ಗ್ರಂಥದ ಆಶಯಕ್ಕೆ ಅನುಗುಣವಾಗಿದೆ.

'ಅಶ್ರು' (ಕಣ್ಣೀರು) ಸಾತ್ವಿಕ ಭಾವಕ್ಕೆ ಉದಾಹರಣೆ:

ಕಡುಮುಳಿದ ನಲ್ಲನಂ ಕಾ–
ಲ್ವಿಡಿದುಂ ಲಲ್ಲೈಸಿ ನುಡಿದುಂ ಆರದೆ ತಿಳಿಪಲ್
ನಿಡುಸುಯ್ದು ಕಾಂತೆ ನಲ್ಮೆಗೆ
ಮುಡಿಗಿಕ್ಕುವ ತೆರದಿನಿಕ್ಕಿದಳ್ ಕಣ್ಬನಿಯಂ

[ಕಾಲು ಹಿಡಿದುಕೊಂಡು, ಮುದ್ದು ಮಾತುಗಳನ್ನಾಡಿ, ಕೋಪಗೊಂಡಿದ್ದ ಪ್ರಿಯನನ್ನು ಸಮಾಧಾನಪಡಿಸಲು ಕಾಂತೆ ಪ್ರಯತ್ನಪಟ್ಟಳು. ಯಾವುದೂ ಫಲಕಾರಿಯಾಗದಿರಲು, ನಿಟ್ಟುಸಿರುಬಿಟ್ಟು, ಪ್ರೇಮಕ್ಕೆ ಮುಡಿಪು ಕಟ್ಟುವ ರೀತಿಯಲ್ಲಿ ಕಣ್ಣೀರು ಸುರಿಸಿದಳು.]

ಮೂರನೆಯ ಪರಿಚ್ಛೇದದಲ್ಲಿ 'ನಾಯಕ ನಾಯಿಕಾ' ಭೇದಗಳ ನಿರೂಪಣೆಯಿದೆ. ನಾಯಕ ನಾಲ್ಕು ಬಗೆ; ಅನುಕೂಲ ನಾಯಕ, ದಕ್ಷಿಣ ನಾಯಕ, ಕುಟಿಲ ನಾಯಕ, ಧೃಷ್ಟನಾಯಕ, ನಾಯಿಕೆಯಲ್ಲಿ ಸ್ವೀಯೆ (ಸ್ವಂತದವಳು), ಪರಕೀಯ, ಪಣ್ಯೆ (ಬೆಲೆವೆಣ್ಣು) ಎಂದು ಮೂರು ಮುಖ್ಯ ಭೇದಗಳು ನಾಯಿಕೆಯರಲ್ಲಿ ಉತ್ತಮ, ಜಘನ್ಯ (ಕೀಳಾದವಳು) ಎಂದು ಮತ್ತೆ ಎರಡು ಭೇದಗಳು. ಈ ನಾಯಿಕೆಯರಲ್ಲಿ ಒಳಭೇದಗಳೂ ಉಂಟು. ಒಟ್ಟು ನಾಯಿಕಾ ಸಂಖ್ಯೆ ೧೬. ಇವರಲ್ಲಿ ೮ ಅವಸ್ಥೆಗಳು ವರ್ಣಿತವಾಗಿವೆ; ಸ್ವಾಧೀನ ಪತಿಕೆ, ಖಂಡಿತೆ, ಅಭಿಸಾರಿಕೆ, ಇತ್ಯಾದಿ. 'ಅಭಿಸಾರಿಕೆ' ಎಂಬ ನಾಯಿಕಾಭೇದ ಕಾವ್ಯಪ್ರಪಂಚದಲ್ಲಿ ಪ್ರಸಿದ್ಧ. ಅಭಿಸಾರಿಕೆ ಎಂದರೆ ತನಾಗಿ ಒಲಿದು ಪ್ರಿಯನ ಬಳಿಗೆ ಹೋಗುವವಳು. ಅವಳ ಸ್ವರೂಪ ಹೀಗೆ:

ರಸಭೇದವನ್ನು ತಿಳಿಯಬೇಕು.

(ಕಥಾನಾಯಕನ ಅಥವಾ ನಟನ) ಮುಖದಲ್ಲಿ 'ರಸ' ಪ್ರಕಟವಾಗುತ್ತದೆ ಎಂಬ ಕವಿಕಾಮನ ಅಭಿಪ್ರಾಯ ಶಾಸ್ತ್ರಸಮ್ಮತವಲ್ಲ. ಮುಖದಲ್ಲಿ ಪ್ರಕಟವಾಗುವುದು 'ಭಾವ'.

ಆದರೆ, ಭಾವವನ್ನು ಪ್ರಕಟಿಸುವುದರಲ್ಲಿ ಎಲ್ಲ ಅಂಗಗಳಿಗಿಂತ ಮುಖದ ಪಾತ್ರ ಹಿರಿದು, ಇದನ್ನು ಅವನು ಎತ್ತಿ ಹೇಳಿರುವುದು ಉಚಿತವಾಗಿದೆ. ಈ ಸಂದರ್ಭದಲ್ಲಿ Face is the index of mind (ಮುಖ ಮನಸ್ಸಿನ ಕನ್ನಡಿ) ಎಂಬ ಇಂಗ್ಲೀಷ್ ಸೂಕ್ತಿಯನ್ನು ಜ್ಞಾಪಿಸಿಕೊಳ್ಳಬಹುದು.

ಇನ್ನು ಶೃಂಗಾರರಸದ ವಿಚಾರಕ್ಕೆ ಬಂದರೆ, 'ಮುದ' ಎಂದರೆ 'ಸಂತೋಷ' ಎಂಬ ಚಿತ್ತವೃತ್ತಿಯಿಂದ ಮುಖಕಮಲ ಅರಳುವುದೇ ಶೃಂಗಾರ ಎಂದು ಹೇಳಿ, ವಾಗ್ವೃತ್ತಿ, ನೈಪಥ್ಯ, ಕ್ರಿಯಾತ್ಮಕ, ಸಂಕೀರ್ಣ, ವ್ಯಸ್ತ ಎಂದು ಶೃಂಗಾರದ ಐದು ಬಗೆಗಳನ್ನು ಉದಾಹರಣೆಗಳೊಡನೆ ವಿವರಿಸುತ್ತಾನೆ. ಸಂತೋಷದಿಂದ ತನ್ನ ಶೃಂಗಾರವನ್ನು ಮಾತಿನ ಮೂಲಕ ಇನ್ನೊಬ್ಬರಿಗೆ ವಿವರಿಸುವುದು ವಾಗ್ವೃತ್ತಿ; ಒಡವೆ, ಮಾಲ್ಯ, ಗಂಧಲೇಪ, ವಸ್ತ್ರಾಲಂಕಾರ – ಇವುಗಳ ಮೂಲಕ ಶೃಂಗಾರವನ್ನು ತೋರ್ಪಡಿಸುವುದು ನೈಪಥ್ಯ; ಕಾರ್ಯತಃ ತೋರ್ಪಡಿಸುವುದು ಕ್ರಿಯಾತ್ಮಕ; ಶೃಂಗಾರ ರಸದಲ್ಲಿ ಬೇರೆ ರಸಗಳು (ಹಾಸ್ಯ, ಮುಂತಾದವು) ಬೆರಸಿ ಬಂದರೆ ವ್ಯಸ್ತ, ವಾಗ್ವೃತ್ತಿ, ನೈಪಥ್ಯ, ಕ್ರಿಯಾತ್ಮಕ – ಇವುಗಳು ಮಿಶ್ರವಾದರೆ ಸಂಕೀರ್ಣ. ಈ ಹಿಂದೆ ಉದಾಹರಿಸಿರುವ 'ಅವಧಾನ' ಸಾಮರ್ಥ್ಯವನ್ನು ವರ್ಣಿಸುವ ಪದ್ಯ 'ವ್ಯಸ್ತ' ಶೃಂಗಾರಕ್ಕೆ ಲಕ್ಷ್ಯ ಪದ್ಯವಾಗಿದೆ.

ಉಳಿದ ರಸಗಳ ವಿಚಾರದಲ್ಲಿ ಮೂರು ಬಗೆಗಳನ್ನು ಮಾತ್ರ ಹೇಳಿದೆ. ವಾಕ್ (ಮಾತು), ರೂಪಕ ಮತ್ತು ಕ್ರಿಯೆ. "ನುಡಿ (=ವಾಕ್) ಉಚ್ಚಾರಣೆ; ನುಡಿಯದೆ ನಿಜದಿಂದಂ (ಎಂದರೆ ಸ್ವರೂಪದಿಂದ) ಅರಿಪೆ ರೂಪಕಂ; ಮಾಡಿ ತೋರ್ಪೊಡೆ ಕ್ರಿಯಾ" (೧–೬೫). ಈ ಎಲ್ಲ ಪ್ರಕಾರಗಳಿಗೂ ಉದಾಹರಣೆಗಳನ್ನು ಕೊಟ್ಟು, ಪರಸ್ಪರ ವಿರುದ್ಧ ರಸಗಳನ್ನು ಹೆಸರಿಸಿ, ಒಂಬತ್ತು ಸ್ಥಾಯಿಭಾವಗಳನ್ನೂ ಅವುಗಳಿಂದ ಹುಟ್ಟುವ ಒಂಬತ್ತು ರಸಗಳನ್ನೂ ಹೆಸರಿಸಿ, "ರಸಮಂ ಕಾವ್ಯಗಳೊಳ್ ಕೂಡಿ ರಂಜಿಸಬಲ್ಲಾತನೆ ಸತ್ಕವೀಂದ್ರ ಜನತಾ ವಿಖ್ಯಾತಿಯಂ ತಾಳ್ದುಗುಂ". "ರಸಮೆ ಮೊದಲ್ ಕವಿತೆಗೆ" ಎಂದು ರಸದ ಪ್ರಶಸ್ತಿಯೊಂದಿಗೆ ಮೊದಲ ಪರಿಚ್ಛೇದವನ್ನು ಕವಿ ಕಾಮನು ಮುಗಿಸಿದ್ದಾನೆ.

ಎರಡನೆಯ ಪರಿಚ್ಛೇದವು ಮುಖ್ಯವಾಗಿ ಎಂಟು ಸ್ಥಾಯೀಭಾವಗಳ,

ಇಂದುವರಂ ಅರುಂ ಈ ತೆರ
ದಿಂದಂ ಕನ್ನಡದೊಳ್ ಆರ್ಯರ್ 'ಆ' ಎಂಬಿನಂ ಒ–
ಳ್ಪಿಂದೆ ವಿವರಿಸಿದುದಿಲ್ಲ ಎನೆ,
ಚಂದದೆ ಬಿಚ್ಚಳಿಸಿ ರಚಿಸಿದಂ ಕವಿಸಾಳ್ವಂ. (೪–೨೬)

[ಆರ್ಯ=ಶ್ರೇಷ್ಠ, ಒಳ್ಪಿಂದೆ=ಚೆನ್ನಾಗಿ. ಬಿಚ್ಚಳಿಸಿ=ವಿಸ್ತರಿಸಿ.]

ಸಾಳ್ವನು ಜೈನನೆಂಬ ಸಂಗತಿ ಅವನ ಗ್ರಂಥದಿಂದಲೇ ತಿಳಿದು ಬರುತ್ತದೆ. ಈ ಗ್ರಂಥವನ್ನಲ್ಲದೆ ಇವನು 'ಭಾರತ', 'ವೈದ್ಯಸಾಂಗತ್ಯ' ಎಂಬ ಗ್ರಂಥಗಳನ್ನೂ ಬರೆದಿದ್ದಾನೆ. ಧ್ವನಿತತ್ತ್ವವನ್ನು ವಿವರಿಸುವ 'ಶಾರದಾವಿಲಾಸ' ಎಂಬ ಗ್ರಂಥವೂ ಇವನದ್ದೆಂದೇ ಊಹಿಸಲಾಗಿದೆ. ತೌಳವ, ಹೈವ, ಕೊಂಕಣ ದೇಶಗಳನ್ನು ಆಳುತ್ತಿದ್ದ ಮಹಾಮಂಡಲೇಶ್ವರ ಭೈರವರಾಯನ ವಂಶಸ್ಥನಾದ ವಸುದಾನಮೇರು ಎಂಬ ಅರಸು ಸಾಳ್ವಮಲ್ಲ ಎಂಬ ಹೆಸರಿನಿಂದ ಆಳುತ್ತಿದ್ದನು. ಕವಿಸಾಳ್ವನು ಈ ದೊರೆಯ ಆಸ್ಥಾನ ಕವಿಯಾಗಿದ್ದನು. ಇವನ ಕಾಲ ಸುಮಾರು ೧೫೫೦ ಎಂದು ಕವಿ ಚರಿತೆಕಾರರು ನಿಶ್ಚಯಿಸಿದ್ದಾರೆ.

ಸಾಳ್ವನು ತನಗಿಂತ ಹಿಂದಿನ ಅನೇಕ ಸಂಸ್ಕೃತ ಕನ್ನಡ ಅಲಂಕಾರ ಗ್ರಂಥಗಳನ್ನು ಆಧಾರವಾಗಿಟ್ಟುಕೊಂಡು ತನ್ನ ಗ್ರಂಥವನ್ನು ರಚಿಸಿದ್ದಾನೆ. ಗ್ರಂಥಾರಂಭದಲ್ಲಿ, ಅಮೃತಾನಂದಿ, ವಿದ್ಯಾನಾಥ, ಹೇಮಚಂದ್ರ, ರುದ್ರಭಟ್ಟ – ಇವರ ಹೆಸರುಗಳನ್ನು ಸ್ಮರಿಸಿ, ನಾಗವರ್ಮ ಕವಿ ಕಾಮಾದಿಗಳ ಮಾರ್ಗವನ್ನೂ ಅನುಸರಿಸಿ ಗ್ರಂಥ ರಚನೆ ಮಾಡಿರುವುದಾಗಿ ತಿಳಿಸಿದ್ದಾನೆ. ಮೊದಲಿನ ಮೂವರು ಸಂಸ್ಕೃತದಲ್ಲಿ ಲಕ್ಷಣ ಗ್ರಂಥಗಳನ್ನು ರಚಿಸಿದ್ದಾರೆ. ರುದ್ರಭಟ್ಟನು 'ರಸಕಲಿಕೆ' ಎಂಬ ಗ್ರಂಥದ ಕವಿ ಎಂದು ರಸರತ್ನಾಕರದಿಂದಲೇ ತಿಳಿದು ಬರುತ್ತದೆ. ಈ ಗ್ರಂಥ ಕನ್ನಡದಲ್ಲಿದೆ. ಜಗನ್ನಾಥ ವಿಜಯವನ್ನು ಬರೆದ ರುದ್ರಭಟ್ಟನೇ ಇದರ ಕರ್ತೃ – ಎಂದು ಒಬ್ಬರ ಅಭಿಪ್ರಾಯ ವಾದರೆ, ಸಂಸ್ಕೃತ ಕವಿಗಳ ಗುಂಪಿನಲ್ಲಿ ರುದ್ರಭಟ್ಟನ ಹೆಸರು ಇರುವುದರಿಂದ ರಸಕಲಿಕೆ ಸಂಸ್ಕೃತದಲ್ಲಿರಬಹುದು ಎಂದು ಇನ್ನು ಕೆಲವರ ಅಭಿಪ್ರಾಯ. ರಸರತ್ನಾಕರದ ಕೆಲವು ಹೇಳಿಕೆಗಳಿಗೆ ಹೋಲಿಕೆಯುಳ್ಳ ರಸಕಲಿಕೆ ಎಂಬ ಹೆಸರಿನ ಸಂಸ್ಕೃತ ಅಲಂಕಾರ ಗ್ರಂಥವೇನೋ ಒಂದು ಸಿಕ್ಕಿದೆ. ಆದರೆ ಅದರಲ್ಲಿ ಗ್ರಂಥಕರ್ತನ ಹೆಸರಿಲ್ಲ. ಕನ್ನಡದಲ್ಲಿ 'ಸಾಹಿತ್ಯ ಸಂಜೀವನ'ವೆಂಬ ಲಕ್ಷಣ ಗ್ರಂಥವಿದ್ದಂತೆ ಸಾಳ್ವನ ಉಕ್ತಿಯಿಂದ ಗೊತ್ತಾಗುತ್ತದೆ (ಪು.೪೯); ಇದರ

ಇರುಳೆನ್ನದೆ, ಕಳ್ತಲೆ ಕಡು
ವಿರಿದು ಎನ್ನದೆ ದುರ್ಗಂ ಎನ್ನದೆ, ಓಪನೊಳ್ ಎತ್ತಂ
ನೆರೆಯಲ್ ಪರಿದೆಯ್ದುವ ಸುಂ–
ದರಿ ಅಭಿಸಾರಿಕೆಯೆನಿಪ್ಪ ಪೆಸರಂ ಪಡೆಗುಂ (೩–೫೯)

[ಕಳ್ತಲೆ=ಕತ್ತಲೆ. ಓಪ=ಪ್ರಿಯ. ನೆರೆ=ಕೂಡು. ಪರಿದೆಯ್ದು=ಓಡಿ ಬಳಿಗೆ ಹೋಗು.]

ನಾಲ್ಕನೆಯ ಪರಿಚ್ಛೇದ ನಾಯಕ ನಾಯಿಕೆಯರು ಹೊಂದಿರುವ ಸಖಸಖೀಜನರ ಭೇದಗಳು, ನಾಯಕ ನಾಯಿಕೆಯರ ಸಂಭೋಗ (ನೆರೆಯುವಿಕೆ, ಕೂಡುವಿಕೆ), ಅವರ ವಿಪ್ರಲಂಭ (ವಿರಹ ಅಥವಾ ಅಗಲಿಕೆ), ಅಗಲಿಕೆಯ ಸಂದರ್ಭದಲ್ಲಿ ಕಂಡುಬರುವ ದಶಾವಸ್ಥೆಗಳು – ಇವು ಉದಾಹರಣಪೂರ್ವಕವಾಗಿ ವರ್ಣಿತವಾಗಿವೆ. ನಾಯಕನ ಸಖನಿಗೆ 'ನರ್ಮಸಚಿವ'ನೆಂದೂ ಹೆಸರು ನಾಲ್ಕು ಬಗೆಯ ನರ್ಮಸಚಿವರುಂಟು; ನಾಗರಿಕ, ವಿಟ, ವಿದೂಷಕ, ಪೀಠಮರ್ದ. ಇವರಲ್ಲಿ ವಿದೂಷಕ ಪಾತ್ರ ಸುಪರಿಚಿತವಾದದ್ದು; ಜನಪ್ರಿಯವಾದದ್ದು. ಸಖೀಜನದಲ್ಲಿ ಸಾರಿಕೆ, ಚತುರಿಕೆ, ಸಂಚಾರಿಕೆ, ದೂತಿಕೆ ಎಂದು ನಾಲ್ಕು ವಿಧ. ಈ ಭೇದಗಳ ವಿವರಣೆಯೊಂದಿಗೆ ಗ್ರಂಥ ಸಮಾಪ್ತಿಯಾಗಿದೆ.

ಗ್ರಂಥದಲ್ಲಿ ಆತ್ಮಸ್ತುತಿಯ ಪದ್ಯಗಳು ಬೇಕಾದಷ್ಟಿವೆ. ಉದಾಹರಣ ಪದ್ಯಗಳಲ್ಲಿ, ಕೆಲವು ರಾಮಾಯಣದ ಕಥೆಗೆ ಸಂಬಂಧಪಟ್ಟಿವೆ. ಇನ್ನು ಕೆಲವು ಬೇರೆ ಬೇರೆ ಕಾವ್ಯಗಳ ಕಥಾಸಂದರ್ಭಗಳನ್ನು ಸೂಚಿಸುವಂತಿದೆ. ಕವಿ ತಾನು "ಗದ್ಯ ಪದ್ಯ ವಿದ್ಯಾಧರ" ಎಂದು ಹೇಳಿಕೊಂಡಿರುವುದರಿಂದ, ಅವನೇ ರಚಿಸಿರಬಹುದಾದ ಚಂಪೂಕಾವ್ಯಗಳಿಂದ ಉದಾಹರಣ ಪದ್ಯಗಳನ್ನು ಆಯ್ದು ಕೊಟ್ಟಿರಬಹುದು. ಒಟ್ಟಿನಲ್ಲಿ, ಕವಿಕಾಮನ" ಲಕ್ಷ್ಯಲಕ್ಷಣ ಪದ್ಯಗಳಲ್ಲಿ ಸಹಜ ಕವಿತವಿದೆ, ಲಲಿತ ಶೈಲಿಯಿದೆ, ಶಾಸ್ತ್ರಜ್ಞಾನವಿದೆ."[೨೦]

## ರಸರತ್ನಾಕರ

ಕನ್ನಡ ಲಕ್ಷಣಗ್ರಂಥಗಳ ಶ್ರೇಣಿಯಲ್ಲಿ ಸಾಳ್ವನ ರಸರತ್ನಾಕರಕ್ಕೆ ಒಂದು ಗಣ್ಯವಾದ ಸ್ಥಾನವಿದೆ. ರಸವಿಚಾರವನ್ನು ಕೂಡಿದ ಮಟ್ಟಿಗೂ ವಿಸ್ತಾರವಾಗಿ ನಿರೂಪಿಸುವ ಗ್ರಂಥ ಇದೊಂದೇ. ಗ್ರಂಥದ ಈ ವೈಶಿಷ್ಟ್ಯವನ್ನು ಕವಿಯೇ ಹೀಗೆ ವರ್ಣಿಸಿದ್ದಾನೆ.

ಅಭಿಪ್ರಾಯಗಳನ್ನು ತನ್ನವೆಂದು ತೋರುವಂತೆ ಮಾಡದೆ ಸ್ಪಷ್ಟವಾಗಿ ಒಪ್ಪಿಕೊಂಡಿರುವುದು ಶಾಸ್ತ್ರಕಾರನಲ್ಲಿ ಇರಬೇಕಾದ ಪ್ರಾಮಾಣಿಕತೆಯ ಲಕ್ಷಣ. ಇನ್ನೊಂದು ವಿಶೇಷವಾದ ಸಂಗತಿ ಏನೆಂದರೆ, ಅಗತ್ಯವಾದ ಕಡೆಗಳಲ್ಲಿ ಸೂತ್ರಗಳಿಗೆ ವೃತ್ತಿ (ವಿವರಣೆ) ಗಳನ್ನು ಬರೆಯುವುದರ ಜೊತೆಗೆ, 'ವಿಚಾರಂ' ಎಂಬ ವಿಭಾಗವನ್ನು ಕಲ್ಪಿಸಿಕೊಂಡು, ಅದರಡಿಯಲ್ಲಿ ಅಭಿಪ್ರಾಯ ಭೇದಗಳನ್ನೂ ವಿಷಯದ ತೊಡಕುಗಳನ್ನೂ ಚರ್ಚೆ ಮಾಡುವ ವಿಧಾನ.

ಉದಾಹರಣೆಗೆ ರಸದ ಉತ್ಪತ್ತಿಯ ವಿಷಯದಲ್ಲಿ ನಾಗವರ್ಮನ ಸೂತ್ರವನ್ನೇ ಉದ್ಧರಿಸಿ, 'ನಾಗವರ್ಮನಿಂತಪ್ಪುಗೆಯ್ದನದರ ವಿವರಮೆಂತೆಂದೊಡೆ" ಎಂದು ಭಾವ ವಿಭಾವ ಅನುಭಾವ ಸಂಚಾರಿ ಭಾವಗಳ ಸ್ವರೂಪವನ್ನು ವಿವರಿಸುತ್ತಾನೆ. ೩೩ ವ್ಯಭಿಚಾರಿ ಭಾವಗಳಲ್ಲಿ ಒಂದಾದ 'ಚಿಂತೆ'ಯನ್ನು ಕುರಿತು ಹೇಳುವಾಗ –

'ವ॥ ಧ್ಯಾನಮೆ ಚಿಂತೆ'

"ವಿಚಾರಂ–ಇದು ಸ್ಮೃತಿಯಿಂದ ವ್ಯತಿರಿಕ್ತಂ. ಅನುಭೂತ ವಸ್ತು ಸ್ಮರಣಮೇಸ್ಮೃತಿ. ಅದಂ ಬಿಡದೆ ಧ್ಯಾನಿಪುದು ಇಂತೆ. ಇತರ್ಕದಿಂ ಚಿಂತೆ ಬೇರೆ. ಚಿಂತೆಯಿಂ ಬಳಿಕಾದೊಡಂ ಒರ್ಮೆ ವಿತರ್ಕಮಪ್ಪುದು. ವಿತರ್ಕದಿಂ ಬಳಿಕ್ಕಾದೊಡಂ ಒರ್ಮೆ ಚಿಂತೆಯಪ್ಪುದು."

ಇಲ್ಲಿ ಸ್ಮೃತಿ, ವಿತರ್ಕ (ವಿಚಾರ), ಧ್ಯಾನ (ಚಿಂತೆ) ಗಳಿಗಿರುವ ಸೂಕ್ಷ್ಮ ವ್ಯತ್ಯಾಸಗಳನ್ನು ಬಿಡಿಸಿ ತೋರಿಸಿದ್ದಾನೆ. ಸಾಳ್ವನ ಈ ಕ್ರಮ ಶಾಸ್ತ್ರಪದ್ಧತಿಗೆ ಅನುಗುಣವಾಗಿದ್ದು, ಅವನ ಸ್ವತಂತ್ರ ವಿಚಾರ ವಿಮರ್ಶಾ ವಿಧಾನಕ್ಕೂ ದೃಷ್ಟಾಂತವಾಗಿದೆ. ಅಲ್ಲಲ್ಲಿ, ಸಾಳ್ವನ ವಿಚಾರಮಾರ್ಗದಲ್ಲಿ ದೋಷಗಳೂ, ಎಡೆಹೊಕ್ಕಿವೆ, ಆದರೆ, ಒಟ್ಟಿನಲ್ಲಿ ಅವನ ನಿರೂಪಣಾಕ್ರಮ ಶ್ಲಾಘ್ಯವಾದದ್ದು; ವಿಚಾರಪೂರ್ಣವಾದದ್ದು.

ಸಾಳ್ವನ ಗ್ರಂಥದಲ್ಲಿ ಗಮನಾರ್ಹವಾದ ಇನ್ನೊಂದು ಶ್ಲಾಘ್ಯಕ್ರಮ – ಸ್ವಂತ ಲಕ್ಷ್ಯಗಳನ್ನು ಕೊಡದೆ, ಪೂರ್ವಕವಿಗಳ ಕಾವ್ಯಗಳಿಂದ ಸಂದರ್ಭಕ್ಕೆ ಹೊಂದುವ ಪದ್ಯಗಳನ್ನು ಲಕ್ಷ್ಯಗಳಾಗಿ ಆಯ್ದು ಕೊಡುವುದು. ಇದು ಕಾವ್ಯಾವಲೋಕನದಲ್ಲಿ ನಾಗವರ್ಮ ಅನುಸರಿಸಿರುವ ಪದ್ಧತಿ. ಪಂಪನ ಆದಿಪುರಾಣ, ರನ್ನನ ಗದಾಯುದ್ಧ, ನಾಗವರ್ಮನ ಕಾವ್ಯಾವಲೋಕನಂ, ಶೃಂಗಾರ ರತ್ನಾಕರ, ರುದ್ರಭಟ್ಟನ ಜಗನ್ನಾಥ ವಿಜಯ, ನೇಮಿಚಂದ್ರನ ಲೀಲಾವತಿ – ಇವೇ ಮುಂತಾದ ಕೃತಿಗಳಿಂದ ಲಕ್ಷ್ಯ

ಕರ್ತೃವಿನ ಹೆಸರು ಗಣೇಶ್ವರಾಗ್ನಿ. ರಸಗಳ ಪರಸ್ಪರ ವಿರೋಧವನ್ನು ಕುರಿತು ಹೇಳುತ್ತಾ ಸಾಳ್ವನು ಈ ಗ್ರಂಥದ ಹೆಸರನ್ನು ಎತ್ತಿ, ಅಭಿಪ್ರಾಯ ವನ್ನು ಉಲ್ಲೇಖಿಸಿ ಅದರಿಂದ ಎರಡು ಸೂತ್ರ ಪದ್ಯಗಳನ್ನೂ ಉದ್ಧರಿಸಿಕೊಟ್ಟಿದ್ದಾನೆ. ಈ ಹೆಸರಿನ ಲಾಕ್ಷಣಿಕನಾಗಲಿ ಅವನ ಕೃತಿಯಾಗಲಿ ಇದ್ದುದಕ್ಕೆ ಸಾಳ್ವನ ಹೇಳಿಕೆಯೇ ಏಕಮಾತ್ರ ಸಾಕ್ಷಿ. ವಿರಳವಾದ ಕನ್ನಡ ಲಾಕ್ಷಣಿಕರ ಪಂಕ್ತಿಗೆ ಈತನನ್ನು ಸೇರಿಸಲು ಸಾಳ್ವನಿಂದ ಆಗಿರುವ ಉಪಕಾರಕ್ಕಾಗಿ ನಾವು ಅವನಿಗೆ ಕೃತಜ್ಞರಾಗಿರಬೇಕಾಗಿದೆ.[೨೧] ಈ ಸಾಹಿತ್ಯ ಸಂಜೀವನ'ವು ರಸವಿಚಾರವಲ್ಲದೆ, ಅಲಂಕಾರ ಶಾಸ್ತ್ರದ ಇತರ ವಿಚಾರ ಗಳನ್ನೂ ಒಳಗೊಂಡಿರುವುದೆಂದು ಗ್ರಂಥದ ಹೆಸರಿನಿಂದ ಊಹಿಸಬಹುದಾಗಿದೆ.* ಸಾಳ್ವನು ಎಲ್ಲ ರಸಗಳ ವಿಚಾರವನ್ನೂ ತನ್ನ ಗ್ರಂಥದಲ್ಲಿ ನಾಗವರ್ಮ ಕವಿಕಾಮಾದಿಗಳಿಗಿಂತ ಹೆಚ್ಚು ವಿಸ್ತಾರವಾಗಿ ಪ್ರತಿಪಾದಿಸಿದ್ದರೂ ಶೃಂಗಾರಕ್ಕೆ ಪ್ರಾಶಸ್ತ್ಯ ನೀಡಿರುವುದರಲ್ಲಿ ಕವಿಕಾಮನ ಪ್ರಭಾವಕ್ಕೆ ಒಳಗಾಗಿರುವುದು ಸ್ಪಷ್ಟವಾಗಿದೆ. ಪ್ರಥಮ ಪ್ರಕರಣವು ಪೂರ್ತಿಯಾಗಿ ಶೃಂಗಾರ ಪ್ರಪಂಚ ವಿವರಣೆಗೆ ಮೀಸಲಾಗಿರುವುದೇ ಇದಕ್ಕೆ ನಿದರ್ಶನ; ಅಲ್ಲದೆ ಅನೇಕ ಸೂತ್ರಗಳನ್ನು ಉದಾಹರಣ ಪದ್ಯಗಳನ್ನೂ ಅವನ ಗ್ರಂಥದಿಂದಲೇ ಎತ್ತಿ ಕೊಟ್ಟಿದ್ದಾನೆ. ಇನ್ನಿತರ ವಿಚಾರಗಳಲ್ಲಿ ಸಂಸ್ಕೃತ ಗ್ರಂಥಗಳನ್ನು ಅವಲಂಬಿಸಿದ್ದಾನೆ. ಒಟ್ಟಿನ ಮೇಲೆ, ಅನೇಕ ಗ್ರಂಥಗಳ ವಿಷಯಗಳನ್ನು ಸಂಗ್ರಹಿಸಿ, ತಾನು ಇತರ ಲಾಕ್ಷಣಿಕರಿಗೆ ಋಣಿಯಾಗಿರುವುದನ್ನು ಒಟ್ಟಿನಲ್ಲಿ ಮಾತ್ರವಲ್ಲದೆ, ಅಲ್ಲಲ್ಲಿ ಪ್ರತ್ಯೇಕವಾಗಿಯೂ 'ಕವಿ ಕಾಮನ ಮತಂ', 'ಇದು ನಾಗವರ್ಮನ ಮತಂ', 'ಹೇಮಚಂದ್ರ ಸೂರಿಯ ಮತದಿಂ' ಎಂದು ಮುಂತಾಗಿ – ಒಪ್ಪಿಕೊಂಡಿರುವುದು ಮೆಚ್ಚತಕ್ಕ ಸಂಗತಿ. ಸಾಳ್ವನು ಕವಿ ಕಾಮನಿಗೆ ವಿಶೇಷವಾಗಿ ಋಣಿಯಾಗಿದ್ದರೂ ಅವನನ್ನು ಟೀಕಿಸಿರುವುದೂ ಉಂಟು. ಇತರರ

---

* ಸಾಳ್ವನು 'ಸಾಹಿತ್ಯ ಸಂಜೀವನ'ದಿಂದ ಎತ್ತಿಕೊಟ್ಟಿರುವ ಎರಡು ಪದ್ಯಗಳಲ್ಲಿ ಒಂದನ್ನಾದರೂ ನಾವು ಇಲ್ಲಿ ಅತ್ಯವಶ್ಯಕವಾಗಿ ಗಮನಿಸಬೇಕು:

ವೀರಂ ಬೀಭತ್ಸ ರೌದ್ರಂ ನಿಜದೆ ಕರುಣಶಾಂತಂಗಳ್ ಇಂತೆಯ್ದೆ ಶೃಂ–
ಗಾರಕ್ಕಂ ವೈರಿಯಕ್ಕುಂ; ಕರುಣ ಭಯಮಿವು ಹಾಸ್ಯಕಂ ವೈರಿ; ಆ ಶೃಂ–
ಗಾರಂ ಹಾಸ್ಯಂ ಬಳಿಕ್ಕಂ ಪರಿಕಿಸೆ ಸಲೆ ರೌದ್ರಂ ವಲಂ ಶಾಂತಂ ಇಂತುಂ
ಕಾರುಣ್ಯಕ್ಕಂ ಹಿತಂ ತಾನೆನಿಸದು ಭಯಕಂ ವೈರಿಯಾ ವೀರವೆಂದುಂ

[ವೀರ, ಬೀಭತ್ಸ, ರೌದ್ರ, ಕರುಣ, ಶಾಂತ ರಸಗಳು ಶೃಂಗಾರಕ್ಕೆ ವಿರುದ್ಧ ರಸಗಳು; ಕರುಣ ಭಯಗಳು ಹಾಸ್ಯಕ್ಕೆ ವಿರುದ್ಧಗಳು; ಶೃಂಗಾರ, ಹಾಸ್ಯ, ರೌದ್ರ, ಶಾಂತ – ಇವು ಕರುಣಕ್ಕೆ ವಿರುದ್ಧ; ವೀರ ಭಯಗಳು ಪರಸ್ಪರ ವಿರುದ್ಧಗಳು.]

ಎರಡು ಷಟ್ಪದಿಗಳೂ ಒಂದು ತ್ರಿಪದಿಯೂ ಸೇರಿರುವುದು ಗಮನಾರ್ಹ. ಶಕುಂತಲೆ ಗಿಡಬಳ್ಳಿಗಳಿಗೆ ನೀರೆರೆಯುತ್ತಿದ್ದಾಗ ದುಷ್ಯಂತನು ಮರೆಯಲ್ಲಿ ನಿಂತು ಅವಳನ್ನು ನೋಡುತ್ತಿರುವ ಸನ್ನಿವೇಶವನ್ನು ವರ್ಣಿಸುವ ಒಂದು ವಾರ್ಧಕ ಷಟ್ಪದಿ ಹೀಗಿದೆ:

ಈ ರಮಣಿ ರಿಸಿಗುರವರಿಯೆಂತಾದಳ್ ಎನುತಿರೆ ವಿ-
ಚಾರಿಸುತೆ ಬಾಲಮೂಲ ವಕುಲಾವಾಲಕ್ಕೆ
ವಾರಿಸೇಚನ ವೆಸಪ ಪೆಣ್ ಮೈವೆಳಗುವೋಳೆಯ ತಿಳಿವೊನಲ ಪೊಕ್ಕು ಪರಿದು
ಆ ರಾಯನೀಕ್ಷಣ ಝಷಂ ಚರಣಕಮಠಮಂ
ಸೇರಿ ಪೊಕ್ಕುಳ್ ಸುಳಿಯೊಳ್ ಆಲ್ದು ತೋಳ್‌ತೆರೆಗಳೊಳ್
ಚಾರಿವರಿದು ಆನನಾಬ್ಜಕೆ ನೆಗೆದು ಕಚನಿಚಯ ಜಲನೀಲಿಯೊಳ್ ಪೊರಳ್ದುದು

[ಈ ಚೆಲುವೆ ಋಷಿಯ ಮಗಳು ಹೇಗಾದಳು? ಎಂದು ವಿಚಾರಿಸುತ್ತ. ಎಳೆಯ ಬೇರುಳ್ಳ ಬಕುಳದ ಗಿಡದ ಪಾತಿಗೆ ನೀರನ್ನು ಎರೆಯುತ್ತಿದ್ದ ಹೆಣ್ಣಿನ ಮೈಯ ಕಾಂತಿಯೆಂಬ ಹೊಳೆಯ ತಿಳಿನೀರಿನ ಪ್ರವಾಹವನ್ನು ಹೊಕ್ಕು, ಆ ರಾಜನ (ದುಷ್ಯಂತನ) ನೋಟವೆಂಬ ಮೀನು ಪಾದಗಳೆಂಬ ಆಮೆಯನ್ನು ಸಮೀಪಿಸಿ, ಹೊಕ್ಕುಳ ಸುಳಿಯಲ್ಲಿ ಮುಳುಗಿ, ತೋಳುಗಳೆಂಬ ಅಲೆಗಳ ನಡುನಡುವೆ ಸುತ್ತಾಡಿ, ಮುಖಕಮಲಕ್ಕೆ ನೆಗೆದು, ಕೂದಲರಾಶಿಯೆಂಬ ನೀಲಜಾಲದಲ್ಲಿ ಹೊರಳಿತು.]

ಕಾಳಿದಾಸನ ನಾಟಕವನ್ನು ಅವಲಂಬಿಸಿ ಬರೆದ ಯಾವುದೋ ಕನ್ನಡ ಕಾವ್ಯದಿಂದ ಈ ಪದ್ಯವನ್ನು ಆಯ್ದು ಹಾಕಿರಬಹುದೆಂಬ ಊಹೆ ಇದೆ. "ವಿರಾಜತೇ ರಾಯಣ ತಿಮ್ಮಣಾರ್ಯೋ ಭಾಷಾ ದ್ವಯೀ ನಿರ್ಮಿತ ಕಾವ್ಯಶೇಷಃ" (ರಾಯಣನ ಮಗ ತಿಮ್ಮಣಾರ್ಯನು ಎರಡು ಭಾಷೆಗಳಲ್ಲೂ ನಿರ್ಮಿಸಿದ ಉಳಿದ ಕಾವ್ಯ ಶೋಭಿಸುತ್ತದೆ) ಎಂಬ ಕವಿಯ ಹೇಳಿಕೆಯನ್ನೂ, 'ಉಭಯ ಕವಿ ಶರಭ ಭೇರುಂಡ' ಎಂಬ ಅವನ ಬಿರುದನ್ನೂ ಗಮನಿಸಿದರೆ, ಇವನು ಕನ್ನಡ ಸಂಸ್ಕೃತಗಳಲ್ಲಿ ಕೃತಿ ರಚನೆ ಮಾಡಿದ್ದನೆಂದು ಧಾರಾಳವಾಗಿ ಹೇಳಬಹುದು. ಆದರೆ ಅವನ ಯಾವ ಕಾವ್ಯವೂ ದೊರಕಿಲ್ಲ. ಗ್ರಂಥದಲ್ಲಿ ಎತ್ತಿಕೊಟ್ಟಿರುವ ಶಕುಂತಲಾ ವಿಷಯಕ ಪದ್ಯವನ್ನು ತನ್ನ ಕಾವ್ಯದಿಂದಲೇ ತಿಮ್ಮನು ಎತ್ತಿಕೊಟ್ಟಿದ್ದರೂ ಇರಬಹುದು. ಇದು ಹೇಗಿದ್ದರೂ, ತ್ರಿಪದಿ ಮಾತ್ರ ಜನ್ನನ ಅನಂತನಾಥ ಪುರಾಣದ್ದು.

ಪದ್ಯಗಳನ್ನು ಆಯ್ದುಕೊಳ್ಳುವಲ್ಲಿ ಸಾಳ್ವನ ಒಳ್ಳೆಯ ಕಾವ್ಯಾಭಿರುಚಿಯೂ ಕಂಡುಬರುತ್ತದೆ. ಇವನು ತನ್ನ ಭಾರತವನ್ನು ಷಟ್ಪದೀ ಪದ್ಯಗಳ ನಡುಗನ್ನಡದಲ್ಲಿ ಬರೆದು, ಈ ಗ್ರಂಥವನ್ನು ಚಂಪೂರೂಪದ ಹಳಗನ್ನಡದಲ್ಲಿ ಬರೆದಿರುವುದು ವಿಚಾರಾರ್ಹ ಎಂದು ತೀ.ನಂ. ಶ್ರೀಕಂಠಯ್ಯನವರು ಸೂಚಿಸಿದ್ದಾರೆ. ಶಾಸ್ತ್ರ ಗ್ರಂಥ ಕವಿಗಳಿಗೂ ವಿದ್ವಾಂಸರಿಗೂ ಮಾತ್ರ ಉದ್ದೇಶಪಟ್ಟದ್ದಾದ್ದರಿಂದ, ತನ್ನ ಪ್ರೌಢಿಮೆಯನ್ನು ತೋರಿಸುವ ಸಲುವಾಗಿ ಹಳಗನ್ನಡದಲ್ಲಿ ಬರೆದಿರಬಹುದು. ೧೮ನೇ ಶತಮಾನದಲ್ಲಿ ತಿರುಮಲಾರ್ಯನೂ ೧೯ನೆಯ ಶತಮಾನದಲ್ಲಿ ಲಿಂಗರಾಜನೂ ತಂತಮ್ಮ ಲಕ್ಷಣ ಗ್ರಂಥಗಳನ್ನು ಹಳಗನ್ನಡದಲ್ಲಿ ಬರೆದಿರುವಲ್ಲಿ, ಇದೇನೂ ಸೋಜಿಗದ ವಿಷಯವಲ್ಲ.

**ನವರಸಾಲಂಕಾರ**

ರಸ ವಿಚಾರವನ್ನು ಪ್ರತಿಪಾದಿಸುವ ಕನ್ನಡ ಲಕ್ಷಣ ಗ್ರಂಥಗಳ ಸಾಲಿನಲ್ಲಿ ತಿಮ್ಮನ 'ನವರಸಾಲಂಕಾರ', ಮೂರನೆಯದು. ಇದಕ್ಕೆ 'ಅಲಂಕಾರಸಾರ ಸಂಗ್ರಹ' ಎಂಬ ಹೆಸರೂ ಇದೆ. ಈ ಕೃತಿ ಇನ್ನೂ ಪ್ರಕಟವಾಗಿಲ್ಲದಿರುವುದರಿಂದ ಅಷ್ಟು ಪ್ರಸಿದ್ಧವಾಗಿಲ್ಲ. ಈ ಕವಿಯ ವಿಚಾರವಾಗಿ ಹೆಚ್ಚಿನ ಸಂಗತಿಗಳೂ ತಿಳಿದು ಬಂದಿಲ್ಲ. ಗ್ರಂಥದಿಂದಲೇ ತಿಳಿದು ಬರುವ ಸಂಗತಿಗಳು ಇಷ್ಟು. ಇವನ ಹೆಸರು ತಿಮ್ಮಣಾರ್ಯ, ಬ್ರಾಹ್ಮಣ ಕುಲದವನು; ರಾಯಣನ ಮಗ. ಇವನಿಗೆ ಕವಿ ಕುಲ ಚಕ್ರವರ್ತಿ, ಕವಿಭಾಳ ಲೋಚನ, ರಸಿಕಬ್ರಹ್ಮ, ಮುಂತಾಗಿ ಅನೇಕ ಬಿರುದುಗಳಿದ್ದುವು. ಸಾಳ್ವನ ರಸರತ್ನಾಕರದ ಸೂತ್ರಗಳೂ ವಾಕ್ಯಗಳೂ ತಿಮ್ಮನ ಕೃತಿಗಳಲ್ಲಿ ಕಂಡು ಬರುತ್ತವೆ. ಆದ್ದರಿಂದ ಇವನು ಅವನಿಗಿಂತ ಈಚಿನವನು; ಇವನ ಕಾಲ ಸು.೧೬೦೦.

ಸಾಳ್ವನ ರಸರತ್ನಾಕರದಂತೆ ಇದೂ ಗದ್ಯಪದ್ಯಗಳಿಂದ ಕೂಡಿದೆ. ಕನ್ನಡ ಅಲಂಕಾರಿಕರಾದ ಸಾಳ್ವ, ಕವಿಕಾಮ (ಎರಡನೆಯ) ನಾಗವರ್ಮ ಮತ್ತು ಸಂಸ್ಕೃತ ಅಲಂಕಾರಿಕರಾದ ಹೇಮಚಂದ್ರ, ಅಮೃತಾನಂದ, ಸಿಂಗಭೂಪಾಲ, ಇವರುಗಳನ್ನು ತಾನು ಅನುಸರಿಸಿರುವುದಾಗಿ ಹೇಳಿಕೊಂಡಿದ್ದಾನೆ. ಅಲಂಕಾರ ವಿಚಾರದಲ್ಲಿ ಇದು ಪೂರ್ವ ಗ್ರಂಥಗಳ ಸಾರ ಸಂಗ್ರಹವನ್ನು ಒಳಗೊಂಡಿರುವುದರಿಂದ ಇದರ ಹೆಸರು ಅನ್ವರ್ಥಕವಾಗಿದೆ ಎಂದು ಹೇಳಬಹುದು. ಸ್ವತಂತ್ರ ರಚನೆ ಕಡಿಮೆ. ಪಂಪ, ಪೊನ್ನ, ನಾಗಚಂದ್ರ, ನೇಮಿಚಂದ್ರ, ಮುಂತಾದ ಪೂರ್ವಕವಿಗಳ ಪದ್ಯಗಳನ್ನು ಲಕ್ಷ್ಯಗಳಾಗಿ ತೆಗೆದುಕೊಂಡಿದ್ದಾನೆ. ರಸದ ಉತ್ಪತ್ತಿಯನ್ನು ವಿವರಿಸುವಲ್ಲಿ ಭರತನನ್ನು ಅನುಸರಿಸಿದ್ದಾನೆ. ವೃತ್ತ ಕಂದಗಳೇ ತುಂಬಿರುವ ಈ ಗ್ರಂಥದಲ್ಲಿ

(೬)ಉತ್ತಮಾ, ಮಧ್ಯಮಾ, ಅಧಮಾ ಎಂಬ ಮೂರು ಬಗೆಯ ದೂತಿಯರು.

(೭)ನಾಯಕ ವಿವರಣೆ: ನಾಯಕರಲ್ಲಿ ಪತಿ, ಉಪಪತಿ, ವೈಶಿಕ ಪತಿ ಎಂದು ಮೂರು ವಿಧ. ಪತಿಯಲ್ಲಿ – ಅನುಕೂಲ, ದಕ್ಷಿಣ, ಶಠದುಷ್ಟ ಎಂದು ನಾಲ್ಕು ಬಗೆ. ಮೂರು ಬಗೆಯ ನಾಯಕರಲ್ಲಿ ಮತ್ತೆ ಆರು ವಿಧ. ಎಲ್ಲ ಬಗೆಯವರಲ್ಲಿಯೂ ಉತ್ತಮ, ಮಧ್ಯಮ, ಅಧಮ ಎಂಬ ಮೂರು ವಿಧ. ಇವರೆಲ್ಲರ ಲಕ್ಷಣ ವಿವರಣೆ.

(೮)ಸ್ವೇದ (ಬೆವರುವಿಕೆ), ಅಶ್ರು (ಕಣ್ಣೀರು) ಸ್ತಂಭನ (ಚೇಷ್ಟೆಯಲ್ಲಿ ಇರುವಿಕೆ), ರೋಮಾಂಚ, ಸ್ವರಭಂಗ (ಧ್ವನಿ ಉಡುಗುವುದು), ವೈವರ್ಣ್ಯ (ಬಿಳಿಚಿಕೊಳ್ಳುವುದು), ವೇಪಥು (ನಡುಕ), ಪ್ರಲಯ (ಮೂರ್ಛೆ) – ಇವು ಎಂಟು ಸಾತ್ವಿಕ ಭಾವಗಳು. ಇವುಗಳ ವಿವರಣೆ, ನಾಯಕ ನಾಯಿಕೆಯರ ಪರಿಹಾಸ, ಸಂಭೋಗ ಶೃಂಗಾರ, ವಿಪ್ರಲಂಭ ಶೃಂಗಾರ ಮತ್ತು ಇವರ ದಶಾವಸ್ಥೆಗಳು. ಈ ಪ್ರಕರಣದಲ್ಲಿಯೇ ನವರಸಗಳ ವಿವರವೂ ಅವುಗಳಿಗೆ ಉದಾಹರಣೆಗಳೂ ಇವೆ. ಆ ಉದಾಹರಣೆಗಳೆಲ್ಲವೂ ಶಿವಸ್ತುತಿ ರೂಪದಲ್ಲಿವೆ. ಶಿವಸ್ತುತಿಯ ಒಂದೇ ಪದ್ಯದಲ್ಲಿ ನವರಸಗಳನ್ನೂ ಸೂಚಿಸಿರುವುದು ಚಮಕ್ಕಾರ ಪೂರ್ಣವಾಗಿದೆ:

ಗಿರಿಜೆಗರೆಮೆಯ್ಯಿತ್ತ ದೆಸೆಯಿಂದ ಶೃಂಗಾರ,

ನರಕಪಾಲಾ ಹಾರದಿಂದಲ್ಲಿ ಬೀಭತ್ಸ, ಉರಗಾಭರಣದಿಂದ ತೋರುತಿಹುದತಭಯಂ, ಗಜ ಚರ್ಮದಿಂದದ್ಭುತಂ.

ಕರದ ಶೂಲದಿ ವೀರ, ರೌದ್ರವಹ ನೇತ್ರದಿಂ,
ಶಿರದ ಚಂದ್ರನ ಶಾಂತಿ, ಅರ(ರೆ?)ವಿಲ್ಲದದು ಹಾಸ್ಯ
ಕಿರುಜಡೆಯ ಗಂಗೆ ಬಲು ಕರುಣ–ನವರಸಭರಿತ ಶಂಕರಂ ಸಲಹೆನ್ನನು

[ಅರೆಮೆಯ್ಯಿ=ಅರ್ಧಮೈ, ನರಕಪಾಲ=ಮನುಷ್ಯನ ತಲೆಬುರುಡೆ, ಉರಗಾಭರಣ=ಹಾವಿನ ಒಡವೆ, ಅಹ+ಆಗಿರುವ, ಅರೆವಿಲ್ಲು=ಕಲ್ಲಿನ (ಎಂದರೆ ಮೇರು ಪರ್ವತ?) ಬಿಲ್ಲು.]

**ರಸಮಂಜರಿ**

ಈ ಹಿಂದೆ ಪರಿಚಯ ಮಾಡಿಕೊಟ್ಟ ಕನ್ನಡ ಕುವಲಯಾನಂದವನ್ನು ರಚಿಸಿದ ಜಾಯಗೌಂಡನೇ ಇದನ್ನೂ ರಚಿಸಿರುವನು. "ಆ ಸಂಸ್ಕೃತ ರಸಮಂಜರಿಯೊಳು ಪೇಳ್ವ ಸ್ತ್ರೀಪುರಷ ಲಕ್ಷಣ ಮೊದಲಾದ ರೀತಿಯನು ಸಂಕೋಚದಿಂದ ಕನ್ನಡ ಭಾಷೆಗಳಿಂದ ಉದಾಹರಣೆಗಳ ಪೇಳ್ವೆನು" ಎಂದು ಗ್ರಂಥದ ಮೊದಲಲ್ಲಿ ಹೇಳಿಕೊಂಡಿದ್ದಾನೆ. "ಇಲ್ಲಿ ಉಕ್ತವಾಗಿರುವ ಸಂಸ್ಕೃತ ರಸಮಂಜರಿ ಭಾನುದತ್ತನ ಗ್ರಂಥವಲ್ಲದೆ ಬೇರೆಯಲ್ಲ' – ಎಂದು ತೀ.ನಂ.ಶ್ರೀ. ಅಭಿಪ್ರಾಯಪಟ್ಟಿದ್ದಾರೆ. ಈ ಗ್ರಂಥಕ್ಕೆ 'ಶೃಂಗಾರತಿಲಕ' ಎಂಬ ಇನ್ನೊಂದು ಹೆಸರೂ ಉಂಟು. ಈ ಗ್ರಂಥದ ಉದಾಹರಣ ಪದ್ಯಗಳು ಕನ್ನಡ ಕುವಲಯಾನಂದದಲ್ಲಿರುವಂತೆ ಬೇರೆ ಬೇರೆ ಪ್ರಕಾರದ ಷಟ್ಪದಿಗಳಲ್ಲಿವೆ. ಲಕ್ಷಣ ಭಾಗಗಳೂ ಉದಾಹರಣ ಪದ್ಯಗಳ ಟೀಕೆ ವಿವರಣೆಗಳೂ ಗದ್ಯದಲ್ಲಿವೆ. ಉದಾಹರಣ ಪದ್ಯಗಳ ಸಂಖ್ಯೆ ೯೯. ಗ್ರಂಥದಲ್ಲಿ ಎಂಟು ಪ್ರಕರಣಗಳಿವೆ. ಪ್ರಕರಣಗಳಲ್ಲಿ ವಿಷಯ ನಿರೂಪಣೆ ಹೀಗಿದೆ:

(೧)ನಾಯಿಕೆಯ ಲಕ್ಷಣ, ಸ್ವೀಯೆ, ಪರಕೀಯೆ, ಸಾಮಾನ್ಯೆ ಎಂಬ ಮೂರು ವಿಧ. ಸ್ವೀಯೆಯಲ್ಲಿರಬೇಕಾದ ನಾಲ್ಕು ಗುಣಗಳ ವಿವರಣೆ, ಸ್ವೀಯೆಯಲ್ಲಿ ವಯೋಭೇದದಿಂದ ಮುಗ್ಧೆ, ಮಧ್ಯೆ, ಪ್ರಗಳ್ಭೆ ಎಂದು ಮೂರು ಬಗೆ, ಹಾಗೂ ಇವರ ಲಕ್ಷಣಗಳು.

(೨)ಪರಿಕೀಯೆಯ ಭೇದಗಳ ಮತ್ತು ಲಕ್ಷಣ ವಿವರಣೆ, ಪರಕೀಯೆಯಲ್ಲಿ ಕನ್ಯೆ, ಪರೋಢಾ ಎಂದು ಎರಡು ಬಗೆ. ಪರಪುರುಷನ ಮೇಲಿನ ಅನುರಾಗವನ್ನು ಪ್ರಕಟ ಮಾಡದೆ ಇರುವವಳು ಪರಕೀಯೆ.

(೩)ಸಾಮಾನ್ಯ ನಾಯಿಕೆಯ ಪ್ರಕಾರಗಳು ಮತ್ತು ಅವರ ಲಕ್ಷಣಗಳ ವಿವರಣೆ. ದ್ರವ್ಯಾಪೇಕ್ಷೆಯಿಂದ ಸಕಲ ಪುರುಷರ ಮೇಲೆ ಆಶೆ ಪಡುವವಳು. ಮೊದಲ ಪ್ರಕರಣದಲ್ಲಿ ವಿವರಿಸಿದ ಮೂರು ಬಗೆಯ ನಾಯಿಕೆಯಲ್ಲಿಯೂ ಇರುವ ಎಂಟು ಬಗೆಯ ನಾಯಿಕೆಯರು ಮತ್ತು ಅವರ ಲಕ್ಷಣ ವಿವರಣೆ.

(೪)ನಾಯಿಕೆಯರಲ್ಲಿ ಉತ್ತಮಾ, ಮಧ್ಯಮಾ ಮತ್ತು ಅಧಮಾ ಎಂದು ಮತ್ತೆ ಮೂರು ಪ್ರಕಾರಗಳು, ಇವರ ಸ್ವಭಾವ ವಿವರಣೆ.

(೫)ನಾಯಿಕೆಯ ಪ್ರತೀತಿ ಪಾತ್ರಳಾದ ಸಖಿಯ ಲಕ್ಷಣ ವಿವರಣೆ, ಇವರಲ್ಲಿ ನಾಲ್ಕು ಬಗೆ.

ಶೃಂಗಾರ ರಸಕ್ಕೇ ಪ್ರಾಧಾನ್ಯ. ಈ ಪ್ರಾಧಾನ್ಯಕ್ಕೆ ಕಾರಣವೇನೆಂಬುದನ್ನು ಕವಿ ಕಾಮನೂ ಸಾಳ್ವನೂ ಸ್ಪಷ್ಟಪಡಿಸಿರುವರು. ಜಾಯೇಂದ್ರನು ಗ್ರಂಥಾರಂಭದಲ್ಲಿ, 'ಪ್ರಸಿದ್ಧವಾದ ನವರಸಗಳಲ್ಲಿ ಶೃಂಗಾರ ರಸವೆ ಮೊದಾಗಿಹುದು' ಎಂದಿಷ್ಟೇ ಹೇಳಿ, ರಸಗಳ ಗಣನೆಯಲ್ಲಿ ಅದರ ಮೊದಲ ಸ್ಥಾನವನ್ನು ಮಾತ್ರ ತಿಳಿಸಿರುವನು. ಶ್ರೇಷ್ಠತೆಯಿಲ್ಲದಿದ್ದರೆ ಪ್ರಥಮ ಸ್ಥಾನ ಸಲ್ಲುವುದಿಲ್ಲವಷ್ಟೇ? ಶೃಂಗಾರರಸವು ಜನಪ್ರಿಯವಾದದ್ದರಿಂದ ಈ ಮೂರು ಗ್ರಂಥಗಳೂ ತಮ್ಮ ಸ್ವಾರಸ್ಯವಾದ ಲಕ್ಷ್ಯಪದ್ಯಗಳಿಂದಾಗಿ ಓದುಗರಿಗೂ ಪ್ರಿಯವಾಗುವುವು. ಮೊದಲೆರಡು ಗ್ರಂಥಗಳು ಹಳಗನ್ನಡದಲ್ಲಿರುವುದರಿಂದ ಸಾಮಾನ್ಯರು ಅವುಗಳಲ್ಲಿನ ಉದಾಹರಣೆಯ ಪದ್ಯಗಳನ್ನು ಅರ್ಥ ಮಾಡಿಕೊಳ್ಳಲಾರರು. ರಸಮಂಜರಿಯ ಭಾಷೆ ಹೊಸಗನ್ನಡಕ್ಕೆ ಬಹು ಹತ್ತಿರವಾಗುವುದರಿಂದಲೂ, ಜಾಯಗೊಂಡನು ಉದಾಹರಣೆಗಳ ತಾತ್ಪರ್ಯವನ್ನು ಬಹುಮಟ್ಟಿಗೆ ಸರಳವಾದ ಭಾಷೆಯಲ್ಲಿ ವಿವರಿಸಿರುವುದರಿಂದಲೂ ಅಪ್ರಕಟಿತವಾದ ಈ ಅಪೂರ್ವಕೃತಿ ಪ್ರಕಟಿತವಾದಾಗ ಜನಪ್ರಿಯವಾಗುವುದರಲ್ಲಿ ಸಂದೇಹವಿಲ್ಲ.*

## ಧ್ವನಿತತ್ತ್ವ

ಕವಿರಾಜಮಾರ್ಗ, ಕನ್ನಡ ಕುವಲಯಾನಂದ, ಅಪ್ರತಿಮವೀರ ಚರಿತೆ– ಈ ಕನ್ನಡ ಅಲಂಕಾರ ಗ್ರಂಥಗಳಲ್ಲಿ 'ಧ್ವನಿತತ್ತ್ವ' ಪ್ರಸ್ತಾಪ ಬಂದಿರುವುದನ್ನು ಈ ಹಿಂದೆ ಸೂಚಿಸಲಾಗಿದೆ. ಪ್ರಾಯಿಕವಾಗಿ ಎಲ್ಲ ಕನ್ನಡ ಕವಿಗಳೂ ಅಲಂಕಾರ ಶಾಸ್ತ್ರಕೆ ಸಂಬಂಧಪಟ್ಟಂತೆ ಅಲಂಕಾರ, ರೀತಿ, ಗುಣ, ರಸ, ಮಾರ್ಗ, ದೇಶಿ – ಎಂಬೀ ಮಾತುಗಳನ್ನು ಪೂರ್ವಕವಿಗಳ ಇಲ್ಲವೆ ತಮ್ಮ ಕಾವ್ಯಗಳ ಪ್ರಶಸ್ತಿಗಳನ್ನು ಹೇಳಿಕೊಳ್ಳುವಾಗ ಬಳಸಿರುವವರೇ ಹೊರತು 'ಧ್ವನಿ'ಯ ಹೆಸರನ್ನು ಎತ್ತಿಲ್ಲ. ಪಂಪನ ಆದಿ ಪುರಾಣದಲ್ಲಿ ಅಲಂಕಾರಧ್ವನಿ ಎಂಬ ಮಾತು ಬರುತ್ತದೆ. ಪದ್ಯದ ಅರ್ಥವನ್ನು ಅದು ಬಂದಿರುವ ಸಂದರ್ಭದಲ್ಲಿ ವಿಚಾರ ಮಾಡಿ ನೋಡುವಲ್ಲಿ ಅದು ಸಂಗೀತ ಶಾಸ್ತ್ರಕ್ಕೆ ಸಂಬಂಧಪಟ್ಟಂತೆ ತೋರುತ್ತದೆ. ಧ್ವನಿತತ್ತ್ವ ಸಂಬಂಧವಾದ ಒಂದೆರಡು ಪಾರಿಭಾಷಿಕ ಶಬ್ದಗಳನ್ನು ಸ್ಪಷ್ಟವಾಗಿ ಪ್ರಯೋಗಿಸಿರುವವನು ನೇಮಿಚಂದ್ರನೊಬ್ಬನೆ, ತನ್ನ 'ಲೀಲಾವತಿ' ಎಂಬ ಕಾವ್ಯದಲ್ಲಿ. ಧ್ವನಿತತ್ತ್ವದ ವಿವರಣೆಗೇ ಮೀಸಲಾದ 'ಧ್ವನ್ಯಾಲೋಕ'ವೆಂಬ ಆನಂದವರ್ಧನನ ಗ್ರಂಥ ೯ನೆಯ

* ಈ ಕೃತಿ ಇದೇ ಲೇಖಕನಿಂದ ಸಂಪಾದಿತವಾಗಿ, ಸದ್ಯದಲ್ಲಿ ಪ್ರಕಟವಾಗಲಿದೆ.

ಜಾಯಗೊಂಡನ ನಿರೂಪಣಾ ವಿಧಾನವನ್ನೂ ಲಕ್ಷ್ಯ ಪದ್ಯದ ವಿವರಣೆಯ ಬಗೆಯನ್ನೂ ಒಂದು ಉದಾಹರಣೆಯಿಂದ ತಿಳಿಯಬಹುದು;

'ಯಿನ್ನು ಪರಕೀಯಾ ಲಕ್ಷಣಂಗಳ ಪೇಳ್ವೆ–
ಕನ್ಯಾ ಪರಕೀಯಾ–
ವಾರ್ಧಿಕ॥ ಧರಣಿಪತಿ ರನ್ನ ಕುಲಶೀಲಕ್ಕೆ ಸಮನಾದ
[ಪಿ]ರಿದು ವಿಭವಾತಿಶಯವುಳ್ಳ ಭೂಪಾಲನಿಗೆ
ತರಳೆಯಳ ಮದುವೆಯನು ಮಾಡಿ ಕೊಡುವೆನೆನುತ್ತ
ನೇಮಿಸಿರಲದನು ತಿಳಿದು॥

ತರುಣಿ ತಾನೊರ್ವ ರೂಪಾತಿಶಯ ಚದುರನಿಗೆ
ಕುರುವಿಟ್ಟು ಮದುಮೆಯಾಗುವೆನೆನುತ ಮನದೊಳಗೆ
ಪರಿಪರಿಯ ಯೋಚನೆಯ ಮಾಡುತಲಿ ಬರೆದ
ಜಾತಕವನೀಕ್ಷಿಸುತಿರ್ದಳು॥

"ಟೀಕು ಪರಪುರುಷನ ಮೇಲಿನ ಅನುರಾಗವನು ಪ್ರಕಟಮಾಡದಿರಲವಳು, ಪರಕೀಯಾಯೆನಿಸುವಳು. ಯೀ ಪರಕೀಯಾದಲ್ಲಿ ಕನ್ಯಾ ಪರಕೀಯಾಯೆಂದು ಪರೋಢಾ ಪರಕೀಯಾ ಯೆಂದು ಯೆರಡು ತೆರ, ಎಂತೆಂದರೆ ಮಾತೃ ಪಿತೃಗಳ ಆಜ್ಞದೊಳಿದ್ದು ಪರಪುರುಷನಲ್ಲಿ ಪ್ರೀತಿಯುಳ್ಳವಳೇ ಕನ್ಯಾ ಪರಕೀಯಾ, ಮದುವೆಯಾಗಿ ಪತಿಯಾಜ್ಞೆಯೊಳಗಿದ್ದು ಪರಪುರುಷನಲ್ಲಿ ಪ್ರೀತಿಯುಳ್ಳವಳು ಪರೋಢಾಪರಕೀಯಾ ಯೆನಿಸುವಳು.'

'ಕನ್ಯಾ ಪರಕೀಯಾ ಉದಾಹರಣೆ ಟೀಕು'

'ಅರಸು ತನ್ನ ಕುಲಶೀಲಕ್ಕೆ ವಿಭವಕ್ಕೆ ಸರಿಯಾದ ವರಕ್ಕೆ ಮದುವೆ ಮಾಡಿ ಕೊಡುವೆನೆಂದು ಮನಸ್ಸಿನಲ್ಲಿ ನಾನಾ ಪ್ರಕಾರ ಯೋಚಿಸುತ್ತ ತನ್ನ ಮನಸ್ಸಿನ ಯೋಚನೆ ಸಫಲವಾದೀತೋ ಆಗದೋ ಯೆಂದು ತನ್ನ ಜಾತಕವೀಕ್ಷಿಸುತಿರ್ದಳು. ತಂದೆ ನೇಮಿಸಿದ್ದು ಬಿಟ್ಟು ಮತ್ತೊಬ್ಬನ ಗುರುತಿಟ್ಟದ್ದರಿಂದ ಪರಕೀಯತ್ವ ಸಿದ್ಧವಾಯಿತು. ಯಿದು ಕ್ಷತ್ರಿಯಾದಿಗಳಲ್ಲೇ ಹೊರತು ಬ್ರಾಹ್ಮ[ಣ]ರಲ್ಲಿ ಕೂಡದು.'

ಶೃಂಗಾರ ರತ್ನಾಕರ, ರಸರತ್ನಾಕರ, ರಸಮಂಜರಿ – ಈ ಮೂರು ರಸ ವಿಷಯಕ ಗ್ರಂಥಗಳಲ್ಲಿ ಪ್ರತಿಪಾದಿತವಾಗಿರುವ ವಿಷಯ ಒಂದೇ. ಮೂರರಲ್ಲಿಯೂ

ತಿಳಿಯಬೇಕೆಂದು ಸೂಚಿಸಿದ್ದಾನೆ. ಮೊದಲನೆಯದು ಮಮ್ಮಟನ ಕಾವ್ಯ ಪ್ರಕಾಶವೇ ಇರಬೇಕು. ಎರಡನೆಯದು ಯಾವುದೋ ತಿಳಿದು ಬಂದಿಲ್ಲ. ಅವನು ಕೊಡುವ ಉದಾಹರಣೆಗಳು ಬಹುಮಟ್ಟಿಗೆ ಸಂಸ್ಕೃತ ಲಕ್ಷಣ ಗ್ರಂಥಗಳಿಂದ ಆಯ್ದುಕೊಂಡವು.

ನಿರೂಪಣ ಪದ್ಧತಿಗೆ ಉದಾಹರಣೆ:

"ವಚನಂ॥ ಮತ್ತಂ ಕಾವ್ಯ ವಿಶೇಷಭೇದಂಗಳಂ ಪೇಳ್ವೆನದೆಂತೆಂದೊಡೆ– ಸೂ॥ ಆವೆಡೆಯೊಳಂ ವಾಚ್ಯದತ್ತಣಿಂದ ಅಧಿಕಮಪ್ಪ ವ್ಯಂಗ್ಯಮನುಳ್ಳುದು ಉತ್ತಮ ಕಾವ್ಯಂ. ಆವುದಾನೊಂದೆಡೆಯೊಳ್ ವಾಚ್ಯಾರ್ಥತ್ತಣಿಂದಂ ಅತಿಶಯವಾಗಿ ತೋರುತಿರ್ಪ ವ್ಯಂಗ್ಯಮನುಳ್ಳುದು ಮಧ್ಯಮಕಾವ್ಯಂ. ಶಬ್ದಾರ್ಥೋಭಯ ಚಿತ್ರಮಾಗಿ ವ್ಯಂಗ್ಯ ರಹಿತ ಮಾಪ್ಪುದು ಅಧಮ ಕಾವ್ಯಂ"

ಅಧಮ ಕಾವ್ಯಕ್ಕೆ ಉದಾಹರಣೆ:

"ಎಳನೀರಂ ತೆಂಗು ರಂಭಾಪ್ರತತಿಗೆರೆಯೆ, ರಂಭಾಳಿಗಳ್ ತಮ್ಮ ನೀರಾ–
ವಳಿಯಂ ಪುಂಡ್ರೇಕ್ಷು ವಾಟಾವಳಿಗೆ ಸುರಿಯೆ ಪುಂಡ್ರೇಕ್ಷುಗಳ್ ತಮ್ಮ ನೀರಂ
ಕಳಕ್ಷೇತ್ರಕ್ಕೆ ಪೊರಂಬರಿಯಿಸೆ; ಕಳಮಶ್ರೇಣಿಯಳ್ ತಮ್ಮ ಪಾಲಂ
ಗಿಳಿವಿಂಡಿಂಗೀಯೆ, ಚೆಲ್ವಾದುದು ಪುರಬಹಿರುದ್ಯಾನ ಕೇದಾರಜಾಳಂ."

[ತೆಂಗಿನ ಮರಗಳು ಬಾಳೆಯ ಗಿಡಗಳ ಗುಂಪಿಗೆ ತಮ್ಮ ಎಳನೀರನ್ನು ಎರೆಯುತ್ತಿದ್ದುವು. ಬಾಳೆಯ ಗಿಡಗಳು ತಮ್ಮಲ್ಲಿ ಕೂಡಿಕೊಂಡ ನೀರನ್ನು ಕಬ್ಬಿನ ಮಡಿಗಳಿಗೆ ಸುರಿಯುತ್ತಿದ್ದವು. ಕಬ್ಬಿನ ಮಡಿಗಳು ತಮ್ಮಲ್ಲಿದ್ದ ನೀರನ್ನು ಬತ್ತದ ಗೆದ್ದೆಗಳಿಗೆ ಹರಿಯಬಿಡುತ್ತಿದ್ದವು. ಬತ್ತದ ಗೆದ್ದೆಗಳು ತಮ್ಮ (ತೆನೆಗಳ) ಹಾಲನ್ನು ಗಿಳಿಗಳ ಬಳಗಕ್ಕೆ ಕೊಡುತ್ತಿದ್ದವು. ಹೀಗೆ, ಪಟ್ಟಣದ ಹೊರಗಿನ ಉದ್ಯಾನವನಗಳ ಮತ್ತು ಗೆದ್ದೆಗಳ ಸಮೂಹವು ಚೆಲುವಾಗಿತ್ತು.]

ಮೇಲಿನ ಪದ್ಯದಲ್ಲಿ ಮುಕ್ತಪದಗ್ರಹಣಾಲಂಕಾರ ಎಂಬ ಶಬ್ದಾಲಂಕಾರ ಇದೆಯೇ ಹೊರತು ಹೃದಯಂಗವಾದ ಅರ್ಥಸೌಂದರ್ಯ ಯಾವುದೂ ಇಲ್ಲ. ಅರ್ಥದಲ್ಲಿಯೂ ಕವಿಕಲ್ಪನೆಯ ಚಮತ್ಕಾರವಿದೆ, ಅಷ್ಟೆ. ಆದ್ದರಿಂದ, ಇದು ಅಧಮಕಾವ್ಯ. (ಅಧಮಕಾವ್ಯ ಎಂದರೆ ನಿಕೃಷ್ಟವಾದದ್ದು, ಓದಲು ಯೋಗ್ಯವಾದದ್ದಲ್ಲ ಎಂದು ಅರ್ಥವಲ್ಲ. ಕಾವ್ಯದ ದರ್ಜೆಗಳಲ್ಲಿ ಮೂರನೆಯ ದರ್ಜೆಯದು ಎಂದಷ್ಟೇ ತಾತ್ಪರ್ಯ.)

ವಸ್ತುವಿನ ವರ್ಣನೆಯಿಂದ ಅಲಂಕಾರ ವ್ಯಂಗ್ಯವಾಗಿ ತೋರಿ ಬಂದು, 'ಅಲಂಕಾರ ಧ್ವನಿ' ಸಿದ್ಧಿಸುವುದಕ್ಕೆ ಉದಾಹರಣೆ:

ಶತಮಾನದಲ್ಲೇ ಹುಟ್ಟಿದ್ದು, ಮಮ್ಮಟನ 'ಕಾವ್ಯಪ್ರಕಾಶ'ದಲ್ಲಿ ಅದು ಪುನಃ ಪ್ರತಿಪಾದಿತವಾಗಿದ್ದರೂ ೧೬ನೆಯ ಶತಮಾನದವರೆಗೂ ಆ ವಿಷಯವನ್ನು ಕುರಿತು ಕನ್ನಡದಲ್ಲಿ ಯಾರೂ ಗ್ರಂಥ ರಚನೆ ಮಾಡದಿರುವುದು ನಿಜವಾಗಿಯೂ ಆಶ್ಚರ್ಯಕರವಾಗಿದೆ. ಈ ಪರಿಸ್ಥಿತಿಯಲ್ಲಿ, ರಸರತ್ನಾಕರವನ್ನು ಬರೆದ ಕವಿ ಸಾಳ್ವನು ಬರೆದಿರಬಹುದೆಂದು ಊಹಿಸಲಾದ 'ಶಾರದವಿಲಾಸ' ಎಂಬ ಗ್ರಂಥ ದೊರಕಿರುವುದು ಸಂತೋಷದ ಸಂಗತಿ. ಆದರೆ, ನಮ್ಮ ದುರ್ದೈವದಿಂದ, ಇದರ ಎರಡನೆಯ ಪರಿಚ್ಛೇದ ಮಾತ್ರ ದೊರಕಿದೆ. (ರಸರತ್ನಾಕರದೊಂದಿಗೇ ಈ ಗ್ರಂಥ ಭಾಗವೂ ಪ್ರಕಟವಾಗಿದೆ.)

ಧ್ವನಿ ಎಂದರೇನು ಎಂಬುದನ್ನು ಈ ಹಿಂದೆಯೇ ಸೂಚಿಸಿದೆ. ಇದರ ಭೇದಗಳ ವಿವರಣೆ ತುಂಬ ತೊಡಕಾದುದು. ಧ್ವನಿಯಲ್ಲಿ ವಸ್ತುಧ್ವನಿ, ಅಲಂಕಾರಧ್ವನಿ, ರಸಧ್ವನಿ ಎಂಬ ಮೂರು ಬಗೆ.* ಈಗ ಸಿಕ್ಕಿರುವ ಗ್ರಂಥ ಭಾಗದ ಎರಡನೆಯ ಪರಿಚ್ಛೇದದಲ್ಲಿ 'ಧ್ವನಿವ್ಯಂಗ್ಯ' ವಿವರಣೆ ಬಂದಿದೆ. "ವ್ಯಂಗ್ಯ ಪ್ರಭೇದಗಳು ಅನೇಕ ಅವಕ್ಕೆ ಅಂಗವಾಗಿ ಬರುವ ವಾಚ್ಯಾಲಂಕಾರಾದಿಗಳ ಪ್ರಭೇದಗಳು ಅನೇಕ. ಇವುಗಳಿಗೆ ಬೇರೆ ರೀತಿಯಲ್ಲಿ ಪರಸ್ಪರ ಸಂಬಂಧವನ್ನು ಕಲ್ಪಿಸಿ ನೋಡಿದರೆ ಪ್ರಭೇದಗಳ ಸಂಖ್ಯೆ ಅನಂತವಾಗುತ್ತದೆ; ಇವನ್ನು ಲೆಕ್ಕಿಸುವುದೇ ಅಸದಳ; ಇನ್ನು ನಿರ್ದೇಶಿಸುವುದೆಲ್ಲ ಬಂತು![೨೨] ಎಂಬ ವಿವೇಕ ಪೂರ್ಣವಾದ ಮಾತಿನೊಂದಿಗೆ ಈ ವಿಚಾರ ವಿಮರ್ಶೆಯ ಪ್ರಯತ್ನವನ್ನು ಕೈಬಿಟ್ಟು 'ಶಾರದಾ ವಿಲಾಸ'ದ ವಿಚಾರವಾಗಿ ಒಂದೆರಡು ಮಾತು ಹೇಳಿ, ಅದರಲ್ಲಿನ ವಿಷಯ ನಿರೂಪಣೆಯ ಕ್ರಮವನ್ನು ಪರಿಚಯ ಮಾಡಿಕೊಳ್ಳೋಣ.

ಶಾರದಾ ವಿಲಾಸದ ಕರ್ತೃ – ಆತ ಸಾಳ್ವನೇ ಆಗಿರಲಿ ಬೇರೊಬ್ಬನೇ ಆಗಿರಲಿ – ಈಗ ಸಿಕ್ಕಿರುವ ಗ್ರಂಥ ಭಾಗದಲ್ಲಿ ಧ್ವನಿತತ್ತ್ವದ ಕ್ರಮವನ್ನು ಶಾಸ್ತ್ರೀಯವಾಗಿ ವಿವರಿಸಿರುವುದನ್ನು ನೋಡಿದರೆ, ಅವನು ಅದನ್ನು ಚೆನ್ನಾಗಿ ಬಲ್ಲನೆಂದು ಹೇಳಬಹುದು. ಒಂದು ಕಡೆ ತಾನು ಹೇಳಿರುವುದಕ್ಕಿಂತ ಹೆಚ್ಚಿನ ವಿಚಾರವನ್ನು 'ಕಾವ್ಯಪ್ರಕಾಶಿಕೆ' ಮತ್ತು 'ಸಾಹಿತ್ಯ ಸುಧಾರ್ಣವ'ದಲ್ಲಿ ನೋಡಿ

* ಈಚೆಗೆ 'ದರ್ಶನಧ್ವನಿ' ಎಂಬ ಒಂದು ಪ್ರಕಾರವನ್ನೂ ಕಲ್ಪಿಸಲಾಗಿದೆ. ಎಲ್ಲ ವಿಷಯಗಳಂತೆ 'ದರ್ಶನ'ವೂ ಕಾವ್ಯದ ವಸ್ತುವಾಗಬಹುದು. ಕಾವ್ಯದಲ್ಲಿ 'ದರ್ಶನ' (ಆಧ್ಯಾತ್ಮಿಕ ನೋಟ) ವ್ಯಂಗ್ಯವಾಗಿದ್ದರೆ, ಅದೂ ವಸ್ತು ಧ್ವನಿಯಲ್ಲೇ ಅಡಕವಾಗಿರುತ್ತದೆ. ಇಂಥ ಒಂದು ಪ್ರತ್ಯೇಕ ಪ್ರಕಾರವನ್ನು ಕಲ್ಪಿಸುವ ಅಗತ್ಯ ಕಾಣದು.

ಲೋಪದೋಷಗಳೇನು, ಇವುಗಳಲ್ಲಿ ಸ್ವತಂತ್ರ ವಿಚಾರಗಳೇನಾದರೂ ಇವೆಯೆ – ಎಂದು ಸಂಸ್ಕೃತ ಮೂಲ ಕೃತಿಗಳೊಂದಿಗೆ ಹೋಲಿಸಿ, ತೂಗಿ ನೋಡಿ, ಅವುಗಳ ಬೆಲೆ ಕಟ್ಟುವ ಉದ್ದೇಶದಿಂದ ಅವುಗಳನ್ನು ಅಭ್ಯಾಸ ಮಾಡುವ ವಿದ್ಯಾರ್ಥಿಗಳಿಗೂ, ಸಂಸ್ಕೃತ ಭಾಷೆಯ ಗಾಢವಾದ ಪರಿಚಯವಿಲ್ಲದಿದ್ದರೂ ಸಂಸ್ಕೃತ ಲಕ್ಷಣಗ್ರಂಥಗಳನ್ನು ಓದಿ ಅರ್ಥಮಾಡಿಕೊಳ್ಳಬೇಕೆಂದು ಬಯಸುವವರಿಗೂ ಅನುಕೂಲವಾಗುವಂತೆ ಅವುಗಳನ್ನು ಭಾಷಾಂತರ ಮಾಡುವ ಕೆಲಸ ನಡೆದೇ ಇರಲಿಲ್ಲ. ಈ ಕೊರತೆಯನ್ನು ಗಮನಿಸಿ, ಉಭಯಭಾಷಾ ವಿದ್ವಾಂಸರಾದ ಕೆ.ಕೃಷ್ಣಮೂರ್ತಿಯವರು ಭಾಮಹನ 'ಕಾವ್ಯಾಲಂಕಾರ', ದಂಡಿಯ 'ಕಾವ್ಯಾದರ್ಶ', ವಾಮನನ 'ಕಾವ್ಯಾಲಂಕಾರ ಸೂತ್ರ – ವೃತ್ತಿ', ಮಮ್ಮಟನ 'ಕಾವ್ಯಪ್ರಕಾಶ', ಆನಂದವರ್ಧನನ 'ಧ್ವನ್ಯಾಲೋಕ' ಮುಂತಾದ ಪ್ರಮುಖ ಲಕ್ಷಣಗ್ರಂಥಗಳನ್ನೆಲ್ಲಾ ತಿಳಿಯಾದ ಅಂದವಾದ ಹೊಸಗನ್ನಡದಲ್ಲಿ ಭಾಷಾಂತರ ಮಾಡಿ, ಕವಿಕೃತಿ ವಿಷಯಕವಾಗಿ ವಿಸ್ತಾರವಾದ ಸಾಹಿತ್ಯಪೂರ್ಣವಾದ ವಿಮರ್ಶಾತ್ಮಕವಾದ ಪೀಠಿಕೆಗಳೊಡನೆ ಪ್ರಕಟಿಸಿ, ಒಂದು ಅಭೂತಪೂರ್ವವಾದ ಸಾಧನೆಯನ್ನು ಮಾಡಿದ್ದಾರೆ; ಅಲಂಕಾರಶಾಸ್ತ್ರ ಪ್ರಪಂಚದ ವಿವಿಧತೆಯನ್ನೂ ವಿಸ್ತಾರ ವನ್ನೂ ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟಿದ್ದಾರೆ.

ಕನ್ನಡ ಲಕ್ಷಣ ಗ್ರಂಥಗಳು ಕೂಡ ಸಾಮಾನ್ಯ ಮಟ್ಟದ ವಿದ್ಯಾರ್ಥಿಗಳಿಗೂ ಸಾಮಾನ್ಯ ಜನಕ್ಕೂ ಕಷ್ಟತರವೆಂದೇ ಹೇಳಬೇಕು. ಪೂರ್ವ ವಿದ್ವಾಂಸರು ಈ ಗ್ರಂಥಗಳನ್ನು ಸಂಪಾದನೆ ಮಾಡಿ ಪ್ರಕಟಿಸಿ ಉಪಕರಿಸಿದ್ದರು. ಇವು ಸುಲಭವಾಗಿ ಅರ್ಥವಾಗುವಂತೆ ಇವುಗಳಿಗೆ ಟೀಕೆ ಟಿಪ್ಪಣಿಗಳನ್ನು ಬರೆಯಬೇಕಾದ ಅಗತ್ಯವೂ ಇದ್ದಿತು. ಈಚೆಗೆ, ಇಂಥ ಟೀಕೆ ಟಿಪ್ಪಣಿಗಳ ಸಮೇತ, ಕೃತಿ ಮತ್ತು ಕೃತಿಕರ್ತನ ಬಗೆಗೆ ವಿಮರ್ಶಕವಾದ ಪೀಠಿಕೆಗಳೊಡನೆ, 'ಕವಿರಾಜಮಾರ್ಗ', 'ಉದಯಾದಿತ್ಯಾಲಂಕಾರ', 'ಕನ್ನಡ ಕುವಲಯಾನಂದ' ಮುಂತಾದ ಗ್ರಂಥಗಳು ಶಾಸ್ತ್ರೀಯವಾಗಿ ಸಂಪಾದಿತವಾಗಿ ಹೊರಬಂದಿವೆ. ಈ ಬಗೆಯ ಕೆಲಸ ಮುಂದುವರಿಯಬೇಕಾಗಿದೆ.

ಕಾವ್ಯಕ್ಕೆ ಸಂಬಂಧಪಟ್ಟ ಶಾಸ್ತ್ರವನ್ನು poetics ಎಂದು ಕರೆಯುತ್ತಾರೆ. ಅರಿಸ್ಟಾಟಲ್ ಎಂಬ ಗ್ರೀಕ್ ಲಾಕ್ಷಣಿಕ ಪಾಶ್ಚಾತ್ಯ ಕಾವ್ಯಶಾಸ್ತ್ರದ ಪ್ರಥಮಾಚಾರ್ಯ. ಅವನಿಂದ ಮೊದಲ್ಗೊಂಡು ಇಂದಿನವರೆಗೆ ಅನೇಕ ಪಾಶ್ಚಾತ್ಯ ಕಾವ್ಯ ಸಂಪ್ರದಾಯಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಸಾಹಿತ್ಯದ ವಿವಿಧ ಮುಖಗಳನ್ನು ಕುರಿತು ಚರ್ಚಿಸುತ್ತ ಬಂದಿದ್ದಾರೆ; ಅಪಾರ ವಿಮರ್ಶಾ ಗ್ರಂಥರಾಶಿಯನ್ನು

"ಸುತಶೋಕವಹ್ನಿದಗ್ಧೋ–
ನ್ನತ ಕಾಯಂ ಬಾಹ್ಯಕುಂಡ ಸಂಸ್ಥಿತ ಶಿಖಿ ತ–
ನತಿ ಶೀತಮೆಂದು ನಿಲ್ಲದೆ
ದ್ರುತಗತಿಯಿಂ ಅಗಾಧಮಪ್ಪ ಮಡುವೊಳ್ ಬಿಳ್ದಂ."

[ಪುತ್ರ ಶೋಕವೆಂಬ ಅಗ್ನಿಯಿಂದ ಬೆಂದ ಎತ್ತರವಾದ ದೇಹವುಳ್ಳವನು, ಹೊರಗೆ ಅಗ್ನಿಕುಂಡದಲ್ಲಿದ್ದ ಉರಿ ಬಹಳ ತಣ್ಣಗಿದೆ ಎಂದು ತಿಳಿಸು, ಬೇಗ ನಡೆದು ಹೋಗಿ ಆಳವಾದ ಮಡುವಿನಲ್ಲಿ ಬಿದ್ದನು.]

"ವಿವರಣಂ॥ ಇಲ್ಲಿ ವಸಿಷ್ಠಂ ಪುತ್ರಶೋಕದಿಂ ಬೆಂದು ಅಗ್ನಿಯಂ ಪೊಕ್ಕುಡೆ ಬೇಯುನ ಎಂಬ ವಾಕ್ಯಾರ್ಥರೂಪಮಪ್ಪ ವಸ್ತುಸ್ವಭಾವಂ, ಶೋಕಂ ಬಾಹ್ಯಾಗ್ನಿಯಿಂದಧಿಕಮೆಂಬ ವ್ಯತಿರೇಕಾಲಂಕಾರಮಂ ಧ್ವನಿಯಿನಿಸಿತು."

○ ○ ○ ○ ○ ○

ಇಲ್ಲಿಗೆ, ಇಪ್ಪತ್ತನೆಯ ಶತಮಾನದವರೆಗೆ ಅಲಂಕಾರ ಶಾಸ್ತ್ರದಲ್ಲಿ ರಚಿತವಾದ ಕನ್ನಡ ಲಕ್ಷಣ ಗ್ರಂಥಗಳ ಒಂದು ಬಹು ಸ್ಥೂಲವಾದ ಪರಿಚಯ ಮುಗಿದಂತಾಯಿತು. ಈ ಗ್ರಂಥಗಳೆಲ್ಲವೂ ಸಾಧಾರಣವಾಗಿ ಹಳಗನ್ನಡದಲ್ಲಿಯೇ ಇರುವುದರಿಂದ, ಅಲಂಕಾರಶಾಸ್ತ್ರವನ್ನು ಹೊಸಗನ್ನಡದಲ್ಲಿ ವಿವರಿಸಬೇಕಾದ ಅಗತ್ಯವಿದ್ದಿತು. ಈ ನಿಟ್ಟಿನಲ್ಲಿ ಮೊದಲನೆಯ ಶ್ಲಾಘ್ಯವಾದ ಪ್ರಯತ್ನವನ್ನು ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡು, ಹಳಗನ್ನಡ ವ್ಯಾಕಾರಣ ಅಲಂಕಾರಶಾಸ್ತ್ರ ಭಾಷಾ ಚರಿತ್ರೆ ಸಾಹಿತ್ಯ ಚರಿತ್ರೆ, ಇವೆಲ್ಲವನ್ನೂ ಒಳಗೊಂಡಂತೆ 'ಕನ್ನಡ ಕೈಪಿಡಿ' ಒಂದನ್ನು ಬೇರೆ ಬೇರೆ ವಿದ್ವಾಂಸರಿಂದ ಬರೆಯಿಸಿ ಪ್ರಕಟಿಸಿತು. ಈ ಗ್ರಂಥದಲ್ಲಿ ದಿವಂಗತ ಎ.ಆರ್.ಕೃಷ್ಣಶಾಸ್ತ್ರಿಗಳು ಬರೆದಿರುವ 'ಅಲಂಕಾರ ಶಾಸ್ತ್ರ'ದ ಭಾಗ ಬಹು ಅಡಕವಾಗಿಯೂ ಸಾರವತ್ತಾಗಿಯೂ ಇದೆ. ವಿದ್ಯಾರ್ಥಿಗಳಿಗೆ ಅತ್ಯಂತ ಉಪಯುಕ್ತವಾದ ಬರವಣಿಗೆ ಎನಿಸಿದೆ. ಈ ಕ್ಷೇತ್ರದಲ್ಲಿ ಅತ್ಯಂತ ಗಮನಾರ್ಹವಾದ ಕೃತಿ ಎಂದರೆ, ದಿವಂಗತ ತೀ.ನಂ.ಶ್ರೀಕಂಠಯ್ಯನವರು ಬರೆದಿರುವ 'ಭಾರತೀಯ ಕಾವ್ಯ ಮೀಮಾಂಸೆ'. ಇದನ್ನು ಒಂದು 'ಆಚಾರ್ಯಕೃತಿ' ಎಂದು ಗ್ರಂಥದ ಮುನ್ನುಡಿಯಲ್ಲಿ ಕೆ.ವಿ.ಪುಟ್ಟಪ್ಪನವರು ಕರೆದಿರುವುದು ಉಚಿತವಾಗಿದೆ.

ಕನ್ನಡ ಲಕ್ಷಣ ಗ್ರಂಥಗಳೆಲ್ಲವೂ ಸಂಸ್ಕೃತ ಲಕ್ಷಣ ಗ್ರಂಥಗಳನ್ನು ಅನುಸರಿಸಿ ಬರೆದವು ಎಂಬ ಸಂಗತಿ ಸ್ಪಷ್ಟವಾಗಿದೆಯಷ್ಟೆ. ಈ ಗ್ರಂಥಗಳನ್ನು ಬರೆದವರು ಎಷ್ಟರ ಮಟ್ಟಿಗೆ ಮೂಲವನ್ನು ಅನುಸರಿಸಿದ್ದಾರೆ, ಇವುಗಳಲ್ಲಿರಬಹುದಾದ

## ಅಡಿ ಟಿಪ್ಪಣಿಗಳು

೧. ಅಕ್ಕಲೆ ನರಸಿಂಹಶಾಸ್ತ್ರೀ: 'ಕರ್ಣಾಟಕ ಚಂದ್ರಾಲೋಕ', ೧೯೦೫; ಪೀಠಿಕೆ ಪು. ೧.

೨. ದಂಡಿ: ಕಾವ್ಯಾದರ್ಶ (ii–೧); 'ಕಾವ್ಯ ಶೋಭಾಕರಾನ್ ಧರ್ಮಾನ್ ಅಲಂಕಾರಾನ್ ಪ್ರಚಕ್ಷತೇ'

೩. ವಾಮನ: ಕಾವ್ಯಾಲಂಕಾರ ಸೂತ್ರ (i–೧,೨,೩); 'ಸೌಂದರ್ಯ ಮಲಂಕಾರಃ'

೪. ತೀ.ನಂ.ಶ್ರೀಕಂಠಯ್ಯ: 'ಭಾರತೀಯ ಕಾವ್ಯಮೀಮಾಂಸೆ, ೧೯೫೩; ಪು. ೨೬೨

೫. ಡಿ.ವಿ.ಗುಂಡಪ್ಪ: 'ಜೀವನ ಸೌಂದರ್ಯ ಮತ್ತು ಸಾಹಿತ್ಯ,' ೪ನೆಯ ಮುದ್ರಣ, ಪು.೨೮ರ ಅಡಿಟಿಪ್ಪಣಿ; "ಸುಂದರ ಎಂಬ ಪದವು 'ಉನ್ದ' ಎಂಬ ಧಾತುವಿನಿಂದ ಬಂದದ್ದು. 'ಉನ್ದ' ಎಂದರೆ ಆರ್ದ್ರ ಮಾಡುವುದು, ಒದ್ದೆ ಮಾಡುವುದು, ತೋಯಿಸುವುದು – ಯಾವುದು ಮನಸ್ಸನ್ನು ಚೆನ್ನಾಗಿ ತೋಯಿಸಬಲ್ಲುದೋ, 'ಸರಸ' ಮಾಡಬಲ್ಲುದೋ ಅದು ಸುಂದರ." ('ಸರಸ' ಎಂದರೆ ರಸದಿಂದ ಕೂಡಿರುವುದು ಎಂದು ಅರ್ಥ)

೬. ಭಾಮಹ: ಕಾವ್ಯಾಲಂಕಾರ (i–೧೬)

೭. ಕೆ.ಕೃಷ್ಣಮೂರ್ತಿ: ಕನ್ನಡ ಕಾವ್ಯಾಲಂಕಾರ, ಶಾರದಾ ಮಂದಿರ, ಮೈಸೂರು, ೧೯೬೧; ಪೀಠಿಕೆ, ಪು. xiii

೮ ತೀ.ನಂ.ಶ್ರೀಕಂಠಯ್ಯ: ಭಾರತೀಯ ಕಾವ್ಯಮೀಮಾಂಸೆ, ೧೯೫೩; ಪು.೨೮, ೨೯, ೩೦.

೯. ವಿಶ್ವನಾಥ: ಸಾಹಿತ್ಯ ದರ್ಪಣ (ಕನ್ನಡ ಕೈಪಿಡಿ; ಪು.೨೦೩ರಲ್ಲಿ ಉದ್ಧರಿಸಿದೆ.)

೧೦. ಜಗನ್ನಾಥ ಪಂಡಿತ: ರಸಗಂಗಾಧರ (ಕನ್ನಡ ಕೈಪಿಡಿ, ಪು.೨೦೩ರಲ್ಲಿ ಉದ್ಧರಿಸಿದೆ.)

೧೧. ಎ.ಆರ್.ಕೃಷ್ಣಶಾಸ್ತ್ರಿ: ಕನ್ನಡ ಕೈಪಿಡಿ, ೩ನೆಯ ಭಾಗ, (ix–i), ಅಲಂಕಾರ; ಪು. ೨೦೬.

೧೨. ತೀ.ನಂ.ಶ್ರೀಕಂಠಯ್ಯ: ಭಾರತೀಯ ಕಾವ್ಯಮೀಮಾಂಸೆ, ೧೯೫೩; ಅರಿಕೆ, ಪು. xiii

೧೩. ದಂಡಿ: ಕಾವ್ಯಾದರ್ಶ(i–೧೦); 'ತೈಃ ಶರೀರಶ್ಚ ಕಾವ್ಯಾನಾಂ ಅಲಂಕಾರಾಶ್ಚದರ್ಶಿತಾಃ। ಶರೀರಂ ತಾವದಿಷ್ಟಾರ್ಥವ್ಯವಚ್ಛಿನ್ನಾ ಪದಾವಲೀ

ಸೃಷ್ಟಿಮಾಡಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿ ಸಾಹಿತ್ಯ ಲಕ್ಷಣ ಸೂತ್ರಗಳನ್ನೂ ಒಳಗೊಂಡಂತೆ ಸಾಹಿತ್ಯ ವಿಮರ್ಶೆ ಅಗಾಧವಾಗಿ ಬೆಳೆದು ಬಂದಿದೆ. ಇಂಗ್ಲೀಷ್ ವಿದ್ಯಾಭ್ಯಾಸದ ಪರಿಣಾಮವಾಗಿ ಕನ್ನಡದಲ್ಲಿಯೂ ಪಾಶ್ಚಾತ್ಯ ಕಾವ್ಯ ಸಂಪ್ರದಾಯಗಳು ಬೇರುಬಿಟ್ಟು, ಅವಕ್ಕೆ ಅನುಗುಣವಾಗಿ ವಿಮರ್ಶಾಶಾಸ್ತ್ರ ವ್ಯಾಸಂಗವೂ ನಡೆಯುತ್ತ ಬಂದಿದೆ. ಇಂಗ್ಲೀಷ್ ಭಾಷೆ ಮತ್ತು ಸಾಹಿತ್ಯಗಳನ್ನು ವ್ಯಾಸಂಗ ಮಾಡಿರುವ ನಮ್ಮ ವಿದ್ವಾಂಸರು ಪಾಶ್ಚಾತ್ಯ ಸಾಹಿತ್ಯ ಸೂತ್ರಗಳನ್ನೂ ವಿಮರ್ಶಾ ಪದ್ಧತಿಯನ್ನೂ ಲೇಖನಗಳ ಮೂಲಕವೂ, ಅನುವಾದಗಳ ಮೂಲಕವೂ ಪರಿಚಯ ಮಾಡಿಕೊಡುತ್ತಿದ್ದಾರೆ. ಹಳಗನ್ನಡ ಕಾವ್ಯಗಳನ್ನು ಪಾಶ್ಚಾತ್ಯ ಸಾಹಿತ್ಯ ಸೂತ್ರಗಳ ಬೆಳಕಿನಲ್ಲಿ, ಪಾಶ್ಚಾತ್ಯ ವಿಮರ್ಶಾ ಶಾಸ್ತ್ರವನ್ನು ಅನ್ವಯಿಸಿ, ವಿಮರ್ಶೆ ಮಾಡುವ ಹಾಗೂ ಬೆಲೆ ಕಟ್ಟುವ ಕಾರ್ಯ ರೂಢಿಗೆ ಬಂದಿದೆ. ಆಧುನಿಕ ಕನ್ನಡ ಸಾಹಿತ್ಯವನ್ನು ಪಾಶ್ಚಾತ್ಯ ಪದ್ಧತಿಗೆ ಅನುಗುಣವಾಗಿಯೇ ವಿಮರ್ಶೆ ಮಾಡಬೇಕಾದದ್ದು ಉಚಿತವಾಗಿಯೂ ಇದೆ. ಆದರೆ, ನಮ್ಮ ಪ್ರಾಚೀನ ಕೃತಿಗಳು ಭಾರತೀಯ ಕಾವ್ಯ ಲಕ್ಷಣದ ಚೌಕಟ್ಟಿನಲ್ಲಿ ನಿರ್ಮಿತವಾದವು. ಭಾರತೀಯ ಕಾವ್ಯಗಳು ಹಾಗೂ ಕಾವ್ಯ ಮೀಮಾಂಸೆ ಭಾರತೀಯ ಸಂಸ್ಕೃತಿಯ ನೆಲದಲ್ಲಿ ಹುಟ್ಟಿ ಬೆಳೆದಿವೆ. ಆದ್ದರಿಂದ, ನಮ್ಮ ಕಾವ್ಯಗಳ ಸ್ವಾರಸ್ಯವನ್ನು ಪೂರ್ಣವಾಗಿ ಸವಿಯಬೇಕಾದರೆ, ಭಾರತೀಯ ಕಾವ್ಯ ಲಕ್ಷಣಗಳ ಬೆಳಕನ್ನು ಅವುಗಳ ಮೇಲೆ ಹಾಯಿಸಿಯೇ ಅವುಗಳ ಸ್ವರೂಪವನ್ನು ಕಾಣಬೇಕಾಗಿದೆ. ಹಾಗೆಯೇ, ಸಾರ್ವತ್ರಿಕವೂ ಸಾರ್ವಕಾಲಿಕವೂ ಆದ ಮೂಲಭೂತ ಭಾರತೀಯ ಕಾವ್ಯತತ್ತ್ವಗಳನ್ನು ಅನ್ವಯಿಸಿ, ಆಧುನಿಕ ಕನ್ನಡ ಸಾಹಿತ್ಯವನ್ನು ವಿಮರ್ಶೆ ಮಾಡುವ ಪದ್ಧತಿಯೂ ಒಂದು ಮಿತಿಯಲ್ಲಿ ರೂಢಿಗೆ ಬರಬೇಕಾಗಿದೆ. ಪಾಶ್ಚಾತ್ಯ ಮತ್ತು ಭಾರತೀಯ ಸಾಹಿತ್ಯ ಮತ್ತು ಸಾಹಿತ್ಯಶಾಸ್ತ್ರಗಳಲ್ಲಿರುವ ಸಮಾನಾಂಶವನ್ನು ಗುರುತಿಸಬೇಕಾಗಿದೆ. ಈ ದಿಸೆಯಲ್ಲಿಯೂ ಕಾರ್ಯಪ್ರಯತ್ನಗಳು ನಡೆಯತೊಡಗಿವೆ. ಈ ವಿಚಾರದ ಪರಿಚಯಕ್ಕೆ ಪ್ರತ್ಯೇಕ ಗ್ರಂಥವೇ ಬೇಕು. ಕಡೆಯ ಪಕ್ಷ, ಪ್ರತ್ಯೇಕ ಅಧ್ಯಾಯವಾದರೂ ಬೇಕು. ಈ ಗ್ರಂಥದ ಉದ್ದೇಶದಲ್ಲಿ ಈ ವಿಚಾರದ ಸಮೀಕ್ಷೆ ಸೇರಿಲ್ಲ. ಈ ಪ್ರಕರಣದ ಕೊನೆಯ ಮಾತಾಗಿ ಇಷ್ಟನ್ನು ಮಾತ್ರ ಹೇಳಬೇಕಾಗಿದೆ; ನಮ್ಮ ಪೂರ್ವದ ಕನ್ನಡ ಸಾಹಿತ್ಯ ಸಂಪತ್ತಿನ ಸೌಂದರ್ಯ ಸತ್ವಗಳನ್ನು ಗ್ರಹಿಸಬೇಕಾದರೆ, ಪ್ರಮುಖ ಕನ್ನಡ ಲಕ್ಷಣ ಗ್ರಂಥಗಳ ಮೂಲಕವಾದರೂ ಭಾರತೀಯ ಕಾವ್ಯ ಮೀಮಾಂಸೆಯ ಪರಿಚಯವನ್ನು ಹೊಂದಿರಬೇಕಾದದ್ದು ಅತ್ಯಗತ್ಯ.

# ೩. ಛಂದಸ್ಸು

## ಹಿನ್ನೆಲೆ

ಪ್ರಪಂಚದ ಜ್ಞಾನವನ್ನು ನಾವು ಇಂದ್ರಿಯಗಳ ಮೂಲಕ ಪಡೆಯುತ್ತೇವೆ ಎಂದು ಹಿಂದೆ ಹೇಳಿದೆಯಷ್ಟೆ. ಹಾಗೆಯೇ, ಸೃಷ್ಟಿಯ ಸೌಂದರ್ಯವನ್ನು ಇಂದ್ರಿಯಗಳ ಮೂಲಕ ಅನುಭವಿಸುತ್ತೇವೆ. ಹೊರಗಣ ಜಗತ್ತಿನ ಚೆಲುವನ್ನು ಅನುಭವಿಸುವುದರಲ್ಲಿ ಕಣ್ಣು ಕಿವಿಗಳ ಪಾತ್ರ ಮುಖ್ಯವಾದುದು. ಕಣ್ಣು ದೃಶ್ಯ (ಕಾಣುವ) ಪ್ರಪಂಚದ ಚೆಲುವನ್ನು ನೋಡಿ ನಲಿದರೆ, ಕಿವಿ ಶ್ರವ್ಯ (ಕೇಳುವ) ಪ್ರಪಂಚದ ಇಂಪನ್ನು ಕೇಳಿ ಸುಖ ಪಡುತ್ತದೆ. ದೂರದ ಬೆಟ್ಟಸಾಲಿನ ನೀಲಿಯ ಬಣ್ಣ, ಅದರಲ್ಲಿ ಅಲೆ ಅಲೆಯಾಗಿ ಏರಿ ಇಳಿಯುವ ಅಂಕುಡೊಂಕು ಗೆರೆಯ ಆಕಾರ; ಹೂಗಳ, ಎಲೆಗಳ, ಬಗೆಬಗೆಯ ಬಣ್ಣ ಮತ್ತು ಅವುಗಳ ಎಸಳಿನ ಮಾಟ, ಮನುಷ್ಯನ ಮೈಯಲ್ಲಿ ಆ ಕಡೆ ಈ ಕಡೆ ಹಂಚಿಕೊಂಡಿರುವ ಕಣ್ಣು ಹುಬ್ಬು ಕಿವಿ ಕೈಕಾಲುಗಳ ಸಮಪ್ರಮಾಣ (ಒಂದೇ ಅಳತೆಯ ಮಾಟ) – ಹೀಗೆ, ದೃಶ್ಯ ಸೌಂದರ್ಯದಲ್ಲಿ ಬಣ್ಣದ ಬೆಡಗಿನ ಜೊತೆಗೆ, ಮಾಟದ ಸೊಬಗೂ ಸಂತೋಷವನ್ನು ಕೊಡುತ್ತದೆ. ಈ ಮಾಟ ಅಥವಾ ಆಕೃತಿಯ ಸೊಬಗಿನ ಒಳಮರ್ಮ ಎಂದರೆ ಸಮಪ್ರಮಾಣ (symmetry). ಹಾಗೆಯೇ, ಶ್ರವ್ಯ ಪ್ರಪಂಚದ ಇಂಪಿನ ಚೆಲುವು ಎಂದರೆ, – ಸಮುದ್ರದ ಮೊರೆತ, ಗುಡುಗಿನ ಮೊಳಗು, ಹರಿಯುವ ಹೊಳೆಯ ಕಲಕಲನಾದ, ಹಕ್ಕಿಗಳ ಉಲಿ, ಪ್ರಾಣಿಗಳ ಕೂಗು, ಮನುಷ್ಯನ ಮಾತು ಮತ್ತು ಹಾಡು – ಇವು ಕಿವಿಗೆ ಹಿತಕರವಾಗಿದ್ದು ಸಂತೋಷವನ್ನು ಕೊಡುತ್ತವೆ. ಕಿವಿ ಕೇಳುವ ವಿವಿಧ ಧ್ವನಿಗಳಲ್ಲಿ ಹಿತಕರವಾದ ನಾದದ್ದೇ ಒಂದು ಬಗೆಯ ಸುಖವಾದರೆ, ಆ ನಾದ ಹೊಮ್ಮುವುದರಲ್ಲಿ ಉಂಟಾಗುವ ಏರಿಳಿತವೂ ನಾವು ಅನುಭವಿಸುವ ಸುಖಕ್ಕೆ ಕಾರಣವಾಗುತ್ತದೆ. ಕಾಗೆ ಮತ್ತು ಕೋಗಿಲೆಗಳ ಕೂಗಿನಲ್ಲಿ ಕೇಳಿ ಬರುವ ವ್ಯತ್ಯಾಸ ಸ್ಪಷ್ಟವಾಗಿದೆ. 'ಕಾಕಾ' ಕೂಗಿನಲ್ಲಿ ನಾದದ ಹಿತವೂ ಇಲ್ಲ, ಏರಿಳಿತದ ಸೊಗಸೂ ಇಲ್ಲ. 'ಕು–ಹು–ಹೂ' ಉಲಿಯಲ್ಲಿ ಇಂಪಾದ ದನಿ ಎರಡು ಮೆಟ್ಟಿಲು ಏರುವುದು. ಅದರಲ್ಲಿ ಒಂದು ಕ್ರಮ – ಇವು ಅನುಭವಕ್ಕೆ ಬರುವ ಸಂಗತಿ. ಸೃಷ್ಟಿಯ ನಾದ ಪ್ರಪಂಚದಲ್ಲಿಯೂ ಮಾತಿನ ಉಚ್ಚಾರಣೆ, ಪದ್ಯದ ವಾಚನ, ಗೀತದ ಗಾಯನ,

೧೪. ಡಿ.ವಿ.ಗುಂಡಪ್ಪ: 'ಕರ್ನಾಟ ಪ್ರಗತಿಪಥ' (ಭಾಷಣ); ಮೈಸೂರು ಸರ್ಕಾರದ ಪ್ರಕಟನೆ, ಪು. ೩

೧೫. ತೀ.ನಂ. ಶ್ರೀಕಂಠಯ್ಯ: ಭಾರತೀಯ ಕಾವ್ಯಮೀಮಾಂಸೆ, ೧೯೫೩; ಪು. ೪೪೬

೧೬. ಆರ್.ನರಸಿಂಹಾಚಾರ್ (ಸಂ): ನಾಗವರ್ಮ ವಿರಚಿತಂ ಕಾವ್ಯಾವಲೋಕನಂ; ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ; ತೃತೀಯ ಮುದ್ರಣ, ೧೯೬೭; ಪ್ರಥಮ ಮುದ್ರಣದ ಉಪೋದ್ಘಾತ (ಇಂಗ್ಲೀಷಿನಲ್ಲಿ), ಪು. ೫೩.

೧೭. ತೀ.ನಂ.ಶ್ರೀಕಂಠಯ್ಯ: ಭಾರತೀಯ ಕಾವ್ಯಮೀಮಾಂಸೆ, ೧೯೫೩; ಪು. ೪೪೮–೪೪೯;

೧೮. ಆರ್.ನರಸಿಂಹಾಚಾರ್: ಕರ್ಣಾಟಕ ಕವಿಚರಿತೆ, ೧೯೭೨ರ ಮುದ್ರಣ; ಪು. ೧೭೯–೮೦

೧೯. ಶಿ.ಚೆ.ನಂದಿಮಠ (ಸಂ): ಕನ್ನಡ ಕುವಲಯಾನಂದ, ೧೯೭೦; ಗ್ರಂಥಕಾರನ ವಂಶಪರಿಚಯ, ಪು. xiii-xiv

೨೦. ಜಯರಾಯಾಚಾರ್ಯ (ಸಂ): ನರಪತಿಚರಿತಂ, ಕರ್ನಾಟಕ ಗ್ರಂಥಮಾಲೆ, ೧೮೯೯ ಪೀಠಿಕೆ, ಪು. ೧–೨

೨೧. ರಂ.ಶ್ರೀ.ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ, ೧೯೫೩; ಪು.೨೦೨

೨೨. ತೀ.ನಂ. ಶ್ರೀಕಂಠಯ್ಯ: ಭಾರತೀಯ ಕಾವ್ಯಮೀಮಾಂಸೆ, ೧೯೫೩; ಪು. ೪೫೬

೨೩. ಅದೆ: ಪು. ೨೬೩.

ಮುಟ್ಟುವಂತೆ ತನ್ನ ಅಭಿಪ್ರಾಯವನ್ನು ತಿಳಿಸಬಲ್ಲವನು ಮಾತುಬಲ್ಲವನು; ಹಿರಿದಾದ ಅರ್ಥವನ್ನು ಕೆಲವೇ ಮಾತುಗಳಲ್ಲಿ ತಿಳಿಸಬಲ್ಲವನು ಅವನಿಗಿಂತ ನಿಪುಣ. 'ನುಡಿಯಂ ಛಂದದೊಳೊಂದಿರೆ ತೊಡರ್ಚಲ್ ಅರಿವಾತಂ ಆತನಿಂದಂ ಜಾಣಂ' (ಮಾತನ್ನು ಛಂದಸ್ಸಿನಲ್ಲಿ ಕೂಡಿಸಿ ಹೇಳಬಲ್ಲವನು ಅವನಿಗಿಂತಲೂ ಜಾಣ" – ಎಂದು ಕನ್ನಡದ ಆದಿ ಗ್ರಂಥವಾದ ಕವಿರಾಜಮಾರ್ಗದ ಹೇಳಿಕೆ (೧–೧೫). ಇದರಿಂದ ಕಾವ್ಯದಲ್ಲಿ ಛಂದಸ್ಸಿನ ಸ್ಥಾನವೇನು, ಪಾತ್ರವೇನು ಎಂಬುದನ್ನು ಊಹಿಸಿಕೊಳ್ಳಬಹುದು. ಜಯಕೀರ್ತಿ ಎಂಬಾತ ತನ್ನ 'ಛಂದೋನುಶಾಸನ'ದಲ್ಲಿ

> ಛಂದಃಶಾಸ್ತ್ರಂ ವಹಿತ್ರಂ ತದ್‌ವಿದಕ್ಷೋಃ ಕಾವ್ಯ ಸಾಗರಂ
> ಛಂದೋಭಾಗ್ ವಾಙ್ಮಯ ಸರ್ವಂ ನ ಕಿಂಚಿತ್ ಛಂದಸಾ ವಿಸಃ

[ಛಂದಶ್ಯಾಸ್ತ್ರವು ದೋಣಿ; ಕಾವ್ಯ ಸಾಗರವೆಲ್ಲ ಅದನ್ನು ಕುರಿತದ್ದೇ; ಮಾತಿನ ಪ್ರಪಂಚವೆಲ್ಲವೂ ಛಂದಸ್ಸಿಗೆ ಒಳಪಟ್ಟಿದೆ; (ಅಲ್ಲಿ) ಛಂದಸ್ಸನ್ನು ಹೊರತು ಪಡಿಸಿ ಕಿಂಚಿತ್ತೂ ಇಲ್ಲ.]

ಎಂದಿದ್ದಾನೆ. ಅವನ ಮಾತಿನಲ್ಲಿ ನಿಜಾಂಶವಿದೆ. ಏಕೆಂದರೆ, ಆಡುವ ಮಾತೇ ಆಗಲಿ, ಕಾವ್ಯದ ಭಾಷೆಯೇ ಆಗಲಿ, ಮನಸ್ಸಿನ ಭಾವಕ್ಕೆ ತಕ್ಕಂತೆ ಪದಗಳ ನಡೆ ಅಥವಾ ಲಯ–ವೇಗವಾಗಿ ನಿಧಾನವಾಗಿ, ಕುಣಿಯುತ್ತ ಮಣಿಯುತ್ತ, ತೂಗುತ್ತ ತೊನೆಯುತ್ತಾ ವ್ಯತ್ಯಾಸ ಹೊಂದುತ್ತದೆ. ಎಂದಮೇಲೆ, ಕವಿತೆಯ ಭಾವಕ್ಕೂ ಛಂದಸ್ಸಿಗೂ ಹತ್ತಿರದ ನಂಟು. ಉದಾಹರಣೆಗೆ, ನಡೆಮುಂದೆ ನಡೆಮುಂದೆ ನುಗ್ಗಿ ನಡೆ ಮುಂದೆ, ಮತ್ತು 'ಬಿಸುಡದಿರು ಬಿಸುಡದಿರು ಹಸುಳೆ ನೊಂದಹ ನಕಟ' ಈ ಎರಡು ಸಾಲುಗಳಲ್ಲಿ ಮಾತ್ರೆಗಳ ಲೆಕ್ಕ ಒಂದೇ ಆದರೂ 'ನಡೆ'ಯಲ್ಲಿ ವ್ಯತ್ಯಾಸವಿದೆ.

ಪ್ರತಿಯೊಂದು ಭಾಷೆಯೂ ತನ್ನದೇ ಆದ ಛಂದಸ್ಸನ್ನು ಹೊಂದಿದೆ. ಭಾರತದ ಮಟ್ಟಿಗೆ ಹೇಳುವುದಾದರೆ, ಛಂದಸ್ಸಿನ ಸ್ವರೂಪವನ್ನು ಅನುಸರಿಸಿ ಮುಖ್ಯವಾಗಿ ಮೂರು ಪ್ರಕಾರಗಳನ್ನು ಗುರುತಿಸಬಹುದು:

೧.ಸಂಸ್ಕೃತ ಛಂದಸ್ಸು.
೨.ಪ್ರಾಕೃತ ಛಂದಸ್ಸು.
೩.ದ್ರಾವಿಡ ಛಂದಸ್ಸು.

ಸಂಸ್ಕೃತ ಛಂದಸ್ಸು ಮುಖ್ಯವಾಗಿ ಅಕ್ಷರ (ಅಥವಾ ವರ್ಣ) ಗಣಗಳ

ಮಾತೇ ಇಲ್ಲದ ರಾಗಾಲಾಪನೆ – ಇವುಗಳಲ್ಲಿ ಕಿವಿಗೆ ಗೊತ್ತಾಗುವ ಕ್ರಮಬದ್ಧವಾದ, ಮರಳಿ ಮರಳಿ ಸಮಗತಿಯಲ್ಲಿ ಹೊಮ್ಮುವ ಸ್ವರದ ಏರಿಳಿತದ ಸರಣಿಗೆ ಲಯ ಎಂದು ಹೇಳುವುದು ಪ್ರಸಿದ್ಧವಾಗಿದೆ. ಸೃಷ್ಟಿ, ಸಮಸ್ತವೂ ಈ ಲಯದ ಕಟ್ಟಿಗೆ ಒಳಗಾಗಿದೆ. ಸೂರ್ಯಚಂದ್ರ ಉದಯ ಅಸ್ತ, ಒಂದಾದ ಮೇಲೆ ಒಂದರಂತೆ ಋತುಗಳು ಬರುವುದು ಹೋಗುವುದು (ಋತುಚಕ್ರ), ಗ್ರಹತಾರೆಗಳ ಚಲನವಲನ, ಹೃದಯದ ಬಡಿತ, ಮುಂತಾದ ಪ್ರಕೃತಿಯ ಘಟನಾ ಮಾಲೆಯಲ್ಲಿ ಲಯ ಕಾಣುತ್ತದೆ, ಇಲ್ಲವೇ ಕೇಳುತ್ತದೆ. ವಿಶ್ವದ ಲಯದ ಕಟ್ಟು ಹರಿದು ಹೋಗುವುದೇ ವಿಲಯ ಅಥವಾ ಪ್ರಲಯ. ಎಂದರೆ, ವಿಶ್ವ ಎಲ್ಲಿಂದ ಬಂತೋ, ಎಲ್ಲಿಂದ ಹುಟ್ಟಿತೋ, ಅಲ್ಲಿಗೆ ಮರಳುವುದು. ಸೃಷ್ಟಿಯಾದ ಮೇಲೆ ನಾಶವಾಗಲೇ ಬೇಕು. ಆರೋಹಣವಾದ ಮೇಲೆ ಅವರೋಹಣವಾಗಲೇ ಬೇಕು; ಏರಿದ ಮೇಲೆ ಇಳಿಯಲೇ ಬೇಕು. ಲಯ ಎಂದರೆ ಲೀನವಾಗುವುದು ಎಂದು ಮೂಲಾರ್ಥ.

ಸೃಷ್ಟಿಯ ಅನುಕರಣವಾದ ಕಲೆಯ ಪ್ರಪಂಚದಲ್ಲಿಯೂ ಲಯವೇ ಕಲಾ ಸೌಂದರ್ಯದ ಗುಟ್ಟು. ಕಾವ್ಯದ ವಿಷಯವನ್ನು ತೆಗೆದುಕೊಂಡರೆ, ಕಾವ್ಯ ಮುಖ್ಯವಾಗಿ ಶ್ರವ್ಯಕಲೆ ಆದದ್ದರಿಂದ, ಅದನ್ನು ಓದಿದಾಗ ಅಥವಾ ಹಾಡಿದಾಗ ಅದರ ಪದಗಳೆ ಧಾಟಿಯಲ್ಲಿ, ನಡೆಯಲ್ಲಿ, ಹಿತಕರವಾಗಿ ಕೇಳಿ ಬರುವ ಕ್ರಮವಾದ ಸ್ವರಗಳ ಏರಿಳಿತವೆ ನಾದಲಯ. ಇದನ್ನು "ಸ್ವರಾಂದೋಲನ'ವೆಂದೂ ಕರೆಯಬಹುದು. ಈ ಲಯುವೇ ಎಲ್ಲ ಹಾಡಿನ ಸೂತ್ರ.[೧] 'ಸ್ವರ'ಗಳು 'ವ್ಯಂಜನ' ರಹಿತವಾಗಿರುವುದರಿಂದ ಅಕ್ಷರಗಳ ಕಾಲ ಪ್ರಮಾಣವನ್ನು ಪದ್ಯದ ಲಯ ಎನ್ನಬಹುದು.

ಇಂಥ ಅಕ್ಷರಗಳ ಒಂದು ಗೊತ್ತಾದ ಸಂಖ್ಯೆಯ ಅಕ್ಷರಗಳುಳ್ಳ ಪಾಠಗಳ ಪದ್ಯ ಜಾತಿಗೂ, ಈ ಜಾತಿಗಳನ್ನು ವಿವರಿಸುವ ಶಾಸ್ತ್ರಕ್ಕೂ 'ಛಂದಸ್ಸು' ಎಂದು ಹೆಸರು.

ಲಯ ಶಬ್ದ ಪ್ರಪಂಚ ಸರ್ವಸ್ವಕ್ಕೂ ಅನ್ವಯಿಸುವ ಸೂತ್ರ. ಛಂದಸ್ಸು ಪದ್ಯಗಳಿಗೆ ಮಾತ್ರ ಸಂಬಂಧಿಸಿದ್ದು, ಭರತ ಮುನಿ ಹೇಳುವಂತೆ, 'ಛಂದಸ್ಸಿಲ್ಲದ ಶಬ್ದವಿಲ್ಲ; ಶಬ್ದವನ್ನು ಬಿಟ್ಟು ಛಂದಸ್ಸಿಲ್ಲ.[೨] ಆದರೆ, ಗದ್ಯದ ಲಯವನ್ನು ಛಂದಸ್ಸು ಎಂದು ಕರೆಯುವ ರೂಢಿಯಿಲ್ಲ; ಗದ್ಯಲಯದಲ್ಲಿ ಒಂದು ಕ್ರಮವಿಲ್ಲದಿರುವುದೇ ಇದಕ್ಕೆ ಕಾರಣ. ಪದ್ಯದ ಲಯಕ್ಕೆ ಮಾತ್ರ ಛಂದಸ್ಸು ಎಂಬ ಹೆಸರು.

ಸಾಧಾರಣವಾಗಿ ಕಾವ್ಯಗಳೆಲ್ಲವೂ ಪದ್ಯರೂಪದಲ್ಲಿಯೇ ಇರುವುದರಿಂದ ಕಾವ್ಯಕ್ಕೂ ಛಂದಸ್ಸಿಗೂ ಹತ್ತಿರದ ನಂಟು ಏರ್ಪಟ್ಟಿದೆ. "ಇತರರ ಮನಸ್ಸಿಗೆ

ಉದ್ದೇಶಿಸಿದ್ದಾನೆ. ಕಂದಪದ್ಯದಲ್ಲಿ ಯತಿಭಂಗ ದೋಷಕ್ಕೆ ಉದಾಹರಣೆ ಕೊಟ್ಟು ಆ ದೋಷವನ್ನು ಸರಿಪಡಿಸಿದ ಉದಾಹರಣೆಯನ್ನೂ ತೋರಿಸಿದ್ದಾನೆ. "ಪೂರ್ವಾಚಾರ್ಯರು ಯತಿಭಂಗ ದೋಷವನ್ನೇ ಗುಣವೆಂದು ಭಾವಿಸಿ, ಕನ್ನಡಕ್ಕೆ ಸಹಜವಾಗಿದ್ದ ಖಂಡಪ್ರಾಸವನ್ನು ನಿಲ್ಲಿಸಿಕೊಂಡು ಯತಿಯನ್ನು ಮೀರಿದರು" (i–೭೫) ಎಂಬ ಕವಿರಾಜಮಾರ್ಗದ ಹೇಳಿಕೆಗೆ ಅದಕ್ಕೂ ಹಿಂದಿನ ಕಾಲದ ಶಾಸನಗಳ ವೃತ್ತಗಳಲ್ಲಿ ಸಾಕ್ಷ್ಯ ದೊರೆಯುತ್ತದೆ. ಮುಂದೆ, ವ್ಯಾಕರಣಕಾರನಾದ ಕೇಶಿರಾಜನು 'ಯತಿ ವಿಲಂಘನದಿಂದೆ ಅರಿದಲ್ತೆ ಕನ್ನಡಂ' ಎಂದು ಹೇಳಿ, ಸಂಸ್ಕೃತದವರು ವಿಧಿಸಿದ್ದ ಯತಿಯನ್ನು ಮೀರುವುದು ಕನ್ನಡದ ವಿಶೇಷ ಎಂದಿದ್ದಾನೆ. 'ಕನ್ನಡಕ್ಕೆ ಯತಿಯಿಲ್ಲ ಕೋಣಂಗೆ ಮತಿಯಿಲ್ಲ' ಇಂದಿಗೂ ಸಾಮಾನ್ಯ ಜನ ಮರೆಯುತ್ತ ಬಂದಿರುವ ಒಂದೆ ಗಾದೆ ಮಾತು.

ಸಂಸ್ಕೃತ ಅಕ್ಷರ ವೃತ್ತಗಳ ಸಾಲಿನ ಕಡೆಯಲ್ಲಿ ಯತಿ ಇದ್ದೇ ತೀರಬೇಕು; ಸಾಲಿನ ಮಧ್ಯದಲ್ಲಿ ಆಯಾ ವೃತ್ತ ಲಕ್ಷಣದಲ್ಲಿ ಹೇಳಿರುವಂತೆ ಯತಿ ಇರಬೇಕು. ೭ನೆಯ ಶತಮಾನದ ಶ್ರವಣಬೆಳ್ಗೊಳದ ಒಂದು ಶಾಸನ ಪದ್ಯ ಮಹಾಸ್ರಗ್ಧರಾ ವೃತ್ತದಲ್ಲಿ, ಲಕ್ಷಣಾನುಸಾರವಾಗಿ ೧೫ನೆಯ ಅಕ್ಷರದಲ್ಲಿ ಯತಿನಿಯಮ ಪಾಲನೆಯೂ, ಮೂರನೆಯ ಪಾದದ ಕಡೆಯಲ್ಲಿ ಯತಿಭಂಗವಾಗಿರುವುದೂ ಕವಿರಾಜಮಾರ್ಗದ ಹೇಳಿಕೆಗೆ ನಿದರ್ಶನವಾಗಿದೆ. ಆ ಸಾಲುಗಳು ಹೀಗಿವೆ:

> ಪರಮಾರ್ಥಂ ಮೆಚ್ಚಿ ನಾನೀ ಧರಣಿಯುಳಿರವಾನ್। ಎಂದು ಸಂನ್ಯಾಸನಂ ಗೆ–
> ಯ್ದುರುಸತ್ವನ್ ನಂದಿಸೇನಪ್ರವರ ಮುನಿವರನ್। ದೇವಲೋಕಕ್ಕೆ ಸಂದಾನ್.
> [ಉದ್ದ ಗೆರೆ ಇರುವ ಕಡೆ ಯತಿ.]

ಇಲ್ಲಿ ಖಂಡಪ್ರಾಸ ಅಥವಾ ಆದಿಪ್ರಾಸ, ೧೫ನೆಯ ಅಕ್ಷರಕ್ಕೆ ಯತಿ, ಪಾದದ ಕಡೆಯಲ್ಲಿ ಯತಿಯಿಲ್ಲದೆ 'ಗೆಯ್ದು' ಎಂಬ ಪದ ಒಡೆದು ಎರಡು ಪಾದಗಳಿಗೆ ಹಂಚಿಹೋಗಿರುವುದು – ಈ ಅಂಶಗಳು ಮೇಲಿನ ಹೇಳಿಕೆಗೆ ಸೊಗಸಾದ ನಿದರ್ಶನ. ಕನ್ನಡದಲ್ಲಿ ಈ ರೀತಿ ಸಂಸ್ಕೃತ ಛಂದಸ್ಸಿನ ವೃತ್ತಗಳನ್ನು ಬರೆಯುವುದನ್ನು 'ಪೂರ್ವಾಚಾರ್ಯರು' ಬಳಕೆಗೆ ತಂದಿದ್ದರು ಎಂದಿರುವುದರಿಂದ, ಆ 'ಪೂರ್ವಾಚಾರ್ಯರು' ಕನ್ನಡದಲ್ಲಿ ಛಂದಸ್ಸಿನ ಲಕ್ಷಣ ಶಾಸ್ತ್ರವನ್ನು ಬರೆದವರಾಗಿರಬೇಕು ಎಂದು ಊಹಿಸಬಹುದು. ಆದರೆ, ಕವಿರಾಜಮಾರ್ಗಕ್ಕೂ ಹಿಂದೆ ಛಂದಸ್ಸನ್ನು ಕುರಿತ ಕನ್ನಡ ಲಕ್ಷಣಗ್ರಂಥವೊಂದು

ಎಣಿಕೆಗೆ ಒಳಪಟ್ಟಿದೆ. ಪ್ರಾಕೃತ ಛಂದಸ್ಸಿನಲ್ಲಿ ಮಾತ್ರಾ ಗಣಗಳು ಸರ್ವಸಾಮಾನ್ಯ. ದ್ರಾವಿಡ ಛಂದಸ್ಸಿನಲ್ಲಿ ದೇವಗಣಗಳದ್ದೇ ಪ್ರಭುತ್ವ. ಕನ್ನಡ ಛಂದಸ್ಸಿನಲ್ಲಿ ಮೂರು ಬಗೆಯ ಗಣಗಳ ಛಂದಸ್ಸೂ ಪದ್ಯ ರಚನೆಗೆ ಒದಗಿ ಬಂದಿವೆ; ಈ ಕಾರಣದಿಂದ ಅದರಲ್ಲಿ ವೈವಿಧ್ಯ ಉಂಟಾಗಿದೆ. (ಛಂದಸ್ಸಿಗೆ ಸಂಬಂಧಪಟ್ಟ ಮಾತ್ರೆ, ಗಣ, ಗುರು, ಲಘು, ಮುಂತಾದ ಶಾಸ್ತ್ರಕ್ಕೆ ಸಂಬಂಧಪಟ್ಟ ಪದಗಳ ವಿಚಾರವನ್ನು ಗ್ರಂಥಗಳನ್ನು ಕುರಿತು ಹೇಳುವಾಗ ವಿವರಿಸಲಾಗುವುದು.) ಕನ್ನಡ ಛಂದಸ್ಸಿನ ಮೇಲೆ ಸಂಸ್ಕೃತ ಛಂದಸ್ಸಿನ ಪ್ರಭಾವ ವಿಶೇಷವಾಗಿದೆ. ಪ್ರಾಕೃತ ಛಂದಸ್ಸಿನ ಪ್ರಭಾವವೂ ಉಂಟು (ಇಪ್ಪತ್ತನೆಯ ಶತಮಾನದ ಈಚಿನ ದಿನಗಳಲ್ಲಿ ಇಂಗ್ಲೀಷ್ ಕಾವ್ಯ ವ್ಯಾಸಂಗದ ಪರಿಣಾಮವಾಗಿ ಇಂಗ್ಲೀಷ್ ಛಂದಸ್ಸಿನ ಪ್ರಭಾವವೂ ಕನ್ನಡ ಕವಿತೆಯ ಮೇಲೆ ಬಿದ್ದಿದೆ.)

**ಬೆಳವಣಿಗೆ:** ಇನ್ನು ಕನ್ನಡ ಛಂದಸ್ಸು ಚಾರಿತ್ರಿಕವಾಗಿ ಹೇಗೆ ಬೆಳೆದು ಬಂದಿದೆ ಎಂಬುದನ್ನು ಸಂಕ್ಷೇಪವಾಗಿ ಪರಿಶೀಲಿಸಬಹುದು:

ಕನ್ನಡದ ಆದಿ ಗ್ರಂಥವಾದ ಕವಿರಾಜಮಾರ್ಗದಲ್ಲಿ ಪ್ರಾಸಂಗಿಕವಾಗಿ ಛಂದಸ್ಸಿನ ವಿಚಾರ ಬಂದಿದೆ. 'ಪದ್ಯಂ ಸಮಸ್ತ ಜನತಾ ಹೃದ್ಯಂ' ಎಂಬ ಶ್ರೀವಿಜಯನ ಹೇಳಿಕೆಯಲ್ಲಿ ಛಂದಸ್ಸಿನ ಮನಸೆಳೆವ ಗುಣ ಸೂಚಿತವಾಗಿದೆ. ಚತ್ತಾಣ, ಬೆದಂಡೆ ಎಂಬ ಕನ್ನಡ ಕಾವ್ಯಗಳ ಸ್ವರೂಪವನ್ನು ತಿಳಿಸುತ್ತಾ ಬೆದಂಡೆಯಲ್ಲಿ ಕಂದವೃತ್ತಗಳು ಇರುವುವೆಂದೂ ಚತ್ತಾಣದಲ್ಲಿ ಕಂದ ವೃತ್ತಗಳ ಜೊತೆಗೆ ಅಕ್ಕರ, ಚವುಪದಿ (=ಚೌಪದಿ), ಗೀತಿಕೆ, ತಿವದಿ (=ತ್ರಿಪದಿ) ಇರುವುದೆಂದೂ ಅವನು ಹೇಳಿದ್ದಾನೆ. (i–೩೩, ೩೪). ಪದ್ಯ ರಚನೆಯಲ್ಲಿ ಗುರು ಲಘುಗಳನ್ನು ಇಡುವ ಕ್ರಮದಲ್ಲಿ ಹೆಚ್ಚು ಕಡಿಮೆಗಳಾದರೆ 'ಛಂದೋಭಂಗ' ದೋಷವುಂಟಾಗುವುದನ್ನು ಉದಾಹರಣೆಗಳ ಸಮೇತ ವಿವರಿಸಿದ್ದಾನೆ. 'ಯತಿ'ಯ ಬಗೆಗೆ ಶ್ರೀವಿಜಯ ಹೇಳಿರುವ ಮಾತುಗಳು ಚಾರಿತ್ರಿಕ ದೃಷ್ಟಿಯಿಂದ ಮುಖ್ಯ. ಸಂಸ್ಕೃತ ಅಕ್ಷರ ವೃತ್ತಗಳಲ್ಲಿ ಯತಿನಿಯಮದ ಪಾಲನೆ ಕಡ್ಡಾಯ. ಈ ನಿಯಮವನ್ನು ಮೀರಿದರೆ 'ಯತಿಭಂಗ' ಎಂಬ ಛಂದೋದೋಷವುಂಟಾಗುತ್ತದೆ. ಇದು ಕಾವ್ಯ ದೋಷವೂ ಹೌದು. ಕವಿರಾಜಮಾರ್ಗಕಾರ ಮೊದಲು ಯತಿ ಎಂದರೆ ಏನು ಎಂಬುದನ್ನು ಹೇಳುತ್ತಾನೆ. ಅವನ ಮತದಂತೆ, "ಯತಿಯೆಂಬುದು ಉಸಿರ್ವ (ಎಂದರೆ ಉಸಿರು ತೆಗೆದುಕೊಳ್ಳಲು ವಾಚನವನ್ನು ನಿಲ್ಲಿಸುವ) ತಾಣಂ (=ಸ್ಥಾನ). ವೃತ್ತ ಮತ್ತು ಜಾತಿ (ಎಂದರೆ ಮಾತ್ರಾ ಛಂದಸ್ಸು) ಪದ್ಯಗಳ ರಚನೆಯಲ್ಲಿ ಅದಕ್ಕೆ ಎಡೆಯಿದೆ. "ಇಲ್ಲಿ ಮಾತ್ರಾ ಛಂದಸ್ಸು ಎಂದರೆ ಅವನು ಮುಖ್ಯವಾಗಿ ಕಂದಪದ್ಯವನ್ನು

ಪಿಂಗಲನು ವಿವರಿಸಿದ್ದಾನೆ. ಲಘುಗುರುಗಳಿಗೆ ಲಗ ಎಂಬ ಸಂಕೇತಗಳನ್ನು ಹೇಳಿದ್ದಾನೆ. ಮೂರು ಅಕ್ಷರಗಳ (ತ್ರಿಕ=ಮೂರನ್ನು ಉಳ್ಳದ್ದು) ಗಣಗಳಿಗೆ 'ಮ ಯ ರ ಸ ತ ಜ ಭ ನ' ಎಂಬ ಸಂಕೇತಾಕ್ಷರಗಳನ್ನು ಮೊದಲಿಗೆ ಕಾಣುವುದು. ಈ ಗ್ರಂಥದಲ್ಲಿಯೇ, ಪಿಂಗಲ ಯತಿ ನಿಯಮವನ್ನೂ ಹೇಳಿದ್ದಾನೆ. ಭರತಮುನಿ ತನ್ನ ನಾಟ್ಯಶಾಸ್ತ್ರದ ೧೫ ಮತ್ತು ೧೬ನೆಯ ಅಧ್ಯಾಯಗಳಲ್ಲಿ ಅನೇಕ ಪ್ರಸಿದ್ಧ ವರ್ಣವೃತ್ತಗಳನ್ನು ವಿವರಿಸಿದ್ದಾನೆ. ೧೬ನೆಯ ಅಧ್ಯಾಯವನ್ನು, ಛಂದೋವಿಚಿತಿ ಎಂದೇ ಕರೆದಿದ್ದಾನೆ. 'ಜನಾಶ್ರಯೀ' ಎಂಬುದು ಪ್ರಾಚೀನ ಸಂಸ್ಕೃತ ಛಂದೋಗ್ರಂಥಗಳಲ್ಲಿ ಒಂದು. ಕ್ರಿ.ಶ.೬ನೆಯ ಶತಮಾನದ ಜನಾಶ್ರಯನೆಂಬ ಆಂಧ್ರ ದೇಶದ ರಾಜನ ಆಸ್ಥಾನ ಕವಿಯೊಬ್ಬನು ಈ ಗ್ರಂಥವನ್ನು ರಾಜನ ಹೆಸರಿನಲ್ಲಿ ರಚಿಸಿದ್ದಾನೆ ಎಂಬ ಅಭಿಪ್ರಾಯವಿದೆ. ಇದರಲ್ಲಿನ ಆರು ಅಧ್ಯಾಯಗಳಲ್ಲಿ ಸಂಸ್ಕೃತ ಪ್ರಾಕೃತ ಛಂದಸ್ಸುಗಳನ್ನು ವಿವರಿಸಿದೆ. ಸಂಸ್ಕೃತ ಛಂದಶಾಸ್ತ್ರಕಾರರಲ್ಲಿ ಜಯದೇವನ ಹೆಸರು ಪ್ರಸಿದ್ಧವಾದದ್ದು. ಕನ್ನಡ ಛಂದೋಂಬುಧಿ'ಯ ನಾಗವರ್ಮನು ಇವನನ್ನು ಸ್ಮರಿಸಿರುವುದಲ್ಲದೆ, ಕೆಲವು ಅಂಶಗಳಲ್ಲಿ ಇವನನ್ನು ಅನುಸರಿಸಿದ್ದಾನೆ. ಇವುಗಳಲ್ಲಿ ಮುಖ್ಯವಾದದ್ದು, ಲಕ್ಷಣಪದ್ಯವೇ ಉದಾಹರಣಪದ್ಯವೂ ಆಗಿರುವುದು. ಈ ಪದ್ಧತಿಯನ್ನು ನಾಗವರ್ಮನೂ ಅನುಸರಿಸಿದ್ದಾನೆ. ಜಯದೇವನ ಗ್ರಂಥ 'ಜಯದೇವಚ್ಛಂದಸ್' ಎಂದು ಹೆಸರಾಗಿದೆ. ಇವನ ಕಾಲ ೯ನೆಯ ಶತಮಾನ ಅಥವಾ ೬ನೆಯ ಶತಮಾನಕ್ಕೂ ಹೋಗಬಹುದು, ಎಂದು ಭಾವಿಸಲಾಗಿದೆ. ಜಯದೇವ ಜೈನಮತದವನು. ಇವನು ಪಿಂಗಲನಿಗೆ ಸಮಾನ ಎಂದು ಕೆಲವರ ಎಣಿಕೆ; ಪಿಂಗಲನನ್ನು ಅನುಸರಿಸಿರುವುದೂ ಕಂಡು ಬರುತ್ತದೆ. ಇವನು ವೈದಿಕ ಲೌಕಿಕ ಛಂದಸ್ಸುಗಳೆರಡನ್ನೂ ವಿವರಿಸಿದ್ದಾನೆ.

ಜಯಕೀರ್ತಿ ಸಂಸ್ಕೃತ ಲಾಕ್ಷಣಿಕನಾದರೂ ಕನ್ನಡ ಛಂದಸ್ಸಿನ ಚರಿತ್ರೆಯಲ್ಲಿ ಬಹು ಮುಖ್ಯವಾದ ಸ್ಥಾನವಿದೆ. ಇವನು ರಚಿಸಿರುವ ಎಂಟು 'ಅಧಿಕಾರ'ಗಳ 'ಛಂದೋನುಶಾಸನ'ದ ಏಳನೆಯ ಅಧಿಕಾರ 'ಕರ್ಣಾಟ ಭಾಷಾ ವಿಷಯ ಜಾತ್ಯಧಿಕಾರ' ಎಂಬ ಹೆಸರಿನಲ್ಲಿ ಅಕ್ಕರ, ತ್ರಿಪದಿ, ಮುಂತಾದ ಅಚ್ಚಗನ್ನಡ ಛಂದೋಜಾತಿಗಳ ವಿವರಣೆಗೆ ಮೀಸಲಾಗಿದೆ. ಇವುಗಳಲ್ಲಿ ಕೆಲವನ್ನು ತಮ್ಮ ಕಾವ್ಯಗಳಲ್ಲಿ ಬಳಸಿರುವ ಕನ್ನಡ ಕವಿಗಳ ಹೆಸರುಗಳನ್ನು ಹೇಳಿರುವುದು ಗಮನಿಸ ಬೇಕಾದ ಸಂಗತಿ. ಉದಾಹರಣೆಗೆ, ಅಸಗನು 'ಸಮಾನಾಕ್ಷರ' (ನಾಗವರ್ಮನು ಹೇಳುವ 'ದೊರೆಯಕ್ಕರ') 'ಕರ್ಣಾಟ ಕುಮಾರ ಸಂಭವ ಕಾವ್ಯ' ದಲ್ಲಿ ಬಳಸಿದ್ದಾನೆ ಎಂದು ಜಯಕೀರ್ತಿ ಹೇಳಿದ್ದಾನೆ. ಅಸಗನ ಕಾಲ ಕ್ರಿ.ಶ. ೯ನೆಯ ಶತಮಾನ.

ಇದ್ದಿತು ಎಂದು ಹೇಳಲು ನಮಗೆ ಯಾವ ಆಧಾರವೂ ಇಲ್ಲ. ಈ ಸಂದರ್ಭದಲ್ಲಿ ಪ್ರಾಸದ ವಿಚಾರವಾಗಿ ಒಂದು ಮಾತು ಹೇಳಬಹುದು.: "ನುತ ಶಬ್ದಾಲಂಕಾರದೊಳ್ ಅತಿಶಯಂ ಈ ಕನ್ನಡಕ್ಕೆ ಸತತಂ ಪ್ರಾಸಂ" ಎಂದು ಕವಿರಾಜಮಾರ್ಗದಲ್ಲಿ ಹೇಳಿದ್ದರೂ ವೃತ್ತಗಳ ಪಾದಾಂತ್ಯದ ಯತಿಸ್ಥಾನಕ್ಕೆ ಬದಲಾಗಿ 'ಖಂಡಪ್ರಾಸ'ವನ್ನು ಹೇಳಿರುವುದರಿಂದ, ಛಂದಸ್ಸಿನಲ್ಲೂ ಅದಕ್ಕೆ ಒಂದು ಪಾತ್ರ ಲಭಿಸಿದಂತಾಯಿತು. ಪದ್ಯಕಾವ್ಯ ಮುಖ್ಯವಾಗಿ ಕೇಳತಕ್ಕದ್ದು (ಶ್ರವ್ಯ); ಒಂದು ಪಾದ ನಿಲ್ಲುತ್ತದೆ, ಅದರ ಮುಂದಿನ ಪಾದ ಎಲ್ಲಿ ಮೊದಲಾಗುತ್ತದೆ ಎನ್ನುವುದನ್ನು ಈ ಆದಿ ಪ್ರಾಸ ಒಡೆದು ತೋರಿಸುವುದರಿಂದ ಇದಕ್ಕೆ ಖಂಡ ಪ್ರಾಸ ಎಂದು ಹೆಸರು ಉಚಿತವಾಗಿದೆ.

ಹನ್ನೆರಡನೆಯ ಶತಮಾನದವರೆಗೂ ಪದ್ಯ (ವೃತ್ತ, ಕಂದ) ಮತ್ತು ಗದ್ಯ ಮಿಶ್ರಿತವಾದ 'ಚಂಪೂ' ಕಾವ್ಯಗಳು ರಚಿತವಾದುವು. ಹರಿಹರನು 'ರಗಳೆ' ಛಂದಸ್ಸನ್ನು ಉಪಯೋಗಿಸಿದನು. ಚಂಪೂ ಕಾವ್ಯಗಳಲ್ಲು ಹೆಸರಿಗೆ ತ್ರಿಪದಿ, ರಗಳೆಗಳ ಸಾಲುಗಳು ಇರುತ್ತಿದ್ದವು. ಷಟ್ಪದಿ ಕಾವ್ಯಗಳ ಯುಗವನ್ನು ರಾಘವಾಂಕ ಪ್ರಾರಂಭಿಸಿದನು. ನಂಜುಂಡಕವಿಯ ಕುಮಾರರಾಮ ಚರಿತ್ರೆ ಸಾಂಗತ್ಯಕ್ಕೆ ಭದ್ರವಾದ ಸ್ಥಾನ ಕಲ್ಪಿಸಿತು. ತ್ರಿಪದಿ ಛಂದಸ್ಸಿಗೆ ಸರ್ವಜ್ಞ ಎತ್ತಿದ ಕೈ.

**ಸಂಸ್ಕೃತ ಛಂದೋಗ್ರಂಥಗಳು:**

ಕನ್ನಡ ಛಂದೋಗ್ರಂಥಗಳಲ್ಲಿ ಸಂಸ್ಕೃತ ಛಂದಸ್ಸಿನ ವೃತ್ತಗಳ ಲಕ್ಷಣಗಳನ್ನು ಹೇಳುವಾಗ ಸಂಸ್ಕೃತ ಶಾಸ್ತ್ರಕಾರರನ್ನು ಅನುಸರಿಸಿರುವುದರಿಂದ ಸಂಕ್ಷೇಪವಾಗಿಯಾದರೂ ಕೆಲವರ ಪರಿಚಯ ಮಾಡಿಕೊಳ್ಳುವುದು ಅಗತ್ಯವೆನಿಸುತ್ತದೆ.

ವೇದದ ಆರು ಅಂಗಗಳಲ್ಲಿ ಛಂದಸ್ಸೂ ಒಂದು ಅಂಗವಾದ್ದರಿಂದ, ಸಂಸ್ಕೃತ ಭಾಷೆಯಲ್ಲಿ ಛಂದಶಾಸ್ತ್ರ ವೇದಗಳಷ್ಟೇ ಪುರಾತನವಾದದ್ದು. ವೈದಿಕ ಛಂದಸ್ಸು ಎಂಬ ಪ್ರತ್ಯೇಕ ವಿಭಾಗವೇ ಏರ್ಪಟ್ಟಿದೆ. ಇದರಲ್ಲಿ ಗಾಯತ್ರಿ, ಅನುಷ್ಟುಭ್, ತ್ರಿಷ್ಟುಭ್, ಜಗತೀ ಎಂಬ ನಾಲ್ಕು ಛಂದಸ್ಸುಗಳು ಮುಂದಿನ ಎಲ್ಲ ಛಂದಸ್ಸಿನ ಪ್ರಕಾರಗಳಿಗೂ ಮೂಲ. ಸಂಸ್ಕೃತ ಕಾವ್ಯಗಳಲ್ಲಿಯೂ ಶಾಸ್ತ್ರ ಗ್ರಂಥಗಳಲ್ಲಿಯೂ ಬಳಸುವ ವೃತ್ತ ಜಾತಿಗಳನ್ನು 'ಲೌಕಿಕ ಛಂದಸ್ಸು' ಎಂದು ಕರೆದಿದೆ. ಕನ್ನಡದಲ್ಲಿ ಬಳಸುವ ವೃತ್ತಗಳೂ ಕಂದಪದ್ಯವೂ ಸಂಸ್ಕೃತ 'ಲೌಕಿಕ' ಛಂದಸ್ಸಿನಿಂದ ಬಂದವು.

ಈಗ ತಿಳಿದು ಬಂದಿರುವ ಮಟ್ಟಿಗೆ ಪಿಂಗಲನ ಛಂದಸ್ಸೂತ್ರಗಳೇ ಸಂಸ್ಕೃತದ ಮೊದಲ ಛಂದೋಗ್ರಂಥ. ಇವನ ಕಾಲ ಕ್ರಿ.ಪೂ. ಸು.೨೦೦. ಇದರಲ್ಲಿ ವೈದಿಕ ಮತ್ತು ಲೌಕಿಕ ಛಂದಸ್ಸುಗಳ ಲಕ್ಷಣಗಳನ್ನು ೮ ಅಧ್ಯಾಯಗಳಲ್ಲಿ ಸೂತ್ರರೂಪದಲ್ಲಿ

೫–೮. ಅಪಭ್ರಂಶ ಛಂದಸ್ಸು. ಇವನ ಇತರ ಗ್ರಂಥಗಳು; (೧)ತ್ರಿಷಷ್ಟಿ ಶಲಾಕಾ ಪುರುಷಚರಿತ, (೨)ಯೋಗಶಾಸ್ತ್ರ, (೩)ಶಬ್ದಾನುಶಾಸನ (ಇದರಲ್ಲಿ ಪ್ರಾಕೃತ ಭಾಷೆಗೆ ಒಂದು ಅಧ್ಯಾಯ ಮೀಸಲು), (೪)ಕಾವ್ಯಾನುಶಾಸನ ಮತ್ತು (೫)ದೇಶೀನಾಮ ಮಾಲಾ (ಶಬ್ದಕೋಶ).

ಇವಲ್ಲದೆ, ಇನ್ನೂ ಹಲ ಕೆಲವು ಸಂಸ್ಕೃತ ಹಾಗೂ ಪ್ರಾಕೃತ ಛಂದೋಗ್ರಂಥಗಳಿವೆ. ಇವುಗಳ ಪೈಕಿಯೇ ಹೆಚ್ಚು ಪ್ರಸಿದ್ಧಗಳಾದ ಕಾಳಿದಾಸನ ಶ್ರುತ ಬೋಧ, ವಿರಹಾಂಕನ ವೃತ್ತಜಾತಿ ಸಮುಚ್ಚಯ, ಪ್ರಾಕೃತ ಪೈಂಗಲ – ಇವುಗಳನ್ನು ಹೆಸರಿಸಬಹುದು.

ಕೆಲವು ಸಂಸ್ಕೃತ ಶಾಸ್ತ್ರ ಗ್ರಂಥಗಳಲ್ಲಿ ಕನ್ನಡ ಛಂದಸ್ಸಿನ ವಿವರಣೆ ಸ್ವಲ್ಪ ಮಟ್ಟಿಗೆ ನಡೆದಿದೆ. ಜಯಕೀರ್ತಿಯ ವಿಚಾರವನ್ನು ಈಗಾಗಲೇ ಹೇಳಿದ್ದಾಗಿದೆ. ಕಲ್ಯಾಣಿಯ ಚಾಲುಕ್ಯ ವಂಶ ದೊರೆ ೩ನೆಯ ಸೋಮೇಶ್ವರನು 'ಅಭಿಲಷಿತಾರ್ಥ ಚಿಂತಾಮಣಿ' (ಅಥವಾ ಮಾನಸೋಲ್ಲಾಸ') ಎಂಬ ಗ್ರಂಥವನ್ನು ರಚಿಸಿದ್ದಾನೆ (ಕ್ರಿ.ಶ.೧೧೨೯). ಇದು ಒಂದು ವಿಶ್ವಕೋಶ ಎನ್ನಬಹುದು. ಕನ್ನಡಕ್ಕೆ ಸಂಬಂಧಪಟ್ಟಂತೆ ಅಂಶಗಣಗಳ ಸ್ವರೂಪ; ತ್ರಿಪದಿ, ಷಟ್ಪದಿ, ಕಂದಪದ್ಯ, ಇವುಗಳ ಲಕ್ಷಣ ಮತ್ತು ಉದಾಹರಣೆಗಳು ನಿರೂಪಿತವಾಗಿವೆ. ಶಾರ್ಙ್ಗದೇವನ 'ಸಂಗೀತಾರತ್ನಾಕರ'ವು ಸಂಗೀತ ಶಾಸ್ತ್ರ ಪ್ರಪಂಚದಲ್ಲಿ ಬಹಳ ಪ್ರಖ್ಯಾತವಾದದ್ದು. ಇವನ ಕಾಲ ೧೩ನೆಯ ಶತಮಾನದ ಮಧ್ಯಭಾಗ. ಇವನ ಗ್ರಂಥದ ೪ನೆಯ ಪ್ರಬಂಧಾಧ್ಯಾಯದಲ್ಲಿ ಕನ್ನಡ ಛಂದಸ್ಸಿನ ಏಳೆ (ಏಲಾ), ತ್ರಿಪದಿ ಮತ್ತು ಷಟ್ಪದಿಗಳ ಪ್ರಸ್ತಾಪವಿದೆ. ಇವುಗಳ ಲಕ್ಷಣವನ್ನು ವಿವರಿಸುವುದಲ್ಲದೆ ಇವುಗಳನ್ನು ಹಾಡತಕ್ಕ ರೀತಿಯೂ ಸೂಚಿಸಿದೆ. ತ್ರಿಪದಿ, ಸಾಂಗತ್ಯ, ಷಟ್ಪದಿ ಛಂದಸ್ಸುಗಳಲ್ಲಿ ರಚಿಸಿರುವ ಕನ್ನಡ ಕಾವ್ಯಗಳನ್ನು 'ವರ್ಣಕ' ಅಥವಾ 'ಹಾಡುಗಬ್ಬ'ಗಳೆಂದು ಕರೆಯುವುದರ ಔಚಿತ್ಯ ಇದರಿಂದ ಸ್ಪಷ್ಟವಾಗುತ್ತದೆ.

## ಕನ್ನಡ ಛಂದೋಗ್ರಂಥಗಳು

**ಗುಣಗಾಂಕಿಯಂ:** ಸುಮಾರು ೧೧ನೆಯ ಶತಮಾನಕ್ಕೆ ಹಿಂದಿನದಾದ 'ಯಾಪ್ಪರುಂಗಲಕ್ಕಾರಿಘೈ' ಎಂಬ ತಮಿಳು ಭಾಷೆಯ ಛಂದೋಗ್ರಂಥವೊಂದರಲ್ಲಿ ಅದರ ವ್ಯಾಖ್ಯಾನಕಾರನು'ಗುಣಗಾಂಕಿಯಂ' ಎಂಬ ಕನ್ನಡ ಛಂದೋಗ್ರಂಥದ ವಿಷಯವಾಗಿ ಹೇಳಿದ್ದಾನೆ. ಆದರೆ ಈ ಹೆಸರಿನ ಗ್ರಂಥ ಈವರೆಗೆ ದೊರೆತಿಲ್ಲ. ಇಲ್ಲಿ ಗಮನಿಸಬೇಕಾದ ಅಂಶ, ಗ್ರಂಥವನ್ನು ಒಬ್ಬ ಹೆಂಗಸನ್ನು ಕುರಿತು ಹೇಳಿದೆ

ಆದ್ದರಿಂದ ಇವನ ಕಾಲ ಇನ್ನೂ ಈಚಿನದು; ಛಂದೋನುಶಾಸನವನ್ನು ಪ್ರಕಟಿಸಿರುವ ಎಚ್.ಡಿ.ವೇಲಣಕರರು ಕ್ರಿ.ಶ.೧೦೦೦ ಎಂದೂ, ಗೋವಿಂದ ಪೈ ಅವರು ೯೦೦ ಎಂದೂ ಅಭಿಪ್ರಾಯ ಪಟ್ಟಿದ್ದಾರೆ. ಈಚೆಗೆ, ಸೀತಾರಾಮ ಜಾಗೀರದಾರರು ಹೆಗ್ಗೆರೆಯ ಶಾಸನದ ಆಧಾರವನ್ನು ಹಿಡಿದು, ಜಯಕೀರ್ತಿಯ ಕಾಲ ಕ್ರಿ.ಶ.೧೦೯೯ ಎಂದು ತಿಳಿಸಿದ್ದಾರೆ. ಈ ನಿರ್ಣಯ ನಿಲ್ಲುವಂತೆ ತೋರುತ್ತದೆ. ಅಕ್ಕರ ಮುಂತಾದ ಕನ್ನಡ ಮಟ್ಟುಗಳ ವಿವರಣೆಯಲ್ಲಿ ಛಂದೋನುಶಾಸನಕ್ಕೂ ಛಂದೋಂಬುಧಿಗೂ ಬಲು ಹತ್ತಿರದ ಹೋಲಿಕೆಯಿದೆ. ಎರಡು ಗ್ರಂಥಗಳಲ್ಲಿಯೂ ಲಕ್ಷಣಪದ್ಯವೇ ಲಕ್ಷ್ಯವೂ ಆಗಿದೆ. ಜಯಕೀರ್ತಿ ಕನ್ನಡ ನಾಡಿನವನು. ಕನ್ನಡ ಬಲ್ಲವನು; ಆತನಿಗೆ 'ಚಂದ್ರಾಯಣದೇವ' ಎಂದು ಇನ್ನೊಂದು ಹೆಸರಿದ್ದಂತೆಯೂ, ಜೈನ ಸನ್ಯಾಸಿಯೆಂದೂ ಶಾಸನದಿಂದ ತಿಳಿದುಬರುತ್ತದೆ. ಬಹುಶಃ ನಾಗವರ್ಮನ ಛಂದೋಂಬುಧಿಯನ್ನು ಅನುಸರಿಸಿ ಕನ್ನಡ ಛಂದಸ್ಸಿನ ಲಕ್ಷಣವನ್ನು ವಿವರಿಸಿರುವನು ಎಂಬ ಕೆಲವು ವಿದ್ವಾಂಸರ ಅಭಿಪ್ರಾಯ ಸರಿ ಎಂದು ಕಾಣುತ್ತದೆ.

ಕೇದಾರಭಟ್ಟನ 'ವೃತ್ತ ರತ್ನಾಕರ' ಬಹು ಪ್ರಸಿದ್ಧವಾದ ಸಂಸ್ಕೃತ ಛಂದೋಲಕ್ಷಣ ಗ್ರಂಥ. ಇವನು ವೈದಿಕ ಮತದವನು; ಶೈವ 'ಪಂಥಕ್ಕೆ ಸೇರಿದವನು; ದಕ್ಷಿಣ ದೇಶದವನು. ಇವನ ಕಾಲ ಸು.೧೧೦೦. ಇವನು ವೈದಿಕ ಛಂದಸ್ಸನ್ನು ಕೈಬಿಟ್ಟಿದ್ದಾನೆ. ವರ್ಣ ವೃತ್ತಗಳ ವಿಚಾರದಲ್ಲಿ ಪಿಂಗಲನಿಗಿಂತ ಅಚ್ಚುಕಟ್ಟು, ಜಯದೇವನಂತೆ ಲಕ್ಷ್ಯಗಳ ಮೂಲಕ ಲಕ್ಷಣ ವಿವರಣೆ ಮಾಡುವುದು ಇವನ ಪದ್ಧತಿ. ತನ್ನ ಗ್ರಂಥದ ಪ್ರಮಾಣ ೧೩೬ ಶ್ಲೋಕಗಳೆಂದು ಹೇಳಿಕೊಂಡಿದ್ದಾನೆ. ವಿಶೇಷವಾಗಿ ವರ್ಣ ವೃತ್ತಗಳ ಅಧ್ಯಾಯದಲ್ಲಿ ಈಚಿನವರು ಬರೆದ ಶ್ಲೋಕಗಳೂ ಸೇರಿಹೋಗಿವೆ; ಇವನ ಗ್ರಂಥದ ಮೇಲೆ ಮಾಡಿರುವಷ್ಟು ವ್ಯಾಖ್ಯಾನಗಳು ಇತರ ಯಾವ ಛಂಧೋಗ್ರಂಥದ ಮೇಲೂ ಮಾಡಿಲ್ಲ. ಈ ಸಂಗತಿ ವೃತ್ತರತ್ನಾಕರದ ಜನಪ್ರಿಯತೆಗೆ ಸಾಕ್ಷಿ.

ಸಂಸ್ಕೃತದಲ್ಲಿ ಅತ್ಯಂತ ಪ್ರಮುಖವಾದ ಛಂದೋಗ್ರಂಥಗಳು ನಾಲ್ಕು ಎಂದು ವಿದ್ವಾಂಸರು ಪರಿಗಣಿಸಿದ್ದಾರೆ; ಪಿಂಗಲನ ಛಂದಸ್ಸೂತ್ರ, ಭರತನ ನಾಟ್ಯಶಾಸ್ತ್ರ, ಕೇದಾರಭಟ್ಟನ ವೃತ್ತಾರತ್ನಾಕರ ಮತ್ತು ಹೇಮಚಂದ್ರನ ಛಂದೋನುಶಾಸನ, ಹೇಮಚಂದ್ರನ ಕಾಲ ಕ್ರಿ.ಶ.೧೦೮೯–೧೧೭೩. ಇವನು ಸಂಸ್ಕೃತದಲ್ಲೂ, ಪ್ರಾಕೃತದಲ್ಲೂ ಅನೇಕ ಗ್ರಂಥಗಳನ್ನು ರಚಿಸಿದ್ದಾನೆ. ಇವನು ಜೈನಮತೀಯ. ಇವನ ಛಂದೋನುಶಾಸನದಲ್ಲಿ ೮ ಅಧ್ಯಾಯಗಳಿದ್ದು, ವಿಷಯ ಹಂಚಿಕೆ ಹೀಗಿದೆ: ೧.ಪೀಠಿಕೆ; ೨–೩. ಸಂಸ್ಕೃತ ಛಂದಸ್ಸು; ೪.ಆರ್ಯಾವೃತ್ತ ಮತ್ತು ಪ್ರಾಕೃತ ಛಂದಸ್ಸು;

ಮೊದಲಿನಿಂದಲೂ ತುಂಬ ಚರ್ಚೆಗೆ ಒಳಗಾಗಿದೆ. ಅವರುಗಳ ಕಾಲದ ವಿಚಾರವೂ ಅಷ್ಟೆ.)

ಛಂದೋಂಬುಧಿಯನ್ನು ಬರೆದವನು ಈ ಇಬ್ಬರು (ಅಥವಾ–ಕಾದಂಬರಿ ಮತ್ತು ಛಂದೋಂಬುಧಿಗಳ ಕರ್ತೃಗಳು ಬೇರೆ ಬೇರೆ ಎಂದಾದರೆ, ಮೂವರಲ್ಲಿ) ಒಬ್ಬ ನಾಗವರ್ಮ ಎಂಬುದರಲ್ಲಿ ಸಂದೇಹವೇ ಇಲ್ಲ. ಛಂದೋಂಬುಧಿಯ ಅನೇಕ ಹಸ್ತಪ್ರತಿಗಳು ದೊರೆತಿವೆ; ಇನ್ನೂ ದೊರೆಯುತ್ತಿವೆ. ಪ್ರಾಚೀನ ಕಾಲದ ನಾಲ್ಕೈದು ಕನ್ನಡ ಛಂದೋಗ್ರಂಥಗಳಲ್ಲಿ ಇದು ಬಹುಮಟ್ಟಿಗೆ ಸಮಗ್ರವೂ ಪ್ರಮಾಣಭೂತವೂ ಆದ ಗ್ರಂಥ. ಆದ್ದರಿಂದ, ಅಂದೂ ಇಂದೂ ವಿದ್ವಾಂಸರ ಮಂಡಲಿಯಲ್ಲಿ ತುಂಬ ಪ್ರಿಯವಾಗಿದೆ. ಗ್ರಂಥದ ಹಸ್ತಪ್ರತಿಗಳು ಬಹು ಸಂಖ್ಯೆಯಲ್ಲಿ ದೊರೆತಿರುವುದು, ಲೆಕ್ಕವಿಲ್ಲದಷ್ಟು ಬೇರೆ ಬೇರೆ ಪಾಠಗಳು ಹುಟ್ಟಿಕೊಂಡಿರುವುದು, ಗ್ರಂಥದ್ದಲ್ಲವೆಂದು ನಿಸ್ಸಂದೇಹವಾಗಿ ಹೇಳಬಹುದಾದ ಪೂರ್ವದ ಮತ್ತು ಆಮೇಲಿನ ಕೃತಿಗಳ ಪದ್ಯಗಳೂ ಇತರ ಪದ್ಯಗಳೂ ಈ ಗ್ರಂಥದಲ್ಲಿ ಸೇರಿ ಹೋಗಿರುವುದು – ಇವಕ್ಕೆಲ್ಲ ಗ್ರಂಥದ ಜನಪ್ರಿಯತೆಯೇ ಮುಖ್ಯಕಾರಣ. ಕವಿಯ ಕಾಲ ಮತ್ತು ಮತಕ್ಕೆ ಸಂಬಂಧಪಟ್ಟ ಬಹು ಮುಖ್ಯ ವಿಚಾರಕ್ಕೆ ಸಂಬಂಧಪಟ್ಟ ಸಂಗತಿಯನ್ನೇ ಪಾಠವ್ಯತ್ಯಾಸಕ್ಕೆ ಉದಾಹರಣೆಯಾಗಿ ತೆಗೆದುಕೊಳ್ಳಬಹುದು.

ಕೆಲವು ಹಸ್ತಪ್ರತಿಗಳಲ್ಲಿ ನಾಗವರ್ಮನ ವಂಶ, ತಂದೆ ತಾಯಿ, ಗುರು, ಪೋಷಕ, ಕವಿಯ ಶೀಲ ಸ್ವಭಾವ, ಮುಂತಾದ ಆತ್ಮವೃತ್ತಾಂತಕ್ಕೆ ಸಂಬಂಧಪಟ್ಟ ಹಲವು ಪದ್ಯಗಳಿವೆ. ಅವುಗಳ ಸಾರಾಂಶ ಇಷ್ಟು:

ಪ್ರಸಿದ್ಧವಾದ ವೆಂಗಿ ವಿಷಯದಲ್ಲಿಯ ಸಪ್ತಗ್ರಾಮಗಳಲ್ಲಿ ವೆಂಗಿಪಳು ಇದ್ದಿತು. ಅದರಲ್ಲಿ ಕೌಂಡಿನ್ಯಗೋತ್ರದ ವೆಣ್ಣಮಯ್ಯನೆಂಬ ಬ್ರಾಹ್ಮಣನಿದ್ದನು ಇವನ ಮೊಮ್ಮಗ ವೆಣ್ಣಮ್ಮಯ್ಯ; ಈತನ ಹೆಂಡತಿ ಪೋಳಕಬ್ಬೆ. 'ಆ ಪೋಳಕಬ್ಬೆಗಂ ವಿದ್ಯಾಪರಿಣತನೆನಿಪ ವೆಣ್ಣಮಯ್ಯಂಗಂ ವಾಕ್ ಶ್ರೀಪತಿ, ಸತ್ಕವಿತ್ವಗುಣೋಪೇತಂ, ನಾಗವರ್ಮಂ ಅಗ್ರತನೂಜಂ. 'ಇವನು ಯುದ್ಧದಲ್ಲಿ ಕುಂತೀಪುತ್ರ; ಶಾಸ್ತ್ರದಲ್ಲಿ ಬ್ರಹ್ಮ, ಐಶ್ವರ್ಯದಲ್ಲಿ ವಿಷ್ಣು; ಶುಚಿಯಾದ ಶೀಲದಲ್ಲಿ ಭೀಷ್ಮ; ಸತ್ಯದಲ್ಲಿ ಕರ್ಣ; ಉದಾರತೆಯಲ್ಲಿ ವಿಕ್ರಮಾದಿತ್ಯ. ಇಂಥವನ–

"ಅರಸಂ ರಕ್ಕಸಗಂಗಂ, ಗುರುಗಳ್ನೆಗಳ್ದ ಅಜೀತಸೇನ ಪಂಡಿತ ದೇವರ್,
ಪರೆದ ನೃಪಂ ಅಣ್ಣಂ, ಎನೆ, ಮಚ್ಚರಿಸುವವರಾರ್? ನಾಕಿ ಇರುಳೊಳಂ
ಪುಟ್ಟಿದನೇ?

ಎಂಬುದು, ಮೂಡಣ ಚಾಲುಕ್ಯರ ೩ನೆಯ ವಿಜಯಾದಿತ್ಯನಿಗೆ (ಕ್ರಿ.ಶ.೮೪೪.೮೮೮) 'ಗುಣಗ', 'ಗುಣಗಾಂಕ', 'ಗುಣಕೆನಲ್ಲ' ಎಂಬ ಬಿರುದುಗಳಿದ್ದುವೆಂದೂ 'ಗುಣಗಾಂಕಿಯ'ದ ಕವಿ ತನ್ನ ಗ್ರಂಥವನ್ನು ಈ ರಾಜನಿಗೆ ಅಂಕಿತ ಮಾಡಿರಬಹುದೆಂದೂ ಕವಿ ಚರಿತೆಕಾರರು ಊಹಿಸಿದ್ದಾರೆ. ಈ ಊಹೆ ನಿಲ್ಲುವ ಪಕ್ಷಕ್ಕೆ, 'ಗುಣಕಾಂಕಿಯು'ವೆ ನಮಗೆ ತಿಳಿದು ಬಂದ ಮೊದಲ ಛಂದೋಗ್ರಂಥವಾಗುತ್ತದೆ.

ಕಾವ್ಯಾವಲೋಕನವನ್ನು ಬರೆದ ೨ನೆಯ ನಾಗವರ್ಮನು 'ಛಂದೋವಿಚಿತಿ' ಎಂಬ ಗ್ರಂಥವನ್ನೂ ಬರೆದಿರಬಹುದೆಂದು ಹಿಂದೆ ಹೇಳಿದೆಯಷ್ಟೆ. ಆ ಗ್ರಂಥವೂ ದೊರೆತಿಲ್ಲ. ಈ ನಾಗವರ್ಮನಿಗಿಂತ (೧೦೪೨) ಈಚಿನವನಾದ ಜಯಕೀರ್ತಿ (೧೧೯೯) ಹೇಳುವ 'ಛಂದೋಮತ' ಈ ಗ್ರಂಥ ಇದ್ದರೂ ಇರಬಹುದು.

**ಕರ್ಣಾಟ ಛಂದೋಮತ:** 'ಚಂದೋವಿಚಿತಿ'?, ವಿಚಿತ್ರಾ ಎಂಬ ಒಂದು ತ್ರಿಪದಿಯ ಪ್ರಭೇದದ ಲಕ್ಷಣವನ್ನು ಹೇಳುವಾಗ ಜಯಕೀರ್ತಿ 'ಪೂರ್ವ ಕರ್ಣಾಟ ಛಂದೋಮತೇ' ಎಂದು ಬರೆದಿದ್ದಾನೆ. ಇದು ಆ ಹೆಸರಿನ ಒಂದು ಗ್ರಂಥವನ್ನು ಸೂಚಿಸುತ್ತದೋ ಸಾಮಾನ್ಯವಾಗಿ ಕನ್ನಡ ಛಂದಸ್ಸಿಗೆ ಅನ್ವಯಿಸುತ್ತದೋ ಖಚಿತವಾಗಿ ಹೇಳಲಾಗುವುದಿಲ್ಲ. ಇದು ಗ್ರಂಥದ ಹೆಸರೇ ಆಗಿದ್ದ ಪಕ್ಷದಲ್ಲಿ ನಾಗವರ್ಮನ ಛಂದೋಂಬುಧಿಗಿಂತ ಬಲು ಹಿಂದಿನ ಕನ್ನಡ ಛಂದೋಗ್ರಂಥ ಒಂದಿದ್ದೆಂದು ಹೇಳಬಹುದು.[೪]

## ನಾಗವರ್ಮನ ಛಂದೋಂಬುಧಿ

'ಕರ್ಣಾಟಕ ಕಾದಂಬರಿ' ಎಂಬ ಕನ್ನಡದ ಮೊದಲ ಶೃಂಗಾರ ಕಾವ್ಯವನ್ನೂ 'ಛಂದೋಬುಧಿ'ಯನ್ನೂ ಬರೆದವನು ಒಬ್ಬನು – ಮೊದಲನೆಯ ನಾಗವರ್ಮ. ಇವನು ಬ್ರಾಹ್ಮಣ; ಇವನ ಕಾಲ ಕ್ರಿ.ಶ.೯೯೦. ಕಾವ್ಯಾವಲೋಕನ ಮುಂತಾದ ನಾಲ್ಕು ಗ್ರಂಥಗಳನ್ನು (ಈಚೆಗೆ ದೊರೆತ, ೧೦೪೨ರಲ್ಲಿ ರಚಿತವಾಗಿರುವ ವರ್ಧಮಾನ ಪುರಾಣವು ಸೇರಿದರೆ ಐದು ಗ್ರಂಥಗಳು) ಬರೆದವನು ಇನ್ನೊಬ್ಬನು – ಎರಡನೆಯ ನಾಗವರ್ಮ; ಇವನು ಜೈನ; ಇವನ ಕಾಲ ಸು.೧೧೫೦ (ವರ್ಧಪುರಾಣ ದೊರೆತ ಮೇಲೆ, ಸು.೧೦೫೦ ಎಂದು ಮಾರ್ಪಾಡಾಗಿದೆ); ಹೀಗೆಂದು ಬಹುಮಟ್ಟಿಗೆ ಎಲ್ಲ ವಿದ್ವಾಂಸರೂ ಒಪ್ಪಿಕೊಂಡು ಬಂದಿದ್ದಾರೆ. (ಈ ಎರಡನೆಯ ನಾಗವರ್ಮನೇ ತನಗಿಂತ ಹಿಂದಿನ ಒಬ್ಬ ನಾಗವರ್ಮನ ಹೆಸರನ್ನು ನೆನೆದಿದ್ದಾನೆ. ಈ ನಾಗವರ್ಮರ ಸಂಖ್ಯೆಯ ವಿಚಾರ ಸಾಹಿತ್ಯ ಚರಿತ್ರೆಯಲ್ಲಿ

ಅನುಸರಿಸಿ ಸಂಚರಿಸುವುದು ಅಲ್ಲಲ್ಲಿ ದೃಗ್ಗೋಚರವಾಗುವುದು" ಎಂದೂ[೫] "ನಾಗವರ್ಮನು ಪಿಂಗಳ–ಜಯದೇವರನ್ನೇ ಅಲ್ಲದೆ ಕೇದಾರಭಟ್ಟ–ಹೇಮಚಂದ್ರರನ್ನೂ ಹಲವೆಡೆ ತನ್ನ ಛಂದೋಂಬುಧಿಯಲ್ಲಿ ಅನುಸರಿಸಿರುವುದು ನಿಸ್ಸಂಶಯ – ಅಷ್ಟೇ ಅಲ್ಲ – ಅವನು, ವೇಲಣ ಕರರು* ಕೊಡುವ ಹೇಮಚಂದ್ರನ ಸಾವಿನ ತೇದಿ ಸರಿಯಾಗಿರುವುದಾದರೆ, ಕ್ರಿ.ಶ.೧೧೭೨ರ ಅನಂತರದ ಕಾಲದವನೆಂಬುದೂ ನಿಸ್ಸಂಶಯ. ಆದರೆ, ಎಷ್ಟು ಅನಂತರದವನೆಂಬು ದನ್ನು ತೋರಿಸಲು ಸದ್ಯಕ್ಕೆ ಆಧಾರಗಳಿಲ್ಲ" ಎಂದೂ ತೀರ ಇತ್ತೀಚೆಗೆ ಎಲ್. ಬಸವರಾಜು ಅವರು ಅಭಿಪ್ರಾಯಪಟ್ಟಿದ್ದಾರೆ.[೬] "ಜಯಕೀರ್ತಿಯ ಕಾಲ ಬಹುಶಃ ಕ್ರಿ.ಶ.೧೧ನೆಯ ಶತಮಾನ. ಅವನ ಮನೆ ಮಾತು ಕನ್ನಡ; ಕನ್ನಡ ಸಾಹಿತ್ಯದ ಪರಿಚಯ ಅವನಿಗೆ ಚೆನ್ನಾಗಿ ಇದ್ದಿತಲ್ಲದೆ ಛಂದೋಬುಧಿಯನ್ನೂ ಅವನು ನೋಡಿದಂತೆ ತೋರುತ್ತದೆ ಎಂದು ತೀ.ನಂ.ಶ್ರೀಕಂಠಯ್ಯನವರು ಅಭಿಪ್ರಾಯ ಪಟ್ಟಿದ್ದಾರೆ. ಎಲ್ಲ ಅಭಿಪ್ರಾಯಗಳನ್ನು ತೂಗಿ ನೋಡಿದಾಗ, ಜಯಕೀರ್ತಿಯೇ 'ಛಂದೋಂಬುಧಿಯನ್ನು ಅನುಸರಿಸಿರುವನೆಂದು ಹೇಳಬೇಕಾಗುತ್ತದೆ. ಎಂದ ಮೇಲೆ, ನಾಗವರ್ಮನ ವಂಶವಿಚಾರವನ್ನು ಉಳ್ಳ ಪದ್ಯಗಳು ಬಹುಶಃ ಅವನೇ ಬರೆದವು, ಈಚಿನವರು ಸೇರಿಸಿದವು ಅಲ್ಲ, ಎಂದು ತಿಳಿಯಬೇಕಾಗುತ್ತದೆ. ಆಗ, ನಾಗವರ್ಮನ ಕಾಲ ಕ್ರಿ.ಶ.ಸುಮಾರು ೯೯೦ ಎಂಬ ಕವಿಚರಿತೆಕಾರರ ತೀರ್ಮಾನ ಸದ್ಯದಮಟ್ಟಿಗಂತೂ ಕದಲದೆ ನಿಲ್ಲುತ್ತದೆ. ಕಾದಂಬರಿಯ ನಾಗವರ್ಮನೇ ಬೇರೆ ಛಂದೋಂಬುಧಿಯ ನಾಗವರ್ಮನೇ ಬೇರೆ ಎಂದು ಅವರು ಎತ್ತಿರುವ ಸಂದೇಹದ ಬಗೆಗೂ ವಿಚಾರಮಾಡಬೇಕಾಗಿದೆ. ಕವಿಯ ವಂಶವೃತ್ತಾಂತದಲ್ಲಿ ಗುರು ಜೈನನಾದ ಅಜಿತಸೇನ, ಪೋಷಕ ಜೈನ ಚಾವುಂಡರಾಯ ಎಂದಿರುವುದು ಕವಿಯ ಮತಕ್ಕೆ ಬಾಧಕವಾಗುವುದಿಲ್ಲ. ನಾಗವರ್ಮ ವೈದಿಕ ಮತಾನುಯಾಯಿಯಾದ ಶೈವ ಬ್ರಾಹ್ಮಣ ಎನ್ನಲು ಗ್ರಂಥಗಳಲ್ಲೇ ಆಧಾರಗಳಿವೆ. ಅವನು ಸಯ್ಯಡಿಯ ಗ್ರಾಮದವನು. ಅಲ್ಲಿನ 'ಪಿನಾಕಿ' (ಶಿವನ) ಅವನ ಕುಲದೈವ; ಸಯ್ಯಡಿಯಿಂದ ಗಂಗರಾಜ್ಯಕ್ಕೆ ಬಂದು ಚಾವುಂಡರಾಯನ ಆಶ್ರಯವನ್ನು ಪಡೆದಿರುವಂತೆ ಕಾಣುತ್ತದೆ. ನಾಗವರ್ಮನು ತನ್ನ ಅನೇಕ ಬಿರುದುಗಳನ್ನು ಅಲ್ಲಲ್ಲಿ ಹೇಳಿಕೊಂಡಿರುವನು.

---

* ಎಚ್.ಡಿ.ವೇಲಣಕರರು 'ಜಯದಾಮನ್' ಎಂಬ ಹೆಸರಿನಿಂದ ಜಯದೇವ, ಜಯಕೀರ್ತಿ, ಕೇದಾರಭಟ್ಟ, ಹೇಮಚಂದ್ರ, ಇವರುಗಳ ಛಂದೋಗ್ರಂಥಗಳನ್ನು ಬಹಳ ಉಪಯುಕ್ತವಾದ ಪೀಠಿಕೆಯೊಡನೆ ಒಂದು ಸಂಪುಟವಾಗಿ ೧೯೪೯ರಲ್ಲಿ ಪ್ರಕಟಿಸಿದ್ದಾರೆ.

ಗಂಡರ ಮೂಗುತಿಯೆನಿಸಿದ ಮಂಡಳಿಕರ ಮಂತ್ರಿ ಸಂಧಿವಿಗ್ರಹಿ ರಾಯಂ
ಕೊಂಡಾಡಿ ಪರೆದಂ, ಎನೆ, ಧರೆ ಕೊಂಡಾಡದೆ, ಕೊಂಡುಕೊನೆಯದೇ
ನಾಕಿಗನು?

[ನೆಗಳ್ದ=ಪ್ರಸಿದ್ಧವಾದ, ಗಂಡ=ಶೂರ. ರಾಯ=ಚಾವುಂಡರಾಯ. ಕೊಂಡುಕೊನೆ=ಅತಿಶಯವಾಗಿ ಹೊಗಳು. ನಾಕಿ, ನಾಕಿಗ=ನಾಗವರ್ಮ.]

ಹೀಗೆ "ಪ್ರಸಿದ್ಧನಾದ ನಾಗವರ್ಮನು, ಸಮಸ್ತ ವಿದ್ವಜ್ಜನಕ್ಕೆ ಹಿತಕರವಾದ ಛಂದಸ್ಸನ್ನು ಹೇಳಿದನು". ಈ ಮೇಲಿನ ಪದ್ಯಗಳ ಆಧಾರದ ಮೇಲೆ "ಈ ನಾಗವರ್ಮನು ರಕ್ಕಸಗಂಗನ ಕಾಲದಲ್ಲಿ (೯೮೪) ಚಾವುಂಡರಾಯನಿಂದ ಪೋಷಿತನಾಗಿಯೂ ಅಜಿತಸೇನದೇವನ ಶಿಷ್ಯನಾಗಿಯೂ ಇದ್ದನೆಂಬುದು ವ್ಯಕ್ತವಾಗದಿರಲಾರದು" ಎಂದು ಕವಿ ಚರಿತೆಕಾರರು ಅಭಿಪ್ರಾಯಪಟ್ಟು, ಕಾದಂಬರಿಯಲ್ಲಿ ಭೋಜರಾಜ ಪ್ರಸ್ತಾಪವಿರುವುದನ್ನೂ ಗಮನಿಸಿ, ಈ ನಾಗವರ್ಮನು ಕಾದಂಬರಿ ಮತ್ತು ಛಂದೋಂಬುಧಿಯ ಕರ್ತೃವೆಂದೂ ಇವನ ಕಾಲ ಕ್ರಿ.ಶ.ಸು. ೯೯೦ ಇದ್ದಿರ ಬೇಕೆಂದೂ ತೀರ್ಮಾನಿಸಿದರು. ಬಳಿಕ 'ಧಾರಾಪುರದ ಭೋಜರಾಜನು ೧೦೧೦ರಲ್ಲಿ ಆಳುವುದಕ್ಕೆ ಆರಂಭಿಸಿದಂತೆ ತಿಳಿವುದರಿಂದ ಕಾದಂಬರಿಯನ್ನು ಬರೆದ ನಾಗವರ್ಮನು ಛಂಧೋಂಬುಧಿಯನ್ನು ಬರೆದ ನಾಗವರ್ಮನಿಗಿಂತ ಬೇರೊಬ್ಬನಾಗಿರಬಹುದೋ ಎಂಬ ಸಂದೇಹಕ್ಕೆ ಅವಕಾಶವಿರುವಂತೆ ತೋರುತ್ತದೆ" ಎಂದು ಹೇಳಿ (ಕವಿ ಚರಿತ್ರೆ, ಸಂ. III ಪು. ೪೭೮), ನಾಗವರ್ಮರು ಮೂವರು ಎಂಬ ಅಭಿಪ್ರಾಯಕ್ಕೆ ದಾರಿಮಾಡಿಕೊಟ್ಟರು. ಈಚೆಗೆ ಈ ಅಭಿಪ್ರಾಯಕ್ಕೆ ಕೆಲವು ವಿದ್ವಾಂಸರು ಮನ್ನಣೆ ಕೊಡುತ್ತಿದ್ದಾರೆ. ಮೇಲೆ ಉದಾಹರಿಸಿದ ಪದ್ಯಗಳೂ ಸೇರಿದಂತೆ, ಈ ನಾಗವರ್ಮನ ವಂಶ ವಿಚಾರವನ್ನು ಕುರಿತ ಪದ್ಯಗಳು ನಂಬಿಕೆ ಅರ್ಹವಾದ ಅನೇಕ ಹಸ್ತ ಪ್ರತಿಗಳಲ್ಲಿ ಇಲ್ಲದಿರುವುದರಿಂದ ಅವುಗಳನ್ನು ಈಚಿನವರು ಸೇರಿಸಿರಬೇಕು ಎಂಬುದು ಇವರ ವಾದ. ಇದು ಸರಿಯಾದರೆ, ನಾಗವರ್ಮ ರಕ್ಕಸಗಂನ ಕಾಲದವ ನಾಗುವುದಿಲ್ಲ. ಜಯಕೀರ್ತಿಯ ಛಂದೋನುಶಾಸನಕ್ಕೂ ಛಂದೋಂಬುಧಿಗೂ ಮುಖ್ಯವಾಗಿ ಕನ್ನಡ ಛಂದಸ್ಸಿನ ವಿಷಯದಲ್ಲಿ ತುಂಬ ಹತ್ತಿರದ ಹೋಲಿಕೆ ಉಂಟೆಂದು ಈಗಾಗಲೇ ಹೇಳಿದೆಯಷ್ಟೆ. ಹೋಲಿಕೆಯ ಆಧಾರದ ಮೇಲೆ, "ನಾಗವರ್ಮನು ಜಯಕೀರ್ತಿಯನ್ನು ಹಸುವನ್ನು ಕರುವಿನಂತೆ

ತಿಳಿಸುತ್ತಾನೆ. ಅವನ ಮತದಂತೆ, u ಈ ಚಿಹ್ನೆ ಗುರು; – ಈ ಚಿಹ್ನೆ ಲಘು. (ಈ ಚಿಹ್ನೆಗಳನ್ನು ಕಾಲಕ್ರಮದಲ್ಲಿ u – ಹೀಗೆ ಬರೆಯುವ ರೂಢಿಯಾಯಿತು. ಆದರೆ, ಇದು ಮಾರ್ಪಾಡಾಗಿ, ಗುರುವನ್ನು (–) ಅಡ್ಡ ಗೆರೆಯಿಂದಲೂ ಲಘುವನ್ನು (u) ಬಾಲ ಚಂದ್ರನ ವಕ್ರರೇಖೆ (ಕೊಂಕುಗೆರೆ) ಯಿಂದಲೂ ಗುರುತಿಸುವುದು ಈಗ ರೂಢಿಯಾಗಿದೆ.

ಪದ್ಯ ಯಾವ ಜಾತಿಯಾದರೂ ಗುರು, ಲಘುಗಳ ಬೆಲೆಯಲ್ಲಿ ವ್ಯತ್ಯಾಸ ವಾಗುವುದಿಲ್ಲ. ಗುರು ಲಘುಗಳ ಸ್ವರೂಪವು ನಾಗವರ್ಮನ ಮತದಂತೆ ಹೀಗೆ:

ಮುಂದೆ ಒತ್ತಕ್ಷರವಿದ್ದರೆ ಹಿಂದಿನ ಲಘುವೂ ಗುರುವಾಗುತ್ತದೆ; ಬಿಂದುವಿನಿಂದ (ಅನುಸ್ವಾರದಿಂದ) ಕೂಡಿರುವ ಅಕ್ಷರ, ವಿಸರ್ಗದಿಂದ ಕೂಡಿರುವ ಅಕ್ಷರ, ವ್ಯಂಜನದಿಂದ ಕೂಡಿರುವ ಒತ್ತಕ್ಷರ, ಪಾದದ ಅಂತ್ಯದಲ್ಲಿರುವ ಅಕ್ಷರ, ದೀರ್ಘಾಕ್ಷರ – ಇವು ಗುರು. ಗುರು = ಈಶ್ವರ; ಲಘು = ವಿಷ್ಣು, [ನಾಗವರ್ಮ ಗುರು ಲಘುಗಳ ಕಾಲಮಾನವನ್ನು ತಿಳಿಸಿಲ್ಲ. ಲಘುವಿನ ಬೆಲೆ ಒಂದು ಮಾತ್ರೆ, ಗುರುವಿನ ಬೆಲೆ ಎರಡು ಮಾತ್ರೆ ಎಂದು ಜಯಕೀರ್ತಿ ತಿಳಿಸಿದ್ದಾನೆ. ಅಲ್ಲದೆ 'ಭಾಷಾ ವಿಸಯದ ಜಗದ್ವಾಣಿ'ಯಲ್ಲಿ ಎಂದರೆ ಜನಪದ ಗೀತೆಯಲ್ಲಿ ಒತ್ತಕ್ಷರವನ್ನು ಶಿಥಿಲವಾಗಿ (ಎಂದರೆ, ಸಡಿಲವಾಗಿ ತೇಲಿಸಿ) ಉಚ್ಚರಿಸುವುದರಿಂದ ಹಿಂದಿನ ಅಕ್ಷರ ಲಘುತ್ವವನ್ನೇ ಪಡೆಯುತ್ತದೆ. ಇದು ಶಿಥಿಲದ್ವಿತ್ವ ಎಂದು ಛಂದಸ್ಸಿನಲ್ಲಿ ಪ್ರಸಿದ್ಧ. ಏಓ ಕಾರಗಳು ವಿಕಲ್ಪವಾಗಿ ದೀರ್ಗವೋ ಹ್ರಸ್ವವೋ ಆಗುವುವು – ಎಂದು ಅವನು ತಿಳಿಸಿರುವುದು ಗಮನಾರ್ಹವಾದ ಹೆಚ್ಚಿನ ವಿಚಾರ.]

ಅಕ್ಷರ ವೃತ್ತ ಅಥವಾ ವರ್ಣ ವೃತ್ತಗಳಲ್ಲಿ ಬಳಸುವ ಗಣಗಳ ಬಗೆಗೆ, "ಮ–ಯ–ರ–ಸ–ತ–ಜ–ಭ–ನ–ಲ(ಲಘು)–ಗುರು), ಇವು ಗಣಗಳನ್ನು ಗುರುತಿಸುವ ಹೆಸರುಗಳು. ಮೂರು ಗುರು (– – –), ಮೂರು ಲಘು (uuu) ಇವುಗಳ ಮಿಶ್ರಣ, ಹೀಗೆ ಎಂಟು ಗಣಗಳಾಗುತ್ತವೆ. ಇವುಗಳ ಅಧಿ ದೇವತೆಗಳು ಕ್ರಮವಾಗಿ – ಮೂಮಿ, ಜಲ, ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ, ಸ್ವರ್ಗ" ಎಂದು ಗಣ ಸ್ವರೂಪವನ್ನು ತಿಳಿಸುತ್ತಾನೆ. ನಾಗವರ್ಮ ಮುಂದೆ ವೃತ್ತಗಳ ಲಕ್ಷಣವನ್ನು ವಿವರಿಸುವಾಗ ಈ ದೇವತೆಗಳ ಪರ್ಯಾಯ ನಾಮಗಳನ್ನು (ಬೇರೆ ಬೇರೆ ಹೆಸರುಗಳನ್ನು) ಬಳಸಿಕೊಂಡಿದೆ. ಉದಾಹರಣೆಗೆ:

ಆಗ ಲಗ್ನಿ ಮರುದ್ವ್ವಯಸಂ ಯೋಗಮಾಗಿರೆ ಸಂದುದು ಭೂ
ಭಾಗದೊಳ್ ಮೃಗಲೋಚನೆ ಕೇಳ್ ನಾಗವರ್ಮನಿನಾ ವನಜಂ

ಅವುಗಳ ಪೈಕಿ 'ಕವಿ ರಾಜಹಂಸ'ನೆಂಬುದು ಅವನಿಗೆ ತುಂಬ ಇಷ್ಟವಾದುದಾಗಿ ಕಾಣುತ್ತದೆ.

**ಛಂದೋಂಬುಧಿ (ಗ್ರಂಥ ಪರಿಚಯ):**

"ಛಂದಸ್ಸನ್ನು ಶಿವನು ಪಾರ್ವತಿಗೆ ತಿಳಿಯಹೇಳಿದನು. ಅದನ್ನು ಪಿಂಗಳನು ಭೂಲೋಕದಲ್ಲಿ ಪ್ರಚಾರ ಮಾಡಿದನು. ಆ ಛಂದಸ್ಸೆಂಬ ಸಮುದ್ರದಿಂದ ಮೊಗೆದು ಪಡೆದಷ್ಟನ್ನು ನಾಗವರ್ಮನು ತನ್ನ ಪತ್ನಿಗೆ ಹೇಳಿದನು" ಎಂದು ಪ್ರಾರಂಭಿಸಿ, "ಚಂದ್ರಮುಖೀ, 'ಛಂದೋಂಬುಧಿ' ಎನ್ನುವುದು ನನ್ನ ಛಂದೋಗ್ರಂಥದ ಹೆಸರು. ವಿದ್ವಾಂಸರು ಮೆಚ್ಚುವಂತೆ ಇದನ್ನು ನಿನಗೆ ಹೇಳುತ್ತೇನೆ ಕೇಳು" ಎಂದು ವಿಷಯ ವಿವರಣೆಗೆ ತೊಡಗುತ್ತಾನೆ.

ಸಂಸ್ಕೃತದಲ್ಲಿ ಅನೇಕ ಶಾಸ್ತ್ರ ಗ್ರಂಥಗಳು ಗುರುಶಿಷ್ಯರ ಪ್ರಶ್ನೋತ್ತರ ಸಂವಾದರೂಪದಲ್ಲಿ ರಚಿತವಾಗಿವೆ. ಈ ಪದ್ಧತಿಯನ್ನು ಮಾರ್ಪಡಿಸಿಕೊಂಡು ನಾಗವರ್ಮ ತನ್ನ ಕೃತಿಯನ್ನು ಹೆಂಡತಿಗೆ ಹೇಳಿದಂತೆ ಬರೆದಿದ್ದಾನೆ. ಸಾಧಾರಣವಾಗಿ ಪ್ರತಿಯೊಂದು ಲಕ್ಷಣ ಪದ್ಯದ ಕೊನೆಯಲ್ಲೂ ವಿಲೋಲೇಕ್ಷಣೇ ಅಬ್ಜಾನನೇ, ಲಲಿತಗಾತ್ರೇ, ಚಕಿತಹರಿಣೀನೇತ್ರೆ, ವ್ಯಾಲೋಲನೀಲಾಳಕೇ, ಕನಕಕುಂಡಲಮುಂಡಿತಗಂಡೇ ಎಂದು ಹತ್ತುಹಲವಂದಾಗಿ ಹೆಂಡತಿಯ ಚೆಲುವನ್ನು ಸೂಚಿಸುವ ಗುಣವಾಚಕಗಳನ್ನು ಕವಿ ಬಳಸಿದ್ದಾನೆ. ಕೆಲವೊಮ್ಮೆ ಹೆಂಡತಿಯನ್ನು ಕುರಿತ ಗುಣವಾಚಕ ಸಂಬೋಧನೆ ಅತಿ ದೀರ್ಘವಾದ ಸಮಾಸ ಪದವಾಗಿರುವುದೂ ಉಂಟು. ಎರಡು ಪಂಕ್ತಿಗಳ ಈ ಸಂಬೋಧನೆ ಅದ್ಭುತವಾಗಿದೆ: "ಗುರುವೃತ್ತೋತುಂಗ ವಕ್ಷೋರುಹ ಭರವಿಲಸನ್ ಮಧ್ಯಶೀಖಾ ವಿಳಾಸ ಸ್ಫುರಿತಪೋದ್ಧಾಮ ಕಾಂಚೀಖಚಿತ ಮಣಿನಿತಂಬ ಸ್ಥಿಲಾಭೋಗಭಾಗೇ". ಈ ರೀತಿಯು ಬರವಣಿಗೆಯಿಂದ ನಾಗವರ್ಮನ ದಾಂಪತ್ಯ ಜೀವನ ಸುಖಮಯವಾಗಿತ್ತು ಎಂದು ಊಹಿಸಬಹುದು.

**ಮೊದಲ ಅಧಿಕಾರ:** ಕ್ಷೀರಸಾಗರದಲ್ಲಿ ಕೌಸ್ತುಭರತ್ನ ಮೊದಲಾದುವು ಹುಟ್ಟಿದಂತೆ, 'ಛಂದೋಂಬುಧಿ'ಯಲ್ಲಿ 'ಮಯ ರ ಸ ತ ಜ ಭ ನ ಲ ಗಾ ಕ್ಷರಂ' ಹುಟ್ಟಿದವು. (ಮೂರು ಮೂರು ಲಘು ಗುರು ಅಕ್ಷರಗಳಿಂದ ಏರ್ಪಡುವ ಮ ಗ ಣ, ಯ ಗ ಣ, ರ ಗ ಣ, ಸ ಗ ಣ, ತ ಗ ಣ, ಜ ಗ ಣ, ಭ ಗ ಣ, ನ ಗ ಣ ಛಂದಸ್ಸಿನ ಮೂಲ ಘಟಕಗಳು – ಇದರ ತಾತ್ಪರ್ಯ).

ಅನಂತರ, ಗುರು ಲಘುಗಳನ್ನು ಗುರುತಿಸುವ ಚಿಹ್ನೆಗಳ ಸ್ವರೂಪವನ್ನು

ಯಾವುದರಿಂದ ಅಶುಭ ಎಂಬ ಬಗೆಗೆ ಛಂದೋಂಬುಧಿಯ ಕೆಲವು ಹಸ್ತಪ್ರತಿಗಳಲ್ಲಿಯೂ, ಈಚಿನ ಮುದ್ರಿತ ಪ್ರತಿಗಳಲ್ಲಿಯೂ ಕೆಲವು ಪದ್ಯಗಳಿವೆ. ಇತರರನ್ನು ಕುರಿತು ಬರೆದಾಗ ಈ ಶುಭಾಶುಭ ಫಲಗಳು ಕುರಿತವರಿಗೆ – ಈ ಪದ್ಯಗಳನ್ನು ನಾಗವರ್ಮನೇ ಬರೆದನೋ, ಈಚಿನವರು ಬರೆದು ಸೇರಿಸಿದರೋ, ಹೇಳುವುದು ಕಷ್ಟ. 'ಕವಿಜಿಹ್ವಾಬಂಧನ' ಎಂಬ ಛಂದಸ್ಸಿನ ಗ್ರಂಥದಲ್ಲಿ ಈ ವಿಷಯಕ್ಕೆ ಪ್ರಾಮುಖ್ಯ ಇರುವುದರಿಂದ ಆ ಸಂಬಂಧವಾಗಿ ವಿಚಾರ ಮಾಡುವಾಗ ಒಂದೆರಡು ಸಂಗತಿಗಳನ್ನು ಗಮನಿಸಬಹುದು.

ಯತಿ ನಿಯಮವನ್ನು ಕುರಿತು ನಾಗವರ್ಮನ ಅಭಿಪ್ರಾಯ ಸ್ಪಷ್ಟವಾಗಿದೆ: "ಯತಿ ಎಂಬುದು ಗಣನಿಯಮ ಪಾಲನೆಯಲ್ಲಿ ಗೋಚರಿಸುವ ಅಂಶ. ಅದು ಉಸಿರ್ದಾಣ (ಎಂದರೆ, ಅರ್ಥ ಕೆಡದ ರೀತಿಯಲ್ಲಿ ಪದ್ಯ ಛಂದಸ್ಸಿನ ನಡೆಯನ್ನು ನಿಲ್ಲಿಸಿ, ಉಸಿರು ತೆಗೆದುಕೊಳ್ಳುವ ಸ್ಥಳ). ಈ ಯತಿ ನಿಯಮವನ್ನು ಮೀರಿದರೆ ಕವಿತೆ ಶೋಭಿಸುವುದಿಲ್ಲ."

ಅನಂತರ, ಸಂಸ್ಕೃತ ಪ್ರಾಕೃತ ಅಪಭ್ರಂಶ ಮತ್ತು ಇತರ ಎಲ್ಲ ಭಾಷೆಗಳಲ್ಲಿಯೂ ಬಳಕೆಗೊಳ್ಳಬಹುದಾದ ೨೬ ಛಂದಸ್ಸುಗಳನ್ನೂ, 'ಕರ್ಣಾಟ ವಿಷಯ ಭಾಷಾ ಜಾತಿ'ಯ ಛಂದಸ್ಸಿನ ಬಗೆಗಳನ್ನೂ ಹೆಸರಿಸಿದ್ದಾನೆ ನಾಗವರ್ಮ. ಈ ೨೬ ಛಂದಸ್ಸುಗಳಲ್ಲಿ ಹುಟ್ಟುವ ವೃತ್ತಗಳೆಲ್ಲವೂ ಸಮವೃತ್ತಗಳು. ಎಂದರೆ, ಪದ್ಯದ ನಾಲ್ಕು ಪಾದಗಳೂ ಒಂದೇ ಸಂಖ್ಯೆಯ ಗಣಗಳನ್ನು ಹೊಂದಿರತಕ್ಕವು. ಇವುಗಳಲ್ಲದೆ ಮಾಲಾವೃತ್ತ, ದಂಡಕ, ರಗಳೆ, ಮಾತ್ರಾ ಛಂದಸ್ಸಿನ ಆರ್ಯೆ, ಸ್ಕಂಧಕ, ಎಂಬ ಜಾತಗಿಗಳೂ ಉಂಟು. 'ಕರ್ಣಾಟ ವಿಷಯ ಭಾಷಾ ಜಾತಿ' ಎಂದು ಹೆಸರಾದ ಛಂದಸ್ಸಿನಲ್ಲಿ ಮದನವತಿ, ಅಕ್ಕರ, ಚೌಪದಿ, ಏಳೆ, ತ್ರಿಪದಿ, ಉತ್ಸಾಹ, ಷಟ್ಪದಿ, ಅಕ್ಕರಿಕೆ, ಛಂದೋವತಂಸ – ಇವನ್ನು ಹೆಸರಿಸಿ, ಇವುಗಳ ಲಕ್ಷಣ ವಿವರಣೆಗೆ ಒಂದು ಅಧ್ಯಾಯವನ್ನು ಮೀಸಲಿರಿಸಿದ್ದಾನೆ. ಈ ಮೊದಲ ಅಧಿಕಾರವನ್ನು ಛಂದಸ್ಸಿನ ಪ್ರಾಮುಖ್ಯದ ವರ್ಣನೆಯಿಂದ ಮುಗಿಸಿದ್ದಾನೆ:

ಛಂದಮಂ ಅರಿಯದನ ಓದುಂ,
ಮುಂದಿರ್ದ ಆ ತಾಲ ಮಾನವರಿಯದ ಪಾಡುಂ,
ಬಂದುದ ಗೆಡೆವನ ನುಡಿಯುಂ, ಅ–
ದೊಂದರ್ಕಂ ಬಾಳ್ತೆಯಿಲ್ಲ ಕೇಳಿಂದುಮುಖೀ.

ಎಂಬ ಒಂಬತ್ತು ಅಕ್ಷರಗಳ 'ಬೃಹತಿ' ಎಂಬ (೫೧೨) ವೃತ್ತ ಜಾತಿಗಳಲ್ಲಿ ವನಜ ವೃತ್ತದ ಲಕ್ಷಣ – ಲಕ್ಷ್ಯ ಪದ್ಯ ಹೀಗಿದೆ. ಇದರಲ್ಲಿ ಅಗ್ನಿ ಗಣ (ಮೂರನೆಯ – u– ರಗಣ) ಮತ್ತು ಎರಡು ಮರುತ್ (ವಾಯು) ಗಣಗಳು (ನಾಲ್ಕನೆಯ ಸಗಣ uu–, uu –) ಬರುತ್ತವೆ. ಈ ವನಜ ವೃತ್ತ ನಾಗವರ್ಮನಿಂದ ಸೃಷ್ಟಿಯಾಯಿತು ಎಂದು ಹೇಳಿರುವುದನ್ನು ಗಮನಿಸಬೇಕು. ಹೀಗೆಯೇ ಮುಂದೆ ಅನೇಕ ವೃತ್ತ ಲಕ್ಷಣಗಳನ್ನು ವಿವರಿಸುವಾಗ ಇಂಥ ಮಾತು ಬರುತ್ತದೆ. ಇದನ್ನು ನಂಬದಿರಲು ಕಾರಣವಿಲ್ಲ. ಏಕೆಂದರೆ, ಗುರು ಲಘುಗಳನ್ನು ಒಂಬತ್ತೊಂಬತ್ತಾಗಿ ಒಂದು ಸಲ ಜೋಡಿಸಿದ ಕ್ರಮ ಇನ್ನೊಂದು ಸಲ ಬರದ ಹಾಗೆ ಜೋಡಿಸಿಕೊಂಡು ಹೋದರೆ ೫೧೨ ವೃತ್ತಗಳು ಆಗುತ್ತವೆ. ಹಿಂದೆ ಯಾವ ಶಾಸ್ತ್ರಕಾರನೂ ಹೇಳದಿರುವ ಒಂದು ವೃತ್ತವನ್ನು ಛಂದಸ್ಸಿನ ಮರ್ಮವನ್ನು ಬಲ್ಲವನು ನಿರ್ಮಾಣ ಮಾಡುವುದು ಕಷ್ಟವೇನಲ್ಲ. ಆಯ್ಕೆಗೆ ಅಷ್ಟು ವಿಸ್ತಾರವಾದ ಹರವು ಇದೆ. ಹಾಗೆ ನಿರ್ಮಾಣ ಮಾಡಿದ ವೃತ್ತದ ಲಯ ಮಾತ್ರ ಕವಿಗೆ ಹಿತವಾಗಿರಬೇಕು; ಅಷ್ಟೆ.* ಈ ಪದ್ಯದಲ್ಲಿ ಭಾಮಿನೀ ಷಟ್ಪದಿಯ ನಡೆಯನ್ನು ಗುರುತಿಸಬಹುದು. ಕೇಳಲು ಹಿತವಾಗಿದೆ. ಈ ಗಣವಿನ್ಯಾಸದ ವೃತ್ತವನ್ನು ಹಿಂದಿನವರು ಯಾರೂ ಹೇಳಿಲ್ಲ. ಆದ್ದರಿಂದ ಇದು 'ನಾಗವರ್ಮನಿಂದ ಸಂದುದು' ಎಂದು ತಿಳಿಯಲು ಅಡ್ಡಿಯಿಲ್ಲ. ಇಂಥ ಅನೇಕ ಉದಾಹರಣೆಗಳು ಛಂಧೋಂಬುಧಿ ಯಲ್ಲಿ ಇವೆ. ಇದರಿಂದ ನಾಗವರ್ಮ, ಪಿಂಗಲ, ಜಯದೇವ, ಮುಂತಾದ ಪೂರ್ವಲಾಕ್ಷಣಿಕರನ್ನು 'ಮಕ್ಕಿಕಾಮಕ್ಕಿ' ಅನುಕರಣೆ ಮಾಡತಕ್ಕವನಲ್ಲ, ಸ್ವತಂತ್ರವಾಗಿಯೂ ವಿಚಾರ ಮಾಡಿ ಹೊಸ ಹೊಸ ಛಂದಸ್ಸಿನ ಬಗೆಗಳನ್ನು ನಿರ್ಮಾಣ ಮಾಡಬಲ್ಲ ಪ್ರತಿಭಾವಂತನಾದ ಶಾಸ್ತ್ರಜ್ಞ ಎಂಬುದು ಚೆನ್ನಾಗಿ ಗೊತ್ತಾಗುತ್ತದೆ.

ವೃತ್ತಗಳನ್ನು ರಚಿಸುವಾಗ ಕವಿ (ಬಹುಶಃ ಮೊದಲ ಗಣವಾಗಿ) ಯಾವ ಗಣವನ್ನು ಉಪಯೋಗಿಸಿದರೆ ಏನು ಫಲ, ಯಾವ ಗಣದಿಂದ ಶುಭ,

---

* ಉದಾಹರಣೆಗೆ 'ಅಮರಗಣ ವಾತತೋಯಂ' ಎಂಬ ಇದೇ ೯ ಅಕ್ಕಷರಗಳ ವೃತ್ತ ಜಾತಿಯಲ್ಲಿ 'ಮಯೂರ' ಎಂಬ (ನಸಜ ಗಣಗಳ) ವೃತ್ತವನ್ನು ಗಮನಿಸಬಹುದು. ಈ ಪದ್ಯದಲ್ಲಿಯೂ 'ಏನಿಸಿತಿದು ನಾಕಿಯಿಂದಂ' ಎಂಬ ಮಾತು ಬಂದಿದೆ. ಇದರಲ್ಲಿ ೫ ಮಾತ್ರೆಗಳ ವಾರ್ಧಿಕ ಷಟ್ಪದಿಯ ನಡೆ; ಮೇಲೆ ಒಂದು ದೀರ್ಘ ಇದೆ. ಹಿಂದಿನ ಲಕ್ಷಣಕಾರರು ಇದೇ ೯ ಅಕ್ಷರದ ವೃತ್ತವನ್ನು 'ನಸಯ' ಗಮಗಳಿಂದ ನಿರ್ಮಿಸಿರುವುದೂ ಇದೆ. 'ಯ' ಗಣದ ಬದಲು 'ಜ' ಗಣ ಹಾಕಿ ಸ್ವಲ್ಪ ವ್ಯತ್ಯಾಸ ಮಾಡಿರುವುದರಿಂದ, ಇದನ್ನು 'ನಾಕಿ' (ನಾಗವರ್ಮ)" ನಿರ್ಮಿಸಿದ್ದು ಎಂದಾಗ ನಾವು ನಂಬಬಹುದು.

.... ಬಿಟ್ಟರೆ ಈ ಆರು ವೃತ್ತಗಳು ವಿಶೇಷವಾಗಿ ಬಳಕೆಯಾಗಿವೆ. '೭೦೦–೯೦೦ ... ಶಾಸನಗಳಲ್ಲಿಯೂ ಇವು ಸಿಕ್ಕುತ್ತವೆ. ಆದ್ದರಿಂದ ಇವಕ್ಕೆ ..... ಕರ್ಣಾಟಕ' ಎಂದರೆ 'ಕನ್ನಡದಲ್ಲಿ ಹೆಸರಾದವು' ಎಂಬ ಹೇಳಿಕೆ....... ಬಂದಿರಬಹುದು. ಈ ಆರು ವೃತ್ತಗಳನ್ನು ಸುಲಭವಾಗಿ ಗುರುತಿಸುವ ಬಗೆಯಲ್ಲೂ..... ಸೂಚಿಸುವ ಒಂದು ಪದ್ಯವೂ ಇದೆ. ಇದು ಕೆಲವು ಹಸ್ತ ಪ್ರತಿಗಳು .... ಇಲ್ಲದಿರುವುದರಿಂದ ಈಚಿನವರು ರಚಿಸಿ ಛಂದೋಂಬುಧಿಗೆ ಸೇರಿಸಿರುವರೆಂದು ತೋರುತ್ತದೆ. ಅದು ಹೇಗಿದ್ದರೂ, ಛಂದಸ್ಸಿನ ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಈ ಪದ್ಯವನ್ನು ಆಸಕ್ತಿಯುಳ್ಳವರು ಕಲಿತುಕೊಳ್ಳುವುದರಿಂದ ನಷ್ಟವೇನೂ ಆಗಲಾರದು. ಅದನ್ನು ಕೆಳಗೆ ಕೊಟ್ಟಿದೆ:

ಗುರುವೊಂದಾದಿಯೊಳುಲ್ಪಲಂ, ಗುರುಮೊದಲ್ ಮೂರಾಗೆ ಶಾರ್ದೂಲಮಾ
ಗುರು ನಾಲ್ಕಾಗಿರಲಂತು ಸ್ರಗ್ಧರೆ, ಲಘುದ್ವಂದ್ವಂ ಗುರು ದ್ವಂದ್ವಾಮಾ
ಗಿರೆ ಮತ್ತೇಭ, ಲಘುದ್ವಯ ತ್ರಿಗುರುವಿಂದಕ್ಕುಂ ಮಹಾಸ್ರಗ್ಧರಂ,
ಹರಿಣಾಕ್ಷೀ, ಲಘು ನಾಲ್ಕು ಚಂಪಕಂ – ಇವರುಂ ಖ್ಯಾತ ಕರ್ಣಾಟಕಂ

ಉತ್ಪಲ, ಶಾರ್ದೂಲ, ಸ್ರಗ್ಧರೆ – ಇವುಗಳ ಮೊದಲಿನ ಗುರುವಿಗೆ ಎರಡು ಲಘುಗಳನ್ನು ಇಟ್ಟು ಚಂಪಕ, ಮತ್ತೇಭ, ಮಮಾಸ್ರಗ್ಧರೆಗಳನ್ನು ಕನ್ನಡ ಕವಿಗಳು ಮಾಡಿಕೊಂಡಂತೆ ಕಾಣುತ್ತದೆ.[೮] ಮತ್ತೇಭವಿಕ್ರೀಡಿತಂ ಪೆಸರಾಯ್ತಿಂತಿದು ನಾಗವರ್ಮ ಕವಿಯಿಂ ವ್ಯಾಲೋಲ ನೀಲಾಲಕೇ' ಎಂದಿರುವುದರಿಂದ ಈ ವೃತ್ತಕ್ಕೆ ನಾಗವರ್ಮನು ಮೊದಲ ಬಾರಿಗೆ ಲಕ್ಷಣ ಹೇಳಿದನೆಂದು ತೋರುತ್ತದೆ.

**ಮೂರನೆಯ ಅಧಿಕಾರದಲ್ಲಿ** – ಮಾಲಾವೃತ್ತ, ಅರ್ಧಸಮ ವೃತ್ತ, ವಿಷಮ ವೃತ್ತ, ಅನುಷ್ಟುಪ್ (ಶ್ಲೋಕ), ವೈತಾಳೀಯ, ಮುಂತಾದ ಕೆಲವು ವಿಶೇಷ ಜಾತಿಯ ಛಂದಸ್ಸುಗಳ ಲಕ್ಷಣಗಳನ್ನು ವಿವರಿಸಿದೆ. ಇವುಗಳಲ್ಲಿ 'ಶ್ಲೋಕ' ಎಂಬ ಹೆಸರು ಎಲ್ಲರಿಗೂ ಪರಿಚಿತವಾದದ್ದು. ಇದು ರಾಮಾಯಣ, ಮಹಾಭಾರತ, ಭಗವದ್ಗೀತೆ ಮುಂತಾದ ಪ್ರಸಿದ್ಧ ಸಂಸ್ಕೃತ ಗ್ರಂಥಗಳಲ್ಲಿ ಬಳಕೆಯಾಗಿದೆ. ಶಾಸ್ತ್ರಗ್ರಂಥಗಳೆಲ್ಲ ಸಾಧಾರಣವಾಗಿ ಶ್ಲೋಕರೂಪದಲ್ಲಿ ರಚನೆಗೊಂಡಿವೆ. ಕವಿರಾಜಮಾರ್ಗದಲ್ಲಿ ಕನ್ನಡ ಶ್ಲೋಕ ರಚನೆಯ ಪ್ರಯೋಗವನ್ನು ಕಾಣಬಹುದು. ಸಂಸ್ಕೃತದಲ್ಲಿ ಸಾಧಾರಣವಾದ ಈ ಛಂದಸ್ಸು ಅದೇಕೋ ಕನ್ನಡಕ್ಕೆ ಒಗ್ಗಿ ಬರಲಿಲ್ಲ.

**ಎರಡನೆಯ ಅಧಿಕಾರ:** ಇದು ಸಮವೃತ್ತ ನಿರೂಪಣ ಪ್ರಕರಣ. ಇದರಲ್ಲಿ ಒಂದಕ್ಷರದ 'ಉಕ್ತೆ'ಯಿಂದ ಹಿಡಿದು 'ಉತ್ಕೃತಿ'ಯ ೨೬ ಅಕ್ಷರಗಳವರೆಗಿನ ಛಂದಸ್ಸುಗಳಲ್ಲಿ ಪ್ರತಿಯೊಂದರಲ್ಲಿಯೂ ಹುಟ್ಟುವ ವೃತ್ತಗಳಲ್ಲಿ ಹಲಕೆಲವು ವೃತ್ತಗಳನ್ನು ಆಯ್ದುಕೊಂಡು, ಲಕ್ಷಣ ಪದ್ಯವೇ ಲಕ್ಷ್ಯವೂ ಆಗುವಂತೆ ನಾಗವರ್ಮನು ನಿರೂಪಿಸಿದ್ದಾನೆ. ವೃತ್ತಗಳ ಹೆಸರುಗಳಲ್ಲಿಯೇ ಒಂದು ಸೊಗಸಿದೆ. ಉದಾ: ೪ ಅಕ್ಷರಗಳ ಸುಂದರ ವೃತ್ತ, ಮೃಗನೇತ್ರ, ತಿಲಕ, ಸರಸಿರುಹ, ಶಶಿಕಾಂತ, ಕುಮುದ, ಉದಯ, ವನಜ, ಮಂದಾನಿಲ, ಮಣಿರಂಗ, ಸೈನಿಕ, ಇಂದ್ರವಜ್ರ, ಚಂದ್ರಿಕೆ, ಹಂಸಮತ್ತ, ವಸಂತತಿಲಕ, ವನಮಯೂರ, ಮಾಲಿನಿ, ಮಣಿವಿಭೂಷಣ, ಪದ್ಮಮುಖಿ, ಮಂದಾಕ್ರಾಂತ, ಹರಿಣಿಪ್ಲುತ, ಪೃಥ್ವಿ, ಮಲ್ಲಿಕಾಮಾಲೆ, ಅರವಿಂದ, ಇತ್ಯಾದಿ ಇತ್ಯಾದಿ. ಈ ಹೆಸರುಗಳಲ್ಲಿ ಬಹುಸಂಖ್ಯೆಯವು ಹಿಂದಿನ ಶಾಸ್ತ್ರ ಗ್ರಂಥಗಳಲ್ಲಿ ಹೇಳಿರುವವೇ. ಕೆಲವು ಸಂದರ್ಭಗಳಲ್ಲಿ ನಾಗವರ್ಮ ಹಿಂದಿನವರು ಕೊಟ್ಟ ಹೆಸರನ್ನು ತನಗೆ ಇಷ್ಟವಾದ ರೀತಿಯಲ್ಲಿ ಮಾರ್ಪಡಿಸಿಕೊಳ್ಳುವುದೂ ಉಂಟು. ಉದಾಹರಣೆಗೆ: ಪಿಂಗಳ ಜಯದೇವಾದಿಗಳು 'ಕುಸುಮಿತ ಲತಾವೇಲ್ಲಿತಾ' ಎಂದು ಕರೆದಿರುವುದನ್ನು ನಾಗವರ್ಮ 'ಕಂದರ್ಪಜಾತ' ಎಂದು ಹೆಸರಿಸಿದ್ದಾನೆ. ಅವಕಾಶ ದೊರೆತಾಗ, ವೃತ್ತದ ಹೆಸರನ್ನು ಪತ್ನಿಯನ್ನು ಕುರಿತು ಸಂಬೋಧನೆಯ ವಿಶೇಷವನ್ನಾಗಿ ಬಳಸಿಕೊಳ್ಳುವುದೂ ಉಂಟು:

ಲಲಿತಹರಿಣೀ ನೇತ್ರೇ ಕರ್ಮಾಮೃತಂ ಹರಿಣೀ ಪ್ಲುತಂ
ಮಲ್ಲಿಕಾಲೋಲ ನೀಲ ಸಹಸ್ರ ಕುಂತಳೆ ಸಂದುದಿಂತಿದು ಮಲ್ಲಿಕಾಮಾಲೆಯೆಂಬುದ
ನಿಶ್ಚಯಂ ಕವಿರಾಜಹಂಸ ವಿನಿರ್ಮಿತಂ
ನಾಗವರ್ಮ ವಿನಿರ್ಮಿತಂ ತರಳಲೋಚನೆ ನಾಮದಿಂ ತರಳಂ ಕವೀಂದ್ರಜನಸ್ತುತ
ಸ್ರಗ್ ಧಾಮಪ್ರೋದ್ಧಾಮ ಕೇಶಾನ್ವಿತೆ ಬಗೆ ಪೆಸರಿಂ ಸ್ರಗ್ಧರಾನಾಮವೃತ್ತಂ

ಈ ಅಧಿಕಾರದಲ್ಲಿ ಹೇಳಿರುವ ೧೯ ಅಕ್ಷರಗಳ 'ಅತಿಧೃತಿ' ಎಂಬ ಛಂದಸ್ಸಿನ ಶಾರ್ದೂಲ ವಿಕ್ರೀಡಿತ, ೨೦ ಅಕ್ಷರಗಳ 'ಕೃತಿ' ಯೆಂಬ ಛಂದಸ್ಸಿನ ಮತ್ತೆ.... ವಿಕ್ರೀಡಿತ, ಹಾಗೂ ಉತ್ಪಲ ಮಾಲೆ, ೨೧ ಅಕ್ಷರಗಳ 'ಪ್ರಕೃತಿ' ಛಂದಸ್ಸಿನ.... ಚಂಪಕಮಾಲೆ ಮತ್ತು ಸ್ರಗ್ಧರೆ, ೨೨ ಅಕ್ಷರಗಳ 'ಆಕೃತಿ' ಛಂದಸ್ಸಿನ ಮಹಾಸ್ರಗ್ಧರೆ – ಇವು 'ಖ್ಯಾತ ಕರ್ಣಾಟಕ'ಗಳು ಎಂದರೆ ಪ್ರಸಿದ್ಧವಾಗಿವೆ. ಸುಮಾರು ...... ೧೩ನೆಯ ಶತಮಾನಗಳವರೆಗಿನ ಕನ್ನಡ ಚಂಪೂ ಕಾವ್ಯಗಳಲ್ಲಿ ಕಂದಗಳನ್ನು

ಕೂಡ ಇದನ್ನು ಬಳಸುತ್ತ ಬಂದಿದ್ದಾರೆ. ಜಯಕೀರ್ತಿ 'ಸ್ಕಂಧ' ಎಂಬ ಹೆಸರಿನಿಂದ ಲಕ್ಷಣ ಹೇಳಿದ್ದಾನೆ.

**ಐದನೆಯ ಅಧಿಕಾರವು,** 'ಕರ್ಣಾಟ ವಿಷಯ ಜಾತಿ ವೃತ್ತ ಪ್ರಕರಣ ವಿವರಣೆಗೆ ಮೀಸಲಾಗಿದೆ. ಇದು ಅಚ್ಚಗನ್ನಡ ಛಂದಸ್ಸು. ತೆಲುಗು, ತಮಿಳುಗಳಲ್ಲೂ ಇದು ಬಳಕೆಯಲ್ಲಿರುವುದರಿಂದ 'ದ್ರಾವಿಡ ಛಂದಸ್ಸು' ಎಂಬ ಸಾಮಾನ್ಯ ನಾಮದಿಂದ ಕರೆಯಬಹುದು. ಇದರ ಗಣಗಳ ಸ್ವರೂಪವನ್ನು ನಾಗವರ್ಮ ಹೀಗೆ ವಿವರಿಸಿದ್ದಾನೆ;

ಎರಡುಂ ಮೂರುಂ ನಾಲ್ಕುಂ
ಗುರುವಿಂ ಪ್ರಸ್ತರಿಲ್ ಅಂಬುನಿಧಿ, ಗಜ, ಧರಣೀ
ಶ್ವರ ಗಣಂ ಬಗೆಗಂ; ಅವರ್ಕಂ
ಸರಸಿಜಭವ ವಿಷ್ಣು ರುದ್ರ ಸಂಜ್ಞೆಗಳಕ್ಕುಂ

[ಎರಡು (– –), ಮೂರು (– – –), ನಾಲ್ಕು (– – – –)ಗುರುಗಳನ್ನಿಟ್ಟುಕೊಂಡು ಪ್ರಸ್ತಾರ ಮಾಡಿದರೆ ಕ್ರಮವಾಗಿ ೪, ೮, ೧೬ ಗಣ ಪ್ರಕಾರಗಳು ಹುಟ್ಟುವುವು. ಅವಕ್ಕೆ ಬ್ರಹ್ಮ, ವಿಷ್ಣು, ರುದ್ರ ಎಂಬ ಸಂಕೇತ ನಾಮಗಳು ಆಗುವುವು. (ಪ್ರಸ್ತಾರದಲ್ಲಿ ಪ್ರತಿ ಗಣದ ಮೊದಲು ಒಂದು ಗುರುವಿನ ಸ್ಥಾನದಲ್ಲಿ ಎರಡು ಲಘುಗಳು ಬರಬಹುದು. ಅಲ್ಲಿಂದ ಮುಂದೆ ಒಂದು ಗುರುವಿನ ಸ್ಥಾನದಲ್ಲಿ ಒಂದು ಲಘು ಮಾತ್ರ ಬರತಕ್ಕದ್ದು. ಈ ಹೆಚ್ಚಿನ ವಿವರಣೆಯನ್ನು ನಾಗವರ್ಮ ಜಯಕೀರ್ತಿಗಳಿಬ್ಬರೂ ಕೊಟ್ಟಿದ್ದಾರೆ.)]

ಜಯಕೀರ್ತಿ ಗಣಗಳಿಗೆ ಬೇರೆಯ ಸಂಕೇತನಾಮಗಳನ್ನು ಕೊಟ್ಟಿದ್ದಾನೆ. ತೆಲುಗು, ತಮಿಳುಗಳಲ್ಲಿಯೂ ಬೇರೆಯ ಹೆಸರುಗಳು. ಅವುಗಳನ್ನು ಈ ಕೆಳಗೆ ಪಟ್ಟಿ ಮಾಡಿದೆ:

| ಗಣ | ನಾಗವರ್ಮ | ಜಯಕೀರ್ತಿ | ತೆಲುಗು ತಮಿಳು |
|---|---|---|---|
| – – | (೨)ಬ್ರಹ್ಮ ರತಿ(ರ) | ಸೂರ್ಯ | ಈರಶೈಶೀರ್ (ಉರಿಚ್ಚೀರ್) |
| – – – | (೩)ವಿಷ್ಣು ಮದನ(ಲ) | ಇಂದ್ರ | ಮೂವಶೈಶೀರ್ (ವೆಣ್ಚೀರ್) |
| – – – – | (೪)ರುದ್ರ ಶರ(ಧ) | ಚಂದ್ರ | ನಾಲಶೈಶೀರ್ (ಪೋದುಂಚೀರ್) |

ರಗಳೆ ಛಂದಸ್ಸು ಹರಿಹರನ ರಗಳೆಯಿಂದಾಗಿ ಕನ್ನಡದಲ್ಲಿ ಪ್ರಸಿದ್ಧವಾಗಿದೆ...... ಪಂಪನೇ ಮೊದಲಾದ ಕವಿಗಳು ಚಂಪೂ ಕಾವ್ಯಗಳಲ್ಲಿ ಅಲ್ಲಲ್ಲಿ ರಗಳೆಗಳನ್ನು ರಚಿಸಿದ್ದಾರೆ. ಇದು ಅಕ್ಷರಗಳ ಗಣ ನಿಯಮದ ಛಂದಸ್ಸಲ್ಲ. ಮಾತ್ರಾಗಣಗಳ ಛಂದಸ್ಸು. 'ರಗಳೆಯ ಲಕ್ಷಣಮಂ ಕಂದಪದ್ಯದಿಂ ಪೇಳ್ವೆಂ' ಎಂದು ನಾಗವರ್ಮನು .... ಅಧ್ಯಾಯದಲ್ಲಿ ಸೇರಿಸಿರುವುದೂ, ಜಯಕೀರ್ತಿ ಛಂದೋನುಶಾಸನದ......... ದಲ ಅಧಿಕಾರದಲ್ಲಿ ರಗಳೆಯ ಲಕ್ಷಣವನ್ನು ಹೇಳಿರುವುದೂ ವಿಚಾರ ಮಾಡತಕ್ಕ ವಿಷಯ. ಈ ಸಂಬಂಧದ ಚರ್ಚೆ ಇಲ್ಲಿ ಅಪ್ರಸಕ್ತ.

(ಸಂಪಾದಕರಲ್ಲಿ ವಿನಂತಿ: ಮೂಲ ಜೆರಾಕ್ಷ ಪ್ರತಿಯ ಪುಟ ೧೩೨ ಮತ್ತು ೧೩೩ ರ ಜೆರಾಕ್ಷ ಸರಿಯಾಗಿ ಮೂಡಿ ಬಂದಿಲ್ಲ. ಕೆಲವು ಅಕ್ಷರ/ಶಬ್ದಗಳು ಬಂದಿರುವುದಿಲ್ಲ. ಆದ್ದರಿಂದ ಮೂಲ ಪ್ರತಿಯನ್ನು ಅವಲೋಕಿಸಿ ತಿದ್ದುವುದು ಸಮಂಜಸವೆನಿಸುತ್ತದೆ. ಅಲ್ಲಲ್ಲಿ ಅಕ್ಷರ ದೋಷಗಳು ಇದ್ದು ಅವುಗಳನ್ನು ತಿದ್ದಿದೆ ಮತ್ತು ಅದರಂತೆ ಮೂಲ ಪ್ರತಿಯಲ್ಲಿಯೂ ಪೆನ್ಸಿಲಿನಿಂದ ಗುರುತು ಮಾಡಿದ್ದನ್ನು ಗಮನಿಸಬಹುದು. ತಿದ್ದಿದ್ದು ಸರಿ ಇಲ್ಲವೆಂದು ಕಂಡು ಬಂದರೆ ಮೂಲದ ಅಕ್ಷರವನ್ನೇ ಇಡಬಹುದು ಎಂಬ ಉದ್ದೇಶದಿಂದ ಹೀಗೆ ಮಾಡಿದೆ.)

**ನಾಲ್ಕನೆಯ ಅಧಿಕಾರದಲ್ಲಿ,** ಕಂದ, ಆರ್ಯೆ, ಗೀತಿಕೆ, ಸಂಕೀರ್ಣ, ದುವಯಿ (=ದ್ವಿಪದಿ) ಎಂಬ, ಮಾತ್ರೆಗಳಿಂದ ಆಗುವ ಪದ್ಯ ಜಾತಿಗಳನ್ನು ಕಂದಪದ್ಯದಲ್ಲಿ ವಿವರಿಸಿದ್ದಾನೆ. (ಇಲ್ಲಿ ಹೆಸರಿಸಿರುವ ಗೀತಿಕೆ ಅಚ್ಚಗನ್ನಡ ಛಂದಸ್ಸಿನ ಗೀತಕೆ ಅಲ್ಲ), ಸಂಸ್ಕೃತದ 'ಸ್ಕಂದಕ' ಎಂಬ ಮಾತ್ರಾ ವೃತ್ತವು ಪ್ರಾಕೃತದಲ್ಲಿ 'ಖಂದಾ' ಎಂಬ ಹೆಸರಿನಿಂದ ಬಳಕೆಗೆ ಬಂದು, ಆ ಮೂಲಕ 'ಕಂದ'ವಾಗಿ, ಕನ್ನಡದಲ್ಲಿಯೇ ಹುಟ್ಟಿ ಬೆಳೆಯಿತೇನೋ ಎನ್ನುವಷ್ಟರ ಮಟ್ಟಿಗೆ ಕನ್ನಡಕ್ಕೆ ಒಗ್ಗಿ ಬಂತು; ಕವಿಗಳಿಗೆ ಅತ್ಯಂತ ಪ್ರಿಯವಾಯಿತು. ಚಂಪೂ ಕಾವ್ಯಗಳಲ್ಲಿಯೂ ಅನೇಕ ನೀತಿ ಕಾವ್ಯಗಳಲ್ಲಿಯೂ ಶಾಸ್ತ್ರ ಗ್ರಂಥಗಳಲ್ಲಿಯೂ ಇದು ವಿಶೇಷವಾಗಿ ಬಳಕೆಯಾಗಿದೆ. ಸಂಸ್ಕೃತದಲ್ಲಿ ಶ್ಲೋಕ ಹೇಗೋ ಕನ್ನಡಕ್ಕೆ ಕಂದ ಹಾಗೆ. ಜನ್ನನ ಯಶೋಧರ ಚರಿತ್ರೆ ಪೂರ್ತಿಯಾಗಿ ಕಂದದಲ್ಲಿರುವುದನ್ನು ಇಲ್ಲಿ ಸ್ಮರಿಸಬಹುದು. ವೃತ್ತಿ ನಾಟಕ ಸಂಘಗಳು ಆಡುತ್ತಿದ್ದ ನಾಟಕಗಳಲ್ಲಿ ಕಂದಗಳ ಹಾಡಿಕೆ ವಿಶೇಷ ಸಂಗತಿ ಎನ್ನಿಸಿ, ತುಂಬಾ ಜನಪ್ರಿಯವಾಗಿತ್ತು. ಡಿ.ವಿ.ಜಿ. ಮುಂತಾದ ಆಧುನಿಕ ಕವಿಗಳು

ಏಳೆಯ ಉದಾಹರಣೆಗಳು ಜನಪದ ಸಾಹಿತ್ಯದಲ್ಲಿ ದೊರೆಯುತ್ತವೆ; ಶಾಸನಗಳಲ್ಲಾಗಲಿ ಹಿಂದಿನ ಕವಿಗಳ ಬರೆವಣಿಗೆಯಲ್ಲಿಯಾಗಲಿ ದೊರೆಯುವುದಿಲ್ಲ. ಬಿ.ಎಂ.ಶ್ರೀ.ಯವರೂ ಎಸ್.ವಿ.ಪರಮೇಶ್ವರಭಟ್ಟರೂ ಏಳೆಯನ್ನು ಬಳಕೆಗೆ ತಂದಿದ್ದಾರೆ. ತ್ರಿಪದಿ ಶಾಸನಗಳಲ್ಲೂ ಚಂಪೂಕಾವ್ಯಗಳಲ್ಲೂ ಬಳಕೆಯಾಗಿದೆ. ಜನಪದ ಸಾಹಿತ್ಯದ ಬಹುಭಾಗ ತ್ರಿಪದಿ ಛಂದಸ್ಸಿನಲ್ಲಿದೆ. ಕವಿಗಳು ತ್ರಿಪದಿಯಲ್ಲಿ ಕೆಲವು ಕೃತಿಗಳನ್ನೂ ರಚಿಸಿದ್ದಾರೆ. ಸರ್ವಜ್ಞನ ತ್ರಿಪದಿಗಳು ಪ್ರಸಿದ್ಧವಾಗಿವೆ. ಈಚೆಗೆ ಜಯದೇವಿತಾಯಿ ಲಿಗಾಡೆಯವರು "ಸಿದ್ಧರಾಮ ಚರಿತ್ರೆ'ಯನ್ನು ತ್ರಿಪದಿಯಲ್ಲಿ ರಚಿಸಿರುವುದನ್ನು ಇಲ್ಲಿ ನೆನೆಯಬಹುದು. ಕವಿರಾಜವಾರ್ಗದಲ್ಲೂ ಕಾವ್ಯಾವಲೋಕನದಲ್ಲೂ ಗೀತಿಕೆಗಳು ದೊರೆಯುತ್ತವೆ. ಇವುಗಳಲ್ಲಿ ಯಾವುದೂ ನಾಗವರ್ಮನು ಹೇಳುವ ಲಕ್ಷಣಕ್ಕೆ ಹೊಂದಿಕೆಯಾಗುವುದಿಲ್ಲ. ಕುಮಾರರಾಮನ ಸಾಂಗತ್ಯ, ಭರತೇಶವೈಭವ, ಹದಿಬದೆಯ ಧರ್ಮ ಮುಂತಾದ ಕೃತಿಗಳಿಂದ ಕನ್ನಡದಲ್ಲಿ ಪ್ರಸಿದ್ಧವಾಗಿರುವ ಸಾಂಗತ್ಯದ ಲಕ್ಷಣವನ್ನು ಕುರಿತು ನಾಗವರ್ಮನಾಗಲಿ ಜಯಕೀರ್ತಿಯಾಗಲಿ ಏನೂ ಹೇಳಿಲ್ಲ. ಇದರಿಂದ, ಗೀತಿಕೆಯೇ ಸಾಂಗತ್ಯವಾಗಿ ಮಾರ್ಪಟ್ಟಿತೇನೋ ಎಂದು ಊಹಿಸಲು ಅವಕಾಶವಾಗಿದೆ. ಎರಡರಲ್ಲೂ ಅಂಶಗಣಗಳೇ ಬಳಕೆಯಾಗುತ್ತವೆ. ನಾಗವರ್ಮನು ಹೇಳುವ ಷಟ್ಪದಿಯೂ ರೂಢಿಯಲ್ಲಿದ್ದಿತೆಂದು ಹೇಳಬಹುದು. ಈಚೆಗೆ ಪ್ರಸಿದ್ಧವಾದ ಮಾತ್ರಾಗಣಗಳ ಆರು ಬಗೆಯ ಷಟ್ಪದಿಗಳು ಅವನ ಕಾಲದಲ್ಲಿ ಇರಲಿಲ್ಲ.

ನಾಗವರ್ಮ ಜಯಕೀರ್ತಿಗಳು ವಿವರಿಸಿರುವ ಕನ್ನಡ ಛಂದಸ್ಸಿನ ಪ್ರಕರಣಗಳು ಕನ್ನಡ ಛಂದಸ್ಸಿನ ಚರಿತ್ರೆಯ ದೃಷ್ಟಿಯಿಂದ ಬಹಳ ಮುಖ್ಯವಾದವು; ಬೆಲೆಯುಳ್ಳವು.

**ಆರನೆಯ ಅಧಿಕಾರದಲ್ಲಿ,** ಆರು ಬಗೆಯ 'ಪ್ರತ್ಯಯ'ಗಳನ್ನು ವಿವರಿಸಿದೆ. ಇವು ಅಕ್ಷರ ವೃತ್ತಗಳಿಗೆ ಮಾತ್ರ ಅನ್ವಯಿಸುವ, ಛಂದಸ್ಸಿನ ಸ್ವರೂಪಗಳನ್ನು ಕಂಡುಹಿಡಿಯುವ ವಿಧಾನಗಳು. ಮೊದಲನೆಯದು (೨ ಅಕ್ಷರದಿಂದ ೨೬ ಅಕ್ಷರಗಳ ವರೆಗಿನ ಛಂದಸ್ಸುಗಳ) ಯಾವುದಾದರೂ ಛಂದಸ್ಸಿನ ವೃತ್ತದ ಗುರು ಲಘುಗಳ 'ಪ್ರಸ್ತಾರ' ಕ್ರಮವನ್ನು ಗುರುತಿಸುವ ವಿಧಾನವನ್ನು ತಿಳಿಸುತ್ತದೆ. ಎರಡನೆಯ ವಿಧಾನದಿಂದ, ಯಾವುದಾದರೂ ಒಂದು ವೃತ್ತದ ಗುರು ಲಘುಗಳ ಇಡುವಿಕೆಯಲ್ಲಿ ಕ್ರಮ ತಪ್ಪಿ ಲೆಕ್ಕಾಚಾರ ಕೆಟ್ಟಿದ್ದರೆ ಅದನ್ನು ಸರಿಪಡಿಸಿ ತಿಳಿಯುವ ಕ್ರಮವನ್ನು ವಿವರಿಸುತ್ತದೆ. ಇದಕ್ಕೆ 'ನಷ್ಟ' ಪ್ರತ್ಯಯ ಎಂದು ಹೆಸರು. ಮೂರನೆಯದು 'ಉದ್ದಿಷ್ಟ': ಒಂದು ಗೊತ್ತಾದ ವೃತ್ತವು ಆ ಛಂದಸ್ಸಿನಲ್ಲಿ ಎಷ್ಟನೆಯದು ಎಂದು

ಈ ಗಣಗಳನ್ನು ದೇವಗಣಗಳೆಂದೂ ಕರೆಯುವ ರೂಢಿಯಿದೆ. ತಮಿಳಿನಲ್ಲಿ ಗಣದ ಗುರುವಿನ ಸಂಖ್ಯೆಯಿಂದಲೇ (ಇರ್+ಅಶೈ, ಮೂ+ಅಶೈ, ನಾಲ್+ಅಶೈ) ಗಣವನ್ನು ಹೆಸರಿಸಿದೆ. ಬಹುಶಃ ತಮಿಳಿನ 'ಅಶಯ್'ನಿಂದ ಸೂಚನೆ ಪಡೆದು, ಬಿ.ಎಂ.ಶ್ರೀ. ಅವರು ಮೊತ್ತ ಮೊದಲಿಗೆ ಈ ಗಣಗಳನ್ನು 'ಅಂಶಗಣ' ಎಂದು ಕರೆದರು (ಅಶೈ=ಅಂಶ; ಶೀರ್=ಗಣ). ಈ ಛಂದಸ್ಸಿನ ಧಾಟಿಯನ್ನು 'ಅಂಶಲಯ' ಎಂದು ಕರೆಯುವುದು ಈಗ ರೂಢಿಗೆ ಬಂದಿದೆ.

ಗಣಸ್ವರೂಪ ನಿರೂಪಣೆಯಾದ ಮೇಲೆ, ನಾಗವರ್ಮ ಅಕ್ಕರ ವೃತ್ತದಲ್ಲಿ ಪರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿರಿಯಕ್ಕರ ಎಂದು ೫ ಬಗೆಯ ಲಕ್ಷಣಗಳನ್ನು ವಿವರಿಸಿ, ಬಳಿಕ ತ್ರಿಪದಿ, ಚಿತ್ರ, ಚಿತ್ರಲತೆ, ಏಳೆ, ಚೌಪದಿ, ಛಂದೋವತಂಸ, ಅಕ್ಕರಿಕೆ, ಮದನವತಿ, ಗೀತಿಕೆ, ಉತ್ಸಾಹ (ಲಯಗ್ರಾಹಿ) ಉತ್ಸಾಹ ದಂಡಕ, ಷಟ್ಪದಿ – ಇವುಗಳ ಲಕ್ಷಣಗಳನ್ನು ಹೇಳಿದ್ದಾನೆ.

ಅಕ್ಕರದ ೫ ಬಗೆಗಳನ್ನು ಜಯಕೀರ್ತಿ ಕಿರಿಯಕ್ಕರದಿಂದ ಮೊದಲು ಮಾಡಿ ಅಲ್ಪಾಕ್ಷರ, ಅಂತರಾಕ್ಷರ, ಮಧ್ಯಮಾಕ್ಷರ, ಸಮಾನಾಕ್ಷರ, ಮಹಾಕ್ಷರ ಎಂದು ಹೆಸರಿಸಿದ್ದಾನೆ. ನಾಗವರ್ಮ ಹೇಳುವ ಚಿತ್ರ, ಚಿತ್ರಲತೆಗಳೂ ತ್ರಿಪದಿಗಳೇ. ಹೀಗಿರುವುದನ್ನು ಗುರುತಿಸಿಯೇ ಜಯಕೀರ್ತಿ ತ್ರಿಪದಿಯಲ್ಲಿ ಮೂರು ಬಗೆಗಳೆಂದು ತಿಳಿಸಿ, ಅವುಗಳನ್ನು ಚಿತ್ರಾ, ವಿಚಿತ್ರಾ, ಏಲಾ ಎಂದು ಹೆಸರಿಸಿದ್ದಾನೆ. ಜಯಕೀರ್ತಿ, ತ್ರಿಪದಿ (ಕಾ) ಎಂದು ಹೆಸರಿಸಿದ್ದರೂ ಅವನ ಪ್ರಕಾರ ತ್ರಿಪದಿಗೆ ನಾಲ್ಕು ಪಾದಗಳು. ತ್ರಿಪದಿಯ ಕಡೆಯ (ತೃತೀಯ) ಪಾದವನ್ನು ಬಿಟ್ಟರೆ ಏಲಾ ಆಗುತ್ತದೆ ಎಂದು ಅವನ ಏಲಾಲಕ್ಷಣ ವಿವರಣೆ. ಇವರಿಬ್ಬರ ಅಭಿಪ್ರಾಯ ಪರಸ್ಪರ ವಿರುದ್ಧವಾಗಿರುವಂತೆ ಕಾಣುತ್ತದೆ. ತ್ರಿಪದಿಯನ್ನು ಹಾಡುವ ಕ್ರಮದಲ್ಲಿಯೇನೋ ನಾಲ್ಕು ಪಾದಗಳ ವಿಂಗಡಣೆಯುಂಟು. ಆದರೆ, ತ್ರಿಪದಿಯ 'ಸಾಹಿತ್ಯ'ದಲ್ಲಿ ಮೂರೇ ಪಾದಗಳು. ಆದ್ದರಿಂದ, ಈ ಛಂದಸ್ಸನ್ನು ತ್ರಿಪದಿ ಎಂದೇ ಕರೆಯುವುದು ಸರಿ, ಏಳಗೆ ಎರಡೇ ಪಾದಗಳು. "ತ್ರಿಪದಿಯ ರಚನೆಯನ್ನು ನೋಡಿದರೆ ಇದು ಮೊದಲು ಎರಡು ಸಾಲಿನ ಹಾಡಾಗಿದ್ದು, ಮೂರು ಸಾಲಾಯಿತೆಂದು ಊಹಿಸಬಹುದಾಗಿದೆ" ಎಂದು ಬಿ.ಎಂ.ಶ್ರೀ ಅಭಿಪ್ರಾಯ ಪಟ್ಟಿದ್ದಾರೆ. (ಕ.ಕೈಪಿಡಿ, ಪು.೧೫೦). ಎರಡು ಸಾಲಿನ ಏಲೆ ತಮಿಳಿನ ಕುರಳ್ ಮತ್ತು ವೆಣ್ಬಾ ವೃತ್ತಗಳನ್ನು ಹೋಲುತ್ತದೆ. "ತ್ರಿಪದಿ ಕನ್ನಡ ಛಂದೋಗಂಗೆಯ ಗಂಗೋತ್ರಿ" ಎಂಬ ಡಿ.ಎಸ್.ಕರ್ಕಿಯವರ ಅಭಿಪ್ರಾಯವನ್ನು ಮಾರ್ಪಡಿಸಬೇಕೆಂದು ಕಾಣುತ್ತದೆ. ಏಳೆಯನ್ನೇ ನಾವು ಕನ್ನಡ ಛಂದಸ್ಸಿನ ತಾಯಿಬೇರು ಎಂದು ಭಾವಿಸಬಹುದು.

ಮೀಸಲಾಗಿರುತ್ತದೆ.

**ಕವಿಜಿಹ್ವಾಬಂಧನ**: ಕನ್ನಡ ಛಂದಸ್ಸಿನ ಚರಿತ್ರೆಯಲ್ಲಿ ಇದೊಂದು ವಿಲಕ್ಷಣವಾದ ಕೃತಿ. ಇದನ್ನು ಬರೆದವನು 'ಈಶಕವೀಶಂ' ಎಂದು ಗ್ರಂಥದಿಂದ ಗೊತ್ತಾಗುತ್ತದೆ. ಆದರೆ ಈಶ್ವರ ಕವಿ ಎಂದೇ ಪ್ರಸಿದ್ಧ. ಒಂದು ಪದ್ಯದಲ್ಲಿ 'ಶಬ್ದಮಣಿದರ್ಪಣ'ವೆಂಬ ವ್ಯಾಕರಣದ ಕರ್ತೃವಾದ ಕೇಶಿರಾಜನನ್ನು 'ಲಕ್ಷಣ ಶಿಕ್ಷಾಚಾರ್ಯ ಸುಲಕ್ಷಣಿ' ಎಂದು ಹೊಗಳಿರುವುದರಿಂದ, ಅನೇಕ ಕಡೆ ಬರುವ 'ಅಭಿನವ ಕೇಶಿರಾಜ' ಎಂಬ ಮಾತು ಕವಿಯ ಬಿರುದಾಗಿರುವಂತೆ ಕಾಣುತ್ತದೆ. ಕೇಶಿರಾಜನನ್ನು ಸ್ಮರಿಸುವುದರಿಂದ ಇವನ ಕಾಲ ೧೨೫೦ ರಿಂದ ಈಚೆಗೆ ಎಂಬುದು ಸ್ಪಷ್ಟ. ಎಷ್ಟು ಈಚೆಗೆ ಎಂದು ಹೇಳಲು ಆಧಾರಗಳಿಲ್ಲ. ಕವಿಚರಿತೆಕಾರರು ಇವನ ಕಾಲವನ್ನು ೧೫೦೦ ಎಂದು ಊಹಿಸಿದ್ದಾರೆ. ಇದಕ್ಕಿಂತ ಸ್ವಲ್ಪ ಹಿಂದೆ ಇದ್ದರೂ ಇರಬಹುದು. 'ವಡಿ'ಯ ವಿಚಾರವನ್ನು ಹೇಳುವ ಸಂದರ್ಭದಲ್ಲಿ 'ಭೀಮಣ'ನ ಹೆಸರನ್ನು ಹೇಳುವುದರಿಂದ, ಸುಮಾರೂ ೧೨ನೆಯ ಶತಮಾನದ ಮೊದಲ ಭಾಗದಲ್ಲಿ ಇದ್ದ ಭೀಮ ಕವಿಯ 'ಕವಿಜನಾಶ್ರಯಮು' ಎಂಬ ಛಂದಸ್ಸಿನ ಗ್ರಂಥವನ್ನು ಈಶ್ವರನು ನೋಡಿರಬಹುದು. ಮಂಗಳ ಪದ್ಯದಲ್ಲಿ 'ನಿಡುವಣಿಗೊಡೆಯನಾದ ಕಲ್ಲಿನಾಥಲಿಂಗ'ವನ್ನು ಸ್ತುತಿಸಿರುವುದರಿಂದ ಇವನು 'ನಿಡುವಣಿ' ಎಂಬ ಊರಿನವನೆಂದು ಗೊತ್ತಾಗುತ್ತದೆ. ಇದು ಬಿಜಾಪುರದ ಸಮೀಪದಲ್ಲಿದೆ ಎಂದು ತಿಳಿದುಬರುತ್ತದೆ. ಆದರೆ ಇಲ್ಲಿ ಕಲ್ಲಿನಾಥನ ದೇವಾಲಯ ಇದೆಯೋ ಇಲ್ಲವೋ ತಿಳಿಯದು. ಗಣಗಳಿಗೆ ಬ್ರಾಹ್ಮಣ ಮುಂತಾಗಿ ಚತುರ್ವರ್ಣಗಳನ್ನು ಹೇಳಿರುವ ಇವನು ಬಹುಶಃ ಶೈವ ಬ್ರಾಹ್ಮಣನೆಂದು ಕಾಣುತ್ತದೆ.

**ಇನ್ನು ಗ್ರಂಥದ ವಿಚಾರ**: 'ಕವಿಜಿಹ್ವಾಬಂಧನ' (ಕವಿಯ ನಾಲಗೆಕಟ್ಟು) ಎಂಬ ಗ್ರಂಥನಾಮವೇ ಗ್ರಂಥದ ಸ್ವರೂಪವನ್ನು ತೆರೆದು ತೋರಿಸುತ್ತದೆ. ನಾಲ್ಕು ಆಶ್ವಾಸಗಳುಳ್ಳ ಈ ಗ್ರಂಥದ ಬಹುಭಾಗವನ್ನು ಗಣಗಳ ಮತ್ತು ಅಕ್ಷರಗಳ ಸ್ವರೂಪ, ಬೇರೆ ಬೇರೆ ಗಣಗಳನ್ನು ಗೊತ್ತಾದ ರೀತಿಯಲ್ಲಿ ಪ್ರಯೋಗಿಸುವುದರಿಂದ ಉಂಟಾಗುವ ಶುಭಾಶುಭ ಫಲಗಳು – ಇವುಗಳ ವಿವರಣೆ ಆಕ್ರಮಿಸಿಕೊಂಡಿದೆ; ಈ ಭಾಗ ಈಗಿನ ಕಾಲಕ್ಕಂತೂ ಅಪ್ರಯೋಜಕವಾದರೂ, ಕೃತಿಯ ಉದ್ದೇಶದ ದೃಷ್ಟಿಯಿಂದ ಸಮಗ್ರವಾಗಿದೆ. ಕಾವ್ಯ ಮೀಮಾಂಸೆಗೆ ಸಂಬಂಧಪಟ್ಟಂತೆ ಶಬ್ದಾಲಂಕಾರ ಎನ್ನಬಹುದಾದ ಪ್ರಾಸಗಳ ವಿಚಾರವನ್ನು ಉದಾಹರಣ ಪೂರ್ವಕ ವಿವರಿಸಲಾಗಿದೆ. 'ವಡಿ'ಯ ವಿಚಾರ ಈ ಗ್ರಂಥದ ವೈಶಿಷ್ಟ್ಯ. ಕೇಶಿರಾಜನನ್ನು

ಗೊತ್ತು ಮಾಡುವ ವಿಧಾನ. ನಾಲ್ಕನೆಯ ಪ್ರತ್ಯಯವು, ಯಾವುದಾದರೂ ಒಂದು ಛಂದಸ್ಸಿನಲ್ಲಿ ಒಂದು ಲಘು ಅಥವಾ ಒಂದು ಗುರುವಿನ ವೃತ್ತ ಎಷ್ಟು, ಎರಡು ಲಘು ಅಥವಾ ಎರಡು ಗುರುವಿರುವ ವೃತ್ತಗಳೆಷ್ಟು, ಎಂದು ಮುಂತಾಗಿ ವೃತ್ತಗಳ ಲಘು ಗುರು ಸಂಖ್ಯಾವಿವರಗಳನ್ನು ತಿಳಿಯುವ ('ಏಕ ದ್ವಿ ಆದಿ ಲಗಕ್ರಿಯೆ'ಯ) ವಿಧಾನವನ್ನು ವಿವರಿಸುತ್ತದೆ. ಐದನೆಯ 'ಸಂಖ್ಯಾನ' ಪ್ರತ್ಯಯದ ವಿವರ ನಾಗವರ್ಮನ ಪದ್ಯದಲ್ಲಿ ಸ್ಪಷ್ಟವಿಲ್ಲ. ಆರನೆಯ ಪ್ರತ್ಯಯದ ಹೆಸರು 'ಅಧ್ವಯೋಗ' (ಅಧ್ವ ಎಂದರೆ ಮಾರ್ಗ, ದಾರಿ). ಒಂದು ಛಂದಸ್ಸಿನ ಎಲ್ಲ ವೃತ್ತಗಳ ಪ್ರಸ್ತಾರವನ್ನು ಬರೆದಿಡಲು ಎಷ್ಟು ಸ್ಥಳಾವಕಾಶ ಬೇಕಾಗುತ್ತದೆ ಎಂಬುದನ್ನು ಈ ಪ್ರತ್ಯಯದಿಂದ ಕಂಡು ಹಿಡಿಯಲು ಸಾಧ್ಯವಾಗುವುದು.

ಯಾವ ಯಾವ ಗಣಗಳು ಕಾವ್ಯದಲ್ಲಿ ಪ್ರಯೋಗವಾದರೆ ಶುಭ, ಯಾವುವು ಅಶುಭ; ಯಾವ ಯಾವ ಗಣದಿಂದ ಯಾವ ಯಾವ ಫಲಗಳು ದೊರೆಯುವುವು – ಎಂಬುದನ್ನು ತಿಳಿಸುವ ಮೂರು ಪದ್ಯಗಳಿವೆ, ಈ ಅಧಿಕಾರದಲ್ಲಿ. ಉದಾಹರಣೆಗೆ, "ಧರೆಯಿಂ (ಮಗಣ) ಶ್ರೀ (ಸಂಪತ್ತು); ಜಲದಿಂ (ಯಗಣ) ಮಹೋನ್ನತಿ (ಅಭಿವೃದ್ಧಿ); ಜಸಂ (ಕೀರ್ತಿ) ಪದ್ಮಾರಿಯಿಂದೆ (ಭಗಣ); ಆಯು (ಆಯುಷ್ಯ) ದೇವರಿಂ (ನಗಣ); ರುಜೆ (ರೋಗ) ಭಾನುವಿಂ (ಜಗಣ); ಮರಣಂ ಅತ್ಯುಗ್ರಾಗ್ನಿಯಿಂ (ರಗಣ); ಶೂನ್ಯಂ (ಮಾಟ?) ಅಂಬರದಿಂ (ತಗಣ); ವಾಯುವಿನಿಂ (ಸಗಣ) ವಿದೇಶ ಗಮನಂ ಕಾವ್ಯಾಧಿಪಂಗೆ ಅಕ್ಕುಂ ಎಂದೊರೆದಂ ಸತ್ಕವಿ ನಾಗವರ್ಮಂ". 'ಕಾವ್ಯಾಧಿಪ' ಎಂದರೆ ಕವಿ ಯಾವ ಆಶ್ರಯದಾತ ಅಥವಾ ಪೋಷಕನನ್ನು ಉದ್ದೇಶಿಸಿ ಕಾವ್ಯ ಬರೆಯುತ್ತಾನೆಯೋ ಆ ವ್ಯಕ್ತಿ. ಈ ಪದ್ಯಗಳನ್ನು ನಾಗವರ್ಮನೇ ಬರೆದನೋ ಈಚಿನವರು ಬರೆದು ಹಸ್ತಪ್ರತಿಗಳಲ್ಲಿ ಸೇರಿಸಿದರೋ, ಹೇಳುವುದು ಕಷ್ಟ. ಇಂಥ ನಂಬಿಕೆಗಳ ವಿಸ್ತಾರವಾದ ಪ್ರತಿಪಾದನೆ 'ಕವಿ ಜಿಹ್ವಾಬಂಧನ'ದಲ್ಲಿ ಬಂದಿದೆ. ಈ ನಂಬಿಕೆಗಳು ಎಷ್ಟರ ಮಟ್ಟಿಗೆ ಪರಿಣಾಮಕಾರಿ ಎಂಬುದು ಇಲ್ಲಿ ಪ್ರಸಕ್ತವಲ್ಲ. ಇಂಥ ನಂಬಿಕೆಗಳು ನಮ್ಮ ಜನ ಜೀವನದಲ್ಲಿ ಇಂದಿಗೂ ರೂಢಮೂಲವಾಗಿವೆ. ಬಸವಣ್ಣನವರು "ದೇವಗಣವನರಿಯೆ ಅಮೃತಗಣವನರಿಯೆ, ಆತನೊಲಿದಂತೆ ಹಾಡುವೆನು" ಎಂದಿರುವುದೂ ಈ ಮಾತಿಗೆ ಸಾಕ್ಷಿ.

ನಾಗವರ್ಮನ 'ಛಂದೋಂಬುಧಿ'ಯ ಉಪಯುಕ್ತತೆ ಇಂದು ಕಡಿಮೆಯಾಗಿರಬಹುದು; ಆದರೆ ಅದರ ಕೀರ್ತಿ ಮಾಸಿಲ್ಲ, ಮಾಸುವುದೂ ಇಲ್ಲ. ಕನ್ನಡ ಛಂದಸ್ಸಿನ ಚರಿತ್ರೆಯಲ್ಲಿ ಛಂದೋಂಬುಧಿಗೆ ಅಗ್ರಸ್ಥಾನ ಎಂದೆಂದಿಗೂ

ಆ ಕಾಲದ ನಂಬಿಕೆಗಳಿಗೆ ಕನ್ನಡಿ ಹಿಡಿದಿದೆ, ಅಷ್ಟೆ. "ಇಂದು ನಮಗೆ ಅಮೃತಗಣ ವಿಷಗಣಗಳಲ್ಲಿ ನಂಬಿಕೆ ಇಲ್ಲದಿರಬಹುದು; ಹಿಂದಿನ ಕಾಲದಲ್ಲಿ ಇತ್ತು; ಅದನ್ನು ಇವನು ಪ್ರತಿಪಾದಿಸಿದ್ದಾನೆ.[೯]

(iii) ವಡಿಯ ವಿಚಾರ:

ಪದಪದ್ಯದ ಮೊದಲಕ್ಕರ
ವದು ತಪ್ಪದೆ ನಡುವೆ ಯತಿವಿಲಾಸದೊಳಿಡಲುಂ
ವಿದಿತದೆ ವಡಿಯಪ್ಪುದು ಮೃದು
ಪದಯುಗೆ ನಿರ್ಮಲಸುಚಿತ್ತೆ ಪರಹಿತ ಚರಿತೇ
ಇಪ್ಪತ್ತು ತೆರದ ವಡಿ ತಾ
ನಿಪ್ಪವು; ಮತ್ತವರೊಳೈದು ನಿರತದೆ ಬಕ್ಕುಂ
ಒಪ್ಪುವ ಭೀಮಣ ಮುಖ್ಯರ್
ತಪ್ಪದೆ ತರಳಾಕ್ಷಿ ಪೇಳ್ದ ತಾಣಂಗಳೊಳಂ

(ಮೇಲಿನ ಪದ್ಯದಲ್ಲಿ, ಪ–ಪ, ತ–ತಾ, ಇವು ವಡಿಯ ಅಕ್ಷರಗಳು.)

"ವಡಿಯೆಂಬುದು ತೆಲುಗಿಂ ಪೇಳ್ದೆಡೆಗಲ್ಲದೆ ಕನ್ನಡಕ್ಕೆ ಪೇಳಿದುದಿಲ್ಲಂ" ಎಂದು ಕವಿ ಸ್ಪಷ್ಟಪಡಿಸಿದ್ದಾನೆ. ಪುರಂದರ ಕನಕ ಮೊದಲಾದ ದಾಸರ ರಚನೆಗಳಲ್ಲಿಯೂ ಸರ್ವಜ್ಞಪದಗಳಲ್ಲಿಯೂ ಈ 'ವಡಿ'ಯ ಪ್ರಯೋಗವನ್ನು ಕಾಣಬಹುದು.

ಮೊದಲೇ ಹೇಳಿದಂತೆ, ಛಂದಸ್ಸಿಗೆ ಸಂಬಂಧಪಟ್ಟ ವಿಷಯಗಳಲ್ಲದೆ ಬೇರೆಯ ವಿಷಯಗಳೂ ಈ ಕೃತಿಯಲ್ಲಿ ಹೊಕ್ಕಿವೆ. "ಆದ್ದರಿಂದ 'ಕವಿಜಿಹ್ವಾಬಂಧನ'ವೆಂದರೆ ಕವಿಯ ನಾಲಗೆಗೆ ಛಂದಸ್ಸಿನ ಕಟ್ಟು ಒಂದೇ ಅಲ್ಲ, ಲಕ್ಷಣ ಶಾಸ್ತ್ರದೊಳಗೆ ಸೇರುವ ಮಿಕ್ಕೆಲ್ಲ ಶಾಸ್ತ್ರಗಳ ಕಟ್ಟೂ ಎಂದು ತಿಳಿಯಬೇಕು.[೧೦]

**ಛಂದಸ್ಸಾರ**: ಗುಣಚಂದ್ರ ಎಂಬ ಜೈನಕವಿಯಿಂದ ರಚಿತವಾದ ಈ ಕಿರಿಯ ಗ್ರಂಥವು ಅದರ ಹೆಸರೇ ತಿಳಿಸುವಂತೆ ಸಂಸ್ಕೃತ ಮತ್ತು ಕನ್ನಡ ಛಂದಸ್ಸುಗಳ ಮುಖ್ಯ ವಿಚಾರಗಳ ಸಾರವನ್ನು ಒಳಗೊಂಡಿದೆ. ಗ್ರಂಥಾರಂಭದ ಜಿನಸ್ತುತಿಯಿಂದ ಕವಿ ಜೈನನೆಂಬ ಅಂಶ ಹೊರಪಡುತ್ತದೆ. "ಇವನ ವಿಷಯವಾಗಿ ಈ ಗ್ರಂಥದಿಂದ ಇನ್ನಾವ ಅಂಶವೂ ತಿಳಿವುದಿಲ್ಲ. ಕೇದಾರ ಭಟ್ಟನ ವೃತ್ತ ರತ್ನಾಕರವನ್ನು ಬಹಳ ಮಟ್ಟಿಗೆ ಅನುಸರಿಸಿದ್ದಾನೆ. ಇವನು ಸುಮಾರು ೧೬೫೦ರಲ್ಲಿ ಇದ್ದಿರಬಹುದು."

ಮೆಚ್ಚಿಕೊಂಡಿರುವುದರಿಂದಲೋ ಏನೋ, ವ್ಯಾಕರಣ ವಿಷಯಾಂಶಗಳನ್ನು ಪಟ್ಟಿಮಾಡಿ ಹೇಳಿದ್ದಾನೆ. ೪ನೆಯ ಆಶ್ವಾಸ ಪೂರ್ತಿಯಾಗಿ ಛಂದಸ್ಸಿಗೆ ಸಂಬಂಧಪಡದ ಕನ್ನಡಗಳ ಬಗೆಗಳ ವಿಚಾರ, ಅರಿಸಮಾಸ, ಮೋಹಸ್ನೇಹಗಳ ವಿಚಾರ – ಇವುಗಳನ್ನು ಒಳಗೊಂಡಿದೆ.

ಈಶ್ವರಕವಿ ಪದ್ಯಗಳನ್ನು ಪತ್ನಿಗೆ ಹೇಳಿದಂತೆ ರಚಿಸಿರುವುದನ್ನು ನೋಡಿದರೆ ಇವನು ಛಂದೋಂಬುಧಿಯನ್ನು ಪರಿಶೀಲಿಸಿದ್ದಿರಬಹುದು ಎಂದು ತೋರುತ್ತದೆ. ಛಂದೋಂಬುಧಿಯಲ್ಲಿನ ಗಣಗಳ ಶುಭಾಶುಭಫಲ ವಿವೇಚನೆಯ ಪದ್ಯಗಳು ನಾಗವರ್ಮನೇ ಬರೆದುವಾದರೆ, ಈ ಕವಿ ಅವನಿಂದಲೇ ಸ್ಫೂರ್ತಿ ಪಡೆದು ಆ ವಿಚಾರವನ್ನು ತನ್ನದೇ ಆದ ರೀತಿಯಲ್ಲಿ (ಬಹುಶಃ ಯಾವುದಾದರೂ ಸಂಸ್ಕೃತ ಮೂಲ ಗ್ರಂಥವನ್ನು ಅನುಸರಿಸಿ) ವಿಸ್ತಾರವಾಗಿ ಪ್ರತಿಪಾದಿಸಿರಬಹುದು.

ಒಂದೆರಡು ಉದಾಹರಣೆಗಳಿಂದ ಅವನು ನಿರೂಪಿಸಿರುವ ವಿಷಯಗಳ ಸ್ವರೂಪವನ್ನು ಪರಿಚಯ ಮಾಡಿಕೊಳ್ಳಬಹುದು.

(i)ಗಣಗಳಿಗೆ ಲಿಂಗಗಳೂ ಉಂಟು! ನೋಡಿ:

ಸ್ತ್ರೀಲಿಂಗಂ ಮ, ಯ, ಗಣಮುಂ। ಮೇಲಹ ರ,ಸ,ಭ,ಜ, ಗಣಂಗಳವು ಪುಲ್ಲಿಂಗಂ॥
ಬಾಲಕಿ, ನ, ತ, ಗಣವೆರಡು ಮ। ನಾಲೋಕಿಸು ನಿತ್ಯಮವು ನಪುಂಸಕಲಿಂಗಂ॥

(ii) ಕವಿಗಳು ಗಣಗಳ ಫಲ ಸ್ವರೂಪವನ್ನು ತಿಳಿದು ಸಂದರ್ಭಾನುಸಾರ ಹೇಗೆ ಪ್ರಯೋಗ ಮಾಡಬೇಕೆಂಬುವ ವಿಚಾರದಲ್ಲಿ ಒಂದು ಉದಾಹರಣೆ:

ಮಗಣವ ಮೊದಲಿಟ್ಟಗ್ರದೆ।ರಗಣಮನಿಡೆ ನಾಶಮಕ್ಕು ಕೃತಿಕರ್ತಂಗಂ॥
ತಗಣಮನಿಟ್ಟಡೆ ತತ್‌ಪತಿ ಪಗೆವರ್ಗಂ ಸೋಲ್ತು ಮಾನಭಂಗದೊಳಿರ್ಕುಂ॥

ಈಶ್ವರ ಕವಿಯ ಪ್ರಕಾರ, ಗಣಪ್ರಯೋಗದ ಫಲ–ಒಳ್ಳೆಯದು ಮತ್ತು ಕೆಟ್ಟದ್ದು– ಕವಿಗೂ ಉಂಟು; ಕೃತಿಗೆ ಒಡೆಯನಾದ ಆಶ್ರಯದಾತ ರಾಜನಿಗೂ ಉಂಟು. ರಾಜನ ಭವಿಷ್ಯ ಕವಿಯ ಕಯ್ಯಲ್ಲಿದೆ ಎಂದಾಯಿತು! ರಾಜನ ಖಡ್ಗಕ್ಕಿಂತ ಕವಿಯ 'ಕಂಠ' ಪ್ರಬಲ! ಕವಿ ಅಶುಭ ಗಣಪ್ರಯೋಗದ ಬೆದರಿಕೆ ಹಾಕಿ ರಾಜನಿಂದ ಮಾನಸನ್ಮಾನಗಳನ್ನು ಸುಲಿಗೆ ಮಾಡಿಕೊಳ್ಳುವ ಅವಕಾಶ ಕಲ್ಪಿಸಿಕೊಳ್ಳಲು ಲಾಕ್ಷಣಿಕರು ಈ ವಿಧಿ–ನಿಷೇಧಗಳ ಹೂಟ ಹೂಡಿದಂತೆ ಕಾಣುತ್ತದೆ. ಈಶ್ವರ ಕವಿಯ ಕೃತಿ

ವಿಧುಪುರಭೇದ ಚಚಂಪಕದ ಮಾಲೆಯಿದುಂ ನ–ಜ–ಭಂ–ಜ–ಜಂ–ಜರಂ

ಸ–ತ–ತಂ–ನಂ–ಸಂ–ರ–ರಂ–ಗಂ ತ್ರಿಶರಯತಿ ಮಹಾಸ್ರಗ್ಧರಾನಾಮವೃತ್ತಂ

(೪)'ಸಂಕೀರ್ಣ' ಪ್ರಕರಣ ಎಂಬ ನಾಲ್ಕನೆಯ ಅಧ್ಯಾಯದಲ್ಲಿ ದಂಡಕ, ಪ್ರಚಿತಕ, ಆರ್ಯಾಪ್ರಭೇದಗಳು, ಉದ್ಗೀತ, ಆರ್ಯಾಗೀತಿ, ವೈತಾಳೀಯದ ಪ್ರಭೇದಗಳು, ಮಾತ್ರಾಸಮಕ, ಅರ್ಧಸಮ – ವಿಷಮ ವೃತ್ತ ಪ್ರಭೇದಗಳು, ಗಾಥಾ ಈ ವಿವಿಧ ಜಾತಿಯ ಛಂದಸ್ಸುಗಳ ಲಕ್ಷಣವನ್ನು ನಿರೂಪಿಸಿದೆ. ಛಂದೋಂಬುಧಿಯಲ್ಲಿ ವಿವರಿಸಿರುವ ಷಟ್ಪ್ರತ್ಯಯ ವಿಧಾನಗಳನ್ನೂ ಒಂದೊಂದು ಕಂದ ಪದ್ಯದಲ್ಲಿ ನಿರೂಪಿಸಿದೆ.

(೫)'ತಾಳ ವೃತ್ತಾದಿಪ್ರಕರಣ'ವೆಂಬ ಅಯ್ದನೆಯ ಅಧ್ಯಾಯವು ಈ ಗ್ರಂಥದ ವೈಶಿಷ್ಟ್ಯ. ಇದರಲ್ಲಿ, ಧ್ರುವ, ಮಟ್ಟ, ತ್ರಿವುಡೆ, ರೂಪಕ, ಅಷ್ಟ, ಜಂಪೆ, ಏಕ – ಈ ಸಪ್ತತಾಳಗಳಿಗೆ ಒಳಪಟ್ಟು ಪದ್ಯಗಳನ್ನು ರಚಿಸುವ ಕ್ರಮವನ್ನು ವಿವರಿಸಿದೆ. ಉದಾಹರಣೆಗೆ, ರೂಪಕ ತಾಳದ ಪದ್ಯ:

ಯುಗ ರಸಯತಿ
ಸೊಗಯಿಸಿ ಬರೆ
ಬಗೆ ರೂಪಕ
ಮೊಗೆಯಿಸುಗುಂ.

ಎರಡು (ಯುಗ) ಆರು (ರಸ) ಸ್ಥಾನಗಳಲ್ಲಿ ಯತಿ. ಸಂಗೀತ ಕೃತಿಗಳೂ, ದಾಸರ ಪದಗಳೂ ತಾಳನಿಬದ್ಧವಾಗಿರುತ್ತವೆ. ಅವುಗಳಲ್ಲಿ ಪಲ್ಲವಿ, ಅನುಪಲ್ಲವಿ, ಚರಣ – ಎಂಬ ಅಂಗಗಳುಂಟು. ಷಟ್ಪದಿ, ರಗಳೆ ಮುಂತಾದ ಮಾತ್ರಾ ಛಂದಸ್ಸಿನ ಪದ್ಯಗಳಲ್ಲೂ ತಾಳಗಳ ಗುರುತು ಹತ್ತುತ್ತದೆ. ಗುಣಚಂದ್ರನು ಕೊಟ್ಟಿರುವ ತಾಳನಿಬದ್ಧ ಚತುಷ್ಪದಿಯ ಉದಾಹರಣೆಗಳನ್ನು ಹೋಲುವ ಪದ್ಯಗಳು ಸಾಧಾರಣವಾಗಿ ಕನ್ನಡ ಕಾವ್ಯಗಳಲ್ಲಿ ಸಿಕ್ಕುವುದಿಲ್ಲ. ಇದೇ ಅಧ್ಯಾಯದಲ್ಲಿ, ದ್ವಿಪದಿ, ಮಂದಾನಿಲ – ಲಲಿತ–ಉತ್ಸಾಹ ರಗಳೆಗಳು, ಲಾವಳಿ(ಣಿ) ಇವುಗಳ ಲಕ್ಷಣವನ್ನೂ ವಿವರಿಸಿದೆ.

**ನಂದಿ ಛಂದೋರ್ಣವ**: ಈ ಗ್ರಂಥ (೧೯೦೯ ರಲ್ಲಿ) ಮೊದಲು ಪ್ರಕಟವಾದಾಗ ಅದರ ಸಂಪಾದಕರಾದ ಎಂ.ಎ. ರಾಮಾನುಜಯ್ಯಂಗಾರ್ಯರು "ಈ ಗ್ರಂಥವನ್ನು ಬರೆದವನು ಯಾವನೋ ಗೊತ್ತಿಲ್ಲ. ಗ್ರಂಥಕ್ಕೆ ಹೆಸರು ನಂದಿ ಛಂದಸ್ಸು

ಇಷ್ಟೆ ಇವನ ವಿಚಾರವಾಗಿ ಕವಿ ಚರಿತೆಕಾರರು ಹೇಳಿರುವುದು. (ಕವಿಚರಿತೆ, II, ಪು. ೩೭೨).

ಗ್ರಂಥದಲ್ಲಿ ಐದು ಅಧ್ಯಾಯಗಳಿವೆ.

(೧) 'ಸಂಜ್ಞಾ' ಪ್ರಕರಣ: ಇದರಲ್ಲಿ ಗುರು ಲಘು, ಅಕ್ಷರಗಣ, ಯತಿ, ಇವುಗಳ ಲಕ್ಷಣಗಳನ್ನು ಅತ್ಯಂತ ಸಂಕ್ಷೇಪವಾಗಿ ತಿಳಿಸಿದೆ. ಗಣಗಳ ಶುಭಾಶುಭ ಫಲಗಳನ್ನೂ ಸೂಚಿಸಿದೆ.

(೨)ಇದು 'ಮಾತ್ರಾವೃತ್ತ' ಪ್ರಕರಣ: ಇದರಲ್ಲಿ ಆರ್ಯಾ, ಗೀತಿ, ಕಂದ, ಶರ ಕುಸುಮ ಭೋಗ ಭಾಮಿನೀ ಪರಿವರ್ಧಿನಿ ವಾರ್ಧಕ – ಈ ಆರು ಬಗೆಯ ಷಟ್ಪದಿಗಳ ಲಕ್ಷಣವನ್ನು ವಿವರಿಸಿದೆ; ಲಕ್ಷಣಕ್ಕೆ ಆಯಾ ಪದ್ಯವೇ ಉದಾಹರಣೆ.

(೩)ಮೂರನೆಯ 'ಸಮ'ವೃತ್ತ ಪ್ರಕರಣದಲ್ಲಿ ಉಕ್ತೆಯಿಂದ ಉತ್ಕೃತ್ತಿಯ ವರೆಗಿನ ೨೬ ಛಂದಸ್ಸುಗಳಲ್ಲಿ ಹುಟ್ಟುವ ವಿವಿಧ ವೃತ್ತಗಳ ಲಕ್ಷಣವನ್ನು ತಿಳಿಸಿದೆ. ಲಕ್ಷಣ ನಿರೂಪಣೆಯ ಕ್ರಮ ಅಭ್ಯಾಸಿಗಳು ನೆನಪಿನಲ್ಲಿಟ್ಟುಕೊಳ್ಳಲು ಅನುಕೂಲವಾಗುವಂತೆ ಗಣಸಂಕೇತದ ಅಕ್ಷರಗಳು ಮತ್ತು ವೃತ್ತದ ಹೆಸರು ಇವುಗಳಿಂದ ಕೂಡಿ, ಒಂದೇ ವಾಕ್ಯದಲ್ಲಿ ಅಡಕವಾಗಿದೆ.*

ಉದಾಹರಣೆಗೆ, 'ಖ್ಯಾತ ಕರ್ಣಾಟಕ' ವೃತ್ತಗಳ ಲಕ್ಷಣವನ್ನು ಗಮನಿಸಬಹುದು:

ಸೂರ್ಯಾಶ್ವಂ ಮ–ಸ–ಜಂ–ಸ್ತ–ತಂ ಗುರುಯುತಂ। ಶಾರ್ದೂಲ ವಿಕ್ರೀಡಿತಂ
ಸ–ಭ–ರಂ–ನಂ–ಯ–ಲಂ–ಗ–ಮುಂ ತ್ರಿಗದಶಂ। ಮತ್ತೇಭ ವಿಕ್ರೀಡಿತಂ
ಉತ್ಪಲ ಮಾಲೆಯುಂ ಭ–ರ–ನ–ಭಂ–ಭ–।ರ–ಲಂ–ಗುರುರುದ್ರಭಂಗುರುಂ,
ಮಂ–ರಂ–ಭಂ–ನಂ–ಯ–ಯಂ–ಯಂ।ತ್ರಿಮುನಿಯತಿಯುತಂ
ಸ್ರಗ್ಧರಾನಾಮವೃತ್ತಂ

---

* 'ಕನ್ನಡ ಕೈಪಿಡಿ'ಯಲ್ಲೂ ಇದೇ ಕ್ರಮದಲ್ಲಿ ಲಕ್ಷಣವನ್ನು ಹೇಳಿದೆ:

ಕಣ್ಗೊಪ್ಪಲ್ ಮಸಜಂ ಸತಂತಗಮುಮಾ ಶಾರ್ದೂಲವಿಕ್ರೀಡಿತಂ.
ಉತ್ಪಲಮಾಲೆಯಪ್ಪುದು ಭರಂ ನಭಭಂರಲಗಂ ನೆಗಳ್ದಿರಲ್.
ಸಭರಂ ನಂಮಯಲಂಗಮುಂ ಬಗೆಗೊಳಲ್ ಮತ್ತೇಭವಿಕ್ರೀಡಿತಂ.
ತೋರಲ್ ಮಂದಂಭನಂ ಮೂಯಗಣವ್ರಮದೆ ತಾಂ ಸ್ರಗ್ಧರಾವೃತ್ತಮಕ್ಕುಂ
ನಜಭಜಜಂಜರಂ ಬಗೆಗೊಳುತ್ತಿರೆ ಚಂಪಕಮಾಲೆಯೆಂದಪರ್.
ಸತತಂನಂಸಂರರಂಗಂ ನೆರೆದೆಸೆಯೆ ಮಹಾಸ್ರಗ್ಧರಾವೃತ್ತಮಕ್ಕುಂ.

ಕವಿ ತೆಲುಗು ಛಂದೋಗ್ರಂಥಗಳಿಂದಲೇ ಸ್ವೀಕರಿಸಿದ್ದಾನೆ. ಮೂರನೆಯ ಅಧ್ಯಾಯದಲ್ಲಿಯೇ ಷಟ್ಪದಿಗಳ ಲಕ್ಷಣವನ್ನೂ ಹೇಳಿದ್ದಾನೆ. ಉದಾಹರಣೆಗಳು ಆಯಾ ಷಟ್ಪದಿಗಳ ಛಂದಸ್ಸಿನಲ್ಲಿಯೆ ರಚಿತವಾಗಿವೆ. ಇವುಗಳ ಲಕ್ಷಣ ವಿವರಣೆಯ ವಿಶೇಷವೆಂದರೆ, ಚರಣಕ್ಕೆ ಇಂತಿಷ್ಟು ಗಣ, ಗಣಕ್ಕೆ ಇಂತಿಷ್ಟು ಮಾತ್ರೆ, ಎಂದು ಹೇಳದೆ ಮೊತ್ತದ ಮಾತ್ರಾಸಂಖ್ಯೆಯನ್ನು ಹೇಳಿದೆ. ಇದೇ ಅಧ್ಯಾಯದಲ್ಲಿ ವರ್ಣಮಾಲೆಯ (ಎ, ಒ, ಬಿಟ್ಟು ಉಳಿದ) ೫೦ ಅಕ್ಷರಗಳನ್ನು ಹತ್ತು ಹತ್ತು ವರ್ಗಗಳ ಐದು ವರ್ಗಗಳಾಗಿ ವಿಂಗಡಿಸಿ, ಪ್ರತಿ ವರ್ಗಾಕ್ಷರಗಳ ಫಲವನ್ನೂ ಹೇಳಿದೆ. ಪವನ ವರ್ಗದ (ಅಕ್ಷರಗಳ) ಫಲ ಮೃತಿ (ಸಾವು) ದಹನ (ಅಗ್ನಿ) ವರ್ಗದ ಫಲ ಮೋದ (ಸಂತೋಷ), ಅವನಿ (ಭೂಮಿ) ವರ್ಗದ ಫಲ (ಸಂಪತ್ತು), ವಾರಿ (ಜಲ) ವರ್ಗದ ಫಲ ಕ್ಷೇಮ, ಗಗನ ವರ್ಗದ ಫಲ ಶೋಕ! ಒಟ್ಟಿನ ಮೇಲೆ ಹೇಳುವುದಾದರೆ, ನಂದಿ ಛಂದಸ್ಸಿನ ಕವಿ 'ಜಿಹ್ವಾಬಂಧನ' ಎಂಬ ಹೆಸರು ಕೊಟ್ಟಿಲ್ಲವೇ ಹೊರತು, ಸಾಕಷ್ಟು ನಾಲಗೆಯ ಕಟ್ಟುಗಳನ್ನು ವಿಧಿಸಿದ್ದಾನೆ. ಎರಡನೆಯ ಅಧ್ಯಾಯ ಸಂಸ್ಕೃತದ ಅಕ್ಷರವೃತ್ತಗಳ ಲಕ್ಷಣ ಹಾಗೂ ಷಟ್ಪ್ರತ್ಯಯಗಳ ವಿವರಣೆಗೆ ಮೀಸಲಾಗಿದೆ. ಛಂದೋಂಬುಧಿಯಲ್ಲಿರುವಂತೆ, ಸಾಧಾರಣವಾಗಿ ಲಕ್ಷಣಪದ್ಯಗಳೇ ಉದಾಹರಣೆಗಳೂ ಆಗಿವೆ. ನಾಗವರ್ಮನಂತೇ ಇವನೂ ಪತ್ನಿಯನ್ನು ಸಂಬೋಧಿಸಿ ಲಕ್ಷಣ ಪದ್ಯಗಳನ್ನು ಹೇಳಿದ್ದಾನೆ. ಸೀಸಪದ್ಯದ ಹಾಗೂ ಷಟ್ಪದೀ ಲಕ್ಷಣದ ಒಂದೊಂದು ಉದಾಹರಣೆಯೊಂದಿಗೆ ಈ ಗ್ರಂಥದ ಸಮೀಕ್ಷೆಯನ್ನು ಮುಗಿಸಬಹುದು:

ವೃತ್ತ (ಲಕ್ಷಣ) ಗರ್ಭಿತ ಸೀಸ

ಭ–ರ–ನ–ಭಾ–ಭ–ರ–ಲ–ಗಂ ಬರಲು ತಾನುತ್ಪಲ
ಮಾಲೆ ದಿಕ್ಕು ಯತಿಯು ಮಾಯರಹಿತೆ

ನ–ಜ–ಭ–ಜ–ಜ–ಜ–ರಗಳ್ ನಾರಿ ಚಂಪಕಮಾಲೆ
ಸೊಗಸಾದ ರುದ್ರಯತಿ ಸುಂದರಾಂಗಿ

ಮ–ಸ–ಜ–ಸ–ತ–ತ–ಗಗಳ್ ಮಹಿಯೊಳು ಶಾರ್ದೂಲ
ಸರಸ ವಿಶ್ವರಾಮ ಸಾರಸಾಕ್ಷಿ

ಎಂದಿರುವುದರಿಂದ ನಂದಿಯೆಂಬುದೇ ಈ ಗ್ರಂಥಕರ್ತನ ಹೆಸರಾಗಿದ್ದರೂ ಇರಬಹುದು." ಅವನ ಕಾಲ, ಸ್ಥಳ, ಮತ, ಮುಂತಾದ ವಿವರಗಳು ಏನೂ ತಿಳಿಯದು, ಎಂದು ಹೇಳಿದ್ದರು. ಅಲ್ಲದೆ, ಪೂರ್ತಿ ಗ್ರಂಥವೂ ದೊರಕಿರಲಿಲ್ಲ. ಈಚೆಗೆ ಬಹುಮಟ್ಟಿಗೆ ಪೂರ್ತಿಯಾದ ಗ್ರಂಥವು ದೊರೆತು ಕವಿ ವಿಚಾರವಾಗಿ ನಿಖರವಾದ ವಿವರಗಳು ಗೊತ್ತಾಗಿವೆ. ಗ್ರಂಥದ ಪ್ರತಿ ಅಧ್ಯಾಯದ ಕಡೆಯ ಗದ್ಯದಲ್ಲಿ 'ವೀರಭದ್ರಕವಿ ವಿರಚಿತಮಪ್ಪ ನಂದಿ ಛಂದೋರ್ಣವ' ಎಂದು ಹೇಳಿದೆ. ಗ್ರಂಥದ ಕೊನೆಯ ಪದ್ಯದಲ್ಲಿ ಕವಿಯೇ ತಿಳಿಸಿರುವ ಪ್ರಕಾರ ಅದು ೨೮–೪–೧೮೪೬ರಲ್ಲಿ 'ಪರಿಪೂರ್ಣ'ವಾಯ್ತು ಎಂದು ತಿಳಿದುಬರುತ್ತದೆ. "ಕೃತಿ ಕರ್ತನುಮಾ ಗುರು ನಂದಿನಾಥ ಹೃತ್‌ಕುವಲಯ ವಾಸನಾಗಿ ನುಡಿಗೂಡಿಸಿಕೊಟ್ಟಿರೆ ಪೇಳ್ದೆ" ಎಂದು ಕವಿ, ಉಮೆಗೆ ಗುರುವಾದ ನಂದಿನಾಥನ (ಎಂದರೆ, ಶಿವನ) ಪ್ರೇರಣೆಯಿಂದ ಕೃತಿಯನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ. ಇವನ ವಂಶ ವಿಚಾರವೂ ಗ್ರಂಥದಿಂದಲೇ ತಿಳಿದುಬರುತ್ತದೆ. "ದರೂರು ಗ್ರಾಮದಲ್ಲಿದ್ದ ಶಿವಯೋಗಿ ವೀರಣಾರ್ಯನು ರೇಣುಕಾರ್ಯನ ಪರಂಪರೆಯವನು. ಈ ವೀರಣಾರ್ಯನ ಶಿಷ್ಯ ಸಿದ್ಧವೀರ ವಿಡಪಲೂರಿನವನು. ಇವನ ಮಗ ಬಸವಯ್ಯ, ಅವನ ಮಗನೇ ನಂದಿ ಛಂದೋರ್ಣವದ ವೀರಭದ್ರ ಕವಿ."[೧೧] "ನಂದಿ ಛಂದವೆನುತೂಹಿಸಿ ನಾಂಪೆಸರಿಟ್ಟೆನರ್ತಿಯಿಂ" ಎಂದು ಕವಿಯೇ ತಿಳಿಸಿರುವ ಪ್ರಕಾರ ಇದನ್ನು 'ನಂದಿ ಛಂದಸ್ಸು' ಎಂದೂ ಕರೆದರೂ ತಪ್ಪಾಗದು.

ಈ ಗ್ರಂಥದ ಮೇಲೆ ತೆಲುಗು ಛಂದೋಗ್ರಂಥಗಳ ಪ್ರಭಾವವು ಬಿದ್ದಿರುವುದು ಸ್ಪಷ್ಟವಾಗಿದೆ. ಅಂಶಗಣಗಳನ್ನು ಸೂರ್ಯ, ಇಂದ್ರ, ಚಂದ್ರ ಎಂದು ಹೆಸರಿಸಿರುವುದರಲ್ಲಿ ಮಾತ್ರವಲ್ಲದೆ ಆ ಗಣಗಳ ಪ್ರಸ್ತಾರ ಕ್ರಮದಲ್ಲಿಯೂ ಇದು ಎದ್ದು ಕಾಣುತ್ತದೆ. ಅಕ್ಷರಗಣಗಳಿಗೆ ಪ್ರತಿಯೊಂದಕ್ಕೂ ಅದರದರ ಅಧಿದೈವ, ಗೋತ್ರ, ರಸ, ಹುಟ್ಟು, ನಕ್ಷತ್ರ, ರಾಶಿ, ಗಣ, ಲಿಂಗ, ಇತ್ಯಾದಿ ವಿವರಗಳನ್ನು ಸಾಂಗವಾಗಿ ವಿವರಿಸಿದ್ದಾನೆ. ಈ ಎಂಟು ಗಣಗಳ ಲಕ್ಷಣ ನಿರೂಪಣೆ 'ಸೀಸಪದ್ಯ' ಎಂಬ ತೆಲುಗು ಛಂದಸ್ಸಿನಲ್ಲೇ ರಚಿತವಾಗಿವೆ. ಮೂರನೆಯ ಅಧ್ಯಾಯದಲ್ಲಿ, ವಧೂವರರ ವಿಷಯದಲ್ಲಿ ದ್ವಾದಶಕೂಟ ಗಳನ್ನು ನೋಡುವಂತೆ, ಗಣಗಳಿಗೂ ಗ್ರಹಮೈತ್ರ, ವರ್ಣಕೂಟ, ಗಣಕೂಟ, ಇತ್ಯಾದಿ ಕೂಟಗಳನ್ನೂ ಹೇಳಿದೆ. ಈ ಸಂಬಂಧದ ಲಕ್ಷಣ ವಿವರಣೆಯ ಕೆಲವು ಪದ್ಯಗಳು ಸೀಸಪದ್ಯದಲ್ಲೂ ತೇಟಗೀತಿಯಲ್ಲೂ ರಚಿತವಾಗಿವೆ. ಇಷ್ಟೇ ಅಲ್ಲದೆ ವಡಿಯ ವಿಚಾರವೂ, ಸೀಸಪದ್ಯ 'ತೇಟಗೀತಿ ಆಟವೆಲದಿಗಳ ಲಕ್ಷಣವೂ ನಿರೂಪಿತವಾಗಿವೆ. ಈ ಎಲ್ಲ ವಿವರಗಳನ್ನೂ

ಈ ಎರಡೂ ಬರಹಗಳು ಇಂಗ್ಲೀಷಿನಲ್ಲಿವೆ. "೧೮೬೯ರಲ್ಲಿ ಬೌತಲೋನ ಎಂಬುವರು 'ಕನ್ನಡ ಛಂದಸ್ಸ'ನ್ನು ಕುರಿತು ಲ್ಯಾಟಿನ್ ಭಾಷೆಯಲ್ಲಿ ಸಣ್ಣಹೊತ್ತಗೆಯನ್ನು ಹೊರತಂದರು. ನೀಲಗಿರಿಯಲ್ಲಿ ಕನ್ನಡ ಅಧ್ಯಾಪಕರಾಗಿದ್ದ ಚಾವಲಿ ರಾಮಸ್ವಾಮಿ ಶಾಸ್ತ್ರಿಯವರು ತಮ್ಮ ಬಳಿ ಕನ್ನಡ ಕಲಿಯುತ್ತಿದ್ದ 'ಕರ್ನಾಟ ವಿದ್ಯಾರ್ಥಿಗಳಾದ ಕೆಲವರು ದೊಡ್ಡ ಮನುಷ್ಯರ 'ಪ್ರಯೋಜನಕ್ಕಾಗಿ ಕನ್ನಡ ಪಾಠಗಳಲ್ಲಿ ತಿಳಿದಿರಬೇಕಾದ ಛಂದಸ್ಸು, ಕಾವ್ಯ ಲಕ್ಷಣ, ಅಲಂಕಾರ ರಸ ಮುಂತಾದುವುಗಳನ್ನು ಪೂರ್ವ ಗ್ರಂಥಗಳು ಸಂಗ್ರಹವಾಗಿರುವಂತೆ ಮಿತವಾಗಿ ಸೇರಿಸಿ, 'ಕರ್ಣಾಟಕ ಛಂದೋಲಂಕಾರ ಸಾಹಿತ್ಯ ಲಕ್ಷಣ ಸಂಗ್ರಹ' ಎಂಬ ಗ್ರಂಥವನ್ನು ಕ್ರಿ.ಶ.೧೮೮೫ರಲ್ಲಿ ಪ್ರಕಟಿಸಿದರು. ಧಾರವಾಡದಲ್ಲಿ ಉಪಾಧ್ಯಾಯರಾಗಿದ್ದ ಧೋಂಡೋ ನರಸಿಂಹ ಮುಳಬಾಗಲ ಅವರು 'ಛಂದಸ್ಸಾರ' ಎಂಬ ಗ್ರಂಥವನ್ನು ೧೮೯೦ರಲ್ಲಿ ಬರೆದು ಪ್ರಕಟಿಸಿದರು. ೧೮೯೩ರಲ್ಲಿ ಕನ್ನಡ ಛಂದಸ್ಸನ್ನು ಕುರಿತು ಕಾರವಾರದಲ್ಲಿ ಶಿಕ್ಷಕರಾಗಿದ್ದ ನರಸಿಂಹ ಮಾಧವ ಮಹಿಸಿ ಎಂಬುವರು Prosody of the Kannada Language ಎಂಬ ಪುಸ್ತಕವನ್ನು ಇಂಗ್ಲೀಷಿನಲ್ಲಿ ಬರೆದರು. ೧೮೯೫ರಲ್ಲಿ ಪ್ರಕಟವಾದ ಮತ್ತೊಂದು ಛಂದೋಗ್ರಂಥವೆಂದರೆ ಶ್ರೀನಿವಾಸ ರಾಘವಾಚಾರ್ಯರ 'ಛಂದೋಮಾಲಿಕೆ'. ಇವಿಷ್ಟೂ ಹೊಸಗನ್ನಡ ಅರುಣೋದಯ ಕಾಲ (೧೯ನೆಯ ಶತಮಾನ)ದಲ್ಲಿ. ವಿದೇಶಿಯ ಮತ್ತು ಸ್ವದೇಶಿಯ ಕನ್ನಡ ವಿದ್ವಾಂಸರಿಂದ ಪ್ರಕಟವಾದ ಛಂದೋವಿಷಯಕವಾದ ಗ್ರಂಥಗಳು. ಹೀಗೆ, ಕನ್ನಡ ಛಂದಸ್ಸನ್ನು ಕುರಿತಂತೆ ೧೮೭೫ ರಿಂದೀಚೆಗೆ ಗ್ರಂಥಗಳನ್ನು ರಚಿಸಿದವರಿಗೆಲ್ಲ ಕಿಟ್ಟೆಲ್ಲರ ಛಂದೋಂಬುಧಿಯೇ ಪರಮಾಧಾರ ಗ್ರಂಥವಾಗಿತ್ತು.[೨] ವಿಶೇಷವೆಂದರೆ, ಕೆಲವು ಗ್ರಂಥಗಳಲ್ಲಿ, ಲೇಖಕರು ತಾವೇ ರಚಿಸಿದ ಪದ್ಯಗಳನ್ನು ಉದಾಹರಣೆಯಾಗಿ ಕೊಟ್ಟಿರುವುದು. ಹಲಕೆಲವು ಛಂದಸ್ಸಿನ ಬಗೆಗೆ ವಿದ್ಯಾರ್ಥಿಗಳಿಗೆ ತಿಳಿಯ ಹೇಳುವ ಪರಿಚಯ ಗ್ರಂಥಗಳಷ್ಟೆ. ಅವುಗಳ ಸ್ವರೂಪವನ್ನು ಪರಿಚಯ ಮಾಡಿಕೊಡುವ ಉದ್ದೇಶದಿಂದ, ಕೆಲವು ಪ್ರಯತ್ನಗಳ ಬಗೆಗೆ ನಾಲ್ಕು ಮಾತು ಹೇಳಬಹುದು.

**ಛಂದಸ್ಸಾರ**: ಇದರ ಲೇಖಕರು ಧಾರವಾಡ ಶಿಕ್ಷಣ – ಶಿಕ್ಷಣ ವಿದ್ಯಾಲಯದ ಕನ್ನಡ ಗುರುಗಳಾಗಿದ್ದ ಧೋಂಡೋ ನರಸಿಂಹ ಮುಳಬಾಗಲ್ ಅವರು. ಗ್ರಂಥದ ೨ನೆಯ ಆವೃತ್ತಿಯಲ್ಲಿ ಗ್ರಂಥರಚನೆಯ ಉದ್ದೇಶವನ್ನು ಹೀಗೆ ತಿಳಿಸಿದ್ದಾರೆ: "ಈಗ ಕನ್ನಡ ವಿದ್ಯಾರ್ಥಿಗಳಿಗೂ ಅವರ ಬೋಧಕರಿಗೂ ಕವಿತೆಯ ಯಥಾರ್ಥಜ್ಞಾನವು ಬಹುಶಃ ಇಲ್ಲೆಂದರೂ ಸಲ್ಲುವುದು. ಎಷ್ಟೋ ಜನರು

ಸ–ಭ–ರ–ನ–ಮ–ಯ–ಲ–ಗ ವಿಭಯಾನೆ ಮತ್ತೇಭ
ನೀರೆ ಕೇಳ್ ಮನುಯತಿ ನಿತ್ಯವೆಂದು

ತೇಟಗೀತಿ॥
ಆರು ಸುರರಾಜಗಣವಿರಲದರ ಮುಂದೆ
ಭಾನುಗಣಯುಗ್ಮಬಂದಿರಲ್ ಪಾದವಾಯ್ತೆ
ಚದುರರೀ ರೀತಿಯಲಿ ನಾಲ್ಕು ಚರಣ ಪೇಳಿ
ಭರದಿ ತುದಿಗೀತವಿಡೆ ಸೀಸ ಪದ್ಯ ತರುಣಿ

ವಾರ್ಧಕ ಷಟ್ಪದಿ:

ತರುಣಿ ಕೇಳ್ ವಾರ್ಧಕದ ಷಟ್ಪದಕೆ ಧರಣಿಯೊಳು
ನಿರುತ ವಿಂಶತಿ ಮಾತ್ರೆ ಮೊದಲೆರಡು ಚರಣಗಳಿ
ಗಿರಲದರ ತುದಿಪದಕೆ ಸರಸಮೂವತ್ತೆರಡು ಲಘುಗಳೊದಗಿದವು ಮುಂದೇ
ಭರದಿ ಮೂರಡಿಗಳೀ ತೆರದಿ ಪೇಳಿದೆಯಾರು
ಪರಿಯ ಷಟ್ಪದಗಳೆಂದರಿವುದಿದು ಪೂರ್ವಕವಿ
ವರ ಮಾರ್ಗ ಚೆಲುವ ಹರಿಣಾಂಕವದನೆ ಕೇಳ್ ಮದಕರಿಗಮನೆ ಕುಂದರದನೇ

[ಪ್ರತಿ ಅರ್ಧದ ಮೊದಲೆರಡು ಚರಣಗಳಿಗೆ ೨೦ ಮಾತ್ರೆ; ಮೂರನೆಯ ಪಾದಕ್ಕೆ ಮೂವತ್ತು ಮಾತ್ರೆ, ಮೇಲೆ ಎರಡು ಲಘುಗಳು. ಪಂಚಮಾತ್ರಾ ಗಣಗಳು ಇರಬೇಕೆಂದು ಹೇಳಿಲ್ಲ. ಆದರೆ ಪದ್ಯದಲ್ಲಿ ಪಂಚಮಾತ್ರಾಗಣಗಳ ನಡೆಯೇ ಇದೆ, ಮೂರನೆಯ ಪಾದದಲ್ಲಿ. ಮೇಲೆ ಒಂದು ಗುರು ಎಂದು ಹೇಳುವ ಕಡೆ ಎರಡು ಲಘು ಎಂದು ಹೇಳಿರುವುದೂ ಸಲಕ್ಷಣವಾಗಿಲ್ಲ. ಆದರೆ ಪದ್ಯದ ಮೂರು ಆರನೆಯ ಪಾದಗಳಲ್ಲಿ ಕೊನೆಗೆ ಗುರುವೇ ಬಂದಿದೆ. ಒಟ್ಟಿನಲ್ಲಿ, ಅಪೂರ್ವ ಲಕ್ಷಣ ವಿವರಣೆ.]

**ಇತರ ಕೆಲವು ಈಚಿನ ಗ್ರಂಥಗಳು:** ಕಿಟ್ಟೆಲ್ಲರು ೧೮೭೫ರಲ್ಲಿ ಪರಿಷ್ಕರಿಸಿ ಪ್ರಕಟಿಸಿದ ನಾಗವರ್ಮನ ಛಂದೋಂಬುಧಿಯ ಪೀಠಿಕೆಯ ಕನ್ನಡ ಛಂದಸ್ಸನ್ನು ಕುರಿತು ಬರೆಯುತ್ತ, ಸಿ.ಪಿ.ಬ್ರೌನರು ೧೮೫೭ರಲ್ಲಿ ಪ್ರಕಟಿಸಿದ 'ತೆಲುಗು ವ್ಯಾಕರಣ' ದಲ್ಲಿ ಕನ್ನಡ ಛಂದಸ್ಸನ್ನೂ ಕುರಿತು ಸಂಕ್ಷೇಪವಾಗಿ ಬರೆದಿರುವರೆಂದು ತಿಳಿಸಿದ್ದಾರೆ.

ಶರನಿಧಿ ಮಾತ್ರೆಯ ಗಣಮೇಳರ್ಧದೆ, ವಿರತಿ ಚತುರ್ಗಣದಿಂದಂ
ಗುರುಯುಗಮಂತ್ಯಗಣಂ ಪ್ರಾಸಂ ಕಡೆಗಿರೆ ಸಾಕಿಯೆನಿಪ ಛಂದಂ

[ನಾಲ್ಕು ಮಾತ್ರೆಗಳ ಏಳು ಗಣಗಳು ಪದ್ಯಾರ್ಧದಲ್ಲಿ ಬರುತ್ತವೆ. ನಾಲ್ಕನೆಯ ಗಣಕ್ಕೆ ಯತಿ, ಅಂತ್ಯಗಣ ಎರಡು ಗುರುಗಳಾಗಿರಬೇಕು. ಅಂತ್ಯಪ್ರಾಸ.]

ಸೀಸಪದ್ಯಕ್ಕೆ ಇವರು ಕೊಡುವ ಲಕ್ಷಣ ತೆಲುಗು ಗ್ರಂಥಗಳಲ್ಲಿ ಕೊಡುವುದಕ್ಕೆ ಅನುಗುಣವಾಗಿಲ್ಲ. ಸೀಸಪದ್ಯದಲ್ಲಿ ಬಳಕೆಯಾಗುವ ದೇವಗಣಗಳು ಆಂಧ್ರಪ್ರದೇಶದಲ್ಲೂ ಕರ್ನಾಟಕದಲ್ಲೂ ಕ್ರಮೇಣ ಪಂಚಮಾತ್ರಾಗಣಕ್ಕೆ ತಿರುಗಿರುವುದು ಕಂಡು ಬರುತ್ತದೆ. ಈ ಲಕ್ಷಣವನ್ನೇ ಇವರೂ ಹೇಳಿದ್ದಾರೆ: ಸೀಸ ಪದ್ಯಕ್ಕೆ ನಾಲ್ಕು ಪಾದಗಳು; ಪ್ರತಿಪಾದಗಳಲ್ಲಿ ೫ ಮಾತ್ರೆಯ ಏಳು ಗಣಗಳು+ಒಂದು ಗುರು; ನಾಲ್ಕನೆಯ ಗಣವಾದ ಮೇಲೆ ಯತಿ.

ಛಂದೋಮಾಲಿಕೆ (೧೮೯೫): ಇದನ್ನು ರಚಿಸಿದವರು ಮೈಸೂರು ಸರ್ಕಾರದ ನಾರ್ಮಲ್ ಸ್ಕೂಲ್ ಪಂಡಿತರಾದ ಶ್ರೀನಿವಾಸ ರಾಘುವಾಚಾರ್ಯರು. ಮೇಲಿನ ಗ್ರಂಥದಂತೆ ಇದೂ ವಿದ್ಯಾರ್ಥಿಗಳ ತಿಳಿವಳಿಕೆಗೆಂದೇ ರಚಿತವಾದದ್ದು. ಬಹುಶಃ ಆಂಗ್ಲ ಸಾಹಿತ್ಯದ ಪರಿಚಯವಿದ್ದರೂ ಅದರ ಪ್ರಭಾವಕ್ಕೆ ಅಷ್ಟಾಗಿ ಒಳಗಾಗದ ಪ್ರಾಚೀನ ಸಂಪ್ರದಾಯದ ಪಂಡಿತರೊಬ್ಬರು ಆಧುನಿಕ ಕನ್ನಡ ಕವಿತೆ ಇನ್ನೂ ತಲೆದೋರುವ ಸೂಚನೆಯೂ ಇಲ್ಲದಿದ್ದ ಕಾಲದಲ್ಲಿ ಕನ್ನಡ ಛಂದಸ್ಸಿನ ಬಗೆಗೆ ಆಡಿರುವ ಮಾತುಗಳು ಗಮನಾರ್ಹವಾಗಿವೆ:

"ಭಾಷೆಗೆ ವ್ಯಾಕರಣದಂತೆ ಛಂದೋನಿಯಮವೂ ಅಂಗವಾಗಿರುವುದು. ಆದರೆ ವ್ಯಾಕರಣವು ವಚನ ಪದ್ಯಗಳೆರಡಕ್ಕೂ, ಛಂದೋನಿಯಮವು ಪದ್ಯ ಮಾತ್ರಕ್ಕೂ, ಸೇರುವುದು.... ಕನ್ನಡ 'ಸಂಸ್ಕೃತ ಭಾಷೆಯಿಂದ ಹುಟ್ಟಿದ್ದಲ್ಲ' ಎಂದು ಅಲ್ಲಿನ ದೇಶ್ಯಪದ ಮುಂತಾದ್ದರಿಂದ ತಿಳಿಯಬಂದರೂ ವ್ಯಾಕರಣ, ಅಲಂಕಾರ, ಛಂದಸ್ಸು, ಇವುಗಳ ಕ್ರಮದ ವಿಷಯದಲ್ಲಿ ಸಂಸ್ಕೃತ ಭಾಷೆಗೆ ಪ್ರತಿಬಿಂಬವಾಗಿರುವುದು, ಆದರೆ, ಛಂದಸ್ಸಿನಲ್ಲಿ ಯತಿ, ಪ್ರಾಸು, ರಗಳೆ ಮುಂತಾದ ಕೆಲವು ಮಾತ್ರಾಗಣ ವೃತ್ತ, ಇವುಗಳಿಂದ ಸ್ವಲ್ಪ ವ್ಯತ್ಯಾಸವನ್ನು ಹೊಂದಿದೆ. ಸಂಸ್ಕೃತದಲ್ಲಿಯೂ ಯತಿ ಕೆಲವಡೆಯಲ್ಲಿಯೇ ಇದ್ದರೂ, ಕನ್ನಡದಲ್ಲಿ ಅಷ್ಟರಮಟ್ಟಿಗೂ, ಐಚ್ಛಿಕವಾಗಿ ಕೆಲವೆಡೆಯಲ್ಲಲ್ಲದೆ ಹಲವು ಕಡೆಯಲ್ಲಿ ಕಾಣುವುದಿಲ್ಲ. ಪ್ರಾಸಿನಿಂದ ಪದ್ಯವು ಎಷ್ಟು ಮನೋಹರವಾಗಿದ್ದರೂ ಅರ್ಥಗಾಂಭೀರ್ಯಕ್ಕೂ, ಲಾಲಿತ್ಯಕ್ಕೂ ವಿಶೇಷವಾಗಿ ಭಂಗವುಂಟಾಗಿರುವುದು.

ರಚಿಸಿದ ಹೊಸಕವಿತೆಗಳು ಅಶುದ್ಧವಾಗಿರುತ್ತವೆ. ಈಗ ಕನ್ನಡ ವಿದ್ಯಾರ್ಥಿಗಳು ಕಲಿಯುವ ಕವಿತಾ ಪದ್ಧತಿಯು ಬಹುಶಃ ಅಶುದ್ಧವಾಗಿದೆ ಮತ್ತು ಅದರಲ್ಲಿ ನ್ಯೂನತೆಗಳಿರುತ್ತವೆ. ಅದಕ್ಕೆ ಆಧಾರವಾದ 'ನಾಗವರ್ಮನ ಛಂದಶ್ಯಾಸ್ತ್ರ' ಎಂಬ ಗ್ರಂಥವಾದರೂ ಅಸ್ಪಷ್ಟ ವಚನಗಳಿಂದಲೂ ಎಷ್ಟೋ ಕೊರತೆಗಳಿಂದಲೂ ನಿರರ್ಥಕ ಶಬ್ದಗಳಿಂದಲೂ ವ್ಯಾಕರಣ ವಿರುದ್ಧ ಪ್ರಯೋಗಗಳಿಂದಲೂ ತುಂಬಿರುವ ಕಾರಣ ವಿದ್ಯಾರ್ಥಿಗಳಿಗೆ ಕಲಿಸುವ ಹಾಗಿಲ್ಲ." "ಈ ಗ್ರಂಥದಲ್ಲಿ ಸಂಸ್ಕೃತ ಕನ್ನಡ ನುಡಿಗಳ ಮುಖ್ಯ ಮುಖ್ಯ ಛಂದಸ್ಸುಗಳಲ್ಲಿರುವ ಪ್ರಸಿದ್ಧ ವೃತ್ತಗಳ ಲಕ್ಷಣಗಳನ್ನು ಹೇಳಿರುವುದರಿಂದ ಇದಕ್ಕೆ 'ಛಂದಸ್ಸಾರ' ಎಂಬ ಹೆಸರು ಕೊಡಲ್ಪಟ್ಟಿದೆ". ಪೂರ್ವ ಲಾಕ್ಷಣಿಕರ ಸಂಪ್ರದಾಯವನ್ನು ಅನುಸರಿಸಿ ಅನೇಕ ಲಕ್ಷಣ ಲಕ್ಷ್ಯ ಪದ್ಯಗಳನ್ನು ಸ್ವಂತವಾಗಿ ರಚಿಸಿ ಸೇರಿಸಿರುವುದು ಗಮನಾರ್ಹ. ಒಂದು ಉದಾಹರಣೆ:

ಚಿತ್ರಪದ ವೃತಂ:

ಚಿತ್ರಪದಂ ಯತಿ ನಾಲ್ಕರೊಳು
ಭ–ತ್ರಿತಯಂ ಗುರುವಂತ್ಯದೊಳು

ಉದಾಹರಣೆ:
(ನೀತಿ)

ಪಾಪವ ಗಂಗೆ, ಕುರಂಗಧರಂ
ತಾಪವ, ದೈನ್ಯವ ಕಲ್ಪಕುಜಂ,
ಲೋಪಿಕುಮುತ್ತಮ ಸಂಗಮವಾ
ಪಾಪವ ತಾಪವ ದೈನ್ಯಮುಮಂ,

[ಗಂಗೆ ಪಾಪವನ್ನು, ಚಂದ್ರ ತಾಪವನ್ನು, ಕಲ್ಪವೃಕ್ಷ ದೈನ್ಯವನ್ನು ಕಳೆಯುತ್ತವೆ. ಉತ್ತಮ ಸಹವಾಸ ಪಾಪ, ತಾಪ, ದೈನ್ಯಗಳೆಲ್ಲವನ್ನೂ ಕಳೆಯುತ್ತದೆ.]

"ಇದು ಮಹಾರಾಷ್ಟ್ರ ಭಾಷೆಯದಾದರೂ ಈಗ ಕನ್ನಡದಲ್ಲಿ ಕೆಲವರು ಉಪಯೋಗಿಸುತ್ತಾರೆ" ಎಂದು ಹೇಳಿ 'ಸಾಕಿ' ಎಂಬ ಪದ್ಯ ಪ್ರಕಾರದ ಲಕ್ಷಣವನ್ನು ತಿಳಿಸಿದ್ದಾರೆ. ಲಕ್ಷಣ ಪದ್ಯವೇ ಉದಾಹರಣೆಯೂ ಆಗಿದೆ.

ಹೊತ್ತಿಗೆಯನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಪ್ರಸಿದ್ಧವಾದ ಆರು ಷಟ್ಪದಿಗಳ ಜೊತೆಗೆ, 'ಒಮ್ಮಡಿ ಷಟ್ಪದಿ' ಎಂಬ ವರ್ಗದಲ್ಲಿ 'ತಲ' 'ಜಲ' 'ವರ', 'ಅಸಮ' (ಕ್ರಮವಾಗಿ ೩+೩, ೩+೪, ೩+೫, ೪+೫ ಮಾತ್ರೆಗಳ ನಡೆ)," ಇಮ್ಮಡಿ ಷಟ್ಪದಿಗಳು ಎಂಬ ವರ್ಗದಲ್ಲಿ 'ಸಂವರ್ಧಿನಿ' ಮತ್ತು 'ಪ್ರೌಢ' (ಕ್ರಮವಾಗಿ ೩+೫+೩+೫, ೪+೫+೪+೫, ಮಾತ್ರೆಗಳ ನಡೆ) ಎಂಬ ಹೊಸ ಷಟ್ಪದಿಯನ್ನು ನಿರ್ಮಿಸಿ, ಉದಾಹರಣೆಯನ್ನು ಕೊಟ್ಟಿದ್ದಾರೆ. 'ತಲ' 'ಜಲ' ಲಯಗಳು ಆಧುನಿಕ ಕವಿತೆಯಲ್ಲಿ ಕಂಡುಬರುತ್ತದೆ ಎಂಬುದನ್ನು ಡಿ.ಎಸ್.ಕರ್ಕಿಯವರು ತಮ್ಮ 'ಛಂದೋವಿಕಾಸ'ದಲ್ಲಿ ತೋರಿಸಿದ್ದಾರೆ.

ಕೈಪಿಡಿಯಲ್ಲಿ ಕನ್ನಡ ಛಂದಸ್ಸಿನ ಬೆಳವಣಿಗೆಯನ್ನು ತಮಿಳು ಮತ್ತು ತೆಲುಗು ಛಂದಸ್ಸುಗಳೊಂದಿಗೆ ಹೋಲಿಸಿ ಬಿ.ಎಂ.ಶ್ರೀಕಂಠಯ್ಯನವರು ಬರೆದಿರುವ ಲೇಖನ ಇತರ ಸಂಶೋಧಕರಿಗೆ ದಾರಿ ತೋರಿಸಿತು. ಡಿ.ಎಸ್.ಕರ್ಕಿಯವರ 'ಛಂದೋ ವಿಕಾಸ' ಕನ್ನಡ ಛಂದಸ್ಸಿನ ಅಕ್ಷರಗಣ, ಮಾತ್ರಾಗಣ ಅಂಶಗಣಗಳ ತ್ರಿವೇಣಿ ಸಂಗಮವನ್ನೂ ಅದರ ನೆಲೆ–ಬೆಲೆಗಳನ್ನೂ ಚಾರಿತ್ರಿಕ ಅಂಶಗಣಗಳ ತ್ರಿವೇಣೀ ಸಂಗಮವನ್ನೂ ಅದರ ನೆಲೆ–ಬೆಲೆಗಳನ್ನೂ ಚಾರಿತ್ರಿಕ ದೃಷ್ಟಿಯಿಂದಲೂ ಭಾವ ಮೂಲ್ಯದೃಷ್ಟಿಯಿಂದಲೂ ವಿವೇಚನೆ ಮಾಡಿರುವ, ಒಂದು ಬೆಲೆಯುಳ್ಳ ಗ್ರಂಥ. ನಾಗವರ್ಮನ ' ಛಂದೋಂಬುಧಿ'ಯ ಪಾಠ ಸಮಸ್ಯೆಗಳನ್ನು ಪರಿಹರಿಸಿ, ಬಹುಮಟ್ಟಿಗೆ ಕವಿಯ ಮೂಲರಚನೆಗೆ ಹತ್ತಿರವಾದ ಪಾಠವನ್ನು ಒದಗಿಸುವ ಎರಡು ಪ್ರಯತ್ನಗಳು ಶ್ಲಾಘ್ಯವಾಗಿವೆ. ಒಂದು, 'ಛಂದಸ್ಸಂಪುಟ'ದಲ್ಲಿ ಅಡಕವಾಗಿರುವ ಎಲ್.ಬಸವರಾಜು ಅವರ ಪರಿಷ್ಕರಣ; ಇನ್ನೊಂದು, ವಿಚಾರಪೂರ್ಣ ಪೀಠಿಕೆಯೊಂದಿಗೆ ಪ್ರಕಟವಾಗಿರುವ ಕುಕ್ಕಿಲ ಕೃಷ್ಣಭಟ್ಟರ ಪರಿಷ್ಕರಣ. ಟಿ.ವಿ.ವೆಂಕಟಾಚಲ ಶಾಸ್ತ್ರಿಯವರ 'ಕನ್ನಡ ಛಂದಸ್ಸು' ಕನ್ನಡ ಛಂದಸ್ಸಿನ ಸ್ವರೂಪವನ್ನು ಬೆಳವಣಿಗೆಯನ್ನೂ ಚೆನ್ನಾಗಿ ಪರಿಚಯ ಮಾಡಿಕೊಡುತ್ತದೆ. ಆಧುನಿಕ ಕನ್ನಡ ಕವಿತೆಯ ಛಂದೋರೂಪಗಳನ್ನು ಕುರಿತು ತೀ.ನಂ.ಶ್ರೀಕಂಠಯ್ಯನವರು ಬರೆದಿರುವ 'ಹೊಸ ಛಂದಸ್ಸಿನ ಲಯಗಳು' ಎಂಬ ಲೇಖನ ತುಂಬ ಬೆಲೆಯುಳ್ಳದ್ದು; ಈ ವಿಷಯವಾಗಿ ಡಿ.ಎಸ್.ಕರ್ಕಿಯವರೂ ತಮ್ಮ ಗ್ರಂಥದಲ್ಲಿ ಪರಿಶೀಲನೆ ನಡೆಸಿದ್ದಾರೆ; ಕನ್ನಡ ಕಾವ್ಯದಲ್ಲಿ ತೀರ ಈಚಿನ ಬೆಳವಣಿಗೆ 'ನವ್ಯ ಕಾವ್ಯ' ಇದು ಕೂಡ ಈಗಾಗಲೇ 'ಹಳೆಯದು' ಎನ್ನಿಸಿಕೊಳ್ಳುವಂತಾಗಿವೆ. ಈ ಕಾವ್ಯದ ಲಕ್ಷಣವನ್ನು ವಿಚಾರ ಮಾಡುವವರು ಇದರ 'ಲಯ' ಆಡು ಮಾತಿನ ಲಯ (Speech rhythem) ಎಂದು ಹೇಳುವುದು ರೂಢಿಯಾಗಿದೆ. ಆಡು ಮಾತು ಅಥವಾ

ಅಭಿನವ ಪಂಪ ಮೊದಲಾದ ಜೈನ ಕವಿಗಳೂ ಪ್ರಾಸಿನ ನಿಯಮವಿಲ್ಲದೆ ಗ್ರಂಥವನ್ನು ರಚಿಸಿದ್ದಲ್ಲಿ ಅವರ ಗ್ರಂಥಗಳಲ್ಲಿ ಇನ್ನೂ ಗಾಂಭೀರ್ಯ, ಲಾಲಿತ್ಯಗಳು ಹೆಚ್ಚುತ್ತಿತ್ತೆಂದು ಹೇಳುವುದಕ್ಕೆ ಅಡ್ಡಿಯೇನೂ ಇಲ್ಲ. ಆದ್ದರಿಂದ ಪ್ರಾಸನ್ನು ನಿಯತವಾಗಲ್ಲದೆ, ಐಚ್ಛಿಕವಾಗಿಟ್ಟುಕೊಳ್ಳುವ ಪಕ್ಷದಲ್ಲಿ ಸಂಸ್ಕೃತದಂತೆ ಕನ್ನಡಕ್ಕೂ ವಿಶೇಷ ಪ್ರಕಾಶವುಂಟಾದೀತೆಂದು ತೋರುತ್ತದೆ."

**ಪ್ರಾಸ ಶಬ್ದಾಲಂಕಾರ**: ಕವಿರಾಜಮಾರ್ಗಕಾರನು ಹೇಳುವಂತೆ ಕನ್ನಡಕ್ಕೆ ಅದು 'ಅತಿಶಯ'ವಾದುದೂ ಹೌದು. ಛಂದಸ್ಸಿಗೂ ಪ್ರಾಸಕ್ಕೂ ಅನಿವಾರ್ಯವಾದ ಸಂಬಂಧವಿಲ್ಲದಿದ್ದರೂ ಪದ್ಯದ ಪಾದ ವಿಂಗಡನೆಯನ್ನು ಸೂಚಿಸುವಲ್ಲಿ ಕನ್ನಡ ಕವಿಗಳು ಆದಿಪ್ರಾಸವನ್ನು ನಿಯತಗೊಳಿಸಿಕೊಂಡರು. ಹೆಚ್ಚು ಕಡಿಮೆ ಅಂತ್ಯಪ್ರಾಸವೂ ಅದೇ ಕೆಲಸವನ್ನು ಮಾಡುತ್ತದೆ; ತೆಲುಗಿನಲ್ಲಿ 'ವಡಿ'ಯನ್ನು ಸೂಚಿಸುವಲ್ಲಿ ಪ್ರಾಸ ಉಪಯುಕ್ತವಾಗಿ ಪರಿಣಮಿಸಿದೆ. ಈ ಸಂದರ್ಭದಲ್ಲಿ ವಿಚಾರ ಮಾಡಿದಾಗ, ಪ್ರಾಸವನ್ನು ಐಚ್ಛಿಕವಾಗಿಟ್ಟುಕೊಳ್ಳಬಹುದೆಂಬ ಮೇಲ್ಕಂಡ ಅಭಿಪ್ರಾಯ ಮಾನ್ಯವಾಗುತ್ತದೆ.

"ಇದರಲ್ಲಿ ಪ್ರಸಿದ್ಧವಾದ ವೃತ್ತಗಳು ಪ್ರಾಚೀನೋದಾಹರಣೆಗಳೊಡನೆ ವಿವರಿಸಲ್ಪಟ್ಟಿವೆ. ಆದರೆ ತ್ರಿಪದಿ, ಸಾಂಗತ್ಯ ಮೊದಲಾದ ವೃತ್ತಗಳನ್ನು ಅನೇಕವಿದ್ದರೂ ಅವು ಪ್ರಕೃತೋಪಯುಕ್ತವಲ್ಲವೆಂದು ಈ ಮುದ್ರಣದಲ್ಲಿ ಬಿಡಲ್ಪಟ್ಟಿವೆ" ಎಂಬ ಗ್ರಂಥಕರ್ತರ ಮಾತು ಗ್ರಂಥದ ವಿಷಯವನ್ನು ಪರಿಚಯ ಮಾಡಿಕೊಡುತ್ತದೆ. ಅಕ್ಷರ ಛಂದಸ್ಸಿನ ರಹಸ್ಯ ಗ್ರಂಥಕರ್ತರಿಗೆ ಅರ್ಥವಾಗಿಲ್ಲ; ಅಂಶಗಣಗಳ ಬದಲು ಮಾತ್ರಾಗಣಗಳ ಲೆಕ್ಕವಿಟ್ಟು ಅದನ್ನು ವಿವರಿಸಹೊರಟಿರುವುದು ಈ ಗ್ರಂಥದ ಒಂದು ದೋಷ. ಅಕ್ಷರ ವೃತ್ತಗಳ ಛಂದೋನಿಯಮವನ್ನು ಆಯಾ ವೃತ್ತ ಛಂದಸ್ಸಿನ ಸೂತ್ರವಾಕ್ಯಗಳ ರೂಪದಲ್ಲಿ ಹೇಳಿರುವುದು ನೆನಪಿಟ್ಟುಕೊಳ್ಳಲು ಅನುಕೂಲವಾಗಿದೆ. 'ಕನ್ನಡ ಕೈಪಿಡಿ'ಯಲ್ಲಿಯೂ ಇವೇ ವಾಕ್ಯಗಳನ್ನು ಅಲ್ಪಸ್ವಲ್ಪ ಮಾರ್ಪಾಡುಗಳೊಂದಿಗೆ ಬಳಸಿಕೊಂಡಿದೆ.

ಈ ಶತಮಾನದಲ್ಲಿ ರಚಿತವಾದ ಛಂದೋಗ್ರಂಥಗಳನ್ನು ಛಂದಸ್ಸಿನ ಕ್ಷೇತ್ರದಲ್ಲಿ ನಡೆದಿರುವ ಸಮೀಕ್ಷೆ ಸಂಶೋಧನೆಗಳನ್ನೂ ಪರಿಚಯ ಮಾಡಿಕೊಡುವುದು ಈ ಗ್ರಂಥದ ಪರಿಮಿತಿಯಲ್ಲಿ ಸೇರಿಲ್ಲ. ಆ ಗ್ರಂಥಗಳ ಹೆಸರುಗಳನ್ನು ಅನುಬಂಧದ ಪಟ್ಟಿಯಲ್ಲಿ ಕೊಟ್ಟಿದೆ. ಆದರೂ ಅವುಗಳನ್ನು ಕುರಿತು ಒಂದೆರೆಡು ಮಾತುಗಳನ್ನು ಹೇಳುವುದು ಅಗತ್ಯವಾಗಿದೆ.

ಬಸವಪ್ಪ ಚೆನ್ನಪ್ಪ ಪಟ್ಟೇದ ಎಂಬವರು "ಷಟ್ಪದಿ ವಂಶ ವಿಕಾಸ' ಎಂಬ ಚಿಕ್ಕ

## ಅಡಿ ಟಿಪ್ಪಣಿಗಳು

೧. ಡಿ.ಎಸ್.ಕರ್ಕಿ: 'ಛಂದೋ ವಿಕಾಸ' ೧೯೫೬; ಪು.೮

೨. 'ಛಂದೋ ಹೀನೋ ನ ಶಬ್ದೋಸ್ತಿ ನಚ್ಛಂದಶ್ಯಬ್ದವರ್ಜಿತಃ (ನಾಟ್ಯ ಶಾಸ್ತ್ರ: ೧೫-೩೯)

೩. ಸೀತಾರಾಮ ಜಾಗೀರ್‌ದಾರ್: 'ಹೆಗ್ಗೆರೆಯ ಶಾಸನ ಮತ್ತು ಜಯಕೀರ್ತಿಯ ಕಾಲ': 'ಮಾನವಿಕ ಕರ್ಣಾಟಕ,' ಸಂಪುಟ-೩, ಸಂಚಿಕೆ-೩; ೧೯೭೩; ಪು.೨೯-೩೪

೪. ಆರ್.ನರಸಿಂಹಾಚಾರ್; ಕರ್ಣಾಟಕ ಕವಿಚರಿತೆ, ೧; ದ್ವಿತೀಯ ಮುದ್ರಣ, ೧೯೭೨; ಅನುಬಂಧ, ೨ ಪುಟ-೪೩

೫. ಎಲ್.ಬಸವರಾಜು; ಕನ್ನಡ ಛಂದಸ್ಸಂಪುಟ' ೧೯೭೪, ಪೀಠಿಕೆ. ಪು xxxiii(೩೩)

೬. ಮೇಲಿನದೇ: ಪು.li (೫೧)

೭-೮. ಕನ್ನಡ ಕೈಪಿಡಿ, ೧೯೩೬; ಪು.೧೩೧-೧೩೨

೯. ಎ.ಆರ್. ಕೃಷ್ಣಶಾಸ್ತ್ರಿ (ಸಂ) 'ಈಶ್ವರಕವಿ ವಿರಚಿತಂ ಕವಿಜಿಹ್ವಾಬಂಧನ' ೧೯೫೨ ಪೀಠಿಕೆ, ಪು.xiii

೧೦. ಮೇಲಿನದೇ.

೧)ಎಲ್.ಬಸವರಾಜು ಅವರು ಅತ್ಯಂತ ದಕ್ಷತೆಯಿಂದ ಸಂಪಾದನೆ ಮಾಡಿ ಪ್ರಕಟಿಸಿರುವ 'ಛಂದಸ್ಸಂಪುಟದಲ್ಲಿ (೧೯೭೪) ಈ ಗ್ರಂಥ ಪ್ರಕಟವಾಗಿದೆ. ಛಂದೋಬಂಧಿ, ಕವಿಜಿಹ್ವಾಬಂಧನ, ಛಂದಸ್ಸಾರ ಇವೂ ಈ ಸಂಪುಟದಲ್ಲಿಯೇ ಕೂಡಿ ಪ್ರಕಟವಾಗಿವೆ.

೨)"ಇಂದುಧರನುಮೆಗೆ ಪೇಳ್ದಾ ಛಂದಂ" ಎಂಬ ನಾಗವರ್ಮನ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಛಂದಸ್ಸನ್ನು ಮೊದಲು ಶಿವನು ಉಮೆಗೆ ಹೇಳಿದ್ದರಿಂದ, ಅವನು ಪತ್ನಿಗೆ ಗುರುವೂ ಆದನು. 'ಉಮಾಗುರು' ಎಂಬ ವೀರಭದ್ರನ ಮಾತಿನಲ್ಲಿ ಇದೇ ಅಭಿಪ್ರಾಯ ಸೂಚಿತವಾಗಿರುವಂತಿದೆ. ಬಸವರಾಜು ಅವರು ಹೇಳಿರುವಂತೆ 'ನಂದಿನಾಥ' ಕೃತಿಗೆ ಪ್ರೇರಕನಾದ್ದರಿಂದ 'ಕೃತಿಗೆ ಪತಿ'; ಆದರೆ 'ಕೃತಿಕರ್ತನ ಗುರು' ಅಲ್ಲ.

೧೧. ಎಲ್.ಬಸವರಾಜು: 'ಛಂದಸ್ಸಂಪುಟ' ೧೯೭೪; ಪೀಠಿಕೆ, ಪು.ixix

೧೨. ಮೇಲಿನದೇ: ಅರಿಕೆ, ಪು.iii-iv

ಬಳಕೆಯ ಮಾತು ಆಧುನಿಕ ಭಾಷಾ ವಿಜ್ಞಾನದ (Linguistics) ಅಧ್ಯಯನದ ವಿಷಯ: ಅದಕ್ಕೆ ಲಕ್ಷಣವನ್ನು ಹೇಳುವುದು ಸಾಧ್ಯವಾಗಿದೆ. ಆದರೆ, 'ಆಡುಮಾತಿನ ಲಯವನ್ನು ಉದಾಹರಣೆಗಳಿಂದ ತೋರಿಸಬಹುದೇ ಹೊರತು, ಅದರ 'ಲಕ್ಷಣವನ್ನು ವಿವರಿಸುವುದು ಕಷ್ಟ. ಲಕ್ಷಣಕ್ಕೆ ಒಳಪಡುವ ಉದಾಹರಣೆಗಳೂ ಇವೆ; ಇವು ಮಾತ್ರಾಲಯಕ್ಕೆ ಒಳಪಡುತ್ತದೆ.

ತುಳು, ಇವು ಪಂಚದ್ರಾವಿಡ ಭಾಷೆಗಳೆಂದು ಪ್ರಾಚೀನ ಕಾಲದಿಂದಲೂ ಪ್ರಸಿದ್ಧವಾಗಿವೆ. ನಮ್ಮ ಪ್ರಾಚೀನ ಕನ್ನಡ ವ್ಯಾಕರಣಕರ್ತರಿಗೆ ಈ ತೌಲನಿಕ ದೃಷ್ಟಿಯಿರದಿದ್ದರೂ ಕನ್ನಡ ಸಂಸ್ಕೃತದಿಂದ ಭಿನ್ನವಾದ ಭಾಷೆ ಎಂಬ ಅರಿವಿದ್ದಿತು. ಅವರು ಕನ್ನಡ ವ್ಯಾಕರಣವನ್ನು ರಚಿಸುವ ವೇಳೆಗೆ ಕನ್ನಡ ಭಾಷೆಯಲ್ಲಿ ಸಂಸ್ಕೃತ ಕಾವ್ಯಗಳ ಮಾದರಿಯನ್ನು ಅನುಸರಿಸಿ ಮೊಮ್ಮೊದಲು ಕಾವ್ಯ ರಚನೆ ಮಾಡಿದ ಕವಿಗಳು ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ವಿದ್ವಾಂಸರಾಗಿದ್ದುದರಿಂದ ಅವರು ಕನ್ನಡ ಭಾಷೆಯ ಬಳಕೆಯಲ್ಲಿ ಸಂಸ್ಕೃತ ಭಾಷಾ ಮರ್ಯಾದೆಯ (ಕಟ್ಟುಪಾಡಿನ) ಪ್ರಭಾವ ತನ್ನ ಅಚ್ಚೊತ್ತಿತ್ತು. 'ಪ್ರಯೋಗಶರಣಾಃ ವೈಯಾಕರಣಾಃ" (ವೈಯಾಕರಣರು ಪ್ರಯೋಗ ಶರಣರು) ಎಂಬ ಸೂಕ್ತಿಯಂತೆ, ಕನ್ನಡ ವೈಯ್ಯಾಕರಣರು ಕನ್ನಡ ಭಾಷೆಯ ಮೇಲೆ ಬಿದ್ದಿದ್ದ ಸಂಸ್ಕೃತ ವ್ಯಾಕರಣದ ಪ್ರಭಾವವನ್ನೂ ಕನ್ನಡದ ಸ್ವಂತ ವ್ಯಕ್ತಿತ್ವವನ್ನೂ ಈ ಎರಡು ಭಾಷೆಗಳ ಬೆರೆಕೆಯಿಂದ ಉದ್ಭವಿಸಿದ್ದ ಕೆಲವು ವಿಶೇಷ ಲಕ್ಷಣಗಳನ್ನೂ ಸಮಸ್ಯೆಗಳನ್ನೂ ಕಾವ್ಯಪ್ರಯೋಗಗಳಲ್ಲಿ ಗುರುತಿಸಿದರು. ಸಂಸ್ಕೃತ ವ್ಯಾಕರಣ ಪದ್ಧತಿಗಳಲ್ಲಿ ಬಲ್ಲವರಾಗಿದ್ದ ಅವರು ಸಂಸ್ಕೃತ ವ್ಯಾಕರಣಗಳ ಮಾದರಿಯಲ್ಲಿಯೇ ಕನ್ನಡ ವ್ಯಾಕರಣಗಳನ್ನು ರಚಿಸಿದರು. ಈ ಕಾರಣದಿಂದ ನಮ್ಮ ಕನ್ನಡ ವ್ಯಾಕರಣಗಳನ್ನು ರಚಿಸಿದರು. ಈ ಕಾರಣದಿಂದ ನಮ್ಮ ಕನ್ನಡ ವ್ಯಾಕರಣಗಳ ವಿಷಯ ವರ್ಗೀಕರಣ, ನಿರೂಪಣ ಪದ್ಧತಿ, ಸೂತ್ರಗಳ ರಚನೆ, ಶಾಸ್ತ್ರೀಯ ಪದಗಳ ಬಳಕೆ, ಈ ಮುಂತಾದ ವ್ಯಾಕರಣ ವಿಧಾನಗಳೆಲ್ಲವೂ ಸಂಸ್ಕೃತ ವ್ಯಾಕರಣ ಶಾಸ್ತ್ರ ಪ್ರಪಂಚದಿಂದ ಆಮದು ಮಾಡಿಕೊಂಡವು. ನಾಗವರ್ಮನ 'ಕರ್ಣಾಟಕ ಭಾಷಾಭೂಷಣ', ಭಟ್ಟಾಕಲಂಕನ 'ಶಬ್ದಾನುಶಾಸನ', ಇವು ಕನ್ನಡ ಭಾಷೆಯನ್ನು ಕುರಿತು ಸಂಸ್ಕೃತ ಭಾಷೆಯಲ್ಲಿ ಬರೆದ ವ್ಯಾಕರಣಗಳು. ಎಂದಮೇಲೆ, ಕನ್ನಡ ವ್ಯಾಕರಣ ಪರಂಪರೆಯ ಮೇಲೆ ಸಂಸ್ಕೃತ ವ್ಯಾಕರಣದ ಪ್ರಭಾವ ಎಷ್ಟು ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ. ರೂಪ ರಚನೆಯಲ್ಲಿ ಕನ್ನಡ ವ್ಯಾಕರಣ ಸಂಸ್ಕೃತ ವ್ಯಾಕರಣದ ಪಡಿನೆಳಲಾಯಿತು. ಸಂಸ್ಕೃತ ವ್ಯಾಕರಣ – ಅದರಲ್ಲಿ ಪಾಣಿನಿಯ ವ್ಯಾಕರಣ – ಅತ್ಯಂತ ಶಾಸ್ತ್ರೀಯ ಎಂದು ಪಾಶ್ಚಾತ್ಯ ವಿದ್ವಾಂಸರು ಮುಕ್ತಕಂಠದಿಂದ ಹೊಗಳಿದ್ದಾರೆ. ಹೀಗಿರುವಲ್ಲಿ, ಸಂಸ್ಕೃತ ವ್ಯಾಕರಣ ಪದ್ಧತಿಯ ಅನುಸರಣೆಯಿಂದ ಕನ್ನಡಕ್ಕೆ ಲಾಭವಾಗಿದೆಯೇ ಹೊರತು ನಷ್ಟವೇನೂ ಇಲ್ಲ. ಕನ್ನಡ ವ್ಯಾಕರಣಕಾರರು ಸಂಸ್ಕೃತ ವ್ಯಾಕರಣಗಳನ್ನು ಧಾರಾಳವಾಗಿ ಅವಲಂಬಿಸಿರುವುದರಿಂದ, ಮುಖ್ಯ ಸಂಸ್ಕೃತ ವ್ಯಾಕರಣ ಸಂಪ್ರದಾಯಗಳನ್ನು ಪರಿಚಯ ಮಾಡಿಕೊಳ್ಳುವುದು ಪ್ರಯೋಜನಕರವೆನಿಸುತ್ತದೆ.

# ೪. ವ್ಯಾಕರಣ – ನಿಘಂಟು – ಜ್ಞಾನ ಕೋಶ

## ಹಿನ್ನೆಲೆ

ವೇದಗಳನ್ನು ಕಲಿಯುವುದಕ್ಕೆ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ – ಇವುಗಳ ತಿಳಿವಳಿಕೆ ಅತ್ಯಗತ್ಯ; ಇವು ವೇದದ 'ಷಡಂಗ'ಗಳೆಂದು ಪ್ರಸಿದ್ಧವಾಗಿವೆ. ಹಾಗೆಯೆ, ಸಂಸ್ಕೃತವಾಗಲಿ ಕನ್ನಡವಾಗಲಿ, ಕಾವ್ಯಗಳ ಅಭ್ಯಾಸಕ್ಕೆ ವ್ಯಾಕರಣ, ನಿಘಂಟು, ಛಂದಸ್ಸು, ಅಲಂಕಾರ – ಈ ನಾಲ್ಕು ಶಾಸ್ತ್ರಗಳ ತಿಳಿವಳಿಕೆ ಅತ್ಯಗತ್ಯ. ಇವುಗಳನ್ನು ಕಾವ್ಯಾಭ್ಯಾಸದ 'ಚತುರಂಗ' ಎಂದು ಕರೆಯಬಹುದು. ಇವುಗಳ ಪೈಕಿ, ಅಲಂಕಾರ ಶಾಸ್ತ್ರ ಮತ್ತು ಛಂದಶಾಸ್ತ್ರಗಳನ್ನು ಕುರಿತು ಕನ್ನಡದಲ್ಲಿ ರಚಿತವಾಗಿರುವ ಪ್ರಾಚೀನ ಗ್ರಂಥಗಳ ಪರಿಚಯವನ್ನು ಹಿಂದಿನ ಎರಡು ಅಧ್ಯಾಯಗಳಲ್ಲಿ ಮಾಡಿ ಕೊಟ್ಟಿದೆ. ಈ ಅಧ್ಯಾಯದಲ್ಲಿ ವ್ಯಾಕರಣ, ನಿಘಂಟು ಮತ್ತು ಜ್ಞಾನಕೋಶ – ಈ ಶಾಸ್ತ್ರ ಗ್ರಂಥಗಳ ಪರಿಚಯುವನ್ನು ಮಾಡಿಕೊಡಲಾಗುವುದು.

ವ್ಯಾಕರಣ ಮತ್ತು ನಿಘಂಟುಗಳನ್ನು ಒಟ್ಟಿನಲ್ಲಿ 'ಶಬ್ದಶಾಸ್ತ್ರ' ಎಂದು ಕರೆಯಬಹುದು. ಒಂದು ಭಾಷೆಯ ಅಂಗೋಪಾಂಗಗಳಾದ ವರ್ಣ (ಅಕ್ಷರ) ಪದ ಅಥವಾ ಶಬ್ದ, ವಾಕ್ಯ – ಇವುಗಳ ರೂಪ ರಚನೆಯನ್ನು ವಿವರಿಸುವ ಶಾಸ್ತ್ರವೇ ವ್ಯಾಕರಣ. ಇದನ್ನು ಸಾಮಾನ್ಯವಾಗಿ 'ವರ್ಣನಾತ್ಮಕ ವ್ಯಾಕರಣ' (Descriptive Grammar) ಎಂದು ಹೇಳುತ್ತಾರೆ. ಈ ಪ್ರಕಾರವಲ್ಲದೆ ಚಾರಿತ್ರಿಕ ವ್ಯಾಕರಣ, ತೌಲನಿಕ ವ್ಯಾಕರಣ, ಮುಂತಾದ ಪ್ರಕಾರಗಳೂ ಉಂಟು. ಕನ್ನಡ ಭಾಷೆಯ ವ್ಯಾಕರಣಗಳೆಲ್ಲವೂ ವರ್ಣನಾತ್ಮಕ ವ್ಯಾಕರಣದ ಪ್ರಕಾರಕ್ಕೆ ಸೇರುತ್ತವೆ. ಕಾಲ್ಡ್‌ವೆಲ್ ಎಂಬ ಪಾಶ್ಚಾತ್ಯ ವಿದ್ವಾಂಸನು ಬರೆದಿರುವ Comparative Grammer of the Dravidian Language ('ದ್ರಾವಿಡ ಭಾಷೆಗಳ ತೌಲನಿಕ ವ್ಯಾಕರಣ') ಎಂಬ ಗ್ರಂಥವು ಅದರ ಹೆಸರೇ ಸೂಚಿಸುವಂತೆ ತೌಲನಿಕ ವ್ಯಾಕರಣ ಪ್ರಕಾರಕ್ಕೆ ಸೇರುತ್ತದೆ. ಕಾಲ್ಡ್‌ವೆಲ್ ಈ ಭಾಷೆಗಳಲ್ಲಿ ಕಂಡು ಬರುವ ವ್ಯಾಕರಣ ಸಿದ್ಧಿಯ ಹೋಲಿಕೆಯನ್ನು ವಿವರಿಸಿ ಈ ಗ್ರಂಥವನ್ನು ಬರೆದು, ಇವು ಸಂಸ್ಕೃತದಿಂದ ಹುಟ್ಟಿದುವಲ್ಲ ಎಂದು ಸ್ಥಾಪಿಸಿದನು. ಕನ್ನಡ, ತಮಿಳು, ತೆಲುಗು, ಮಲೆಯಾಳ,

ವ್ಯಾಕರಣದಪದದಿಂ ಅರ್ಥಂ, ಅರ್ಥದೆ ತತ್ತ್ವಾ–
ಲೋಕಂ, ತತ್ತ್ವಾಲೋಕದಿಂ
ಆಕಾಂಕ್ಷಿಪ ಮುಕ್ತಿಯಕ್ಕುಂ; ಅದೆ ಬುಧರ್ಗೆ ಫಲಂ.

ಪ್ರಭಾವಶಾಲಿಯಾಗಿದ್ದ ಇನ್ನೊಂದು ವ್ಯಾಕರಣ ಸಂಪ್ರದಾಯ ಶರ್ವವರ್ಮನ 'ಕಾತಂತ್ರ' ವ್ಯಾಕರಣದಿಂದ ಮೊದಲಾಯಿತು. ಇದಕ್ಕೆ 'ಕಲಾಪ ವ್ಯಾಕರಣ' ಮತ್ತು 'ಕುಮಾರ ವ್ಯಾಕರಣ' ಎಂಬ ಹೆಸರುಗಳೂ ಇವೆ. ಈ ವೈಯಾಕರಣ ಕ್ರಿ.ಶ.೫ನೆಯ ಶತಮಾನಕ್ಕೂ ಪೂರ್ವದವನು. ಕಾವ್ಯಾವಲೋಕನದಲ್ಲಿನ 'ಶಬ್ದಸ್ಮೃತಿ' ಎಂಬ ವ್ಯಾಕರಣಾಧ್ಯಾಯವನ್ನೂ 'ಭಾಷಾ ಭೂಷಣ'ವನ್ನೂ ಬರೆದ ಎರಡನೆಯ ನಾಗವರ್ಮನಿಗೆ 'ಅಭಿನವಶರ್ವವರ್ಮ' ಎಂಬ ಬಿರುದಿದ್ದಿತು. ಕೇಶಿರಾಜನ ತಾಯಿಯ ತಂದೆಯಾದ ಕವಿ ಸುಮನೋಬಾಣನು 'ಇದಾನೀಂತನ' (=ಈಗಿನ) ಶರ್ವವರ್ಮ ಎಂಬ ಬಿರುದನ್ನು ಹೊಂದಿದ್ದನೆಂದು ಜನ್ನನ ಒಂದು ಪದ್ಯದಿಂದ ತಿಳಿದು ಬರುತ್ತದೆ.* ಅಲ್ಲದೆ, ಜನ್ನನು ಇನ್ನೊಂದು ಪದ್ಯದಲ್ಲಿ – 'ರನ್ನಂ ವೈಯಾಕರಣಂ ಜನ್ನಂ ಮೇಣ್ ಕವಿಯೊಳಗೆ ವೈಯಾಕರಣಂ' 'ನವವೈಯಾಕರಣಂ' ಎಂದೂ ತನ್ನನ್ನು ಕರೆದುಕೊಂಡಿದ್ದಾನೆ. ಜನ್ನನ ಗುರುವೂ ವೈಯಾಕರಣ ಕೇಶಿರಾಜನ ಮಾತಾಮಹನೂ ಆದ ಸುಮನೋಬಾಣನು ವೈಯಾಕರಣನಾಗಿದ್ದು 'ಇದಾನೀಂತನ ಶರ್ವಶರ್ಮ' ಎಂದು ಪ್ರಸಿದ್ಧನಾಗಿದ್ದರೆ ಆಶ್ಚರ್ಯವಿಲ್ಲ. ಇದರಿಂದ, ಶರ್ವಶರ್ಮನ 'ಕಾತತಂತ್ರ' ವ್ಯಾಕರಣ ಕರ್ನಾಟಕದಲ್ಲಿ ತುಂಬ ಪ್ರಚುರವಾಗಿದ್ದು, ಕನ್ನಡ ಕವಿಗಳ ಮೇಲೆ ತುಂಬ ಪ್ರಭಾವ ಬೀರಿದ್ದಿರಬೇಕು ಎಂದು ತೋರಿಬರುತ್ತದೆ. ಕೇಶಿರಾಜನ ಶಬ್ದಮಣಿದರ್ಪಣದ ಮೇಲಂತೂ 'ಕಾತಂತ್ರ'ದ ಪ್ರಭಾವ ವಿಶೇಷವಾಗಿದೆ. ಶರ್ವವರ್ಮನ ಸಂಬಂಧವಾಗಿ ಸ್ವಾರಸ್ಯವಾದ ಪ್ರವಾದಗಳಿವೆ. ಒಂದೆರಡರಲ್ಲಿ ಅವನು ಕುಮಾರಸ್ವಾಮಿಯ ಆರಾಧಕನೆಂದು ತಿಳಿಯಬರುವುದರಿಂದ ಶರ್ವವರ್ಮನು ವೈದಿಕಮತಾನುಯಾಯಿ ಎಂದು ತೋರುತ್ತದೆ.*

ಕನ್ನಡ ವ್ಯಾಕರಣ ಪರಂಪರೆಯ ಮೇಲೆ ಪ್ರಭಾವ ಬೀರಿದ್ದ ಇನ್ನೊಂದು ಪ್ರಸಿದ್ಧ ವ್ಯಾಕರಣ ಸಂಪ್ರದಾಯ 'ಜೈನೇಂದ್ರ ವ್ಯಾಕರಣ'ಕ್ಕೆ ಸೇರಿದ್ದು. ಇದರ

---

* 'ಇದಾನೀಂತನ ಶರ್ವಶರ್ಮ' ಎಂಬ ಬಿರುದೂ ನಾಗವರ್ಮನದೇ ಎಂದು ಕೆಲವು ವಿದ್ವಾಂಸರ ಅಭಿಪ್ರಾಯ. ಈ ಸಂಬಂಧದ ಚರ್ಚೆ ಇಲ್ಲಿ ಬೇಕಿಲ್ಲ.

* 'ಕಾತಂತ್ರ ವ್ಯಾಕರಣ ಜೈನವ್ಯಾಕರಣವೆಂಬ ಪ್ರತೀತಿಯೂ ಇದೆ. ದಂತಕಥೆಗಳ ಆಧಾರದ ಮೇಲೆ ನಿಶ್ಚಿತವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ.

**ಸಂಸ್ಕೃತ ವ್ಯಾಕರಣಗಳು:** ಸುಮಾರು ೧೩ನೆಯ ಶತಮಾನದ ಮಧ್ಯಭಾಗದಲ್ಲಿದ್ದ ಬೋಪದೇವನೆಂಬ ವೈಯಾಕರಣನು ತನ್ನ 'ಮುಗ್ಧಬೋಧ' ಎಂಬ ವ್ಯಾಕರಣದಲ್ಲಿ – ಇಂದ್ರ, ಚಂದ್ರ, ಕಾಶಕೃತ್ಸ್ನ, ಆಪಿಶಾಲಿ, ಶಾಕಟಾಯನ, ಪಾಣಿನಿ, ಅಮರ, ಜೈನೇಂದ್ರ, ಎಂಬ ಎಂಟು ಮಂದಿಯನ್ನು ವ್ಯಾಕರಣಶಾಸ್ತ್ರದ 'ಆದಿಶಾಬ್ದಿಕರು' (ಪೂರ್ವಾಚಾರ್ಯರು) ಎಂದು ಹೇಳಿದ್ದಾನೆ. ಇವರ ಪೈಕಿ ಕಾಶಕೃತ್ಸ್ನ ಮತ್ತು ಆಪಿಶಾಲಿ ಎಂಬುವರು ಪಾಣಿನಿಗಿಂತ ಪೂರ್ವದಲ್ಲಿ ಇದ್ದವರು. ಪಾಣಿನಿ ತನ್ನ 'ಅಷ್ಟಾಧ್ಯಾಯಿ'ಯಲ್ಲಿ ತನಗಿಂತ ಹಿಂದಿನ ಒಂಬತ್ತು ಮಂದಿ ವೈಯಾಕರಣರನ್ನು ಹೆಸರಿಸಿದ್ದಾನೆ. ಇವರ ಪೈಕಿ ಶಾಕಟಾಯನ ಒಬ್ಬ. ಶಾಕಟಾಯನ ಎಂಬ ಹೆಸರಿನ ವೈಯಾಕರಣರು ಇಬ್ಬರಿದ್ದಂತೆ ತಿಳಿದು ಬರುತ್ತದೆ. ಒಬ್ಬನು ಜೈನ; 'ಶಬ್ದಾನುಶಾಸನ' ಎಂಬ ವ್ಯಾಕರಣ ಕರ್ತೃ. ಈ ವ್ಯಾಕರಣಕ್ಕೆ ಅವನೇ 'ಅಮೋಘವೃತ್ತಿ' ಎಂಬ ವಿವರಣೆಯನ್ನು ಬರೆದಿದ್ದಾನೆ. ಈ 'ಅಮೋಘವೃತ್ತಿ'ಯ ಮೇರೆಯೇ 'ಅಮೋಘವೃತ್ತಿ ವಿವರಣ' ಅಥವಾ 'ನ್ಯಾಸ' ಎಂಬ ವ್ಯಾಖ್ಯಾನವನ್ನು ಪ್ರಭಾಚಂದ್ರನೆಂಬವನು ಬರೆದಿದ್ದಾನೆ. ಈ 'ಅಮೋಘವೃತ್ತಿ' ಯ ಮೇರೆಯೇ 'ಅಮೋಘವೃತ್ತಿ ವಿವರಣ' ಅಥವಾ 'ನ್ಯಾಸ' ಎಂಬ ವ್ಯಾಖ್ಯಾನವನ್ನು ಪ್ರಭಾಚಂದ್ರನೆಂಬವನು ಬರೆದಿದ್ದಾನೆ. ಶಾಕಟಾಯನನು ನೃಪತುಂಗ ಅಮೋಘವರ್ಷನ (ಕ್ರಿ.ಶ.೮೧೪–೮೭೭) ಸಂಸ್ಮರಣಾರ್ಥವಾಗಿ ತನ್ನ ಗ್ರಂಥಕ್ಕೆ ಅಮೋಘವೃತ್ತಿಯೆಂದು ಹೆಸರಿಟ್ಟನೆಂದೂ ಅವನ ಆಸ್ಥಾನದ ವಿದ್ವನ್ಮಣಿಗಳಲ್ಲಿ ಒಬ್ಬನೆಂದು ಕವಿರಾಜ ಮಾರ್ಗವನ್ನು ಮೊತ್ತಮೊದಲು ಸಂಪಾದನೆ ಮಾಡಿ ಪ್ರಕಟಿಸಿದ ಕೆ.ಬಿ.ಪಾಠಕರ ಅಭಿಪ್ರಾಯ. ಆರ್.ನರಸಿಂಹಾಚಾರ್ಯರು ಈ ಅಭಿಪ್ರಾಯವನ್ನು ಒಪ್ಪಿಲ್ಲ; ಇನ್ನೂ ಪೂರ್ವದವನು ಎನ್ನುತ್ತಾರೆ. ಅದು ಹೇಗಿದ್ದರೂ, ಸಂಸ್ಕೃತದಲ್ಲಿ ಶಾಕಟಾಯನನದ್ದೇ ಒಂದು ವ್ಯಾಕರಣ ಸಂಪ್ರದಾಯವುಂಟು; ಕನ್ನಡ ವ್ಯಾಕರಣಕರ್ತರ ಮೇಲೆ ಇವನ ವ್ಯಾಕರಣ ಹಾಗೂ 'ನ್ಯಾಸ'ದ ಪ್ರಭಾವವೂ ಬಿದ್ದಿದೆ. ಉದಾಹರಣೆಗೆ, ಕೇಶಿರಾಜನ 'ಶಬ್ದಮಣಿದರ್ಪಣ'ದಲ್ಲಿ ವ್ಯಾಕರಣದ ಫಲವನ್ನು ಕುರಿತ ಪದ್ಯ ಪ್ರಭಾಚಂದ್ರನ 'ನ್ಯಾಸ'ದ ಶ್ಲೋಕದ ಭಾಷಾಂತರ:

'ನ್ಯಾಸ'ದ ಶ್ಲೋಕ:
ವ್ಯಾಕರಣಾತ್ ಪದಸಿದ್ಧಿಃ ಪೆದಸಿದ್ಧೇರರ್ಥನಿರ್ಣಯೋ ಭವತಿ
ಅರ್ಥೇ ತತ್ತ್ವ ಜ್ಞಾನಂ ತತ್ತ್ವ ಜ್ಞಾನತ್ ಪರಂ ಶ್ರೇಯಃ
'ದರ್ಪಣ'ದ ಪದ್ಯ:
ವ್ಯಾಕರಣದಿಂದೆ ಪದಂ, ಆ

## ಕನ್ನಡ ವ್ಯಾಕರಣಗಳು

ಕಾವ್ಯಾವಲೋಕನದಲ್ಲಿ ಶಂಖವರ್ಮ, ಗುಣವರ್ಮ, ನಾಗವರ್ಮರ 'ಅಧ್ವಾನ'ಗಳ (=ಮಾರ್ಗಗಳ) ಮಾತು ಬಂದಿದೆ. ಇವು ಕಾವ್ಯಮಾರ್ಗಗಳೋ ವ್ಯಾಕರಣ ಮಾರ್ಗಗಳೋ ಆಗಿರಬಹುದು. ನಿಶ್ಚಿತವಾಗಿ ಹೇಳಲು ಆಧಾರಗಳಿಲ್ಲ.

**ಕವಿರಾಜಮಾರ್ಗ**: ಕವಿರಾಜಮಾರ್ಗದಲ್ಲಿ ಗದ್ಯ ಗ್ರಂಥಕಾರರ ಹೆಸರುಗಳನ್ನು ಹೇಳುವಾಗ ದುರ್ವಿನೀತನ ಹೆಸರನ್ನೂ ಹೇಳಿದೆ. ಕವಿಚರಿತೆಕಾರರು ತಿಳಿಸುವ ಪ್ರಕಾರ, ಇವನು ಗಂಗವಂಶದ ದೊರೆ; ಕೆಲವು ಶಾಸನಗಳ ಪ್ರಕಾರ, ಇವನಿಗೆ 'ಶಬ್ದಾವತಾರಕಾರ' ಎಂಬ ವಿಶೇಷಣವಿದ್ದಂತೆ ತಿಳಿದು ಬರುತ್ತದೆ; ಆದ್ದರಿಂದ ಇವನು ಶಬ್ದಾವತಾರವನ್ನು ಬರೆದಂತೆ ಊಹಿಸಬಹುದು. ಇದು ವ್ಯಾಕರಣ ಗ್ರಂಥವೇ ಆಗಿರ ಬೇಕು. ಆದರೆ ಕನ್ನಡದ್ದೋ ಸಂಸ್ಕೃತದ್ದೋ ಹೇಳಲು ಸಾಧ್ಯವಿಲ್ಲ. ಕವಿರಾಜಮಾರ್ಗವು ಅಲಂಕಾರಶಾಸ್ತ್ರ ಗ್ರಂಥವಾದರೂ ದೋಷ–ಅದೋಷಗಳನ್ನು ವರ್ಣಿಸುವ ಇದರ ಮೊದಲ ಪರಿಚ್ಛೇದದಲ್ಲಿ ಅನೇಕ ವ್ಯಾಕರಣಾಂಶಗಳನ್ನು ಪ್ರಸ್ತಾಪ ಮಾಡಲಾಗಿದೆ. ಕಾವ್ಯವು ಗುಣಗಳಿಂದ ಕೂಡಿರಬೇಕಲ್ಲದೆ ಎಲ್ಲ ದೃಷ್ಟಿಗಳಿಂದಲೂ ದೋಷರಹಿತವಾಗಿರಬೇಕು ಎಂಬುದು ಎಲ್ಲ ಕಾವ್ಯಲಕ್ಷಣ ಶಾಸ್ತ್ರಜ್ಞರ ಅಭಿಪ್ರಾಯ. ಕಾವ್ಯದಲ್ಲಿ ವ್ಯಾಕರಣ ದೋಷಗಳೂ ಬರಕೂಡದು. ಆದ್ದರಿಂದ, ವ್ಯಾಕರಣಕ್ಕೂ ಕಾವ್ಯ ಮೀಮಾಂಸೆಗೂ ಒಂದು ಸಂಬಂಧವಿದೆ. ವ್ಯಾಕರಣ ದೋಷಗಳೂ ಕಾವ್ಯ ದೋಷಗಳೇ ಆಗುತ್ತವೆ. ಕನ್ನಡದಲ್ಲಿ ಕಾವ್ಯರಚನೆ ಮಾಡುವಾಗ ಯಾವ ಬಗೆಯ ದೋಷಗಳು ಉಂಟಾಗಬಹುದು ಎಂಬುದನ್ನು ಕವಿರಾಜಮಾರ್ಗದಲ್ಲಿ ತಕ್ಕಮಟ್ಟಿಗೆ ವಿಸ್ತಾರವಾಗಿಯೇ ಹೇಳಿದೆ. ಕನ್ನಡದ ದೃಷ್ಟಿಯಿಂದ ವಿಚಾರ ಮಾಡಿ ಸ್ವಂತ ಉದಾಹರಣೆಗಳನ್ನು ಕೊಟ್ಟು ವಿಷಯವನ್ನು ವಿವರಿಸಿರುವುದರಲ್ಲಿ ಕವಿರಾಜಮಾರ್ಗದ ಕರ್ತೃ ಶ್ರೀವಿಜಯನ ಸ್ವತಂತ್ರವಾದ ವಿಚಾರಸರಣಿ ಕಂಡು ಬರುತ್ತದೆ. ಕೇಶಿರಾಜನು ತನ್ನ ಶಬ್ದಮಣಿದರ್ಪಣದಲ್ಲಿ ತಾನು ಪ್ರಮಾಣವೆಂದು ಅಂಗೀಕರಿಸಿರುವ ಕವಿಗಳ 'ಸುಮಾರ್ಗ'ದಲ್ಲಿ ಶ್ರೀ ವಿಜಯನನ್ನೂ ಹೆಸರಿಸಿರುವುದು ಮಾತ್ರವಲ್ಲದೆ, ಕವಿರಾಜಮಾರ್ಗದ ಪದ್ಯಗಳನ್ನು ಉದಾಹರಿಸಿದ್ದಾನೆ. ಕವಿರಾಜಮಾರ್ಗದಲ್ಲಿ ಬಂದಿರುವ ವ್ಯಾಕರಣ ವಿಚಾರಗಳ ಸಂಬಂಧದಲ್ಲಿ ಸೂತ್ರಗಳನ್ನು ರಚಿಸಿಲ್ಲದಿದ್ದರೂ ವ್ಯಾಕರಣ ದೋಷ–ಅದೋಷಗಳ ಸ್ವರೂಪವನ್ನು ಸ್ಪಷ್ಟವಾಗಿ ಪರಿಚಯ ಮಾಡಿಕೊಟ್ಟಿರುವುದರಿಂದ, ಆ ಸಂಬಂಧವಾದ ವ್ಯಾಕರಣ ನಿಯಮಗಳನ್ನು ನಾವು ಸುಲಭವಾಗಿ ಕಲ್ಪಿಸಿಕೊಳ್ಳಬಹುದು. ಕವಿರಾಜಮಾರ್ಗದಲ್ಲಿ ವ್ಯಾಕರಣ ಸೂತ್ರಗಳಿಲ್ಲದಿದ್ದರೂ ಮುಂದೆ ಬಂದ

ಕರ್ತೃ ಪೂಜ್ಯಪಾದ ಎಂದು ಪ್ರಸಿದ್ಧನಾದ ದೇವನಂದಿ. "ಈತನಿಗೆ ಮೊದಲು ದೇವನಂದಿ ಎಂಬ ಹೆಸರು ಇದ್ದಿತು. ತರುವಾಯ ಬುದ್ಧಿಮಾಹಾತ್ಮ್ಯದಿಂದ ಜಿನೇಂದ್ರಬುದ್ಧಿ ಎಂಬ ನಾಮಧೇಯವು ಉಂಟಾಯಿತು. ಬಳಿಕ ವನದೇವತೆಗಳಿಂದ ಇವನ ಪಾದಗಳು ಪೂಜಿಸಲ್ಪಟ್ಟುದರಿಂದ ಪೂಜ್ಯಪಾದ ಎಂಬ ಹೆಸರು ಬಂದಿತು. ಈತನು ವೈದ್ಯಶಾಸ್ತ್ರದಲ್ಲಿ ಪ್ರವೀಣನಾಗಿದ್ದನು. ಈತನು ಕನ್ನಡದಲ್ಲಿ ಗ್ರಂಥಗಳನ್ನು ಬರೆದಿದ್ದಾನೆಯೋ ಇಲ್ಲವೋ ತಿಳಿಯದು.[೧] ಚಾವುಂಡರಾಯನು (ಕ್ರಿ.ಶ.೯೭೮) ಈತನನ್ನು – "ಸುಕವಿಪ್ರಣುತರ್, ವ್ಯಾಕರಣ ಕರ್ತೃಗಳ್, ಗಗನ ಗಮನ ಸಾಮರ್ಥ್ಯರ್, ತಾರ್ಕಿಕ ತಿಳಕರ್, ಎಂದು ಪೊಗಳ್ವುದು ಸಕಲ ಜನಂ ಪೂಜ್ಯ ಪಾದಭಟ್ಟಾರಕರಂ" ಎಂದೂ, ವೃತ್ತವಿಲಾಸನೆಂಬ ಕವಿ (ಸು.೧೧೬೦)–"ಭರದಿಂ ಜೈನೇಂದ್ರಮಂ ಭಾಸುರಮೆನಲೊರೆದಂ, ಪಾಣಿನೀಯಕ್ಕೆ ಟೀಕಂ ಬರೆದಂ" ಎಂದೂ ಹೊಗಳಿದ್ದಾರೆ. ಈ ಟೀಕೆಗೆ 'ಶಬ್ದಾವತಾರ' ಎಂಬ ಹೆಸರಿದ್ದಂತೆ ತಿಳಿದು ಬರುತ್ತದೆ. ಪೂಜ್ಯಪಾದನ ಕಾಲ ಕ್ರಿ.ಶ. ಸುಮಾರು ೬೦೦ ಇರಬಹುದೆಂದು ಕವಿಚರಿತೆಕಾರರು ಹೇಳುತ್ತಾರೆ.

ಅತ್ಯಂತ ಪ್ರಖ್ಯಾತವಾದ ಪ್ರಾಚೀನ ಸಂಸ್ಕೃತ ವ್ಯಾಕರಣ ಪಾಣಿನಿಯ ಅಷ್ಟಾಧ್ಯಾಯೀ. ಇದು ರಚಿತವಾದಂದಿನಿಂದ ತೊಡಗಿ ಇಂದಿನ ತನಕ ಇದು ಸಂಸ್ಕೃತ ವಿದ್ವತ್ ಪ್ರಪಂಚದಲ್ಲಿ ತನ್ನ ಪ್ರಭುತ್ವವನ್ನು ಇನ್ನೊಂದು ವ್ಯಾಕರಣ ಸಂಪ್ರದಾಯಕ್ಕೆ ಬಿಟ್ಟುಕೊಟ್ಟಿಲ್ಲ. ಈ ಕೃತಿಯಷ್ಟೇ ಪ್ರಸಿದ್ಧವಾಗಿವೆ, ಇದರ ಮೇಲೆ ರಚಿತವಾದ ವಾರ್ತಿಕೆಗಳು, ಬಾಷ್ಯಗಳು, ವ್ಯಾಖ್ಯಾನಗಳು. ಇವುಗಳಲ್ಲಿ ಮುಖ್ಯವಾದುವು: ಕಾತ್ಯಾಯನನ 'ವಾರ್ತಿಕ'ಗಳು, ಪತಂಜಲಿಯ 'ಮಹಾಭಾಷ್ಯ' ಭರ್ತೃಹರಿಯ 'ವಾಕ್ಯಪದೀಯ', ಜಯಾದಿತ್ಯ ಮತ್ತು ವಾಮನರ 'ಕಾಶಿಕಾ' ವೃತ್ತಿ ಮುಂತಾದುವು. ಪಾಣಿನಿಯ 'ಅಷ್ಟಾಧ್ಯಾಯಿ'ಯ ವ್ಯಾಸಂಗಕ್ಕೆ ಪೂರ್ವಭಾವಿಯಾಗಿ ಇಂದಿಗೂ ಅಧ್ಯಯನ ಮಾಡುವ ವ್ಯಾಕರಣ ಗ್ರಂಥವೆಂದರೆ ಭಟ್ಟೋಜಿಯ 'ಸಿದ್ಧಾಂತ ಕೌಮುದಿ'. ಪಾಣಿನಿಯ ಕಾಲ ಅನಿಶ್ಚಿತ; ಕ್ರಿಸ್ತಪೂರ್ವ ೬ನೆಯ ಶತಮಾನ ೪ ನೆಯ ಶತಮಾನಗಳ ನಡುವಣ ಕಾಲ ಎಂದು ವಿದ್ವಾಂಸರ ಊಹೆ.*

---

* ಸಂಸಕೃತ ವ್ಯಾಕರಣಗಳ ಸಂಬಂಧವಾಗಿ ವಿಷಯ ಸಂಗ್ರಹಕ್ಕೆ ಆರ್.ನರಸಿಂಹಾಚಾರ್ಯರು ಸಂಪಾದನೆ ಮಾಡಿ ಪ್ರಕಟಿಸಿರುವ ಭಟ್ಟಾಕಲಂಕನ 'ಕರ್ಣಾಟ ಶಬ್ದಾನುಶಾಸನ' (೧೯೨೩) ಬರೆದಿರುವ ವಿಚಾರಪೂರ್ಣವಾದ ಇಂಗ್ಲೀಷು ಭಾಷೆಯ ಪ್ರಸ್ತಾವನೆಗೆ ಋಣಿಯಾಗಿದ್ದೇನೆ.

ಹಾಕಬೇಕಾದರೆ ಕುದಿಯುವ ಹಾಲು ಆರಿ ತುಸು ಬಿಸಿಯಾಗಿರುವಾಗ ಮಜ್ಜಿಗೆಯನ್ನು ಬೆರಸಿದರೆ ಗಟ್ಟಿ ಮೊಸರಾಗುತ್ತದೆ. ಕುದಿಯುವಾಗಲೇ ಬೆರಸಿದರೆ ಒಂದಕ್ಕೊಂದು ಹೊಂದದೆ ಹಾಲು ಒಡೆದು ಹೋಗುತ್ತದೆ. ಹಾಗೆಯೇ, ಸಂಸ್ಕೃತ ಕನ್ನಡ ಪದಗಳನ್ನು ಕೂಡಿಸಿ ಒಂದು ಪದವಾಗಿ ಮಾಡ ಹೊರಟರೆ, ಸಾಮರಸ್ಯ ಸಿದ್ಧಿಸುವುದಿಲ್ಲ. ಸಮಾಸ ಪದ ವಿಲಕ್ಷಣವಾಗಿ ಕಾಣುತ್ತದೆ.]

ಅರಿಸಮಾಸ ದೋಷಕ್ಕೆ ಉದಾಹರಣೆ:

ಅರಸುಕುಮಾರನನ್ ಆಯತ
ತರ ಕಡೆಗಣ್ಣಿಂದೆ ನೋಡಿ ಕೆಳದಿಸಮೇತಂ
ಪರಿಗತನಗೆಯಿಂದಿರ್ದಂ
ಗುರುನಾಣ್ಭರದಿಂದಂ ಎರಗಿ ಮುಖತಾವರೆಯಂ

ಈ ಪದ್ಯದಲ್ಲಿ ದೋಷವನ್ನು ಕಳೆದು ಸರಿಪಡಿಸಿದ ಪದ್ಯ:

ನರಪತಿತನಯನನ್, ಆಯತ
ತರಳಾಪಾಂಗದೊಳೆ ನೋಡಿ ಕೆಳದಿಯರೊಡನೆ ಆಂ
ಪರಿಗತ ಹಾಸ್ಯದೊಳ್ ಇರ್ದಂ
ಗುರುಲಜ್ಜಾಭರದಿಂ ಎರಗಿ ಮುಖ ಸರಿಸಿಜಮಂ

ಕಾವ್ಯ ರಚನೆಗೆ ಸಂಬಂಧಪಟ್ಟಂತೆ ವ್ಯಾಕರಣ ವಿಚಾರದಲ್ಲಿ ಅನೇಕ ಉಪಯುಕ್ತ ಸಲಹೆ ಸೂಚನೆಗಳನ್ನು ಪ್ರಾಯೋಗಿಕವಾಗಿ ಮುಂದಿಟ್ಟಿರುವ ಕವಿರಾಜಮಾರ್ಗದ ಈ ವಿಭಾಗವನ್ನು 'ಕನ್ನಡ ಪ್ರಥಮ ಪ್ರಾಯೋಗಿಕ ವ್ಯಾಕರಣ (Practical Grammar) ಎಂದು ಕರೆದರೆ ತಪ್ಪಾಗದು.

## ಶಬ್ದಸ್ಮೃತಿ ಮತ್ತು ಭಾಷಾಭೂಷಣ:

ಇವೆರಡು ವ್ಯಾಕರಣಗಳೂ ಎರಡನೆಯ ನಾಗವರ್ಮನಿಂದ ರಚಿತವಾಗಿವೆ. 'ಕಾವ್ಯಾವಲೋಕನ'ವನ್ನು ಕುರಿತು ಹೇಳುವಾಗ ಕವಿಯ ವಿಚಾರವಾಗಿ ಈಗಾಗಲೇ ತಿಳಿಸಿದೆ. ಅವನ 'ವರ್ಧಮಾನ ಪುರಾಣ' ದ (ಕ್ರಿ.ಶ.೧೦೪೨) ಕೆಲವು ಪದ್ಯಗಳು 'ಕಾವ್ಯಾವಲೋಕನದಲ್ಲಿಯೂ ಸೇರಿರುವುದರಿಂದ ಈ ಕೃತಿಯ ಮೊದಲನೆಯ ಅಧ್ಯಾಯವಾಗಿ ರಚಿತವಾಗಿರುವ 'ಶಬ್ದಸ್ಮೃತಿ' ಈಚಿನ ರಚನೆ ಎಂಬುದು ಸ್ಪಷ್ಟ; 'ಶಬ್ದ ಸ್ಮೃತಿ'ಯ ವಿಷಯವನ್ನೇ ವಿಸ್ತರಿಸಿ, ನಾಗವರ್ಮ 'ಕರ್ಣಾಟಕ ಭಾಷಾಭೂಷಣ'ವನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿದ್ದಾನೆ. ನಾಗವರ್ಮನು ತನ್ನನ್ನು 'ಅಭಿನವಶರ್ವವರ್ಮ' ಎಂದು ಕರೆದುಕೊಂಡಿರುವನಷ್ಟೇ: ಈ ಎರಡೂ

ವ್ಯಾಕರಣಕರ್ತರಿಗೆ ಅನೇಕ ವಿಚಾರಗಳಲ್ಲಿ ಮಾರ್ಗದರ್ಶನ ಮಾಡಿದ ಗೌರವದ ಸ್ಥಾನ ಕವಿರಾಜಮಾರ್ಗಕ್ಕಿದೆ. ಇದರಲ್ಲಿ ನಿರೂಪಣಗೊಂಡ ಮುಖ್ಯ ವ್ಯಾಕರಣಾಂಶಗಳು ಇವು:

**ಪ್ರಥಮ ಪರಿಚ್ಛೇದ**: (೧)ಆಗಿನ ಕಾಲದ ಹಳಗನ್ನಡದ ಅಪಪ್ರಯೋಗ; (೨)ಸಮಸಂಸ್ಕೃತ ಪದಗಳು. ಸಂಸ್ಕೃತದ ಅವ್ಯಯಗಳು–ಕನ್ನಡದಲ್ಲಿ ಇವುಗಳ ಪ್ರಯೋಗದ ಬಗೆಗೆ ವಿಧಿ–ನಿಷೇಧಗಳು; (೩)ಸಮಾಸಗಳಲ್ಲಿ ಸಂಸ್ಕೃತ–ಕನ್ನಡ ಪದಗಳನ್ನು ಕೂಡಿಸಿ ಸಮಾಸ ಮಾಡಕೂಡದು (ಅರಿಸಮಾಸ ದೋಷ); (೪)ಕೆಟ್ಟ ಅರ್ಥ ಬರುವಂತೆ, ಕೇಳುವುದಕ್ಕೆ ಹಿತವಾಗಿಲ್ಲದಿರುವಂತೆ, ಪದಗಳನ್ನು ಕೂಡಿಸಿ ಬರೆದರೆ ಆಗುವ 'ಶ್ರುತದುಷ್ಟ' ಮತ್ತು 'ಶ್ರುತಿ ಕಷ್ಠ' ಎಂಬ ದೋಷಗಳ ವಿಚಾರ; (೫)ಪುನುರುಕ್ತ ದೋಷ; (೬)ಯಾಥಾಸಂಖ್ಯ ದೋಷ; (೭)ವ್ಯವಹಿತ ದೋಷ (ಪರಸ್ಪರ ಸಂಬಂಧವುಳ್ಳ ಪದಗಳನ್ನು ಅನ್ವಯವಾಗುವಂತೆ ಬಿಡಿಸಿ ಪ್ರಯೋಗಿಸುವುದು); (೮)ವಿಸಂಧಿ ದೋಷ (ಸಂಧಿಮಾಡಬೇಕಾದ ಕಡೆ ಮಾಡದಿರುವುದು); (೯)ವಿರೂಪ ಸಂಧಿ; (೧೦)ನೇಯಾರ್ಥ ದೋಷ; (೧೧)ಕಾರಕ ದೋಷ; (೧೨)ವಚನ ದೋಷ; (೧೩)ಸಮುಚ್ಚಯ ದೋಷ; (೧೪)ವಿಕಲ್ಪ ದೋಷ; (೧೫)ಅವಧಾರಣಾ ದೋಷ; (೧೬)ವಿಶಂಕಾ ದೋಷ.

**ದ್ವಿತೀಯ ಪರಿಚ್ಛೇದ**: (೧)ಕ್ರಿಯಾ ವಿಶೇಷಣದ ಪ್ರಯೋಗದಲ್ಲಿ ದೋಷಗಳು; (೨)ಅವ್ಯಯಗಳ ಪ್ರಯೋಗದಲ್ಲಿ ದೋಷ; (೩)ದ್ವಿತೀಯಾ ಷಷ್ಠಿ ವಿಭಕ್ತಿಗಳಲ್ಲಿ 'ಅ'ಕಾರ ದೀರ್ಘೀಕರಣ ವಿಚಾರ; ಸಂಬೋಧನಾ ವಿಭಕ್ತಿಯ ದೀರ್ಘೀಕರಣ; (೪)ಬಹು ವಿಶೇಷಣಗಳ ಪ್ರಯೋಗ ವಿಚಾರ; (೫)ದಕ್ಷಿಣೋತ್ತರ ಮಾರ್ಗಗಳಲ್ಲಿ ಕೆಲವು ಕ್ರಿಯಾ ಪದಗಳ ವಿಚಾರ.

ಒಂದು ಉದಾಹರಣೆಯೊಂದಿಗೆ ಈ ಪ್ರಕರಣವನ್ನು ಮುಗಿಸ ಬಹುದು:
ಅರಿಸಮಾಸ ದೋಷ ವಿಚಾರ:
ತರಿಸಂದಾ ಸಕ್ಕದಮುಮ
ನರಿಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್
ಕುರಿತುಬೆರಸಿದೊಡೆ ವಿರಸಂ
ಮರುಗುವ ಪಾಲ್ಗಳೆಯ ಪನಿಗಳಂ ಬೆರಸಿದವೋಲ್

[ಸಂಸ್ಕೃತ ಮತ್ತು ಕನ್ನಡ ಪದಗಳು ಯಾವುವು ಎಂಬ ಬಗೆಗೆ ನಿಶ್ಚಿತವಾದ ಜ್ಞಾನವಿಲ್ಲದೆ ಅವುಗಳನ್ನು ಸಮಸ್ತ ಪದಗಳಲ್ಲಿ ಬೆರಸಿದರೆ ಕುಡಿಯುವ ಹಾಲಿಗೆ ಮಜ್ಜಿಗೆಯ ಹನಿಗಳನ್ನು ಬೆರಸಿದ ಹಾಗೆ ವಿರಸವಾಗುತ್ತದೆ. ಹಾಲಿಗೆ ಹೆಪ್ಪು

ಈ ವ್ಯಾಕರಣದಲ್ಲಿ ನಾಗವರ್ಮನು ಸೂತ್ರಗಳನ್ನು ಕಂದಪದ್ಯದಲ್ಲಿ ಬರೆದಿದ್ದಾನೆ. ಕಾವ್ಯಾವಲೋಕನದ ಇತರ ಅಧಿಕರಣಗಳಲ್ಲಿರುವಂತೆ ಇಲ್ಲಿಯೂ ಪಂಪ, ಪೊನ್ನ, ರನ್ನ, ಮುಂತಾದ ಪೂರ್ವಕವಿಗಳಿಂದ ಆಯ್ದ ಪ್ರಯೋಗಗಳನ್ನೇ ಉದಾಹರಣೆಯಾಗಿ ಕೊಟ್ಟಿರುತ್ತಾನೆ. ೯೬ ಸೂತ್ರಗಳೂ ಉದಾಹರಣ ಪದ್ಯಗಳೂ ಸೇರಿ ಈ ಅಧಿಕರಣದಲ್ಲಿ ಒಟ್ಟು ೪೨೨ ಪದ್ಯಗಳಿವೆ.* ಒಟ್ಟಿನಲ್ಲಿ, ಪ್ರಯೋಗಗಳನ್ನು ಆಧರಿಸಿ ರೂಪಿಸಿದ ಸೂತ್ರಗಳನ್ನು ಒಳಗೊಂಡು, ಈ ವ್ಯಾಕರಣ ಸಂಗ್ರಹವಾಗಿಯೂ ಸರಳವಾಗಿಯೂ ಶಾಸ್ತ್ರೀಯವಾಗಿಯೂ ಇದೆ. ಪ್ರಥಮ ವ್ಯಾಕರಣ ಎಂಬ ಕಾರಣದಿಂದ ಇದಕ್ಕೊಂದು ಚಾರಿತ್ರಿಕವಾದ ಬೆಲೆಯಿದೆ. ಈ 'ಶಬ್ದಸ್ಮೃತಿ' ಎಂಬ ಅಧಿಕರಣದ ಕಡೆಯ ಪದ್ಯದಲ್ಲಿ ಮಾತ್ರ ನಾಗವರ್ಮನು ತಾನು 'ಅಭಿನವಶರ್ವವರ್ಮ' ಎಂದು ಹೇಳಿಕೊಂಡಿರುವುದು ಉಚಿತವಾಗಿದೆ. ನಾಗವರ್ಮ ಸೂತ್ರಗಳ ಸ್ವರೂಪವನ್ನೂ, ಪ್ರಯೋಗಗಳನ್ನು ಆಯ್ದುಕೊಡುವಲ್ಲಿ ಅವನು ತೋರಿಸಿರುವ ಔಚಿತ್ಯ ಜ್ಞಾನವನ್ನೂ ಒಂದು ಉದಾಹರಣೆಯಿಂದ ಪರಿಚಯ ಮಾಡಿಕೊಳ್ಳಬಹುದು:

ಸೂತ್ರ ೧೮

ಪುರುಷಸ್ತ್ರೀವಾಚಕಮಾಗಿರೆಯುಂ ಮತ್ತಲ್ಲಿ ಸರ್ವನಾಮಂ ಸಯ್ತು ಒಂ।
ದಿರೆಯುಂ, ಇರ್, ಅರ್, ದಿರ್, ವಿರ್, ಕಳ್, ದೊರೆಕೊಂಡನುಸರಿಸುಗುಂ,
ಜನೋಕ್ತಿಕ್ರಮದಿಂ.

ಇರ್, ಅರ್, ದಿರ್, ಗಳಿಗೆ ಪ್ರಯೋಗ

ಆರಾರ್ಗೆ ಪೆಂಡಿರ್, ಒಡವುಟ್ಟಿದರ್ ಎಂಬರ್ ಆರಾ–
ರ್ಗೆ, ಆರಾರ್ಗೆ ತಂದೆವಿರ್, ಅತಿಪ್ರಿಯ ಪುತ್ರರ್ ಆರಾ–
ರ್ಗೆ, ಆರಾಗೆ ತಾಯ್ವಿರ್, ಎರಡಿಲ್ಲದೆ ಕೂರ್ಪರ್ ಆರಾ–
ರ್ಗೆ? ಆರಯ್ಯೆ, ತಾನೆ ತನಗೆ; ಇನ್ ನೆರಂ ಅಲ್ಲಂ ಆರುಂ.

---

* ಕಾವ್ಯಾವಲೋಕನದ ೩ನೆಯ ಮುದ್ರಣದಲ್ಲಿ ೪೨೩ ಪದ್ಯಗಳು ಎಂದು ಕಾಣಿಸಿದೆ. ೫೬ನೆಯ ಉದಾಹರಣ ಪದ್ಯ 'ಕಾವ್ಯಸಾರ'ದಲ್ಲಿ (೫೨೩ನೆಯ ಸಂಖ್ಯೆಯದು) ಅರ್ಧನೇಮಿ ಪುರಾಣದ್ದು ಎಂದು ಸೂಚಿಸಿದೆ. ಕವಿ ಚರಿತೆಯ ಪ್ರಕಾರ ನಾಗವರ್ಮನ ಕಾಲವನ್ನು ೧೧೪೫ ಎಂದು ಇಟ್ಟುಕೊಂಡರೂ ನೇಮಿಚಂದ್ರನ (೧೧೭೦–೧೨೨೦) ಈ ಪದ್ಯ ಕಾವ್ಯಾವಲೋಕನದಲ್ಲಿ ಈಚೆಗೆ ಯಾರೋ ಸೇರಿಸಿದ್ದು ಎಂದು ಭಾವಿಸಬೇಕಾಗುತ್ತದೆ.

ಗ್ರಂಥಗಳ ರಚನೆಯಲ್ಲಿ ಶರ್ವವರ್ಮನ 'ಕಾತಂತ್ರ' ವ್ಯಾಕರಣವನ್ನು ಅನುಸರಿಸಿದ್ದಾನೆ. ಈ ವಿಚಾರದಲ್ಲಿ ಕವಿರಾಜಮಾರ್ಗದಿಂದ ಸ್ಫೂರ್ತಿ ಪಡೆದಿದ್ದರೂ ಇರಬಹುದು. ಆದರೆ, ಕೇಶಿರಾಜನೂ ಭಟ್ಟಾಕಲಂಕನೂ ಕವಿರಾಜಮಾರ್ಗದಿಂದ ಉದಾಹರಣೆಗಳನ್ನು ಎತ್ತಿಕೊಟ್ಟಿರುವಲ್ಲಿ, ನಾಗವರ್ಮನು ಅದರಿಂದ ಉದಾಹರಣೆಗಳನ್ನು ಕೊಡದಿರುವ ಮಾತು ಹಾಗಿರಲಿ, ಅದನ್ನು ನೋಡಿರುವ ಅಥವಾ ಅದನ್ನು ತನ್ನ ಗ್ರಂಥ ದರಚನೆಗಾಗಿ ಬಳಸಿಕೊಂಡಿರುವ ಬಗೆಗೆ ಯಾವ ಸುಳಿವೂ ಇಲ್ಲ. ಹೀಗಿರುವುದರಿಂದ, 'ಶಬ್ದಸ್ಮೃತಿ' ಕಾವ್ಯಾವಲೋಕನದ ಪ್ರಥಮಾಧ್ಯಾಯವಾದರೂ ಸ್ವಯಂಪೂರ್ಣವಾಗಿರುವುದರಿಂದ, 'ಪ್ರಥಮ ಸ್ವತಂತ್ರ ಕನ್ನಡ ವ್ಯಾಕರಣ' ಗೌರವಕ್ಕೆ ಪಾತ್ರವಾಗುತ್ತದೆ.

'ಶಬ್ದಸ್ಮೃತಿಯಲ್ಲಿ' ಐದು 'ಪ್ರಕರಣ'ಗಳಿವೆ; (i)ಸಂಧಿ ಪ್ರಕರಣ, (ii)ನಾಮ ಪ್ರಕರಣ, (iii)ಸಮಾಸ ಪ್ರಕರಣ, (iv)ತದ್ಧಿತ ಪ್ರಕರಣ, (v)ಆಖ್ಯಾತ ಪ್ರಕರಣ. ಈ ಪ್ರಕರಣ ವಿಭಜನೆಯನ್ನು ನಾಗವರ್ಮನೇ ಹೀಗೆ ವರ್ಣಿಸಿದ್ದಾನೆ:

ಪರಮಾರ್ಥಂ ಪೇಳೆಪಟ್ಟಿರ್ದ ಅಧಿಕರಣಂ ಇವಿಂತಯ್ದರೊಳ್ ಶಬ್ದ ಸಿದ್ಧಿ
ಸ್ಮರಣಕಾರ್ಯಕ್ಕೆ ಉದಾತ್ತಪ್ರಕರಣಗಣನಾವೃತ್ತಿಯಿಂ ಪೊರ್ದಿ ನಿಲ್ಕುಂ,
ತರದಿಂದಂ ಸಂಧಿ, ನಾಮಸ್ಥಿತಿ, ವಿತತಸಮಾಸಕ್ರಮಂ, ತದ್ಧಿತಂ ವಿ–
ಸ್ತರ ರೂಪಾಖ್ಯಾತಂ ಆಖ್ಯಾತಮುಂ, ಎನೆ ದೊರೆವೆತ್ತಯ್ದುಂ ಅಧ್ಯಾಯವರ್ಗಂ.

'ಶಬ್ದಸ್ಮೃತಿ'ಯಲ್ಲಿ ಶಬ್ದ ಸಿದ್ಧಿ ಅಥವಾ ಪದಸಿದ್ಧಿಯನ್ನು ವಿವರಿಸುವುದೇ ಉದ್ದೇಶವೆಂದು ಮೇಲಿನ ಪದ್ಯದಿಂದ ಗೊತ್ತಾಗುತ್ತದೆ. ಸಾಂಪ್ರಾದಾಯಿಕವಾದ ವರ್ಣನಾತ್ಮಕ ವ್ಯಾಕರಣದಲ್ಲಿ ಸಾಧಾರಣವಾಗಿ ವರ್ಣನಿರ್ಣಯ ಅಥವಾ ವರ್ಣ ಸಮಾಮ್ನಾಯ (=ಅಕ್ಷರಮಾಲೆ, alphabet), ಪದಸಿದ್ಧಿ – ಇವು ನಿರೂಪಿತವಾಗಿರುವ ವಿಷಯಗಳು. ವಾಕ್ಯಸಿದ್ಧಿ ಅಥವಾ ವಾಕ್ಯರಚನಾ ವಿಧಾನ ವಿವರಣೆಗೆ (syntax) ಪ್ರಾಧಾನ್ಯವಿಲ್ಲ. ವಿಭಕ್ತಿ ವ್ಯವಸ್ಥೆಯ ನಿರೂಪಣೆ ಕೆಲಮಟ್ಟಿಗೆ ವಾಕ್ಯಸಿದ್ಧಿಗೆ ಸಂಬಂಧಪಟ್ಟಿರುತ್ತದೆ. ಈ ಮೂಲಭೂತ ಸೂತ್ರ ನಮ್ಮ ಪ್ರಾಚೀನ ಕನ್ನಡ ವ್ಯಾಕರಣಗಳಿಗೆಲ್ಲಕ್ಕೂ ಸಾಧಾರಣವಾಗಿ ಅನ್ವಯಿಸುತ್ತದೆ. ನಮ್ಮ ವ್ಯಾಕರಣಕಾರರು ಕೊಡುವ ಉದಾಹರಣೆಗಳೆಲ್ಲವೂ ಸಾಧಾರಣವಾಗಿ ಪದ್ಯಕಾವ್ಯಗಳಿಂದ ಆಯ್ದುಕೊಂಡವು. ಅವುಗಳಿಂದ ವಾಕ್ಯಸಿದ್ಧಿಯ ಸ್ವರೂಪವನ್ನು ತಕ್ಕಮಟ್ಟಿಗೆ ಅರಿತುಕೊಳ್ಳಬಹುದು.

ಸರ್ವಜ್ಞಂ ತದಹಂ ವಂದೇ। ಪರಂಜ್ಯೋತಿಸ್ತಮೋಪಹಂ।
ಪ್ರವೃತ್ತಾ ಯನ್ಮುಖಾತ್ ದೇವೀ। ಸರ್ವಭಾಷಾ ಸರಸ್ವತೀ।

['ಎಲ್ಲಾ ಭಾಷೆಗಳಿಗೂ ಸಮಾನಳಾದ ಸರಸ್ವತೀದೇವಿ ಯಾರ ಮುಖದಿಂದ ಹೊರ ಬಂದಳೋ, ಪರಂಜ್ಯೋತಿಯೂ ಅಜ್ಞಾನವೆಂಬ ಕತ್ತಲೆಯನ್ನು ಕಳೆಯುವವನೂ ಆದ ಆ ಸರ್ವಜ್ಞನನ್ನು (ಜಿನನನ್ನು) ವಂದಿಸುತ್ತೇನೆ.']

ಸಂಸ್ಕೃತ ವ್ಯಾಕರಣಗಳ ಮಾದರಿಯಲ್ಲಿಯೇ ಇಲ್ಲಿನ ಸೂತ್ರಗಳು ಅತ್ಯಂತ ಅಡಕವಾಗಿ ರಚಿತವಾಗಿವೆ.* ಸೂತ್ರಗಳಿಗೆ ವೃತ್ತಿಯನ್ನೂ ಟೀಕನ್ನೂ ನಾಗವರ್ಮನೇ ಬರೆದಿದ್ದಾನೆ. ಸೂತ್ರಗಳಿಗೆ ಪ್ರಯೋಗಗಳ ಉದಾಹರಣೆಗಳಿವೆ. ಆದರೆ, ಶಬ್ದಸ್ಮೃತಿಯಲ್ಲಿರುವಂತೆ ಪೂರ್ವಕವಿಗಳಿಂದ ಆಯ್ದ ಪ್ರಯೋಗಗಳು ಬಹುಕಡಿಮೆ.

ಸೂತ್ರ, ವೃತ್ತಿ, ಟೀಕು, ಪ್ರಯೋಗ – ಇವುಗಳ ನಿರೂಪಣ ವಿಧಾನಕ್ಕೆ ಒಂದು ಉದಾಹರಣೆ:

ಸೂ॥ ಅಳೇ ಚ ಗುನವಚನೇಭ್ಯಃ ॥೧೯೦॥

ವೃ॥ ಗುಣವಚನೇಭ್ಯಃ ಸ್ತ್ರೀವಿವಕ್ಷಾಯಂ ಅಳ್, ಏ, ಚ–ಪ್ರತ್ಯಯ ಭವತಃ॥

ಉ॥ ಒಳ್ಳಿದಳ್, ನಲ್ಲಳ್, ಪೊಲ್ಲಳ್, ಇನಿಯಳ್, ಚದುರೆ ಪಾಣ್ಬೆ, ಸಿತಗೆ, ಜಾಣೆ.

ಟೀ॥ ಗುಣವಚನೇಭ್ಯಃ = ಗುಣವಚನಮಪ್ಪ ಶಬ್ದಂಗಳತ್ತಣಿ ಪರಮಾಗಿ, ಸ್ತ್ರೀಲಿಂಗ ವಿಷಯದೊಳ್, ಅಳೇಚ=ಅಲ್, ಏ, ಎಂಬ ಪ್ರತ್ಯಯಂಗಳುಮಕ್ಕುಂ.

ಶಬ್ದಸ್ಮೃತಿಯಲ್ಲಿ ಐದು ಅಧಿಕರಣಗಳಲ್ಲಿ ಹೇಳಿರುವ ವಿಷಯವನ್ನೇ ಇನ್ನೂ ವಿಸ್ತಾರವಾಗಿ ಇದರಲ್ಲಿ ಹತ್ತು ಪ್ರಕರಣಗಳಲ್ಲಿ ನಿರೂಪಿಸಿದೆ. ಅವು ಯಾವುವೆಂದರೆ–

---

* ಸೂತ್ರದ ಲಕ್ಷಣ: 'ಸ್ವಲ್ಪಾಕ್ಷರಂ, ಅಸಂದಿಗ್ಧ, ಸಾರವತ್, ವಿಶ್ವತೋಮುಖಂ ಅಸ್ತೋಭಂ, ಅನವದ್ಯಂ ಚ. ಸೂತ್ರಂ ಸೂತ್ರವಿದೋ ವಿದು:'। ಸೂತ್ರ ಅತ್ಯಂತ ಕಡಮೆ ಅಕ್ಷರಗಳಲ್ಲಿ ಹೇಳಿರಬೇಕು. (ಸೂತ್ರಕಾರನು ಒಂದು ಅಕ್ಷರವನ್ನು ಉಳಿಸಿದರೆ ಪುತ್ರೋತ್ಸವವಾದಷ್ಟು ಅವನಿಗೆ ಸಂತಸವಂತೆ!) ಸಂದೇಹಕ್ಕೆ ಎಡೆಯಿರಬಾರದು. ಸಾರವತ್ತಾಗಿರಬೇಕು. ಹೇಳಬೇಕಾದ್ದೆಲ್ಲವನ್ನೂ ಒಳಗೊಂಡಿರಬೇಕು. ಅರ್ಥಾಂತಕವಾಗಿ ನಿಲ್ಲಕೂಡದು. ದೋಷವಿಲ್ಲದಿರಬೇಕು. ಸೂತ್ರರಚನೆ ಅತ್ಯಂತ ಕಷ್ಟಕರ. ಕನ್ನಡ ಶಾಸ್ತ್ರಕಾರರು ಕಂದಪದ್ಯಗಳಲ್ಲಿ ಈ ಕೆಲವನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆ.

ವ್ಯಾಕರಣ ನಿಯಮಗಳ ರಚನೆಗೆ ಪ್ರಾಚೀನ ಕನ್ನಡ ವ್ಯಾಕರಣಕಾರರೆಲ್ಲರೂ ಕವಿಗಳ ಪ್ರಯೋಗವನ್ನೇ ಆಧಾರವಾಗಿಟ್ಟುಕೊಂಡು, ಕವಿಗಳ ಮತ್ತು ವಿದ್ವಾಂಸರ ಪ್ರಯೋಜನಾರ್ಥವಾಗಿಯೇ ವ್ಯಾಕರಣ ರಚನೆ ಮಾಡುತ್ತಿದ್ದರೆಂಬುದು ಸ್ಪಷ್ಟವಾಗಿಯೇ ಇದೆ. ಈ ಮಾತಿಗೆ ನಾಗವರ್ಮನೂ ಹೊರತೇನಲ್ಲ. ಆದರೂ, ಮೇಲೆ ಉದಾಹರಿಸಿರುವ ಸೂತ್ರದಲ್ಲಿ 'ಜನೋಕ್ತಿಕ್ರಮದಿಂ' ಎಂಬ ಮಾತು, 'ಶಬ್ದಸ್ಮೃತಿ'ಯ ಕಡೆಯ ಪ್ರಕರಣದ ಕೊನೆಯ ಪದ್ಯದಲ್ಲಿ 'ಅಭಿಮತ ಶಬ್ದ ಸಂಸ್ಮರಣದಿಂ ಜನಮಂ ತಿಳಿವಂತು ಮಾಡಿ' ಎಂಬ ಹೇಳಿಕೆ, ಗ್ರಂಥದ ಹೆಸರು, ಇವನ್ನು ಗಮನಿಸಿದರೆ, ಕವಿಪ್ರಯೋಗ ಮಾತ್ರವಲ್ಲದೆ ಜನರ ರೂಢಿಯ ಭಾಷೆಯನ್ನು ಗಮನಿಸಿ, ಜನಕ್ಕಾಗಿಯೂ ಅವರು ಶಬ್ದ ಸಿದ್ಧಿಯನ್ನು ಪಾಠ ಮಾಡಿ ತಮ್ಮ ಸ್ಮೃತಿಯಲ್ಲಿ (ನೆನಪಿನಲ್ಲಿ ಉಳಿಸಿಕೊಳ್ಳುವುದಕ್ಕಾಗಿಯೂ ವ್ಯಾಕರಣ ರಚನೆ ಮಾಡುವುದು ನಾಗವರ್ಮನ ಉದ್ದೇಶ ಎಂದು ಕಂಡು ಬರುತ್ತದೆ. 'ಶಬ್ದಸಿದ್ಧಿಸ್ಮರಣ' ಎಂಬ ಮಾತು ಈ ಮೊದಲೆ ಉದಾಹರಿಸಿರುವ ಪ್ರಥಮಾಧಿಕರಣದ ಮೊದಲ ಪದ್ಯದಲ್ಲಿಯೂ ಬಂದಿರುವುದನ್ನು ಗಮನಿಸಬೇಕು) ಇವನ ವ್ಯಾಕರಣ – ಇಂದಿನ ಜನ ಹಾಗಿರಲಿ – ಅಂದಿನ ಸಾಮಾನ್ಯ ಜನಕ್ಕಾದರೂ ಅರ್ಥವಾಗುತ್ತಿತ್ತೆ, ಅವನ ಉದ್ದೇಶ ಎಷ್ಟರಮಟ್ಟಿಗೆ ಸಾರ್ಥಕವಾಗಿದೆ, ಎಂಬ ಮಾತು ಬೇರೆ. ಅವನ ಉದ್ದೇಶವಂತೂ ಸ್ತುತ್ಯ.

**ಕರ್ಣಾಟಕ ಭಾಷಾಭೂಷಣ**: ಇದು ಸಂಸ್ಕೃತ ಭಾಷೆಯಲ್ಲಿದೆ. ಕಾವ್ಯಾವಲೋಕನದ ಸೂತ್ರವನ್ನು ಇದರಲ್ಲಿ ಉದ್ಧರಿಸಿರುವುದರಿಂದ ಅದು ರಚಿತವಾದ ಮೇಲೆ ಇದು ರಚಿತವಾಗಿದೆ ಎಂಬುದು ಸ್ವಯಂಸ್ಪಷ್ಟ. ಅಂದಿನ ದಿನಗಳಲ್ಲಿ ಸಂಸ್ಕೃತವು ಅಖಿಲ ಭಾರತದ ರಾಷ್ಟ್ರಭಾಷೆಯ ಸ್ಥಾನವನ್ನು ಅಲಂಕರಿಸಿತ್ತು; ಎಲ್ಲ ವಿದ್ವಾಂಸರೂ ಕವಿಗಳೂ ಸಂಸ್ಕೃತವನ್ನು ಬಲ್ಲವರಾಗಿದ್ದರು. 'ಭಾಷಾ ಭೂಷಣ' ಸಂಸ್ಕೃತದಲ್ಲಿ ಇರುವುದನ್ನು ಗಮನಿಸಿದರೆ, ಕನ್ನಡ ತಿಳಿಯದ ಕರ್ಣಾಟಕದ ಮತ್ತು ಹೊರಗಿನ ವಿದ್ವಾಂಸರಿಗೆ ಕನ್ನಡ ಭಾಷೆಯ ಸ್ವರೂಪವನ್ನೂ ಅದರ ಮಹತ್ವವನ್ನೂ ಪರಿಚಯ ಮಾಡಿಕೊಡಬೇಕೆಂಬುದು ನಾಗವರ್ಮನ ಉದ್ದೇಶವಾಗಿದ್ದಿತ್ತು ಎಂದು ತೋರುತ್ತದೆ. ಎಲ್ಲ ಭಾಷೆಗಳೂ ಜಿನನ ಮುಖದಿಂದ ಬಂದವು. ಆದ್ದರಿಂದ ಸಮಾನ, ಭಾಷಾ ಪ್ರಪಂಚದಲ್ಲಿ ಮೇಲು ಕೀಳು ಎಂಬುದಿಲ್ಲ ಎಂಬುದು ಜೈನಧರ್ಮದ ಕಲ್ಪನೆ. 'ಪರಮಜೀನೇಂದ್ರವಾಣಿಯೆ ಸರಸ್ವತಿ, ಬೇರದು ಪೆಣ್ಣ ರೂಪಮಂ ಧರಿಯಿಸಿ ನಿಂದುದಲ್ತು' ಎಂಬ ಪಂಪನ ಭಾವನೆಯನ್ನೇ ನಾಗವರ್ಮ 'ಭಾಷಾಭೂಷಣ'ದ ಮಂಗಳ ಶ್ಲೋಕದಲ್ಲಿ ಹೀಗೆ ವ್ಯಕ್ತಪಡಿಸಿದ್ದಾನೆ:

ನಾಗಿದ್ದುದರ ಸಂಗತಿಯನ್ನು ಕೇಶಿರಾಜ ತಿಳಿಸಿದ್ದಾನೆ. ಆದ್ದರಿಂದ ಅಜ್ಜನಾದ ಸುಮನೋಬಾನಂತೆ ಇವನು ಹೊಯ್ಸಳ ಸೋಮೇಶ್ವರನಲ್ಲಿಯೋ ಹೊಯ್ಸಳ (೩ನೆಯ) ನಾರಸಿಂಹನಲ್ಲಿಯೋ (೧೨೫೪–೧೨೯೨) ಕಟಕಾಚಾರ್ಯನಾಗಿದ್ದಿರ ಬಹುದು. ಆದ್ದರಿಂದ ಕೇಶಿರಾಜನ ಕಾಲ ಸು.೧೨೫೦–೬೦.

ಮಲ್ಲಿಕಾರ್ಜುನನ ಆಶ್ರಯದಾತನಾಗಿದ್ದ ಸೋಮೇಶ್ವರನ ಅಜ್ಜ ವೀರಬಲ್ಲಾಳನಿಗೆ (೧೧೭೩–೧೨೨೦) 'ಚೋಳರಾಜ್ಯ ಪ್ರತಿಷ್ಠಾಚಾರ್ಯ' ಎಂದೂ ಅವನ ಮಗ ವೀರನರಸಿಂಹನಿಗೆ (೧೨೨೦–೧೨೩೩) 'ಚೋಳ ಕುಲೈಕ ರಕ್ಷಕ' ಎಂದೂ ಬಿರುದುಗಳಿದ್ದುವಾಗಿ ತಿಳಿದು ಬರುತ್ತದೆ. ಕೇಶಿರಾಜನು ತನ್ನ ಕೃತಿಮಾಲೆಯಲ್ಲಿ 'ಚೋಳಪಾಲಕ' ಚರಿತವನ್ನು ಮೊದಲು ಹೆಸರಿಸಿದ್ದಾನೆ. ಆದ್ದರಿಂದ ಕಟಕಾಚಾರ್ಯನಾಗುವುದಕ್ಕೆ ಮೊದಲು ಬಹುಶಃ ವೀರನರಸಿಂಹನ ಕಾಲದಲ್ಲಿ (ಅಥವಾ ಅವನು ತೀರಿಕೊಂಡ ತರುಣದಲ್ಲಿ)–ತನ್ನ ಪೂರ್ವವಯಸ್ಸಿನಲ್ಲಿ– ಅವನು ಪಾಂಡ್ಯರ ಮೇಲೆ ದಂಡೆತ್ತಿ ಹೋಗಿ ಚೋಳ (೩ನೆಯ) ರಾಜರಾಜನನ್ನು ಅವನ ಸಿಂಹಾಸನದಲ್ಲಿ ನೆಲೆಗೊಳಿಸಿದ ಸಂಗತಿಯನ್ನು ಆ ಕೃತಿಯಲ್ಲಿ ವರ್ಣಿಸಿರಬಹುದು. ಈ ಕೃತಿಯಾಗಲಿ, ಕೇಶಿರಾಜನು ತಿಳಿಸಿರುವ ಇತರ ಕೃತಿಗಳಾಗಲಿ ದೊರಕಿಲ್ಲ.

ಕೇಶಿರಾಜನ ಕೃತಿಗಳ ಪೈಕಿ ಸುಭದ್ರಾಹರಣ, ಪ್ರಬೋದಚಂದ್ರ, ಇವು ನಾಟಕಗಳಾಗಿದ್ದರೂ ಇರಬಹುದು. ಸೂಕ್ತಿಸುಧಾರ್ಣವದಲ್ಲಿಯೂ ಶಬ್ದಮಣಿದರ್ಪಣದಲ್ಲಿಯೂ ಕೇಶಿರಾಜನ ಕೃತಿಗಳಿಂದ ಉದಾಹರಣ ಪದ್ಯಗಳನ್ನು ಆಯ್ದು ಸೇರಿಸಿರುವ ಸಾಧ್ಯತೆ ಇದೆಯೆಂದು ವಿದ್ವಾಂಸರು ಊಹಿಸಿದ್ದಾರೆ.

ಕೇಶಿರಾಜನು ಕವಿ ಜನ್ನನ ಸೋದರಳಿಯ ಎಂದು ಹೇಳಲಾಗಿದೆ. ಜನ್ನನು ತನ್ನ 'ಯಶೋಧರ ಚರಿತೆ'ಯಲ್ಲಿ ತಾನು 'ಕವಿ ಸುಮನೋಬಾಣನ ಮಗ'ನೆಂದೂ, 'ಅನಂತನಾಥಪುರಾಣ'ದಲ್ಲಿ ಎರಡು ಕಡೆ – 'ಗಂಗಾ ಶಂಕರರ ಪುತ್ರಂ' ಎಂದೂ ಹೇಳಿರುವುದು ಈ ಹೇಳಿಕೆಗೆ ಆಧಾರ. ಸುಮನೋಬಾಣ ಎಂಬುದು ಶಂಕರನ ಬಿರುದು ಎಂಬುದು ಕವಿಚರಿತೆಕಾರರ ಅಭಿಪ್ರಾಯ. ಇದನ್ನು ಒಪ್ಪಿದರೆ, ಸುಮನೋಬಾಣನ ಮಗಳ ಮಗನಾದ ಕೇಶಿರಾಜನು ಜನ್ನನ ಸೋದರಳಿಯನಾಗುತ್ತಾನೆ. ಜನ್ನನ ಅನಂತನಾಥ ಪುರಾಣದ ಇನ್ನೊಂದು ಪದ್ಯದಲ್ಲಿ (೧–೩೪). ಸುಮನೋಬಾಣನು ಅವನ ಉಪಾಧ್ಯಾಯ ಎಂದು ಅರ್ಥ ಮಾಡಲು ಅವಕಾಶವಿದೆ. ಈಚೆಗೆ ಎಂ.ಎಂ.ಕಲಬುರ್ಗಿಯವರು ಈ ಅರ್ಥವನ್ನು ಹಿಡಿದು, ನಾಗವರ್ಮ ಜನ್ನನ ಗುರುವಲ್ಲ, ಸುಮನೋಬಾಣನೇ

ಸಂಜ್ಞಾ, ಸಂಧಿ, ವಿಭಕ್ತಿ, ಕಾರಕ, ಯುಷ್ಮಾದಿ, ಸಮಾಸ, ತದ್ಧಿತ, ಆಖ್ಯಾತ, ಅವ್ಯಯ, ನಿಪಾತವಿಧಾನ. ಒಟ್ಟು ಸೂತ್ರಗಳ ಸಂಖ್ಯೆ ೨೬೯. (ರೈಸ್ ಅವರ ಪರಿಷ್ಕರಣದಲ್ಲಿ ೨೮೦ ಇವೆ).

ಕೇಶಿರಾಜನು ನಾಗವರ್ಮನ ವ್ಯಾಕರಣವನ್ನು ಅನುಸರಿಸಿ ತನ್ನ 'ಶಬ್ದಮಣಿ ದರ್ಪಣ'ವನ್ನು ಇನ್ನೂ ವಿಸ್ತಾರವಾಗಿ ರಚಿಸಿದ್ದಾನೆ. ಇದರಿಂದ ಅವುಗಳ ಬೆಲೆ ಎಷ್ಟೆಂಬುದು ಅರಿವಾಗುತ್ತದೆ. ನಾಗವರ್ಮನು ಹೇಳಿಲ್ಲದ ಅನೇಕ ಹೊಸ ವಿಚಾರ ಗಳನ್ನು ಕೇಶಿರಾಜ ಹೇಳಿದ್ದಾನೆ; ನಾಗವರ್ಮನಿಂದ ಈಚಿನ ಕವಿಗಳ ಪ್ರಯೋಗ ಗಳನ್ನೂ ಸೇರಿಸಿದ್ದಾನೆ; ಭಾಷೆಯ ಬೆಳವಣಿಗೆಯಲ್ಲಿ ಕಂಡು ಬಂದ ಮಾರ್ಪಾಟು ಗಳನ್ನು ಗುರುತಿಸಿದ್ದಾನೆ. ಈ ಕಾರಣಗಳಿಂದ ಕೇಶಿರಾಜನ ವ್ಯಾಕರಣ ಹೆಚ್ಚಿನ ಮಾನ್ಯತೆಯನ್ನು ಪಡೆಯಿತು.

**ಶಬ್ದಮಣಿದರ್ಪಣ**: ಇದರ ಕರ್ತೃವಾದ ಕೇಶಿರಾಜನು ಗ್ರಂಥದ ಮೊದಲಿನಲ್ಲೂ ಕಡೆಯಲ್ಲೂ ಕೆಲವು ಪದ್ಯಗಳಲ್ಲಿ ತನ್ನ ವಿಷಯವಾಗಿ ಕೆಲವು ಮುಖ್ಯ ಸಂಗತಿಗಳನ್ನು ತಿಳಿಸಿದ್ದಾನೆ. ಆ ಪದ್ಯಗಳ ಸಾರಾಂಶ: "ಕವಿ ಕೇಶವನು ಯಾದವ ಕಟಕಾಚಾರ್ಯನಾಗಿದ್ದ ಕವಿ ಸುಮನೋಬಾಣನ ದೌಹಿತ್ರ (ಎಂದರೆ, ಮಗಳ ಮಗ), ಯೋಗಿ ಪ್ರವರ ಚಿದಾನಂದ ಮಲ್ಲಿಕಾರ್ಜುನನ ಮಗ. ಲಾಕ್ಷಣಿಕರು ಕರ್ಣಾಟಕ ಲಕ್ಷಣ ಶಬ್ದಶಾಸ್ತ್ರವನ್ನು ಹೇಳು ಎಂದು ಅಪ್ಪಣೆ ಮಾಡಿದ್ದರಿಂದ ಅದನ್ನು 'ಶಬ್ದಮಣಿದರ್ಪಣ' ಎಂದು ಹೆಸರನ್ನಿಟ್ಟು ಹೇಳಿದನು. ಪ್ರಸಿದ್ಧವಾದ 'ಚೋಳಪಾಲಕ ಚರಿತಂ', 'ಶ್ರೀಚಿತ್ರಮಾಲೆ', 'ಸುಭದ್ರಾ ಹರಣಂ', 'ಪ್ರಬೋಧ ಚಂದ್ರಂ', 'ಕಿರಾತಂ' (=ಕಿರಾತಾರ್ಜುನೀಯ) – ಇವು ಕೇಶಿರಾಜನ ಇತರ ಕೃತಿಗಳು. "ಸುಮನೋಬಾಣನು ಹೊಯ್ಸಳ ಒಂದನೆಯ ನಾರಸಿಂಹನಲ್ಲಿ (ಕ್ರಿ.ಶ.೧೧೫೨–೧೧೭೩) ಕಟಕೋಪಾಧ್ಯಾಯನಾಗಿದ್ದವನು.* 'ಸೂಕ್ತಿಸುಧಾರ್ಣವ'ದ ಕರ್ತೃವಾದ ಮಲ್ಲಿಕಾರ್ಜುನನು ವೀರ ಸೋಮೇಶ್ವರನ (೧೨೩೩–೧೨೫೪) ಕಾಲದಲ್ಲಿದ್ದನು. "ಆರ್ಯನ, ಯಾದವ ಕಟಕಾಚಾರ್ಯನ, ಕೇಶವನ ಶಬ್ದಮಣಿದರ್ಪಣವು ಸೂರ್ಯಚಂದ್ರ ಮೇರುವಾರಿಧಿ ಪರ್ಯಂತ ಶಾಶ್ವತವಾಗಿರಲಿ" ಎಂಬ ಹಾರೈಕೆಯ ಪದ್ಯದಲ್ಲಿ ತಾನೂ 'ಯಾದವ ಕಟಕಾಚಾರ್ಯ'

---

* ಎಂ.ಎಂ.ಕಲಬುರ್ಗಿ ಅವರು ಸುಮನೋಬಾಣ ೨ನೆಯ ನರಸಿಂಹನಲ್ಲಿ ಕಟಕೋಪಾಧ್ಯಾಯ ಎಂದು ಅಭಿಪ್ರಾಯ ಪಡುತ್ತಾರೆ. (ಶಬ್ದಮಣಿದರ್ಪಣ ಸಂಗ್ರಹ, ೧೯೭೫, ಪೀಠಿಕೆ x)

ಮುಂದೆ ದೊರೆಯಬಹುದಾದ ಆ ಗ್ರಂಥದ ಹಸ್ತಲಿಖಿತ ಪ್ರತಿಗಳ ಬಾಹುಳ್ಯವು ಇದಕ್ಕೆ ಸಾಕ್ಷಿಯಾಗಿದೆ. ಮುದ್ರಣ ಕಲೆ ಬಂದ ಮೇಲಂತೂ ಕನ್ನಡ ವಿದ್ವಾಂಸರು ಆ ಗ್ರಂಥವನ್ನು ಪರಿಷ್ಕರಿಸಿ ಅಭ್ಯಾಸಕ್ಕೆ ಅನುಕೂಲಿಸುವಂತೆ ತಮಗೆ ಉಚಿತವೆಂದು ತೋರಿದ ಸಹಾಯಕ ಸಾಮಗ್ರಿಗಳೊಡನೆ, ಹಲವು ಸಾರಿ ಮುದ್ರಿಸಿ ಪ್ರಕಟಿಸಿದ್ದಾರೆ.[೨] ಈ ಅಭಿಪ್ರಾಯಕ್ಕೆ ಪೂರಕವಾಗಿ ಕೆಲವು ವಿವರಗಳನ್ನು ಇಲ್ಲಿ ಕೊಡಬಹುದು:

ಶಬ್ದಮಣಿದರ್ಪಣಕ್ಕೆ ನಿಟ್ಟೂರು ನಂಜಯ್ಯನೆಂಬುವನು ಟೀಕೆ ಬರೆದಿದ್ದಾನೆ: ಅಲ್ಲಲ್ಲಿ 'ವಿಚಾರ'ಗಳೂ ಉಂಟು. ಈತನು ಭಟ್ಟಾಕಲಂಕನ ಶಬ್ದಾನುಶಾಸನಗಳಿಂದ ಸೂತ್ರಗಳನ್ನು ಉದಾಹರಿಸಿದ್ದಾನೆ. ಆದ್ದರಿಂದ ಈತನ ಕಾಲ ೧೬೦೪ಕ್ಕಿಂತ ಈಚೆಗೆ ಎಂದು ಹೇಳಬಹುದು.[೩]

ಇನ್ನೊಬ್ಬ ವ್ಯಾಖ್ಯಾನಕಾರ ಲಿಂಗಣಾರಾಧ್ಯ. ಈತ ಆರಾಧ್ಯ ಪಂಗಡದ ವೀರಶೈವ ಮತದವನು. ಇವನು ಕೇಶಿರಾಜನ ವೃತ್ತಿಯ ಸ್ಥಾನದಲ್ಲಿ ತನ್ನದೇ ಆದ ವೃತ್ತಿಯನ್ನು ಬರೆದು, ಅದನ್ನು 'ಸೂತ್ರಾನ್ವಯರತ್ನಮಾಲೆ' ಎಂದು ಹೆಸರಿಸಿದ್ದಾನೆ. ಈ ವೃತ್ತಿಯಿರುವ ಒಂದು ಹಸ್ತಪ್ರತಿಯನ್ನು ಬರೆದ ಕಾಲ ೧೭೨೪ ಎಂದು ಸ್ಪಷ್ಟವಾಗಿ ಗೊತ್ತಾಗಿದೆ. ಆದ್ದರಿಂದ, ಈ ಲಿಂಗಣಾರಾಧ್ಯನ ಕಾಲ ಆ ವರ್ಷಕ್ಕಿಂತ ಹಿಂದಿನದೆಂದು ಮಾತ್ರ ಹೇಳಬಹುದು. ಲಿಂಗಣಾರಾಧ್ಯನ ವೃತ್ತಿಯಲ್ಲಿ ಕೆಲವು ವಿಶೇಷ ಗುಣಗಳೂ ಇವೆ. ಕೇಶಿರಾಜನ ಸೂತ್ರಗಳಲ್ಲಿ ಕಂಡು ಬರುವ ಅರ್ಥಕ್ಲೇಶಗಳನ್ನು ಎಷ್ಟೋ ವೇಳೆ ತೃಪ್ತಿಕರವಾಗಿ ಪರಿಹರಿಸಲು ಪ್ರಯತ್ನಿಸಿರುವನು.[೪]

ಹೈದರಾಬಾದು ಉಸ್ಮಾನಿಯ ವಿಶ್ವವಿದ್ಯಾನಿಲಯದ ಪುಸ್ತಕ ಭಂಡಾರದಲ್ಲಿರುವ ಒಂದು 'ಹೊಸ ಪ್ರತಿ'ಯಲ್ಲಿ ಮೇಲ್ಕಂಡ ವ್ಯಾಖ್ಯಾನಗಳಿಗಿಂತ ಭಿನ್ನವಾದ ವ್ಯಾಖ್ಯಾನವಿದೆ. ಈ ವ್ಯಾಖ್ಯಾನದಲ್ಲಿ ಕಂಡು ಬರುವ ವಿಷಯದ ಸ್ವರೂಪವನ್ನೂ, ಸೂತ್ರಗಳಲ್ಲಿ ಕಂಡು ಬರುವ ಪಾಠಭೇದಗಳನ್ನೂ ಬೇರೆಯ ಪ್ರತಿಗಳಲ್ಲಿ ದೊರೆಯದೆ ಇಲ್ಲಿ ಮಾತ್ರ ಕೊಟ್ಟಿರುವ ಹೊಸ ಉದಾಹರಣೆಗಳನ್ನೂ ದಿವಂಗತ ಪ್ರೊ॥ ಡಿ.ಕೆ. ಭೀಮಸೇನರಾಯರು ಒಂದು ಲಿಖಿತ ಉಪನ್ಯಾಸದಲ್ಲಿ ವಿಶದಪಡಿಸಿದ್ದಾರೆ.[೫] ವ್ಯಾಖ್ಯಾನಕಾರನ ಬಗೆಗೆ ಯಾವ ವಿವರಗಳೂ ತಿಳಿದು ಬಂದಿಲ್ಲ. ಹಸ್ತಪ್ರತಿಯ ಸ್ವರೂಪದ ಆಧಾರದ ಮೇಲೆ ಈಗ ದೊರೆತಿರುವ ಹಸ್ತಪ್ರತಿಗಳೆಲ್ಲಕ್ಕಿಂತ ಇದು ಪ್ರಾಚೀನವಾದುದೆಂದೂ, ಹೆಚ್ಚು ಶುದ್ಧವಾದುದೆಂದೂ ಭೀಮಸೇನರಾಯರು ಅಭಿಪ್ರಾಯಪಟ್ಟಿದ್ದಾರೆ.

ಈವರೆಗೆ, ಜೆ. ಗ್ಯಾರೆಟ್ (೧೮೬೮), ರೆವರೆಂಡ್ ಎಫ್.ಕಿಟ್ಟೆಲ್ (೧೮೭೨), ಪಂಜೆ ಮಂಗೇಶರಾಯರು (೧೯೨೦), ಕನ್ನಡ ಸಾಹಿತ್ಯ ಪರಿಷತ್ತು (೧೯೨೦),

ಗುರು; ಕೇಶಿರಾಜ ಜನ್ನನ ಸೋದರಳಿಯನಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. (ಕರ್ಣಾಟಕ ಭಾರತಿ, ೭–೧, ೧೯೭೪, ಪು.೧೪೫–೧೪೯). ಅವರ ಅಭಿಪ್ರಾಯ ವಿಚಾರ ಮಾಡತಕ್ಕದ್ದಾಗಿದೆ. ಕೇಶಿರಾಜನು ತನ್ನ ಅಜ್ಜನನ್ನು ಸ್ಮರಿಸುವಾಗ ನಿಜವಾದ ಹೆಸರನ್ನು ಹೇಳಿರುವೆಂದು ತಿಳಿಯಬೇಕೆ, ಇಲ್ಲವೆ ಆತನ ಬಿರುದನ್ನು ಹೇಳಿರುವನೆಂದು ತಿಳಿಯಬೇಕೆ? ತಂದೆಯ ಹೆಸರಿನ ಜೊತೆಗೆ ಅಜ್ಜನ ಹೆಸರನ್ನೇ ಹೇಳಿದ್ದಾನೆ ಎಂದು ತಿಳಿಯುವುದೇ ಸರಿ. ಆದ್ದರಿಂದ ಸುಮನೋಬಾಣನೇ ಬೇರೆ. ಶಂಕರನೇ ಬೇರೆ, ಜನ್ನ ಸುಮನೋಬಾಣನ 'ಮಗ' ಎಂದರೆ 'ಶಿಷ್ಯ'. ಶಿಷ್ಯ ಗುರುವಿನ 'ಕರಸಂಜಾತ' (=ಸುತ, ಮಗ) ಎಂಬ ಕಲ್ಪನೆ ಎಲ್ಲ ಧರ್ಮಗಳಲ್ಲೂ ಉಂಟು. ಜನ್ನ ಸುಮನೋಬಾಣನ ಶಿಷ್ಯ; ಕೇಶಿರಾಜ ಮಗಳ ಮಗ. ಜನ್ನ 'ಕವಿಗಳೊಳಗೆ ವೈಯಾಕರಣಂ'; 'ಇದಾನೀಂತ ಶರ್ವವರ್ಮ' ಎಂದು ಬಿರುದು ತಳೆದ ವೈಯಾಕರಣ ಸುಮನೋಬಾಣನಲ್ಲಿ ಜನ್ನನ ಶಿಷ್ಯವೃತ್ತಿ. ವೈಯಾಕರಣ ರಕ್ತ ಕೇಶಿರಾಜನಲ್ಲೂ ಹರಿದು ಬಂದಿದೆ. 'ಸೂಕ್ತಿ ಸುಧಾರ್ಣವ' ಕಾವ್ಯ ಸಂಕಲನಕ್ಕೆ ಸಂಗ್ರಹಿಸಿದ್ದ ಮಲ್ಲಿಕಾರ್ಜುನನ ಭಂಡಾರವೂ ಕೇಶಿರಾಜನ ಆಸ್ತಿಯಾಗಿ ಬಂದಿದೆ. ಶಬ್ದಮಣಿದರ್ಪಣದಲ್ಲಿ ಅಪಾರ ಸಂಖ್ಯೆಯಲ್ಲಿ ಉದಾಹರಣೆಗಳನ್ನು ಕೊಡಲು ಇದರಿಂದ ಸಹಾಯವಾಗಿದೆ.

ಕೇಶಿರಾಜನ ಮತವೂ ವಾದಕ್ಕೆ ಬಿದ್ದಿದೆ. ಇವನು ಜೈನನೆಂದೇ ಎಲ್ಲ ವಿದ್ವಾಂಸರ ಒಕ್ಕೊರಲಿನ ಅಭಿಪ್ರಾಯ. ಒಬ್ಬಿಬ್ಬರು ಇವನು ಜೈನನಲ್ಲ, ವೈದಿಕಮತಾನುಯಾಯಿ ಎಂದು ಸ್ಥಾಪಿಸಲು ಪ್ರಯತ್ನಿಸಿದ್ದಾರೆ. ಈ ವಿಚಾರದಲ್ಲಿ ಹೀಗೆಯೇ ಸರಿ ಎಂದು ನಿರ್ಣಯಿಸುವುದು ಸದ್ಯದ ಸ್ಥಿತಿಯಲ್ಲಿ ಕಷ್ಟ. ಮಲ್ಲಿಕಾರ್ಜುನನು ಜಿನಸ್ತುತಿ ಮಾಡಿರುವುದರಿಂದಲೂ, ಕೇಶಿರಾಜ ಜೈನ ಸಂಪ್ರದಾಯದಂತೆ ವಾಗ್ದೇವಿಯ ಸ್ತೋತ್ರ ಮಾಡಿರುವುದರಿಂದಲೂ, ಜೈನ ಕಲ್ಪನೆಯಂತೆ 'ಶಬ್ದ ದ್ರವ್ಯ, ಅದರ ವರ್ಣ ಶ್ವೇತ' ಎಂದಿರುವುದರಿಂದಲೂ, ಜಿನೇಂದ್ರ ಪುರಾಣಕರ್ತರ ಸಾಲಿನಲ್ಲಿ ಜನ್ನನು 'ಪುಷ್ಪಬಾಣ' (=ಸುಮನೋಬಾಣ)ನನ್ನು ಸೇರಿಸಿ ಹೊಗಳುವುದರಿಂದಲೂ ಕೇಶಿರಾಜ ಜೈನನೆಂದು ತಿಳಿಯುವುದು ಸೂಕ್ತವೆಂದು ಕಾಣುತ್ತದೆ.

**ಶಬ್ದಮಣಿದರ್ಪಣ:** "ಸೂರ್ಯೇಂದು ಮೇರುವಾರಿಧಿ ಪರ್ಯಂತಂ ಪರೆದು ನಿಲ್ಕೆ" ಎಂದು ಕೇಶಿರಾಜ ತನ್ನ 'ಶಬ್ದಮಣಿದರ್ಪಣ'ವನ್ನು ಹರಸಿ ಕನ್ನಡನಾಡಿನಲ್ಲಿ ಸಂಚಾರ ಮಾಡಲು ಬಿಟ್ಟಂದಿನಿಂದ ಕನ್ನಡ ಜನತೆ ಅದನ್ನು ಅಳಿಯಲೀಯದೆ ಅಕ್ಕರೆಯಿಂದ ಕಾಪಾಡಿಕೊಂಡು ಬಂದಿದೆ. ಈಗ ದೊರೆತಿರುವ ಮತ್ತು ಇನ್ನು

ಕಷ್ಟ. ವೃತ್ತಿಗಳಲ್ಲಿರುವ ರೂಪ ಮತ್ತು ಪ್ರಮಾಣಗಳ ವ್ಯತ್ಯಾಸಗಳನ್ನು ಗಮನಿಸಿದರೆ, ಲಿಂಗಣಾರಾಧ್ಯನಂತೆ ಇತರರೂ ತಮತಮಗೆ ತೋರಿದಂತೆ ವೃತ್ತಿಗಳನ್ನು ಬರೆದಿರಬಹುದೆಂದು ಸಂದೇಹ ಪಡಲು ಅವಕಾಶವಿದೆ.

ಆದರೆ, ಪೀಠಿಕಾಪ್ರಕರಣದ ಈ ಪದ್ಯದಲ್ಲಿ ಕೇಶಿರಾಜನ ವೃತ್ತಿಯನ್ನು ತಾನೇ ಬರೆದುದಾಗಿ ಹೇಳಿದ್ದಾನೆ:

ಪ್ರಾಸಚ್ಛಂದೋನ್ವಯ ವಿ–
ನ್ಯಾಸದಿನಂದಿಂತು ಶಬ್ದಮಿರ್ಕುಂ; ವೃತ್ತಿ–
ವ್ಯಾಸಂ ತದ್ವ್ಯಾಕುಲಮೆಂ–
ದಾ ಸೂತ್ರಕ್ಕರ್ಥ ವೃತ್ತಿ ವರ್ತಿಸೆ ಪೇಳ್ದೆಂ

"ಪ್ರಾಸಯೋಜನೆ, ಛಂದಸ್ಸಿನ ನಿರ್ಬಂಧ, ಅನ್ವಯಕ್ಕೆ ಸಂಬಂಧಪಟ್ಟ ತೊಡಕುಗಳು – ಈ ಕಾರಣಗಳಿಂದ ಶಬ್ದಗಳು ಎಲ್ಲೆಲ್ಲಿಯೋ ಇರುತ್ತವೆ. ಅವುಗಳನ್ನು ಅನುಸರಿಸಿದ ವೃತ್ತಿಯಲ್ಲಿ ಸಂದೇಹವುಂಟಾಗಬಹುದೆಂದು, ಸೂತ್ರಕ್ಕೆ ತಾತ್ಪರ್ಯದ ಅರ್ಥ ವಿಶದಪಡುವಂತೆ ಹೇಳಿದ್ದೇನೆ" ಎಂದು ಕೇಶಿರಾಜನೇ ಬರೆದಂತೆ ಈ ಪದ್ಯವನ್ನೂ ಯಾರೋ ಬರೆದು ಸೇರಿಸಿದ್ದಾರೆ ಎಂಬ ಅಭಿಪ್ರಾಯವೂ ಇದೆ. ಹಾಗೆ ತಿಳಿಯುವುದು ಸರಿಯಲ್ಲ. ಪೇಳ್ದೆಂ (ಅಥವಾ ಬರೆದೆ) ಎಂದು ಉತ್ತಮ ಪುರುಷ ಪ್ರಯೋಗವಿರುವ ಪದ್ಯ ಇನ್ನೊಬ್ಬನದಾಗಿದ್ದರೆ ಲಿಂಗಣಾರಾಧ್ಯನಂತೆ ಅವನು ತನ್ನ ಹೆಸರನ್ನು ಹೇಳಿಕೊಳ್ಳದೆ ಇರುತ್ತಿರಲಿಲ್ಲ. ನಾಗವರ್ಮನ ಶಬ್ದಸ್ಮೃತಿಯನ್ನೂ ಅವನದೇ ವೃತ್ತಿಯುಳ್ಳ ಭಾಷಾಭೂಷಣವನ್ನೂ ಅನುಸರಿಸಿ ವ್ಯಾಕರಣವನ್ನು ರಚಿಸಿರುವ ಕೇಶಿರಾಜನು ಅವನ ಮೇಲ್ಪಂಕ್ತಿಯನ್ನೇ ಅನುಸರಿಸಿ ವೃತ್ತಿಯನ್ನು ಬರೆದಿದ್ದಾನೆ ಎಂದು ತಿಳಿಯುವುದೇ ಸರಿ. ಇತರರ ಕೈವಾಡದಿಂದ ವೃತ್ತಿಯ ರೂಪದಲ್ಲಿ ವ್ಯತ್ಯಾಸಗಳಾಗಿರುವ ಸಾಧ್ಯತೆಯೇನೋ ಇದೆ.

ಕೇಶಿರಾಜನ ಪ್ರಯೋಗಗಳ ಬಗೆಗೂ ಇದೇ ಬಗೆಯ ಸಂದೇಹಗಳು ತಲೆದೋರುತ್ತವೆ. ಕೆಲವು ಪ್ರತಿಗಳಲ್ಲಿ ಪೂರ್ವಕವಿಗಳ ಉದಾಹರಣ ಪದ್ಯಗಳು ಭಾಗಶಃ ಮಾತ್ರ ದೊರಕುತ್ತವೆ. ಕೆಲವು ಪ್ರತಿಗಳಲ್ಲಿ ಅವೇ ಪದ್ಯಗಳು ಇಡಿಯಾಗಿ ಉದಾಹೃತವಾಗಿವೆ. ಉದಾಹರಿಸುವ ಪದ್ಯ ನೀರಸವಾಗಿದ್ದು ವ್ಯಾಕರಣ ಪ್ರಯೋಗ ದೃಷ್ಟಿಯಿಂದ ಮುಖ್ಯವಾಗಿದ್ದರೆ, ಸಂಬಂಧಪಟ್ಟ ಪದ್ಯಭಾಗವನ್ನು ಮಾತ್ರ ಕೇಶಿರಾಜ ತೆಗೆದುಕೊಂಡಿರಬಹುದು. ಪದ್ಯ ಸ್ವಾರಸ್ಯವಾಗಿದ್ದರೆ ಇಡಿಯ ಪದ್ಯವನ್ನೇ ಅವನು ಸೇರಿಸಿಕೊಂಡಿರುವ ಸಾಧ್ಯತೆಯೂ ಇದೆ. ಈ ವಿಷಯದಲ್ಲಿ, "ಕೇಶಿರಾಜನ

ಮದರಾಸು ವಿಶ್ವವಿದ್ಯಾನಿಲಯ, ಡಿ.ಎಲ್.ನರಸಿಂಹಾಚಾರ್ – ಈ ವಿದ್ವಾಂಸರ ಹಾಗೂ ವಿದ್ವತ್ ಸಂಸ್ಥೆಗಳ ಸಾರ್ಥಕ ಪರಿಶ್ರಮದಿಂದ ಶಬ್ದಮಣಿ ದರ್ಪಣ ಹಲವು ರೂಪಗಳಲ್ಲಿ ಹೊರ ಬಂದಿದೆ. ಆದರೂ, ಒಂದಕ್ಕೊಂದಕ್ಕೆ ಎಷ್ಟೋ ವ್ಯತ್ಯಾಸಗಳಿರುವುದರಿಂದ ಕೇಶಿರಾಜನ ಕೈಬರಹದ ಶಬ್ದಮಣಿ ದರ್ಪಣವನ್ನು ಬಹುಮಟ್ಟಿಗೆ ಪ್ರತಿಬಿಂಬಿಸುವ ಕೃತಿ ಸ್ವರೂಪವನ್ನು ನಿರ್ಣಯಿಸಲು ಇನ್ನೂ ಸಾಧ್ಯವಾಗಿಲ್ಲ.

ಶಬ್ದಮಣಿ ದರ್ಪಣದ ಕೆಲವು ಸಂಗ್ರಹಗಳೂ ಪ್ರಕಟವಾಗಿದೆ.

ಬರ್ನೆಲ್ ಎಂಬ ಪಾಶ್ಚಾತ್ಯ ವಿದ್ವಾಂಸನು ಶಬ್ದಮಣಿ ದರ್ಪಣದ ಮಹತ್ವವನ್ನು ಕುರಿತು ಹೇಳಿರುವ ಮಾತುಗಳು ಗಮನಾರ್ಹವಾಗಿವೆ: "ಶಬ್ದಮಣಿ ದರ್ಪಣದ ನಿಯಮಗಳು ಸ್ವತಂತ್ರ ಸಂಶೋಧನೆ ಹಾಗೂ ಪ್ರಸಿದ್ಧರಾದ ಬರಹಗಾರರ ಪ್ರಯೋಗಗಳ ಆಧಾರದ ಮೇಲೆ ರೂಪುಗೊಂಡಿವೆ; ಇದೇ ಅದರ ಮಹತ್ವದ ಮತ್ತು ನಿಜವಾದ ಗುಣ; ಈ ರೀತಿಯಲ್ಲಿ ಅದು ತಮಿಳು ಮತ್ತು ತೆಲುಗು (ವ್ಯಾಕರಣ) ಗ್ರಂಥಗಳಿಗಿಂತ* ಎಷ್ಟೋ ಮುಂದುವರಿದೆದೆ; ಅವು ವ್ಯರ್ಥವಾದ ಶುಷ್ಕಪಾಂಡಿತ್ಯದ ತರ್ಕವಿತರ್ಕಗಳಲ್ಲಿ ತೊಡಗಿವೆ.[೬]

ಶಬ್ದಮಣಿದರ್ಪಣದ ಸೂತ್ರ, ವೃತ್ತಿ ಮತ್ತು ಪ್ರಯೋಗಗಳ ವಿಷಯವಾಗಿ ನಾಲ್ಕು ಮಾತು ಹೇಳಬಹುದು. ಸೂತ್ರಗಳ ಪಾಠ, ಅನುಕ್ರಮ ಸಂಖ್ಯೆಗಳ ವಿಷಯದಲ್ಲಿ ಪ್ರತಿಯಿಂದ ಪ್ರತಿಗೆ ಅಲ್ಪಸ್ವಲ್ಪ ವ್ಯತ್ಯಾಸಗಳಿದ್ದರೂ, ಒಟ್ಟಿನ ಮೇಲೆ ಸೂತ್ರಗಳು ಕೇಶಿರಾಜನು ರಚಿಸಿರುವ ರೂಪದಲ್ಲಿ ಉಳಿದುಕೊಂಡು ಬಂದಿವೆ. ಹಸ್ತಪ್ರತಿಗಳಲ್ಲಿ ಪರಸ್ಪರ ಹೋಲಿಕೆಯಿಂದ ಈ ಅಂಶ ವ್ಯಕ್ತಪಡುತ್ತದೆ. ಆದರೆ, ವೃತ್ತಿಗಳಲ್ಲಿ ವ್ಯತ್ಯಾಸಗಳು ಕಂಡು ಬಂದಿವೆ; ಕೆಲವು ಪ್ರತಿಗಳಲ್ಲಿ ಇದ್ದಂತೆ ಇನ್ನು ಕೆಲವಲ್ಲಿ ಇಲ್ಲ; ಕೆಲವು ಪ್ರತಿಗಳಲ್ಲಿ ಸಂಕ್ಷೇಪವಾಗಿದ್ದು, ಕೆಲವಲ್ಲಿ ವಿಸ್ತಾರವಾಗಿವೆ. ಕೇಶಿರಾಜ ಬರೆದದ್ದು ಯಾವುದಿರಬಹುದು ಎಂದು ಖಂಡಿತವಾಗಿ ಹೇಳುವುದು

---

* ತೊಲ್‌ಕಾಪ್ಪಿಯರ್ ಅವರ'ತೊಲ್‌ಕಾಪ್ಪಿಯಮ್' ಎಂಬುದು ಅತ್ಯಂತ ಪ್ರಾಚೀನವಾದ ತಮಿಳು ವ್ಯಾಕರಣ (ಕ್ರಿ.ಶ.೧–೨ ಶತಮಾನ). ಎಲ್ಲ ವ್ಯಾಕರಣಗಳಿಗಿಂತ ಹೆಚ್ಚು ಪ್ರಚುರವಾಗಿರುವ ವ್ಯಾಕರಣ 'ನನ್ನೂಲ್' (ಕ್ರಿ.ಶ.೧೨ನೆಯ ಶತಮಾನ); ಇದರ ಕರ್ತೃ ಭವನಂದಿ ಎಂಬ ಜೈನ. ಅತ್ಯಂತ ಪ್ರಾಚೀನ ತೆಲುಗು ವ್ಯಾಕರಣ 'ಆಂಧ್ರ ಶಬ್ದ ಚಿಂತಾಮಣಿ'; ಇದರ ಕರ್ತೃ ನನ್ನಯ್ಯಭಟ್ಟ (ಕ್ರಿ.ಶ.೧೧ ನೆಯ ಶತಮಾನ). ಸಂಸ್ಕೃತದಲ್ಲಿರುವ ಈ ವ್ಯಾಕರಣಕ್ಕೆ ಸಂಸ್ಕೃತದಲ್ಲೂ ತೆಲುಗಿನಲ್ಲೂ ಅನೇಕ ವ್ಯಾಖ್ಯಾನಗಳು ಹುಟ್ಟಿವೆ. ೧೩ನೆಯ ಶತಮಾನದಲ್ಲಿ ಕೇತನನು 'ಆಂಧ್ರಭಾಷಾ ಭೂಷಣ'ವನ್ನೂ ಅಥರ್ವಣಾಚಾರ್ಯ ಎಂಬ ಜೈನನು 'ತ್ರಿಲಿಂಗಶಬ್ದಾನುಶಾಸನ'ವನ್ನೂ ರಚಿಸಿದ್ದಾರೆ.

ಗ್ರಂಥ ಭಂಡಾರವು ಮಗನ ವ್ಯಾಕರಣ ರಚನೆಗೆ ಒದಗಿ ಬಂದಿರುವುದರಲ್ಲಿ ಸಂದೇಹವಿಲ್ಲ.

ಪ್ರಯೋಗಗಳ ಸ್ವರೂಪವನ್ನು ಕೆಲವು ಉದಾಹರಣೆಗಳ ಮೂಲಕ ಪರಿಚಯ ಮಾಡಿಕೊಳ್ಳಬಹುದು:

(i) ಪದ್ಯ ಮತ್ತು ಪದ್ಯಭಾಗ ಉದಾಹೃತವಾಗಿರುವುದು:
ಪಡೆದಂ ರಜೋಧಿಕಂ ಬಿದಿ
ಪೆಡೆವಣಿಯಂ ಫಣಿಯಂ [ಅಮೃತರಸಮಂ ವಿಷಮಂ
ಕಡಲಂ ಸುಳಿಯಂ, ಮಳೆಯಂ
ಸಿಡಿಲಂ, ಪಡೆವಂತೆ ಸುಜನರಂ ದುರ್ಜನರಂ]

ಧಾತುವಿಗೆ ಮೂರು ಪುರುಷಗಳಲ್ಲಿಯೂ ಭೂತಕಾಲದಲ್ಲಿ ಕಾಲಸೂಚಕ 'ದ' ಪ್ರತ್ಯಯವು ಪುರುಷವಾಚಕ ವಿಭಕ್ತಿಯ ಮೊದಲಲ್ಲಿ ಬರುತ್ತದೆ ಎಂಬ ನಿಯಮಕ್ಕೆ ಎಲ್ಲ ಪ್ರತಿಗಳಲ್ಲಿಯೂ ಪದ್ಯ ಭಾಗ ಮಾತ್ರ ಉದಾಹೃತವಾಗಿದೆ. ಉಸ್ಮಾನಿಯ ವಿಶ್ವವಿದ್ಯಾನಿಲಯದ 'ಹೊಸ ಪ್ರತಿ' ಯಲ್ಲಿ ಇಡಿಯ ಪದ್ಯವಿದೆ; ಉದಾಹರಣೆಗೆ ಇದು ಅನಗತ್ಯವಾದರೂ, ಇಡಿಯ ಪದ್ಯದಿಂದ ಸೃಷ್ಟಿಯ ನಿಯಮ ಮನಮುಟ್ಟುತ್ತದೆ. ಗ್ರಂಥದ ಸ್ವಾರಸ್ಯ ಹೆಚ್ಚುತ್ತದೆ. ಇದೇ 'ಹೊಸ ಪ್ರತಿ'ಯಲ್ಲಿ 'ಮರುತ್ತರಂಗಿಣಿಯನೊಲ್ದಾಲಿಂಗನಂ ಮಾಡುವಂ' ಎಂಬ ಉದಾಹರಣ ವಾಕ್ಯದ ಕೆಳಗೆ 'ರಾಮಚರಿತೆ' ಎಂಬ ಗ್ರಂಥದ ಹೆಸರಿದೆ. ಇದು ನಾಗಚಂದ್ರನ ರಾಮಚಂದ್ರಚರಿತ ಪುರಾಣದ್ದಲ್ಲವಾದ್ದರಿಂದ, ಬೇರೊಂದು ರಾಮಾಯಣದ್ದು ಆಗಿರಬಹುದು; ಇನ್ನೂ ದೊರಕಿಲ್ಲದ ಶ್ರೀವಿಜಯನ 'ರಘುವಂಶ ಮಹಾಪುರಾಣ'ದ ಪದ್ಯಭಾಗವಿದ್ದರೂ ಇರಬಹುದು.

(ii) ವಿಧ್ಯರ್ಥದಲ್ಲಿ 'ಇಂ' ಎಂಬ ಪ್ರತ್ಯಯಕ್ಕೆ ಇದೇ ಹೊಸ ಪ್ರತಿಯಲ್ಲಿ ಈ ಕೆಳಗಿನ ಪದ್ಯ ಹೆಚ್ಚಿನದಾಗಿ ಉದಾಹೃತವಾಗಿದೆ. (ಈ ಪದ್ಯವೂ ರಾಮಾಯಣ ಕಥೆಗೇ ಸಂಬಂಧಪಟ್ಟಿರುವ ಹಾಗಿದೆ. ಇದು ಪಂಪ ರಾಮಾಯಣದಲ್ಲಿ ಇಲ್ಲ. ಮೇಲೆ ಹೆಸರಿಸಿದ 'ರಾಮಚರಿತೆ'ಯದೇ ಆಗಿರಬಹುದು.):

ಗಗನಾಧ್ವರ್ ಸರಣಾಗಿಂ ಆಗಿಂ; ಅಮರರ್ ಒಂದಾಗಿಂ ಆಗಿಂ; ದಿಶಾ–
ಳಿಗಧೀಶರ್ ನೆರೆದೊಡ್ಡಿಂ ಒಡ್ಡಿಂ; ಉರಗರ್ ಬಂದೆಯ್ದಿಂ ಎಯ್ದಿಂ; ಮನ–
ಸ್ವಿಗಳೀದೈತ್ಯನಂ ಇಕ್ಕಿಂ ಇಕ್ಕಿಂ; ಅದಟರ್ ಪೊಣ್ದಣ್ಮಿಂ ಅಣ್ಮಿಂ; ಯಶೋ
ರ್ಥಿಗಳೆನ್ನಂ ನೆಲೆಗುಯ್ಯಿಂ ಉಯ್ಯಿಂ ಎನುತುಂ ತನ್ವಂಗಿ ಪುಯ್ಯಲ್ಪಿದಳ್.[೭]

ಪ್ರಯೋಗ ಇಡಿ ಪದ್ಯ ರೂಪವಾಗಿತ್ತೆ ಅಥವಾ ಪದ್ಯ ಭಾಗ ಮಾತ್ರವಾಗಿತ್ತೆ ಎಂಬ ಪ್ರಶ್ನೆಗೆ 'ಇದಮಿತ್ಥಂ' (ಇದು ಹೀಗೆಯೇ) ಎಂದು ಉತ್ತರ ಹೇಳುವ ಹಾಗಿಲ್ಲ" ಎಂಬ ಡಿ.ಎಲ್.ನರಸಿಂಹಾಚಾರ್ಯರ ಅಭಿಪ್ರಾಯವನ್ನು ಒಪ್ಪಬೇಕಾಗುತ್ತದೆ.

ಇದು ಹೇಗಿದ್ದರೂ, ಅವನ ಪ್ರಯೋಗ ಪ್ರಪಂಚವನ್ನು ಒಟ್ಟಿನಲ್ಲಿ ಪರಿಶೀಲಿಸಿದರೆ ಅವನ ಸೂಕ್ಷ್ಮವಾದ ಶಾಸ್ತ್ರದೃಷ್ಟಿ, ವ್ಯಾಕರಣ ಲಕ್ಷಣ ಜ್ಞಾನ, ಕಾವ್ಯಪರಿಚಯ ಹಾಗೂ ಸ್ಮರಣ ಶಕ್ತಿ, ಕಾವ್ಯಾಭಿರುಚಿ, ಸಂಗ್ರಹ ಕೌಶಲ, ಅಪಾರ ಪರಿಶ್ರಮ – ಇವು ನಮಗೆ ಗೋಚರವಾಗುತ್ತವೆ. ಪ್ರಯೋಗಗಳ ಸಂಖ್ಯೆಯೇ ಸುಮಾರು ೭೩೦.* ಅನೇಕ ಪ್ರಯೋಗಗಳು ನೀತಿ ಪರವಾದ ಕವಿಸೂಕ್ತಿಗಳಾಗಿದ್ದು, ನಾಣ್ಣುಡಿಗಳಂತಿವೆ. ವಿಷಯ ದೃಷ್ಟಿಯಿಂದ ಪ್ರಯೋಗಗಳಲ್ಲಿ ವೈವಿಧ್ಯವಿದೆ. ಯಾವ ಪೂರ್ವ ಕವಿಗಳ ಕೃತಿಗಳಿಂದ ಪ್ರಯೋಗಗಳನ್ನು ಸಂಗ್ರಹಿಸಿದೆ ಎಂಬುದನ್ನು ಕೇಶಿರಾಜನು ಈ ಕೆಳಗಿನ ಪದ್ಯಗಳಲ್ಲಿ ತಿಳಿಸಿದ್ದಾನೆ:

ಗಜಗನ, ಗುಣನಂದಿಯ, ಮನ–
ಸಿಜನ, ಅಸಗನ, ಚಂದ್ರಭಟ್ಟ ಗುಣವರ್ಮ ಶ್ರೀ–
ವಿಜಯರ, ಪೊನ್ನನ, ಪಂಪನ,
ಸುಜನೋತ್ತಂಸನ ಸುಮಾರ್ಗಮಿದರೊಳೆ ಲಕ್ಷ್ಯಂ

ಈ ಕವಿಗಳಲ್ಲದೆ, ರನ್ನ, ನಾಗಚಂದ್ರ, ನಾಗವರ್ಮ, ನೇಮಿಚಂದ್ರ, ಬ್ರಹ್ಮಶಿವ, ಹಂಸರಾಜ ಮುಂತಾದ ಕವಿಗಳಿಂದಲೂ ಕೇಶಿರಾಜನು ಪ್ರಯೋಗಗಳನ್ನು ಆರಿಸಿಕೊಂಡಿದ್ದಾನೆ. ಅಲ್ಲದೆ, ಕವಿಗಳ ಹೆಸರು ಗೊತ್ತಿಲ್ಲದ ಅನೇಕ ಪ್ರಯೋಗಗಳೂ ಬೇರೆ ಬೇರೆ ಶಾಸ್ತ್ರಗ್ರಂಥಗಳಿಂದ ಆಯ್ದ ವಾಕ್ಯಗಳೂ ದೊರಕುತ್ತವೆ. ಒಟ್ಟಿನಲ್ಲಿ ತನಗಿಂತ ಹಿಂದಿನ ಮತ್ತು (ಬಹುಶಃ) ತನ್ನ ಕಾಲದ ಸಾಹಿತ್ಯದ ಮತ್ತು ಗ್ರಂಥಸ್ಥ ಭಾಷೆಯ ಸ್ವರೂಪವನ್ನು ಕೇಶಿರಾಜನು ಪ್ರಯೋಗಗಳ ಮೂಲಕ ಪರಿಚಯ ಮಾಡಿಕೊಟ್ಟು, ಶಾಸ್ತ್ರ ಗ್ರಂಥಕ್ಕೆ ಕಾವ್ಯದ ಸವಿಯನ್ನೂ ಬೆರೆಸಿದ್ದಾನೆ. ಮಲ್ಲಿಕಾರ್ಜುನನು 'ಸೂಕ್ತಿಸುಧಾರ್ಣವ' ಸಂಕಲನಕ್ಕಾಗಿ ಸಂಗ್ರಹಿಸಿದ್ದ ಅಮೂಲ್ಯ

---

* ಈ ಸಂಖ್ಯೆ ಡಿ.ಎಲ್.ಎನ್. ಸಂಪಾದಿತ ಮುದ್ರಣದಲ್ಲಿ ಎಣಿಕೆ ಮಾಡಿದ್ದು. 'ಶಬ್ದಮಣಿ ದರ್ಪಣದಲ್ಲಿ ಸುಮಾರು ೮೫೦ ಪ್ರಯೋಗ ವಾಕ್ಯಗಳನ್ನು ಉದಾಹರಿಸಿದೆ' ಎಂದು ಮದರಾಸು ವಿಶ್ವವಿದ್ಯಾನಿಲಯದ ಮುದ್ರಣದ ಅವತರಣಿಕೆ ಬರೆದಿರುವವರು ತಿಳಿಸುತ್ತಾರೆ.

ಕೆಟ್ಟ ಕವಿತೆ ಮರದ ಮಣೆಯನ್ನು ಬಡಿದ ಹಾಗೆ.]

"ಕಾಮನಗರಟಿಗೆ ವರ್ಪಂತೆ ಸುತ್ತಿ ವರ್ಪುವು ಗಿಳಿಗಳ್"

ಗುರವಟಿಗೆ+ವರು (=ಬರು)=ಗಸ್ತುತಿರುಗು, ಕಾವಲಿರು, ಪಹರೆ ಇರು.]

"ಪೊನ್ನುಳ್ಳವನೆ ಕುಲೀನಂ"

"ಬಡವರ ಪಿತರಂತೆ ಮರುಗುತ್ತಿರ್ಪಂ"

[ಬಡವರು ಶ್ರಾದ್ಧ ಮಾಡಲು ಹಣವಿಲ್ಲದೆ ಅದನ್ನು ಮಾಡದೆ ಹೋದರೆ ಅವನ ಮೃತರಾದ ಪಿತೃಗಳು ಸದ್ಗತಿ ಕಾಣದೆ ಗೋಳಾಡುವಂತೆ ಗೋಳಾಡುತ್ತಿರುವನು.]

"ಇನಿಯವು ವಿಷಯ ಸುಖಂ ನಂಜಿನ ಸವಿವೊಲ್".

[ವಿಷ ಸಿಹಿಯಾಗಿದ್ದರೂ ಕೊಲ್ಲುವಂತೆ ಇಂದ್ರಿಯ ಸುಖ ಹಿತಕರವಾಗಿದ್ದರೂ ಪರಿಣಾಮದಲ್ಲಿ ದುಃಖಕರ.]

"ಅವರಿವರುವರಳವೆ (=ಅವರ+ಇವರ+ಉವರ+ಅಳವೆ) ಕಾವ್ಯ ವಿದ್ಯೆಯೊಳ್?

[ಕವಿತಾರಚನೆಯ ವಿದ್ಯೆ ಸಾಮಾನ್ಯರಿಂದ ಸಾಧ್ಯವಿಲ್ಲ.]

"ಕವಿಗೆ ಕೇಡಿಲ್ಲೆಂದುಂ"[ಕೇಡು=ನಾಶ, ಅವಸಾನ]

"ಕವಿಗೆ ಕವಿ ಮುನಿವಂ"[ಮುನಿ=ಕೋಪಿಸು]

"ಪಾಪಕ್ಕಂಜುವಂ ತಕ್ಕಂ"[ತಕ್ಕಂ=ಯೋಗ್ಯ, ಮಾನವಂತ]

"ಬಿರುದರ್ಗೆಬಿರುದರ್ ಸೆಣಸುವರ್."[ಸೆಣಸು=ಹುರುಡಿಸು, ಪೈಪೋಟಿಮಾಡು]

"ಪ್ರಾಯಂ ಕೂಸಾದೊಡಭಿಪ್ರಾಯಂ ಕೂಸಕ್ಕುಮೆ?"

[ವಯಸ್ಸಿನಲ್ಲಿ ಚಿಕ್ಕವರಾದವರು ತಿಳಿವಳಿಕೆಯುಳ್ಳವರಾದರೆ ಅವರು ಕೊಡುವ ಅಭಿಪ್ರಾಯ ಬೆಲೆಯುಳ್ಳದ್ದಾಗಿರಬಹುದು ಎಂದು ಭಾವ.]

**ಶಬ್ದಮಣಿದರ್ಪಣದ ವೈಶಿಷ್ಟ್ಯಗಳು**

ತನ್ನ ವ್ಯಾಕರಣದಲ್ಲಿ ನಿರೂಪಿಸಿರುವ ವಿಶೇಷ ವಿಚಾರಗಳನ್ನು ಕೇಶಿರಾಜನೇ ಹೀಗೆ ಒಕ್ಕಣಿಸಿದ್ದಾನೆ:

'ಗಮಕ ಸಮಾಸ'ದಿಂ 'ಱಟಿ–ಕುಳ–ಕ್ಷಳಂ'ದಿಂ, 'ಶ್ರುತಿ ಸಹ್ಯ ಸಂಧಿ'ಯಿಂ
ಸಮುಚಿತವಾಗಿ ಬರ್ಪ 'ಸತಿಸಪ್ತಮಿ'ಯಿಂ, 'ಸಮಸಂಸ್ಕೃತೋಕ್ತಿ'ಯಿಂ,
'ವ–ಮ–ಹ–ಪ–ಭೇದ'ದಿಂ, 'ವಿರಹಿತಾವ್ಯಯ ಸಂಸ್ಕೃತಲಿಂಗ'ದಿಂ ಪದೋ–

[ಗಗನಾಧ್ವರ್=ಆಕಾಶ ಮಾರ್ಗದಲ್ಲಿ ಹೋಗುವವರು, ಖೇಚರರು; ಅಮರರ್=ದೇವತೆಗಳು. ದಿಶಾಳಿಗಧೀಶರ್=ದಿಕ್ಪಾಲರು. ನೆರೆದೊಡ್ಡಿಂ=ಗುಂಪಾಗಿ ಎದುರಿಸಿ. ಉರಗರ್=(ಪಾತಾಳದ) ನಾಗರು. ಮನಸ್ವಿ=ವಿವೇಕಿಗಳು. ದೈತ್ಯ=ರಾಕ್ಷಸ. ಇಕ್ಕಿಂ=ಕೊಲ್ಲಿರಿ. ಅದಟರ್=ಪರಾಕ್ರಮಿಗಳು. ಪೂಣ್ದಣ್ಮಿಂ=(ಪೊಣ್ದು+ಅಣ್ಮಿ) ಪ್ರತಿಜ್ಞೆ ಮಾಡಿ, ಬಲವನ್ನು ತೋರಿಸಿರಿ. ಯಶೋರ್ಥಿ=ಕೀರ್ತಿಯನ್ನು ಬಯಸುವವರು. ನೆಲೆಗೆ=(ನನ್ನ) ಸ್ಥಳಕ್ಕೆ. ಉಯ್ಯಿಂ=ಕರೆದುಕೊಂಡು ಹೋಗಿ. ತನ್ವಂಗಿ=ತೆಳ್ಳನೆಯ ದೇಹವುಳ್ಳವನು. ಪುಯ್ಯಲ್ವಿದಳ್=ಹುಯಲಿಟ್ಟಳು.]

(iii) ಈ ಕೆಳಗಿನ ಎರಡು ಉದಾಹರಣೆಗಳೂ ರಾಮಾಯಣ ಕಥೆಗೇ ಸಂಬಂಧ ಪಟ್ಟಿವೆ:

"ಪೇರಿರ್ದ್ದಿರ್ಪತ್ತು ತೋಳುಂ ದಶಮುಖಕುಹರಾಟೋಪಮುಂ...."

ಸೂತ್ರ ೭೬, ಉದಾ. ೬ (ಡಿ.ಎಲ್.ಎನ್. ಪರಿಷ್ಕರಣ)

ನಿನಗೆನಗೆ ತನಗೆ ತೀರ್ಗುಮೆ

ಹನುಮಂತನ ಶಕ್ತಿ ಸಾಹಸಂ ರಿಪುವಿಜಯಂ

ಸೂ.೧೫೭, ಉದಾ. ೨ (ಡಿ.ಎಲ್.ಎನ್. ಪರಿಷ್ಕರಣ)

(iv) ಶಬ್ದಮಣಿ ದರ್ಪಣದಲ್ಲಿ ಮಹಾಭಾರತ ಕಥೆಗೆ ಸಂಬಂಧಪಟ್ಟಂತೆಯೇ ಸುಮಾರು ೧೦೦ ಪ್ರಯೋಗಗಳಿವೆ ಎಂಬುದು ಆಶ್ಚರ್ಯದ ಸಂಗತಿ. ಇನ್ನೂ ಆಶ್ಚರ್ಯದ ಸಂಗತಿ ಎಂದರೆ, ಇವುಗಳಲ್ಲಿ ೨೫ಕ್ಕೆ ಮಾತ್ರ ಪಂಪ ಭಾರತದಲ್ಲೂ ರನ್ನನ ಗದಾಯುದ್ಧದಲ್ಲೂ ಆಕರಗಳು ದೊರೆಯುತ್ತವೆ. ಈ "೨೫ ಪ್ರಯೋಗಗಳನ್ನು ತೆಗೆದು ಹಾಕಿದರೆ ಇನ್ನೂ ೭೫ ಪ್ರಯೋಗಗಳು ಉಳಿಯುತ್ತವೆ. ಈ ೭೫ ಪ್ರಯೋಗಗಳಿಗೆ ಉಪಲಬ್ಧವಿದ್ದ ಕನ್ನಡದ ಯಾವ ಭಾರತದಲ್ಲಿಯೂ ಆಕರ ಸಿಗುವುದಿಲ್ಲ. ಕೇಶಿರಾಜನು ಇವುಗಳನ್ನು ಯಾವುದೋ ಅನುಪಲಬ್ದ ಭಾರತದಿಂದ ಅಥವಾ ಭಾರತಗಳಿಂದ ಸ್ವೀಕರಿಸಿರಬೇಕು.[೮]

(v) ಇನ್ನು ಕೆಲವು ಸ್ವಾರಸ್ಯಕರವಾದ ಉದಾಹರಣೆಗಳು:

ಮರವಣೆಗಂ ಬೀಣೆಗಂ ಅಂ–

ತರಮಾವುದೊ; ದೋಷರಹಿತ ಮೃದುಲಲಿತ ಪದ

ಸ್ಫುರಿತ ಸರಸೋಕ್ತಿಗಂ ನಿ–

ಷ್ಠುರಕುಕವಿ ಕಟೂಕ್ತಿಗಳ್ಗಮೇನಂತರಮೋ.

[ಸುಶ್ರಾವ್ಯವಾದ ಒಳ್ಳೆಯ ಕವಿತಗೆ ವೀಣೆಯ ಹಾಗೆ; ಕುಕವಿಯ ಕರ್ಕಶವಾದ

ಉಳಿದುಕೊಂಡು ಬಂದಿದೆ. ಕೇಶಿರಾಜನ ಕಾಲಕ್ಕೂ ಹಿಂದೆಯೇ ಇದರ ಉಚ್ಚಾರಣೆ ಸಡಿಲವಾಗುತ್ತ ಬಂದು, ಕೆಲವು ಶಬ್ದಗಳಲ್ಲಿ 'ಳ'ಕಾರವಾಗಿಯೂ ಇನ್ನು ಕೆಲವುಗಳಲ್ಲಿ 'ಱ' (ಹಳಗನ್ನಡ 'ರ') ಕಾರವಾಗಿಯೂ, ಮತ್ತೂ ಕೆಲವಲ್ಲಿ 'ರ'ಕಾರವಾಗಿಯೂ ಮಾರ್ಪಾಡು ಹೊಂದುತ್ತ ಬಂತು. (ಉದಾ, ಪವೞ–ಪವಳ–ಹವಳ, ಗೞ್ದೆ–ಗರ್ದೆ–ಗದ್ದೆ). 'ಕುಳ' ಎಂದರೆ ಕನ್ನಡದಲ್ಲಿ ಸಹಜವಾಗಿಯೇ ಉಚ್ಚಾರವಾಗುವ 'ಳ'ಕಾರ. (ಪೊಳ್–ಪೊಳ್ಳು–ಹೊಳ್ಳು; ಕಳ್–ಕಳವು, ಮುಂತಾದುವು). 'ಕ್ಷಳ' ಎಂದರೆ ಸಂಸ್ಕೃತ 'ಲ'ಕಾರವನ್ನು ಕನ್ನಡದಲ್ಲಿ 'ಳ'ಕಾರವಾಗಿ ಉಚ್ಚರಿಸುವುದು. (ಉದಾ: ಉತ್ಪಲಂ–ಉತ್ಪಳಂ; ಜಲಂ–ಜಳಂ; ಫಲಂ–ಫಳಂ, ಇತ್ಯಾದಿ) ಈ ಮೂರು ಅಕ್ಷರಗಳ ಉಚ್ಚಾರಣೆಯಲ್ಲಿಯೂ ಭೇದಗಳಿದ್ದುದರಿಂದ ಪ್ರಾಚೀನ ಜೈನ ಕವಿಗಳು ಉಚ್ಚಾರವಾದಂತೆಯೇ ಬರಹದಲ್ಲೂ ಲಿಪಿ ಭೇದಗಳನ್ನು ಕಾಣಿಸಿ, ಪದ್ಯದ ಪ್ರಾಸಸ್ಥಾನದಲ್ಲಿ ಅವುಗಳನ್ನು ಬೆರಕೆ ಮಾಡುತ್ತಿರಲಿಲ್ಲ. ಆದರೆ, ಪಂಪ ಪೊನ್ನ ರನ್ನರತರುವಾಯ ಪ್ರೌಢ ಜೈನ ಕಾವ್ಯಗಳಲ್ಲಿ ಇಂತಹ ಬೆರಕೆಗೆ ಪ್ರಾರಂಭವಾಯಿತು. ಜನಸಮುದಾಯದಲ್ಲಿ 'ರಳ' ಮತ್ತು 'ಲ'ಕಾರಗಳ ಉಚ್ಚಾರಣೆಯಲ್ಲಿಯೇ ಮಾರ್ಪಾಡಾಗುತ್ತಿದ್ದುದೇ ಇದಕ್ಕೆ ಕಾರಣ. ಹೀಗಾಗಿ ಈ ಮೂರಕ್ಷರಗಳ ಕವಿ ಪ್ರಯೋಗಗಳಲ್ಲಿ ಅವ್ಯವಸ್ಥೆಯೂ ದೋಷಗಳೂ ಕಾಣಿಸಿಕೊಳ್ಳತೊಡಗಿದ್ದವು. ಇದನ್ನು ಕಂಡೇ, ಕ್ರಾಂತಿ ಕವಿಯಾದ ಹರಿಹರನು ತನ್ನ 'ಗಿರಿಜಾ ಕಲ್ಯಾಣ'ದಲ್ಲಿ:

> ನೋಡುವೊಡೆ ಒಂದಕ್ಕರಮದು;
> ಮಾಡುವೊಡೆ ಉಚ್ಚರಣೆಗೆ ಅರಿದು; ಮೂರುಂ ತೆರನಂ
> ಕೂಡೆ ಕವಿತತಿ ವಿಚಾರಿಸ–
> ಬೇಡ ಅದರಿಂ ಱೞ–ಕುಳ–ಕ್ಷಳಂಗಳನಿದರೊಳ್.

[ವಿಚಾರ ಮಾಡಿ ನೋಡಿದರೆ (ರಳ–ಕುಳ–ಕ್ಷುಳ ಎಂಬ ಮೂರು ಅಕ್ಷರಗಳೂ) ನಿಜವಾಗಿ ಒಂದೇ ಅಕ್ಷರ; ಅದನ್ನು ಮೂರು ರೀತಿಯಲ್ಲಿ ಉಚ್ಚಾರಣೆ ಮಾಡುವುದು ಅಸಾಧ್ಯ (=ಅರಿದು). ಆದ್ದರಿಂದ ಮೂರು ತೆರನಾಗಿರುವ ಈ ಒಂದೇ ಅಕ್ಷರದ ಭೇದರೂಪಗಳನ್ನು ಕವಿಗಳಾದವರು ಈ ಕಾವ್ಯದಲ್ಲಿ ವಿಚಾರಕ್ಕೆ ತೆಗೆದುಕೊಳ್ಳಬೇಡಿ]. –ಎಂದು ಘೋಷಿಸಿ, ಸಂಪ್ರದಾಯದ ಕಟ್ಟನ್ನು ಮುರಿದನು. ಎಲ್ಲ ಕಾಲಗಳಲ್ಲಿಯೂ ತಮ್ಮ ಕಾಲದ ಭಾಷೆಯಲ್ಲಿನ ಅಶುದ್ಧ ಪ್ರಯೋಗಗಳನ್ನು

ತ್ತಮ 'ಶಿಥಿಲತ್ವ'ದಿಂ, 'ಯತಿವಿಲಂಘನ'ದಿಂದರಿದಲ್ತೆ ಕನ್ನಡಂ.*

[ಶ್ರುತಿಸಹ್ಯ=ಕೇಳುವುದಕ್ಕೆ ಹಿತವಾದ. ಸಮುಚಿತವಾಗಿ=ಉಚಿತವಾದ ರೀತಿಯಲ್ಲಿ. ವಿರಹಿತಾವ್ಯಯ=ಸಮಾಸವಾಗದೆ ಬೇರೆಯಾಗಿರುವ ಅವ್ಯಯ. ಶಿಥಿಲತ್ವ=ಶಿಥಿಲದ್ವಿತ್ವ. ಯತಿ ವಿಲಂಘನ=ಯತಿಯನ್ನು ಮೀರುವುದು. ಅರಿದು=ಅಪೂರ್ವ.]

ಈಪದ್ಯವನ್ನು ಕೇಶಿರಾಜನೇ ಬರೆದಿರುವನೇ, ಇಲ್ಲವೆ ಈಚಿನವರು ಬರೆದು ಸೇರಿಸಿರುವರೇ ಎಂಬ ಸಂದೇಹದ ಪ್ರಶ್ನೆಗೆ ಅವಕಾಶವಿದೆ.

ಈ ವಿಚಾರದಲ್ಲಿ ನಿರ್ಧಾರವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ. 'ಸಮಾಪ್ತಿ ವಾಕ್ಯಂಗಳ್' ಎಂಬ ಪದ್ಯಮಾಲೆಯಲ್ಲಿ ತನ್ನ ವಿಷಯವಾಗಿ ಕೇಶಿರಾಜನು ಹೆಮ್ಮೆಯ ಮಾತುಗಳನ್ನು ಹೇಳಿಕೊಂಡಿರುವುದರಿಂದ, ಕೃತಿಯ ವೈಶಿಷ್ಟ್ಯವನ್ನು ತಿಳಿಸುವ ಈ ಪದ್ಯವನ್ನೂ ಅವನೇ ಬರೆದಿರುವ ಸಂಭವವೇ ಹೆಚ್ಚಾಗಿದೆ.

**೧. ಗಮಕ ಸಮಾಸ:** ನಾಗವರ್ಮನು ತನ್ನ ವ್ಯಾಕರಣಗಳಲ್ಲಿ ಈ ಸಮಾಸದ ವಿಚಾರವನ್ನು ಎತ್ತಿಲ್ಲ. ಸಂಸ್ಕೃತ ವ್ಯಾಕರಣಗಳಲ್ಲಿ ಈ ಸಮಾಸಕ್ಕೆ ಅವಕಾಶವೇ ಇಲ್ಲ. ಕನ್ನಡ ಭಾಷೆಯ ಪ್ರಯೋಗಗಳನ್ನು ಗಮನಿಸಿ, ಇದನ್ನು ಮೊತ್ತ ಮೊದಲಿಗೆ ಗುರುತಿಸಿ ವಿವರಿಸಲು ಪ್ರಯತ್ನಪಟ್ಟಿರುವುದು ನಿಜವಾಗಿ ಮೆಚ್ಚತಕ್ಕ ಸಂಗತಿ. ಕೆಲವು ಗಮಕ ಸಮಾಸದ ಉದಾಹರಣೆಗಳಲ್ಲಿ ಕನ್ನಡ–ಸಂಸ್ಕೃತ ಪದಗಳಿಗೆ ಸಮಾಸವಾಗುವುದರಿಂದ, ಅಲ್ಲಿ 'ಅರಿಸಮಾಸ'ದ ದೋಷವಿಲ್ಲ ಎಂದು ಕೇಶಿರಾಜ ಹೇಳಬೇಕಾಯಿತು. ಇದು ಕರ್ಮಧಾರಯ ಸಮಾಸದ ಒಂದು ಪ್ರಭೇದವೆಂದೂ ಹೇಳಿದ್ದಾನೆ. ಗಮಕಸಮಾಸ ವಿಚಾರ ಇವನ ಸ್ವತಂತ್ರವಾದ ವಿಚಾರಶಕ್ತಿಗೆ ಉತ್ತಮವಾದ ಉದಾಹರಣೆ. (ಗಮಕ ಸಮಾಸದ ಕೆಲವು ಉದಾಹರಣೆಗಳು: ಕಿರಿಯ ಮಗಂ, ನಿಡಿಯ ನಾಲಗೆ; ಮೂವತ್ತಾರು; ಆವಕಾರ್ಯಂ; ಪಾಡುವ ತುಂಬಿ; ಕಂಡ ವಿಚಾರಂ; ಆದ ವಿಷ್ಣು ವಿಜಯಾದಿತ್ಯಂ; ಬಾರದ ಭವಂ; ಆ ಮನೆ, ಈ ರಾಮನಿಂ; ಎಲ್ಲಾ ಕಾರ್ಯಂ; ಮಾಲಕುಮಿ, ಮಾದೇವ).

**೨. ಱ (ರಳ)–ಕುಳ–ಕ್ಷಳ:** 'ಱ'ಕಾರದ ಉಚ್ಚಾರಣೆ ಹೊಸಗನ್ನಡದಲ್ಲಿ ಇಲ್ಲ; ತೆಲುಗಿನಲ್ಲಿಯೂ ಈಗ ಇಲ್ಲ; ತಮಿಳು ಮಲೆಯಾಳಗಳಲ್ಲಿ ಇಂದಿಗೂ

---

* ಇಲ್ಲಿ ಹೇಳಿರುವವ್ಯಾಕರಣ ವಿಚಾರಗಳನ್ನು ವಿವರಿಸುವುದಕ್ಕೆ ಅವಕಾಶವೂ ಇಲ್ಲ. ಇದು ಸ್ಥಳವೂ ಅಲ್ಲ, ಒಂದೆರಡು ವಿಚಾರಗಳನ್ನು ಉದಾಹರಣೆಗಾಗಿ ಮುಂದೆ ಹೇಳಿದೆ.

[ಶಬ್ದಮಣಿದರ್ಪಣ ಲಕ್ಷ್ಮಿ ನೋಡತಕ್ಕ ರಸಚಿತ್ರ; ಸರಸ್ವತಿಯ ಕೈಯ ಎರಡನೆಯ ವೀಣೆ ಎನ್ನುವಂತೆ ಇದರ ಸೌಭಾಗ್ಯವು ಅತಿಶಯವಾಗಿದೆ, ಎಂದು ಹೇಳಿ, 'ಇದು ತಮಗೆ ಕೊಟ್ಟ ಬಹುಮಾನ' ಎಂದು ವಿದ್ವಾಂಸರು ಇದನ್ನು ಪ್ರೀತಿಯಿಂದ ಕಾಣುವರು.]

–ಎಂಬ ಕೇಶಿರಾಜನ ಪ್ರಶಂಸೆಯ ಮಾತು ಹುಸಿಯಲ್ಲ; "ಕರ್ಣಾಟಕ ಲಕ್ಷಣ ಶಿಕ್ಷಾಚಾರ್ಯ" ಎಂಬ ಪ್ರಶಸ್ತಿ ಅವನಿಗೆ ಇಂದಿಗೂ ಸಲ್ಲುತ್ತದೆ.

**ಶಬ್ಧಾನುಶಾಸನ:** ಈ ವ್ಯಾಕರಣ ಗ್ರಂಥ ಸಂಸ್ಕೃತ ಭಾಷೆಯಲ್ಲಿದೆ. ಇದನ್ನು ಬರೆದವನು ಭಾಟ್ಟಾಕಲಂಕದೇವ; ಈತ ಜೈನ ಕವಿ; ಅಕಲಂಕದೇವನ ಶಿಷ್ಯ. ದಕ್ಷಿಣ ಕನ್ನಡ ಜಿಲ್ಲೆಯ ಹಾಡುವಳ್ಳಿ (ಸಂಗೀತಪುರ) ಎಂಬ ಗ್ರಾಮದ ಜೈನ ಮಠ ಪೀಠದ ಗುರು ಅಕಲಂಕ. ಶಬ್ದಾನುಶಾಸನ ೧೬೦೪ ರಲ್ಲಿ ರಚಿತವಾಯಿತೆಂದು ಗ್ರಂಥದಿಂದಲೇ ತಿಳಿಯಬರುತ್ತದೆ. ಭಟ್ಟಾಕಲಂಕನೇ ಬರೆಯಿಸಿದನೆಂದು ತಿಳಿದುಬಂದಿರುವ ಶಾಸನವೊಂದರ ಪದ್ಯದಿಂದ ಅವನು ಶಬ್ದಾಗಮ, ತರ್ಕ, ನಾಟಕ, ಅಲಂಕಾರ, ಭರತನ ನಾಟ್ಯಶಾಸ್ತ್ರ, ಜ್ಯೋತಿಷ, ಮಂತ್ರ ತಂತ್ರವಿಧಿ, ಶಿಲ್ಪಶಾಸ್ತ್ರ, ನ್ಯಾಯಶಾಸ್ತ್ರ, ವೇದ, ಸ್ಮೃತಿ, ಅಧ್ಯಾತ್ಮ, ಪುರಾಣ, ವೈದ್ಯ, ಗಣಿತ, ಮುಂತಾದ ಶಾಸ್ತ್ರಗಳಲ್ಲಿ ಪಾರಂಗತನಾಗಿದ್ದನೆಂದು ತಿಳಿದುಬರುತ್ತದೆ. ದೇವಚಂದ್ರನೆಂಬುವನು ತನ್ನ 'ರಾಜಾವಳೀ ಕಥೆ'ಯಲ್ಲಿ (೧೮೩೮) ಇವನ ವಿಷಯವಾಗಿ – "ಸುಧಾಪುರದೊಳ್ ಭಟ್ಟಾಕಲಂಕ ಸ್ವಾಮಿಗಳ್ ಶಾಸ್ತ್ರಗಳೆಲ್ಲಮಂ ಕಲ್ತು ಮಹಾ ವಿದ್ವಾಂಸರೆನಿಸಿ ಪ್ರಾಕೃತ, ಸಂಸ್ಕೃತ, ಮಾಗಧಿ ಮೊದಲಾದ ಷಡ್ಭಾಷಾ ಕವಿಗಳಾಗಿ ಕರ್ಣಾಟಕ ವ್ಯಾಕರಣಮಂ ರಚಿಸಿ ಕೀರ್ತಿಯಂ ಪಡೆದರ್" ಎಂದು ಹೇಳಿದ್ದಾನೆ. ಈತನು ಕನ್ನಡ ಸಂಸ್ಕೃತ ಈ ಎರಡು ಭಾಷೆಗಳ ವ್ಯಾಕರಣಗಳಲ್ಲಿಯೂ ಪ್ರವೀಣನಾಗಿದ್ದನೆಂಬ ಸಂಗತಿ ಗಮನಾರ್ಹ. ಈತನು ನೃಪತುಂಗ,* ನಾಗವರ್ಮ, ಕೇಶಿರಾಜ, ಈ ಕನ್ನಡ ವೈಯಾಕರಣರನ್ನೂ ಜೈನೇಂದ್ರ, ಪಾಣಿನಿ, ಪತಂಜಲಿ, ಶಾಕಟಾಯನ, ವಾಮನ, ಮುಂತಾದ ಸಂಸ್ಕೃತ ವೈಯಾಕರಣರನ್ನೂ ಅನೇಕ ಸಂಸ್ಕೃತ ಶಾಸ್ತ್ರ ಗ್ರಂಥಗಳನ್ನೂ ತನ್ನ ವ್ಯಾಕರಣ ಶಾಸ್ತ್ರ ನಿರೂಪಣೆಗೆ ಅಲ್ಲಲ್ಲಿ ಪ್ರಮಾಣಗಳಾಗಿ ಹೇಳಿದ್ದಾನೆ. ಇದರಿಂದ ಅವನ ಅಪಾರವಾದ ವಿದ್ವತ್ತು ಗೊತ್ತಾಗುತ್ತದೆ. ಇವನ ಗ್ರಂಥ ಶಬ್ದಮಣಿದರ್ಪಣಕ್ಕಿಂತ ಹೆಚ್ಚು ಶಾಸ್ತ್ರೀಯವಾಗಿದೆ

---

* ನೃಪತುಂಗನೇ ಕವಿರಾಜಮಾರ್ಗದ ಕರ್ತೃ ಎಂಬ ವಾದವೂ ಇದೆಯಷ್ಟೆ ಭಟ್ಟಾಕಲಂಕನೂ ನೃಪತುಂಗನ ಕವಿರಾಜಮಾರ್ಗ ಎಂದೇ ಹೇಳಿದ್ದಾನೆ.

ಖಂಡಿಸಿ, ಅವುಗಳ ಶುದ್ಧರೂಪವನ್ನು ತೋರಿಸಿಕೊಟ್ಟು, ಭಾಷಾಶುದ್ದಿಯನ್ನು ಕಾಪಾಡುವುದು ತಮ್ಮ ಕರ್ತವ್ಯವೆಂದು ವ್ಯಾಕರಣಕಾರರೂ ವ್ಯಾಕರಣ ನಿಯಮಪಾಲನೆಯಲ್ಲಿ ಶ್ರದ್ಧೆಯುಳ್ಳವರೂ ಭಾವಿಸುವುದು ಸಹಜ.* ಕೇಶಿರಾಜನೂ ಈ ಮೂರು ಅಕ್ಷರಗಳ ನೆಲೆ–ಬೆಲೆಗಳನ್ನು ಗೊತ್ತುಪಡಿಸಿ, ಅನೇಕ ಸೂತ್ರಗಳಲ್ಲಿ ಈ ಸಂಬಂಧವಾದ ನಿಯಮಗಳನ್ನು ರಚಿಸಿದ; ಕನ್ನಡದಲ್ಲಿ 'ಱ' (ರಳ) ಅಕ್ಷರವುಳ್ಳ ಒಂದು ಸಮಗ್ರ ಪಟ್ಟಿಯನ್ನೇ ತಯಾರಿಸಿಬಿಟ್ಟ; ಕನ್ನಡ ಸಹಜವಾಗಿ 'ಲ' ಕಾರವಿದ್ದು, ಅವುಗಳನ್ನು 'ಳ'ಕಾರವಾಗಿ ಉಚ್ಚಾರ ಮಾಡಕೂಡದೆಂದು ವಿಧಿಸಿದ (ಉದಾ: "ಬೆರಲ್, ಒರಲ್, ಎರಲ್, ಕೊರಲ್, ಸರಲ್, ಅರಲ್, ಪರಲ್, ಮರಲ್, ಮುಂಗೈಸರಲ್ ಇವು ನಿತ್ಯಲಾಂತಂಗಳ್, ಇವಂ ಬೆರಳ್, ಕೊರಳ್ ಎಂದು ಕುಳನಾಗುಚ್ಚರಿಸಲಾಗದು." – ಸೂತ್ರ ೩೮ರ ವೃತ್ತಿ). ಹುಚ್ಚು ಹರಿಯುತ್ತಿದ್ದ ಭಾಷಾ ಪ್ರವಾಹದ ಎದುರು ಕೇಶಿರಾಜ ಕಟ್ಟಿದ ಒಡ್ಡುಗಳು ಕೊಚ್ಚಿಹೋದವು. ಆದರೆ, ಅವನ ಮಹಾ ಪ್ರಯತ್ನವನ್ನು ಮೆಚ್ಚಬೇಕು. ಮಹಾಪ್ರಯತ್ನವೊಂದರ ಸೋಲೂ ಗೆಲವಿನಷ್ಟೇ ಗಮನಾರ್ಹ.

ಕೇಶಿರಾಜನು ಮೇಲಿನ ಪದ್ಯದಲ್ಲಿ ಒಕ್ಕಣಿಸಿರುವ ಕನ್ನಡದ ವೈಶಿಷ್ಟ್ಯಗಳಲ್ಲದೆ, ಇನ್ನೂ ಅನೇಕ ವರ್ಣನಾತ್ಮಕ ವ್ಯಾಕರಣ ವಿಚಾರಗಳನ್ನು ವಿಶ್ಲೇಷಿಸಿ ಹೇಳಿರುವನು. ಇವು ಹಳಗನ್ನಡವನ್ನು ಅಭ್ಯಾಸ ಮಾಡುವವರಿಗೂ ಭಾಷಾ ಶಾಸ್ತ್ರದ ತಿಳಿವಳಿಕೆಗೂ ಕನ್ನಡ ಭಾಷಾ ಚರಿತ್ರೆಯ ಜಾಡನ್ನು ಗುರುತಿಸುವುದಕ್ಕೂ ಬಹಳ ಸಹಾಯಕವಾಗಿವೆ.

ಒಟ್ಟಿನ ಮೇಲೆ –
ಸಿರಿಗೆ ಈಕ್ಷಿಪ ರಸಚಿತ್ರಂ
ಸರಸತಿಗೆ ಎರಡನೆಯ ಬೀಣೆ, ಎನೆ ಸೌಭಾಗ್ಯಂ
ಕರಮಾದುದು ಎಂದು ಬುಧರ್ ಆ–
ದರಿಪರ್, ಮೆಚ್ಚು ಎಂದೆ ಶಬ್ದಮಣಿದರ್ಪಣಮಂ

---

* ಈಗ ಭಾಷೆಯ ಸ್ವರೂಪವನ್ನು ಅರಿಯದವರೂ ಅರಿತವರೂ 'ವಿನಹ'(ವಿನಾ), ಪುನಹ (ಪುನಃ), ತಿಳ(ಳು)ವಳಿಕೆ (ತಿಳಿವಳಿಕೆ), ಪದ್ಮಳನ್ನು, ಕಮಲಳನ್ನು (ಪದ್ಮನನ್ನು, ಕಮಲೆಯನ್ನು), ಜವಬ್ದಾರಿಯುತ (ಜವಬ್ದಾರಿಯಿಂದ ಕೂಡಿದ), ಮುಂದುವರೆ (ಮುಂದುವರಿ) ಎಂದು ಪ್ರಯೋಗಿಸುವುದು ರೂಢಿಗೆ ಬಂದಿದೆ. ಇಂಥ ಉದಾಹರಣೆಗಳು ಬೇಕಾದಷ್ಟಿವೆ.

ಈ ಶ್ಲೋಕ ನಾಗವರ್ಮನ ಭಾಷಾಭೂಷಣದ ಮಂಗಳ ಶ್ಲೋಕದಂತೆಯೆ ಇದೆ.

ಭಟ್ಟಾಕಲಂಕನು ಶಬ್ದಾನುಶಾಸನವನ್ನು ಬಹುಮಟ್ಟಿಗೆ ಸಮಗ್ರವಾಗಿಯೂ ವಿಸ್ತಾರವಾದ ವೃತ್ತಿ ವ್ಯಾಖ್ಯಾನಗಳೊಡನೆಯೂ ಸಂಸ್ಕೃತದಲ್ಲಿ ಬರೆದಿರುವುದನ್ನು ನೋಡಿದರೆ, ಅವನ ಕಾಲದಲ್ಲಿ ಕನ್ನಡವೆಂದರೆ ಮೂಗು ಮುರಿಯುತ್ತಿದ್ದ ಸಂಸ್ಕೃತ ವಿದ್ವಾಂಸರ ಗಮನಕ್ಕೆ ಕನ್ನಡದ ಹಿರಿಮೆಗರಿಮೆಗಳನ್ನು ತರುವುದೇ ಆಗಿತ್ತೆಂದು ಊಹಿಸಬಹುದು. ಕನ್ನಡ ಭಾಷೆಯ ಹಳಮೆಯನ್ನೂ ಹಿರಿಮೆಯನ್ನೂ ಸಮರ್ಥಿಸಿ ಅವನು ಆಡಿರುವ ಮಾತುಗಳು ಗಮನಾರ್ಹವಾಗಿವೆ:

"ಈ ಭಾಷೆ ಶಾಸ್ತ್ರ ನಿರೂಪಣೆಗೆ ಅತ್ಯಂತ ಉಪಯೋಗಿಯಾಗಿದೆ. ಇದರಲ್ಲಿ ತತ್ತ್ವಾರ್ಥ ಮಹಾಶಾಸ್ತ್ರಕ್ಕೆ ವ್ಯಾಖ್ಯಾನ ರೂಪದ ೯೬,೦೦೦ ಗ್ರಂಥ ಪ್ರಮಾಣದ* 'ಚೂಡಾಮಣಿ' ಎಂಬ ಮಹಾಗ್ರಂಥವೂ, ಶಬ್ದಾಗಮಯುಕ್ತ್ಯಾಗಮ ಪರಮಾಗಮ ವಿಷಯಗಳನ್ನೊಳಗೊಂಡ ಗ್ರಂಥಗಳೂ ಕಾವ್ಯನಾಟಕಾಲಂಕಾರ ಕಲಾಶಾಸ್ತ್ರ ವಿಷಯ ಗಳನ್ನೊಳಗೊಂಡ ಅನೇಕಾನೇಕ ಗ್ರಂಥಗಳೂ ದೊರೆಯುವುವಾದ್ದರಿಂದ ಇದು ಮಹಾಜನರಿಂದ ಪರಿಗ್ರಾಹ್ಯವಾಗಿದೆ."

ಭಾಷೆಗಳ ವಿಚಾರವಾಗಿ ಹೇಳುತ್ತಾ, ಕರ್ಣಾಟಕ, ಆಂಧ್ರ, ಮಗಧ, ಮಾಳವ ದೇಶಗಳ ಭಾಷೆಗಳಲ್ಲದೆ ಮನುಷ್ಯರ ಮತ್ತು ದೇವತೆಗಳ ಎಲ್ಲ ಭಾಷೆಗಳಿಗೂಭಾಷೆ ಎಂಬ ಶಬ್ದ ಅನ್ವಯಿಸುತ್ತದೆ ಎಂದಿದ್ದಾನೆ. ಪ್ರಸಿದ್ಧಗಳಾಗಿ ಪ್ರಚಾರದಲ್ಲಿರುವುದು ೧೮ ಮಹಾಭಾಷೆಗಳೆಂದೂ, ೭೦೦ ಕ್ಷುಲ್ಲಕ ಭಾಷೆಗಳುಂಟೆಂದೂ ಅವನ ಹೇಳಿಕೆ. ಸಂಸ್ಕೃತ ಭಾಷೆಯಲ್ಲಿ ಹೇಗೆಶುದ್ಧ–ಅಶುದ್ಧ ಪ್ರಯೋಗಗಳನ್ನು ತೋರಿಸಲು 'ಅನುಶಾಸನ' (ನಿಯಮ) ಮಾಡಲಾಗುವುದೋ ಅದೇ ರೀತಿ ಕನ್ನಡ ಭಾಷೆಯಲ್ಲಿಯೂ ಸುಶಬ್ದ–ಅಪಶಬ್ದಗಳ ವಿವೇಚನೆ ಮಾಡಿ 'ಅನುಶಾಸನ' ಮಾಡಲು ಆ ಭಾಷೆ ಅರ್ಹವಾಗಿದೆ–ಎಂದು ಹೇಳಿರುವುದರಲ್ಲಿ ಭಟ್ಟಾಕಲಂಕನ ಉತ್ಕಟವಾದ ಕನ್ನಡ ಭಾಷಾಭಿಮಾನವನ್ನು ಗುರುತಿಸಬಹುದು.

ಭಟ್ಟಾಕಲಂಕನ ನಿರೂಪಣ ಕ್ರಮವನ್ನು ಪರಿಚಯ ಮಾಡಿಕೊಡಲು ಒಂದು ಸೂತ್ರವನ್ನೂ, ಅದರ ವೃತ್ತಿಯ ಪ್ರಯೋಗವನ್ನೂ ಕೆಳಗೆ ಕೊಟ್ಟಿದೆ:

---

* ಗ್ರಂಥ ಎಂದರೆ ೩೨ ಅಕ್ಷರಗಳ ಸಂಖ್ಯೆ ಬಹರ. ಶ್ಲೋಕದಲ್ಲಿ ೩೨ ಅಕ್ಷರಗಳಿರುತ್ತವೆ. (ಶಬ್ದಾಗಮ ವ್ಯಾಕರಣ, ಯುಕ್ತ್ಯಾಗಮ, ತರ್ಕ, ಪರಮಾಗಮ ಜೈನ ಧಾರ್ಮಿಕ ಶಾಸ್ತ್ರ; ವೇದೋಪನಿಷತ್ತುಗಳು.)

ಎಂಬ ಅಭಿಪ್ರಾಯವನ್ನು ಅನೇಕ ವಿದ್ವಾಂಸರು ವ್ಯಕ್ತಪಡಿಸಿದ್ದಾರೆ. ಕೇಶಿರಾಜನಂತೆ ಇವನೂ ಪಂಪ, ಪೊನ್ನ, ರನ್ನ, ನಾಗಚಂದ್ರ, ನೇಮಿಚಂದ್ರ, ಅಗ್ಗಳ, ಆಂಡಯ್ಯ, ಮಧುರ ಮುಂತಾದ ಕನ್ನಡ ಕವಿಗಳ ಕಾವ್ಯಗಳಿಂದ ಪದ್ಯಗಳನ್ನು ಉದಾಹರಿಸಿದ್ದಾನೆ. ಮೊತ್ತದಲ್ಲಿ "ಇದು ನಾಗವರ್ಮನ ಕರ್ಣಾಟಕ ಭಾಷಾ ಭೂಷಣಕ್ಕಿಂತಲೂ ವಿಸ್ತಾರವಾಗಿಯೂ ಪ್ರೌಢ ವ್ಯಾಖ್ಯಾನ ಸಮೇತವಾಗಿಯೂ ಇದೆ; ಶಬ್ದಮಣಿ ದರ್ಪಣಕ್ಕಿಂತಲೂ ಹೆಚ್ಚು ವಿಷಯಗಳನ್ನು ಒಳಗೊಂಡಿದೆ, ಕನ್ನಡ ಭಾಷೆಗೆ ಇದು ಅತ್ಯುತ್ತಮ ವ್ಯಾಕರಣ ಗ್ರಂಥವೆಂದು ಹೇಳಬಹುದು."[೯]

ಕನ್ನಡ ಭಾಷೆಯನ್ನು ಕುರಿತ ಈ ಸಂಸ್ಕೃತ ಭಾಷೆಯ ವ್ಯಾಕರಣದಲ್ಲಿ ನಾಲ್ಕು ಪಾದಗಳಿವೆ: (೧)ವರ್ಣಮಾಲೆ, ಪಾರಿಭಾಷಿಕ ಪದಗಳ ವಿವರಣೆ, ಅವ್ಯಯಗಳು, ಸಂಧಿಗಳು: (೨)ಲಿಂಗ, ಸಂಸ್ಕೃತದ ಅಪಭ್ರಂಶ ರೂಪಗಳು, ವಿಭಕ್ತಿ ಪ್ರತ್ಯಯಗಳು; (೩)ಸಮಾಸಗಳು, ಸರ್ವನಾಮ, ವಚನ, ಸಂಖ್ಯಾವಾಚಕಗಳು, ತದ್ಭವಗಳು; (೪)ಕ್ರಿಯಾಪದಗಳು, ಆಖ್ಯಾತ ಪ್ರತ್ಯಯಗಳು. ಈ ನಾಲ್ಕು ಪಾದಗಳಲ್ಲಿ ಒಟ್ಟು ೫೯೨ ಸೂತ್ರಗಳಿವೆ. ಈ ಸೂತ್ರಗಳಿಗೆ 'ಭಾಷಾಮಂಜರಿ' ಎಂಬ ವೃತ್ತಿಯೂ 'ಮಂಜರೀಮಕರಂದ'ವೆಂಬ ವ್ಯಾಖ್ಯಾನವೂ ಇದೆ. ವಿಷಯ ನಿರೂಪಣಾ ಕ್ರಮವು ಪ್ರಾಚೀನ ಸಂಸ್ಕೃತ ವ್ಯಾಕರಣ ಗ್ರಂಥಗಳ ಮಾದರಿಯನ್ನು ಅನುಸರಿಸಿದೆ.

"ಸೂತ್ರಗಳನ್ನು ಭಟ್ಟಾಕಲಂಕನು ರಚಿಸಲಿಲ್ಲ; ವೃತ್ತಿ ಮತ್ತು ವ್ಯಾಖ್ಯಾನಗಳನ್ನು ರಚಿಸಿದವನು ಭಟ್ಟಾಕಲಂಕ; ಸೂತ್ರಕಾರನು ಮೇಧಾವಿಯಾದ ಪಂಡಿತ; ವೃತ್ತಿ ವ್ಯಾಖ್ಯಾನಗಳನ್ನು ಬರೆದ ಭಟ್ಟಾಕಲಂಕನು ಸೂತ್ರಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಅಸಮರ್ಥನಾಗಿದ್ದ ಸಾಧಾರಣ ಗ್ರಂಥಕಾರ" ಎಂಬ ಅಭಿಪ್ರಾಯವನ್ನು ಪಂಡಿತ ಕೆ.ವರದಾಚಾರ್ಯರು ವ್ಯಕ್ತಪಡಿಸಿದ್ದರು. ಶಬ್ದಾನುಶಾಸನಕ್ಕೆ ಇಂಗ್ಲೀಷಿನಲ್ಲಿ ಪೀಠಿಕೆಯನ್ನು ಬರೆದಿರುವ ಆರ್.ನರಸಿಂಹಾಚಾರ್ಯರು ಈ ಅಭಿಪ್ರಾಯವನ್ನು ಅಲ್ಲಗಳೆದಿದ್ದಾರೆ.[೧೦]

ಗ್ರಂಥದ ಪ್ರಾರಂಭದಲ್ಲಿ ವರ್ಧಮಾನ ಸ್ತುತಿರೂಪದ ಶ್ಲೋಕ:

ನಮಃ ಶ್ರೀವರ್ಧಮಾನಾಯ ವಿಶ್ವವಿದ್ಯಾವಭಾಸಿನೇ
ಸರ್ವಭಾಷಾಮಯೀ ಭಾಷಾ ಪ್ರವೃತ್ತಾ ಯನ್ಮುಖಾಂಬುಜಾತ್

['ಯಾರ ಮುಖಕಮಲದಿಂದ ಎಲ್ಲ ಭಾಷೆಗಳನ್ನೂ ಒಳಗೊಂಡ ದಿವ್ಯಭಾಷೆಯು ಪ್ರಕಟವಾಯಿತೊ, ಸಮಸ್ತ ವಿದ್ಯೆಗಳೂ ಯಾರಲ್ಲಿ ಪ್ರಕಾಶಮಾನವಾಗಿವೆಯೋ ಆ ಶ್ರೀವರ್ಧಮಾನನಿಗೆ ನಮಸ್ಕಾರ.]

ರುವುದರಿಂದ ಈಗಲೂ ವ್ಯಾಸಂಗ ಮಾಡತಕ್ಕದಾಗಿದೆ. ಈ ಗ್ರಂಥದಲ್ಲಿ ಕಿಟ್ಟೆಲ್ಲರು ಹಳಗನ್ನಡ, ನಡುಗನ್ನಡ, ಹೊಸಗನ್ನಡ – ಈ ಮೂರು ಭಾಷಾ ಪ್ರಭೇದಗಳನ್ನೂ ಚಾರಿತ್ರಿಕವಾಗಿಯೂ ತುಲನಾತ್ಮಕವಾಗಿಯೂ ಪರಿಶೀಲನೆ ಮಾಡೆ ಇದ್ದಾರೆ. ಈ ಕೃತಿ ವ್ಯಾಕರಣ ಮಾತ್ರವಲ್ಲದೆ, ಭಾಷಾ ಚರಿತ್ರೆಯ ಲಕ್ಷಣಗಳನ್ನೂ ಹೊಂದಿದೆ. ಗಮನಿಸಬೇಕಾದ ಇನ್ನೊಂದು ಮಹಾಕೃತಿ ಡಾ. ಕಾಲ್ಡ್‌ವೆಲ್ಲರ A Comparative Grammar of the Dravidian Language (೨ನೆಯ ಮುದ್ರಣ ೧೮೭೫). ಇದರಲ್ಲಿ ದ್ರಾವಿಡ ಭಾಷಾವರ್ಗದ ಮುಖ್ಯ ಭಾಷೆಗಳಾದ ದಕ್ಷಿಣ ಭಾರತದ ಭಾಷೆಗಳ ತುಲನಾತ್ಮಕ ವ್ಯಾಕರಣ ನಿರೂಪಿತವಾಗಿದೆ.

ಕರ್ನಾಟಕದಲ್ಲಿ ವಿದ್ಯಾಭ್ಯಾಸವು ಪ್ರಗತಿ ಹೊಂದುತ್ತ ಬಂದಂತೆ ಕರ್ನಾಟಕದ ಬೇರೆ ಬೇರೆ ಪ್ರಾಂತಗಳ ವಿದ್ವಾಂಸರು ವಿದ್ಯಾರ್ಥಿಗಳ ವ್ಯಾಸಂಗಕ್ಕೆಂದು ಹೊಸಗನ್ನಡದಲ್ಲಿ ವ್ಯಾಕರಣಗಳನ್ನು ರಚಿಸಿಕೊಂಡು ಬಂದಿದ್ದಾರೆ. ೨೦ನೆಯ ಶತಮಾನದಲ್ಲಿ ಈವರೆಗೆ ನಡೆದಿರುವ ಕೆಲಸವೆಲ್ಲವೂ ಒಂದು ಪರಿಮಿತವಾದ ಚೌಕಟ್ಟಿಲ್ಲಿ ನಡೆದಿರತಕ್ಕದ್ದು. ಇವುಗಳ ವಿವೇಚನೆ ಈ ಗ್ರಂಥದ ಉದ್ದೇಶದಲ್ಲಿ ಸೇರಿಲ್ಲವಾದ್ದರಿಂದ ಅವುಗಳನ್ನು ಇಲ್ಲಿ ಪರಿಚಯ ಮಾಡಿಕೊಡುವ ಗೋಜಿಗೆ ಹೋಗಿಲ್ಲ. (ಈ ಕೆಲವು ಕೃತಿಗಳ ವಿವರಗಳನ್ನು ಮಾತ್ರ ಅನುಬಂಧದ ಪಟ್ಟಿಯಲ್ಲಿ ಕೊಟ್ಟಿದೆ.) ಹಳಗನ್ನಡದ, ನಡುಗನ್ನಡ, ಹೊಸಗನ್ನಡ, ಹೊಸಗನ್ನಡದ ಗ್ರಾಂಥಿಕ ಹಾಗೂ ವ್ಯವಹಾರ ಭಾಷಾ ಪ್ರಭೇದಗಳು – ಇವನ್ನು ಚಾರಿತ್ರಿಕವಾಗಿಯೂ ವರ್ಣನಾತ್ಮಕವಾಗಿಯೂ ವಿವರಿಸುವ ಒಂದು 'ಸಮಗ್ರ ಕನ್ನಡ ವ್ಯಾಕರಣ'ದ (Coprehensive Historical and Descriptive Grammar) ರಚನೆಯ ಅಗತ್ಯವಿದೆ ಎಂದು ಸೂಚಿಸಿ, ಈ ಪ್ರಕರಣವನ್ನು ಮುಗಿಸಬಹುದು.

**ಭಾಷಾ ಚರಿತ್ರೆ: ಭಾಷಾ ವಿಜ್ಞಾನ**

ಕನ್ನಡ ವ್ಯಾಕರಣವನ್ನು ಆಧರಿಸಿ ಕನ್ನಡ ಭಾಷಾ ಚರಿತ್ರೆ ಎಂಬ ಶಾಸ್ತ್ರ ವಿಭಾಗವೊಂದು ಬೆಳೆದು ಬಂದಿದೆ. ಆರ್.ನರಸಿಂಹಾಚಾರ್ಯರ A History of Kannada Language, ಕನ್ನಡ ಕೈಪಿಡಿಯಲ್ಲಿ ಟಿ.ಎಸ್.ವೆಂಕಣ್ಣಯ್ಯನವರು ಬರೆದಿರುವ 'ಭಾಷಾ ಚರಿತ್ರೆ'ಯ ವಿಭಾಗ, ಇವು ಇಂದಿಗೂ ಪ್ರಮಾಣ ಭೂತ ರಚನೆಗಳಾಗಿವೆ. ಎ.ಎನ್.ನರಸಿಂಹಯ್ಯ, ಜಿಎಸ್.ಗಾಯಿಯವರೂ ಶಾಸನಗಳ ಭಾಷೆಯ ವ್ಯಾಕರಣಗಳನ್ನು ರಚಿಸಿದ್ದಾರೆ. ಭಾಷಾ ವಿಜ್ಞಾನದ ಹಿನ್ನೆಲೆಯಲ್ಲಿ 'ವರ್ಣನಾತ್ಮಕ ವ್ಯಾಕರಣ'ದ ಸ್ವರೂಪವನ್ನು ಎಚ್.ಎಸ್.ಬಿಳಿಗಿರಿಯವರು ವಿವರಿಸಿದ್ದಾರೆ.

"ಸೂತ್ರಂ ಭೇದ್ಯವದ್ಭೇದಕಂ ॥೧೧೧॥

"ವೃತ್ತಿಃ ಭೇದ್ಯಂ ವಿಶೇಷ್ಯಂ; ಭೇದಕಂ ವಿಶೇಷಣಂ ವಿಶೇಷಣವಾಚಿನೋ ಯೇ ಶಬ್ದಾಃ ತೇ ವಿಶೇಷ್ಯವಲ್ಲಿ ಙ್ಗಾ ಭವನ್ತಿ."

[ಸೂತ್ರ–ಭೇದ್ಯದಂತೆ ಭೇದಕ. ವೃತ್ತಿ ಭೇದ್ಯ ಎಂದರೆ ವಿಶೇಷ್ಯ (ವಿಶೇಷಿಸಲ್ಪಡುವ ಪದ=ನಾಮಪದ); ಭೇದಕ ಎಂದರೆ ವಿಶೇಷಣ. ವಿಶೇಷಣ ವಾಚಿಗಳಾದ ಶಬ್ದಗಳು ವಿಶೇಷ್ಯದತೆ (ಅದೇ ರೂಪದಲ್ಲಿ) 'ಲಿಂಗ'ಗಳಾಗುವುವು.]

"ಪ್ರಯೋಗಃ ಅಯ್ವರ್ ಪುರುಷರ್, ಅಯ್ವರ್ ಸತಿಯರ್, ಅಯ್ದು ಗಿರಿಗಳ್; ಎಣ್ಬರ್ ಪುತ್ರರ್, ಎಣ್ಬರ್ ಪುತ್ರಿಯರ್, ಎಂಟು ಕೂಸುಗಳ್; ಅವರ್ ದೇವರ್, ಇವರ್ ದೇವಿಯರ್, ಅವು ಕಲ್ಪಂಗಳ್; ಈತನೊಳ್ಳಿದನ್, ಈಕೆಯೋಳ್ಳಿದಳ್, ಇದೊಳ್ಳಿತ್ತು; ಇನಿಯಂ ನಲ್ಲಂ, ಇನಿಯಳ್ ನಲ್ಲಳ್, ಇನಿದು ಪಾಲ್; ಕರಿಯಳ್ ಪಾರ್ವತಿ, ಕರಿಯಂ ಕೃಷ್ಣಂ, ಕರಿದು ಕತ್ತುರಿ."

"ಪಾಡುವುದು ತುಂಬಿಗಳಂ,
ಕೂಡುವುವಂ ಜಕ್ಕವಕ್ಕಿಗಳಂ ಅತಿಬಿನದಂ
ಮಾಡುವುವಂ ಪುಲ್ಲೆಗಳಂ
ನೋಡಿದನರಸಂ ವಿವೇಕನಿಧಿ ಸಂತಸದಿಂ"

[ಜಕ್ಕವಕ್ಕಿ=ಚಕ್ರವಾಕ ಪಕ್ಷಿ, ಬಿನದ=ವಿನೋದ. ಪುಲ್ಲೆ=ಜಿಂಕೆ, ಸಂತಸ=ಸಂತೋಷ]

ಭಟ್ಟಾಕಲಂಕನ ಶಬ್ದಾನುಶಾಸನ ರಚಿತವಾದ ಮೇಲೆ ಸುಮಾರು ೨೦೦ ವರ್ಷಗಳ ಕಾಲ ಕನ್ನಡ ವ್ಯಾಕರಣ ಕ್ಷೇತ್ರ ಕೃಷಿಯಲ್ಲದೆ ಹಾಳು ಬಿದ್ದಿರುವುದು ಕಂಡು ಬರುತ್ತದೆ. ಕನ್ನಡ ವ್ಯಾಕರಣದ ವ್ಯಾಸಂಗ ಮತ್ತು ರಚನೆಗಳಲ್ಲಿ ಮತ್ತೆ ಆಸಕ್ತಿ ಹುಟ್ಟುವಂತೆ ಮಾಡಿದ ಶ್ರೇಯಸ್ಸು ಪಾಶ್ಚಾತ್ಯ ವಿದ್ವಾಂಸರಿಗೆ ಸಲ್ಲಬೇಕು. ಭಾರತದಲ್ಲಿ ಮುದ್ರಣ ಕಲೆ ಪ್ರಚಾರಕ್ಕೆ ಬಂದ ಮೇಲೆ ಕನ್ನಡದಲ್ಲಿ ಮೊತ್ತ ಮೊದಲಿಗೆ ಮುದ್ರಿತವಾದದ್ದು ವಿಲಿಯಂ ಕೇರಿ ಎಂಬವನ A Grammar of the Karnata Language ಎಂಬ ವ್ಯಾಕರಣ ಗ್ರಂಥ (೧೮೧೭). ಇನ್ನೂ ಇಬ್ಬರು ಮೂವರು ಪಾಶ್ಚಾತ್ಯರು ಕನ್ನಡದಲ್ಲಿಯೇ ವ್ಯಾಕರಣ ಗ್ರಂಥಗಳನ್ನು ರಚಿಸಿದರು. ಕ್ರೈಸ್ತಮತ ಪ್ರಚಾರಕ್ಕೆಂದು ಬಂದು ನೆಲಸಿದ ಮಿಷನರಿಗಳು ಉಪಯೋಗಕ್ಕೆಂದು ಕೆಲವು ಪಾಶ್ಚಾತ್ಯ ವಿದ್ವಾಂಸರು ಇಂಗ್ಲೀಷಿನಲ್ಲಿ ಕನ್ನಡ ವ್ಯಾಕರಣಗಳನ್ನು ರಚಿಸಿದರು. ಈ ವ್ಯಾಕರಣಗಳ ಪೈಕಿ ಕಿಟ್ಟೆಲ್ಲರ A Grammar of the Kannada Language (೧೯೦೩) ಪ್ರಸಿದ್ಧವಾಗಿದ್ದು, ವಿಚಾರಪೂರ್ಣವಾಗಿ

ಒಟ್ಟು ಐದು ಪ್ರಕರಣಗಳಿವೆ. ಮೊದಲ ಮೂರು ಪ್ರಕರಣಗಳಲ್ಲಿ ಧಾತುಗಳಿಂದ ಹುಟ್ಟಿ ರೂಪಗೊಂಡ ನಾಮಪದಗಳ ಪರ್ಯಾಯ ನಾಮಗಳನ್ನು ಕೊಟ್ಟಿದೆ; ನಾಲ್ಕನೆಯದರಲ್ಲಿ ಅರ್ಥವನ್ನು ನಿರ್ಣಯಿಸುವ ಪದಗಳೂ, ಐದನೆಯದರಲ್ಲಿ ವೇದಗಳಲ್ಲಿ ಹೇಳಿರುವ ದೇವತೆಗಳ ಹೆಸರುಗಳೂ ಇವೆ. ಈ ನಿಘಂಟಿನ ಮೇಲೆ ಹಲವಾರು ಭಾಷ್ಯಗಳೂ ವ್ಯಾಖ್ಯಾನಗಳೂ ಹುಟ್ಟಿಕೊಂಡಿವೆ. ಪ್ರಸಿದ್ಧವೂ ಪ್ರಾಚೀನವೂ ಆದದ್ದು ಪತಂಜಲಿಯ 'ಮಹಾಭಾಷ್ಯ'. ವೇದಗಳನ್ನು ಅಧ್ಯಯನ ಮಾಡುವುದಕ್ಕೆ ಸಹಾಯಕಗಳಾದ ಆರು ಅಂಗಗಳಲ್ಲಿ ನಿರುಕ್ತವೂ ಒಂದು ಬಗೆಯ ಭಾಷ್ಯವೇ (=ವಿಸ್ತಾರವಾದ ವಿವರಣೆ). ಕ್ರಿ.ಶ.ಸು.೪ನೆಯ ಶತಮಾನದವನೆಂದು ಹೇಳಲಾದ ಯಾಸ್ಕನ 'ನಿರುಕ್ತ'ವೇ ಮೊತ್ತ ಮೊದಲಿನದೆಂದು ವಿದ್ವಾಂಸರ ಅಭಿಪ್ರಾಯ. ಸ್ವರೂಪದಲ್ಲಿ ಇದು ಒಂದು ನಿಘಂಟು. ಇದರ ಮೇಲೆಯೇ ಸ್ಕಂದಸ್ವಾಮಿ, ಭಟ್ಟಭಾಸ್ಕರ ಮಿಶ್ರ, ಮಾಧವ, ದೇವರಾಜಯಜ್ವನ್ – ಎಂಬುವರುಗಳ ವ್ಯಾಖ್ಯಾನಗಳಿವೆ. ಶಬ್ದಾರ್ಥ ನಿರ್ಣಯಕ್ಕೆ ನಿರುಕ್ತ, ನಿರ್ವಚನ, ಎಂಬವು ಪಾರಿಭಾಷಿಕ ಪದಗಳು. ಯಾಸ್ಕನು ತನ್ನ 'ನಿರುಕ್ತ'ದಲ್ಲಿಯೇ 'ನಾಮ ಧಾತು ಜಮಾಹಾ ನಿರುಕ್ತೇ' ಎಂದರೆ 'ನಿರುಕ್ತವು ಧಾತುಗಳಿಂದ ಹುಟ್ಟಿದ ನಾಮಪದಗಳನ್ನು ತಿಳಿಯ ಹೇಳುತ್ತದೆ' ಎಂದಿದ್ದಾನೆ. ಯಾಸ್ಕನ ನಿರುಕ್ತವನ್ನು ಬಿಟ್ಟರೆ, ಹಲಾಯುಧನ 'ಅಭಿಧಾನ ರತ್ನಮಾಲೆ', ಅಮರ ಸಿಂಹನ 'ನಾಮಲಿಂಗಾನು ಶಾಸನ' (ಅಮರಕೋಶ), ವರರುಚಿಯ ಕೋಶ, ಶಾಶ್ವತ, ಧನಂಜಯ ಕೋಶ, ವಾಗುರಿ ಕೋಶ, ಮೇಧಿನಿ ಕೋಶ, ಮಹಿಪನ ಅನೇಕಾರ್ಥ ಕೋಶ, ಕೋಶ ಕಲ್ಪತರು, ಶಿವದತ್ತನ ಶಿವಕೋಶ, ಇವು ಪ್ರಸಿದ್ಧವಾದವಲ್ಲಿ ಹಲವು. ಈಚೆಗೆ ಸಂಸ್ಕೃತದಲ್ಲಿ ದೊರೆಯುವ ಪ್ರಕಟಿತ ಮತ್ತು ಅಪ್ರಕಟಿತವಾದ ಎಲ್ಲ ಕೋಶಗಳನ್ನೂ ಆಧರಿಸಿ 'ಸಮಗ್ರ ಸಂಸ್ಕೃತ ಕೋಶ'ದ ನಿರ್ಮಾಣ ಕಾರ್ಯವನ್ನು ಪುಣೆಯ ಡೆಕನ್ ಕಾಲೇಜಿನವರು ಕೈಗೊಂಡಿದ್ದಾರೆ.* ಈಸಂಸ್ಥೆಯ ಇನ್ನೊಂದು ಯೋಜನೆ 'ಪರ್ಯಾಯ ಕೋಶ' ಎಂಬ ಸಂಸ್ಕೃತ ಸಮಾನಾರ್ಥಕ ಪದಗಳ ನಿಘಂಟುವಿನ ಪ್ರಕಟನೆ.**

* ಎಲ್ಲ ಪ್ರಕಟಿತ ಮತ್ತು ಅಪ್ರಕಟಿತ ಪ್ರಾಚೀನ ಕನ್ನಡ ನಿಘಂಟುಗಳನ್ನೂ ಒಂದೇ ಸಂಪುಟವಾಗಿ ಪ್ರಕಟಿಸುವ ಕಾರ್ಯವನ್ನು ಮೈಸೂರು ವಿಶ್ವವಿದ್ಯಾನಿಲಯ ಕೈಗೊಂಡಿದೆ ಎಂದು ತಿಳಿದು ಬರುತ್ತದೆ. ಎನ್.ಬಸವರಾಧ್ಯರು ಇದರ ಸಂಪಾದಕರು.

** ಜೆ.ಎಂ.ಹನಸೋಗೆಯವರು ಈಚೆಗೆ 'ಕನ್ನಡ ಸಮಾನಾರ್ಥಕ ಕೋಶ'ವನ್ನು ಪ್ರಕಟಿಸಿದ್ದಾರೆ (ಪ್ರಕಾಶಕರು: ನಭಶ್ರೀ ಪ್ರಕಾಶನ, ಮೈಸೂರು–೯, ೧೯೭೪. ಇದು ಸಮಗ್ರವಾಗಿಲ್ಲ. ಅನೇಕ ಬಗೆಯ ಲೋಪದೋಷಗಳಿಂದ ಕೂಡಿದ್ದರೂ, ಪ್ರಥಮ ಪ್ರಯತ್ನವೆಂದು ಸ್ವಾಗತಾರ್ಹ.)

ಗ್ರಾಂಥಿಕ ಭಾಷೆಗಿಂತ ಹೆಚ್ಚಾಗಿ ವ್ಯವಹಾರ ಭಾಷೆಯನ್ನೇ ಹೆಚ್ಚಾಗಿ ಅವಲಂಬಿಸಿರುವ 'ಭಾಷಾ ವಿಜ್ಞಾನ'ವು ಒಂದು ಪ್ರತ್ಯೇಕ ಶಾಸ್ತ್ರವಾಗಿಯೇ ಬೆಳೆದು, ಪ್ರಪಂಚದ ಎಲ್ಲಾ ಭಾಷೆಗಳಿಗೂ ಅನ್ವಯಿಸುವ ಮೂಲಸೂತ್ರಗಳು ರೂಪುಗೊಂಡಿವೆ. ಕನ್ನಡಕ್ಕೆ ಸಂಬಂಧಪಟ್ಟಂತೆ ಭಾಷಾವಿಜ್ಞಾನದ ಕ್ಷೇತ್ರದಲ್ಲಿ ಆರ್.ವೈ.ಧಾರವಾಡಕಾರ್, ಎಚ್.ಎಸ್. ಬಿಳಿಗಿರಿ, ಹಾ.ಮಾ.ನಾಯಕ, ಎಂ. ಚಿದಾನಂದ ಮೂರ್ತಿ, ಎ. ಕುಶಾಲಪ್ಪಗೌಡ, ಆರ್.ಸಿ. ಹಿರೇಮಠ, ಜೆ.ಎಸ್. ಕುಳ್ಳಿ, ಹಂ.ಪ. ನಾಗರಾಜಯ್ಯ, ಕೆ.ಎಂ. ಕೃಷ್ಣರಾವ್, ಕೆ.ಜಿ. ಶಾಸ್ತ್ರಿ, ಡಿ.ಎನ್. ಶಂಕರಭಟ್ಟ, ಮುಂತಾದ ಹಲವು ಮಂದಿ ವಿದ್ವಾಂಸರು ಕೃತಿ ರಚನೆ ಮಾಡಿದ್ದಾರೆ, ವಿದ್ವತ್ಪೂರ್ಣವಾದ ಲೇಖನಗಳನ್ನು ಬರೆದಿದ್ದಾರೆ. ಈ ಕ್ಷೇತ್ರ ಸಂಪೂರ್ಣವಾಗಿ ಈ ಶತಮಾನದ ಈಚಿನ ದಿನಗಳ ಬೆಳವಣಿಗೆಯಾದ್ದರಿಂದ ಇದರ ಪರಿಚಯ ಈ ಗ್ರಂಥಕ್ಕೆ ಹೊರತಾಗಿದೆ.

## ನಿಘಂಟು

ಒಂದು ಭಾಷೆಯ ಶಬ್ದಗಳ ಏಕಾರ್ಥವನ್ನೂ ಬೇರೆ ಬೇರೆ ಅರ್ಥಗಳನ್ನೂ ಆ ಶಬ್ದಗಳ ಸಮಾನಾರ್ಥಕ ಪದಗಳ ಮೂಲಕವಾಗಿಯಾಗಲಿ, ಸಮನಾರ್ಥಕ ಪದಗಳಿಲ್ಲದಿರುವಾಗ ವಿವರಣೆಯ ಮೂಲಕವಾಗಿಯಾಗಲಿ, ಕೆಲವು ಸಂದರ್ಭಗಳಲ್ಲಿ ಸಮನಾರ್ಥ ಕೊಡುವ ಇತರ ಭಾಷೆಗಳ ಪದಗಳ ಮೂಲಕವಾಗಿಯಾಗಲಿ, ಒಂದು ಕಡೆ ತಿಳಿಸುವ ಗ್ರಂಥ ನಿಘಂಟು. ಇದಕ್ಕೆ 'ಶಬ್ದಕೋಶ', 'ಅರ್ಥಕೋಶ'ಗಳೆಂಬ ಹೆಸರುಗಳೂ ಉಂಟು. ಆಧುನಿಕ ನಿಘಂಟುಗಳಲ್ಲಿ ಪದಗಳನ್ನು ಅಕಾರಾದಿಯಾಗಿ ಜೋಡಿಸಿ ಪ್ರತಿಪದದ ಲಿಂಗ, ವಚನ, ರೂಪ, ನಿಷ್ಪತ್ತಿ, ಪ್ರಯೋಗ ವಿಧಾನ, ಅದರ ಬೇರೆ ಬೇರೆ ಅರ್ಥಗಳು, ಒಂದೇ ಅರ್ಥದ ಬೇರೆ ಬೇರೆ ಪದಗಳು, (=ಪರ್ಯಾಯ ಪದಗಳು, ಸಮಾನಾರ್ಥಕ ಪದಗಳು) ಮುಂತಾದ ವಿವರಗಳನ್ನು ಕೊಟ್ಟಿರುತ್ತದೆ. ಭರತ ಖಂಡದ ಪ್ರಾಚೀನ ನಿಘಂಟುಗಳು ಇಷ್ಟು ಸಮಗ್ರ ವ್ಯಾಪ್ತಿಯುಳ್ಳವಾಗಿರಲಿಲ್ಲ. ಈ ಪ್ರಾಚೀನ ನಿಘಂಟುಗಳಲ್ಲಿ ಭಿನ್ನಾರ್ಥಕ ಮತ್ತು ಸಮನಾರ್ಥಕ ನಾಮಪದಗಳನ್ನು ಮಾತ್ರ ಅವುಗಳ ಪರ್ಯಾಯ ಪದಗಳೊಡನೆ ಕೊಟ್ಟಿರುತ್ತದೆ. ಕೆಲವು ವ್ಯಾಕರಣಕಾರರು ವ್ಯಾಕರಣಗಳಲ್ಲಿ ಧಾತು ಪಾಠಗಳನ್ನು ಸೇರಿಸುತ್ತಿದ್ದರು.

**ಸಂಸ್ಕೃತ ನಿಘಂಟುಗಳು:** ಸಂಸ್ಕೃತದಲ್ಲಿ ವೈದಿಕ ನಿಘಂಟೇ ಅತ್ಯಂತ ಪ್ರಾಚೀನವಾದ ನಿಘಂಟು. ಇದರ ಕರ್ತೃ, ಕಾಲಗಳು ತಿಳಿದು ಬಂದಿಲ್ಲ. ಇದರಲ್ಲಿ

**(೨) ಕೇಶಿರಾಜನ ಕೋಶಗಳು:**

**(i) ಱಳಾಕ್ಷರಯುಕ್ತ ಶಬ್ದಕೋಶ**: ಱಟಿ ಕುಳ ಕ್ಷಳ ಈ ಅಕ್ಷರಗಳ ವಿಚಾರವನ್ನು ಕೇಶಿರಾಜನುಶಬ್ದಮಣಿ ದರ್ಪಣದ ಸಂಧಿ ಪ್ರಕರಣದಲ್ಲಿ ವಿವರಿಸಿದ್ದಾನೆ. (ಸೂತ್ರ ೨೮ ರಿಂದ ೩೯ – ಡಿ.ಎಲ್.ಎನ್. ಮುದ್ರಣ) ಱಟಿ ಕ್ಷರಯುಕ್ತ ಪದಗಳ ಒಂದು ಚಿಕ್ಕ ಕೋಶವನ್ನೇ ವ್ಯಾಕರಣ ಗ್ರಂಥದ ಒಂದು ಭಾಗವಾಗಿ ಸೇರಿಸಿದ್ದಾನೆ. ಈ ಕೋಶದಲ್ಲಿ "ಒಂದರ್ಥಮಂ, ಪೇಟ್ವೆ ಸಹಜ ಱಳಂಗಳಂ ಕವಿಮಾರ್ಗದೊಳ್ ಪ್ರಮಾಣ ಪುರುಷರಿಂ ಕಂಡಱಿದವಂ ನೆಱೆ ಪೇಟ್ದಿಪೆಂ" ಎಂದು ಮುನ್ನುಡಿದು (ಸೂ.೩೩ರ ವೃತ್ತಿ), ೧೮೧ ಶಬ್ದಗಳ ಪಟ್ಟಿಯನ್ನು ಕೊಟ್ಟಿದ್ದಾನೆ. ಅವನು ಅರ್ಥವಿಸುವ ಬಗೆಯನ್ನು ಕೆಲವು ಉದಾಹರಣೆಗಳಿಂದ ಕೆಳಗೆ ಪರಿಚಯ ಮಾಡಿಕೊಟ್ಟಿದೆ:

ಒಂದರ್ಥಕ್ಕೆ: ಅದವಟಲೆಂದು, ಮಱುಕಂ
ಕಚ್ಚಟಿಯೆಂದು ಬಿರುದಿನ ಬಳ,
ನೆಗೆಟ್‌ಎಂದು ನಕ್ರಂ
ತಟುಯೆಂದು ಕ್ರೆಯೆಯೊಳಂ ಪಶುವಿನ
ಕೊರಲ ತಳೆಯೊಳಂ ಕುಳಂ.

ಎರಡರ್ಥಕ್ಕೆ ಅಟ್ದಿನೆಂದು ನೀರೊಳ್ ಮುಟುಂಗಿದನುಂ ಕೆಟ್ಟನುಮಕ್ಕುಂ
ಕೊತ್ತಟೆಯೆಂದು ಕಾಗೆಯ ಮೊತ್ತಮುಂ
ಬೆಸೆದವರ ನೆರವಿಯಂಮಕ್ಕುಂ

ಮೂರರ್ಥಕ್ಕೆ ಎಟ್ತೆಂದು ಗೂಳಿಯುಂ
ಅನಡ್ವನುಂ ಹೊರಸಿನ ನೆಯ್ಗೆಯ ಊಕೆಯ
ನುಲಿಯುಮಕ್ಕುಂ

ನಾಲ್ಕರ್ಥಕ್ಕೆ ಕೀಟ್ ಎಂದು ಒರೆಯಿಲ್ಲದ ಬಂಗಾರಮುಂ
ತುರಗಮುಖದ ಲೋಹಮುಂ
ಕ್ಷೀಣ ಕುಲನುಂ
ಕಟಗಂ ಅಕ್ಕುಂ

**ಕನ್ನಡ ನಿಘಂಟುಗಳು:**

ಕನ್ನಡ ವಾಙ್ಮಯದಲ್ಲಿ ರಚಿತವಾಗಿ ನಮಗೆ ದೊರಕಿರುವ ಎಲ್ಲ ಬಗೆಯ ಪ್ರಾಚೀನ ನಿಘಂಟುಗಳ ಸಂಖ್ಯೆ ಸುಮಾರು ೪೦ಕ್ಕಿಂತ ಮಿಗಿಲಾಗಿದೆ. ಈಚೆಗೆ (ಎಂದರೆ ೧೯ನೆಯ ಶತಮಾನದ ಕೊನೆಯ ದಶಕಗಳಲ್ಲಿ ಮತ್ತು ಈ ಶತಮಾನದ (ಆರಂಭದ ದಶಕಗಳಲ್ಲಿ) ವಿದೇಶೀಯ ಮತ್ತು ದೇಶೀಯ ವಿದ್ವಾಂಸರು ರಚಿಸಿರುವ ಸುಮಾರು ೨೦ ನಿಘಂಟುಗಳನ್ನೂ ಲೆಕ್ಕಕ್ಕೆ ತೆಗೆದುಕೊಂಡರೆ, ಸುಮಾರು ೬೦ ನಿಘಂಟುಗಳು ರಚಿತವಾಗಿವೆ. ಪರಿಶೀಲನೆಯ ಸೌಲಭ್ಯಕ್ಕಾಗಿ ಪ್ರಾಚೀನ ನಿಘಂಟುಗಳನ್ನು ನಾಲ್ಕು ವರ್ಗಗಳಾಗಿ ವಿಂಗಡಿಸಿಕೊಳ್ಳಬಹುದು:

(i)ಹಳಗನ್ನಡ–ಕನ್ನಡ ನಿಘಂಟುಗಳು;

(ii)ಕನ್ನಡ–ಸಂಸ್ಕೃತ ನಿಘಂಟುಗಳು;

(iii)ಸಂಸ್ಕೃತ–ಕನ್ನಡ ನಿಘಂಟುಗಳು;

(iv)ಇತರ (ಶಾಸ್ತ್ರೀಯ ಮುಂತಾದ ಪರಿಮಿತ ವಿಷಯಗಳ) ನಿಘಂಟುಗಳು.

ಈ ವರ್ಗಗಳಲ್ಲಿ, ಪ್ರಾತಿನಿಧಿಕವಾಗಿ ಗಮನಾರ್ಹವೆನಿಸುವ ಕೆಲಕೆಲವನ್ನು ಮಾತ್ರ ಪರಿಚಯಾತ್ಮಕವಾಗಿ ಅವಲೋಕಿಸಿದೆ. ಈಚಿನ (ಆಧುನಿಕ) ನಿಘಂಟುಗಳನ್ನು ಒಂದು ಪ್ರತ್ಯೇಕ ವರ್ಗವಾಗಿ ಪರಿಗಣಿಸಿ, ಆ ವರ್ಗದಲ್ಲಿ ಅತ್ಯಂತ ಪ್ರಮುಖವಾದುವನ್ನು ಮಾತ್ರ ಪರಿಚಯ ಮಾಡಿಕೊಟ್ಟಿದೆ.

I. **ಹಳಗನ್ನಡ–ಕನ್ನಡ:**

**(೧) ರನ್ನಕಂದ:** ಈ ನಿಘಂಟು ಪೂರ್ತಿಯಾಗಿ ದೊರೆತಿಲ್ಲ. ಸಿಕ್ಕಿರುವಷ್ಟು ಗ್ರಂಥಭಾಗದಲ್ಲಿ ೧೨ ಕಂದಪದ್ಯಗಳಿವೆ. ಪ್ರತಿ ಪದ್ಯವೂ 'ಕವಿರತ್ನ' ಎಂಬ ಅಂಕಿತದೊಂದಿಗೆ ಮುಗಿಯುದರಿಂದ, ಇದು 'ಗದಾಯುದ್ಧ'ವನ್ನು ಬರೆದ ರನ್ನ ಬರೆದುದೆಮದು ಊಹಿಸಲಾಗಿದೆ. ಒಂದು ಉದಾಹರಣೆ:

ಸಣ್ಣದೆನಲ್ ಕಿರಿದಕ್ಕುಂ,
ಪಣ್ ಎನೆ ಮಾಡೆಂಬ ವಾಚಿ, ಬಳಿಯಹನೆ ವಂಶಂ,
ಎಣ್ ಎನೆ ಲೆಕ್ಕಿಪುದು, ಬಿಸು–
ಗಣ್ಣನ್ ಎನಲ್ ಗೊರವನ್ ಅಪ್ಪುದು – ಎಲೆ ಕವಿರತ್ನಾ
[ಬಿಸುಗಣ್ಣ, ಗೊರವ=ಶಿವ]

ಧಾತುಪಾಠದ ಸಂಹಿತಾಪಾಠದ ಆಧಾರದ ಮೇಲೆಯೇ ಅರ್ಥಸಹಿತವಾದ ಧಾತುಪಾಠವನ್ನು ರಚಿಸಿದನೆಂದೂ, ಇವನ ಕಾಲ ಸುಮಾರ ಕ್ರಿ.ಶ.೬೦೦ ಎಂದೂ, ಹೇಳುವುದು ಸಾಧ್ಯ.[೧೧]

ಕೆಲವು ಉದಾಹರಣೆಗಳು: ಅಟ್ಟು–ಜೀರ್ಣೇ (=ಅರಗು); ಕಾ–ರಕ್ಷಣೇ; ಮಿನುಕು=ಅಂತರ್ಗತಸ್ವನೇ (=ಪಿಸುಗುಟ್ಟು); ಅಗುಟ್ಚಿ – ಜಲಾಶಯಮಗ್ನೇ (=ನೀರಿನಲ್ಲಿ ಮುಳುಗಿಸು)

**(iii) ಪ್ರಯೋಗಸಾರ:** 'ಅಪರಿಮಿತ ವಿದ್ಯರೆನಿಸಿರ್ದ ಪುರಾಣ ಕವೀಂದ್ರರ ಅಖಿಳ ಕಾರ್ಯಂಗಳ ಗೂಢಪದ ಪ್ರಯೋಗಮಂ ನೆರಪಿ ಪದಾರ್ಥಗಳನಣಂ ಮನಂಬುಗೆ ಪೇಳ್ವೆಂ' ಎಂದು ಹೇಳಿ, ಹಿಂದಿನ ಕವಿಗಳಿಂದ ಆಯ್ದ, ಅಪೂರ್ವವಾದ ನಾಮಪದಗಳಿಗೆ ಈ ಪಟ್ಟಿಯಲ್ಲಿ ಅರ್ಥ ಹೇಳಿದ್ದಾನೆ. ಪ್ರಾಯಿಕವಾಗಿ ಕನ್ನಡದಲ್ಲೇ ಅರ್ಥ ಹೇಳಿದ್ದಾನೆ.

ಕೆಲವು ಉದಾಹರಣೆಗಳು: 'ಅಗುಂದಲೆ'ಯೆಂದು ಪಿರಿದು, "ಅಜೆಲ್' ಎಂದು ನಕ್ಷತ್ರಂ, 'ಆಱಿಡಿ'ಯೆಂದು ತುಂಬಿ 'ಕೊತ್ತಳಿ' ಯೆಂದು ಕಾಗೆಗಳ ಮೊತ್ತಂ, ಸೈಪೆಂದು ಪುಣ್ಯ – (ಸು.೨೩೦ರ ಮೇಲೆ ಪದಗಳಿವೆ.)

ರನ್ನ ಕಂದ ಮೊದಲ ಕನ್ನಡ ನಿಘಂಟಾದರೂ ಪೂರ್ತಿಯಾಗಿ ದೊರೆತಿಲ್ಲ. ನಾಗವರ್ಮನ ವಸ್ತು ಕೋಶವು ಬಹುಮಟ್ಟಿಗೆ ಸಂಸ್ಕೃತ ನಿಘಂಟುಗಳನ್ನು ಆಧರಿಸಿ ಬರೆದದ್ದು. ಆದ್ದರಿಂದ, ಕೇಶಿರಾಜನ ಮೇಲ್ಕಂಡ ಶಬ್ದಕೋಶಗಳನ್ನು ಮುಂದಿನ ನಿಘಂಟುಕಾರರಿಗೆ ಮಾರ್ಗದರ್ಶನ ಮಾಡಿದ ರಚನೆಗಳೆಂದು ಹೇಳಬಹುದು.

**(೩) ಕರ್ಣಾಟಕ ಶಬ್ದಸಾರ:** ಇದರ ಕರ್ತೃ ತಿಳಿದು ಬಂದಿಲ್ಲ. ಇದು ಗದ್ಯ ರೂಪದಲ್ಲಿರುವುದು ಗಮನಾರ್ಹ. ಇದರ ಕಾಲ ಸು.೧೪೦೦. ಇದರಲ್ಲಿ ೬೭೬ ವಾಕ್ಯಗಳಿವೆ. ಉದಾಹರಣೆ:

"ಜನ್ನವಗೆಯಂ, ಎಂಟಡಿವರಿಜಂ, ಬೀರಂ, ಬಿಸುಗಣ್ಣನುಗಂ, ಅರೆವಾನಿಸವೆಗೆಯಂ–ಈ ೫ ವೀರಭದ್ರಂಗೆ ಪೆಸರ್ (೫ ಪದಗಳಿಗೂ ಕ್ರಮವಾಗಿ ಅರ್ಥ–ಯಜ್ಞದ ಶತ್ರು, ಎಂಟು ಅಡಿಗಳ ಆಕಾರವುಳ್ಳವನು, ವೀರ, ಈಶ್ವರಪುತ್ರ, ನೃಸಿಂಹನ ಶತ್ರು).

"ಕಂದೆಂದುಂ ಕರೆಯೆಂದುಂ ಕಳಂಕಂ, ಜತ್ತುಳ ಮೆಂದು ಫೇನಂ (=ನೊರೆ), ಕಾಟ್ಪು(ಳ್ಪು)ರಮೆಂದು ಕಾಡ ಹೊನಲ್."

**(೪) ಕಬ್ಬಿಗರ ಕೈಪಿಡಿ:** ಇದರ ಕರ್ತೃ ವಿಚಾರವೂ ತಿಳಿದು ಬಂದಿಲ್ಲ. ಕಾಲ

ಐದರ್ಥಕ್ಕೆ (ಒಂದೇ ಪದ) ಬಟೆಯೆಂದು ಬಟ್ಟೆಯುಂ
ವಂಶಮುಂ ಕರೆವನುಂ ಲೇಪಿಸುವುದುಂ
ಪಿಂಗಲಿಯ ಬಟೆಗೊರಲುಮಕ್ಕುಂ;
ಮತ್ತೆಂಬ ಪೂರಕದ ಬಟೆ ಅವ್ಯಯಮಾಗಿ
೫೬೦,

'ಇವು ಪ್ರಯೋಗದೃಷ್ಟಂಗಳ್, ಇವಜೊಳ್ ಸಂಶಯಮಿಲ್ಲ' ಎಂಬ ಕೇಶಿರಾಜನ ಮಾತಿನಿಂದ, ಕವಿಗಳ ಪ್ರಯೋಗಗಳ ಆಧಾರದ ಮೇಲೆ ಅರ್ಥವನ್ನು ಸಂದೇಹಕ್ಕೆ ಎಡೆಯಿಲ್ಲದಂತೆ ನಿರ್ಣಯಿಸಿದ್ದಾನೆ ಎಂಬುದು ಗೊತ್ತಾಗುತ್ತದೆ. ಇವನ ಈ ಕ್ರಮ ಇಂದಿಗೂ ಮೇಲುಪಂಕ್ತಿ.

(ii) **ಧಾತು ಪಾಠ:** ಶಬ್ದಮಣಿ ದರ್ಪಣದ ೬ನೆಯ ಪ್ರಕರಣ ಅಚ್ಚಗನ್ನಡ ಧಾತುಗಳ ಅರ್ಥವನ್ನು ತಿಳಿಸುವುದಕ್ಕೆ ಮೀಸಲಾಗಿದೆ. ಕಕಾರದಿಂದ ಮೊದಲಾಗಿ ಳಕಾರದವರೆಗೆ ಬೇರೆ ಬೇರೆ ವ್ಯಂಜನಾಕ್ಷರಗಳಿಂದ ಕೊನೆಗೊಳ್ಳುವ ಧಾತುಗಳಿಗೆ ('ಕ್ರಿಯಾರ್ಥೋ ಧಾತುಃ' – ಕ್ರಿಯೆಯ ಅರ್ಥವನ್ನು ಹೇಳುವ ಶಬ್ದ ಧಾತು) ಸಂಸ್ಕೃತದಲ್ಲಿ ಅರ್ಥ ಹೇಳಿರುವುದು ಗಮನಾರ್ಹ. ಸಂಸ್ಕೃತ ಬಲ್ಲವರಿಗೆ ಕನ್ನಡ ಧಾತುಗಳ ಅರ್ಥವನ್ನು ತಿಳಿಸಿಕೊಡುವುದು ಅವನ ಉದ್ದೇಶವೆಂದು ಕಾಣುತ್ತದೆ. ಅಲ್ಲದೆ ಎಷ್ಟೋ ಸಂದರ್ಭಗಳಲ್ಲಿ, ಕನ್ನಡ ಶಬ್ದಗಳಿಗೆ ಸಂಕ್ಷೇಪವಾಗಿ ಕನ್ನಡದಲ್ಲೆ ಅರ್ಥ ಹೇಳುವುದು ಕಷ್ಟವಾಗಿರುವುದೂ ಒಂದು ಕಾರಣವಾಗಿದ್ದಿರಬೇಕು.

ಸಂಸ್ಕೃತದಲ್ಲಿ ವೇದಸಮವಾಗಿ ಭೀಮನು ಧಾತು ಪಾಠಕ್ಕೆ ಅರ್ಥ ಹೇಳಿರುವನೆಂದೂ, ಅದೇ ತೆರನಾಗಿ ತಾನು ಕನ್ನಡದಲ್ಲಿ ಹೇಳುವುದಾಗಿಯೂ ತಿಳಿಸಿದ್ದಾನೆ. ಸಂಸ್ಕೃತದಲ್ಲಿ ಅನೇಕ ಮಂದಿ ಭೀಮ–ಭೀಮಸೇನರು ಆಗಿಹೋಗಿದ್ದಾರೆ. ಇವರುಗಳ ಪೈಕಿ 'ಧಾತುಪಾಠ' ಮತ್ತು 'ಭೈಮಿವ್ಯಾಕರಣ'ದ ಕರ್ತೃವೇ ಕೇಶಿರಾಜನು ಉಲ್ಲೇಖಿಸಿರುವ ಭೀಮನೆಂದು ಎ.ಎನ್.ನರಸಿಂಹಯ್ಯನವರು ನಿರ್ಣಯಿಸಿದ್ದಾರೆ. "ಪತಂಜಲಿಯ ಮಹಾಭಾಷ್ಯದಿಂದ ಮೊದಲು ಧಾತುಗಳ 'ಸಂಹಿತಾ ಪಾಠ' ಮಾತ್ರವಿದ್ದಿತು, ಎಂದರೆ ಧಾತುಗಳನ್ನು ಬಿಡಿಸಿ ಹೇಳಲಿಲ್ಲ, ಒಟ್ಟಾಗಿ ಅರ್ಥನಿರ್ದೇಶವಿಲ್ಲದ ಧಾತುಗಳನ್ನು ಜೋಡಿಸಿ ಬಿಟ್ಟಿದ್ದಿತು – ಎಂಬುದು ಸ್ಪಷ್ಟವಾಗುತ್ತದೆ. ಭೀಮಸೇನನು ತರುವಾಯ ವಿದ್ಯಾರ್ಥಿಗಳ ಉಪಯೋಗ, ಹಿತಗಳನ್ನುಮನಸ್ಸಿನಲ್ಲಿಟ್ಟುಕೊಂಡು ಧಾತುಗಳನ್ನು ಪ್ರತ್ಯೇಕಿಸಿ, ಅವುಗಳಿಗೆ ಅರ್ಥನಿರ್ದೇಶ ಮಾಡಿದನು, ಎಂದು ಹೇಳಬಹುದು.... ಕೇಶಿರಾಜನು ಉಲ್ಲೇಖಿಸಿರುವ ಭೀಮನು ಪಾಣಿನಿಯ

ನಡೆವಕ್ಕಿ ಹಂಸೆಯಕ್ಕುಂ ತೊಡರ್ವಕ್ಕಿಯೆ ಚಕ್ರವಾಕಂ, ಎಲೆ ಚತುರಾಸ್ಯ।
(ಪ.೧೨೯)

**(೬) ಕಬ್ಬಿಗರ ಕೈಪಿಡಿ:** ಇದರ ಕರ್ತೃ ಲಿಂಗ ಮಂತ್ರಿ. ಇವನ ಕಾಲ ಸು.೧೫೩೦. ವೀರಶೈವ ಮತೀಯ; ತಂದೆ ವಿರೂಪಾಕ್ಷ. ವಿಜಯನಗರ ಅರಸರ ಸಾಮಂತನಾಗಿದ್ದ ರಾಯಭೂವರನ ಪ್ರಧಾನಿಯಾಗಿದ್ದನೆಂದು ಶಾಸನಗಳಿಂದ ತಿಳಿದು ಬರುತ್ತದೆ. ತಾನು ಸಂಗೀತ ನಿಪುಣನೆಂದೂ, ಅನೇಕ ಲಿಪಿಗಳನ್ನು ಬಲ್ಲವನೆಂದೂ ಹೇಳಿಕೊಂಡಿದ್ದಾನೆ. 'ಭಿಕ್ಷಾಟನ ಚರಿತೆ'ಯುನ್ನು ಬರೆದಿರುವ ಗುರುಲಿಂಗವಿಭು ಇವನಾಗಿರಬಹುದು ಎಂಬ ಸಂದೇಹಕ್ಕೂ ಅವಕಾಶವಿದೆಯೆಂದು ಕವಿಚರಿತೆಕಾರರು ತಿಳಿಸುತ್ತಾರೆ.

ಈ ಶಬ್ದಕೋಶ ವಾರ್ಧಿಕ ಷಟ್ಪದಿಯಲ್ಲಿರುವುದು ಗಮನಾರ್ಹವಾದ ಅಂಶ. ೧೦೦ ಪದ್ಯಗಳಲ್ಲಿ* ಹಳಗನ್ನಡ ಪದ್ಯಗಳಿಗೆ ಅರ್ಥವನ್ನು ಹೇಳಿದೆ. ಗ್ರಂಥದ ಪ್ರಾರಂಭದಲ್ಲಿ ಪಂಪಾ ವಿರೂಪಾಕ್ಷ ಲಿಂಗನ ಸ್ತೋತ್ರವಿದೆ. ಅರ್ಥ ತಿಳಿಸಲು ಆಯ್ಕೆ ಮಾಡಿರುವ ಶಬ್ದಗಳ ವೈಶಿಷ್ಟ್ಯವನ್ನು ಕವಿ ಹೀಗೆ ಸೂಚಿಸಿದ್ದಾನೆ:

"ಮಿಸುಪ ಗೂಢಪದ ಪ್ರಯೋಗದೊಳ್ಪಂ
ರಸಮಂ ಒಸರ್ವ ಅಚ್ಚಗನ್ನಡದ ಚೆಲ್ವುಮಂ,
ತದ್ಭವದ ಬೆಸುಗೆಯಂ, ದೇಶ್ಯಕ್ಕೆ ಆಮರ್ದ್ದ ಸೊಂಪಂ,
ತೊಳಪ ತತ್ಸಮದ ಬಿನ್ನಣವನು,
...... ಕಬ್ಬಿಗರ ಕೈಪಿಡಿಯೆಂದು ಪೆಸರನಿತ್ತು
ಒಸೆದು ಪೇಳ್ದಪೆನು,"

ಉದಾಹರಣ ಪದ್ಯ

ವಂಚನೆಗೆ ಮಾಜು ಎಂದು ಪೆಸರಕ್ಕು, ವಂಶಮಂ
ಬಂಚಮೆನಲ್ ಅಕ್ಕು, ಗಾವಿಲನೆಂದು ಗ್ರಾಮಣಿ, ಪ–
ಳಂಚು ಎಂದು ತಾಗು ಎಂದು ಸಂಘಟ್ಟನಾರ್ಥ, ಪಾಗದ ಮೆನಲ್, ಪ್ರಾಕೃತಾಖ್ಯಂ;
ಉಂಚಂ ಎಂದು ಉದ್ದಮುಪ್ಪುದು, ಮೇಣ್ ಅಪೂರ್ವಮಂ
ಪಂಚಂ ಎಂಬುದು, ಅವಸೆ ಎನಲ್ ಅಮಾವಾಸ್ಯೆ, ಗುಳ
ವಂಚಿತಂ ಗುಡ, ಪಕ್ಕ, ರೆಕ್ಕೆಯಪ್ಪುದು, ನಾಡಿ ನಾಳಿಯೆನೆ ಗಳಿಗೆಯುಕ್ಕುಂ.

* ೧೦೧ ಪದ್ಯಗಳೆಂದು ಎನ್.ಬಸವರಾಧ್ಯರ ಹೇಳಿಕೆ. (ಚಿನ್ನದ ಬೆಳಸು, ಕನ್ನಡ ಸಾಹಿತ್ಯ ಪರಿಷತ್ತು, ೧೯೭೯; ಹೊಂದೆನೆ–೩, ೪೪.

ಸು.೧೪೦೦. ೯೯ ಕಂದ ವೃತ್ತಗಳಲ್ಲಿ ಹಳಗನ್ನಡ ಪದಗಳಿಗೆ ಅರ್ಥವನ್ನು ತಿಳಿಸಿದೆ. ಒಂದು ಉದಾಹರಣೆ:

ಪಂಡಿತವಕ್ಕಿ ಕೀರನೊಳೆ, ತಾರಗೆವಿಟ್ಟಿಯೆನಲ್ಕೆ ಪುಷ್ಕರಂ,
ಕಂಡವೆನಲ್ಕೆ ತುಂಡಿನೊಳೆ, ಬಣ್ಣವುರಂ ಮಿಗೆ ವರ್ಣಪೂರದೊಳ್,
ತಂಡವೆನಲ್ಕೆ ಹಿಂಡಿನೊಳೆ, ದೂದವಿ ಕುಂಟಣಿಯೊಳ್, ಬೆದಂಡೆ ವೈ–
ದಂಡಿಕ ನಾಮಧೇಯದೊಳೆ, ಕನ್ನವುರಂ ಸಲೆ ಕರ್ಣಪೂರದೊಳ್.

[ಕೀರ=ಗಿಳಿ, ಪುಷ್ಕರ=ಆಕಾಶ, ಬಣ್ಣವುರ, ಬೆದಂಡೆ, ಕನ್ನವುರ ಇವು ಅರ್ಥವೆಂದು ಕೊಟ್ಟಿರುವ ಸಂಸ್ಕೃತ ಪದ್ಯಗಳ ತದ್ಭವಗಳು]

(೫) **ಚತುರಾಸ್ಯ ನಿಘಂಟು:** ಇದನ್ನು ಬರೆದವನು ಚತುರಾಸ್ಯ ಬೊಮ್ಮರಸನೆಂಬ ವೀರಶೈವ ಕವಿ. ಇವನ ಕಾಲ ಸು.೧೪೫೦. "ಗಗನಾನ್ವಯ ತಿಲಕಂ ಹಂಪರಸ ಸೂನು ತಿಪ್ಪರಸಂ ಪೇಳೆಲೆ ಚತುರಾನನ" ಎನ್ನಲು ತಾನು "ಕರ್ಣಾಟಕಾಭಿಧಾನ"ವನ್ನು ಹೇಳಿದುದಾಗಿ ಕವಿ ಹೇಳಿಕೊಂಡಿದ್ದಾನೆ. (ಪ.೪) ಗ್ರಂಥದ ಕಡೆಯಲ್ಲಿ "ಇಂತೀ ಕನ್ನಡ ದೇಸಿಯ ಅನಂತಾರ್ಥವ ಬುಧ ಸಮೂಹವು ಅರಿವಡೆವಂದದೆ ಸಂತಸದಿಂ ಅರಿಪಿದಂ ಕವಿ ಚಿಂತಾಮಣಿಯೆನಿಪ ಸರಸ ಕವಿ ತಿಪ್ಪರಸಂ" (ಪ.೧೩೩) ಎಂದು ಹೇಳಿರುವುದರಿಂದ, ಗ್ರಂಥದ ರಚನೆಯಲ್ಲಿ ತಿಪ್ಪರಸನು ಮಾರ್ಗದರ್ಶನ ಮಾಡಿರಬಹುದೆಂದು ತೋರುತ್ತದೆ. ಗ್ರಂಥದಲ್ಲಿ ೧೩೭ ಕಂದ ಪದ್ಯಗಳಿವೆ. ಗ್ರಂಥಾರಂಭದಲ್ಲಿ 'ಪಂಪೆಯಾಳ್ದನ'(ವಿರೂಪಾಕ್ಷನ) ಸ್ತೋತ್ರವಿದೆ. ಪ್ರತಿ ಪದ್ಯವೂ 'ಚತುರಾಸ್ಯ' ಎಂದು ಕೊನೆಗೊಳ್ಳುವುದರಿಂದ ಈ ನಿಘಂಟು 'ಚತುರಾಸ್ಯ ನಿಘಂಟು' ಎಂದೇ ಪ್ರಸಿದ್ಧ. "ಕನ್ನಡದೆ ಎಂತಪ್ಪುವು ಶಬ್ದ ಎಂಬ ವಿದ್ವಜ್ಜನರಾ ಚಿಂತೆ ಪರಿಹರಿಪ ಮಾಳ್ಕೆಯೊಳ್ ಇಂತುಸಿರ್ವೆಂ ದೇಸಿ ತದ್ಭವಂ ತತ್ಸಮಮಂ" ಎಂದು ಗ್ರಂಥದ ವಿಷಯವನ್ನು ಕವಿ ತಿಳಿಸಿದ್ದಾನೆ.

ಎರಡು ಉದಾಹರಣೆಗಳು:

ಬಿಯದಂ ವ್ಯಾಧಂ; ತೆವರ್, ಅ। ರಯಲ್, ಉದ್ದನೆಲಂ; ಮುಸುಂಕಿತು
ಎನಲ್ ಆವರಣಂ;
ಜಯಮನೆ ಗೆಲ್ಲಂ, ನೆರೆಸಂ। ದೆಯಮೆನೆ ಸಂದೇಹಮಪ್ಪುದು, ಎಲೆ
ಚತುರಾಸ್ಯ॥ (ಪ.೩೫)
ನುಡಿವಕ್ಕಿಯೆನಲ್ ಗಿಣಿಯುಂ। ಪಡಿಯರವಕ್ಕಿಯನೆ ಕೋಗಿಲೆಯ
ಪೆಸರಕ್ಕುಂ;

ಒಂದು ಉದಾಹರಣ ಪದ್ಯವನ್ನೂ ಅದಕ್ಕೆ ಬರೆದಿರುವ ಟೀಕನ್ನೂ ಕೆಳಗೆ ಕೊಟ್ಟಿದೆ:

ಸಾರಿಕೆಯೆನಿಕ್ಕಂಚೆಯೆನೆ ಹಂಸೆ ಸೋಗೆಯೆನೆ।
ಮೊರ (ಮೋರ?)ನೆನೆ ನವಿಲ್ ಅಮಳ್‌ದಲೆವಕ್ಕಿಯದು ತಾನು।
ಭೇರುಂಡನಕ್ಕು ಚಾದಗೆ ಚಾತಕಮದಕ್ಕು ಕೊಂಚೆಯೆನೆ ಕ್ರೌಂಚಪಕ್ಷಿ॥
ವಾರೆಯಾಗದು ಕೇಗೆನಲ್ ನವಿಲದನಿ ಕೋಕಿ।
ಲಾರವಕೆ ಕುಕಿಲೆಂದು ತೊಂಡುಗೆಡೆದುದೆಲ್ಕೆ।
ಸಾರುಗುಂ ಗಿಳಿವಾತುಂ ಬೆಜ್ಜೆ ಜಡಿಪಂ ಬಗ್ಗು ಬಿಪ್ಪಂಡ ವೆಂದಿಂಬಿವು॥(ಪು.೩೦)

ಟೀ॥ ಸಾರಕಿ–ಸಾರಕಿಯೆನೆ–ಯೆನೆ–ಯೆನಲಾಗಿ–ಹೆಂಣುಗಿಳಿಯ ಪೆಸರು. ಎಂಚೆಯೆನೆ–ಅಂಚೆಯೆನಲಾಗಿ–ಹಂಸೆ–ಹಂಸೆಪಕ್ಷಿಯೆಂದಾಗುವುದು. ಇದು ಹಂಸೆ ಪಕ್ಷಿಯ ಪೆಸರು, ಸೋಗೆ–ಸೋಗೆಯೆನಲಾಗಿ–ಮೊರ–ಮೊರವೆಯೆನಲಾಗಿ–ಈ ಎರಡು ನವಿಲು–ನವಿಲೆಂದಾಗುವುದು–ಇದು ಸೋಗೆ ನವಿಲಿನ ಪೆಸರು. ಅಮಳ್ದಲೆವಕ್ಕಿಯು–ಯೆರಡು ತಲೆಯಾದ ಹಕ್ಕಿ. ಇತ್ತಲೆವಕ್ಕಿ–ಇತ್ತಲೆವಕ್ಕಿಯು–ತಾನದು–ಅದು ಗಂಡುಭೇರುಂಡನಾಗುವುದು. ಇದು ಇರುದಲೆವಕ್ಕಿಯ ಪೆಸರು. ಚಾದಗೆ–ಚಾದಗೆ ಹಕ್ಕಿಯು–ಚಾತಕಮದಕ್ಕು–ಚಾತಕ ಪಕ್ಷಿಯೆಂದಾಗುವುದು–ಕೊಂಚಯೆನೆ–ಕೊಂಚೆಯೆನಲಾಗಿ–ಕ್ರೌಂಚಪಕ್ಷಿಯು–ಕ್ರೌಂಚಪಕ್ಕಿಯೆಂದಾಗುವುದು–ವಾರೆಯಾಗದು–ಹೊರಚ್ಚಾಗದು. ಕೇಗೆನಲು–ಕೇಗೆಯೆನಲಾಗಿ–ನವಿಲದನಿ–ನವಿಲದನಿಯೆಂದಾಗುವುದು. ತೊಂಡುಗೆಡೆದುನೆನಲ್ಕೆ–ತೊಂಡು ಗೆಡೆದುದೆನಲಾಗಿ–ಗಿಳಿಯ ವಾತು–ಸಾರುಗುಂ–ಸೇರುವುದು–ಇದು ಗಿಳಿಯ ಮಾತಿನ ಪೆಸರು–ಬೆಜ್ಜೆ–ಬೆಜ್ಜೆಯೆಂದು. ಜಡಿಪಂ–ಜಡಿಪಮೆಂದು–ಬಗ್ಗು–ಬಗ್ಗುವೆಂದು–ಬಿಪ್ಪಂಡ–ಬಿಪ್ಪಂಡವೆಂದು–ಯೆಂದೆಂಬವು ಯೆಂದೆಂಬಂಥಾ ಈ ನಾಲ್ಕು.

'ನಾನಾರ್ಥ ಶಬ್ದ' ಎಂಬ ವಿಭಾಗದಲ್ಲಿ 'ಕಾಂತ' ('ಕ'ಕಾರದಿಂದ ಕೊನೆಗೊಳ್ಳುವ) ಶಬ್ದಗಳಿಂದ ಮೊದಲಾಗಿ 'ಸಾಂತ'ಬ್ದಗಳವರೆಗೆ, ಕೆಲವುವರ್ಗಾಕ್ಷರಗಳಿಂದ ಕೊನೆಗೊಳ್ಳುವ ಶಬ್ದಗಳನ್ನು ಬೇರೆ ಬೇರೆ ಗುಂಪುಗಳಾಗಿ ಮಾಡಿಕೊಂಡು ಅರ್ಥಹೇಳಿರುವುದು ಈ ಗ್ರಂಥದ ಒಂದು ವಿಶೇಷ. ಇದು ಕೇಶಿರಾಜನು ತನ್ನ 'ಪ್ರಯೋಗಾಸರ'ದಲ್ಲಿ ಅನುಸರಿಸಿರುವ ಕ್ರಮ.

**(೮) ಸೂರ್ಯ ಕವಿಯ 'ಕವಿ ಕಂಠಹಾರ':** 'ಕವಿ ಕಂಠಹಾರ' ವನ್ನು ಬರೆದಿರುವ ಸೂರ್ಯನು ಬ್ರಾಹ್ಮಣ. ಸೂರ್ಯಭಕ್ತನಾದ ಕರಣಿಕ ತಿಮ್ಮ ಮಂತ್ರಿಯ ಮಗ; ಬೇಲೂರ

ಈ ನಿಘಂಟಿಗೆ ಹೆಸರು ಘಟ್ಟದ ಹೊನ್ನಪ್ಪನೆಂಬುವನು (೧೮೫೫) 'ಚಕೋರ ಚಂದ್ರಿಕೆ' ಎಂಬ ಟೀಕನ್ನು ಬರೆದಿದ್ದಾನೆ.

**(೭) ಕರ್ಣಾಟಕ ಶಬ್ದ ಮಂಜರಿ:** ಇದನ್ನು ರಚಿಸಿದವನು ವಿರಕ್ತ ತೋಂಟದಾರ್ಯನೆಂಬ ವೀರಶೈವ ಕವಿ. ಇವನ ಕಾಲ ಸು.೧೫೬೦. ಇದರಲ್ಲಿ ವಾರ್ಧಕಷಟ್ಪದಿಯ ೧೨೦ ಪದ್ಯಗಳಿವೆ. ಹಳಗನ್ನಡ ಪದಗಳಿಗೆ ಅರ್ಥವನ್ನು ತಿಳಿಸಿದೆ. "ಅಚ್ಚಗನ್ನಡ ಗೂಢಪದ ತತ್ಸಮಂ ತದ್ಭವಗಳೆಂಬ ಶಬ್ದನಾಮಗಳ ನೋರಂತೆ ವಿರಚಿಸಿದೆನೆ ಎಲ್ಲಾ ಕವೀಶ್ವರರ ಉದಾಹರಣಸನ್ಮಾರ್ಗವಿಡಿದು" ಎಂದು ನಿಘಂಟು ರಚನೆಯ ಉದ್ದೇಶವನ್ನು ಕವಿ ತಿಳಿಸಿದ್ದಾನೆ. "ಈ ನಿಘಂಟು ಬಹಳ ಪ್ರಚಲವಾಗಿತ್ತೆಂದು ಕಂಡು ಬರುತ್ತದೆ. ಆದ್ದರಿಂದಲೇ ಇದಕ್ಕೆ ನಾಲ್ಕು ಬೇರೆ ಬೇರೆ ಟೀಕುಗಳು ರಚಿತವಾಗಿವೆ. ೧೮೭೦ರಲ್ಲಿ ಮುನೇಗೌಡರ ಟೀಕೂ, ೧೮೮೪ರಲ್ಲಿ ಹೆಸರುಘಟ್ಟದ ಹೊನ್ನಪ್ಪನವರ 'ವಿಬುಧಾನಂದಿನೀ' ಎಂಬ ಟೀಕೂ ೧೯೯೧ರಲ್ಲಿ ಎನ್.ಆರ್.ಕರಿಬಸವಶಾಸ್ತ್ರಿಗಳ 'ಸುಜನೋಲ್ಲಾಸಿನೀ' ಎಂಬ ಟೀಕೂ, ಕರ್ತೃ ಯಾರೆಂಬುದು ತಿಳಿಯದ ಮತ್ತೊಂದು ಅಚ್ಚಾಗಿಲ್ಲದ ಟೀಕೂ ಕಂಡು ಬರುತ್ತವೆ."[೧೨]

೧೮೭೦ರಲ್ಲಿ ಮದರಾಸಿನ ಹಿಂದೂ ಭಾಷಾ ಮುದ್ರಾಕ್ಷರ ಶಾಲೆಯಲ್ಲಿ ಅಚ್ಚಾಗಿರುವ ಪ್ರತಿಯ 'ಅವತಾರಿಕೆ'ಯಲ್ಲಿ, "ಶ್ರೀಮನ್ ಮಹೀಶೂರಪುರ ವರಾಧೀಶ ಶೀಮದ್ ರಾಜಾಧಿರಾಜ ಶ್ರೀಕೃಷ್ಣಕಂಠೀರವ ಸಾರ್ವಭೌಮನ ಅಪ್ಪಣೆಯಿಂದ ಸಭಾರತ್ನದಲ್ಲಿ ವಪ್ಪಿರ್ದ ಮಹಾಪಂಡಿತರಿಂದ ಈ ಕರ್ಣಾಟ ಶಬ್ದ ಮಂಜರಿಗೆ ಟೀಕು ಮಾಡಲ್ಪಟ್ಟು ಇದೆ" ಎಂಬ ಮಾತಿನಿಂದಲೂ, ಮುಖ ಪತ್ರದಲ್ಲಿ – "ಬೆಂಗಳೂರಿನಲ್ಲಿರುವ ಕರ್ಣಾಟ ಚತುರ್ವಿಧ ಕವಿ ಶಾರದ ಮುನೇಗೌಡರಿಂದ ಚೆನ್ನಾಗಿ ಶೋಧಿಸಲ್ಪಟ್ಟು ಇದೆ" ಎಂಬ ಮಾತಿನಿಂದಲೂ ಮುನೇಗೌಡರು ಈ ಗ್ರಂಥಕ್ಕೆ ಟೀಕು ಬರೆದವರಲ್ಲ ಎಂದು ಗೊತ್ತಾಗುತ್ತದೆ.

"ವರಷಟ್‌ಸ್ಥಲಾಚಾರ ಸಂಪನ್ನ ಸಿದ್ಧನಮಲಸು। ಸ್ಥಿರ ಶೈವ ಪಂಚಾಕ್ಷರೀ ಮಂತ್ರ ಹೃದಯನುರು। ತರ ಸತ್‌ಕ್ರಿಯಾ ಜ್ಞಾನ ಸಂಪನ್ನನಖಿಲ ಶಾಸ್ತ್ರಾರ್ಥ ಕೋವಿದ ಪಾವನಾ॥ ಚರಿತ ಘನಗುರು ನಿರಂಜನ ಲಿಂಗ ಚರಣ ಸರ ಸಿರುಹಾ ಸೌರಭ ಮಧುಕರಂ ತೋಂಟದಾರ್ಯಂ ಬಿ। ತ್ತರಿಸಿದನೆನಲ್ಕೆ ಮೆಚ್ಚದರೊಳರೆ ಕರ್ಣಾಟ ಶಬ್ದ ಮಂಜರಿಯನಿದನು।" (ಪ.೨) ಎಂದು ತನ್ನ ವಿಚಾರವನ್ನೂ ಗ್ರಂಥಪ್ರಾಶಸ್ಯವನ್ನೂ ಸೂಚಿಸಿ, ತನ್ನ ಆರಾಧ್ಯ ದೈವವಾದ, 'ವರಗುರು ನಿರಂಜನ" ನೆನಿಸಿದ ಶಿವನ ಪರ್ಯಾಯ ನಾಮಗಳನ್ನು ತಿಳಿಸುವ ಪದ್ಯದಿಂದ ಕವಿ ಗ್ರಂಥವನ್ನು ಪ್ರಾರಂಭಿಸುತ್ತಾನೆ.

ಪ್ರಯೋಗ, ಪದಗತವಾದ ಹ್ರಸ್ವ ದೀರ್ಘಗಳನ್ನು ವಿನಿಮಯ ಮಾಡಿಕೊಳ್ಳುವುದು, ಪದಗಳನ್ನು ಸ್ವೇಚ್ಛೆಯಾಗಿ ಪ್ರಯೋಗಿಸುವುದು – ಇವೇ ಮೊದಲಾದ ಹಲವು ದೋಷಗಳು ಕಾಣಬರುತ್ತವೆ" ಎಂದೂ, ಗದ್ಯರೂಪದಲ್ಲಿರುವ 'ಶಬ್ದ ಸಾರ'ವನ್ನು ಅಲ್ಲಿನ ಕೆಲವು ಪದ್ಯಗಳನ್ನು ಬಿಟ್ಟು ಪದ್ಯ ರೂಪಕ್ಕೆ ತಿರುಗಿಸಿದ್ದಾನೆ ಎಂದೂ ಈ ಗ್ರಂಥದ ಸಂಪಾದಕರು ಅಭಿಪ್ರಾಯಪಟ್ಟಿದ್ದಾರೆ.[೧೩] ಎಷ್ಟೇ ಸಣ್ಣ ದೋಷವಾದರೂ ಅದು ಕಾವ್ಯದ ಸೌಂದರ್ಯಕ್ಕೆ ಕುಂದು ತರುವುದು ನಿಶ್ಚಯ. ಆದರೆ, ಶಾಸ್ತ್ರ ಕವಿತ್ವದಲ್ಲಿ ಮೇಲೆ ಸೂಚಿಸಿರುವಂಥ ತಪ್ಪುಗಳನ್ನು ಅಷ್ಟಾಗಿ ಗಮನಿಸಬೇಕಾಗಿಲ್ಲವೆಂದು ತೋರುತ್ತದೆ. ನಾಗವರ್ಮನಂತ ಸಮರ್ಥ ಕವಿಯೇ ತನ್ನ 'ವಸ್ತು ಕೋಶ'ದಲ್ಲಿ ಕೆಲವು ಇಂಥ ದೋಷಗಳನ್ನು ಮಾಡಿರುವಲ್ಲಿ, 'ಕವಿಕಂಠಹಾರ'ದಂಥ ಚಿಕ್ಕ ಕೃತಿಯಲ್ಲಿ ಪದ್ಯ ರಚನೆಗೆ ಸಂಬಂಧಿಸಿದ ಸಣ್ಣ ಪುಟ್ಟ ದೋಷಗಳನ್ನು ದೊಡ್ಡದು ಮಾಡಬೇಕಾಗಿಲ್ಲ. ಅದರಲ್ಲಿಯೂ, ನಿಘಂಟಿನ ಶಬ್ದರೂಪಗಳನ್ನು ಇದ್ದ ಹಾಗೆಯೇ ಪದ್ಯ ಬಂಧದಲ್ಲಿ ಅಡಗಿಸುವುದು ಶ್ರಮಸಾಧ್ಯವಾದ ಕೆಲಸ ಎಂಬುದನ್ನೂ ಮರೆಯಬಾರದು. ಅಲ್ಲದೆ, ವಿವೇಕಿಗಳು ಮಾಸಿದ ಕನ್ನಡಿಯನ್ನು ಹಸನು ಮಾಡಿಕೊಂಡು ಉಪಯೋಗಿಸುವಂತೆ, "ಪಸುಳೆಯೆ ನಾಂ ಪೇಳ್ದ ಇದರೊಳಗೆ ಒಸೆಯುತೆ ತಪ್ಪುಗಳ ತಿರ್ದಿ ಮೆರೆವುದು ಗುಣಮಂ" ಎಂದು ಕವಿಯೇ ಓದುಗರನ್ನು ಬೇಡಿಕೊಂಡಿದ್ದಾನೆ. ನೇರವಾಗಿ ಹೇಳದಿದ್ದರೂ, ಶಬ್ದಸಾರವನ್ನು ಅನುಸರಿಸಿ ಪದ್ಯರೂಪದಲ್ಲಿ ಇದನ್ನು ಬರೆದಿರುವುದಾಗಿ ಅವನು ತಿಳಿಸಿರುವುದು ಮೇಲೆ ಉದಾಹರಿಸಿರುವ ಪದ್ಯದಲ್ಲಿ ಸೂಚಿತವಾಗಿರುವಂತಿದೆ. ಕುಕವಿಗಳಿಗೆ ಮೊದಲು ನಮಸ್ಕರಿಸಿ ಆಮೇಲೆ ರಸಿಕರಿಗೆ ನಮಸ್ಕರಿಸುತ್ತೇನೆ ಎಂಬ ತನ್ನ ಮಾತಿಗೆ, "ಮುಸುಕಿದ ಕೆಂಜಿಗ (ಕೆಂಪುಗೊದ್ದ) ಗೊಡಹುತ ಪೊಸ ಪಣ್ಣಂ ಮುದದೊಳ್ ಒಲ್ದು ಸವಿವಂತೆವೊಲ್ ಆಂ" ಎಂಬ ಈ ದೃಷ್ಟಾಂತವೂ ಮೇಲಿನ ಕನ್ನಡಿಯ ದೃಷ್ಟಾಂತವೂ ಸೂರ್ಯನ ಕಾವ್ಯ–ಕವಿತ್ವ ಶಕ್ತಿಯನ್ನು ಸ್ವಲ್ಪಮಟ್ಟಿಗೆ ತೋರಿಸುತ್ತವೆ. ಇಷ್ಟು ಬೆಳೆಸಿದ್ದರ ಉದ್ದೇಶ, ನಮ್ಮ ಪ್ರಾಚೀನ ಶಾಸ್ತ್ರಗ್ರಂಥಗಳನ್ನು ವಿಮರ್ಶೆ ಮಾಡುವಾಗ ಯಾವ ದೃಷ್ಟಿ ಇರಬೇಕು ಎನ್ನುವುದನ್ನು ಸೂಚಿಸುವುದು; ಹಾಗೂ, ಕಾವ್ಯ ಗುಣವೂ ಉಳ್ಳ ಕವಿರಾಜಮಾರ್ಗದಂಥ ಶ್ರೇಷ್ಠ ಶಾಸ್ತ್ರ ಗ್ರಂಥಕ್ಕೆ ಎಷ್ಟು ಹೆಚ್ಚಿನ ಬೆಲೆ ಕೊಡಬೇಕಾಗುತ್ತದೆ ಎಂಬುದನ್ನು ಅರಿಯುವುದು.

ಎರಡು ಉದಾಹರಣ ಪದ್ಯಗಳೊಂದಿಗೆ ಈ ಗ್ರಂಥಾವಲೋಕನವನ್ನು ಮುಗಿಸಬಹುದು:

ದೊರೆಯಾದ ವೆಂಕಟಾದ್ರಿ ರಾಜನ ಮೊಮ್ಮಗನೂ ಧವಳಾಂಕ ಭೀಮ ಎಂಬ ಬಿರುದು ಹೊಂದಿದ್ದ ಕೃಷ್ಣರಾಜನ ಮಗನೂ ಆದ ವೆಂಕಟಾದ್ರಿ ರಾಜನ ಆಜ್ಞಾನುಸಾರವಾಗಿ ಈ ಗ್ರಂಥವನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ. ಆದ್ದರಿಂದ ಅವನು ಆ ದೊರೆಯ ಆಶ್ರಿತನಾಗಿದ್ದಿರಬಹುದು. ಬೇಲೂರು ಶಾಸನಗಳಿಂದ ಈ ದೊರೆಯ ಕಾಲ ಗೊತ್ತಾಗುವುದರಿಂದ, ಸೂರ್ಯನ ಕಾಲವನ್ನು ಸುಮಾರು ೧೬೪೦ ಎಂದು ಕವಿ ಚರಿತೆಕಾರರು ನಿರ್ಣಯಿಸಿದ್ದಾರೆ.

ಈ ಕನ್ನಡ ನಿಘಂಟಿನಲ್ಲಿ ೨೭೧ ಕಂದ ಪದ್ಯಗಳಿವೆ. ಗ್ರಂಥಕ್ಕೆ ಕೊಟ್ಟಿರುವ ಹೆಸರಿನ ಸಾರ್ಥಕತೆಯನ್ನು ಹೀಗೆ ತಿಳಿಸಿದ್ದಾನೆ:

ಹರುಷ ಮಿಗೆ[*] ಮುನ್ನಂ ಆದಿಮರ್;। ಬರೆದ ಒಳ್ ಕರ್ಣಾಟ ಶಬ್ದ
ಮಣಿನಿ ಚಯಮುಮಂ
ಸರಗೊಳಿಸೆ ಪೇಳ್ದೆಂ; ಇದು ತಾಂ। ಪರಿಕಿಸೆ ಕವಿಕಂಠಹಾರಮೆನಿಕುಂ
ಪೆಸರಿಂ

ಗ್ರಂಥಾರಂಭದಲ್ಲಿ ಶಿವ, ರಾಮ, ಗಣಪತಿ, ಇವರುಗಳನ್ನು ಸ್ತುತಿಸಲಾಗಿದೆ. ಕವಿಯ ತವರು ನಾಡಿನ ಪ್ರೇಮ, ಹುಟ್ಟೂರಿನ ಪ್ರೀತಿ, ಈ ಪದ್ಯಗಳಲ್ಲಿ ಪ್ರತಿಬಿಂಬಿತವಾಗಿದೆ:

ನಾಡಿರ್ಪುದೊಂದು, ಪರಿಕಿಸಿ। ನೋಡಲ್ ಕಾಶ್ಮೀರದೇಶಕೆ ಅಯ್ವಡಿಯೆನೆ
ತಾಂ
ಗಾಡಿವಡೆದಿಹುದು ಗೀರ್‌ವಧು। ಗೆ ಆಡುಂಬೊಲನೆನೆ ಸುದೇಶ ಹೊಯ್ಸಳ
ದೇಶಂ
ಆ ದೇಶದೊಳಗೆ ನರಹರಿ। ಯಾದೇಶದಿಂ ಒಪ್ಪುತಿರ್ಪುದು ಅತಿ ವೈಭವದಿಂ
ಮೇದಿನಿಗಚ್ಚರಿಯೆಂದೆನೆ। ಸಾದು ಜನ ಪ್ರವರವಿನುತ ವೇಲಾನಗರಂ

[ಐವಡಿ=ಐದು ಮಡಿ, ಐದರಷ್ಟು. ಗಾಡಿ=ಚೆಲುವು. ಗೀರ್‌ವಧು=ಸರಸ್ವತಿ. ಆಡಂಬೊಲ=ಆಟದ ಬಯಲು. ಆದೇಶ=ಅಪ್ಪಣೆ. ಮೇದಿನಿ=ಭೂಮಿ, ಲೋಕ. ಅಚ್ಚರಿ=ಆಶ್ಚರ್ಯ. ಸಾಧುಜನ ಪ್ರವರ ವಿನುತ=ಶ್ರೇಷ್ಠರಾದ ಸಜ್ಜನರ ಹೊಗಳಿಕೆಗೆ ಪಾತ್ರನಾದ. ವೇಲಾನಗರ=ಬೇಲೂರು (ಹಾಸನ ಜಿಲ್ಲೆಯಲ್ಲಿದೆ.)]

"ಈ ಕವಿಯ ಬಂಧವನ್ನು ನೋಡಿದರೆ ಈತನು ಪ್ರೌಢನಲ್ಲವೆಂಬುದು ತೋರುತ್ತದೆ. ಇವನ ಕಂದಗಳಲ್ಲಿ ಛಂದೋಭಂಗ, ವಿಷಮ ಸ್ಥಾನದಲ್ಲಿ ಜಗಣ

* 'ಮುನ್ನ ಆದ್ಯರ್' ಎಂದು ಗ್ರಂಥ ಸಂಪಾದಕರು ತಿದ್ದಿರುವ ಹಾಗೆ ಕಾಣುತ್ತದೆ. ಇಲ್ಲಿ ಕೊಟ್ಟಿರುವುದು ಕವಿಚರಿತೆಯ ಪಾಠ.

ಮತ್ತೆ ಕಟ್ಟುಪಾಡನ್ನು ರೂಢಿಗೆ ತರುವ ಉದ್ದೇಶದಿಂದ 'ಕರ್ಣಾಟಕ ಸಂಜೀವನ'ವೆಂಬ ನಿಘಂಟನ್ನು ರಚಿಸಿದನು. ಱ ಕುಳ ಕ್ಷಳಗಳ ವಿಷಯದಲ್ಲಿ ಪ್ರಾಸ ನಿಯಮವನ್ನು ಅನುಸರಿಸಬೇಕು, ಅವುಗಳನ್ನು ಬೆರಸಕೂಡದು, "ಇದು ಪಂಪರಾಜಾದಿ ಕರ್ಣಾಟಕ ಕವಿರಾಯರ ಮತ" ಎಂಬುದು ಅವನ ನಿಲುವು. ಬಳಕೆ ತಪ್ಪಿ ಹೋಗಿ ಸತ್ತು ಹೋದಂತೆ ಕಾಣುತ್ತಿದ್ದ ಒಂದು ಭಾಷಾ ನಿಯಮವನ್ನು ಮತ್ತೆ ಬಳಕೆಗೆ ತಂದು ಅದನ್ನು ಬದುಕಿಸುವ ಪ್ರಯತ್ನವೇ ಗ್ರಂಥರಚನೆಯ ಉದ್ದೇಶವಾದದ್ದರಿಂದ, ಕವಿ ತನ್ನ ಗ್ರಂಥಕ್ಕೆ 'ಕರ್ಣಾಟಕ ಸಂಜೀವನ' ಎಂಬ ಹೆಸರನ್ನು ಕೊಟ್ಟಂತೆ ಕಾಣುತ್ತದೆ. "ಇದು ಲಕ್ಷಣಕೆ ಜೀವನಂ, ತದ್ಗುಣದೆ ನಾಮ ಕರ್ಣಾಟಕ ಸಂಜೀವನಂ' ಎಂಬ ಕವಿಯ ಹೇಳಿಕೆಯೂ ಈ ಅಭಿಪ್ರಾಯವನ್ನು ಸೂಚಿಸುತ್ತದೆ.

ಶೃಂಗಾರಕವಿ ಜೈನ; ರಸಿವಾಳಿಗೆ ಪ್ರಭುವಾದ ಬೊಮ್ಮರಸ ನಾಯಕನ ಮಗ "ಕಳೆಯಾಣ್ಮ ಶೃಂಗಾರ ಕವಿಗೆ ಪೆರರುಕ್ತಿಯಂ ಕಳಲ್ ಒಲ್ಲದೆ ಉಸಿರ್ವ ಚಲಂ" ಇದ್ದಿತು. "ಇವನ ಹೆಸರನ್ನು ನೋಡಿದರೆ ಈತನು ಈ ನಿಘಂಟುವಲ್ಲದೆ ಕಾವ್ಯಗಳನ್ನೂ ಬರೆದಿರಬೇಕೆಂದು ತೋರುತ್ತದೆ. ರತ್ನಾಕರಾಧೀಶ್ವರ ಶತಕವನ್ನೂ ಬರೆದಿರುವ ಹಂಸರಾಜನಿಗೆ ಶೃಂಗಾರ ಕವಿ ಎಂಬ ಬಿರುದುಂಟು. ಅವನೂ ಜೈನ ಕವಿ. ಅವನೇ ಈ ಗ್ರಂಥವನ್ನೂ ಬರೆದಿರಬಹುದೋ ಎಂಬ ಸಂದೇಹವು ಹುಟ್ಟಬಹುದು" ಎಂದು ಕವಿಚರಿತೆಕಾರರು ಅಭಿಪ್ರಾಯ ಪಟ್ಟಿದ್ದಾರೆ. (ಕವಿಚರಿತೆ, II ಪು.೨೮೯).

ವಾರ್ಧಿಕ ಷಟ್ಪದಿಯಲ್ಲಿ ಬರೆದಿರುವ ಈ ಕನ್ನಡ ನಿಘಂಟಿನಲ್ಲಿ ಕೇವಲ ೩೫ ಪದ್ಯಗಳಿವೆ. 'ಱ'ಕಾರವಿರುವ ಶಬ್ದಗಳಲ್ಲಿ ಒಂದು ಅರ್ಥದಿಂದ ಐದು ಅರ್ಥಗಳುಳ್ಳ ಶಬ್ದಗಳನ್ನು ಪ್ರತ್ಯೇಕ ಗುಂಪುಗಳಾಗಿ ಮಾಡಿ ಅವಕ್ಕೆ ಅರ್ಥ ಹೇಳಿದ್ದಾನೆ. ಇಲ್ಲಿ ಈ ಕವಿ ಕೇಶಿರಾಜನನ್ನು ಅನುಸರಿಸಿದ್ದಾನೆ. 'ಕುಳ' (ಕನ್ನಡದ ಸಹಜ 'ಳ'ಕಾರ) ಪ್ರಯೋಗವಿರುವ ಶಬ್ದಗಳನ್ನೂ, 'ಕ್ಷಳ'ವುಳ್ಳ ಶಬ್ದಗಳನ್ನು ಬೇರೆಯಾಗಿ ವಿಂಗಡಿಸಿ ಅರ್ಥ ಹೇಳಿದ್ದಾನೆ.

ಕ್ಷಳಾಕ್ಷರ ಪ್ರಯೋಗ ವಿಷಯಕ ಪದ್ಯವನ್ನು ಇಲ್ಲಿ ಉದಾಹರಿಸಬಹುದು:
ಕ್ಷಳನೆಂಬುದೊಂದುಂಟು, ಸಂಸ್ಕೃತದ 'ಲಾಕ್ಷರ'
ಸ್ಥಳಮಂ 'ಳಾಕಾರ' ಮಾಗುಜಚ್ಚರಿಪುದದು; ಜಲಕೆ
ಜಳ, ಬಲಕೆ ಬಳ, ಕುಲಕೆ ಕುಳ, ಕಮಲ ಶಬ್ದಕೆ ಕಮಳಮಂತು ಸಂಸ್ಕೃತಂ
'ಕ್ಷಳ'ನೊಳಂ 'ಱ'ನುಂಟು: ಕಹಳೆ ಶಬ್ದಕೆ ಕಾಟೆ

ಕಂದೆಂದು ಕರೆ ಎಂದುಂ। ಸಂದೆಗಮಿಲ್ಲ, ಅವು ಕಳಂಕ; ಜೊನ್ನಂಜ್ಯೋತ್ಸ್ನಂ;

ಸಂದುದು–ತಾರಗೆ ಅರಿಲ್; ಎನಲ್। ಇಂದು, ಉಡುಸಂತತಿಗೆ ನಾಮವಿವು ಬುಧರಿಂ

[ಕಂದು=ಕರೆ = ಕಳಂಕ; ಜೊನ್ನ=ಜ್ಯೋತ್ಸ್ನಂ (=ಬೆಳದಿಂಗಳು). ತಾರೆಗೆ=ತಾರೆಗೆ ಅರಿಲ್=ಉಡು (ಸಂತತಿ =ನಕ್ಷತ್ರ)]

ನಿನತು, ತನತು, ಮುಂತಾದ ಸರ್ವನಾಮಗಳಿಗೆ ಸಂಬಂಧ ಪಟ್ಟ ಪದ್ಯ ಗಮನಾರ್ಹವಾಗಿದೆ:

ನಿನತೆಂದು ನಿನ್ನದಕ್ಕು । ತನತೆಂದುಂ ತನ್ನದಕ್ಕು ಸತ್ಕವಿ ವರರಿಂ:

ಉನತೆಂದು ಮುನ್ನದಕ್ಕುಮ। ದನಿಶಂ ಬಹುವಚನಕಕ್ಕು ನತ್ವಂ ಮತ್ವಂ (ಪ.೨೧೯)

ಸೂರ್ಯ ಅನುಸರಿಸಿರುವ 'ಶಬ್ದಸಾರ'ದಲ್ಲಿ (ಪು.೨೬) ಈ ಉದಾಹರಣೆ ಹೀಗೆ ನಿರೂಪಿತವಾಗಿದೆ:

೫೪೨ ನಿನತೆಂದುಂ, ನಿನತ್ತೆಂದುಂ, ನಿನ್ನದು

೫೪೩ ತನತೆಂದುಂ, ತನ್ನತ್ತೆಂದುಂ, ತನ್ನದು.

೫೪೪ ಎನತೆಂದುಂ, ಎನತ್ತೆಂದುಂ, ಎನ್ನದು.

೫೪೫ ಉನತೆಂದುಂ, ಉನತ್ತೆಂದುಂ, ಉನ್ನದು

ಈ ಎರಡು ನಿಘಂಟುಗಳಿಗೂ ಮೂಲ ಶಬ್ದಮಣಿ ದರ್ಪಣ. ಅಲ್ಲಿನ ಸೂತ್ರ ೯ ಡಿ.ಎಲ್.ಎನ್. ಮುದ್ರಣ, ಸಂಖ್ಯೆ ೧೫೮ ಹೀಗಿದೆ:

ನಿನತೆನತು ತನತೆನಿಪ್ಪುವು। ಜನಿಯಿಸುಗುಂ ನಿನ್ನದೆನ್ನದುಂ ತನ್ನದೆನಿ–

ಪ್ಪಿನಿತರೊಳಂ ಮೇಣ್ ದ್ವಿತ್ವದಿ। ನನೇಕದೊಳ್ ನತ್ವದೆಡೆಗೆ ಮತ್ವಂ ಬರೆಯುಂ.

ಕಾವ್ಯರಚನೆಯಲ್ಲಿಯೇ ಪೂರ್ವಕವಿಯೊಬ್ಬನಿಂದ ತರುವಾಯದ ಕವಿ ವಸ್ತುವನ್ನೊ ಭಾವವನ್ನೊ ಉಕ್ತಿಯನ್ನೊ ಸ್ವೀಕರಿಸುವುದು ಅಪರಾಧವಲ್ಲವೆಂದು ನಾವು ತಿಳಿದಿರುವಾಗ, ಶಾಸ್ತ್ರ ವಿಚಾರದಲ್ಲಿ ಸಿದ್ಧಾಂತವಾದ ವಿಚಾರಗಳನ್ನು ಸ್ವೀಕರಿಸುವುದು ಅಪರಾಧವೇ ಅಲ್ಲ; ಮಾತ್ರವಲ್ಲ, ಹಾಗೆ ಸ್ವೀಕರಿಸುವುದು ಅನಿವಾರ್ಯ ಕೂಡ.

**(೯) ಕರ್ಣಾಟಕ ಸಂಜೀವನ:** ರಳ ಕುಳ ಕ್ಷಳ ಎಂಬ ಮೂರು ಅಕ್ಷರಗಳ ಪ್ರಯೋಗ ವಿಚಾರದಲ್ಲಿ ಬೆಳೆದು ಬಂದ ಅವ್ಯವಸ್ಥೆಯನ್ನು ತಡೆಗಟ್ಟಲು ಕೇಶಿರಾಜನು ತನ್ನ ಶಬ್ದಮಣಿದರ್ಪಣದಲ್ಲಿ ನಿಯಮಗಳನ್ನು ರಚಿಸಿ ಪ್ರಯತ್ನಪಟ್ಟ ಅಂಶವನ್ನು ಈ ಹಿಂದೆ ಗಮನಿಸಿದೆ. ಕ್ರಿ.ಶ.ಸು.೧೬೦೦ರಲ್ಲಿ ಶೃಂಗಾರ ಕವಿ ಈ ವಿಚಾರದಲ್ಲಿ

ಅರ್ಥನಿಚಯವಾಚಿಯುಂ ಅಕ್ಕುಂ" ಎಂದು ಕೋಶವೆಂದರೂ ನಿಘಂಟೇ. (ಕೋಶ ಎನ್ನುವುದಕ್ಕೆ ಬೇರೆ ಅರ್ಥಗಳೂ ಇರುವುದರಿಂದ, ನಿಘಂಟು ಪದ ಪ್ರಯೋಗ ಸೂಕ್ತ). "ಇದು ಕನ್ನಡದಲ್ಲಿ ಉಪಯೋಗಿಸುವ ಸಂಸ್ಕೃತ ಪದಗಳಿಗೆ ಅರ್ಥವನ್ನು ಹೇಳುವ ಪದ್ಯರೂಪವಾದ ಸಂಸ್ಕೃತ ಕರ್ಣಾಟಕ ನಿಘಂಟು" ಎಂದು ಒಬ್ಬ ವಿದ್ವಾಂಸರು ಅಭಿಪ್ರಾಯ ಪಟ್ಟರೆ,[೧೪] ಇನ್ನೊಬ್ಬರು "ಪ್ರಕೃತ ಗ್ರಂಥವು ಕರ್ಣಾಟಕ ಭಾಷೆಯಲ್ಲಿ ಛಂದೋರೂಪವಾಗಿ ಕನ್ನಡ ಕಬ್ಬಗಳಲ್ಲಿ ಪ್ರಯೋಗಿಸಬಹುದಾದ ಸಮಸಂಸ್ಕೃತ ಶಬ್ದಗಳ ಸ್ವರೂಪವನ್ನು ತಿಳಿಸುವ ಕೋಶವಾಗಿದೆ. ಇದರಲ್ಲಿ ಸಮಸಂಸ್ಕೃತ* ಶಬ್ದಗಳು ಮಾತ್ರವಲ್ಲದೆ ಅಲ್ಲಲ್ಲೇ ಹಲವು ದೇಶ್ಯ ಶಬ್ದಗಳೂ ದೊರಕುವುವು" ಎಂದು ಅಭಿಪ್ರಾಯ ಪಟ್ಟಿದ್ದಾರೆ.[೧೫] ನಾಗವರ್ಮನು "ಅಭಿಯೋಗಪರರ್ ಪರ್ಯಾಯ ಶಬ್ದದೊಳ್ ತಾತ್ಪರ್ಯದಿಂ ಅನ್ವರ್ಥತೆಯಿಂ ಅನಭಿಹಿತದೊಳ್ ಆಹಾರ್ಯಂ ಇದೆಂದು ಅರ್ಥಗತಿಯುಂ ಅರಿದು ಪರ್ಯಾಳೋಚಿಸಿಕೊಳ್ಗೆ" ಎಂದು ಶಬ್ದಾರ್ಥಗಳನ್ನು ಹೇಗೆ ಗ್ರಹಿಸಬೇಕೆಂಬುದನ್ನು ತಿಳಿಸಿದ್ದಾನೆ.+ ಆದ್ದರಿಂದ "ಕರಮೆ ಜಡಮತಿಯುಂ ಅರಿವಂತಿರೆ ಕನ್ನಡದಿಂ ಜಲಕ್ಕ ನಾಗಿರ್ಪನೆಗಂ ಕವಿಕಂಠಾಭರಣಂ ಇದಂ ನಾಗವರ್ಮಂ ವಿರಚಿಸಿದಂ ಎನೆ ಮೆಚ್ಚದರ್ ಆರ್" ಎಂಬುದು ಅವನ ನಂಬಿಕೆ. ಅವನ ದೃಷ್ಟಿಯಲ್ಲಿ ಕೃತಿ ಪೂರ್ವಕೋಶಗಳ ಸಂಗ್ರಹವೂ (ಶ್ರಮ ತೆಗೆದುಕೊಳ್ಳುವವರಿಗೆ) ಸುಲಭವೂ ಆದ್ದರಿಂದ, ....

ಪುದಿದ ಮನಸ್ತಮಂ ಬಿಡೆ
ಬೆದರಿ ಸದರ್ಥಪ್ರಕಾಶಮಂ ಮಾಡುಗುಂ ಅ..
ಪ್ಪುದರಿಂದ ಸಮಸ್ತ ವಿದ್ಯಾ
ಪ್ರದೀಪಂ ಅಭಿಧಾನಕೋಶಂ ಅಲ್ಲದೆ ಪೆರತೇಂ?

---

* ಯಾವ ಯಾವ ಸಂಸ್ಕೃತ ಪದಗಳಿಗೆ ಕನ್ನಡದ ವಿಭಕ್ತಿ ಪ್ರತ್ಯಯಗಳನ್ನು ಹತ್ತಿಸಲಾಗುವಂತೆ ನಾಮಪ್ರಕೃತಿಗಳನ್ನಾಗಿ ಮಾಡಿಕೊಳ್ಳಬಹುದೋ ಅಂಥ ಸಂಸ್ಕೃತ ಪದಗಳು 'ಸಮಸಂಸ್ಕೃತ' ಎಂದು ಕವಿರಾಜಮಾರ್ಗಕಾರ ಮತ್ತು ಕೇಶಿರಾಜರ ಅಭಿಪ್ರಾಯ. ಕೇಶಿರಾಜನ ಅಭಿಪ್ರಾಯದಲ್ಲಿ 'ತತ್ಸಮ'ಗಳು ಬೇರೆ.

+ ಈ ವಾಕ್ಯದ ಭಾವಾರ್ಥ:'ಸಮಾನಾರ್ಥವುಳ್ಳ ಪರ್ಯಾಯ ಶಬ್ದಗಳ ಅರ್ಥವನ್ನು ಆ ಶಬ್ದಗಳ ತಾತ್ಪರ್ಯದಿಂದಲೂ ಅವುಗಳನ್ನು ಪರಸ್ಪರ ಅನ್ವಯಿಸಿಕೊಂಡು ಅರ್ಥಮಾಡಿಕೊಳ್ಳುವ ಮೂಲಕವೂ ಬಿಡಿಸಿ ಹೇಳದಿರುವ ಶಬ್ದಾರ್ಥ ಸ್ವರೂಪವನ್ನು ಅಧ್ಯಾಹಾರವಾಗಿದೆ (understood) ಎಂದು ತಿಳಿದು ವಿದ್ವತ್ತಿಗಾಗಿ ಪರಿಶ್ರಮ ಪಡುವುದರಲ್ಲಿ ಶ್ರದ್ದೆಯುಳ್ಳವರು ಪರ್ಯಾಲೋಚಿಸಿಕೊಳ್ಳಲಿ'.

ಪುಳಿನಕ್ಕೆ ಪುಟಿಲ್, ಉಜ್ಜ್ವಳಕ್ಕೆ ತಾನುಜ್ಜಲಿಂ,
ಕಳಮಕ್ಕೆ ಕಲಿವೆ, ಕಂಬಳಕೆ ಕಂಬಟೆಯೆಂಬ ತೆಱದಿನಹುದದು ಕನ್ನಡಂ.

## II. ಸಂಸ್ಕೃತ–ಕನ್ನಡ

ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಸಂಸ್ಕೃತ ಶಬ್ದಗಳ ಬಳಕೆ ಬಹಳ ಹೆಚ್ಚಾಗಿರುವುದರಿಂದ ಸಂಸ್ಕೃತ ಶಬ್ದಗಳಿಗೆ ಕನ್ನಡದಲ್ಲಿ ಅರ್ಥ ಹೇಳುವ ಅಗತ್ಯವನ್ನು ನಮ್ಮ ನಾಡಿನ ಉಭಯ ಭಾಷಾ ಪಂಡಿತರು ಕಂಡುಕೊಂಡು, ಅಂತಹ ನಿಘಂಟುಗಳನ್ನು ರಚಿಸಿದರು. ಕನ್ನಡ–ಕನ್ನಡ ನಿಘಂಟುಗಳಷ್ಟೇ ಮುಖ್ಯವಾದವು ಇವು. ಸುಮಾರು ೮–೧೦ ನಿಘಂಟುಗಳಲ್ಲಿ ಕೆಲವು ಪ್ರಮುಖ ನಿಘಂಟುಗಳನ್ನು ಮಾತ್ರ ಇಲ್ಲಿ ಪರಿಚಯ ಮಾಡಿಕೊಡುವುದು ಸಾಧ್ಯ.

(೧) **ವಸ್ತು ಕೋಶ:** ವ್ಯಾಕರಣ, ಛಂದಸ್ಸು, ಅಲಂಕಾರ, ನಿಘಂಟು – ಈ ನಾಲ್ಕು ಕೈಗಳುಳ್ಳ ಕಾವ್ಯ ಸರಸ್ವತಿಯನ್ನು ಆರಾಧಿಸಿರುವವರು ಕನ್ನಡದಲ್ಲಿ ವಿರಳ. ಈ ಬಗೆಯ ವಾಗ್ದೇವೀ ಸೇವೆಯ ಪುಣ್ಯ ಎರಡನೆಯ ನಾಗವರ್ಮನದು. ಅವನ ವಿಚಾರವಾಗಿಯೂ, ಅವನು ರಚಿಸಿರುವ 'ಶಬ್ದಸ್ಮೃತಿ' ಮತ್ತು 'ಕರ್ಣಾಟಕ ಭಾಷಾ ಭೂಷಣ' (ವ್ಯಾಕರಣಗಳು), 'ಕಾವ್ಯಾವಲೋಕನ' (ಅಲಂಕಾರ), 'ಛಂದೋ ವಿಚಿತಿ'(?) – ಇವುಗಳ ವಿಚಾರವಾಗಿ ಈ ಹಿಂದೆ ಹೇಳಿದೆ. ಇಲ್ಲಿ, ಕನ್ನಡದಲ್ಲಿ ದೊರೆತಿರುವ ಹಳೆಯ ದೊಡ್ಡ ನಿಘಂಟುಗಳಲ್ಲಿ ಮೊದಲನೆಯದು ಎನ್ನಬಹುದಾದ 'ಅಭಿಧಾನ ವಸ್ತುಕೋಶ'ವನ್ನು ಸಂಕ್ಷೇಪದಲ್ಲಿ ಪರಿಚಯ ಮಾಡಿಕೊಡಲಾಗುವುದು.

ಕೃತಿಯ ಮೊದಲಲ್ಲಿ ವರ್ಧಮಾನ ಜಿನೇಂದ್ರನನ್ನು ಸ್ತುತಿಸಿದ ಮೇಲೆ, ಗ್ರಂಥರಚನೆ ಮತ್ತು ಗ್ರಂಥಸ್ವರೂಪಗಳ ವಿಷಯವಾಗಿ ನಾಗವರ್ಮನು ಹೀಗೆ ಹೇಳಿದ್ದಾನೆ:

ವರರುಚಿ ಹಲಾಯುಧಂ ಭಾಗುರಿ ಶಾಶ್ವತಂ ಅಮರಕೋಶಂ ಎಂಬಿವು ಮೊದಲಾ

ಗಿರೆ ಪೂರ್ವಶಾಸ್ತ್ರಮಂ ಸಂಹರಿಸಿ ಮನಂಗೊಳೆ ನಿಘಂಟುವಂ ವಿರಚಿಸುವೆಂ (ಪ.೨)

ಮೇಲೆ ಹೆಸರಿಸಿರುವ 'ಪೂರ್ವಕಾಲದ ನಿಘಂಟುಗಳ ಸಾರಸಂಗ್ರಹವನ್ನು ಒಟ್ಟುಗೂಡಿಸಿ ಮನಸ್ಸಿಗೆ ಹಿಡಿಯುವಂತೆ ಹೇಳುತ್ತೇನೆ.'–ಇದು ನಾಗವರ್ಮನ ಪ್ರತಿಜ್ಞೆ. 'ನಿಘಂಟು' ಎಂಬ ಪದದ ಪ್ರಯೋಗವನ್ನು ಇಲ್ಲಿ ಮೊದಲಿಗೆ ಸಂಧಿಸುತ್ತೇವೆ. ನಾಗವರ್ಮನೇ ಹೇಳುವಂತೆ, (ನಾನಾರ್ಥಕಾಂಡ, ಪ.೧೦೦) "ಕೋಶಂ ಅಶೇಷ

ಶಬ್ದಗಳನ್ನು ವರ್ಗೀಕರಿಸುವುದರಲ್ಲಿ ಮಾತ್ರ ಭಿನ್ನಮಾರ್ಗವನ್ನಲಂಬಿಸಿರುವನು. ಈತನ ವರ್ಗವಿಭಾಗ ಕ್ರಮವು ಈ ರೀತಿಯಾಗಿರುವುದು: ಒಂದನೆಯ ಅವಿಭಿನ್ನಾರ್ಥಕಾಂದಲ್ಲಿ, (೧)ಸ್ವರ್ಗವರ್ಗ, (೨) ಕಾಲವರ್ಗ (೩) ಸಂಸರಣವರ್ಗ (೪)ಸಲಿಲ ವರ್ಗ (೫)ಭೂವರ್ಗ (೬)ಕಾಲಾಯಸಾದಿ ಧಾತುವರ್ಗ (೭)ವನವರ್ಗ (೮)ವೃಕ್ಷಾದಿವರ್ಗ (೯) ವ್ಯೃಗಪಕ್ಷಿ ವರ್ಗ (೧೦)ಪುರಗ್ರಹೋಪಕರಣ ವರ್ಗ (೧೧)ಮನುಷ್ಯವರ್ಗ (೧೨)ದೇಹಾವಯವಾದಿ ವರ್ಗ (೧೩)ಭೂಷಣಾದಿ ವರ್ಗ (೧೪)ಸಮರಾದಿ ಸಂಪ್ರಕೀರ್ಣ ವರ್ಗ (೧೫)ಪಶುವರ್ಗ (೧೬)ಧಾನ್ಯ ವರ್ಗ ಎಂಬ ಹದಿನಾರು ವರ್ಗಗಳಿರುವುವು.

ಎರಡನೆಯ ಸಾಮಾನ್ಯ ಕಾಂಡದಲ್ಲಿ (೧)ವಿಶೇಷಣ ವರ್ಗ (೨)ವಿಶೇಷ್ಯ ವರ್ಗ ಎಂಬ ಎರಡು ವರ್ಗಗಳಿರುವುವು.

ಮೂರನೆಯ ನಾನಾರ್ಥಕಾಂಡದಲ್ಲಿ ವರ್ಗವಿಭಾದಿ ಕ್ರಮಗಳಿಲ್ಲ.[೧೬]

ಮೇಲೆ ವಿವರಿಸಿರುವಂತೆ, ನಾಗವರ್ಮನು ಹಲವು ಪೂರ್ವ ನಿಘಂಟುಗಳ ಉತ್ತಮಾಂಶಗಳನ್ನು ಸಂಗ್ರಹಿಸಿ ಒಂದು ಉತ್ತಮವಾದ ಸಂಸ್ಕೃತ – ಕನ್ನಡ ಕೋಶವನ್ನು ರಚಿಸಿದ್ದಾನೆ.

ಕೆಲವು ಉದಾಹರಣೆಗಳ ಮೂಲಕ ನಾಗವರ್ಮನ ಶಬ್ದಾರ್ಥ ನಿರೂಪಣ ಕ್ರಮವನ್ನು ಕೆಳಗೆ ಪರಿಚಯ ಮಾಡಿಕೊಟ್ಟಿದೆ:

'ಅಕ್ಷೋಹಿಣಿ' ಎಂಬ ಸೇನಾ ವಿವರವನ್ನು ಒದಗಿಸುವ ಈ ಪದ್ಯ ಕನ್ನಡ ಛಂದಸ್ಸಾದ ಅಕ್ಷರ ವೃತ್ತದಲ್ಲಿದೆ:

ಒಂದು ಸಾಮಾಜ ವೊಂದು ತೇರ್ ಮೂರಶ್ವಮಯ್ದು ಕಾಲಾಳ್ಗಳ್ ಪತ್ತಿಯುಕ್ಕುಂ
ಸಂದ ಪತ್ತಿ ಮೂರಾಗೆ ಸೇನಾಮುಖಂ, ಆ ಮೂರು ಗುಲ್ಮಂ, ಮೂರು ಗುಲ್ಮ
ಕ್ಕೊಂದು ಗಣಂ, ಅವು ಮೂರು ವಾಹಿನಿ, ತತ್ತ್ರಯಂ ಪೃತನಾಖ್ಯೆ, ಪೃತನೆಗಳ್ ಮೂ
ರೊಂದಿ ತೋರೆ ಚಮು ಮೂರುಮನೀಕಿನಿ ಪತ್ತನೀಕಿನಿ ಯಕ್ಷೌಹಿಣಿಯೆನಿಕ್ಕುಂ

[೧ ಆನೆ+೧ ತೇರು+೩ ಕುದುರೆ+೫ ಕಾಲಾಳು=ಪತ್ತಿ; ೩ ಪತ್ತಿ=ಸೇನಾಮುಖ; ೩ ಸೇನಾಮುಖ=ಗುಲ್ಮ; ೩ ಗುಲ್ಮ=ಗಣ; ೩

[ಮನಸ್ಸನ್ನು ತುಂಬಿಕೊಂಡಿರುವ ಅಜ್ಞಾನವೆಂಬ ಕತ್ತಲೆ ಹೆದರಿ ಬಿಟ್ಟು ಹೋಗುವಂತೆ ಒಳ್ಳೆಯ ಅರ್ಥವೆಂಬ ಜ್ಞಾನದ ಬೆಳಕನ್ನು ಉಂಟುಮಾಡುವುದರಿಂದ ಈ ಅಭಿಧಾನ ವಸ್ತುಕೋಶವು'ಸಮಸ್ತ ವಿದ್ಯಾಪ್ರದೀಪ' – ಎಲ್ಲ ವಿದ್ಯೆಗಳನ್ನೂ ಬೆಳಗುವ ದೀಪ – ಅಲ್ಲದೆ ಬೇರೆ ಇನ್ನೇನು ತಾನೆ ಆಗುವುದು?]

ಎಂದು, ಗ್ರಂಥದ ಪ್ರಯೋಜನವನ್ನು ನಿರೂಪಿಸಿದ್ದಾನೆ.

ವಸ್ತುಕೋಶವು ಕಂದ ವೃತ್ತಗಳಲ್ಲಿ ರಚಿತವಾಗಿದ್ದು, ಒಟ್ಟು ೮೦೦ ಪದ್ಯಗಳನ್ನು ಒಳಗೊಂಡಿದೆ ಎಂದು ಒಂದು ಹಸ್ತಪ್ರತಿಯಿಂದ ತಿಳಿದು ಬರುತ್ತದೆ. (ಆದರೆ, ದೊರೆತಿರುವ ಹಸ್ತಪ್ರತಿಗಳಲ್ಲಿ ೭೫೩ ಪದ್ಯಗಳು ಮಾತ್ರ ಇದ್ದು, ಉಳಿದ ಪದ್ಯಗಳು ನಷ್ಟವಾಗಿವೆ ಎಂದು ಊಹಿಸಬೇಕಾಗುತ್ತದೆ.) ಕಂದಗಳ ಸಂಖ್ಯೆಯೇ ಹೆಚ್ಚು. ಅಚ್ಚಗನ್ನಡ ಛಂದಸ್ಸಾದ ಅಕ್ಕರ ತ್ರಿಪದಿಗಳೂ ಕೆಲವು ಇವೆ.

ನಾಗವರ್ಮನು ತಾನು ಋಣಿಯಾಗಿರುವ ಅನೇಕ ಸಂಸ್ಕೃತ ಕೋಶಕಾರರನ್ನು ಹೆಸರಿಸಿದ್ದರೂ ವಿಶೇಷವಾಗಿ ಹಲಾಯುಧ ಕೋಶವನ್ನೇ ಅನುಸರಿಸಿರುವುದು ಕಂಡು ಬರುತ್ತದೆ. ಕೆಲವು ಅಂಶಗಳಲ್ಲಿ ಅಮರಸಿಂಹನ ನಾಮ ಲಿಂಗಾನುಶಾಸನವನ್ನೂ ಧನಂಜಯ ನಿಘಂಟನ್ನೂ ಅನುಸರಿಸಿರುವನು.

"ಹಲಾಯುಧಕೋಶದಲ್ಲಿ (ಅಭಿಧಾನರತ್ನಮಾಲೆ) ಸ್ವರ್ಗಕಾಂಡ, ಭೂಮಿಕಾಂಡ, ಪಾತಾಳ ಕಾಂಡ, ಸಾಮಾನ್ಯಕಾಂಡ, ನಾನಾರ್ಥಕಾಂಡಗಳೆಂಬ ಐದು ಕಾಂಡಗಳುಂಟು. ಈ ಕೋಶಾನುಸಾರವಾಗಿಯೆ ಪ್ರಕೃತಕೋಶಕಾರನು (ನಾಗವರ್ಮನು) ಈ ಸ್ವರ್ಗ ಭೂಮಿ, ಪಾತಾಳಕಾಂಡಗಳಲ್ಲಿಯ ಶಬ್ದಗಳನ್ನು ಒಟ್ಟುಗೂಡಿಸಿ ಒಂದು ಕಾಂಡದಲ್ಲಿ ಅಡಕಮಾಡಿ 'ಅವಿಭಿನ್ನಾರ್ಥಕಾಂಡ'ವೆಂದು ಅದಕ್ಕೆ ಹೆಸರನ್ನು ಕೊಟ್ಟಿರುವನು. ಉಳಿದ ಸಾಮಾನ್ಯ, ನಾನಾರ್ಥಕಾಂಡಗಳ ಹೆಸರನ್ನೂ ಶಬ್ದಸಮುದಾಯವನ್ನೂ ಮಾರ್ಪಡಿಸದೆ ಅದರಂತೆಯೇ ಹೇಳಿರುವನು. ಅಲ್ಲದೆ ಅಮರಸಿಂಹನು ತನ್ನ ಕೋಶದ ಮೊದಲೆರಡು ಕಾಂಡಗಳಲ್ಲಿ ಹೇಳಿರುವ ವಿಷಯವನ್ನು ಈತನು ತನ್ನ ಕೋಶದ ಮೊದಲನೆಯ ಕಾಂಡಗಳಲ್ಲಿ ಹೇಳಿರುವ ವಿಷಯವನ್ನು ಈತನು ತನ್ನ ಕೋಶದ ಮೊದಲನೆಯ ಕಾಂಡದಲ್ಲಿಯೂ, ಅಮರದ ಮೂರನೆಯ ಕಾಂಡದ ವಿಶೇಷ್ಯ ನಿಘ್ನ ಸಂಕೀರ್ಣವರ್ಗಗಳಲ್ಲಿ ಹೇಳಿರುವ ವಿಷಯವನ್ನು ಈತನು ತನ್ನ ಕೋಶದ ಎರಡನೆಯ ಕಾಂಡದಲ್ಲಿಯೂ, ನಾನಾರ್ಥ ಅವ್ಯಯವರ್ಗಗಳಲ್ಲಿಯ ವಿಷಯವನ್ನು ಮೂರನೆಯ ಕಾಂಡದಲ್ಲಿಯೂ ಸಂಗ್ರಹಿಸಿರುವನೆಂದು ವ್ಯಕ್ತವಾಗುವುದು. ಕಾಂಡ ಸಂಖ್ಯೆಯಲ್ಲಿಯೂ, ಕಾಂಡಗಳನ್ನು ವರ್ಗೀಕರಿಸುವುದರಲ್ಲಿಯೂ ಈತನು ಅಮರಸಿಂಹನನ್ನು ಹಿಂಬಾಲಿಸಿದ್ದರೂ,

ಉದಾಹರಣೆಗಳು:

೧. ನೃತ್ಯ, ಗೀತ, ವಾದ್ಯ – ಈ ಮೂರು ಸಂಗೀತವೆಂಬುದು. ಮೊದಲ ನಾಟ್ಯಮಂ ಪೂರ್ವರಂಗಮೆಂಬುದು (ಸ್ವರ್ಗ ಕಾಂಡ–೯೫)

೨. ಘೋಷವತೀ, ವೀಣಾ – ಈ ಎರಡು ವೀಣೆ;ವಿಪಂಚೀ, ಪರಿವಾದಿನೀ, ವಲ್ಲಕೀ – ಈ ಮೂರು ತಂತ್ರಿಯ ಭೇದ ಆದ ವೀಣೆಯ ಭೇದಂಗಳ್ (೯೬)

**(೩) ಮಂಗರಾಜ ನಿಘಂಟು:** ಕನ್ನಡದಲ್ಲಿ ಮಂಗರಾಜ ಅಥವಾ ಮಂಗರಸ ಎಂಬ ಹೆಸರಿನವರು ಮೂವರು ಎಂಬ ತಿಳಿವಳಿಕೆಯಿತ್ತು. 'ಖಗೇಂದ್ರ ಮಣಿದರ್ಪಣ'ದ ಮಂಗರಸ ಮೊದಲನೆಯವನು (ಇವನ ವಿಚಾರವನ್ನು ಮುಂದೆ ಪ್ರಸ್ತಾಪಿಸಲಿದೆ); ಎರಡನೆಯವನೆ ನಿಘಂಟುಕಾರ; ಮೂರನೆಯವನು 'ಸೂಪಶಾಸ್ತ್ರ'ವನ್ನು ಬರೆದಿರುವನು. (ಇವನ ವಿಚಾರವನ್ನೂ ಮುಂದೆ ತಿಳಿಸಲಿದೆ); (ಈಚೆಗೆ, 'ಫಣಿಕುಮಾರ ಚರಿತೆ'ಯ ಕರ್ತೃ ಬೊಮ್ಮಣ್ಣ ಕವಿಯ ಮಗ 'ಅಭಿನವ ಮಂಗರಸ'ನ ಸಂಗತಿ ತಿಳಿದು ಬಂದಿದೆ; ಇವನು 'ಮನ್ಮಥ ಮಣಿದರ್ಪಣ' ಎಂಬ ಕೃತಿಯನ್ನು ರಚಿಸಿದ್ದಾನೆ. ಇವನು ನಾಲ್ಕನೆಯ ಮಂಗರಸ.)

ಇಲ್ಲಿ ಪ್ರಸಕ್ತನಾದ ಕವಿ ತನ್ನ ನಿಘಂಟುವಿನ ಸಮಾಪ್ತಿ ವಾಕ್ಯದಲ್ಲಿ "ಶಶಿಪುರಾಧಿಪತಿ ಸೋಮೇಶ್ವರ ಚರಣಾರವಿಂದ ಮಧುಸೇವಿತ ಮಧುಕರಾಯ ಮಾಣ... ಅಭಿನವ ಬಾಲ ಸರಸ್ವತಿ ಮಂಗರಾಜ ವಿರಚಿತಮಪ್ಪ ಅಭಿನವಾಭಿಧಾನದೊಳ್ ನಾನಾರ್ಥಕಾಂಡಂ ಸಮಾಪ್ತಂ ಮಂಗರಾಜ ನಿಘಂಟು ಸಮಾಪ್ತವಾದುದು" ಎಂದು ಹೇಳಿಕೊಂಡಿರುವುದರಿಂದ – ಕವಿಯ ಹೆಸರನ್ನು ಮಂಗರಾಜ, ಕೃತಿಯ ಹೆಸರು 'ಅಭಿನವಾಭಿಧಾನ' ಹಾಗೂ 'ಮಂಗರಾಜ ನಿಘಂಟು', ಇವನ ಸ್ಥಳ 'ಶಶಿಪುರ', ಇವನು ಅಲ್ಲಿನ ಸೋಮೇಶ್ವರನ ಭಕ್ತ. ಇವನಿಗೆ 'ಬಾಲಸರಸ್ವತಿ' ಎಂಬ ಬಿರುದಿದ್ದಿತು – ಎಂದು ತಿಳಿಯಬಹುದು. ಅಲ್ಲದೆ, ಗ್ರಂಥದಲ್ಲಿನ ಕವಿಯ ಹೇಳಿಕೆಗಳಿಂದ ಈ ಸಂಗತಿಗಳು ನಿಶ್ಚಿತವಾಗಿ ತಿಳಿದು ಬರುತ್ತವೆ; ಇವನು ಕಮ್ಮೆ ಕುಲದ ಬ್ರಾಹ್ಮಣ; ತಂದೆಯ ಹೆಸರು ತಿಮ್ಮಾರ್ಯ ರಾಮರಸ; "ಅಧಿದೈವವೆನಿಪ ಸೋಮೇಶನ ವರಪ್ರಭೆಯಲಿ ಪೆರ್ಮೆಯಿಂ ಸಭೆ ಮೆಚ್ಚುವಂತೆ ನಾನಾ ಶಬ್ದ ಸಾಮ್ಯದಿಂದ ಅಭಿನವ ನಿಘಂಟನಭಿನವ ಮಂಗ ನಿರ್ಮಿಸಿದನು, ಅಂಬರ (ಆಕಾಶ=೧), ಅಂಬಕ (ಕಣ್ಣು=೨), ವಹ್ನಿ (ಅಗ್ನಿ=೩), ಏಕೈಕ (=೧), ಶಕದ ಬಹುಧಾನ್ಯದಲ್ಲಿ', ಎಂದರೆ ಕುಲದೈವವಾದ ಸೋಮೇಶ್ವರನ

ಗಣ=ವಾಹಿನಿ; ೩ ವಾಹಿನಿ=ಪೃತನಾ; ೩ ಪೃತನಾ=ಚಮು; ೩ ಚಮು=ಅನೀಕಿನಿ; ೧೦ ಅನೀಕಿನಿ=ಅಕ್ಷೋಹಿಣಿ]

ಶೌಂಡಿಕನೆನೆ ಕಳ್ಳವಳಂ
ಬಂಡಂ ನಗ್ನಾಂಗಿಯಾ ಬೆದಂಡೆಯವಂ ವೈ
ದಂಡಕಂ ಅರಿ ಕುಹಕತೆಯಂ
ಕೊಂಡಾಡುವನೀಂದ್ರಜಾಲಿಕಂ ತಾನಕ್ಕುಂ*

[ಶೌಂಡಿಕೆ=ಕಳ್ಳವಳ (ಹೆಂಡ ಮಾರುವವನು); ನಾಗ್ನಾಂಗಿ=ಬಂಡ (ನಾಚಿಕೆಯಿಲ್ಲದೆ ಬತ್ತಲೆ ತಿರುಗುವವನು); ಬೆದಂಡೆಯವಂ=ವೈದಿಕ (ಬೆದಂಡೆ ಎಂಬ ಹಾಡು ಗಬ್ಬವನ್ನು ಹಾಡುವವನು); ಇಂದ್ರಜಾಲಿಕ=ಕುಹಕತೆಯಂ ಕೊಂಡಾಡುವಂ ಕಣ್ಕಟ್ಟು ಮಾಯೆ ಮೋಸ ವಿದ್ಯೆಗಳನ್ನು ತೋರಿಸುವವನು)]

ತ್ರಿಪದಿ॥
ಧ್ರುವಂ ಸನಾತನಂ ನಿತ್ಯಮವಿನಶ್ವ–
ರಂ ಪವ್ರತೀಚ್ಯಂ ಶಾಶ್ವತ ಸ್ಥಾ–
ನವೆಮಗಕ್ಕೆ ನಿರಾಕುಳಂ*

ನಿಮಗೆ ಶಾಶ್ವತವಾದ ಮೋಕ್ಷಪದವಿ ಸಿಕ್ಕಲಿ ಎಂಬ ಶುಭ ಕೋರುವ ಈ ಪದ್ಯದಲ್ಲಿ ಆ ಅರ್ಥದ ಪರ್ಯಾಯ ಪದಗಳನ್ನು ನಾಗವರ್ಮ ಕೊಟ್ಟಿದ್ದಾನೆ.

**(೨) ಅಭಿಧಾನ ರತ್ನಮಾಲಾ ಟೀಕೆ:** ಹಲಾಯುಧನ ಸಂಸ್ಕೃತ ಕೋಶಕ್ಕೆ 'ಅಭಿಧಾನ ರತ್ನಮಾಲೆ' ಎಂಬ ಹೆಸರಿದೆ. ಇದರಲ್ಲಿ ೮೮೪ ಶ್ಲೋಕಗಳಿವೆ. ಈ ಕೋಶದ ಸಂಸ್ಕೃತ ಪದಗಳಿಗೆ ಸಮಾನಾರ್ಥಕಗಳಾದ ಕನ್ನಡ ಮಾತುಗಳನ್ನು ಕೊಟ್ಟು ಟೀಕೆಯನ್ನು ಬರೆದಿದೆ. ಈ ಟೀಕೆಯನ್ನು ನಾಗವರ್ಮನು ಬರೆದಿರಬಹುದು ಎಂಬ ಊಹೆಗೆ ಅವಕಾಶವಿದೆ. ಹಾಗೆಂದು ಖಂಡಿತವಾಗಿ ಹೇಳಲು ಬಲವಾದ ಆಧಾರವಿಲ್ಲ. ಕನ್ನಡ ಕಾವ್ಯಗಳಲ್ಲಿ ಕಂಡು ಬರುವ ಸಂಸ್ಕೃತ ಶಬ್ದಗಳ ಅರ್ಥವನ್ನು ಗ್ರಹಿಸಲು ಈ ಟೀಕೆ ಉಪಯುಕ್ತವಾಗಿದೆ.

---

* ಈ ಪದ್ಯ ಪಾಠ ಶುದ್ಧವಾಗಿರಲಿಲ್ಲ, ಸರಿಯಾಗಿ ಅರ್ಥವಾಗುವಂತೆ ತಿದ್ದಿದೆ.

ವರ್ಗದಲ್ಲಿ ಛಂದಸ್ಸಿಗೆ ಸಂಬಂಧಪಟ್ಟ ಗುರು ಲಘುಗಳ ವಿಚಾರ ತಂದಿರುವುದು ಸೋಜಿಗದ ವಿಷಯ. 'ಗುರು ಕೊಂಕುಗೆರೆಯಕ್ಕು, ಲಘುನಿಂದ ಗೆರೆಯಕ್ಕು' ಎಂಬ ಮಾತು ನಾಗವರ್ಮನ ಛಂದೋಂಬುಧಿಯ ಉಕ್ತಿಯೇ ಆಗಿದೆ. 'ಗುರುವೊಂದಾಧಿಯೊಳುತ್ಪಲಂ... ...' ಎಂದು ಮೊದಲಾಗುವ, 'ಖ್ಯಾತ ಕರ್ಣಾಟಕ ವೃತ್ತಗಳ ಗುರುತು ಹಚ್ಚುವ ಪದ್ಯ ಇಲ್ಲಿ ವಾರ್ಧಕ ಷಟ್ಪದಿಯ ರೂಪದಲ್ಲಿ ಅವತರಿಸಿದೆ. ಹೀಗೆ ಇಂಥ ಹಲವಾರು ಸ್ವಾರಸ್ಯಕರವಾದ ಅಂಶಗಳು ಈ ನಿಘಂಟಿಗೆ ಕನ್ನಡತನದ ಮುದ್ರೆಯನ್ನೊತ್ತಿದೆ.

**(೪) ಕಾಶಕೃತ್ಸ್ನ ಶಬ್ದಕಲಾಪಧಾತುಪಾಠ:** ಕನ್ನಡ ಕಾವ್ಯಗಳ ವಿದ್ಯಾರ್ಥಿಗಳಿಗೆ ಇದು ಅಷ್ಟೇನೂ ಉಪಯುಕ್ತವಾದ ಗ್ರಂಥವಲ್ಲದಿದ್ದರೂ ಒಂದು ಅಪೂರ್ವಗ್ರಂಥ ಎಂಬ ಕಾರಣದಿಂದ ಇದರ ಬಗೆಗೆ ನಾಲ್ಕು ಮಾತು ಹೇಳಬಹುದು. ಇದನ್ನು ಬರೆದವನು ಚನ್ನವೀರ ಕವಿ. ಕಾಲ ಸು.೧೫೦೦. "ಈತನು ಸಾರಸ್ವತ ವ್ಯಾಕರಣ, ಪುರುಷಸೂಕ್ತ, ನಮಕಚಮಕ ಇವುಗಳಿಗೆ ಕನ್ನಡ ಟೀಕೆಯನ್ನು ಬರೆದಿದ್ದಾನೆ. ಇವನು ವೀರಶೈವ ಕವಿ .... ಈ ವ್ಯಾಖ್ಯಾನಗಳನ್ನು ನೋಡಿದರೆ ಈತನು ದೊಡ್ಡ ಪಂಡಿತನು ಎಂಬುದಕ್ಕೆ ಅಡ್ಡಿಯಿಲ್ಲ."[೧೭] ಎಂದು ತಿಳಿಸಿರುವ ಕವಿಚರಿತೆಕಾರರು ಈ ಧಾತುಪಾಠ ಕನ್ನಡ ಟೀಕೆಯ ಬಗೆಗೆ ಏನೂ ಹೇಳಿಲ್ಲ. ಈ ನಿಘಂಟನ್ನು ಮೊತ್ತ ಮೊದಲಿಗೆ ಸಂಪಾದನೆ ಮಾಡಿ ಪ್ರಕಟಿಸಿರುವ ಎ.ಎನ್.ನರಸಿಂಹಯ್ಯನವರು ಕವಿ ಕೃತಿ ವಿಚಾರವಾಗಿ ಕೆಲವು ಸಂಗತಿಗಳನ್ನು ತಿಳಿಯಪಡಿಸಿದ್ದಾರೆ: "ಇದಕ್ಕೆ 'ಕಾಶಕೃತ್ಸ್ನ ಶಬ್ದ ಕಲಾಪಧಾತು ಪಾಠಃ' ಎಂಬ ಹೆಸರು ಬರಲು ಕಾರಣವನ್ನು ಸ್ಪಷ್ಟವಾಗಿ ಈ ಗ್ರಂಥದಲ್ಲಿ ಹೇಳಿಲ್ಲ.... ಇದು 'ಕಲಾಪ' ವ್ಯಾಕರಣಕ್ಕೆ ಸಂಬಂಧ ಪಟ್ಟಿದೆ ಎಂದೂ ಹೇಳುವುದುಂಟು... ಆದಿ ಶಾಬ್ದಿಕ ಋಷಿಗಳ ಗುಂಪಿಗೆ ಕಾಶಕೃತ್ಸ್ನ ಸೇರಿದ್ದರೆಂದೂ ಅನೇಕರು ಹೇಳುತ್ತಾರೆ.... ಈ ಧಾತು ಪಾಠದ... ಕರ್ಣಾಟ ಟೀಕೆಯನ್ನು ಬರೆದವನು ಕಾಶೀಕಾಂಡ ಚನ್ನವೀರ ಕವಿಯೆಂಬುದು ವ್ಯಕ್ತವಾಗುತ್ತದೆ... ಈ ಧಾತು ಪಾಠದ ಅಧ್ಯಾಯಾಂತ್ಯದಲ್ಲಿ ಕೊಟ್ಟಿರುವ ವಿಷಯಕ್ಕೂ ಪುರುಷಸೂಕ್ತದ ೨೫ನೇ ಋಕ್ಕಿನ ಕನ್ನಡ ಟೀಕೆಗೂ ಹೋಲಿಕೆ ಇದೆ. ಈ ಹೋಲಿಕೆಯಿಂದಲೂ ಇವೆರಡು ಟೀಕೆಗಳನ್ನು ರಚಿಸಿದವನೂ ಒಬ್ಬನೇ ಎಂದು ಸ್ಪಷ್ಟವಾಗುತ್ತದೆ...."[೧೮] ಕವಿ ಕೊಟ್ಟಿರುವ ಸ್ವವಿಷಯಕವಾದ ಅಧ್ಯಾಯಾಂತ್ಯ ಗದ್ಯದಿಂದ, ಈತನ ತಂದೆ ಕೋಕಿಲಾಕುಂಡ ಸಂಗನ ಗುರುಲಿಂಗ, ತಾಯಿನಂದ್ಯಂಬೆ; ಈತ ಯಾಗಂಟಿ ಶರಭಲಿಂಗ ಭಕ್ತ; ಈತನ ಸ್ಥಳ ಸಹ್ಯಾದ್ರಿಯ ತಪ್ಪಲಲ್ಲಿರುವ ಕುಂಟಿಕಾಪುರ; 'ಶಿವಲೆಂಕ ಮಂಚಣ ಪಂಡಿತಾರಾಧ್ಯ ವಂಶೋದ್ಭವ' ಎಂಬ ಉಲ್ಲೇಖವನ್ನು

ಕೃಪೆಯಿಂದ ಶಾಲಿವಾಹನ ಶಕೆಯ ಬಹುಧಾನ್ಯ ಸಂವತ್ಸರದ ೧೩೨೦ (ಕ್ರಿ.ಶ.೧೩೯೮) ರಲ್ಲಿ ಅಭಿನವ ಮಂಗನು ಅಭಿನವ ನಿಘಂಟನ್ನು ರಚಿಸಿದನು.

"ವರರುಚಿಯ ಜಾಣ್ಮೆ, ಗೋಪಾಲಕನ ಬೆಡಗು, ಭಾಗುರಿಯ ಗೂಢತೆ ಧನಂಜಯನ ಪರ್ಯಾಯ, ಸುರಹರಿಯ ಸುವಿಭಕ್ತಿ, ವಿಶ್ವಪ್ರಕಾಶನ ಚದುರು, ನಾಗವರ್ಮನ ಕನ್ನಡಂ, ವರವೈಜಯಂತಿಯ ನಯಂ, ಹಲಾಯುಧನ ವಿಸ್ತರದ ವಚನೋಕ್ತಿಯೆಂಬಿಂತಿವೆಲ್ಲವನು ಸಂವರಿಸಿ, ಅಭಿನವ ಮಂಗನುಸಿರಿದಂ ಸ್ತ್ರೀ ಬಾಲರರಿವಂತುಟಭಿಧಾನಮಂ" ಎಂದು ಮಂಗರಾಜನು ತನಗಿಂತ ಹಿಂದಿನ ನಿಘಂಟುಕಾರರ ಗುಣಗಳೆಲ್ಲವೂ ತನ್ನ ಕೃತಿಯಲ್ಲಿ ಅಡಗಿದೆ ಎಂದು ಹೇಳಿಕೊಂಡಿದ್ದಾನೆ. ಆದರೆ, ಇವನು ಮುಖ್ಯವಾಗಿ ಹಲಾಯುಧನ ಅಭಿಧಾನ ರತ್ನಮಾಲೆಯನ್ನೂ ನಾಗವರ್ಮನು ಅದರ ಮೇಲೆ ಬರೆದಿರುವ ಟೀಕೆಯನ್ನೂ ಹಾಗೂ ಅವನ ವಸ್ತುಕೋಶವನ್ನೂ ಅವಲಂಬಿಸಿ ತನ್ನ ಕೃತಿಯನ್ನು ರಚಿಸಿದ್ದಾನೆ. ವಾರ್ಧಿಕ ಷಟ್ಪದಿಯಲ್ಲಿ ರಚಿತವಾಗಿರುವ ಇದರಲ್ಲಿ ೫೯೯ ಪದ್ಯಗಳಿವೆ; ೫ ಕಾಂಡಗಳಿವೆ. ಅವುಗಳಲ್ಲಿ ವಿಷಯ ವಿಭಜನೆ ಹೀಗಿದೆ: (೧)ಸ್ವರ್ಗಕಾಂಡ – ದೇವ, ಗ್ರಹ, ದಿಕ್, ಕಾಲ, ನಾಟ್ಯ, ಶಬ್ದಗಳೆಂಬ ೬ ವರ್ಗಗಳು; (೨)ಭೂಕಾಂಡ – ಭೂ, ಶೈಲ, ವನೌಷಧಿ, ಮೃಗ, ಪಕ್ಷಿ ಮೊದಲಾದ ೧೭ ವರ್ಗಗಳು; (೩)ಪಾತಾಳ ಕಾಂಡ – ಮೃತ, ಭೋಗಿ, ಜಲ ಎಂಬ ಮೂರು ವರ್ಗಗಳು; (೪)ಸಾಮಾನ್ಯ ಕಾಂಡ; (೫)ನಾನಾರ್ಥ ಕಾಂಡ; ವರ್ಗ ವಿಭಾಗಗಳಿಲ್ಲ.

ಪೂರ್ವದ ನಿಘಂಟುಗಳಲ್ಲಿ ಕಾಣಬಾರದ ಕೆಲವು ಸ್ವಾರಸ್ಯಕರವಾದ ಸಂಗತಿಗಳು ಈ ನಿಘಂಟಿನಲ್ಲಿವೆ. ಉದಾಹರಣೆಗೆ – ದೇವವರ್ಗದಲ್ಲಿ "ಮಾಳಚಿಯ ಭರ್ತೃ, ಮಲ್ಲಾರಿ, ಪಲ್ಲಿಂಪ ದೇಶಾದೀಶನೆಂದೆನಲು ಮೈಲಾರದೇವನಕ್ಕುಂ" (ಪ.೧೫), ಎಂಬ ಮಾತು; ಬ್ರಹ್ಮ ವರ್ಗದಲ್ಲಿ ಬ್ರಾಹ್ಮಣರ ಕುಲಗಳನ್ನು ಹೇಳುವ ಸಂದರ್ಭದಲ್ಲಿ, "ಬ್ರಾಹ್ಮಣರೊಳು ಕಮ್ಮೆ ಮೊದಲಾದೆಂಟು ಕುಲವಕ್ಕು" ಎಂಬ ಸಂಗತಿ; (ಪ.೭) ದೇಹಾಲಂಕಾರದಲ್ಲಿ, ೧೨ ಬೆರಲು=೧.ಗೇಣು, ೨ಗೇಣು=೧ಮೊಳೆ, ೧ಮೊಳೆ+ನಾಲ್ಕು ಬೆರಳು=ಗಜ, ೨ಮೊಳೆ–ನಾಭಿ ಗೋಲು, ಈ ಅಳತೆಯ ವಿಷಯ (ಪ.೧೧) – ಇವು ಕನ್ನಡ ನಾಡಿಗೆ ವಿಶಿಷ್ಟವಾದ ವಿದ್ಯಮಾನವಾಗಿ ಕಾಣುತ್ತವೆ. ವೈಶ್ಯವರ್ಗದಲ್ಲಿರುವ ಕನ್ನಡ ನಾಡಿನ ಲೆಕ್ಕಾಚಾರದ ಬೇಳೆ, ಪಾಗ, ಪಣ, ಪಲ, ಬೀಸಿಗೆ, ತೊಲೆ, ಭಾರ, ಸೊಲ್ಲಗೆ, ಬಳ್ಳ, ಕೊಳಗ, ಖಂಡುಗ – ಈ ಶಬ್ದಗಳೂ ಗಮನಾರ್ಹ. (ಪ.೧೧) ಇದೇ ವರ್ಗದಲ್ಲಿ, ಕಾಗದ, ದೌತಿ, ಕಲಾಮು, ಎಂಬ ಅನ್ಯದೇಶ ಶಬ್ದಗಳೂ ಗಮನಿಸತಕ್ಕವು. ಈ

ಇಲ್ಲಿ ವಿಪುಲವಾದ ಸಾಮಗ್ರಿಯಿದೆ. ಈ ದೃಷ್ಟಿಯಿಂದ ಈ ಕೃತಿ ಮುಖ್ಯವಾಗಿದೆ.

'ಶಬ್ದರತ್ನಾಕರ' (೩೦ ಕಂದ ಪದ್ಯಗಳು); ಪದ್ಯನಾನಾರ್ಥ (೩೯ ಕಂದ ಪದ್ಯಗಳು), ಚನ್ನಕವಿಯ 'ನಾನಾರ್ಥಕಂದ' (೧೬೦ ಕಂದ ಪದ್ಯಗಳು), ದೇವೋತ್ತಮನ' ನಾನಾರ್ಥರತ್ನಾಕರ' (೧೬೯ ವೃತ್ತಗಳು), 'ಧನಂಜಯ ನಿಘಂಟು' (ಸಂಸ್ಕೃತ ನಿಘಂಟಿಗೆ ಕನ್ನಡ ಟೀಕು – ಇವು ಸಂಸ್ಕೃತ ಶಬ್ದಗಳ ನಾನಾರ್ಥಗಳನ್ನು ಕನ್ನಡದಲ್ಲಿ ತಿಳಿಸುವ ಇತರ ಕೆಲವು ನಿಘಂಟುಗಳು. ಇವುಗಳ ಕಾಲ ಸುಮಾರು ೧೬೦೦ ಎಂದು ಊಹಿಸಲಾಗಿದೆ.)

ಈ ಸಂಸ್ಕೃತ ಕನ್ನಡ ನಿಘಂಟುಗಳಿಂದ, ಕನ್ನಡ ನಾಡಿನಲ್ಲಿ ಸಾಮಾನ್ಯ ಜನಕ್ಕೂ ಸಂಸ್ಕೃತ ಶಬ್ದಗಳ ಅರ್ಥಜ್ಞಾನವನ್ನು ಉಂಟು ಮಾಡಿಕೊಟ್ಟು, ಕಾವ್ಯಾಭ್ಯಾಸಕ್ಕೂ ಕಾವ್ಯರಚನೆಗೂ ಅಗತ್ಯವಾದ ಸಹಾಯಕ ಸಾಮಗ್ರಿಯನ್ನು ಒದಗಿಸಿಕೊಡಬೇಕೆಂದು ನಮ್ಮ ಪೂರ್ವದ ವಿದ್ವಾಂಸರ ಗುರಿಯಾಗಿತ್ತು ಎಂದು ಭಾವಿಸಬಹುದು.

## III. ಶಾಸ್ತ್ರವಿಷಯಗಳ ನಿಘಂಟುಗಳು

**ಹಿನ್ನೆಲೆ:** ಈಗಿನ ಕಾಲದಲ್ಲಿ ವೈಜ್ಞಾನಿಕ ಪಾರಿಭಾಷಿಕ ಪದಗಳನ್ನು (scientific terminology) ಒಳಗೊಂಡ ನಿಘಂಟುಗಳ ಅಗತ್ಯವನ್ನು ನಾವು ಕಂಡುಕೊಳ್ಳುತ್ತಿರುವಂತೆ, ನಾನಾ ಶಾಸ್ತ್ರಗಳಿಗೆ ಸಂಬಂಧಪಟ್ಟ ನಿಘಂಟುಗಳ ಅಗತ್ಯವನ್ನು ಪೂರ್ವಕಾಲದ ಕನ್ನಡ ವಿದ್ವಾಂಸರು ಗ್ರಹಿಸಿದ್ದರು. ಈ ನಿಜಾಂಶ, ಕನ್ನಡದಲ್ಲಿ ರಚಿತವಾಗಿ ದೊರೆತಿರುವ ಕೆಲವು ಶಾಸ್ತ್ರ ವಿಷಯಕ ನಿಘಂಟುಗಳಿಂದ ಗೊತ್ತಾಗುತ್ತದೆ. ಕನ್ನಡ ಕವಿಗಳು ನಾನಾ ಶಾಸ್ತ್ರಗಳಲ್ಲಿ ಪಂಡಿತರಾಗಿದ್ದುದರಿಂದ, ಅವರ ಶಾಸ್ತ್ರಜ್ಞಾನ ಕಾವ್ಯಗಳಲ್ಲಿ ಪ್ರತಿಬಿಂಬಿತ ವಾಗುತ್ತಿತ್ತು. ವಿವಿಧ ಶಾಸ್ತ್ರಗಳಲ್ಲಿ ಬಳಕೆಯಾಗುವ ಪದಗಳ ಅರ್ಥಗಳು ತಿಳಿಯದಿದ್ದರೆ, ಕಾವ್ಯಗಳ ಅನೇಕ ಸಂದರ್ಭಗಳ ತಾತ್ಪರ್ಯ ಕೂಡ ಗೋಚರವಾಗುವುದಿಲ್ಲ. ಆದ್ದರಿಂದ, ಶಾಸ್ತ್ರಾಸಕ್ತರಿಗೆ ಮಾತ್ರವಲ್ಲದೆ ಕಾವ್ಯ ವ್ಯಾಸಂಗ ಮಾಡುವವರಿಗೂ ಇಂಥ ನಿಘಂಟು ಗಳಿಂದ ಪ್ರಯೋಜನವುಂಟು. ಈ ಬಗೆಯ ನಿಘಂಟುಗಳಲ್ಲಿ, ಆಯುರ್ವೇದ ವೈದ್ಯಕ್ಕೆ ಸಂಬಂಧಪಟ್ಟ ನಿಘಂಟುಗಳೇ ಹೆಚ್ಚಿನ ಸಂಖ್ಯೆಯವು. ಇವುಗಳಲ್ಲಿ ಅತ್ಯಂತ ಪ್ರಾಚೀನವಾದುದು 'ಅಕಾರಾದಿ ವೈದ್ಯ ನಿಘಂಟು'. ಅಮೃತನಂದಿ ಎಂಬ ಜೈನ ಕವಿಯಿಂದ ರಚಿತವಾದ ಇದರ ಕಾಲ ಸು.೧೩೦೦ ಎಂದು ಕವಿ ಚರಿತೆಕಾರರ ಊಹೆ. ಇದರಲ್ಲಿ ಸಂಸ್ಕೃತ ಪದಗಳಿಗೆ ಸಮಾನವಾದ ಕನ್ನಡ ಪದಗಳನ್ನು ಕೊಟ್ಟಿದೆ. ಇದರಿಂದ ನಮ್ಮ

ವಿಮರ್ಶೆ ಮಾಡಿ, ಚೆನ್ನವೀರ ಕವಿ ಶಿವಲೆಂಕ ಮಂಚಣನ (ಸು.೧೧೬೦) ಶಿಷ್ಯ ಪರಂಪರೆಗೆ ಸೇರಿದವನಿರಬೇಕು. ಕವಿಚರಿತೆಕಾರರು ಹೇಳಿರುವಂತೆ ಅವನ ವಂಶೋದ್ಭವನಲ್ಲದಿರಬಹುದು – ಎಂದು ನರಸಿಂಹಯ್ಯನವರು ಅಭಿಪ್ರಾಯ ಪಡುತ್ತಾರೆ.

ಕನ್ನಡ ಟೀಕೆಯನ್ನು ಒಳಗೊಂಡ ಈ ಧಾತು ಪಾಠದಲ್ಲಿ ಸಂಸ್ಕೃತದ ಭೂ, ಇತ್ಯಾದಿ ಸಂಸ್ಕೃತ ಧಾತುಗಳಿಂದ ನಿಷ್ಪನ್ನವಾಗುವ ಸಂಸ್ಕೃತ ಶಬ್ದಗಳಿಗೆ ಕನ್ನಡದಲ್ಲಿ ಅರ್ಥವನ್ನು ಹೇಳಿದೆ. ಒಟ್ಟು ೧೨ ಅಧ್ಯಾಯಗಳಿವೆ. ಗ್ರಂಥಾದಿಯಲ್ಲಿ "ವ್ಯಾಕರಣವರಿಯದವರ ವ್ಯಾಕರಣಜ್ಞಾನದ ಶಿಕ್ಷೆಗೆ" ಇದು ರಚಿತವಾಗಿದೆ ಎಂದು ತಿಳಿದುಬರುತ್ತದೆ. ಟೀಕೆಯಲ್ಲಿ ಚನ್ನವೀರನ ಅಚ್ಚಗನ್ನಡದ ಒಲವೂ ಉಭಯಭಾಷಾ ಪಾಂಡಿತ್ಯವೂ ಚೆನ್ನಾಗಿ ವ್ಯಕ್ತಪಡುತ್ತದೆ. ಒಂದೆರಡು ಉದಾಹರಣೆಗಳಿಂದ ಈ ಅಂಶ ಸ್ಪಷ್ಟವಾಗಬಹುದು:

ಭೂ–ಸತ್ತಾಯಾಂ, ಭೂಕ್ವಿಪ್ ಎಂಬಲ್ಲಿ ಕ್ವಿಪ್ ಪೋಗೆ ಭೂಃ ಎಂಬ ಕೃಲ್ಲಿಂಗವಾಯ್ತು.

ಭೂ=ನೆಲಂ; ಭೂತಿಃ=ಸಿರಿ; ಭೂತಃ=ಪ್ರಮಥಂ;

ಭುವನಂ=ನಾಡು; ಪ್ರಭವಃ=ಹುಟ್ಟಿದಂ; ಪರಾಭವ=ಸೋಲ್ತಂ;

ಪ್ರಭುಃ=ದೇಶಾಯಿ=ವಿಭುಃ=ಅರಸು – ಇತ್ಯಾದಿ.

ಖರ್ದ–ದಂಶನೇ, ಕಡಿತದೊಲೊಳ್; ಖರ್ದತಿ=ಕಡಿಪುದು, ಖರ್ದ=ನಾಯ್

ಲಜ, ಲಜಿ, ಲಾಜ, ಲಾಜಿ, ತರ್ಜ ಭರ್ತ್ಸನೇ, ಬೈಯ್ಯಯಲೊಳ್, ಲಜತಿ=

ಬಯ್ದಪಂ; ಲಂಜತಗಿ ಸೆಳೆದಪಳ್, ಲಂಜಾ=ಸೂಳೆ

ಅಡ್ಡ–ಅಭಿಯೋಗೇ, ಮರೆಯೊಳಡ್ಡತೀತಿ ಅಡ್ಡಯಿಸಿದಪುದೆಂಬುದು; ಅಡ್ಡಂ=ಮರೆ.

ಗಡ್ಡ=ವದನೈಕದೇಶೆ, ಚುಬಕದೊಳ್; ಗಡ್ಡ=ಚುಬಕಂ; ಗಾಡ್ಡಾ=ಗಡ್ಡೆ

ಕುಲ=ಸಂಖ್ಯಾನೇ, ಎಣಕೆಯೊಳ್; ಕುಳಿಃ=ನಿಮ್ನ(ತಗ್ಗು) ಭೂಮಿ, ಕುಲಂ=ಕೊಳಂ

ಈ ನಿಘಂಟನ್ನು ಉದ್ದಕ್ಕೂ ಪರಿಶೀಲಿಸುತ್ತಾ ಹೋದಂತೆ, ನಾವು ಯಾವ ಪದಗಳು ಕನ್ನಡದವು ಎಂದು ತಿಳಿದಿರುವೆವೋ ಅವು ಸಂಸ್ಕೃತ ಮೂಲದಿಂದ ಬಂದವು ಎಂದು ಕಂಡುಬರುತ್ತದೆ. ಚನ್ನವೀರ ಕವಿಯ ನಿರ್ವಚನ ಎಷ್ಟರಮಟ್ಟಿಗೆ ಸರಿ ಎಂಬುದನ್ನು ವಿಚಾರ ಮಾಡಬೇಕಾಗುತ್ತದೆ. ಭಾಷಾ ಶಾಸ್ತ್ರಜ್ಞರ ಸಂಶೋಧನೆಗೆ

**೩ನೆಯ ಪ್ರಕರಣದಿಂದ ಉದಾಹರಣೆಗಳು**

ಮತ್ಸ್ಯಂಡಿ ಪಾಣಿತಂ ಲಾಜಾಃ ಶರ್ಕರಾ ಕೂರ್ಚಿಕಾದಧಿ
ಕರಕಾಯಿತ ಪಾನೀಯಂ ಚೀನಾ ಬೂರಾಚ್ಛ ಶರ್ಕರಾರಾಃ ॥೪೬॥

ಮತ್ಸ್ಯಂಡಿ+ಕಂಬಸಕ್ಕರೆ, ಪಾಣಿತಂ=ಕಾಕಂಬಿ,
ಲಾಜಾಃ=ಅರಳು, ಶರ್ಕರಾ=ರಾಯಿ ಪುಡಿ,
ಕೂರ್ಚಿಕಾ=ಗೆಣ್ಣು, ದಧಿ=ಮೊಸರು, ಕರಕಾಯಿತಂ
ಪಾನೀಯಂ=ನೀರುಗಟ್ಟಿಮಾಡಿದ್ದು, ಚೀನಾಶರ್ಕರಾ
=ಚೀನಾ ಸಕ್ಕರೆ, ಭೂರಾ ಶರ್ಕರಾ=ಬೂರಾ ಸಕ್ಕರೆ
ಅಚ್ಛ ಶರ್ಕರಾ=ಬಿಳಿಕಲ್ಲು ಸಕ್ಕರೆ.

**ತತ್ತ್ವಾಭಿನಯ ನಿಘಂಟು:** ಇದು ನಾಟ್ಯ ಶಾಸ್ತ್ರಕ್ಕೆ ಸಂಬಂಧಪಟ್ಟ ಕೋಶ. ಕವಿ ಯಾರೆಂಬುದು ಗೊತ್ತಿಲ್ಲ. ಇದು ೧೮೯೫ರಲ್ಲಿ ರಚಿತವಾದುದೆಂದು ಇದರ ಹಸ್ತಪ್ರತಿಯಿಂದ ತಿಳಿದು ಬರುತ್ತದೆ. ಇದರಲ್ಲಿ ಹಸ್ತಮುದ್ರೆಗಳ ಲಕ್ಷಣಗಳನ್ನು ವಿವರಿಸಿದೆ.

**ಕೋಶ ಪ್ರತಿಕೋಶ ನಿಘಂಟು**: ಇದರ ಲೇಖಕ ಪೂರ್ಣಾನಂದ ಅವಧೂತ ಶಿವಯೋಗಿ. ಕಾಲ ಗೊತ್ತಿಲ್ಲ. ಸಂಸ್ಕೃತ ಮಂತ್ರಶಾಸ್ತ್ರದ ವೇದಾಂತ ಭಾಗದ ಮೂಲ ಸಂಸ್ಕೃತ ಶ್ಲೋಕಗಳಿಗೆ ಕನ್ನಡದಲ್ಲಿ ಟೀಕು ಬರೆದಿದೆ.

## IV ಕಾವ್ಯ ಶಬ್ದ ಕೋಶಗಳು:

ಕನ್ನಡ ಸಾಹಿತ್ಯ ಪರಿಷತ್ತು ೧೯೩೦ರಲ್ಲಿ ಕಾವ್ಯಗಳಲ್ಲಿ ಪ್ರಯೋಗವಾದ ಶಬ್ದಗಳ ವಿಶಿಷ್ಟ ನಿಘಂಟುಗಳನ್ನು ಸಿದ್ಧಗೊಳಿಸಿತು. ಕಾರಣಾಂತರಗಳಿಂದ ಇವು ಪ್ರಕಟವಾಗಲಿಲ್ಲ. ಇವುಗಳ ನಿರ್ಮಾಣದ ಶ್ರೇಯಸ್ಸು ದಿವಂಗತ ಬೆಳ್ಳಾವೆ ವೆಂಕಟನಾರಣಪ್ಪನವರಿಗೆ ಸಲ್ಲುತ್ತದೆ. ಇವರು ಪರಿಷತ್ತಿನ ಪಂಡಿತರುಗಳ ನೆರವಿನಿಂದ ಈ ನಿಘಂಟುಗಳನ್ನು ತಯಾರಿಸಿದ್ದಾರೆ: (i)ಷಟ್ಪದಿ ಕಾವ್ಯಗಳ ನಿಘಂಟು: ೧೨ ಷಟ್ಪದಿ ಕಾವ್ಯಗಳಿಂದ ಶಬ್ದಗಳನ್ನು ಸಂಗ್ರಹಿಸಿ, ಅವುಗಳ ಅರ್ಥ ನಿಷ್ಕರ್ಷೆ ಮಾಡಿದೆ; (ii)ಕನ್ನಡ ನಿಘಂಟುಗಳ ನಿಘಂಟು: ನಾನು ಈ ಹಿಂದೆ ಉಲ್ಲೇಖಿಸಿರುವ ಅನೇಕ ಪ್ರಾಚೀನ ನಿಘಂಟುಗಳಿಂದ ಶಬ್ದಗಳನ್ನು ಸಂಗ್ರಹಿಸಿ ತಯಾರಿಸಿದೆ;

ನಾಡಿನ ಗಿಡ ಮೂಲಿಕೆಗಳ ಪರಿಚಯವೂ ಆಗುವುದು. ಕೆಲವು ಶಬ್ದಗಳು:

ಅಳಿಷ್ಠ–ತಿಲಕ, ವೃಕ್ಷ; ಅಳಿಕಾ–ಬಳ್ಳಿಹರುವೆ; ಅಲಸಾ–ಚಿನ್ನತಾರೆ; ಅಕ್ಷಿ–ನರುವಂಜಿ, 'ಧನ್ವಂತರೀಯ ನಿಘಂಟು' (ಕರ್ತೃ?) (ಕ್ರಿ.ಶ.ಸು.೧೫೦೦); 'ಮದನಾರಿ ವೈದ್ಯ ನಿಘಂಟು', 'ಇಂದ್ರದೀಪಿಕಾ ನಿಘಂಟು' (ಕವಿ, ಕಾಲ?)–ಇವೂ ಇದೇ ಜಾತಿಯ ನಿಘಂಟುಗಳು, ಸು.೧೭೭೫ರಲ್ಲಿದ್ದ ಲಕ್ಷ್ಮಣಪಂಡಿತನೆಂಬವನೂ ಇಂಥ ಒಂದು ನಿಘಂಟನ್ನು ರಚಿಸಿರುವುದಾಗಿ ತಿಳಿದು ಬರುತ್ತದೆ.*

**ಚಾಮುಂಡಾ ಲಘುನಿಘಂಟು:** ಇದರ ಕರ್ತೃ ಮೈಸೂರು ರಾಜ್ಯದ ದೊರೆಯಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರು. ಇದು ೧೮೮೪ರಲ್ಲಿ ರಚಿತವಾಗಿದೆ. ಇದರಲ್ಲಿ ಮೂರು ಪ್ರಕರಣಗಳಿವೆ. ಗ್ರಂಥದ ಕಡೆಯಲ್ಲಿ ವಿಷಯ ಸ್ವರೂಪವನ್ನು ತಿಳಿಸುವ ಗದ್ಯಭಾಗದ ಕೆಲವು ವಾಕ್ಯಗಳು:

ಶ್ರೀಮತ್ ಕೃಷ್ಣರಾಜ ಮಹಾರಾಜ ಕಂಠೀರವರಿಂದ ವಿರಚಿತಮಾದ ಶ್ರೀಚಾಮುಂಡಾ ಲಘುನಿಘಂಟೆಂಬ ಗ್ರಂಥದ ಪ್ರಥಮ ಪ್ರಕರಣದಲ್ಲಿ ದೇವತಾಯುಧ ಹಸ್ತಭೇದಗಳು (೧೨೮)....ದ್ವಿತೀಯ ಪ್ರಕರಣದಲ್ಲಿ ಪ್ರಸಿದ್ಧ ಪಶುಮೃಗ ಜಾತಿ ಭೇದಗಳು (೧೧೨), ಪ್ರಸಿದ್ಧ ಮುಖ್ಯ ಪಕ್ಷಿಜಾತಿ ಭೇದಗಳು (೧೦೯), ಪ್ರಸಿದ್ಧ ಜಲತಂತು ಕೀಟ ಭೇದಗಳು (೪೯)......ಮೂರನೇಯ ಪ್ರಕರಣದಲ್ಲಿ ಪ್ರಸಿದ್ಧ ವೃಕ್ಷ ಕಿರುಗಿಡ ಶಾಕ ಪುಷ್ಪ ಜಾತಿ ಕುರುಚು ಗಿಡಗಳ ಭೇದಗಳು (೪೭೮); ಬಳ್ಳಿ ವಿಭೇದಗಳು (೬೬), ಗಂಧಿಗಸರಕು ನಾರುಬೇರುಗಳ ಭೇದಗಳು (೧೪೮), ನವರತ್ನ ಕ್ಷುದ್ರಮಣಿ ಭೇದಗಳು (೨೨), ಲೋಹ ಭೇದ(೧೧), ಪರ್‍ಯಾಯ ಮಣಿಗಳು ಶಂಖಭೇದಗಳು (೧೬), ಪ್ರಸಿದ್ಧ ಧಾನ್ಯ ಭೇದಗಳು (೪೪), ಪ್ರಸಿದ್ಧ ಫಲಹಾರ ಪಾನೀಯ ದ್ರವ್ಯಗಳು (೫೪) – ಅಂತು ಈ ಚಾಮುಂಡಾ ಲಘು ನಿಘಂಟಿನ ಮೂರು ಪ್ರಕರಣಕ್ಕೂ ಒಟ್ಟು ಪದ ಅರ್ಥಗಳು ೧೨೩೬ಕ್ಕೆ ಶ್ಲೋಕಗಳು ೧೫೨, ಸ್ವಾಂಕಿತ ಸೀಸ್ವ ಪದ್ಯ ೧ ಸಹಾ ನಿರ್ಮಾಣ ಮಾಡಿದೆ.

---

* ಈ ಸಂದರ್ಭದಲ್ಲಿ, ಡಿ.ಎಸ್.ಶಿವಪ್ಪನವರು ಹೊರತಂದಿರುವ ಇಂಗ್ಲೀಷ್ ಕನ್ನಡ ವೈದ್ಯ ಪದಕೋಶ' (೧೯೭೩)ವನ್ನು ಉಲ್ಲೇಖಿಸಲು ಸಂತೋಷವೆನಿಸುತ್ತದೆ. "ವೈದ್ಯಶಾಸ್ತ್ರ ಕಲಿಯುವವರಿಗೆ ಈ ಪದಕೋಶದಿಂದ ತಾಂತ್ರಿಕ ಪದಗಳ ಅರ್ಥ ಇನಿತಾದರೂ ಹೊಳೆಯಲೆಂಬುದೇ" ಲೇಖಕರ ಉದ್ದೇಶ. ಇಲ್ಲಿನ ಪದಗಳು ಆಲೋಪತಿ ವೈದ್ಯ ಪದ್ಧತಿಗೆ ಸಂಬಂಧಪಟ್ಟಿವೆ.

ಕನ್ನಡ ನಾಡಿನ ಹೊರಗಿನ ವಿದ್ವಾಂಸರಿಗೆ ಅರಿವಾಗಲು ಇದರಿಂದ ಪ್ರಯೋಜನವಾಗುವುದರಿಂದ, ಇದರ ಉಪಯುಕ್ತತೆ ಸರ್ವಕಾಲಕ್ಕೂ ಸರ್ವದೇಶಗಳಿಗೂ ಲಭಿಸತಕ್ಕದ್ದಾಗಿದೆ. ನಮ್ಮ ನಾಡಿನಲ್ಲಿ ಕೂಡ, ಹಳಗನ್ನಡವನ್ನು ಕಾಲೇಜುಗಳಲ್ಲಿ ಅಭ್ಯಾಸ ಮಾಡುವ ವಿದ್ಯಾರ್ಥಿಗಳಿಗೂ ಪಾಠ ಹೇಳುವ ಅಧ್ಯಾಪಕರಿಗೂ ಕೈ ನೆರವಾಗಿರುವ ನಿಘಂಟು ಇದೊಂದೇ. ಈಚೆಗೆ ಹುಟ್ಟಿಕೊಂಡಿರುವ ಅನೇಕ ಕನ್ನಡ ನಿಘಂಟುಗಳಿಗೆ ಇದು ಮಾತೃಕೆ. ದಿವಂಗತ ಡಿ.ಎಲ್. ನರಸಿಂಹಾಚಾರ್ಯರ ಮಾತುಗಳಿಂದ ಈ ಪರಿಚಯವನ್ನು ಮುಗಿಸಬಹುದು:

"ಕಿಟ್ಟೆಲ್ ಅವರ ಕೀರ್ತಿ ಶಾಶ್ವತವಾಗಿ ನೆಲಸಿರುವುದಕ್ಕೆ ಕಾರಣ ಅವರು ರಚಿಸಿದ 'ಕನ್ನಡ–ಇಂಗ್ಲೀಷ್ ನಿಘಂಟು' ಎಂಬ ಬೃಹತ್ ಕೋಶ. ಈ ಮಹಾಕೋಶವನ್ನು ಸಿದ್ಧಗೊಳಿಸುವುದಕ್ಕೆ ಸುಮಾರು ೧೫ ವರ್ಷಗಳ ಕಾಲ ಹಿಡಿಯಿತು. ಇದಕ್ಕಿಂತ ಹಿಂದೆ ರೀವ್ಸ್ ಎಂಬಾತನು ಕನ್ನಡ–ಇಂಗ್ಲೀಷ್ ಕೋಶವೊಂದನ್ನು ತಯಾರಿಸಿದ್ದನು; ಅವನು ೧೮೧೭ರಲ್ಲೇ ಈ ಕೆಲಸವನ್ನು ಆರಂಭಿಸಿ ೧೮೩೨ರಲ್ಲಿ ಎಂದರೆ ೧೫ ವರ್ಷಗಳ ಅನಂತರ ಅದನ್ನು ಮುಗಿಸಿ ಅಚ್ಚು ಹಾಕಿಸಿ ಪ್ರಕಟಿಸಿದ್ದನು. ಕಿಟ್ಟೆಲ್ ಅವರು ಇದರಿಂದ ತಮಗಾದ ಸಹಾಯವನ್ನು ಮುಕ್ತ ಕಂಠದಿಂದ ಒಪ್ಪಿಕೊಂಡಿದ್ದಾರೆ. ಆದರೆ ಈ ನಿಘಂಟು ಪ್ರಮಾಣಭೂತವಲ್ಲ, ಶಾಸ್ತ್ರೀಯವಾದುದಲ್ಲ. ಕೈಗೆ ಸಿಕ್ಕಿದ ಶಬ್ದಗಳೆಲ್ಲ ಸೇರಿಕೊಂಡುಬಿಟ್ಟಿವೆ. ಈ ವಿಷಯಗಳನ್ನೆಲ್ಲ ಕಿಟ್ಟೆಲ್ ಅವರು ಪರಿಶೀಲಿಸಿ ಗ್ರಾಹ್ಯವಾದ ಅಂಶಗಳನ್ನು ಮಾತ್ರ ಸ್ವೀಕರಿಸಿದ್ದಾರೆ. ಅವರ ಪರಿಪಕ್ವವಾದ ಪಾಂಡಿತ್ಯದ ಪ್ರತೀಕವಾಗಿದೆ ಅವರ ಈ ನಿಘಂಟು. ಇಂದಿಗೂ ಅದನ್ನು ಮೀರಿಸಲು ಕನ್ನಡಿಗರಿಗೆ ಸಾಧ್ಯವಾಗಿಲ್ಲ* ೧೮೯೪ರಲ್ಲಿ ಪ್ರಕಟವಾದ ಈ ನಿಘಂಟು ಇವತ್ತಿಗೂ ಕನ್ನಡ ಭಾಷೆಯ ನಿಷ್ಕೃಷ್ಟವಾದ, ಪ್ರಮಾಣಭೂತವಾದ ಮಹಾ ಶಬ್ದಕೋಶವಾಗಿದೆ. ಇಷ್ಟು ಖಚಿತವೂಶಾಸ್ತ್ರೀಯವೂ ನಿಯಮಬದ್ಧವೂ ಆದ ನಿಘಂಟು ಭರತಖಂಡದ ಯಾವ ದೇಶ ಭಾಷೆಗೂ

---

* ಈಚೆಗೆ ಕಿಟ್ಟೆಲ್ ನಿಘಂಟನ್ನು ಪರಿಷ್ಕರಿಸಿ, ಮದರಾಸು ವಿಶ್ವವಿದ್ಯಾನಿಲಯದವರು ಪುನರ್ ಮುದ್ರಣ ಮಾಡಿಸಿದ್ದಾರೆ. ಇದರಲ್ಲಿ ಕಿಟ್ಟೆಲ್‌ರವರಿಗೆ ದೊರಕದಿದ್ದ ಕಾವ್ಯ ಪದಗಳನ್ನೂ ಹೊಸದಾಗಿ ಸೇರಿಸಿದೆ. ಇದರ ಸಂಪಾದಕರು ಪ್ರೊ॥ ಎಂ.ಮರಿಯಪ್ಪ ಭಟ್ಟರು. ಕನ್ನಡ ಸಾಹಿತ್ಯ ಪರಿಷತ್ತು ತಯಾರಿಸುತ್ತಿರುವ ಸಮಗ್ರ ಕನ್ನಡ ಕೋಶಕ್ಕೂ ಕಿಟ್ಟೆಲ್ ನಿಘಂಟು ಆಧಾರವಾಗಿ ಪರಿಣಮಿಸಿದೆ. ಸುಪ್ರಸಿದ್ಧ ಭಾಷಾ ವಿಜ್ಞಾನಿಗಳಾದ ಎಮೆನೋ ಮತ್ತು ಬರೋ ಅವರು ತಯಾರಿಸಿರುವ 'ದ್ರಾವಿಡ ಭಾಷೆಗಳ ಶಬ್ದಗಳ ರೂಪದ ನಿರ್ವಾಚಕ ನಿಘಂಟು'ವಿಗೂ ಇದೇ ಕನ್ನಡದ ವಿಷಯದ ಮಟ್ಟಿಗೆ ಆಧಾರಭೂತ ಗ್ರಂಥವಾಗಿದೆ.

(iii)ಜಟಿಕುಳ ನಿಘಂಟು: ಪ್ರಾಚೀನ ಕಾವ್ಯಗಳಲ್ಲಿ ಪ್ರಯೋಗಿಸಿರುವ ರಳಾಕ್ಷರಗಳ ಶಬ್ದಗಳು, ಕುಳಾಕ್ಷರ ಶಬ್ದಗಳು. ಇವುಗಳನ್ನು ಸಂಗ್ರಹಿಸಿ ತಯಾರಿಸಿದೆ. ಈ ಮೂರು ನಿಘಂಟುಗಳೂ ಅಪ್ರಕಟಿತವಾಗಿದ್ದರೂ, ಪರಿಷತ್ತು ನಿರ್ಮಾಣ ಮಾಡುತ್ತಿರುವ ಕನ್ನಡ–ಕನ್ನಡ ನಿಘಂಟುವಿನ ರಚನೆಯಲ್ಲಿ ಉಪಯುಕ್ತವಾಗಿ ಪರಿಣಮಿಸಿದೆ.

**ಭಾರತ ನಿಘಂಟು:** ಇದನ್ನು ರಚಿಸಿದವನು ಯಾರೆಂಬುದು ತಿಳಿದು ಬಂದಿಲ್ಲ. ಕಾಲ ಸು.೧೬೦೦ ಎಂದು ಊಹಿಸಲಾಗಿದೆ. "ಕುಮಾರವ್ಯಾಸನೇ ಇದನ್ನು ಬರೆದಿರಬಹುದೆಂಬ ಪ್ರತೀತಿ ಇದೆ" ಎಂದು ಎನ್.ಬಸವಾರಾಧ್ಯರು ತಿಳಿಸುತ್ತಾರೆ. (ಚಿನ್ನದ ಬೆಳಸು; ಪು.೪೪). ಇದರಲ್ಲಿನ ೬೭ ಕಂದ ಪದ್ಯಗಳಲ್ಲಿ ಕುಮಾರವ್ಯಾಸ ಭಾರತ ದೇಶ್ಯ ಶಬ್ದಗಳಿಗೆ ಅರ್ಥ ಹೇಳಿದೆ.

ಒಂದು ಉದಾಹರಣೆ:

ತಲ್ಲಣಮೆನೆ ಭಯಮಕ್ಕುಂ ಹಲ್ಲಣಿಸಿತೆನಲ್ಕೆ ನಿಲ್ಲದೈದಿದುದಕ್ಕುಂ.
ಭುಲ್ಲವಣೆಯೆನಲು ಪೆರ್ಚುಗೆ ಘಲ್ಲಣಿಯೆನೆ ಘಾತಿಯೆಂದು ತಿಳಿಗೆ ವಿದಗ್ಧರ್

**ಕಿಟ್ಟೆಲ್ ನಿಘಂಟು :** ರೆ.ಎಫ್. ಕಿಟ್ಟೆಲ್ (೧೮೩೨–೧೯೦೩)ರವರ ಈ ನಿಘಂಟು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಮೈಲಿಗಲ್ಲು. ಇದನ್ನು ಎಷ್ಟು ಹೊಗಳಿದರೂ ಸಾಲದೆನ್ನಿಸುತ್ತದೆ. ಕಿಟ್ಟೆಲ್‌ರವರು ಅನೇಕ ವರ್ಷಗಳ ಕಾಲ ಅಪಾರ ಪರಿಶ್ರಮದಿಂದ ವಾಙ್ಮಯ ತಪಸ್ಸನ್ನಾಚರಿಸಿ ಈ ಬೃಹತ್ ಕೋಶವನ್ನು ರಚಿಸಿದ್ದಾರೆ. ಆವರೆಗೆ ಪ್ರಕಟವಾಗಿದ್ದು ತಮಗೆ ದೊರೆತ ಎಲ್ಲ ಮುದ್ರಿತ ಕನ್ನಡ ಗ್ರಂಥಗಳನ್ನು ಮಾತ್ರವಲ್ಲದೆ, ಹಸ್ತ ಪ್ರತಿಗಳನ್ನು ಕೂಡ ಪರಿಶೀಲಿಸಿ, ಶಬ್ದ ಸಂಗ್ರಹ ಮಾಡಿದ್ದಾರೆ. ಅಲ್ಲದೆ, ಕರ್ನಾಟಕದ ಬೇರೆ ಬೇರೆ ಪ್ರಾಂತಗಳ ಬಳಕೆ ನುಡಿಗಳನ್ನೂ, ಗಾದೆ ಮಾತುಗಳನ್ನೂ ಗಮನಿಸಿ, ಅದಕ್ಕೂ ಇದರಲ್ಲಿ ಎಡೆ ಕಲ್ಪಿಸಿದ್ದಾರೆ. ಪ್ರಯೋಗಗಳ ಆಧಾರದ ಮೇಲೆ ಅರ್ಥನಿರ್ಣಯ ಮಾಡಿ, ಆಕರಗಳನ್ನು ಸೂಚಿಸಿದ್ದಾರೆ. ಅರ್ಥ ಹೇಳಿದ ಮೇಲೆ ಪ್ರತಿ ಶಬ್ಧದ ವ್ಯುತ್ಪತ್ತಿಯನ್ನೂ ಇತರದ್ರಾವಿಡ ಭಾಷೆಗಳಲ್ಲಿ ಜ್ಞಾತಿಪದಗಳನ್ನೂ ಸೂಚಿಸಿದ್ದಾರೆ. ಅರ್ಥವನ್ನು ಇಂಗ್ಲೀಷಿನಲ್ಲಿ ಕೊಟ್ಟಿರುವುದರಿಂದ, ಇಂಗ್ಲೀಷ್ ಬಾರದ ಕನ್ನಡಿಗರಿಗೆ ಇದರ ಪ್ರಯೋಜನ ತಪ್ಪಿದ್ದು ಒಂದೆ ಕೊರತೆಯೆನಿಸಿದರೂ ಕನ್ನಡ ಭಾಷೆಯ ಸತ್ವಸಂಪನ್ನತೆಗಳು

ಬರುತ್ತವೆ. ಇವನ ತಂದೆ 'ಕವಿತಾ ವಿಲಾಸ' ಎಂಬ ಬಿರುದನ್ನು ಹೊಂದಿದ್ದ (ಶಂಕರ) ಭಟ್ಟಪಾರ್ಯ; ತಾಯಿ ಮಲ್ಲಿಕಬ್ಬೆ, ಚಾಲುಕ್ಯ ಚಕ್ರವರ್ತಿ ಜಯಸಿಂಹನು ಇವನನ್ನು ಮೆಚ್ಚಿಕೊಂಡು ಇವನಿಗೆ ಅನೇಕ ಗ್ರಾಮಗಳನ್ನು ಕೊಟ್ಟು ಗೌರವಿಸಿದುದಾಗಿ ತಿಳಿದು ಬರುತ್ತದೆ. ಚಾವುಂಡರಾಯನ ವ್ಯಕ್ತಿತ್ವದರ್ಶನ ಅವನ ಒಂದು ಪದ್ಯದಲ್ಲಿ ನಮಗೆ ದೊರೆಯುತ್ತದೆ.

"ಒಡಲಂ ಚಾರುಚಿತ್ರದೊಳ್, ಧನಮಂ ಇಷ್ಟಾಪೂರ್ತದೊಳ್ ಸತ್ಯಮಂ ನುಡಿಯೊಳ್, ಸಾಹಸಮಂ ನಿಜೇಶಹಿತದೊಳ್, ಸದ್ಭಕ್ತಿಯಂ ತಂದೆಯೊಳ್, ಮೃಡನಂ ನಿಶ್ಚಲ ಚಿತ್ತದೊಳ್, ಬೆಸನಂ ಸದ್ಧರ್ಮದೊಳ್ ತಾಳ್ದಿದಂ ಗಡಂ ಎಂದಂದು ಜಗಕ್ಕೆ ನೋಂತವರದಾರ್ ಚಾವುಂಡರಾಯಂಬರಂ."

ಚಾವುಂಡರಾಯ ಸಕಲಶಾಸ್ತ್ರ ಸಂಪನ್ನನಾಗಿದ್ದುದರಲ್ಲಿ ಸಂದೇಹವೇ ಇಲ್ಲ. 'ವಾಗ್ವಧೂ ಮಂಡನ ಮುಖತಿಲಕ', 'ವಿಬುಧ ಕಲ್ಪವೃಕ್ಷಂ', 'ಬುಧೈಕಾಶ್ರಯ', 'ಜಯಬಂಧು ನಂದನ' ಎಂಬಿವು ಅವನ ಅನೇಕ ಬಿರುದುಗಳಲ್ಲಿ ಕೆಲವು. 'ಲೋಕೋಪಕಾರ' ಸು.೯೪೦ ವೃತ್ತಗಳನ್ನೂ ಬಹು ಸಂಖ್ಯೆಯ ಕಂದ ಪದ್ಯಗಳನ್ನೂ ಹೊಂದಿದ್ದು, ಚಂಪೂ ಪ್ರಕಾರಕ್ಕೆ ಸೇರುತ್ತದೆ. ೧೨ ಅಧಿಕಾರಗಳ ಈ ಗ್ರಂಥದಲ್ಲಿ, ಪಂಚಾಂಗ ಫಲ, ನವಪಟಲ, ವಾಸ್ತು ವಿಚಾರ, ಉತ್ಪಾತ ಶಾಂತಿ, ಉದಕಾರ್ಗಳ (ಜಲಾಶಯ ನಿರ್ಮಾಣ), 'ವೃಕ್ಷಾಯುರ್ವೇದ, ಸುಗಂಧವಾದ, ಸೂಪಶಾಸ್ತ್ರ, ವೈದ್ಯ, ವಿಷವೈದ್ಯಂ, ಸರ್ವಲಕ್ಷಣ ಪರಿಜ್ಞಾನ, ಶಕುನ – ಈ ವಿಷಯಗಳು ನಿರೂಪಿತವಾಗಿವೆ; ಪದ್ಯಗಳಿಗೆ ಟೀಕೆಯಿದೆ. ಗ್ರಂಥದಲ್ಲಿ ಹೇಳಿರುವುದೆಲ್ಲವೂ ಕವಿಯ ದೃಷ್ಟಿಯಲ್ಲಿ ಸರ್ವಜನಹಿತಕಾರಿಯಾದುದು. ಶಕುನ ಕೂಡ 'ಸರ್ವಹಿತ'ವನ್ನು ಉಂಟು ಮಾಡತಕ್ಕದ್ದು. ಎಂದ ಮೇಲೆ ಗ್ರಂಥನಾಮ ಸಾರ್ಥಕವಾಗಿದೆ.

---

ಕರ್ತೃವಿನ ಒಂದು ಬಿರುದು ಮಾತ್ರ ಕಂಡು ಬಂದಿತ್ತು. ಆದ್ದರಿಂದ ಅವರು 'ಜಯಬಂಧು ನಂದನ'ನ 'ಸೂಪಶಾಸ್ತ್ರ' ವಿಷಯವಾಗಿ ಬರೆದು, ಕವಿಯ ಕಾಲವನ್ನು ಊಹೆಯ ಮೇಲೆ ಸು.೮೦೦ ಎಂದು ತಿಳಿಸಿದರು. (ಕವಿಚರಿತೆ, ೧೯೭೨ರ ಮುದ್ರಣ, ಪು.೧೭). 'ಲೋಕೋಪಕಾರ'ದ ೫, ೬ನೆಯ ಅಧಿಕಾರಗಳನ್ನು ಒಂದು ಪ್ರತ್ಯೇಕ ಗ್ರಂಥವಾಗಿ ಭಾವಿಸಿ, ಅದರ ಕರ್ತೃ ಚಾವುಂಡರಾಯ ಎಂದು ಹೇಳಿ, ಇವನ ಕಾಲವನ್ನು ೧೧೫೦ ಎಂದು ಊಹಿಸಿದ್ದರು. (ಕವಿಚರಿತೆ ೧,೧೭), ಸಮಗ್ರ ಪ್ರತಿ ದೊರೆತಿಲ್ಲ ಎಂದೂ ಹೇಳಿದ್ದರು. ಈ ಭಾಗದಲ್ಲಿಯೂ 'ಜಯಬಂಧು ನಂದನ' ಎಂಬ ಅಂಕಿತವನ್ನು ಕಂಡು, ಈ ಅಂಕಿತವುಳ್ಳ ಪದ್ಯಗಳು ಸೂಪಶಾಸ್ತ್ರದಿಂದ ತೆಗೆದುಕೊಂಡವು ಎಂದು ಭಾವಿಸಿದ್ದರು. ಹೀಗೆ, ಈ ಕೃತಿಯ ಬಗೆಗೆ ಒಂದು ಅನಿಶ್ಚಿತ ಸ್ಥಿತಿ ಇದ್ದಿತು. ಈಗ ಅದು ನಿವಾರಣೆಯಾಗಿದೆ.

ಇಲ್ಲವೆಂದು ಬಲ್ಲವರು ಹೇಳುತ್ತಾರೆ." (೧ ಪೀಠಿಕೆಗಳು ಮತ್ತು ಲೇಖನಗಳು, ೧೯೭೧; ಪು.೧೦೦೫).

**ಜ್ಞಾನ ಕೋಶ**

ಕರ್ನಾಟಕ ವಿಶ್ವಕ್ಕೆ ಬಹು ಪ್ರಾಚೀನ ಕಾಲದಲ್ಲಿಯೇ ನಾಲ್ಕು ವಿಶ್ವಕೋಶಗಳನ್ನು ಅರ್ಪಿಸಿದೆ. ಇವು ಆಗ ಭರತ ಖಂಡದಲ್ಲಿ ಪ್ರಚುರವಾಗಿದ್ದ ಸರ್ವಶಾಸ್ತ್ರಗಳನ್ನೂ ಒಳಗೊಂಡಿರುವುದರಿಂದ 'ಸರ್ವಶಾಸ್ತ್ರಕೋಶ'ವೆಂದೂ, ಸಕಲ ವಸ್ತುಗಳ ಪರಿಚಯ ಮಾಡಿಕೊಡುವುದರಿಂದ 'ಸರ್ವವಸ್ತುಕೋಶ'ವೆಂದೂ, ನಾನಾ ವಿಷಯಗಳ ತಿಳಿವಳಿಕೆಯನ್ನುಂಟು ಮಾಡಿಕೊಡುವುದರಿಂದ 'ಜ್ಞಾನಕೋಶ'ವೆಂದೂ ಬೇರೆ ಹೆಸರುಗಳಿಂದ ಕರೆಯಬಹುದು. ಈ ಪ್ರಕಾರಕ್ಕೆ ಈಗ ಬಳಕೆಯಲ್ಲಿರುವ ಮಾತು ವಿಶ್ವಕೋಶ; ಈಗಿನ ವಿಶ್ವಕೋಶದ ವಿಷಯದ ಹರಹು, ರಚನಾ ವಿಧಾನ, ಮುಂತಾದವು ಈ ಯುಗಕ್ಕೆ ತಕ್ಕಂತೆ ವಿಶ್ವ ಸಮಸ್ತವನ್ನೂ ಒಳಗೊಳ್ಳುವುದರಿಂದ, ತಪ್ಪು ಕಲ್ಪನೆ ಉಂಟಾಗಬಾರದು ಎಂಬ ಉದ್ದೇಶದಿಂದ 'ಜ್ಞಾನಕೋಶ' ಎಂಬ ಹೆಸರನ್ನು ಇಲ್ಲಿ ಬಳಸಿದೆ. ಹೆಸರು ಏನೇ ಇದ್ದರೂ ಈ ಬಗೆ ಗ್ರಂಥಗಳಿಂದ ವಾಚಕರಿಗೆ ದೊರಕುವುದು ಜ್ಞಾನ; ಈ ಜ್ಞಾನ ಉಪಕಾರಕ, ಕನ್ನಡದ 'ಲೋಕೋಪಕಾರ', 'ಸಿರಿಭೂವಲಯ', 'ಅಭಿಲಷಿತಾರ್ಥ ಚಿಂತಾಮಣಿ', 'ವಿವೇಕ ಚಿಂತಾಮಣಿ' – ಈ ನಾಲ್ಕು ಸರ್ವಸಾಸ್ತ್ರ ಸಮುಚ್ಚಯ ಗ್ರಂಥಗಳು ತಮ್ಮ ಬೇರೆ ಬೇರೆ ಹೆಸರುಗಳಿಂದ ಮೇಲೆ ಹೇಳಿರುವ ಉದ್ದೇಶಗಳನ್ನು ಪೂರಯಿಸಿ, ಅನ್ವರ್ಥಕವಾಗಿವೆ.

**ಲೋಕೋಪಕಾರ:** ಇದರ ಕರ್ತೃ ೨ನೆಯ ಚಾವುಂಡರಾಯ. (ಮೊದಲನೆಯವನು ಗಂಗರಾಜ ರಾಚಮಲ್ಲನ ಮಂತ್ರಿ; 'ಚಾವುಂಡರಾಯ ಪುರಾಣ'ದ ಕರ್ತೃ; ಶ್ರವಣಬೆಳುಗೊಳದ ಗೊಮ್ಮಟ ವಿಗ್ರಹವನ್ನು ಮಾಡಿಸಿ ನಿಲ್ಲಿಸಿದನು. ಇವನ ಕಾಲ ೯೭೮). ಇವನು ತನ್ನ ಗ್ರಂಥದ ರಚನಾ ಕಾಲವನ್ನು ಶಕವರ್ಷ ೯೪೭ (ಕ್ರಿ.ಶ.೧೦೨೫) ಎಂದು ತಾನೇ ತಿಳಿಸಿ ಹಾಗೂ ಉಪಕಾರ ಮಾಡಿದ್ದಾನೆ.* ಇವನ ಇತರ ಜೀವಿತ ವೃತ್ತಾಂಗಳೂ ಗ್ರಂಥದಿಂದಲೇ ತಿಳಿದು

---

* ಆರ್.ನರಸಿಂಹಾಚಾರ್ಯರು ತಮ್ಮ ಕವಿಚರಿತೆಯ ಪ್ರಥಮ ಸಂಪುಟದಲ್ಲಿ 'ಲೋಕೋಪಕಾರ'ದ ವಿಷಯವಾಗಿ ಖಚಿತವಾಗಿ ಬರೆಯಲು ಸಾಧ್ಯವಾಗಿರಲಿಲ್ಲ. 'ಲೋಕೋಪಕಾರ'ದ ಸೂಪಶಾಸ್ತ್ರ ವಿಷಯಕವಾದ ಗ್ರಂಥ ಭಾಗ ಮತ್ತು 'ಲೋಕೋಪಕಾರ'ದ ೫, ೬ನೆಯ ಅಧಿಕಾರಗಳು ಮಾತ್ರ ಅವರ ಗಮನಕ್ಕೆ ಬಂದಿದ್ದವು. ಸೂಪಶಾಸ್ತ್ರದ ಅಧಿಕಾರದಲ್ಲಿ 'ಜಯ ಬಂಧು ನಂದನ' ಎಂಬ

ಆಧುನಿಕ ಜ್ಞಾನ ವಿಜ್ಞಾನಗಳ ತಿಳುವಳಿಕೆ ಹರಡಿರುವ ಈ ಕಾಲದಲ್ಲಿ ಗ್ರಂಥದಲ್ಲಿ ಹೇಳಿರುವ ವಿಷಯಗಳೆಲ್ಲವೂ ನಮಗೆ ಗ್ರಾಹ್ಯವಾಗದಿರಬಹುದು. ಆದರೆ, ವಿವೇಚನೆಯಿಂದ ಪರಿಶೀಲಿಸಿ ಉಪಯುಕ್ತವಾದ ಅಂಶಗಳನ್ನು ಕುರಿತು ಸ್ವೀಕರಿಸುವ ಪಕ್ಷಕ್ಕೆ ಇಂದಿಗೂ ಲೋಕೋಪಕಾರವಾಗಬಹುದು ಈ ಕನ್ನಡದ ಪ್ರಥಮ ವಿಶ್ವಕೋಶ, 'ಲೋಕೋಪಕಾರ'.

**ಸಿರಿಭೂವಲಯ***: "ಸಿರಿಭೂವಲಯ" ನಾಮಾಂಕಿತವಾದ ಕುಮುದೇಂದು ಕವಿಯ ಅದ್ಭುತ ಗ್ರಂಥವನ್ನು ಸಂಪಾದಕರಾದ ಶ್ರೀ ಕರ್ಲಮಂಗಲಂ ಶ್ರೀಕಂಠಯ್ಯ ಮತ್ತು ಪಂಡಿತ ಎಲ್ಲಪ್ಪ ಶಾಸ್ತ್ರಿಗಳು ಬಹು ಪ್ರಯಾಸಪಟ್ಟು ಬೆಳಕಿಗೆ ತಂದಿರುವರು. ಈ ಮಹಾಗ್ರಂಥದ ಪ್ರಥಮ ಭಾಗಕ್ಕೆ ಮುನ್ನುಡಿಯನ್ನು ಬರೆದ ಶ್ರೀಕಂಠಯ್ಯನವರು ಸಾಧ್ಯವಾದ ಮಟ್ಟಿಗೂ ಅನೇಕ ಸಮಸ್ಯೆಗಳಿಗೆ ಪರಿಹಾರವನ್ನು ಹೇಳಿ ಈ ಗ್ರಂಥದ ವಿಶ್ವಪ್ರಾಶಸ್ತ್ಯವನ್ನು ಸೂಚಿಸಿರುವರು. ಕೇವಲ ಭಾಷಾ ದೃಷ್ಟಿಯಿಂದ ಈ ಗ್ರಂಥವು ಆಧುನಿಕವೆಂದು ತೀರ್ಮಾನಿಸಿದರೆ ಉದ್ಭವಿಸುವ ಅನೇಕ ಸಮಸ್ಯೆಗಳಿಗೆ ಸದುತ್ತರ ಕೊಡುವುದು ದುಸ್ತರವಾದುದರಿಂದಲೂ, ಈ ಗ್ರಂಥವನ್ನು ಅಧ್ಯಯನ ಮಾಡಲು ಕನ್ನಡ ಭಾಷಾ ಶಾಸ್ತ್ರವೇ ಅಲ್ಲದೆ ಜೈನ ಸಿದ್ಧಾಂತ, ಜ್ಯೋತಿಷ, ಆಯುರ್ವೇದ, ರಸಾಯನಶಾಸ್ತ್ರ, ಜೈನಗಣಿತ ಪದ್ಧತಿ, ಪುರಾತತ್ತ್ವ ಶೋಧನೆ, ಕರ್ನಾಟಕದ ಚರಿತ್ರೆ, ಅನೇಕ ಭಾಷೆಗಳಲ್ಲಿ ಪಾಂಡಿತ್ಯ, ಋಗ್ವೇದ, ರಾಮಾಯಣ, ಮಹಾಭಾರತ, ಭಗವದ್ಗೀತೆ ಇತ್ಯಾದಿಗಳ ಸಂಪೂರ್ಣ ಜ್ಞಾನ ಮುಂತಾದವು ಅತ್ಯವಶ್ಯಕ. ಇಂತಹ ಸರ್ವಜ್ಞತ್ವವಿಲ್ಲದೆ ಈ ಗ್ರಂಥದ ವಿಮರ್ಶೆಗೆ ಕೈ ಹಾಕಿ ಕೇವಲ ಕುತೂಹಲಜನಕವಾದ, ಮನೋರಂಜನೆಗಾಗಿ ಚಕ್ರಬಂಧ ಸ್ಪರ್ಧೆಗಾಗಿ ರಚಿಸಿದ ಗ್ರಂಥವೆಂದು ತೀರ್ಮಾನಿಸಿದರೆ, ಮಹಾ ಅಪಚಾರ ಮಾಡಿದಂತಾಗುವುದು. ಭಾರತೀಯ ಸಂಸ್ಕೃತಿಗೇ ಅಲ್ಲದೆ ವಿಶ್ವ ಸಂಸ್ಕೃತಿಗೂ ಈ ಗ್ರಂಥವು ಪರಮೋಪಕಾರ ಮಾಡುತ್ತದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಈಗ ಪ್ರಕಟವಾಗಿರುವ ಭೂವಲಯ ಸಿದ್ಧಾಂತದ ಪ್ರಥಮ ಮತ್ತು ದ್ವಿತೀಯ ಭಾಗದಲ್ಲಿ ಕಂಡು ಬರುವ ಕೆಲವು ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ.[೯]

---

* ಈ ಅಪೂರ್ವ ಗ್ರಂಥವನ್ನು ನೋಡಲು ಈ ಲೇಖಕನಿಗೆ ಅವಕಾಶವಾಗಲಿಲ್ಲ. ಆದ್ದರಿಂದ, ಅದನ್ನು ಪರಿಶೀಲಿಸಿರುವ ಇತರ ವಿದ್ವಾಂಸರ ವಾಕ್ಯಗಳನ್ನೇ ಉದ್ಧರಿಸಬೇಕಾಗಿದೆ. ['ಸಿರಿಭೂವಲಯ'– ಬೆಂಗಳೂರಿನ ಸರ್ವಾರ್ಥ ಸಿದ್ಧಿ ಸಂಘ; ಭಾಗ–೧ (೧೯೫೩); ಭಾಗ ೨ (೧೯೫೫).]

ಈ ಬಗೆಗೆ ಅವನ ಮಾತನ್ನೇ ಆಲಿಸೋಣ: "ಪಲವುಂ ಲೌಕಿಕ ಶಾಸ್ತ್ರಮುಳುದರಿಂ ಈ ಲೋಕೋಪಕಾರಂ ಜಗ| ತ್ತಿಲಕಂ; ರಾಜ ಸಮಾಜ ಪೂಜಿತಂ, ತಾತ್ಪರ್ಯದಿಂದಂ ಸ್ವಗೋತ್ರಲಲಾಮಂ, ಕವಿತಾ ವಿಳಾಸ ತನುಜಾತಂ ಪೇಳ್ದನೆಂದಂದು, ಕೇವಲಮಲ್ತು, ಇದು, ಪೊನ್ಗೆ ಕಂಪು ದೊರೆ ಕೊಂಡಂತಾದುದು; ಏಂ ಸಾರಮೋ!" ಲೋಕೋಪಕಾರದಲ್ಲಿ ಅಡಕವಾಗಿ ಹೇಳಿರುವ ವಿಷಯಗಳಲ್ಲಿ ಒಂದೊಂದನ್ನು ಅಧಿಕರಿಸಿ ಶ್ರೀಧರಾಚಾರ್ಯ ('ಜಾತಕ ತಿಲಕ'), ಕೀರ್ತಿವರ್ಮ (ಗೋವೈದ್ಯ), ಜಗದ್ದಳ ಸೋಮನಾಥ (ವೈದ್ಯ ಗ್ರಂಥ: 'ಕಲ್ಯಾಣಕಾರಕ') ಇವರುಗಳು ವಿಸ್ತಾರವಾಗಿ ಪ್ರತಿಪಾದಿಸಿ ಗ್ರಂಥ ರಚನೆ ಮಾಡಿದ್ದಾರೆ. ಇದರಿಂದ 'ಲೋಕೋಪಕಾರ'ದ ಮೇಲ್ಮೆ ಗೊತ್ತಾಗುತ್ತದೆ. ಇನ್ನು, ಗ್ರಂಥದಿಂದ ಕೆಲವು ಸಂಗತಿಗಳನ್ನು ಎತ್ತಿ ಹೇಳಿ ಅದರ ಸ್ವರೂಪವನ್ನು ಪರಿಚಯ ಮಾಡಿಕೊಡಲಾಗುವುದು.

ಮೂರನೆಯ ಅಧಿಕಾರದಲ್ಲಿ, ಮನೆ ಕಟ್ಟುವ ಬಗೆಗೆ ವಿವರಪೂರ್ಣವಾದ ಸಲಹೆ ಸೂಚನೆಗಳನ್ನು ನೀಡುವ ಪ್ರಸ್ತಾವದಲ್ಲಿ, ಅದಕ್ಕೆ ಉಪಯೋಗಿಸಬಾರದ ಮರಗಳನ್ನು ಹೆಸರಿಸಿದ್ದಾನೆ: "ಬೇವಿನ ಪುಣಿಸಿಯ ತಾರೆಯ ಮಾವಿನ ಮುಳ್ಮರನ ಪಾಲಮರಂಗಳ ಸುರಗೀ ಹಾವಳಿಯ ಮರಂ ಕರಂ ಅಶುಭಾವಹಮಕ್ಕುಂ; ಗೃಹಕ್ಕೆ ಶಲ್ಯಂಗಳ್," – ಈ ಹಾವಳಿ ಮಾಡುವ ಮರಗಳು ಮನೆಹಾಳ ಮರಗಳು!

೫ನೆ ಅಧಿಕಾರದಲ್ಲಿ, ಬಾವಿ ತೋಡುವಾಗ ಎಲ್ಲಿ ನೀರಿನ ಸೆಲೆ ಇದೆ, ಎಲ್ಲಿ ಇಲ್ಲ, ಎಂಬುದನ್ನು ತಿಳಿಸುತ್ತಾನೆ:

ತುರುಗಿ ತಳಿರ್ತು ಪೂತು ಫಲಮದೆಲೆಯಿಕ್ಕಿದ ಕೊಂಬುಗಳ್ ನೆಲ–
ಕ್ಕೊರಗಿದ ನುಣ್ಪುವೆತ್ತ ಮರಂ ಉಳ್ಳೆಡೆಯೊಳ್ ಜಲಮಕ್ಕುಂ ಅಲ್ಲಿಯೆಂ–
ದರಿವುದು; ತಾರಿದಂಬಿದ ನಳುಂಕಿದ ಕೊಂಬೋಣಗಿರ್ದ ಪೊಟೆಯೆ–
ಳ್ದೊರಗಿದ ವೃಕ್ಷದಿಂದರಿವುದು ಆ ಯೆಡೆಯೊಳ್ ಜಲಮಾಗದೆಂಬುದಂ.

ತಲೆಬುರುಡೆಯನ್ನು ನೋಡಿ ಮನುಷ್ಯನ ಸ್ವಭಾವವನ್ನು ತಿಳಿಯುವ ಅದರ ಲಕ್ಷಣ:

"ಕೊಡೆಯ ಮರ್ಯಾದೆಯಲ್ಲಿ ಮಂಡೆಯುಳ್ಳಾತಂ ಅಲಸನಪ್ಪಂ; ಕೋಡಗದ ಮಂಡೆಯ ಮರ್ಯಾದೆಯ ಮಂಡೆಯುಳ್ಳಾತಂ ಸುಖಿಯಪ್ಪಂ, ದೊಡ್ಡಿ ತಪ್ಪ ಮಂಡೆಯುಳ್ಳಾತಂ ಚಲಚಿತ್ತನಪ್ಪಂ, ಸಮವಾಗಿರ್ಪ ಮಂಡೆಯುಳ್ಳಾತಂ ವಿದ್ವಾಂಸನಪ್ಪಂ, ಹಾವಿನ ಮರ್ಯಾದೆಯ ಮಂಡೆಯುಳ್ಳಾತಂ ಬಹುಳಮಪ್ಪ ದುಃಖಮನುಳ್ಳಾತನಪ್ಪಂ."

ಮಹಿಯ ಗೆಲ್ದಂತದ ವಶಗೆಯ್ದರಾಜನು।ವಹಿಸಿದ ದಕ್ಷಿಣ ಭರತ।
ಸಿಹಿಯ ಖಂಡದ ಕರ್ನಾಟಕ ಚಕ್ರಿಯ। ಮಹಿಮೆ ಮಂಡಲವೆಸರಾಯ್ತು॥
(೧೭೨)

ಪಾಭೃತ ಮಹಾಕಾವ್ಯದ ('ಷಟ್ಖಂಡಾಗಮ') 'ತಿಶಯಧವಲ' ಎಂಬ ೫ನೆಯ, ಹಾಗೂ ೬ನೆಯ ಟೀಕಾ ಗ್ರಂಥಗಳ ಉಲ್ಲೇಖಗಳು–ಇವು ಅಮೋಘವರ್ಷ ನೃಪತುಂಗನ ಕಾಲಕ್ಕೆ ಸೇರಿದವು ಎಂಬ ಸಂಗತಿಯನ್ನು ತಿಳಿಸುತ್ತವೆ. ಇಷ್ಟರಿಂದ, ಈ ಟೀಕಾ ಗ್ರಂಥಗಳ ರಚನಾ ಕಾಲಕ್ಕೆ 'ಭೂ ವಲಯ'ದ ಸಮರ್ಥನೆಯೂ ದೊರಕುತ್ತದೆಯೇ ಹೊರತು, ಶ್ರೀಕಂಠ ಶಾಸ್ತ್ರಿಗಳು ಹೇಳುವ ಹಾಗೆ – "ಜಿನಸೇನನ ಜಯಧವಳ (ಕ್ರಿ.ಶ.೮೩೭), ಅನಂತರ ಅಮೋಘವರ್ಷನ ಅಂತ್ಯ (ಕ್ರಿ.ಶ.೮೭೭) ಕ್ಕೆ ಮತ್ತು ಕ್ರಿ.ಶ.೮೬೬ರ ನೀಲಗುಂದ ಸಿರೂರು ಶಾಸನಗಳಿಗೆ ಮುಂಚೆ ನೃಪತುಂಗನಿಗೆ ಅತಿಶಯ ಧವಳ ಎಂಬ ಬಿರುದು ಬಂದು ಈ ಅಂತರದಲ್ಲಿ ಕುಮುದೇಂದುವಿನ ಭೂವಲಯ ಮತ್ತು 'ಕವಿರಾಜಮಾರ್ಗ'* ರಚಿತವಾಗಿರಬೇಕು," ಎಂದೂ (ಪು.೫೭೦), ಕುಮುಧೇಂದುವಿನ ಗ್ರಂಥ ಜಿನಸೇನನ ಧವಳಾ ಟೀಕೆಯ ರಚನಾನಂತರ (ಕ್ರಿ.ಶ.೮೩೭), ಆದಿ ಪುರಾಣವೂ ಪ್ರಚಾರಕ್ಕೆ ಬಂದ ಮೇಲೆ ಬಂಕೇಶನ ತಲಕಾಡು ದಿಗ್ವಿಜಯಕ್ಕೆ ಮುಂಚೆ ಸೈಗೊಟ್ಟ ಶಿವಮಾರನು ಇನ್ನೂ ಜೀವಿಸಿದ್ದಾಗ (ಸುಮಾರು ಕ್ರಿ.ಶ.೮೫೦ರಲ್ಲಿ?) ರಚಿತವಾಗಿರಬೇಕು' ಎಂದೂ (ಪು.೫೭೪)ಅಭಿಪ್ರಾಯ ಪಟ್ಟಿರುವುದು ಸ್ವಲ್ಪ ಆಶ್ಚರ್ಯಕರವಾಗಿಯೇ ಕಾಣುತ್ತದೆ. ಕುಮುದೇಂದು ತನ್ನ ಗುರುಪರಂಪರೆಯನ್ನು ಹೇಳುವಾಗ 'ಸ್ವಸ್ತಿ ಶ್ರೀಮದ್ರಾಯ ರಾಜಗುರು ಭೂಮಂಡಲಾಚಾರ್ಯ' ಎಂಬ ಬಿರುದು ೧೩ನೆಯ ಶತಾಬ್ದಕ್ಕೆ ಹಿಂದೆ ಶಾಸನಗಳಲ್ಲಿ ಕಂಡುಬರುವುದಿಲ್ಲ" ಎಂದು ಶಾಸ್ತ್ರಿಗಳು ತಿಳಿಸಿರುವುದರಿಂದ (ಲೇಖನದ ಪು.೫೭೫), 'ಭೂವಲಯ'ದ ರಚನಾಕಾಲವನ್ನು ಅವರೇ ೧೩ನೆಯ ಶತಕದ ಈಚೆಗೆ ಎಳೆದಂತಾಗಿದೆ. ಕುಮುದೇಂದು ಆತ್ಮ ಕಥೆಯನ್ನು ಹೇಳುವಾಗ

* ಕವಿರಾಜಮಾರ್ಗ, ೮೬೬–೮೭೭, ಈ ನಡುವೆ ರಚಿತವಾಗಿರಬಹುದು ಎಂಬ ಅಭಿಪ್ರಾಯ ಒಪ್ಪತಕ್ಕದ್ದು. ನೃಪತುಂಗನಿಗೆ 'ವೀರನಾರಾಯಣ' ಎಂಬ ಬಿರುದೂ ಇದ್ದಿತಷ್ಟೇ. ಇದು ಅವನಿಗೆ ಸು.೮೬೫ರ ಸಮೀಪದಲ್ಲಿ ಸಂದಿರಬಹುದು. ಈ ಸಂಗತಿ ಕವಿರಾಜಮಾರ್ಗದ ಆಂತರಿಕ ಪ್ರಮಾಣಗಳು ಮತ್ತು ಇವಕ್ಕೆ ಪೋಷಣೆ ನೀಡುವ ಸಂಜಾನ ಶಾಸನ (೮೬೧) – ಇವುಗಳ ಆಧಾರದ ಮೇಲೆ, ಕವಿರಾಜಮಾರ್ಗ ಸು.೮೭೦ರ ಹತ್ತಿರದಲ್ಲಿ ರಚಿತವಾಗಿದೆ ಎಂದು ಈ ಲೇಖಕನು ತೀರ್ಮಾನಿಸಿದ್ದಾನೆ. ಈ ಕಾಲವನ್ನು ೮೬೦ಕ್ಕಿಂತ ಹಿಂದೆಹಾಕುವುದು ಆಧಾರ ರಹಿತವಾಗುತ್ತದೆ.

ಮೇಲೆ ಉದ್ಧರಿಸಿರುವ ವಾಕ್ಯಗಳನ್ನು ಇತಿಹಾಸ ಪ್ರಾಧ್ಯಾಪಕರೂ ಮಹಾ ವಿದ್ವಾಂಸರೂ ಆದ ದಿವಂಗತ ಎಸ್.ಶ್ರೀಕಂಠಶಾಸ್ತ್ರಿಗಳು ಬರೆದಿರುವ "ಕುಮುದೇಂದು ಕವಿಯ 'ಭೂವಲಯ'" ಎಂಬ ವಿಚಾರ ಪ್ರಚೋದಕವು ವಿದ್ವತ್ಪೂರ್ಣವೂ ಆದ ಲೇಖನದಿಂದ ಎತ್ತಿಕೊಟ್ಟಿದೆ. ಈ ಲೇಖನದಲ್ಲಿ ಶಾಸ್ತ್ರಿಗಳು ಪ್ರಮುಖವಾಗಿ ಗ್ರಂಥದ ಕಾಲವಿಚಾರವನ್ನು ಮಾತ್ರ ಚರ್ಚಿಸಿ, 'ಸದ್ಯದ ಮಟ್ಟಿಗೆ' ಎನ್ನಬಹುದಾದ ಆಚೀಚಿನ ಕಾಲದ ಗಡುವನ್ನು ಸೂಚಿಸಿದ್ದಾರೆ. 'ಭೂವಲಯ'ದಲ್ಲಿ ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷನ ಹಾಗೂ (ನೃಪತುಂಗನ) ಆತನ ಕಾಲದವರಾದ ವೀರಸೇನ, ಜಿನಸೇನ, ಗಂಗ ವಂಶದ ಸೈಗೊಟ್ಟ ಶಿವಕುಮಾರ – ಇವರ ಉಲ್ಲೇಖಗಳಿವೆ. ಈ ಸಂಬಂಧದ ಪದ್ಯಗಳು:

ವರದ ಮಂಗಳದ ಪ್ರಾಭೃತದ ಮಹಾಕಾವ್ಯ। ಸರಣಿಯೊಳ್ ಸಿರಿವೀರಸೇನ।
ಗುರುಗಳ ಮತಿಜ್ಞಾನದರಿವಿಗೆ ಸಿಲುಕಿಹ। ಅರಹನ್ತ ಕೇವಲ ಜ್ಞಾನ॥(೯–೧೪೩)

ಜನಿಸಲು ಸಿರಿವೀರಸೇನರ ಸಿಷ್ಯನ। ಘನವಾದ ಕಾವ್ಯ ಕಥೆಯ।
ಜಿನಸೇನ ಗುರುಗಳ ತನುವಿನ ಜನ್ಮದ। ಘನ ಪುಣ್ಯವರ್ಧನ ವಸ್ತು॥ (೧೪೫)

ನಾನಾ ಜನಪದವೆಲ್ಲದರೊಳು ಧರ್ಮ। ತಾನು ಕ್ಷೀಣಿಸಿ ಬರ್ಪಾಗ।
ತಾನಲ್ಲಿ ಮಾನ್ಯಖೇಟದ ದೊರೆ ಜಿನಭಕ್ತ ತಾನು ಅಮೋಘವರ್ಷಾಂಕ॥(೧೪೬)

ಭೂವಲಯದ ಅದೇ ಪ್ರಕರಣದಲ್ಲಿ ೧೬೯–೧೭೦ರವರೆಗಿನ ಪದ್ಯಗಳಲ್ಲಿ 'ಆದಿಮ ಧವಲ, 'ಎರಡನೆಯ ಜಯ ಧವಲ', 'ಮೂರನೆಯ ಮಹಾಧವಲ' ಇವುಗಳ ಉಲ್ಲೇಖವಾದ ಮೇಲೆ–

ದೀನತ್ವವಳಿಸುತ ಜನತೆಯ ಪಾಲಿಪ। ಭೂನುತ ವರ್ಧಮಾನಾಂಕ।
ಆ ನಮ್ಮ ಜನತೆಯ ಜಯಶೀಲ ಧವಲದ। ಶಾನೆಪದವಿಯದು ಪದವಿಯದು ನಾಲ್ಕು॥ (೭೦)
ವಶವಾದತಿಶಯ ಧವಲ ಭೂವಲಯದ। ಯಶವಾಗೆ ಐದನೆಯ ಅನ್ಯ।
ರಸವಿಸ್ಮಯವಾದ ವಿಜಯ ಧವಲ ವಿನ್ತು। ಯಶದ ಭೂವಲಯದ ಭರತ॥ (೧೭೧)

ಈಗ ನಮಗೆ ತಿಳಿದು ಬಂದಿರುವ ಮಟ್ಟಿಗೆ ದೇವರಾಜನ 'ಸೊಬಗಿನ ಸೋನೆ'ಯೆ (ಕ್ರಿ.ಶ.೧೪೧೦) ಪ್ರಥಮ ಸಾಂಗತ್ಯ ಗ್ರಂಥ. ಶಿಶುಮಾಯಣನ "ತ್ರಿಪುರದಹನ ಸಾಂಗತ್ಯ'ವನ್ನೆ ಮೊದಲ ಕೃತಿ ಎಂದು ಭಾವಿಸಿ, ಕವಿಚರಿತೆಕಾರರು ಇದಕ್ಕೆ ಕೊಟ್ಟಿರುವ ಕಾಲವನ್ನು (ಕ್ರಿ.ಶ.೧೨೩೨) ನಿಶ್ಚಿತ ಎಂದುಕೊಂಡರೂ, ಸಾಂಗತ್ಯದ ಛಂದಸ್ಸಿನ ಕೃತಿಯಾದ 'ಭೂವಲಯ'ವನ್ನು ೧೨ನೆಯ ಶತಮಾನಕ್ಕಿಂತ ಹಿಂದಕ್ಕೆ ಒಯ್ಯಲಾಗದು. ಇನ್ನೂ ಈಚಿನದು (೧೪–೧೫ ಶತಕಕ್ಕೆ ಸೇರಿದ್ದು) ಎಂದರೂ ತಡೆಯುತ್ತದೆ.

ಸಾಹಿತ್ಯ ಚರಿತ್ರೆಯಲ್ಲಿ ಕೃತಿಯ ಕಾಲ ನಿರ್ಣಯವೂ ಮುಖ್ಯವಾದ್ದರಿಂದ ಇಷ್ಟು ಬೆಳೆಸಬೇಕಾಯಿತು. ಸಾಮಗ್ರಿಯ ಅಭಾವದಿಂದ ಕೃತಿಯ ಪರಿಚಯ ಮಾಡಿಕೊಡಲು ಸಾಧ್ಯವಿಲ್ಲವಾಗಿದೆ.

**ಅಭಿಲಷಿತಾರ್ಥ ಚಿಂತಾಮಣಿ** (ಅಥವಾ **'ಮಾನಸೋಲ್ಲಾಸ'**): ಇದರ ಕರ್ತೃ ಕಲ್ಯಾಣದ ಚಾಲುಕ್ಯ ವಂಶದ ಮೂರನೆಯ ಸೋಮೇಶ್ವರ (ಕ್ರಿ.ಶ. ೧೧೨೦–೧೧೩೮). ಈತ ಈ ಗ್ರಂಥವನ್ನು ೧೧೨೯ರಲ್ಲಿ ರಚಿಸಿದನು. ಈ ಗ್ರಂಥವನ್ನು ಬರೆದದ್ದರಿಂದ ಅವನಿಗೆ 'ಸರ್ವಜ್ಞ ಚಕ್ರವರ್ತಿ' ಎಂಬ ಬಿರುದು ಬಂದಂತೆ ಕಾಣುತ್ತದೆ. ಆ ಕಾಲದಲ್ಲಿ ರೂಢಿಯಲ್ಲಿದ್ದ ಶಾಸ್ತ್ರಗಳ ಮತ್ತು ಕಲೆಗಳ ಬಗೆಗೆ ಅನೇಕ ಉಪಯುಕ್ತ ವಿಚಾರಾಂಶಗಳ ಒಂದು ಬೃಹತ್‌ಕೋಶ ಈ ಗ್ರಂಥ. ಗ್ರಂಥದಲ್ಲಿಯೇ 'ಕಾಮಧೇನುರಿದಂ ಶಾಸ್ತ್ರಂ' ಎಂಬ ಸೋಮೇಶ್ವರನ ಇನ್ನೊಂದು ಮಾತು 'ಲೋಕೋಪಕಾರ'ವನ್ನು ನೆನಪಿಗೆ ತರುತ್ತದೆ. ಗ್ರಂಥದ ಹೆಸರಾದರೂ ಅರ್ಥಪೂರ್ಣವಾಗಿಯೇ ಇದೆ: 'ಬಯಸಿದ ಪ್ರಯೋಜನವನ್ನು ದೊರಕಿಸಿಕೊಡುವ ಚಿಂತಾಮಣಿ', 'ಮನಸ್ಸಿಗೆ ಉಲ್ಲಾಸ ನೀಡುವ ಗ್ರಂಥ', ತಿಳುವಳಿಕೆ, ರಂಜನೆ – ಎರಡೂ ಇದರ ಗುರಿ. ಈ ಕೃತಿ ಸಂಸ್ಕೃತ ಭಾಷೆಯಲ್ಲಿದ್ದರೂ ಭಾರತಕ್ಕೆ, ವಿಶ್ವಕ್ಕೆ, ಕನ್ನಡ ಚಕ್ರವರ್ತಿಯ, ಕನ್ನಡ ನಾಡಿನ, ಕಾಣಿಕೆ ಎಂಬ ಕಾರಣದಿಂದಲಾದರೂ ಕನ್ನಡಿಗರು ಅತ್ಯವಶ್ಯವಾಗಿ ಗಮನಿಸಬೇಕಾದ, ಸಾಧ್ಯವಾದರೆ ಪರಿಚಯ ಮಾಡಿಕೊಳ್ಳಬೇಕಾದ, ಅಪೂರ್ವ ಗ್ರಂಥ. ನಿಜಗುಣರ 'ವಿವೇಕ ಚಿಂತಾಮಣಿ'ಗೆ ಸ್ಫೂರ್ತಿಕೊಟ್ಟಿರಬಹುದಾದ(?) ಗ್ರಂಥ.

ಈ ಗ್ರಂಥದ ೧೦೦ ಅಧ್ಯಾಯಗಳಲ್ಲಿರುವ ಸಾಹಿತ್ಯ, ಸಂಗೀತ, ಚಿತ್ರ, ಶಿಲ್ಪ, ಅರ್ಥಶಾಸ್ತ್ರ ಮುಂತಾದ ೧೦೦ ವಿಷಯಗಳನ್ನು ಕುರಿತ ವಸ್ತು ನಿರೂಪಣೆಯಲ್ಲಿ ಸಮಕಾಲೀನ ಕರ್ಣಾಟಕ ಮತ್ತು ಭಾರತದ ಸಾಂಸ್ಕೃತಿಕ ಪರಂಪರೆಯ ಮೇಲೆ ಬೆಳಕು ಚೆಲ್ಲುವ ಅಧಿಕಾರವಾಣಿ ಕೇಳಿಬರುತ್ತದೆ. ಕನ್ನಡ

ಅನೇಕ ಜೈನ ತೀರ್ಥಕ್ಷೇತ್ರಗಳನ್ನು ಹೆಸರಿಸಿರುವುದನ್ನು ಉಲ್ಲೇಖಿಸಿ "ಇವುಗಳಲ್ಲಿ ಪೆನುಗೊಂಡೆ ಮತ್ತು ಗೇರುಸೊಪ್ಪೆ ಹೊಯ್ಸಳ ವಿಜಯ ನಗರಕಾಲದಲ್ಲಿ ಪ್ರಖ್ಯಾತವಾದವು" (ಎಂದರೆ ಸು.೧೨–೧೬ನೆಯ ಶತಕಗಳ ಕಾಲ) ಎಂದು ಹೇಳಿರುವುದೂ ಗಮನಾರ್ಹ. (ಪು.೫೮೭).

'ಭೂವಲಯ'ದಲ್ಲಿ 'ಕವಿಜಿಹ್ವಾಬಂಧನ'ದ ಉಲ್ಲೇಖವಿದೆ. ಇದರ ಕರ್ತೃ ಈಶ್ವರ ಕವಿಯು ಕಾಲ ಸು.೧೫೦೦. "ಕುಮುದೇಂದು ಹೇಳುವ ಕವಿಜಿಹ್ವಾಬಂಧನಕ್ಕೂ ಹದಿನೈದನೆಯ ಶತಾಬ್ದದ ಈಶ್ವರಕವಿಯ ಅದೇ ಹೆಸರಿನ ಗ್ರಂಥಕ್ಕೂ ಯಾವ ಸಂಬಂಧವೂ ಕಂಡುಬರುವುದಿಲ್ಲ.' ಎಂದು ಶಾಸ್ತ್ರಿಗಳು ಹೇಳುವರಾದರೂ (ಪು.೫೮೬), ಈ ಹೆಸರಿನ ಗ್ರಂಥ ಬೇರೆ ಯಾವುದೂ ಇಲ್ಲವಾಗಿ, ಕುಮುದೇಂದುವಿನ ಗಮನದಲ್ಲಿ ಈಶ್ವರ ಕವಿಯ ಗ್ರಂಥವೇ ಇದ್ದಿರಬೇಕು ಎಂಬ ಅನುಮಾನವಾಗುತ್ತದೆ.

ಈಗ ಸಿಕ್ಕಿರುವ 'ಭೂವಲಯ'ದ ಹಸ್ತಪ್ರತಿ ಅರ್ವಾಚೀನವಾದ ಕಾಗದದ ಪ್ರತಿ. ಇದರಲ್ಲಿ ಇದು ಲಿಖಿತವಾದ ಕಾಲವನ್ನು ಹೇಳಿಲ್ಲ. ಭೂವಲಯದಲ್ಲಿ ಕಂಡು ಬರುವ ಮಲ್ಲಿಕಬ್ಬೆಯ ಪ್ರಶಸ್ತಿಯ ಬಗೆಗೆ ಚರ್ಚಿಸಿ, "ಈ ಪ್ರಶಸ್ತಿ ಮೂಡಬಿದ್ರಿಯ 'ಮಹಾಬಂಧ'ದ ಪ್ರತಿಯಿಂದ ತೆಗೆದುಕೊಂಡು ಸೇರಿಸಿರಬೇಕು. ಇದರಲ್ಲಿ ಭೂವಲಯದ ಪ್ರತಿಯನ್ನು ದಾನ ಮಾಡಿದಂತೆ ಹೇಳಿಲ್ಲ ಎಂದು ತಿಳಿಸಿ, "ಈ ಮಹಾಬಂಧದ ಪ್ರತಿಯ ಕಾಲ ಸು.೧೧೧೬–೧೧೩೬ ಎಂದು ತೀರ್ಮಾನಿಸಿ, ಮಹಾಬಂಧದ ಮಲ್ಲಿಕಬ್ಬೆಯ ಪ್ರಶಸ್ತಿ ಭೂವಲಯಕ್ಕೂ ಅನ್ವಯಿಸುತ್ತದೆ" ಎಂದಿದ್ದಾರೆ ಮತ್ತು "ಇಂದ್ರನಂದಿ (ಕ್ರಿ.ಶ.೯೩೦) ಮತ್ತು ಕ್ರಿ.ಶ.೧೧೨೦ರೊಳಗಾಗಿ ಭೂವಲಯ ರಚಿತವಾಗಿರಬೇಕು" ಎಂದೂ ಹೇಳುತ್ತಾರೆ.

ಹೀಗೆ, ಕಾಲ ನಿರ್ಣಯ ವಿಚಾರದಲ್ಲಿ ಡಾ॥ ಶ್ರೀಕಂಠಶಾಸ್ತ್ರಿಗಳ ಮೇಲ್ಕಂಡ ಹೇಳಿಕೆಗಳಲ್ಲಿ ಒಂದಕ್ಕೊಂದಕ್ಕೆ ಹೊಂದಿಕೆಯೇ ಇಲ್ಲವಾದ್ದರಿಂದ ಅವರ ನಿಲುವು ಖಚಿತವಾಗಿಲ್ಲ ಎನ್ನಬೇಕಾಗುತ್ತದೆ.

ಯಾವುದೇ ಕೃತಿಯಲ್ಲಿ ಭಾಷಾ ಪ್ರಯೋಗಗಳ ಆಂತರಿಕ ಪ್ರಮಾಣಗಳನ್ನು ಅಲ್ಲಗಳೆಯುವಂತಿಲ್ಲ. ಮೇಲೆ ಉದ್ಧರಿಸಿರುವ ೧೭೦ನೆಯ ಪದ್ಯದಲ್ಲಿನ 'ಶಾನೆ' (ಬಹಳ, ತುಂಬ, ಅನೇಕ, ಎಂಬ ಅರ್ಥಗಳ, ಸಾಕಷ್ಟು ಅರ್ವಾಚೀನ ಎನ್ನಬಹುದಾದ, ಮೈಸೂರು ಪ್ರಾಂತದ) ಪದಪ್ರಯೋಗ ಇತರ ನಡುಗನ್ನಡ ಪ್ರಯೋಗಗಳು, – ಇವು ಭೂವಲಯದ ಕಾಲವನ್ನು ೧೧–೧೨ ಶತಕಗಳಷ್ಟು ಪ್ರಾಚೀನ ಎನ್ನುವುದಕ್ಕೆ ತೀರ ವಿರುದ್ಧ ಸಾಕ್ಷ್ಯಗಳಾಗುತ್ತವೆ.

ಚಿಂತಾಮಣಿ'ಯಲ್ಲಿ ಅದ್ವೈತ ವೇದಾಂತ ಪರವಾದ ಹೇಳಿಕೆಗಳನ್ನು ಮೊತ್ತಮೊದಲಿಗೆ ಮುದ್ರಿತವಾದ ಪ್ರತಿಯಲ್ಲಿ* ಒಬ್ಬರು ವಿದ್ವಾಂಸರು ಸೇರಿಸಿರುವರೆಂಬ ಈಚಿನ ಸಂಶೋಧನೆಯ ತೀರ್ಮಾನವನ್ನು ಒಪ್ಪಿಕೊಂಡರೂ, 'ಇಂತುಪಾಧಿಗೆ ಸತ್ಯವೆಂತು ಘಟಿಸುವುದು ವೇದಾಂತ ಮತದಲ್ಲಿ ಪೇಟ್ದಿಂತೆ ಸರ್ವಮಂ ಭ್ರಾಂತಿಮಯವೆಂತು ತಿಳಿಪುತ್ರ' ('ಅನುಭವಸಾರ'), 'ಅದ್ವೈತ ತತ್ತ್ವವನು ಪ್ರಕಟಿಸುವೆನು ಬೋಧ ಗತಿಯಿಂದ' ಎಂಬಂಥ ಕವಿಯ ನಿಸ್ಸಂದಿಗ್ಧವಾದ ಹಲವು ಹೇಳಿಕೆಯಿಂದಲೇ ನಿಜಗುಣರು ವೀರಶೈವನಿಷ್ಠರಾದರೂ ಅದ್ವೈತ ತತ್ತ್ವದಲ್ಲಿ ಅಚಲವಾದ ಶ್ರದ್ಧೆಯುಳ್ಳವರು ಎಂಬುದು ಸ್ವಯಂವೇದ್ಯ.

ನಿಜಗುಣರ ಜೀವನ ವೃತ್ತಾಂತದ ವಿವರಗಳು ಖಚಿತವಾಗಿ ತಿಳಿದು ಬಂದಿಲ್ಲ. ಅವರು ಮೈಸೂರಿಗೆ ದಕ್ಷಿಣದಲ್ಲಿರುವ ಕೊಳ್ಳೇಗಾಲದ ಬಳಿಯಿರುವ ಶಂಭುಲಿಂಗನ ಬೆಟ್ಟದ ಸುತ್ತಮುತ್ತಲಿನ ನಾಡಿಗೆ ಅರಸರಾಗಿದ್ದು ಬಳಿಕ ವೈರಾಗ್ಯ ಹೊಂದಿ, ಆ ಬೆಟ್ಟದಲ್ಲಿಯೇ ತಪಸ್ಸು ಮಾಡಿ, ಶಿವಯೋಗ ಸಮಾಧಿಯಲ್ಲಿ ನೆಲಸಿ, ಶಿವೈಕ್ಯರಾದರೆಂದು ಪ್ರವಾದವಿದೆ. ಇವರ ಕೃತಿಗಳಲ್ಲಿ 'ಶಂಭುಲಿಂಗನ' ಅಂಕಿತವಿರುವುದರಿಂದಲೂ, ಕೃತಿಗಳಲ್ಲಿಯೇ ಕವಿ ತಮ್ಮ ವಿಷಯವಾಗಿ ಹೇಳಿಕೊಂಡಿರುವ ಸಂಗತಿಗಳಿಂದಲೂ ಈ ಪ್ರವಾದಗಳಿಗೆ ಬೆಂಬಲ ದೊರೆಯುತ್ತದೆ. ನಿಜಗುಣ ಶಿವಯೋಗಿ ಯಾವ ನಾಡಿಗೆ ಅರಸರಾಗಿದ್ದರು, ಅವರ ವಂಶ ಯಾವುದು, ಎಷ್ಟು ಕಾಲ ರಾಜ್ಯವಾಳಿದರು, ವಿರಕ್ತರಾದದ್ದಕ್ಕೆ ಕಾರಣವೇನು, ಎಂಬಿವೇ ಮುಂತಾದ ಅವರ ಜೀವನ ಚರಿತ್ರೆಯ ಘಟ್ಟಗಳನ್ನು ಗುರುತಿಸಿ ತಿಳಿಯಹೇಳಲು ಸ್ಪಷ್ಟವಾದ ಶಾಸನ ಮುಂತಾದ ಚಾರಿತ್ರಿಕ ಆಧಾರಗಳು ಇಲ್ಲ. ಆದರೆ, ಕವಿಯ ಮಾತಿನಲ್ಲಿ, ಅದರಲ್ಲಿಯೂ ಯೋಗಿಯಾದ ಕವಿಯ ಪ್ರಾಮಾಣಿಕ ವಚನದಲ್ಲಿ ವಿಶ್ವಾಸವಿಡದಿರಲು ಕಾರಣವಿಲ್ಲ. 'ಕೈವಲ್ಯ ಪದ್ಧತಿಯ' ಒಂದು ಹಾಡಿನಲ್ಲಿ –

"ಪರವಿದ್ಯೆಯೆಂಬ ಕಮಲ 'ವನಿತೆ'ಯುಂಟು, ಅಗಲವಾದ ಪರಿತೋಷವೆಂಬ 'ಮೋಹದ ಅಣುಗ'ನುಂಟು, ವಿರತಿಯೆಂಬ ಅನುಕೂಲ 'ಜನ'ಮುಂಟು, ಕ್ಷಮೆಯೆಂಬ 'ಚರ'ನುಂಟು, ಶಾಂತಿಯೆಂಬ 'ಸಖಿನ ಸರಸ'ಮುಂಟು॥ ನುತ

---

* ಬೆಂಗಳೂರು ಸಿದ್ಧಾಂತಿ ಸುಬ್ರಮಣ್ಯ ಶಾಸ್ತ್ರಿಗಳಿಂದ 'ಸಂಪ್ರದಾಯ ಶುದ್ಧವಾಗಿ' ಪರಿಶೋಧಿತವಾಗಿ, ಬೆಂಗಳೂರು ವಿಚಾರ ದರ್ಪಣ ಮುದ್ರಾಕ್ಷರ ಶಾಲೆಯಲ್ಲಿ ೧೮೬೫ರಲ್ಲಿ ಮುದ್ರಿತವಾದ ಪ್ರತಿ.

ಶಾಸ್ತ್ರ ಸಾಹಿತ್ಯವನ್ನು ಕುರಿತ ನಮ್ಮ ಈ ಗ್ರಂಥದ ದೃಷ್ಟಿಯಿಂದ ಹೆಚ್ಚು ಬೆಲೆಯುಳ್ಳ ಭಾಗ ಎಂದರೆ, ಕನ್ನಡ ಛಂದಸ್ಸಿನ ತ್ರಿಪದಿ, ಷಟ್ಪದಿ, ಕಂದಪದ್ಯ, ಪದ್ದಲೀ (ಪದ್ಧಡೀ), ಓವೀ, ಧವಳದಹಾಡು– ಎಂಬ ಛಂದಸ್ಸಿನ ಪ್ರಕಾರಗಳ ವಿಷಯ, ಇವುಗಳ 'ವಿನಿಯೋಗ'ದ ಬಗೆಗೆ ಸೋಮೇಶ್ವರನು ನೀಡುವ ನಿರ್ದೇಶಗಳು, ಇವನ್ನು ಉಳ್ಳ ಭಾಗ. ಇವುಗಳ ಸಾರಾಂಶ ಇಷ್ಟು: "ತ್ರಿಪದಿಯನ್ನು ಧಾನ್ಯವನ್ನು ಒರಳಲ್ಲಿ ಹಾಕಿ ಕುಟ್ಟುವಾಗಲೂ (=ಕಂಡನ), ಶೃಂಗಾರ ವಿಪ್ರಲಂಭಗಳನ್ನು ವರ್ಣಿಸುವಾಗಲೂ ಹಾಡಬೇಕು, ಕಥನ ಕಾವ್ಯದಲ್ಲಿ ಷಟ್ಪದಿಯನ್ನು ಬಳಸಬೇಕು, ವಿವಾಹ ಕಾಲದಲ್ಲಿ ಧವಲವನ್ನು ಅಲಾಪಿಸಬೇಕು, ಮಂಗಲ ಗೀತವನ್ನು ಉತ್ಸವ ಕಾಲದಲ್ಲಿ ಉಪಯೋಗಿಸಬೇಕು, ಮಹಾರಾಷ್ಟ್ರದ ಸ್ತ್ರೀಯರು ಒನಕೆವಾಡಾಗಿ ಓವಿಯನ್ನು ಉಪಯೋಗಿಸುತ್ತಾರೆ...." ಎಂದು ಮುಂತಾಗಿ, "ಇಂಥ ಛಂದಸ್ಸನ್ನು ಇಂಥ ಕೆಲಸಕ್ಕೆ ಉಪಯೋಗಿಸಬೇಕೆಂಬ ವಿಷಯದಲ್ಲಿ ಹೊಸ ತಿಳಿವಳಿಕೆಯನ್ನು ನೀಡುತ್ತವೆ".[೨೦] ಗಂಗರಸ ಸೈಗೊಟ್ಟ ಶಿವಮಾರನ ಕವಿತಾಗುಣವನ್ನು (ಕ್ರಿ.ಶ.ಸು.೮೦೦) ಹೊಗಳುವ ಒಂದು ಶಾಸನ ಪದ್ಯದಲ್ಲಿ, ಅವನ 'ಗಜಾಷ್ಟಕ' 'ಓವನಿಗೆಯುಂ ಒನಕೆವಾಡುಂ ಆದುದು' ಎಂದು ಹೇಳಿದೆ. ಮಾನಸೋಲ್ಲಾಸದಲ್ಲಿ ಹೇಳಿರುವ ಒನಕೆವಾಡಾದ "ಓವೀ" ಎಂಬ ರಚನೆ ಈ "ಓವನಿಗೆ"ಯೇ ಇರಬೇಕು: ಇದು ತ್ರಿಪದಿ ಛಂದಸ್ಸಿನಲ್ಲಿ ಇದ್ದಿರಬಹುದು.

**ವಿವೇಕ ಚಿಂತಾಮಣಿ**: ಸಾಹಿತ್ಯದ ರಸವಂತಿಕೆ, ಕಲೆಯ ಚೆಲುವಿಕೆ, ಸರ್ವಧರ್ಮ ಸಮನ್ವಯ ದೃಷ್ಟಿ, ಯೋಗದ ಅನುಭಾವ, ಬಹುಶ್ರುತನಾದ ಮೇಧಾವಿಯ ಸರ್ವಜ್ಞತ್ವ, ದೈವಭಕ್ತಿ, ಲೋಕೋಪಕಾರ ನಿಷ್ಠೆ – ಇವೆಲ್ಲ ಗುಣಗಳೂ ನಿಜವಾಗಿ ಒಬ್ಬ ವ್ಯಕ್ತಿಯಲ್ಲಿ ಮೈಗೂಡಿ ಬೆಳಗುವುದು ತುಂಬ ವಿರಳ. ಈ ಗುಣಗಣವನ್ನು ನಿಜವಾಗಿಸಿಕೊಂಡ ಮಹಾವ್ಯಕ್ತಿ ನಿಜಗುಣ ಶಿವಯೋಗಿ. "ನಿಜಗುಣ ಶಿವಯೋಗಿ ಕನ್ನಡ ನಾಡಿನ ಅದ್ಭುತ ವ್ಯಕ್ತಿಗಳಲ್ಲಿ ಒಬ್ಬನು. ಅಘಾಧ ವಿದ್ವತ್ತೆಯಿಂದಲೂ ದೀರ್ಘ ತಪಶ್ಚರ್ಯೆ ಯಿಂದಲೂ ಜ್ಞಾನದ ತುತ್ತತುದಿಯನ್ನೇರಿ ಕೆಳಗಿಳಿದು ಬಂದು ತರತರದ ಗದ್ಯಪದ್ಯದಲ್ಲಿ ಕನ್ನಡ ಜನಕ್ಕೆ ತನ್ನ ಅರಿವನ್ನು ಹಂಚಿಕೊಟ್ಟವನು.... ನಿಜಗುಣದಲ್ಲಿ ಎಂದರೆ ಆತ್ಮ ಸ್ವರೂಪದಲ್ಲಿ ನೆಲೆನಿಂತ ಶಿವಯೋಗಿ".೨೧ ಷಡಕ್ಷರದೇವ ಮುಂತಾದ ವೀರಶೈವ ಕವಿಗಳು ಇವರನ್ನು ಹೊಗಳಿರುವುದರಿಂದಲೂ, ತಮ್ಮ ಗ್ರಂಥಗಳಲ್ಲಿ ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸಿರುವುದರಿಂದಲೂ ನಿಜಗುಣರು ವೀರಶೈವರೆಂಬ ಬಗೆಗೆ ಸಂದೇಹವಿಲ್ಲ. ನಿಜಗುಣರನ್ನು ಶುದ್ಧಾದ್ವೈತಿ ಎಂದು ಬಲವಾಗಿ ಸ್ಥಾಪಿಸಲು 'ವಿವೇಕ

ಎಂಟು ಅಂಶಗಳ ಕೆಲವು ವಿವರಗಳ ಬಗೆಗೆ ಅನುಮಾನ ಪ್ರಮಾಣವೇ ಆಧಾರ; ಅವುಗಳ ತಾತ್ಪರ್ಯದ ಬಗೆಗೆ ಕವಿಯ ಮಾತೇ ಪ್ರಮಾಣ. ಕೊನೆಯ ಎರಡು ಅಂಶಗಳ ಯಥಾರ್ಥತೆಯನ್ನು ಅವರ ಕೃತಿಗಳಾದ (೧)ಅನುಭವಸಾರ, (೨)ಅರುವತ್ತು ಮೂವರ ತ್ರಿಪದಿ, (೩)ಕೈವಲ್ಯ ಪದ್ಧತಿ, (೪)ಪರಮಾನುಭವ ಬೋಧೆ, (೫)ಪರಮಾರ್ಥ ಪ್ರಕಾಶಿಕೆ, (೬)ವಿವೇಕ ಚಿಂತಾಮಣಿ – ಇವೇ ಸಾರಿ ಹೇಳುತ್ತವೆ.

ನಿಜಗುಣರ ಗುರು ಯಾರು ಎಂಬ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ನಿಜಗುಣರ ಕೃತಿಗಳಲ್ಲಿ ನಿರಾಭಾರಿ ದೇಶಿಕ, ಚೆನ್ನಸದಾಶಿವ ಯೋಗಿ, ಗುರುಶಂಭುಲಿಂಗ, ಎಂಬ ಮೂರು ಹೆಸರುಗಳು ಗುರುಸೂಚಕವಾಗಿವೆ. "ತೋಂಟದ ಸಿದ್ಧಲಿಂಗ ಶಿವಯೋಗಿಗಳೇ ನರಾಭಾರಿ ದೇಶಿಕವರೇಣ್ಯರು, ಶ್ರೀ ನಿಜಗುಣರ ಗುರುಗಳ ಗುರು–ಪರಮಗುರುಗಳು. ಶ್ರೀಜಗುನಿ ಮರುಳ ದೇವರು ನಿರಾಭಾರಿ ಧೇಶಿಕರು, ಶ್ರೀನಿಜಗುಣರ ಪ್ರಸಾದಿ ಸ್ಥಲದ ಜ್ಞಾನೋಪದೇಶ–ದೇಶಿಕರು. ಶ್ರೀ ಶಂಭುಲಿಂಗ ದೇಶಿಕರು ಶ್ರೀ ನಿಜಗುಣರಿಗೆ ವಿಶೇಷ ವೀರಶೈವ ದೀಕ್ಷೆಯನ್ನು ಕರುಣಿಸಿದ ಶ್ರೀ ಸದ್ಗುರುವು. ಈ ಗುರು ಪರಂಪರೆಯನ್ನು ಅವರು 'ವಿವೇಕ ಚಿಂತಾಮಣಿ'ಯ ಪೀಠಿಕೆಯಲ್ಲಿ 'ಶಂಭುಲಿಂಗವಾದಿ'ಯಾಗಿ ನಿರಾಭಾರಿ ದೇಶಿಕೋತ್ತಮ ಪರ್ಯಂತವಾದ ಗುರು ಪರಂಪರೆಗೆ ಮನೋವಾಕ್ಕಾಯಂಗಳಿಂದಭಿವಂದಿಸಿ' ಎಂದು ಹೇಳಿ ಸ್ಪಷ್ಟಪಡಿಸಿದ್ದಾರೆ' ಎಂದು ಆಧಾರಗಳೊಡನೆ ಚರ್ಚಿಸಿ ಜಿ.ಎಂ.ಉಮಾಪತಿ ಶಾಸ್ತ್ರಿಗಳು ಹೇಳಿರುವುದು[೨೩] ಒಪ್ಪಬಹುದಾಗಿ ಕಾಣುತ್ತದೆ. ನಿಜಗುಣರ ಕಾಲವೂ ಇದೇ ರೀತಿ ಭಿನ್ನಾಭಿಪ್ರಾಯಕ್ಕೆ ಗುರಿಯಾಗಿದೆ. ಇದೇ ವಿದ್ವಾಂಸರು ಎಲ್ಲಾ ವಿದ್ವಾಂಸರ ಅಭಿಪ್ರಾಯಗಳನ್ನು ಕೂಲಂಕುಷವಾಗಿ ವಿಮರ್ಶೆ ಮಾಡಿ, 'ವಿವೇಕಚಿಂತಾಮಣಿ' ಬೇರೆ ಭಾಷೆಗಳಿಗೆ ಭಾಷಾಂತರವಾಗಿರುವ ಸಂಗತಿಯನ್ನು ಇತರ ಆಧಾರಗಳೊಂದಿಗೆ ಮುಖ್ಯ ಆಧಾರವಾಗಿ ಹಿಡಿದು – "ವಿವೇಕಚಿಂತಾಮಣಿಯು ಮೊಟ್ಟಮೊದಲು ೧೭ನೆಯ ಶತಮಾನದ ಪ್ರಾಂಭದಲ್ಲಿ (ಸು.೧೬೦೪) (ಶಾಂತೇಶ್ವರ ಶಿವಯೋಗಿಯಿಂದ) ಮರಾಠಿಯಲ್ಲಿ, ನಂತರ ೧೭ನೆಯ ಶತಮಾನದ ಮಧ್ಯದಲ್ಲಿ (ಸು.೧೬೫೨) (ತಿರುಮಣ್ಣಾಮಲೆಯ ಶಿವಪ್ರಕಾಶ ಸ್ವಾಮಿಗಳಿಂದ) ತಮಿಳಿನಲ್ಲಿ, ಆಮೇಲೆ ೧೮ನೆಯ ಶತಮಾನದ ಕೊನೆಯಲ್ಲಿ (ಲಿಂಗ ರಾಜನಿಂದ) ಸಂಸ್ಕೃತದಲ್ಲಿ ಭಾಷಾಂತರಗೊಂಡಿದೆ. ಶಾಂತೇಶ್ವರ ಶಿವಯೋಗಿ ೧೫೫೦ ಸುಮಾರಿಗೆ ಇದ್ದವನು ಎಂದು ಗಣಿಸಿದರೆ 'ವಿವೇಕಚಿಂತಾಮಣಿ' ಆ ಕಾಲಕ್ಕಿಂತಲೂ ಸುಮಾರು ನೂರು

ಭಕ್ತಿಯೆಂಬ 'ಮಾತೆ'ಯುಂಟು, ಸುಚರಿತ್ರವೆಂಬ 'ಪಿತ'ನುಂಟು, ಸತ್ಯವೆಂಬ 'ಕುವರಿ'ಯುಂಟು. ಹಿತವಾದ ನಂಬುಗೆಯೆಂಬ 'ಆತ್ಮ–ಜನರಸಿ'ಯುಂಟು ದಾಸಿಯುಂಟು ಹಿಂಸೆಯೆಂಬ '[ಗೇ?]ಹ'ವುುಂಟು. ವಿಚಾರವೆಂಬ 'ಕ್ಷೇತ್ರ'ಮುಂಟು 'ದಾಸಿಯುಂಟು ಹಿಂಸೆಯೆಂಬ, ದಾಸನುಂಟು ಅಸ್ತೇಯವೆಂಬ, ಲೇಸನೀವ ಧರ್ಮವೆಂಬ 'ವಾಹನ'ಮುಂಟು ಭಾಸುರಮೈತ್ರಾದಿಯೆಂಬ 'ಪೌತ್ರ'ರುಂಟು, ಮುಕ್ತಿಯೆಂಬ 'ದೇಶ'ಮುಂಟು, ಶಂಭುಲಿಂಗವೆಂಬ 'ಗುರು' ತನಗುಂಟು॥" ಎಂದು, ಅವರು ಅರಸರಾಗಿದ್ದ ಕಾಲದಲ್ಲಿ ತಮ್ಮೊಡನಿದ್ದ ಅರಸಿ, ದೇಶ, ಜನ (ಪ್ರಜೆ), ಗೇಹ (ಅರಮನೆ), ಮಗ ಸೊಸೆ, ಮೊಮ್ಮಕ್ಕಳು, ದಾಸ ದಾಸೀ ಜನ ಮುಂತಾದ ಪರಿವಾರ, ಮುಂತಾದುವನ್ನು ತೊರೆದದ್ದಕ್ಕೆ ವಿಷಾದ ಪಡದೆ, ಅವುಗಳಿಗಿಂತ ಅತಿಶಯವಾದ ಭೋಗ ಭಾಗ್ಯಗಳು ತಮಗೆ ಈಗ ಉಂಟು ಎನ್ನುವುದರ ಮೂಲಕ ನಿಜಗುಣರು ತಮ್ಮ ಪೂರ್ವ ಚರಿತ್ರೆಯನ್ನೇ ಸ್ಪಷ್ಟವಾಗಿ ಸೂಚಿಸಿದ್ದಾರೆ.

ಪರಂಪರಾನುಗತವಾಗಿ ಸಾಗಿ ಬಂದು ಜನಮನದಲ್ಲಿ ಸ್ಥಿರವಾಗಿ ನೆಲಸಿ ಬಲ್ಲವರ ಬಾಯಿಂದ ಹೊರಬಂದ ಹೇಳಿಕೆಗಳನ್ನು ಅವಲಂಬಿಸಿ, ನಿಜಗುಣರ ಜೀವನ ಚರಿತ್ರಾಂಶಗಳನ್ನು ಹೀಗೆ ಸಂಗ್ರಹಿಸಿ ಹೇಳಬಹುದು:

"(೧)ಶ್ರೀನಿಜಗುಣರು ಅವತಾರಿ ಪುರುಷರು; (೨)ಕೊಳ್ಳೇಗಾಲ ಪ್ರಾಂತದ ಕಿರುನಾಡಿನ ಅರಸರಾಗಿದ್ದರು; (೩)ಅರಮನೆಯಲ್ಲಿ ಜಂಗಮರ ಅನಾದರ ಕಂಡು ವೈರಾಗ್ಯ ತಾಳಿದರು; (೪)ಸ್ವಾದಿಯ ರಾಜ್ಯದಲ್ಲಿ ಗುರುವಿನಿಂದ ದೀಕ್ಷೆ ಪಡೆದರು; (೫)ಗುರುವಿನ ಕರುಣೆ ಪಡೆದು ಶಂಭುಲಿಂಗನ ಬೆಟ್ಟದಲ್ಲಿ ಶಿವಯೋಗಾನುಷ್ಠಾನವನ್ನು ಮಾಡಿದರು; (೬)ದೇಶಾಟನೆ ಮಾಡಿ ಅನೇಕ ಪವಾಡಗಳನ್ನು ತೋರಿ ಭಕ್ತರನ್ನು ಉದ್ಧರಿಸಿದರು, ಜನತೆಗೆ ಸತ್ಯದ ದಾರಿ ತೋರಿದರು; (೭)ಬಾಹ್ಯ ಪೂಜೆಗಿಂತಲೂ ಮಿಗಿಲಾಗಿ ಅಭ್ಯಂತರ ಲಿಂಗಾನುಸಂಧಾನ ಮಾಡಿ ಶಿವಯೋಗಾರೂಢರಾದರು; (೮)ಹಠಯೋಗ ಸಾಧನೆಯಿಂದ ಅನೇಕ ಯೋಗ ಸಿದ್ಧಿಗಳನ್ನು ಪಡೆದರು; (೯)ಅನನ್ಯ ನಿಷ್ಠೆಯ ಸೇವೆಯಿಂದ ಗುರುವಿನ ಅನುಗ್ರಹ ಪಡೆದರು; (೧೦)ಸಕಲಾಗಮ ಪುರಾಣೇತಿಹಾಸಗಳನ್ನು ಆದ್ಯಂತವಾಗಿ ಅಭ್ಯಾಸಿಸಿ ಸ್ವಾಧ್ಯಾಯ–ಮನನಗಳಿಂದ ಪಾಂಡಿತ್ಯವನ್ನು ಪಡೆದರು; (೧೧)ಸಂಸ್ಕೃತದಲ್ಲಿಯ ತತ್ವಶಾಸ್ತ್ರಗಳ ಸಾರವನ್ನೇ ಅಚ್ಚಗನ್ನಡದಲ್ಲಿ ಪಾಕವಿಟ್ಟು ಜನಸಾಮಾನ್ಯರ ಅನಿಮಿತ ಬಂಧುವಾದರು.[೨೨]

ವಿಶ್ವಾಸಾರ್ಹವಾದ ಲಿಖಿತ ಪ್ರಮಾಣಗಳು ದೊರೆಯುವವರೆಗೆ ಮೊದಲ

ಕಂಠಾಭರಣವೆನಿಸುವಂತೆ ಮುಮುಕ್ಷು ಜನಂಗಳೀ ಜಗತ್ತಿನ ಸ್ಥಿತಿಗತಿಗಳಾವ ಪ್ರಕಾರದಿಂದಿಹವೆಂದರಸಿ ಬಳಲದಭಿವ್ಯಕ್ತಮಾದಲ್ಲಿಯೇ ಸಲ್ಲೀಲೆಯಿಂದರಿದು ಕೃತಾರ್ಥರಾಗಲೆಂದು ನಿಜಗುಣ ಶಿವಯೋಗಿ 'ಬೆಳುಗನ್ನಡ' ಮಾದ ವಚನ ರಚನೆಗಳಿಂ ವಿವೇಕ ಚಿಂತಾಮಣಿಯೆಂಬ ಪ್ರಕರಣಮಂ ಪೇಳ್ದನ್."

ಪರಿಚ್ಛೇದಗಳ ವಿಷಯ ಸೂಚನೆ: (೧)ವೇದಾದಿ ಸಕಲ ಶಾಸ್ತ್ರಾರ್ಥ ನಿರ್ಣಯಂ (೨)ಪರತರಶಿವ ಸಿದ್ಧಾಂತ ಪದ್ಧತಿ (ಅಥವಾ ಶಿವಾಗಮಾರ್ಥ ವರ್ಣನಂ), (೩)ಅಜಾಂಡಾದಿಕಂ (ಅಥವಾ ನಾಗಲೋಕ ಸ್ಥಿತಿವರ್ಣನಂ), (೪)ಧಾರುಣಿಯ ವಿಚಿತ್ರತೆ (ಜಂಬೂ ದ್ವೀಪ ಸ್ಥಿತಿವರ್ಣನಂ), (೫)ದ್ವೀಪಕದಂಬಂಗಳ್, ಅಂಬುಧಿಗಳ್ (ಮರ್ತ್ಯಲೋಕ ಸ್ಥಿತಿವರ್ಣನಂ), (೬)ಊರ್ಧ್ವ ಲೋಕಂಗಳ್ (ದೇವಲೋಕ ಸ್ಥಿತಿ ವರ್ಣನಂ), (೭)ಊರ್ಧ್ವಲೋಕ ಸ್ಥಿತಿ ವರ್ಣನಂ, (೮)ಊರ್ಧ್ವ ಪ್ರಕೃತಿಯಿನಾದ ತತ್ವಾದಿಕ (ಶುದ್ಧಭುವನ ಸ್ಥಿತಿ ವರ್ಣನಂ, (೯)ಜೀವರ ಭುವನ–ಕರ್ಮಫಲ (ಭುವನಾಂತರ ಪ್ರಾಪ್ತಿಪ್ರಕಾರವರ್ಣನಂ), (೧೦)ಕಾಲಕ್ರಮ ವರ್ಣನಂ.

೪ನೆಯ ಪರಿಚ್ಛೇದದ ಸುಮಾರು ೧೩೦ ವಿಷಯಗಳಲ್ಲಿ ಉದಾಹರಣಾರ್ಥ ಕೆಲವು ವಿಷಯಾಂಶಗಳನ್ನು ಗಮನಿಸಬಹುದು. (ಈ ಪರಿಚ್ಛೇದದಲ್ಲಿ ಕಾವ್ಯ ಶಾಸ್ತ್ರ, ನಾಟ್ಯಶಾಸ್ತ್ರ, ಸಂಗೀತ ಶಾಸ್ತ್ರ, ಕಾಮಶಾಸ್ತ್ರ, ಇವುಗಳ ವಿವರಣೆ ಪ್ರಮುಖವಾಗಿದೆ.):

ಭಾರತ ವರ್ಷಂ, ಷಟ್ ಚಕ್ರವರ್ತಿಗಳು, ಅಷ್ಟೈಶ್ವರ್ಯಗಳು, ಅಷ್ಟಭೋಗಂಗಳು, ಸಪ್ತ ಸಂತಾನಂಗಳು; ರಾಜಲಕ್ಷಣ; ಛಂದಸ್ಸು; ಅಲಂಕಾರಗಳು; ಮಹಾಕಾವ್ಯ ವರ್ಣಾದಿಗಳು; ಕಾವ್ಯ ರೀತ್ಯಾದಿಗಳು; ಶಬ್ದ ದೋಷಂಗಳು; ಕಾವ್ಯ ಭೇದಗಳು; ಗಮಕಿಗಳು, ವಾದಿಗಳು, ವಾಗ್ಮಿಗಳು; ಸ್ಥಾಯೀಭಾವಂಗಳು, ಆಲಂಬನ ವಿಭಾವಂಗಳು, ಉದ್ದೀಪನ ವಿಭಾವಂಗಳು, ಸಂಚಾರೀಭಾವಂಗಳು; ನವರಸೋತ್ಪತ್ತಿ; ದಶಕಾಮಾವಸ್ಥೆಗಳು; ಸ್ವರೋತ್ಪತ್ಯಾದಿಕ್ರಮ, ದಶವಿಧನಾದಗಳು, ಸಪ್ತಸ್ವರೋತ್ಪತ್ತಿ ಸ್ಥಾನ; ಸ್ವರದಿಂ ಶ್ರುತಿ ಸಮುತ್ಪತ್ತಿ, ಶ್ರುತಿಗಮಕ ದೇಶೀಗಮಕಂಗಳು; ರಾಗೋತ್ಪತ್ತಿ ಲಕ್ಷಣ, ಗ್ರಾಮಾದಿಗಳು ರಾಗ ಜಾತಿಗಳು, ರಾಗಾಂಗಳು, ಪ್ರಸಿದ್ಧ ಮೂವತ್ತೆರಡು ರಾಗಂಗಳು, ಇತ್ಯಾದಿ.

ಅಲಂಕಾರಗಳು: ಸಮಾಸೋಕ್ತಿ, ಪರ್ಯಾಯೋಕ್ತಿ, ಆಕ್ಷೇಪ, ಉಪಮೇಯೋಪಮೆ... ಸ್ಮೃತಿ ಸಾಮ್ಯಯೋಗಿತೆ... ವಾಚ್ಯಲಿಂಗ... ಸತ್ಯ ಸಂಗತಿ... ಭಾಮಿಕ, ಉದಾತ್ತವೆಂಬ ಅರವತ್ತೈದು ಅಲಂಕಾರಗಳು.

ವರ್ಷ ಮುಂಚಿತವಾಗಿಯಾದರೂ ರಚಿತವಾಗಿರಬೇಕು. ಆದುದರಿಂದ ನಿಜಗುಣ ಶಿವಯೋಗಿಗಳ ಕಾಲವು ೧೪೫೦ರ ಸುಮಾರಿಗೆ ನಿಲ್ಲುತ್ತದೆ' ಎಂದೂ; "ಸಂಸ್ಕೃತದಲ್ಲಿದ್ದ ವೇದಾಂತ–ಶಿವಸಿದ್ಧಾಂತ ಶಾಸ್ತ್ರಗಳನ್ನು ತಿಳಿಗನ್ನಡದ ಮೂಲಕ ಪ್ರಚಾರಕ್ಕೆ ತರುತ್ತಿದ್ದ ೧೫ನೆಯ ಶತಮಾನದ ಪರಿಸರದಲ್ಲಿ ನಿಜಗುಣ ಶಿವಯೋಗಿಗಳ ಕೃತಿಗಳು ರೂಪುಗೊಂಡುವೆಂದು ನಿರಾಬಾಧವಾಗಿ ಹೇಳಬಹುದಾಗಿದೆ" ಎಂದೂ; ನಿಜಗುಣರ ಗುರುಗಳ ಗುರು ಎನ್ನಲಾದ ತೋಂಟದ ಸಿದ್ಧಲಿಂಗಯತಿಗಳ ಕಾಲವನ್ನು (ದಿವಂಗತ ಎಂ.ಆರ್. ಶ್ರೀ. ನಿರ್ಧರಿಸಿದ್ದಂತೆ) ೧೪೭೦–೧೫೫೫ ಎಂದು ಗ್ರಹಿಸಿ "ಶ್ರೀ ನಿಜಗುಣ ಶಿವಯೋಗಿಗಳ ಕಾಲವನ್ನು ಕ್ರಿ.ಶ.೧೫೦೦ ಎಂದು ನಿಸ್ಸಂಶಯವಾಗಿ ಗ್ರಹಿಸಬಹುದು" ಎಂದೂ ಅಭಿಪ್ರಾಯಪಟ್ಟಿದ್ದಾರೆ. ಆಧಾರ ಪೂರ್ವಕ ಮಾಡಿರುವ ಈ ತೀರ್ಮಾನಗಳು ಕವಿಚರಿತೆಕಾರರು ಮಾಡಿರುವ ೧೫೦೦ ಎಂಬ ಊಹೆಯ ಕಡೆಗೇ ಸಾಗಿ ಬಂದಿವೆ.

**ವಿವೇಕಚಿಂತಾಮಣಿ:** ಈ ಗ್ರಂಥ ಒಂದು ವಿಶ್ವಕೋಶದಂತಿದೆ ಎಂಬ ಮಾತನ್ನು ಅದರ ವಿಮರ್ಶೆ ಮಾಡಿರುವ ಎಲ್ಲ ವಿದ್ವಾಂಸರೂ ಆಡಿದ್ದಾರೆ. ಈ ಬಗೆಗೆ ಭಿನ್ನಾಭಿಪ್ರಾಯವಿರದು. ಇಲ್ಲಿನ ಅಲ್ಪಾವಕಾಶದಲ್ಲಿ ಇದರ ಸಮಗ್ರ ಪರಿಚಯವನ್ನು ಮಾಡಿಕೊಡುವುದೆಂದರೆ, ಕನ್ನಡಿಯಲ್ಲಿ ಆನೆಯ ಪ್ರತಿಬಿಂಬವನ್ನು ತೋರಿಸುವ ಸಾಹಸವಾಗುವುದು. ಈ ಗ್ರಂಥದ ಹತ್ತು ಪರಿಚ್ಛೇದಗಳಲ್ಲಿ ನಿರೂಪಿತವಾಗಿರುವ ಸುಮಾರು ೧೫೦೦ ಕ್ಕೂ ಮಿಕ್ಕ ವಿಷಯಗಳ ಪಟ್ಟಿಯೇ ಅಚ್ಚಿನ ಎಂಟು ಹತ್ತು ಪುಟಗಳಾಗುವುವು. ಕೇವಲ ಪರಿಚ್ಛೇದಗಳ ವಿಷಯ ಸ್ವರೂಪವನ್ನು ಮಾತ್ರ ಉಲ್ಲೇಖಿಸಿ, ನಿಜಗುಣರ ವಿಷಯ ನಿರೂಪಣಾ ಪದ್ಧತಿಗೆ ಒಂದೆರಡು ಉದಾಹರಣೆಗಳನ್ನು ಮಾತ್ರ ಕೊಡುವುದು ಸಾಧ್ಯ. ಇದಕ್ಕೆ ಮುಂಚೆ ನಿಜಗುಣರ ಮಾತಿನಲ್ಲಿಯೇ ಕೃತಿ ಸ್ವರೂಪ ಹೇಗೆ ಬಿಂಬಿತವಾಗಿದೆ ಎಂಬುದನ್ನು ನೋಡಬಹುದು;

'ಶಿಮದನೇಕ ಲೋಕಹಿತಮಾಗಿರೆ ವೇದಪುರಾಣ ಶಾಸ್ತ್ರದೊಳ್ ನೇಮಿಸಿ ತೋರ್ಪ ವಿಶ್ವವಿಷಯಂಗಳ ಸುಸ್ಥಿತಿಯಂ ವಿವೇಕ ಚಿಂತಾಮಣಿಯೆಂಬ ಸಲ್ವ ಪೆಸರಿಟ್ಟು ಮಹಾಕವಿತಾ ಪ್ರಬಂಧಮಂ ಪೇಳ್ವೆ' ಎಂಬ ನಿಜಗುಣರ ಹೇಳಿಕೆಯಲ್ಲಿ 'ಮಹಾಕವಿತಾ ಪ್ರಬಂಧ' ಎಂಬ ಒಂದು ಮಾತನ್ನು ಹೊರತುಪಡಿಸಿದರೆ, ಆ ಕಾಲದಲ್ಲಿ ಪ್ರಚಲಿತವಿದ್ದ 'ವಿಶ್ವ ವಿಷಯ ಕೋಶ' ಇದು ಎನ್ನಲಡ್ಡಿಯಿಲ್ಲ. 'ಸ್ವಕಪೋಲ ಕಲ್ಪಿತವಲ್ಲದ ಸಾರತರಮಾದ ಸತ್ಯಾರ್ಥಂಗಳನ್ನೇ ಸಂಗ್ರಹಿಸಿ, ಮುನ್ನುಳ್ಳ ಮಣಿಪುಂಜಮಂ ರಂಜನೆಗೈದು ತರವರಿದು ಸರಂಗೊಳಿಸಿ ನವೀನ

## ಅಡಿ ಟಿಪ್ಪಣಿಗಳು

೧. ಆರ್.ನರಸಿಂಹಾಚಾರ್: ಕವಿಚರಿತೆ – I, ೧೯೭೨; ಪು.೬–೮

೨. ಡಿ.ಎಲ್.ನರಸಿಂಹಾಚಾರ್: 'ಶಬ್ದಮಣಿ ದರ್ಪಣ'ದ ಪರಿಷ್ಕೃತದ ಮುದ್ರಣ, ೨ನೆಯ ಆವೃತ್ತಿ, ೧೯೬೪; ಪ್ರಸ್ತಾವನೆ, ಪು.vii

೩. ನಿಟ್ಟೂರು ನಂಜಯ್ಯನ ಟೀಕೆಯಿರುವ ಶಬ್ದಮಣಿ ದರ್ಪಣವನ್ನು ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತು ಹೊರತಂದಿದೆ (೧೯೨೦). ಸಂಪಾದಕರ ಹೆಸರನ್ನು ಹಾಕಿಲ್ಲ.

೪. ಲಿಂಗಣಾರಾಧ್ಯನ ವೃತ್ತಿಯಿರುವ ಈ ಶಬ್ದಮಣಿ ದರ್ಪಣದ ಪ್ರತಿಯನ್ನು ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗ ಹೊರತಂದಿದೆ (೧೯೩೯); ಸಂ. ಎ.ವೆಂಕಟರಾವ್ ಮತ್ತು ಪಂಡಿತ ಎಚ್.ಶೇಷಯ್ಯಂಗಾರ್; ಪ್ರಧಾನ ಸಂ.ಎ.ಶಂಕರಕೆದಿಲಾಯ.

೫. ಡಿ.ಕೆ.ಭೀಮಸೇನರಾಯರು, ಧಾರವಾಡದ ಕನ್ನಡ ಸಂಶೋಧನೆಯ ಆಶ್ರಯದಲ್ಲಿ ಕೊಟ್ಟ ಒಂದು ಉಪನ್ಯಾಸದಲ್ಲಿ ಈ ಸಂಗತಿಗಳನ್ನು ವಿವರಿಸಿದ್ದಾರೆ. 'ಶಬ್ದಮಣಿ ದರ್ಪಣದ ಪಾಠಾಂತರಗಳು', ಎಂಬ ಹೆಸರಿನಲ್ಲಿ ಈ ಉಪನ್ಯಾಸ ಪ್ರಕಟವಾಗಿದೆ. (೧೯೫೧)

೬. ಬರ್ನೆಲ್: 'The Aindra School of Grammarians', ಪು.೫೮ (ಐಂದ್ರವೈಯಾಕರಣ ಪಂಥ). (ಆರ್.ನರಸಿಂಹಾಚಾರ್ಯರು ಈತನ ಹೇಳಿಕೆಯನ್ನು ಕರ್ಣಾಟಕ ಶಬ್ದಾನುಶಾಸನದ ಪೀಠಿಕೆಯಲ್ಲಿ ಉದ್ಧರಿಸಿದ್ದಾರೆ.) (ಪು.೧೯).

೭. ಡಿ.ಕೆ.ಭೀಮಸೇನರಾವ್: 'ಶಬ್ದಮಣಿದರ್ಪಣದ ಪಾಠಾಂತರಗಳು'; ೧೯೫೧, ಪು.೮೫.

೮. ಎಂ.ಎಂ.ಕಲಬುರ್ಗಿ: 'ಕೇಶಿರಾಜ ಕಂಡ ಅನುಪಲಬ್ಧ ಭಾರತಗಳು'; ಪ್ರಬುದ್ಧ ಕರ್ಣಾಟಕ ಸಂಪುಟ ೫೪–೪, ೧೯೭೩, ಪು.೫

೯. ಆರ್.ನರಸಿಂಹಾಚಾರ್: ಕರ್ಣಾಟಕ ಕವಿಚರಿತೆ–II, ೧೯೭೨; ಪು.೩೦೬.

೧೦. ಆರ್.ನರಸಿಂಹಾಚಾರ್ (ಸಂ.): 'ಭಟ್ಟಾಕಲಂಕದೇವಕೃತ ಶಬ್ದಾನುಶಾಸನಂ', ೧೯೨೩; ಪೀಠಿಕೆ, ಪು.೧೭.

೧೧. ಎ.ಎನ್.ನರಸಿಂಹಯ್ಯ: 'ಕವಿ ಭೀಮನು ಯಾರು?' – 'ಸಂಭಾವನೆ', ೧೯೪೧; ಪು.೧೮೭, ೧೯೧.

ಗಮಕಿಗಳು: ಮತ್ತಂ ತಾನಮಾನುದೋರಿ ವಿಶ್ರಮಣವರಿದು, ಪದನಂ ವ್ಯಕ್ತಿಗೈದು ಕೇಳ್ವರಂ ಕಿವಿಗೊಳಿಸಿ, ಮೃದುಮಧುರ ವರ್ಣೋಚ್ಚಾರಂ ಮಾಳ್ಪ ಗಮಕಿಗಳಿಂ.

'ಶ್ರೀನಿಜಗುಣರು ಈ ಲಘು ವಿಶ್ವಕೋಶವನ್ನು ರಚಿಸಲು ಹಲವಾರು ಮೂಲಗಳಿಂದ ವಿಷಯವನ್ನು ಸಂಗ್ರಹಿಸಿರುವರು. ಮುಖ್ಯವಾಗಿ ಉಪನಿಷತ್ತು, ಸ್ಮೃತಿ, ಆಗಮ, ತಂತ್ರ, ಪುರಾಣಗಳ ಸಂಸ್ಕೃತ ಗದ್ಯ–ಪದ್ಯಗಳ ಲಲಿತವಾದ ಭಾಷಾಂತರವನ್ನು ಹಾಗೂ ಕನ್ನಡ ಪುರಾತನೋಕ್ತಿಗಳ ಸಾರ ಸಂಗ್ರಹವನ್ನು ಈ ಕೃತಿಯಲ್ಲಿ ಸಾದರಪಡಿಸಿದ್ದಾರೆ..... ನಿಜಗುಣರು ಕೆಲವು ಆಕರಗ್ರಂಥಗಳನ್ನು ಉಲ್ಲೇಖಿಸಿರುವರು. ವಾತೂಲ, ಶಾರದಾತಿಲಕ, ಮಂತ್ರದೇವತಾ ಪ್ರಕಾಶಿಕೆ, ಪ್ರಪಂಚಸಾರ ಮೊದಲಾದ ಮಂತ್ರಶಾಸ್ತ್ರ ಗ್ರಂಥಗಳ ಹೆಸರುಗಳನ್ನು ಹೇಳಿರುವರು.–[೨೫]

ಭೋಜರಾಜನ 'ಸಮರಾಂಗಣ ಸೂತ್ರಧಾರ' (೧೦೦೦–೧೦೫೫) ಲಕ್ಕಣ ದಂಡೇಶನ (೧೪೦೦–೧೪೨೦) ಶಿವತತ್ತ್ವ ಚಿಂತಾಮಣಿ, ಮಗ್ಗೆಯ ಮಾಯಿದೇವನ (೧೪೩೦) 'ಪಂಚೀಕರಣ', ತೋಂಟದ ಸಿದ್ಧಲಿಂಗರ 'ಷಟ್ಸ್ಥಲ ಜ್ಞಾನಸಾರಾಮೃತ' – ಈ ಕೃತಿಗಳಿಂದ ವಿಶೇಷವಾಗಿ ಪ್ರಭಾವಿತರಾಗಿರಬಹುದು ಎಂದು ಕಂಡು ಬರುತ್ತದೆ. ಶಂಕರಾಚಾರ್ಯರ ಉಲ್ಲೇಖವಿದೆ; ಶಾಂಕರ ಭಾಷ್ಯದ ಮೇಲಣ 'ವಿವರಣ ಟೀಕೆ'ಯ ಪ್ರಸ್ತಾಪವೂ ಇದೆ. ಪ್ರಥಮ ಪರಿಚ್ಛೇದವು ಬಹುಮಟ್ಟಿಗೆ ಅದ್ವೈತ ವೇದಾಂತ ಶಾಸ್ತ್ರದ ವಿವರಣೆಗೇ ಮೀಸಲಾಗಿದೆ. ಚಾರ್ವಾಕ, ಬೌದ್ಧ, ಜೈನ ಈ ಮೂರು ಅವೈದಿಕ ದರ್ಶನಗಳನ್ನು ಪ್ರಸ್ತಾಪಿಸಿದ ನಿಜಗುಣರು ತಮ್ಮ ಕಾಲಕ್ಕೂ ಬಹಳ ಹಿಂದೆಯೇ ಶ್ರೀ ರಾಮಾನುಜರು ಮತ್ತು ಶ್ರೀ ಮಧ್ವಾಚಾರ್ಯರು, ಇವರಿಂದ ಸ್ಥಾಪನೆಗೊಂಡ ವಿಶಿಷ್ಟಾದ್ವೈತ ದ್ವೈತ ಸಿದ್ಧಾಂತಗಳನ್ನು ವಿವರಿಸುವುದು ಹಾಗಿರಲಿ, ಹೆಸರಿಸದಿರುವುದು ಕೂಡ ಸೋಜಿಗವಾಗಿ ಕಾಣುತ್ತದೆ. ಈ ಪರಿಚ್ಛೇದದ ಕೊನೆಯಲ್ಲಿ ಜೀವನ್ಮುಕ್ತನ ಸ್ವರೂಪವನ್ನು ತಿಳಿಸುವಾಗ, 'ದ್ವೈತ ಭಾವವಳಿದು ಆತ್ಮಾರಮನಪ್ಪ' ಜೀವನ್ಮುಕ್ತನು 'ಕಲ್ಪಿತದ ದ್ವೈತ ಪರಶೃತಿ ವಾಕ್ಯ ವೈಖರೀ ವಿಷಯದೊಳಲಸನಪ್ಪಂ' ಎಂದು ಹೇಳಿರುವುದು ನಿಜಗುಣರ ಅದ್ವೈತ ನಿಷ್ಠೆಯನ್ನು ಸ್ಪಷ್ಟಗೊಳಿಸಿದೆ. ಉಳಿದೆರಡು ಸಿದ್ಧಾಂತಗಳನ್ನು ಉಲ್ಲೇಖಿಸದಿರಲು ಈ ಏಕೈಕ ಅದ್ವೈತ ನಿಷ್ಠೆಯೇ ಕಾರಣವಾಗಿರಬಹುದು. ಕನ್ನಡ ಶಾಸ್ತ್ರ ಸಾಹಿತ್ಯದಲ್ಲಿ 'ವಿವೇಕಚಿಂತಾಮಣಿ'ಗೆ ಒಂದು ಉನ್ನತವಾದ ಗೌರವಸ್ಥಾನ ಸಲ್ಲತಕ್ಕದ್ದಾಗಿದೆ.

# ೫. ಧಾರ್ಮಿಕ ಶಾಸ್ತ್ರಗ್ರಂಥಗಳು

## ಹಿನ್ನೆಲೆ

ಕನ್ನಡ ನಾಡು ಅನೇಕ ಮತಧರ್ಮಗಳ ಕೂಡಲ ಸಂಗಮ; ಸರ್ವಧರ್ಮ ಸಮನ್ವಯದ ಪ್ರಯೋಗಶಾಲೆ. ಬೌದ್ಧ, ಜೈನ ಧರ್ಮಗಳು ಕನ್ನಡ ನಾಡನ್ನು ವರಿಸುವುದಕ್ಕೆ ಮುಂಚೆ ಇಲ್ಲಿ ವೈದಿಕ ಧರ್ಮ ಬಲವಾಗಿ ಬೇರೂರಿತ್ತು. ಸಿಂಧೂ ನದಿಯ ಬಯಲಿನ ಹರಪ್ಪ–ಮೊಹೆಂಜೋದಾರೋ ಸ್ಥಳಗಳ ಸಂಸ್ಕೃತಿ ಆರ್ಯರ ವೈದಿಕ ಸಂಸ್ಕೃತಿ ಎಂದು ತೀರ ಇತ್ತೀಚಿನ ಪುರಾತತ್ತ್ವ ಸಂಶೋಧನ ವಿದ್ವಾಂಸರೂ ಕೆಲವು ಇತಿಹಾಸ ತಜ್ಞರೂ ಹೇಳತೊಡಗಿದ್ದರೂ, ಆ ಸಂಸ್ಕೃತಿಯ ಅವಶೇಷಗಳನ್ನು ಮೊದಲು ಅಗೆದು ತೆಗೆದು ಸಂಶೋಧನೆ ನಡೆಸಿದ ಕನಿಂಗ್ ಹ್ಯಾಂ (೧೮೮೦), ಆರ್.ಡಿ.ಬ್ಯಾನರ್ಜಿ (೧೯೨೨), ಸರ್ ಜಾನ್ ಮಾರ್ಷಲ್ (೧೯೨೪) ಮೊದಲಾದ ಪಾಶ್ಚಾತ್ಯ ಹಾಗೂ ದೇಶಿಯ ವಿದ್ವಾಂಸರು ಅದು ನಿಸ್ಸಂಶಯವಾಗಿ ದ್ರಾವಿಡ ಸಂಸ್ಕೃತಿ ಎಂದು ಅಭಿಪ್ರಾಯಪಟ್ಟು, ಆ ಸಂಸ್ಕೃತಿಯಲ್ಲಿ ಶಿವ–ಪಶುಪತಿಯ ಪೂಜೆಯಿತ್ತು ಎಂದು ವಾದಿಸಿದ್ದಾರೆ. ತಮಿಳುನಾಡಿನಲ್ಲಿ ಮತ್ತು ಕಾಶ್ಮೀರಗಳಲ್ಲಿ ಶೈವ ಸಂಸ್ಕೃತಿಯೇ ಪ್ರಾಚೀನ ಎಂಬುದು ಪ್ರಸಿದ್ಧವಾದ ಸಂಗತಿ. ದ್ರಾವಿಡ ಭಾಷೆಗಳ ಹಾಗೂ ದೇವನಾಗರಿಯ ಲಿಪಿಗಳು ಬ್ರಾಹ್ಮೀ ಲಿಪಿಯಿಂದ ಹುಟ್ಟಿ ವಿಕಾಸಗೊಂಡಿರುವ ಸಂಗತಿಯಂತೂ ನಿರ್ವಿವಾದವಾಗಿ ಸ್ಥಾಪಿತವಾಗಿದೆ. ಕೆಲವು ವಿದ್ವಾಂಸರು ಈ ಬ್ರಾಹ್ಮೀಲಿಪಿಗೂ ಹರಪ್ಪ–ಮೊಹೆಂಜೋದಾರೋ ಪ್ರದೇಶದ ಮುದ್ರೆಗಳ ಮೇಲೆ ಕಂಡು ಬಂದ ಲಿಪಿಗೂ ಸಂಬಂಧ ಕಲ್ಪಿಸಲು ಪ್ರಯತ್ನಪಟ್ಟಿದ್ದಾರೆ. ತೀರ ಇತ್ತೀಚಿನ ಪಾಶ್ಚಾತ್ಯ ವಿದ್ವಾಂಸರೊಬ್ಬರು ಆ ಲಿಪಿಗಳ ಭಾಷೆಯನ್ನು ಓದುವ ಪ್ರಯತ್ನ ನಡೆಸಿ, ಅದರಲ್ಲಿ (ಮೈಲಿಗೆಗೆ ವಿರುದ್ಧಾರ್ಥದ) 'ಮಡಿ' ಎಂಬ ಕನ್ನಡದ ಮಾತನ್ನೇ ಓದಿ, ಈ ಭಾಷೆ ಪುರಾತನ ದ್ರಾವಿಡ ಭಾಷೆ ಎಂದಿದ್ದಾರೆ. ದಕ್ಷಿಣ ಭಾರತದ ದ್ರಾವಿಡ ಭಾಷೆಗಳಲ್ಲದೆ ದ್ರಾವಿಡ ಭಾಷೆಯ ಪ್ರಭೇದಗಳು ಮಧ್ಯ ಭಾರತ ಮತ್ತು ಆಫ್ಘಾನಿಸ್ಥಾನಗಳಲ್ಲಿ ಇಂದಿಗೂ ಕೆಲವು ಗುಡ್ಡಗಾಡು ಜನವರ್ಗಗಳಲ್ಲಿ ಜೀವಂತವಾಗಿರುವುದನ್ನು ಭಾಷಾಶಾಸ್ತ್ರಜ್ಞರು ಸ್ಥಾಪಿಸಿದ್ದಾರೆ.

೧೨. ಎನ್.ಬಸವಾರಾಧ್ಯ: 'ಕನ್ನಡದಲ್ಲಿ ನಿಘಂಟು ಶಾಸ್ತ್ರ'; 'ಚಿನ್ನದ ಬೆಳಸು' ಕನ್ನಡ ಸಾಹಿತ್ಯ ಪರಿಷತ್ತು, ೧೯೭೦; ಹೊಂದನೆ–೩, ಪು.೪೪

೧೩. ಎಸ್.ಜಿ. ನರಸಿಂಹಾಚಾರ್ ಮತ್ತು ಮಂ.ಆ. ರಾಮಾನುಜಯ್ಯಂಗಾರ್ (ಸಂ.) 'ಸೂರ್ಯಕವಿಕೃತಂ ಕವಿಕಂಠಹಾರಂ'; ಕಾವ್ಯಕಲಾ ನಿಧಿ ಗ್ರಂಥ ಮಾಲೆ, ಮೈಸೂರು; ೧೯೦೨; ಪೀಠಿಕೆ ಪು.೨

೧೪. ಆರ್.ನರಸಿಂಹಾಚಾರ್: ಕವಿ ಚರಿತೆ–I; ಪು.೧೨೦

೧೫. ಎ.ವೆಂಕಟರಾವ್ ಮತ್ತು ಪಂಡಿತ ಎಚ್.ಶೇಷಯ್ಯಂಗಾರ್ (ಸಂ.) 'ನಾಗವರ್ಮ ಕೃತಮಪ್ಪ ಅಭಿಧಾನ ವಸ್ತುಕೋಶಂ'; ಮದರಾಸು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ(೩), ೧೯೩೩; ಮುನ್ನುಡಿ, ಪು.iv

೧೬. ಮೇಲಿನದೇ: ಪು.vii-viii

೧೭. ಆರ್.ನರಸಿಂಹಾಚಾರ್: ಕವಿಚರಿತೆ, I; ೧೯೭೧, ಪು.೧೧೦

೧೮. ಎ.ಎನ್.ನರಸಿಂಹಯ್ಯ (ಸಂ.): 'ಕಾಶಕೃತ್ಸ್ನ ಶಬ್ದಕಾಲಾಪಧಾತು ಪಾಠ'; ಡೆಕ್ಕನ್ ಕಾಲೇಜು, ಪುಣೆ; ೧೯೫೨; ಪೀಠಿಕೆಯಿಂದ ಆಯ್ದ ವಾಕ್ಯಗಳು.

೧೯. ಎಸ್.ಶ್ರೀಕಂಠಶಾಸ್ತ್ರೀ: "ಕುಮುದೇಂದು ಕವಿಯ 'ಭೂವಲಯ'" (ಎ.ಆರ್.ಕೃಷ್ಣಶಾಸ್ತ್ರಿಗಳಿಗೆ ಅರ್ಪಿಸಿದ 'ಅಭಿನಂದನೆ' ಸಂಪುಟದಲ್ಲಿ ಪ್ರಕಟಿತ; ೧೯೫೬; ಪು.೫೬೨–೫೮೯.

೨೦. ಡಿ.ಎಲ್.ನರಸಿಂಹಾಚಾರ್: "'ಮಾನಸೋಲ್ಲಾಸ'ದಲ್ಲಿ ಛಂದಸ್ಸು" (ಪ್ರಬುದ್ಧ ಕರ್ಣಾಟಕ, ಸಂ.೪೨–೨, ೧೯೭೩; ಪು.೭೨)

೨೧. ರಂ.ಶ್ರೀ.ಮುಗುಳಿ: ಕನ್ನಡ ಸಾಹಿತ್ಯ ಚರಿತ್ರೆ, ೧೯೫೩; ಪು.೩೩೪.

೨೨. ಪ್ರೊ॥ ಜಿ.ಎಂ.ಉಮಾಪತಿ ಶಾಸ್ತ್ರೀ (ಸಂ.): 'ವಿವೇಕ ಚಿಂತಾಮಣಿ'; ಪ್ರಕಾಶಕರು: ಶ್ರೀ ಜಗದ್ಗುರು ಮೂರು ಸಾವಿರ ಮಠ, ಹುಬ್ಬಳ್ಳಿ, ೧೯೬೯; ಪ್ರಸ್ತಾವನೆ, ಪು.೧೧.

೨೩. ಮೇಲಿನದೇ:ಪು.೨೧೧

೨೪. ಮೇಲಿನದೇ: ಪು.೧೦೬–೭, ೧೨೦, ೨೦೬–೭.

೨೫. ಮೇಲಿನದೇ: ಪು.೨೦೫

ಅಗತ್ಯ ವೈದಿಕ ಧರ್ಮದವರಿಗೆ ಇರಲಿಲ್ಲ. ಅಲ್ಲದೆ, ಈ ಕಾಲದಲ್ಲಿ ವೈದಿಕ ಧರ್ಮಾವಲಂಬಿಗಳು ಜ್ಞಾನಕ್ಕಿಂತ ಕರ್ಮಾಚರಣೆಗೆ ಪ್ರಾಧಾನ್ಯ ಕೊಟ್ಟಿದ್ದರು. ಜನಸಾಮಾನ್ಯರಲ್ಲಿ ಧರ್ಮಜಾಗೃತಿ ಉಂಟು ಮಾಡಬೇಕೆಂಬ ಆಸಕ್ತಿಯೆ ಅವರಿಗೆ ಇರಲಿಲ್ಲ. ಅಲ್ಲದೆ, ದೊರೆಗಳೇ ವೈದಿಕ ಮತದ ಅನುಯಾಯಿಗಳಾದದ್ದರಿಂದ, ಅದರ ಉಳಿವಿಗೆ ಧಕ್ಕೆ ತಟ್ಟುವ ಸಂಭವವಿರಲಿಲ್ಲ. ಜೈನರೂ, ಆಮೇಲೆ ವೀರಶೈವರೂ ಕನ್ನಡದಲ್ಲಿ ಗ್ರಂಥ ರಚನೆ ಮಾಡತೊಡಗಿದ ಮೇಲೆ ಅವರನ್ನನುಸರಿಸಿ ವೈದಿಕ ಧರ್ಮದ ಉಳಿವಿನಲ್ಲಿ ಆಸಕ್ತರಾದವರು; ಆ ಧರ್ಮದ ಬೇರೆ ಬೇರೆ ಪಂಥಗಳಿಗೆ ಸೇರಿದವರು, ಕನ್ನಡದಲ್ಲಿ ಧಾರ್ಮಿಕ ಶಾಸ್ತ್ರ ಗ್ರಂಥಗಳ ರಚನೆಗೆ ಮನಸ್ಸು ಕೊಟ್ಟರು.*

ಇಲ್ಲಿ ಒಂದು ವಿವರಣೆ ಅಗತ್ಯ: ಜಗತ್ತು–ಜಗದೀಶ್ವರ (ಪರಮಾತ್ಮ)–ಮಾನವ (ಜೀವಾತ್ಮ), ಇವುಗಳ ಪರಸ್ಪರ ಸಂಬಂಧದ ಜಿಜ್ಞಾಸೆ ಪ್ರಪಂಚದ ಎಲ್ಲ ಧರ್ಮಗಳಿಗೂ ಮೂಲಭೂತವಾದ ಸಂಗತಿ. ಈ ಸಂಬಂಧದ ವಿವರಣೆಯಲ್ಲಿ ಅಭಿಪ್ರಾಯ ಭೇದಗಳು ಕಂಡು ಬರುತ್ತವೆ. ಈ ಅಭಿಪ್ರಾಯ ಭೇದವೆ 'ಮತ' 'ಧರ್ಮ'ದ ಅರ್ಥದ ಹರಹು ತುಂಬ ವಿಶಾಲ; ಬಹುಮಟ್ಟಿಗೆ ಎಲ್ಲ ಧರ್ಮಗಳಿಗೂ ಅನ್ವಯಿಸತಕ್ಕದ್ದು. ಸೃಷ್ಟಿಕರ್ತ ಉಂಟು ಎಂಬುದು ಎಲ್ಲ ಧರ್ಮಗಳ ಒಂದು ಕಲ್ಪನೆ; ಆ ಕರ್ತನನ್ನು ಶಿವ, ವಿಷ್ಣು, ಅಲ್ಲಾ, ಎಂದಾಗ ಮತಭೇದ ಉಂಟಾಗುತ್ತದೆ. ಹೀಗೆ, 'ಮತದ ಅರ್ಥದ ಹರಹು ಸಂಕುಚಿತ, ಮೋಕ್ಷ ಎಲ್ಲ ಧರ್ಮಗಳಲ್ಲೂ ಉಂಟು. ಅದರ ಸ್ವರೂಪದ ವಿವರಣೆ, ಅದರ ಸಾಧನೆಗೆ ಹಿಡಿಯಬೇಕಾದ ವಿಧಾನ, ಈ ಸಂಬಂಧದ ಕರ್ಮಾಚರಣೆ, ಮುಂತಾದವು ಮತದಿಂದ ಮತಕ್ಕೆ ಬೇರೆ ಬೇರೆಯಾಗುತ್ತವೆ; ನೀತಿ ನಿಯಮಗಳೂ ಕೆಲಮಟ್ಟಿಗೆ ವ್ಯತ್ಯಾಸ ಹೊಂದಿರುತ್ತವೆ. ಧಾರ್ಮಿಕ ಶಾಸ್ತ್ರ ಗ್ರಂಥಗಳು ಮುಖ್ಯವಾಗಿ 'ಮತ'ದ ವಿಷಯಗಳನ್ನು ವಿವರಿಸುತ್ತವೆ.

---

* ಸಾಹಿತ್ಯ ಚರಿತ್ರೆಯ ಈ ಗ್ರಂಥಮಾಲೆಯ ಇತರ ಸಂಪುಟಗಳಲ್ಲಿ ಪರಿಚಯ ಮಾಡಿಕೊಟ್ಟಿರುವ ಕೃತಿಗಳಲ್ಲಿ ಲೀಲಾವತಿ. ಇಂಥ ಕೆಲವು ಕಾವ್ಯಗಳನ್ನು ಹೊರತುಪಡಿಸಿದರೆ – ಮೂಲ ಧರ್ಮವನ್ನೋ ಭಕ್ತಿಯನ್ನೋ ನೀತಿಯನ್ನೋ ಉಪದೇಶ ಮಾಡುವುದೇ ನಮ್ಮ ಕವಿಗಳ ಗುರಿಯಾಗಿತ್ತು ಎಂಬುದು ವಾಚಕರಿಗೆ ವೇದ್ಯವಾಗುತ್ತದೆ. ಆದಿಪುರಾಣದಲ್ಲಿ ಕಾವ್ಯ ಧರ್ಮವನ್ನೂ ಧರ್ಮವನ್ನೂ ಅರಿಯಬಹುದೆಂದು ಪಂಪ ಸಾರಿ ಹೇಳಿದ; ಮುಂದಿನ ಕವಿಗಳಿಗೆ ಮಾದರಿಯಾದ. ಕಾವ್ಯಗಳ ಪರಿಚಯ ಮಾಡಿಕೊಡುವಾಗ ಆಯಾ ಕೃತಿಯಲ್ಲಿ ಕಂಡುಬರುವ ಧಾರ್ಮಿಕ ವಿಷಯದ ಪ್ರಸ್ತಾಪ ಪ್ರಾಸಂಗಿಕವಾಗಿಯಾದರೂ ಬಂದಿರುತ್ತದೆ. ಇಲ್ಲಿ ಪ್ರಾತಿನಿಧಿಕವಾದ ಶಾಸ್ತ್ರ ಗ್ರಂಥಗಳನ್ನು ಬಲು ಸಂಕ್ಷೇಪವಾಗಿ ಪರಿಚಯ ಮಾಡಿಕೊಡಲಾಗುವುದು.

ಈ ಸಂಗತಿಗಳನ್ನೆಲ್ಲ ಸಮನ್ವಯ ಮಾಡಿ ಹೇಳಬಹುದಾದರೆ, ಆರ್ಯ ಸಂಸ್ಕೃತಿಗಿಂತಲೂ ಭಿನ್ನವಾದ ದ್ರಾವಿಡ ಶೈವಧರ್ಮೀಯ ಸಂಸ್ಕೃತಿ ದಕ್ಷಿಣಭಾರತದಲ್ಲಿಯೂ ಅದರ ಭಾಗವಾದ ಕರ್ನಾಟಕದಲ್ಲಿಯೂ ಬಹು ಪುರಾತನ ಕಾಲದಲ್ಲಿ ಇದ್ದೀತೆನೋ ಎಂಬ ಅನುಮಾನಕ್ಕೆ ಅವಕಾಶವಿಲ್ಲದೆ ಇಲ್ಲ. ಆದರೆ, ಕನ್ನಡ ನಾಡಿನಲ್ಲಿ ದೊರಕಿರುವ ಪ್ರಾಚೀನ ಶಾಸನಗಳ ಆಧಾರದ ಮೇಲೆ ಹೇಳುವುದಾದರೆ, ವೈದಿಕ–ಜೈನಧರ್ಮಗಳ ಪ್ರಸಾರ ಮಾತ್ರ ನಮಗೆ ಗೋಚರವಾಗುತ್ತದೆ. ನೃಪತುಂಗನ ಕಾಲದಲ್ಲಿ ವೈದಿಕಗಳಾದ ಶೈವ–ವೈಷ್ಣವ ಧರ್ಮಗಳೆರಡೂ ಪ್ರಚುರವಾಗಿದ್ದರೂ, ಆದಿ ಗ್ರಂಥವಾದ ಕವಿರಾಜಮಾರ್ಗದ ಮೇಲೆ ಬಿದ್ದಿರುವುದು 'ವೀರನಾರಾಯಣ'ನ ಮುದ್ರೆ!

ಕನ್ನಡ ನಾಡಿನಲ್ಲಿ ಬೌದ್ಧಮತೀಯನಾದ ಅಶೋಕ ಚಕ್ರವರ್ತಿಯ (ಕ್ರಿ.ಪೂ.೩ನೆಯ ಶತಮಾನ) ಶಾಸನಗಳು ಸಿಕ್ಕಿರುವುದರಿಂದ, ಇಲ್ಲಿ ಜೈನ ಧರ್ಮ ವಿಶೇಷವಾಗಿ ಪ್ರಚಾರಕ್ಕೆ ಬರುವ ಮುನ್ನ ಬೌದ್ಧ ಧರ್ಮ ಪ್ರಚಾರದಲ್ಲಿದ್ದಿತೆಂದು ತಿಳಿದುಬರುತ್ತದೆ. ಶಾತವಾಹನರೂ ಅವರ ತರುವಾಯ ರಾಜ್ಯವಾಳಿದ ಕದಂಬರೂ ವೈದಿಕ ಧರ್ಮವನ್ನು ಅವಲಂಬಿಸಿದ್ದರು. ಈ ಕಾಲದಲ್ಲಿ ಬೌದ್ಧ ಧರ್ಮದ ಪ್ರಾಬಲ್ಯ ಕುಗ್ಗಿ, ಕಾಲಕ್ರಮದಲ್ಲಿ ಹೇಳಹೆಸರಿಲ್ಲದಾಯಿತು. ಬೌದ್ಧರೂ ಕನ್ನಡದಲ್ಲಿ ಗ್ರಂಥಗಳನ್ನು ರಚಿಸಿರಬೇಕೆಂದೂ, ಅವರೇ ಕನ್ನಡದ ಆದಿ ಕವಿಗಳೆಂದೂ, ವೈದಿಕ ಧರ್ಮವು ಪ್ರಬಲವಾಗಿ ತಲೆಯೆತ್ತಿದಾಗ ಅವು ನಷ್ಟವಾಗಿರಬಹುದೆಂದೂ ದಿವಂಗತ ಟಿ.ಎಸ್. ವೆಂಕಣ್ಣಯ್ಯನವರು ಊಹೆ ಮಾಡಿದ್ದಾರೆ. ಅದು ನಿಜವಾದರೆ, ನಷ್ಟವಾಗಿರುವ ಗ್ರಂಥರಾಶಿಯಲ್ಲಿ ಕೆಲವಾದರೂ ಬೌದ್ಧ ಧರ್ಮವನ್ನು ಕುರಿತು ಕನ್ನಡದಲ್ಲಿ ರಚಿತವಾದ ಗ್ರಂಥಗಳಾಗಿದ್ದಿರಬಹುದು. ಈ ವಿಷಯದಲ್ಲಿ ನಿಶ್ಚಿತವಾಗಿ ಹೇಳಲು ಯಾವ ಪ್ರಮಾಣವೂ ಇಲ್ಲ.

'ಕನ್ನಡ ನಾಡಿನಲ್ಲಿ ಬೌದ್ಧ ಧರ್ಮವು ಕಣ್ಮರೆಯಾಗುವುದಕ್ಕೆ ರಾಜಾಶ್ರಯ ಪಡೆದ ಜೈನ ಧರ್ಮವೂ ಇಲ್ಲಿ ಬಲಗೊಂಡು, ದಿನದಿನಕ್ಕೆ ಏಳಿಗೆ ಹೊಂದುತ್ತಿದ್ದುದೂ ಒಂದು ಮುಖ್ಯ ಕಾರಣ.

ಅಖಂಡ ಭಾರತದಲ್ಲಿ ಮಾತ್ರವಲ್ಲದೆ ಕರ್ನಾಟಕದಲ್ಲಿಯೂ ವೈದಿಕ ಧರ್ಮ ಬಹಳ ಪ್ರಾಚೀನ ಕಾಲದಿಂದಲೂ ನೆಲೆ ನಿಂತಿದ್ದ ಧರ್ಮವಾಗಿದ್ದರೂ, ಹತ್ತನೆಯ ಶತಮಾನಕ್ಕೆ ಪೂರ್ವದಲ್ಲಿ ವೈದಿಕ ಧರ್ಮದವರು ಕನ್ನಡ ಗ್ರಂಥಗಳನ್ನು ರಚಿಸಿರುವುದು ತಿಳಿದುಬಂದಿಲ್ಲ. ವೈದಿಕ ಧರ್ಮ ಗ್ರಂಥಗಳೆಲ್ಲವೂ ಪ್ರಾಯಶಃ ಸಂಸ್ಕೃತದಲ್ಲಿಯೆ ರಚಿತವಾದವು. ನೆಲೆನಿಂತ ಧರ್ಮವನ್ನು ಪ್ರಚಾರ ಮಾಡಬೇಕಾದ

ಮುದ್ರೆ ಬಿದ್ದಿದೆ.

೨೪ ಮಂದಿ ತೀರ್ಥಂಕರರ ಪುರಾಣಗಳನ್ನು ಒಳಗೊಂಡ 'ಮಹಾಪುರಾಣ'ದಲ್ಲಿ ಪೂರ್ವ ಪುರಾಣವನ್ನು ನೃಪತುಂಗನ ಕಾಲದಲ್ಲಿನ ಜಿನಸೇನಾಚಾರ್ಯನು ಪದ್ಯಕಾವ್ಯ ರೂಪದಲ್ಲಿ ರಚಿಸಿದನು; ತರುವಾಯ ಗುಣಭದ್ರನು ಉತ್ತರ ಪುರಾಣವನ್ನು ರಚಿಸಿದನು. ಅವನು ತನ್ನ ಉತ್ತರ ಪುರಾಣದಲ್ಲಿ ಜಿನಸೇನನು ತನ್ನ ಕೃತಿಯನ್ನು ಕವಿ ಪರಮೇಷ್ಠಿ ಹಿಂದೆ ರಚಿಸಿದ್ದ 'ಗದ್ಯಕಥೆ'ಯನ್ನು ಆದರಿಸಿ ಬರೆದನೆಂದು ಹೇಳಿದ್ದಾನೆ. ಕವಿರಾಜಮಾರ್ಗದಲ್ಲಿ ಗದ್ಯ ಪದ್ಯ ಸಂಮಿಶ್ರವಾದ ಗದ್ಯಕಥೆ ಎಂಬ ಕನ್ನಡ ಕಾವ್ಯ ಪ್ರಕಾರವನ್ನು ಚಚಿರಂತನಾಚಾರ್ಯರು ನಿಗದಿಸುತ್ತಿದ್ದರು ಎಂಬ ಮಾತು ಬರುತ್ತದೆ. ಕವಿ ಪರಮೇಷ್ಠಿಯ ಗದ್ಯ ಕಥೆ (ತ್ರಿಷಷ್ಠಿ ಶಲಾಕಾಪುರುಷ ಪುರಾಣ) ಸಂಸ್ಕೃತದಲ್ಲಿಯೇ ಇದ್ದಿರಬೇಕು; ಕನ್ನಡದಲ್ಲಿದ್ದಿರಬಹುದೇ ಎಂದು ಅನುಮಾನ ಪಡಲು ಅವಕಾಶವಿದೆ. ಈ ಗದ್ಯಕಥೆ ಜಿನಸೇನನಿಗೆ ಆಧಾರ ಗ್ರಂಥವಾಗಿಯೂ, ಚಾವುಂಡರಾಯ ಪುರಾಣಕ್ಕೆ ಸ್ಫೂರ್ತಿ ನೀಡಿದ ಗ್ರಂಥವಾಗಿಯೂ ಇರುವುದರಿಂದ ಅತ್ಯಂತ ಗಮನಾರ್ಹವಾಗಿದೆ.

ಸಂಸ್ಕೃತದಲ್ಲಿ ಕನ್ನಡ ವ್ಯಾಕರಣವನ್ನು ಬರೆದ ಭಟ್ಟಾಕಳಂಕನು (ಕ್ರಿ.ಶ. ೧೬೦೪) ತನ್ನ ಶಬ್ದಾನುಶಾಸನದಲ್ಲಿ ಕರ್ಣಾಟಕ ಭಾಷೆಯ ಪ್ರಾಶಸ್ತ್ಯವನ್ನು ಹೇಳುವಾಗ – ಈ ಕರ್ಣಾಟಕ ಭಾಷೆ ಶಾಸ್ತ್ರಕ್ಕೆ ಅನುಪಯುಕ್ತವಾದುದಲ್ಲ; ಏಕೆಂದರೆ ಈ ಭಾಷೆಯಲ್ಲಿಯೇ ತೊಂಬತ್ತಾರು ಸಾವಿರ ಗ್ರಂಥ ಸಂಖ್ಯೆಯುಳ್ಳ ಚೂಡಾಮಣಿಯೆಂಬ ತತ್ತ್ವಾರ್ಥ ಮಹಾಶಾಸ್ತ್ರ ವ್ಯಾಖ್ಯಾನವು ದೊರೆಯುತ್ತದೆ. ಎಂದು ಬರೆದಿದ್ದಾನೆ. ದೇವಚಂದ್ರನ (ಕ್ರಿ.ಶ.೧೭೬೦) ಹೇಳಿಕೆಯಿಂದ ಈ ಶಾಸ್ತ್ರ ವ್ಯಾಖ್ಯಾನ ಗ್ರಂಥವು ಕನ್ನಡದಲ್ಲಿದ್ದುದಾಗಿಯೂ ಅದನ್ನು ಬರೆದವನು ತುಂಬುಲೂರಿನಲ್ಲಿ ಹುಟ್ಟಿದ ತುಂಬುಲೂರು ನಾಮಚಾರ್ಯನೆಂದೂ ತಿಳಿದು ಬರುತ್ತದೆ. ಈತನ ಕಾಲ ಸು.೬೫೦ ಚೂಡಾಮಣಿಯಂಥ ಒಂದು ಬಹು ದೊಡ್ಡ ಶಾಸ್ತ್ರಗ್ರಂಥ ನಷ್ಟವಾಗಿರುವುದು ದುರ್ದೈವದ ಸಂಗತಿ.

ಚಾವುಂಡರಾಯನ ಹೆಸರು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ತುಂಬ ಪ್ರಸಿದ್ಧವಾದುದು. ಇವನು ಶ್ರವಣಬೆಳ್ಗೊಳದ ಜಗತ್ಪ್ರಸಿದ್ಧವಾದ ಗೋಮಟೇಶ್ವರ ಏಕಕಲಾ ಮೂರ್ತಿಯನ್ನು ನಿಲ್ಲಿಸಿದ ಮಹಾನುಭಾವ; ಗಂಗ ವಂಶದ ದೊರೆ (೯೭೪–೯೮೪) ರಾಚಮಲ್ಲನ ಸೇನಾನಾಯಕ ಮತ್ತು ಮಂತ್ರಿ; ಕವಿ ರನ್ನನಿಗೆ ಆಶ್ರಯದಾತ; ಮಹಾದಾನಿ; ಗುರು ನೇಮಿಚಂದ್ರನ 'ಗೊಮ್ಮಟಸಾರ'ಕ್ಕೆ 'ವೀರಮಾರ್ತಾಂಡ' ಎಂಬ ವೃತ್ತಿ (ವಿವರಣೆ)ಯನ್ನು ಬರೆದಿದ್ದಾನೆ. ಇವನ

ಕವಿಚರಿತೆಕಾರರಾದ ಆರ್.ನರಸಿಂಹಾಚಾರ್ಯರು ಸಾಹಿತ್ಯ ಚರಿತ್ರೆಯನ್ನು ಜೈನರ ಯುಗ, ವೀರಶೈವ ಯುಗ, ಬ್ರಾಹ್ಮಣ ಯುಗ ಎಂದು ವಿಭಾಗ ಮಾಡಿರುವುದು ಕೆಲವು ವಿದ್ವಾಂಸರಿಗೆ ಒಪ್ಪಿಗೆಯಾಗದಿದ್ದರೂ, ಈ ಅಧ್ಯಾಯದ ವಿಷಯ ನಿರೂಪಣೆಯಲ್ಲಿ ಆ ವಿಭಾಗ ಕ್ರಮವನ್ನು ಅನುಸರಿಸುವುದು ಉಚಿತವಾಗಿದೆ; ಅನಿವಾರ್ಯವೂ ಆಗಿದೆ.

ಹೀಗೆ, ಕಾವ್ಯ, ಕಾವ್ಯಶಾಸ್ತ್ರ, ಮತಧರ್ಮ ಶಾಸ್ತ್ರ, ಲೌಕಿಕ ಶಾಸ್ತ್ರ – ಈ ಎಲ್ಲ ಬಗೆಯ ಗ್ರಂಥಗಳ ರಚನೆಗೂ ಜೈನರೇ ಶ್ರೀಕಾರ ಹಾಕಿದವರು. ಕಾವ್ಯಶಾಸ್ತ್ರ ಮುಂತಾದ ಗ್ರಂಥ ವಿಭಾಗಗಳಲ್ಲಿ 'ಜೈನರು ಮಾಡಿರುವ ಕೆಲಸವನ್ನು ಆಯಾ ಪ್ರಕರಣದಲ್ಲಿ ಗಮನಿಸಿದೆ. ಜೈನರು ರಚಿಸಿರುವ ಧಾರ್ಮಿಕ ಶಾಸ್ತ್ರ ಗ್ರಂಥಗಳನ್ನು ಮೊದಲು ಪರಿಚಯ ಮಾಡಿ ಕೊಡಲಾಗುವುದು.

**ಜೈನ ಮತ ಗ್ರಂಥಗಳು**

ಕನ್ನಡದಲ್ಲಿ ಗ್ರಂಥ ರಚನೆ ಮಾಡಿರುವ ಮುಖ್ಯ ಜೈನ ಕವಿಗಳೆಲ್ಲರೂ ಸಮಂತಭದ್ರ (ಸು.ಕ್ರಿ.ಶ. ೪೦೦). ಕವಿಪರಮೇಷ್ಠಿ (ಸು. ೫೫೦), ಪೂಜ್ಯಪಾದ (ಸು.೬೦೦) ಎಂಬ ಮೂವರು ಜೈನ ಕವಿಗಳನ್ನು ಹೊಗಳಿದ್ದಾರೆ. ಉದಾಹರಣೆಗೆ, ಪಂಪನು ತನ್ನ 'ಆದಿ ಪುರಾಣ'ದಲ್ಲಿ–

ಶ್ರೀಮತ್ ಸಮಂತಭದ್ರ
ಸ್ವಾಮಿಗಳ, ಜಗತ್‌ಪ್ರಸಿದ್ಧ ಕವಿ ಪರಮೇಷ್ಠಿ
ಸ್ವಾಮಿಗಳ, ಪೂಜ್ಯಪಾದ
ಸ್ವಾಮಿಗಳ ಪದಂಗಳೀಗೆ ಶಾಶ್ವತಪದಮಂ

–ಎಂದು ಸ್ತೋತ್ರ ಮಾಡಿದ್ದಾನೆ. ಸಮಂತಭದ್ರನ ಸಂಸ್ಕೃತ ಪ್ರಾಕೃತ ಗ್ರಂಥಗಳಿಗೆ ಹಳಗನ್ನಡದಲ್ಲಿ ವ್ಯಾಖ್ಯಾನಗಳು ರಚಿತವಾಗಿವೆ. ಈತನು ಕನ್ನಡದಲ್ಲಿ ಗ್ರಂಥ ರಚನೆ ಮಾಡಿರುವುದು ತಿಳಿದು ಬಂದಿಲ್ಲ. ಕವಿ ಪರಮೇಷ್ಠಿ ತ್ರಿಷಷ್ಟಿ (೬೩) ಶಲಾಕಾಪುರುಷ ಪುರಾಣವನ್ನೂ ಮತ್ತು ಕಲ್ಯಾಣಕಾರಕ ಎಂಬ ವೈದ್ಯ ಗ್ರಂಥವನ್ನೂ, ಪೂಜ್ಯಪಾದನು ಜೈನೇಂದ್ರ ವ್ಯಾಕಾರಣವನ್ನೂ ಬರೆದಿದ್ದಾರೆ. ಇವರು ಕೂಡಾ ಕನ್ನಡದಲ್ಲಿ ಗ್ರಂಥರಚನೆ ಮಾಡಿದಂತೆ ತಿಳಿದು ಬಂದಿಲ್ಲ. ಆದರೆ, ಆಮೇಲಿನ ಜೈನ ಧಾರ್ಮಿಕ ಸಾಹಿತ್ಯದ ಮೇಲೆ ಈ ಮೂವರ ಪ್ರಭಾವ

ಕಾಲದ ಈ ಅವಧಿಯಲ್ಲಿ ಜೈನಾಗಮವನ್ನು ಶಾಸ್ತ್ರಪದ್ಧತಿಯಲ್ಲಿ ವಿವರಿಸುವ ಅಗತ್ಯ ಕಂಡು ಬರಲಿಲ್ಲವೆಂದು ಕಾಣುತ್ತದೆ. ವೀರಶೈವರು ತಮ್ಮ ಮತಧರ್ಮವನ್ನು ೧೪–೧೫ನೆಯ ಶತಮಾನಗಳಲ್ಲಿ ವಿವರಿಸತೊಡಗಿದಾಗ, ಈ ಕಾರ್ಯಕ್ರಮಕ್ಕೆ ಪ್ರತಿಕ್ರಿಯೆಯಾಗಿಯೋ ಅಥವಾ ಪೈಪೋಟಿಯಾಗಿಯೋ ಎಂಬಂತೆ ಜೈನರು ತಮ್ಮ ಶಾಸ್ತ್ರವನ್ನು ಜನತೆಯ ತಿಳಿವಳಿಕೆಗಾಗಿ ವಿವರಿಸತೊಡಗಿದಂತೆ ಕಾಣುತ್ತದೆ. ಕಥೆಗಳ, ಪುರಾಣಗಳ, ಮೂಲಕ ಧರ್ಮಪ್ರಸಾರಕಾರ್ಯ ಮುಂದುವರಿದೇ ಇತ್ತು. ಎಲ್ಲ ಮತಧರ್ಮಗಳ ಪ್ರಚಾರ ಕಾರ್ಯದಲ್ಲಿಯೂ 'ಪ್ರಭುಸಂಮಿತ' (ಶಾಸ್ತ್ರರಚನೆ), 'ಮಿತ್ರಸಂಮಿತ' (ಪುರಾಣ, ಕಥೆ) 'ಕಾಂತಾಸಂಮಿತ' (ಕಾವ್ಯ) – ಈ ಮೂರು ವಿಧಾನಗಳನ್ನೂ ಬಳಸಿಕೊಳ್ಳುವುದನ್ನು ಕಾಣುತ್ತೇವೆ. ಒಂದೊಂದು ಕಾಲದಲ್ಲಿ ಒಂದೊಂದಕ್ಕೆ ಪ್ರಾಧಾನ್ಯ. ೧೪ನೆಯ ಶತಮಾನದಲ್ಲಿ ಮತ್ತು ಆ ತರುವಾಯ ಜೈನಧರ್ಮ ಶಾಸ್ತ್ರಗ್ರಂಥ ರಚನೆ ವಿಶೇಷವಾಗಿ ನಡೆಯಿತು.

ರತ್ನಕರಂಡಕ ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರ – ಇವು ಜೈನಧರ್ಮದಲ್ಲಿ ಮೋಕ್ಷ ಸಾಧಕಗಳು. ಇವು 'ರತ್ನತ್ರಯ' ಎಂದು ಪ್ರಸಿದ್ಧವಾಗಿವೆ. ಆಯತವರ್ಮನೆಂಬ ಜೈನಕವಿ (ಸು. ೧೪೦೦) ತನ್ನ 'ಕನ್ನಡ ರತ್ನಕರಂಡಕ' ಎಂಬ ಚಂಪೂಕೃತಿಯಲ್ಲಿ ಈ ರತ್ನತ್ರಯವನ್ನು ವರ್ಣಿಸಿದ್ದಾನೆ. ಇದರ ಸಂಕ್ಷಿಪ್ತ ನಿರೂಪಣೆ ಹೀಗಿದೆ:

ತತ್ತ್ವದ ರುಚಿ ಸಮ್ಯಕ್ತ್ವಂ, ತತ್ತ್ವಂಗಳಂ ಒಳ್ಳಿತಾಗಿ ಅರಿವುದು ಬೋಧಂ।
ತತ್ತ್ವಂ ತನ್ನೊಳ್ ನೆರೆದಿರೆ, ಸತ್ತ್ವಂಗಳಂ ಓವಿ ಕಾವುದು ಅದುವೆ ಚರಿತ್ರಂ॥

ಎಲ್ಲ ಧರ್ಮಗಳಲ್ಲಿ ಇರುವಂತೆ – ಅಥವಾ, ಇರುವುದಕ್ಕಿಂತ ಹೆಚ್ಚಾಗಿ ಎಂದರೂ ಸಲ್ಲುವುದು – ಜೈನಧರ್ಮದಲ್ಲೂ ವೈರಾಗ್ಯಕ್ಕೆ ಪ್ರಾಧಾನ್ಯ. ವೈರಾಗ್ಯವುಂಟಾಗದಿದ್ದರೆ ಮೋಕ್ಷದ ಕಡೆಗೆ ಮನಸ್ಸು ತಿರುಗುವುದೂ ಇಲ್ಲ. ಇತರ ಜೈನ ಕವಿಗಳು ಬಳಸಿರುವ ಉಪಮಾನಗಳನ್ನೇ ಬಳಸಿಕೊಂಡು, ಈ ಕವಿ ವೈರಾಗ್ಯದ ತಿರುಳಾದ ಸಂಸಾರದ ನಿಸ್ಸಾರತೆಯನ್ನು ನಶ್ವರತೆಯನ್ನೂ ಹೀಗೆ ವರ್ಣಿಸಿದ್ದಾನೆ:

ಜಳಬುದ್ಬುದದಿಂ ಕ್ಷಣಿಕಂ, ಜಳಧರ ನಿವಹಂಗಳಿಂದಂ ಅಧ್ರುವಂ, ಉಳ್ಕಂ।
ಗಳ ರಂಜನೆಯಂತೆ ಅಚಿರಂ, ಬಳಸಿದ ಬಂಧುಗಳುಂ ಒಡಲುಂ ಒಡವೆಯಂ ಎಂತುಂ॥

[ಜಳಬುದ್ಬುದ=ನೀರಿನ ಗುಳ್ಳೆ; ಜಳಧರನಿವಹ=ಮೋಡಗಳ ಗುಂಪು;

ಪ್ರಸಿದ್ಧವಾದ ಗ್ರಂಥ 'ತ್ರಿಷಷ್ಟಿಲಕ್ಷಣ ಮಹಾಪುರಾಣ' ಅಥವಾ 'ಚಾವುಂಡರಾಯನ ಪುರಾಣ'. ಜೈನ ಧರ್ಮದ ಮಹಾಪುರುಷರಾದ ೬೩ ಮಂದಿಯಲ್ಲಿ ೨೪ ಮಂದಿ ತೀರ್ಥಂಕರರು. ಇವರ ಚರಿತ್ರೆಯ ಕೃತಿಯ ಮುಖ್ಯವಸ್ತು.* ಇವರೊಂದಿಗೆ – ೧೨ ಜನ ಚಕ್ರವರ್ತಿಗಳು, ೯ ಜನ ನಾರಾಯಣರು, ೯ ಜನ ಪ್ರತಿನಾರಾಯಣರು, ೯ ಜನ ಬಲಭದ್ರರು ಸೇರಿ ೬೩ (ತ್ರಿಷಷ್ಠಿ) ಜನ. ಇವರ ವಿವರಪೂರ್ಣ ವರ್ಣನೆಯುಳ್ಳ ಗ್ರಂಥವನ್ನು 'ಪ್ರಥಮಾನುಯೋಗ ಶಾಸ್ತ್ರ' ಎಂದು ನಿರ್ದೇಶಿಸಲಾಗಿದೆ. ತೀರ್ಥಂಕರ ಜನ್ಮಜನ್ಮಾಂತರ ಕಥೆಗಳಿಗೆ ಹಾಸುಹೊಕ್ಕಾಗಿ ಹೊಂದಿಕೊಂಡಂತೆ ಜೈನಧರ್ಮದ ಮುಖ್ಯತತ್ವಗಳ ನಿರೂಪಣೆ ಇರುವುದರಿಂದ ಚಾವುಂಡರಾಯ ಪುರಾಣವನ್ನು ಜೈನಧರ್ಮದ ಕೈಪಿಡಿ ಎನ್ನಬಹುದು. ಕನ್ನಡದಲ್ಲಿ ತ್ರಿಷಷ್ಟಿ. ಶಲಾಕಾಪುರುಷರನ್ನು ಕುರಿತ ಮೊದಲ ಗ್ರಂಥವಾಗಿ ಇರುವುದಲ್ಲದೆ, ಈಗ ದೊರೆತಿರುವ ಹಳಗನ್ನಡ ಗದ್ಯಗ್ರಂಥಗಳಲ್ಲಿ ಇದೇ ಮೊದಲನೆಯದು. (ಇದರ ರಚನೆಯ ಕಾಲ ಕ್ರಿಶ.೯೭೮). ಕನ್ನಡ ಗದ್ಯ ಶೈಲಿಯ ಬೆಳವಣಿಗೆಯಲ್ಲಿನ ಆರಂಭಾವಸ್ಥೆಯನ್ನು ಕನ್ನಡಿಸುವ ಈ ಕೃತಿಗೆ ಭಾಷಾ ದೃಷ್ಟಿಯಿಂದಲೂ ಒಂದು ಮುಖ್ಯಸ್ಥಾನವಿದೆ. 'ಲೋಕೋಪಕಾರ'ವೆಂಬ ಶಾಸ್ತ್ರ ಗ್ರಂಥವನ್ನು ಬರೆದವನ ಹೆಸರೂ ಚಾವುಂಡರಾಯನೆಂದಿರುವುದರಿಂದ, ಇವನನ್ನು ಒಂದನೆಯ ಚಾವುಂಡರಾಯ ಎಂದು ಕರೆಯಬಹುದು.

ಪಂಪ, ರನ್ನ, ಪೊನ್ನ, ಜನ್ನ, ಶಿವಕೋಟಿ ಮುಂತಾದ ಕವಿಗಳು ತಮ್ಮ ಕಾವ್ಯಗಳ ಮೂಲಕ ಜೈನ ಧರ್ಮವನ್ನು ಬಹಳ ಚೆನ್ನಾಗಿಯೇ ಪ್ರತಿಪಾದನೆ ಮಾಡಿದರು. ಬಹುಶಃ ಈ ಕಾರಣದಿಂದಲೇ ಇರಬಹುದು, ೨–೩ ಶತಮಾನಗಳ

---

* ಎಲ್ಲ ಬಗೆಯ ಕರ್ಮಗಳನ್ನೂ, ಅವುಗಳ ಫಲರೂಪವಾದ ಸಂಸಾರ ಬಂಧನವನ್ನೂ ಗೆದ್ದವನು 'ಜಿನ' ಎನಿಸಿಕೊಳ್ಳುವನು. ಇವನು ಜೀವನ್ಮುಕ್ತ. ಅಂದರೆ ಜೀವಂತವಾಗಿರುವಾಗಲೇ ಮೋಕ್ಷವನ್ನು ಪಡೆದವನು. ಇವನು ಸರ್ವಜ್ಞ ಅಥವಾ ಕೇವಲಿ. ಸರ್ವಜ್ಞತ್ವವನ್ನು (ಪೂರ್ಣಜ್ಞಾನ) ಕೇವಲಜ್ಞಾನ ಎಂದೂ ಕರೆಯಲಾಗಿದೆ. ಜೀವನ್ಮುಕ್ತರಾದ ಕೇವಲಿಗಳಲ್ಲಿ ಸಾಮಾನ್ಯ ಕೇವಲಿ, ತೀರ್ಥಂಕರ ಕೇವಲಿ ಎಂದು ಎರಡು ವರ್ಗ. ಸಾಮಾನ್ಯ ಕೇವಲಿಗಳು ತಮ್ಮ ಮುಕ್ತಿಯನ್ನು ಮಾತ್ರ ಸಾಧಿಸುವರು; ತೀರ್ಥಂಕರ ಕೇವಲಿಗಳು ಸಂಸಾರಿಗಳಾದ ಇತರರ ಜೀವರಿಗೂ ಮುಕ್ತಿ ಮಾರ್ಗವನ್ನು ತೋರಿಸಿಕೊಡುವರು. ತೀರ್ಥಂಕರನನ್ನು ಅರ್ಹಂತರೆಂದೂ ಹೇಳಲಾಗುವುದು; ಪರಮೇಷ್ಠಿ. ವೀತರಾಗ ಎಂಬವು ಇನ್ನೆರಡು ಹೆಸರುಗಳು. ಇವರು ಜಗತ್ತನ್ನು ಉದ್ಧಾರ ಮಾಡುವ ಧರ್ಮತೀರ್ಥವನ್ನು ನಿರ್ಮಾಣ ಮಾಡತಕ್ಕವರು, ಅಥವಾ ಸಂಸಾರಿಗಳನ್ನು ಸಂಸಾರಸಾಗರದಿಂದ ದಾಟಿಸತಕ್ಕವರು. ಇವರು ಇಪ್ಪತ್ತು ನಾಲ್ಕು ಮಂದಿ. ಋಷಭದೇವನು ಆದಿ ತೀರ್ಥಂಕರ; ವರ್ಧಮಾನ ಮಹಾವೀರನು ಇಪ್ಪತ್ತನಾಲ್ಕನೆಯವನು.

(೪)ಏಕತ್ವಭಾವನೆ – ತಾನು ಒಂಟಿ, ತನ್ನ ಇಹಪರ ಜೀವನಕ್ಕೆ ತಾನೊಬ್ಬನೇ ಹೊಣೆ, ಎಂದು ತನ್ನ ಒಂಟಿತನವನ್ನು ಕುರಿತು ಚಿಂತಿಸುವುದು;

(೫)ಅನ್ಯತ್ವ ಭಾವನೆ–ತಾನು ಬೇರೆ, ದೇಹ ಧನ ಬಂಧು ವರ್ಗವೇ ಬೇರೆ ಎಂದು ಭಾವಿಸುವುದು;

(೬)ಶರೀರ ಅಶುಚಿ ಎಂಬ ಅಶೌಚ ಭಾವನೆ;

(೭)ಆಸ್ರವ ಭಾವನೆ – ಪುಣ್ಯ ಪಾಪಗಳು ತನ್ನೊಳಗೆ ಹರಿದು ಬಂದು ಬಂಧನವಾಗುವುದು ಎಂಬ ಎಣಿಕೆ;

(೮)ಸಂವರ ಭಾವನೆ–ಕರ್ಮದ ಒಳಹರಿವನ್ನು ತಡೆಯುವ ಬಗೆಯನ್ನು ಕುರಿತು ಯೋಚಿಸುವುದು;

(೯)ನಿರ್ಜರಾಭಾವನೆ–ಜೀವಕ್ಕೆ ಅಂಟಿಕೊಂಡ ಕರ್ಮವನ್ನು ಕ್ಷಯಿಸುವಂತೆ ಮಾಡುವ ಬಗೆಗೆ ಚಿಂತನೆ;

(೧೦)ಲೋಕ ಭಾವನೆ – ಲೋಕ, ಅದರಲ್ಲಿನ ಷಟ್ ದ್ರವ್ಯಗಳು (ಜೀವ, ಅಜೀವ, ಧರ್ಮ, ಅಧರ್ಮ, ಆಕಾಶ, ಕಾಲ), ಸ್ಥಿರ; ಇವಕ್ಕೆ ಸೃಷ್ಟಿಕರ್ತ ಇಲ್ಲ ಎಂಬ ಲೋಕ ಸ್ವರೂಪ ಭಾವನೆ;

(೧೧)ಬೋಧಿ ದುರ್ಲಭತ್ವ ಭಾವನೆ – 'ರತ್ನತ್ರಯ' ಸಂಪಾದನೆ ಅತಿ ಕಷ್ಟ ಸಾಧ್ಯ ಎಂಬ ಭಾವನೆ;

(೧೨)ಧರ್ಮಭಾವನೆ – ಜಿನ ಮಾರ್ಗದಲ್ಲಿ ನಡೆದು ಮುಕ್ತಿ ಪಡೆಯುವುದೆ ಪರಮಧರ್ಮ ಎಂಬ ಭಾವನೆ.

ಮೇಲೆ ವಿವರಿಸಿರುವ ಅನುಪ್ರೇಕ್ಷೆಗಳ ವಿಷಯವಾಗಿ ಕಲ್ಯಾಣಕೀರ್ತಿ (೧೪೩೯) ೭೪ ಪದ್ಯಗಳ 'ಅನುಪ್ರೇಕ್ಷೆ' ಎಂಬ ಗ್ರಂಥವನ್ನೂ, ವಿಜಯಣ್ಣನು (೧೪೪೮) 'ದ್ವಾದಶಾನುಪ್ರೇಕ್ಷೆ' ಎಂಬ ಗ್ರಂಥವನ್ನೂ ಬರೆದಿದ್ದಾರೆ. 'ಅನುಪ್ರೇಕ್ಷೆ' ಯಿಂದ ಒಂದು ಪದ್ಯ:

ವಿಲಸದಿಂದ್ರಿಯ ಪಾಟವಂ। ನೆಲಸಿದಂಗದ ಸೌಷ್ಠವಂ
ತೊಳಪ ಮಿಂಚಿನ ರೀತಿಯಿಂ। ತೊಲಗಿಹೋಹುದು ಜೀವನೇ

ವಿಜಯಣ್ಣನ ಗ್ರಂಥ ಸಾಮಗತ್ಯದ ಮಟ್ಟಿನಲ್ಲಿ ಬರೆದಿದೆ. ನಡುನಡುವೆ ವೃತ್ತಗಳೂ ಕಂದಗಳೂ ಉಂಟು.

'ಅನ್ಯತ್ವಾನುಪ್ರೇಕ್ಷೆ'ಯ (ಕೆಳಗಿನ) ಎರಡು ಪದ್ಯಗಳಿಂದ, ಮೇಲೆ ಕೊಟ್ಟಿರುವಂತೆ ಶಾಸ್ತ್ರವಿಷಯಗಳ ಪಟ್ಟಿಗೂ ಕವಿಯ ಬರವಣಿಗೆಗೂ ಇರುವ ವ್ಯತ್ಯಾಸವನ್ನು ಕಾಣಬಹುದು:

ಉಳ್ಕ=ಉಲ್ಕೆ, ಪೊರಕೆ ನಕ್ಷತ್ರ (ಧೂಮ ಕೇತು); ಅಚಿರ=ಕ್ಷಣಿಕ; ಬಳಸಿದ=ಸುತ್ತಲೂ ಇರುವ]

ಸಂಸಾರ (ಎಂದರೆ ಜನ್ಮ ಜನ್ಮಾಂತರ) ಕಾರಣಗಳು:

ಸಂಸಾರ ಕಾರಣಂಗಳ್–ಹಿಂಸಾರುಚಿ, ಕಳವು, ಪುಸಿ ಪರಸ್ತ್ರೀಗಮನಂ।
ಮಾಂಸಮಧು ಮದ್ಯಸೇವನಿ–ಸಂಶಯಮೇಂ, ದುಃಖಕಾರಣಂಗಳ್ ಇವು ಇನಿತುಂ॥

**ಪರಮಾಗಮಸಾರ**: ಇದೇ ಕಾಲದಲ್ಲಿದ್ದ ಚಂದ್ರಕೀರ್ತಿ ಎಂಬವನು ೧೩೨ ಕಂದವೃತ್ತ ಪದ್ಯಗಳಿಂದ ಕೂಡಿರುವ ಪರಮಾಗಮಸಾರ' ಎಂಬ ಗ್ರಂಥದಲ್ಲಿ ಆತ್ಮ ಸ್ವರೂಪ, ವೈರಾಗ್ಯ, ಮುಂತಾದ ವಿಷಯಗಳನ್ನು ನಿರೂಪಿಸಿದ್ದಾನೆ.

**ಶುದ್ಧಾತ್ಮನ ಸ್ವರೂಪ**

ನೀರೊಳಗೆ ಪುಟ್ಟಿ ಪದ್ಮಂ ನೀರೊಳ್ ತಾಂ ಮುಟ್ಟದಂತೆ, ನಿಜ ಶುದ್ಧಾತ್ಮಂ।
ಸಾರಂ ಅಣಂ ಅಲ್ಲದ ಈ ಸಂಸಾರದೊಳ್ ಒಂದಿರ್ದುಂ ಒಂದಂ– ಅಮಳಂ, ಅಮೂರ್ತಂ॥

[ಅಣಂ=ಸ್ವಲ್ಪವೂ; ಒಂದು=ಸೇರಿಕೊಂಡಿರು; ಅಮಳಂ=ಪರಿಶುದ್ಧ; ಅಮೂರ್ತ=ನಿರಾಕಾರ.]

ದ್ವಾದಶಾನುಪ್ರೇಕ್ಷೆ: 'ಪ್ರೇಕ್ಷೆ' ಎಂದರೆ 'ಕಾಣುವುದು', 'ಅನುಪ್ರೇಕ್ಷೆ' ಎಂಬ ಪಾರಿಭಾಷಿಕ ಪದಕ್ಕೆ 'ಕಂಡುಕೊಳ್ಳುವುದು', 'ಭಾವನೆ', 'ಚಿಂತನೆ' ಎಂದು ಅರ್ಥ. ಅನುಪ್ರೇಕ್ಷೆಗಳು ೧೨:

(೧)ಅನಿತ್ಯತ್ವ (ಎಲ್ಲವೂ ನಶ್ವರ ಎಂಬ) ಭಾವನೆ;

(೨)ಅಶರಣತ್ವ (ಹುಟ್ಟು ಸಾವುಗಳಿಗೆ ಹೆದರಿ ಮೊರೆಹೋಗಲು ಎಡೆಯಿಲ್ಲ ಎಂಬ) ಭಾವನೆ;

(೩)ಸಂಸಾರ ಭಾವನೆ–ಕರ್ಮದ ಬಂಧನಕ್ಕೆ ಒಳಗಾದ, ಚತುರ್ಗತಿ ರೂಪವಾದ, ಸಂಸಾರದ ಸ್ವರೂಪವನ್ನು ಭಾವಿಸುವುದು;

ಈ ಗ್ರಂಥಗಳನ್ನು ಅನುಸರಿಸಿ ಬರೆದವನಲ್ಲ. ಶೈವಸಿದ್ಧಾಂತದ ಒಂದು ಶಾಖೆಯಲ್ಲಿ ಪ್ರಚಲಿತವಿದ್ದ ಆ ಷಟ್‌ಸ್ಥಲ ಸಿದ್ಧಾಂತವನ್ನು ಸಂಸ್ಕೃತ ಗ್ರಂಥಗಳ ರೂಪದಲ್ಲಿ ನಿರೂಪಿಸಿದಂತೆ, ವಚನಕಾರರು ತಮ್ಮ ಸಾಧನಾ ಕ್ರಮದಲ್ಲಿ ಅವುಗಳನ್ನು ಅಳವಡಿಸಿಕೊಂಡು, ಅನುಭವಸಿದ್ಧವಾದ ಸಿದ್ಧಾಂತಗಾಳಾಗಿ ಪ್ರತಿಪಾದಿಸಿದರು. ಕನ್ನಡ ನಾಡಿನಲ್ಲಿ ಕ್ರಿ.ಶ.೧೧–೧೨ನೆಯ ಶತಮಾನಗಳಲ್ಲಿ ದುರಾಚಾರಕ್ಕೂ ದುಷ್ಟಪದ್ಧತಿಗಳಿಗೂ ಜೋತುಬಿದ್ದು ಸಮಾಜವನ್ನು ಪಾಪಕೂಪದಲ್ಲಿ ಕೆಡವಿದ್ದ 'ಕಾಳಾಮುಖ'ವೇ ಮುಂತಾದ ಶೈವಪಂಥಗಳ ಮೇಲೆ ಉಗ್ರ ಕದನವನ್ನು ಹೂಡಿ, ಸಮಾಜವನ್ನು ಉದ್ಧಾರಮಾಡಿ, ಧರ್ಮರಕ್ಷಣೆ ಮಾಡಿದ ಶ್ರೇಯಸ್ಸು ವಚನಕಾರರಾದ ಶಿವಶರಣರಿಗೆ – ಮುಖ್ಯವಾಗಿ ಬಸವ, ಚೆನ್ನಬಸವ, ಅಲ್ಲಮಪ್ರಭು, ಇವರಿಗೆ – ಸಲ್ಲತಕ್ಕದ್ದು. ಬಸವೇಶ್ವರರು ಸ್ಥಾಪಿಸಿದ ಅನುಭವ ಮಂಟಪದಲ್ಲಿ ರೂಪುಗೊಂಡು, ಕಾಲಕ್ರಮದಲ್ಲಿ ಅವ್ಯವಸ್ಥಿತವಾಗಿ ಚೆದರಿ ಹೋಗಿದ್ದ, ವಚನ ವಾಙ್ಮಯರಾಶಿಯನ್ನು ಜೀರ್ಣೋದ್ಧಾರ ಮಾಡಿದ ಶ್ರೇಯಸ್ಸು ವಚನಗಳ ಸಂಕಲನಕಾರರಿಗೆ ಸೇರಿದ್ದು. ಈ ಕಾರ್ಯ ೧೫ನೆಯ ಶತವಮಾನದಲ್ಲಿ ವಿಜಯನಗರದ ದೊರೆ ಪ್ರೌಢದೇವರಾಯನ ಕಾಲದಲ್ಲಿ (೧೪೧೯–೧೪೪೬), ಹಾಗೂ ತೋಂಟದ ಸಿದ್ಧಲಿಂಗ ಯತಿಗಳ ಕಾಲದಲ್ಲಿ (ಸು.೧೪೭೦) – ಅವರ ನೇತೃತ್ವದಲ್ಲಿ – ನಡೆಯಿತು. ಈ ಸಂಕಲನ ಅಥವಾ 'ಸಂಪಾದನೆ'ಯ ಕಾರ್ಯವನ್ನು ನಿರ್ವಹಿಸಿದವರಲ್ಲಿ – ಮಿಶ್ರಸ್ತೊತ್ರದ ವಚನ ಮತ್ತು ಬಸವಸ್ತೋತ್ರದ ಸಂಕಲನಕಾರ 'ಸಂಪಾದನೆಯ ಚೆನ್ನಂಜೆದೇವ' 'ಏಕೋತ್ತರಶತಸ್ಥಲ'ದ ಸಂಕಲನಕಾರನಾದ ಮಹಲಿಂಗದೇವ, 'ಏಕೋತ್ತರಸ್ಥಲ'ದ ಜಕ್ಕಣಾರ್ಯ, 'ಲಿಂಗಲೀಲಾ ವಿಲಾಸ ಚಾರಿತ್ರ'ದ ಕಲ್ಲಮಠದ ಪ್ರಭು ದೇವರು, ಇವರುಗಳು ಪ್ರಮುಖರಾಗಿ ಕಂಡುಬರುತ್ತಾರೆ. ಇಂಥ ಸಂಕಲನ ಕಾರ್ಯಗಳಲ್ಲಿ 'ಶೂನ್ಯ ಸಂಪಾದನೆ' ಕೇವಲ ವಚನಗಳ ಸಂಕಲನವಷ್ಟೇ ಅಲ್ಲ; 'ಅನುಭವಮಂಟಪ'ದ ಆಧ್ಯಾತ್ಮಿಕ ಕಾರ್ಯಕಲಾಪಗಳ ನಾಟಕೀಯ ನಿರೂಪಣೆ; ಅನುಭವ ನಿವೇದನದಲ್ಲಿ ಪಾಲುಗೊಂಡ ಶರಣರ ಜೀವನ ಚರಿತ್ರೆ; ವಾದ ಸಂವಾದಗಳ ಮೂಲಕ ನಡೆದ ವಚನಮಂಜರಿಯ ವಿವರಣೆ, ವ್ಯಾಖ್ಯಾನ; ಈ ಎಲ್ಲ ಕಾರ್ಯಕಲಾಪಗಳ ಕೇಂದ್ರ ವ್ಯಕ್ತಿ, ಶೂನ್ಯ ಸಿಂಹಾಸನವನ್ನು ಅಲಂಕರಿಸಿದ್ದ ಅಧಿಪತಿ ಅಲ್ಲಮಪ್ರಭು. ಚಾಮರಸನ ಪ್ರಭುಲಿಂಗಲೀಲೆಯ ವಸ್ತುವಿನ್ಯಾಸಕ್ಕೂ ಶೂನ್ಯಸಂಪಾದನೆಯ ನಿರೂಪಣ ತಂತ್ರಕ್ಕೂ ಹತ್ತಿರದ ಹೋಲಿಕೆಯಿದೆ ಎಂಬ ಅಭಿಪ್ರಾಯವಿದೆ. ಈ ಅಪೂರ್ವ ಕೃತಿಯ ೪ (ಅಥವಾ ೫) ಪರಿಷ್ಕರಣಗಳು ನಡೆದಿವೆ; ಇವು ನಡೆದಿದ್ದು ಸುಮಾರು ೧೦೦ ವರ್ಷಗಳ ಅವಧಿಯಲ್ಲಿ. ಇವುಗಳ

ನಿನ್ನ ನಚ್ಚಿದ ದೇಹ ಹೆಂಡಿರು ಮಕ್ಕಳು। ನಿನ್ನ ಧನವ ತಿನ್ನುವರು।
ನಿನ್ನ(ನ)ಂತಕ ಬಂದೆಳೆದೊಯ್ವ ವೇಳೆಯೊಳ್। ನುಣ್ಣನೆ ಕೆಲಕೆ ಸಾರುವರು॥
ಜೀವನು ಪೋಗೆ ತತ್ಕ್ಷಣದಲ್ಲಿ ಹೆಣನೆಂದು। ಓವದೆ ಸುಡುವರು ಬೇಗ।
ತೀವಿದ ಗುಣವಿಲ್ಲದಿರೆ ನಡೆವೆಣನೆಂಬ। ರೀವಿಧ ನೋಡಿರೆ ದೇಹ॥

ಕವಿಯ ಹೆಸರು ಗೊತ್ತಿಲ್ಲದ 'ದ್ವಾದಶಾನುಪ್ರೇಕ್ಷೆ' (ಸು.೧೫೦೦) ಎಂಬ ಗದ್ಯಗ್ರಂಥವೊಂದಿದೆ. ಅದರಲ್ಲಿ, 'ಅಧ್ರುವಾನುಪ್ರೇಕ್ಷೆ'ಯ ವಿವರಣೆಯನ್ನು ನೋಡಿ:

"ನಗರಾದಿ ಸ್ಥಾನಂಗಳುಂ ಪದವಿಗಳುಂ ಸಿಂಹಾಸನಾದಿಗಳುಂ ಪುತ್ರಕಳತ್ರ ಮಿತ್ರಾದಿಗಳೊಳಪ್ಪ ಪ್ರೀತಿ – ಇವು ಮೊದಲಾದವು ಜೀವಕ್ಕೆ ನಿತ್ಯವಲ್ಲವೆಂದು ಚಿಂತಿಸುವುದು ಅಧ್ರುವಾನುಪ್ರೇಕ್ಷೆ." (ಕವಿಚರಿತೆ, ಸಂ.॥ ಪು.೫೩೭).

## ವೀರಶೈವ ಧಾರ್ಮಿಕ ಶಾಸ್ತ್ರಗ್ರಂಥಗಳು

ವೀರಶೈವ ಮತದ ಪ್ರಾಚೀನತೆ, ವೀರಶೈವ ಮತದ ಸ್ಥಾಪಕರು, ವೀರಶೈವವು ವೈದಿಕವೆ ಅವೈದಿಕವೆ – ಮುಂತಾದವು ತೊಡಕಿನ ಪ್ರಶ್ನೆಗಳು. ಬಸವಾದಿ ಶಿವಶರಣರು ವೀರಶೈವ ಧರ್ಮವನ್ನು ಕನ್ನಡ ವಚನಗಳಲ್ಲಿ ಪ್ರತಿಪಾದಿಸುವುದಕ್ಕೆ ಮುಂಚೆಯೇ ಪಂಚಾಚಾರ್ಯರು (ರೇವಣಸಿದ್ಧರು, ಮರುಳಸಿದ್ಧರು, ಏಕೋರಾಮ, ವಿಶ್ವೇಶ್ವರರು, ಪಂಡಿತಾರಾಧ್ಯರು) ವೀರಶೈವ ತತ್ತ್ವಗಳನ್ನು ಪ್ರತಿಪಾದಿಸಿದ್ದಿರಬೇಕು ಎಂಬ ಅಭಿಪ್ರಾಯವುಂಟು. ಇವರು ಕನ್ನಡಿಗರೇ? ಕನ್ನಡದಲ್ಲಿ ವಚನಗಳನ್ನು ಬರೆದಿದ್ದರೇ? ಎಂಬ ಪ್ರಶ್ನೆಗಳಿಗೆ ಉತ್ತರವಿಲ್ಲ. ವಿರಳವಾಗಿ ದೊರೆಯುವ ಕೆಲವು ಕನ್ನಡ ವಚನಗಳು ಪಂಚಾಚಾರ್ಯಕೃತ ಎಂಬ ಊಹೆಯೂ ಉಂಟು. (ಎಂ.ಆರ್.ಶ್ರೀ: 'ವಚನಧರ್ಮಸಾರ', ಪು.೭ರ ಅಡಿ ಟಿಪ್ಪಣಿ). "ಸ್ವಪ್ರಭಾನಂದ ಶಿವಾಚಾರ್ಯ ಪ್ರಣೀತ' ಶಿವಾದ್ವೈತಮಂಜರೀ', ಶಿವಯೋಗಿ ಶಿವಚಾರ್ಯಪ್ರಣೀತ 'ಸಿದ್ಧಾಂತ ಶಿಖಾಮಣಿ' ಎಂಬ ಗ್ರಂಥಗಳಲ್ಲಿ ಕ್ರಮವಾಗಿ ಷಟ್ಸ್ಥಲ, ಏಕೋತ್ತರ ಶತಸ್ಥಲವನ್ನೇ ತಾನು ಸಂಗ್ರಹಿಸಿರುವುದಾಗಿ ಶಿವಾಚಾರ್ಯನು ಹೇಳುವುದರಿಂದ, ಶೈವಸಿದ್ಧಾಂತದ ಒಂದು ಶಾಖೆ ಷಟ್ಸ್ಥಲ ಏಕೋತ್ತರ ಶತಸ್ಥಲಗಳನ್ನು ಪ್ರತಿಪಾದಿಸುವುದಾಗಿ ಮತ್ತೊಂದು ಪಂಗಡದ ಶೈವಾಚಾರ್ಯರಿಂದ ಪ್ರಸಿದ್ಧಿಗೆ ಬಂದಿರಬೇಕು.[೧] ಪಂಚಾಚಾರ್ಯರು ವಚನಕಾರರಂತೆ ವಿಚಾರವಾದಿಗಳಾಗಿರಲಿಲ್ಲ. ಸಮಾಜ ಸುಧಾರಕರಾಗಿರಲಿಲ್ಲ; ಜನಸಾಮಾನ್ಯದೊಂದಿಗೆ ಬೆರೆಯದ ಅವರು ಕನ್ನಡದ ಅಭಿಮಾನಿಗಳಾಗಲು ಸಾಧ್ಯವೇ ಇರಲಿಲ್ಲ; ಹೇಳಿ ಕೇಳಿ ಅವರು ಸಂಸ್ಕೃತಾಭಿಮಾನಿಗಳು; ಅವರ ಪಂಥದವರು ನಿರ್ಮಿಸಿದ ಗ್ರಂಥಗಳೂ ಸಂಸ್ಕೃತದವೇ. ಶಿವಶರಣರ ವಚನಗಳು

ಅರಿವು=ಜ್ಞಾನ, ಬಯಲು=ಶೂನ್ಯ, ಮುಂತಾದವು) –ವಚನಕಾರರು ಟಂಕಿಸಿ, ಧಾರ್ಮಿಕ ಶಾಸ್ತ್ರ ಸಾಹಿತ್ಯ ನಿರ್ಮಾಣದಲ್ಲಿ ಸಂಸ್ಕೃತವನ್ನೇ ಪೂರ್ತಿಯಾಗಿ ಅವಲಂಬಿಸದೆ ಕನ್ನಡ ನುಡಿಯನ್ನು ಹೇಗೆ ಬಳಸಿಕೊಳ್ಳಬಹುದು ಎಂಬುದನ್ನು ಪ್ರಯೋಗದ ಮೂಲಕ ತೋರಿಸಿಕೊಟ್ಟರು; ಒಳ್ಳೆಯ ಪದ್ಧತಿಯನ್ನು ಬಳಕೆಗೆ ತಂದರು. [ಆದರೆ, 'ಶೂನ್ಯ ಸಂಪಾದನೆ' ಎಂಬ ಮಾತೇನೋ ಸಂಸ್ಕೃತವೇ! ವಚನಕಾರರು ವೈದಿಕ ವಾಙ್ಮಯದಲ್ಲಿ ಬಳಸಿದ್ದ ಸಂಸ್ಕೃತ ಪಾರಿಭಾಷಿಕ (ಶಾಸ್ತ್ರೀಯ) ಶಬ್ದಗಳನ್ನು ಧಾರಾಳವಾಗಿ ಬಳಸಿಕೊಳ್ಳಲು ಹಿಂದೆಗೆದಿಲ್ಲ.] "ವೀರಶೈವ ಧಾರ್ಮಿಕ ಸಾಹಿತ್ಯದಲ್ಲಿ ಶೂನ್ಯ ಎಂಬ ಮಾತನ್ನು ಅಷ್ಟಾವರಣಗಳ ಬೆಲೆಯನ್ನರಿತು ಷಟ್‌ಸ್ಥಲ ಮಾರ್ಗವಾಗಿ ಉಪಾಸನೆ ಮಾಡಿದ ಸಾಧಕನಿಗೆ ಸಾಧನೆಯ ಅಂತ್ಯದಲ್ಲಿ ಒದಗುವ ಬ್ರಹ್ಮ ಸಾಕ್ಷಾತ್ಕಾರ ಎಂಬ ಅರ್ಥದಲ್ಲಿ, ಆ ಸಾಕ್ಷಾತ್ಕಾರದ ಅನುಭವ ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ. ಅಷ್ಟೇ ಅಲ್ಲ, ಸೃಷ್ಟಿ ಪೂರ್ವದ ಪರವಸ್ತುವನ್ನೂ, ಶೂನ್ಯವೆಂದೇ ನಿರ್ದೇಶಿಸುತ್ತಾರೆ. ಅದನ್ನು ಅಚ್ಚಗನ್ನಡ ಶಬ್ದ 'ಬಯಲು' ಎಂದೂ ನಿರ್ದೇಶಿಸುತ್ತಾರೆ.[೩] ಇಂಥ ಪದಗಳ ಬಳಕೆಯ ಪದ್ಧತಿಯನ್ನು ಕೆಲವು ವಚನಗಳ ಉದಾಹರಣೆಗಳಿಂದ ಸ್ಪಷ್ಟಪಡಿಸಬಹುದು:

> "ಆದಿ ಅನಾದಿ ಇಲ್ಲದಂದು, ಹಮ್ಮುಬಿಮ್ಮುಗಳಿಲ್ಲದಂದು, ಸುರಾಳನಿರಾಳವಿಲ್ಲದಂದು, ಶೂನ್ಯ ನಿಶ್ಶೂನ್ಯವಿಲ್ಲದಂದು, ಸಚರಾಚರವೆಲ್ಲ ರಚನೆಗೆ ಬಾರದಂದು ಗುಹೇಶ್ವರನೊಬ್ಬನೇ ಇದ್ದೆಯಲ್ಲ, ಇಲ್ಲದಂತೆ."

> "ಬೀಜ ವೃಕ್ಷದಂತೆ ನೀನಿಪ್ಪೆಯಯ್ಯ, ನಿರಾಕಾರವೇ ಮೂರ್ತಿಯಾಗಿ, ಮೂರ್ತಿಯೇ ನಿರಾಕಾರವಾಗಿ, ಇವೆಲ್ಲವನುಳಿದು ಬಯಲಾಗಿಪ್ಪೆ ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರ ದೇವಾ."

> "ಶ್ರುತಿಯ ಮಸ್ತಕದ ಅತಿಶಯದ ಬೆಳಗಿನೊಳು ಸಕಲ ಲೋಕಂಗಳು ಬೆಟ್ಟವಾಗಿ ಒಸರುವ ಸಾನಂದ ಬೆಳಗು ಬಿಂದುಗಳಾಗಿ ಬೆಳಗುತಿದ್ದಿತು ಬ್ರಹ್ಮ ಯೋಗಿನಾಥಾ."

> "ಶರೀರವುಳ್ಳನ್ನಕ್ಕ ನೆಳಲಿಲ್ಲದಿರಬಾರದು. ಭೂಮಿಯುಳ್ಳನ್ನಕ್ಕ ಆಕಾಶವಿಲ್ಲದೆ ಇರಬಾರದು. ನಾಮವುಳ್ಳನ್ನಕ್ಕ ನೀನಿಲ್ಲದೆ ಇರಬಾರದು. ಗುಹೇಶ್ವರ

ಅನುಪೂರ್ವಿಯ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಎಂ.ಚಿದಾನಂದಮೂರ್ತಿಯವರು ಈ ವಿಚಾರವನ್ನು ಪರಿಶೀಲಿಸಿ, 'ಶೂನ್ಯಸಂಪಾದನೆ' ಎಂಬ ಹೆಸರಿನಲ್ಲಿ ನಡೆದ ಪರಿಷ್ಕರಣ–ಸಂಕಲನಗಳು ನಾಲ್ಕು ಎಂಬ ತೀರ್ಮಾನಕ್ಕೆ ಬಂದಿದ್ದಾರೆ.

೧. ಶಿವಗಣಪ್ರಸಾದಿ ಮಹದೇವಯ್ಯನ ಸೂನ್ಯಸಂಪಾದನೆ (ಸು.೧೪೦೦). ".... ಇದೇ ಮೊದಲನೆಯ ಶೂನ್ಯ ಸಂಪಾದನೆ. ಇದರಲ್ಲಿ ಬರುವ ಸಿದ್ಧರಾಮನ ಸಂಗತಿಯನ್ನು ಪ್ರಭುಲಿಂಗಲೀಲೆಯು ಅನುಸರಿಸಿ ಅಲ್ಲಮನ ವೃತ್ತಾಂತವನ್ನು ಮಾರ್ಪಡಿಸಿರುವುದರಿಂದ ಈ ಕೃತಿ ಪ್ರಭುಲಿಂಗಲೀಲೆಗಿಂತ ಹಿಂದಿನದು."

೨. ಹಲಗೆಯದೇವರಶೂನ್ಯ ಸಂಪಾದನೆ. (ಸು.೧೫೦೦). "....ಹಲಗೆಯದೇವರು ಬಹುಶಃ ಲಿಂಗಲೀಲಾವಿಲಾಸ ಚಾರಿತ್ರವನ್ನು ಅನುಸರಿಸಿ ಸಿದ್ಧರಾಮನಿಗೆ ದೀಕ್ಷೆಯಾದ ವಿಷಯವನ್ನು ತಮ್ಮ ಶೂನ್ಯ ಸಂಪಾದನೆಯಲ್ಲಿ ಹೊಸದಾಗಿ ಸೇರಿಸಿಕೊಂಡಿರುವುದರಿಂದ ಸು.೧೪೩೦ಕ್ಕಿಂತ ಈಚಿನದು... ಸು.೧೫೦೦ರಲ್ಲಿ ಹಲಗೆಯದೇವರು ತಮ್ಮ ಶೂನ್ಯ ಸಂಪಾದನೆಯನ್ನು ಬರೆದಿರಬಹುದು...."

೩, ೪.ಗುಮ್ಮಳಾಪುರದ ಸಿದ್ಧಲಿಂಗಯತಿ ಮತ್ತು ಗೂಳೂರು ಸಿದ್ಧವೀರಣೊಡೆಯರ ಶೂನ್ಯ ಸಂಪಾದನೆಗಳು. (ಸು.೧೫೩೦, ೧೫೫೦).

"ಮೊದಲನೆಯವನು ಹದಿನೈದನೆಯ ಶತಮಾನದ ಕೊನೆಯಲ್ಲಿದ್ದ ತೋಂಟದ ಸಿದ್ಧಲಿಂಗಯತಿಯ ಶಿಷ್ಯ. ಎರಡನೆಯವನು ಪ್ರಶಿಷ್ಯ. ಆದ್ದರಿಂದ ಅವರ ಕೃತಿಗಳು ಕ್ರಮವಾಗಿ ಸು.೧೫೩೦ರಲ್ಲಿಯೂ, ಸು.೧೫೫೦ರಲ್ಲಿಯೂ ಹುಟ್ಟಿರಬಹುದು.[೨]

ಮೇಲೆ, 'ಶೂನ್ಯ ಸಂಪಾದನೆ' ಎಂಬ ಶಿವಶರಣರ ವಚನಗಳ ವಿಶಿಷ್ಟ ಸ್ವರೂಪದ ಸಂಕಲನಗ್ರಂಥಗಳ ಹುಟ್ಟು, ಸ್ವರೂಪ, ಸಂಕಲನಕಾರರು – ಈ ಬಗೆಗೆ ಸಂಕ್ಷೇಪವಾಗಿ ಹೇಳಿದೆ. ವೀರಶೈವ ವಾಙ್ಮಯದಲ್ಲಿ 'ಶೂನ್ಯ ಸಂಪಾದನೆ' ಎಂಬ ಮಾತು ಸಂಕಲನಕಾರರು ಕೊಟ್ಟಿದ್ದಲ್ಲ. 'ಶೂನ್ಯ', 'ಶೂನ್ಯ ಸಿಂಹಾಸನ', ಈ ಮಾತುಗಳು ವಚನಕಾರರಿಗೆ ತೀರ ಪರಿಚಿತವಾಗಿದ್ದಂಥವು. ಇಂಥ ಅನೇಕ ಪಾರಿಭಾಷಿಕ ಪದಗಳನ್ನು – ಅಚ್ಚಗನ್ನಡದವನ್ನು ಕೂಡ (ಉದಾ, ಬೆಳಕು=ಜ್ಯೋತಿ,

ವೀರಶೈವ ಮತದ ತತ್ತ್ವಗಳನ್ನು ತಿಳಿಯಬೇಕೆಂಬ ಕುತೂಹಲಿಗಳಿಗೂ ಬೇಕಾದವು, ಬೆಲೆಯುಳ್ಳವು. ಇಲ್ಲಿ ಆ ತತ್ತ್ವಗಳಲ್ಲಿ ಮೂಲಭೂತವಾದವನ್ನು ತಿಳಿಸಿ, ಅವುಗಳನ್ನು ವಚನಗಳು ಹೇಗೆ ಪ್ರತಿಪಾದಿಸುತ್ತವೆ ಎಂಬುದನ್ನು ತೋರಿಸಲು ಕೆಲವು ಉದಾಹರಣೆಗಳನ್ನು ಕೊಡಲಾಗುವುದು.

ವೀರಶೈವದಲ್ಲಿ 'ಷಟ್‌ಸ್ಥಲ ಸಿದ್ಧಾಂತ' (ಇದನ್ನು ಕನ್ನಡದಲ್ಲಿ 'ಆರುನೆಲೆ' ಎನ್ನಬಹುದು)*. ಅದರ ನೆಲಗಟ್ಟು, ಶಿವೈಕ್ಯಪದವನ್ನು ಬಯಸುವ ಮುಮುಕ್ಷುವಿನ ಸಾಧನ ಪಥದ ಸೋಪಾನ ಮಾರ್ಗ. ಈ ಆರು ನೆಲೆಗಳಲ್ಲಿ ನಿಂತು ಶಿವಪದಕ್ಕೆ ಏರುವುದಕ್ಕೆ ಅಧಿಕಾರ ಬೇಕು. ಆ ಅಧಿಕಾರವನ್ನು ದೊರಕಿಸಿಕೊಳ್ಳಲು ಸಾಧನ ಪಥದಲ್ಲಿ ಶ್ರದ್ಧೆ, ಆಸಕ್ತಿಗಳನ್ನು ಬೆಳೆಸಿಕೊಳ್ಳಬೇಕು; ಚಿತ್ತ ಶುದ್ಧಿಯನ್ನು ಪಡೆದುಕೊಳ್ಳಬೇಕು. ಇದು ಸಾಧ್ಯವಾಗಬೇಕಾದರೆ ಕೆಲವು ಪೂರ್ವ ಸಿದ್ಧತೆಗಳೂ ಆಚರಣೆಗಳೂ ಅಗತ್ಯ. ಇವನ್ನು 'ಅಷ್ಟಾವರಣ' ಎಂದು ಕರೆಯಲಾಗಿದೆ. ಇದರಲ್ಲಿ ಬಾಹ್ಯ, ಅಭ್ಯಂತರ ಎಂದು ಎರಡು ವಿಧ. ಬಾಹ್ಯ ಅಷ್ಟಾವರಣಗಳ ವಿವರಗಳು ಹೀಗಿವೆ: ಗುರು, ಲಿಂಗ, ಜಂಗಮ, ಪ್ರಸಾದ, ಪಾದೋದಕ, ವಿಭೂತಿ, ರುದ್ರಾಕ್ಷಿ ಮತ್ತು ಮಂತ್ರ. ಇವುಗಳಲ್ಲಿ ಒಂದೆರಡನ್ನು ಅರಿಯೋಣ:

**ಗುರು**: ಗುರು ವೀರಶೈವ ದೀಕ್ಷೆ ಕೊಟ್ಟು ಜ್ಞಾನೋಪದೇಶ ಮಾಡತಕ್ಕವನು. ಶಿಷ್ಯರೊಂದಿಗೆ ಮಠದಲ್ಲಿ ಇರತಕ್ಕವನು. ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಗುರು ಎಂದು ೩ ವಿಧ. ಗುರು ಶಾಸ್ತ್ರಜ್ಞ; ಷಟ್‌ಸ್ಥಲಜ್ಞಾನಿ. "ಹುಟ್ಟುವಾಗ ಭವಿಯಾಗಿರುವ (ಭವಿ=ವೀರಶೈವ ದೀಕ್ಷೆ ಪಡೆದಿಲ್ಲದವನು, ಮೋಕ್ಷಕ್ಕೆ ಅವಕಾಶವಿಲ್ಲದವನು) ಮಗುವನ್ನು ಲಿಂಗಧಾರಣದಿಂದ ಭಕ್ತನನ್ನಾಗಿ ಮಾಡಬೇಕು."

> "ಶಿವಭಕ್ತರಲ್ಲಿ ಗರ್ಭೋತ್ಪಾತವಾದ ಶಿಶುವಿಂಗೆ ಪಾದೋದಕದಿಂದ (ಪಾದೋದಕ=ಗುರುವಿನ ಪಾದ ತೊಳೆದ ನೀರು) ಜಲಕವ ಮಾಡಿಸುವುದು. ವೀಭೂತಿಯ ಪಟ್ಟವಂ ಕಟ್ಟಿ ಕೊರಳಲ್ಲಿ ಲಿಂಗಸಾಹಿತ್ಯವಂ (ಸಾಹಿತ್ಯ=ಸಹಿತತೆ, ಜೊತೆಗೂಡಿರುವುದು) ಮಾಡಿ, ಪ್ರಸಾದದ ಎಣ್ಣೆ ಬೆಣ್ಣೆ ಹಾಲುತುಪ್ಪವನೆರೆದು ಸಲಹುದೇ ಆಚಾರ."
>
> –ಚೆನ್ನಬಸವ ಪುರಾಣ

---

* ಷಟ್‌ಸ್ಥಲಸಿದ್ಧಾಂತಕ್ಕೂ ಅದ್ವೈತ ಸಿದ್ಧಾಂತದ ಬ್ರಹ್ಮೋಪಾಸನ ಪ್ರಕರಣದಲ್ಲಿ ಹೇಳುವ 'ಸಪ್ತಭೂಮಿಕೆ'ಗಳಿಗೂ (ಏಳನೆಯದಾದ ತುರೀಯಾತೀತ ಭೂಮಿಕೆಯನ್ನು ಬಿಟ್ಟರೆ ಇವು ಆರೇ) ಹೋಲಿಕೆಯುಂಟೇ ಎಂಬುದು ವಿಚಾರಾರ್ಹ.

ಲಿಂಗವು ಶಕ್ತಿಗೊಳಗಾಯಿತ್ತಾಗಿ, ಬಚ್ಚಬರಿಯ ಬಯಲೆಂಬುದಕ್ಕೆ ಉಪಮಾನವಿಲ್ಲ.*

ಶೂನ್ಯ ಸಂಪಾದನೆ ಶಿವ ಶರಣರ ವಚನಗಳ ಸಂಕಲನ ಎಂದು ಹೇಳಿತಷ್ಟೇ. ಈ ಸಂಕಲನದಲ್ಲಿ ಸೇರ್ಪಡೆ ಆಗದ ವಚನಗಳೂ ಅಸಂಖ್ಯಾತವಾಗಿವೆ. ಈ ವಚನಗಳನ್ನು ರಚಿಸಿದ (ಅಥವಾ ಹೇಳಿದ, ಹಾಡಿದ) ವಚನಕಾರರನ್ನು ಅವರ ಅಂಕಿತಗಳಿಂದ ಗುರುತಿಸಬಹುದು. ಇಲ್ಲಿ ಕೆಲವು ಪ್ರಮುಖ ವಚನಕಾರರ ಹೆಸರುಗಳನ್ನು (ಅವರ ಅಂಕಿತದೊಂದಿಗೆ) ಸ್ಮರಿಸಬಹುದು: ದೇವರ ದಾಸಿಮಯ್ಯ(ರಾಮನಾಥ);ಬಸವಣ್ಣ(ಕೂಡಲಸಂಗಮದೇವ); ಚೆನ್ನ ಬಸವಣ್ಣ(ಕೂಡಲ ಚೆನ್ನ ಸಂಗಮದೇವ); ಅಲ್ಲಮಪ್ರಭು (ಗುಹೇಶ್ವರ)* ಮಹಾದೇವಿಯಕ್ಕ(ಚೆನ್ನಮಲ್ಲಿಕಾರ್ಜುನ); ಚೌಡಯ್ಯ(ಅಂಬಿಗರ ಚೌಡಯ್ಯ); ತೋಂಟದ ಸಿದ್ಧಲಿಂಗಯತಿ(ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ); ಸಕಳೇಶ ಮಾದರಸ(ಸಕಳೇಶ್ವರ ದೇವ).

ಶಿವಶರಣರ "ವಚನಗಳು ಶಾಸ್ತ್ರವೂ ಅಹುದು; ಸಾಹಿತ್ಯವೂ ಅಹುದು,"[೪] ಈ ಎರಡು ಪ್ರಧಾನ ಲಕ್ಷಣಗಳನ್ನು ಗಮನದಲ್ಲಿರಿಸಿಕೊಂಡು ವಚನಗಳನ್ನು ಪರಿಶೀಲಿಸಿದರೆ, ಸಾಹಿತ್ಯ ಗುಣವುಳ್ಳ (ಅಥವಾ ಕಾವ್ಯಗುಣ ಎನ್ನಬಹುದು) ವಚನಗಳಲ್ಲಿ 'ವಿಶ್ವವ್ಯಾಪ್ತಿಯುಳ್ಳ ಧರ್ಮದ ತಿರುಳನ್ನು 'ಗುರುತಿಸಬಹುದು; ಸಮಾಜ ಸುಧಾರಣೆಯ ಕಳಕಳಿಯನ್ನು ಕಾಣಬಹುದು; ಭಕ್ತಜೀವದ ಅಂತರಂಗ ಹೋರಾಟದ ಮೊರೆ – ಕರೆಗಳನ್ನು ಆಲಿಸಬಹುದು; ಲೋಕಾನುಭವದ ಸೂಕ್ತಿಸುಧೆಯನ್ನು ಸವಿಯಬಹುದು; ಅನುಭಾವದ ಅಂತರ್ವಾಣಿಯನ್ನು ಕೇಳಬಹುದು. ಇಂಥ ವಚನಗಳಲ್ಲಿ ಭಾಷೆ ಕಾವ್ಯೋಚಿತವಾಗಿ ರೂಪುಗೊಂಡಿರುತ್ತದೆ. ಇವು ಎಲ್ಲ ಕಾಲದ ಎಲ್ಲ ಜನಕ್ಕೂ ರುಚಿಸುವಂಥವು. ವೀರಶೈವ ಧರ್ಮದ ಶಾಸ್ತ್ರಭಾಗಕ್ಕೆ ಸಂಬಂಧಪಟ್ಟ ವಚನಗಳು ವೀರಶೈವರಿಗೂ

---

* ಉದಾಹರಿಸಿದ ವಚನಗಳನ್ನು 'ವಚನ ಶಾಸ್ತ್ರ ಸಾರ' – ೧ (ಪೂರ್ವಾರ್ಧ)ದಿಂದ (ಸಂ. ಫ.ಗು.ಹಳಕಟ್ಟಿ, ೧೯೩೧; ಪು. ೨, ೩, ೪) ಆಯ್ದುಕೊಳ್ಳಲಾಗಿದೆ.

* ಎಂ.ಚಿದಾನಂದಮೂರ್ತಿಯವರು ಅಲ್ಲಮನ ಅಂಕಿತ 'ಗೋಗೇಶ್ವರ' (ಗೊಗ್ಗೇಶ್ವರ) ಎಂದಿದ್ದು, ಕಾಲಕ್ರಮದಲ್ಲಿ ಗೋಗೇಶ್ವರ.ಗೋಹೇಸ್ವರ.ಗುಹೇಶ್ವರ ಎಂದು ಮಾರ್ಪಾಟಾಗಿದೆ ಎಂದು ವಾದಿಸಿದ್ದಾರೆ. ('ಸಂಶೋಧನ ತರಂಗ'–೨: 'ಗೋಗೇಶ್ವರ(ಗೊಗ್ಗೇಶ್ವರ) – ಅಲ್ಲಮನ ಅಂಕಿತ' ಎಂಬ ಲೇಖನ.)

ಪರಸ್ಪರ ಅಗಲಿರುವುದು ಸಾಧ್ಯವೇ ಇಲ್ಲ. ಅಂಗದ ಜೊತೆಯಲ್ಲಿಯೇ ಲಿಂಗ ತಕ್ಕ ರೀತಿ ಪರಿಣಾಮ ಹೊಂದುತ್ತ ಅಂಗದಿಂದ ಸೇವೆ ಮಾಡಿಸಿಕೊಳ್ಳುವುದಕ್ಕೂ ಇದ್ದೇ ಇರುತ್ತದೆ. ಪರವಸ್ತುವಿನಲ್ಲಿರುವ ಶಕ್ತಿಯ ಒಂದು ಭಾಗ ಅಂಗದಲ್ಲಿ ಸೇರಿಕೊಂಡು ಭಕ್ತಿ ಎಂಬ ಹೆಸರಿನಿಂದ ವ್ಯವಹರಿಸಲ್ಪಡುವುದು. ಲಿಂಗವನ್ನು ಆಶ್ರಯಿಸಿದ ಶಕ್ತಿಗೆ ಶಕ್ತಿಯೆಂದೇ ಹೆಸರು. ಸೃಷ್ಟಿ ಕ್ರಮದಲ್ಲಿ ಕಾರಣತನು ಒದಗಿದಾಗಂಗ ಯೋಗಾಂಗವಾಗಿ, ಸೂಕ್ಷ್ಮ ತನುವಿನಲ್ಲಿ ಭೋಗಾಂಗವಾಗಿ, ಸ್ಥೂಲತನುವಿನಲ್ಲಿ ತ್ಯಾಗಾಂಗವಾಗಿ ಪರಿಣಾಮ ಹೊಂದಿತು. ಈ ತನುಗಳಲ್ಲಿ ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗಗಳಾಗಿ ಲಿಂಗ ಪರಿಣಾಮ ಹೊಂದಿ ಸೇವೆ ಮಾಡಿಸಿಕೊಳ್ಳಲು ಸಿದ್ಧವಾಗಿದೆ. ಅಂಗ ಇಳಿದು ಬಂದ, ಪುನಃ ಭಕ್ತಿಯ ಸಹಾಯದಿಂದ ಏರಿಹೋಗುವ, ಆರು ಮೆಟ್ಟಲುಗಳೇ ಷಟ್‌ಸ್ಥಲಗಳು. ಪ್ರವೃತ್ತಿ ಕ್ರಮದಲ್ಲಿ ಐಕ್ಯ, ಶರಣ, ಪ್ರಾಣಲಿಂಗಿ, ಪ್ರಸಾದಿ, ಮಹೇಶ ಮತ್ತು ಭಕ್ತ ಎಂಬವು ಮೆಟ್ಟಿಲುಗಳು... ದೀಕ್ಷಾಸಂಸ್ಕಾರವಾಗಿ ಸಂಸಾರಲೋಲನಾದ ಜೀವಾತ್ಮನು ಸಂಸಾರವಿಮುಖನಾದ ಶುದ್ಧಾತ್ಮನಾಗಿ ಭಕ್ತನೆನಿಸಲು ನಿವೃತ್ತಿ ಕ್ರಮಮದಲ್ಲಿ ಭಕ್ತಸ್ಥಲದಿಂದ ಮೇಲಕ್ಕೆ ಏರುತ್ತಾ ಹೋಗುತ್ತಾನೆ.....[೫] ಈ ಷಟ್‌ಸ್ಥಲದ ಪ್ರತಿಯೊಂದು ಮೆಟ್ಟಲಿನಲ್ಲಿಯೂ ಆರು ಒಳಪಂಗಡಗಳನ್ನು ಮಾಡಿ, ೩೬ ಸ್ಥಲಗಳನ್ನು ಕಲ್ಪಿಸಲಾಗಿದೆ. ಹೀಗೆಯೇ ಈ ೩೬ ಒಳಸ್ಥಲಗಳನ್ನು ವಿಭಜಿಸಿ ೨೧೬ ಸ್ಥಲಗಳನ್ನು ಮಾಡಿರುವುದೂ ಉಂಟು. ಇನ್ನೊಂದು ಬಗೆಯ ವಿಂಗಡಣೆಯ ಪ್ರಕಾರ ಅಂಗಸ್ಥಲ ಲಿಂಗಸ್ಥಲಗಳನ್ನು ೧೦೧ ಸ್ಥಲಗಳಾಗಿ ವಿಂಗಡಿಸಿದ್ದಾರೆ ಷಟ್‌ಸ್ಥಲ ಶಾಸ್ತ್ರಕಾರರು. ಷಟ್‌ಸ್ಥಲ, ಏಕೋತ್ತರಶತ (೧೦೧) ಸ್ಥಲ – ಈ ಕ್ರಮಗಳು ಹೆಚ್ಚು ಪ್ರಸಿದ್ಧವಾಗಿವೆ.

ಈ ಎಲ್ಲ ಸ್ಥಲಗಳ ವಿಷಯ ಪ್ರತಿಪಾದನೆಯನ್ನು ಅಲ್ಲಮ ಪ್ರಭುವಿನಿಂದ ಮೊದಲ್ಗೊಂಡು ಅನೇಕ ಶಿವಶರಣರೂ ಇತರ ಕವಿಗಳೂ ತಮ್ಮ ವಚನಗಳಲ್ಲೂ ಕೃತಿಗಳಲ್ಲೂ ವಿಸ್ತಾರವಾಗಿ ಪ್ರತಿಪಾದಿಸಿದ್ದಾರೆ. ಅವರಲ್ಲಿ ಮುಖ್ಯರಾದವರ* ಸಂಕ್ಷಿಪ್ತ ಪರಿಚಯ:

**ಅಲ್ಲಮಪ್ರಭು (ಸು.೧೧೬೦)**: ಈತನು ಷಟ್‌ಸ್ಥಲ ಜ್ಞಾನ ಚಾರಿತ್ರ, ಶೂನ್ಯ ಸಂಪಾದನೆ, ಮಂತ್ರಗೋಪ್ಯ, ಸೃಷ್ಟಿಯ ವಚನ, ಬೆಡಗಿನ ವಚನ, ಮಂತ್ರಮಾಹಾತ್ಮ್ಯ,

---

* ಈ ಎಲ್ಲ ವಚನಕಾರರ ಸಂಬಂಧವಾದ ಹೆಚ್ಚಿನ ವಿವರಗಳನ್ನು ಆರ್.ನರಸಿಂಹಾಚಾರ್ಯರ ಕವಿಚರಿತೆಯ ಸಂಪುಟಗಳಿಂದ ಸಂಗ್ರಹಿಸಿದೆ. ಈಚೆಗೆ ನಡೆದಿರಬಹುದಾದ ಸಂಶೋದನೆಗಳನ್ನು ಗಮನಿಸುವ ಗೋಜಿಗೆ ಹೋಗಿಲ್ಲ.

**ಲಿಂಗ:** ಕಲ್ಲಿನಿಂದ ಕಡೆದ ಸ್ಥಾವರಲಿಂಗವಲ್ಲ. ಲಿಂಗ ಎಂದರೆ ಪರವಸ್ತು, ಪರಮಾತ್ಮ; ಸತ್‌ಚಿತ್ ಆನಂದ ಸ್ವರೂಪ. ಇದರಲ್ಲಿ ಮೂರು ವಿಧ; ಭಾವಲಿಂಗ, ಪ್ರಾಣಲಿಂಗ ಮತ್ತು ಇಷ್ಟಲಿಂಗ. ವೀರಶೈವರಿಗೆ ಇಷ್ಟಲಿಂಗ ಮುಖ್ಯ; ದೇಹದ ಮೇಲೆ ಯಾವಾಗಲೂ ಧರಿಸಿಕೊಂಡಿರಬೇಕು. ಪೂಜಾ ಕಾಲದಲ್ಲಿ ಎಡ ಅಂಗೈ ಮೇಲಿಟ್ಟು ಪೂಜಿಸತಕ್ಕದ್ದು. ಒಂದು ವಚನ:

"ಬಯಲ ಮೂರ್ತಿಯಮಾಡಿ, ತನ್ನ ಕರಸ್ಥಲಕ್ಕೆ ಕೊಟ್ಟನಯ್ಯ ಶ್ರೀಗುರು. ಬಯಲ ಮೂರ್ತಿಯ ಅಮೂರ್ತಿಯಮಾಡಿ ಎನ್ನ ಪ್ರಾಣದೊಳಗೆ ಇರಿಸಿದನಯ್ಯಾ ಶ್ರೀಗುರು. ಬಯಲು ಬಯಲನೇ ಬಯಸಿ, ಬಯಲೆಂದೆನಿಸಿ, ಎನ್ನ ಭಾವದಲ್ಲಿರಿಸಿದನಯ್ಯ ಶ್ರೀಗುರು. ಇದು ಕಾರಣ, ಎನ್ನ ಕರಸ್ಥಲ, ನಮಸ್ಥಲ, ಭಾವಸ್ಥಲದಲ್ಲಿ ಧರಿಸಿ ನಾನು ಅಂಗಲಿಂಗ ಸಂಬಂಧಿಯಾದೆನಯ್ಯಾ ಮಹಾಲಿಂಗ ಗುರು ಶಿವಸಿದ್ದೇಶ್ವರಪ್ರಭುವೇ."

**ಜಂಗಮ:** ಜಂಗಮ ಎಂಬ ಪದದ ಅರ್ಥ 'ಚರಿಸುತ್ತಿರುವುದು', 'ಚರಿಸುತ್ತಿರುವವನು' ಎಂದು. ಈತನೂ ಗುರುವೆ. ಅನುಭವಿ; ಜ್ಞಾನ ಸಂಪನ್ನ. ಒಂದು ಕಡೆ ನಿಲ್ಲತಕ್ಕವನಲ್ಲ. ಸದಾಸಂಚಾರಿ. ಮತಪ್ರಚಾರ, ಶಾಸ್ತ್ರಬೋಧೆ, ಜ್ಞಾನೋಪದೇಶಗಳಲ್ಲಿ ನಿರತ. ಭಕ್ತರು ಜಂಗಮನ ನಿರೀಕ್ಷೆ ಮಾಡುತ್ತಿದ್ದು, ಬಂದಾಗ ಆತನ ಸತ್ಕಾರವನ್ನು ಮಾಡಬೇಕು. ಜಂಗಮ ಸೇವೆಯನ್ನು 'ದಾಸೋಹ' (<ದಾಸೋಽಹಂ=ನಾನು ನಿನ್ನ ದಾಸ) ಎಂದು ಕರೆದಿದೆ.

ವೀರಶೈವ ಮತದಲ್ಲಿ ಗುರು–ಲಿಂಗ–ಜಂಗಮ ಕೈಂಕರ್ಯಕ್ಕೆ 'ತ್ರಿವಿಧ ದಾಸೋಹ' ಎಂದು ಶಾಸ್ತ್ರದ ಮಾತು. ವಿಭೂತಿ ರುದ್ರಾಕ್ಷಿಗಳ ಧಾರಣೆ ಎಲ್ಲ ಶೈವರಲ್ಲೂ ಉಂಟು; ವೀರಶೈವರಲ್ಲಿ ಇದಕ್ಕೆ ಹೆಚ್ಚಿನ ಪ್ರಾಶಸ್ತ್ಯ.

**ಮಂತ್ರ:** '(ಓಂ)ನಮಶ್ಶಿವಾಯ' ಎಂಬುದು ಪಂಚಾಕ್ಷರೀ, ಷಡಕ್ಷರೀ, ಮಂತ್ರ; ಗುರು ಶಿಷ್ಯನಿಗೆ ಉಪದೇಶ ಮಾಡತಕ್ಕದ್ದು.

**ಷಟ್‌ಸ್ಥಲ ಸಿದ್ಧಾಂತ**

'ಷಟ್‌ಸ್ಥಲ ಸಿದ್ಧಾಂತದ ಪ್ರಕಾರ ಪರವಸ್ತುವೊಂದೇ ಲಿಂಗ, ಅಂಗ (ಎಂದರೆ, ಪರಮಾತ್ಮ ಜೀವಾತ್ಮರುಗಳೆಂದು) ಎಂಬ ವಿಂಗಡವಾಯಿತು. ಪ್ರವೃತ್ತಿ, ಮಾರ್ಗದಲ್ಲಿ ಅಂತಃಕರಣಗಳೂ, ಇಂದ್ರಿಯಗಳೂ ದೇಹವೂ ಜೀವಾತ್ಮನಿಗೆ ತಪ್ಪದೆ ಬರುವುದಾದರೂ ಅವುಗಳಿಂದ ಬಿಡುಗಡೆ ಹೊಂದುವುದಕ್ಕೆ ತಕ್ಕ ಉಪಾಯವನ್ನು ಪರಮಾತ್ಮನು ಜೊತೆಯಲ್ಲಿಯೇ ಕಲ್ಪಿಸಿಕೊಟ್ಟಿರುವನು. ಲಿಂಗ ಅಂಗ ಇವು

ಹೇಳಿದ ಮಹಾಲಿಂಗದೇವನ ಶಿಷ್ಯ.

**ಮಗ್ಗೆಯ ಮಾಯಿದೇವ** (೧೪೩೦): ಈತ ಅನುಭವಸೂತ್ರ, ಪ್ರಭುಗೀತೆ, ಏಕೋತ್ತರ ಶತಸ್ಥಲ ಷಟ್ಪದಿ, ಷಟ್ಸ್ಥಲಗದ್ಯ, ಶತಕತ್ರಯ, ವಚನಗಳು, ಇವನ್ನು ಬರೆದಿದ್ದಾನೆ. ಈತ ಐಪುರದ ಸೋಮನಾಥ ದೇವರ ಭಕ್ತ. ಈತನ 'ಏಕೋತ್ತರ ಶತಸ್ಥಲ ಷಟ್ಪದಿ' ಗ್ರಂಥ ದೊರಕಿಲ್ಲವೆಂದು ಕವಿಚರಿತ್ರೆಯಿಂದ ತಿಳಿದು ಬರುತ್ತದೆ. ಷಟ್‌ಸ್ಥಲ ವಿಚಾರವಾಗಿ ಷಟ್ಪದಿಯಲ್ಲಿ ರಚಿತವಾದ ಒಂದು ಅಪೂರ್ವ ಗ್ರಂಥ ಸಿಕ್ಕದಿರುವುದು ಒಂದು ದೊಡ್ಡ ಕೊರತೆ.

**ತೋಂಟದ ಸಿದ್ಧೇಶ್ವರ** (ಸು.೧೪೭೮): ಈತನಿಗೆ ತೋಂಟದ ಸಿದ್ಧಲಿಂಗ ಯತಿ ಎಂಬ ಹೆಸರೂ ಉಂಟು. ಕಗ್ಗೆರೆಯ ಬಳಿಯ ನಾಗಿಣೀ ನದಿಯ ತೀರದಲ್ಲಿ ತೋಟದೊಳಗೆ ಬಹಳ ಕಾಲ ಶಿವಯೋಗದಲ್ಲಿ ಇದ್ದುದರಿಂದ ಈತನಿಗೆ'ತೋಂಟದ' ಎಂಬ ವಿಶೇಷಣ ಬಳಕೆಗೆ ಬಂದಿತು. ಇವನು ತುಮಕೂರು ಜಿಲ್ಲೆ ಕುಣಿಗಲಿಗೆ ಸಮೀಪದಲ್ಲಿರುವ ಎಡೆಯೂರಿನಲ್ಲಿ ಸಮಾಧಿ ಹೊಂದಿದನು. ಈತನು ತನ್ನ ಕಾಲದಲ್ಲಿ ಬಹಳ ಪ್ರಸಿದ್ಧನಾದ ಗುರುವಾಗಿದ್ದು, ದೊಡ್ಡ ಶಿಷ್ಯ ಮಂಡಲಿಯನ್ನು ಹೊಂದಿದ್ದನು. ಇವನ ಭಕ್ತರು ಕೆಲವರು ಸೇರಿ ಇವನಿಗೆ ಎಡೆಯೂರಿನಲ್ಲಿ ಒಂದು ಕಲ್ಲುಮಠವನ್ನು ಕಟ್ಟಿಸಿಕೊಟ್ಟರು. ಈತನ ಸ್ಮಾರಕವಾಗಿ ಕಟ್ಟಿದ ಸಿದ್ಧಲಿಂಗೇಶ್ವರ ದೇವಾಲಯದ ಪ್ರಾಕಾರದಲ್ಲಿ ಬರೆದಿರುವ ಶಿಲಾಶಾಸನದಲ್ಲಿ ಈತನ ಮಹಿಮೆಯನ್ನು ಕೊಂಡಾಡಿದೆ. ಅದರಲ್ಲಿ ಈತನ ಬಗೆಗೆ – ಜ್ಞಾನಕ್ರಿಯಾಸ್ವರೂಪ, ಸರ್ವಾಂಗಲಿಂಗಿ, ಷಟ್‌ಸ್ಥಲಜ್ಞಾನಿ, ಅಷ್ಟಾವರಣಾಲಂಕರಣ, ದ್ವೈತಾದ್ವೈತತಿಮಿರ ಮಾರ್ತಾಂಡ, ಎಂಬ ವಿಶೇಷಣಗಳನ್ನು ಹೇಳಿದೆ. ಈತನನ್ನು ಕುರಿತು ಹಲವು ಗ್ರಂಥಗಳು ಹುಟ್ಟಿವೆ. ಈತನ ಕೃತಿ 'ಷಟ್‌ಸ್ಥಲಜ್ಞಾನಸಾರಾಮೃತ', ಇದರಲ್ಲಿ ೭೦೧ ವಚನಗಳಿವೆ. ವಚನಗಳ ಅಂಕಿತ 'ಮಹಾಲಿಂಗಗುರುಶಿವ ಸಿದ್ಧೇಶ್ವರ'. ಇದರಲ್ಲಿ ಷಟ್‌ಸ್ಥಲ ಸಿದ್ಧಾಂತವನ್ನು ವಿಸ್ತಾರವಾಗಿ ನಿರೂಪಿಸಿದೆ. ಉದಾಹರಣೆಗಾಗಿ ಒಂದು ವಚನ:

"ಉದಯಕಾಲದೊಳೆದ್ದು ಹೂಪತ್ರಗಳ ಕೊಯ್ದೆಂದು ಹೊರುಪಚಾರ ಮಾಡುವುದೆಲ್ಲ ಬರಿಯ ಭಾವದ ಬಳಲಿಕೆ ನೋಡಾ. ಅಳಲದೆ ಬಳಲದೆ ಆಯಾಸಬಡದೆ ಒಳಗಣ ಜ್ಯೋತಿಯ ಬೆಳಗಿನ ಕಳೆಯ ಕಮಲವ ಪೂಜಿಸಬಲ್ಲ ಶರಣಂಗೆ ಬೆಳಗಾಗಿ ಎದ್ದು ಪೂಜಿಸಿಹೆನೆಂಬ ಕಳವಳವೇನು ಹೇಳಾ ಮಹಾಲಿಂಗಗುರುಶಿವ ಸಿದ್ಧೇಶ್ವರ ಪ್ರಭುವೇ."

**ಗುಬ್ಬಿ ಮಲ್ಲಣ್ಣ** (ಸು.೧೪೭೫): 'ಭಾವಚಿಂತಾರಾತ್ನ' ಎಂಬ ವಾರ್ಧಿಕ

ಕಾಲಜ್ಞಾನವಚನ ಎಂಬ ಗ್ರಂಥಗಳನ್ನು ರಚಿಸಿದ್ದಾನೆ. ಎಂ.ಆರ್.ಶ್ರೀಯವರು ಅಲ್ಲಮನನ್ನು 'ಪರಮಜಂಗಮ' ವರ್ಗದವನು, 'ಪರಶಿವಮೂರ್ತಿ' ಸಮಾನ ಎಂದಿದ್ದಾರೆ. "ಶ್ರೀಮದ್ದೇಶಿಕ ಷಟ್ಸ್ಥಲ ಚಕ್ರವರ್ತಿ ಬ್ರಹ್ಮಾನಂದ ಪರಶಿವಮೂರ್ತಿ ವಿರಕ್ತಶಿಖಾಮಣಿ ಮಾಯಾ ಕೋಲಾಹಳ ಪ್ರಭುದೇವರು" ಎಂದು ಕೆಲ ವೀರಶೈವ ಕವಿಗಳು ಈತನನ್ನು ಹೊಗಳಿದ್ದಾರೆ. ಇವನನ್ನು ಕುರಿತು 'ಪ್ರಭುದೇವರ ರಗಳೆ' (ಹರಿಹರ), ಪ್ರಭುಲಿಂಗಲೀಲೆ (ಚಾಮರಸ), ಪ್ರಭುಗೀತೆ (ಮಗ್ಗೆಯಮಾಯಿದೇವ (೧೪೩೦), ಪ್ರಭುದೇವರ ಪುರಾಣ (ಹರೀಶ್ವರ:೧೬೦೬), ಪ್ರಭುನಟನ ತಾರಾವಳಿ (ಮರಿರಾಚವಟ್ಟೀಶ:೧೬೫೦) ಎಂಬ ವಿವಿಧ ಪ್ರಕಾರಗಳ ಕೃತಿಗಳು ರಚಿತವಾಗಿವೆ. ಈತ ಬಸವೇಶ್ವರರು ಸ್ಥಾಪಿಸಿದ ಅನುಭವಮಂಟಪದ ಶೂನ್ಯ ಸಿಂಹಾಸನವನ್ನು ಅಲಂಕರಿಸಿದ್ದು, ಆ ಕಾಲದ ಎಲ್ಲ ಶಿವಶರಣರ ಗೌರವಕ್ಕೆ ಪಾತ್ರನಾಗಿದ್ದನು. ಈತ ಪರಮ ವೈರಾಗ್ಯಮೂರ್ತಿ.

**ಬಸವೇಶ್ವರ:** ಇವರ ವಿಚಾರವನ್ನು ಕನ್ನಡಿಗರಿಗೆ ಪರಿಚಯಮಾಡಿ ಕೊಡಬೇಕಾದದ್ದು ಅನಗತ್ಯ. ಈಚಿನ ದಿನಗಳಲ್ಲಿ ಈತ ವಿಶ್ವವಿಖ್ಯಾತ ವ್ಯಕ್ತಿಯಾಗಿದ್ದಾನೆ. ಬಿಜ್ಜಳನ (೧೧೫೬–೧೧೬೭) ಮಂತ್ರಿ. ವೀರಶೈವ ಮತ ಪ್ರವರ್ತಕ. ಜನ್ಮ ಸ್ಥಳ ಇಂಗಳೇಶ್ವರದ ಬಾಗೇವಾಡಿ. ಇವರ ಸೋದರಿಯ ಮಗನೇ ಚೆನ್ನಬಸವ. ಹಿಂದಿನ ಮತ್ತು ಇಂದಿನ ಕಾಲಗಳಲ್ಲಿ ಬಸವೇಶ್ವರರನ್ನು ಕುರಿತು ಹುಟ್ಟಿರುವಷ್ಟು ಗ್ರಂಥಗಳು ಬಹುಶಃ ಬೇರೆ ಯಾವ ಕನ್ನಡ ಗ್ರಂಥಗರ್ತನ ವಿಷಯವಾಗಿಯೂ ಹುಟ್ಟಿಲ್ಲ ಎಂದರೆ ಅತ್ಯುಕ್ತಿಯಾಗದು. ಇವರ ವಿಷಯವಾಗಿ ಹುಟ್ಟಿರುವ ಪ್ರಾಚೀನ ಕೃತಿಗಳು: ಬಸವರಾಜದೇವರ ರಗಳೆ (ಹರಿಹರ), ಬಸವ ಪುರಾಣ (ತೆಲುಗಿನಲ್ಲಿ ಪಾಲ್ಕುರಿಕೆ ಸೋಮನಾಥ; ಕನ್ನಡದಲ್ಲಿ ಭೀಮಕವಿ), ಮಲಬಸವಚಾರಿತ್ರ, ಬಸವಶತಕ, ಬಸವಸ್ತೋತ್ರದ ತ್ರಿವಿಧಿ, ಬಸವ ಸ್ತೋತ್ರ ರಚನೆ, ಇತ್ಯಾದಿ. ಭಕ್ತಿ ಸಾಧನೆಯಲ್ಲಿ ಅಗ್ರಗಣ್ಯರೆನಿಸಿ, 'ಭಕ್ತಿಭಂಡಾರಿ' ಎಂದು ಪ್ರಸಿದ್ಧರಾದವರು. ಸಮಾಜ ಸುಧಾರಕರು, ಜಾತಿಭೇದ, ಲಿಂಗಭೇದ, ವರ್ಗಭೇದಗಳನ್ನು ತೊಡೆದುಹಾಕಲು ಪ್ರಯತ್ನಿಸಿ ಯಶಸ್ವಿಯಾದ ಮಹಾಪುರುಷ.

**ಮಹಾಲಿಂಗದೇವ** (ಸು.೧೪೨೫): ಈತನು 'ಏಕೋತ್ತರ ಶತಸ್ಥಲ', ಪ್ರಭುದೇವರ ಷಟ್ಸ್ಥಲಜ್ಞಾನ ಚಾರಿತ್ರ ವಚನದ ಟೀಕು, ಇವುಗಳನ್ನು ಬರೆದಿದ್ದಾನೆ. ಇವನ ಶಿಷ್ಯ ಜಕ್ಕಣಾರ್ಯನು ವಿಜಯನಗರದ ಪ್ರೌಢದೇವರಾಯನಲ್ಲಿ (೧೪೧೯–೧೪೪೬) ದಂಡೇಶನಾಗಿದ್ದನು.

**ಜಕ್ಕಣಾರ್ಯ:** ಈತನು 'ಏಕೋತ್ತರ ಶತಸ್ಥಲ'ವನ್ನು ರಚಿಸಿದ್ದಾನೆ. ಮೇಲೆ

ಗಣಪ್ರಶಂಸೆ, ಧರ್ಮಾಧರ್ಮ ವಿವರಣ, ಪಂಚಾಕ್ಷರೀಭಸಿತ ರುದ್ರಾಕ್ಷಿಗಳ ಮಹಾತ್ಮ್ಯ, ಲಿಂಗಧಾರಣ, ಶಿವಪೂಜಾವಿಧಿ, ಪಾದೋದಕ ಪ್ರಸಾದ ಮಹಿಮೆ, ಶಿವಾಧಿಕ್ಯ, ಮಾಹೇಶ್ವರಾಚರಣೆ, ಷಟ್‌ಸ್ಥಲ, ಇವೇ ಮುಂತಾದ ವಿಷಯುಗಳು ಪ್ರತಿಪಾದಿತವಾಗಿವೆ. "ಇದು ಪರಮ ನಿರ್ವಾಣ ಪರಿಪದವೆನಿಪ ಶಾಂಭವೀಯ ಯೋಗದ ಸೂತ್ರ" ಎಂದು ಗ್ರಂಥದ ವಿಷಯ ನಿರೂಪಣೆಯ ಬಗೆಗೆ ಕವಿಯ ಮಾತು, ಹಾಗೂ ಅದರ ಹೆಸರು, ಗ್ರಂಥದಲ್ಲಿ ವೀರಶೈವ ತತ್ವ ಪ್ರತಿಪಾದನೆಗೆ ಪ್ರಾಧಾನ್ಯವಿದೆಯೆಂಬುದನ್ನು ಸ್ಪಷ್ಟಪಡಿಸುತ್ತವೆ. ಈ ಕೃತಿ, "ವೀರಶೈವಕ್ಕೆ ಸಂಬಂಧಿಸಿದ್ದು. ಇದರಲ್ಲಿ ಬಾರದ ತಾತ್ತ್ವಿಕ ಮತ್ತು ಚಾರಿತ್ರಿಕ ವಿಷಯವಿಲ್ಲ... ವೀರಶೈವ ವಿಶ್ವಕೋಶವನ್ನು ಒಂದೇ ಗ್ರಂಥದಲ್ಲಿ ಒದಗಿಸಿಕೊಡಬೇಕೆಂಬ ಹೇತು ಇದಕ್ಕೆ ಪ್ರೇರಕವಾಗಿದೆ. 'ಶಿವತತ್ವ ಚಿಂತಾಮಣಿ' ಎಂಬ ಹೆಸರೂ ಸಾರ್ಥಕವಾಗಿದೆ. ಲಕ್ಕಣ್ಣನಲ್ಲಿ ಚರಿತ್ರಕಾರ ಕವಿಯ ಶಕ್ತಿಯಿದೆ.[೬] ಗುಬ್ಬಿಯ ಮಲ್ಲಣಾರ್ಯನ 'ವೀರಶೈವಾಮೃತ ಪುರಾಣ' ಕೆಲವು ವಿಷಯಗಳಲ್ಲಿ ಇದಕ್ಕೆ ಋಣಿಯಾಗಿದೆ ಎಂಬುದು ಗಮನಾರ್ಹ. ಲಕ್ಕಣ್ಣ ದಂಡೇಶನು ತನ್ನ ಕೃತಿಯಲ್ಲಿ ೧೮ ವೀರಶೈವ ಪುರಾಣ ಲಕ್ಷಣಗಳನ್ನು ವಿವರಿಸಿದ್ದು, 'ವೀರತಶೈವ ಪುರಾಣ ಪ್ರವರ್ತಕ' ಎಂಬ ಪ್ರಶಸ್ತಿಗೆ ಪಾತ್ರನಾಗತಕ್ಕವನು. ಗುರುರಾಜ ಚಾರಿತ್ರದ ಸಿದ್ಧನಂಜೇಶನು ಲಕ್ಕಣನ ಕೃತಿಯನ್ನು 'ಶಾಸ್ತ್ರ' ಎಂದೇ ಎಣಿಸಿದ್ದಾನೆ.

**ವೀರಶೈವಾಮೃತ ಪುರಾಣ:** ಗುಬ್ಬಿಯ ಮಲ್ಲಣಾರ್ಯ (೧೫೧೩) ಇದರ ಕರ್ತೃ. ಮೇಲೆ ತಿಳಿಸಿದ ಗುಬ್ಬಿ ಮಲ್ಲಣ್ಣನ ಮೊಮ್ಮಗ. ತನ್ನ ಕಾಲದಲ್ಲಿ ಉಭಯಭಾಷಾ ಕವಿ ಎಂದೂ ಬಸವಪುರಾಣದ ಅರ್ಥವನ್ನು ಹೇಳುವುದರಲ್ಲಿ ಸಮರ್ಥನೆಂದೂ ಪ್ರಸಿದ್ಧನಾಗಿದ್ದನು. ಆದ್ದರಿಂದ 'ಬಸವ ಪೌರಾಣದ ಮಲ್ಲಣಾರ್ಯ' ಎಂದು ಹೆಸರು ಹೊಂದಿದ್ದನು. ಚೇರಮನು ತನ್ನ ಚೇರಮ ಕಾವ್ಯದಲ್ಲಿ "ವೇದಾಂತ ಸಿದ್ಧಾಂತ ಲಕ್ಷಣ ವೈದ್ಯ ಭರತ ಸಾಮುದ್ರಿಕ ಜ್ಯೋತಿಷಾಲಂಕಾರ ಸರಸಗೀತಂ ವಾದ್ಯ ಶಕುನ ಸದ್ವ್ಯಾಕರಣ ಸೂಪ ರತಿಶಾಸ್ತ್ರ"ಗಳಲ್ಲಿ ಮಲ್ಲಣಾರ್ಯ ಪರಿಣಿತನಾಗಿದ್ದನೆಂದು ಹೊಗಳಿದ್ದಾನೆ. ಇವನ ಕೃತಿಗಳು: ಭಾವಚಿಂತಾರತ್ನ' ಮತ್ತು 'ವೀರಶೈವಾಮೃತ ಪುರಾಣ', ಎರಡೂ ವಾರ್ಧಿಕ ಷಟ್ಪದಿಯಲ್ಲಿ ರಚಿತವಾಗಿವೆ. ಭಾವಚಿಂತಾರತ್ನ ಪಂಚಾಕ್ಷರೀ ಮಹಿಮೆಯನ್ನು ಬೋಧಿಸುವ ಕಾವ್ಯ. ವೀರಶೈವಾಮೃತ ಪುರಾಣ ಮತ ಶಾಸ್ತ್ರ ಗ್ರಂಥ. ೭೮೯ ಪದ್ಯಗಳುಳ್ಳ ಈ ಬೃಹತ್ ಗ್ರಂಥದಲ್ಲಿ ವೀರಶೈವ ಸಿದ್ಧಾಂತವು ವಿಸ್ತಾರವಾಗಿ ಪ್ರತಿಪಾದಿತವಾಗಿದೆ. ಅಲ್ಲದೆ, ಶಿವನ ೨೫ ಲೀಲೆಗಳು, ಶಿವಶರಣರ ಕಥೆಗಳು, ಮುಂತಾದ ಅನೇಕ

ಷಟ್ಪದಿಯ ಕಾವ್ಯದಿಂದಾಗಿ ಮಲ್ಲಣಾರ್ಯನ ಹೆಸರು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಗಮನಾರ್ಹವೆನಿಸಿದೆ. ಅವನ ಪಿತಾಮಹನೆ ಈ ಮಲ್ಲಣ್ಣ: ತೋಂಟದ ಸಿದ್ಧಲಿಂಗ ಯತಿಯ ಶಿಷ್ಯ. ಈತನು 'ಗಣಭಾಷ್ಯರತ್ನಮಾಲೆ' ಎಂಬ ವಚನ ಗ್ರಂಥವನ್ನೂ, 'ವಾತುಲತಂತ್ರ' ಎಂಬ ಶೈವಾಗಮಕ್ಕೆ ಕನ್ನಡದಲ್ಲಿ ಟೀಕೆಯನ್ನೂ ಬರೆದಿದ್ದಾನೆ. 'ಗಣಭಾಷ್ಯರತ್ನಮಾಲೆ'ಯಲ್ಲಿ ಅಂಗಸ್ಥಲ ೪೪, ಲಿಂಗಸ್ಥಲ ೫೭, ಈ ೧೦೧ ಸ್ಥಲಗಳಲ್ಲಿ ವೀರಶೈವರು ಆಚರಿಸಬೇಕಾದ ಆಚರಣೆಗಳನ್ನು ವಿವರಿಸಿದ್ದಾನೆ. ಗ್ರಂಥದ ಬಗೆಗೆ ಕವಿಯ ಪ್ರಶಸ್ತಿ ವಾಕ್ಯಗಳು: "ಇದು ಪರಮವೀರಶೈವ ಸಿದ್ಧಾಂತ ತತ್ವಜ್ಞಾನ, ಇದು ವೀರಶೈವ ಪ್ರತಿಷ್ಠಾಸ್ಥಾಪನಾಚಾರ್ಯ, ಇದು ದಿವ್ಯವೇದಾಂತ ಶಿರೋಮಣಿ, ಇದು ಸಮಸ್ತ ಶಾಸ್ತ್ರಮುಖ್ಯಮುಖದರ್ಪಣ" ಇತ್ಯಾದಿ. ಗ್ರಂಥ ರಚನೆಯ ಉದ್ದೇಶ ಗಮನಾರ್ಹ: "ಬಸವರಾಜದೇವರು, ಚೆನ್ನಬಸವದೇವರು, ಪ್ರಭುದೇವರು, ಮುಖ್ಯವಾದ ಅಸಂಖ್ಯಾತ ಮಹಾಗಣಂಗಳು ನೂಱೊಂದರಲ್ಲಿ ನಡೆದು ನುಡಿದ ವಚನಗಳು ಸ್ಥಲಭಿನ್ನವಾಗಿರ್ದೊಡೆಚಂದವಲ್ಲೆಂದು ಕಂಠಮಾಲೆಯ ಕೋದು ಹಣಿಗೆಯಱಿದು ಸೇರಿಸಿದೆನು ನಿಮ್ಮ ಕಾರುಣ್ಯದ ಶಿಶುಗುಬ್ಬಿಯ ಮಲ್ಲಣ್ಣಗಳು." ಅಲ್ಲದೆ, "ವರವೇದಶಾಸ್ತ್ರಪುರಾಣಾಗಮೇತಿಹಾಸಾದಿ ನಾನಾ ಧರ್ಮಶಾಸ್ತ್ರೋಕ್ತಗ್ರಂಥಗಳಿಂ ಆದ್ಯರ ವಚನಂಗಳಿಂ ನೂರೊಂದು ಸ್ಥಲಮಾಗೆ ಸೇರಿಸಿದಂ ಗುಬ್ಬಿಯ ಮಲ್ಲಣ್ಣಗಳ್" ಎಂಬ ಮಾತಿನಿಂದ ಗ್ರಂಥಸ್ವರೂಪ ಪರಿಚಯವಾಗುತ್ತದೆ. ಇದು ಸಂಸ್ಕೃತ ಪ್ರಮಾಣವಾಕ್ಯ ಸಹಿತವಾದ, ನಡುನಡುವೆ ವಿವರಣೆಗಳುಳ್ಳ, ಏಕೋತ್ತರಶತಸ್ಥಲ ವಿಷಯಕವಾದ ವಚನಗಳ ಸಂಕಲನ ಗ್ರಂಥ ಎಂದು ಹೇಳಬಹುದು.

**ಪದ್ಯರೂಪದ ಗ್ರಂಥಗಳು**

**ಶಿವತತ್ವ ಚಿಂತಾಮಣಿ**: ಇದರ ಕರ್ತೃ ಲಕ್ಕಣ್ಣ ದಂಡೇಶ. ಇವನು ವಿಜಯನಗರದ ದೊರೆ ಪ್ರೌಢದೇವರಾಯನ ಆಳಿಕೆಯಲ್ಲಿ (೧೪೧೯–೧೪೪೬) ಅವನ ಮಂತ್ರಿಯಾಗಿಯೂ ಆಪ್ತ ಮಿತ್ರನಾಗಿಯೂ ಇದ್ದನು. ಅನೇಕ ಶಾಸನಗಳು ಈ ಅಂಶವನ್ನು ಸ್ಥಿರ ಪಡಿಸಿವೆ. ಶಿವತತ್ವ ಚಿಂತಾಮಣಿಯಲ್ಲಿ ೨೧೨೧ ವಾರ್ಧಿಕ ಷಟ್ಪದಿಗಳಿವೆ. ಪ್ರತಿಪದ್ಯವೂ 'ವಿಮಲ ಚರಣಾಂಬುಜಕ್ಕೆ ಶರಣು' ಎಂದು ಮುಗಿಯುವುದು ಶತಕಗಳ ಪದ್ಧತಿಯನ್ನು ನೆನಪಿಗೆ ತರುತ್ತದೆ. ಇದರಲ್ಲಿ – ನಿತ್ಯಾನಿತ್ಯವಸ್ತು ವಿವರಣ, ಸಕಲ ನಿಷ್ಕಲ ವಿಚಾರ, ಶಿವನ ೨೫ ಲೀಲೆಗಳು, ಭುವನಕೋಶ, ಶಿವಲೋಕ ವರ್ಣನೆ, ಶಿವನಂದೀಶ ಸಂವಾದ, ಬಸವ ಚರಿತ,

ಪ್ರತ್ಯೇಕವಾಗಿ ಉಳಿದು ಆನಂದಾನುಭವವನ್ನು ಮಾಡುವುದಲ್ಲ. ತಾನು ಎಲ್ಲಿಂದ ಹೊರಬಿದ್ದನೋ ಅಲ್ಲಿಯೇ ಐಕ್ಯವಾಗುವುದು. ಆದುದರಿಂದ ಮೊದಲಿನಲ್ಲೂ ಅದ್ವೈತ, ಕೊನೆಯಲ್ಲೂ ಅದ್ವೈತ; ಮಧ್ಯದಲ್ಲಿ ದ್ವೈತ ಮತ್ತು ವಿಶಿಷ್ಟಾದ್ವೈತಗಳು ಕಂಡುಬರುತ್ತವೆ."

ಆದರೆ, ವಚನಕಾರರಲ್ಲಿಯೇ ಮತಭೇದವಿದೆ. ಬಸವ, ಅಲ್ಲಮ, ಅಕ್ಕ – ಇವರು ಅದ್ವೈತದ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ. ಕೆಲವರು 'ದ್ವೈತಾದ್ವೈತ' ಎಂದಿದ್ದಾರೆ. "ಇದನ್ನು ಸಾಮರಸ್ಯದ ಸಿದ್ಧಾಂತವೆಂದು ಕರೆದರೆ ತಪ್ಪಾಗಲಾರದು" ಎನ್ನುವಷ್ಟು ಸರಳವೂ ಅಲ್ಲ ವಿಚಾರ. ಸಾಧಕನ ಅನುಭವದ ನೆಲೆ ಎಲ್ಲಿ ಎನ್ನುವುದನ್ನು ಅವಲಂಬಿಸಿರತಕ್ಕದ್ದು ದ್ವೈತಾದ್ವೈತಾದಿ ಭಾವಗಳು. ಅದ್ವೈತಸಿದ್ಧಾಂತಿಗಳಾದ ಶಂಕರಾಚಾರ್ಯರ ಸ್ತೋತ್ರಗಳಲ್ಲಿ ಹಲವು ದ್ವೈತದ ನೆಲೆಯಲ್ಲೆ ನಲಿಯುವುದಿಲ್ಲವೆ? ಈ ಸಂದರ್ಭದಲ್ಲಿ, ತೋಂಟದ ಸಿದ್ಧಲಿಂಗ ಯತಿಯ ಬಗೆಗೆ 'ದ್ವೈತಾದ್ವೈತತಿಮಿರಮಾರ್ತಾಂಡ' ಎಂಬ ಶಾಸನದ ಮಾತನ್ನೂ ಗಮನಿಸಬಹುದು.

**ವೈದಿಕ ಶಾಸ್ತ್ರ ಗ್ರಂಥಗಳು (ಅದ್ವೈತ, ದ್ವೈತ, ವಿಶಿಷ್ಟಾದ್ವೈತ):**

ವೈದಿಕಮತಾನುಯಾಯಿಗಳು ಮೊದಮೊದಲು ಕನ್ನಡ ಗ್ರಂಥ ರಚನೆಗೆ ಮನಸ್ಸು ಕೊಟ್ಟಿರಲಿಲ್ಲವೆಂದೂ, ಜೈನರು ವೀರಶೈವರೂ ಕನ್ನಡದಲ್ಲಿ ಗ್ರಂಥ ರಚನೆ ಮಾಡುತ್ತಿದ್ದುದು ವೈದಿಕ ಮತೀಯರಿಗೆ ಒಂದು ವಿಧದಲ್ಲಿ ಪ್ರಚೋದನೆ ನೀಡಿ ಅವರು ಗ್ರಂಥ ರಚನೆಗೆ ತೊಡಗಿರಬಹುದೆಂದೂ ಈ ಹಿಂದೆ ಗಮನಿಸಿದ್ದಾಗಿದೆ. ಸಂಸ್ಕೃತ ಭಾಷೆಯಲ್ಲಿದ್ದ ವೈದಿಕ ಮತದ ಗ್ರಂಥಗಳ ಅಧ್ಯಯನ ಅಧ್ಯಾಪನಗಳೆಲ್ಲವೂ ಸಂಸ್ಕೃತವನ್ನು ಬಲ್ಲ ಬ್ರಾಹ್ಮಣ ವರ್ಣದವರಿಂದಲೇ ಸಾಗುತ್ತಿತ್ತು. ವೈದಿಕ ಧರ್ಮದ ಶಾಸ್ತ್ರ ಗ್ರಂಥಗಳ ರಚನೆ ಕನ್ನಡದಲ್ಲಿಯೂ ನಡೆಯತೊಡಗಿದಾಗ, ಅದನ್ನು ನಿರ್ಮಾಣ ಮಾಡುವ ಕಾರ್ಯವೂ ಅವರಿಂದಲೇ ನಡೆದದ್ದು ಸಹಜವೂ ಅನಿವಾರ್ಯವೂ ಆಗಿ ಪರಿಣಮಿಸಿದ ಒಂದು ಚಾರಿತ್ರಿಕ ಸಂಗತಿ.

**ಅದ್ವೈತಮುನಿ ಗುಣಗಳ್:** ವೈದಿಕ ಧರ್ಮವನ್ನು ಆಧರಿಸಿ ಮುಖ್ಯವಾಗಿ ಮೂರು ಪಂಥಗಳು ಕನ್ನಡ ನಾಡಿನಲ್ಲಿ ಜೈನ, ವೀರಶೈವ, ಮುಂತಾದ ಇತರ ಮತಗಳೊಂದಿಗೆ ಪ್ರಚಾರಕ್ಕೆ ಬಂದವು. ರಾಮಾನುಜಾಚಾರ್ಯರೂ (೧೧–೧೨ನೆಯ ಶತಕಗಳು), ಮಧ್ವಾಚಾರ್ಯರೂ (೧೩ನೆಯ ಶತಕ) ತಮ್ಮ ಮತಗಳನ್ನು ಪ್ರಚಾರ ಮಾಡುವುದಕ್ಕೆ ಬಹು ಮುಂಚಿನಿಂದಲೂ ಅದ್ವೈತ ಮತ ಕನ್ನಡನಾಡಿನಲ್ಲಿ ಪ್ರಚುರವಾಗಿತ್ತು. ಆದರೂ, ಇದು ಜನಸಾಮಾನ್ಯದ ದರ್ಶನವಾಗಿದ್ದಿತು ಎಂದು

ಇತರ ವಿಷಯಗಳೂ ಈ ಗ್ರಂಥದಲ್ಲಿ ಅಡಕವಾಗಿವೆ. ಆದ್ದರಿಂದ, ಇದರಲ್ಲಿ ಕಾವ್ಯಕವಿತ್ವ, ಶಾಸ್ತ್ರ ಕವಿತ್ವ – ಇವೆರಡರ ಸಂಗಮವನ್ನು ಕಾಣಬಹುದು, "ಶಿವತತ್ತ್ವ ಚಿಂತಾಮಣಿ ಸಿದ್ಧಾಂತ ಪ್ರಧಾನವಾಗಿದ್ದರೆ ಇದು ಚರಿತ್ರ ಪ್ರಧಾನವಾಗಿದೆ... ಈ ಗ್ರಂಥ ಬಹು ವಿಷಯಗರ್ಭಿತವಾದ ವೀರಶೈವ ಕೋಶವಾಗಿದೆಯೆಂದೂ ಇದರಲ್ಲಿಯ ಕವಿತಾ ಶಕ್ತಿ, ಪದ್ಯರಚನಾಶಕ್ತಿ, ಭಾಷಾಶೈಲಿಗಳು ಸತ್ಕವಿಗೆ ಶೋಭಿಸುವಷ್ಟು ಚೆನ್ನಾಗಿವೆಯೆಂದೂ ಹೇಳಬಹುದು.[೭]

ವೀರಶೈವ ಸಿದ್ಧಾಂತಕ್ಕೂ ವೈದಿಕ ಮತಗಳಿಗೂ ಇರುವ ಸಂಬಂಧದ ಬಗೆಗೆ ವಿದ್ವಾಂಸರ ಅಭಿಪ್ರಾಯವನ್ನು ಗಮನಿಸಿ, ಈ ಪ್ರಕರಣವನ್ನು ಮುಗಿಸಬಹುದು.

> "ಪ್ರಸಾದಿಸ್ಥಲದ ವಚನಗಳನ್ನು ಭಗವದ್ಗೀತೆಯ ತತ್ವಗಳಿಗೆ ಸರಿಹೋಲಿಸಬಹುದು... ಪ್ರಾಣಲಿಂಗಿ ಸ್ಥಲದಲ್ಲಿ ಯೋಗಶಾಸ್ತ್ರದ ತತ್ವಗಳು ಒಳಗೊಂಡಿವೆ... ವಚನಕಾರರಲ್ಲಿ ದ್ವೈತಾದ್ವೈತ ಮೊದಲಾದ ಯಾವತರದ ಕಲಹಗಳು ಕಂಡು ಬರುವುದಿಲ್ಲ... ಹ್ಯಾಗೆ ಜೈನ ಬೌದ್ಧರು ವೇದಮತವನ್ನು ತಿರಸ್ಕರಿಸಿಬಿಟ್ಟರೋ ಹಾಗೆ ವಚನಕಾರರು ಅದನ್ನು ಬಿಟ್ಟುಕೊಟ್ಟರೆಂದು ಹೇಳಲಿಕ್ಕೆ ಬರಲಾರದು. ಅವರ ತತ್ವಗಳೆಲ್ಲ ವೇದಾಗಮೋಪನಿಷತ್ತುಗಳಿಂದಲೇ ತೆಗೆದುಕೊಂಡವಿರುತ್ತವೆ. ಮತ್ತು ಅವರ ವಚನಗಳಲ್ಲಿ ಅವುಗಳಲ್ಲಿಯ ಅವತರಣಗಳು ತುಂಬಿ ಹೊರಗಿರುತ್ತವೆ... ವಚನಕಾರರು ಸ್ವತಂತ್ರ ವಿಚಾರದವರಿದ್ದು, ವೇದಾಗಮೋಪನಿಷತ್ತುಗಳ ತತ್ವಗಳ ಮೇಲಿಂದ ತಮ್ಮದೊಂದು ಸಿದ್ಧಾಂತವನ್ನೆ ಏರ್ಪಡಿಸಿದ್ದಾರೆ. ಇದಕ್ಕೆ ಷಟ್‌ಸ್ಥಲ ಸಿದ್ಧಾಂತವೆಂದು ಹೆಸರು... ಇದರಲ್ಲಿ ಪ್ರವೃತ್ತಿ ನಿವೃತ್ತಿ ಮಾರ್ಗಗಳ ಸಮ್ಮಿಳನವೂ, ಭಕ್ತಿಜ್ಞಾನ ವೈರಾಗ್ಯದ ಸಮಾವೇಶವೂ, ಯೋಗಾಭ್ಯಾಸ ನೈತಿಕ ತತ್ತ್ವಗಳ ಸಂಘಟನೆಯೂ ಉಂಟಾಗಿ, ಒಂದು ಆಶ್ಚರ್ಯಕರವಾದ ಸಿದ್ಧಾಂತವಾಗಿರುವುದು."

–ಎಂದು ಫ.ಗು.ಹಳಕಟ್ಟಿಯವರು ಅಭಿಪ್ರಾಯಪಟ್ಟಿದ್ದರೆ, ಎಂ.ಆರ್.ಶ್ರೀನಿವಾಸಮೂರ್ತಿಯವರ ಅಭಿಪ್ರಾಯ ಹೀಗಿದೆ:

> "ಷಟ್‌ಸ್ಥಲ ಸಿದ್ಧಾಂತದಲ್ಲಿ ದ್ವೈತ ವಿಶಿಷ್ಟಾದ್ವೈತ ಮತ್ತು ಅದ್ವೈತ ಮೂರೂ ಸೇರಿಕೊಂಡಿವೆ. ಅಂಗಲಿಂಗಗಳ ಸ್ವರೂಪವನ್ನು ವಿವರಿಸುವಾಗ ಒಂದೇ ಆದ ಪರವಸ್ತು ಸ್ವಲೀಲೆಯಿಂದ ಲಿಂಗಸ್ಥಲ ಮತ್ತು ಅಂಗಸ್ಥಲ ಎಂದಾಯಿತು ಎಂದು ಹೇಳಿದೆ. ಕಡೆಗೆ ಮುಕ್ತಿಯ ಸ್ಥಿತಿಯಾದರೂ ಏನು? ತಾನು

ನಿರ್ವಾಣಿ=ನಿರ್ವಾಣ(=ಮೋಕ್ಷ) ಹೊಂದಿದವನು. ಅರಿವು=ಜ್ಞಾನ, ಅಣ್ಮು=ಶೌರ್ಯ. ತರಿಸಲವು=ನಿಶ್ಚಿತ (ಬುದ್ಧಿ), ನಿರ್ಣಯ, ತೀರ್ಮಾನ. ಎಡೆ(ರೆ)ವಟ್ಟಾಗಿರು=ಆಶ್ರಯವಾಗಿರು.]

ಮೇಲಿನ ಪದ್ಯದಲ್ಲಿ ಅದ್ವೈತ ಸಿದ್ಧಾಂತದ ಮುಖ್ಯ ಪ್ರಮೇಯಗಳೆಲ್ಲ ಬಂದಿವೆ. ವಚನಸಾಹಿತ್ಯ ತಲೆದೋರುವುದಕ್ಕೂ ಮುಂಚೆ ವಿಶೇಷಾರ್ಥಗಳಲ್ಲಿ 'ತೋರ್ಪುವೆಲ್ಲಂ' 'ನೆಳಲ್', 'ಅರಿವು', ತರಿಸಲವು – ಈ ಕನ್ನಡ ಪದಗಳು ಬಳಕೆಯಾಗಿರುವುದು ಗಮನಾರ್ಹ.

**ಚಂದ್ರಚೂಡಾಮಣಿ ಶತಕ:**

ಕವಿಚರಿತೆಕಾರರು ಚಂದ್ರಚೂಡಾಮಣಿ ಶತಕದ ವಿಚಾರವಾಗಿ ಬರೆಯುತ್ತಾ, ಅದರ ಕರ್ತೃವೂ, (ಅದರಲ್ಲಿನ ಒಂದು ಪದ್ಯದಿಂದ ತಿಳಿದುಬರುವಂತೆ) ಉದಯಾದಿತ್ಯನ 'ಸಂಧಿವಿಗ್ರಹಿಲಲಾಮ'ನಾಗಿದ್ದ ನಾಗವರ್ಮನೂ ಚಾಳುಕ್ಯ ರಾಜ ಭುವನೈಕಮಲ್ಲನ (೧೦೬೯–೧೦೭೦) ದಂಡನಾಯಕನ ಕಾಲದಲ್ಲಿ ಬಹಳ ಪ್ರಸಿದ್ಧನಾಗಿದ್ದ ಅದ್ವೈತಿ ಗುಣಗಳ್ಳ ನಾಗವರ್ಮಾಚಾರ್ಯನೂ ಒಬ್ಬನೇ ವ್ಯಕ್ತಿ ಎಂದು ಊಹಿಸುತ್ತಾರೆ. ಇದು ನಿಶ್ಚಿತ ಎಂದಾದರೆ, ಚಂದ್ರಚೂಡಾಮಣಿ ಶತಕದ 'ನಾಗವರ್ಮ'ನಿಗೇ – ಕವಿಚರಿತೆಕಾರರು ಹೇಳುವಂತೆ – 'ಗುಣಗಳ್ಳ' ಎಂಬ ಬಿರುದಿದ್ದು, ಆತ ಮಹಾಪಂಡಿತನೂ ಅದ್ವೈತಿಯೂ ಆಗಿದ್ದನೆಂದು ಹೇಳಬಹುದು. ಚಂದ್ರಚೂಡಾಮಣಿ ಶತಕ ಪ್ರಧಾನವಾಗಿ ವೈರಾಗ್ಯವನ್ನು ಬೋಧಿಸುವ ಗ್ರಂಥ. ವೈರಾಗ್ಯ ಸಾಧಾರಣವಾಗಿ ಎಲ್ಲ ಮತಗಳೂ ಒಪ್ಪಿಕೊಂಡಿರುವ ಮೋಕ್ಷ ಸಾಧಕವಾದ, ನಿವೃತ್ತಿಮಾರ್ಗದ ಲಕ್ಷಣ. ಈ ಶತಕದಲ್ಲಿ ಶಾಸನ ಪದ್ಯಗಳಲ್ಲಿ ಕಂಡುಬರುವಂಥ ಅದ್ವೈತದ ಮುಖ್ಯ ತತ್ತ್ವಗಳ ಪ್ರಸ್ತಾಪವಿಲ್ಲ. ಆದ್ದರಿಂದ, ಕವಿಚರಿತೆಕಾರರ ಊಹೆ ಸರಿಯಲ್ಲ ಎನ್ನುವ ಎ.ವೆಂಕಟಸುಬ್ಬಯ್ಯನವರ ವಾದವನ್ನೂ ಗಮನಿಸಬೇಕಾಗುತ್ತದೆ. ಇದು ಹೇಗಿದ್ದರೂ, ಮತ್ತೇಭವಿಕ್ರೀಡಿತ ವೃತ್ತದಲ್ಲಿ ಬರೆದಿರುವ ಕನ್ನಡದ ಈ ಮೊದಲ ಶತಕಗ್ರಂಥ ಅದ್ವೈತವನ್ನು ಪ್ರತಿಪಾದಿಸದಿದ್ದರೂ ಶೈವಸಂಪ್ರದಾಯದ ಅದ್ವೈತಿಯಿಂದ ರಚಿತವಾಗಿದೆ ಎಂದು ಹೇಳಲಡ್ಡಿಯಿಲ್ಲ. ಅದ್ವೈತದಲ್ಲಿ ಭಕ್ತಿಗಿಂತ ಜ್ಞಾನವೈರಾಗ್ಯಗಳಿಗೆ ಪ್ರಾಶಸ್ತ್ಯ ಹೆಚ್ಚು. ಚಂದ್ರಚೂಡಾಮಣಿ ಶತಕಕ್ಕೆ 'ಜ್ಞಾನಸಾರ' ಎಂಬ ಇನ್ನೊಂದು ಹೆಸರು ಇರುವುದೂ ಗಮನಾರ್ಹ. ವೈರಾಗ್ಯವಿಲ್ಲದೆ ತತ್ತ್ವಜ್ಞಾನ ಸಿದ್ಧಿಸುವುದಿಲ್ಲ.

ವೈರಾಗ್ಯಸಾರದ ಒಂದು ಪದ್ಯ:

ಹೇಳಲು ಸಾಧ್ಯವಿಲ್ಲ. ಮೇಲೆ ಸೂಚಿಸಿದ್ದಂತೆ, ಸಂಸ್ಕೃತದ ವಿದ್ಯೆಯಲ್ಲಿ ಪಾರಂಗತರಾದ ಬ್ರಾಹ್ಮಣ ವರ್ಗದಲ್ಲಿ ಮಾತ್ರ ಪ್ರಚುರವಾಗಿತ್ತು ಎಂದು ತೋರುತ್ತದೆ. ಆದಿ ಕವಿ ಪಂಪನ ಪೂರ್ವಿಕರೂ, ಬಸವೇಶ್ವರರೂ ಹುಟ್ಟಿದ 'ಕಮ್ಮೆ' ಕುಲ ಅದ್ವೈತ ನಿಷ್ಠವಾದ ಶೈವ ಸಂಪ್ರದಾಯಕ್ಕೆ ಸೇರಿದ್ದೆಂದು ಊಹಿಸಬಹುದಾಗಿದೆ. ಆದರೆ, ಕನ್ನಡ ವಾಙ್ಮಯದಲ್ಲಿ ಅದ್ವೈತದ ಸ್ಪಷ್ಟವಾದ ಉಲ್ಲೇಖ ದೊರೆಯುವುದು ೧೧೭೧ರ, ಗುಣಗಳ್ಳ (ಅದ್ವೈತ ಮುನಿ) ವಿಷಯಕವಾದ, ಒಂದು ಶಾಸನದ ಪದ್ಯಗಳಲ್ಲಿ, ಈ ಕೆಲವು ಪದ್ಯಗಳು ಗಮನಾರ್ಹ:

ಜ್ಞಾನಮೆ ನಾಂ, ನಿನಗೆ ಒಡಲ್ ಎಸೆ–
ವಾನಂದಂ ತೋರ್ಪುವೆಲ್ಲಂ ಎನ್ನ ನೆೞಲ್, ಮ–
ತ್ತೇನುಂ ಬೇಡೆಲ್ಲ – ಎಂಬನ್,ಇ–
ಳಾನುತನ್ ಅದ್ವೈತಶೇಖರಂ ಗುಣಗಳ್ಳಂ.
ಮುಕ್ತಿಶ್ರೀಸತಿಗನುರಕ್ತಂ, ಸಂಸಾರ ವಿ–
ರಕ್ತಂ, ನಿವಿಷಯಂ, ನಿರಪೇಕ್ಷಂ, ಶುಚಿ, ಜೀವ–
ನ್ಮುಕ್ತಂ, ನಿರ್ವಾಣಿ, ಗುಣಗಳ್ಳಂ.*
ಅಱಿವು, ಅಣ್ಮು, ವೈರಾಗ್ಯಂ, ತಱಿಸಲವು, ಅಭ್ಯಾಸಂ,
ನಱಿಭಕ್ತಿ ಶಾಂತಿ ಧೃತಿ ತುಷ್ಟಿಯೆಂಬಿವ–
ರ್ಕೆಱಿವಟ್ಟಾಗಿ ಗುಣಗಳ್ಳಂ.*

[ನೆೞ(ಳ)ಲ್=ನೆರಳು, ಪ್ರತಿಬಿಂಬ; ಹುರುಳಿಲ್ಲದ್ದು, ಎಂದರೆ ಮಾಯೆ, ಮಿಥ್ಯೆ. ತೋರ್ಪುವೆಲ್ಲಂ=ತೋರಿಕೆ; ಕಣ್ಣಿಗೆ ಕಾಣಿಸುವ ಸರ್ವಸ್ವವೂ; ದೃಶ್ಯಪ್ರಪಂಚವೆಲ್ಲವೂ (Appearance). ಇಳನಾನುತನ್=ಪ್ರಪಂಚದ ಹೊಗಳಿಕೆಗೆ ಪಾತ್ರನಾದವನು, ಮುಕ್ತಿ. ಶ್ರೀಸತಿಗನುರಕ್ತಂ=ಮೋಕ್ಷದಲ್ಲಿ ಪ್ರೀತಿಯುಳ್ಳವನು. ನಿರ್ವಿಷಯಂ=ಪ್ರಾಪಂಚಿಕ (ಇಂದ್ರಿಯ) ಸುಖವನ್ನು ಅನುಭವಿಸದವನು. ಜೀವನ್ಮುಕ್ತಂ=ಜೀವಂತನಾಗಿದ್ದು ಕೊಂಡೇ ಮೋಕ್ಷಪದವಿಯನ್ನು ಪಡೆದವನು.

---

* ಈ ಪದ್ಯಗಳನ್ನು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ 'ಕನ್ನಡ ಬಾವುಟ'ದಿಂದ ಉದ್ಧರಿಸಲಾಗಿದೆ. ಈ ಪದ್ಯಗಳು ಷಿಕಾರಿಪುರದ ೧೨೯ನೆಯ ಶಾಸನದವು ಎಂದು ಕವಿಚರಿತೆಯಿಂದ ತಿಳಿದು ಬರುತ್ತದೆ.

ಮುನ್ನವೇ ಅನುಭವಾಮೃತವನ್ನು ಬರೆದಿರಬೇಕು.... ಆಮೇಲೆ ಸಹಜಾನಂದ ಗುರುವಿನಲ್ಲಿ ಆಶ್ರಮವನ್ನು ಸ್ವೀಕರಿಸಿರಬೇಕು[೮] ಎಂಬ ಅಭಿಪ್ರಾಯಕ್ಕೆ ವಿರುದ್ಧವಾಗಿ, ಯೋಗಿಯ ಬ್ರಹ್ಮಾನುಭೂತಿಯ ಸುಖವನ್ನು ಗೃಹಸ್ಥನ ಸಂಭೋಗ ಸುಖಕ್ಕೆ ಹೋಲಿಸಿರುವುದರಿಂದಲೂ (ಅ.೧೦– ೨೬, ೨೭) ಸಂನ್ಯಾಸಾಶ್ರಮವನ್ನು ಸೂಚ್ಯವಾಗಿ ಬರೆದಿರುವುದರಿಂದಲೂ ಈತ ಪೂರ್ತಿಯಾಗಿ ಗೃಹಸ್ಥಾಶ್ರಮಿಯಾಗಿದ್ದನೆಂಬ ಅಭಿಪ್ರಾಯವೂ ವ್ಯಕ್ತಪಟ್ಟಿದೆ.[೯] ಶ್ರೀ ಶಂಕರಾನಂದ ಯೋಗೀಶ್ವರರೆಂಬುವರು ತಮ್ಮ ಗ್ರಂಥಗಳಲ್ಲಿ "ಶ್ರೀ ಸದಾನಂದ ಗುರು ಮಹಲಿಂಗರಂಗ ಯತಿವರೇಣ್ಯ" ಎಂದು ಉಲ್ಲೇಖ ಮಾಡಿದ್ದಾರೆ. ಈ ಮಹಲಿಂಗರಂಗ ರಂಗನಾಥನೇ ಆಗಿರುವ ಪಕ್ಷಕ್ಕೆ, ಅನುಭವಾಮೃತವನ್ನು ಬರೆದ ಮೇಲೆ ಅವನು ಯತಿಯಾಗಿ ಸದಾನಂದ ಎಂಬ ಹೆಸರನ್ನು ತಳೆದಿರಬಹುದು; ಇವನ ಸ್ಥಳ ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲೂಕಿನಲ್ಲಿರುವ ಉಚ್ಚಂಗಿ ದುರ್ಗದ ಪ್ರಾಂತ ಎಂದು ಗ್ರಂಥಾಧಾರದಿಂದ ತೋರಿ ಬರುತ್ತದೆ – ಎಂಬ ಊಹೆಗಳೂ ಇವೆ.[೧೦] ಕವಿಚರಿತೆಕಾರರು ರಂಗನಾಥನ ಕಾಲವನ್ನು ೧೬೭೫ ಎಂದು ನಿರ್ಣಯಿಸಿದ್ದಾರೆ.

ರಂಗನಾಥನ ಹೆಸರಿನ 'ನಾಥ' ಎಂಬ ಪದದ ಸುಳುಹು ಹಿಡಿದು, ಡಿ.ಕೆ.ಭೀಮಸೇನರಾಯರು (ತಮ್ಮ 'ಅನುಭವಾಮೃತವೂ ಹರಿಕಥಾಮೃತ ಸಾರವೂ' ಎಂಬ ಲೇಖನದಲ್ಲಿ) ಒಂದು ಹೊಸ ಸಂಗತಿಯನ್ನು ಶೋಧನೆ ಮಾಡಿರುವುದು ಗಮನಾರ್ಹವಾಗಿದೆ: "ರಂಗನಾಥನು ನಾಥ ಸಂಪ್ರದಾಯದ ಬ್ರಾಹ್ಮಣನಾಗಿರಬೇಕು. ರಂಗನಾಥನು ಅನುಭವಾಮೃತವನ್ನು ಮಹಾರಾಷ್ಟ್ರಕವಿ ಮುಕುಂದರಾಜನ 'ವಿವೇಕಸಿಂಧು'ವನ್ನು ಆಧರಿಸಿ ಬರೆದಂತೆ ಕಾಣುತ್ತದೆ. ವಿವೇಕಸಿಂಧುವಿಗೂ ಅನುಭವಾಮೃತಕ್ಕೂ ಅನೇಕ ಕಡೆಗಳಲ್ಲಿ ಹೋಲಿಕೆಗಳಿವೆ. ಮುಕುಂದರಾಜನು ಹದಿಮೂರನೆಯ ಶತಮಾನದ ಕವಿ. ನಾಥ ಪಂಥದವನು. ವಿವೇಕಸಿಂಧುವನ್ನು 'ಶಂಕರೋಕ್ತೀ ವರೀ। ಮೀ ಬೋಲಿಲೋ ಮರಾಠಿ ವೈಖರೀ' ಬರೆದಿರುವುದಾಗಿ ಹೇಳಿರುವುದರಿಂದ, ಶ್ರೀಮತ್ ಶಂಕರಾಚಾರ್ಯರ ಅದ್ವೈತವನ್ನೇ ತನ್ನ ಗ್ರಂಥದಲ್ಲಿ ಪ್ರತಿಪಾದಿಸಿರುವನೆಂದು ಗೊತ್ತಾಗುತ್ತದೆ," ಎಂದು ತಿಳಿಸಿ, ಗುರುವಿಗೆ ಪ್ರಾಶಸ್ತ್ಯ, ಯೋಗಕ್ಕೆ ಮಹತ್ವ, ನಾಥ ಪಂಥದ ಸಂಬಂಧ, ವಿಷಯ ನಿರೂಪಣೆ ಗುರುಶಿಷ್ಯ ಸಂವಾದ ರೂಪದಲ್ಲಿರುವುದು ಮೋಕ್ಷ ಸಾಧನೆಗೆ ಅಧಿಕಾರ ಸಂಪನ್ನತೆ, ಫಲಶ್ರುತಿ – ಈ ಅಂಶಗಳು ಇಬ್ಬರಲ್ಲಿಯೂ ಕಂಡುಬರುತ್ತವೆ ಎಂದಿದ್ದಾರೆ. ಅವರು ಗಮನಿಸಿರುವ ಇನ್ನೊಂದು ಮುಖ್ಯ ಸಮಾನಾಂಶ, ಇಬ್ಬರೂ ದೇಶಭಾಷೆಗೆ

ನರೆಯಿಂದಂ ತೆರೆಯಿಂದಂ ಆದ ಸೆರೆಯಿಂದಂ ಮುಪ್ಪಿನೊಳ್ ಚೆಲ್ವುಗೆ-
ಟ್ಟಿರುತುಂ, ವ್ಯಾಧಿಯೊಳಾಗಳುಂ ನಮೆಯುತುಂ, ತಳ್ತಿರ್ದ ದಾರಿದ್ರ್ಯದೊಳ್
ಪೊರಳುತ್ತಿರ್ದುಂ, ಅದೆಂತುಂ ಅಳಿಪೆಂದುಂ ಪೋಗದು; ಆ ಕುತ್ತಮಂ
ಹರಿಪ ಒಂದೌಷಧಿಯಂ ದಯೆಗೆಯ್ ಶ್ರೀ ಚಂದ್ರಚೂಡಾಮಣೀ.

[ನರೆ=ನರೆಗೂದಲು; ತೆರೆ=ಚರ್ಮದ ಸುಕ್ಕು; ತಳ್ತಿರ್ದ=ಕೂಡಿಕೊಂಡಿರುವ; ಅಳಿಪು=ಆಶೆ; ಕುತ್ತ=ರೋಗ; ಹರಿಪ=ಹೋಗಲಾಡಿಸುವ]

ನಿಜಗುಣ ಶಿವಯೋಗಿಗಳು 'ವಿವೇಕ ಚಿಂತಾಮಣಿ'ಯಲ್ಲಿ ಅದ್ವೈತ ತತ್ವವನ್ನು ವಿವರಿಸುವುದರ ಜೊತೆಗೆ, ಅದ್ವೈತ ಪರವಾದ ಹಾಡುಗಳನ್ನೂ ರಚಿಸಿದ್ದಾರೆ. ಈ ವಿಚಾರವನ್ನು ಹಿಂದೆ ಪ್ರಸ್ತಾಪಿಸಿದೆ. ಶಾಸ್ತ್ರಶುದ್ಧವಾಗಿ, ವಿಸ್ತಾರವಾಗಿ, ಕಾವ್ಯಗುಣವೂ ಉಳ್ಳ ಪದ್ಯಕೃತಿಯಲ್ಲಿ ಮೊತ್ತಮೊದಲಿಗೆ ಅದ್ವೈತದ ಸಿದ್ಧಾಂತವನ್ನೂ ಆ ಮಾರ್ಗದಲ್ಲಿ ಅದ್ವೈತ ಸಿದ್ಧಿಗೆ – ಎಂದರೆ, ಜೀವನ್ಮುಕ್ತಿಗೆ – ಕೈಕೊಳ್ಳಬೇಕಾದ ಸಾಧನಾ ಕ್ರಮವನ್ನೂ ಹೃದಯಂಗಮವಾದ ತಿಳಿಗನ್ನಡದಲ್ಲಿ ನಿರೂಪಿಸಿದ ಕೀರ್ತಿ 'ಅನುಭವಾಮೃತ'ದ ರಂಗನಾಥನಿಗೆ ಸಲ್ಲುತ್ತದೆ.

**ಮಹಲಿಂಗರಂಗನ 'ಅನುಭವಾಮೃತ'**

ರಂಗನಾಥ ಮಹಲಿಂಗರಂಗನೆಂದೇ ಕನ್ನಡಿಗರಿಗೆ ಚಿರಪರಿಚಿತ. ಗ್ರಂಥದಿಂದ ಕವಿಯ ವಿಚಾರ ಹೆಚ್ಚಾಗಿ ತಿಳಿದು ಬರುವುದಿಲ್ಲ. ಗ್ರಂಥಾರಂಭದಲ್ಲಿ (ಪ. ೨), "ಶ್ರೀ ಗುರುವಿನುಪದೇಶದಿಂದನುರಾಗವುದಿಸಲು ರಂಗನಾಥನು ಯೋಗಿ ಜನರಹುದೆನಲು ಪೇಳಿದನನುಭವಾಮೃತವ" ಎಂದು ಹೇಳಿಕೊಂಡಿರುವುದರಿಂದ, ಇವನ ಹೆಸರು ರಂಗನಾಥ ಎಂಬುದು ನಿಶ್ಚಿತ. ಮಹಾಲಿಂಗರಂಗ ಎಂಬುದು ತಂದೆಯ ಹೆಸರು. 'ಅನುಭವಾಮೃತವೆಂಬ ಗ್ರಂಥದ ಮನವೊಲಿದು ಮಹಲಿಂಗರಂಗನು ವಿನುತ ಶ್ರೀಗಿರಿಮಲ್ಲಿಕಾರ್ಜುನನಂಕಿತವ ಮಾಡಿ ರಚಿಸಿದನು' ಎಂದಿರುವುದರಿಂದ ಅವನು ಈ ಹೆಸರಿನಿಂದಲೂ ಪ್ರಸಿದ್ಧನಾಗಿರಬೇಕು. ತಾನು 'ಸಹವಾಸಿ' ವಂಶದವನೆಂದೂ ತನ್ನ ಗುರು ಸಹಜಾನಂದನೆಂದೂ ಕವಿ ಹೇಳಿಕೊಂಡಿದ್ದಾನೆ. ಬಳಕೆಗೆ ಬಂದಿರುವ ರಂಗಾವಧೂತ ಎಂಬ ಹೆಸರು ಗ್ರಂಥದಲ್ಲಿ ಕಂಡುಬರುವುದಿಲ್ಲ. "ರಂಗಾವಧೂತನೆಂಬುದು ಇವನು ಯೋಗಿಯಾದ ಮೇಲೆ ಪ್ರಚಾರಕ್ಕೆ ಬಂದಿರಬೇಕು.... ಇವನು ತುರಿಯಾಶ್ರಮವನ್ನು ಸ್ವೀಕರಿಸುವುದಕ್ಕೆ

ಬರೆದಿರುವದಾಗಲಿ ಜಗನ್ನಾಥದಾಸರು ರಂಗನಾಥನ ಕೃತಿಯನ್ನು ಓದಿ ಪ್ರಭಾವಿತವಾಗಿರುವುದಾಗಲಿ ಸ್ಪಷ್ಟ ಗೋಚರವಾಗಿಲ್ಲ.

ವ್ಯಾಸರು ತಮ್ಮ ಪುತ್ರ ಶುಕರಿಗೆ ಉಪದೇಶ ಮಾಡಿದಂತೆ ರಚಿಸಿರುವ ಈ ಗ್ರಂಥದಲ್ಲಿ, ಶುಕರು ಹಾಕುವ ಪ್ರಶ್ನೆಗಳಿಗೆ ವ್ಯಾಸರು ಕೊಡುವ ಉತ್ತರಗಳಲ್ಲಿ ಅದ್ವೈತ ತತ್ತ್ವದ ಪ್ರತಿಪಾದನೆ ತುಂಬ ಹೃದಯಂಗಮವಾದ ರೀತಿಯಲ್ಲಿ ಸಾಗಿದೆ. ಶುಕ ಪ್ರಶ್ನೆಗಳನ್ನು ಗಮನಿಸಿದರೆ, ಗ್ರಂಥದ ಹತ್ತು ಅಧ್ಯಾಯಗಳಲ್ಲಿ ಪ್ರತಿಪಾದಿತವಾಗಿರುವ ವಿಷಯದ ಸ್ವರೂಪ ಪರಿಚಯವಾಗುತ್ತದೆ. ಕೆಲವು ಪ್ರಶ್ನೆಗಳು:

'ಬ್ರಹ್ಮವೆಂದೊಡದೆಂತಿಹುದು? ತಿಳಿವ ಚಂದವಾವುದು: ತಿಳಿಯೆ ಫಲವೇನು?' (ಅಧ್ಯಾಯ ಪದ್ಯ ೧-೧೩)

'ಜೀವ ಪರಮರ ಪರಿಯದೆಂತೈ? ಎರಡು ತನುವೆಂತಾಯಿತೊಬ್ಬಗೆ? ದೊರಕಿತೆಂತದ್ವೈತ ನಿಜಸುಖ?' (೩-೧೯).

ಮಾಯೆಯ ಚೆಂದವಾವುದು? ಜೀವ ಜಗವಾರಿಂದಲಾದುದು, ಅವಾದ ಪರಿಯೆಂತು?'(೪-೫)

'ಸಹಜಾನಂದವೆಂತೈ ಭ್ರಮಿಸಿತೀ ಮಾಯಾಪ್ರಬಂಧಕ? ಜೀವತ್ವ ದಾರೋಪಣವದೆಂತಾಯ್ತು?' (೫-೪೭)

'ಪರಮಾತ್ಮ ಪದವನು ತಿಳುಹಬೇಕು' (೭-೪)

'ಎಂದು ಹಮ್ಮಿನ ರೂಪು? ಜೀವರು ಅದೆಂತು ದೇಹದೊಲಿರ್ಪರು? ಅವರಿಗದೆಂತು ಬಂದುದು ಜೀವತನದ ಆರೋಪವದು ಬರಿದೆ? ಎಂದು ಜೀವನ್ಮುಕ್ತಿಯಾಗುವುದು? ಜಗದ ಏಕತ್ವಮೋಕ್ಷವದೆಂತು?'(೯-೪)

'ವಿಷಮವಹ ಸಂಸಾರವಾರಿಗೆ?' (೧೦-೪೧)

ರಂಗನಾಥನು ಅತ್ಯಂತ ಗಹನವಾದ ತತ್ತ್ವಗಳನ್ನು ಮನಮೆಚ್ಚುಗೆಯಾಗುವಂಥ ಉಪಮಾನಗಳಿಂದಲೂ ದೃಷ್ಟಾಂತಗಳಿಂದಲೂ ತಿಳಿಗನ್ನಡದಲ್ಲಿ ಹೇಗೆ ಪ್ರತಿಪಾದಿಸುತ್ತಾನೆ ಎಂಬುದನ್ನು ಒಂದೆರಡು ಉದಾಹರಣೆಗಳಿಂದ ಅರಿಯಬಹುದು:

**ದೇಹ, ಧನ, ಮಡದಿ-ಮಕ್ಕಳು ಶಾಶ್ವತವಲ್ಲ**

ಬುದ್ಧಿವಂತನು ಗಳಿಸಿದರ್ಥವು। ಬಿದ್ದು ಹೋಹುದು ಕಡೆಗೆ ಮರಳಿನ
ಗದೆಗೆತ್ತಿದ ನೀರ ತೆರದಲಿ; ಮಡದಿ ಮಕ್ಕಳನು।
ಉದ್ಧರಿಸಿ ಸಲಹಿದರೆ ಸಂಗಡ। ಲೆದ್ದು ಬಾರರು ಯಮಪುರಕ್ಕೆ; ತನು।
ಹದ್ದು ಕಾಗೆಯ ಪಾಲದಾರಿಗೆ ಬಿದ್ದ ಪಾಡೆಂದ॥

ಕೊಟ್ಟಿರುವ ಅಭಿಮಾನಪೂರ್ಣ ಮಹತ್ವ: "ಜ್ಞಾನ ಸಂಪಾದನೆಯಿಂದ ಆತ್ಮನ ಸ್ವರೂಪವನ್ನು ತಿಳಿಯಬೇಕಾಗಿದ್ದಲ್ಲಿ ಸಂಸ್ಕೃತವಾದರೇನು ಮರಾಠಿಯಾದರೇನು?' ಎಂದು ಮುಕುಂದರಾಜ ಕೇಳಿದ ಪ್ರಶ್ನೆಯನ್ನೇ, ರಂಗನಾಥನು – "ಲಲಿತವಹ ಕನ್ನಡದ ನುಡಿಯಲಿ ತಿಳಿದು ತನ್ನೊಳು ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೆ ಸಂಸ್ಕೃತದಲಿನ್ನೇನು?" (ಪ.೧–೫) ಎಂದು ಹಾಕಿದ್ದಾನೆ. ಭೀಮಸೇನ ರಾಯರು ತಮ್ಮದೇ ಆದ ಲೇಖನದಲ್ಲಿ ಅನುಭವಾಮೃತಕ್ಕೂ ಜಗನ್ನಾಥದಾಸರ ಹರಿಕಥಾಮೃತಸಾರಕ್ಕೂ ಇರುವ ಹೋಲಿಕೆಯನ್ನು ದೃಷ್ಟಾಂತಗಳಿಂದ ತೋರಿಸಲು ಪ್ರಯತ್ನಪಟ್ಟಿದ್ದಾರೆ; ಜಗನ್ನಾಥದಾಸರು ಅನುಭವಾಮೃತದಿಂದ ಪ್ರಭಾವಿತರಾಗಿದ್ದಿರಬೇಕು ಎಂದು ತರ್ಕಿಸಿದ್ದಾರೆ. ಅದೇ ಲೇಖನದ ಬೇರೊಂದು ಕಡೆ ಅವರು (ಪ.೧೦೭–೧೦೮) ವೇದ, ಉಪನಿಷತ್ತು, ಭಗವದ್ಗೀತೆ – ಇವು ಎಲ್ಲ ವೇದಾಂತ ಗ್ರಂಥಗಳಿಗೂ ಸಮಾನ ಆಕರಗಳೆಂದು ಹೇಳಿ, "ರಂಗನಾಥರೂ ಜಗನ್ನಾಥದಾಸರೂ ತಮ್ಮ ತಮ್ಮ ಕೃತಿಗಳಲ್ಲಿ ಉಪನಿಷದ್ವಾಕ್ಯಗಳನ್ನೂ ಭಾವಗಳನ್ನೂ ಗೀತೆಯ ವಾಕ್ಯಗಳನ್ನೂ ಅಭಿಪ್ರಾಯವನ್ನೂ ಕನ್ನಡಿಸಿದ್ದಾರೆ" ಎಂಬ ಮಾತನ್ನೂ ಆಡಿದ್ದಾರೆ. ರಾಯರು ಉಲ್ಲೇಖಿಸಿರುವ ಇಬ್ಬರ ದೃಷ್ಟಾಂತ ಪದ್ಯಗಳಲ್ಲಿ ಭಾವಸಾಮ್ಯವು ಬಹಳ ಸ್ಥೂಲವಾಗಿ ಕಂಡುಬರುತ್ತದೆ; ಉಕ್ತಿಸಾಮ್ಯವಂತೂ ಇಲ್ಲವೇ ಇಲ್ಲ. ಮುಗಳಿಯವರೂ ತಮ್ಮ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಇವರಿಬ್ಬರ ಕೃತಿಗಳ ನಡುವಣ ಹೋಲಿಕೆಯನ್ನು ಗುರುತಿಸಿರುವರಾದರೂ, ಒಬ್ಬರ ಮೇಲೆ ಇನ್ನೊಬ್ಬರ ಪ್ರಭಾವವು ಬಿದ್ದಿರುವ ಸಂದರ್ಭವನ್ನು ಸೂಚಿಸಿಲ್ಲ. ಒಟ್ಟಿನಲ್ಲಿ ವಿಚಾರ ಮಾಡಿ ನೋಡಿದರೆ, ಮುಕುಂದರಾಜ–ರಂಗನಾಥರ ಕೃತಿಗಳಲ್ಲಿಯಾಗಲಿ, ರಂಗನಾಥ–ಜಗನ್ನಾಥ ದಾಸರ ಕೃತಿಗಳಲ್ಲಾಗಲಿ, ಕಂಡು ಬರುವ ಸಾದೃಶ್ಯ ಸಂಪತ್ತಿಗೆ ಮೂಲಗ್ರಂಥಗಳು ಸಮಾನವಾಗಿರುವುದೇ ಕಾರಣ ಎನ್ನಿಸುತ್ತದೆ. 'ನಾಥ' ಎಂಬ ಹೆಸರು ಕೆಲವು ಹೆಸರುಗಳ ಕೊನೆಯಲ್ಲಿ ಸರ್ವಸಾಮಾನ್ಯ. ಇಷ್ಟರಿಂದಲೇ ರಂಗನಾಥ ನಾಥ ಸಂಪ್ರದಾಯದವನು ಎನ್ನಲಾಗದು. ರಂಗನಾಥ ತಾನು ಸಹವಾಸಿ ವಂಶದವನು ಎಂದು ಸ್ಪಷ್ಟಪಡಿಸಿದ್ದಾನೆ; ಮುನ್ನ "ಉಪನಿಷದರ್ಥವನು ಸಂಪನ್ನಮತಿಗಳು ಪೇಳ್ದುದನೆ ನಾ ಕನ್ನಡಿಸಿದೆನು" ಎಂದೂ ತಿಳಿಸಿ, ತಾನು ಸಂಸ್ಕೃತ ಮೂಲಗಳಿಗೆ ಋಣಿಯಾಗಿರುವುದನ್ನು ಒಪ್ಪಿಕೊಂಡಿದ್ದಾನೆ. ಚಿದಾನಂದಾವಧೂತನು ತನ್ನ 'ಜ್ಞಾನಸಿಂಧು'ವನ್ನು ರಂಗನಾಥನ ಕೃತಿಯನ್ನು ಅನುಸರಿಸಿ ಬರೆದಿರುವುದು ಸ್ಪಷ್ಟಗೋಚರವಾಗಿರುವ ಹಾಗೆ, ರಂಗನಾಥನು ತನ್ನ ಕೃತಿಯನ್ನು ಮರಾಠಿಯ 'ವಿವೇಕ ಸಿಂಧು'ವನ್ನು ಅನುಸರಿಸಿ

ಜಿನರೂ ಜೀವನ್ಮುಕ್ತರು.) ಈ ಅನುಭವದ (ಅಂತಃಕರಣ) ಪ್ರಮಾಣವನ್ನು ರಂಗನಾಥ ಅನೇಕ ಕಡೆ ಒತ್ತಿ ಹೇಳಿರುವುದರಿಂದಲೂ, ಗ್ರಂಥದಲ್ಲಿ ಕವಿಯ ಲೋಕಾನುಭವ ವ್ಯಾಪಿಸಿಕೊಂಡಿರುವುದರಿಂದಲೂ ಅದಕ್ಕೆ 'ಅನುಭವಾಮೃತ' ಎಂಬ ಹೆಸರು ಸಾರ್ಥಕವಾಗಿದೆ.

**ಜ್ಞಾನಸಿಂಧು**: ಇದನ್ನು ಬರೆದಾತ ಚಿದಾನಂದಾವಧೂತ. ಅನುಭವಾಮೃತವನ್ನು ಅನುಸರಿಸಿ ಬರೆದ ಕಾರಣ, ಈ ಕವಿಯ ಕಾಲವನ್ನು ೧೭೫೦ ಎಂದು ಕವಿಚರಿತೆಕಾರರು ಹೇಳುತ್ತಾರೆ. ಇವನ ಇತರ ಕೃತಿಗಳು: ಕಾಮವಿಡಂಬನ, ದೇವೀಮಾಹಾತ್ಮ್ಯ, ಚಿದಾನಂದರ ವಚನ, ಪಂಚೀಕರಣ, ತತ್ವಚಿಂತಾಮಣಿ; ಕಡೆಯವು ಎರಡು ಅದ್ವೈತಕ್ಕೆ ಸಂಬಂಧಪಟ್ಟವು. ಸಾಂಖ್ಯಯೋಗದಲ್ಲಿ ವಿವರಿಸುವ 'ಪಂಚೀಕರಣ' ತತ್ವದ ವಿಷಯ ಅನುಭವಾಮೃತ ಹಾಗೂ ಜ್ಞಾನಸಿಂಧುಗಳಲ್ಲಿಯೂ ನಿರೂಪಿತವಾಗಿದೆ. 'ಜ್ಞಾನಸಿಂಧು' ೪೯ ಅಧ್ಯಾಯಗಳ, ೩೬೨೧ ಭಾಮಿನೀ ಷಟ್ಪದಿ ಪದ್ಯಗಳ ದೊಡ್ಡ ಗ್ರಂಥ. ಇದರಲ್ಲಿ ಅದ್ವೈತವೇದಾಂತ ಅನುಭವಾಮೃತದಲ್ಲಿ ಹೇಳಿರುವುದಕ್ಕಿಂತ ಹೆಚ್ಚು ವಿಸ್ತಾರವಾಗಿ ಹೇಳಿದೆ. ಅದರಷ್ಟು ಪ್ರಸಿದ್ಧವಾದ ಕೃತಿಯಲ್ಲ. "ತಾನೆ ತನ್ನನು ತಿಳಿದು ತಾನೆತಾನೆಯಾಗಿಯೆ ತನ್ನಯನುಭವ ತುಂಬಿಕೊಂಡಿರಲು ಜ್ಞಾನಸಿಂಧುವು ಎಂಬ ಪೆಸರಾಯ್ತು" ಎಂದು ಕವಿ ಹೇಳಿಕೊಂಡಿದ್ದಾನೆ. ತಾನು ವ್ಯಾಕರಣಕ್ಕೆ ಗಮನ ಕೊಟ್ಟಿಲ್ಲ ಎಂದು ಒಪ್ಪಿಕೊಂಡಿದ್ದಾನೆ. ಇವನ ಪದ್ಯರಚನೆಯ ಶೈಲಿ ರಂಗನಾಥನ ಶೈಲಿಯ ಹಾಗೆ ಲಲಿತವಾಗಿಲ್ಲ. (ರಂಗನಾಥನ ಕೃತಿಯಲ್ಲೂ ಅಶುದ್ಧ ಶಬ್ದರೂಪಗಳು ಹಲಕೆಲವು ಉಂಟು.)

**ವೇದಾಂತ ಭೋಧಕ ಶತಕಗಳು**: ವೈರಾಗ್ಯಪರವಾದ ಚಂದ್ರಚೂಡಾಮಣಿ ಶತಕವನ್ನು ಬಿಟ್ಟರೆ, ಅದ್ವೈತಿಗಳು ಬರೆದ ಶತಕಗಳು ವಿರಳ. ಆದ್ದರಿಂದ, ವೇದಾಂತಕ್ಕೇ ಮೀಸಲಾದ 'ಸದಾಶಿವ ಶತಕ', ನೀತಿಯೊಂದಿಗೆ ವೇದಾಂತವನ್ನೂ ಬೋಧಿಸುವ 'ಪ್ರಾಣೇಶ್ವರ ಶತಕ' ಇವು ಗಮನಾರ್ಹವೆನಿಸುತ್ತವೆ. ಇವನ್ನು ಬರೆದಾತ ಮೈಸೂರು ಅರಸುಗಳ ಮನೆತನಕ್ಕೆ ಸೇರಿದ ಶಾಲ್ಯದ ಕೃಷ್ಣರಾಜ. ಇವನ ಮೂರು ಕೃತಿಗಳಲ್ಲಿ ಹೇಳಿರುವ ರಚನಾಕಾಲಗಳ ಆಧಾರದಿಂದ, ಈತನ ಕಾಲವನ್ನು ೧೭೭೫ ಎಂದು ಗೊತ್ತು ಮಾಡಬಹುದು. ಈತ ಬಹುಭಾಷಾಪಂಡಿತ; ಅನೇಕ ಕೃತಿಗಳನ್ನು ರಚಿಸಿದ್ದಾನೆ.

**ಗದ್ಯ ರೂಪದ ಪ್ರಕರಣ ಗ್ರಂಥಗಳು**: ಮೇಲೆ ಹೇಳಿದ ಕೃಷ್ಣರಾಜನ 'ಅನುಭವರಸಾಯನ' ಗುರುಶಿಷ್ಯ ಸಂವಾದ ರೂಪದಲ್ಲಿ ಅದ್ವೈತವೇದಾಂತವನ್ನು

**ಮಾಯೆಯ ಸ್ವರೂಪ:**

ನೀಲರುಚಿಯಭ್ರದಲಿ, ದೀಪ। ಜ್ವಾಲೆಯೊಳು ಕಾಳಿಕೆಯು, ಮತ್ತೆ ಚ–
ಥಾಳಿಸುವ ಚಂದ್ರಮನ ನಡುವೆ ಕಳಂಕ ತೋರ್ಪಂತೆ!
ಕಾಳೆನಿಪ ಪುಸಿಮಾಯೆ ಬ್ರಹ್ಮದೊ। ಳಾಳಿ ಹೊಕ್ಕಾಶ್ರಯಿಸಿ ಮೆರೆವುದು;
ಹೇಳಲೇನದು ಮಿಥ್ಯ; ತಥ್ಯದವೋಲು ತೋರುವದು॥

**ಪರಬ್ರಹ್ಮ ಸ್ವರೂಪ:**

ಗ್ರಾಮಾ–ದೇಶ–ದ್ವೀಪದಲ್ಲಿಹ। ವ್ಯೋಮವೊಂದೇ ಪರಿಯಲಿರ್ಪಂ–।
ತೀ ಮನುಜ ಪಶು ಪಕ್ಷಿ ತರು ಲತೆ ದೇವ ದೈತ್ಯರಲಿ॥
ಭೂಮಿ ಮೊದಲಾಗಿರ್ದ ಭೂತ। ಸ್ತೋಮದಲಿ ಮಣಿಗಣದ ಸೂತ್ರದ।
ನೇಮದಲಿ ಸಮನಾಗಿ ತೋರುವುದೇ ಪರಬ್ರಹ್ಮ॥

**ನಿಜವಾದ ಜೀವನ್ಮುಕ್ತನ ಸ್ವರೂಪ:**

ಆವನೊಬ್ಬ ಗೃಹಸ್ಥಧರ್ಮದಿ। ವ್ಯಾವಹಾರಿಕನಾಗಿ, ಮಿಗೆ ಸ–।
ದ್ಭಾವ ಶಮೆ ದಮೆ ಶಾಂತಿ ವೈರಾಗ್ಯಗಳನಳವಡಿಸಿ।
ಜೀವ ಪರಮಾತ್ಮೈಕ್ಯ ಪದವನು। ಭಾವಿಸುತ್ತಹನವನೆಸಂನ್ಯಾ–।
ಸಾವಲಂಬನವನೆ ಜೀವನ್ಮುಕ್ತ ನೋಡೆಂದ॥

ವಿಷಯ ಸುಖದಲ್ಲಿ ಮುಳುಗಿ ಕೊಬ್ಬುಕುರುಡಾಗಿರುವವನನ್ನು ಮೊದಲೆ ಮರ್ಕಟ, ಮೇಲೆ ಮದ್ಯದ ಮದವೆದೆಯ ಹಿಡಿದಿರಲು ವೃಶ್ಚಿಕ ತುದಿಯ ಕಾಲನು ಕಚ್ಚಿದರೆ ಕುಣಿದಾಡುವಂದದಲಿ "ಕಾಣುವ ಕಪಿಗೆ ಹೋಲಿಸಿರುವಂಥ, ಮನಸ್ಸಿಗೆ ನಾಟುವಂಥ ಉಪಮಾನಗಳೂ; 'ಎತ್ತು ತಂಗಿನಕಾಯಬಲ್ಲುದೆ? ಕತ್ತೆಯರಿವುದೆ ಕಸ್ತುರಿಯ? ನೇರೆಬುತ್ತಿಗಳ್ಳರಿಗೇಕೆ ಸತ್ಯವ್ರತ ಸದಾಚಾರ? ದತ್ತ ಪುತ್ರ ನಿಗೇತಕ್ಕೆ ಪಿತೃಭಕ್ತಿ? ಮೌಲ್ಯ ಸುಗಂಧ ವನಿತಾಸಕ್ತರಿಗೆ ಪರತತ್ತ್ವ ಚಿಂತೆಯದೇಕೆ?' ಎಂಬಂಥ, ವರ್ಣಿತ ವಿಷಯವನ್ನು ಪುಷ್ಟಿಗೊಳಿಸುವ ದೃಷ್ಟಾಂತ ವಾಕ್ಯಮಾಲೆಗಳೂ; ಸ್ವಾಭಾವೋಕ್ತಿಗಳೂ–ನೀರಸವಾಗಬಹುದಾದ ತತ್ತ್ವ ವಿಚಾರದ ಈ ಕೃತಿಗೆ ಕಾವ್ಯದ ರುಚಿಯನ್ನು ಒದಗಿಸಿವೆ.

ಅದ್ವೈತ ತತ್ತ್ವ ಅನುಭವದ ವಿಷಯ; ಜೀವಂತವಾಗಿರುವಾಗಲೇ ಮುಕ್ತಿಯ ಸುಖವನ್ನು ಅನುಭವಿಸುವ ಪರಿಯನ್ನು ತೋರುವ 'ದರ್ಶನ' (ಜೈನ ಧರ್ಮದ

ಕ್ರಮೇಣ ಪದ್ಯದಿಂದ ಗದ್ಯಕ್ಕೆ, ತಿರುಗುತ್ತಿದ್ದುದಕ್ಕೆ ದಿಕ್ಸೂಚಿಯಾಗಿವೆ.

**ಅದ್ವೈತಪರ ಕೀರ್ತನೆಗಳು (ಹಾಡುಗಳು):**

ಅದ್ವೈತವನ್ನು ಹಾಡುಗಳ ರೂಪದ ಕನ್ನಡ ಕೃತಿಗಳಲ್ಲಿ ಪ್ರತಿಪಾದಿಸುವವರ ಒಂದು ಪರಂಪರೆಯೂ ಇದೆ, ಕನ್ನಡ ನಾಡಿನಲ್ಲಿ. ಹಾಡಿನ ರೂಪದಲ್ಲಿ ಅದ್ವೈತ ಸಿದ್ಧಾಂತವನ್ನು ಬೋಧೆಮಾಡ ಹೊರಟವರಲ್ಲಿ ಮೊದಲಿಗರೆಂದರೆ ನಿಜಗುಣ ಶಿವಯೋಗಿಗಳು. ಅದ್ವೈತ ಪರವಾದ ಇವರ ರಚನೆಗಳಲ್ಲಿ ಶಿವಭಕ್ತಿಗೆ ಮಾತ್ರ ಸ್ಥಾನ. ಇವರ ತರುವಾಯ ನಮ್ಮ ಗಮನಕ್ಕೆ ಬರುವವರು ಬಿಜಾಪುರ ಜಿಲ್ಲೆಯ ಕಾಖಂಡಕಿಯ ಮಹೀಪತಿ ದಾಸರು (ಸು.೧೬೧೦–೧೬೮೦). ಇವರು ಮಧ್ವಮತಾನುಯಾಯಿಗಳಾದರೂ ಅದ್ವೈತಾನುಭವನ್ನು ಎತ್ತಿ ಹಿಡಿದರು. ಆದರೆ, ಸಿದ್ಧಾಂತಬೋಧೆ ವಾಚ್ಯವಾಗಿ ಎಲ್ಲೂ ಪ್ರಕಟವಾಗಿಲ್ಲ. ಇನ್ನೊಬ್ಬ ಗಮನಾರ್ಹ ವ್ಯಕ್ತಿಗಳೆಂದರೆ, ಶಿಶುನಾಳದ ಷರೀಫ ಸಾಹೇಬರು (ಸು.೧೮೫೦). ಇವರು ಮಹಮ್ಮದೀಯ ಮತಸ್ಥರಾದರೂ ವೈದಿಕ ಮತಕ್ಕೆ ಆಕರ್ಷಿತರಾಗಿ, ಅದ್ವೈತಿಗಳಾಗಿದ್ದ ಗುರು ಗೋವಿಂದ ಭಟ್ಟರ ಶಿಷ್ಯರಾದರು. ಅವರ ರಚನೆಗಳ ಮುದ್ರಿಕೆ ಶಿಶುನಾಳೇಶ. ೧೯ನೆಯ ಶತಮಾನಕ್ಕೆ ಸೇರಿದ ಕೈವಾರದ ನಾರಾಣಪ್ಪನವರು, ವೇದಾಂತಿ ಶಿವರಾಮ ಶಾಸ್ತ್ರಿಗಳು ('ಶಂಕರಾನಂದ ತತ್ವ')– ಇವರೂ ಇದೇ ಪರಂಪರೆಗೆ ಸೇರುತ್ತಾರೆ. ಇವರ ಕೃತಿಗಳಲ್ಲಿ ಅದ್ವೈತದ ವಿಚಾರ ಕೃತಿಯ ಒಡಲಲ್ಲಿ ಆತ್ಮರೂಪದಲ್ಲಿ ಅಡಗಿಕೊಂಡು ಬೋಧೆಯಾಗುವುದಾದರೂ, ಇವನ್ನು 'ಪೂರ್ತಿಯಾಗಿ ಶಾಸ್ತ್ರಗ್ರಂಥಗಳೆಂದು ಪರಿಗಣಿಸುವುದು ಸರಿಯಲ್ಲವೆಂದು ಕಾಣುತ್ತದೆ. ಈ ಕೃತಿಸಮುದಾಯವನ್ನು ಶಾಸ್ತ್ರಲೇಪವುಳ್ಳ ಗೇಯ ಸಾಹಿತ್ಯ' ಎಂದು ನಿರ್ದೇಶಿಸಬಹುದು.

"ಪರಬ್ರಹ್ಮ ಪ್ರಕಾಶಿಕೆ'ಯ ಕರ್ತೃವಾದ ತಿಮ್ಮಪ್ಪದಾಸರು (ಸು.೧೮೫೦) ಬಹುಮಟ್ಟಿಗೆ ಬೇರೆಯಾಗಿ ನಿಲ್ಲುತ್ತಾರೆ. ಏಕೆಂದರೆ, ಇವರ ಅನೇಕ ಕೀರ್ತನೆಗಳಲ್ಲಿ ಅದ್ವೈತ ಸಿದ್ಧಾಂತ ತನ್ನ ಪರಿಭಾಷೆಯ ಪರಿಕರದೊಂದಿಗೆ ಎದ್ದು ಕಾಣುವ ಮಟ್ಟಿಗೆ ಪ್ರತಿಪಾದಿತವಾಗಿದೆ. ವಿಶೇಷವಾಗಿ ಇವರ ಅಷ್ಟೋತ್ತರ ಶತಕ (೧೦೦) ಪೂಜಾ ವಿಧಾನಗಳ ಕೀರ್ತನೆಗಳಲ್ಲಿ* ಅದ್ವೈತದ ಮುಖ್ಯ ತತ್ತ್ವಗಳೆಲ್ಲವೂ ಕೀರ್ತನೆಗಳನ್ನು ಶಾಸ್ತ್ರಶುಷ್ಕವೆನಿಸದಂತೆ ಆಶ್ಚರ್ಯಕರವಾದ ರೀತಿಯಲ್ಲಿ

* ಈ ಕೀರ್ತನೆಗಳ ಸಂಕಲನ 'ಅರ್ಚನ' ಎಂಬ ಹೆಸರಿನಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಪ್ರಕಟನೆಯಾಗಿ ಅಚ್ಚಾಗಿದೆ (೧೯೭೧)

ಬೋಧಿಸುತ್ತದೆ. ಹೆಚ್ಚು ಕಡಿಮೆ, ಇದೇ ಕಾಲದಲ್ಲಿ ವಾಸುದೇವ ಯತಿಗಳು 'ವಿವೇಕಸಾರವನ್ನು' ಕನ್ನಡದಲ್ಲೂ?, 'ವಾಸುದೇವಮನನ' ಎಂಬ ಗ್ರಂಥವನ್ನು ಸಂಸ್ಕೃತದಲ್ಲೂ ರಚಿಸಿದ್ದಲ್ಲದೆ, ಅನೇಕ ಮಂದಿ ಶಿಷ್ಯರಿಗೆ ವೇದಾಂತ ಬೋಧೆ ಮಾಡಿದರು. ಇವರ ವಂಶಿಕರೂ ಶಿಷ್ಯರೂ ಆದ ವೆಂಕಟದಾಸ ಎಂಬವರು 'ಅಖಂಡಾನಂದ ಸ್ವರೂಪ' ಎಂಬ ಗ್ರಂಥವನ್ನೂ, ಇವರ ಸೋದರಳಿಯನೂ ವಾಸುದೇವಯತಿಗಳ ಮೊಮ್ಮಗನೂ ಆದ ತಿಮ್ಮಪ್ಪದಾಸ ಎಂಬುವರು 'ಪರಬ್ರಹ್ಮ ಪ್ರಕಾಶಿಕೆ' ಎಂಬ ಗ್ರಂಥವನ್ನೂ ರಚಿಸಿದ್ದಾರೆ. ವಾಸುದೇವಾರ್ಯರು ಗೃಹಸ್ಥಾಶ್ರಮದಲ್ಲಿದ್ದು, ಸಂನ್ಯಾಸಾಶ್ರಮ ಸ್ವೀಕರಿಸಿದರು. ಈ ಮೂವರ ಸ್ಥಳವೂ ಚಿಕ್ಕನಾಯಕನಹಳ್ಳಿ. ಅಲ್ಲಿ ವಾಸುದೇವಯತಿಗಳು ಸಮಾಧಿಯಾದ ಸ್ಥಳದಲ್ಲಿ ಕಟ್ಟಿದ್ದ ಬೃಂದಾವನ ಈಗಲೂ ಇದೆ.

ವಾಸುದೇವಾರ್ಯರ ಸಂಸ್ಕೃತ ಗ್ರಂಥವನ್ನು ದೊಡ್ಡಬೆಲೆ ನಾರಾಯಣ ಶಾಸ್ತ್ರಿಗಳು ಕನ್ನಡಕ್ಕೆ ಅನುವಾದ ಮಾಡಿದ್ದಾರೆ (೧೮೯೭). ವಾಸುದೇವಯತಿಗಳನ್ನು ಕುರಿತು ದೊಡ್ಡಬೆಲೆ ಶಾಸ್ತ್ರಿಗಳು ಬರೆದಿರುವ ಗದ್ಯ ವಾಕ್ಯದ ಸ್ವರೂಪ: "ಪೂರ್ವಕಾಲದೊಳು ವಾಸುದೇವ ಯತೀಶ್ವರರೆಂಬದಾಗಿ ಭೂಲೋಕದೊಳವತರಿಸಿ ನಿಖಿಲಯೋಗಾನುಷ್ಠಾನ ಗರಿಷ್ಠರಾಗಿ ಪ್ರಪಂಚದಲ್ಲಿ ಅನಿತರ ಸಾಧಾರಣವಾದ ಯಶಸ್ಸನ್ನು ಪಡೆದು ಅವ್ಯಾಜ ಕರುಣಾಂತರಂಗರಾದುದರಿಂದಲೇ ಜನನ ಮರಣ ಪ್ರವಾಹರೂಪಕಮಾಗಿರುವ ಘೋರವಾದ ಸಂಸಾರ ಸಾಗರದೊಳು ಮುಳುಗಿ ದಡವನ್ನು ಕಾಣದೆ ಕಂಗೆಟ್ಟು ಕಷ್ಟಪಡುತಲಿರುವ ಲೋಕವನ್ನುದ್ಧಾರ ಮಾಡಲೋಸುಗ ಪರಮ ಪುರುಷಾರ್ಥ ಸಾಧಕತಮವಾಗಿರುವ ಜ್ಞಾನ ಸಂಪಾದನಕ್ಕೋಸ್ಕರ 'ಮನನ'ವೆಂಬ ಹೆಸರುಳ್ಳ ಅನ್ಯಾದೃಶವಾದ ಗ್ರಂಥವನ್ನು ವಿರಚಿಸಿದರು."

ಧಾರ್ಮಿಕ ವಿಚಾರಗಳನ್ನು ಜನರಲ್ಲಿ ಪ್ರಚಾರ ಮಾಡಲು ಕೀರ್ತನೆಗಳನ್ನು ಬಿಟ್ಟರೆ, ಪದ್ಯಕ್ಕಿಂತ ಗದ್ಯ ಮೇಲು ಎಂಬ ಗ್ರಹಿಕೆ ಚಿಕ್ಕದೇವರಾಜ ಒಡೆಯರ ಕಾಲದಲ್ಲೇ ಪ್ರಾರಂಭವಾದಂತೆ ಕಾಣುತ್ತದೆ. ಅವರ 'ಬಿನ್ನಪ' ಇದಕ್ಕೆ ಉದಾಹರಣೆ. ಇದು ವಿಶಿಷ್ಟಾದ್ವೈತ ಪರವಾದ ಕೃತಿ. ಇದರ ಮೇಲು ಪಂಕ್ತಿಯನ್ನೇ ಇತರರೂ ಅನುಸರಿಸಿದಂತೆ ಕಾಣುತ್ತದೆ. ಚಿಕ್ಕುಪಾಧ್ಯಾಯನು ಅನೇಕ ಗದ್ಯ ಗ್ರಂಥಗಳನ್ನು ರಚಿಸಿದ್ದಾನೆ. ಅದ್ವೈತ ವಿಚಾರವಾಗಿ ಆ ಕಾಲದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಗ್ರಂಥಗಳು ಹುಟ್ಟದಿದ್ದರೂ, ವೆಂಕಟದಾಸ, ತಿಮ್ಮಪ್ಪ ದಾಸರ ಗ್ರಂಥಗಳೂ, ಅವಕ್ಕೂ ಹಿಂದೆ ಅವಧೂತ ಶಿವಯೋಗಿ ರಚಿಸಿದ 'ಕೈವಲ್ಯಾನಂದಸಾರ' (ಅಥವಾ ಆನಂದಕಲ್ಲೋಲ) (ಸು.೧೭೫೦) ಮುಂತಾದ ಗ್ರಂಥಗಳೂ ಶಾಸ್ತ್ರಗ್ರಂಥ ರಚನೆ

ವಿದ್ವಾಂಸರಿಂದಲೂ ಇತರರಿಂದಲೂ ಕೃತಿರಚನೆ ಮಾಡಿಸಿದರು. ಹೀಗೆ, ಈ ದೊರೆಯ ಪ್ರೋತ್ಸಾಹದಿಂದ ಸೃಷ್ಟಿಯಾದ ಕನ್ನಡ ಕೃತಿಗಳ ಸಂಖ್ಯೆ ವಿಪುಲವಾಗಿಯೇ ಇದ್ದು, ಒಂದಲ್ಲ ಒಂದು ರೀತಿಯಲ್ಲಿ ಧಾರ್ಮಿಕ ವಿಷಯಕ್ಕೆ (ಭಕ್ತಿ, ನೀತಿ, ಪುರಾಣ, ಕ್ಷೇತ್ರಮಾಹಾತ್ಮ್ಯ ಇತ್ಯಾದಿ) ಸಂಬಂಧಪಟ್ಟಿದ್ದರೂ, ವಿಶಿಷ್ಟಾದ್ವೈತ ಸಿದ್ಧಾಂತವನ್ನು ಕನ್ನಡದಲ್ಲಿ ತಿಳಿಯ ಹೇಳುವ ಗ್ರಂಥಗಳು ಮೂರು ಮಾತ್ರ: 'ಚಿಕ್ಕದೇವರಾಜ ಬಿನ್ನಪ', 'ಸಾತ್ವಿಕ ಬ್ರಹ್ಮವಿದ್ಯಾವಿಲಾಸ' ಮತ್ತು 'ತತ್ವತ್ರಯ ವಿವರಣ'.

**ಚಿಕ್ಕದೇವರಾಜ ಬಿನ್ನಪ***: ಇದು ಗದ್ಯಗ್ರಂಥ. ಮೇಲುಕೋಟೆಯ ಚೆಲುವ ನಾರಾಯಣನಲ್ಲಿ ಬಿನ್ನವಿಸಿಕೊಂಡಂತೆ ರಚಿಸಿದ ೩೦ ಬಿನ್ನಪಗಳಿವೆ. ಇದರಲ್ಲಿ ವಿಶಿಷ್ಟಾದ್ವೈತಮತದ ತತ್ತ್ವಸಾರವು ನಿರೂಪಿತವಾಗಿದೆ. ಗ್ರಂಥಾರಂಭದಲ್ಲಿ–

"ಪ್ರಜೆಗಳ್ಗೆ ಪರಗತಿಯಂ ಸಂಪಾದಿಸವೇಳ್ಪುದೆಂದಾರಯ್ದು, ಪಿಂತಣ್ಗೆ ಎನಿತಾನುಂ ಪಾಪಿಗಳಾದೊಡಂ ಆವ ಜಾತಿಯೊಳ್ ಪುಟ್ಟಿರ್ದೊಡಂ ಈಗಳುಂ ತತ್ವಜ್ಞಾನದಿಂ ತನ್ನೊಳ್ ಭಕ್ತಿಗೆಯ್ದು ನಂಬಿದವರ್ಗೆ ಮುಕ್ತಿ ತಪ್ಪದೆಂದೆಣಿಸಿ ಅಕ್ಕರಮನರಿಯ ಒಕ್ಕಲಿಗರ್ಗಂ ಪೆಣ್ಗಳ್ಗಂ ಸಕ್ಕದದಿಂ ತತ್ವಜ್ಞಾನಮಪ್ಪುದರಿದು ಎಂದು ಎಲ್ಲರುಂ ಅರಿವಂತೆ ಕನ್ನಡ ವಾತಿನೊಳಂ ಮೇಲ್ನುಡಿಗಳಿಂದೆ ಅಖಿಲ ತತ್ವಾರ್ಥಗಳಂ ಸಂಗತಿಗೊಳಿಸಿ ತಾಂ ತನ್ನ ಕುಲದೇವತೆಯಪ್ಪ ಯಾದವಗಿರಿ ನಾರಾಯಣನಡಿದಾವರೆಗಳ್ಗೆ ಬಿನ್ನಪಂಗೆಯ್ವ ನೆವದೊಳ್ ಮೂವತ್ತು ಬಿನ್ನಪಂಗಳಂ ಪವಣ್ಗೆಯದ್ದ."

ಗದ್ಯವು ಹಳಗನ್ನಡದಲ್ಲಿ ಪ್ರೌಢಶೈಲಿಯಲ್ಲಿ ಬರೆದಿರುವುದರಿಂದ ಗ್ರಂಥ ಎಷ್ಟರಮಟ್ಟಿಗೆ ಜನಸಾಮಾನ್ಯಕ್ಕೆ ಹಿಡಿಸುತ್ತದೆ ಎಂಬುದು ಸಂದೇಹಾಸ್ಪದ.

ಪ್ರತಿ ಬಿನ್ನಪದ ಮೊದಲಲ್ಲೂ ಆ ಬಿನ್ನಪದಲ್ಲಿ ವಿವರಿಸಿರುವ ವಿಷಯವನ್ನು ಸಾರರೂಪವಾಗಿ ಕಂದಪದ್ಯದಲ್ಲಿ ತಿಳಿಸಿದೆ. ಈ ಮೂವತ್ತು ಪದ್ಯಗಳ ಸಾರಾಂಶವನ್ನು ಪರಿಚಯ ಮಾಡಿಕೊಂಡರೆ, ಗ್ರಂಥ ವಿಷಯವನ್ನು ಪರಿಚಯ ಮಾಡಿಕೊಂಡಂತಾಗುತ್ತದೆ. ಈ ಸಾರಾಂಶವನ್ನು ಕೆಳಗೆ ಕೊಟ್ಟಿದೆ:

---

* ಚಿಕ್ಕ ದೇವರಾಜರ ಹೆಸರಿನಲ್ಲಿರುವ ಈ ಗ್ರಂಥವನ್ನೂ, ಗೀತಗೋಪಾಲವನ್ನೂ ತಿರುಮಲಾರ್ಯನೇ ದೊರೆಯ ಅಂಕಿತದಲ್ಲಿ ರಚಿಸಿರಬಹುದೆಂದು ಕವಿಚರಿತೆಕಾರರು ಸಂದೇಹವನ್ನು ವ್ಯಕ್ತಪಡಿಸಿದ್ದಾರೆ.

* ಈ ಗ್ರಂಥದ ಹೊಸಗನ್ನಡ ಅನುವಾದವನ್ನು ಜಿ.ಪಿ.ರಾಜರತ್ನಂ ಅವರು ಒದಗಿಸಿರುವುದು (೧೯೫೦), ಸಾಮಾನ್ಯರಿಗೆ ಅನುಕೂಲವಾಗಿದೆ.

ಪ್ರಕಾಶಗೊಂಡಿವೆ. ಪರಮಾತ್ಮನು ಜೀವಾತ್ಮನನ್ನು ಸಂಬೋಧಿಸಿ – "ಹೇ ಜೀವ, ಹೆದರದಿರು, ಬ್ರಹ್ಮನಿಗಾನು ಮೊದಲು ಪೇಳಿದ ಮಾರ್ಗವ ಪೇಳ್ವೆ" ಎಂದು ತೊಡಗಿ, ಅದ್ವೈತ ಸಿದ್ಧಾಂತದ ಸಾರವನ್ನೇ ಬೋಧಿಸುವ ರೀತಿಯಲ್ಲಿ 'ಅಭಯ' ಎಂಬ ಕೀರ್ತನೆಯೊಂದು ರಚಿತವಾಗಿದೆ. ಉದಾಹರಣೆಯಾಗಿ ಒಂದು ಚರಣ:

ಹುರಿದ ಬೀಜವ ನೋಡಲು। ಆಕಾರವಾಗಿ ಯಿರುವದು; ಯಿಂದ ಬಿತ್ತಲು।
ತಿರುಗಿ ಪುಟ್ಟಿ ತೋರುವದೆ?। ತಿಳಿಯೆ ಮಾಯೆಯನು ಬಾಧೆ।
ಬರುವದೇನೈ? ಭದ್ರವಾಗಿರು। ಭೋಗಿಸುತರಿರು ॥೫॥

["ಧಾನ್ಯದ ಬೀಜವನ್ನು ಹುರಿದರೆ ಅದರ ಆಕಾರ ಕೆಡದೆ ಇದ್ದ ಹಾಗೆಯೇ ಇರುತ್ತದೆ. ಅದನ್ನು ಬಿತ್ತಿದರೂ ಅದು ಮತ್ತೆ ಮೊಳೆಯುವುದಿಲ್ಲ. ಹಾಗೆಯೇ, ಜೀವಾತ್ಮ ಸ್ವರೂಪದ ಚರಾಚರ ಜಗತ್ತೆಲ್ಲವೂ ಮಾಯೆ ಎಂಬ ಜ್ಞಾನವುಂಟಾದರೆ, ಮಾಯೆಯ ಪ್ರಭಾವ (ಹುರಿದ ಬೀಜದಂತೆ) ನಿಷ್ಫಲವಾಗುತ್ತದೆ. ನಿನಗೆ ಈ ಜ್ಞಾನವಿರುವುದರಿಂದ, ಸುರಕ್ಷಿತವಾಗಿರು; ಪ್ರಪಂಚವನ್ನು ಭೋಗಿಸುತ್ತಿರು." (ತತ್ತ್ವ ಜ್ಞಾನಿ ಭೋಗಗಳನ್ನು ಭೋಗಿಸಿದರೂ ಭೋಗಿಸಿದ ಹಾಗಲ್ಲ ಎಂದು ತಾತ್ಪರ್ಯ).]

**ವಿಶಿಷ್ಟಾದ್ವೈತ**

ಶ್ರೀ ರಾಮಾನುಜಾಚಾರ್ಯರು ಕನ್ನಡ ನಾಡಿನ ಮೇಲುಕೋಟೆಯಲ್ಲಿ ಬಂದು ಕೆಲ ಕಾಲ ಅಲ್ಲಿ ತಂಗಿದ್ದು ಶ್ರೀವೈಷ್ಣವ ಧರ್ಮ ಇಲ್ಲಿ ಬೇರೂರಲು ಕಾರಣಕರ್ತರಾದರು. ಅನಂತರ ಹೊಯ್ಸಳ ವಿಷ್ಣುವರ್ಧನನ ಕಾಲದಲ್ಲಿಯೂ ಶ್ರೀವೈಷ್ಣವ ಪಂಥದವರು ಕನ್ನಡದಲ್ಲಿ ಯಾವ ಕೃತಿಯನ್ನೂ ರಚಿಸಿದಂತೆ ಕಂಡು ಬರುವುದಿಲ್ಲ. ಶ್ರೀವೈಷ್ಣವರ ಒಲವೆಲ್ಲಾ ಅವರ ತಾಯ್ನುಡಿಯಾದ ತಮಿಳಿನ ಕಡೆಗೂ, ಆಳ್ವಾರರು ಮುಂತಾದವರ ತಮಿಳು ರಚನೆಗಳ ಕಡೆಗೂ ತಿರುಗಿದ್ದುದರಿಂದ ಕನ್ನಡದಲ್ಲಿ ಕೃತಿರಚನೆಗೆ ಅವರು ಮನಸ್ಸು ಕೊಡಲಿಲ್ಲವೆಂದು ಕಾಣುತ್ತದೆ. ಮೈಸೂರಿನ ದೊರೆಯಾದ ಚಿಕ್ಕದೇವರಾಜ ಒಡೆಯರು (೧೬೭೨–೧೭೦೪) ಶ್ರೀವೈಷ್ಣವ ಮತದಲ್ಲಿ ನಿಷ್ಠೆಯುಳ್ಳವರಾದರೂ ಕನ್ನಡದ, ತಮ್ಮ ಕನ್ನಡ ಪ್ರಜೆಗಳ, ಪ್ರೇಮಿಗಳಾಗಿದ್ದುದರಿಂದ ಆ ಮತ ತತ್ತ್ವಗಳನ್ನು ತಮ್ಮ ಪ್ರಜಾಕೋಟಿಯಲ್ಲಿ ಪ್ರಚಾರ ಮಾಡುವ ಸಲುವಾಗಿ ತಾವೇ ಕೃತಿ ರಚನೆ ಮಾಡಿದರು. ಆಸ್ಥಾನದಲ್ಲಿದ್ದ

ಇದೇ ಶರಣಾಗತಿ; ಪ್ರಪತ್ತಿ ಮಾರ್ಗ. ವಿಶಿಷ್ಟಾದ್ವೈತದ ಸಾರ.

**ದ್ವೈತ ಸಿದ್ಧಾಂತ**: ದ್ವೈತ ಸಿದ್ಧಾಂತದ ಪ್ರವರ್ತಕರಾದ ಶ್ರೀ ಮಧ್ವಾಚಾರ್ಯರು ಬೋಧಿಸಿದ ತತ್ತ್ವಗಳನ್ನು ಹರಿದಾಸರು ಜನಸಾಮಾನ್ಯಕ್ಕೆ ಮುಟ್ಟಿಸಲು ಹಾಡನ್ನು ಒಂದು ಪರಿಣಾಮಕಾರಿ ಸಾಧನವನ್ನಾಗಿ ಮಾಡಿಕೊಂಡರು. ಹರಿದಾಸರ ಕೀರ್ತನೆಗಳು 'ದೇವರನಾಮ'ಗಳೆಂದೂ ಪ್ರಸಿದ್ಧವಾಗಿವೆ. ದ್ವೈತದಲ್ಲಿ ಪರಮಾತ್ಮ (ಈಶ್ವರ) ಜೀವಾತ್ಮರು (ಜೀವರು) ಎಂದೆಂದೂ ಬೇರೆ ಬೇರೆಯೆ; ಹಾಗೆಯೇ ಜೀವ–ಜಡ ಬೇರೆ ಬೇರೆ; ಈಶ್ವರ ಜಡ ಬೇರೆ ಬೇರೆ; ಜೀವ–ಜೀವರು ಬೇರೆ ಬೇರೆ; ಜಡದಲ್ಲೂ ಮತ್ತೆ ಭೇದ ಕಲ್ಪನೆ. ಈ ಭೇದ ಕಲ್ಪನೆಯಿಂದಾಗಿ ಮಧ್ವಮತ ದ್ವೈತ (ಎರಡರ ನಡುವಣ ಭೇದಗಣನೆ) ಎನ್ನಿಸಿಕೊಂಡಿದೆ. ಈ ಭೇದಪಂಕವಲ್ಲದೆ – ಹರಿಸರ್ವೋತ್ತಮತ್ವ, ಜಗತ್‌ಸತ್ಯತ್ವ, ದೇವತಾ ತಾರತಮ್ಯ, ಇವು ದ್ವೈತಸಿದ್ಧಾಂತದ ಉಳಿದ ಮುಖ್ಯ ಮೂಲತತ್ತ್ವಗಳು. ಹೀಗಿರುವುದರಿಂದ, ದ್ವೈತದಲ್ಲಿ ವಿಷ್ಣು (ಹರಿ) ಭಕ್ತಿಗೂ, ವಿಷ್ಣು (ಹರಿ) ನಾಮ ಸಂಕೀರ್ತನೆಗೂ ಸರ್ವಪ್ರಾಧಾನ್ಯ. ಆದ್ದರಿಂದ, ಈ ಮುಖ್ಯ ತತ್ತ್ವಗಳನ್ನು ನಾಮ ಸಂಕೀರ್ತನ ಮೂಲಕ ಪ್ರಸಾರ ಮಾಡುವವರು ಹರಿದಾಸರೆನಿಸಿದರು; ಹರಿನಾಮಗಳನ್ನು ಸ್ಮರಿಸುತ್ತ, ಹರಿಭಕ್ತಿಯನ್ನು ಬೆಳಗುವ ಅವರ ಕೀರ್ತನೆಗಳು 'ದೇವರನಾಮ'ಗಳು ಎಂದು ಪ್ರಸಿದ್ಧವಾದವು. ಹರಿದಾಸ ಸಾಹಿತ್ಯವೆಲ್ಲ ದೇವರ ನಾಮಗಳೇ ಎಂದರು ತಪ್ಪಾಗದು. ಈ ವಿಶಾಲವಾದ ಅರ್ಥದ ಹರಹಿನ ಹಿನ್ನೆಲೆಯಲ್ಲಿ ವಿವೇಚಿಸಿದರೆ, ಹರಿದಾಸ ಸಾಹಿತ್ಯವೆಲ್ಲವನ್ನೂ 'ದ್ವೈತಸಿದ್ಧಾಂತ ಶಾಸ್ತ್ರ'ವೆಂದೇ ಪರಿಗಣಿಸಬೇಕಾಗುತ್ತದೆ. ಆದರೆ, ಎಲ್ಲ ಹರಿದಾಸರ ಕೃತಿಗಳೂ ಮೇಲ್ಕಂಡ ಎಲ್ಲ ತತ್ತ್ವಗಳನ್ನೂ ತನ್ನ ಕಕ್ಷೆಯಲ್ಲಿ ಒಳಗೊಂಡಿಲ್ಲ. ವಿಭಜನೆ ಮಾಡಿ ಪರಿಶೀಲಿಸಿದರೆ, ಹರಿದಾಸರ ಕೃತಿಗಳಲ್ಲಿ ಬಹು ಸಂಖ್ಯೆಯವು ಭಕ್ತಿ ಪ್ರಧಾನವಾದವು. ಪುರಂದರದಾಸರ ಕೀರ್ತನೆಗಳಲ್ಲಿ ಭಕ್ತಿಯ ಜೊತೆಗೆ ಜ್ಞಾನ ವೈರಾಗ್ಯಗಳ ಪ್ರಾಚುರ್ಯವನ್ನೂ, ಅಲ್ಲಲ್ಲಿ ದ್ವೈತ ತತ್ತ್ವಗಳ ಸ್ಪಷ್ಟ ನಿರೂಪಣೆಯನ್ನೂ ಕಾಣುತ್ತೇವೆ. ಪುರಂದರ ದಾಸರ ಕೃತಿ ಸಮುದಾಯವನ್ನು ಒಟ್ಟಿನಲ್ಲಿ 'ಪುರಂದರೋಪನಿಷತ್ತು' ಎಂದು ವ್ಯವಹರಿಸುವುದು ಅವರ ರಚನೆಗಳ ಶಾಸ್ತ್ರ ನಿಷ್ಠೆಯನ್ನೇ ವ್ಯಕ್ತಪಡಿಸುತ್ತದೆ. ಆದ್ದರಿಂದ, ಇಲ್ಲಿ ಪುರಂದರ ದಾಸರನ್ನು ಪ್ರಾತಿನಿಧಿಕವಾಗಿ ಪರಿಗಣಿಸಿ, ಅವರ ಕೃತಿಗಳಲ್ಲಿ ದ್ವೈತಪ್ರತಿಪಾದನೆ ಹೇಗೆ ಮೂಡಿಬಂದಿದೆ ಎಂಬುದನ್ನು ಕೆಲವು ನಿದರ್ಶನಗಳ ಮೂಲಕ ವಿಶದಪಡಿಸಲಾಗುವುದು.

"ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡಿ ಬಿಡಬೇಡಿ ಹರಿ

ಶ್ರೀಮನ್ನಾರಾಯಣನು ಅರ್ಚಾವತಾರಗಳನ್ನು (ಪೂಜಾಮೂರ್ತಿ ರೂಪಗಳನ್ನು) ಧರಿಸಿರುವುದು ಭಕ್ತರ ಅನುಗ್ರಹಾರ್ಥ. ಆತನೇ ಜಗತ್ ಕಾರಣ, ಈ ಕಾರಣ ವಸ್ತುವನ್ನು ತಿಳಿಯಕೂಡದೆಂಬ ಅಡ್ಡಿಯನ್ನು ಆತನೇ ಪರಿಹರಿಸಿದ್ದಾನೆ. ಅದು ತಿಳಿಯುವುದು ವೇದ ಶಾಸ್ತ್ರಗಳಿಂದಲೇ. ವೇದಶಾಸ್ತ್ರ ಸಿದ್ಧವಾಗಿ, ನಾರಾಯಣನಿಗೆ ಶರೀರವಾದ ಜಗತ್ತು ಮಿಥ್ಯೆಯಲ್ಲ, ಸತ್ಯ. ಕನಸಿನ ವಸ್ತುಗಳು ಆ ಕಾಲದಲ್ಲಿ ಸತ್ಯವಾಗಿರುವಂತೆ ಜಗತ್ತೂ ಸತ್ಯವೇ. ಜಗತ್ಸೃಷ್ಟಿ ವಿಷಮವಾಗಿದ್ದರೂ ಸೃಷ್ಟಿಕರ್ತನಾದ ಜಗದೀಶ್ವರ ವಿಷಮನಲ್ಲ, ನಿರ್ದಯನಲ್ಲ. ಚಿತ್ ಅಚಿತ್ ವಸ್ತು ಶರೀರಕನಾದ ಜಗದೀಶ್ವರ ಒಬ್ಬನೇ; ಅವನೇ ಮೂರು ತೆರನ ಕಾರಣ – ಇದು ಹತ್ತು ಬಿನ್ನಪಗಳ ಸಾರ. ಹತ್ತರಿಂದ ಹದಿನೆಂಟರವರೆಗಿನ ಬಿನ್ನಪಗಳಲ್ಲಿ – ಜೀವತತ್ವ ಸ್ವರೂಪ, ತತ್ತ್ವ ಸೃಷ್ಟಿ ಕ್ರಮ, ಬ್ರಹ್ಮಾಂಡ ಸೃಷ್ಟಿ ಪ್ರಕಾರ, ಬ್ರಹ್ಮಾಂಡದಲ್ಲಿನ ೧೪ ಲೋಕಗಳ ನೆಲೆ, ಭೂಮಂಡಲದ ಪರಿಮಾಣ, ಸುಖಾನುಭವಸ್ಥಾನಗಳಾದ ಸ್ವರ್ಗಗಳ ಸ್ವರೂಪ, ದುಃಖಾನುಭವಸ್ಥಾನಗಳಾದ ನರಕಗಳ ಸ್ಥಿತಿ, ಶ್ರೀ ನಾರಾಯಣನಲ್ಲಿ ಭಕ್ತಿಯಿಡುವುದರಿಂದ ಕ್ರೂರವಾದ ಪಾಪಫಲಗಳ ಪರಿಹಾರ; ಚತುರ್ವಿಧ ಪುರುಷಾರ್ಥಗಳಲ್ಲಿ ಮೋಕ್ಷವೇ ಶ್ರೇಷ್ಠ; ಮೋಕ್ಷ ಪಡೆಯುವ ಮಾರ್ಗವನ್ನು ಸಾತ್ವಿಕ ಶಾಸ್ತ್ರಗಳಿಂದ ತಿಳಿಯಬೇಕು; ಪಂಚರಾತ್ರಾಗಮ ತಂತ್ರವೇ ತಂತ್ರಗಳಲ್ಲಿ ಪ್ರಮಾಣಭೂತವಾದದ್ದು; ಮೋಕ್ಷಸಾಧಕವಾದ ವಿಷಯ ವಿರಕ್ತಿ ಅಸಾಧ್ಯವಲ್ಲ; ಕೇವಲ ಕರ್ಮದಿಂದ ಮುಕ್ತಿಯಿಲ್ಲ; ಭಕ್ತರ ಇಷ್ಟಾರ್ಥಗಳನ್ನು ಸಲ್ಲಿಸುವ ಭಗವಂತನು ಮೋಕ್ಷಾರ್ಥಿಗಳಿಗೆ ಮೋಕ್ಷ ಪ್ರದಾಯಕ; ಶ್ರೀಮನ್ನಾರಾಯಣನೊಬ್ಬನೇ ರಕ್ಷಣ ಸಾಮರ್ಥ್ಯವುಳ್ಳವನು; ಮೋಕ್ಷಾರ್ಥಿ ತನ್ನ ದೋಷ ದೌರ್ಬಲ್ಯಗಳಿಂದ ಖಿನ್ನನಾಗದೆ ಭಗವಂತನ ಗುಣ ಸ್ಮರಣೆ ಮಾಡುತ್ತ ಧೈರ್ಯ ಹೊಂದಿರಬೇಕು; ಸಂಸಾರದ ಬೇರನ್ನು ಜಗದೀಶ್ವರನೇ ಕತ್ತರಿಸುವನು; ಶ್ರೀಮನ್ನಾರಾಯಣನ ದಿವ್ಯರೂಪವು ಮುಕ್ತರಿಂದ ಭೋಗ್ಯವಾಗಿದೆ; ಪರವಾಸುದೇವನ ಊಳಿಗದ ಭಾಗ್ಯ ಮುಕ್ತರಿಗೆ ಪರಮಭೋಗ್ಯ.

ಮೋಕ್ಷವೆಂದರೆ ಅದ್ವೈತದಲ್ಲಿ ಇರುವಂತೆ ನಿರ್ಗುಣ ಬ್ರಹ್ಮದ ಅನುಭವ ಅಲ್ಲ. ದಿವ್ಯರೂಪವುಳ್ಳ ಭಗವಂತನ ಸಾನ್ನಿಧ್ಯದ ಭಗವದನುಭವ. ಇದರ ಪ್ರಾಪ್ತಿಗೆ ಭಗವಂತನ ಕೃಪೆ ಅಗತ್ಯ. ಇದಕ್ಕೆ ಮಾರ್ಗ 'ನೀನೆಗತಿ' ಎಂದು ಮೊರೆಹೋಗುವುದು.

ಜೀವ–ಈಶಗೆ ಭೇದ ಸರ್ವತ್ರ. ಜೀವ–ಜೀವಕೆ ಭೇದವು।
ಜೀವ–ಜಡರೊಳು ಭೇದ, ಜಡರೊಳು ಭೇದ, ಜಡ–
ಪರಮಾತ್ಮಗೆ(ಭೇದ)।೧।

* * * * *

ದಕ್ಷ–ಸಮ–ಅನಿರುದ್ಧ ಗುರು ಶಚಿ ರತಿ ಸ್ವಾಯಂಭುವರಾರ್ವರು।
ಕಕ್ಷ; ಪ್ರಾಣನಿಗಿಂತ ಕಾಮನು ಕಿಂಚಿದಧಿಕನು ಇಂದ್ರನು ।೪।

ದೇವ ಇಂದ್ರನಿಗಧಿಕ ಮಹರುದ್ರ ದೇವರಿಗೆ ಸಮಗರುಡನು।
ಕೇವಲವು ಈ ಶೇಷ–ರುದ್ರರು; ದೇವಿ ಹೆಚ್ಚು ಸರಸ್ವತೀ ।೫।

ವಾಯುವಿಗೆ ಸಮರಿಲ್ಲ ಜಗದೊಳು ವಾಯುದೇವರೆ ಬ್ರಹ್ಮರು।
ವಾಯು ಮುಕ್ತಗೆ ಕೋಟಿಗುಣದಿಂದಧಿಕ; ಶಕ್ತಳು ಶ್ರೀ ರಮಾ ।೬।

ಅನಂತಗುಣದಿಂ ಲಕುಮಿಗಧಿಕನು ಶ್ರೀಪುರಂದರ ವಿಠಲನು।
ಘನರು ಸಮರೂ ಇಲ್ಲ ಜಗದೊಳು ಹನುಮಹೃತ್‌ವಾಸಗೆ ।೭।

ಮಧ್ವಸಿದ್ಧಾಂತದ ಅಂಗೋಪಾಂಗಗಳಾದ ನವವಿಧಭಕ್ತಿ, ಹರಿನಾಮ ಸಂಕೀರ್ತನೆ, ಗುರುಮಹಿಮೆ, ಪೂಜಾವಿಧಾನ, ಭಕ್ತಿ–ಭಕ್ತ ಮಾಹಾತ್ಮ್ಯ, ತೀರ್ಥಕ್ಷೇತ್ರ ಮಾಹಾತ್ಮ್ಯ, ತುಲಸೀಮಹಾತ್ಮ್ಯ, ಏಕಾದಶೀ ಮಹಾತ್ಮ್ಯ, ಮುಂತಾದ ವಿಚಾರಗಳನ್ನು ಪುರಂದರದಾಸರು ಕೀರ್ತನ, ಉಗಾಭೋಗ, ಸೂಳಾದಿ – ಈ ರಚನಾ ಪ್ರಕಾರಗಳಲ್ಲಿ ನಿರೂಪಣೆ ಮಾಡಿದ್ದಾರೆ. ಇವುಗಳಲ್ಲಿ ಸಿದ್ಧಾಂತ ಶಾಸ್ತ್ರಲಕ್ಷಣ ಮೇಲುಗೈಯಾಗಿ, ಸಾಹಿತ್ಯಗುಣ ಕೆಳಕ್ಕಿಳಿಯುತ್ತದೆ.

**ಹರಿಕಥಾಮೃತಸಾರ**: ಮೇಲೆ ಹೇಳಿದ ನವವಿಧ ಭಕ್ತಿಗಳಲ್ಲಿ ಹರಿಕಥಾಶ್ರವಣವೂ ಒಂದು. ಅನೇಕ ಸಂಸ್ಕೃತ ಗ್ರಂಥಗಳನ್ನೂ ಕೀರ್ತನೆಗಳನ್ನೂ ರಚಿಸಿರುವ ಜಗನ್ನಾಥದಾಸರು (೧೭೨೮–೧೮೦೯) 'ಹರಿಕಥಾಮೃತಸಾರ'ವೆಂಬ ಸರಳ ಸುಂದರ ಶೈಲಿಯ ಜನಪ್ರಿಯ ಕೃತಿಯನ್ನು ರಚಿಸಿದ್ದಾರೆ. ಹರಿಕಥಾಮೃತ ಸಾರವು ಸುಮಾರು ಸಾವಿರ ಸಂಖ್ಯೆಯ ಭಾಮಿನಿ ಷಟ್ಪದಿ ಪದ್ಯಗಳನ್ನುಳ್ಳ ಗಣ್ಯ

ಸರ್ವೋತ್ತಮನಹ ನೆಂಬ ಜ್ಞಾನವ ತಾರತಮ್ಯದಲಿ ತಿಳಿವ ಮಾರ್ಗವಿದು" ಎಂಬ ಕೀರ್ತನೆಗಳಲ್ಲಿ ಪುರಂದರದಾಸರು ಮಧ್ವಮತದ ಹಿರಿಮೆ, ಹರಿಸರ್ವೋತ್ತಮತ್ವ, ಹರಿಸರ್ವೋತ್ತಮತ್ವವನ್ನು ಅರಿಯಲು ಪರಿವಾರ ದೇವತೆಗಳಲ್ಲಿ ತಾರತಮ್ಯ ಜ್ಞಾನದ ಅಗತ್ಯ ಇವನ್ನು ತಿಳಿಸಿದ್ದಾರೆ. ಮಧ್ವಮತ 'ಸತುಶಾಸ್ತ್ರ' (ಸತ್‌ಶಾಸ್ತ್ರ); ಅದಕ್ಕೆ ಸಮನಾದದ್ದು ಬೇರೆ ಇಲ್ಲ. ಮಧ್ವಾಚಾರ್ಯರು ಹನುಮನ, ಭೀಮನ ಅವತಾರ. "ಪರಮತ ಖಂಡಿಸಿ ಪಂಡಿತರು ಪೇಳಿದ ಪುರಂದರ ವಿಠಲನ ಮತ ಹನುಮನ ಮತವು". ಭಕ್ತಿಪಂಥದಲ್ಲಿ ಏಕದೇವೋಪಾಸನೆ ಅನಿವಾರ್ಯವಾದ ಒಂದು ಅಗತ್ಯ ಸಾಧನಾಕ್ರಮ; ಈ ಬಗೆಗೆ ಎರಡು ಮಾತಿಲ್ಲ. ಭಕ್ತಿಯಲ್ಲಿ ಮುಖ್ಯವಾಗಿ ಶಿವಭಕ್ತಿ, ವಿಷ್ಣುಭಕ್ತಿ, – ಪ್ರಮುಖ. ಹರಿಪಾರಮ್ಯವನ್ನು ಎತ್ತಿ ಹಿಡಯಬೇಕಾದರೆ ಹರನನ್ನು ಕೆಳಕ್ಕಿಳಿಸಲೇ ಬೇಕು! ಕೆಳಕ್ಕಿಳಿಸುವಲ್ಲಿಯೂ ಹರನಿಗೆ ಒಂದು ಮೇಲಿನ ಪದವಿಯನ್ನು ಕಟ್ಟೇ ಇಳಿಸಿದೆ ಮಧ್ವಮತ. ಹರಹರಿಯ ಪರಮಭಕ್ತನಾಗುತ್ತಾನೆ. "ಭಕುತರೊಳಗೆಲ್ಲ ಚಂದ್ರಶೇಖರಗೆ ಸರಿಯಿಲ್ಲ" ವಿಷ್ಣುಭಕ್ತಿ ಭಕ್ತನಲ್ಲಿ ಅಳವಡಬೇಕಾದರೆ ಈಶ್ವರನ ಅನುಗ್ರಹವಾಗಲೇ ಬೇಕು. ಆದ್ದರಿಂದ, ಮಧ್ವಮತದಲ್ಲಿ ಶಿವನ ಪೂಜೆ, ಪ್ರಾರ್ಥನೆಗಳಿಗೆ, ಮುಖ್ಯ ಸ್ಥಾನವಿದೆ. ಇತರ ಹರಿದಾಸರಂತೆ ಪುರಂದರದಾಸರೂ ಅತ್ಯಂತ ಭಕ್ತಿಯಿಂದಲೇ ಈಶ್ವರ ಸ್ತುತಿಮಾಡಿದ್ದಾರೆ, ನಾಲ್ಕಾರು ಕೀರ್ತನೆಗಳಲ್ಲಿ. 'ಚಂದ್ರಚೂಡ ಶಿವಶಂಕರ ಪಾರ್ವತಿರಮಣ ನಿನಗೆ ನಮೋ ನಮೋ' ಎಂಬ ಕೀರ್ತನೆಯಲ್ಲಿ ಶಂಕರನನ್ನು ಬಗೆಬಗೆಯಲ್ಲಿ ಕೊಂಡಾಡಿ ಕೊನೆಗೆ, "ಕೊರಳಲಿ ಭಸ್ಮ ರುದ್ರಾಕ್ಷಿಯ ಧರಿಸಿದ ಪರಮ ವೈಷ್ಣವನು ನೀನೆ। ಗರುಡ ಗಮನ ಶ್ರೀ ಪುರಂದರ ವಿಠಲನ ಪ್ರಾಣಪ್ರಿಯನು ನೀನೆ" ಎಂದಿರುವುದು ಮಧ್ವಸಿದ್ಧಾಂತಕ್ಕೆ ಅನುಸಾರವಾಗಿಯೇ ಇದೆ. "ಹರಿಯೆ ಗತಿ ಸಿರಿವಿರಿಂಚಿ ಶಿವರಿಗೆ, ನರಹರಿಯೆ ಗತಿ ಸುರಪತಿ ಸುರರಿಗೆ." ಮಧ್ವಸಿದ್ಧಾಂತದ ಕೆಲವು ಮುಖ್ಯ ತತ್ತ್ವಗಳನ್ನು ಒಂದು ಕೀರ್ತನೆಯಲ್ಲಿ ಸ್ಪಷ್ಟವಾಗಿ ನಿರೂಪಿಸಿದ್ದಾರೆ ದಾಸವರ್ಯರು. ಅದರಿಂದ ಕೆಲವು ಚರಣಗಳನ್ನು ಕೆಳಗೆ ಉದ್ಧರಿಸಿದೆ; ಅದರಲ್ಲಿ ದೇವತೆಗಳ ತಾರತಮ್ಯದ (ಮೇಲು–ಕೆಳ ಪದವಿಗಳ) ವಿವರಣೆ ಇದೆ:

ಸತ್ಯ–ಜಗತಿದು, ಪಂಚಭೇದವು, ನಿತ್ಯ ಶ್ರೀ ಗೋವಿಂದನ॥
ಕೃತ್ಯ ತಿಳಿದು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ ।ಪ।

"ಆಕಾಶಾತ್ ವಾಯುಃ, ವಾಯೋರಗ್ನಿಃ, ಅಗ್ನೇರಾಪಃ, ಅಬ್ಭ್ಯಃ ಪೃಥ್ವೀ," ಎಂಬ ವಾಕ್ಯದಿಂದ ಒಂದು ಆಕಾಶವೇ ಪರಂಪರಯಾ ಪೃಥ್ವಾದಿಯೂ ತಾನೇಯಾಗಿ, ತತ್ಕರಣವೂ ಆಗಿ, ತದ್ವಾಕ್ಯವೂ ಆಗಿ, ತದಾಧಾರವೂ ಆಗಿ, ತದ್‌ವ್ಯತಿರಿಕ್ತವೂ ಆಗಿ, ಏಕವಾಗಿ, ಪೃಥ್ವ್ಯಾದಿ ಉಪಾಧಿಯಿಂದ ಅನೇಕವೂ ಆಗಿ, ಆ ತನ್ನ ಅಂಶದಿಂದಾದ ಉಪಾಧಿಗಳು ತಾನೇಯಾಗಿರುವಂತೆ, ಒಂದು ಬ್ರಹ್ಮವೇ ದ್ವೈತಾದ್ವೈತ ವಿಶಿಷ್ಟಾದ್ವೈತ ಸಕಲವೂ ಎಂದು ತಿಳಿವುದು."

ಪ್ರಮಾಣದ ಕೃತಿ. ಇದಕ್ಕೂ ರಂಗನಾಥನ ಅನುಭವಾಮೃತಕ್ಕೂ ಇರಬಹುದಾದ ಹೋಲಿಕೆಯನ್ನು ಕುರಿತು ಈ ಹಿಂದೆಯೇ ಪ್ರಸ್ತಾಪಿಸಿದೆ. ಇದರಲ್ಲಿ ಮಧ್ವಸಿದ್ಧಾಂತದ ನಿರೂಪಣೆ ವಿವರಪೂರ್ಣವಾಗಿ, ಶಾಸ್ತ್ರಸಮ್ಮತವಾಗಿ, ನಡೆದಿದೆ. "ತತ್ವವನ್ನು ತಿಳಿಸಿ ಹೇಳುವಲ್ಲಿ ಸಾಹಿತ್ಯದೃಷ್ಟಿ ಮಾತ್ರವಲ್ಲ, ಅನಭಿಜ್ಞನಿಗೂ ತಿಳಿಸಿಕೊಡಬೇಕೆಂಬ ಉದ್ದೇಶವು ಈ ಗ್ರಂಥದಲ್ಲಿದೆ. ಬಹುಭಾಗದಲ್ಲಿ ಇದು ಶಾಸ್ತ್ರಜಡವಾಗಿದ್ದರೂ ಇದರ ವಿವೇಚನೆಯ ಸೊಗಸು, ಸಾದೃಶ್ಯಗಳ ಔಚಿತ್ಯ, ಚಿತ್ತವನ್ನು ಎಳೆದುಕೊಂಡು ಹೋಗುತ್ತವೆ."[೧೧] ರಂಗನಾಥನಂತೆಯೆ ಇವರ ಕನ್ನಡ ಕೆಚ್ಚು ಕೆಳಗಿನ ಪದ್ಯದಲ್ಲಿ ಪ್ರಕಟವಾಗಿದೆ:

ಭಾಸ್ಕರನ ಮಂಡಲವ ಕಂಡು ನಮಸ್ಕರಿಸಿ ಮೋದಿಸದೆ ದ್ವೇಷದಿ।
ತಸ್ಕರನು ನಿಂದಿಸಲು ಕುಂದಹುದೇ ದಿವಾಕರಗೆ॥

ಸಂಸ್ಕೃತವಿದಲ್ಲೆಂದು ಕುಹಕ ತಿ। ರಸ್ಕರಿಸಲೇನಹುದು ಭಕ್ತಿಪು।
ರಸ್ಕರದಿ ಕೇಳ್ವರಿಗೆಯೊಲಿವನು ಪುಷ್ಕರಾಕ್ಷ ಸದಾ॥

**ಅದ್ವೈತ, ದ್ವೈತ, ವಿಶಿಷ್ಟಾದ್ವೈತ,** ಇವು ಒಂದೇ ಉಪಾಸ್ಯದೈವತದ ಸಾಕ್ಷಾತ್ಕಾರದ ಭಿನ್ನಮಾರ್ಗಗಳು. ಮತದಲ್ಲಿ ಭೇದವೇ ಹೊರತು ಗುರಿಯಲ್ಲಲ್ಲ. ಮೂರು ಮಾರ್ಗಗಳನ್ನು ಸಮನ್ವಯ ದೃಷ್ಟಿಯಿಂದ ನೋಡುವುದು ಒಳ್ಳಿತು. ಈ ದೃಷ್ಟಿಯನ್ನು ಪ್ರತಿಪಾದಿಸುವ ವೆಂಕಟದಾಸರ 'ಅಖಂಡಾನಂದ ಸ್ವರೂಪ' ಗ್ರಂಥವಾಕ್ಯಗಳಿಂದ ಈ ಪ್ರಕರಣವನ್ನು ಮುಗಿಸಬಹುದು:

"ದ್ವೈತವೆಂದರೆ ಮಾಯಾದಿ ಪ್ರಪಂಚ. ವಿಶಿಷ್ಟಾದ್ವೈತವೆಂದರೆ ಅದ ವಿಚಾರಿಸಿ ಶ್ರುತ್ಯರ್ಥಗಳಿಂ ನಿಶ್ಚೈಸುವ ಸಾಧನ. ಅದ್ವೈತವೆಂದರೆ, ಆ ಸಾಧನದಿಂ ಮೊದಲು ಆಭರಣದಂತೆ ತೋರಿದ ಸ್ವರ್ಣವಿಕಾರವ ಕರಗಿಸಿದಲ್ಲಿ ಘಟ್ಟಿಯೇ ಹ್ಯಾಗೋ ಹಾಗೆ ಸಾಧ್ಯವೆಂಬ ವಸ್ತುವು ತಾನೇಯಾಗಿ ಇವಿಷ್ಟೂ ತನ್ನಲ್ಲಿ ಕಲ್ಪಿತವಾದ್ದರಿಂ, ಪುಸಿಯೆಂದು ತದ್ವೃತ್ತಿಯಂ ಕಳೆದು ತಾನಪ್ಪುದೇ ಅದ್ವೈತವಾದ್ದರಿಂದ ಈ ದ್ವೈತಾದ್ವೈತ ವಿಶಿಷ್ಟಾದ್ವೈತ ಮೂರಕ್ಕೂ ಯೇಕಾರ್ಥವೆಂದು ತಿಳಿವುದು. ಮತ್ತು ಮೂರೂ ಒಂದೇಯೆಂಬುದಕ್ಕೆ ಆಕಾಶದೃಷ್ಟಾಂತದಿಂದ ಒಂದು ಆಕಾಶವೇ –

# ೬. ಲೌಕಿಕ ಶಾಸ್ತ್ರಗ್ರಂಥಗಳು

ನಿಜಗುಣ ಶಿವಯೋಗಿಗಳು 'ವಿವೇಕ ಚಿಂತಾಮಣಿ'ಯಲ್ಲಿ ಲೌಕಿಕಶಾಸ್ತ್ರವನ್ನು 'ಲೌಕಿಕವೇ ಧನ್ವಂತರ್ಯಾದಿಗಳಿಂದುಕ್ತಮಾದ ಆಯುರ್ವೇದ, ದಂಡನೀತಿ ಮೊದಲಾದ ದೃಷ್ಟ ಫಲಂಗಳಂ ನಿರ್ಧರಿಸುತ್ತಿರ್ಕುಂ' ಎಂಬ ವಿವರಣೆಯಿಂದ ಲಕ್ಷಣಿಸಿದ್ದಾರೆ. ಅರ್ಥ, ಕಾಮ – ಈ ಫಲಸಿದ್ಧಿಗಳನ್ನು ಕೊಡತಕ್ಕವು. ಲೌಕಿಕಶಾಸ್ತ್ರಗಳೆಂದು ಪ್ರಾಚೀನರ ದೃಷ್ಟಿಯಿಂದ ನಾವು ವಿವರಿಸಬಹುದು. ಈ ಬಗೆಯ ಶಾಸ್ತ್ರಗಳನ್ನು ಪ್ರತಿಪಾದಿಸುವ ಗ್ರಂಥಗಳನ್ನು ಶಾಸ್ತ್ರಜ್ಞರಾದ ಕನ್ನಡಿಗರು ರಚಿಸಿದ್ದಾರೆ. ನಾವು ಈ ವರೆಗೆ ಸಮೀಕ್ಷಿಸಿದ ಶಾಸ್ತ್ರಗ್ರಂಥಗಳು ಶುದ್ಧಕಾವ್ಯ ಸೃಷ್ಟಿಗೆ ಬಗೆಬಗೆಯಲ್ಲಿ ಸಹಾಯಕವಾದ್ದರಿಂದ ಅವುಗಳಲ್ಲಿ ಹೆಚ್ಚಾಗಿಯೋ ಕಡಿಮೆಯಾಗಿಯೋ ಕಾವ್ಯಾಂಶ ಕಂಡುಬರುತ್ತದೆ. ಆಯಾ ಪ್ರಕರಣಗಳಲ್ಲಿ ಉದ್ಧರಿಸಿದ ಉದಾಹರಣ ಪದ್ಯಗಳಿಂದ ಈ ಸಂಗತಿ ವಾಚಕರಿಗೆ ಸ್ಪಷ್ಟವಾಗಿರಬೇಕು. ಆಯುರ್ವೇದ, ಜ್ಯೋತಿಷ, ಕಾಮಶಾಸ್ತ್ರ ಇತ್ಯಾದಿ ಪ್ರಾಚೀನ ಶಾಸ್ತ್ರ ಗ್ರಂಥಗಳಲ್ಲಿ ಕಾವ್ಯಾಂಶವನ್ನು ಹುಡುಕುವುವೆಂದರೆ, 'ಮೊರಡಿಯೊಳೆ ಮಾದುಪಳಮನರಸಿದಂತೆಯೆ' (ಗುಡ್ಡದ ಮೇಲೆ ಮಾದಳ ಹಣ್ಣನ್ನು ಹುಡುಕಿಕೊಂಡು ಹೋದಂತೆಯೇ') ಸರಿ. ಪ್ರಯೋಜನ ದೃಷ್ಟಿಯಿಂದ ನೋಡುವುದಾದರೆ, ವೈದ್ಯಶಾಸ್ತ್ರ ಗ್ರಂಥಗಳಿಂದ ಬಹುಶಃ ಇಂದೂ ಪ್ರಯೋಜನ ಪಡೆಯಬಹುದೇನೋ. ವೈದ್ಯ ವಿಶಾರದರು ಇವುಗಳನ್ನು ಸಂಶೋಧನ ದೃಷ್ಟಿಯಿಂದ ಪರಾಮರ್ಶೆ ಮಾಡುವುದು ಅಗತ್ಯ. ಪಾಕಶಾಸ್ತ್ರ ಗ್ರಂಥಗಳನ್ನು ನಮ್ಮ ನಾಡಿನ ಗೃಹಿಣಿಯರು ಗಮನಿಸಿ, ಬಳಕೆ ತಪ್ಪಿದ 'ಹಳೆಯ ರುಚಿ'ಗಳನ್ನು 'ಹೊಸರುಚಿ'ಗಳಾಗಿ ರೂಢಿಸಿ ತರಬಹುದಲ್ಲವೆ? ಜ್ಯೋತಿಷ–ಶಕುನಗಳಲ್ಲಿ ನಮ್ಮ ಜನಕ್ಕೆ ಇನ್ನೂ ನಂಬಿಕೆ ಇದೆಯಾದ್ದರಿಂದ ಆ ಸಂಬಂಧದ ಶಾಸ್ತ್ರಗಳನ್ನು ಅಧ್ಯಯನ ಮಾಡುವವರೂ ಇದ್ದಾರು. 'ಜನವಶ್ಯ'ದಂಥ ಕಾಮಶಾಸ್ತ್ರಗ್ರಂಥವನ್ನು ಕುತೂಹಲವುಳ್ಳವರು ಓದಿಕೊಳ್ಳಬಹುದು. ಅಶ್ವವೈದ್ಯ ಗೋವೈದ್ಯಗಳನ್ನು ಕಡೆಗಣಿಸಬೇಕಾಗಿಲ್ಲ; ಗೋವೈದ್ಯವಂತೂ ಹಳ್ಳಿಗಾಡಿನ ಜನಕ್ಕೆ ಕೆಲವು ಸುಲಭ ವೈದ್ಯಕ್ಕೆ ದಾರಿ ತೋರಿಸೀತು. (ಇವನ್ನು ಹೊಸಗನ್ನಡದಲ್ಲಿ ಅನುವಾದ ಮಾಡಿ ಪ್ರಕಟಿಸುವ ಕೆಲಸ ಆಗಬೇಕು.) ಹೀಗೆ 'ದೃಷ್ಟಫಲ'ಗಳನ್ನು ಕೊಡತಕ್ಕ

## ಅಡಿ ತಿಪ್ಪಣಿಗಳು

೧. ಎಂ.ಆರ್. ಶ್ರೀನಿವಾಸಮೂರ್ತಿ: 'ವಚನ ಧರ್ಮಸಾರ', ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥ ಮಾಲೆ, ೧೯೪೨; ಪು. ೬
೨. ಎಂ. ಚಿದಾನಂದಮೂರ್ತಿ: 'ಶೂನ್ಯ ಸಂಪಾದನೆಯನ್ನು ಕುರಿತು', ಮೋಹನ ಪ್ರಕಾಶನ, ಮೈಸೂರು, ೧೯೬೨; ಪು. ೫೮–೫೯
೩. ಮೇಲಿನದೇ; ಪು. ೨೯–೩೦
೪. ಬಿ.ಎಂ.ಶ್ರೀಕಂಠಯ್ಯ; 'ಮುನ್ನುಡಿ', 'ವಚನ ಧರ್ಮಸಾರ' ಪು. ೧೯೪೨.
೫. ಎಂ.ಆರ್.ಶ್ರೀನಿವಾಸಮೂರ್ತಿ: 'ವಚನ ಧರ್ಮಸಾರ', ಪು. ೧೩೩–೧೩೫.
೬. ರಂ.ಶ್ರೀ. ಮುಗಳಿ: 'ಕನ್ನಡ ಸಾಹಿತ್ಯ ಚರಿತೆ', ೧೯೫೩; ಪು. ೩೫೯.
೭. ಮೇಲಿನದೇ: ಪು. ೩೪೦.
೮. ಡಿ.ಕೆ. ಭೀಮಸೇನರಾವ್: 'ಶಬ್ದಮಣಿದರ್ಪಣದ ಪಾಠಾಂತರಗಳು ಮತ್ತು ಅನುಭವಾಮೃತವೂ ಹರಿಕಥಾಮೃತಸಾರವೂ'; ಪು. ೯೧.
೯. ಹೊಸಕೆರೆ ಚಿದಂಬರಯ್ಯ (ಸಂ.) : 'ಮಹಲಿಂಗರಂಗ ಕವಿಯ ಅನುಭವಾಮೃತ'; ಎಸ್.ಎಸ್.ಎನ್.ಬುಕ್ ಡಿಪೋ, ಬೆಂಗಳೂರು, ೩ನೆಯ ಮುದ್ರಣ, ೧೯೬೯, ಮುನ್ನುಡಿ: ಪು. ೮.
೧೦. ಮೇಲಿನದೇ.
೧೧. ರಂ.ಶ್ರೀ. ಮುಗಳಿ: 'ಕನ್ನಡ ಸಾಹಿತ್ಯ ಚರಿತ್ರೆ', ಪು. ೩೦೪.

---

* ಗ್ರಂಥ ಅಪ್ರಕಟಿತ. ಎರಡು ಕಾಗದದ ಪ್ರತಿಗಳು (KB ೧೫೮, KB ೧೬೧) ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಇವೆ. (ಪ್ರತಿಯ ಎರವಲು– ಸಂಸ್ಥೆಯ ನಿರ್ದೇಶಕರ ಕೃಪೆಯಿಂದ).

ಸು.೧೩೫೦ ಎಂದು ಇಟ್ಟುಕೊಳ್ಳಬಹುದು. ಗ್ರಂಥ ರಚನೆಯ ಉದ್ದೇಶವನ್ನು ತಿಳಿಸುವ ಈ ಪದ್ಯ ಗಮನಾರ್ಹ:

ಮರನಂ ಗಾಳಿಯಂ ದೂಳಿಯಂ ರಜನಿಯಂ ನೀರಾಟಮಂ ಬೇಟಮಂ
ಸುರೆಯಂ ಸೂಳೆಯಂ ವಿಟಾಟವಿಕರಂ ಕೊಂಡಾಡಿ ಬೆಂಡಾಗದೀ
ಧರೆಯೊಳ್ ಸರ್ವಜನೋಪಕಾರಮೆನಲ್ ಈ ಮಂತ್ರೌಷಧಿವ್ರಾತಮಂ
ನಿರುತಂ ಭಾವಿಸಿ ಪೇಳ್ವ ಮಾನವನೆ ತಾಂ ದೇವಂ ಧರಾಚಕ್ರದೊಳ್

ಶೃಂಗಾರರಸ ಪ್ರಧಾನವೂ ೧೮ ವರ್ಣನೆಗಳಿಂದ ಕೂಡಿದ್ದೂ ಆದ ಕಾವ್ಯಗಳನ್ನು ರಚಿಸುವುದಕ್ಕಿಂತ ಜನೋಪಕಾರಕವಾದ (ವೈದ್ಯ) ಶಾಸ್ತ್ರಗ್ರಂಥ ರಚನೆ ಮೇಲೆಂದು ಕವಿಯ ಅಭಿಪ್ರಾಯ. ಉಪಯುಕ್ತವಾದ ಶಾಸ್ತ್ರಗ್ರಂಥ ರಚನೆ ಎಲ್ಲ ಕಾಲದಲ್ಲೂ ಅಗತ್ಯ. ಕಾವ್ಯ ರಚನೆ ವ್ಯರ್ಥವೆನ್ನುವ ಮಾತು ಪಕ್ಷಪಾತದಿಂದ ಕೂಡಿದ್ದು ಎಂಬಲ್ಲಿ ಸಂದೇಹವಿಲ್ಲ.

ಖಗೇಂದ್ರಮಣಿ ಎಂದರೆ ಗರುಡರತ್ನ. ಈ ರತ್ನದ ಪ್ರಯೋಗದಿಂದ ವಿಷಸರ್ಪಗಳು ಕಚ್ಚಿದರೆ ಆ ವಿಷವನ್ನು ತೆಗೆಯಬಹುದೆಂಬ ನಂಬಿಕೆಯಿದೆ. ಈ ಗ್ರಂಥದಲ್ಲಿ ವಿಷಸರ್ಪ ಮಾತ್ರವಲ್ಲದೆ, ಸ್ಥಾವರ ಜಂಗಮ ಕೃತಕ ಎಂಬ ಮೂರು ಪ್ರಕಾರಗಳಲ್ಲಿ ಅಡಕವಾಗುವ ನಾನಾ ಬಗೆಯ ವಿಷಗಳ ಲಕ್ಷಣಗಳನ್ನೂ, ಮಂತ್ರ ತಂತ್ರ ಔಷಧ ಪ್ರಯೋಗಗಳಿಂದ ವಿಷವನ್ನು ಪರಿಹರಿಸುವ ಚಿಕಿತ್ಸಾ ವಿಧಾನಗಳನ್ನೂ ಹದಿನಾರು ಅಧಿಕಾರಗಳಲ್ಲಿ ವಿವರಿಸಿದೆ. ವಿಷಯ ನಿರೂಪಣೆಗೆ ಸಂಸ್ಕೃತ ವರ್ಣವೃತ್ತಗಳನ್ನೂ ಕಂದಗಳನ್ನೂ ಬಳಸಿದೆ. ಸಂಸ್ಕೃತ ಭಾಷೆಯಲ್ಲಿರುವ 'ಕಾಶ್ಯಪ ಸಂಹಿತೆ' ಅಥವಾ 'ಗರುಡಪಂಚಾಕ್ಷರೀಕಲ್ಪ' ಎಂಬ ಗ್ರಂಥಕ್ಕೂ ಈ ಗ್ರಂಥಕ್ಕೂ ಕೆಲವು ಕಡೆಗಳಲ್ಲಿ ಹೋಲಿಕೆ ಕಂಡು ಬಂದಿದೆ. ಆದರೆ, "ಲೋಕಾರೋಗ್ಯ ನಿಮಿತ್ತಮಾಗಿ ಈ ಗ್ರಂಥವನ್ನು ತಿಳಿದವರು ಮೊದಲು ಹೇಳಿದರು. ಎಲ್ಲಾಜನಕ್ಕೂ ತಿಳಿಯುವಂತೆ ಕನ್ನಡದಲ್ಲಿ ನೀನು ಹೇಳಬೇಕು" ಎಂದು ಭವ್ಯರು ಕೇಳಿಕೊಂಡಿದ್ದರಿಂದ ಈ ಗ್ರಂಥವನ್ನು ರಚಿಸಿರುವುದಾಗಿಯೂ ಪೂಜ್ಯಪಾದ ಮುಂತಾದಹಲವು ಪ್ರಾಚೀನ ವೈದ್ಯ ಗ್ರಂಥಗಳಿಂದ ವಿಷಯ ಸಂಗ್ರಹ ಮಾಡಿ ಜಿನಾಗಮೋಕ್ತ ಕ್ರಮದಿಂದ ಜೀವಸಹಿತವಾದ ವಿಷಪ್ರತೀಕಾರವನ್ನು ಹೇಳುವೆನೆಂದೂ ಕವಿ ತಿಳಿಸಿರುತ್ತಾನೆ. ಆದ್ದರಿಂದ ಖಗೇಂದ್ರಮಣಿದರ್ಪಣ ಕನ್ನಡದ ಮೊತ್ತಮೊದಲಿನ ಸ್ವತಂತ್ರ ವೈದ್ಯಗ್ರಂಥವೆಂದು ಹೇಳಬಹುದು.

ಶಾಸ್ತ್ರಗ್ರಂಥಗಳಲ್ಲಿ ಆಯ್ದ ಕೆಲವನ್ನು ಮಾತ್ರ ಇಲ್ಲಿ ಬಹು ಸಂಕ್ಷೇಪವಾಗಿ ಪರಿಚಯ ಮಾಡಿಕೊಳ್ಳಲಾಗುವುದು.

**ವೈದ್ಯಶಾಸ್ತ್ರ:** (i) ಸಾಮಾನ್ಯ ವೈದ್ಯ: ಈ ಶಾಸ್ತ್ರದಲ್ಲಿ ಸುಮಾರು ೩೦ ಗ್ರಂಥಗಳು ಹುಟ್ಟಿರುವುದು ಅದರ ಸರ್ವಜನೋಪಯುಕ್ತತೆಯನ್ನು ಸಾರಿ ಹೇಳುತ್ತದೆ. ಸಾಮಾನ್ಯ ವೈದ್ಯ ವರ್ಗದಲ್ಲಿಯೇ ಸುಮಾರು ೧೫ ಗ್ರಂಥಗಳು ಗೋಚರಕ್ಕೆ ಬರುತ್ತವೆ. ಇವುಗಳಲ್ಲಿ ಕೀರ್ತಿವರ್ಮನ ಗೋವೈದ್ಯವನ್ನು (ಸು.೧೧೦೦) ಬಿಟ್ಟರೆ, ಜಗದ್ದಳ ಸೋಮನಾಥನ (ಸು.೧೧೭೫) 'ಕಲ್ಯಾಣಕಾರಕ'ವೇ ಅತ್ಯಂತ ಪ್ರಾಚೀನವಾದದ್ದು. ಇದು ಪೂಜ್ಯಪಾದನ ಸಂಸ್ಕೃತ ಮೂಲ ಗ್ರಂಥದ ಅನುವಾದ. ದೊರಕಿರುವ ಅಸಮಗ್ರ ಹಸ್ತಪ್ರತಿಯಲ್ಲಿ ಪೀಠಿಕಾ ಪ್ರಕರಣ, ಪರಿಭಾಷಾ ಪ್ರಕರಣ ಮತ್ತು ರಕ್ತ ಪಿತ್ತ, ಷೋಡಶಜ್ವರ, ಅತಿಸಾರ ಗ್ರಹಣೀ, ಉದರ ರೋಗ, ಕ್ಷಯ, ಗುಲ್ಮ ರೋಗ, ಈ ರೋಗಗಳ ನಿದಾನ ಮತ್ತು ಚಿಕಿತ್ಸಾ ಕ್ರಮಗಳನ್ನು ವಿವರಿಸುವ ೮ ಅಧ್ಯಾಯಗಳಿವೆ. "ಬಾಹಟ, ಸಿದ್ಧಸಾರ, ಚರಕ ಎಂಬ ವೈದ್ಯಗ್ರಂಥಗಳಿಗಿಂತ ಪೂಜ್ಯಪಾದನ ಕಲ್ಯಾಣಕಾರವು ಉತ್ಕೃಷ್ಟವಾದುದೆಂದೂ ಅದರಲ್ಲಿ ಹೇಳಿರುವ ಚಿಕಿತ್ಸೆ ಮಧ್ಯಮಾಂಸ ಮಧುವರ್ಜಿತವೆಂದೂ" ಗ್ರಂಥಕಾರನು ತಿಳಿಸಿದ್ದಾನೆ. ಪೂಜ್ಯಪಾದರು ಜೈನರಾದ್ದರಿಂದ ಪ್ರಾಣಿ ಹಿಂಸೆಗೆ ಅವಕಾಶಕೊಡುವ ಮಾಂಸ ಮಧು (ಜೇನು) ಇವುಗಳ ಸೇವನೆಯನ್ನು ನಿಷೇಧಿಸಿರುವುದು ಗಮನಾರ್ಹ. ಮಧ್ಯಪಾನ ಜೈನ ಧರ್ಮದಲ್ಲಿಯೇ ನಿಷಿದ್ಧ. ಜ್ವರದ ಚಿಕಿತ್ಸಾ ಕ್ರಮವನ್ನು ಹೀಗೆ ತಿಳಿಸಿದೆ; 'ಜ್ವರದ ಆದಿಯೊಳ್ ಉಪವಾಸಂ; ಜ್ವರ ಮಧ್ಯಮದಲ್ಲಿ ಗಂಜಿ, ಪೇಳ್ವ ಕಷಾಯಂ; ಜ್ವರಪಾಕದೊಳ್, ಅಸ್ತಮಿತ ಜ್ವರದೊಳ್, ಮಲಹರಣಂ; ಇನಿತು ಇವು ಆರೋಗ್ಯಕರಂ'. ಶ್ರೀಧರದೇವ (೧೫೦೦), ರತ್ನಾಕರದ ಸಾಳ್ವ, ಈ ಇಬ್ಬರು ಜೈನ ಕವಿಗಳೂ ವೈದ್ಯಗ್ರಂಥಗಳನ್ನು ಬರೆದಿದ್ದಾರೆ. ಶ್ರೀಧರದೇವನ 'ವೈದ್ಯಾಮೃತ' ಚಂಪೂ ರೂಪದಲ್ಲಿರುವುದು ಗಮನಾರ್ಹ. ಸಾಳ್ವನ ಗ್ರಂಥ ಸಾಂಗತ್ಯದಲ್ಲಿದೆ.

**(ii) ವಿಷವೈದ್ಯ:** ಮೊದಲನೆಯ ಮಂಗರಾಜನು (ಸು.೧೩೬೦) ಖಗೇಂದ್ರಮಣಿದರ್ಪಣ' ಎಂಬ ವಿಷವೈದ್ಯ ಗ್ರಂಥವನ್ನು ಬರೆದಿದ್ದಾನೆ. ಇವನೂ ಜೈನಮತೀಯ. 'ಗುಣನಿಧಿಖಗೇಂದ್ರಮಣಿದರ್ಪಣಮೀ ಕೃತಿ ರಚಿತವಾಯ್ತು ಮಂಗಪ್ರಭುವಿಂ' ಎಂದು ಕವಿಯ ಹೇಳಿಕೆ. ಗ್ರಂಥದಿಂದ ಮಂಗರಸನು ವಿಜಯನಗರ ರಾಜ್ಯ ಸಂಸ್ಥಾಪಕನಾದ ಒಂದನೆಯ ಹರಿಹರನ ಕಾಲದಲ್ಲಿ (೧೩೩೬–೧೩೫೭) ಇದ್ದನೆಂದು ತಿಳಿಯಬರುತ್ತದೆ. ಆದ್ದರಿಂದ ಕವಿಯ ಕಾಲವನ್ನು

'ಲೋಕೋಪಕಾರ'ದಲ್ಲಿ ಪಾಕಶಾಸ್ತ್ರದ ಅಧ್ಯಾಯವಿದೆ. ಪ್ರಸಿದ್ಧವಾದದ್ದು ಮೂರನೆಯ ಮಂಗರಸನ (ಸು.೧೫೦೮) ಸೂಪಶಾಸ್ತ್ರ.

'ಜಯನೃಪ ಕಾವ್ಯ' ಮುಂತಾದ ಹಲವು ಪುರಾಣ ಕಥೆಗಳನ್ನು ಕಾವ್ಯ ರೂಪದಲ್ಲಿ ಬರೆದಿರುವ ಕವಿಯೊಬ್ಬನು 'ಸೂಪಶಾಸ್ತ್ರ'ದ ರಚನೆಗೆ ಮನಸ್ಸು ಕೊಟ್ಟದ್ದು ಕುತೂಹಲ ಹುಟ್ಟಿಸುವ ವಿಷಯ. ಇದು ವಾರ್ಧಕ ಷಟ್ಪದಿಯಲ್ಲಿದ್ದು, ೩೫೬ ಪದ್ಯಗಳನ್ನೊಳಗೊಂಡ ೬ ಅಧ್ಯಾಯಗಳ ಗ್ರಂಥ. ಕವಿ, "ಷಡ್ರಸವಿಪಾಕಮನೆನ್ನ ಬಲ್ಲಂದದಿಂ ಪೇಳ್ವೆನು; ಸಂಸ್ಕೃತ ಸೂಪಶಾಸ್ತ್ರದೊಳು ಎನಗೆ ಅರಿವನಿತ ತೆಗೆದು ಕನ್ನಡದಿ ಬರೆದೆನು, ನಳ ಭೀಮ ಗೌರಿಮತದೊಳು ಪೇಳ್ವೆನು" ಎಂದಿದ್ದಾನೆ. ಗ್ರಂಥದಲ್ಲಿ ನಿರೂಪಿತವಾಗಿರುವ ವಿಷಯಗಳು; ಪಿಷ್ಟ ಪಾಕ (ಹಿಟ್ಟಿನ ಅಡಿಗೆ), ಪಾನಕ, ಕಳಮಾನ್ನ (ಬತ್ತದ ಅಕ್ಕಿಯ ಅನ್ನ), ಪಾಕ, ಶಾಕ (ಕಾಯಿ ಪಲ್ಯ), ಪಾಕ, ಇತ್ಯಾದಿ, ಗ್ರಂಥ ರಚನೆಗೆ ಕಾರಣವೇನು?" ಜೀವಿಗಳ ತನುರಕ್ಷಣೆಗೆ ರಸ ರೂಪ ಗಂಧ ಸ್ಪರ್ಶ ಭೋಗಂಗಳ ಎಸಕವೇ ಮುಖ್ಯಂ; ಆ ಪಂಚ ವಿಧ ವಿಷಯಗಳ ಭೋಗೋಪಭೋಗಂಗಳೊಳಗೆ ರಸನೇಂದ್ರಿಯಂ ತುಷ್ಟಿ ವಡೆಯಲಿಹ ಪರಸೌಖ್ಯ ಮುಸುಕುವುದು ನಿಜಂ; ಅದರಿಂ ಆ ಭೋಜ್ಯ ವಸ್ತುವಂ ಹಸನಾಗಿ ಪಾಕಮಂ ಮಾಳ್ಪ ವಿವರದ ಶಾಸ್ತ್ರಮಂ ಮನಂಗೊಂಡು ಪೇಳ್ವೆಂ' ಎಂಬ ವಿವರಣೆಯಲ್ಲಿ ಗ್ರಂಥರಚನೆಯ ಉದ್ದೇಶ ಸ್ಪಷ್ಟವಾಗಿದೆ. ಕವಿಯದು ಅನುಭವದ ಮಾತು. ಮನುಷ್ಯನ ಜಿಹ್ವಾಚಾಪಲ್ಯ (ತಿಂಡಿ ತಿನಿಸುಗಳ ಬಯಕೆ, ಹಾಗೂ ವಾಚಾಳಿತನ) ಅವನ ಮುಪ್ಪಿನಲ್ಲಿ ಕೂಡ ಅವನ ಏಕೈಕ ಬಲ್ಮೆಯಾಗಿ ಅವನಿಗೂ ಇತರರಿಗೂ ಕಾಟವಾಗಿರುತ್ತದೆ! ಇನ್ನು ಹರೆಯದವರ ಮಾತು ಹೇಳಲೇ ಬೇಕಿಲ್ಲ! ಸರ್ವ ಕಾಲದಲ್ಲೂ ಸರ್ವರಿಗೂ ಉಪಯುಕ್ತವಾದ ಇಂಥ ಶಾಸ್ತ್ರವನ್ನು ಇಂದಿನವರೂ ಓದಿಕೊಂಡು ನಾಲಗೆಯ ಚಪಲವನ್ನು ತೀರಿಸಿಕೊಳ್ಳಬಹುದು. ಕವಿ ಜೈನನಾದ್ದರಿಂದ ಗ್ರಂಥದಲ್ಲಿ ವಿವರಿಸಿರುವ ಭಕ್ಷ್ಯ ಭೋಜ್ಯ ಪಾನಕಾದಿ ವಿವರಗಳೆಲ್ಲ ಸಸ್ಯಹಾರಿಗಳಿಗೆ ಸಂಬಂಧಿಸದ್ದು ಎಂದು ಬೇರೆ ಹೇಳಲೇ ಬೇಕಾಗಿಲ್ಲ. ಕೇವಲ ಒಂದು ಭಕ್ಷ್ಯದ ತಯಾರಿಕೆಯ ವಿಧಾನದ ಉದಾಹರಣೆಯಿಂದಲೇ ತೃಪ್ತಿಪಡಬೇಕಾಗಿದೆ:

ಹುರಿದ ತೆಂಗಾಯಿ, ನಸುಬೆಂದ ಬೇಳೆಯ ಹೆಸರು,
ಹುರಿದು ಬೇಯಿಸಿದ ಸೊಜ್ಜಿಗೆ – ಇವನು ಕೂಡಿ ಸ–
ಕ್ಕರೆಯಿಕ್ಕಿ, ಕರ್ಪೂರವನು ತಳಿದು, ಪಿಂಡಮಂ ಮಾಡಿಯೇ ಸಣ್ಣನಾಗಿ
ಅರೆದಕ್ಕಿಯೊಳಗದ್ದಿ, ಹೊಚ್ಚಹೊಸ ತುಪ್ಪದೊಳು

ಮೇಲ್ಕಂಡ ವೈದ್ಯ ಗ್ರಂಥಗಳಲ್ಲದೆ, ತಿಮ್ಮರಾಜ ಗೌಡನ 'ಸ್ತ್ರೀವೈದ್ಯ' (೧೭೫೦), ವ್ರಣವೈದ್ಯ, ಬಾಲವೈದ್ಯ (ಬಾಲಗ್ರಹ ಚಿಕಿತ್ಸೆ), ಅಭಿನವ ಚಂದ್ರ (ಸು.೧೪೦೦) ಮತ್ತು ಬಾಚರಸರ (ಸು.೧೫೦೦) ಅಶ್ವವೈದ್ಯ, ಕೀರ್ತಿವರ್ಮನ ಗೋವೈದ್ಯ (ಸು.೧೧೦೦) – ಮುಂತಾದ ಬಗೆಬಗೆಯ ವೈದ್ಯಶಾಸ್ತ್ರ ಗ್ರಂಥಗಳು ರಚಿತವಾಗಿರುವುದು ಹೆಮ್ಮೆ ಪಡಬೇಕಾದ ಸಂಗತಿ.

ಗಜಶಾಸ್ತ್ರ ಹಯಶಾಸ್ತ್ರಗಳು ವೈದ್ಯಶಾಸ್ತ್ರಗಳಿಗಿಂತ ಭಿನ್ನವಾದವು. ಉದಾಹರಣೆಗೆ, ಗಂಗರಾಜನಾದ ಸೈಗೊಟ್ಟ ಶಿವಮಾರನು 'ಶಿವಮಾರಮತ' ಎಂಬ ಗಜಶಾಸ್ತ್ರವನ್ನೂ 'ಗಜಾಷ್ಟಕ'ವನ್ನೂ ಬರೆದಂತೆ ನಗರದ ಒಂದು ಶಾಸನದಿಂದ ತಿಳಿದುಬರುತ್ತದೆ. (ಶಾಸನದ ಕಾಲ ಸು.೧೦೭೭). 'ಶಿವಮಾರ ದೇವಂ, ಸೈಗೊಟ್ಟನೆಂಬೆರಡನೆಯ ಪೆಸರಂ ತಾಳ್ದಿ ಶಿವಮಾರ ಮತಮೆಂದು ಗಜಶಾಸ್ತ್ರ ಮಾಡಿ, ಮತ್ತಂ –

ಏವೇಳ್ವುದೊ ಶಿವಮಾರಮ। ಹೀವಳಯಾಧಿಪನ ಸುಭಗ ಕವಿತಾಗುಣಮಂ।
ಭೂವಳಯದೊಳ್ ಗಜಾಷ್ಟಕ। ಮೋವನಿಗೆಯುಂ ಒನಕೆವಾಡುಮಾದುದೆಪೇಳ್ಗುಂ।

ಶಿವಮಾರಮತವೆಂಬ ಹೆಸರಿನಲ್ಲಿ ಬರೆದ ಗಜಶಾಸ್ತ್ರವು ಗದ್ಯವೋ ಪದ್ಯವೋ ಹೇಳಲು ಆಧಾರವಿಲ್ಲ. ಶಿವಮಾರನ ಕವಿತಾ ಗುಣವನ್ನು ಮೇಲಿನ ಪದ್ಯದಲ್ಲಿ ಹೊಗಳಿರುವುದರಿಂದ ಅದು ಪದ್ಯರೂಪದಲ್ಲಿ ಇದ್ದಿರಬೇಕು. 'ಗಜಾಷ್ಟಕ' (ಗಜಸಂಬಂಧವಾದ ಎಂಟು ಪದ್ಯಗಳ ಹಾಡು) ಆಯಿತು ಎಂದಿರುವುದರಿಂದ ಅದು ಕನ್ನಡದಲ್ಲಿ ಬಹುಶಃ ತ್ರಿಪದಿ ಛಂದಸ್ಸಿನಲ್ಲಿ – ರಚಿತವಾದ ಹಾಡಾಗಿದ್ದಿರಬೇಕು. 'ಓವನಿಗೆ' ಎಂಬ ಮಾತು ಅದರ ಪ್ರತ್ಯೇಕ ಲಕ್ಷಣವನ್ನು ಸೂಚಿಸುತ್ತದೆ. ಓವನಿಗೆ ಎಂದರೆ ಆನೆಯನ್ನು ಆಕರ್ಷಿಸಿ, ಕೆಡಹಿ, ಕಟ್ಟಿ ಹಾಕುವ ಒಂದು ಸಾಧನ, ಉಪಾಯ, ಎಂದು ಅರ್ಥಮಾಡಲಾಗಿದೆ. ಆದ್ದರಿಂದ, "ಶಿವಕುಮಾರನ ಗಜಾಷ್ಟಕ ಆನೆ ಹಿಡಿಯುವವರ 'ಓವನಿಗೆ' ಯಾಗಿಯೂ ಧಾನ್ಯ ಕುಟ್ಟುವವರ 'ಒನಕೆ ಹಾಡು' ಆಗಿಯೂ ಬಳಕೆಗೆ ಬರಬೇಕಾಗಿದ್ದರೆ ಸಂಸ್ಕೃತ ಭಾಷೆ ಛಂದಸ್ಸುಗಳಲ್ಲಿ ರಚಿತವಾಗಿದ್ದಿರಲು ಸಾಧ್ಯವಿಲ್ಲ. ಕನ್ನಡ ಜಾನಪದ ಸಾಹಿತ್ಯಕ್ಕೆ ಸೇರಿಹೋದ 'ಓವನಿಗೆ' ಎಂಬ ಗೀತಪ್ರಕಾರ ಕನ್ನಡ ಎಂಬುದರಲ್ಲಿ ಸಂದೇಹವಿರದು.[೨] ಸುಮಾರು ಕ್ರಿ.ಶ.೮೦೦ ರಲ್ಲಿ ರಚಿತವಾಗಿರಬಹುದಾದ 'ಶಿವಮಾರಮತ' ಹಾಗೂ 'ಗಜಾಷ್ಟಕ'ಗಳು ಲೌಕಿಶಾಸ್ತ್ರ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದವು ಎಂಬ ಸಂಗತಿ ಗಮನಾರ್ಹ.

**ಸೂಪಶಾಸ್ತ್ರ**: ಸೂಪಶಾಸ್ತ್ರ ಎಂದರೆ ಪಾಕಶಾಸ್ತ್ರ. ಇಬ್ಬರು ಮೂವರು ಈ ವಿಷಯವಾಗಿ ಗ್ರಂಥ ರಚನೆ ಮಾಡಿದ್ದಾರೆ. ಚಾವುಂಡರಾಯನ

ಬಗೆಗೆ ಶ್ರೀಧರನು ಹೇಳಿರುವ ಮನನೀಯ ವಾಕ್ಯಗಳನ್ನು ಈ ಗ್ರಂಥದ ಮೊದಲಿನಲ್ಲೇ ಗಮನಿಸಿದ್ದೇವೆ. (ನೋಡಿ: ಪು.೩–೪)

ಜ್ಯೋತಿಷದ ಪ್ರಯೋಜನವನ್ನು ಕುರಿತು – "ಭವಬದ್ಧ ಶುಭಾಶುಭ ಕರ್ಮವಿಪಾಕದ ಫಲಮಂ ಅರಿಪುಗುಂ ಜ್ಯೋತಿರ್ಜ್ಞಾನಂ; ಅದೆಂತೆನೆ, ಕತ್ತಲೆವನೆಯ ವಸ್ತುವಂ ತೋರ್ಪ ಸೊಡರ ಬೆಳಗಿನ ತೆರದಿಂ", ಶಾಸ್ತ್ರ ವಿಚಾರವನ್ನು ಆಕರ್ಷಕವಾದ ಶೈಲಿಯಲ್ಲಿ ಹೇಳಬಹುದು ಎಂಬುದಕ್ಕೆ 'ಜಾತಕ ತಿಲಕ' ತಿಲಕಪ್ರಾಯವಾದ ಗ್ರಂಥ.

ಸುಮಾರು ೧೩೦೦ರಲ್ಲಿದ್ದ ರಟ್ಟಕವಿಯ 'ರಟ್ಟಮತ' ಎಂಬ ಗ್ರಂಥವೂ ಜ್ಯೋತಿಷ ವಿಷಯಕವಾದುದು. ಈಗ ಸಿಕ್ಕಿರುವಷ್ಟು ಗ್ರಂಥ ಅಸಮಗ್ರ. ವಿವಿಧ ಛಂದೋಬಂಧಗಳಿಂದಲೂ, ಮಳೆಯ ಕುರುಹು, ಮೇಘಲಕ್ಷಣ, ಮಿಂಚಿನ ಲಕ್ಷಣ, ಬಿತ್ತುವ ಶಕುನ, ಮುಂತಾದ ಬೇಸಾಯ ಸಂಬಂಧದ ವಿಷಯಗಳನ್ನು ಒಳಗೊಂಡ ಈ ಗ್ರಂಥ ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿದೆ.

**ಮದನ ತಿಲಕ:** ಚಂದ್ರರಾಜನೆಂಬ ಬ್ರಾಹ್ಮಣ ಕವಿಯಿಂದ (ಸು.೧೦೪೦) ರಚಿತವಾದ ಈ ಗ್ರಂಥ ವಾತ್ಸಾಯನನ ಕಾಮಶಾಸ್ತ್ರವನ್ನು ಅನುಸರಿಸಿ ಬರೆದದ್ದು; ದೊರೆತಷ್ಟು ಗ್ರಂಥ ಅಸಮಗ್ರವಾಗಿದೆ. 'ಅಪುತ್ರಸ್ಯಗತಿರ್ನಾಸ್ತಿ' ಎಂಬ ವಾಕ್ಯವನ್ನು ಉದಾಹರಿಸಿ, ಪುತ್ರೋದಯವು ಕಾಮ ಸುಖ ಫಲವಾದ್ದರಿಂದ, ವಂಶದ ಏಳಿಗೆಯನ್ನು ಬಯಸುವವನುಮಾನಿನಿಗೆ ವಿರಾಗವಾಗದಂತೆ ಅವಳ ಮನಸ್ಸನ್ನು ಒಲಿಸಿಕೊಂಡು ಸುಖಿಸಬೇಕೆಂದು ಕವಿ ಸಲಹೆ ಮಾಡಿದ್ದಾನೆ. ಧರ್ಮಕ್ಕೆ ಅವಿರುದ್ಧವಾಗಿ, ಧರ್ಮಪತ್ನಿಯ ಸಹವಾಸದಲ್ಲಿ ದಾಂಪತ್ಯಸುಖವನ್ನು ವಂಶಾಭಿವೃದ್ಧಿಗಾಗಿ ಅನುಭೋಗಿಸಬೇಕೆಂದು ಹೇಳಿ, ಆ ಬಗೆಗೆ ಅನುಸರಿಸಬೇಕಾದ ವಿಧಿ ನಿಷೇಧಗಳನ್ನು ತಿಳಿಸುವ ಕಾಮಶಾಸ್ತ್ರವನ್ನು ಕಡೆಗಣ್ಣಿನಿಂದ ನೋಡಬೇಕಾಗಿಲ್ಲ. ಈ ಪದ್ಯವನ್ನು ಗಮನಿಸಿ:

ಪರವಧುವಂನಪುಂಸಕಿಯರಂ ಗುರುಭಾರ್ಯೆಯರಂ ಮುನೀಂದ್ರಸೌಂ
ದರಿಯರಂ ಅಂತ್ಯಜಾತಿಯವಳಂ ವ್ರತಮುಳ್ಳಳಂ ಅಂಗಹೀನೆಯಂ
ತಿರಿವವಳಂ ಕುಲಕ್ಷಯೆಯಂ ಆ ಕೊಡಗೂಸುಗಳಂ ವಿದಗ್ಧಂ ಆ–
ದರದೊಳೆ ಕೂಡಲುಂ ಬಯಸಿ ನೋಡಲುಂ ಆಗದು ಕೂರ್ತು ಬಂದೊಡಂ

ಚಂದ್ರರಾಜನು ತನ್ನ ಗ್ರಂಥದಲ್ಲಿ ವಿವಿಧ ಛಂದಸ್ಸುಗಳ ಪ್ರಯೋಗ ಮಾಡಿರುವುದರಿಂದ ಛಂದಶ್ಯಾಸ್ತ್ರ ದೃಷ್ಟಿಯಿಂದಲೂ ಈ ಗ್ರಂಥ ಗಮನಾರ್ಹವಾಗಿದೆ.

ಗಣಿತ ಶಾಸ್ತ್ರ, ರತ್ನಶಾಸ್ತ್ರ ಮುಂತಾದ ಬಗೆಬಗೆಯ ಶಾಸ್ತ್ರವಿಷಯಕ ಗ್ರಂಥಗಳೂ

ಹಿರಿದು ಹಸನಾಗಿ ಬೇಯಿಸಿ, ತೆಗೆದು ತುಪ್ಪವಿಡೆ,
'ಘರಿವಿಳಂಗಾಯ್' ಎಂದು ಪೆಸರ್ವಡೆದು ನಾಲಗೆಯ
ಕೊನೆಗೆ ಪೀಯೂಷವಾಯ್ತು॥

**ಜ್ಯೋತಿಷ:** ಜ್ಯೋತಿಷ ಶಾಸ್ತ್ರದ ವ್ಯಾಪ್ತಿಯಲ್ಲೇ ಪ್ರಶ್ನಶಾಸ್ತ್ರ, ಸಾಮುದ್ರಿಕ, ಶಕುನಶಾಸ್ತ್ರ, ನಾಡೀಶಾಸ್ತ್ರ, ಸ್ವಪ್ನಫಲ, ಮುಂತಾದ ಶಾಸ್ತ್ರಗಳನ್ನು ಸಮಾವೇಶ ಮಾಡಬಹುದು. ವಾಸ್ತವವಾಗಿ, ಇವು ದೃಷ್ಟಫಲಗಳನ್ನು ಕೊಡತಕ್ಕ 'ಉಪಯುಕ್ತ' ಶಾಸ್ತ್ರಗಳಲ್ಲ; 'ಅದರಷ್ಟ' ಫಲಗಳನ್ನು ತಿಳಿಸತಕ್ಕವು. ಆದರೆ, ಜ್ಯೋತಿಷದಲ್ಲಿ, ಕರ್ಮಾನುಷ್ಠಾನ ನಿಷ್ಠರಿಗೆ ಶುಭಾಶುಭ ತಿಥಿ, ವಾರ, ನಕ್ಷತ್ರ, ಮುಹೂರ್ತಾದಿಗಳ ವಿವರಗಳನ್ನು ತಿಳಿಸುವ ಭಾಗವೂ, ಜಾತಕ ರಚನೆ ಪಂಚಾಂಗ ರಚನೆ ಗ್ರಹಣ ವಿಚಾರ ಮುಂತಾದ ಇಂದಿಗೂ ಉಪಯುಕ್ತವಾಗಿರುವ ವಿಷಯಗಳನ್ನು ತಿಳಿಸುವ ವಿಚಾರಗಳೂ ಇರುವುವಾದ್ದರಿಂದ, ಕೆಲವು ಜ್ಯೋತಿಷ ಗ್ರಂಥಗಳು ಧಾರ್ಮಿಕ ವಿಧಿಗಳಲ್ಲಿ ನಂಬಿಕೆಯಿರುವವರಿಗೆ ಅಗತ್ಯವಾಗಿವೆ.

ಜ್ಯೋತಿಷಗ್ರಂಥಗಳಲ್ಲಿ ಶ್ರೀಧರಾಚಾರ್ಯನ (೧೦೪೯) 'ಜಾತಕ ತಿಲಕ'ವೇ ಮೊದಲ ಗ್ರಂಥ. (ಲೋಕೋಪಕಾರದಲ್ಲೂ ಜ್ಯೋತಿಷ ವಿಚಾರವಿದೆ.) ಇವನು ಜೈನ ಮತೀಯ; ಬೆಳುವಲ ನಾಡಿನ ನರಗುಂದ ಪ್ರಾಂತದವನು. 'ವಾಕ್‌ಶ್ರೀವರ' 'ಗದ್ಯಪದ್ಯವಿದ್ಯಾಧರ' ಇತ್ಯಾದಿ ಬಿರುದುಗಳುಳ್ಳವನು ತನ್ನ ಕೃತಿಯನ್ನು 'ಜೋಯಿಸಗಬ್ಬ' ಎಂದು ತಿರಸ್ಕರಿಸ ಬೇಡಿ ಎಂದು ಕೇಳಿಕೊಳ್ಳುತ್ತಾನೆ. "ಮುನ್ನ ಆರು ಜಾತಕಮಂ ಕನ್ನಡದಿಂ ವ್ಯಕ್ತಮಾಗೆ ಪೇಳ್ದ ಅನ್ವಿತರಿಲ್ಲ, ಇನ್ನುಂ ಪೇಳ್ದಪರಿಲ್ಲ, ಉತ್ಪನ್ನಂ ಶ್ರೀಧರನೆ ಪೇಳುಂ" ಎಂದು ಹೆಮ್ಮೆಯಿಂದ ಗ್ರಂಥ ಪ್ರಾಶಸ್ತ್ಯವನ್ನು ಹೇಳಿಕೊಂಡಿದ್ದಾನೆ. ಗ್ರಂಥ ವಿಷಯವನ್ನು ಅವನೇ ಹೀಗೆ ನಿರೂಪಿಸಿದ್ದಾನೆ:

**ಪಿರಿಯಕ್ಕರ:** ತರದಿಂ ಸಂಜ್ಞೆ, ಬಳಾಬಳಾವಧಾನಂ, ಜನ್ಮ, ತಿರ್ಯಗ್ ಜನ್ಮಂ, ಅರಿಷ್ಟಾರಿಷ್ಟ ಹರಣಂ, ಆಯುರ್ದಾಯಂ, ದಶಾಂತರ್ದಶೆ, ಅಷ್ಟಕವರ್ಗಂ, ಕರ್ಮ ಜೀವನಂ, ಧರಣೀ ನಾಥನಾಭಸಂ, ಚಂದ್ರ–ದ್ವಿ–ತ್ರಿ–ಗೇಹಾದಿ ದೀಕ್ಷಾಯೋಗಂ, ರಾಶಿ ಫಳೋತ್ಕರಂ ವಿಲಗ್ನಭಾವ, ತ್ರ್ಯಂಶತಿ ಲಕ್ಷಣ, ದೃಷ್ಟ ಫಳಾನಿಷ್ಟಂ, ಸ್ತ್ರೀಜಾತಕಂ,॥

ಮನುಜರ ನಿರ್ಯಾಣ ಪ್ರಾಪ್ತಿ ನಷ್ಟಜಾತಕ, ಮೆನಿಪ್ಪ ಭೇದದಿಂ ಅಖಿಳಾ।
ವನಿಯೊಳ್ ನೆಗಳ್ದಿಪ್ಪತ್ತನಾಲ್ಕುಮಧಿಕಾರದಿಂದ ಜಾತಕ ತಿಳಕಂ।

ಕಾವ್ಯ, ಕವಿತ್ವ, ಶಾಸ್ತ್ರಕವಿತ್ವ, ಶಾಸ್ತ್ರಕವಿತ್ವ ರಚನೆಗೆ ಬೇಕಾದ ಪ್ರತಿಭೆ–ಈ

ಸಾಲದು ಎನ್ನಿಸಬಹುದು. ಅನೇಕ ಗ್ರಂಥಗಳನ್ನು ಗಮನಿಸಲೂ ಸಾಧ್ಯವಾಗಿಲ್ಲ. ಓದುಗರು ಅನುಬಂಧದ ಗ್ರಂಥಪಟ್ಟಿಕೆಯ ಮೇಲೆ ಕಣ್ಣಾಡಿಸಿ ತೃಪ್ತಿಪಟ್ಟುಕೊಳ್ಳಬೇಕು.*

ಶಾಸ್ತ್ರ ಸಾಹಿತ್ಯ ಕ್ಷೇತ್ರದಲ್ಲಿ ನಡೆದಿರುವ ಸಂಶೋಧನೆಯ ಫಲಿತವನ್ನೆಲ್ಲಾ –ನನ್ನ ಗಮನಕ್ಕೆ ಬಂದ ಮಟ್ಟಿಗೆ – ವಿಷಯ ನಿರೂಪಣೆಯಲ್ಲಿ ಅಳವಡಿಸಿಕೊಂಡಿದ್ದೇನೆ. ಬಲ್ಲವರು ಈ ವಿಶೇಷವನ್ನು ಗುರುತಿಸಬಹುದು.

ಗ್ರಂಥ ಸಮೀಕ್ಷೆಯಲ್ಲಿ, ೨೦ನೆಯ ಶತಮಾನದವರೆಗೆ ರಚಿತವಾಗಿರುವ ಗ್ರಂಥಗಳನ್ನು ಮಾತ್ರ ಗಮನಿಸಲಾಗಿದೆ. ಈ ಶತಮಾನದಲ್ಲಿ ರಚಿತವಾದ, ಗಮನಾರ್ಹವಾದ ಕೆಲವು ಗ್ರಂಥಗಳನ್ನು ಮಾತ್ರ ಅನುಬಂಧದ ಪಟ್ಟಿಯಲ್ಲಿ ಹೆಸರಿಸಿದೆ.

ಈ ಬಗೆಯ ಗ್ರಂಥರಚನೆಗೆ ಆರ್. ನರಸಿಂಹಾಚಾರ್ಯರ ಕವಿಚರಿತೆಯ ಸಂಪುಟಗಳು ಇಂದೂ ಮುಂದೂ ಅಮೂಲ್ಯವಾದ ಆಕರ ಗ್ರಂಥಗಳು. ಇತರ ಅನೇಕ ಗ್ರಂಥಗಳಿಂದ ಲೇಖನ ಕಾರ್ಯದಲ್ಲಿ ಉಪಕೃತನಾಗಿದ್ದೇನೆ. ಈ ಎಲ್ಲ ಗ್ರಂಥಗಳ ನಾಮ ನಿರ್ದೇಶವನ್ನು ಅಡಿಟಿಪ್ಪಣಿಗಳಲ್ಲಿ ಕಾಣಬಹುದು.

೧೯ನೆಯ ಶತಮಾನದಿಂದ ಈಚೆಗೆ ಆಧುನಿಕ ವಿಜ್ಞಾನ ಕ್ಷೇತ್ರಕ್ಕೆ ಸಂಬಂಧಪಟ್ಟಂತೆ ಗಮನಾರ್ಹವಾಗಿ ಗ್ರಂಥರಚನೆ ಆಗುತ್ತಿದೆ. ಅವುಗಳನ್ನು ಸಮೀಕ್ಷೆ ಮಾಡಲು ಪ್ರತ್ಯೇಕ ಗ್ರಂಥವೇ ಆಗಬೇಕು.

ಈ ಗ್ರಂಥವನ್ನು ಓದುವ ವಾಚಕರಲ್ಲಿ ಶಾಸ್ತ್ರಸಾಹಿತ್ಯವನ್ನು ಓದುವ ಅಭಿರುಚಿ ಹುಟ್ಟುವಂತಾದರೆ ಸಾಕು. ಈ ಗ್ರಂಥವನ್ನು ಬರೆದದ್ದು ಸಾರ್ಥಕವೆನಿಸುವುದು.

**ಶಾಸ್ತ್ರ ಜ್ಞಾನ**

ಶಾಸ್ತ್ರಂ ಬಂದೊಡೆ ಶಾಂತಿ ಸ್ವೈರಣೆ ನಿಗರ್ವ ನೀತಿ ಮೆಲ್ಪಾತು ಮು–
ಕ್ತಿಸ್ತ್ರೀಚಿಂತೆ ನಿಜಾತ್ಮ ಚಿಂತೆ ನಿಲವೇಟ್ಕಿಂತಲ್ಲದಡೆ ಆ ಶಾಸ್ತ್ರದಿಂ
ದುಸ್ತ್ರೀಚಿಂತನೆ ದುರ್ಮುಖಂ ಕಲಹಂ ಉದ್‌ಗರ್ವ ಮನಂಗೊಂಡೊಡಾ
ಶಾಸ್ತ್ರಂಶಸ್ತ್ರಮೆ ಶಾಸ್ತ್ರಿ ಶಸ್ತ್ರಿಕನಲಾ ರತ್ನಾಕರಾಧೀಶ್ವರಾ!

–ಶೃಂಗಾರಕವಿ ಹಂಸರಾಜ: ರತ್ನಾಕರಾಧೀಶ್ವರ ಶತಕ

---

ನಿರ್ದೇಶಕ ಡಾ.ಪ್ರಭುಶಂಕರ್, ಉಪನಿರ್ದೇಶಕ ಶ್ರೀ ಆರ್.ಎಲ್.ಅನಂತರಾಮಯ್ಯ, ಇವರು ಅಚ್ಚಾಗುತ್ತಿರುವ 'ಗ್ರಂಥಸೂಚಿ'ಯ ಮುದ್ರಿತ ಫಾರಮ್ಮುಗಳನ್ನು ಕಳಿಸಿಕೊಟ್ಟು ಉಪಕರಿಸಿದ್ದಾರೆ. ಇವರಿಗೆಲ್ಲರಿಗೂನನ್ನ ಕೃತಜ್ಞತೆಯ ವಂದನೆಗಳು.

ಕನ್ನಡದಲ್ಲಿ ರಚಿತವಾಗಿವೆ. ಅನೇಕ ಸಂಗೀತ ಶಾಸ್ತ್ರಜ್ಞರು ಕನ್ನಡಿಗರಾದರೂ ಸಂಗೀತ ಶಾಸ್ತ್ರ ಗ್ರಂಥಗಳು ಸಾಧಾರಣವಾಗಿ ಸಂಸ್ಕೃತದಲ್ಲಿ ರಚಿತವಾಗಿವೆ. ಕನ್ನಡದಲ್ಲಿ ರಚಿತವಾಗಿರುವವು ವಿರಳ. (ಅನುಬಂಧದಲ್ಲಿ ವಿವರಗಳನ್ನು ಕೊಟ್ಟಿದೆ). ದಾಕ್ಷಿಣಾದಿ ಸಂಗೀತ 'ಕರ್ಣಾಟಕ ಸಂಗೀತ' ಎಂದು ಪರಿಗಣಿತವಾಗಿರುವುದು, ಪುರಂದರದಾಸರು 'ಕರ್ಣಾಟಕ ಸಂಗೀತ ಪಿತಾಮಹ' ಎಂದು ಪ್ರಸಿದ್ಧರಾಗಿರುವುದು – ಇಷ್ಟರಿಂದ ಮಾತ್ರ ನಾವು ತೃಪ್ತರಾಗಬೇಕಾಗಿದೆ. ಇದ್ದುದರಲ್ಲಿ ತೃಪ್ತಿಪಡುವುದು ವಿವೇಕಿಗಳ ಲಕ್ಷಣ. ಹಿಂದೆ ಆದ ಕೊರತೆಯನ್ನು ಆಧುನಿಕ ಸಂಗೀತ ಶಾಸ್ತ್ರಜ್ಞರು ಸಂಸ್ಕೃತ ಶಾಸ್ತ್ರಗ್ರಂಥಗಳ ಕನ್ನಡ ಅನುವಾದಗಳ ಮೂಲಕವೂ ಸ್ವತಂತ್ರ ರಚನೆಗಳ ಮೂಲಕವೂ ತಕ್ಕಮಟ್ಟಿಗೆ ತುಂಬಿಕೊಡುತ್ತಿರುವುದು ಆಶಾದಾಯಕವಾಗಿದೆ.

ಸಿಂಹಭೂಪಾಲನು 'ಲಾಸ್ಯರಂಜನೀ' ಎಂಬ ನಾಟ್ಯ ವಿಷಯಕವಾದ ಗ್ರಂಥವನ್ನು ಕನ್ನಡದಲ್ಲಿ ಪದ್ಯರೂಪದಲ್ಲಿ ಬರೆದಿರುವುದಾಗಿ ತಿಳಿದುಬರುತ್ತದೆ. ಯಕ್ಷಗಾನದ ಮೇಲೆ ಶಾಸ್ತ್ರೀಯ ಗ್ರಂಥಗಳು ರಚನೆಯಾಗಿವೆ.

**ಸಮಾಪ್ತಿ ವಾಕ್ಯ**

ಶಾಸ್ತ್ರಸಾಹಿತ್ಯವನ್ನು ಕುರಿತು ಒಂದೇ ಕಡೆ ಗ್ರಂಥರೂಪದಲ್ಲಿ ಸಮೀಕ್ಷೆ ನಡೆಸಿರುವುದು ನನ್ನ ಗಮನಕ್ಕೆ ಬಂದಿಲ್ಲ. ಈ ಪ್ರಕಾರದಲ್ಲಿ ಇದೇ ಮೊದಲನೆಯ ಗ್ರಂಥ ಎಂದು ನಾನು ತಿಳಿದಿದ್ದೇನೆ. ಆದ್ದರಿಂದ, ಗ್ರಂಥರಚನೆಯಲ್ಲಿ ಕುಂದುಕೊರತೆಗಳು, ಏರುಪೇರು ಕಂಡುಬಂದರೆ ಆಶ್ಚರ್ಯವಿಲ್ಲ. ಸಾಮಾನ್ಯ ಓದುಗರನ್ನು ದೃಷ್ಟಿಯಲ್ಲಿರಿಸಿಕೊಂಡು ಕೂಡಿದ ಮಟ್ಟಿಗೂ ಸರಳವಾಗಿ ವಿಷಯ ನಿರೂಪಣೆ ಮಾಡಲು ಪ್ರಯತ್ನಿಸಿದೆ. ಉದ್ಧರಿಸಿದ ಪದ್ಯಗಳಲ್ಲಿ ಓದುಗರ ಸೌಕರ್ಯಕ್ಕಾಗಿ ಪದಗಳ ಸಂಧಿಯನ್ನು ಬಿಡಿಸಿ ತೋರಿಸಿದೆ; ಇದರಿಂದ, ಪದ್ಯದ ಛಂದಸ್ಸಿಗೆ ಅನಿವಾರ್ಯವಾಗಿ ಊನ ತಟ್ಟುವಂತಾಗಿದೆ. ಪದ್ಯದಲ್ಲಿ ಱಳ, ಶಕಟರೇಫ, ಈ ಹಳಗನ್ನಡ ಅಕ್ಷರಗಳ ಪ್ರಯೋಗ ಇದ್ದಕಡೆ ಅವನ್ನು ಬಿಟ್ಟು ಬಿಟ್ಟಿದೆ. ಸಾಧ್ಯವಾದ ಮಟ್ಟಿಗೂ ಕಠಿನವಾದ ಪದಗಳಿಗೂ ಅರ್ಥವನ್ನು ಕೊಟ್ಟಿದೆ.

ಪುಟಸಂಖ್ಯೆಯ ವಿಷಯದಲ್ಲಿ ಈ ಸಾಹಿತ್ಯ ಚರಿತ್ರೆಯ ಸಂಪಾದಕರಾದ ಡಾ.ಜಿ.ಎಸ್. ಶಿವರುದ್ರಪ್ಪನವರು ನನಗೆ ಧಾರಾಳವಾದ ಗರಿಷ್ಠ ಮಿತಿಯನ್ನು ಕಲ್ಪಿಸಿಕೊಟ್ಟಿದ್ದರೂ, ಕಡೆಯ ಎರಡು ಪ್ರಕರಣಗಳಲ್ಲಿ ಗ್ರಂಥ ಪರಿಚಯ ವಿವರ

---

* ಈ ಪಟ್ಟಿಯನ್ನು ಕೂಡಿದ ಮಟ್ಟಿಗೂ ಸಮಗ್ರವಾಗಿ ತಯಾರಿಸುವಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಸಂಶೋಧನ ಸಹಾಯಕರಾದ ಶ್ರೀ ಎಸ್.ಶಿವಣ್ಣ, ಶ್ರೀ ಶೇಷಶಾಸ್ತ್ರಿ, ಮತ್ತಿತರರು, ಸಹಾಯ ಮಾಡಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ

# ಪರಿಶಿಷ್ಟ

## ಅ. ಪ್ರಸಿದ್ಧ ಸಂಸ್ಕೃತ ಅಲಂಕಾರಶಾಸ್ತ್ರ ಗ್ರಂಥಗಳು ಮತ್ತು ಅಲಂಕಾರಿಕರು

| | | |
|---|---|---|
| ಅಪ್ಪಯ್ಯ ದೀಕ್ಷಿತ | : | ೧.ಕುವಲಯಾನಂದ, ೨.ಚಿತ್ರ ಮಿಮಾಂಸ |
| ಅಭಿನವ ಗುಪ್ತ | : | ೧.ಅಭಿನವಭಾರತೀ (ಭರತನ ನಾಟ್ಯ ಶಾಸ್ತ್ರದ ಮೇಲಿನ ವ್ಯಾಖ್ಯಾನ, ೨.ಕಾವ್ಯಕೌತುಕ ವಿವರಣ (ದೊರೆತಿಲ್ಲ); ೩.ಧ್ವನ್ಯಾಲೋಕ ಲೋಚನ (ಆನಂದವರ್ಧನ ಧ್ವನ್ಯಾಲೋಕದ ಮೇಲಿನ ವ್ಯಾಖ್ಯಾನ). |
| ಅಮೃತಾನಂದ(ಯೋಗಿ) | : | ಅಲಂಕಾರ ಸಂಗ್ರಹ (=ಅಮೃತಾ ನಂದೀಯ) |
| ಆನಂದವರ್ಧನ | : | ಧ್ವನ್ಯಾಲೋಕ |
| ಉದ್ಭಟ | : | ೧.ಕಾವ್ಯಾಲಂಕಾರ ಸಾರಸಂಗ್ರಹ (ಇದಕ್ಕೆ ಪ್ರತಿ ಹಾರೇಂದು ರಾಜನ ವ್ಯಾಖ್ಯಾನವಿದೆ). ೨.ಭಾಮಹ ವಿವರಣ (ದೊರೆತಿಲ್ಲ) |
| ಕುಂತಕ | : | ವಕ್ರೋಕ್ತಿ ಜೀವಿತ |
| ಕ್ಷೇಮೇಂದ್ರ | : | ೧.ಔಚಿತ್ಯ ವಿಚಾರಚರ್ಚೆ; ೨.ಕವಿಕಂಠಾಭರಣ |
| ಜಗನ್ನಾಥ | : | ೧,ಚಿತ್ರಮಿಮಾಂಸಾಖಂಡನ; ೨.ರಸಗಂಗಾಧರ |
| ಜಯದೇವ | : | ಚಂದ್ರಾಲೋಕ |
| ದಂಡೀ | : | ಕಾವ್ಯಾದರ್ಶ |
| ಧನಂಜಯ | : | ದಶರೂಪಕ |
| ಭರತ | : | ನಾಟ್ಯಶಾಸ್ತ್ರ |
| ಭಾನುದತ್ತ | : | ೧.ರಸತರಂಗಿಣೀ; ೨.ರಸಮಂಜರೀ |
| ಭಾಮಹ | : | ಕಾವ್ಯಾಲಂಕಾರ |
| ಭೋಜರಾಜ | : | ೧.ಶೃಂಗಾರ ಪ್ರಕಾಶ; ೨.ರಸಮಂಜರೀ |
| ಮಮ್ಮಟ | : | ಕಾವ್ಯ ಪ್ರಕಾಶ |
| ಮಹಿಮಭಟ್ಟ | : | ವ್ಯಕ್ತಿವಿವೇಕ |
| ರಾಜಶೇಖರ | : | ಕಾವ್ಯಾ ಮೀಮಾಂಸ |
| ರುದ್ರಟ | : | ಕಾವ್ಯಾಲಂಕಾರ |

## ಅಡಿ ಟಿಪ್ಪಣಿಗಳು

೧. ಆರ್.ನರಸಿಂಹಾಚಾರ್: ಕವಿಚರಿತೆ, ಸಂ.೧ ಪು.೩೦೫

೨. ಎಂ.ವಿ.ಸೀತಾರಾಮಯ್ಯ: 'ಓವನಿಗೆ' ('ಕರ್ಣಾಟಕ ಭಾರತಿ', ಧಾರವಾಡ, ಸಂಪುಟ ೬–೪, ೧೯೭೪)

# ಆ. ಶಾಸ್ತ್ರಗ್ರಂಥ ಸೂಚಿ

## [ಈ ಚಿಹ್ನೆ ಹಾಕಿರುವ ಹೆಸರಿನ ಗ್ರಂಥ ಪ್ರಕಟವಾಗಿದೆ.]

### ೧. ಅಲಂಕಾರ ಶಾಸ್ತ್ರ

| ಕ್ರಮ ಸಂಖ್ಯೆ | ಗ್ರಂಥದ ಹೆಸರು | ಕವಿಯ ಹೆಸರು | ಕಾಲ | ವಿಷಯ ಮುಂತಾದ ವಿವರಗಳು |
|---|---|---|---|---|
| ೧ | *ಅಪ್ರತಿಮ ವೀರಚರಿತೆ | ತಿರುಮಲಾರ್ಯ | ಸು.೧೬೪೫ | |
| ೨ | *ಅಪ್ರಸ್ತುತಾ ಪ್ರಶಂಸಾ ಶತಕ | ಶಾಲ್ಯದ ಕೃಷ್ಣರಾಜ | ೧೭೪೮-೭೫ | |
| ೩ | *ಉದಯಾದಿತ್ಯಾಲಂಕಾರ | ಉದಯಾದಿತ್ಯ(?) | ಸು.೧೧೫೦ | |
| ೪ | *ಕವಿರಾಜಮಾರ್ಗ | ಶ್ರೀವಿಜಯ | ಸು. ೮೬೦ | ಪ್ರಥಮ ಅಲಂಕಾರ ಗ್ರಂಥ |
| ೫ | *ಕರ್ಣಾಟಕ ಛಂದೋಲಂಕಾರ ಸಾಹಿತ್ಯ ಲಕ್ಷಣ | ಚಾವಲಿರಾಮಸ್ವಾಮಿ ಶಾಸ್ತ್ರಿ | ೧೮೮೫ | |
| ೬ | *ಕರ್ಣಾಟಕ ಚಂದ್ರಾಲೋಕ | ಸಿದ್ಧಾಂತಿ ಶಿವಶಂಕರ ಶಾಸ್ತ್ರಿ | ೧೮೯೭ | |
| ೭ | * ** | ಅಕ್ಕಲೆ ನರಸಿಂಹ ಶಾಸ್ತ್ರಿ | ೧೯೦೫ | |
| ೮ | *ಕಾವ್ಯಾವಲೋಕನ | ೩ನೆಯ ನಾಗವರ್ಮ | ೧೦೫೦ | |
| ೯ | *ಕುವಲಯಾನಂದ | ಜಾಯೇಂದ್ರ | ಸು.೧೭೫೦ | |
| ೧೦ | *ನರಪತಿ ವಿಜಯ | ಅಳಿಯ ಲಿಂಗರಾಜ | ೧೮೬೭ | |
| ೧೧. | *ನವರಸಾಲಂಕಾರ | ತಿಮ್ಮ | ಸು.೧೬೦೦ | |
| ೧೨ | *ಪ್ರಭುಸೇನೀಯ(?) (ಅಥವಾ ಪ್ರಭುಸೇನನ ಅಲಂಕಾರ) | ಪ್ರಭುಸೇನ(?) | ಸು.೮೦೦ | ಜಯಕೀರ್ತಿಯ ಛಂದೋನುಶಾಸನ |
| ೧೩ | *ಮಾಧವಾಲಂಕಾರ | ಮಾಧವ | ಸು.೧೫೦೦ | |
| ೧೪ | *ರಸಕಲಿಕೆ | ರುದ್ರಭಟ್ಟ(?) | ಸು.೧೨೧೮ | |
| ೧೫ | *ರಸಮಂಜರಿ | ಜಾಯೇಂದ್ರ | ಸು.೧೭೫೦ | |
| ೧೬ | *ರಸರತ್ನಾಕರ | ಸಾಳ್ವ | ಸು.೧೫೫೦ | |
| ೧೭ | *ಶೃಂಗಾರ ರತ್ನಾಕರ | ಕವಿಕಾಮ | ಸು.೧೧೫೦-೧೨೦೦ | |
| ೧೮ | *ಶಾರದಾ ವಿಲಾಸ | ಸಾಳ್ವ | ಸು.೧೫೫೦ | |
| ೧೯ | *ಶ್ರೀಲಕ್ಷ್ಮಿ ನೃಸಿಂಹ ಸ್ತೋತ್ರ | ಎಸ್.ಎನ್.ನರಹರಯ್ಯ | ೧೯೧೯ | |

| | | |
|---|---|---|
| ರುದ್ರಭಟ್ಟ | : | ಶೃಂಗಾರ ತಿಲಕ |
| ರುದ್ರಭಟ್ಟ | : | ರಸಕಲಿಕಾ |
| ರುಯ್ಯಕ | : | ೧.ಅಲಂಕಾರ ಸರ್ವಸ್ವ; ೨.ನಾಟಕ ಮೀಮಾಂಸಾ (ದೊರೆತಿಲ್ಲ); ೩.ಸಾಹಿತ್ಯ ಮೀಮಾಂಸಾ |
| ರೂಪಗೋಸ್ವಾಮಿ | : | ೧.ಉಜ್ವಲ ನೀಲಮಣಿ; ೨.ಭಕ್ತಿ ರಸಾಮೃತ ಸಿಂಧು |
| ಲೊಲ್ಲಟ | : | ಭರತನಾಟ್ಯ ಶಾಸ್ತ್ರ ವ್ಯಾಖ್ಯಾನ (ದೊರೆತಿಲ್ಲ) |
| ವಾಗ್ಭಟ ೧ | : | ವಾಗಭಟಾಲಂಕಾರ |
| ೨ | : | ಕಾವ್ಯಾನುಶಾಸನ |
| ವಾಮನ | : | ಕಾವ್ಯಲಂಕಾರ ಸೂತ್ರ ವೃತ್ತಿ |
| ವಿದ್ಯಾನಾಥ | : | ಪ್ರತಾಪ ರುದ್ರ ಯಶೋಭೂಷಣ (=ಪ್ರತಾಪ ರುದ್ರೀಯ) |
| ವಿಶ್ವನಾಥ | : | ಸಾಹಿತ್ಯ ದರ್ಪಣ |
| ಶಂಕುಕ | : | ಭರತನಾಟ್ಯ ಶಾಸ್ತ್ರ ವ್ಯಾಖ್ಯಾನ (ದೊರೆತಿಲ್ಲ) |
| ಶಾರದಾತನಯ | : | ಭಾವಪ್ರಕಾಶ |
| ಶಾರ್ಙ್ಗದೇವ | : | ಸಂಗೀತರತ್ನಾಕರ |
| ಸಂತ ಅಕ್ಬರ್‌ಷಹ | : | ಶೃಂಗಾರಮಂಜರೀ |
| ಸಾಗರನಂದೀ | : | ನಾಟಕಲಕ್ಷಣರತ್ನಕೋಶ |
| ಸಿಂಗಭೂಪಾಲ | : | ರಸಾರ್ಣವಸುಧಾಕರ (=ಸಿಂಗಭೂಪಾಲೀಯ) |
| ಹೇಮಚಂದ್ರ | : | ಕಾವ್ಯಾನುಶಾಸನ |

## ೨. ಛಂದಸ್ಸು

| ಕ್ರಮ ಸಂಖ್ಯೆ | ಗ್ರಂಥದ ಹೆಸರು | ಕವಿಯ ಹೆಸರು | ಕಾಲ | ವಿಷಯ ಮುಂತಾದ ವಿವರಗಳು |
|---|---|---|---|---|
| ೧ | ಕವಿಜಿಹ್ವಾಬಂಧನ | ಈಶ್ವರ ಕವಿ | ಸು.೧೫೦೦ | |
| ೨ | ಗುಣಗಾಂಕಿಯ(?) | ಗುಣಗಾಂಕ | ೯ನೆಯ ಶ. | |
| ೩ | ಛಂದೋವಿಚಿತಿ (ಅಥವಾ) ಛಂದೋಮತ(?) | ೨ನೆಯ ನಾಗವರ್ಮ(?) | ನೋಡಿ ಕರ್ನಾಟಕ ಕವಿಚರಿತೆ ಅನುಬಂಧ II, ಪು.೪೩ | |
| ೪ | *ಛಂದೋಂಬುಧಿ | ನಾಗವರ್ಮ–೧(?) | (?)೯೯೦ | |
| ೫ | *ಛಂದೋನುಶಾಸನ | ಜಯಕೀರ್ತಿ | ೧೧ನೆಯ ಶ. | |
| ೬ | *ಛಂದಸ್ಸಾರ | ಗುಣಚಂದ್ರ | ೧೬೫೦ | |
| ೭ | *ನಂದಿ ಛಂದಸ್ಸು (ನಂದಿಛಂದೋರ್ಣವ) | ವೀರಭದ್ರ | ೧೮೪೬ | |
| ೮ | | ಪೂರ್ವದ ನಾಗವರ್ಮ | | |
| ೯ | *ಮಾನಸೋಲ್ಲಾಸ (ಅಥವಾ) ಅಭಿಲಷಿತಾರ್ಥ ಚಿಂತಾಮಣಿ | ಸೋಮೇಶ್ವರ(III) | ೧೧೨೯ | |
| ೧೦ | *ವೃತ್ತರತ್ನಾಕರದ ಟೀಕೆ | | ನೋಡಿ: ಕರ್ನಾಟಕ ಕವಿಚರಿತೆ, ಸಂ III. ಪು.೩೨೫ | |
| ೧೧ | *ಷಟ್ಪ್ರತ್ಯಯ | ಶಾಲ್ಯದ ಕೃಷ್ಣರಾಜ | ೧೭೭೫ | ನೋಡಿ ಪು.೧೨೪ |

**ಈಚಿನ ಕೆಲವು ಗ್ರಂಥಗಳು**

| | | | | |
|---|---|---|---|---|
| ೧ | *ಒಂದನೆಯ ನಾಗವರ್ಮ | ಸಂ.ವಿ.ಸೀತಾರಾಮಯ್ಯ | ೧೯೭೩ | |
| ೨ | *ಕನ್ನಡ ಛಂದಸ್ಸು (ಲ್ಯಾಟಿನ್ ಭಾಷೆಯಲ್ಲಿ) | ಚಾತೆಲೋನ | ೧೮೬೯ | ನೋಡಿ: ಎಲ್. ಬಸವರಾಜ: ಕನ್ನಡ ಛಂದಸ್ಸಂಪುಟ ಅರಿಕೆ, ಪು. iii |

## ಈಚಿನ ಕೆಲವು ಗ್ರಂಥಗಳು

| | | | |
|---|---|---|---|
| ೧ | *ಅಲಂಕಾರ ಶಾಸ್ತ್ರ | ಕೌಲಗಿ ಶೇಷಾಚಾರ್ಯ | ಪಿ.ವಿ.ಕಾಣೆ ಅವರ ಗ್ರಂಥದ ಅನುವಾದ |
| ೨ | *ಅಲಂಕಾರ ಶಾಸ್ತ್ರ | ಬಿ.ಕೆ.ಶಿವರಾಮಯ್ಯ | |
| ೩ | *ಆನಂದವರ್ಧನನ ಕಾವ್ಯ ಮಿಮಾಂಸೆ | ಕೆ.ಕೃಷ್ಣ ಮೂರ್ತಿ | |
| ೪ | *ಕನ್ನಡ ಕೈಪಿಡಿ ಅಲಂಕಾರ ಶಾಸ್ತ್ರ ಭಾಗ | ಕಾನಕಾನಹಳ್ಳಿ ವರದಾಚಾರ್ಯರು ಮತ್ತು ಎ.ಆರ್. ಕೃಷ್ಣಶಾಸ್ತ್ರಿಗಳು | |
| ೫ | *ಜೀವನಸೌಂದರ್ಯ ಮತ್ತು ಸಾಹಿತ್ಯ | ಡಿ.ವಿ.ಗುಂಡಪ್ಪ | |
| ೬ | *ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು | ರಂ.ಶ್ರೀ. ಮುಗಳಿ | |
| ೭ | *ಭಾರತೀಯ ಕಾವ್ಯ ಮೀಮಾಂಸೆ | ತೀ.ನಂ.ಶ್ರೀಕಂಠಯ್ಯ | |
| ೮ | *ಭಾರತೀಯ ಕಾವ್ಯ ಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ | ಎಂ.ವಿ.ಸೀತಾರಾಮಯ್ಯ | |
| ೯ | *ಸಾಹಿತ್ಯ | ಮಾಸ್ತಿ ವೆಂಕಟೇಶ ಅಯ್ಯಂಗಾರ್ | |
| ೧೦ | *ಸಾಹಿತ್ಯ | ರವೀಂದ್ರನಾಥ್ ಠಾಕೂರ್ | |
| ೧೧ | *ಸಾಹಿತ್ಯ ಶಾಸ್ತ್ರ | ಕರ್ಪೂರ ಶ್ರೀನಿವಾಸರಾಯರು | |
| ೧೨ | *ಸಂಸ್ಕೃತ ಅಲಂಕಾರ ಶಾಸ್ತ್ರ ಗ್ರಂಥಗಳ ಕನ್ನಡ ಅನುವಾದಗಳು | ಕೆ.ಕೃಷ್ಣಮೂರ್ತಿ | |

## ೩. ವ್ಯಾಕರಣ

| ಕ್ರಮ ಸಂಖ್ಯೆ | ಗ್ರಂಥದ ಹೆಸರು | ಕವಿಯ ಹೆಸರು | ಕಾಲ | ವಿಷಯ ಮುಂತಾದ ವಿವರಗಳು |
|---|---|---|---|---|
| ೧ | *ಆಲೋಕ | ಎಚ್.ಎಸ್.ಬಿಳಿಗಿರಿ | ? | |
| ೨ | *ಕವಿರಾಜಮಾರ್ಗ: ಕೆಲವು ವ್ಯಾಕಾರಣಾಂಶಗಳು | ಶ್ರೀವಿಜಯ | ಸು.೮೬೦ | |
| ೩ | *ಕರ್ಣಾಟಕ ವ್ಯಾಕರಣೋಪ ನ್ಯಾಸ ಮಂಜರಿ | ಆರ್. ರಘುನಾಥ ರಾವ್ (ಮ.ಸು.೧೯೨೪) | ೧೮೯೪ | |
| ೪ | *ಕನ್ನಡ ವ್ಯಾಕರಣ ಸಾರವು | ಸಿ.ಕ್ಯಾಂಬೆಲ್ | ೧೮೪೯ | |
| ೫ | *ಕನ್ನಡ ಬಾಲವ್ಯಾಕರಣ | ಜೆ.ಕಾಯಿಜ್ | ೧೮೬೮ | |
| ೬ | *ಕನ್ನಡ ಕೈಪಿಡಿ | ಧೋಂಡೋ ನರಸಿಂಹ ಮುಳಬಾಗಿಲ(೧೮೪೮ | –೧೮೯೮) | |
| ೭ | *ಕನ್ನಡ ಮಾಧ್ಯಮ ವ್ಯಾಕರಣ | ತೀ.ನಂ.ಶ್ರೀಕಂಠಯ್ಯ | | |
| ೮ | ಕರ್ಣಾಟಕ ವಾಗ್ವಿಧಾಯಿನಿ | ಮ.ರಾಮಸ್ವಾಮಿ ಶಾಸ್ತ್ರಿ | ೧೮೯೦ | |
| ೯ | ಕನ್ನಡ ವಚನ ಕೌಮುದಿ | ಸಂಜೀವ ರಾಮ ಕೃಷ್ಣಯ್ಯ ೧೮೮೫ | | |
| ೧೦ | ಕನ್ನಡ ಕೈಪಿಡಿ ಎಂಬ ಕನ್ನಡ ವ್ಯಾಕರಣ | (ಸಂ) ಸೇಡಿಯಾಪು ಕೃಷ್ಣಭಟ್ಟ | ೧೮೯೧ | |
| ೧೧ | ಕನ್ನಡ ವ್ಯಾಕರಣ ಸಂಗ್ರಹವು | Bangalore Scool Book Society | ೧೮೪೧ | |
| ೧೨ | ಧಾತು ಮಂಜರಿ | ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯ | ೧೮೮೨ | ನೋಡಿ : ಗ್ರಂಥಕರ್ತರ ಚರಿತ್ರಕೋಶ |
| ೧೩ | *ನುಡಿಗಟ್ಟು ಎಂಬ ಹೊಸ– ಗನ್ನಡ ಸಂಕ್ಷಿಪ್ತ ವ್ಯಾಕರಣವು | ಧೋಂಡೋ ನರಸಿಂಹ ಮುಳಬಾಗಿಲ | ೧೮೯೦ | |
| ೧೪ | ಪದ್ಯ ಕಾವ್ಯ ವ್ಯಾಕರಣ (ಕಂದಪದ್ಯ) | ಮುನಿಷಿ | | ೧೮೬೭ ಶ್ರೀನಿವಾಸಯ್ಯ |

| | | | |
|---|---|---|---|
| ೩ | *ಕರ್ಣಾಟಕ ಛಂದೋಲಂಕಾರ ಸಾಹಿತ್ಯ ಲಕ್ಷಣ | ಚಾವಲಿರಾಮಸ್ವಾಮಿ ಶಾಸ್ತ್ರಿ | ೧೮೮೫ |
| ೪ | *ಕನ್ನಡ ಭಾಷೆಯ ಛಂದಸ್ಸು (Prosody of the Kannada Language) | ನರಸಿಂಹ ಮಾಧವ ಮಹಿಷಿ | ೧೮೯೩ |
| ೫ | *ಕರ್ಣಾಟಕ ಛಂದೋಮಂಜರಿ? | | |
| ೬ | *ಕನ್ನಡ ಕೈಪಿಡಿ: | | |
| | i)ಕರ್ನಾಟಕ ಛಂದಸ್ಸು | ಟಿ.ಶ್ರೀನಿವಾಸ ರಾಘುವಾಚಾರ್ಯ | ೧೯೨೭ |
| | ii)ಕನ್ನಡ ಛಂದಸ್ಸಿನ ಚರಿತ್ರೆ | ಬಿ.ಎಂ.ಶ್ರೀಕಂಠಯ್ಯ | |
| ೭ | *ಕನ್ನಡ ನುಡಿಗನ್ನಡಿ ಮತ್ತು ಛಂದೋಮಂಜರಿ | ಎಂ.ಪಿ.ಪೂಜಾರ | ೧೯೨೮ |
| ೮ | *ಕನ್ನಡ ಛಂದಸ್ಸು | ಟಿ.ವಿ.ವೆಂಕಟಾಚಲಶಾಸ್ತ್ರಿ | |
| ೯ | *ಕನ್ನಡ ಕವಿತಾ ಪದ್ದತಿಯು | ತೂರಮರಿ ಗಂಗಾಧರ ಮಡಿವಾಳೇಶ್ವರ | ೧೮೮೫ |
| ೧೦ | *ಛಂದಸ್ಸಾರ | ಧೋಂಡೋ ನರಸಿಂಹ ಮುಳಬಾಗಿಲ | ೧೮೯೦ |
| ೧೧ | *ಛಂದೋಮಾಲಿಕೆ | ಶ್ರೀನಿವಾಸ ರಾಘವಾಚಾರ್ಯ | ೧೮೯೫ |
| ೧೨ | *ಛಂದೋದರ್ಪಣ | ಕವೀಶ್ವರ ನರಸಪ್ಪ | ೧೯೨೯ |
| ೧೩ | *ಛಂದೋವಿಕಾಸ | ಡಿ.ಎಸ್.ಕರ್ಕಿ | ೧೯೫೬ |
| ೧೪ | *ಛಂದಸ್ಸಾರ | ಗರಣಿವೈ, ಕೃಷ್ಣಾಚಾರ್ಯ, ತಿಮ್ಮಣ್ಣಾಚಾರ್ಯ | |
| ೧೫ | ಶ್ರೀನರಸಿಂಹರಾಜ ಕರ್ನಾಟಕ ಛಂದೋರಾಜಂ | ಜೆ.ರಘುಪತ್ಯಾಚಾರ್ಯ | ೧೯೨೬ |
| ೧೬ | ಷಟ್ಪದಿ ವಂಶ ವಿಕಾಸ | ಬಸವಪ್ಪ ಚೆನ್ನಪ್ಪ ಪಟ್ಟೇದ | ೧೯೫೨ |

| | | | |
|---|---|---|---|
| ೩೨ *ಸಂಸ್ಕೃತ–ಕನ್ನಡ ಶಬ್ದ ವ್ಯುತ್ಪತ್ತಿ | ಚಿಂತಾಮಣಿ ಫೇಟಕರ ಪಾಂಡುರಂಗ ವೆಂಕಟೇಶ | ೧೮೮೦ | |
| ೩೩ ಹಳಗನ್ನಡ ನುಡಿಗನ್ನಡಿ | ಶ್ರೀರಂಗಪಟ್ಟಣದ ಕೃಷ್ಣಾಮಾಚಾರ್ಯ | ೧೮೮೨ | ನೋಡಿ: ಗ್ರಂಥಕರ್ತರ ಚರಿತ್ರಕೋಶ |
| ೩೪ *ಹಳಗನ್ನಡ ವ್ಯಾಕರಣ ಸೂತ್ರಗಳು | ರೆವರೆಂಡ್ ಜಾರ್ಜ್ ಫರ್ಡಿನೆಂಡ್ ಕಿಟೆಲ್ | ೧೮೬೬ | |
| ೩೫ *ಹಳಗನ್ನಡ ವ್ಯಾಕರಣ (ಕನ್ನಡ ಕೈಪಿಡಿಯ ಮೊದಲ ಭಾಗ) | ಟಿ.ಶ್ರೀನಿವಾಸ ರಾಘವಾ ಚಾರ್ಯ, ಬಿ.ಕೃಷ್ಣಪ್ಪ | ೧೯೨೭ | |
| ೩೬ *ಹೊಸಗನ್ನಡ ನುಡಿಗನ್ನಡಿ | ಶ್ರೀರಂಗ ಪಟ್ಟಣದ ಕೃಷ್ಣಾಮಾಚಾರ್ಯ | ೧೮೮೨ | ನೋಡಿ: ಗ್ರಂಥಕರ್ತರ ಚರಿತ್ರಕೋಶ |
| ೩೭ A Grammar of the Karnataka Language | (Willum barey) | ೧೮೧೭ | ಕಲ್ಕತ್ತಾದಸೆರಾಂವರ್ ಪ್ರೆಸ್ಸಿನಲ್ಲಿ ಮುದ್ರಿತ. ಕನ್ನಡದಲ್ಲಿ ಮೊತ್ತ ಮೊದಲು ಅಚ್ಚಾದ ಗ್ರಂಥ |
| ೩೮ *A Grammar of the kannada Language | ರೆವಿರೆಂಡ್ ಜಾರ್ಜ್ ಫರ್ಡಿನೆಂಡ್ ಕಿಟೆಲ್ (೧೮೩೨–೧೯೦೩) | ೧೮೬೬ | |
| ೩೯ A Grammar of Karnataka Language | ಜಾನ್ ಮೆಕೆರೆಲ್ | ೧೮೨೦ | ಉದಾಹರಣೆಗಳು ಕನ್ನಡ ಲಿಪಿ |
| ೪೦ Elementary Grammar of the Kannada Language | Thomas Hudson | ೧೮೫೯ | |

| | | | |
|---|---|---|---|
| ೧೫ ಪದ್ಯ ಕಾವ್ಯ ವ್ಯಾಕರಣ | ವರದರಾಜಯ್ಯಂಗಾರ್ | ೧೮೬೭ (ಮುನಷಿ ಶ್ರೀನಿವಾಸಯ್ಯ: ಗದ್ಯದಲ್ಲಿ ಟಪ್ಪಣಿ) | |
| ೧೬ *ಭಾಷಾಭೂಷಣ | ೩ನೆಯ ನಾಗವರ್ಮ | ಸು.೧೦೫೦ | |
| ೧೭ *ವರ್ಣನಾತ್ಮಕ ವ್ಯಾಕರಣ | ಎಚ್.ಎಸ್.ಬಿಳಿಗಿರಿ | ೧೯೭೧ | |
| ೧೮ ವ್ಯಾಕರಣ | ನಯಸೇನ | ? | |
| ೧೯ ವ್ಯಾಕರಣ ಸಂಗ್ರಹ | ಹೆಸರುಘಟ್ಟದ ಹೊನ್ನಪ್ಪ | ೧೮೯೦ | |
| ೨೦ *ವ್ಯಾಕರಣ ಸಂಗ್ರಹವೆಂಬ ಹೊಸಗನ್ನಡ ವ್ಯಾಕರಣವು | ಪುಟ್ಟಪರ್ತಿ ಶೇಷಾಚಾರ್ಯ | ೧೮೯೭ | ೩ನೆಯ ಆವೃತ್ತಿ |
| ೨೧ ಶಬ್ದಸ್ಮೃತಿ | ೩ನೆಯ ನಾಗವರ್ಮ | ಸು.೧೦೫೦ | |
| ೨೨ *ಶಬ್ದಮಣಿದರ್ಪಣ | ಕೇಶಿರಾಜ | | |
| i)ವ್ಯಾಖ್ಯಾನ | ನಿಟ್ಟೂರು ನಂಜಯ್ಯ | | |
| ii)ವ್ಯಾಖ್ಯಾನ | ಲಿಂಗಣಾರಾಧ್ಯ | | |
| ೨೩ ಶಬ್ದಾನುಶಾಸನ | ಭಟ್ಟಾಕಲಂಕ | ೧೬೦೪ | |
| ೨೪ ಶಬ್ದ ಮಂಜರಿ | ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯ | ೧೮೮೨ | ನೋಡಿ: ಗ್ರಂಥಕರ್ತರ ಚರಿತ್ರಕೋಶ |
| ೨೫ *ಶಬ್ದಾನಶಾಸನ ಪ್ರಕಾಶಿಕೆ | ಕುಂಡಲಗಿರಿಯಾಚಾರ್ಯ (೧೮೩೨–೧೯೦೭) | ೧೯೦೫ | (?) |
| ೨೬ ಶಬ್ದಾದರ್ಶ | ಬಿ.ಮಲ್ಲಪ್ಪ (೧೮೩೨–೧೯೦೭) | ೧೮೯೭ | |
| ೨೭ *ಶಬ್ದಮಣಿದರ್ಪಣ ಸಂಗ್ರಹ | ಎಸ್.ಆರ್.ಮಳಗಿ | ೧೯೭೦ | |
| ೨೮ ಅದೇ | ಎಂ.ಎಂ.ಕಲಬುರ್ಗಿ | ೧೯೭೪ | |
| ೨೯ *ಅದೇ | ಎಂ.ದೊಡ್ಡಸ್ವಾಮಿ | ೧೯೭೩ | |
| ೩೦ *ಸಂಕ್ಷೇಪ ವ್ಯಾಕರಣ ಸೂತ್ರಗಳು | ರೆವರೆಂಡ್ ಜಾರ್ಜ್ ಫರ್ಡಿನೆಂಡ್ ಕಿಟ್ಟೆಲ್ (೧೮೩೨–೧೯೦೩) | ೧೮೬೬ | |
| ೩೧ *ಸಂಸ್ಕೃತ–ಕನ್ನಡ ಶಬ್ದ ವ್ಯುತ್ಪತ್ತಿ | ಪಾಂಡುರಂಗ ಪೇಟಕರ (೧೮೫೧–೧೮೭೯) | | |

| | | | | |
|---|---|---|---|---|
| ೧೦ | ಏಕಾಕ್ಷರ ನಿಘಂಟು | ಕರ್ತೃ ತಿಳಿಯದು | ? | ಅದೇ |
| ೧೧ | *ಕರ್ಣಾಟಕ ಶಬ್ದಸಾರ | ಕರ್ತೃ ತಿಳಿಯದು | ಸು.೧೪೦೦ | |
| ೧೨ | *ಕರ್ಣಾಟಕ ನಿಘಂಟು | ಕರ್ತೃ ತಿಳಿಯದು | ಸು.೧೪೦೦ | |
| ೧೩ | *ಕಬ್ಬಿಗರ ಕೈಪಿಡಿ | ಲಿಂಗಮಂತ್ರಿ | ೧೫೩೦ | ಪ್ರ.ಕರ್ನಾಟಕ ಕಾವ್ಯ ಮಂಜರಿ ೧೮೯೩ |
| ೧೪ | ಕರ್ನಾಟಕ ಶಬ್ದ ಮಂಜರಿ | ವಿರಕ್ತ ತೋಂಟದಾರ್ಯ | ೧೫೬೦ | |
| ೧೫ | *ಕರ್ಣಾಟಕ ಸಂಜೀವನ | ಶೃಂಗಾ ಕವಿ | ಸು.೧೬೦೦ | |
| ೧೬ | *ಕವಿ ಕಂಠಹಾರ | ಸೂರ್ಯಕವಿ | ೧೬೪೦ | |
| ೧೭ | ಕನ್ನಡ–ಕನ್ನಡ ನಿಘಂಟು | | ೧೮೯೦ | |
| ೧೮ | *ಕನ್ನಡ–ಇಂಗ್ಲಿಷ್ ನಿಘಂಟು | ರೆ.ರೀವ್ | ೧೮೨೪ | ಕಲ್ಲಚ್ಚಿನಲ್ಲಿ ಮುದ್ರಿತ |
| ೧೯ | *ಕನ್ನಡ–ಇಂಗ್ಲಿಷ್ ನಿಘಂಟು | ಕರ್ತೃ ತಿಳಿಯದು | ೧೮೩೨ | |
| ೨೦ | *ಕನ್ನಡ–ಇಂಗ್ಲಿಷ್ ನಿಘಂಟು | ಡ್ಯಾನಿಯಲ್ ಸ್ಯಾಂಡರ್ ಸನ್ | ೧೮೫೮ | |
| ೨೧ | *ಕನ್ನಡ–ಇಂಗ್ಲಿಷ್ ನಿಘಂಟು | ಜಾನ್ ಗ್ಯಾರೆಟ್ | ೧೮೭೧ | |
| ೨೨ | *ಕರ್ನಾಟಕ ಶಬ್ದ ಕಲ್ಪದ್ರುಮ | ರಾಮಶಾಸ್ತ್ರೀ ಮತ್ತು ಹೆಸರುಘಟ್ಟದ ಹೊನ್ನಪ್ಪ | ೧೮೮೫ | |
| ೨೩ | *ಕರ್ಣಾಟಕ ಭಾಷಾಕರಂ | ಜಯರಾಯಾಚಾರ್ಯ | ೧೮೯೧ | |
| ೨೪ | *ಕನ್ನಡ–ಇಂಗ್ಲಿಷ್ ನಿಘಂಟು | ರೆ.ಎಫ್.ಕಿಟೆಲ್ | ೧೮೯೩ | |
| ೨೫ | *ಕಾಶಕೃತ್ಸ್ನ ಶಬ್ದ ಕಲಾಪ | ಕವಿ ಚೆನ್ನವೀರ | ಸು.೧೫೦೦ | |
| ೨೬ | *ಕಿಸಂವಾರ್ ಗ್ಲಾಸರಿ | ನರಸಿಂಗರಾವ್ | ೧೮೯೧ | |
| ೨೭ | ಕೋಶ ಪ್ರತಿ ಕೋಶದ ನಿಘಂಟು | ಕರ್ತೃ ತಿಳಿಯದು | ? | |
| ೨೮ | ಗಣಿತೋದ್ಭವ ವರ್ಗಕೋಶ | ಶಿವಯೋಗಿ ಶ್ರೀ ಮತ್ಸತ್ಯಾಶ್ರಮಿ ಸಾಧು | ೧೮೯೦ | ಮಾದರಿ ಏಕೋದೇವಃ ದ್ವಿತೀಯಃ ಶಿವಶಕ್ತಿಃ ಇತ್ಯಾದಿ |
| ೨೯ | *ಚತುರಾಸ್ಯ ನಿಘಂಟು | ಚತುರಾಸ್ಯ ಬೊಮ್ಮರಸ | ಸು.೧೪೫೦ | ಕ.ಕಾವ್ಯ ಮಂಜರಿ |
| ೩೦ | *ಚಾಮುಂಡಿಕಾ ಲಘು ನಿಘಂಟು | ಮುಮ್ಮಡಿ ಕೃಷ್ಣರಾಜ | ೧೮೪೮ ಒಡೆಯರು | |
| ೩೧ | ತತ್ತ್ವಾಭಿನಯ ನಿಘಂಟು | ಕರ್ತೃ ತಿಳಿಯದು | ೧೮೯೫ | ಅಚ್ಚಾಗಿಲ್ಲ |
| ೩೨ | ಧನಂಜಯ ನಿಘಂಟು | ಕರ್ತೃ ತಿಳಿಯದು | (?) | ಅದೇ |

## ೪. ಭಾಷಾಚರಿತ್ರೆ

| ಕ್ರಮ ಸಂಖ್ಯೆ | ಗ್ರಂಥದ ಹೆಸರು | ಕವಿಯ ಹೆಸರು | ಕಾಲ | ವಿಷಯ ಮುಂತಾದ ವಿವರಗಳು |
|---|---|---|---|---|
| ೧ | ಕನ್ನಡ ಭಾಷಾಚರಿತ್ರೆ (ಕನ್ನಡ ಕೈಪಿಡಿಯ ನಾಲ್ಕನೆಯ ಭಾಗ) | ಟಿ.ಎಸ್.ವೆಂಕಣ್ಣಯ್ಯ | ೧೯೩೬ | |
| ೨ | Comparative Grammar of the Dravidian Languages | Coldwell | Dates? | |
| ೩ | Grammar of old Kannada Inscriptions | ಎ.ಎನ್.ನರಸಿಂಹ್ಮಯ್ಯ | ದಿನಾಂಕ? | |
| ೪ | Grammar of old Kannada Inscriptions | G.S.Gai | | |

### ೫. ನಿಘಂಟು

| | | | | |
|---|---|---|---|---|
| ೧ | *ಅಭಿಧಾನ ವಸ್ತುಕೋಶ | ೨ನೆ ನಾಗವರ್ಮ | ಸು.೧೦೫೦ | |
| ೨ | *ಅಭಿಧಾನ ರತ್ನಮಾಲ ಕರ್ಣಾಟಕ ಟೀಕೆ | ಅದೇ | ಸು.೧೦೫೦ | |
| ೩ | ಅಕಾರಾದಿ ವೈದ್ಯ ನಿಘಂಟು | ಅಮೃತ ನಂದಿ | ಸು.೧೦೫೦ | |
| ೪ | *ಅಭಿನವ ಮಂಗಾಭಿದಾನ | ಅಭಿನವ ಮಂಗರಾಜ (೨ನೆಯ) ಮಂಗರಸ | ೧೩೯೮ | ಪ್ರ.೧೯೫೨ |
| ೫ | ಅಕ್ಷರಾದಿ ನಿಘಂಟು | ಶಾಲ್ಯದ ಕೃಷ್ಣರಾಜ | ೧೭೪೮ | |
| ೬ | ಅಕಾರಾದಿ ನಿಘಂಟು | ಲಕ್ಷ್ಮಣ ಪಂಡಿತ | ೧೭೭೫ | |
| ೭ | *ಅಮರಕೋಶವೆಂಬ ನಾಮಲಿಗಾನುಶಾಸನ | ಸಂ. ಲ್ಯೂಯಿ ರೈಸ್ | ಸು.೫೦೦ | ಪ್ರ. ೧೮೮೩ |
| ೮ | ಅಮರಕೋಶ (ಕನ್ನಡ ಟೀಕೆ) | ಚಿಂತಕಂಟಿ ಚೆಲುವಯ್ಯ ಮತ್ತು ಮಹಾದೇವಪ್ಪ | ೧೮೫೧ | ವಿಶೇಷ: ಅಚ್ಚಿನಲಿಪಿ ಕನ್ನಡ–ತೆಲುಗು ರೂಪಗಳಿಗೆ ಮದ್ಯಸ್ಥ |
| ೯ | ಇಂದ್ರ ದೀಪಿಕಾ ನಿಘಂಟು | ಕರ್ತೃ ತಿಳಿಯದು | ? | ಅಚ್ಚಾಗಿಲ್ಲ |

| | | | | |
|---|---|---|---|---|
| ೩ | ಕನ್ನಡ ನಿಘಂಟುಗಳ ನಿಘಂಟು | ಕನ್ನಡ ಸಾಹಿತ್ಯ ಪರಿಷತು ರಚಿಸಿದ್ದು | ೧೯೩೦ | |
| ೪ | *ಕನ್ನಡ ನಿಘಂಟು | ಮಜ್ಜಿ ಮಲೆ ಶಂಕರ ನಾರಾಯಣರಾವ್ | ೧೯೫೧ | |
| ೫ | *ಕನ್ನಡ-ಕನ್ನಡ ಶಬ್ದಕೋಶ | ಎಚ್.ವಿ.ರಮಾ ಕಾಂತರಾವ್ | ೧೯೫೨ | |
| ೬ | *ಕನ್ನಡ-ಕನ್ನಡ ಶಬ್ದಕೋಶ | ಗುರುನಾಥ ಜೋಶಿ ಮತ್ತು ಜಿ.ಅಶ್ವತ್ಥ ನಾರಾಯಣರಾವ್ | | |
| ೭ | *ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು | | | ಪೂರ್ತಿಯಾಗಿ ಸಿದ್ಧ ವಾಗಿ, ಏಳು ಸಂಪುಟಗಳಲ್ಲಿ ಪ್ರಕಟವಾಗಿವೆ). |
| ೮ | ಕರ್ಣಾಟಕ ಶಬ್ದ ರತ್ನಾಕರ | ನರಸಿಂಹಶಾಸ್ತ್ರಿ ಕೊಳನಾಡು, ವಿಟ್ಲ | ೧೯೫೦ | ಹ.ಪ್ರ.ಕ.ಸಾ. ಪರಿಷತ್ತು |
| ೯ | *ಕನ್ನಡ ಜಾನಪದ ಶಬ್ದ ಕೋಶ | ಸಂ. ಬಿ.ಎಸ್. ಗದ್ದಗೀಮಠ | ೧೯೫೬ | |
| ೧೦ | *ಕನ್ನಡ-ಕನ್ನಡ-ಇಂಗ್ಲೀಷ್ ನಿಘಂಟು | ಆರ್.ಎಸ್. ರಾಮರಾವ್ | ೧೯೬೦ | |
| ೧೧ | ಕನ್ನಡ ಸಮನಾರ್ಥ ಕೋಶ | ಜಿ.ಎಂ. ಹನಸೋಗೆ | ೧೯೭೪ | |
| ೧೨ | *ಕುಮಾರವ್ಯಾಸ ಭಾರತ ನಿಘಂಟು | ಎನ್. ಕುಲಕರ್ಣಿ | | |
| ೧೩ | ಜಗನ್ನಾಥ ವಿಜಯದ ನಿಘಂಟು | ಸೋ.ಅಯ್ಯಶಾಸ್ತ್ರಿ | ೧೮೫೪ | ಹ.ಪ.ಕ.ನಾ.ಪರಿಷತ್ತು |
| ೧೪ | ತಿರುಮಕೂಡಲು ಶಾಮಣ್ಣನವರ ನಿಘಂಟು | | ೧೯೨೦ | ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿದೆ |
| ೧೫ | ಪಂಡಿತ ಪ್ರಭಣ್ಣನವರ ನಿಘಂಟು | | ಸು.೧೯೨೯ | |
| ೧೬ | ಪಂಡಿತ ನಿಘಂಟು | ವಿ.ಡಿ.ಪಂಡಿತ್ | ೧೯೧೩ | |
| ೧೭ | *ಪಂಪಭಾರತದ ನಿಘಂಟು | ಕ.ಸಾ.ಪರಿಷತ್ತು | | |
| ೧೮ | *ಪಂಪರಾಮಾಯಣ ನಿಘಂಟು | | ಅದೇ | |

| | | | |
|---|---|---|---|
| ೩೩ *ಧನ್ವಂತರೀಯ ನಿಘಂಟು | ಕರ್ತೃ ತಿಳಿಯದು | ಸು. ೧೫೦೦ | |
| ೩೪ ಧನಂಜಯ ನಿಘಂಟು | ಕನ್ನಡ ಟೀಕೆ ತೋಪಿನಕೆರೆ ರಾಯಣ್ಣ | ೧೮೮೯ | |
| ೩೫ *ಧಾತುಪಾಠ: ಪ್ರಯೋಗಸಾರ: ಱ ಳ ಕುಳ ಶಬ್ದಗಳು | ಕೇಶಿರಾಜ | ೧೨೬೦ | |
| ೩೬ *ನಾಚಿರಾಜೀಯ | ನಾಚಿರಾಜ | ಸು.೧೩೦೦ | |
| ೩೭ *ನಾನಾರ್ಥ ಕಂದ | ಚೆನ್ನಕವಿ | ಸು. ೧೬೦೦ | ಪ್ರ: ೧೮೮೪ |
| ೩೮ *ನಾನಾರ್ಥ ರತ್ನಾಕರ(ಸಟೀಕಾ) | ದೇವೋತ್ತಮ | ಸು. ೧೬೦೦ | |
| ೩೯ ನಾನಾರ್ಥ ಶಬ್ದಾವಳಿ ಮತ್ತು ಸಂಜ್ಞಾರ್ಥಗಳು | ಬೋಳಾರ ರಾಮಕೃಷ್ಣಯ್ಯ | ೧೮೯೫ | |
| ೪೦ *ಪದ್ಯ ನಾನಾರ್ಥ | ಕರ್ತೃ ತಿಳಿದಿಲ್ಲ | ಸು. ೧೬೦೦ | ? |
| ೪೧ ಮದನಾರಿ ವೈದ್ಯ ನಿಘಂಟು | ಕನ್ನಡ ಟೀಕೆ: ತೋಪಿನಕೆರೆ ರಾಯಣ್ಣ | ೧೮೬೯ | |
| ೪೨ *ರನ್ನ ಕಂದ | ಕವಿ ರನ್ನ | | ೧೦ನೆಯ ಶತಮಾನ |
| ೪೩ ಶಬ್ದ ಮಂಜರಿ | ತೋಂಟದಾರ್ಯ | ೧೫೪೦ | ಟೀಕು:ಹೆಸರುಘಟ್ಟದ ಹೊನ್ನಪ್ಪ |
| ೪೪ *ಶಬ್ದಾಗಮ (ಅಥವಾ ಶಬ್ದ ರತ್ನಾಕರ) | ಕರ್ತೃ ತಿಳಿದಿಲ್ಲ | ಸು. ೧೬೦೦ | |
| ೪೫ *ಶಬ್ದಾರ್ಥ ಮಂಜರಿ | ಚಂದ್ರಸಾಗರ ವರ್ಣಿ | ೧೮೧೧ | |
| ೪೬ ಶಬ್ದ ಮಂಜರಿ | ಕೃಷ್ಣಾಮಾಚಾರ್ಯ | ೧೮೩೦ | ಈ ಕೃತಿ ದೊರಕಿಲ್ಲ |
| ೪೭ *ಶಬ್ದ ಸಂಗ್ರಹವು | ಗುರುರಾವ್ ವಿಠಲ | ೧೮೭೪ | |
| ೪೮ *ಶಬ್ದ ಮಂಜರಿ | ಗಂಗಾಧರ ಮಡಿವಾಳೇಶ್ವರ ತುರಮರಿ | ೧೮೬೯ | |
| ೪೯ ಶಬ್ದಮಂಜರಿಕೋಶವು | | | |

**ಈಚಿನ ಕೆಲವು ನಿಘಂಟುಗಳು**

| | | | |
|---|---|---|---|
| ೧ ಱ ಳ ಕುಳ ನಿಘಂಟು | ಕನ್ನಡ ಸಾಹಿತ್ಯ ಪರಿಷತ್ತು ರಚಿಸಿದ್ದು | ೧೯೩೦ | ಅಪ್ರಕಟಿತ |
| ೨ *ಔಷಧಿ ಕೋಶಂ | ಸಂ. ಎ. ವೆಂಕಟರಾವ್ ಎಚ್. ಶೇಷ ಅಯ್ಯಂಗಾರ್ | ೧೯೪೦ | |

| | | | | |
|---|---|---|---|---|
| ೯ | ವೈದ್ಯ ಚಿಂತಾಮಣಿ (ಕನ್ನಡ ಭಾಷ್ಯ) | ವಲ್ಲಭೇಂದ್ರ (ಅಮರೇಶ್ವರನ ಮಗ) | | |
| ೧೦ | ವೈದ್ಯ ಸಂಹಿತಾರ್ಣವ | ವೀರರಾಜ | ೧೭೨೦ | |
| ೧೧ | ವೈದ್ಯಕಂದ | ಬ್ರಹ್ಮ (ಬೊಮ್ಮಯ್ಯ) | ೧೭೨೦ | |
| ೧೨ | ವೈದ್ಯಸಾರ (ಗದ್ಯ) | | | |
| ೧೩ | ವೈದ್ಯ ನಿಘಂಟು(ಔಷಧಿಗಳ ತಯಾರಿಕೆಯ ವಿಧಾನಗಳು) | ? ? | ? ? | |
| ೧೪ | ವೈದ್ಯಾಮೃತ | ಶ್ರೀಧರ ದೇವ | ೧೫೦೦ | |
| **II ವಿಷವೈದ್ಯ** | | | | |
| ೧೫ | *ಖಗೇಂದ್ರ ಮಣಿದರ್ಪಣ | ಮಂಗರಾಜ | I೧೩೬೦ | |
| ೧೬ | ವಿಷಚಿಕಿತ್ಸೆ | | | ಹಸ್ತಪ್ರತಿಲಿಖಿತವಾದ ಕಾಲ: ೧೮೯೨ |
| **III ಸ್ತ್ರೀವೈದ್ಯ** | | | | |
| ೧೭ | ಸ್ತ್ರೀವೈದ್ಯ | ತಿಮ್ಮರಾಜಗೌಡ | ೧೭೫೦ | |
| **IV ಬಾಲವೈದ್ಯ** | | | | |
| ೧೮ | ಬಾಲಗ್ರಹ ಚಿಕಿತ್ಸೆ | | | |
| ೧೯ | ಬಾಲ ಚಿಕಿತ್ಸೆ | | | |
| ೨೦ | ಮಕ್ಕಳ ಚಿಕಿತ್ಸೆ ಮತ್ತು ಮಂತ್ರೌಷಧ ಸಂಗ್ರಹ | | | |
| **V ವ್ರಣವೈದ್ಯ** | | | | |
| ೨೧ | ವ್ರಣ ಚಿಕಿತ್ಸೆ (ಗದ್ಯ) | | | |
| **VI ಯಂತ್ರ ಮಂತ್ರ ಚಿಕಿತ್ಸೆ** | | | | |
| **VII ಗಜಶಾಸ್ತ್ರ–ಗಜವೈದ್ಯ** | | | | |
| ೨೨ | ಗಜಾಷ್ಟಕ | ಸೈಗೊಟ್ಟ ಶಿವಮಾರ | ಸು.೮೦೦ | ಉಲ್ಲೇಖ ಮಾತ್ರ |
| ೨೩ | ಹಸ್ತ್ಯಾಯುರ್ವೇದ | ವೀರಭದ್ರರಾಜ | ಸು.೧೬೦೦ | |
| **VIII ಅಶ್ವಶಾಸ್ತ್ರ–ಅಶ್ವವೈದ್ಯ** | | | | |
| ೨೪ | *ಅಶ್ವವೈದ್ಯ | ಅಭಿನವಚಂದ್ರ | | |
| ೨೫ | *ಅಶ್ವವೈದ್ಯ | ಬಾಚರಸ | | ೧೫೦೦ |
| ೨೬ | ಹಯಶಾಸ್ತ್ರ | ರಾಮಚಂದ್ರ | | ೧೬೨೫ |

| | | | | |
|---|---|---|---|---|
| ೧೯ | ಮಠದ ರುದ್ರಯ್ಯನವರ ನಿಘಂಟು | | ೧೯೧೮ | ಕ.ಸಾ.ಪ.ನಲ್ಲಿದೆ. ಪ್ರಕಟವಾಗಿಲ್ಲ |
| ೨೦ | ಶಬ್ದಾರ್ಥ ಸಂಗ್ರಹ | ಟಿ.ಕೆ. ಅನಂತನಾರಾಯಣ | ೧೯೩೩ | ಹಸ್ತಪ್ರತಿ: ಕ.ಸಾ. ಪರಿಷತ್ತು |
| ೨೧ | *ಶಿವಾನುಭವ ಶಬ್ದ ಕೋಶ | ಫ.ಗು.ಹಳಕಟ್ಟಿ | ೧೯೪೩ | |
| ೨೨ | *ಶ್ರೀಕೃಷ್ಣರಾಜ ಕರ್ಣಾಟ. ಭಾಷಾರತ್ನಾಕರಂ | ರಘಪತ್ಯಾಚಾರ್ಯ | ೧೯೨೩ | |
| ೨೩ | ಷಟ್ಪದೀ ಕಾವ್ಯಗಳ ನಿಘಂಟು | ಕ.ಸಾ.ಪ. ರಚಿಸಿದ್ದು | ೧೯೩೯ | ಅಪ್ರಕಟಿತ |
| ೨೪ | *ಸಮಯ ಸಂಜೀವಿನೀ | ರಾಮಾಭಾರ್ಯ; ತುಪಾಕಿ ಸುಬ್ಬಣ್ಣಾಚಾರ್ಯ | ೧೮೮೯ ನಾನಾರ್ಥಕ ಶಬ್ದಗಳು) | (ಸಮನಾರ್ಥಕ |
| ೨೫ | *ಸಚಿತ್ರ ಕನ್ನಡ–ಕನ್ನಡ ಕಸ್ತೂರಿ ಕೋಶ | ಪಂಡಿತ ಜಿ.ಎ.ಕವಲಿ | ೧೯೫೭ | |
| ೨೬ | *ಸಿರಿಗನ್ನಡ ಅರ್ಥಕೋಶ | ಶಿವರಾಮ ಕಾರಂತ | ೧೯೪೦ | |

[ಮೇಲ್ಕಂಡ ಪಟ್ಟಿಯಲ್ಲಿ ಇಂಗ್ಲೀಷ್–ಕನ್ನಡ, ಸಂಸ್ಕೃತ–ಕನ್ನಡ, ಹಿಂದಿ–ಕನ್ನಡ, ಮುಂತಾದ ಅನ್ಯಭಾಷಾ ಕನ್ನಡ ನಿಘಂಟುಗಳನ್ನು ಸೇರಿಸಿಲ್ಲ]

**೬. ವೈದ್ಯ ಶಾಸ್ತ್ರ**

I ಸಾಮಾನ್ಯ

| | | | |
|---|---|---|---|
| ೧ | ಕಲ್ಯಾಣಕಾರಕ | ಜಗದ್ದಳ ಸೋಮನಾಥ | ೧೧೭೫ |
| ೨ | ಗಂಧಕ ತೈಲಾದಿ ಪ್ರಯೋಗಗಳು | ? ? | ? ? |
| ೩ | ದೇವರ ವೈದ್ಯ (ಸರಳ ಗದ್ಯ) | | |
| ೪ | ಬಾಹಟೋಕ್ತಗಣಪಾಠ (ಶ್ಲೋಕ ಟೀಕು) | ? ? | ? ? |
| ೫ | ಮೂತ್ರರೋಗದ ಔಷಧಿ | ? ? | ? ? |
| ೬ | ವೈದ್ಯ ಸಾಂಗತ್ಯ | ಸಾಳ್ವ | ೧೫೫೦ |
| ೭ | ವೈದ್ಯ ಶಾಸ್ತ್ರ | ಅಜ್ಞಾತ | ೧೫೦೦ |
| ೮ | *ವೈದ್ಯಸಾರ ಸಂಗ್ರಹ | ಚೆನ್ನರಾಜ (ದೊರೆಯ | ೧೫೭೦ [ಹೆಸರಿನಲ್ಲಿ, ಲೇಖಕ– ಯಳಂದೂರು ನರಸಿಂಹ ಶಾಸ್ತ್ರೀ] |

| | | | | |
|---|---|---|---|---|
| ೪ | ಕೃಷ್ಣಮಿಶ್ರೀಯ ದಶಾಭುಕ್ತಿ ನಿರ್ಣಯ | ಸಂಸ್ಕೃತ ಮೂಲ ಕನ್ನಡ ಟೀಕೆ | | |
| ೫ | ಕುರುಬ ರಟ್ಟಮತವು | ರಟ್ಟ ಕವಿ (ಸಂ.) ಅಬಾಜಿ ೧೮೯೭ ರಾಮಚಂದ್ರ ಸಾವಂತ | | |
| ೬ | ಜಾತಕ ತಿಲಕ | ಶ್ರೀಧರಾಚಾರ್ಯ | ೧೦೪೯ | |
| ೭ | ಜಾತಕ ಫಲ ವಿವರ | | ಭಾಮಿನಿ ಷಟ್ಪದಿ | |
| ೮ | ಜ್ಯೋತಿಷ–ಚಂಪೂ (ನರಪಿಂಗಲೀಯ ನಿಮಿತ್ತ) | | | |
| ೯ | ಜ್ಯೋತಿಷ ರಟ್ಟ ಶಾಸ್ತ್ರ | (ಸಂ)ಕರಿಬಸವಯ್ಯ ಸೋಮಯ್ಯ, ಸಂಸ್ಕೃತ ಮೂಲ, ಕನ್ನಡ ಅನುವಾದ | ವಿಚಾರ ಷಟ್ಪದಿ ಮಳೆಯ ವಿಚಾರ | |
| ೧೦ | ದಿವಾಕರ ಪದ್ಧತಿ ಪ್ರದೀಪಿಕಾ (ಶ್ಲೋಕ ಟೀಕು) | ತಿಮ್ಮರಾಯ | | |
| ೧೧ | ನರಪಿಂಗಲಿ | ಮಾಧವ ದೇವ | ೧೪೫೦ | |
| ೧೨ | ನರಪಿಂಗಲಿ (ಟೀಕೆ) | | | |
| ೧೩ | ನರಪಿಂಗಲಿ (ಶಕುನವು) | (ಸಂ)ತೋವಿನ ಕರೆರಾಮಣ್ಣ | ೧೮೮೭ | |
| ೧೪ | *ನಕ್ಷತ್ರ ಚೂಡಾಮಣಿ (ಗದ್ಯ) | (ಟೀಕೆ) ಸಿದ್ಧಾಂತಿ ಸುಬ್ರಮಣ್ಯಶಾಸ್ತ್ರ | ೧೯೨೩ | (ಬಾನ ನಕ್ಷತ್ರಗಳ ಋತುಮತಿ ವಿಚಾರ) |
| ೧೫ | ಪಂಚದಶಮಹೂರ್ತ(ಕಂದ) | | | |
| ೧೬ | ಪ್ರತಿಭಾಗೀ (ಕನ್ನಡ ವ್ಯಾಖ್ಯಾನ) (ಶ್ಲೋಕ–ಟೀಕು) | | | (ಕರಣ ಗ್ರಂಥ: ಪಂಚಾಂಗ ಮಾಡುವ ಕ್ರಮ) |
| ೧೭ | *ಬೃಹಜ್ಜಾತಕ ಟೀಕೆ | ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿ | ೧೯೧೪ | |
| ೧೮ | ಮಾರ್ಕಂಡೇಯ ಜ್ಯೋತಿಷ ಪುರಾಣ | ಬೇಟೆರಾಯ | ೧೭೫೦ | |
| ೧೯ | ಮೇಘಮಾಲಾ | ಸಂ. ಬಾದಾಮಿ ಕೆ. ಲಂಗೋಪಂತ್ | | ಪರ್ಜನ್ಯ ವಿಷಯ ಅಪೂರ್ವ ಪ್ರಾಚೀನ ಗ್ರಂಥವು |

| | | |
|---|---|---|
| ೨೭ ಹಯಸಾರ ಸಮುಚ್ಚಯ | ಪದ್ಮಣ ಪಂಡಿತ | ೧೬೨೭ |

**IX ಗೋವೈದ್ಯ**

| | | |
|---|---|---|
| ೨೮ ಗೋವೈದ್ಯ | ಕೀರ್ತಿವರ್ಮ | ೧೧೭೫ |

**೭. ಪಾಕಶಾಸ್ತ್ರ**

| | | | |
|---|---|---|---|
| ೧ | ಪಾಕಶಾಸ್ತ್ರ (ಗದ್ಯ) | ಭೀಮಸೇನ | ? |
| ೨ | *ಸೂಪಶಾಸ್ತ್ರ | ಭೀಮಸೇನ | ? |
| ೩ | ಸೂಪಶಾಸ್ತ್ರದ ಟೀಕು | ಭೀಮಸೇನ | ? |
| ೪ | *ಸೂಪಶಾಸ್ತ್ರ | ಮಂಗರಸ III | ೧೫೦೮ |

**೮. ಗಣಿತ ಶಾಸ್ತ್ರ**

| | | | |
|---|---|---|---|
| ೧ | ಕನ್ನಡ ಲೀಲಾವತಿ (ಕ್ಷೇತ್ರ ಗಣಿತ) | ಬಾಲ್ಯವೈದ್ಯದ ಚೆಲುವ | |
| ೨ | ಕೇಶವನ ಗಣಿತ | – | |
| ೩ | ಗಣಿತ ಸಾರ | ಸಿಂಹರಾಜ | ೧೬೫೦ |
| ೪ | ಭಾಸ್ಕರ ಗಣಿತ | – | |
| ೫ | ಬೇಹಾರ ಗಣಿತ | ಭಾಸ್ಕರ | |
| ೬ | ಮಹಾವೀರಾಚಾರ್ಯನ ಗಣಿತಕ್ಕೆ ಟೀಕೆ | ದೈವಜ್ಞವಲ್ಲಭ | ೧೭೦೦ |
| ೭ | *ವ್ಯವಹಾರ ಗಣಿತ, ಕ್ಷೇತ್ರ ಗಣಿತ, ಲೀಲಾವತಿ, ಮುತ್ತಿನ ಚಿಪ್ಪಿನ ಗಣಿತ, ಮು | ರಾಜಾದಿತ್ಯ | ೧೧೯೦ |
| ೮ | ಕ್ಷೇತ್ರ ಗಣಿತ | ತಿಮ್ಮರಸ | ೧೭೦೦ |

**೯. ಜ್ಯೋತಿಷ**

**I ಸಾಮಾನ್ಯ**

| | | | |
|---|---|---|---|
| ೧ | ಅಬ್ಧಿಕಲ್ಪ | | |
| ೨ | ಅಕ್ಷರ ಕೇವಲಿ ನಿಮಿತ್ತ (ಗದ್ಯ) | | |
| ೩ | ಅದ್ಭುತ ಕೇವಲ ಜ್ಞಾನವು | ಸಿದ್ಧನಂಜೇಶ (ಸಂ.) ಸಿದ್ಧಾಂತಿ ಶಿವಬಸವಶಾಸ್ತ್ರಿ | ೧೯೨೬ |

**V ನಾಡಿಶಾಸ್ತ್ರ**

| | | | | |
|---|---|---|---|---|
| ೧ | ನಾಡೀಸ್ವರ ಶಾಸ್ತ್ರ (ಗದ್ಯ) | ಗಿರಿಯಾಚಾರ್ಯ | | ಚಂದ್ರಸೂರ್ಯ ನಾಡಿಗಳಿಂದ ಶುಭಾ ಶುಭಾಫಲ |
| ೨ | ಸ್ವರಚಿಂತಾಮಣಿ (ಶ್ಲೋಕ–ಟೀಕು) | | | ಅದೇ |

**V ಸ್ವಪ್ನ ಫಲ**

| | | | | |
|---|---|---|---|---|
| ೧ | *ಸ್ವಪ್ನಫಲ ಚಿಂತಾಮಣಿ | ನಂಜುಂಡ ಶಾಸ್ತ್ರೀ | | |
| ೨ | *ಸ್ವಪ್ನಫಲ ಚಿಂತಾಮಣಿ | ದೊಡ್ಡಬೆಲೆ ನಾರಾಯಣ ಶಾಸ್ತ್ರಿ | | (ಕನ್ನಡ ಟೀಕೆ– ತಾತ್ಪರ್ಯ) |
| ೩ | ಸ್ವಪ್ನಾಧ್ಯಾಯದ ಟೀಕು (ಶ್ಲೋಕ–ಟೀಕು) | | | |

**೧೦. ಕಾಮಶಾಸ್ತ್ರ**

| | | | | |
|---|---|---|---|---|
| ೧ | *ಅನುಭವ ಮುಕರ | ಜನ್ನ | ೧೨೦೦–೧೨೩೦ | |
| ೨ | ಅಂಗಜ ಬೋಧೆ | | ೧೬೫೦ | |
| ೩ | ಕಕ್ಕೋಕ ಶಾಸ್ತ್ರ | | | |
| ೪ | ಕಕ್ಕೋಕ ಶಾಸ್ತ್ರದ ಟೀಕೆ | | ೧೬೦೦ | |
| ೫ | ಕಾಮಶಾಸ್ತ್ರ (ಗದ್ಯ) | | | |
| ೬ | *ಜನವಶ್ಯ | ಕಲ್ಲರಸ | ೧೪೫೦ | |
| ೭ | *ಮದನ ತಿಲಕ | ಚಂದ್ರರಾಜ | ೧೦೨೯ | |
| ೮ | *ಮನ್ಮಥ ವಿಜಯ (ಚಂಪೂ) | ಕವಿಮಲ್ಲ | ನಾಯಕ–ನಾಯಿಕಾ ವಿಚಾರ | |
| ೯ | ರತಿ ರಹಸ್ಯದ ಟೀಕು | | | |

**೧೧. ಜ್ಞಾನಕೋಶ**

| | | | | |
|---|---|---|---|---|
| ೧ | *ಲೋಕೋಪಕಾರ | ಚಾವುಂಡರಾಯ | ೧೦೨೫ | |
| ೨ | *ವಿವೇಕ ಚಿಂತಾಮಣಿ | ನಿಜಗುಣ ಶಿವಯೋಗಿ | ೧೫೦೦ | |
| ೩ | *ಸಿರಿಭೂವಲಯ | ಕುಮವದೇಂದು (ಸ.) ಕರ್ಲಮಂಗಲ ಶ್ರೀಕಂಠಯ್ಯ | ಸು.೧೨೦೦ ೧೩೦೦ | ಭಾಗಗಳು: ೧–೨ ಪ್ರಕಟಿತ |

| | | | | |
|---|---|---|---|---|
| ೨೦ | *ರಟ್ಟಮತ | ಅರ್ಹದ್ದಾಸ | ೧೩೦೦ | |
| ೨೧ | ರಟ್ಟನ ಜಾತಕ | | ೧೬೦೦ | |
| ೨೨ | *ರಮಲ ಶಾಸ್ತ್ರ | ಬಾಲಕೃಷ್ಣ ಮಲ್ಹಾರಲಾಡ | ೧೮೯೭ | ಜಾತಕ ರಚನೆಗೆ ಅಲುಕೂಲವಾದ ಜ್ಯೋತಿಷವಿಷಯಗಳು |
| ೨೩ | ಲಘುಲಂಪಾಕ ಗ್ರಂಥ | ಎಸ್.ರಾಮಸ್ವಾಮಿ ಶಾಸ್ತ್ರಿ | ೧೮೯೨ | ಸಂಕೀರ್ಣ ಜ್ಯೋತಿಷ ವಿಚಾರಗಳು |
| ೨೪ | ವಿದ್ಯಾಮಾಧವೀಯ (ಸಟೀಕು) | | | ಸಂಸ್ಕೃತ ಮುಹೂರ್ತ ಶಾಸ್ತ್ರದ ಕನ್ನಡ ಟೀಕೆ |
| **II** | **ಪ್ರಶ್ನ ಜ್ಯೋತಿಷ** | | | |
| ೧ | *ಕೇರಳ ಪ್ರಶ್ನ ಗ್ರಂಥ ಸಂಸ್ಕೃತ | ಸಿದ್ಧಾಂತಿ ಶಿವಶಂಕರ | ೧೮೮೩ [ಶಾಸ್ತ್ರಿ(ಕನ್ನಡ ತಾತ್ಪರ್ಯ) | |
| ೨ | ಜಿನೇಂದ್ರಮಾಲಾ (ಪ್ರಶ್ನಶಾಸ್ತ್ರ) | | | |
| ೩ | ನಂದೀಕೇಶ್ವರ ಅಕ್ಷರ ಪ್ರಶ್ನೆ(ಗದ್ಯ) | | | |
| ೪ | ಪ್ರಶ್ನ ಚಿಂತಾಮಣಿ (ಶ್ಲೋಕ–ಟೀಕು ವಚನ) | | | |
| **III** | **ಸಾಮುದ್ರಿಕ** | | | |
| ೧ | ಸಾಮುದ್ರಿಕ ಲಕ್ಷಣ(ಗದ್ಯ) | | ೧೬೦೦ | |
| ೨ | *ಸಾಮುದ್ರಿಕ ಶಾಸ್ತ್ರ | ಸಿದ್ಧಾಂತಿ ಶಿವಶಂಕರ ಶಾಸ್ತ್ರಿ | ೧೮೮೩ | ಹರಗೌರೀ ಸಾಮುದ್ರಿಕ, ವರಾಹ ಮಿಹಿರ ಸಾಮುದ್ರಿಕಗರ್ಗ ಸಾಮುದ್ರಿಕ |
| ೩ | ಸಾಮುದ್ರಿಕ ಶಾಸ್ತ್ರ ಸಾರ ಸಂಗ್ರಹ | ರಾಮಸೂರಿ (?) | | |
| **IV** | **ಶಕುನ ಶಾಸ್ತ್ರ** | | | |
| ೧. | ಪಂಚಪಕ್ಷಿಯ ಶಕುನ | | | |
| ೨. | ಪಂಚಪಕ್ಷಿಯ ಪಶ್ನಶಾಸ್ತ್ರ | ದೊರೆ ಸ್ವಾಮಯ್ಯ | ೧೮೯೫ | |
| ೩. | ಶಕುನಿ ಸಾರ | ಲಕ್ಷ್ಮಣಾಂಕ | ೧೫೦೦ | |
| ೪. | ಶಕುನಿ ಪ್ರಪಂಚ | ಚಾಸರಾಜ | ೧೫೦೦ | |
| ೫. | ಶಕುನಿಗಳು | | ೧೬೦೦ | |

## ೧೩. ಸಂಗೀತ, ನಾಟ್ಯ

| | | | |
|---|---|---|---|
| ೧ | ಅಭಿಲಷಿತಾರ್ಥ ಚಿಂತಾಮಣಿ | ಸೋಮೇಶ್ವರ III | ೧೧೨೭–೧೧೩೮ |
| ೨ | ಕನ್ನಡ ಸಂಗೀತ ರತ್ನಾಕರ(?) | ಅಜ್ಞಾತ ಕರ್ತೃ | |
| ೩ | ಗಾನವಿದ್ಯಾ ರಹಸ್ಯ ಪ್ರಕಾಶಿನಿ | | ೧೯ನೆಯ ಶತಮಾನ |
| ೪ | ಚತುರ್ದಂಡಿ ಪ್ರಕಾಶಿಕೆ | ವೆಂಕಟಮುಖಿ | ೧೭ನೆಯ ಶತಮಾನ |
| ೫ | ಬೃಹದ್ದೇಶಿ | ಮತಂಗ (?) | ಸು.೯–೧೦ನೆಯ ಶತಮಾನ |
| ೬ | ರಸಿಕಜನ ಮನೋಲ್ಲಾಸಿನಿ ಸಾರಸಂಗ್ರಹ(ಭರತ ಶಾಸ್ತ್ರ) | (ಸಂ.)ವೆಂಕಟಸುಂದರಾ ಸಾನಿ | ೧೯೦೮ |
| ೭ | ರಾಗಮಾಲಾ | ಪುಂಡರೀಕ ವಿಠಲ | |
| ೮ | ರಾಗಮಂಜರೀ | ಸು.೧೬–೧೭ನೆಯ ಶತಮಾನ | |
| ೯ | ವಿವೇಕ ಚಿಂತಾಮಣಿ (ಸಂಗೀತಕ್ಕೆ ನಾಟ್ಯಶಾಸ್ತ್ರಕ್ಕೆ ಸಂಬಂಧಪಟ್ಟ ೪ನೆಯ ಅಧ್ಯಾಯ) | ನಿಜಗುಣ ಶಿವಯೋಗಿ | ೧೫೦೦ |
| ೧೦ | ಷಡ್‌ರಾಗ ಚಂದ್ರೋದಯ | ಪುಂಡರೀಕ ವಿಠಲ | ಸು.೧೬–೧೭ನೆಯ ಶತಮಾನ |
| ೧೧ | ಸಂಗೀತ ರತ್ನಾಕರ | ಶಾರ್ಙ್ಗದೇವ | ೧೩ನೆಯ ಶತಮಾನ |
| ೧೨ | ಸಂಗೀತಸಾರ | ವಿದ್ಯಾರಣ್ಯಯತಿ | ೧೪ನೆಯ ಶತಮಾನ |
| ೧೩ | ಸಂಗೀತ ಕಲಾನಿಧಿ | ಕಲ್ಲಿನಾಥ | ಸು.೧೪೪೦ |
| ೧೪ | ಸಂಗೀತ ಸುಧಾ | ಗೋವಿಂದ ದೀಕ್ಷಿತ | ೧೭ನೆಯ ಶತಮಾನ |
| ೧೫ | ಸಂಗೀತ ಸಂಬೋಧಿನಿ | ಕರಿಗಿರಿರಾಯರು | ೧೯ನೆಯ ಶತಮಾನ |
| ೧೬ | ಸಂಗೀತ ಸಮಯಸಾರ | ಪಾರ್ಶ್ವದೇವ | ೧೨ನೆಯ ಶತಮಾನ |
| ೧೭ | ಸಂಗೀತ ಚೂಡಾಮಣಿ | ಜಗದೇಕಮಲ್ಲ II | ೧೧೩೮–೧೧೫೫ |
| ೧೮ | ಸ್ವರ ಮೇಳ ಕಳಾನಿಧಿ | ರಾಮಾಮಾತ್ಯ | ಸು. ೧೫೫೦ |

## ೧೪. ಧಾರ್ಮಿಕ–ಶಾಸ್ತ್ರ ಗ್ರಂಥಗಳು

### I ಜೈನ

| | | | |
|---|---|---|---|
| ೧ | *ಅನುಪ್ರೇಕ್ಷೆ | ಕಲ್ಯಾಣಕೀರ್ತಿ | ೧೪೩೯ |

## ೧೨. ಸಂಕೀರ್ಣ (ಇತರ ಕೆಲವು ಶಾಸ್ತ್ರಗಳು)

| | | | |
|---|---|---|---|
| ೧ | ಅಮರಕೋಶಕ್ಕೆ ವ್ಯಾಖ್ಯಾನ | | |
| ೨ | ಅಮರ ಕೋಶಿ ಟೀಕೆ | ಲಕ್ಷ್ಮಣ ಶಾಸ್ತ್ರಿ | |
| ೩ | ಖಡ್ಗ ಶಾಸ್ತ್ರ (ಮಲ್ಲವಿದ್ಯೆ, ಧನುರ್ವಿದ್ಯೆ, ಕತ್ತಿವರಸೆ, ಇತ್ಯಾದಿ) –(ಶ್ಲೋಕದ ಟೀಕು) | | |
| ೪ | ಖಡ್ಗ ಶಾಸ್ತ್ರ ಟೀಕೆ | | |
| ೫ | ಜಲಶಿಲ್ಪ (ಜಲವಸತಿ ಕಂಡು ಹಿಡಿಯುವುದು) | ರಟ್ಟ(?) | |
| ೬ | ಧನಶಿಲ್ಪ (ಗುಪ್ತನಿಧಿಯನ್ನು ಕಂಡುಹಿಡಿಯುವುದು) | | |
| ೭ | *ನಿಜದೀಪಿಕಾರತ್ನ ಟೀಕೆ | ವೇದಾಂತ ರಾಘವಾಚಾರ್ಯ | |
| ೮ | *ಭಾರತ ತಾತ್ಪರ್ಯ ಟೀಕೆ | ವಾದಿರಾಜ | |
| ೯ | *ಮುಲ್ಲಾಶಾಸ್ತ್ರ | | |
| ೧೦ | ಯೋಗ ತಾರಾವಳಿ | | |
| ೧೧ | *ಯೋಗ ರತ್ನಾಕರ | | |
| ೧೨ | ರತ್ನಶಾಸ್ತ್ರ | ಬಾಲವೈದ್ಯದ ಚೆಲುವ | ೧೭೧೫ |
| ೧೩ | ವಾಸ್ತುಶಾಸ್ತ್ರ (ಶ್ಲೋಕ–ಟೀಕು) (ಮನೆ ಕಟ್ಟುವ ಲಕ್ಷಣ) | | |
| ೧೪ | ಶತಕತ್ರಯ ಟೀಕೆ | | |
| ೧೫ | *ಶಬ್ದಮಣಿದರ್ಪಣ ವ್ಯಾಖ್ಯಾನ | ನಿಟ್ಟೂರು ನಂಜಯ್ಯ | |
| ೧೬ | *ಶಬ್ದಮಣಿದರ್ಪಣ ವ್ಯಾಖ್ಯಾನ | ಲಿಂಗಣಾರ್ಯ | |
| ೧೭ | ಶಾಬರ ಮಂತ್ರ (ಯಂತ್ರ–ಮಂತ್ರಾದಿಗಳು) | | ? |
| ೧೮ | *ಸೌಂದರ್ಯ ಲಹರಿಯ ಟೀಕೆ | ಚಕ್ಕಣಾಮಾತ್ಯ | ೧೮ನೆಯ ಶತಮಾನ |
| ೧೯ | ಹೂಜಿ–ಬಟ್ಟಲ ಮಹತ್ವ | | |

| | | | | |
|---|---|---|---|---|
| ೨೩ | *ಮಹಾಪುರಾಣ | ಪಂಡಿತ ಬ್ರಹ್ಮಸೂರಿ ಪದ್ಮರಾಜ | ೧೮೫೦ | |
| ೨೪ | ಲೋಕಸ್ವರೂಪ | ಸಿಂಹರಾಜ | ೧೬೫೦ | |
| ೨೫ | ಶಾಸ್ತ್ರಕಾರ (ಗ್ರಂಥ ಸಿಕ್ಕಿಲ್ಲ) | ವೃತ್ತವಿಲಾಸ | ೧೩೬೦ | |

**II ವೀರಶೈವ**

| | | | | |
|---|---|---|---|---|
| ೧ | ಅಷ್ಟಾವರಣ ಸ್ತೋತ್ರಂ ತ್ರಿವಿಧಿ | ಸಿದ್ಧರಾಮ | | |
| ೨ | *ಅನುಭವ ಮುದ್ರೆ (ವೀರಶೈವ ಸಿದ್ಧಾಂತ) | ಶಾಂತಮಲ್ಲ | ೧೬೫೦ | |
| ೩ | ಅಷ್ಟಾವರಣ ತಿಲಕ | ಮಹಮೂರ್ತಿ | ೧೭೭೨ | |
| ೪ | *ಏಕೋತ್ತರ ಶತಸ್ಥಲ | ಮಹಾಲಿಂಗದೇವ | ೧೪೨೫ | |
| ೫ | *ಕೈವಲ್ಯ ಕಲ್ಪವಲ್ಲರಿ (ಅಧ್ಯಾತ್ಮ ಸುಖಬೋಧೆ) | ಸಣ್ಣಪ್ಪ | ೧೭೦೦ | |
| ೬ | *ಗಣ ಭಾಷ್ಯ ರತ್ನಮಾಲೆ | ಗುಬ್ಬಿಯ (ಮಲ್ಲಣ್ಣ) ಮಲ್ಲಣಾರ್ಯ | ೧೪೭೫ | |
| ೭ | *ತ್ರಿವಿಧಿ | ಕರಸ್ಥಲದ ನಾಗಿದೇವ | ೧೪೩೦ | |
| ೮ | *ದೀಕ್ಷಾ ಬೋಧೆ | ಕೆರೆಯ ಪದ್ಮರಸ | | |
| ೯ | ನೀತಿವೇದ್ಧಾಂತ | ಮುರಿಗೆಯ ಶಾಂತವೀರ | ೧೭೦೦ | |
| ೧೦ | *ನೂರೊಂದು ಸ್ಥಲ | ಜಕ್ಕಣಾರ್ಯ | ೧೪೩೦ | |
| ೧೧ | ಪರಮಮೂಲ ಷಟ್‌ಸ್ಥಲ ಜ್ಞಾನ ವಚನ | ಚಿಕ್ಕವೀರಯ್ಯ | ೧೩೦೦ | |
| ೧೨ | ಪರಮತ ಖಂಡನ | ನೀಲಕಂಠಾರಾಧ್ಯ | ೧೫೦೦ | |
| ೧೩ | ಪಂಚಬ್ರಹ್ಮೋದಯ ಭಾಷ್ಯ | ಸಾಸಲ ಚಿಕ್ಕಣಾರಾಧ್ಯ | ೧೪೫೦ | |
| ೧೪ | ಪದ್ಯ ಗಣ ಸಹಸ್ರಧಾಮ | ನರಸಾರ್ಯ | ೧೬೦೦ | (ಬ್ರಾಹ್ಮಣ ಕವಿ ಎಂದು ಕವಿಚರಿತೆ) |
| ೧೫ | ಪ್ರಭುದೇವರ ಷಟ್‌ಸ್ಥಲಜ್ಞಾನ ಚಾರಿತ್ರ ವಚನದ ಟೀಕೆ (ಷಟ್‌ಸ್ಥಲ ವಿವೇಕ) | ಮಹಾಲಿಂಗದೇವ | ೧೪೨೫ | |
| ೧೬ | ಪ್ರಾಣಲಿಂಗ ಶತಕ | ಗುರುವ | ೧೭೦೦ | ವೀರಶೈವ ಸಿದ್ಧಾಂತ |
| ೧೭ | *ಮುಕ್ತ್ಯಂಗನೆಯ ಕಂಠಮಾಲೆ | ಸ್ವತಂತ್ರ ಸಿದ್ದಲಿಂಗೇಶ್ವರ | ೧೪೮೦ | |

| | | | | |
|---|---|---|---|---|
| ೨ | ಆಚಾರಸಾರ (ವ್ಯಾಖ್ಯಾನ) | ವೀರನಂದಿ | | |
| ೩ | *ಕನ್ನಡ ರತ್ನ ಕರಂಡಕ (ರತ್ನತ್ರಯ ವಿಚಾರ) | ಆಯತವರ್ಮ | ಸು.೧೪೦೦ | |
| ೪ | ಕರ್ಮಪ್ರಕೃತಿ | ಅಜ್ಞಾತ | ೧೪೦೦ | |
| ೫ | ಗದ್ಯ ಕಥೆ | ಕವಿ ಪರಮೇಷ್ಠಿ | ಸು.೫೫೦ | ಉಲ್ಲೇಖ ಮಾತ್ರ |
| ೬ | ಗೊಮ್ಮಟ ಸಾರ:ಅಮಿತ ಗತಿ ಶ್ರಾವಕಾಚಾರಗಳಿಗೆ ಟೀಕೆ | ಕೇಶವ ವರ್ಣಿ | ೧೩೫೯ | |
| ೭ | ಚಿಕ್ಕ ಶ್ರಾವಕಚಾರ | ಅಜ್ಞಾತ | ೧೪೦೦ | |
| ೮ | ಚೂಡಾಮಣಿ ವ್ಯಾಖ್ಯಾನ | ತುಂಬಲೂರು ನಾಮಾ–ಚಾರ್ಯ (ಶ್ರೀ ವರ್ಧದೇವ) | ಸು.೬೫೦ | ಉಲ್ಲೇಖ ಮಾತ್ರ |
| ೯ | *ಜಿನಮುನಿತನಯ | ನೂತ್ನ ನಾಗಚಂದ್ರ | ೧೬೫೦ | |
| ೧೦ | *ಜೈನಧರ್ಮ ಪರಿಭಾಷೆ | ಪಂಡಿತ ಮಹಾದೇವ ಪ್ರಭಾಕರ ಪೂಜಾರ | ೧೮೮೪ | |
| ೧೧ | ತತ್ತ್ವಾರ್ಥ ಸೂತ್ರಕ್ಕೆ ಕನ್ನಡ ಟೀಕೆ | ದಿವಾಕರಣಂದಿ | ೧೦೬೨ | |
| ೧೨ | ತತ್ತ್ವಾರ್ಥ | ಬಾಲಚಂದ್ರ | ೧೧೭೦ | |
| ೧೩ | ತ್ರಿಭುವನ ಕೋಶ | ಅಜ್ಞಾತ | ೧೪೦೦ | |
| ೧೪ | *ತ್ರಿಲೋಕನ ಶತಕ | ರತ್ನಾಕರ | ೧೫೫೭ | |
| ೧೫ | ತ್ರೈಲೋಕ್ಯ ಚೂಡಾಮಣಿ(ಶತಕ) | | | |
| ೧೬ | ದ್ರವ್ಯ ಸಂಗ್ರಹ ಸೂತ್ರಕ್ಕೆ ಟೀಕೆ | ಬಾಳಚಂದ್ರ ಪಂಡಿತ | ೧೨೭೩ | |
| ೧೭ | *ನಿಗಮ ಸಾರಮೃತ | ಪದ್ಮನಾಭ ಮಹಾರಾಜಾಮೃತ | ೧೮೮೦ | |
| ೧೮ | ಪರಮಾತ್ಮ ಪ್ರಕಾಶಿಕೆ | ಬಾಲಚಂದ್ರ | ೧೧೭೦ | |
| ೧೯ | *ಪರಮಾಗಮಸಾರ | ಚಂದ್ರಕೀರ್ತಿ | ೧೪೦೦ | |
| ೨೦ | ಪಂಚಾಸ್ತಿಕಾಯ | ಪದ್ಮಪ್ರಭ | ೧೩೦೦ | |
| ೨೧ | ಪ್ರಾಭೃತಕ ತ್ರಯ | ಬಾಲಚಂದ್ರ | ೧೧೭೦ | |
| ೨೨ | (ಪೂಜ್ಯಪಾದರ) ಸಮಾಧಿ ಶತಕಕ್ಕೆ ಟೀಕೆ | ಮೇಘಚಂದ್ರ | ೧೧೪೮ | |

| | | | | |
|---|---|---|---|---|
| ೧೦ | ಚಂದ್ರ ಚೂಡಾಮಣಿ ಶತಕ (ಅದ್ವೈತ) | ನಾಗವರ್ಮಾಚಾರ್ಯ | | |
| ೧೧ | ಚಿದಖಂಡಾನುಭವ ಸಾರ | ಚಿದಾನಂದ | | ೧೭೨೫ |
| ೧೨ | *ಜೀವೇಶ್ವರ ಸಾಂಗತ್ಯ ತತ್ವದ ಸೊಬಗಿನ ಸೋನೆ | ಗೋಪಾಲಾರ್ಯ ಶಿಷ್ಯ | ೧೭೫೦ | |
| ೧೩ | ತತ್ವತ್ರಯ ವಿವರಣ (ವಿಶಿಷ್ಟಾದ್ವೈತ) | ಶ್ರೀಶೈಲಾರ್ಯ | ೧೭೦೦ | ಅನುವಾದ(?) |
| ೧೪ | ತತ್ವದ ಸೊಬಗಿನ ಸೋನೆ | | | |
| ೧೫ | *ತತ್ವಚೌಪದ (ಅದ್ವೈತ) | ಪರಮದೇವ | ೧೭೭೭ | |
| ೧೬ | ತತ್ತ್ವದ ಕೀರ್ತನೆಗಳು | ಗುರುಕೃಷ್ಣ | | |
| ೧೭ | ತತ್ತ್ವದ ಪದಗಳು (ಅದ್ವೈತ) | ಶಿಶುನಾಲ ಷರೀಫ್ ಸಾಹೇಬರು | | |
| ೧೮ | *ತತ್ವಾನು ಸಂಧಾನ (ವೇದಾಂತ) | ಭೀಮಾವಧೂತ | ೧೮೯೯ | |
| ೧೯ | ತತ್ವಾಚಿಂತಾಮಣಿ | ಚಿದಾನಂದಾವಧೂತ | ೧೭೫೦ | |
| ೨೦ | ತಿರುವೇಂದಡಾಚಾರ್ಯ ಶತಕ | ಕೇಶವ | | ೧೭೫೦ |
| ೨೧ | *ನಿಜದೀಪಿಕಾರತ್ನ | ಶಾಲ್ಯದ ಕೃಷ್ಣರಾಜ | ೧೭೭೫ | |
| ೨೨ | ಪರಮಾರ್ಥಗೀತೆ | ನಿಜಗುಣ ಶಿವಯೋಗಿ | ೧೫೦೦ | (?) |
| ೨೩ | ಪರಮಾನುಭವಬೋಧೆ | ನಿಜಗುಣ ಶಿವಯೋಗಿ | | ಅದೇ |
| ೨೪ | ಪಂಚೀಕರಣ | ಚಿದಾನಂದಾವಧೂತ | ೧೭೫೦ | |
| ೨೫ | ಪರಬ್ರಹ್ಮ ಪ್ರಕಾಶಿಕೆ | ತಿಮ್ಮಪ್ಪದಾಸ | ೧೮೫೦ | |
| ೨೬ | *ಪೌರುಷ ಪ್ರಕಾಶವೆಂಬ ಶ್ರೀ ಜ್ಞಾನವಾಸಿಷ್ಠ ಸಾರವು | ನರಸಿಂಹ ಪೌರಾಣಿಕ | ೧೮೯೮ | |
| ೨೭ | ಪ್ರಶ್ನೋತ್ತರ ರತ್ನಮಾಲಿಕೆ | ಮೈಸೂರು ಸಿ.ಶಿವಶಂಕರ ಶಾಸ್ತ್ರಿ | ೧೮೯೯ | |
| ೨೮ | ಪ್ರಶ್ನೋತ್ತರ ರತ್ನಮಾಲಿಕೆ ಶಿವಕೋಟಿಯ ಕನ್ನಡ ಟೀಕೆ | ಪ್ರಾಚೀನ? ಸು.೧೨ನೇ ಶತಮಾನ | ಹಸ್ತಪ್ರತಿ | |
| ೨೯ | ಪ್ರಾಣೇಶ್ವರ ಶತಕ | ಶಾಲ್ಯದ ಕೃಷ್ಣರಾಜ | ೧೭೭೫ | |
| ೩೦ | ಭಗವದ್ಗೀತೆ | ನಾಗರಸ | ೧೬೫೦ | ಅನುವಾದ |

| | | | | |
|---|---|---|---|---|
| ೧೮ | *ಲಿಂಗಲೀಲಾವಿಲಾಸ ಚಾರಿತ್ರ (ಪ್ರಭುದೇವರ ಮಂತ್ರ ಗೋಪ್ಯದ ಟೀಕೆ) | ಕಲ್ಲುಮಠದ ಪ್ರಭುದೇವರು | ೧೪೮೦ | |
| ೧೯ | ವಚನಗಳು | ಕರಸ್ಥಲದ ನಾಗಿದೇವ | ೧೪೩೦ | |
| ೨೦ | *ವೀರಶೈವಾಮೃತ ಪುರಾಣ | ಗುಬ್ಬಿಯ ಮಲ್ಲಣಾರ್ಯ | ೧೫೧೩ | |
| ೨೧ | ವೈಷ್ಣವವಾದ ಖಂಡನ | ನಂಜನಾಥಾಚಾರ್ಯ | ೧೫೦೦ | |
| ೨೨ | ಶಿವಶರಣರ ವಚನಗಳು | | | ಶೂನ್ಯಸಂಪಾದನೆ ಗಳು(೫?) |
| ೨೩ | ಶಿವಯೋಗ ರತ್ನಾಕರ | ಹುಬ್ಬಳ್ಳಿಯ ಸಂಗಯ್ಯ | ೧೭೦೦ | |
| ೨೪ | *ಶಿವತತ್ವ ಚಿಂತಾಮಣಿ | | | |
| ೨೫ | *ಶಿವಾಧವ ಶತಕ | ಮಗ್ಗೆಯ ಮಾಯಿದೇವ | ೧೪೩೦ | |
| ೨೬ | *ಷಡಕ್ಷರ ಕಂದ | ಕೊಂಡಗೊಳಿ ಕೇಶಿರಾಜ | | |
| ೨೭ | *ಷಟ್‌ಸ್ಥಲ ಜ್ಞಾನ ಸಾರಾಮೃತ | ತೋಂಟದ ಸಿದ್ದಲಿಂಗಯತಿ | ೧೪೭೦ | |
| ೨೮ | ಷಟ್‌ಸ್ಥಲತಿಲಕ | ಸಿದ್ಧರಾಮ ಯೋಗಿ | ೧೬೫೬ | |
| ೨೯ | ಷಟ್‌ಸ್ಥಲ ಸಿದ್ಧಾಂತಸಾರ | ಮೈಲಾರ ಬಸವಲಿಂಗ | | |
| ೩೦ | *ಸ್ವತಂತ್ರ ಸಿದ್ಧಲಿಂಗೇಶ್ವರ ವಚನ | ಸ್ವತಂತ್ರ ಸಿದ್ಧಲಿಂಗೇಶ್ವರ | ೧೪೮೦ | |

## III ವೈದಿಕ

| | | | | |
|---|---|---|---|---|
| ೧ | *ಅನುಭವಸಾರ | ನಿಜಗುಣ ಶಿವಯೋಗಿ | ೧೫೦೦ | (?) |
| ೨ | *ಅನುಭವಾಮೃತ | ರಂಗನಾಥ(ಮಹಲಿಂಗರಂಗ) | ೧೬೭೫ | |
| ೩ | *ಅನುಭವರಸಾಯನ | ಶಾಲ್ಯದ ಕೃಷ್ಣರಾಜ | ೧೧೭೫ | |
| ೪ | ಅಖಂಡಾನಂದ ಸ್ವರೂಪ | ವೆಂಕಟದಾಸ | ೧೭೫೦ | |
| ೫ | ಅರ್ಥ ಪಂಚಕ (ಅನುವಾದ) | ಚಿಕ್ಕುಪಾಧ್ಯಾಯ | ೧೬೭೨ | |
| ೬ | *ಕನ್ನಡ ಪಂಚೀಕರಣ ವೇದಾಂತ | ನಿರ್ವಾಣ ಶಿವಯೋಗಿ | ೧೮೯೩ | |
| ೭ | *ಕೈವಲ್ಯ ಪದ್ಧತಿ | ನಿಜಗುಣ ಶಿವಯೋಗಿ | ೧೫೦೦ | (?) |
| ೮ | *ಕೈವಲ್ಯಾನ್ವಯಸಾರ | ಅವಧೂತ ಶಿವಯೋಗಿ | ೧೭೫೦ | |
| ೯ | ಗಾಯತ್ರ್ಯ ಬೋಧಿನಿ | ಉ.ಮಂಗೀಶಯ್ಯ | ೧೮೬೫ | ಕಲ್ಲಚ್ಚು |

| | | | | |
|---|---|---|---|---|
| ೪೭ | *ಹಿಂದೂಧರ್ಮ ಶಾಸ್ತ್ರವು | ಚಿನ್ನಮುಳಗುಂದ ಹಣಮಂತ ವೆಂಕಟೇಶ | ೧೮೯೬ | |
| ೪೮ | ಜ್ಞಾನಸಿಂಧು | ಚಿದಾನಂದಾವಧೂತ | ೧೭೫೦ | |

**೧೫. ನೀತಿಶಾಸ್ತ್ರ**

| | | | | |
|---|---|---|---|---|
| ೧ | *ಅರ್ಧೇಂದು ಮೌಳಿಶತಕ | ಗುಮ್ಮಟಾರ್ಯ | ೧೫೦೦ | |
| ೨ | ಅನುಭವ ಶತಕ | ಶಾಂತವೃಷಭೇಶ | ೧೭೦೦ | |
| ೩ | *ಅಪರಾಜಿತೇಶ್ವರ ಶತಕ ಮತ್ತು ಹಾಡುಗಳು; ರತ್ನಾಕರಾಧೀಶ್ವರ ಶತಕ | ರತ್ನಾಕರವರ್ಣಿ | ೧೫೫೭ | |
| ೪ | *ಕಾಮಂದಕ ನೀತಿ | ಚಿಕ್ಕುಪಧ್ಯಾಯ ೧೬೭೨ | | |
| ೫ | *ಚಿನ್ಮಯ ಚಿಂತಾಮಣಿ | ಸಿಂಹರಾಜ | ೧೬೫೦ | |
| ೬ | ನೀತಿ ಕಂದಗಳು | ಬೊಪ್ಪಣ ಪಂಡಿತ | ೧೧೮೦ | |
| ೭ | ನೀತಿ ಬೋಧಕ ಪದ್ಯಗಳು | ಬಿರುದುಗಳುಳ್ಳ ಕೆಲವು ಕವಿಗಳು | ೧೫೦೦ | |
| ೮ | ನೀತಿ ರಸಾಯನ ಶತಕ | | ೧೫೦೦ | |
| ೯ | *ನೀತಿ ಸಾರ | ಜ್ಞಾನೇಶ್ವರ ಪಂಡಿತ | ೧೮೯೫ | |
| ೧೦ | *ನೀತಿ ಮಂಜರಿ | ಆರ್.ನರಸಿಂಹಾಚಾರ್ | ೧೮೯೬ | ತಮಿಳು, ಇತಿಹಾಸ, ಪುರಾಣಗಳಿಗೆ ಆಯ್ದವು |
| ೧೧ | *ನೀತಿ ವಾಕ್ಯ ಮಂಜರಿ | ಆರ್.ನರಸಿಂಹಾಚಾರ್ | ೧೮೮೭ | |
| ೧೨ | ನೀತಿ ವಾಕ್ಯಾಮೃತಕ್ಕೆ ಟೀಕೆ (ಟೀಕೆ–ನೇಮನಾಥ) | ಸೋಮದೇವ ೧೧೦೦ | ಹಸ್ತಪ್ರತಿ | |
| ೧೩ | ಪಾರ್ವತೀವಲ್ಲಭ ಶತಕ ಮುಂತಾದ ಕೆಲವು ಶತಕಗಳು | ವೀರಭದ್ರರಾಜ | ೧೫೩೦ | |
| ೧೪ | ಮರಣ ಮಣಿದರ್ಪಣ ಶತಕ | ಶಾಂತಾಚಾರ್ಯ | ೧೭೦೦ | |
| ೧೫ | ಶೀಲ ಸಂಪಾದನೆ | ಪಾಲ್ಕುರಿಕೆ ಸೋಮ | ? | |
| ೧೬ | *ಸರ್ವಜ್ಞನ ವಚನಗಳು (ನೀತಿಪದ ಪದ್ಯಗಳು) | ಸರ್ವಜ್ಞ | ೧೬೦೦? | |
| ೧೭ | *ಸಿದ್ಧ–ನೀತಿ | ಸಿದ್ದಪ್ಪ | ೧೭೦೦ | |
| ೧೮ | ಸುವಿಚಾರ ಚರಿತೆ | ನೇಮಿವ್ರತಿ | ೧೬೫೦ | |

| | | | | |
|---|---|---|---|---|
| ೩೧ | ಅದೇ (ಮಧ್ವಭಾಷ್ಯಾನುಸಾರ) | ನೈರಕ್ಷರಕುಕ್ಷಿ | ೧೭೫೦ | |
| ೩೨ | *ಭಗವದ್ಗೀತಾ | ಚಾರ್ಲ್ಸ್ ವಿಲ್ಸನ್ ಗ್ಯಾರೇಟ್ ಜಾನ್ | ೧೮೪೬–೪೮ | |
| ೩೩a | *ಬ್ರಹ್ಮಾನಂದ ಬೋಧೆ | ಮೈಸೂರು ವೇದಾಂತ ಶಿವರಾಮ ಶಾಸ್ತ್ರಿಗಳು | | |
| ೩೩ | ಬಿನ್ನಪ (ವಿಶಿಷ್ಟಾದ್ವೈತ) | ಚಿಕ್ಕದೇವರಾಜ | ೧೬೭೨–೧೭೦೪ ಗದ್ಯಪದ್ಯ | |
| ೩೪ | ಮಹೀಪತಿ ದಾಸರ ಕೀರ್ತನೆಗಳು | ಮಹೀಪತಿದಾಸ | ಸು.೧೬೧೦–೮೦ | |
| ೩೫ | ಮನಸ್ಮೃತಿಯು | ಅನುವಾದ (ಟೀಕೆಯೊಡನೆ) ಭಾಗವತ ಕೃಷ್ಣಾಜಿ ಬಿಷ್ಟೋ | | ೧೮೮೪ |
| ೩೬ | ಯಜುರ್ವೇದ ಭಾಷ್ಯಕ್ಕೆ ಟೀಕೆ | ಗುರುನಂಜ | ೧೫೦೦ | |
| ೩೭ | *ವಿವೇಕಾಭರಣ | ಶಾಲ್ಯದ ಕೃಷ್ಣರಾಜ | ೧೭೭೫ | |
| ೩೮ | ವೇದಾಂತ ವಿವೇಕಸಾರ | ವಾಸುದೇವಾರ್ಯ | ೧೭೫೦ | ವಾಸುದೇವಯತಿ ಕೃತ ಸಂಸ್ಕೃತ ಗ್ರಂಥದ ಕನ್ನಡ ಅನುವಾದ |
| ೩೯ | *ವೇದಾಂತ ಮುಕ್ತಿಮಾರ್ಗ | ಮೈಸೂರು–ವೇದಾಂತ ಶಿವರಾಮ ಶಾಸ್ತ್ರಿಗಳು | ? | |
| ೪೦ | *ಶಂಕರಾನಂದ ತತ್ತ್ವ | | ? | |
| ೪೧ | ಶ್ರೀ ವಾಸುದೇವ ಮನನ | ದೊಡ್ಡ ಬೆಲೆ ನಾರಾಯಣ ಶಾಸ್ತ್ರಿ | ೧೮೯೭ | |
| ೪೨ | ಸದಾಶಿವ ಶತಕ | ಶಾಲ್ಯದ ಕೃಷ್ಣರಾಜ | ೧೭೭೫ | |
| ೪೩ | ಸಾತ್ವಿಕ ಬ್ರಹ್ಮ ವಿದ್ಯಾವಿಲಾಸ | ಚಿಕ್ಕುಪಾಧ್ಯಾಯ | ೧೬೭೨ | |
| ೪೪ | ಸಾತ್ವಿಕ ಬ್ರಹ್ಮ ವಿದ್ಯಾವಿಲಾಸ | ರಂಗರಾಜ | ೧೬೫೦ | ಅನುವಾದ (ಗದ್ಯ) |
| ೪೫ | *ಹದಿಬದೆಯ ಧರ್ಮ | ಹೊನ್ನಮ್ಮ | | ೧೬೮೦(ಸು) |
| ೪೬ | *ಹರಿಕಥಾಮೃತಸಾರ (ಹರಿಸ್ತುತಿ ದ್ವೈತ ವೇದಾಂತ ಬೋಧಕ) | ಜಗನ್ನಾಥ ದಾಸ | | |

# ಉದಯಾದಿತ್ಯಾಲಂಕಾರ :

## ಪೀಠಿಕೆ

### ೧
### ಕವಿಕಾವ್ಯ ವಿಚಾರ : ಮೊದಲ ಮಾತು

ಉದಯಾದಿತ್ಯಕೃತವೆಂದು ಪ್ರಸಿದ್ಧವಾಗಿರುವ 'ಉದಯಾದಿತ್ಯಾಲಂಕಾರ' ಒಂದು ಚಿಕ್ಕ ಅಲಂಕಾರ ಗ್ರಂಥ. ಇದರಲ್ಲಿ ೭೬ ಪದ್ಯಗಳಿವೆ.[೧] ಇದು ಸ್ವತಂತ್ರ ಕೃತಿಯೂ ಅಲ್ಲ, ನೃಪತುಂಗ ರಚಿತ ಎಂದು ಪ್ರಸಿದ್ಧವಾಗಿರುವ ಕವಿರಾಜಮಾರ್ಗ (ಕ್ರಿ.ಶ. ಸು. ೮೬೦) ಹಾಗೂ (ಎರಡನೆಯ) ನಾಗವರ್ಮಕೃತ ಕಾವ್ಯಾವಲೋಕನ (ಸು. ೧೧೫೦) ಇವುಗಳಲ್ಲಿ ಕಂಡುಬರುವ ವಿಷಯ ವಿಸ್ತಾರವಾಗಲಿ ಸ್ವತಂತ್ರ ದೃಷ್ಟಿಯಾಗಲಿ ಇದರಲ್ಲಿ ಗೋಚರವಾಗುವುದೂ ಇಲ್ಲ. "ಕಿಱಿದಱಿಂ ತಿಳಿಪಿದಪೆಂ ಶ್ರೀಭರಿತ ಬಾಲಕರ್ ಕವಿತಾಭಣಿತೆಯೊಳ್ ಅಮರ್ದುರ್ ನಿಮಿರ್ದುರ್ ನೆಱೆಮೆಱೆವಿನೆಗಂ" ಎಂಬ ಕವಿಯ ಮಾತನ್ನು ಗಮನಿಸಿದರೆ, ಕಾವ್ಯಾಭ್ಯಾಸಿಗಳಿಗೆ ಇದು ಪ್ರಥಮ ಪಾಠ ಪುಸ್ತಕವಾಗಿ ಉಪಯೋಗಕ್ಕೆ ಬರಲೆಂಬುದು ಆತನ ಆಶಯವಿದ್ದಂತೆ ಕಂಡುಬರುತ್ತದೆ. ಅವನ ಆಶಯ ಬಹುಮಟ್ಟಿಗೆ ನೆರವೇರಿದೆಯೆಂದು ಧಾರಾಳವಾಗಿ ಹೇಳಬಹುದು.

ಉದಯಾದಿತ್ಯಾಲಂಕಾರವನ್ನು ಸಂಪಾದನೆಮಾಡಿ 'ಕರ್ಣಾಟಕ ಕಾವ್ಯಮಂಜರಿ'ಯಲ್ಲಿ ಮೊತ್ತ ಮೊದಲು (೧೮೯೪ರಲ್ಲಿ) ಪ್ರಕಟಿಸಿದ ಸಂಪಾದಕದ್ವಯರಾದ ಎಸ್.ಜಿ ನರಸಿಂಹಾಚಾರ್ಯರೂ ಮಂ. ಆ. ರಾಮಾನುಜಯ್ಯಂಗಾರ್ಯರೂ ಕವಿ ಕಾವ್ಯ ವಿಚಾರವನ್ನು ಕುರಿತು ಕೇವಲ

---

೧. ೬೧, ೬೩, ೬೫, ೬೬– ಈ ನಾಲ್ಕು ಪದ್ಯಗಳು ಪ್ರಕ್ಷಿಪ್ತಗಳೆಂದು ಊಹಿಸಲವಕಾಶವಿದೆ. (ನೋಡಿ : ೬೧ನೆಯ ಪದ್ಯಸಂಬಂಧವಾದ ವಿಶೇಷ ಅಡಿಟಿಪ್ಪಣಿ ಮತ್ತು ಈ ನಾಲ್ಕು ಪದ್ಯಗಳ ಟಿಪ್ಪಣಿಗಳು.) ಆ ಪಕ್ಷದಲ್ಲಿ ಪದ್ಯ ಸಂಖ್ಯೆ ೭೨ ಮಾತ್ರ. [ದಿವಂಗತ ಆರ್. ನರಸಿಂಹಾಚಾರ್ಯರು ಪದ್ಯಗಳ ಸಂಖ್ಯೆ ೭೨ ಎಂದೇ ಅಂಗೀಕರಿಸಿದ್ದಾರೆ. ನೋಡಿ : 'ಕಾವ್ಯಾವಲೋಕನ'ದ ಪೀಠಿಕೆ, ಪು. xxx (ತೃತೀಯ ಮುದ್ರಣ, ೧೯೬೭)

| | | | |
|---|---|---|---|
| ೧೯ *ಸೋಮೇಶ್ವರ ಶತಕ | ಪಾಲ್ಕುರಿಕೆ ಸೋಮ | ? | |

**೧೬. ಪತ್ರಿಕೋದ್ಯಮ ಶಾಸ್ತ್ರ**

| | | | |
|---|---|---|---|
| ೧ ಪತ್ರಿಕಾ ನಿಘಂಟು | ಸಂ. ಎಲ್.ಗುಂಡಪ್ಪ | ? | |
| ೨ ಪತ್ರಿಕೆಗಳ ಚರಿತ್ರೆ, ಕರ್ತವ್ಯ ಪ್ರಭಾವ | ಡಿ.ವಿ.ಜಿ. | ೧೯೨೮ (೧೮೮೯–೧೯೭೫) | |

**೧೭. ಶಿಲ್ಪ ಶಾಸ್ತ್ರ**

| | | | |
|---|---|---|---|
| ೧ ಶಿಲ್ಪ ಸಾರ | ಶಿಲ್ಪ ಸಿದ್ಧಾಂತಿ ಸಿದ್ಧಲಿಂಗಸ್ವಾಮಿ | ೧೯೪೮ | ಭಾಮಿನೀ ಷಟ್ಪದಿ |

೧೧೫೦ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ."[೩]

ಮೇಲ್ಕಂಡ ವಿವೇಚನೆಯಿಂದ ಹೊರಪಡುವ ಮುಖ್ಯ ತೀರ್ಮಾನಗಳಿವು: (೧) ಗ್ರಂಥಕರ್ತ ಉದಯಾದಿತ್ಯ ; (೨) ಅವನು ಚೋಳವಂಶದ ಸಾಮಂತರಾಜ; (೩) ಅವನ ಕಾಲ ಸು. ೧೧೫೦. ಗ್ರಂಥವನ್ನು ಸೂಕ್ಷ್ಮವಾಗಿ ಪರಿಶೀಲಿಸಿ, ಉಪಲಬ್ಧವಾದ ಹೊಸ ಆಧಾರ ಸಾಮಗ್ರಿಗಳ ಬೆಳಕಿನಲ್ಲಿ ಈ ತೀರ್ಮಾನಗಳನ್ನು ಪುನಃ ಪರಿಶೀಲನೆ ಮಾಡಿದ ಮೇಲೆ, ಅವು ಮಾರ್ಪಾಡು ಹೊಂದಬೇಕಾಗಿ ಕಂಡುಬಂದಿದೆ. ಈ ಕುರಿತಾದ ನಮ್ಮ ವಿಚಾರ ವಿಮರ್ಶೆಯನ್ನೂ ತೀರ್ಮಾನಗಳನ್ನೂ ಮುಂದೆ ನಿವೇದಿಸಿಕೊಳ್ಳಲಾಗಿದೆ.

## ೨

## ಕರ್ತೃತ್ವ

ಗ್ರಂಥದ ಕರ್ತೃ ಉದಯಾದಿತ್ಯ ಎಂಬುದಕ್ಕೆ ಪ್ರಬಲವಾದ ಬಾಹ್ಯ ಪ್ರಮಾಣಗಳಾವುವೂ ಇಲ್ಲ. ಸೂಕ್ತಿಸುಧಾರ್ಣವದಲ್ಲಿ ಉದಯಾದಿತ್ಯಾಲಂಕಾರದ ಪದ್ಯವೊಂದು ಉದ್ಧೃತವಾಗಿರುವ ಅಂಶ ಕಾಲನಿರ್ಣಯಕ್ಕೆ ಸಹಾಯಕವೇ ಹೊರತು, ಕರ್ತೃತ್ವ ನಿರ್ಣಯಕ್ಕಲ್ಲ. ಸಾಳ್ವನು (ಕ್ರಿ.ಶ. ೧೫೫೦) ತನ್ನ ರಸರತ್ನಾಕರದಲ್ಲಿ ಪರಸ್ಪರ ವಿರುದ್ಧ ರಸಗಳ ವಿಚಾರವನ್ನು ಹೇಳುವ ಸಂದರ್ಭದಲ್ಲಿ ಒದು ಪದ್ಯದ ಕೆಳಗೆ 'ಇದುದಯಾದಿತ್ಯನ ಮತಂ' ಎಂದಿದೆ. ರಸರತ್ನಾಕರದ ಸಂಪಾದಕರು ಪ್ರಸಕ್ತ ಪದ್ಯಕ್ಕೆ ಸಂಬಂಧಪಟ್ಟ ಅಡಿ ಟಿಪ್ಪಣಿಯಲ್ಲಿ– "ಇದು ಕವಿಕಾಮನ ಶೃಂಗಾರ ರತ್ನಾಕರದಲ್ಲಿದೆ. ಉದಯಾದಿತ್ಯನ ಅಲಂಕಾರದಲ್ಲಿ ವಿರೋಧ ರಸಗಳ ವಿಚಾರವೇ ಇಲ್ಲ. ಆದುದರಿಂದ 'ಇದು ಕವಿ ಕಾಮನ ಮತಂ' ಎಂದಿರಬೇಕು"– ಎಂದು ತಿದ್ದುಪಾಟನ್ನು ಸೂಚಿಸಿರುತ್ತಾರೆ.[೪]

ಅವರು ಅಭಿಪ್ರಾಯಪಟ್ಟಿರುವಂತೆ, ಬಹುಶಃ ರಸರತ್ನಾಕರದ ಹಸ್ತಪ್ರತಿಯಲ್ಲಿಯೆ ಪ್ರಮಾದವಶದಿಂದ ಈ ದೋಷ ಸಂಭವಿಸಿರಬೇಕು. ಉದಯಾದಿತ್ಯಾಲಂಕಾರವು ಉದಯಾದಿತ್ಯಕೃತ ಎಂಬ ತಪ್ಪು ತಿಳಿವಳಿಕೆಯಿಂದ ಉಂಟಾದ ಪ್ರತೀತಿಯಿದ್ದುದರಿಂದಲೇ ದೋಷ ಸಂಭವಿಸಿರುವುದು. ಇದು

---

೩. ಕವಿಚರಿತ್ರೆ, ಸಂ. I ಪು. ೧೫೯–೧೬೧.

೪. 'ರಸರತ್ನಾಕರ' : ಮದರಾಸು ವಿಶ್ವವಿದ್ಯಾನಿಲಯದ ಪ್ರಕಟನೆ, ೧೯೩೨; ಸಂಪಾದಕರು: ಎ. ವೆಂಕಟರಾವ್ ಮತ್ತು ಎಚ್. ಶೇಷಯ್ಯಂಗಾರ್ ; ಸೂತ್ರ ೬೮(ಎ), ಪು. ೪೯.

ಸಂಕ್ಷೇಪವಾದ ಪೀಠಿಕೆಯನ್ನು ಬರೆದಿದ್ದಾರೆ. ಇವರುಗಳು ಹೇಳಿರುವ ಸಂಗತಿಗಳನ್ನೇ ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತ್ರೆಯಲ್ಲಿ (ಸಂಪುಟ I, ೧೯೨೪ ; ಪು. ೧೫೯–೧೬೧) ಇನ್ನು ಸ್ವಲ್ಪ ವಿಸ್ತಾರವಾಗಿ ನಿರೂಪಣೆಮಾಡಿರುತ್ತಾರೆ. (ಈ ಗ್ರಂಥದ ಬಗೆಗೆ ಇತರ ವಿದ್ವಾಂಸರು ವಿಚಾರ ವಿಮರ್ಶೆ ಮಾಡಿರುವುದು ನಮ್ಮ ಗಮನಕ್ಕೆ ಬಂದಿಲ್ಲ; ಕವಿರಾಜಮಾರ್ಗ ಕಾವ್ಯಾವಲೋಕನಗಳಂತೆ ಇದು ಒಂದು ಪ್ರಮಾಣಗ್ರಂಥವಾಗಿಲ್ಲದಿರುವುದು ಇದಕ್ಕೆ ಕಾರಣವಾಗಿರಬಹುದು.) ಈ ಮೂವರು ಮಹನೀಯರ ತೀರ್ಮಾನಗಳನ್ನು ಹೀಗೆ ಸಂಗ್ರಹಿಸಬಹುದು:

ಗ್ರಂಥಕರ್ತೃ ಉದಯಾದಿತ್ಯ. "'ವಸುಧಾನಾಥನ ಸೋಮನಾಥನ ಸುತಂ ಚೋಳೋದಯಾದಿತ್ಯಂ', 'ಸೋಮಮಹೀಭೃನ್ನಂದನಂ' ಎಂದು ಹೇಳಿಕೊಂಡಿರುವುದರಿಂದ ಈತನು ಆವನೋ ಒಬ್ಬ ಸೋಮನಾಥನೆಂಬ ಚೋಳರಾಜನ ಮಗನೆಂದು[೨] ತಿಳಿಯುತ್ತದೆ." ಈತನು ಪಟ್ಟಾಭಿಷಿಕ್ತನಾಗಿ ಆಳುತ್ತಿದ್ದ ರಾಜ. ಈತನಿಗೆ ಕವಿರತ್ನ ಶೇಖರ, ಸಾಹಿತ್ಯವಿದ್ಯಾಧರ, ರಾಜಸುಕವಿರತ್ನಾಭರಣ, ಕವಿರಾಜಶೇಖರ, ಸಾಹಿತ್ಯ ರತ್ನಾಕರ ಎಂಬ ಬಿರುದುಗಳು ಇದ್ದುವು. ಈತನು ಒಂದು ಪದ್ಯದಲ್ಲಿ ಭೋಜನ ಹೆಸರನ್ನು ಸ್ಮರಿಸುವುದರಿಂದ ಭೋಜನ ಕಾಲಕ್ಕಿಂತ (ಕ್ರಿ.ಶ. ೯೯೭–೧೦೫೩) ಈಚಿನವನು. ಅಲ್ಲದೆ ಮಲ್ಲಿಕಾರ್ಜುನನು (ಸು. ೧೨೪೫) ಸೂಕ್ತಿಸುಧಾರ್ಣವದಲ್ಲಿ ಮಹಾಕಾವ್ಯದ ಹದಿನೆಂಟಂಗಗಳನ್ನು ಹೇಳುವ–

ಉದಧಿ ಪುರಾಧಿಪ ಸುತ ಮಂ ।
ತ್ರ ದೂತಗಮನಾಜಿ ವಿರಹ ಪರಿಣಯ ಸುರತ ॥
ರ್ತು ದಿನೇಶ ಚಂದ್ರ ಮಧು ಕುಭೃ ।
ದುದಕ ವನಸ್ಪತಿಯೆ ಕೃತಿಗೆ ಪದಿನೆಂಟಂಗಂ ॥ (ಪ. ೧೩)

ಎಂಬ ಪದ್ಯವನ್ನು ಈ ಕವಿಯ ಗ್ರಂಥದಿಂದ ಉದ್ಧರಿಸಿ ಬರೆದಿರುವುದರಿಂದ ಈತನು ೧೨೪೫ಕ್ಕೆ ಹಿಂದೆ ಇದ್ದನೆಂಬುದು ವ್ಯಕ್ತವಾಗುತ್ತದೆ. ಕರ್ಣಾಟಕ ದೇಶದಲ್ಲಿ ಚೋಳರ ಪ್ರಾಬಲ್ಯವು ೧೨ನೆಯ ಶತಮಾನಕ್ಕೆ ಹಿಂದೆಯೇ ಕ್ಷೀಣದೆಶೆಗೆ ಬಂದಂತೆ ಶಾಸನಗಳಿಂದ ತಿಳಿವುದರಿಂದ ಈತನು ಸ್ವತಂತ್ರ ರಾಜನಾಗಿದ್ದಿರಲಾರನು. ಆವ ದೊರೆಯಲ್ಲಿಯೋ ಸಾಮಂತ ರಾಜನಾಗಿದ್ದಿರಬೇಕು. ಇವನು ಸುಮಾರು

---

೨. ಚೋಳರ ಇತಿಹಾಸದಲ್ಲಿ ತಜ್ಞರಾದ ಪ್ರೊ. ಕೆ. ಎ. ನೀಲಕಂಠಶಾಸ್ತ್ರಿಗಳು ಬಹುಶಃ ಕವಿ ಚರಿತ್ರಕಾರರನ್ನೆ ಅನುಸರಿಸಿ ಹೀಗೆ ಬರೆದಿರುತ್ತಾರೆ : "Udayadityalankara (C. 1150) is a short work on Poetics based on Dandin's Kavyadarsa by a Cola prince after whom it is named." History of India, Part I (1963), P. 313.

ವಸುಧಾನಾಥನ ಸೋಮನಾಥನ ಸುತಂ ಚೋಳೋದಯಾದಿತ್ಯ ನಿಂ
ತುಸಿರ್ದಂ ಪೆಟ್ಟಿಪನಿನ್ನಲಂಕೃತಿಗಳಂ ಸಾಹಿತ್ಯರತ್ನಾಕರಂ. (ಪ. ೨೪)

ಇಲ್ಲಿ ಸೋಮನಾಥನ ಮಗನಾದ ಚೋಳೋದಯಾದಿತ್ಯನು ಗ್ರಂಥದ ಕರ್ತೃ ಎಂದು ಊಹಿಸಲು ಅವಕಾಶವಿದೆ. ಹಲವಾರು ಪದ್ಯಗಳಲ್ಲಿ ಬರುವ ಉದಯಾದಿತ್ಯ, ಉದಯ ನರೇಶ್ವರ, ಉದಯಕ್ಷಿತೀಶ, ಉದೆಗ, ಉದೆಗನೃಪ, ಭೂಮಂಡಲಾಧೀಶನಪ್ಪುದಯಾದಿತ್ಯ ಎಂಬಿವೇ ಮುಂತಾದ ಉಲ್ಲೇಖಗಳು ಉದಯಾದಿತ್ಯನೂ ರಾಜನಾಗಿದ್ದಿರಬೇಕೆಂಬ ಅಂಶವನ್ನು ಖಚಿಯಪಡಿಸುತ್ತವೆ. ಆದರೆ ಉದಯಾದಿತ್ಯನ ಹೆಸರು ಬೇರೆ ಬೇರೆ ರೂಪಗಳಲ್ಲಿ ಉಲ್ಲೇಖಗೊಂಡಿರುವ ಕೆಲವು ಪದ್ಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಕರ್ತೃ ಉದಯಾದಿತ್ಯನಾಗಿರದೆ ಬೇರೊಬ್ಬ ಕವಿ ಎಂಬ ಅನುಮಾನಕ್ಕೂ ಅವಕಾಶವಿದೆ. ಇಂಥ ಅನುಮಾನಕ್ಕೆ ಆಸ್ಪದಕೊಡುವ ಪದ್ಯಖಂಡಗಳಲ್ಲಿ ಕೆಲವನ್ನು ಕೆಳಗೆ ಉದ್ಧರಿಸಿದೆ:

೧. ನಿನ್ನುದಯದಿಂದಂ, ಉದಯಧರಿತ್ರೀಕಾಂತ,
ದಿನಕಾಂತಕುಲ, ಕೇಳ್, ಈ ಲೋಕಮೆ ಕೃತಾರ್ಥಂ – ಪ. ೨೨

೨. ಬಡತನಮಂ ಬಿದಿ ಬುಧರೊಳ್ ಪಡೆದಂ ;
[ಪೊರೆದವರ]ನುದೆಗ ನೀನವರೆಡರಂ
ಕೆಡಿಸಲುದಯಿಸಿದೆ. – ಪ. ೩೫

೩. ಸರಿ ವಿತರಣಗುಣದೊಳ್ ಸುರತರುವುಂ ನೀನುಂ;
ವಿವೇಕಿ ನೀನ್, ಉದಯನರೇಶ್ವರ. – ಪ. ೩೭

೪. ಸವಿಶೇಷವಚನಮತಿಶಯಂ–ಅವಧರಿಸು,
ಉದಯಕ್ಷಿತೀಶ. – ಪ. ೪೦

೫. ಪ್ರಿಯವಚನಂ ಪ್ರೇಯಂ ; ಮತ್ಪ್ರಿಯಮಿನ್ನೊಂದುಂಟೆ?
ಕಾವ್ಯಕನ್ನೆಗೆ ನಿನ್ನಂ ಪ್ರಿಯನಂ ಪಡೆದಂ
ರಾಜಾನ್ವಯದೊಳಗೆಲೆ ರಾಜಸುಕವಿರತ್ನಾಭರಣಾ. – ಪ. ೪೬

೬. ಸೇವ್ಯಮಾ ಮರುನ್ನದಿಯಂ, ಉದೆಗ
ನಿನ್ನಯ ಸಿರಿಯುಂ, – ಪ. ೫೬

೭. ಉದೆಗ, ನಿನ್ನಂ ಪೊರೆಗಿಂತಾ
ಶಿವನಾ ದಾನವರಿಪುವಾ ಶತದಳಗರ್ಭರ್, – ಪ. ೬೭

೮. ಒದವಿದ ಮುಂಜನ ಭೋಜನ
ವಿದಿತ ಶ್ರೀಹರ್ಷನುದಯ ಮತ್ಕೃತಿಯೊಳ್ ತ–

ಹೇಗಾದರೂ ಇರಲಿ; ಈ ಅಂಶ ಕರ್ತೃತ್ವ ಸ್ಥಾಪನೆಗೆ ಆಧಾರವಾಗಲಾರದು. ನಮಗೆ ತಿಳಿದುಬಂದಿರುವಮಟ್ಟಿಗೆ ಉದಯಾದಿತ್ಯನನ್ನಾಗಲಿ ಅವನ ಅಲಂಕಾರ ಗ್ರಂಥವನ್ನಾಗಲಿ ಬೇರೆ ಯಾವ ಕವಿಯೂ ಸ್ಮರಿಸಿಲ್ಲ.

ಕರ್ತೃತ್ವ ನಿಷ್ಕರ್ಷೆಗೆ ಇನ್ನು ಉಳಿದಿರುವ ಪ್ರಮಾಣವೆಂದರೆ, ಆಂತರಿಕ ಪ್ರಮಾಣ.

**ಗ್ರಂಥದ ಹೆಸರು :** 'ಉದಯಾದಿತ್ಯಾಲಂಕಾರಂ' ಎಂಬ ಗ್ರಂಥನಾಮವೇನೋ ಕರ್ತೃವಿನ ಹೆಸರಿನ ಬಾವುಟವನ್ನು ಎತ್ತಿ ಹಿಡಿದಿದೆ. ವಿರುದ್ಧ ಸಾಕ್ಷ್ಯಗಳ ಮುಂದೆ ಇದು ಪ್ರಮಾಣವಾಗಿ ನಿಲ್ಲಲಾರದು. ಆಶ್ರಯದಾತರಾಜನ ಹೆಸರನ್ನು ಅಲಂಕಾರ ಗ್ರಂಥ ನಾಮಕ್ಕೆ ಜೋಡಿಸುವುದು ಒಂದು ಕವಿ ಸಂಪ್ರದಾಯ.[೫] ಅಲ್ಲದೆ, ಗ್ರಂಥದಲ್ಲಿ– ಯಾವ ಒಂದು ಪದ್ಯದಲ್ಲಿಯೂ–ಗ್ರಂಥದ ಹೆಸರು ಉಕ್ತವಾಗಿಲ್ಲ, 'ಉದಯಾದಿತ್ಯಾಲಂಕಾರ' ಎಂಬ ಹೆಸರು ಕವಿ ಇಟ್ಟದ್ದೋ ಪ್ರತಿಕಾರರು ಕೊಟ್ಟದ್ದೋ ಹೇಳುವುದು ಕಷ್ಟ.[೬] ಹೀಗಿರುವುದರಿಂದ, ಗ್ರಂಥನಾಮದ ಆಧಾರ ಕರ್ತೃತ್ವಕ್ಕೆ ಒಂದು ಪ್ರಮಾಣವೆನಿಸಲಾರದು.

ಇನ್ನು ಉಳಿದಿರುವ ಏಕೈಕ ಆಂತರಿಕ ಪ್ರಮಾಣವನ್ನು ಪರಿಶೀಲಿಸಬಹುದು:

ಗ್ರಂಥಕರ್ತ ಉದಯಾದಿತ್ಯ ಎಂಬ ಅನುಮಾನಕ್ಕೆ ಎಡೆಗೊಡುವ ಪದ್ಯ ಹೀಗಿದೆ–

ಎಸೆವೀ ಕಾವ್ಯ ಶರೀರಮಂ ಪೊಸಯಿಸಿರ್ದಷ್ಟಾದಶಾಂಗಂಗಳಂ
ರಸರೀತಿಕ್ರಮದಿಂದಮೊಂದಿದ ದಶಪ್ರಾಣಂಗಳೊಂ[ದಂ]ದಮಂ

---

೫. ಹೋಲಿಸಿ : ೧. ವಿದ್ಯಾನಾಥನ 'ಪ್ರತಾಪರುದ್ರಯಶೋಭೂಷಣ' (ಅಥವಾ, 'ಪ್ರತಾಪರುದ್ರೀಯ', ಕಾಕತೀಯರಾಜ ೨ನೆಯ ಪ್ರತಾಪರುದ್ರದೇವನಿಗೆ ಅಂಕಿತಮಾಡಿದ್ದು (ಕ್ರಿ.ಶ. ೧೨೯೫–೧೩೨೬). ೨. ತಿರುಮಲಾರ್ಯನ (ಕ್ರಿ.ಶ. ೧೬೪೫–೧೭೦೬) 'ಅಪ್ರತಿಮವೀರಚರಿತ', ೩. ಲಿಂಗರಾಜನ (ಕ್ರಿ.ಶ. ೧೮೩೩–೧೮೭೪) 'ನರಪತಿವಿಜಯ'. ಈ ಸಂಪ್ರದಾಯದಲ್ಲಿ 'ಉದಯಾದಿತ್ಯಾಲಂಕಾರ'ವೇ ಆದ್ಯಗ್ರಂಥವಾಗಿ ಕಂಡುಬರುತ್ತದೆ ; ಇದು ಗಮನಾರ್ಹ.

೬. 'ಅ' ಪ್ರತಿಯಲ್ಲಿ, ಗ್ರಂಥಾದಿಯಲ್ಲಿ– 'ಶ್ರೀ ಗುರು ನಿರಂಜನ ಲಿಂಗಾಯನಮಃ' ಎಂಬ ಮಾತುಗಳಾದ ಮೇಲೆ, 'ಉದಯಾದಿತ್ಯ॥' ಎಂದಿಷ್ಟೇ ಲಿಖಿತವಾಗಿದೆ. 'ಇ' ಪ್ರತಿಯಲ್ಲಿ 'ಉದಯಾದಿತ್ಯನ ಅಲಂಕಾರ' ಎಂದಿದೆ. 'ಉ' ಕಾಗದದ ಪ್ರತಿಯಲ್ಲಿ, ಗ್ರಂಥದ ಕೊನೆಯಲ್ಲಿ Udayadityalankara ಎಂಬ ಲೇಖವಿದೆ. 'ಅ–ಇ' ಓಲೆಯ ಪ್ರತಿಗಳ ಗ್ರಂಥಾಂತ್ಯದಲ್ಲಿ 'ಉದಯಾದಿತ್ಯಾಲಂಕಾರ ಮಂಗಳಮಹಾಶ್ರೀ' ಎಂದು ಉಕ್ತವಾಗಿದೆ. ಈ ಬರಹಗಳಲ್ಲಿ ಯಾವುದಕ್ಕೇ ಆಗಲಿ ಕವಿಲಿಖಿತ ಮೂಲವಾಗಿದೆ ಎಂದು ಖಚಿತವಾಗಿ ಹೇಳುವುದು ಸಾಧ್ಯವಿಲ್ಲ.

ಭೋಜನ ಶ್ರೀಹರ್ಷನ ಉದಯ 'ಮತ್ಕೃತಿಯೊಳ್' (ನನ್ನ ಕೃತಿಯಲ್ಲಿ) ಸೇರಿ, ಆ ಉದಯವು (ನನ್ನ ಕೃತಿಯನ್ನು) ಅಲಂಕರಿಸುವುದರಿಂದ ಉದಯನೃಪನು ರಾಜಸುಕವಿರತ್ನಾಭರಣ'' ಎಂದು ಕವಿ ಚಮತ್ಕಾರವಾಗಿ 'ಉದಯ' ಶಬ್ದಾರ್ಥನಿರ್ವಚನ ಮಾಡಿರುವನಲ್ಲದೆ, 'ರಾಜಸುಕವಿರತ್ನಾಭರಣ' ಎಂಬ ವಿಶೇಷಣವನ್ನು ಧ್ವನಿಪೂರ್ಣವಾಗಿ ಆಶ್ರಯದಾತ–ಆಶ್ರಿತರಿಬ್ಬರಿಗೂ ಅನ್ವಯಿಸುವಂತೆ ಬಳಸಿದ್ದಾನೆ. 'ರಾಜಸುಕವಿರತ್ನಾಭರಣ' ಎಂಬುದು ಉದಯನ ಬಿರುದೂ ಹೌದು; ಕವಿ ತನ್ನ ಅಗ್ಗಳಿಕೆಯನ್ನು ಸೂಚಿಸುವ ಉಕ್ತಿಪ್ರಕಾರವೂ ಹೌದು. ಈ ಮಾತಿಗೆ "'ರಾಜಸುಕವಿ'ಯಾದ ತನ್ನನ್ನು 'ರತ್ನಾಭರಣ'ವಾಗಿ ಉಳ್ಳವನು'' ಎಂದು ಅರ್ಥಮಾಡದಿದ್ದರೆ, "ಮತ್ಕೃತಿಯೊಳ್.... ಅಲಂಕಱಿಂ'' ಎಂಬ ಹೇತೂಕ್ತಿಗೆ ಸಾರ್ಥಕ್ಯ ಕಲ್ಪಿತವಾಗುವುದಿಲ್ಲ. ಗ್ರಂಥವನ್ನು ಪ್ರಭುವಿನ ಅಂಕಿತದಲ್ಲಿಯೇ ಬರೆಯಬೇಕೆಂಬುದು ಕವಿಯ ಉದ್ದೇಶವಾದ್ದರಿಂದ ತನ್ನ ಹೆಸರನ್ನು ಎಲ್ಲಿಯೂ ಹೇಳಿಕೊಂಡಿಲ್ಲ.

ಉದಯಾದಿತ್ಯಾಲಂಕಾರ ಗ್ರಂಥದ ಪ್ರಥಮ ಮುದ್ರಣದ ಸಂಪಾದಕರೂ ಕವಿಚರಿತ್ರಕಾರರೂ ತಿಳಿಸಿರುವಂತೆ ಉದಯಾದಿತ್ಯಾಲಂಕಾರದ ಕರ್ತೃ ಉದಯಾದಿತ್ಯನಲ್ಲ, ಅವನ ಆಶ್ರಿತ ಕವಿ,–ಎಂಬುದು ನಮ್ಮ ಖಚಿತ ಅಭಿಪ್ರಾಯ. ಈ ಕವಿ ಯಾರಾಗಿರಬಹುದು ಎಂಬ ಊಹಾ ಕಲ್ಪನೆಗೂ ಗ್ರಂಥದಲ್ಲಿ ಒಂದು ಸುಳಿವಿದೆ. ಇದನ್ನು ಈ ಮುಂದೆ ವಿಚಾರ ಮಾಡಿದೆ.

## ೩
## ಉದಯಾದಿತ್ಯಾಲಂಕಾರದ ಕವಿ

ಉದಯಾದಿತ್ಯಾಲಂಕಾರದ ಕೆಲವು ಪದ್ಯಗಳಲ್ಲಿ ಉದಯಾದಿತ್ಯಾ, ರಾಜಸುಕವಿ ರತ್ನಾಭರಣಾ, ಉದೆಗ, ಉದೆಗನೃಪ ಇತ್ಯಾದಿಯಾಗಿ ಉದಯಾದಿತ್ಯರಾಜನನ್ನು ಕುರಿತು ಅಲಂಕಾರ ವಿಚಾರವನ್ನು ವ್ಯಾವರ್ಣನೆಮಾಡಿದಂತೆ ಸಂಬೋಧನೋಕ್ತಿಯಿದ್ದರೂ, ಎರಡು ಪದ್ಯಗಳಲ್ಲಿ

---

೭. ಅಲಂಕಾರ ಗ್ರಂಥವನ್ನೂ 'ಕಾವ್ಯ' ಎಂದೇ ನಿರ್ದೇಶಿಸುವ ಪದ್ಧತಿಯುಂಟು, 'ಕವಿರಾಜ ಮಾರ್ಗ'ದಲ್ಲಿ ಶ್ರೀವಿಜಯನು 'ಕೂಡೆ ಪೇೞ್ದನ್ನುತ ಕಾವ್ಯಮಂ' (೩–೨೨೩) ಎಂದೂ ನಾಗವರ್ಮನು 'ಕಾವ್ಯಾವಲೋಕನ'ದ ಮಂಗಳ ಪದ್ಯದಲ್ಲಿ (ಪೀಠಿಕೆ, ಪ. ೧) 'ಶ್ರೀ ವರ್ಧಮಾನಂ........ ಆವಗಮೊಲ್ದಿಗೆ ಕಾವ್ಯದೊಳ್ ನಮಗಱಿಮಂ' ಎಂದೂ ತಮ್ಮ ಕೃತಿಗಳನ್ನು ಕುರಿತು ಹೇಳಿಕೊಂಡಿದ್ದಾರೆ.

[ಳು]ದಯಮಲಂಕರಿಪುದಜಿಂ
ದುದಯ ನೃಪಂ ರಾಜಸುಕವಿರತ್ನಾಭರಣಂ. – ಪ. ೭೫

ಮೇಲೆ ಉದ್ಧರಿಸಿರುವ ವೃತ್ತದಲ್ಲಿ ಉದಯಾದಿತ್ಯನೇ ಕರ್ತೃವಿರಬಹುದು ಎಂಬ ಸ್ಪಷ್ಟ ಸೂಚನೆಯಿದ್ದರೂ ಮುಂದಿನ ಪದ್ಯ ಪಂಕ್ತಿಗಳು ಕರ್ತೃ ಬೇರೆಯೇ ಇರಬೇಕೆಂದು ಅಷ್ಟೇ ಸ್ಪಷ್ಟವಾಗಿ ಸಾರುತ್ತಿವೆ. ಕವಿಗಳು ಸ್ವವಿಷಯವನ್ನು ಪ್ರಥಮ ಪುರುಷದಲ್ಲಿಯೂ ಉತ್ತಮ ಪುರುಷದಲ್ಲಿಯೂ ತಿಳಿಸುವ ಸಂಪ್ರದಾಯವುಂಟು. ಆದರೆ. ಮೇಲಿನ ಉಕ್ತಿಗಳಲ್ಲಿರುವಂತೆ, ಸಂಬೋಧನೆ ಹಾಗೂ ವಿಧ್ಯರ್ಥಗಳನ್ನುಳ್ಳ ಮಧ್ಯಮಪುರುಷ ಪ್ರಯೋಗವು ಸ್ವವಿಷಯ ನಿರೂಪಣೆಯಲ್ಲಿ ಸಂಭಾವ್ಯವೆನಿಸದು. ಈ ಮಧ್ಯಮಪುರುಷ ಪ್ರಯೋಗ–ಅದರಲ್ಲಿಯೂ ೭ನೆಯ (ಉದಾಹರಣ ವಾಕ್ಯದ) ಆಶೀರ್ವಚನ ರೂಪದ ಪ್ರಯೋಗ; ಒಂದೇ ಉಕ್ತಿಯಲ್ಲಿ ಆಶ್ರಯದಾತ ಉದಯಾದಿತ್ಯ ಸಂಬಂಧವಾದ ಮಧ್ಯಮಪುರುಷ ಪ್ರಯೋಗದೊಂದಿಗೆ (೫ನೆಯ ಉದಾಹರಣೆ) (ಇಲ್ಲವೆ, ಕಡೆಯ ಉದಾಹರಣೆಯಲ್ಲಿರುವಂತೆ ಪ್ರಥಮ ಪುರುಷದೊಂದಿಗೆ) ಸ್ವನಿಷ್ಠವಾದ ಉತ್ತಮಪುರುಷ ಪ್ರಯೋಗ–ಇವು ಕವಿ ಉದಯಾದಿತ್ಯನಾಗಿರದೆ ಬೇರೊಬ್ಬನಾಗಿರುವನೆಂಬ ಅಂಶವನ್ನು ಸ್ಪಷ್ಟಪಡಿಸುತ್ತವೆ. ಭಿನ್ನಪುರುಷಗಳ ಪ್ರಯೋಗಗಳಲ್ಲಿ ಅಡಕವಾಗಿರುವ ಪರಸ್ಪರ ವಿರೋಧವನ್ನು ಪರಿಹರಿಸುವುದಕ್ಕೆ ಒಂದೇ ದಾರಿ: ಆಶ್ರಯದಾತರಾಜನ ಆಶ್ರಯದಲ್ಲಿ ಆಶ್ರಿತನಾದ ಕವಿಯೊಬ್ಬನಿಂದ ಗ್ರಂಥ ರಚನೆಯಾಗಿದೆ ಎಂಬ ಸತ್ಯಶಿಶುವನ್ನು ಕೃತಿಗರ್ಭದಿಂದ ಹೊರತೆಗೆದು ಬದುಕಿಸುವುದು : ಉದಯಾದಿತ್ಯ ದೊರೆಯ ಆಶ್ರಯವನ್ನು ಪಡೆದ ಕವಿ ಆಶ್ರಯದಾತನ ಅಂಕಿತದಲ್ಲಿ ಕಾವ್ಯ ಬರೆಯುವ ಉದ್ದೇಶವನ್ನು ಹೊಂದಿದ್ದಾನೆ; ಉದಯಾದಿತ್ಯನೇ ಗ್ರಂಥಕರ್ತ ಎಂಬ ಅರ್ಥ ಬರುವಂತೆ–ಆಶ್ರಯದಾತನನ್ನು ಮೆಚ್ಚಿಸುವುದಕ್ಕಾಗಿ–ಒಂದು ಪದ್ಯವನ್ನೂ ರಚನೆಮಾಡಿದ್ದಾನೆ (ಪ. ೨೪). ಲಕ್ಷ್ಯ ಪದ್ಯಗಳಲ್ಲಿ ರಾಜ ಸೌಂದರ್ಯ, ಪರಾಕ್ರಮ, ಔದಾರ್ಯ ಮುಂತಾದ ಗುಣಗಣವನ್ನು ಪ್ರಶಂಸಿಸುವ ಅವಸರದಲ್ಲಿ, ಉದ್ದೇಶಪೂರ್ವಕವಾಗಿಯೋ ಅಥವಾ ತನ್ನ ಅರಿವಿಲ್ಲದೆಯೋ ತನ್ನ ಕರ್ತೃತ್ವದ ಸುಳಿವುಗೊಟ್ಟಿದ್ದಾನೆ. "ಮತ್ಪ್ರಿಯಮಿನ್ನೊಂದುಟೆ? ಕಾವ್ಯ ಕನ್ನೆಗೆ ನಿನ್ನಂ ಪ್ರಿಯನಂ ಪಡೆದೆಂ ರಾಜಾನ್ವಯದೊಳಗೆ" ಎಂಬ ಮಾತಿನಲ್ಲಿ ತನ್ನ ಕಾವ್ಯಕ್ಕೆ ಉದಯಾದಿತ್ಯನೇ ಸ್ವಾಮಿ, ಆಶ್ರಯದಾತ, ಎಂಬ ವಿಷಯವನ್ನು ಸ್ಪಷ್ಟಪಡಿಸಿದ್ದಾನೆ. (ಈ 'ಕಾವ್ಯಕನ್ಯೆ' ಈ ಅಲಂಕಾರ ಗ್ರಂಥವಾಗಿರಬಹುದು. ಇಲ್ಲವೆ ಬೇರೊಂದು ಕಾವ್ಯವೇ ಆಗಿರಬಹುದು.)[೬] ಮೇಲೆ ಉದ್ಧರಿಸಿರುವ ಕಡೆಯ ಉದಾಹರಣೆಯಲ್ಲಿ, "ಮುಂಜನ

ಪದ್ಯಗಳನ್ನು ಬಿಟ್ಟರೆ ಈ ಗ್ರಂಥದಲ್ಲಿ ಬೇರೆ ಯಾವ ಆಂತರ ಪ್ರಮಾಣವೂ ಇಲ್ಲ"ದಿರುವುದರಿಂದಲೂ ಈ ಎರಡು ಪದ್ಯಗಳೂ ಪ್ರಕ್ಷಿಪ್ತಗಳೆಂದು ಭಾವಿಸಲು ಅವಕಾಶವಿದೆ.[೧೦] ಅವು ಪ್ರಕ್ಷಿಪ್ತಗಳೇ ಆಗಿದ್ದರೆ, ಛಂದೋಂಬುಧಿಯ ಕಾಲ ಕ್ರಿ.ಶ. ೯೯೦ ಎಂಬ ಸಿದ್ಧಾಂತ ಆಧಾರರಹಿತವಾಗುತ್ತದೆ. ಆ ಸಂದರ್ಭದಲ್ಲಿ ಅನಿರ್ದಿಷ್ಟ ಕಾಲದಲ್ಲಿ ರಚಿತವಾದ ಛಂದೋಂಬುಧಿಯು ಕರ್ತೃವೇ ಉದಯಾದಿತ್ಯಾಲಂಕಾರವನ್ನೂ ರಚಿಸಿರುವನೆಂದು ಊಹಿಸುವುದಕ್ಕೆ ಕಾಲಸಂಬಂಧವಾದ ಪ್ರತಿಬಂಧಕವಿರುವುದಿಲ್ಲ. ಕಾದಂಬರಿಯನ್ನು ಬರೆದ ನಾಗವರ್ಮನೇ ಛಂದೋಂಬುಧಿಯನ್ನು ಬರೆದ ನಾಗವರ್ಮ ಎಂಬ ಅಭಿಪ್ರಾಯವನ್ನು ಕವಿಚರಿತ್ರಕಾರರು ಮೊದಲು ಹೊಂದಿದ್ದರು.[೧೧] ತರುವಾಯ, "ಧಾರಾಪುರದ ಭೋಜರಾಜನು ೧೦೧೦ರಲ್ಲಿ ಆಳುವುದಕ್ಕೆ ಆರಂಭಿಸಿದಂತೆ ತಿಳಿವುದರಿಂದ ಕಾದಂಬರಿಯನ್ನು ಬರೆದ ನಾಗವರ್ಮನು ಛಂದೋಂಬುಧಿಯನ್ನು ಬರೆದ ನಾಗವರ್ಮನಿಗಿಂತ ಬೇರೊಬ್ಬನಾಗಿರಬಹುದೋ ಎಂಬ ಸಂದೇಹಕ್ಕೆ ಅವಕಾಶವಿರುವಂತೆ ತೊರುತ್ತದೆ'' ಎಂದು ತಮ್ಮ ನಿಲುವನ್ನು ಮಾರ್ಪಡಿಸಿಕೊಂಡರು.[೧೨] ನಾವು ಊಹಿಸಿರುವಂತೆ, ಉದಯಾದಿತ್ಯಾಲಂಕಾರದ ಕರ್ತೃವೇ ಛಂದೋಂಬುಧಿಯ ಕರ್ತೃವೂ ಆಗಿದ್ದಾನೆ ಎಂದಿಟ್ಟುಕೊಳ್ಳುವುದಾದರೆ, ಕಾದಂಬರಿಯ ಕರ್ತೃ ಬೇರೆಯೇ ಆಗುತ್ತಾನೆ. ಏಕೆಂದರೆ, ಕಾದಂಬರಿಯ ಕರ್ತೃವಿನ ಆಶ್ರಯದಾತ 'ನರೇಂದ್ರಚಂದ್ರ' ಎಂದು ಊಹಿಸಬಹುದಾಗಿದೆ; ನಮ್ಮ ಊಹೆಯ ಪ್ರಕಾರ, ಉದಯಾದಿತ್ಯಾಲಂಕಾರ ಛಂದೋಂಬುಧಿಗಳ ಕರ್ತೃವಿನ ಆಶ್ರಯದಾತ ಉದಯಾದಿತ್ಯ. (ಛಂದೋಂಬುಧಿಯುನ್ನು ಅವನ ಆಶ್ರಯುದಲ್ಲಿ ಬರೆದಿಲ್ಲದಿರಬಹುದು.) ಈ ಚಂದ್ರನು "ಬನವಾಸಿಯ ನಾಗರಖಂಡವನ್ನು ಆಳುತ್ತಿದ್ದ ಸಾಮಂತಚಂದ್ರನೆಂದೂ ಕಾದಂಬರಿ ೧೦೧೪ರಲ್ಲಿ ಅಥವಾ ಅದಕ್ಕೆ ೨-೩ ವರುಷ ಹಿಂದೆ ಹುಟ್ಟಿದ್ದಿರಬೇಕೆಂದೂ ಶ್ರೀವಾನ್ ಎಚ್. ಚೆನ್ನಕೇಶವಯ್ಯಂಗಾರ‍್ಯರು ಅಭಿಪ್ರಾಯ ಪಟ್ಟಿರುತ್ತಾರೆ." (ಕರ್ಣಾಟಕ ಸಾಹಿತ್ಯ

೧೦. ಈ ವಿಚಾರದಲ್ಲಿ ನಿರ್ಣಾಯಕವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ. ಈ ವಿಷಯ ವಿಚಾರ ವಿಮರ್ಶೆಗೆ 'ಕಾದಂಬರೀ ಸಂಗ್ರಹಕ್ಕೆ ಪ್ರೊ॥ ಟಿ.ಎಸ್. ವೆಂಕಣ್ಣಯ್ಯನವರು ಬರೆದಿರುವ ವಿದ್ವತ್ಪೂರ್ಣವಾದ ಪೀಠಿಕೆಯನ್ನು ನೋಡಬಹುದು. (ಕಾದಂಬರೀ ಸಂಗ್ರಹ, ೩ನೆಯ ಮುದ್ರಣ, ೧೯೫೩; ಪೀಠಿಕೆ, ಪು. xi-xii). ಪದ್ಯಗಳು ಪ್ರಕ್ಷಿಪ್ತಗಳೆಂಬ ಕಡೆಗೇ ನಮ್ಮ ಒಲವಿದೆ.

೧೧. ಕವಿಚರಿತ್ರೆ, ಸಂ. I, ಪು. ೫೨-೫೪.

೧೨. ಕವಿಚರಿತ್ರೆ, ಸಂ. III, 'ಗ್ರಂಥಶುದ್ಧಿ', ಪು ೪೭೪.

(ಪ. ೪೭, ೪೮) **ಕೆಳದಿ, ಅಬ್ಜಲೋಚನೇ** ಎಂದು ತನ್ನ ಪ್ರಿಯೆಯನ್ನು ಕುರಿತು ಹೇಳಿದಂತೆಯೂ ಸಂಬೋಧನೆ ನುಸುಳಿದೆ. ಕೆಳದೀ, ಅಬ್ಜದಳನೇತ್ರೇ, ಅಂಬುಜವದನೇ ಮುಂತಾಗಿ ಕವಿ ಪತ್ನಿಯನ್ನು ಸಂಬೋಧಿಸಿ ಹೇಳಿರುವುದು ಛಂದೋಂಬುಧಿಯಲ್ಲಿ ಸರ್ವಸಾಮಾನ್ಯವಾಗಿ ಕಂಡುಬರುತ್ತದೆ. ಇದರಿಂದ, ಛಂದೋಂಬುಧಿಯನ್ನು ಬರೆದ ಕವಿಯೆ ಉದಯಾದಿತ್ಯಾಲಂಕಾರವನ್ನೂ ಬರೆದಿರಬಾರದೇಕೆ ಎಂಬ ಸಂದೇಹದ ಪ್ರಶ್ನೆ ಸಹಜವಾಗಿಯೆ ತಲೆದೋರುತ್ತದೆ. (ಛಂದೋಂಬುಧಿಯ ಮೇಲ್ಪಂಕ್ತಿಯನ್ನನುಸರಿಸಿ ಉದಯಾದಿತ್ಯಾಲಂಕಾರದ ಕವಿ ಹಾಗೆ ಬರೆದಿರಬಾರದೆ ಎಂಬ ಆಕ್ಷೇಪಕ್ಕೂ ಅವಕಾಶವಿಲ್ಲದಿಲ್ಲ. ಹಲವಾರು ಬಾರಿ ಉದಯಾದಿತ್ಯನನ್ನು ಸಂಭೋಧಿಸಿ ಹೇಳಿ, ಕೇವಲ ಎರಡು ಸಲ ಮಾತ್ರ ಪತ್ನಿಯನ್ನು ಸಂಭೋಧಿಸಿ ತನ್ನ ಪ್ರಭುವಿಗೆ ಅಪಚಾರವೆಸಗುವ ಅಚಾತುರ್ಯವನ್ನು ಕವಿ ಮಾಡಿರಲಾರನು. ಇದು ಅನ್ಯ ಕವಿಯ ಅನುಕರಣವಾಗಿರದೆ, ಅಭ್ಯಾಸಬಲದ ಪರಿಣಾಮವಾಗಿದೆ ಎಂದು ಈ ಆಕ್ಷೇಪಕ್ಕೆ ಸಮಾಧಾನ ಹೇಳಬಹುದು). ಆದರೆ, ಹೀಗೆ ಅನುಮಾನಿಸುವುದಕ್ಕೆ ಒಂದು ಪ್ರತಿಬಂಧಕವಿದೆ; ಅದು, ಛಂದೋಂಬುಧಿಯ ಕರ್ತೃ ನಾಗವರ್ಮ ಹಾಗೂ ಚೋಳೋದಯಾದಿತ್ಯ ಇವರ ಕಾಲಗಳಲ್ಲಿ ತೋರಿಬರುವ ವ್ಯತ್ಯಾಸ. ಉದಯಾದಿತ್ಯನು ಕಾಕತೀಯ ರಾಜ IIನೆಯ ಪ್ರೋಲನ ಸಮಕಾಲೀನ ಎಂದು ನಿರ್ಧರಿಸಬಹುದು. (ಇದನ್ನು ಮುಂದೆ ವಿಚಾರಮಾಡಿದೆ). ಪ್ರೋಲನ ಕಾಲ ಕ್ರಿ.ಶ.ಸು. ೧೧೧೭–೧೧೫೦. ಛಂದೋಂಬುಧಿಯ ಎರಡು ಪದ್ಯಗಳಲ್ಲಿ 'ಅರಸಂ ರಕ್ಕಸಗಂಗಂ,' 'ಗುರುಗಳ್ ನೆಗಟ್ದಜಿತಸೇನದೇವರ್', 'ಸಂಧಿವಿಗ್ರಹಿರಾಯಂ ಕೊಂಡಾಡಿ ಪೊರೆದಂ' ಎಂದು ನಾಗವರ್ಮನ ಕಾಲದ ದೊರೆ, ಅವನ ಗುರು ಮತ್ತು ಆಶ್ರಯದಾತ ಇವರ ಉಲ್ಲೇಖಗಳಿವೆ.[೮] ಈ ವ್ಯಕ್ತಿಗಳ ಕಾಲಗಳು ತಿಳಿದುಬಂದಿರುವುದರಿಂದ, ಛಂದೋಂಬುಧಿಯ ನಾಗವರ್ಮನ ಕಾಲವನ್ನು ಕ್ರಿ.ಶ.ಸು. ೯೯೦ ಎಂದು ಕವಿಚರಿತ್ರಕಾರರು ನಿರ್ಧರಿಸಿದ್ದಾರೆ.[೯] ಕಿಟ್ಟೆಲ್‌ರವರು ಪ್ರಪ್ರಥಮವಾಗಿ ಅಚ್ಚು ಹಾಕಿಸಿದ ಛಂದೋಂಬುಧಿಯಲ್ಲಿ ಈ ಎರಡು ಪದ್ಯಗಳು ಇಲ್ಲ. ಛಂದೋಂಬುಧಿಯಲ್ಲಿ ಅನೇಕ ಪ್ರಕ್ಷಿಪ್ತ ಪದ್ಯಗಳಿರುವುದರಿಂದಲೂ, "ಕವಿ ಜೈನನೆಂಬುದಕ್ಕೆ ಈ ಎರಡು

೮. ಛಂದೋಂಬುಧಿ : (ಸಂ. ವಿದ್ವಾನ್ ಎಚ್.ಎಸ್. ರಾಮಸ್ವಾಮಿ ಅಯ್ಯಂಗಾರ್, ಮದರಾಸು; ಪ್ರಕಾಶಕರು : ಶ್ರೀವತ್ಸ ಪ್ರೆಸ್, ಮದರಾಸು, ೧೯೪೬); ಪ್ರಥಮಾಧಿಕಾರಂ, ಪೀಠಿಕೆ, ಪ. ೨೭, ೨೮.

೯. ಕವಿಚರಿತ್ರೆ (೧೯೨೪), ಸಂ. I, ಪು. ೫೨.

ಪ್ರವರ್ಧಮಾನಕ್ಕೆ ಬಂದ ಕಾಲದಲ್ಲಿ ಚೋಳ ರಾಜ್ಯದ ಉತ್ತರ ಸೀಮೆಯ ಅನೇಕ ತೆಲುಗು ಮತ್ತು ಕರ್ಣಾಟಕ ರಾಜವಂಶಗಳು 'ಚೋಳ' (<ಚೋಡ>ಚೋೞ) ಎಂಬ ಪೂರ್ವನಾಮವನ್ನು (Prenomen) ಸೇರಿಸಿಕೊಳ್ಳುವುದು ಒಂದು ಪ್ರತಿಷ್ಠೆಯ ಸಂಪ್ರದಾಯವಾಗಿಯೆ ಪರಿಣಮಿಸಿದ್ದಂತೆ ಕಂಡುಬರುತ್ತದೆ.[೧೪] ಹೀಗಿರುವುದರಿಂದ, ಚೋಳೋದಯಾದಿತ್ಯ ಎಂಬ ಪ್ರತ್ಯೇಕ ಐತಿಹಾಸಿಕ ವ್ಯಕ್ತಿಯೊಬ್ಬನಿದ್ದನೇ ಎಂಬುದನ್ನು ತಿಳಿಯಬೇಕಾಗಿದೆ. ಈ ವಿಚಾರದಲ್ಲಿ ಕಾಕತೀಯ ರುದ್ರದೇವ (ಕ್ರಿ.ಶ.ಸು. ೧೧೫೦–೧೧೯೫) ಮತ್ತು ಅವನ ತಂದೆ ಪ್ರೋಲ (II) (ಕ್ರಿ.ಶ.ಸು. ೧೧೧೭–೧೧೫೦) ಇವರ ಕಾಲದ ಶಾಸನಗಳು ಸ್ವಲ್ಪ ಬೆಳಕು ಬೀರುತ್ತಿವೆ.

ಕಾಕತೀಯ ರುದ್ರದೇವನ ಅನಮಕೊಂಡ (ಹನುಮಕೊಂಡ) ಶಾಸನದಲ್ಲಿ ಒಬ್ಬ ಉದಯನ ಉಲ್ಲೇಖವಿದೆ. ಈ ಶಾಸನದ ಕಾಲ ಶಾಲಿವಾಹನ ಶಕೆ ೧೦೮೪ (ಕ್ರಿ.ಶ. ೧೧೬೨–೬೩).[೧೫] ಅನಮಕೊಂಡ ಶಾಸನದಲ್ಲಿ ನಮಗೆ

---

೧೪. "Both the Cangalvas and the Kangalvas had Cola prenomens from this time (ಎಂದರೆ ರಾಜೇಂದ್ರ ಚೋಳರ ಕಾಲದಿಂದ : ಕ್ರಿ.ಶ. ೧೦೧೨–೧೦೪೪,–ಸಂ.) evidently because the Colas imposed their names on the provinces they conquered and on the rulers who accepted a vassal position in the empire. In the course of few years, however, the Kongalvas began to claim that they were themselves descended from the Colas and joined the ranks of the numerous Telugu and Kanarese local dcynastics that traced their dcscent in a mythical manner, from Karikala and the Sun, through jata-cola."-K.A. Nilakanta Sastri : *The Colas,* (Madras University, 1935), Vol. I, P. 280.

ಇದೇ ಗ್ರಂಥದಲ್ಲಿ ನೀಲಕಂಠಶಾಸ್ತ್ರಿಗಳು ರೇನಾಂಡು ಚೋಳರ ವಿಷಯವಾಗಿ ಬರೆಯುತ್ತ, ೭ನೆಯ ಶತಮಾನದಲ್ಲಿ ಈಗಿನ ಕಡಪ ಮತ್ತು ಕರ್ನೂಲು ಜಿಲ್ಲೆಗಳಲ್ಲಿ ಕಾಶ್ಯಪಗೋತ್ರದ ಈ ವಂಶದವರು ಆಳುತ್ತಿದ್ದರೆಂದೂ ಇವರ ವಿಚಾರವಾಗಿ ಹೆಚ್ಚು ತಿಳಿದುಬಂದಿಲ್ಲವೆಂದೂ ಹೇಳಿ, ಹೀಗೆ ಮುಂದುವರಿಸಿದ್ದಾರೆ :

"But it is already clear that they form the link connecting early Colas of the Tamil country and the numerous dynastics of petty chieftains in the Telugu and Karnataka country claiming to have been of the Kasyapa Gotra and to have descended from Karikala and ruled at Uraiyur."- ಈ ಸಂಬಂಧದ ಅಡಿಟಿಪ್ಪಣಿ. "Even the Kakatiyas sometimes connected themselves with Karikala" *(Epigraphia Indica*- Vol. V, p. 123; Vol. X i, p. 338)

15. *Anamakonda Inscription of Rudradeva-India Antiquary ;* Vol, XI, January 1882, pp 9 ff. (ಚೋಳೋದಯಾದಿತ್ಯನ ವಿಚಾರವಾಗಿ ಪ್ರೊ. ಡಿ.ಎಲ್. ನರಸಿಂಹಾಚಾರ್ಯರಲ್ಲಿ ಪ್ರಸ್ತಾವಮಾಡಿದಾಗ, ಅವರು ಈ ಶಾಸನದ ಕಡೆಗೆ ನನ್ನ ಗಮನವನ್ನು ಸೆಳೆದು ಉಪಕಾರಮಾಡಿದ್ದಾರೆ. ಬೆಂಗಳೂರು ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದಲ್ಲಿ ಸಂಶೋಧನ ಸಹಾಯಕ (Research Assistant) ರಾಗಿದ್ದುಕೊಂಡು, ಓರುಂಗಲ್ಲಿನ ಕಾಕತೀಯರ

ಪರಿಷತ್ಪತ್ರಿಕೆ, XIV-೩).[೧೩] ಉದಯಾದಿತ್ಯಾಲಂಕಾರವಾದರೋ ಸು. ೧೧೨೫ಕ್ಕೆ ಈಚೆಗೆ ಹುಟ್ಟಿರಬೇಕೆಂದು ಊಹಿಸಲು ಅವಕಾಶವಿದೆ. ಉದಯಾದಿತ್ಯಾಲಂಕಾರ ಮತ್ತು ಛಂದೋಂಬುಧಿಗಳು ಏಕಕರ್ತೃಕವೆಂದು ಭಾವಿಸುವುದಾದರೆ, ಚೆನ್ನಕೇಶವಯ್ಯಂಗಾರ್ಯರು ಅಭಿಪ್ರಾಯಪಡುವಂತೆ ಕಾದಂಬರಿ ೧೧ನೆಯ ಶತಮಾನದ ಆದಿಭಾಗಕ್ಕೆ ಸೇರಿದ್ದಾದರೆ, ಕಾದಂಬರಿ ಮತ್ತು ಛಂದೋಂಬುಧಿಗಳು ಏಕಕರ್ತೃಕವಾಗಲಾರವು. ಈ ಬಗ್ಗೆ ನಿಶ್ಚಿತವಾಗಿ ಏನನ್ನೂ ಹೇಳಲು ಸಾಧ್ಯವಾಗದಿದ್ದರೂ, ಕಾದಂಬರಿ ಮತ್ತು ಛಂದೋಂಬುಧಿಗಳು ಭಿನ್ನಕರ್ತೃಕಗಳೆಂಬ ಕವಿಚರಿತ್ರಕಾರರ ಸಂದೇಹದ ನಿಲುವೇ ಹೆಚ್ಚು ಸಮರ್ಥನೀಯವಾಗಿ ಕಂಡುಬರುತ್ತದೆ. (ಟಿ.ಎಸ್. ವೆಂಕಣ್ಣಯ್ಯನವರು ಹೇಳುವಂತೆ ಶೈಲಿ ಹಿಡಿತಕ್ಕೆ ಸಿಕ್ಕುವ ವಿಷಯವಲ್ಲದಿದ್ದರೂ, ಈ ಎರಡು ಕೃತಿಗಳ ಭಿನ್ನಶೈಲಿ ಭಿನ್ನಕರ್ತೃಕವಾದಕ್ಕೆ ಪುಷ್ಟಿಯನ್ನು ಕೊಡುತ್ತದೆ.) ಛಂದೋಂಬುಧಿ ಮತ್ತು ಉದಯಾದಿತ್ಯಾಲಂಕಾರಗಳು ಎರಡೂ ಶಾಸ್ತ್ರಗ್ರಂಥಗಳು ; ಆದ್ದರಿಂದ, ಇವೆರಡರ ಕರ್ತೃ ಒಬ್ಬನೇ ಆಗಿರಬಹುದಾದ ಸಂಭವವಿದೆ. (ಕಾವ್ಯಾವಲೋಕನ, ಭಾಷಾಭೂಷಣ, ವಸ್ತುಕೋಶ–ಈ ಮೂರು ಶಾಸ್ತ್ರಗ್ರಂಥಗಳ ಕರ್ತೃ–II ನೆಯ ನಾಗವರ್ಮ – ಒಬ್ಬನೇ ಎಂಬ ಅಂಶವನ್ನು ಇಲ್ಲಿ ನೆನೆಯಬಹುದು.)

## ೪
## ಉದಯಾದಿತ್ಯಾಲಂಕಾರದ ಕಾಲ

ದಕ್ಷಿಣ ಭಾರತದ ಇತಿಹಾಸದಲ್ಲಿ ಅನೇಕ ಉದಯಾದಿತ್ಯರುಗಳು ಆಗಿಹೋಗಿದ್ದಾರೆ. ಮಾಳವದ ಪರಮಾರವಂಶ, ಹೊಯ್ಸಳವಂಶ, ನೊಳಂಬವಂಶ–ಈ ಪ್ರಸಿದ್ಧ ರಾಜವಂಶಗಳಲ್ಲಿ ಉದಯಾದಿತ್ಯ ಎಂಬ ಹೆಸರಿನ ದೊರೆಗಳು ಇದ್ದುದು ಚರಿತ್ರಗ್ರಂಥಗಳಿಂದ ತಿಳಿದು ಬರುತ್ತದೆ. ಉದಯಾದಿತ್ಯಾಲಂಕಾರ ಗ್ರಂಥದಲ್ಲಿ 'ಚೋಳೋದಯಾದಿತ್ಯ' ಎಂದು ಸ್ಪಷ್ಟವಾಗಿ ಉಲ್ಲೇಖವಿರುವುದರಿಂದ, ಈ ಯಾವ ಉದಯಾದಿತ್ಯನನ್ನೂ ಚೋಳೋದಯಾದಿತ್ಯ ಎಂದು ಪರಿಗಣಿಸಲಾಗುವುದಿಲ್ಲ. ತಮಿಳನಾಡಿನ ಚೋಳವಂಶದ ದೊರೆಗಳಲ್ಲಿಯಾಗಲಿ ಸಾಮಂತ ದೊರೆಗಳಲ್ಲಿಯಾಗಲಿ ಉದಯಾದಿತ್ಯನೆಂಬ ಅರಸು ನಮ್ಮ ಗಮನಕ್ಕೆ ಸಿಕ್ಕುವುದಿಲ್ಲ. ಚೋಳರು

---

೧೩. ಕಾದಂಬರೀ ಸಂಗ್ರಹ (೩ನೆಯ ಮುದ್ರಣ, ೧೯೫೩), ಪೀಠಿಕೆ, ಪು. IV.

ಸಂಬಂಧಪಟ್ಟಂತೆ ದೊರೆತಿರುವ ಅತ್ಯಂತ ಮುಂಚಿನ ಶಾಸನದ ಕಾಲ ಕ್ರಿ.ಶ. ೧೧೧೫. ತೈಲಪನ ಬಂಧನ, ಉದಯನಿಗೆ ರಾಜ್ಯಪ್ರದಾನ ಮುಂತಾದ ಪ್ರೋಲನ ಸಂಬಂಧವಾದ ಘಟನೆಗಳ ಕಾಲವನ್ನು ನಿಷ್ಕೃಷ್ಟವಾಗಿ ನಿರ್ಧರಿಸುವುದು ಕಷ್ಟ. ಕ್ರಿ.ಶ. ೧೧೩೦–೧೧೪೦ರ ಸುಮಾರಿನಲ್ಲಿ ಆ ಘಟನೆಗಳು ನಡೆದಿರಬಹುದೆಂದು ಊಹಿಸಬಹುದು.

ಅನಮಕೊಂಡ ಶಾಸನದಲ್ಲಿ ರುದ್ರದೇವನ ಪರಾಕ್ರಮವನ್ನು ವಿಸ್ತಾರವಾಗಿ ವರ್ಣಿಸಿದೆ; ಅವನ ಕಾಲದಲ್ಲಿ ಭೀಮನೆಂಬ ದೊರೆ ಅವನಿಗೆ ಪ್ರಬಲ ಪ್ರತಿಕಕ್ಷಿಯಾಗಿದ್ದಂತೆ ಕಾಣುತ್ತಿದೆ. ಭೀಮನು ಗೋಕರ್ಣನೆಂಬವನನ್ನು ಕೊಂದು, ಚೋಡೋದಯನ ಪಟ್ಟಣವನ್ನು [ಕೊಂಡಪಲ್ಲಿ (?): ನೋಡಿ, ಅಡಿಟಿಪ್ಪಣಿ ೧೬] ವಶಪಡಿಸಿಕೊಂಡಂತೆ ಹೇಳಿದೆ. ಶಾಸನದ ಕಾಲಕ್ಕೆ, ಎಂದರೆ ೧೧೬೨ಕ್ಕೆ ಮುಂಚೆಯೆ, ಹೆಚ್ಚು ಕಡಿಮೆ ಒಂದೇ ಕಾಲದಲ್ಲಿ ಚೋಡೋದಯನೂ ತೈಲವನೂ ಮರಣಹೊಂದಿದ ಸಂಗತಿ ಶಾಸನದಲ್ಲಿ ಉಕ್ತವಾಗಿದೆ.[೧೭] ರುದ್ರನು ಭೀಮನ ಮೇಲೆ ದಂಡೆತ್ತಿಹೋದ ಸಂದರ್ಭದಲ್ಲಿ, (ತಾನು ವಶಪಡಿಸಿಕೊಂಡಿದ್ದ) ಚೋಡೋದಯನ ಪಟ್ಟಣವನ್ನು ತೊರೆದು ಭೀಮನು ಕಾಡಿಗೆ ಓಡಿಹೋದನೆಂದೂ, ರುದ್ರನು ಅವನನ್ನು ಬೆಂಬತ್ತಿ ಚೋಡೋದಯನ ನಗರಿಯನ್ನು ಸುಟ್ಟುಬಿಟ್ಟನೆಂದೂ ಶಾಸನದಿಂದ ತಿಳಿದುಬರುತ್ತದೆ; ಈ ಸಂದರ್ಭದಲ್ಲಿ ಅ ನಗರಿಯ ವೈಶಿಷ್ಟ್ಯದ ಚಿತ್ರವೊಂದನ್ನು ಶಾಸನಕವಿ ನಮ್ಮ

---

೧೭. ಭೀಮೇನ ಭೀಮ ನಕುಲೇನ ಕುಲೇನ ಹೀನೋ ಗ್ರಸ್ತೋ ಮಮಾರ್
ಗೃಹಮೂಷಕವತ್ ಕ್ಷಣೇನ ।
ಮಾರ್ಜಾರಡಿಂಭಕವರೇನ ಮಹಾಂಧಕಾರೇ ಗೋಕರ್ಣನಾಮ ಭುಜಗೋ ಭುವಿ
ಶೂರಮಾನೀ ॥
ಶ್ರೀಮದ್ ರುದ್ರಪರಾಕ್ರಮೋದ್ಭದ ಭಯವ್ಯಾಮೋಹನಾಖ್ಯೋಲಸಚ್ಚಸ್ತ್ರಸ್ತಸಮಸ್ತ ಗಾತ್ರ
ವಿಲಸತ್ ಚೋಡೋದಯಕ್ಷ್ಮಾಪತೇಃ ॥
ಉನ್ಮತ್ತ ಇವ ವಿಸ್ಮೃತಾ ಇವ ಮಹಾಭೂತಾಭಿಭೂತಾ ಇವ ಪ್ರೋದ್ಭ್ರಾಂತಾ ಇವ
ಸಂಕುಲಾ ಇವ ವಿಸ್ಮೃತಾ ಇವ ತದಾ ಪ್ರಾಣಾಃ ಪ್ರಯಾತಾ ದಿವಂ ॥
ಯತೇಪಿ ತೈಲಪನೃಪೇ ದಿವಂ ಅಸ್ಯ ಭೀತ್ಯಾ ಸರ್ವಾತಿಸಾರ ಕಬಲೀಕೃತ ಗಾತ್ರ
ಯಷ್ಟೌ ।
ಶ್ರೀ ರುದ್ರದೇವನೃಪತೇಃ ಪೃಥುವಿಕ್ರಮಸ್ಯ ಭೀಮೋಪಿ ರಾಜ್ಯಪದವೀಂ ಕ್ಷಣಿಕಂ
ಸಲೇಭೇ ॥ (ಪಂಕ್ತಿ : ೬೧–೭೧)

ಪ್ರಸಕ್ತವಾದದ್ದು ಉದಯಾದಿತ್ಯನಿಗೆ ಸಂಬಂಧಪಟ್ಟ ಭಾಗಗಳು ಮಾತ್ರ. ಈ ಶಾಸನದಲ್ಲಿ **'ಉದಯಾದಿತ್ಯ'** ಎಂಬ ಹೆಸರು ಮಾತ್ರ ಉಕ್ತವಾಗಿಲ್ಲ. IIನೆಯ ಪ್ರೋಲನ ವಿಜಯುಗಳನ್ನು ವರ್ಣಿಸುವ ಸಂದರ್ಭದಲ್ಲಿ, ಅವನು ಗೋವಿಂದನೆಂಬವನನ್ನು ಸೋಲಿಸಿ ಅವನ ರಾಜ್ಯವನ್ನು **ಉದಯ** (ಅಥವಾ **ಚೋಡೋದಯ**)ನಿಗೆ ಕೊಟ್ಟನೆಂದು ಶಾಸನದಲ್ಲಿ ಹೇಳಿದೆ.[೧೬] ಪ್ರೋಲನು ತೈಲಪನನ್ನೂ ಸೆರೆಹಿಡಿದುದಾಗಿಯೂ ಈ ಶಾಸನದಿಂದ ತಿಳಿದುಬರುತ್ತದೆ. ಫ್ಲೀಟರು ಊಹಿಸಿರುವಂತೆ, ಇವನು ತೈಲಪ III ಆಗಿರಬೇಕು ; ಇವನ ಆಳಿಕೆಯ ಕಾಲ ಕ್ರಿ.ಶ. ೧೫೫೦–೧೧೬೩. ಇದು ಪ್ರೋಲನ ಮಗ ರುದ್ರದೇವನ ಆಳಿಕೆಯ ಕಾಲವೂ ಆಗಿದೆ. ಆದ್ದರಿಂದ, ಪ್ರೋಲನು ತೈಲಪನನ್ನು ಅವನು ಇನ್ನೂ ರಾಜಕುಮಾರನಾಗಿದ್ದಾಗ ಅವನ ತಂದೆ IIIನೆಯ ಸೋಮೇಶ್ವರನ ಕಾಲದಲ್ಲೋ (ಕ್ರಿ.ಶ. ೧೧೨೭–೧೧೩೮), ಅಣ್ಣ IIನೆಯ ಜಗದೇಕಮಲ್ಲನ ಕಾಲದಲ್ಲೋ (ಕ್ರಿ.ಶ. ೧೧೩೮–೧೧೫೦) ಸೆರೆಹಿಡಿದಿರಬೇಕು. IIನೆಯ ಪ್ರೋಲನಿಗೆ

---

ಬಗೆಗೆ ಸಂಶೋಧನೆ ನಡಸುತ್ತಿರುವ ಕುಮಾರಿ ಎಂ. ಪ್ರತಿಭಾ ಅವರು ತೆಲಗು ಚೋಡವಂಶದ ಉದಯಾದಿತ್ಯನ ಬಗೆಗೆ ಬೇರೆ ಕೆಲವು ಶಾಸನಸಾಮಗ್ರಿಯನ್ನು ಒದಗಿಸಿಕೊಟ್ಟು ನೆರವಾಗಿದ್ದಾರೆ. ಇವರಿಬ್ಬರಿಗೂ ನಾನು ಕೃತಜ್ಞ.

೧೬. ಶಾಸನಕವಿ 'ಶ್ರೀಮದ್‌ರುದ್ರನರೇಶ್ವರಸ್ಯಸುಮತೇರ್ವಂಶಾವಲೀಂ ವರ್ಣಯೇ', ಎಂದು ಹೇಳಿ, 'ಕಾಕತ್ಯ ವಂಶಸಂಭೂತ' ಶ್ರೀಮತ್ ತ್ರಿಭುವನಮಲ್ಲರಾಜನ ಗುಣವರ್ಣನೆಮಾಡಿ (ಪಂಕ್ತಿ ೨೦–೨೩) ಅವನ ಮಗ ಪ್ರೋಲನ ಮಹಿಮಾವರ್ಣನೆಗೆ (ಪಂಕ್ತಿ ೨೪–೪೩) ಇಂತು ತೊಡಗುತ್ತಾನೆ; "ತತ್‌ಪುತ್ರಃ.....ಪ್ರೋಲೇರಾಜ ಇತಿ ಪ್ರಸಿದ್ಧಿಂ ಅಗಮತ್ ವೈರೀಂದ್ರದರ್ಪಾಪಹಃ....ಚಾಲುಕ್ಯ ಚೂಡಾಮಣಿಂ ಶ್ರೀಮತ್ ತೈಲಪದೇವಂ ಯುದ್ಧೇಬಬಂಧ ಕ್ಷಣಾತ್....ಕ್ಷಣಾತ್ ಭಕ್ತ್ಯಾನುರಾಗಾತ್ ಜಜಾಹು॥... ಗೋವಿಂದರಾಜಾಹ್ವಯಂ ಬಧ್ವೋನ್ಮುಚ್ಯ ತದೋ(ತೋ?)ದಯ ಕ್ಷಿತಿಭೃತೇ ರಾಜ್ಯಂ ದದೌ ಲೀಲಯಾ". (ಶಾಸನಶ್ಲೋಕ ಭಾಗಗಳನ್ನು ಅನ್ವಯವಾಗುವಂತೆ ಜೋಡಿಸಿಕೊಂಡಿದೆ–ಸಂ.)

ಈ ಘಟನೆಯ ಸಂಬಂಧವಾಗಿ ಡಿ.ಸಿ. ಗಾಂಗುಲಿಯವರು ಹೀಗೆ ಬರೆದಿದ್ದಾರೆ :

"In the early years of his reign Prola II owed allegiance to Vikramaditya VI, after whose death in A. S. 1126 the Calukya empire began to disintegrate. Taking advantage of this situation Prola II revolted and attacked the feudatories of the Calukyas in the Telingana and Andhra countries. He defeated Govindaraja and handed his kingdm Kondapalli, in the Krishna district, over to Udya or cododaya, whose brother Mahamandaleswara Gokarna Coda was ruling as his feudatory near Panugal (Nalagonda district.)"-The History and Culture of Indian People : 'The Struggle for Empire (Volume), chap viii: *dynasties of Eastern Deccan* I-III, P. 198 (Bharatiya Vidya Bhavan. Bombay)

ಸಾಮಂಜಸ್ಯವನ್ನು ಕಲ್ಪಿಸಲು, ಹೊಸ ವಂಶವೃಕ್ಷವೊಂದನ್ನೆ ತಯಾರಿಸಬೇಕು. ಇದು ಇತಿಹಾಸ ಕ್ಷೇತ್ರಕ್ಕೆ ಸೇರಿದ ವಿಷಯ. (ಆದರೂ, ಕುತೂಹಲ ತೃಪ್ತಿಗಾಗಿ ಅದನ್ನು ಕೆಳಗೆ ಕೊಟ್ಟಿದೆ.)[೨೦] ಇದರಿಂದ ಕೂಡ ಸಮಸ್ಯೆಯ ಜಟಿಲತೆ ಪರಿಹಾರವಾಗುವಂತೆ ಕಂಡುಬರುವುದಿಲ್ಲ. ಸದ್ಯದಮಟ್ಟಿಗೆ ಮಾಮಿಳ್ಳಪಲ್ಲಿ ಮತ್ತು ಪಾನುಗಲ್ ಶಾಸನಗಳಲ್ಲಿ ಉಕ್ತನಾದ ಉದಯಾದಿತ್ಯನೆ ಅನಮಕೊಂಡ ಪ್ರೋಲನ ಕಾಲದ ಉದಯ, (ರುದ್ರದೇವನ ಕಾಲದ) ಚೋಡೋದಯ ಎಂಬುದಾಗಿ ಮೂರು ಹೆಸರುಗಳಿಗೂ ಐಕ್ಯತೆಯನ್ನು ಸ್ಥಾಪಿಸಬಹುದು. ಇದೇ ಉತ್ತಮ ಪಕ್ಷವಾಗಿ ಕಾಣುತ್ತದೆ. ಇದು ಹೇಗಿದ್ದರೂ, ಪಾನುಗಲ್ಲಿನ ಇನ್ನೊಂದು ಶಾಸನದಲ್ಲಿ (ಕ್ರಿ.ಶ. ೧೧೨೨) 'ಗೋಕರ್ಣದೇವ ಚೋಡ' ಎಂದು ಸ್ಪಷ್ಟವಾದ ಉಲ್ಲೇಖವಿರುವುದರಿಂದ ಉದಯಾದಿತ್ಯ, ಭೀಮ, ಗೋಕರ್ಣರು ತೆಲುಗು ಚೋಡವಂಶಕ್ಕೆ ಸೇರಿದ್ದರೆಂಬ ವಿಷಯದಲ್ಲಿ ಸಂದೇಹವಿಲ್ಲವೆಂದು ಹೇಳಬಹುದು.

ಮೇಲ್ಕಂಡ ಶಾಸನಾಧಾರಗಳಿಂದ, ಅನಮಕೊಂಡ ಶಾಸನದ ಚೋಡೋದಯನೇ ನಮಗೆ ಪ್ರಸಕ್ತನಾದ ಚೋಡೋದಯಾದಿತ್ಯನೆಂದೂ,

---

೨೦. ಈ ಕೆಳಗಿನ ವಂಶವೃಕ್ಷ ರಚನೆಗೆ ಕುಮಾರಿ ಎಂ. ಪ್ರತಿಭಾ ಅವರು ಒದಗಿಸಿಕೊಟ್ಟ ಶಾಸನಸಾಮಗ್ರಿ ಆಧಾರವಾಗಿದೆ :




ವಿಶೇಷ ವಿಷಯ : ಈ ಸಂಯೋಜಿತ ವಂಶಾವಳಿಯ ಪ್ರಕಾರ, ಉದಯಾದಿತ್ಯ, ಭೀಮ, ಗೋಕರ್ಣರು ಇಬ್ಬರಿಬ್ಬರಾಗುತ್ತಾರೆ. IIನೆಯ ಪ್ರೋಲನು ಗೋವಿಂದನ ರಾಜ್ಯದಲ್ಲಿ ಪ್ರತಿಷ್ಠಿಸಿದ 'ಉದಯ' (=ಉದಯಾದಿತ್ಯ)ನೇ ಬೇರೆ, ರುದ್ರದೇವನ ಕಾಲದ ಚೋಡೋದಯನೆ (=ಚೋಡೋದಯಾದಿತ್ಯ) ಬೇರೆ ಎಂದಾಗುತ್ತದೆ. ನಾವು ಮೇಲೆ ಲೇಖನದಲ್ಲಿ ಪ್ರಸ್ಥಾಪಿಸಿರುವ ನಿಲುವಿಗೆ (ಉದಯ, ಉದಯಾದಿತ್ಯ, ಚೋಡೋದಯ–ಈ ಮೂವರು ಏಕವ್ಯಕ್ತಿ ಎಂಬ ನಿಲುವಿಗೆ) ಚ್ಯುತಿ ಬರುತ್ತದೆ. ಈ ಸಮಸ್ಯೆ ಬಹು ಜಟಿಲವಾಗಿದ್ದು, ನಮ್ಮ ಸದ್ಯದ ಎಲ್ಲ ತೀರ್ಮಾನಗಳೂ ತಾತ್ಪೂರ್ತಿಕ (Tentative) ಎಂದಷ್ಟೇ ವಿಜ್ಞಾಪಿಸಿಕೊಳ್ಳಬೇಕಾಗಿದೆ.

ಮುಂದಿಟ್ಟಿದ್ದಾನೆ.[೧೮] ಶಾಸನ ಮುಗಿಸುವ ಮುನ್ನ, ರುದ್ರದೇವನ ಮಹಿಮೋನ್ನತಿಯನ್ನು ವರ್ಣಿಸುವ ಸಂದರ್ಭದಲ್ಲಿ– "ಕಂದೂರೋದಯ ಚೋಡವಂಶ ವಿಲಸತ್ ಕ್ಷೀರಾಬ್ಧಿ ಗರ್ಭೋದ್ಭವತ್ [ಪದ್ಮೈ][೧೯] ಕಾಶ್ರಯ ರುದ್ರದೇವ ನೃಪತೇಃ ಕಿಂ ವರ್ಣ್ಯತೇ ವಿಕ್ರಮಃ'' ಎಂದು ಹೇಳುರುವುದು ಅರ್ಥಪೂರ್ಣವಾಗಿದೆ. ಇದರಿಂದ 'ಕಂದೂರೋದಯ ಚೋಡವಂಶವೆಂಬ ಕ್ಷೀರ ಸಮುದ್ರದಲ್ಲಿ ಹುಟ್ಟಿದ ಪದ್ಮಕ್ಕೆ ಆಶ್ರಯನಾದವನು' ಎಂದರೆ ಕಂದೂರು ಚೋಡೋದಯನ ಪುತ್ರಿಯನ್ನು ಮದುವೆಯಾಗಿದ್ದು, ಅವನ ಪಕ್ಷ ವಹಿಸಿಯೇ ಭೀಮನ ಮೇಲೆ ದಂಡೆತ್ತಿಹೋಗಿರಬಹುದೆಂದು ಊಹಿಸಬಹುದಾಗಿದೆ. (ಸುಮಾರು ೧೧೨೭ರಲ್ಲಿ ಪ್ರೋಲನಿಂದ ಗೋವಿಂದರಾಜನ ಪಟ್ಟಣದಲ್ಲಿ ಪ್ರತಿಷ್ಠಿತನಾದ ಉದಯಾದಿತ್ಯನು ಈ ಘಟನೆಯ ಹೊತ್ತಿಗೆ ೭೫–೮೦ ವರ್ಷಗಳ ವೃದ್ಧನಾಗಿದ್ದಿರಬೇಕು. ಇವನ ವೃದ್ಧಾಪ್ಯವೇ ಭೀಮನ ನಗರಾಕ್ರಮಣಕ್ಕೆ ಉತ್ತೇಜನ ಕೊಟ್ಟಿರಬಹುದು). ಭೀಮನ ಕಾಲದಲ್ಲಿ ಹುಟ್ಟಿದ ಮಾಮಿಳ್ಳಪಲ್ಲಿ ಶಾಸನದಿಂದ (ಕ್ರಿ.ಶ. ೧೧೭೮ : ನೋಡಿ. Lithic Records in the Hyderabad State, by M. Ramakrishna Kavi) ಭೀಮ ಗೋಕರ್ಣರು ಸಹೋದರರೆಂದೂ, ಉದಯಾದಿತ್ಯನ ಪುತ್ರರು–ಗೋಕರ್ಣ (I)ನ ಪೌತ್ರರು ಎಂದೂ ತಿಳಿದುಬರುತ್ತದೆ. ಆದರೆ, ಪಾನುಗಲ್ ಶಾಸನದ (ಕ್ರಿ.ಶ. ೧೧೨೪ : ನೋಡಿ, Telugu Inscriptions, Misc. No. 18) ಪ್ರಕಾರ ಉದಯಾದಿತ್ಯ (ಹಿರಿಯ), ಭೀಮ. (ಮಧ್ಯಮ), ಗೋಕರ್ಣ (ಕಿರಿಯ)–ಇವರು ಸಹೋದರರೆಂದೂ ಇವರ ತಂದೆ ತೊಂಡನೆಂದೂ ಉಲ್ಲೇಖವಿದೆ. ಮಾಮಿಳ್ಳಪಲ್ಲಿ ಶಾಸನದಲ್ಲಿ ಭೀಮ ಗೋಕರ್ಣರ ತಂದೆ ಉದಯಾದಿತ್ಯ ಎಂದಿದೆ. ಪರಸ್ಪರ ವಿರುದ್ಧಗಳಾದ ಉಲ್ಲೇಖಗಳಿಗೆ

---

೧೮. ಯಸ್ಯಾಕ್ಷಿ ವೀಕ್ಷಣ ಭಯಾಚ್ಚಕಿತಸ್ಸ ಭೀಮೋ ದುರ್ಯೋಧನಸ್ಯ ನೃಪತೇರಿವ ವಿಹ್ವಲಾಂಗಃ ।
ಸ್ವಭ್ರಾತೃ ಮಾತೃವನಿತಾ ಸಹಿತಸ್ಸಮಗ್ರ ಲಕ್ಷ್ಮೀಂ ವಿಹಾಯ ವನಮೇವ ಯಯೌ ವಿಲಜ್ಜ ॥
ತತ್ಪೃಷ್ಠ ತೋನು ಚ ಜಗಾಮ ದದಾಹ ರಾಜಾ ಚೋಡೋದಯಸ್ಯ ನಗರೀ ಮಗರೀಯಸೀಂ ತಾಮ್ ।
ಲಂಕಾಮಿವಾಮರಪುರೀ ಸದೃಶೀಂ ಮೃಗಾಕ್ಷೀಶ್ರೇಣೀ ವಿಲಾಸ ಲಲಿತಾಮಿವ ಚ ಆಂಜನೇಯಃ ॥ (ಪಂಕ್ತಿ : ೧೦೧–೧೦೫)

೧೯. 'ಪದಮ್ಮೈಕಾಶ್ರಯ' ಎಂದು ಶಾಸನದ ಪಾಠ. ಇದರಿಂದ ವೃತ್ತದ ಛಂದಸ್ಸು ಕೆಡುವುದರಿಂದ ಪಾಠವನ್ನು ತಿದ್ದುವ ಸಾಹಸಮಾಡಿದೆ. ಸಂ.

ಸಮಕಾಲೀನನೆಂದೇ ಭಾವಿಸಬಹುದು. ಉದಯಾದಿತ್ಯಾಲಂಕಾರವು ಕಾವ್ಯಾವಲೋಕನಕ್ಕಿಂತ ಸ್ವಲ್ಪ ಮುಂಚೆಯೇ ರಚಿತವಾಗಿರುವ ಸಂಭವವಿದ್ದು, ಕನ್ನಡ ಅಲಂಕಾರಗ್ರಂಥಗಳ ಪರಂಪರೆಯಲ್ಲಿ ಅದು ಎರಡನೆಯ ಕೃತಿಯಾಗಿ ನಿಲ್ಲಬಹುದೆಂದು ನಮಗೆ ತೋರುತ್ತದೆ. ನಮ್ಮ ಊಹೆ ಸರಿಯಾಗಿರುವ ಪಕ್ಷಕ್ಕೆ, ಅದಕ್ಕೊಂದು ಐತಿಹಾಸಿಕ ಪ್ರಾಮುಖ್ಯ ಪ್ರಾಪ್ತವಾಗುತ್ತದೆ.

ಛಂದೋಂಬುಧಿಯ ಪೀಠಿಕಾಪ್ರಕರಣದ ಎರಡು ಪದ್ಯಗಳನ್ನು ಬಿಟ್ಟರೆ, ಅದರ ಕರ್ತೃ ವೈದಿಕಮತಾನುಯಾಯಿ ಎಂಬುದಕ್ಕೆ ಪ್ರಬಲವಾದ ಆಂತರಿಕಪ್ರಮಾಣವಿದೆ. ಉದಯಾದಿತ್ಯಾಲಂಕಾರದ ಕರ್ತೃವಿನ ಮತನಿರ್ಣಯಕ್ಕೆ ಯಾವ ಆಧಾರವೂ ಇಲ್ಲದಿದ್ದರೂ, ವೈದಿಕಮತಾನುಯಾಯಿ ಎಂದು ಊಹಿಸಬಹುದು. ಮತಧರ್ಮದೃಷ್ಟಿಯಿಂದ, ಈ ಎರಡು ಕೃತಿಗಳ ಏಕಕರ್ತೃವಾದಕ್ಕೆ ವಿರೋಧ ಎನಿಸುವ ಅಂಶ ಬೇರೆ ಯಾವುದೂ ಇಲ್ಲ. ಕಾಲದೃಷ್ಟಿಯಿಂದ ಬರಬಹುದಾಗಿದ್ದ ಪ್ರತಿಬಂಧಕ ನಿವಾರಣೆಯಾಗುವ ಸಂಭವವನ್ನು ಈ ಹಿಂದೆಯೇ ಸೂಚಿಸಿದೆ. ಆದ್ದರಿಂದ ಛಂದೋಂಬುಧಿಯ ಕಾಲವೂ ಉದಯಾದಿತ್ಯಾಲಂಕಾರದ ಕಾಲಕ್ಕೆ (ಸು. ೧೧೪೦) ಸಮೀಪಸ್ಥವಾಗುತ್ತದೆ. ಕವಿ ಒಬ್ಬನೇ ಆಗುವ ಪಕ್ಷಕ್ಕೆ, ಆತ ಛಂದೋಂಬುಧಿಯನ್ನು ಮೊದಲು ಬರೆದು, ಬಳಿಕ ಉದಾಯಾದಿತ್ಯಾಲಂಕಾರವನ್ನು (ಉದಯಾದಿತ್ಯನ ಆಶ್ರಯದಲ್ಲಿ) ಬರೆದಿರಬಹುದು.

ತೆಲುಗು ಚೋಡ ದೊರೆಯಲ್ಲಿ ಕನ್ನಡ ಕವಿಯೊಬ್ಬ ಆಶ್ರಯಪಡೆಯಬಹುದೇ ಎಂಬ ಸಂದೇಹಕ್ಕೆ ಕಾರಣವಿಲ್ಲವೆಂದು ಹೇಳಬಹುದು. ಅನುಮಕೊಂಡ ಶಾಸನ ಸಂಸ್ಕೃತ ಭಾಷೆಯಲ್ಲಿದ್ದರೂ ಆಗಿನ ಕಾಲದ ತೆಲುಗು ಲಿಪಿಯಲ್ಲಿ ಲಿಖಿತವಾಗದೆ ಕನ್ನಡ ಲಿಪಿಯಲ್ಲಿರುವುದು ಗಮನಾರ್ಹ. ರಾಘವಾಂಕ ಕವಿ (ಕ್ರಿ.ಶ.ಸು. ೧೧೯೫) ಕಾಕತೀಯ ರುದ್ರನ (ಕ್ರಿ.ಶ. ೧೧೫೦–೧೧೯೫) ಆಸ್ಥಾನಕ್ಕೆ ಹೋಗಿ ಕುಕವಿಗಳನ್ನು ಗೆದ್ದ ಸಂಗತಿಯನ್ನು ರಾಘವಾಂಕ ಚಾರಿತ್ರ್ಯ, ಚೆನ್ನಬಸವ ಪುರಾಣ, ಭೈರವೇಶ್ವರ ಕಥಾಸೂತ್ರರತ್ನಾಕರ, ಗುರುರಾಜಚಾರಿತ್ರ–ಈ ಗ್ರಂಥಗಳಲ್ಲಿ ವರ್ಣಿಸಿದೆ.[೨೧] ಆದ್ದರಿಂದ, ಕಾಕತೀಯರೂ ತೆಲುಗು ಚೋಡರೂ ಕನ್ನಡ ಕವಿಗಳನ್ನು

---

೨೧. ಕವಿಚರಿತ್ರೆ, ಸಂ. I, ಪು. ೨೩೬. (ಈ ಗ್ರಂಥಗಳಲ್ಲಿ ಓರುಂಗಲ್ಲಿನ ಪ್ರತಾಪರುದ್ರನ ಉಲ್ಲೇಖವಿದೆ. ರುದ್ರದೇವನನ್ನೇ ಪ್ರತಾಪರುದ್ರ ಎಂದು ಆ ಗ್ರಂಥಕರ್ತರು ತಪ್ಪು ತಿಳಿದಿರುವ ಹಾಗೆ ಕಾಣುತ್ತದೆ).

ಈ ಚೋಡೋದಯಾದಿತ್ಯನ ಕಾಲ ಸು.ಕ್ರಿ.ಶ. ೧೧೦೦–೧೧೬೦ ಎಂದೂ ಸ್ಥೂಲವಾಗಿ ಇಟ್ಟುಕೊಳ್ಳಬಹುದು.

ಉದಯಾದಿತ್ಯನ ತಂದೆ ಮಾತ್ರ ಗೋಕರ್ಣ ಎಂದು ಮಾಮಿಳ್ಳಪಲ್ಲಿ ಶಾಸನದಲ್ಲೂ, ತೊಂಡ ಎಂದು ಪಾನುಗಲ್ (ಕ್ರಿ.ಶ. ೧೧೨೪) ಶಾಸನದಲ್ಲೂ ಉಕ್ತವಾಗಿದೆಯಷ್ಟೆ. ಈ ಪರಸ್ಪರ ವಿರೋಧದಿಂದ, ಶಾಸನ ಕವಿಗಳಲ್ಲಿ ಉದಯಾದಿತ್ಯನ ತಂದೆಯ ಹೆಸರಿನ ಬಗೆಗೆ ಗೊಂದಲವುಂಟಾಗಿದೆ ಎಂದು ಶಂಕಿಸಬೇಕಾಗುತ್ತದೆ. ಉದಯಾದಿತ್ಯ (=ಉದಯ, ಚೋಡೋದಯ) ಒಬ್ಬನೆ ಎಂದು ಇಟ್ಟುಕೊಂಡು, ಅವನಿಗೆ ಸೋದರ ಗೋಕರ್ಣನೊಬ್ಬನೂ ಅಜ್ಜ, ಗೋಕರ್ಣನೊಬ್ಬನೂ ಇದ್ದು, ತಂದೆ ತೊಂಡನಿಗೆ ಸೋಮನಾಥ ಎಂಬ ಹೆಸರೂ ಇದ್ದು 'ತೊಂಡ' (=ಭಕ್ತ, ಈಶ್ವರಭಕ್ತ?) ಎಂಬುದು ಅವನ ಇನ್ನೊಂದು ಪ್ರಸಿದ್ಧನಾಮವಾಗಿರಬಹುದೆಂದು ಊಹಿಸಬೇಕಾಗುತ್ತದೆ.

ಮೇಲೆ ಸೂಚಿಸಿರುವ ಒಂದೆರಡು ತೊಡಕುಗಳನ್ನು ಬಿಟ್ಟರೆ–ಬೇರೆಯ ಆಧಾರಗಳು ಲಭ್ಯವಾಗುವವರೆಗೆ–ಉದಯಾದಿತ್ಯಾಲಂಕಾರದ ಚೋಳೋದಯಾದಿತ್ಯನೇ ಶಾಸನಗಳ ಉದಯ=ಉದಯಾದಿತ್ಯ= ಚೋಡೋದಯ ಎಂದು ಭಾವಿಸಲು ಅಡ್ಡಿಯಿಲ್ಲ. (ಉದಯಾದಿತ್ಯಾಲಂಕಾರ ಗ್ರಂಥದಲ್ಲೂ ಉದಯಾದಿತ್ಯ, ಚೋಳೋದಯಾದಿತ್ಯ, ಉದಯ, ಉದೆಗ ಎಂಬ ನಾಮಾಂತರಗಳು ಪ್ರಯುಕ್ತವಾಗಿರುವುದನ್ನು ಇಲ್ಲಿ ನೆನೆಯಬಹುದು.)

ஃ

## ಉದಯಾದಿತ್ಯಾಲಂಕಾರದ ಕವಿ

ಚೋಡೋದಯನ ಕಾಲ ಸು. ೧೧೦೦–೧೧೬೦ ಎಂದು ಮೇಲೆ ಸೂಚಿಸಿದ್ದೇವೆಯಷ್ಟೆ. ಪ್ರೋಲನು ಪ್ರಾಬಲ್ಯಕ್ಕೆ ಬಂದಮೇಲೆ, ಎಂದರೆ ಸು. ೧೧೨೬ರ ತರುವಾಯ, ಗೋವಿಂದನ ರಾಜ್ಯದಲ್ಲಿ ಉದಯನ ಪ್ರತಿಷ್ಠಾಪನೆಯಾಯಿತೆಂದು ಇಟ್ಟುಕೊಳ್ಳಬಹುದು. ಉದಯನ ಉಚ್ಛ್ರಾಯದ ಕಾಲವನ್ನು ಸು. ೧೧೪೦ ಎಂದು ಇಟ್ಟುಕೊಂಡು, ಆ ಸಮಾರಿನಲ್ಲಿ ಈ ಅಲಂಕಾರಗ್ರಂಥ ರಚನೆಯಾಗಿರಬೇಕೆಂದು ಊಹಿಸಬಹುದು. (ಏಕೆಂದರೆ, ಗ್ರಂಥದಲ್ಲಿ ವಿಜಯಶಾಲಿಯೂ ಪರಾಕ್ರಮಿಯೂ ಶತ್ರುಭಯಂಕರನೂ ಆದ ಉದಯಾದಿತ್ಯನ ವ್ಯಕ್ತಿತ್ವ ಲಕ್ಷ್ಯಪದ್ಯಗಳಲ್ಲಿ ಚಿತ್ರಿತವಾಗಿದೆ.) ಇದರಿಂದ, ಉದಯಾದಿತ್ಯಾಲಂಕಾರದ ಕರ್ತೃ ಕಾವ್ಯಾವಲೋಕನದ ಕರ್ತೃವಿನ

ಸಂಕ್ಷೇಪದಲ್ಲಿ ಸಂಕ್ಷೇಪವಾಗಿ ಕಾವ್ಯಶರೀರ ಲಕ್ಷಣಗಳ ದಿಗ್ದರ್ಶನ ಮಾಡಿಸುತ್ತಾನೆ.

ಗ್ರಂಥಕಾರನು ದಂಡಿಯನ್ನೇ ಉದ್ದಕ್ಕೂ ಅನುಸರಿಸಿದ್ದರೂ, ದಂಡಿ ಹೇಳಿಲ್ಲದ ಕೆಲವು ವಿಷಯಗಳನ್ನು ತಿಳಿಸಿದ್ದಾನೆ. ಚಂಪೂಕೃತಿಯನ್ನು 'ವಚನಕಾವ್ಯ' ಎಂದು ನಿರ್ದೇಶಿಸಿರುವುದು ಗಮನಾರ್ಹ. ನಾಗವರ್ಮನು ಎಂಟೇ ರಸಗಳನ್ನು ಉಲ್ಲೇಖಿಸಿರುವಲ್ಲಿ, ಕವಿರಾಜಮಾರ್ಗಕಾರನಂತೆ ಇವನೂ ನವರಸಗಳನ್ನು ಉಲ್ಲೇಖಿಸಿರುವುದು ಗಮನಾರ್ಹ; ಈ ವಿಚಾರದಲ್ಲಿ, ಕವಿರಾಜಮಾರ್ಗ, ಉದ್ಭಟನ ಕಾವ್ಯಾಲಂಕಾರ ಸಂಗ್ರಹ–ಈ ಎರಡರಲ್ಲಿ ಯಾವ ಗ್ರಂಥದಿಂದ ಇವನು ಸೂಚನೆ ಪಡೆದಿದ್ದನೆಂಬುದನ್ನು ಹೇಳುವುದು ಕಷ್ಟ ; ರಸವದಲಂಕಾರ ನಿರೂಪಣೆಯಲ್ಲಿ ಉದ್ಭಟನ ಅನುಸರಣೆಯ ಸೂಚನೆ (ನೋಡಿ : ಪ. ೪೭ರ ಟಿಪ್ಪಣಿ) ಇರುವುದರಿಂದ, ಇಲ್ಲಿಯೂ ಉದ್ಭಟನನ್ನೆ ಅನುಸರಿಸಿರಬಹುದು. ದಂಡಿಭಾಮಹರು ಶಾಂತರಸದ ಹೆಸರನ್ನು ಎತ್ತಿಲ್ಲ. ಅಂತೆಯೇ ರೀತಿ–ರಸಗಳ ಸಂಬಂಧ : ಕವಿರಾಜಮಾರ್ಗ ಕಾವ್ಯಾವಲೋಕನಗಳಲ್ಲಿ ಇವುಗಳ ನಿರೂಪಣೆ ಇದ್ದರೂ, ಕೆಲವು ಅಂಶಗಳಲ್ಲಿ ಉದಯಾದಿತ್ಯಾಲಂಕಾರದ ನಿರೂಪಣೆ ಭಿನ್ನವಾಗಿದೆ. ಕಾವ್ಯದ 'ಪದಿನೆಂಟಂಗ'ವನ್ನು ವಿವರಿಸಿರುವ ಪದ್ಯ ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ ಸೇರ್ಪಡೆಯಾಗಿರುವುದು ಅವನು ಈ ಗ್ರಂಥಕ್ಕೆ ಸಲ್ಲಿಸಿದ ಮನ್ನಣೆ. ನಾಗವರ್ಮನು ಬೆದಂಡೆ ಎಂಬ ದೇಸಿಕಾವ್ಯಪ್ರಕಾರವೊಂದರ ಹೆಸರನ್ನೆ ಹೇಳಿರುವಲ್ಲಿ, ಉದಯಾದಿತ್ಯಾಲಂಕಾರಕಾರನು ಬಹುಶಃ ಕವಿರಾಜಮಾರ್ಗವನ್ನು ಅನುಸರಿಸಿ ಬೆದಂಡೆ ಚತ್ತಾಣಗಳೆರಡರ ಹೆಸರನ್ನೂ ಹೇಳಿದ್ದಾನೆ. 'ಅರ್ಥವ್ಯಕ್ತಿ' ಗುಣವನ್ನು ವಿವರಿಸುವಲ್ಲಿ, ನೇಯ–ಅನೇಯಾರ್ಥಗಳ ನಿರೂಪಣೆಯಲ್ಲಿ (ಪ. ೧೯) ಇವನು ಕವಿರಾಜಮಾರ್ಗವನ್ನೇ ಅನುಸರಿಸರಬಹುದೆಂಬ ಅನುಮಾನಕ್ಕೆ ಅವಕಾಶವಿದೆ; ೫೨ನೆಂಯ (ಉದಾತ್ತಾಲಂಕಾರ) ಪದ್ಯವನ್ನು ಪರಿಶೀಲಿಸಿದರೆ, ಕವಿರಾಜಮಾರ್ಗವನ್ನು ಇವನು ನೋಡಿರಬಹುದೆಂಬ ಅನುಮಾನ ಬಲಪಡುತ್ತದೆ. ಆದರೆ, ಕಾವ್ಯಾವಲೋಕನವನ್ನೂ ನೋಡಿದ್ದನೆಂದು ಹೇಳಲು ಅವಕಾಶವಿಲ್ಲ. (೬೩–೬೫ನೆಯ ಪದ್ಯಗಳ ಟಿಪ್ಪಣಿಯನ್ನೂ, ಅಡಿಟಿಪ್ಪಣಿಯನ್ನೂ ನೋಡಿ.) ಕಾವ್ಯಾವಲೋಕನಕ್ಕಿಂತ ಮುಂಚೆಯೇ ಈ ಗ್ರಂಥ ರಚಿತವಾಗಿದ್ದಿರಬಹುದೆಂದು ಹೇಳಲು ಇದೂ ಒಂದು ಕಾರಣವಾಗುತ್ತದೆ.

ದಂಡಿಯ ಶ್ಲೋಕಗಳನ್ನು ಕನ್ನಡಕ್ಕೆ ಅನುವಾದಿಸುವಲ್ಲಿ ಕವಿ ತನ್ನ ಅಲಂಕಾರಶಾಸ್ತ್ರ ಜ್ಞಾನವನ್ನೂ, ಕವಿತಾಸಾಮರ್ಥ್ಯವನ್ನೂ, ಅಚ್ಚಗನ್ನಡದೊಲವನ್ನೂ ಚೆನ್ನಾಗಿ ಮೆರೆದಿದ್ದಾನೆ. ಕವಿರಾಜಮಾರ್ಗಕಾರನು ದಂಡಿಯನ್ನು ಅನುವಾದಿಸುವ

ಗೌರವಿಸುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ. ಅಲ್ಲದೆ, ಛಂದೋಂಬುಧಿಯ ಕವಿಯ ಪೂರ್ವಜರು ವೆಂಗಿ ವಿಷಯದವರೆಂಬುದು ಗಮನಾರ್ಹ.

ಉದಯಾದಿತ್ಯಾಲಂಕಾರದ ಕವಿಯೆ ಛಂದೋಂಬುಧಿಯನ್ನೂ ಬರೆದಿದ್ದನೆಂದು ಸಿದ್ಧಾಂತವಾಗಿ ಹೇಳಲು ಸಾಧ್ಯವಿಲ್ಲ ; ಈ ನಿಟ್ಟಿನಲ್ಲಿ ಸಂಭವನೀಯ ಊಹೆಗೇನೋ ಅವಕಾಶವಿದೆ.

ಆದರೆ, ಉದಯಾದಿತ್ಯಾಲಂಕಾರವನ್ನು ಬರೆದಾತ ಮಾತ್ರ ಚೋಳೋ(ಡೊ)ೕದಯಾದಿತ್ಯನಲ್ಲ, ಆತನ ಆಶ್ರಿತನಾದ ಬೇರೊಬ್ಬ ಕವಿ ಆತನ ಅಂಕಿತದಲ್ಲಿ ಅದನ್ನು (ಸು. ೧೧೪೦ ರಲ್ಲಿ) ರಚಿಸಿರಬಹುದು, ಎಂಬ ವಿಚಾರದಲ್ಲಿ ಸ್ವಲ್ಪವೂ ಸಂದೇಹವಿಲ್ಲ.

## ೬

## ಉದಯಾದಿತ್ಯಾಲಂಕಾರ ಗ್ರಂಥ[೨೨]

ಈ ಮೊದಲೇ ತಿಳಿಸಿರುವಂತೆ, ಕಾವ್ಯಾಭ್ಯಾಸಿಗಳಿಗೆ ಪ್ರಥಮ ಪಾಠ ಪುಸ್ತಕವಾಗಿ ಇದು ಉಪಯುಕ್ತವಾಗಬೇಕೆಂಬುದು ಕವಿಯ ಉದ್ದೇಶ. ಕಾವ್ಯಾದರ್ಶದ ಕರ್ತೃವಾದ ದಂಡಿ ನಿರೂಪಿಸಿರುವ ಅರ್ಥಾಲಂಕಾರಗಳನ್ನು ತಿಳಿಸುವುದೇ ಕವಿಯ ಮುಖ್ಯ ಉದ್ದೇಶ ಎಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ಗ್ರಂಥದ ೭೨ ಪದ್ಯಗಳಲ್ಲಿ ಅರ್ಧಕ್ಕಿಂತ ಹೆಚ್ಚು ಸಂಖ್ಯೆಯ ಪದ್ಯಗಳು (೪೩) ಅರ್ಥಾಲಂಕಾರಗಳ ಲಕ್ಷ್ಯಲಕ್ಷಣಗಳಿಗೆ ಮೀಸಲಾಗಿದೆ. ಶಬ್ದಾಲಂಕಾರ ಪ್ರಕರಣಕ್ಕೆ ಗ್ರಂಥದಲ್ಲಿ ಪ್ರಾಧಾನ್ಯವಿಲ್ಲ; ಯಮಕ ಪ್ರಹೇಳಿಕೆಗಳ ವಿಚಾರವನ್ನು ಎರಡು ಪದ್ಯಗಳಲ್ಲಿ ಹೇಳಿ ಮುಗಿಸಿದ್ದಾನೆ. ಗ್ರಂಥದ ಆದಿಭಾಗದಲ್ಲಿ, ಮಂಗಳ ಪದ್ಯಗಳಾದ ಮೇಲೆ (ಪ. ೧–೨),–ಕಾವ್ಯಭೇದ (ಪ. ೩) ; ಗದ್ಯ ಪದ್ಯ ಸ್ವರೂಪ (ಪ. ೩–೪); ಪದ್ಯಕಾವ್ಯ ಗದ್ಯಕಾವ್ಯ ಚಂಪೂಕಾವ್ಯಗಳ ವಿಚಾರ (ಪ. ೫–೬); ಸರ್ಗಬಂಧ ಕಾವ್ಯ (ಪ. ೬); ರೀತಿ ಅವುಗಳ ಭೇದಗಳ : ವೈದರ್ಭ, ಗೌಡ, ಪಾಂಚಾಲ ರೀತಿಗಳು (ಪ. ೭–೮); ನವರಸಗಳು (ಪ. ೯); ರೀತಿಗಳಿಗೆ ತಕ್ಕ ರಸಗಳು (ಪ. ೧೦); ಆಶೀರ್ವಾದ, ನಮಸ್ಕಾರ, ವಸ್ತುನಿರ್ದೇಶ ವಿಚಾರ (ಪ. ೧೧); ನಾಟಕದ ಉಲ್ಲೇಖ (ಪ. ೧೨) ; ಮಹಾಕಾವ್ಯದ ಪದಿನೆಂಟಂಗಂ (ಪ. ೧೩); ದಶ ಗುಣಗಳು, ಇವುಗಳ ವಿವರಣೆ (ಪ. ೧೫–೨೩)–ಈ ವಿಚಾರವಾಗಿ

೨೨. ಪ್ರತಿ ಪದ್ಯಕ್ಕೂ ವಿವರವಾಗಿ ಟಿಪ್ಪಣಿ ಬರೆದಿರುವುದರಿಂದ, ಗ್ರಂಥದಲ್ಲಿನ ವಿಷಯವನ್ನು ಕುರಿತು ಇಲ್ಲಿ ಪ್ರತ್ಯೇಕವಾಗಿ ಬರೆಯಬೇಕಾದ ಅಗತ್ಯವಿಲ್ಲವೆಂದು ಭಾವಿಸಿದ್ದೇವೆ. ಗಮನಾರ್ಹವಾದ ಕೆಲವು ಮುಖ್ಯ ಸಂಗತಿಗಳನ್ನು ಮಾತ್ರ ಕುರಿತು ಪ್ರಸ್ತಾಪಿಸಿದೆ.

ಪ್ರಿಯಕುಶಲಪೂರ್ವಕೋಚಿತ । ನಯವಿನಯೋದಾರ ರುಚಿರ ವಚನ ಪ್ರಾಯಂ।
ಪ್ರಿಯತರಮೆಂಬುದು [ಸಕಳ । ಕ್ರಿಯಾನುಗಮಿತಾರ್ಥಮಿಂತುಟಿದುದಾಹರಣಂ॥]
–ಕವಿರಾಜಮಾರ್ಗ

ಪ್ರೇಯಂ ಪ್ರಿಯತರ ವಚನಾಖ್ಯೇಯಂ.....।
–ಕಾವ್ಯಾವಲೋಕನ

("ಪ್ರೇಯಃ ಪ್ರಿಯತರಾಖ್ಯಾನಂ" ಎಂಬ ದಂಡಿಯ ಸಂಕ್ಷೇಪವಾದ ಉಕ್ತಿ ಉದಯಾದಿತ್ಯಾಲಂಕಾರ ಕಾವ್ಯಾವಲೋಕನಗಳಲ್ಲಿ ಅಷ್ಟೇ ಸಂಕ್ಷೇಪವಾಗಿ ಅನುವಾದಗೊಂಡಿದೆ; ಕವಿರಾಜಮಾರ್ಗದಲ್ಲಿಯಾದರೊ, ಪದ್ಯದ ಪೂರಯಿಕೆಗಾಗಿ ಲಕ್ಷಣವನ್ನೆ ಹಿಗ್ಗಿಸಿದ್ದಾನೆ ಕವಿ!)

ಉದಯಾದಿತ್ಯಾಲಂಕಾರಕಾರನು ದಂಡಿಯ ಎಲ್ಲ ಲಕ್ಷಣ ಶ್ಲೋಕಗಳನ್ನು ಅನುವಾದಿಸಿರುವಂತೆ, ಎಲ್ಲ ಲಕ್ಷ್ಯಗಳನ್ನೂ ಅನುವಾದಿಸಿಲ್ಲ. ಕವಿರಾಜಮಾರ್ಗಕಾರನಾದ ಶ್ರೀವಿಜಯನು ತನ್ನ ಆಶ್ರಯದಾತನಾದ ಅಮೋಘವರ್ಷ ನೃಪತುಂಗನನ್ನು ಅನೇಕ ಲಕ್ಷ್ಯ ಪದ್ಯಗಳಲ್ಲಿ ಪ್ರಶಂಸೆ ಮಾಡಿರುವಂತೆ, ಈ ಕವಿಯೂ ಅನೇಕ ಲಕ್ಷ್ಯ ಪದ್ಯಗಳಲ್ಲಿ (ಪ. ೨೦, ೩೭, ೪೬, ೫೩, ೫೪, ೫೬, ೫೭, ೬೪, ೬೭) ಉದಯಾದಿತ್ಯನನ್ನು ಕೊಂಡಾಡಿದ್ದಾನೆ; ಈ ಪದ್ಯಗಳೆಲ್ಲ ಸ್ವಂತವಾದವು. ಹೀಗೆ ಪ್ರಶಂಸಾತ್ಮಕವಲ್ಲದ ಸ್ವಂತ ಲಕ್ಷ್ಯಗಳೂ ಉಂಟು (ಪ. ೧೮, ೧೯, ೨೦, ೩೬, ೩೮, ೩೯, ೪೧, ೪೨, ೪೫); ಇವೆಲ್ಲ ಕಂದಪದ್ಯ ಲಕ್ಷಣ ವಾಕ್ಯಗಳನ್ನು ಅನುಗೂಡಿ ಬಂದ ಭಾಗಗಳು. ಈ ಪದ್ಯಗಳು ಕವಿಯ ಕವಿತಾ ಸಾಮರ್ಥ್ಯಕ್ಕೆ ನಿದರ್ಶನಗಳಾಗಿವೆ. "ಈತನ ಬಂಧವು ಪ್ರೌಢವಾಗಿದೆ" ಎಂಬ ಕವಿಚರಿತಕಾರರ ತಕ್ಕುದಾದ ಮಾತಿಗೆ ನಾವು ಸೇರಿಸಬೇಕಾದದ್ದು ಏನೂ ಇಲ್ಲ. ಆದರೂ, ವ್ಯಾಖ್ಯಾನ ರೂಪವಾಗಿ, "ಬಹುಮಟ್ಟಿಗೆ ಅಚ್ಚಗನ್ನಡದಲ್ಲಿದ್ದೂ ಪ್ರೌಢವಾಗಿದೆ" ಎಂದು ಹೇಳಬಹುದು.

**ಉದಯಾದಿತ್ಯ** : ಈ ಮೊದಲು ಪ್ರಸ್ತಾಪಿಸಿರುವ ಶಾಸನಗಳಿಂದ ಉದಯಾದಿತ್ಯನು ತೆಲುಗು ಚೋಡವಂಶಕ್ಕೆ ಸೇರಿದ ಒಬ್ಬ ದೊರೆ ಎಂದೂ, IIನೆಯ ಪ್ರೋಲನು ಇವನನ್ನು ಗೋವಿಂದನ ರಾಜ್ಯದಲ್ಲಿ ಪ್ರತಿಷ್ಠಾಪಿಸಿದನೆಂದೂ, ಬಹುಶಃ ತನ್ನ ಪುತ್ರಿಯನ್ನು ರುದ್ರದೇವನಿಗೆ ಮದುವೆ ಮಾಡಿಕೊಟ್ಟಿರಬಹುದೆಂದೂ ತಿಳಿದುಬರುವ ಕೆಲವು ಮುಖ್ಯ (ಐತಿಹಾಸಿಕ) ಸಂಗತಿಗಳನ್ನು ಈ ಹಿಂದೆಯೇ ಪ್ರಸ್ತಾವಿಸಲಾಗಿದೆ. 'ಭೂಮಂಡಲಾಧೀಶ' (ಪ. ೭೪) ಎಂಬ ವಿಶೇಷಣದಿಂದ ಇವನು ರಾಜನಾಗಿದ್ದನೆಂದು ಹೇಳಬಹುದಾದರೂ, ಶಾಸನಗಳಿಂದ ಇವನು

ಕ್ರಮದಲ್ಲಿ, ಲಕ್ಷಣ ನಿರೂಪಣೆಗೆ ಇಡಿಯ ಕಂದಪದ್ಯ ವಿನಿಯೋಗವಾಗುತ್ತದೆ. ಇದರ ಪರಿಣಾಮವಾಗಿ, ಅನೇಕ ವೇಳೆ ಲಕ್ಷಣ ನಿರೂಪಣೆಯಲ್ಲಿ ಅನಾವಶ್ಯಕವಾದ ಪ್ರಲಂಬನವೂ (Prolixity) ಪಾದಪೂರಣದ ಉಕ್ತಿಗಳೂ ಕಂಡುಬರುತ್ತವೆ. ಉದಯಾದಿತ್ಯಾಲಂಕಾರದ ಕವಿಯಾದರೋ, ಅಡಕವಾಗಿ ಹೇಳುವ ಕಲೆಯಲ್ಲಿ ಸಿದ್ಧಿಯನ್ನು ಪಡೆದಿದ್ದಾನೆ. ವಿಶೇಷತಃ ಅಲಂಕಾರ ಪ್ರಕರಣದಲ್ಲಿ ಪ್ರಾಯಿಕವಾಗಿ ಒಂದೇ ಕಂದಪದ್ಯದಲ್ಲಿ ಲಕ್ಷ್ಯ–ಲಕ್ಷಣಗಳೆರಡನ್ನೂ ಅಳವಡಿಸಿರುವುದರಿಂದ ಲಕ್ಷಣನಿರೂಪಣೆ ಸೂತ್ರಪ್ರಾಯವಾಗಿ ಪರಿಣಮಿಸಿ, ಶಾಸ್ತ್ರಮರ್ಯಾದೆಗೆ ತಕ್ಕಂತಿದೆ; ನೆನಪಿಟ್ಟುಕೊಳ್ಳಲು ಅನುಕೂಲವಾಗಿದೆ. ನಾಗವರ್ಮನು ಒಂದು ಕಂದಪದ್ಯದಲ್ಲಿ ಎರಡು ಅಲಂಕಾರಗಳ ಲಕ್ಷಣಗಳನ್ನು ಅಳವಡಿಸಿರುವುದರಿಂದ, ಇದೇ ಗುರಿಯನ್ನು ಸಾಧಿಸಿದ್ದಾನೆ. ಒಂದೆರಡು ನಿದರ್ಶನಗಳಿಂದ ಈ ಮೂವರ ನಿರೂಪಣಾ ಶೈಲಿಯನ್ನು ತೋರಿಸುವುದು ಅನುಚಿತವಾಗದು[೨೩]

**ಪರಿವೃತ್ತಿ**

ಪರಿವೃತ್ತಿ ಪದಾರ್ಥಪರ । ಸ್ಪರ ವಿನಿಮಯಮಮರಪುರಮನಹಿತ ಧರಿತ್ರೀ।
ಶ್ವರಗಿತ್ತು ತದ್ಧರೀ । ಶ್ವರಪುರಮಂ ಕೊಳ್ವನುದೆಗಧಾತ್ರೀರಮಣಂ ॥

–ಉದಯಾದಿತ್ಯಾಲಂಕಾರ

ಪರಿವೃತ್ತಿಯೆಂಬುದಕ್ಕುಂ । [ನಿರುಪಮ] ಮರ್ಥಸ್ವರೂಪ ವಿನಿಮಯವಚನಂ।
[ಪರಮಗುಣೋದಯಮದಱೌ । ಸ್ವರೂಪಮಂ ಬಗೆದುಕೊಳ್ಗೆ ಮತ್ತೀ ತೆಱದಿಂ]

–ಕವಿರಾಜಮಾರ್ಗ

(ಚೌಕ ಕಂಸದಲ್ಲಿರುವ ಮಾತುಗಳೆಲ್ಲ ಪದ್ಯಭರತಿಯ ಮಾತುಗಳು; ಲಕ್ಷ್ಯಕ್ಕೆ ಬೇರೆಯ ಪದ್ಯ.)

ಒಂದು ಕೊಟ್ಟೊಂದು ಕೊ । ಳ್ವಂದಂ ಪರಿವೃತ್ತಿಯೆಂಬುದಕ್ಕುಂ........॥

–ಕಾವ್ಯಾವಲೋಕನ

(ಪದ್ಯದ ಉತ್ತರಾರ್ಧದಲ್ಲಿ 'ಯಥಾಕ್ರಮ'ವನ್ನು ನಿರೂಪಿಸಿದೆ.)

**ಪ್ರೇಯ (ಪ್ರಿಯತರ)**

ಪ್ರಿಯವಚನಂ ಪ್ರೇಯಂ ಮ । ತ್ರಿಯಮಿನ್ನೊಂದುಂಟೆ ಕಾವ್ಯಕನ್ನೆಗೆ ನಿನ್ನಂ ।
ಪ್ರಿಯನಂ ಪಡೆದೆಂ ರಾಜಾ । ನ್ವಯದೊಳಗೆಲೆ ರಾಜಸುಕವಿರತ್ನಾಭರಣಾ ॥

–ಉದಯಾದಿತ್ಯಾಲಂಕಾರ

---

೨೩. ದಂಡಿಯ ಶ್ಲೋಕಗಳನ್ನು ಕವಿ ಹೇಗೆ ಅನುವಾದಿಸಿದ್ದಾನೆ ಎಂಬುದನ್ನು ಟಿಪ್ಪಣಿಗಳಲ್ಲಿ ವಿವೇಚಿಸಿರುವುದರಿಂದ, ಆ ವಿಚಾರವನ್ನು ಇಲ್ಲಿ ವಿವರಿಸಿಲ್ಲ.

ಉದಯಾದಿತ್ಯನಂತೆ ಇವರೆಲ್ಲರೂ ರಾಜರಾಗಿದ್ದವರು. ಕಾವ್ಯಾವಲೋಕನದ ನಾಗವರ್ಮನು ಪೂರ್ವದ ಕನ್ನಡ ಕವಿಗಳಿಂದ ಉದಾಹರಣ ಪದ್ಯಗಳನ್ನು ಆರಿಸಿಕೊಟ್ಟಿರುವಂತೆ, ಕವಿರಾಜಮಾರ್ಗಕಾರನಾಗಲಿ ಈ ಗ್ರಂಥಕಾರನಾಗಲಿ ಕೊಟ್ಟಿಲ್ಲ. ಇಲ್ಲಿನ ಲಕ್ಷ್ಯಗಳಲ್ಲಿ ಕೆಲವು ದಂಡಿಯ ಲಕ್ಷ್ಯಗಳ ಅನುವಾದ ; ಉಳಿದವು ಸ್ವಂತ ರಚನೆ. ಅಲಂಕಾರಿಕರಲ್ಲದ ಪೂರ್ವದ ಕವಿಗಳನ್ನು ಸ್ಮರಿಸುವ ಅಗತ್ಯ ಕಂಡುಬರಲಿಲ್ಲವೇನೋ ಇವನಿಗೆ. ಇವನು ಒಂದು ವೇಳೆ ಕವಿರಾಜಮಾರ್ಗವನ್ನು ನೋಡಿದ್ದಿರಬಹುದಾದರೂ, ನೇರವಾಗಿ ದಂಡಿಯನ್ನೆ ಆಶ್ರಯಿಸಿರುವುದರಿಂದ ಕವಿರಾಜಮಾರ್ಗಕಾರನನ್ನು ನೆನೆಯುವ ಅಗತ್ಯವಿಲ್ಲವೆಂದು ಭಾವಿಸಿರಬಹುದು.

## ಗ್ರಂಥಪಾಠ

ಪ್ರಕೃತ ಮುದ್ರಣದ ಪಾಠವನ್ನು ಮೂರು ಹಸ್ತಪ್ರತಿಗಳು ಮತ್ತು ಒಂದು ಮುದ್ರಿತ ಪ್ರತಿಯ ಸಹಾಯದಿಂದ ಪರಿಷ್ಕರಿಸಿ ಸಿದ್ಧಮಾಡಲಾಗಿದೆ. ಅವುಗಳ ವಿವರಗಳನ್ನು, ನಾವು ಉಪಯೋಗಿಸಿರುವ ಸಂಕೇತಾಕ್ಷರಗಳೊಂದಿಗೆ, ಕೆಳಗೆ ಕೊಟ್ಟಿದೆ :

೧. **ಮುದ್ರಿತ ಪ್ರತಿ (ಕ) :** ಇದನ್ನು ದಿ॥ ಮಂ. ಆ. ರಾಮಾನುಜಯ್ಯಂಗಾರ್ಯರೂ, ದಿ॥ ಎಸ್.ಜಿ. ನರಸಿಂಹಾಚಾರ್ಯರೂ ಕೂಡಿ ಸಂಪಾದನೆಮಾಡಿರುತ್ತಾರೆ.

---

**ಭೋಜ :** (ಕ್ರಿ.ಶ. ೧೦೧೮–೧೦೬೦ ; ಕವಿಚರಿತ್ರಕಾರರು ಕೊಟ್ಟಿರುವ ಕಾಲ ಬೇರೆ ; ನೋಡಿ, ಪು. ೨.) ಮುಂಜನ ಸೋದರ ಸಿಂಧುರಾಜನ ಮಗ. ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಿಯೂ ಇವನ ಹೆಸರು ತುಂಬ ಪ್ರಸಿದ್ಧ. 'ಸರಸ್ವತೀ ಕಂಠಾಭರಣ' ಮತ್ತು 'ಶೃಂಗಾರ ಪ್ರಕಾಶ' ಎಂಬ ಎರಡು ಅಲಂಕಾರ ಶಾಸ್ತ್ರಗ್ರಂಥಗಳನ್ನು ರಚಿಸಿದ್ದಾನೆ. ಉದಯಾದಿತ್ಯಾಲಂಕಾರದಲ್ಲಿ ಈ ಗ್ರಂಥಗಳನ್ನು ಯಾವ ಅಂಶದಲ್ಲಿಯೇ ಆಗಲಿ ಅನುಸರಿಸಿರುವುದು ಕಂಡುಬರುವುದಿಲ್ಲ. ಭೋಜನ ಹೆಸರನ್ನು ಸ್ಮರಿಸಿರುವುದರಿಂದ, ಗ್ರಂಥದ ಕಾಲ ನಿರ್ಣಯಕ್ಕೆ ಸಹಾಯವಾಗಿದೆ. **ಶ್ರೀಹರ್ಷ :** (ಕ್ರಿ.ಶ. ೬೦೬–೬೫೦) : ಭಾರತದ ಇತಿಹಾಸದಲ್ಲಿ ಅತ್ಯಂತ ಪ್ರಸಿದ್ಧ ದೊರೆಗಳಲ್ಲಿ ಒಬ್ಬ. ಕವಿಯಾಗಿದ್ದುದಲ್ಲದೆ, ಬಾಣ ಮುಂತಾದ ಅನೇಕ ಕವಿಗಳಿಗೂ ವಿದ್ವಾಂಸರಿಗೂ ಆಶ್ರಯದಾತನಾಗಿದ್ದನು. ನಾಗಾನಂದ, ರತ್ನಾವಳಿ, ಪ್ರಿಯದರ್ಶಿಕಾ ಎಂಬ ರೂಪಕಗಳನ್ನಲ್ಲದೆ ಸ್ತೋತ್ರಗಳನ್ನೂ ಒಂದು ವ್ಯಾಕರಣವನ್ನೂ ರಚಿಸಿದ್ದಾನೆ. (ನಾಟಕಗಳ ಕರ್ತೃ ಇವನಲ್ಲ, ಈತನ ಆಶ್ರಿತರಾದ ಧಾವಕನೋ ಬಾಣನೋ ಇವನ ಹೆಸರಿನಲ್ಲಿ ರಚಿಸಿರಬೇಕೆಂಬವಾದವೂ ಇದೆ.) (ಈ ವಿವರಗಳನ್ನು ಪ್ರೊ. ಕೆ.ಎ. ನೀಲಕಂಠಶಾಸ್ತ್ರಿಗಳ *History of India*- Part I : Ancient India–ಎಂಬ ಗ್ರಂಥದಿಂದ ಸಂಗ್ರಹಿಸಿದೆ.)

ಕಾಕತೀಯರ ಸಾಮಂತ ಎಂಬುದು ವ್ಯಕ್ತಪಟ್ಟಿದೆ. ಮಾಮಿಳ್ಳಪಲ್ಲಿ ಶಾಸನದಲ್ಲಿ, ಗೋಕರ್ಣ, ಉದಯಾದಿತ್ಯ, ಭೀಮ–ಇವರುಗಳು ಸೂರ್ಯವಂಶಕ್ಕೆ ಸೇರಿದವರೆಂದು ಹೇಳಿದೆ. (ಎಲ್ಲ ಕ್ಷತ್ರಿಯ ರಾಜರೂ ಸೂರ್ಯವಂಶಕ್ಕೋ ಚಂದ್ರವಂಶಕ್ಕೋ ಸೇರಿರಲೇಬೇಕಷ್ಟೆ!) ಈ ಗ್ರಂಥದಲ್ಲಿಯೂ, ಉದಯಾದಿತ್ಯನನ್ನು 'ದಿನಕಾಂತಕುಲ' (ಪ. ೨೨) ಎಂದು ಸಂಬೋಧಿಸಿರುವುದಕ್ಕೆ ಶಾಸನೋಕ್ತಿ ಪೋಷಕವಾಗಿದೆ. ಉದಯಾದಿತ್ಯನ ಶೌರ್ಯ ಪರಾಕ್ರಮಗಳು (ಪ. ೪೮, ೪೯, ೫೭, ೬೨) ; ಮೋಹಕ ರೂಪ (ಪ. ೪೭, ೫೩); ಶೃಂಗಾರಪ್ರಿಯತೆ (ಪ. ೫೦, ೫೧); ಔದಾರ್ಯ, ದಾನಪರತೆ, ವಿವೇಕಯುತವಾದ ವಿತರಣಗುಣ (ಪ. ೩೧, ೩೫, ೩೭) ; ಯಶಸ್ಸು (ಪ. ೪೦, ೫೯)– ಇವುಗಳನ್ನು ಕವಿ ಲಕ್ಷ್ಯಪದ್ಯಗಳಲ್ಲಿ ಸಂದರ್ಭೋಚಿತವಾಗಿ ಕೊಂಡಾಡಿದ್ದಾನೆ. ಇವನ ಬಿರುದುಗಳಿಂದಲೂ, ಗ್ರಂಥಸ್ಥ ಉಲ್ಲೇಖಗಳಿಂದಲೂ ಇವನು ಸ್ವತಃ ಕವಿಯಾಗಿದ್ದುದಲ್ಲದೆ ಕವಿಗಳಿಗೆ ಆಶ್ರಯದಾತನೂ ಆಗಿದ್ದನೆಂದು ಹೇಳಬಹುದು. ಗ್ರಂಥದ ಲಕ್ಷ್ಯಪದ್ಯಗಳಲ್ಲಿ ಉತ್ಪ್ರೇಕ್ಷೆ ಅತ್ಯುಕ್ತಿ ಇವೆಯೆಂದು ಒಪ್ಪಿಕೊಂಡರೂ, ಉದಯಾದಿತ್ಯನು ಮೊದಲು ತಕ್ಕಮಟ್ಟಿಗೆ ಪ್ರಬಲನಲ್ಲದಿದ್ದರೂ ಪ್ರಭಾವಶಾಲಿಯಾಗಿದ್ದ ಸ್ವತಂತ್ರ ರಾಜನಾಗಿದ್ದು, ಪ್ರೋಲನು ಪ್ರಾಬಲ್ಯಕ್ಕೆ ಬಂದಾಗ ಕಾಕತೀಯರ ಮೇಲೊಡೆತನವನ್ನು ಒಪ್ಪಿಕೊಂಡು ಅವರ ಸಾಮಂತನಾಗಿದ್ದನೆಂದೂ, ರುದ್ರದೇವನ ಬಾಂಧವ್ಯವನ್ನು ಬೆಳಸಿರಬಹುದೆಂದೂ ಹೇಳಬಹುದು.

**ಪೂರ್ವಕವಿ ಸ್ಮರಣೆ :** ನಮ್ಮ ಆಲಂಕಾರಿಕನು ದಂಡಿಯ ಕಾವ್ಯಾದರ್ಶವನ್ನು ಸಂಪೂರ್ಣವಾಗಿ ಅನುಸರಿಸಿದ್ದರೂ, ದಂಡಿಯ ಹೆಸರನ್ನು ಸ್ಮರಿಸದಿರುವುದು ಆಶ್ಚರ್ಯಕರವಾಗಿದೆ. (ದಂಡಿ, ಭಾಮಹರನ್ನು ಅನುಸರಿಸಿರುವ ಕವಿರಾಜಮಾರ್ಗಕಾರ ಶ್ರೀವಿಜಯನೂ ಕವಿಋಣವನ್ನು ಒಪ್ಪಿಕೊಂಡಿಲ್ಲ ಎಂಬ ಸಂಗತಿಯನ್ನು ಇಲ್ಲಿ ನೆನೆಯಬಹುದು.) ಆದರೆ, ಕಾವ್ಯಾವಲೋಕನದ ನಾಗವರ್ಮನು ವಾಮನ, ರುದ್ರಟ, ಭಾಮಹ, ದಂಡಿ ಇವರಿಗೆ ತಾನು ಹೊತ್ತ ಕಡವನ್ನು ಒಪ್ಪಿಕೊಂಡಿರುವುದು ಮೆಚ್ಚತಕ್ಕ ಸಂಗತಿ (ಕಾವ್ಯಾವಲೋಕನ : ಪ. ೯೬೧). ಉದಯಾದಿತ್ಯಾಲಂಕಾರದ ಕರ್ತೃ ದಂಡಿಯನ್ನು ಸ್ಮರಿಸದೆ ಮುಂಜ, ಭೋಜ, ಶ್ರೀಹರ್ಷ–ಇವರನ್ನು ಸ್ಮರಿಸಿರುವುದು (ಪ. ೭೫) ಒಂದು ದೃಷ್ಟಿಯಲ್ಲಿ ಗಮನಾರ್ಹ;[೨೪]

೨೪. **ಮುಂಜ :** ಇವನು ಮಾಳವದ ಪರಮಾರವಂಶದ ದೊರೆ. (ಕ್ರಿ.ಶ. ೯೭೪–೯೯೫). ಇವನು ಸ್ವತಃ ಕವಿಯಾಗಿದ್ದುದಲ್ಲದೆ, 'ನವಸಾಹಸಾಂಕ' ಎಂಬ ಐತಿಹಾಸಿಕ ಮಹಾಕಾವ್ಯಕರ್ತೃ, ಪದ್ಮಗುಪ್ತನಿಗೆ ಆಶ್ರಯದಾತ, ಮುಂಜನಿಗೆ 'ವಾಕ್ಪತಿ' ಎಂಬ ಬಿರುದಿತ್ತು.

ದೊರೆತಿರಬೇಕು. (ನಾವು 'ಕ' ಪ್ರತಿಯ ಪಾಠಾಂತರಗಳನ್ನು ನಿರ್ದೇಶಿಸುವಾಗ, ಕ೧ ಕ, ಕಗ, ಎಂದು ನಿರ್ದೇಶಿಸಿದ್ದೇವೆ.)

ii. ಉಪಲಬ್ಧ ಹಸ್ತಪ್ರತಿಗಳಲ್ಲಿ 'ಅ' ಪ್ರತಿಯೆ ಪ್ರಾಚೀನತಮ ಎಂಬುದು ಸ್ವಯಂ ಸ್ಪಷ್ಟವಾಗಿದೆ. ಅವುಗಳಲ್ಲಿ ಅದೊಂದೆ ಸಮಗ್ರವಾದ್ದರಿಂದ, ಅದನ್ನೇ ಆಧಾರಭೂತ ಪ್ರತಿಯಾಗಿಟ್ಟುಕೊಂಡು, ಉಳಿದವನ್ನು ಪಾಠಾಂತರ ಪರಿಶೀಲನೆಗಾಗಿ ಮಾತ್ರ ಉಪಯೋಗಿಸಿಕೊಂಡಿದೆ.

iii. ಓಲೆಯ ಪ್ರತಿಗಳಲ್ಲಿ 'ೞ'ಕಾರ ಪ್ರಯೋಗವಿಲ್ಲ. 'ಕ' ಪ್ರತಿಯ ಸಂಪಾದಕರು ತಮ್ಮ ವಿವೇಚನೆಯನ್ನು ಉಪಯೋಗಿಸಿ 'ೞ'ಕಾರ ಪ್ರಯೋಗವನ್ನು ಅಂಗೀಕರಿಸಿದ್ದಾರೆ. ಇದು ಉಚಿತವಾಗಿರುವುದರಿಂದ, ನಾವು 'ೞ'ಕಾರ ಪ್ರಯೋಗ ವಿಚಾರದಲ್ಲಿ ಅವರನ್ನೇ ಅನುಸರಿಸಿದ್ದೇವೆ.

ಗ್ರಂಥದ ಕರ್ತೃತ್ವ ವಿಚಾರದಲ್ಲಿ ಪ್ರಬಲವಾದ ಸಂದೇಹವು ತಲೆದೋರಿದ್ದರಿಂದ ಪೀಠಿಕೆ ಇಷ್ಟು ದೀರ್ಘವಾಗಿ ಬೆಳೆಯಬೇಕಾಯಿತು. ಅಲಂಕಾರ ಶಾಸ್ತ್ರಕ್ಕೆ–ಅದರಲ್ಲಿ ಮುಖ್ಯವಾಗಿ 'ಅಲಂಕಾರ' ಪ್ರಕರಣಕ್ಕೆ–ಸಂಬಂಧಪಟ್ಟ ಅತ್ಯಂತ ಪ್ರಾಚೀನ ಗ್ರಂಥಗಳು ಮೂರೆ : ಕವಿರಾಜಮಾರ್ಗ, ಉದಯಾದಿತ್ಯಾಲಂಕಾರ, ಕಾವ್ಯಾವಲೋಕನ. ಈ ಮೂರನ್ನೂ ತೌಲನಿಕವಾಗಿ ಅಧ್ಯಯನಮಾಡಬಯಸುವವರಿಗೆ ಸ್ವಲ್ಪಮಟ್ಟಿಗಾದರೂ ನೆರವಾಗಲೆಂಬ ಉದ್ದೇಶವಿಟ್ಟುಕೊಂಡದ್ದರಿಂದ, ಟಿಪ್ಪಣಿಗಳ ಭಾಗವೂ ವಿಸ್ತಾರವೇ ಆಯಿತು. ವಿಷಯವಿವೇಚನೆಯಲ್ಲಿ ಕಂಡುಬರಬಹುದಾದ ಲೋಪದೋಷಗಳನ್ನು ವಿದ್ವಾಂಸರು ಕೃಪೆಮಾಡಿ ತೋರಿಸಿಕೊಟ್ಟಲ್ಲಿ, ಮುಂದಿನ ಮುದ್ರಣದಲ್ಲಿ–ಆ ಭಾಗ್ಯ ಈ ಗ್ರಂಥಕ್ಕೆ ದೊರೆತರೆ–ಅವುಗಳನ್ನು ಸರಿಪಡಿಸಿಕೊಳ್ಳುತ್ತೇನೆ.

ಬೆಂಗಳೂರು **ಎಂ.ವಿ. ಸೀತಾರಾಮಯ್ಯ**

೧೨–೧೦–೧೯೬೯

ಇದು ಕ್ರಿ.ಶ. ೧೮೯೪ರಲ್ಲಿ ಅಚ್ಚಾಗಿ ಕರ್ಣಾಟಕ ಕಾವ್ಯಮಂಜರಿ ಗ್ರಂಥಮಾಲೆಯಲ್ಲಿ ಪ್ರಕಟವಾಗಿದೆ.

೨. **ಕೆ.ಪಿ. ೨೩೧ (ಅ) :** ಮೈಸೂರು ವಿಶ್ವವಿದ್ಯಾನಿಲಯದ ಮಾನಸಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ತಾಡವೋಲೆಯ ಪ್ರತಿ ; ಸಮಗ್ರವಾಗಿದೆ. ಶಕಟರೇಫಾಕ್ಷರ ಪ್ರಯೋಗವಾಗಿದೆ ; ರಳಾಕ್ಷರ (ೞ) ಪ್ರಯೋಗವಿಲ್ಲ. ಅಲ್ಲಲ್ಲಿ ಹುಳು ಹೊಡೆದಿದೆ. ಬರಹ ಸುಂದರ.

೩. **ಕೆ.ಪಿ. ೧೨೯ (ಇ) :** ಮಾನಸಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯಲ್ಲಿನ ಓಲೆಯ ಪ್ರತಿ ; ಅಲ್ಲಲ್ಲಿ ಹುಳು ಹೊಡೆದು, ಒಂದೊಂದು ಅಕ್ಷರ ಲೋಪವಾಗಿದೆ. ಶಕಟರೇಫ ಪ್ರಯೋಗವಿಲ್ಲ. ಪ್ರತಿ ಅಸಮಗ್ರ : ೬೯ನೆಯ ಪದ್ಯದ ಪೂರ್ವಾರ್ಧದವರೆಗೆ ಮಾತ್ರವಿದೆ.

೪. **ಕೆ.ಎ. ೩೦ (ಉ) :** ಮೇಲುಕೋಟೆಯಲ್ಲಿ ಕ್ರಿ.ಶ. ೧೮೮೯ರಲ್ಲಿ ಸಂಪ್ರತಿತವಾದದ್ದು. ಕಾಗದದ ಪ್ರತಿ. ಗ್ರಂಥಾರಂಭಕ್ಕೆ ಮೊದಲು ಎರಡು ಪತ್ರಗಳಲ್ಲಿ ೧–೨೫ ಪದ್ಯ ಪದ್ಯಗಳ ವಿಷಯಾನುಕ್ರಮಣಿಕೆ ಇದೆ. ಗ್ರಂಥದ ಕೊನೆಯಲ್ಲಿ "Udayadityalankara, copied at Melukote, Nov. 1889" ಎಂದಿದೆ. ಮೇಲ್ಕಂಡ (ಇ) ಪ್ರತಿಯಲ್ಲಿ ಯಾವ ಕಡೆ ಗ್ರಂಥ ನಿಂತಿದೆಯೋ ಇಲ್ಲಿಯೂ ಅದೇ ಕಡೆ ನಿಂತುಹೋಗಿ, ಅದರಂತೆಯೇ ಅಸಮಗ್ರವಾಗಿದೆ. ಇಲ್ಲಿ ಕಂಡುಬರುವ ವಿಷಯಾನುಕ್ರಮಣಿಕೆ (ಇದನ್ನು ಮುಂದೆ ಪ್ರತ್ಯೇಕವಾಗಿ ಕೊಟ್ಟಿದೆ) ಓಲೆಯ (ಇ) ಪ್ರತಿಯಲ್ಲಿ ಇಲ್ಲದಿರುವುದರಿಂದ, ಇದನ್ನು ಈ ಗ್ರಂಥಪ್ರತಿಯ ಪ್ರತಿಕಾರನು –ಬಹುಶಃ ಆತ ಪಂಡಿತನಾಗಿರಬೇಕು–ಬರೆದು ಸೇರಿಸಿರಬೇಕು. ಇದು 'ಇ' ಪ್ರತಿಯ (ಕೆ.ಪಿ. ೧೨೯) ಮರುಪ್ರತಿ ಎಂಬಲ್ಲಿ ಸಂಶಯವಿಲ್ಲ. ('ಇ' ಪ್ರತಿಯೂ ಮೇಲುಕೋಟೆಯಿಂದ ಬಂದುದಿರಬೇಕು). ಗ್ರಂಥಸಂಪಾದನೆಯ ದೃಷ್ಟಿಯಿಂದ ಇದು ಅಷ್ಟು ಉಪಯುಕ್ತವಲ್ಲ.

**ವಿಶೇಷ ಟಿಪ್ಪಣಿ :**

i. 'ಕ' ಪ್ರತಿಯಲ್ಲಿ, ಕ.ಗ.ಚ ಎಂಬ ಸಂಕೇತಗಳುಳ್ಳ ಮೂರು ಪ್ರತಿಗಳ ಪಾಠಾಂತರಗಳನ್ನು ಸಂಪಾದಕರು ಕೊಟ್ಟಿರುತ್ತಾರೆ. 'ಗ' ಪಾಠಾಂತರವು ಅ. ಇ. ಉ–ಪ್ರತಿಗಳಲ್ಲಿ ಕಂಡುಬರುವುದಿಲ್ಲ. ಆದ್ದರಿಂದ, 'ಕ' ಪ್ರತಿಯ ಸಂಪಾದಕರಿಗೆ ಈ ಮೂರು ಪ್ರತಿಗಳಲ್ಲದೆ ಬೇರೊಂದು ಪ್ರತಿಯೂ

ರಸ, ರೀತಿ, ದಶಪ್ರಾಣ, ಅಷ್ಟಾದಸವರ್ಣನೆ ಸಹಾ ಹೇಳಿದನು. ಸಾಹಿತ್ಯವೆಂಬ ರತ್ನಕ್ಕೆ ಸಮುದ್ರಪ್ರಾಯನಾದವನು ಅಲಂಕಾರವನ್ನೂ ಹೇಳುತ್ತಾನೆ.

೨೫ನೇ ಕಂದದಲಾಗಾಯಿತು ಅಲಂಕಾರಲಕ್ಷಣ ಮತ್ತು ಉದಾಹರಣ ಸಹಾ ಹೇಳುತ್ತಾನೆ. ಗ್ರಂಥ ಪೂರ್ತಿಯಾಗಿಲ್ಲ.

## ೨. ಸಂಕ್ಷಿಪ್ತಗಳು

ಅ ... ಉದಯಾದಿತ್ಯಲಂಕಾರ : (ಓಲೆಯಗರಿಯ ಹಸ್ತಪ್ರತಿ) (ಸಮಗ್ರ)
ಇ ... " " " " (ಅಸಮಗ್ರ)
ಉ ... ಉದಯಾದಿತ್ಯಾಲಂಕಾರ : (ಕಾಗದದ ಪ್ರತಿ : ಅಸಮಗ್ರ)
ಉದಾ. ... ಉದಾಹರಣೆ.
ಕ ... ಉದಯಾದಿತ್ಯಾಲಂಕಾರ : ಪ್ರಥಮ ಮುದ್ರಣದ ಪ್ರತಿ. (೧೮೯೪)
ಕ.೧ ... ಪ್ರಥಮ ಮುದ್ರಣದ (ಮೇಲ್ಕಂಡ 'ಕ') ಪ್ರತಿಯಲ್ಲಿ 'ಕ' ಎಂದು ನಿರ್ದೇಶಿಸಿರುವ ಪಾಠಾಂತರ.
ಗ ... " " 'ಗ' ಎಂದು ಸೂಚಿಸಿರುವ ಪಾಠಾಂತರ.
ಚ ... " " 'ಚ' ಎಂದು ಸೂಚಿಸಿರುವ ಪಾಠಾಂತರ.
ಕ. ರಾ. ಮಾರ್ಗ ... (ಶ್ರೀವಿಜಯ ಕೃತ) ಕವಿರಾಜಮಾರ್ಗ.
ಕಾವ್ಯಾದ. ... (ದಂಡಿಯ) ಕಾವ್ಯಾದರ್ಶ.
ಕಾವ್ಯಾಲಂ. ... (ಭಾನುಹನ) ಕಾವ್ಯಾಲಂಕಾರ.
ಕಾವ್ಯಾವ. ... (ನಾಗವರ್ಮನ) ಕಾವ್ಯಾವಲೋಕನ.
ಕಾ. (ವ್ಯಾ.) ಸೂ. ... (ವಾಮನನ) ಕಾವ್ಯಾಲಂಕಾರ ಸೂತ್ರ ವೃತ್ತಿ.
ಕ್ರಿ. ಶ. ... ಕ್ರಿಸ್ತಶಕೆ.
ಧಾ. ... ಧಾತು.
ಪ. ... ಪದ್ಯ(ಗಳು).
ಪಾ. ... ಪಾಠಾಂತರ
ಪು. ... ಪುಟ(ಗಳು).
ಪ್ರ. ಮು. ... ಪ್ರಥಮ ಮುದ್ರಣ.
ಭಾ. ಕಾ. ಮೀ. ... ಭಾರತೀಯ ಕಾವ್ಯಮೀಮಾಂಸೆ.
ಮಾರ್ಗಕಾರ ... ಕವಿರಾಜಮಾರ್ಗಕಾರ (=ಶ್ರೀವಿಜಯ)
ಸ. ... ಸರ್ವತ್ರ : ಎಲ್ಲ ಹಸ್ತ ಪ್ರತಿಗಳಲ್ಲಿಯೂ ಇರುವ ಪಾಠ.
ಸಂ ... (ಸಂದರ್ಭಾನುಸಾರ), ಸಂಸ್ಕೃತ ; ಸಂಪಾದಕ.

# ಪರಿಶಿಷ್ಟ

## ೧. [ಕೆ. ಎ. ೩೦ ('ಉ') ಪ್ರತಿಯಲ್ಲಿ ಕೊಟ್ಟಿರುವ ವಿಷಯಾನುಕ್ರಮಾಣಿಕೆ]

(ಉದಯಾದಿತ್ಯಾಲಂಕಾರ–ಗ್ರಂಥಕರ್ತ, ಹೆಸರು, ಉದಯಾದಿತ್ಯ, ಸಾಹಿತ್ಯಾ ರತ್ನಾಕರ. ಈ ಗ್ರಂಥವು ಕಂದವೃತ್ತ ರೂಪವಾಗಿದೆ.)

**ಈ ಗ್ರಂಥದಲ್ಲಿ ಹೇಳುವ ವಿಷಯಗಳು**

೧ನೇ ಕಂದದಲ್ಲಿ, ಸರಸ್ವತೀ ಸ್ತೋತ್ರ.

೨ನೇ ಕಂದದಲ್ಲಿ, ಬಾಲಕರು ಕವಿತ್ವವನ್ನು ಹೇಳುವ ವಿಷಯದಲ್ಲಿ ಪ್ರಕಾಶಿಸುವ ಹಾಗೆ ಸ್ವಲ್ಪದಿಂದ ಹೇಳುತ್ತೇನೆಂದು ಪ್ರತಿಜ್ಞೆಮಾಡುತ್ತಾನೆ.

೩–೪–೫–೬ ಈ ಕಂದಗಳಲ್ಲಿ, ಗದ್ಯ, ಪದ್ಯ, ಚಂಪೂ ಪ್ರಬಂಧ ೩ರ ಲಕ್ಷಣವನ್ನು ಹೇಳುತ್ತಾನೆ.

೭–೮ ಈ ಕಂದಗಳಲ್ಲಿ, ನವರಸಗಳ ಹೆಸರುಗಳನ್ನು ಹೇಳುತ್ತಾನೆ.

೧೦ನೇ ಕಂದದಲ್ಲಿ, ವೈದರ್ಭಾದಿ ರೀತಿಗಳಲ್ಲಿ ಬರತಕ್ಕ ರಸಗಳ[ನ್ನು] ಹೇಳುತ್ತಾನೆ.

೧೧ನೇ ಕಂದದಲ್ಲಿ, ಕಾವ್ಯವನ್ನು ಮಾಡುವಾಗ್ಗೆ ಮೊದಲಲ್ಲಿ ಹೇಳಬೇಕಾದ ವಿಷಯಗಳನ್ನು ಹೇಳುತ್ತಾನೆ.

೧೨ನೇ ಕಂದದಲ್ಲಿ, ಕಾವ್ಯಕ್ಕೂ ನಾಟಕಾದಿಗಳಿಗೂ ಲಕ್ಷಣಭೇದವೆಂದು ಹೇಳುತ್ತಾನೆ.

೧೩ನೇ ಕಂದದಲ್ಲಿ, ಅಷ್ಟಾದಶವರ್ಣನೆಯ ಹೆಸರುಗಳನ್ನು ಹೇಳುತ್ತಾನೆ.

೧೪ನೇ ಕಂದದಲ್ಲಿ, ಕಾವ್ಯಗಳಿಗೆ ಪ್ರಾಣವೆನ್ನುವ ೧೦ ಗುಣಗಳ ಹೆಸರು ಹೇಳುತ್ತಾನೆ.

೧೫ನೇ ಕಂದದಲ್ಲಿ, ಶ್ಲೇಷಗುಣ, ಪ್ರಸಾದಗುಣ, ಇವುಗಳ ಲಕ್ಷಣ ಹೇಳುತ್ತಾನೆ.

೧೬ನೇ ಕಂದದಲ್ಲಿ ಸಮಗುಣ, ಮಧುರ ಗುಣ, ಇವುಗಳ ಲಕ್ಷಣ ಹೇಳುತ್ತಾನೆ.

೧೭ನೇ ಕಂದದಲ್ಲಿ ವಾಙ್ಮಾಧುರ್ಯ ಗುಣವನ್ನು ಹೇಳುತ್ತಾನೆ.

೧೮ನೇ ಕಂದದಲ್ಲಿ, ಸುಕುಮಾರ ಗುಣವನ್ನು ಹೇಳುತ್ತಾನೆ.

೧೯ನೇ ಕಂದದಲ್ಲಿ, ಅರ್ಥವ್ಯಕ್ತ ಗುಣವನ್ನು ಹೇಳುತ್ತಾನೆ.

೨೦ನೇ ಕಂದದಲ್ಲಿ, ಉದಾಹರಣವನ್ನು ಹೇಳುತ್ತಾನೆ.

೨೧. ೨೨ನೇ ಕಂದಗಳಲ್ಲಿ, ಓಜಗುಣವನ್ನು ಹೇಳುತ್ತಾನೆ.

೨೩ನೇ ಕಂದದಲ್ಲಿ ಸಮಾಧಿ ಗುಣವನ್ನು ಹೇಳುತ್ತಾನೆ.

೨೪ನೇ ಕಂದದಲ್ಲಿ ದೊರೆಯಾದ ಸೋಮನಾಥನ ಮಗನಾದ ಚೋಳನಾದ ಉದಯಾದಿತ್ಯನು

## ಉದಯಾದಿತ್ಯಾಲಂಕಾರ ಕುರಿತ ಲೇಖನಗಳು

# ೧. ಉದಯಾದಿತ್ಯಾಲಂಕಾರ : ಕೆಲವು ಸಮಸ್ಯೆಗಳು

ಉದಯಾದಿತ್ಯಕೃತವೆಂದು ಪ್ರಸಿದ್ಧವಾಗಿರುವ ಉದಯಾದಿತ್ಯಾಲಂಕಾರ ಒಂದು ಚಿಕ್ಕ ಅಲಂಕಾರ ಗ್ರಂಥ. ಇದರಲ್ಲಿ ೭೬ ಪದ್ಯಗಳಿವೆ. ಇದು ಸ್ವತಂತ್ರ ಕೃತಿಯೂ ಅಲ್ಲ, ಕವಿರಾಜಮಾರ್ಗ ಕಾವ್ಯಾವಲೋಕನಗಳಲ್ಲಿ ಕಂಡುಬರುವ ವಿಷಯವಿಸ್ತರವಾಗಲಿ ಸ್ವತಂತ್ರ ದೃಷ್ಟಿಯಾಗಲಿ ಇದರಲ್ಲಿ ಗೋಚರವಾಗುವುದೂ ಇಲ್ಲ. "ಕಿಱಿದಱಿಂ ತಿಳಿ [ಪಿದಪೆಂ] ಶ್ರೀಭರಿತ ಬಾಲಕರ್ ಕವಿತಾಭಣಿತೆಯೊಳ್ ಅಮರ್ದು ನಿಮಿರ್ದು ನೆಱೆಮೆಱೆ ವಿನೆಗಂ" ಎಂಬ ಕವಿಯ ಮಾತನ್ನು ಗಮನಿಸಿದರೆ, ಕಾವ್ಯಾಭ್ಯಾಸಿಗಳಿಗೆ ಇದು ಪ್ರಥಮಪಾಠ ಪುಸ್ತಕವಾಗಿ ಉಪಯೋಗಕ್ಕೆ ಬರಲೆಂಬುದೇ ಆತನ ಆಶಯವೆಂದು ಕಂಡುಬರುತ್ತದೆ. ಅದು ಬಹುಮಟ್ಟಿಗೆ ನೆರವೇರಿದೆಯೆಂದರೆ ಕವಿಯ ಪ್ರಯತ್ನವನ್ನು ಮೆಚ್ಚಿಕೊಂಡಂತೆ. ಆದ್ದರಿಂದ ದಂಡಿಯ ಕಾವ್ಯಾದರ್ಶದ ಲಕ್ಷಣ ಲಕ್ಷ್ಯಗಳನ್ನೇ ಬಹುಮಟ್ಟಿಗೆ ಅನುಸರಿಸಿರುವ ಈ ಗ್ರಂಥದ ಬಗೆಗೆ ಪ್ರತ್ಯೇಕ ಲೇಖನ ಬರೆಯುವಮಟ್ಟಿನ ವಿಷಯಪ್ರಾಮುಖ್ಯ ಇದರಲ್ಲಿ ಇಲ್ಲವೆಂಬುದು ನಿಜ. ಆದರೆ, ಕನ್ನಡದ ಅಲಂಕಾರಶಾಸ್ತ್ರಗ್ರಂಥಗಳಲ್ಲಿ ಮೂರನೆಯದು ಎಂದು ಪರಿಗಣಿತವಾಗಿರುವ ಈ ಗ್ರಂಥ ಸಂಶೋಧನಾ ದೃಷ್ಟಿಯಿಂದ ಅಧ್ಯಯನಯೋಗ್ಯವೆಂದು ತೋರುತ್ತದೆ. ಇದರ ಬಗೆಗೆ ಬರೆದಿರುವ ಪೂರ್ವವಿದ್ವಾಂಸರ ಗಮನಕ್ಕೆ ಬಾರದಿದ್ದ ಒಂದೆರಡು ಸಮಸ್ಯೆಗಳನ್ನು ವಿದ್ವಾಂಸರ ಮುಂದಿಟ್ಟು, ಅವಕ್ಕೆ ನಮಗೆ ತೋರಿದ ಪರಿಹಾರಗಳನ್ನು (ಏನಾದರೂ ಇದ್ದರೆ) ಸೂಚಿಸುವುದೇ ಈ ಲೇಖನದ ಉದ್ದೇಶ.

ಉದಯಾದಿತ್ಯಾಲಂಕಾರವನ್ನು ಸಂಪಾದನೆ ಮಾಡಿ ಕರ್ಣಾಟಕ ಕಾವ್ಯಮಂಜರಿಯಲ್ಲಿ ಮೊದಲು (೧೮೯೪ರಲ್ಲಿ) ಪ್ರಕಟಿಸಿದ ಸಂಪಾದಕದ್ವಯರಾದ ಎಸ್.ಜಿ. ನರಸಿಂಹಾಚಾರ್ಯರೂ ಮಂ. ಆ. ರಾಮಾನುಜಯ್ಯಂಗಾರ್ಯರೂ ಕವಿ ಕಾವ್ಯ ವಿಚಾರವನ್ನು ಕುರಿತು ಕೇವಲ ಸಂಕ್ಷೇಪವಾದ ಮುನ್ನುಡಿಯನ್ನು ಬರೆದಿದ್ದಾರೆ. ಈ ಸಂಪಾದಕರುಗಳು ಹೇಳಿರುವ ಸಂಗತಿಗಳನ್ನೇ ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತ್ರೆಯಲ್ಲಿ (ಪ್ರಥಮಸಂಪುಟ, ೧೯೨೪,

| | |
|---|---|
| ಸು. | ... ಸುಮಾರು |
| ಸ್ವೀಪಾ. | ... ಸ್ವೀಕೃತಪಾಠ. |
| p., pp | ... page, pages |
| f f | ... and following pages. |
| X | ... ತ್ರುಟಿತ ಇಲ್ಲವೆ ನಷ್ಟಪಾಠ. |

**ಕರ್ತೃತ್ವ :** ಗ್ರಂಥದ ಕರ್ತೃ ಉದಯಾದಿತ್ಯ ಎಂಬುದಕ್ಕೆ ಪ್ರಬಲವಾದ ಬಾಹ್ಯಪ್ರಮಾಣಗಳಾವುವೂ ಇಲ್ಲ. ಸೂಕ್ತಿಸುಧಾರ್ಣವದಲ್ಲಿ ಉದಯಾದಿತ್ಯಾಲಂಕಾರದ ಪದ್ಯವೊಂದು ಉದ್ಧೃತವಾಗಿರುವ ಅಂಶ ಕಾಲನಿರ್ಣಯಕ್ಕೆ ಸಹಾಯಕವೇ ಹೊರತು, ಕರ್ತೃತ್ವ ನಿರ್ಣಯಕ್ಕಲ್ಲ. ಸಾಳ್ವನು (ಕ್ರಿ.ಶ. ೧೫೫೦) ತನ್ನ ರಸರತ್ನಾಕರದಲ್ಲಿ ಪರಸ್ಪರ ವಿರುದ್ಧರಸಗಳ ವಿಚಾರವನ್ನು ಹೇಳುವ ಸಂದರ್ಭದಲ್ಲಿ ಒಂದು ಪದ್ಯದ ಕೆಳಗೆ 'ಇದುದಯಾದಿತ್ಯನ ಮತಂ' ಎಂದಿದೆ. ರಸರತ್ನಾಕರದ ಸಂಪಾದಕರು ಪ್ರಸಕ್ತ ಪದ್ಯಕ್ಕೆ ಸಂಬಂಧಪಟ್ಟ ಅಡಿಟಿಪ್ಪಣಿಯಲ್ಲಿ "ಇದು ಕವಿಕಾಮನ ಶೃಂಗಾರರತ್ನಾಕರದಲ್ಲಿದೆ. ಉದಯಾದಿತ್ಯನ ಅಲಂಕಾರದಲ್ಲಿ ವಿರೋಧರಸಗಳ ವಿಚಾರವೇ ಇಲ್ಲ. ಆದುದರಿಂದ ಇದು ಕವಿಕಾಮನ ಮತಂ ಎಂದಿರಬೇಕು" ಎಂದು ತಿದ್ದುಪಾಟನ್ನು ಸೂಚಿಸಿರುತ್ತಾರೆ.[೩]

ಅವರು ಅಭಿಪ್ರಾಯಪಟ್ಟಿರುವಂತೆ, ಹಸ್ತಪ್ರತಿಯಲ್ಲಿ ಪ್ರಮಾದವಶದಿಂದ ಈ ದೋಷ ಸಂಭವಿಸಿದೆ. ಉದಯಾದಿತ್ಯಾಲಂಕಾರವು ಉದಯಾದಿತ್ಯಕೃತ ಎಂಬ ತಪ್ಪು ತಿಳಿವಳಿಕೆಯಿದ್ದುದರಿಂದಲೇ ದೋಷ ಸಂಭವಿಸಿರುವುದು. ಇದು ಹೇಗಿದ್ದರೂ, ಕರ್ತೃತ್ವ ಸ್ಥಾಪನೆಗೆ ಇದು ಆಧಾರವಾಗಲಾರದು. ನಮಗೆ ತಿಳಿದುಬಂದಿರುವವುಟ್ಟಿಗೆ ಉದಯಾದಿತ್ಯನನ್ನಾಗಲಿ ಅವನ ಅಲಂಕಾರಗ್ರಂಥವನ್ನಾಗಲಿ ಬೇರೆ ಯಾವ ಕವಿಯೂ ಸ್ಮರಿಸಿಲ್ಲ.

ಕರ್ತೃತ್ವ ನಿಷ್ಕರ್ಷೆಗೆ ಇನ್ನು ಉಳಿದಿರುವ ಪ್ರಮಾಣವೆಂದರೆ, ಅಂತರಿಕ ಪ್ರಮಾಣ.

ಗ್ರಂಥಕರ್ತ ಉದಯಾದಿತ್ಯ ಎಂಬ ಅನುಮಾನಕ್ಕೆ ಎಡೆಗೊಡುವ ಪದ್ಯ ಇದು: ಎಸೆವೀ ಕಾವ್ಯಶರೀರಮಂ ಪೊಸಯಿಸಿರ್ದಷ್ಟಾದಶಾಂಗಂಗಳಂ
ರಸರೀತಿಕ್ರಮದಿಂದಮೊಂದಿದ ದಶಪ್ರಾಣಂಗಳೊಂ[ದಂ] ದಮಂ
ವಸುಧಾನಾಥನ ಸೋಮನಾಥನ ಸುತಂ ಚೋಳೋದಯಾದಿತ್ಯನಿಂ–
ತುಸಿರ್ದಂ ಪೇಳ್ದಪನಿನ್ನಲಂಕೃತಿಗಳಂ ಸಾಹಿತ್ಯರತ್ನಾಕರಂ. [ಪದ್ಯ ೨೪]

ಇಲ್ಲಿ ಕರ್ತೃ ಸೋಮನಾಥನ ಮಗನಾದ ಚೋಳೋದಯಾದಿತ್ಯ ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಹಲವಾರು ಪದ್ಯಗಳಲ್ಲಿ ಬರುವ ಉದಯಾದಿತ್ಯ. ಉದಯನರೇಶ್ವರ, ಉದಯಕ್ಷಿತೀಶ, ಉದೆಗ, ಉದೆಗನೃಪ, ಭೂಮಂಡಲಾಧೀಶ

---

೩. 'ರಸರತ್ನಾಕರ : ಮದರಾಸು ವಿಶ್ವವಿದ್ಯಾನಿಲಯ ಪ್ರಕಟನೆ, ೧೯೩೨ : ಸಂಪಾದಕರು : ಎ. ವೆಂಕಟರಾವ್ ಮತ್ತು ಎಚ್. ಶೇಷಯ್ಯಂಗಾರ್ ; ಸೂತ್ರ ೬೮ (ಎ) ಪು. ೪೯.

ಪುಟಗಳು ೧೫೯–೧೬೧) ಇನ್ನೂ ಸ್ವಲ್ಪ ವಿಸ್ತಾರವಾಗಿ ನಿರೂಪಣೆ ಮಾಡಿರುತ್ತಾರೆ. (ಈ ಗ್ರಂಥ ಅಷ್ಟು ಮುಖ್ಯವಲ್ಲವಾದ್ದರಿಂದ, ಇದರ ಬಗೆಗೆ ಇತರ ವಿದ್ವಾಂಸರು ವಿಚಾರ ವಿಮರ್ಶೆ ಮಾಡಿರುವುದು ನಮ್ಮ ಗಮನಕ್ಕೆ ಬಂದಿಲ್ಲ). ಇವರ ತೀರ್ಮಾನಗಳನ್ನು ಹೀಗೆ ಸಂಗ್ರಹಿಸಬಹುದು:

ಗ್ರಂಥಕರ್ತ ಉದಯಾದಿತ್ಯ. "ವಸುಧಾನಾಥನ ಸೋಮನಾಥನ ಸುತಂ ಚೋಳೋದಯಾದಿತ್ಯಂ', 'ಸೋಮಮಹೀಭೃನ್ನಂದನಂ' ಎಂದು ಹೇಳಿಕೊಂಡಿರುವುದರಿಂದ ಈತನು ಆವನೋ ಒಬ್ಬ ಸೋಮನಾಥನೆಂಬ ಚೋಳರಾಜನ[1] ಮಗನೆಂದು ತಿಳಿಯುತ್ತದೆ." ಈತನು ಪಟ್ಟಾಭಿಷಿಕ್ತನಾಗಿ ಆಳುತ್ತಿದ್ದ ರಾಜ. ಈತನಿಗೆ ಕವಿರತ್ನಶೇಖರ, ಸಾಹಿತ್ಯವಿದ್ಯಾಧರ, ರಾಜಸುಕವಿರತ್ನಾಭರಣ, ಕವಿರಾಜಶೇಖರ, ಸಾಹಿತ್ಯರತ್ನಾಕರ, ಎಂಬ ಬಿರುದುಗಳು ಇದ್ದುವು. ಈತನು ಒಂದು ಪದ್ಯದಲ್ಲಿ ಭೋಜನ ಹೆಸರನ್ನು ಸ್ಮರಿಸಿರುವುದರಿಂದ ಭೋಜನ ಕಾಲಕ್ಕಿಂತ (ಕ್ರಿ.ಶ. ೯೯೭–೧೦೫೩) ಈಚಿನವನು. "ಅಲ್ಲದೆ ಮಲ್ಲಿಕಾರ್ಜುನನು (ಸು. ೧೨೪೫) ಸೂಕ್ತಿಸುಧಾರ್ಣವದಲ್ಲಿ ಮಹಾಕಾವ್ಯದ ಹದಿನೆಂಟಂಗಗಳನ್ನು ಹೇಳುವ–

ಉದಧಿಪುರಾಧಿಪಸುತಮಂ । ತ್ರದೂತಗಮನಾಜಿ ವಿರಹ ಪರಿಣಯಸುರತ।
ರ್ತುದಿನೇಶಚಂದ್ರಮಧುಕುಭೃ । ದುದವಕನಸ್ಪತಿಯೆ ಕೃತಿಗೆ ಪದಿನೆಂಟಂಗಂ॥

ಎಂಬ ಪದ್ಯವನ್ನು ಈ ಕವಿಯ ಗ್ರಂಥದಿಂದ ಉದ್ಧರಿಸಿ ಬರೆದಿರುವುದರಿಂದ ಈತನು ೧೨೪೫ಕ್ಕೆ ಹಿಂದೆ ಇದ್ದನೆಂಬುದು ವ್ಯಕ್ತವಾಗುತ್ತದೆ. ಕರ್ಣಾಟಕ ದೇಶದಲ್ಲಿ ಚೋಳರ ಪ್ರಾಬಲ್ಯವು ೧೨ನೆಯ ಶತಮಾನಕ್ಕೆ ಹಿಂದೆಯೇ ಕ್ಷೀಣದೆಶೆಗೆ ಬಂದಂತೆ ಶಾಸನಗಳಿಂದ ತಿಳಿವುದರಿಂದ ಈತನು ಸ್ವತಂತ್ರರಾಜನಾಗಿದ್ದಿರಲಾರನು. ಆವ ದೊರೆಯಲ್ಲಿಯೋ ಸಾಮಂತರಾಜನಾಗಿದ್ದಿರಬೇಕು. ಇವನು ಸುಮಾರು ೧೧೫೦ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ."[2]

ಮೇಲ್ಕಂಡ ತೀರ್ಮಾನಗಳನ್ನು – (೧) ಗ್ರಂಥಕರ್ತ ಉದಯಾದಿತ್ಯ, (೨) ಅವನು ಚೋಳವಂಶದ ಸಾಮಂತರಾಜ, (೩) ಅವನ ಕಾಲ ಸು. ೧೧೫೦ – ಪುನರ್ಪರಿಶೀಲನೆಗೆ ಒಳಪಡಿಸಿದಾಗ ಹುಟ್ಟಿಕೊಳ್ಳುವ ಸಮಸ್ಯೆಗಳಾವುವು ಎಂಬುದನ್ನು ಇನ್ನು ವಿಚಾರಮಾಡಬಹುದು.

೧. ಚೋಳರ ಇತಿಹಾಸದಲ್ಲಿ ತಜ್ಞರಾದ ಪ್ರೊ॥ ಕೆ.ಎ. ನೀಲಕಂಠಶಾಸ್ತ್ರಿಗಳು ಬಹುಶಃ ಕವಿಚರಿತ್ರಕಾರರನ್ನೆ ಅನುಸರಿಸಿ ಹೀಗೆ ಬರೆದಿರುತ್ತಾರೆ. "Udayadityalankara (c. 1150) is a short work on poetics based on Dandin's Kavyadarsha by a chola prince after whom it is named. History of India, Part (1963), P. 313.

೨. ಕವಿಚರಿತ್ರೆ. ಸಂ. ೧, ಪು. ೧೫೯–೧೬೦

ಮಧ್ಯಮಪುರುಷಪ್ರಯೋಗವು ಕವಿ ಉದಯಾದಿತ್ಯನಾಗಿರದೆ ಬೇರೊಬ್ಬನೆಂದು ಸ್ಪಷ್ಟಪಡಿಸುತ್ತದೆ. ಈ ಎರಡು ಬಗೆಯ ಉಕ್ತಿಗಳಲ್ಲಿನ ಪರಸ್ಪರ ವಿರೋಧವನ್ನು ಪರಿಹರಿಸುವುದಕ್ಕೆ ಇರುವುದು ಒಂದೇ ದಾರಿ: ಉದಯಾದಿತ್ಯ ದೊರೆಯ ಆಶ್ರಯವನ್ನು ಪಡೆದ ಕವಿ ಆಶ್ರಯದಾತನ ಅಂಕಿತದಲ್ಲಿ ಕಾವ್ಯ ಬರೆಯುವ ಉದ್ದೇಶವನ್ನು ಹೊಂದಿರುವುದು ಸ್ಪಷ್ಟವಾಗಿದೆ. ಉದಯಾದಿತ್ಯನೇ ಗ್ರಂಥಕರ್ತ ಎಂಬ ಅರ್ಥ ಬರುವಂತೆ ಒಂದು ಪದ್ಯವನ್ನೂ ರಚನೆಮಾಡಿದ್ದಾನೆ. ಲಕ್ಷ್ಯಪದ್ಯಗಳಲ್ಲಿ ರಾಜನ ಸೌಂದರ್ಯ, ಪರಾಕ್ರಮ, ಔದಾರ್ಯ ಮುಂತಾದ ಗುಣಗಣವನ್ನು ಪ್ರಶಂಸಿಸುವ ಅವಸರದಲ್ಲಿ, ಉದ್ದೇಶಪೂರ್ವಕವಾಗಿಯೋ ಅಥವಾ ತನ್ನ ಅರಿವಿಲ್ಲದೆಯೋ ತನ್ನ ಕರ್ತೃತ್ವದ ಸುಳಿವುಗೊಟ್ಟಿದ್ದಾನೆ. "ಮತ್ಪ್ರಿಯಮಿನ್ನೊಂದುಂಟೆ? ಕಾವ್ಯಕನ್ಯೆಗೆ ನಿನ್ನಂ ಪ್ರಿಯನಂ ಪಡೆದೆಂ ರಾಜಾನ್ವಯದೊಳಗೆ" ಎಂಬ ಮಾತಿನಲ್ಲಿ ತನ್ನ ಕಾವ್ಯಕ್ಕೆ ಉದಯಾದಿತ್ಯನೇ ಸ್ವಾಮಿ, ಆಶ್ರಯದಾತ, ಎಂಬ ವಿಷಯವನ್ನು ಸ್ಪಷ್ಟಪಡಿಸಿದ್ದಾನೆ. (ಈ 'ಕಾವ್ಯಕನ್ಯೆ' ಅಲಂಕಾರ ಗ್ರಂಥವಾಗಿರಬಹುದು, ಇಲ್ಲವೆ ಬೇರೊಂದು ಕಾವ್ಯವೇ ಆಗಿರಬಹುದು). ಗ್ರಂಥವನ್ನು ಪ್ರಭುವಿನ ಅಂಕಿತದಲ್ಲಿಯೇ ಬರೆಯಬೇಕೆಂದಬುದು ಕವಿಯ ಉದ್ದೇಶವಾದ್ದರಿಂದ ತನ್ನ ಹೆಸರನ್ನು ಎಲ್ಲಿಯೂ ಹೇಳಿಕೊಂಡಿಲ್ಲ.

ಉದಯಾದಿತ್ಯಾಲಂಕಾರ ಗ್ರಂಥದ ಸಂಪಾದಕರೂ ಕವಿಚರಿತ್ರಕಾರರೂ ತಿಳಿಸಿರುವಂತೆ ಉದಯಾದಿತ್ಯಾಲಂಕಾರದ ಕರ್ತೃ ಉದಯಾದಿತ್ಯತ್ಯನಲ್ಲ, ಅವನ ಆಶ್ರಿತಕವಿ, ಎಂಬುದು ನಮ್ಮ ಖಚಿತವಾದ ಅಭಿಪ್ರಾಯ. ಈ ಕವಿ ಯಾರಿರಬಹುದು ಎಂಬುದು ಮುಂದಿನ ಸಮಸ್ಯೆ. ಅದನ್ನು ಪರಿಹರಿಸುವ ಪ್ರಯತ್ನವನ್ನು ಈ ಮುಂದೆ ಮಾಡಿದೆ.

೨

**ಉದಯಾದಿತ್ಯಾಲಂಕಾರದ ಕವಿ :** ಉದಯಾದಿತ್ಯಾಲಂಕಾರದ ಕೆಲವು ಪದ್ಯಗಳಲ್ಲಿ ಉದಯಾದಿತ್ಯಾ, ರಾಜಸುಕವಿರತ್ನಾಭರಣಾ, ಉದೆಗ, ಉದೆಗನೃಪ ಎಂದು ಉದಯಾದಿತ್ಯ ರಾಜನನ್ನು ಕುರಿತು ಅಲಂಕಾರ ವಿಚಾರವನ್ನು ಹೇಳಿದಂತೆ ಸಂಬೋಧನೆಯಿದ್ದರೂ, ಎರಡು ಪದ್ಯಗಳಲ್ಲಿ (ಸ. ೪೭, ೪೮) ಕೆಳದಿ, ಅಬ್ಜಲೋಚನೇ ಎಂದು ಪ್ರಿಯೆಯನ್ನು ಕುರಿತು ಹೇಳಿದಂತೆ ಸಂಬೋಧನೆಯಿದೆ. ಇದು ಕೂತೂಹಲಕಾರಿಯಾದ ಅಂಶ. ಕೆಳದೀ, ಅಬ್ಜದಳನೇತ್ರೇ, ಅಂಬುಜವದನೇ ಮುಂತಾಗಿ ಕವಿ ಪತ್ನಿಯನ್ನು ಸಂಬೋಧಿಸಿ ಹೇಳಿರುವುದು ಛಂದೋಂಬುಧಿಯಲ್ಲಿ ಸರ್ವಸಾಮಾನ್ಯವಾಗಿದೆ. ಇದರಿಂದ, ಛಂದೋಂಬುಧಿಯನ್ನು ಬರೆದ ಕವಿಯೆ

ನಪ್ಪುದಂಉದಯಾದಿತ್ಯ ಎಂಬ ಉಲ್ಲೇಖಗಳು ಉದಯಾದಿತ್ಯನೂ ರಾಜನಾಗಿದ್ದಿರಬೇಕೆಂಬ ಅಂಶಗಳನ್ನು ಖಚಿತಪಡಿಸುತ್ತವೆ. ಆದರೆ, ಉದಯಾದಿತ್ಯನ ಹೆಸರು ಬೇರೆ ಬೇರೆ ರೂಪಗಳಲ್ಲಿ ಉಲ್ಲೇಖಗೊಂಡಿರುವ ಕೆಲವು ಪದ್ಯಗಳನ್ನು ಸೂಕ್ಷ್ಮವಾಗಿ ಪರೀಶೀಲಿಸಿದರೆ, ಕರ್ತೃ ಉದಯಾದಿತ್ಯನಾಗಿರದೆ ಬೇರೊಬ್ಬ ಕವಿ ಎಂಬ ಅನುಮಾನಕ್ಕೂ ಅವಕಾಶವಿದೆ. ಇಂಥ ಅನುಮಾನಕ್ಕೆ ಆಸ್ಪದ ಕೊಡುವ ಕೆಲವು ಪದ್ಯಪಂಕ್ತಿಗಳು :

೧. ನಿನ್ನುದಯದಿಂದಂ, ಉದಯಧರಿತ್ರೀಕಾಂತ,
ದಿನಕಾಂತಕುಲ, ಕೇಳ್, ಈ ಲೋಕಮೆ ಕೃತಾರ್ಥಂ, – ಪ. ೨೨.

೨. ಬಡತನಮಂ ಬಿದಿ ಬುಧರೊಳ್ ಪಡೆದಂ ;
[ಪೊರೆದರ] ನುದೆಗ ನೀನವರೆಡರಂ
ಕೆಡಿಸಲುದಯಿಸಿದೆ. – ಪ. ೩೫

೩. ಸರಿ. ವಿತರಣಗುಣದೊಳ್ ಸುರತರುವುಂ ನೀನು;
ವಿವೇಕಿ ನೀನ್, ಉದಯನರೇಶ್ವರ.

೪. ಸವಿಶೇಷವಚನಮತಿಶಯಂ – ಅವಧರಿಸು,
ಉದಯಕ್ಷಿತೀಶ – ಪ. ೪೦

೫. ಪ್ರಿಯವಚನಂ ಪ್ರೇಯಂ: ಮತ್ಪ್ರಿಯಮಿನ್ನೊಂದುಂಟೆ?
ಕಾವ್ಯಕನ್ಯೆಗೆ ನಿನ್ನಂ ಪ್ರಿಯನಂ ಪಡೆದೆಂ ರಾಜಾನ್ವಯ
ದೊಳಗೆಲೆರಾಜಸುಕವಿರತ್ನಾಭರಣಾ – ಪ. ೪೬

೬. ಸೇವ್ಯಮಾಮರುನ್ನದಿಯುಂ, ಉದೆಗ,
ನಿನ್ನಯ ಸಿರಿಯುಂ.

೭. ಉದೆಗ, ನಿನ್ನಂ ಪೊರೆಗಿಂತಾ ಶಿವನಾ
ದಾನವರಿಪುವಾ ಶತದಳಗರ್ಭರಾ ತ್ರಿಶಕ್ತಿ ಸಮೇತರ್.

ಮೇಲೆ ಉದ್ಧರಿಸಿರುವ ವೃತ್ತದಲ್ಲಿ ಉದಯಾದಿತ್ಯನೇ ಕರ್ತೃವಿರಬಹುದು ಎಂಬ ಸೂಚನೆಯಿದ್ದರೂ ಮುಂದಿನ ಪದ್ಯಪಂಕ್ತಿಗಳು ಕರ್ತೃ ಬೇರೆಯೇ ಇರಬೇಕೆಂದು ಸ್ಪಷ್ಟವಾಗಿ ಸಾರುತ್ತಿವೆ. ಕವಿಗಳು ಸ್ವವಿಷಯುವನ್ನು ಪ್ರಥಮಪುರುಷದಲ್ಲಿಯೂ, ಉತ್ತಮಪುರುಷದಲ್ಲಿಯೂ ತಿಳಿಸುವ ಸಂಪ್ರದಾಯವುಂಟು. ಆದರೆ, ಮೇಲಿನ ಉಕ್ತಿಗಳಲ್ಲಿರುವಂತೆ, ಸಂಭೋಧನೆ ಹಾಗೂ ವಿಧ್ಯರ್ಥಗಳನ್ನುಳ್ಳ ಮಧ್ಯಮಪುರುಷಪ್ರಯೋಗ – ಅದರಲ್ಲಿಯೂ ಕಡೆಯ (೨) ದೃಷ್ಟಾಂತವಾಕ್ಯವ ಆಶೀರ್ವಚನ ರೂಪದ

ಅಭಿಪ್ರಾಯವನ್ನು ಕವಿಚರಿತ್ರಕಾರರು ಮೊದಲು ಹೊಂದಿದ್ದರು.[೬] ತರುವಾಯ, "ಧಾರಾಪುರದ ಭೋಜರಾಜನು ೧೦೧೦ರಲ್ಲಿ ಆಳುವುದಕ್ಕೆ ಆರಂಭಿಸಿದಂತೆ ತಿಳಿಸುವುದರಿಂದ ಕಾದಂಬರಿಯನ್ನು ಬರೆದ ನಾಗವರ್ಮನು ಛಂದೋಂಬುಧಿಯನ್ನು ಬರೆದ ನಾಗವರ್ಮನಿಗಿಂತ ಬೇರೊಬ್ಬನಾಗಿರಬಹುದೋ ಎಂಬ ಸಂದೇಹಕ್ಕೆ ಅವಕಾಶವಿರುವಂತೆ ತೋರುತ್ತದೆ" ಎಂದು ತಮ್ಮ ನಿಲುವನ್ನು ಮಾರ್ಪಡಿಸಿಕೊಂಡರು.[೭] ನಾವು ಊಹಿಸಿರುವಂತೆ, ಉದಯಾದಿತ್ಯಾಲಂಕಾರದ ಕರ್ತೃವೇ ಛಂದೋಂಬುಧಿಯ ಕರ್ತೃವೂ ಆಗಿದ್ದಾನೆ ಎಂದಿಟ್ಟುಕೊಳ್ಳುವುದಾದರೆ, ಕಾದಂಬರಿಯ ಕರ್ತೃ ಬೇರೆಯೇ ಆಗುತ್ತಾನೆ. ಏಕೆಂದರೆ, ಕಾದಂಬರಿಯ ಕರ್ತೃವಿನ ಆಶ್ರಯದಾತ 'ನರೇಂದ್ರ ಚಂದ್ರ' ಎಂದು ಊಹಿಸಬಹುದಾಗಿದೆ; ನಮ್ಮ ಊಹೆಯ ಪ್ರಕಾರ, ಉದಯಾದಿತ್ಯಾಲಂಕಾರ – ಛಂದೋಂಬುಧಿಗಳ ಕರ್ತೃವಿನ ಆಶ್ರಯದಾತ ಉದಯಾದಿತ್ಯ (ಛಂದೋಂಬುಧಿಯನ್ನು ಅವನ ಆಶ್ರಯದಲ್ಲಿ ಬರೆದಿಲ್ಲದಿರಬಹುದು). ಈ ಚಂದ್ರನು 'ಬನವಾಸಿಯ ನಾಗರಖಂಡವನ್ನು ಆಳುತ್ತಿದ್ದ ಸಾಮಂತಚಂದ್ರನೆಂದೂ ಕಾದಂಬರಿ ೧೦೧೪ರಲ್ಲಿ ಅಥವಾ ಅದಕ್ಕೆ ೨೫ ವರುಷ ಹಿಂದೆ ಹುಟ್ಟಿದ್ದಿರಬೇಕೆಂದೂ ಶ್ರೀಮಾನ್ ಎಚ್. ಚೆನ್ನಕೇಶವಯ್ಯಂಗಾರ್ಯರು ಅಭಿಪ್ರಾಯಪಡುತ್ತಾರೆ." (ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ೧೪–೫).[೮] ಉದಯಾದಿತ್ಯಾಲಂಕಾರವಾದರೋ ಸು. ೧೧೨೫ಕ್ಕೆ ಈಚೆಗೆ ಹುಟ್ಟಿರಬೇಕೆಂದು ಊಹಿಸಲು ಅವಕಾಶವಿದೆ. ಉದಯಾದಿತ್ಯಾಲಂಕಾರ ಮತ್ತು ಛಂದೋಂಬುಧಿಗಳು ಏಕಕರ್ತೃಕವೆಂದು ಭಾವಿಸುವುದಾದರೆ, ಚೆನ್ನಕೇಶವಯ್ಯಂಗಾರ್ಯರು ಅಭಿಪ್ರಾಯಪಡುವಂತೆ ಕಾದಂಬರಿ ೧೧ನೆಯ ಶತಮಾನದ ಆದಿಭಾಗಕ್ಕೆ ಸೇರಿದ್ದಾದರೆ, ಕಾದಂಬರಿ ಮತ್ತು ಛಂದೋಂಬುಧಿಗಳು ಏಕಕರ್ತೃಕವಾಗಲಾರವು. ಈ ಬಗ್ಗೆ ನಿಶ್ಚಿತವಾಗಿ ಏನನ್ನೂ ಹೇಳಲು ಸಾಧ್ಯವಾಗದಿದ್ದರೂ, ಕಾದಂಬರಿ ಮತ್ತು ಛಂದೋಂಬುಧಿಗಳು ಭಿನ್ನಕರ್ತೃಕಗಳೆಂಬ ಕವಿಚರಿತ್ರಕಾರರ ಸಂದೇಹದ ನಿಲುವೇ ಹೆಚ್ಚು ಸಮರ್ಥನೀಯವಾಗಿ ಕಂಡುಬರುತ್ತದೆ. (ಟಿ. ಎಸ್. ವೆಂಕಣ್ಣಯ್ಯನವರು ಹೇಳುವಂತೆ ಶೈಲಿ ಹಿಡಿತಕ್ಕೆ ಸಿಕ್ಕುವ ವಿಷಯವಲ್ಲದಿದ್ದರೂ, ಈ ಎರಡು ಕೃತಿಗಳ ಭಿನ್ನಶೈಲಿ ಭಿನ್ನಕರ್ತೃಕವಾದಕ್ಕೆ ಪುಷ್ಟಿಯನ್ನು ಕೊಡುತ್ತದೆ). ಛಂದೋಂಬುಧಿ ಮತ್ತು ಉದಯಾದಿತ್ಯಾಲಂಕಾರಗಳು ಎರಡೂ ಶಾಸ್ತ್ರಗಳು,

---

೬. ಕವಿಚರಿತ್ರೆ, ಸಂ I, ಪು. ೫೨,೫೪

೭. ಕವಿಚರಿತ್ರೆ, ಸಂ. III ; 'ಗ್ರಂಥಶುದ್ಧಿ' ಪು. ೪೭೮

೮. ಕಾದಂಬರೀ ಸಂಗ್ರಹ, ಪೀಠಿಕೆ, ಪು. ೪

ಉದಯಾದಿತ್ಯಾಲಂಕಾರವನ್ನೂ ಬರೆದಿರಬಾರದೇಕೆ ಎಂಬ ಸಂದೇಹವು ತಲೆದೋರುತ್ತದೆ. (ಛಂದೋಂಬುಧಿಯ ಮೇಲ್ಪಂಕ್ತಿಯನ್ನನುಸರಿಸಿ ಉದಯಾದಿತ್ಯಾಲಂಕಾರದ ಕವಿ ಹಾಗೆ ಬರೆದಿರಬಹುದು ಎಂದು ಊಹೆಗೂ ಅವಕಾಶವಿದೆ). ಹೀಗೆ ಅನುಮಾನಿಸುವುದಕ್ಕೆ ಪ್ರತಿಬಂಧಕವಾಗಿರುವ ಅಂಶವೆಂದರೆ, ಛಂಧೋಂಬುಧಿಯ ಕರ್ತೃ ನಾಗವರ್ಮ ಹಾಗೂ ಚೋಳೋದಯಾದಿತ್ಯ ಇವರ ಕಾಲಗಳಲ್ಲಿ ತೋರಿಬರುವ ವ್ಯತ್ಯಾಸ. ಉದಯಾದಿತ್ಯನು ಕಾಕತೀಯರಾಜ II ನೆಯ ಪ್ರೋಲನ ಸಮಕಾಲೀನ ಎಂದು ನಿರ್ಧರಿಸಬಹುದು. (ಇದನ್ನು ಮುಂದೆ ವಿಚಾರಮಾಡಿದೆ). ಪ್ರೋಲನಕಾಲ ಕ್ರಿ.ಶ.ಸು. ೧೧೧೭–೧೧೫೦. ಛಂದೋಂಬುಧಿಯ ಎರಡು ಪದ್ಯಗಳಲ್ಲಿ 'ಅರಸಂ ರಕ್ಕಸಗಂಗಂ', 'ಗುರುಗಳ್ ನೆಗಟ್ದಜಿತಸೇನದೇವರ್', ಸಂಧಿವಿಗ್ರಹಿ ರಾಯಂ ಕೊಂಡಾಡಿ ಪೊರೆದಂ' ಎಂದು ನಾಗವರ್ಮನ ಕಾಲದ ದೊರೆ, ಅವನ ಗುರು ಮತ್ತು ಆಶ್ರಯದಾತರ ಉಲ್ಲೇಖಗಳಿವೆ. ಈ ವ್ಯಕ್ತಿಗಳ ಕಾಲಗಳು ತಿಳಿದುಬಂದಿರುವುದರಿಂದ, ಛಂದೋಂಬುಧಿಯ ನಾಗವರ್ಮನ ಕಾಲವನ್ನು ಕ್ರಿ.ಶ.ಸು. ೯೯೦ ಎಂದು ಕವಿಚರಿತ್ರಕಾರರು ನಿರ್ಧರಿಸಿದ್ದಾರೆ.[೪] ಕಿಟ್ಟೆಲ್ ರವರು ಪ್ರಪ್ರಥಮವಾಗಿ ಅಚ್ಚುಹಾಕಿಸಿದ ಛಂದೋಂಬುಧಿಯಲ್ಲಿ ಈ ಎರಡು ಪದ್ಯಗಳಿಲ್ಲ, ಛಂದೋಂಬುಧಿಯಲ್ಲಿ ಅನೇಕ ಪ್ರಕ್ಷಿಪ್ತ ಪದ್ಯಗಳಿರುವುದರಿಂದಲೂ, "ಕವಿ ಜೈನನೆಂಬುದಕ್ಕೆ ಈ ಎರಡು ಪದ್ಯಗಳನ್ನು ಬಿಟ್ಟರೆ ಈ ಗ್ರಂಥದಲ್ಲಿ ಬೇರೆ ಯಾವ ಅಂತರ ಪ್ರಮಾಣವೂ ಇಲ್ಲ" ದಿರುವುದರಿಂದಲೂ ಈ ಎರಡು ಪದ್ಯಗಳೂ ಪ್ರಕ್ಷಿಪ್ತಗಳೆಂದು ಭಾವಿಸಲು ಅವಕಾಶವಿದೆ.[೫] ಅವು ಪ್ರಕ್ಷಿಪ್ತಗಳೇ ಆಗಿದ್ದರೆ, ಛಂದೋಂಬುಧಿಯ ಕಾಲ ಕ್ರಿ.ಶ. ೯೯೦ ಎಂಬ ಸಿದ್ಧಾಂತ ಆಧಾರ ರಹಿತವಾಗುತ್ತದೆ. ಆ ಸಂದರ್ಭದಲ್ಲಿ, ಅನಿರ್ದಿಷ್ಟಕಾಲದಲ್ಲಿ ರಚಿತವಾದ ಛಂದೋಂಬುಧಿಯ ಕರ್ತೃವೇ ಉದಯಾದಿತ್ಯಾಲಂಕಾರವನ್ನೂ ರಚಿಸಿರುವನೆಂದು ಊಹಿಸುವುದಕ್ಕೆ ಕಾಲಸಂಬಂಧವಾದ ಪ್ರತಿಬಂಧಕವಿರುವುದಿಲ್ಲ. ಕಾದಂಬರಿಯನ್ನು ಬರೆದ ನಾಗವರ್ಮನೇ ಛಂದೋಂಬುಧಿಯನ್ನು ಬರೆದ ನಾಗವರ್ಮ ಎಂಬ

---

೪. ಕವಿಚರಿತ್ರೆ, ಸಂ. I, ಪು. ೫೨.

೫. ಈ ವಿಚಾರದಲ್ಲಿ ನಿರ್ಣಾಯಕವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ. ಈ ವಿಷಯ ವಿಚಾರ ವಿಮರ್ಶೆಗೆ 'ಕಾದಂಬರೀ ಸಂಗ್ರಹ' ಕ್ಕೆ ಪ್ರೊ॥ ಟಿ.ಎಸ್. ವೆಂಕಣ್ಣಯ್ಯನವರು ಬರೆದಿರುವ ಪೀಠಿಕೆಯನ್ನು ನೋಡಬಹುದು. (ಕಾದಂಬರೀ ಸಂಗ್ರಹ, ೩ನೆಯ ಮುದ್ರಣ, ೧೯೫೩, ಪು ೯, ೧೨) ಪದ್ಯಗಳು ಪ್ರಕ್ಷಿಪ್ತಗಳೆಂಬ ಕಡೆಗೇ ನಮ್ಮ ಒಲವಿದೆ.

ಚೋಳೋದಯಾದಿತ್ಯ ಎಂಬ ಪ್ರತ್ಯೇಕ ಐತಿಹಾಸಿಕ ವ್ಯಕ್ತಿ ಒಬ್ಬನಿದ್ದನೇ ಎಂಬುದನ್ನು ತಿಳಿಯಬೇಕಾಗಿದೆ. ಈ ವಿಚಾರದಲ್ಲಿ ಕಾಕತೀಯ ವಂಶದ ರುದ್ರದೇವ (ಕ್ರಿ.ಶ.ಸು. ೧೧೫೦–೧೯೫) ಮತ್ತು ಅವನ ತಂದೆ ಪ್ರೋಲ (II) (ಕ್ರಿ.ಶ.ಸು. ೧೧೧೭–೧೧೫೦) – ಇವರ ಕಾಲದ ಶಾಸನಗಳು ಸ್ವಲ್ಪ ಬೆಳಕು ಬೀರುತ್ತವೆ.

ಕಾಕತೀಯ ರುದ್ರದೇವನ ಅನಮಕೊಂಡ (ಹನುಮಕೊಂಡ) ಶಾಸನದಲ್ಲಿ ಒಬ್ಬ ಉದಯನ ಉಲ್ಲೇಖವಿದೆ. ಈ ಶಾಸನದ ಕಾಲ ಶಾಲಿವಾಹನ ಶಕೆ ೧೦೮೪ (ಕ್ರಿ. ಶ. ೧೧೬೨–೬೩).[೧೦]

ಅನಮಕೊಂಡದ ಶಾಸನದಲ್ಲಿ ನಮಗೆ ಪ್ರಸಕ್ತವಾದದ್ದು ಉದಯಾದಿತ್ಯನಿಗೆ ಸಂಬಂಧಪಟ್ಟ ಭಾಗಗಳು ಮಾತ್ರ. ಈ ಶಾಸನದಲ್ಲಿ 'ಉದಯಾದಿತ್ಯ' ಎಂಬ ಹೆಸರು ಉಕ್ತವಾಗಿಲ್ಲ. ೨ನೆಯ ಪ್ರೋಲನ ವಿಜಯಗಳನ್ನು ವರ್ಣಿಸುವ ಸಂದರ್ಭದಲ್ಲಿ, ಅವನು ಗೋವಿಂದನೆಂಬವನನ್ನು ಸೋಲಿಸಿ ಅವನ ರಾಜ್ಯವನ್ನು ಉದಯ (ಅಥವಾ ಚೋಡೋದಯ) ನಿಗೆ ಕೊಟ್ಟನೆಂದು ಶಾಸನದಲ್ಲಿ ಹೇಳಿದೆ.[೧೧]

---

of petty chieftains in the Telugu and Karnataka country claiming to have been of the Kasyapa Gotra and to have descended from karkala and ruled at Uraiyur."

ಇದೇ ಪುಟದ ಅಡಿಟಿಪ್ಪಣಿ : "Even the kakatiyas sometimes connected themselves with karikala." - Epigraphica Indica : vol. V. P. 123, Vol. XI. P. 338.

೧೦. Anamakonda Inscription of Rudradeva - J. F. Fleet : Indian Antiquary : vol. XI, January 1882, pp. qff. (ಚೋಳೋದಯಾದಿತ್ಯನ ವಿಚಾರವಾಗಿ ಪ್ರೊ॥ ಡಿ. ಎಲ್. ನರಸಿಂಹಾಚಾರ್ಯರಲ್ಲಿ ಪ್ರಸ್ತಾಪಮಾಡಿದಾಗ, ಅವರು ಈ ಶಾಸನದ ಕಡೆಗೆ ನನ್ನ ಗಮನವನ್ನು ಸೆಳೆದು ಉಪಕಾರಮಾಡಿದ್ದಾರೆ. ಬೆಂಗಳೂರು ವಿಶ್ವ ವಿದ್ಯಾನಿಲಯದ ಇತಿಹಾಸವಿಭಾಗದಲ್ಲಿ ಸಂಶೋಧನ ಸಹಾಯಕ (Research Assistant) ರಾಗಿದ್ದುಕೊಂಡು, ಓರುಂಗಲ್ಲಿನ ಕಾಕತೀಯರ ಬಗೆಗೆ ಸಂಶೋಧನೆ ಮಾಡುತ್ತಿರುವ ಕುಮಾರಿ ಎಂ. ಪ್ರತಿಭಾ ಅವರು ತೆಲುಗು ಚೋಡವಂಶದ ಉದಯಾದಿತ್ಯನ ಬಗೆಗೆ ಬೇರೆ ಕೆಲವು ಶಾಸನ ಸಾಮಗ್ರಿಯನ್ನು ಒದಗಿಸಿಕೊಟ್ಟು ನೆರವಾಗಿದ್ದಾರೆ. ಇವರಿಬ್ಬರಿಗೂ ನಾನು ಕೃತಜ್ಞ.

೧೧. "ತತ್ ಪುತ್ರಃ...ಪ್ರೋಲೇರಾಜ ಇತಿ ಆಗಮತ್ ವೈರೀಂದ್ರ ದರ್ಪಾಪಹಃ... ಚಾಲುಕ್ಯ ಚೂಡಾಮಣಿಂ ಶ್ರೀಮತ್ ತೈಲಪದೇವಂ ಯುದ್ಧೇ ಬಬಂಧಕ್ಷಣಾತ್, .... ಕ್ಷಣಾತ್ ಭಕ್ತಾನುರಾಗಾತ್ ಜಜಾಹು ... ಗೋವಿಂದರಾಜಾಹ್ವಯಂ ಬಧ್ವೋನ್ಮುಚ್ಯ ತದೋದಯ ಕ್ಷಿತಿಭೃತೇ ರಾಜ್ಯಂ ದದೌ."

ಈ ಘಟನೆಯ ಸಂಬಂಧವಾಗಿ ಡಿ.ಸಿ. ಗಾಂಗುಲಿಯವರು ಹೀಗೆ ಬರೆದಿದ್ದಾರೆ : "In the early years of his reign prola II owed allegiance to Vikramaditya VI, after whose death in A.D. 1126 the Calukya empire begain to disintegrate.

ಆದ್ದರಿಂದ ಇವೆರಡರ ಕರ್ತೃ ಒಬ್ಬನೇ ಆಗಿರಬಹುದಾದ ಸಂಭವವಿದೆ. (ಕಾವ್ಯಾವಲೋಕನ, ಭಾಷಾಭೂಷಣ, ವಸ್ತುಕೋಶ – ಈ ಮೂರು ಶಾಸ್ತ್ರಗ್ರಂಥಗಳ ಕರ್ತೃ– IIನೆಯ ನಾಗವರ್ಮ – ಒಬ್ಬನೇ ಎಂಬ ಅಂಶವನ್ನು ಇಲ್ಲಿ ನೆನೆಯಬಹುದು).

## ೩

## ಉದಯಾದಿತ್ಯಾಲಂಕಾರದ ಕಾಲ

ದಕ್ಷಿಣ ಭಾರತದ ಇತಿಹಾಸದಲ್ಲಿ ಅನೇಕ ಉದಯಾದಿತ್ಯರುಗಳು ಆಗಿಹೋಗಿದ್ದಾರೆ. ಮಾಳವದ ಪರಮಾರವಂಶ, ಹೊಯ್ಸಳವಂಶ, ನೊಳಂಬವಂಶ – ಈ ಪ್ರಸಿದ್ಧರಾಜ ವಂಶಗಳಲ್ಲಿ ಉದಯಾದಿತ್ಯ ಎಂಬ ಹೆಸರಿನ ದೊರೆಗಳು ಇದ್ದುದು ಚರಿತ್ರ ಗ್ರಂಥಗಳಿಂದ ತಿಳಿದುಬರುತ್ತದೆ. ಉದಯಾದಿತ್ಯಾಲಂಕಾರ ಗ್ರಂಥದಲ್ಲಿ 'ಚೋಳೋದಯಾದಿತ್ಯ' ಎಂದು ಸ್ಪಷ್ಟವಾಗಿ ಉಲ್ಲೇಖವಿರುವುದರಿಂದ, ಯಾವ ಉದಯಾದಿತ್ಯನನ್ನೂ ಚೋಳೋದಯಾದಿತ್ಯ ಎಂದು ಪರಿಗಣಿಸಲಾಗುವುದಿಲ್ಲ. ತಮಿಳುನಾಡಿನ ಚೋಳವಂಶದ ದೊರೆಗಳಲ್ಲಿಯಾಗಲಿ ಸಾಮಂತದೊರೆಗಳಲ್ಲಿಯಾಗಲಿ ಉದಯಾದಿತ್ಯನೆಂಬ ಅರಸು ನಮ್ಮ ಗಮನಕ್ಕೆ ಸಿಕ್ಕುವುದಿಲ್ಲ. ಚೋಳರು ಪ್ರವರ್ಧಮಾನಕ್ಕೆ ಬಂದಕಾಲಕ್ಕೆ ಚೋಳರಾಜ್ಯದ ಉತ್ತರ ಸೀಮೆಯ ಅನೇಕ ರಾಜವಂಶಗಳು 'ಚೋಳ' (> ಚೋಡ) ಎಂಬ ಪೂರ್ವನಾಮವನ್ನು (Prenomen) ಸೇರಿಸಿಕೊಳ್ಳುವುದು ಒಂದು ಪ್ರತಿಷ್ಠೆಯ ಸಂಪ್ರದಾಯವಾಗಿಯೆ ಪರಿಣಮಿಸಿದ್ದಂತೆ ಕಂಡುಬರುತ್ತದೆ.[೯] ಹೀಗಿರುವುದರಿಂದ,

---

೯. "Both the Chongalvas and the Kongalvas ad Cola prenomens from this time (ಎಂದರೆ, ರಾಜೇಂದ್ರ ಚೋಳನ ಕಾಲದಿಂದ : ಕ್ರಿ. ಶ. ೧೦೧೨–೧೦೪೪). evidently because the colas imposed their names on the provinces they conquered and on the rulers who accepted a vasal position in the empire. In the course of a few years,however, the kongalvas began to claim that they were themselves descended from the Colas and joined the ranks of the numerous Telugu and Kanrese local dynasties that traced their descent in a mythical manner from karikala and the sun, through Jata-Cola." K.A. Nilakanta Sastri : The Colas, Vol. I, p. 280 ; Madras University, 1935.
ಇದೇ ಗ್ರಂಥದಲ್ಲಿ ನೀಲಕಂಠಶಾಸ್ತ್ರಿಗಳು ರೇನಾಂಡು ಚೋಳರ ವಿಷಯವಾಗಿ ಬರೆಯುತ್ತ, ೭ನೆಯ ಶತಮಾನದಲ್ಲಿ ಈಗಿನ ಕಡಪ ಮತ್ತು ಕರ್ನೂಲು ಜಿಲ್ಲೆಗಳಲ್ಲಿ ಕಾಶ್ಯಪಗೋತ್ರದ ಈ ವಂಶದವರು ಆಳುತ್ತಿದ್ದರೆಂದೂ ಇವರ ವಿಚಾರವಾಗಿ ಹೆಚ್ಚು ತಿಳಿದುಬಂದಿಲ್ಲವೆಂದೂ ಹೇಳಿ, ಹೀಗೆ ಮುಂದುವರಿಸಿದ್ದಾರೆ: "But it is already clear that they form the link connecting early colas of the Tamil country and the numerous dynasties

ಗರ್ಭೋದ್ಭವತ್ [ಪದ್ಮೈ] ಕಾಶ್ರಯ[೧೨] ರುದ್ರದೇವನೃಪತೇಃ ಕೀ ವರ್ಣ್ಯತೇ ವಿಕ್ರಮಃ" ಎಂದು ಹೇಳಿರುವುದು ಅರ್ಥಪೂರ್ಣವಾಗಿದೆ. 'ಕಂದೂರೋದಯ ಚೋಡವಂಶವೆಂಬ ಕ್ಷೀರಸಮುದ್ರದ ಗರ್ಭದಲ್ಲಿ ಹುಟ್ಟಿದ ಪದ್ಮಕ್ಕೆ ಆಶ್ರಯನಾದವನು' ಎಂದರೆ ಕಂದೂರು ಚೋಡೋದಯನ ಪುತ್ರಿಯನ್ನು ಮದುವೆಯಾಗಿದ್ದು, ಅವನ ಪಕ್ಷವಹಿಸಿಯೇ ಭೀಮನ ಮೇಲೆ ದಂಡೆತ್ತಿಹೋಗಿರಬಹುದೆಂದು ಊಹಿಸಬಹುದಾಗಿದೆ. ಭೀಮನ ಕಾಲದಲ್ಲಿ ಹುಟ್ಟಿದ ಮಾಮಿಳ್ಳಪಲ್ಲಿ ಶಾಸನ (ಕ್ರಿ.ಶ. ೧೧೭೮) ದಿಂದ ಭೀಮ ಗೋಕರ್ಣರು ಸಹೋದರರೆಂದೂ, ಪಾನುಗಲ್ ಶಾಸನ (ಕ್ರಿ.ಶ. ೧೧೨೪)ವೊಂದರಿಂದ ಉದಯಾದಿತ್ಯ, ಭೀಮ, ಗೋಕರ್ಣರು ಸಹೋದರರೆಂದೂ ತಿಳಿದುಬರುತ್ತದೆ. (ಮಾಮಿಳ್ಳಪಲ್ಲಿ ಶಾಸನದಲ್ಲಿ ಭೀಮ ಗೋಕರ್ಣರ ತಂದೆ ಉದಯಾದಿತ್ಯ ಎಂದಿದೆ. ಈ ಸಂಬಂಧದ ತೊಡಕನ್ನು ಬಿಡಿಸುವುದು ಕಷ್ಟಸಾಧ್ಯವಾಗಿದೆ.) ಅಂತೂ, ಈ ಶಾಸನಗಳ ಉದಯಾದಿತ್ಯನೇ ಅನಮಕೊಂಡ ಶಾಸನದ (ಪ್ರೋಲನ ಕಾಲದ) ಉದಯ, (ರುದ್ರದೇವನ ಕಾಲದ) ಚೋಡೋದಯ ಎಂದು ಮೂರು ಹೆಸರುಗಳಿಗೂ ಐಕ್ಯತೆಯನ್ನು ನಿಸ್ಸಂದೇಹವಾಗಿ ಸ್ಥಾಪಿಸಬಹುದು. ಪಾನುಗಲ್ಲಿನ ಇನ್ನೊಂದು ಶಾಸನದಲ್ಲಿ 'ಗೋಕರ್ಣದೇವ ಚೋಡ' ಎಂಬ ಉಲ್ಲೇಖವಿದೆ. ಹೀಗೆ, ಉದಯಾದಿತ್ಯ, ಭೀಮ, ಗೋಕರ್ಣರು ತೆಲುಗು ಚೋಡವಂಶವೊಂದಕ್ಕೆ ಸೇರಿದವರೆಂದು ಹೇಳಬಹುದು.

ಮೇಲ್ಕಂಡ ಶಾಸನಾಧಾರಗಳಿಂದ, ಚೋಡೋದಯಾದಿತ್ಯನಕಾಲ ಕ್ರಿ.ಶ.ಸು. ೧೧೦೦–೧೧೬೦ ಎಂದು ಸ್ಥೂಲವಾಗಿ ಇಟ್ಟುಕೊಳ್ಳಬಹುದು. (ಉದಯಾದಿತ್ಯನ ತಂದೆ ಮಾತ್ರ ಗೋಕರ್ಣ ಎಂದು ಮಾಮಿಳ್ಳಪಲ್ಲಿ ಶಾಸನದಲ್ಲೂ, ತೊಂಡ ಎಂದು ಪಾನುಗಲ್– ಕ್ರಿ.ಶ. ೧೧೨೪ – ಶಾಸನದಲ್ಲೂ ಉಕ್ತವಾಗಿದೆ. ಈ ಪರಸ್ಪರ ವಿರೋಧಗಳಿಂದ, ಉದಯಾದಿತ್ಯನ ತಂದೆಯ ಹೆಸರಿನ ಬಗೆಗೆ ಶಾಸನಕವಿಗಳ ಮನಸ್ಸಿನಲ್ಲಿ ಗೊಂದಲವುಂಟಾಗಿರುವುದು ವ್ಯಕ್ತಪಡುತ್ತದೆ. ಉದಯಾದಿತ್ಯನ ಸೋದರ ಗೋಕರ್ಣ ಒಬ್ಬ, ಅಜ್ಜ ಗೋಕರ್ಣ ಒಬ್ಬ ಇದ್ದು, ತಂದೆ ತೊಂಡನಿಗೆ ಸೋಮನಾಥ ಎಂಬ ಹೆಸರೂ ಇದ್ದಿರಬಹುದು. ಇದೊಂದು ತೊಡಕನ್ನು ಬಿಟ್ಟರೆ, ಉದಯಾದಿತ್ಯಾಲಂಕಾರದ ಚೋಳೋದಯಾದಿತ್ಯನೇ ಶಾಸನಗಳ ಚೋಡೋದಯ ಎಂದು ಭಾವಿಸಲು ಅಡ್ಡಿಯಿಲ್ಲ.

---

೧೨. 'ಪದಮೈಕಾಶ್ರಯ' ಎಂದು ಶಾಸನದ ಪಾಠ. ಇದರಿಂದ ವೃತ್ತದ ಛಂದಸ್ಸು ಕೆಡುವುದರಿಂದ, ಪಾಠವನ್ನು ತಿದ್ದುವ ಸಾಹಸಮಾಡಿದೆ.

ಪ್ರೋಲನು ತೈಲಪನನ್ನೂ ಸೆರೆಹಿಡಿದುದಾಗಿ ಈ ಶಾಸನದಿಂದ ತಿಳಿದುಬರುತ್ತದೆ. ಫ್ಲೀಟರು ಊಹಿಸಿರುವಂತೆ, ಇವನು ತೈಲಪ III. ಇವನ ಆಳ್ವಿಕೆಯ ಕಾಲ ೧೧೫೦–೧೧೬೩. ಇದು ಪ್ರೋಲನ ಮಗ ರುದ್ರನ ಆಳ್ವಿಕೆಯ ಕಾಲವೂ ಆಗಿದೆ. ಆದ್ದರಿಂದ, ಪ್ರೋಲನು ತೈಲಪನನ್ನು ಅವನು ಇನ್ನೂ ರಾಜಕುಮಾರನಾಗಿದ್ದಾಗ ಅವನ ತಂದೆ IIIನೆಯ ಸೋಮೇಶ್ವರನ ಕಾಲದಲ್ಲೋ (೧೧೨೭–೧೧೩೮) ಅಣ್ಣ IIನೆಯ ಜಗದೇಕಮಲ್ಲನ ಕಾಲದಲ್ಲೋ (೧೧೩೮–೧೧೫೦) ಸೆರೆಹಿಡಿದಿರಬೇಕು. II ನೆಯ ಪ್ರೋಲನಿಗೆ ಸಂಬಂಧಪಟ್ಟಂತೆ ದೊರೆತಿರುವ ಅತ್ಯಂತ ಮುಂಚಿನ ಶಾಸನದ ಕಾಲ ೧೧೧೫. ತೈಲಪನ ಬಂಧನ, ಉದಯನಿಗೆ ರಾಜ್ಯಪ್ರದಾನ ಮುಂತಾದ ಪ್ರೋಲನ ಸಂಬಂಧವಾದ ಘಟನೆಗಳ ಕಾಲವನ್ನು ನಿಷ್ಕೃಷ್ಟವಾಗಿ ನಿರ್ಧರಿಸುವುದು ಕಷ್ಟ. ಕ್ರಿ.ಶ. ೧೧೩೦–೧೧೪೦ರ ಸುಮಾರಿನಲ್ಲಿ ನಡೆದಿರಬಹುದೆಂದು ಊಹಿಸಬಹುದು.

ಅನಮಕೊಂಡ ಶಾಸನದಲ್ಲಿ ರುದ್ರದೇವನ ಪರಾಕ್ರಮವನ್ನು ವರ್ಣಿಸಿದೆ. ಅವನ ಕಾಲದಲ್ಲಿ ಭೀಮನೆಂಬ ದೊರೆ ಅವನಿಗೆ ಪ್ರಬಲ ಪ್ರತಿಕಕ್ಷಿಯಾಗಿದ್ದಂತೆ ಕಾಣುತ್ತದೆ. ಗೋಕರ್ಣನೆಂಬವನನ್ನು ಕೊಂದು, ಚೋಡೋದಯನ ಪಟ್ಟಣವನ್ನು ವಶಪಡಿಸಿಕೊಂಡಂತೆ ಹೇಳಿದೆ. ಶಾಸನದ ಕಾಲಕ್ಕೆ, ಎಂದರೆ ಕ್ರಿ. ಶ. ೧೧೬೨ಕ್ಕೆ, ಮುಂಚೆಯೆ ಹೆಚ್ಚುಕಡಿಮೆ ಒಂದೇ ಕಾಲಕ್ಕೆ ಚೋಡೋದಯನೂ ತೈಲಪನೂ ಮರಣಹೊಂದಿದ ಸಂಗತಿ ಶಾಸನದಲ್ಲಿ ಬಂದಿದೆ. ರುದ್ರನು ಭೀಮನ ಮೇಲೆ ದಂಡೆತ್ತಿ ಹೋದ ಸಂದರ್ಭದಲ್ಲಿ, ಚೋಡೋದಯನ ಪಟ್ಟಣವನ್ನು ತೊರೆದು ಭೀಮನು ಕಾಡಿಗೆ ಓಡಿಹೊದನೆಂದೂ, ರುದ್ರನು ಅವನನ್ನು ಬೆಂಬತ್ತಿ ಚೋಡೋದಯನ ನಗರಿಯನ್ನು ಸುಟ್ಟುಬಿಟ್ಟನೆಂದೂ ಶಾಸನದಲ್ಲಿ ಹೇಳಿದೆ. (..."ದದಾಹ ರಾಜಾ ಚೋಡೋದಯಾಸ್ಯ ನಗರೀಂ, ಅಗರೀಯಸಿಂ ತಂ..."). ಶಾಸನವನ್ನು ಮುಗಿಸುವ ಮುನ್ನ – ರುದ್ರದೇವನ ಮಹಿಮೋನ್ನತಿಯನ್ನು ವರ್ಣಿಸುವ ಸಂದರ್ಭದಲ್ಲಿ "ಕಂದೂರೋದಯ ಚೋಡವಂಶ ವಿಲಸತ್ ಕ್ಷೀರಾಬ್ಧಿ

---

Taking addvantage of this situation prola II revolted and attached the feudatories of the Chalukyas in the Telingana and Andhra countries. He defeated Govindaraja and handed his kingdom to Kondapalli, in the Krishna district, over to Udaya or Cododaya, whose brother Mahamandaleswara Gokarna Coda was ruling as his feudatory near Panugal (Nalgonda District)"- the Histroy and culture of Indian People; The struggle for Empire (Vol.), Chapter VIII ; Dynasties of Eastern Deccan I - III, by D.C. Ganguly, pp. 198. (Bharatiya Vidya Bhavan Publication).

ಕಾಕತೀಯರೂ ತೆಲಗು ಚೋಡರೂ ಕನ್ನಡ ಕವಿಗಳನ್ನು ಗೌರವಿಸುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ. ಅಲ್ಲದೆ ಛಂದೋಂಬುಧಿಯ ಕವಿಯ ಪೂರ್ವಜರು ವೆಂಗಿವಿಷಯದವರೆಂಬುದು ಗಮನಾರ್ಹ.

ಉದಯಾದಿತ್ಯಾಲಂಕಾರದ ಕವಿಯೆ ಛಂದೋಂಬುಧಿಯನ್ನೂ ಬರೆದನೆಂದು ಸಿದ್ಧಾಂತವಾಗಿ ಹೇಳಲು ಸಾಧ್ಯವಿಲ್ಲ ; ಈ ನಿಟ್ಟಿನಲ್ಲಿ ಊಹೆಗೆ ಅವಕಾಶವಿದೆ.

ಆದರೆ, ಉದಯಾದಿತ್ಯಾಲಂಕಾರವನ್ನು ಬರೆದಾತ ಮಾತ್ರ ಚೋಳೊ(ಡೋ)ದಯಾದಿತ್ಯನಲ್ಲ, ಆತನ ಆಶ್ರಿತನಾದ ಬೇರೊಬ್ಬ ಕವಿ, ಆತನ ಅಂಕಿತದಲ್ಲಿ ಅದನ್ನು (ಸು. ೧೧೪೦ರಲ್ಲಿ) ರಚಿಸಿರಬಹುದು. ಎಂಬ ವಿಚಾರದಲ್ಲಿ ಸ್ವಲ್ಪವೂ ಸಂದೇಹವಿಲ್ಲ.*

* * *

* ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ೫೪–೧, ೧೯೬೯, ಮತ್ತು ಕದಂಬ–ಎಂ.ವಿ.ಸೀ. ಸಮಗ್ರ ಸಾಹಿತ್ಯ ಮಾಲೆ–೧, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂ. ೧೯೯೩.

೪

ಚೋಡೋದಯನ ಕಾಲ ಸು. ೧೧೦೦–೧೧೬೦ ಎಂದು ಮೇಲೆ ಸೂಚಿಸಿದ್ದೇವೆಯಷ್ಟೆ. ಪ್ರೋಲನು ಪ್ರಾಬಲ್ಯಕ್ಕೆ ಬಂದಮೇಲೆ, ಎಂದರೆ ಸು. ೧೧೨೬ರ ತರುವಾಯ, ಗೋವಿಂದನ ರಾಜ್ಯದಲ್ಲಿ ಉದಯನ ಸ್ಥಾಪನೆಯಾಯಿತು. ಉದಯನ ಉಚ್ಛ್ರಾಯದ ಕಾಲವನ್ನು ಸು. ೧೧೪೦ ಎಂದು ಇಟ್ಟುಕೊಂಡು, ಆ ಸುಮಾರಿನಲ್ಲಿ ಈ ಅಲಂಕಾರ ಗ್ರಂಥ ರಚನೆಯಾಗಿಬೇಕೆಂದು ಊಹಿಸಬಹುದು. ಇದರಿಂದ, ಉದಯಾದಿತ್ಯಾಲಂಕಾರದ ಕರ್ತೃ ಕಾವ್ಯಾವಲೋಕನದ ನಾಗವರ್ಮನ ಸಮಕಾಲೀನನೆಂದೇ ಭಾವಿಸಬಹುದು. ಉದಯಾದಿತ್ಯಾಲಂಕಾರವು ಕಾವ್ಯಾವಲೋಕನಕ್ಕಿಂತ ಮುಂಚೆಯೆ ರಚಿತವಾಗಿರುವ ಸಂಭವವಿದ್ದು, ಕನ್ನಡ ಅಲಂಕಾರ ಗ್ರಂಥಗಳ ಪರಂಪರೆಯಲ್ಲಿ ಅದು ಎರಡನೆಯ ಕೃತಿಯಾಗಿ ನಿಲ್ಲಬಹುದೆಂದು ನಮಗೆ ತೋರುತ್ತದೆ. ನಮ್ಮ ಊಹೆ ಸರಿಯಾಗಿರುವ ಪಕ್ಷಕ್ಕೆ ಅದಕ್ಕೊಂದು ಐತಿಹಾಸಿಕ ಪ್ರಾಮುಖ್ಯ ಪ್ರಾಪ್ತವಾಗುತ್ತದೆ.

ಛಂದೋಂಬುಧಿಯ ಪೀಠಿಕಾ ಪ್ರಕರಣದ ಎರಡು ಪದ್ಯಗಳನ್ನು ಬಿಟ್ಟರೆ, ಅದರ ಕರ್ತೃ ವೈದಿಕಮತಾನುಯಾಯಿ ಎಂಬುದಕ್ಕೆ ಪ್ರಬಲವಾದ ಅಂತರಿಕ ಪ್ರಮಾಣವಿದೆ. ಉದಯಾದಿತ್ಯಾಲಂಕಾರದ ಕರ್ತೃವಿನ ಮತನಿರ್ಣಯಕ್ಕೆ ಯಾವ ಆಧಾರವೂ ಇಲ್ಲದಿದ್ದರೂ, ವೈದಿಕಮತಾನುಯಾಯಿ ಎಂದು ಊಹಿಸಬಹುದು. ಮತಧರ್ಮ ದೃಷ್ಟಿಯಿಂದ, ಈ ಎರಡು ಕೃತಿಗಳ ಏಕಕರ್ತೃತ್ವವಾದಕ್ಕೆ ವಿರೋಧ ಎನಿಸುವ ಅಂಶ ಬೇರೆ ಯಾವುದೂ ಇಲ್ಲ. ಆದ್ದರಿಂದ ಛಂದೋಂಬುಧಿಯ ಕಾಲವೂ ಉದಯಾದಿತ್ಯಾಲಂಕಾರದ ಕಾಲವೇ (ಸು. ೧೧೪೦) ಆಗುತ್ತದೆ.

ತೆಲುಗು ಚೋಡದೊರೆಯಲ್ಲಿ ಕನ್ನಡ ಕವಿಯೊಬ್ಬ ಆಶ್ರಯ ಪಡೆಯಬಹುದೇ ಎಂಬ ಸಂದೇಹಕ್ಕೆ ಕಾರಣವಿಲ್ಲವೆಂದು ಹೇಳಬಹುದು. ಅನುಮಕೊಂಡ ಶಾಸನ ಸಂಸ್ಕೃತ ಭಾಷೆಯಲ್ಲಿದ್ದರೂ ಆಗಿನ ಕಾಲದ ತೆಲಗು ಲಿಪಿಯಲ್ಲಿ ಇಲ್ಲದೆ ಕನ್ನಡ ಲಿಪಿಯಲ್ಲಿರುವುದು ಗಮನಾರ್ಹ. ರಾಘವಾಂಕ ಕವಿ (ಸು. ೧೧೯೫) ಕಾಕತೀಯ ರುದ್ರನ (೧೧೫೦–೧೧೯೫) ಆಸ್ಥಾನಕ್ಕೆ ಹೋಗಿ ಕುಕವಿಗಳನ್ನು ಗೆದ್ದ ಸಂಗತಿಯನ್ನು ರಾಘವಾಂಕ ಚಾರಿತ್ರ, ಚೆನ್ನಬಸವಪುರಾಣ, ಭೈರವೇಶ್ವರ ಕಥಾಸೂತ್ರ ರತ್ನಾಕರ, ಗುರುರಾಜ ಚಾರಿತ್ರ– ಈ ಗ್ರಂಥಗಳಲ್ಲಿ ವರ್ಣಿಸಿದೆ.[೧೩] ಆದ್ದರಿಂದ,

೧೩. ಕವಿಚರಿತ್ರೆ, ಸಂ. ೧, ಪು. ೨೩೬. (ಈ ಗ್ರಂಥಗಳಲ್ಲಿ ಓರಂಗಲ್ಲಿನ ಪ್ರತಾಪರುದ್ರನ ಉಲ್ಲೇಖವಿದೆ. ರುದ್ರದೇವನನ್ನೇ ಪ್ರತಾಪರುದ್ರ ಎಂದು ಆ ಗ್ರಂಥಕರ್ತರು ತಪ್ಪು ತಿಳಿದಿರುವ ಹಾಗೆ ಕಾಣುತ್ತದೆ.)

೧೯೭೦ರಲ್ಲಿ ಹೊರತಂದೆ. ಗ್ರಂಥಸಂಪಾದನೆ ಮಾಡುವಾಗ ಪಾಠಪರಿಷ್ಕರಣ ಕಾರ್ಯದೊಂದಿಗೆಯೇ ಗ್ರಂಥದ ವ್ಯಾಖ್ಯಾನಕಾರ್ಯವೂ (ಎಂದರೆ, ಅಭ್ಯಾಸಪೂರ್ಣವಾದ ಟಿಪ್ಪಣಿ ಬರೆಯುವ ಕೆಲಸವೂ) ಕವಿಕಾವ್ಯ ವಿಚಾರ ವಿಮರ್ಶೆಯೂ ಜೊತೆಜೊತೆಯಾಗಿ ನಡೆಯಬೇಕು ಎನ್ನುವ ಪಂಥಕ್ಕೆ ಸೇರಿದವನು ನಾನು. ಹೀಗೆ ಮಾಡುವುದರಿಂದ, ಗ್ರಂಥದ ಆಳವಾದ ಅಭ್ಯಾಸಕ್ಕೆ ಅವಕಾಶವಾಗುತ್ತದೆ ; ಪೂರ್ವವಿದ್ವಾಂಸರ ಗಮನಕ್ಕೆ ಬಾರದಿದ್ದ ಎಷ್ಟೋ ಸಂಗತಿಗಳು ಗೋಚರವಾಗುತ್ತವೆ; ಪರಿಹಾರವಾಗದಿದ್ದ ಸಮಸ್ಯೆಗಳಿಗೆ ಪರಿಹಾರ ದೊರಕುತ್ತದೆ, ಹೊಸ ಸಮಸ್ಯೆಗಳೂ ಹುಟ್ಟಿಕೊಳ್ಳುತ್ತವೆ.

ಉದಯಾದಿತ್ಯಾಲಂಕಾರ ಅಧ್ಯಯನ ಸಂದರ್ಭದಲ್ಲಿ ನನಗೆ ತೋರಿಬಂದ ಮುಖ್ಯವಾದ ಸಮಸ್ಯೆಗಳು ಇವು :

೧. ಉದಯಾದಿತ್ಯನ ಹೆಸರುಹೊತ್ತ ಅಲಂಕಾರ ಗ್ರಂಥದ ಕರ್ತೃ ನಿಜವಾಗಿ ಉದಯಾದಿತ್ಯನೇ, ಅಥವಾ ಬೇರೊಬ್ಬನೇ?

೨. ಉದಯಾದಿತ್ಯ ಕರ್ತೃವಲ್ಲದಿದ್ದರೆ, ಆ ಬೇರೊಬ್ಬ ಯಾರು?

೩. ಈ ಬೇರೊಬ್ಬ ಕವಿಯ ಕಾಲನಿಷ್ಕರ್ಷೆಗೆ ಉದಯಾದಿತ್ಯ ನೃಪನ ಕಾಲದ ನಿಷ್ಕರ್ಷೆ ಆಗತ್ಯವಾದ್ದರಿಂದ, ಈ ಉದಯಾದಿತ್ಯ ಯಾರು, ಅವನ ಕಾಲ ಯಾವುದು??

ಗ್ರಂಥವನ್ನು ಸ್ಥೂಲವಾಗಿ ಪರಿಶೀಲನೆ ಮಾಡಿದಾಗ ಉದಯಾದಿತ್ಯನೇ ಕರ್ತೃ ಎಂದು ಯಾರಿಗಾದರೂ ಅನ್ನಿಸುವುದು ಸಹಜ. ಆದರೆ, ಉದಯಾದಿತ್ಯನನ್ನು ಹೊಗಳುವ, ಅವನನ್ನು ಹೆಸರು ಹಿಡಿದು ಸಂಬೋಧಿಸುವ, ಉತ್ತಮ–ಮಧ್ಯಮ–ಪ್ರಥಮ ಪುರುಷ ಪ್ರಯೋಗಗಳು ಬೆರಕೆ ಒಂದೇ ಪದ್ಯದಲ್ಲಿ ಒಟ್ಟಿಗೆ ಕಾಣಿಸಿಕೊಂಡಾಗ, ಹೊಗಳಿಕೆಗೆ ಸಂದ ರಾಜನೇ ಬೇರೆ, ಹೊಗಳುತ್ತಿರುವ ಕವಿ ವ್ಯಕ್ತಿಯೇ ಬೇರೆ ಎಂಬ ತೀರ್ಮಾನಕ್ಕೆ ಬರಲೇಬೇಕಾಗುತ್ತದೆ. ಉದಯಾದಿತ್ಯಾಲಂಕಾರದ ಪರಿಷ್ಕೃತ ಮುದ್ರಣದ ಪೀಠಿಕೆಯಲ್ಲಿ ಅಂತಹ ಪದ್ಯಪಂಕ್ತಿಗಳನ್ನು ಉದಾಹರಿಸಿ, ವಿವರಿಸಿ, ಕವಿ ಉದಯಾದಿತ್ಯನಲ್ಲ, ಬೇರೊಬ್ಬ ಎಂಬ ತೀರ್ಮಾನವನ್ನು ಮುಂದಿಟ್ಟಿದ್ದೇನೆ.

ಈ ಬೇರೊಬ್ಬ ಕವಿ ಛಂದೋಂಬುಧಿಯ ಕರ್ತೃ ನಾಗವರ್ಮನಿರಬಹುದು ಎಂಬ ನನ್ನ ಊಹೆಯನ್ನು ಸೂಚಿಸಿದ್ದೇನೆ; ಊಹೆಯೇ ಹೊರತು ತೀರ್ಮಾನವಲ್ಲ ಎಂಬುದನ್ನು ಸ್ಪಷ್ಟಪಡಿಸಿದ್ದೇನೆ.

ಉದಯಾದಿತ್ಯ ಯಾರು ಎಂಬ ಬಗೆಗೆ, "ವಸುಧಾನಾಥನ ಸೋಮನಾಥನ

# ೨ ಉದಯಾದಿತ್ಯಾಲಂಕಾರ : ಕರ್ತೃವಿಚಾರ

'ಉದಯಾದಿತ್ಯಾಲಂಕಾರ' ಎಂಬ ಚಿಕ್ಕ ಅಲಂಕಾರಶಾಸ್ತ್ರ ಗ್ರಂಥವು ಕನ್ನಡ ಅಲಂಕಾರ ಶಾಸ್ತ್ರದ ಚರಿತ್ರೆಯಲ್ಲಿ ವಿಶೇಷ ಪ್ರಾಮುಖ್ಯವನ್ನು ಪಡೆದಿಲ್ಲ. ಬಹುಶಃ ಆ ಕಾರಣದಿಂದಲೇ ವಿದ್ವಾಂಸರ ಗಮನವನ್ನು ಸೆಳೆದಿರಲಿಲ್ಲ ; ಗ್ರಂಥದ ಕರ್ತೃವಿನ ವಿಷಯವಾಗಿ ವಾದ ವಿವಾದಗಳು ಹುಟ್ಟಿಕೊಂಡಿರಲಿಲ್ಲ. ಈ ಗ್ರಂಥವನ್ನು ಮೊತ್ತಮೊದಲಿಗೆ (೧೮೯೪ರಲ್ಲಿ) ಸಂಪಾದನೆ ಮಾಡಿ 'ಕರ್ನಾಟಕ ಕಾವ್ಯ ಮಂಜರಿ'ಯಲ್ಲಿ ಪ್ರಕಟನೆ ಮಾಡಿದ ಸಂಪಾದಕದ್ವಯರಾದ ಎಸ್.ಜಿ. ನರಸಿಂಹಾಚಾರ್ಯರೂ, ಎಂ.ಎ. ರಾಮಾನುಜಯ್ಯಂಗಾರ್ಯರೂ ಗ್ರಂಥಕ್ಕೆ ಬರೆದಿರುವ ಚಿಕ್ಕ ಪೀಠಿಕೆಯಲ್ಲಿ ಕವಿ ಕಾವ್ಯವಿಚಾರವಾಗಿ ತಮ್ಮ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತ್ರೆಯಲ್ಲಿ ಆ ಅಭಿಪ್ರಾಯಗಳನ್ನು ಅಂಗೀಕರಿಸಿದ್ದಾರೆ. ಕರ್ತೃವಿನ ವಿಚಾರದಲ್ಲಿ ಇವರುಗಳಿಗೆ ಸಂದೇಹವೇ ಇಲ್ಲ. ಅವರ ಮತದಂತೆ, ಉದಯಾದಿತ್ಯನೇ ಕರ್ತೃ; ಅವನು, "ವಸುಧಾನಾಥನ ಸೋಮನಾಥನ ಸುತಂ ಚೋಳೋದಯಾದಿತ್ಯಂ" ; ಅವನು ಒಂದು ಪದ್ಯದಲ್ಲಿ ಭೋಜನ ಹೆಸರನ್ನು ಸ್ಮರಿಸುವುದರಿಂದ ಭೋಜನ ಕಾಲಕ್ಕಿಂತ (ಕ್ರಿ.ಶ. ೯೯೭ – ೧೦೫೩) ಈಚಿನವನು. 'ಸೂಕ್ತಿಸುಧಾರ್ಣವ'ದಲ್ಲಿ ಕ್ರಿ.ಶ. ೧೨೪೫) ಅಷ್ಟಾದಶ ವರ್ಣನೆಗೆ ಸಂಬಂಧಪಟ್ಟ ಉದಯಾದಿತ್ಯಾಲಂಕಾರದ ಪದ್ಯವೊಂದು ಉದ್ಧೃತವಾಗಿರುವುದರಿಂದ ೧೨೪೫ಕ್ಕಿಂತ ಹಿಂದಿನವನು; ಸುಮಾರು ೧೧೫೦ರಲ್ಲಿ ಇದ್ದಿರಬಹುದು.[೧]

ನಾನು ಉದಯಾದಿತ್ಯಾಲಂಕಾರದ ಹೊಸ ಪರಿಷ್ಕೃತ ಮುದ್ರಣವನ್ನು

---

೧. ಉದಯಾದಿತ್ಯಲಂಕಾರದ ೬೩ನೆಯ ಮತ್ತು ೬೫ನೆಯ ಪದ್ಯಗಳು ಪ್ರಕ್ಷಿಪ್ತಗಳಾಗಿದ್ದು, ೨ನೆಯ ನಾಗವರ್ಮನ ಕಾವ್ಯಾವಲೋಕನದ ಎರಡು ಲಕ್ಷಣ ಪದ್ಯಗಳನ್ನು ಬಹಳವಾಗಿ ಹೋಲುತ್ತವೆ. ಈಚೆಗೆ ಈ ನಾಗವರ್ಮನ ವರ್ಧಮಾನಪುರಾಣ ದೊರೆತು ಪ್ರಕಟವಾಗಿದೆ. ಅದರ ಸಂಪಾದಕರಾದ ಶ್ರೀ. ಬಿ.ಎಸ್. ಸಣ್ಣಯ್ಯನವರು ಅದರ ರಚನಾ ಕಾಲವನ್ನು ೧೦೪೨ ಎಂದು ಖಚಿತಪಡಿಸಿದ್ದಾರೆ. ಆದ್ದರಿಂದ, ಉದಯಾದಿತ್ಯಾಲಂಕಾರದ ಕಾಲದ ಪೂರ್ವದ ಗಡುವು ಸು. ೧೦೫೦ ಎಂದು ಇಟ್ಟುಕೊಳ್ಳಬಹುದು.

ಪೂರ್ವ ನಾಮವನ್ನು ಹೆಮ್ಮೆಯಿಂದಲೇ ಸೇರಿಸಿಕೊಳ್ಳುತ್ತಿದ್ದರೆಂದು ಚರಿತ್ರೆಯಿಂದ ತಿಳಿದುಬರುತ್ತದೆ. ದಕ್ಷಿಣ ಭಾರತದ ಇತಿಹಾಸದಲ್ಲಿ ಆಗಿಹೋದ ಅನೇಕ ರಾಜವಂಶಗಳಲ್ಲಿ ಹಲವಾರು ಮಂದಿ ಉದಯಾದಿತ್ಯರಿದ್ದರೆಂಬುದು ಇತಿಹಾಸ ಪ್ರಸಿದ್ಧ ಸಂಗತಿ. ಆದರೆ, ಈ ಯಾವ ಉದಯಾದಿತ್ಯನೂ ಚೋಳ ವಂಶೀಯ ಎಂದು ತಿಳಿದುಬರುವುದಿಲ್ಲ; ಇದು ಅತ್ಯಂತ ಗಮನಾರ್ಹವಾದ ಸಂಗತಿ. ಮೇಲೆ ಹೆಸರಿಸಿದ ಮೂರೂ ಶಾಸನಗಳಲ್ಲಿ ಕಾಕತೀಯ ರಾಜರ ಪರಾಕ್ರಮಗಳನ್ನೂ ಅವರ ಪೂರ್ವಜರನ್ನೂ ಹೊಗಳುವುದೇ ಶಾಸನಗಳ ಪ್ರಧಾನೋದ್ದೇಶವಾದ್ದರಿಂದ, ಅವರ ಸಾಮಂತರ ಮತ್ತು ವೈರಿಗಳ ವಿಷಯವನ್ನು ಅನುಷಂಗಿಕವಾಗಿ ವರ್ಣಿಸುವುದರಲ್ಲಿ ಲೋಪದೋಷಗಳೂ ವಿಸಂಗತಿಗಳೂ ಕಾಣಿಸಿಕೊಂಡಿದ್ದರೆ ಅದು ತೀರ ಸಹಜ. ಹೀಗಿರುವಲ್ಲಿ ಅಲಂಕಾರಗ್ರಂಥದ ಚೋಳೋದಯಾದಿತ್ಯ (= ಚೋಳೋದಯ) ಶಾಸನಗಳ ಚೋಡೋದಯ ಎಂದು ಅನುಮಾನಿಸುವುದಕ್ಕೆ ಧಾರಾಳವಾದ ಅವಕಾಶವಿದೆ. ಎಂದ ಮಾತ್ರಕ್ಕೆ, ಈ ಅನುಮಾನವನ್ನು ಬಲಪಡಿಸುವುದಕ್ಕೆ ಅಗತ್ಯವಾದ ಹೆಚ್ಚಿನ ಪ್ರಮಾಣಗಳ ಅನ್ವೇಷಣೆಯ ಅಗತ್ಯವಿಲ್ಲ; ಈ ವಿಷಯದಲ್ಲಿ ಇದೇ ಕೊನೆಯ ಮಾತು ಎಂದು ಯಾರೂ ತಿಳಿಯಬಾರದು "ಈ ಸಮಸ್ಯೆ ಬಹಳ ಜಟಿಲವಾಗಿದ್ದು, ನಮ್ಮ ಸದ್ಯದ ಎಲ್ಲ ತೀರ್ಮಾನಗಳೂ ತಾತ್ಪೂರ್ತಿಕ (Tentative) ಎಂದಷ್ಟೇ ವಿಜ್ಞಾಪಿಸಿಕೊಳ್ಳಬೇಕಾಗಿದೆ" ಎಂಬ ಮಾತನ್ನು ಈಗಾಗಲೇ ಹೇಳಿದ್ದಾಗಿದೆ.[೨]

ನನ್ನ ನಿಲುವು ಹೀಗಿರುವಾಗ, ಮೇಲ್ಕಂಡ ಸಮಸ್ಯೆಗಳ ಇತ್ಯರ್ಥಕ್ಕೆ ಗಮನ ಹರಿಸಿ, ಶ್ರೀ ಸಂಗಮೇಶ ಬಿರದಾರರು 'ಕರ್ಣಾಟಕ ಭಾರತಿ"ಯಲ್ಲಿ[೩] ನನ್ನ ಹೇಳಿಕೆಗಳೆಲ್ಲವನ್ನೂ ಬುಡಮೇಲು ಮಾಡಲು ಪ್ರಯತ್ನಿಸಿರುವುದನ್ನು ನಾನು ಸ್ವಾಗತಿಸುವೆನು ; ಆದರೆ ಅವರ ವಿಚಾರಧಾರೆ ನನಗೆ ಸಮ್ಮತವಾಗಿಲ್ಲ ಉದಯಾದಿತ್ಯ ಕರ್ತೃತ್ವದ ಬಗೆಗೆ ಅವರು ಮುಂದಿಟ್ಟಿರುವ ಬೇರೊಂದು ಶಾಸನದ ಸಾಕ್ಷ್ಯಾಧಾರ ಅವರ ನಿಲುವನ್ನು ಎತ್ತಿಹಿಡಿಯುಲು ಅಸಮರ್ಥವಾಗಿರುವುದಲ್ಲದೆ ದೋಷಪೂರ್ಣವೂ ಆಗಿದೆ.

ಉತ್ತಮ-ಮಧ್ಯಮ-ಪ್ರಥಮ ಪುರುಷ ಪ್ರಯೋಗಗಳ ಆಧಾರದ ಮೇಲೆ

---

೨. 'ಉದಯಾದಿತ್ಯಾಲಂಕಾರ' – ಸಂ. : ಎಂ.ವಿ. ಸೀತಾರಾಮಯ್ಯ, ೧೯೭೦, ಪೀಠಿಕೆ (ಪು. ೧೪, ಅಡಿಟಿಪ್ಪಣಿ). ಶಾಸನಗಳ ಸಂಬಂಧವಾದ ವಿವರಪೂರ್ಣ ವಿಚಾರವಿಮರ್ಶೆ ಇದೇ ಪೀಠಿಕೆಯ ೭–೧೬ ಪುಟಗಳಲ್ಲಿ ನಡೆದಿದೆ.

೩. ಸ್ವಾತಂತ್ರ್ಯೋತ್ಸವ ಸಂಚಿಕೆ (೫–೧) ೧೯೭೨, ಪು. ೧೨೧ – ೧೨೮.

ಸುತಂ ಚೋಳೋದಯಾದಿತ್ಯಂ''–ಎಂಬ ವಾಕ್ಯ ಬಹು ಮುಖ್ಯವಾದ ಏಕೈಕ ಆಂತರಿಕ ಪ್ರಮಾಣ. ಈ ಚೋಳೋದಯಾದಿತ್ಯ ಯಾರು ಎನ್ನುವುದನ್ನು ಕಂಡು ಹಿಡಿಯಲು ಇತಿಹಾಸದ ದಾಖಲೆಗಳನ್ನು ಆಶ್ರಯಿಸಬೇಕಾಗುತ್ತದೆ. ಕಾಕತೀಯ ರುದ್ರದೇವನ ಅನಮಕೊಂಡ ಶಾಸನದಲ್ಲಿ 'ಚೋಡೋದಯಕ್ಷ್ಮಾಪತಿ' ಯ ಉಲ್ಲೇಖ ದೊರೆಯುತ್ತದೆ. (ಶಾಸನದ ಕಾಲ ಕ್ರಿ.ಶ. ೧೧೬೨–೬೩) ಈ ಶಾಸನದಲ್ಲಿ ಉದಯಾದಿತ್ಯ ಎಂಬ ಪೂರ್ಣ ನಾಮವಾಗಲಿ, ಉದಯಾದಿತ್ಯನ ತಂದೆಯ ಹೆಸರಾಗಲಿ ಉಲ್ಲೇಖವಾಗಿಲ್ಲ. ಅಲಂಕಾರ ಗ್ರಂಥದಲ್ಲಿ ಉದಯಾದಿತ್ಯನ ಹೆಸರನ್ನು ಸಂಕ್ಷೇಪಿಸಿ ಉದಯ, ಉದೆಗ, ಎಂದು ಹಲವು ಕಡೆ ಹೇಳಿರುವುದರಿಂದ ಶಾಸನದ ಉದಯನನ್ನು ಉದಯಾದಿತ್ಯ ಎಂದು ಎಣಿಸಲು ಅಡ್ಡಡಿಯಿಲ್ಲ. ಅನುಮಕೊಂಡ ಶಾಸನದಲ್ಲಿ ಕಾಕತೀಯ ರುದ್ರ (ಕ್ರಿ.ಶ. ೧೧೫೦–೧೯೫) ಮತ್ತು ಅವನ ತಂದೆ ಪ್ರೋಲ (II) (ಕ್ರಿ.ಶ. ೧೧೧೭–೧೧೫೦)– ಇವರ ಪರಾಕ್ರಮಗಳ ವರ್ಣನೆಯಿದೆ. ಪ್ರೋಲನು ಗೋವಿಂದರಾಜನನ್ನು ಸೋಲಿಸಿ ಅವನ ರಾಜ್ಯವನ್ನು ಉದಯ ಅಥವಾ ಚೋಡೋದಯನಿಗೆ ಕೊಟ್ಟನೆಂದೂ ಅವನ ತಮ್ಮ ಗೋಕರ್ಣಚೋಡನು ಅವನ ಸಾಮಂತನಾಗಿ ಪಾನುಗಲ್ಲಿನ ಬಳಿ ಆಳುತ್ತಿದ್ದನೆಂದೂ ತಿಳಿದುಬರುತ್ತದೆ. ಭೀಮನೆಂಬುವನು ಚೋಡೋದಯನ ಇನ್ನೊಬ್ಬ ತಮ್ಮ, ಈ ಭೀಮನು ಗೋಕರ್ಣನನ್ನು ಕೊಂದು ಚೋಡೋದಯನ ನಗರಿಯನ್ನು ಸುಟ್ಟನೆಂದೂ ಶಾಸನದ ಹೇಳಿಕೆ. ಉದಯ, ಚೋಡ, ಭೀಮ, ಗೋಕರ್ಣ (ಚೋಡ) ಸಹೋದರರೆಂದು ತಿಳಿದುಬರುವುದು ಪ್ರೋಲನ ಕಾಲದ ಪಾನುಗಲ್ ಶಾಸನದಿಂದ (ಕ್ರಿ.ಶ. ೧೧೨೪); ಈ ಮೂವರ ತಂದೆ 'ತೊಂಡ' ಎಂದು ಇದೇ ಶಾಸನದ ಉಲ್ಲೇಖ. ಭೀಮನ ಕಾಲದಲ್ಲಿ (ಕ್ರಿ.ಶ. ೧೧೭೮) ಹುಟ್ಟಿದ ಮಾಮಿಳ್ಳಪಳ್ಳಿ ಶಾಸನದಲ್ಲಿಯಾದರೋ, ಭೀಮ ಗೋಕರ್ಣರು ಉದಯಾದಿತ್ಯನ ಪುತ್ರರೆಂದೂ ಗೋಕರ್ಣನ ಪೌತ್ರರೆಂದೂ ಹೇಳಿದೆ. ಹೀಗಾಗಿ, ತೊಂಡನ ಮಗ ಒಬ್ಬ ಉದಯಾದಿತ್ಯ, ಗೋಕರ್ಣನ ಮಗ ಒಬ್ಬ ಉದಯಾದಿತ್ಯ ಎಂದು ತಿಳಿಯಬೇಕಾಗುತ್ತದೆ. ಅನಮಕೊಂಡ ಶಾಸನದಲ್ಲಿ 'ಚೋಡವಂಶ'ದ ಉಲ್ಲೇಖವಿರುವುದರಿಂದ, ಈ ಮೂರೂ ಶಾಸನಗಳನ್ನು ಕೂಡಿಸಿ ಓದಿಕೊಳ್ಳುವುದರಿಂದ ಎದ್ದುಕಾಣುವ ಉದಯ–ಭೀಮ–ಗೋಕರ್ಣದ್ವಯರುಗಳೆಲ್ಲರೂ ಚೋಡ ವಂಶಕ್ಕೇ ಸೇರಿದವರೆಂಬುದು ಸ್ಪಷ್ಟ. ಚೋಳರ ಪ್ರಾಬಲ್ಯ ಕಾಲದಲ್ಲಿ ಅವರ ಸಾಮಂತರಾಗಿದ್ದ ಕರ್ಣಾಟಕಾಂಧ್ರ ರಾಜರಂಗೀಯರು ತಮ್ಮ ಹೆಸರಿನ ಹಿಂದೆ ಚೋಡ (=ಚೋಳ) ಎಂಬ

ಉದಯಾದಿತ್ಯಾಲಂಕಾರದ ಕರ್ತೃ ಉದಯನಲ್ಲ, ಬೇರೊಬ್ಬ ಎಂದಾದ ಮೇಲೆ ಅವನನ್ನು ಗೊತ್ತುಹಚ್ಚುವ ಪ್ರಯತ್ನಕ್ಕೆ ತೊಡಗಬೇಕಾಗುತ್ತದೆ. ಅನ್ಯಕವಿ ಆಶ್ರಯದಾತ ಉದಯಾದಿತ್ಯನನ್ನು ಅನೇಕ ಪದ್ಯಗಳಲ್ಲಿ ಉದಯ, ಉದೆಗ ಎಂದು ಏಕಪ್ರಕಾರವಾಗಿ ಸಂಬೋಧಿಸುತ್ತಾ, ಇದ್ದಕ್ಕಿದ್ದ ಹಾಗೆ ಕೆಳದಿ, ಅಬ್ಜಲೋಚನೆ ಎಂದು ತನ್ನ ಕಾಂತೆಯನ್ನು ಕುರಿಯಬೇಕಾದರೆ – ಅಲ್ಲಿ ಬಿಡಿಸಬೇಕಾದ ರಹಸ್ಯ ಗ್ರಂಥಿಯೊಂದು ಸೂಕ್ಷ್ಮ ವೇದಿಗಳಿಗೆ ಗೋಚರವಾಗುತ್ತದೆ; ಥಟ್ಟನೆ, ಛಂದೋಬುಧಿಯ ನಾಗವರ್ಮನ ನೆನಪಾಗುತ್ತದೆ. ನನ್ನ ನೆನಪಿಗೆ ನುಡಿಗೊಟ್ಟು ಪ್ರಕಾಶಪಡಿಸಿದ್ದೇನೆ – ವಿಚಾರ ಪ್ರಚೋದನೆಯ ಸಲುವಾಗಿ. ನಾಗವರ್ಮನ ಕಾಲದ ಪ್ರಶ್ನೆ ಈ ಊಹೆಯ ಸಂಬಂಧದಲ್ಲಿ ತೊಡಕಾಗದು.

ಕಾದಂಬರಿಯ ಕರ್ತೃವೇ ಛಂದೋಂಬುಧಿಯ ಕರ್ತೃ, ಅವನ ಕಾಲ ೯೯೦ ಎಂಬ ನಿರ್ಣಯವನ್ನೇ ಶ್ರೀ ಸಂಗಮೇಶರು ಹಿಡಿದಿದ್ದಾರೆ. ಆದರೆ ಈಚಿನ ಸಂಶೋಧನೆಗಳಿಂದ ಕಾದಂಬರಿಯ ನಾಗವರ್ಮನೇ ಬೇರೆ, ಛಂದೋಂಬುಧಿಯ ನಾಗವರ್ಮನೇ ಬೇರೆ ; ಛಂದೋಂಬುದೀಯ ಕಾಲ ೧೨ನೆಯ ಶತಮಾನದ ಉತ್ತರಾರ್ಧಕ್ಕೆ ದಾಟುತ್ತದೆ ಎಂದು ಬಹುಮಟ್ಟಿಗೆ ನಿಶ್ಚಿತವಾಗಿ ಹೇಳಲು ಅವಕಾಶವುಂಟಾಗಿದೆ. ಹೀಗೆ ಛಂದೋಂಬುಧಿಯ ನಾಗವರ್ಮನನ್ನೂ ಉದಯಾದಿತ್ಯಾಲಂಕಾರದ ಕರ್ತೃವನ್ನೂ ಅಭಿನ್ನರೆಂದು ಹೇಳಲು ಕಾಲವಿಚಾರದ ತೊಡಕು ಇಲ್ಲದಿದ್ದರೂ ಛಂದೋಂಬುಧಿಯ ನಾಗವರ್ಮನೇ ಈ ಗ್ರಂಥದ ಕರ್ತೃವಿರಬಹುದೆಂಬ ಊಹೆಯನ್ನು ತೆರೆದ ಪ್ರಶ್ನೆಯಾಗಿಯೇ ಬಿಡಬಹುದು; ಕೈಬಿಡಲೂಬಹುದು. ಆದರೆ ಕೆಳದಿ, ಅಬ್ಜಲೋಚನೆ ಎಂಬ ಸಂಬೋಧನೋಕ್ತಿಗಳ ಸಂದರ್ಭ ಮಾತ್ರ ವಿಚಾರಪರರ ಕುತೂಹಲವನ್ನು ಕೆಣಕುವ ಸಂಗತಿಯಾಗಿಯೇ ಉಳಿದಿರುತ್ತದೆ – ಸಮಾಧಾನಕರ ಉತ್ತರರಕ್ಕೆ ಕಾಯುತ್ತ.

ಇನ್ನು ಉದಯಾದಿತ್ಯ ಯಾರು ಎಂಬ ಪ್ರಸ್ನೆ. ನನ್ನ ವಾದದ ಸಾರಾಂಶ ಈ ಲೇಖನದ ಪ್ರಾರಂಭದಲ್ಲೆ ಬಂದಿರುವುದರಿಂದ, ಅದನ್ನಿಲ್ಲಿ ಮತ್ತೆ ಎತ್ತಬೇಕಾಗಿಲ್ಲ. ಶ್ರೀ ಸಂಗಮೇಶರು ನಾನು ಉದಾಹರಿಸಿರುವ ಶಾಸನಗಳಲ್ಲಿ ಉದಯಾದಿತ್ಯನ ತಂದೆಯ ಹೆಸರು ಕೃತಿಯಲ್ಲಿರುವಂತೆ "'ಸೋಮನಾಥ' ಎಂದು ಉಕ್ತವಾಗಿಲ್ಲ, 'ಗೋಕರ್ಣ', 'ತೊಂಡ' ಎಂದು ಉಕ್ತವಾಗಿದೆ ಎಂಬ ಕಾರಣದಿಂದ ನನ್ನ ವಾದವನ್ನು ಪೂರ್ತಿ ಅಲ್ಲಗಳೆದಿದ್ದಾರೆ. ಈ ಲೋಪಕ್ಕೆ ಸಮಂಜಸ ಎಂದು ನನಗೆ ತೋರುವ ಪರಿಹಾರವನ್ನು ಈ ಲೇಖನದಲ್ಲಿ ನಾನು ಸೂಚಿಸಿದ್ದೇನೆ.

ಗ್ರಂಥಕರ್ತೃ ಉದಾಯಾದಿತ್ಯನಲ್ಲ, ಬೇರೊಬ್ಬ ಎಂಬ ನನ್ನ ನಿಲುವನ್ನು ಹಿಂದೆಯೇ ಪ್ರಸ್ತಾಪ ಮಾಡಿರುವೆನಷ್ಟೆ. ಕವಿರಾಜಮಾರ್ಗದ ಕರ್ತೃತ್ವ ವಿಚಾರವಿಮರ್ಶೆಯಲ್ಲಿ ಉತ್ತಮ–ಪ್ರಥಮ ಪುರುಷಗಳ ಪ್ರಯೋಗ ಸಾಂಕರ್ಯ ಹೇಗೆ ಅನ್ಯಕರ್ತೃತ್ವವಾದಕ್ಕೆ ದಾರಿಮಾಡಿಕೊಡುತ್ತದೆ ಎಂಬ ಅಂಶವನ್ನು ಕೆ. ಬಿ. ಪಾಠಕರು ಸೂಚಿಸಿದ್ದರು. ಡಾ. ರಂ. ಶ್ರೀ. ಮುಗಳಿಯವರು ಕನ್ನಡಸಾಹಿತ್ಯ ಚರಿತ್ರೆಯಲ್ಲಿ ಹೆಚ್ಚಿನ ನಿದರ್ಶನಗಳೊಡನೆ ಈ ವಾದವನ್ನು ಎತ್ತಿಹಿಡಿದಿದ್ದರು. ನಾನು ವಾದವನ್ನು ಪುರಸ್ಕರಿಸಿ, ಕವಿರಾಜಮಾರ್ಗದ ಪೀಠಿಕೆಯಲ್ಲಿ ಬಲಪಡಿಸಿದ್ದೇನೆ.

ಉದಯಾದಿತ್ಯಾಲಂಕಾರದಲ್ಲಿಯಾದರೋ ಮಧ್ಯಮಪುರುಷ ಪ್ರಯೋಗವೂ ಸಂಕರವಾಗಿ, ಅನ್ಯಕರ್ತೃತ್ವವನ್ನು ನಿರ್ವಿವಾದವಾಗಿ ಸ್ಥಾಪಿಸುತ್ತದೆ. ಈ ವಿಷಯವಾಗಿ ದಿವಂಗತ ಡಾ. ಡಿ.ಎಲ್. ನರಸಿಂಹಾಚಾರ್ಯರೊಂದಿಗೆ ನಾನು ಮುಖತಃ ಚರ್ಚಿಸಿ, ಪತ್ರವ್ಯವಹಾರ ಮಾಡಿದ್ದೇನೆ ; ನನ್ನ ನಿಲುವನ್ನು ಅವರು ಬಹುಮಟ್ಟಿಗೆ ಒಪ್ಪಿದ್ದಾರೆ. ಲೇಖನ ವಿಸ್ತಾರ ಭಯದಿಂದ ಆ ಸಂಬಂಧದ ವಿವರಗಳನ್ನು ಇಲ್ಲಿ ಪ್ರಸ್ತಾಪಿಸುವ ಗೋಜಿಗೆ ಹೋಗುವುದಿಲ್ಲ.[೪] ಸಾರಾಂಶವಾಗಿ ಇಷ್ಟು ಹೇಳಬಹುದು: ಪಂಪ, ಕವಿಕಾಮ, ಮಧುರ ಮುಂತಾದ ಅನೇಕ ಪ್ರಥಮ ಕೃತಿಗಳಲ್ಲಿ, ಕವಿ ಸ್ವವಿಚಾರವನ್ನು ಹೇಳಿಕೊಳ್ಳುವಾಗ ಉತ್ತಮ ಮತ್ತು ಪ್ರಥಮ ಪುರುಷಗಳ ಪ್ರಯೋಗ ಕಂಡುಬಂದರೂ ಒಂದೇ (ಪದ್ಯ) ವಾಕ್ಯದಲ್ಲಿ ಪುರುಷ ಸಾಂಕರ್ಯ ಕಂಡುಬರುವುದಿಲ್ಲ. ಕರ್ತೃತ್ವ ಸಂದಿಗ್ಧತೆಗೆ ಎಡೆಗೊಡುವ ಕವಿರಾಜಮಾರ್ಗ, ಉದಯಾದಿತ್ಯಾಲಂಕಾರಗಳಂತಹ ಕೃತಿಗಳಲ್ಲಿ ಕಂಡುಬರುವ ಈ ಬಗೆಯ ಸಾಂಕರ್ಯ ಅನ್ಯಕರ್ತೃತ್ವವಾದಕ್ಕೆ ಪ್ರಬಲವಾದ ಅಂತರಿಕ ಪ್ರಮಾಣವೆಂಬುದನ್ನು ತಳ್ಳಿಹಾಕಲಾಗುವುದಿಲ್ಲ. ಈ ಅಂಶವನ್ನು ಶ್ರೀ ಸಂಗಮೇಶರು ದಯವಿಟ್ಟು ಪುನಃ ಪರಿಶೀಲನೆ ಮಾಡಲಿ ; ನನ್ನ ನಿಲುವನ್ನು ಒಪ್ಪುವುದು ಬಿಡುವುದು ಅವರಿಗೆ ಸೇರಿದ್ದು.

---

೪. ಈ ವಿಚಾರವಾಗಿ ಡಿ. ಎಲ್. ನರಸಿಂಹಾಚಾರ್ಯರಿಗೆ ನಾನು ೨೪–೧೧–೧೯೬೮ರಲ್ಲಿ ಬರೆದ ಪತ್ರಕ್ಕೆ ಉತ್ತರವಾಗಿ ಅವರು ೧೭–೧೨–೬೮ರಲ್ಲಿ ಬರೆದ ಪತ್ರದಲ್ಲಿನ ಪ್ರಸಕ್ತಭಾಗ : "ಉದಯಾದಿತ್ಯಾಲಂಕಾರದ ಕರ್ತೃ ಉದಯನಲ್ಲ, ಅವನ ಆಸ್ಥಾನದ ಇನ್ನೊಬ್ಬ ಕವಿ ಎಂಬ ಊಹೆಗೇನೋ ಅವಕಾಶವಿರುವಂತಿದೆ. ಇದಕ್ಕೆ ಆಧಾರವಾದ ಗ್ರಂಥಸ್ತ ವಾಕ್ಯಗಳನ್ನು ಪರೀಕ್ಷಿಸಿ ನೋಡಬೇಕು – ಈ ರೀತಿಯಲ್ಲಿ ಬೇರೆ ಲೇಖಕರೂ ಕವಿಗಳೂ ಯಾರಾದರೂ ಬರೆದಿರುವರೇ ಎಂದು ಇಲ್ಲಿಯವರೆಗೆ ಹೋಗಬಹುದು. ಇನ್ನೂ ಮುಂದಕ್ಕೆ ಹೋಗಿ ಕರ್ತೃ ನಾಗವರ್ಮ ಇತ್ಯಾದಿ ಊಹೆಗಳನ್ನು ಮಾಡುವುದು ನನ್ನ ದೃಷ್ಟಿಯಿಂದ ಸಲ್ಲುವುದಿಲ್ಲ."

ತಿಳಿಸಿಕೊಟ್ಟರೆ ಉಪಕಾರವಾಗುವುದು. ಇದು ಹೇಗಿದ್ದರೂ ಈ ಶಾಸನದ ಉದಯಾದಿತ್ಯ ಅಲಂಕಾರಗ್ರಂಥದ ಕರ್ತೃ ಎಂದು ತೀರ್ಮಾನಿಸುವುದಕ್ಕೆ 'ಚೋಳ' ಎಂಬ ಪೂರ್ವನಾಮದ ಉಲ್ಲೇಖವಿಲ್ಲದಿರುವುದು ಬಾಧಕವಾಗಿದೆ ; ಅಂತೆಯೇ ಅವನು 'ಸೋಮಾನ್ವಯ' ಕ್ಕೆ ಸೇರಿದವನೆಂಬ ಅಂಶವೂ ಅಡ್ಡಿಯಾಗಿದೆ. ಅಲಂಕಾರಗ್ರಂಥದ ಉದಯಾದಿತ್ಯ 'ದಿನಕಾಂತ ಕುಲ' ಕ್ಕೆ ಸೇರಿದವನು.

## ಅನುಬಂಧ

**ತಾಡಪತ್ರಿಯ ಶಾಸನ,** ಕಾಲ : ಶಕವರ್ಷ ೧೧೩೦ನೆಯ ಕಾಳಯುಕ್ತ ಸಂವತ್ಸರದ ಮಾಘ ಬ. ೧೫ (=ಕ್ರಿ. ಶ. ೧೨೦೮).

[ಶ್ರೀಮತ್ ಪರಮಗಂಭೀರ... ತಾಳಿಪಾಜಿಪುರಂ ಸೊಗಯಿ (ಸಿರ್ಕ್ಕುಂ)] (ಶಾಸನದ ಪ್ರಾರಂಭ ಭಾಗದ ಪಾಠವನ್ನು ಇಲ್ಲಿ ಕೊಟ್ಟಿಲ್ಲ. ಪ್ರಸಕ್ತವಾದ ಮುಂದಿನ ಭಾಗ ಕೆಳಗಿನಂತಿದೆ.)

ತತ್ಪುರಾಭ್ಯಂತರಂ ॥ [೯*] ತತ್ಪುರಪ್ರತಿಪಾಳಕಿರಪ್ಪ ಮಹಾರಾಜರನ್ವಯವದೆಂತೆಂದಡೆ.

ಭುವನಪ್ರಖ್ಯಾತ ಸೋಮಾನ್ವರ (ಯ?) ಜನಿತ ಮಹಾರಾಜರುತ್ತುಂಗ ಕಂಠೀರವ ಪೀಠಾಧ್ಯಾಸಿತರ್ಕ್ಕಳ್ವಲಬರಕ (ರ?) ಸುಗಳ್ಮಂನೆ ಸಂದ (ದಿ) ರ್ದ್ದರಾಸಾ (ಶಾ) ॥"] ವಿವರಾಂತವ [೯] ರ್ತ್ತಿ ಕೀರ್ತ್ತಿಧ್ವಜರವರೊಳುದಾತ್ತ ಪ್ರತಾಪ ಪ್ರಭಾವಪ್ರವಿಧೂತಾನ್ಯಾವ ಲೇಪಂ ನೆಗಳ್ದನವನಿಯಂ ಪಾಳಿಸಲು [ಕ] (ಆ) ತ್ತಿ ರಾಜಂ ಆತ್ಯ (ತ್ತ್ಯ) ರಸಂಗೆ ಪುಟ್ಟಿದ ತನೂಭವನಾ [ಹ] [ವ*]ಮಲ್ಲದೇವನಾದಿತ್ಯ ಸಮಪ್ರತಾಪನಿಧಿ ತ[ತ್ಸತಿ] ಬಾಗಲದೇವಿ ತಾನರುಂ ॥*] [ಧತ್ಯು] ಪಮಾನೆ ತತ್ಪ್ರ (ತ್ರಿ) ಯಸುತಂ ಕಲಿಗಂಗ ಮಹಾಭುಜಂ ಪರೌದ್ಧತ್ಯವಿಭೇದಿ ತದ್ರಮಣಿತಾಂ ಮಹಾದೇವಿಯಿನೆಸಿ (ಯೆನಿಸಿ) ಪ್ಪಳೊಪ್ಪುವಳು.

ಆರಿಭೂಬ್ರಿ (ಭೃ) ತ್ಕುಂಭಿಕುಂಭಸ್ಥಳವಿಗಳತ್ ರಕ್ತಾರ್ದ್ರಮುಕ್ತಾಫಳಾಳಿ

---

ಸಂಶೋಧನಾಧ್ಯಾಯಿಯಾಗಿರುವ, ಶ್ರೀ ಆರ್. ಶೇಷಶಾಸ್ತ್ರಿ, ಎಂ.ಎ. ಅವರು. ಶ್ರೀ ಸಂಗಮೇಶರು ಉದ್ಧರಿಸಿಕೊಟ್ಟಿರುವ ಶಾಸನ ಭಾಗಗಳಲ್ಲಿ ಅನೇಕ ತಪ್ಪುಗಳಿವೆ. ಅವು ಅಚ್ಚಿನ ತಪ್ಪುಗಳಾಗಿರಬಹುದು. ಇಲ್ಲವೆ ಪ್ರತಿ ಮಾಡುವಾಗಿನ ಕೈತಪ್ಪುಗಳಾಗಿರಬಹುದು.. ಶಾಸನ ಪಾಠದಲ್ಲಿ ಚೌಕ ಕಂಸದಲ್ಲಿ ಸೂಚಿಸಿರುವ ತಿದ್ದುಪಾಟುಗಳು ಶಾಸನಸಂಪಾದಕರವು: ಸಾಧಾರಣ ಕಂಸದಲ್ಲಿರುವವು ನನ್ನವು. ಶ್ರೀ ಸಂಗಮೇಶರೂ ಈ ಹಲವು ತಿದ್ದುಪಾಟುಗಳನ್ನು ಸೂಚಿಸಿದ್ದಾರೆ.

ಆದರೆ ಶ್ರೀ ಸಂಗಮೇಶರು ಉದ್ಧರಿಸಿ ಕೊಟ್ಟಿರುವ ತಾಡಪತ್ರಿ (ಅವರು ಬರೆದಿರುವಂತೆ, ಅಥವಾ ತಪ್ಪಾಗಿ ಅಚ್ಚಾಗಿರುವಂತೆ, ತಾಡಪತ್ತಿ ಅಲ್ಲ) ಶಾಸನದಲ್ಲಿ ಉದಯಾದಿತ್ಯನ ಉಲ್ಲೇಖವಿದ್ದರೂ ವ್ಯಕ್ತಿ ನಿರ್ಣಯಕ್ಕೆ ಅಗತ್ಯವಾದ ಚೋಳ (ಚೋಡ) ಎಂಬ ವಿಶೇಷಣವೇ ಇಲ್ಲ ; ಒಂದು ಪದ್ಯದಲ್ಲಿ ಮಾತ್ರ 'ಸೋಮನೃಪಾಪತ್ಯ' ಎಂಬ ಉಲ್ಲೇಖವೇನೋ ಇದೆ. ಶ್ರೀ ಸಂಗಮೇಶರು ಶಾಸನದ ಪೂರ್ಣಪಾಠವನ್ನು ಕೊಟ್ಟಿದ್ದರೆ ಚೆನ್ನಾಗಿತ್ತು. ಕೆಲವು ಭಾಗಗಳನ್ನು ಅನಗತ್ಯವೆಂದೋ ಇಲ್ಲವೆ ಎತ್ತಿಕೊಟ್ಟರೆ ತಮ್ಮ ವಾದಕ್ಕೆ ಧಕ್ಕೆಯುಂಟಾಗುವುದೆಂದೋ ಕಾರಣ ಏನಾದರೂ ಇರಲಿ – ಕೊಡದೆ ಬಿಟ್ಟಿರುವುದರಿಂದ, ಅವರ ಸಿದ್ಧಾಂತವೇ– ಈ ಶಾಸನದ 'ಸೋಮನೃಪಾಪತ್ಯ'ನಾದ ಉದಯಾದಿತ್ಯಕುಮಾರನೇ ಅಲಂಕಾರ ಗ್ರಂಥದಲ್ಲಿ ಉಕ್ತನಾದ, ಅವರ ಅಭಿಪ್ರಾಯದಂತೆ ಅದರ ಕರ್ತೃವಾದ ಉದಯಾದಿತ್ಯ ಎಂಬ ಸಿದ್ಧಾಂತವೇ ಸರಿ ಎಂದು, ವಿಷಯಶೋಧನಾಸಕ್ತರಲ್ಲದ ವಾಚಕರು ವಿಚಾರಮಾಡದೆ ಸ್ವೀಕರಿಸಲು ಅವಕಾಶವಾಗಿದೆ. ಕೈಬಿಟ್ಟಿರುವ ಆ ಭಾಗಗಳನ್ನು ಪರಿಶೀಲಿಸಿದರೆ, ಈ ತಾಡಪತ್ರಿ ಶಾಸನದಲ್ಲಿ ಎರಡುಕಡೆ ಸೋವಿದೇವನ ಹೆಸರು ಉಕ್ತವಾಗಿದೆ, ಅಲ್ಲದೆ ಕಲಚುರಿ ವಂಶದ ಅಹವಮಲ್ಲ (?), ಕಲಿದೇವ (?)[೫] ಹೆಸರುಗಳೂ ಉಕ್ತವಾಗಿರುವಂತೆ ಊಹಿಸಲು ಅವಕಾಶವಿದೆ. ಸೋವಿದೇವನ ಇನ್ನೊಂದು ಹೆಸರು ಸೋಮೇಶ್ವರ, ಆದರೆ ವಂಶಾವಳಿಯ ನಕ್ಷೆಯಲ್ಲಿ ಸೋವಿದೇವನ ಮಗ ಕಲಿದೇವ (?) ಎಂದಿದೆಯೇ ಹೊರತು, ಉದಯಾದಿತ್ಯ ಎಂದಿಲ್ಲ. ತಾಡಪತ್ರಿ ಶಾಸನದ ಜಾಡು ನಮ್ಮನ್ನು ಕಲಚುರಿ ವಂಶದ ಇತಿಹಾಸದ ಮುಕ್ತಾಯದ ಘಟ್ಟಕ್ಕೆ ಕರೆದೊಯ್ದು, ತಟ್ಟನೆ ಹಿಂದಕ್ಕೆ ಜಗ್ಗಿಸಿ ಎಳೆಯುತ್ತದೆ ; ನಾವು ಯಾವ ತೀರ್ಮಾನವನ್ನೂ ಕೈಗೊಳ್ಳಲಾಗದೆ ತಟಸ್ಥರಾಗಬೇಕಾಗುತ್ತದೆ. ಶಾಸನದ ಕಾಲ (ಕ್ರಿ.ಶ. ೧೨೦೭–೮) ಬಹುಮಟ್ಟಿಗೆ ಕಲಚುರಿ ವಂಶದ ಇತಿಹಾಸ ಕೊನೆಮುಟ್ಟುವ ಕಾಲಕ್ಕೆ (ಕ್ರಿ.ಶ. ೧೧೮೩) ಹೊಂದಿಬರುತ್ತದೆ. ಇತಿಹಾಸತಜ್ಞರು ಈ ಶಾಸನವನ್ನು[೬] ಅಧ್ಯಯನ ಮಾಡಿ, ಈ ಶಾಸನೋಕ್ತ ವ್ಯಕ್ತಿಗಳು ಯಾರೆಂಬುದನ್ನು

---

೫. ಮೈಸೂರು ಸರ್ಕಾರದ ಪ್ರಕಟನೆ Karnataka Though the Ages (1968), ಪು ೨೯೫ರಲ್ಲಿ ಕೊಟ್ಟಿರುವ ವಂಶವೃಕ್ಷವನ್ನು ನೋಡಿ.

೬. ಈ ಶಾಸನದ (SSI IV No, 798) ಪೂರ್ಣ ಪಾಠದ ಯಥಾಪ್ರತಿಯನ್ನು ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಕಚೇರಿಯ ಗ್ರಂಥಭಂಡಾರದ ಶಾಸನಸಂಪುಟದಿಂದ ಪ್ರತಿಮಾಡಿ ಒದಗಿಸಿದವರು ನನ್ನ ವಿದ್ಯಾರ್ಥಿಯಾಗಿದ್ದ, ಈಗ ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಶಾಸನಗಳ ಅಧ್ಯಯನ ವಿಷಯದಲ್ಲಿ

ಸ್ಫುರಿತತೋ (ತ್ತೋ) ದ್ಯದ್ರಂಗವಲ್ಲೀ ವಿಳಸಿತ ರಣರಂಗಾಂಗಣೋದ್ವಿತ್ತಬಾಹಾ [।*] ಪರಿಘಾವಿರ್ಘೂತವೈ ಕುರ್ವಣ ವಿವಿಧಭುಜಪ್ರೇತಭೇತಾಳಭೂತೋದ್ಧುರತಾ ಜೇಗಿಯಮಾನಾರ್ಜ್ಜಿತ ನಿಜವಿಜಯಂ ಸೋವಿದೇವಕ್ಷಿತೀಶಂ.

ಒದವಿದ ರಾಜ್ಯಶ್ರೀಯಿಂ
ದುದಾತ್ತನೆನಿಸಿರ್ದ್ದ ಸೋವಿದೇವನ್ರಿ (ನೃ) ಪಂಗಂ
ಪದಪಿನ ಕಂಚಲದೇವಿಗ
ಮುದಯಿಸಿದಂ ಪ್ರಿಯಕುಮಾರನುದಯಾದಿತ್ಯಂ

ಮದವದ್ವೈರಿನ್ರಿ (ನೃ)ಪಾಳಸೈನ್ಯತಿಮಿರಪ್ರಧ್ವಂಸನಂಗೆಯ್ದು ಪೇ (ಪೆ) ರ್ಚ್ಚಿಡೆ (ದ) ರಾಗಂ ನಿಜಮಂಡಳಕ್ಕೆಸೆಯೆ ದಿಕ್ಚಕ್ರಾಂತಮಂ ತನ್ನ ತೇಜದಗುರ್ವ್ವಿಂ ಸಮಜುತ್ತವಭು (ಭ್ಯು)ದಯಮಂ ಕೈಕೊಂಡ ಸಯ್ದಿಂದವಿಂತುದಯಾದಿತ್ಯಕುಮಾರನಪ್ರತಿಹತೋದಗ್ರ ಪ್ರತಾಪೋದಯಂ.

ಪ್ರತ್ಯರ್ತ್ಥಿನ್ರಿ (ನೃ) ಪತಿ ಬಳತಿವಿ (ಮಿ)
ರಾತ್ಯಯಮಂ [ಮಾ]ಳ್ಪ ತೇಜದಿಂ ಸೋಮನ್ರಿ (ನೃ) ಪಾ
ಪತ್ತನೆನಿಸಿದ ಕುಮಾರಂ
ಪ್ರತ್ಯಕ್ಷ (ಕ್ಷಂ) ತಾನೆ ನೋಳ್ಪಡುದಯಾದಿತ್ಯಂ

ಸ್ಮರನಂ ರೂಪಿನೊಳಿಂದ್ರನಂ ವಿಭವದೊಳು (ಳ್) ಕಾನೀನನಂ ದಾನದೊಳು (ಳ್) ಹರಿಯಂ ವಿಕ್ರಮಶಕ್ತಿಯೊಳು (ಳ್) ಯಮಜನಂ ಸತ್ಯೋಕ್ತಿಯೊಳು (ಳ್) ತೀವ್ರಭಾಸ್ಕರನಂ ತೇಜದೊಳಂಬುಜಪ್ರಭವನಂ ಚಾತುರ್ಯ್ಯದೊಳು (ಳ್) ಹೇಮಭೂಧರನಂ ಧೈರ್ಯ್ಯದೊಳೆಯ್ದೆ ಪೋಲ್ವನುದಯಾದಿತ್ಯೋರ್ವ್ವರಾವಲ್ಲಭಂ.

ಉದಯಾದಿತ್ಯ ಕುಮಾರಂ
ಕದನದೊಳಿದಿರಾದ ಮದವದಹಿತ ಮಬೀಬ್ರಿ (ಭ್ರ)
ತ್ಸುದತಿಯರ ವದನವನಜ
ಕ್ಕದವಕು (ಳ = ಬಿ) ಲಂ ಮಾಡುವಂದವಿದು ಬ (ಬಿ) ಸವಂದಂ.*

* * *

* ಕರ್ನಾಟಕ ಭಾರತಿ, ೭–೪, ೧೯೭೫ ಮತ್ತು ಕದಂಬ, ೧೯೯೩.

# ಅ. ಸಂಪಾದಿತ ಕೃತಿಗಳ ಮುನ್ನುಡಿಗಳು

## ೧. 'ಕವಿರಾಜಮಾರ್ಗ' ಕೃತಿಯ ಸಂಪಾದಕರ ನುಡಿಗಳು

### ೧. ಸಂಪಾದಕನ ಅರಿಕೆ*

ನಾನು ಎಂ.ಎ.ತರಗತಿಯ ವಿದ್ಯಾರ್ಥಿಯಾಗಿದ್ದಾಗ (೧೯೩೧–೩೩) ನನ್ನ ವಿದ್ಯಾಗುರು ದಿವಂಗತ ಪ್ರೊ. ಟಿ.ಎಸ್. ವೆಂಕಣ್ಣಯ್ಯನವರು ಕನ್ನಡ ಸಾಹಿತ್ಯ ಚರಿತ್ರೆಯ ಪಾಠದ ಅಂಗವಾಗಿ ಕವಿರಾಜಮಾರ್ಗದ ಕೆಲವು ಭಾಗಗಳನ್ನು ಸ್ಥೂಲವಾಗಿ ತಿಳಿಯ ಹೇಳಿದರು. ಕವಿರಾಜಮಾರ್ಗದ ಕರ್ತೃತ್ವದ ವಿಚಾರವಾಗಿ ಅವರಿಗೂ ನಾ.ಶ್ರೀ.ರಾಜ ಪುರೋಹಿತರಿಗೂ ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ನಡೆದಿದ್ದ ಪತ್ರವ್ಯವಹಾರವನ್ನು ನಾನು ಆಸಕ್ತಿಯಿಂದ ಓದಿದ್ದು ಆಗಲೇ. ಮದ್ರಾಸು ವಿಶ್ವವಿದ್ಯಾನಿಲಯದವರು ಅದೇ ತಾನೇ ಕವಿರಾಜಮಾರ್ಗದ ದ್ವಿತೀಯ ಮುದ್ರಣವನ್ನು ಹೊರತಂದಿದ್ದರು. ಆಗ ಮದರಾಸಿನಿಂದ ಪ್ರಕಟವಾಗುತ್ತಿದ್ದ 'ಪ್ರಜಾಮತ' ವಾರಪತ್ರಿಕೆಗೆ ಹೋದ ವಿಮರ್ಶೆಯ ಪ್ರತಿ ವಿಮರ್ಶೆಗೆಂದು ನನ್ನ ಬಳಿ ಬಂದಿತು. ವಿದ್ವಾಂಸರೊಬ್ಬರು ಮಾಡಬೇಕಾಗಿದ್ದ ಕಾರ್ಯವನ್ನು ನನ್ನಂತಹ ಅಪರಿಣತ ವಿದ್ಯಾರ್ಥಿಯೊಬ್ಬನು ಮಾಡುವುದು ಹೇಗೆ ಎಂದು ಅಧೀರನಾಗಿ ಹಿಂಜರಿಯುತ್ತಿದ್ದ ನನ್ನನ್ನು ಉತ್ತೇಜಿಸಿ ವಿಮರ್ಶೆಯನ್ನು ಮಾಡಿಸಿದವರು ವೆಂಕಣ್ಣಯ್ಯನವರು. ಅಂದಿನಿಂದ ನಾನು ಕವಿರಾಜಮಾರ್ಗದ ಭಕ್ತ.

ಈಗ್ಗೆ ಮೂರು ನಾಲ್ಕು ವರ್ಷಗಳ ಹಿಂದೆ ಬಿ.ಎ. ಪದವೀ ಪರೀಕ್ಷೆಗೆ ಕನ್ನಡವನ್ನು ಪ್ರಧಾನ (Major) ವಿಷಯವಾಗಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಕವಿರಾಜಮಾರ್ಗವನ್ನುನಾನು ಪಾಠ ಹೇಳಬೇಕಾಗಿ ಬಂದಿತು. ಆಗ ನನಗೆ ಗೋಚರವಾಯಿತು, ಕವಿರಾಜಮಾರ್ಗವನ್ನು ಪಾಠ ಹೇಳಬೇಕಾದರೆ ಕೇವಲ ಗ್ರಂಥಭಕ್ತಿ ಸಾಲದು ಎಂಬ ಸತ್ಯಸಂಗತಿ; ಅದನ್ನು ಪಾಠ ಮಾಡಬೇಕಾದ ಅಧ್ಯಾಪಕನ ಬವಣೆ ಎಂಥದು ಎಂಬ ನಿಜ ವಿಚಾರ, ಗ್ರಂಥದ ಮುದ್ರಿತ ಪ್ರತಿಗಳಲ್ಲಿ ಕಂಡುಬರುತ್ತಿದ್ದ ಪಾಠಗ್ರಂಥಿಗಳು, ಅರ್ಥಕ್ಲೇಶಗಳು, ಸಹಾಯಕ

ಈ ಮುದ್ರಣದಲ್ಲಿ ಹಲವು ಬಗೆಯ ಹಲವಾರು ಲೋಪದೋಷಗಳು ಕಂಡು ಬಂದರೆ ಅದರಲ್ಲಿ ಆಶ್ಚರ್ಯವೇನಿಲ್ಲ. ಅವು ನನ್ನ ಗಮನಕ್ಕೆ ಬಾರದೆ, ಇತರರ ಗಮನಕ್ಕೆ ಬರುವ ಸಂಭವ ಹೆಚ್ಚು: 'ಕಾಣನೇಗೆಯ್ದುಂ ತನ್ನ ದೋಷಮಂ। ಕಾಣದಂತಗೆಂದುಂ ಕಣ್ಗಳ್ ತಮ್ಮ ಕಾಡಿಗೆಯಂ'! ಇದು ಮುಖ್ಯವಾಗಿ 'ವಿದ್ಯಾರ್ಥಿಗಳ ಮುದ್ರಣ'; ವಿದ್ವಾಂಸರದ್ದಲ್ಲ. ಇದು ಈಗಿಗಿಂತ ಹೆಚ್ಚು ಉಪಯುಕ್ತವಾಗುವಂತೆ ಪ್ರಾಜ್ಞರು ನೀಡುವ ಸಲಹೆ ಸೂಚನೆಗಳನ್ನು ಕೃತಜ್ಞತೆಯಿಂದಸ್ವೀಕರಿಸಿ, ಗ್ರಂಥದ ಮರು ಆವೃತ್ತಿಯಲ್ಲಿ – ಆ ಯೋಗ ಒದಗಿ ಬಂದರೆ – ಅವನ್ನು ಅಳವಡಿಸಿಕೊಳ್ಳುತ್ತೇನೆ.

ದಿವಂಗತ ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರ ಸತ್ಪುತ್ರರಾದ, ಮೈಸೂರು ಸರ್ಕಾರದ ಮುಖ್ಯ ಭಾಷಾಂತರಕಾರರಾದ ಶ್ರೀ ಎಂ.ಕೇಶವ ಭಟ್ಟ, ಎಂ.ಎ., ಅವರು ನಾನು ಕೇಳಿದೊಡನೆಯೆ ತಮ್ಮ ತೀರ್ಥರೂಪರವರು ಬರೆದಿರುವ 'ಕವಿರಾಜಮಾರ್ಗ ವಿವೇಕ' ಗ್ರಂಥದ (ಎರಡನೆಯ ಭಾಗ) ಅಪ್ರಕಟಿತ ಹಸ್ತಪ್ರತಿಯನ್ನು ನನ್ನ ವಶಕ್ಕೆ ಕೊಟ್ಟಿದ್ದಲ್ಲದೆ, ನನ್ನ ಇಚ್ಛೆಯಂತೆ ಅದನ್ನು ಉಪಯೋಗಿಸಿಕೊಳ್ಳಲೂ ಅದರಿಂದ ಅಗತ್ಯಕಂಡ ಭಾಗಗಳನ್ನು ಉದ್ಧರಿಸಲೂ ಅನುಮತಿಯನ್ನು ನೀಡಿದರು. ಗ್ರಂಥಕ್ಕೆ ಟಿಪ್ಪಣಿ ಬರೆಯುವ ಕೆಲಸದಲ್ಲಿ ದಿವಂಗತರ ವಿದ್ವತ್ಪೂರ್ಣವಾದ ವ್ಯಾಖ್ಯಾನದಿಂದ ಅಪಾರವಾದ ಪ್ರಯೋಜನವನ್ನು ಪಡೆದಿರುತ್ತೇನೆ. ಈವೊಂದು ಪ್ರಯೋಜನವನ್ನು ದೊರಕಿಸಿಕೊಟ್ಟಿದ್ದಕ್ಕಾಗಿ, ಪಂಡಿತೋತ್ತಮರೂ ಪಾಂಡಿತ್ಯಪಕ್ಷಪಾತಿಗಳೂ ಆದ ಶ್ರೀಕೇಶವ ಭಟ್ಟರಿಗೆ ನಾನು ಚಿರಋಣಿಯಾಗಿದ್ದೇನೆ. ಕವಿರಾಜಮಾರ್ಗವನ್ನು ವ್ಯಾಸಂಗ ಮಾಡಬೇಕೆನ್ನುವವರಿಗೆ ಅತ್ಯಂತ ಉಪಯುಕ್ತವಾದ ಆ ಗ್ರಂಥ ಬೇಗನೆ ಬೆಳಕನ್ನು ಕಾಣಲಿ ಎಂದು ಹಾರೈಸುತ್ತೇನೆ.

ನಾನು ಕೊಟ್ಟ ಕಿರುಕುಳವನ್ನೆಲ್ಲಾ ಸಹಿಸಿಕೊಂಡು, ಕನ್ನಡ ಸಾಹಿತ್ಯ ಪರಿಷತ್ತಿನ ಬಿ.ಎಂ.ಶ್ರೀಕಂಠಯ್ಯ ಅಚ್ಚುಕೂಟದವರು ವಿಶೇಷ ಶ್ರಮವಹಿಸಿ, ಗ್ರಂಥವನ್ನು ಚೆನ್ನಾಗಿ ಅಚ್ಚುಮಾಡಿ ಕೊಟ್ಟಿದ್ದಾರೆ. ಅಚ್ಚುಕೂಟದಿಂದ ದೊರೆತ ಎಲ್ಲ ಬಗೆಯ ಸಹಾಯ ಸಹಕಾರಗಳಿಗಾಗಿ ನಾನು ಅದರವ್ಯವಸ್ಥಾಪಕರಾದ ಶ್ರೀ ಶೇಷನಾರಾಯಣರಿಗೂ ಸಂಬಂಧಪಟ್ಟ ಕೆಲಸಗಾರರಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಬೆಂಗಳೂರು **ಎಂ.ವಿ. ಸೀತಾರಾಮಯ್ಯ**

ಫೆಬ್ರವರಿ ೧೨, ೧೯೬೮ ಸಂಪಾದಕ

ಟಿಪ್ಪಣಿಗಳ ಕೊರತೆ – ಇವೆಲ್ಲ ಬೋಧಕನನ್ನು ಸವಾಲು ಹಾಕಿ ಎದುರಿಸುತ್ತಿದ್ದವು. ಎಲ್ಲಕ್ಕಿಂತ ಮಿಗಿಲಾಗಿ ವಿದ್ಯಾರ್ಥಿಗಳಿಗೆ ಎಲ್ಲಿಯೂ ಒಂದು ಪ್ರತಿ ಕೂಡ ದೊರಕದಿದ್ದ ಪರಿಸ್ಥಿತಿ ನನಗೆ ತುಂಬ ವ್ಯಥೆಯನ್ನುಂಟು ಮಾಡಿತು; ಏನಾದರೂ ಪರಿಹಾರ ಹುಡುಕುವಂತೆ ನನ್ನನ್ನು ಪ್ರಚೋದಿಸಿತು. ನಮ್ಮ ಸಂಘದ ಮೂಲಕ ಗ್ರಂಥವನ್ನು ಪ್ರಕಟಿಸಬಹುದೆಂಬ ನನ್ನ ಸೂಚನೆಯನ್ನು ನನ್ನ ಸಹೋದ್ಯೋಗಿಗಳೂ ಸಂಘದ ಕಾರ್ಯಸಮಿತಿಯ ಸದಸ್ಯರೂ ಅಂಗೀಕರಿಸಿ ಗ್ರಂಥಸಂಪಾದನೆಯ ಕಾರ್ಯವನ್ನು ನನಗೇ ವಹಿಸಿಬಿಟ್ಟರು. ಸಲಹೆ ಕೊಟ್ಟಿದ್ದಕ್ಕೆ ವಿಶ್ವಾಸದ ಶಿಕ್ಷೆ! ಕವಿರಾಜಮಾರ್ಗದ ಈ ಮೂರನೆಯ ಮುದ್ರಣ ಕಾರ್ಯದ ಹಿನ್ನೆಲೆ ಇದು. ಸಂಪಾದಕನ ಕಾರ್ಯವನ್ನು ವಹಿಸಿಕೊಂಡು ಸುಮಾರು ಎರಡು ವರ್ಷಗಳಾದ ಮೇಲೆ ಗ್ರಂಥ ಈಗಲಾದರೂ ಹೊರಬರುತ್ತಿರುವುದು ನನಗೆ ನೆಮ್ಮದಿಯುಂಟು ಮಾಡಿದೆ.

ಗ್ರಂಥ ಸಂಪಾದನೆಯ ಕಾರ್ಯದಲ್ಲಿ ನನಗೆ ಹಲವು ಮಂದಿ ಹಲವು ಬಗೆಗಳಲ್ಲಿ ನೆರವು ನೀಡಿದ್ದಾರೆ. ಅವರಲ್ಲಿ ಮುಖ್ಯರಾದ ಕೆಲವರ ಹೆಸರನ್ನಾದರೂ ಹೇಳದಿದ್ದರೆ ಕರ್ತವ್ಯಲೋಪವಾಗುವುದು. ಗ್ರಂಥವನ್ನು ಅಚ್ಚಿಗಾಗಿ ಪ್ರತಿಮಾಡಿ ಸಿದ್ಧಗೊಳಿಸುವ ಕಾರ್ಯದಲ್ಲಿ ನನ್ನ ಸಹೋದ್ಯೋಗಿಗಳಾಗಿದ್ದ, ಸಂಪಾದಕ ಮಂಡಲಿಯ ಸದಸ್ಯರಾದ ಶ್ರೀ ಹಂ.ಪ.ನಾಗರಾಜಯ್ಯ ಎಂ.ಎ., ಮತ್ತು ಶ್ರೀಮತಿ ಲಲಿತಮ್ಮ ಎಂ.ಎ., ಇವರುಗಳು ನೆರವಾಗಿದ್ದಾರೆ; ಪಾಠ ನಿಷ್ಕರ್ಷೆಯ ಕಾರ್ಯದಲ್ಲಿ ಶ್ರೀ ಹಂ.ಪ.ನಾ. ಅವರ ಸಲಹೆ ಸೂಚನೆಗಳಿಂದ ಬಹಳ ಪ್ರಯೋಜನ ಪಡೆದಿದ್ದೇನೆ; ಪದ್ಯಗಳ ಅಕಾರಾದಿ, ನಾಮಸೂಚೀ ಪತ್ರ, ಪಾರಿಭಾಷಿಕ ಪದಗಳ ಪಟ್ಟಿ ಇವುಗಳನ್ನೂ ಬೇಸರಪಡದೆ ಸಿದ್ಧಪಡಿಸಿಕೊಟ್ಟವರು ಅವರೆ. ಅವರ ಉಪಕಾರದ ಹೊರೆ ಹಿರಿದು. ಅಲಂಕಾರ ಶಾಸ್ತ್ರದ ಎಷ್ಟೋ ವಿಚಾರಗಳನ್ನು ಗ್ರಹಿಸುವುದರಲ್ಲಿ ಪ್ರೊ. ಕೆ.ಟಿ.ಪಾಂಡುರಂಗಿ ಎಂ.ಎ., ಅವರಿಂದ ತಿಳಿವಳಿಕೆ ಪಡೆದಿದ್ದೇನೆ; ಸಂಘದ ಅಧ್ಯಾಪಕ ಕಾರ್ಯದರ್ಶಿ ಶ್ರೀ ಆರ್.ಎನ್.ಪಟ್ವಾರಿ ಎಂ.ಎ., ಅವರು ಅನೇಕ ವಿಧಗಳಲ್ಲಿ ಸಹಕರಿಸಿದ್ದಾರೆ. ಇವರೆಲ್ಲರಿಗೂ ಒಟ್ಟಿಗೆ ಕೃತಜ್ಞತೆಯನ್ನು ತಿಳಿಸುವ ಮಾತು ಒಂದೇ ಆದರೂ ಅದು ಒಳಗೊಂಡ ಕೃತಜ್ಞತಾಭಾವ ಅಪಾರ, ಅನಂತ ಎಂದು ಹೇಳಬಯಸುತ್ತೇನೆ.

ನಾನು ಕಾಲೇಜಿನಿಂದ ನಿವೃತ್ತನಾದಾಗ (೨೪–೩–೧೯೬೭) ಕೆಲಸ ಅರ್ಧಾಂತಕವಾಗಿತ್ತು. ಕೈಕೊಂಡ ಕಾರ್ಯವನ್ನು ಮುಗಿಸಿ ಕೃತಕೃತ್ಯನಾಗುವ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದಕ್ಕಾಗಿ ಸಂಘದ ಈಗಿನ ಅಧ್ಯಕ್ಷರು ಶ್ರೀ ಜಿ.ಬ್ರಹ್ಮಪ್ಪ ಎಂ.ಎ. ಅವರಿಗೆನಾನು ಋಣಿಯಾಗಿದ್ದೇನೆ.

ಶ್ರೀ ಡಿ.ವಿ.ಕೆ.ಮೂರ್ತಿಯವರು ಎರಡು ವರ್ಷಗಳ ಹಿಂದೆಯೇ ಸೂಚಿಸಿದರು. ಅವರ ವಿಶ್ವಾಸದ ಒತ್ತಾಯದ ಫಲ ಈ ಕಿರಿಯ ಆವೃತ್ತಿ.

ಹಿಂದಿನ ಆವೃತ್ತಿಯ ಸುಮಾರು ೧೦೦ ಪುಟಗಳ ಪೀಠಿಕೆಯನ್ನು ಇಲ್ಲಿ ಕೇವಲ ಮೂವತ್ತೈದು ಪುಟಗಳಿಗೆ ಇಳಿಸಬೇಕಾದದ್ದು ಅನಿವಾರ್ಯವಾಯಿತು. ಆದರೂ, ಹೇಳಬೇಕಾದ ಮುಖ್ಯ ಸಂಗತಿಗಳನ್ನೆಲ್ಲ ಪೀಠಿಕೆಯಲ್ಲಿ ಅಡಕ ಮಾಡಿರುವುದಲ್ಲದೆ, ಆ ಗ್ರಂಥ ಪ್ರಕಟವಾದ ಮೇಲೆ ವಿದ್ವಾಂಸರು – ಮುಖ್ಯವಾಗಿ ಕರ್ತೃತ್ವ ವಿಚಾರವಾಗಿ – ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಗಮನಿಸಿ ವಿಮರ್ಶಿಸಲಾಗಿದೆ; ಗಮನಕ್ಕೆ ಬಂದ ಒಂದೆರಡು ಹೊಸ ಅಂಶಗಳನ್ನೂ ಸೇರಿಸಿದೆ. ಒಟ್ಟಿನ ಮೇಲೆ, ವಿಷಯ ವಿವೇಚನೆಯನ್ನು ಕೂಡಿದಮಟ್ಟಿಗೂ ಇಂದಿನವರೆಗಿನ (up-to-date) ವಿಚಾರಸೀಮೆಗೆ ತಂದು ನಿಲ್ಲಿಸಿದೆ. ಪೀಠಿಕೆಯನ್ನು ಯಾವ ಕಾರಣಕ್ಕಾಗಿ ಸಂಕ್ಷೇಪಿಸಬೇಕಾಯಿತೋ ಅದೇ ಕಾರಣಕ್ಕಾಗಿ ಟಿಪ್ಪಣಿಗಳ ವಿಭಾಗವನ್ನೂ ಪಾಠಾಂತರಗಳು, ನಾಮಸೂಚಿ, ಮುಂತಾದ ಅಧ್ಯಯನ ಪರಿಕರಗಳನ್ನುಳ್ಳ ಅನುಬಂಧಗಳನ್ನೂ ಕೈಬಿಡಬೇಕಾಯಿತು. ಆದರೆ, ಹೊಸದಾಗಿ ಸೇರಿಸಿರುವ ಶಬ್ದಕೋಶದಿಂದ ವಿದ್ಯಾರ್ಥಿಗಳ ವ್ಯಾಸಂಗಕ್ಕೆ ಸ್ವಲ್ಪಮಟ್ಟಿಗೆ ಸಹಾಯವಾಗುವುದೆಂದು ನಂಬಿದ್ದೇನೆ.

ಹಿಂದಿನ ಮುದ್ರಣದಲ್ಲಿ ಉಳಿದುಕೊಮಡು ಬಂದಿದ್ದ ಹಲಕೆಲವು ದೋಷಗಳನ್ನು ಪರಿಹರಿಸಿ, ಗ್ರಂಥಪಾಠವನ್ನು ಮೇಲ್ಪಾಟು ಮಾಡಿದೆ; ಹಾಗಿದ್ದೂ ಪಾಠ ಕ್ಲೇಶಗಳು ಇಲ್ಲದಿಲ್ಲ; ಹೊಸ ಹಸ್ತ ಪ್ರತಿಗಳ ನೆರವು ಸಂಗಡಿಸಿದಲ್ಲದೆ, ಅವುಗಳ ಪರಿಹಾರ ಸಾಧ್ಯವಿಲ್ಲ.

ವಿದ್ವದಭಿಮಾನಿಗಳೂ ಶಾಸ್ತ್ರಗ್ರಂಥಗಳ ಪ್ರಕಟನೆಯಲ್ಲಿ ಅಮಿತ ಉತ್ಸಾಹವುಳ್ಳವರೂ ಆದ ಶ್ರೀ ಡಿ.ವಿ.ಕೆ.ಮೂರ್ತಿಯವರ ಸೂಚನೆ, ಉತ್ತೇಜನ ಒತ್ತಾಯಗಳಿಲ್ಲವಾಗಿದ್ದರೆ, ಕವಿರಾಜಮಾರ್ಗದ ಈ ಆವೃತ್ತಿಯನ್ನು ಸಿದ್ಧಪಡಿಸುವ ಯೋಚನೆಯನ್ನು ಮಾಡುತ್ತಿರಲಿಲ್ಲ. ಸರ್ವವಿಧಗಳಲ್ಲೂ ಇದರ ಪ್ರಕಟನೆಗೆ ಕಾರಣಕರ್ತರಾದ ಅವರಿಗೆ ನಾನು ಅತ್ಯಂತ ಋಣಿಯಾಗಿದ್ದೇನೆ; ಅವರ ಶ್ರೇಯಸ್ಸನ್ನು ಕೋರುತ್ತೇನೆ. ಪುಸ್ತಕವನ್ನು ತುಂಬ ಅಚ್ಚುಕಟ್ಟಾಗಿ ಅಂದವಾಗಿ ಮುದ್ರಿಸಿಕೊಟ್ಟಿರುವ ಶ್ರೀ ಜಿ.ಎಚ್. ಮೂರ್ತಿ ಯವರಿಗೂ ನಾನು ಕೃತಜ್ಞ.

ಎಪ್ರಿಲ್ ೧೦, ೧೯೭೫ **ಎಂ. ವಿ. ಸೀತಾರಾಮಯ್ಯ**

ಬೆಂಗಳೂರು.

# ೨. ಬಿನ್ನಹ*

'ಕವಿರಾಜಮಾರ್ಗ'ವನ್ನು ನಾನು ೧೯೬೮ರಲ್ಲಿ ಆವರೆಗೆ ಉಪಲಬ್ಧವಾಗಿದ್ದ ಆಧಾರ ಸಾಮಗ್ರಿಯೆಲ್ಲವನ್ನೂ ಕೂಲಂಕುಷವಾಗಿ ಅಧ್ಯಯನ ಮಾಡಿ ಪರಿಷ್ಕೃತ ಗ್ರಂಥಪಾಠ, ವಿಸ್ತಾರವಾದ ಪೀಠಿಕೆ, ವಿಮರ್ಶಾತ್ಮಕವಾದ ಟಿಪ್ಪಣಿಗಳು, ಅಧ್ಯಯನಕ್ಕೆ ಸಹಾಯಕವಾದ ಪರಿಕರಗಳನ್ನುಳ್ಳ ಅನುಬಂಧಗಳು – ಇವುಗಳೊಂದಿಗೆ ಸಂಪಾದಿಸಿದೆನು. ನನ್ನಿಂದ ಸಂಪಾದಿತವಾದ ಈ ಅಮೂಲ್ಯ ಗ್ರಂಥವನ್ನು ನಾನು ಕೆಲಸ ಮಾಡುತ್ತಿದ್ದ ಬೆಂಗಳೂರು ಸರ್ಕಾರಿ ಕಲಾ ಮತ್ತು ವಿಜ್ಞಾನ ಕಾಲೇಜು, ಕರ್ಣಾಟಕ ಸಂಘವು ಪ್ರಕಾಶಪಡಿಸಿತು. ಈ ಆವೃತ್ತಿಯನ್ನು ಕನ್ನಡ ವಿದ್ವತ್ಪ್ರಪಂಚ ಅತ್ಯಂತ ಆದರದಿಂದ ಸ್ವಾಗತಿಸಿತು. ಗ್ರಂಥ ಪ್ರತಿಗಳ ಮಾರಾಟದ ಎಲ್ಲಾ ಹೊಣೆಗಾರಿಕೆಯನ್ನೂ ವಹಿಸಿಕೊಂಡು ಶ್ರೀ ಡಿ.ವಿ.ಕೆ.ಮೂರ್ತಿಯವರು ಆಗ ತುಂಬ ಉಪಕಾರ ಮಾಡಿದರು. ಇವರ ಸಕಾಲಿಕ ಸಹಾಯದಿಂದಾಗಿ, ಸಂಘವು ನನಗೆ ಕೊಡಬಂದ ಸಂಭಾವನೆಯ ದ್ರವ್ಯವನ್ನು ಸಂಘಕ್ಕೆ ಹಿಂದಿರುಗಿಸಿ, ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ., ಪದವೀ ಪರೀಕ್ಷೆಯ ವ್ಯಾಸಂಗದ ಉತ್ತೇಜನಾರ್ಥ ಕವಿರಾಜಮಾರ್ಗಕಾರ **ಶ್ರೀವಿಜಯನ** ಹೆಸರಿನಲ್ಲಿ ಒಂದು ಚಿನ್ನದ ಪದಕವನ್ನು ಇರಿಸುವ ಏರ್ಪಾಡು ಮಾಡುವುದು ಸಾಧ್ಯವಾಯಿತು. ಗ್ರಂಥಪ್ರತಿಗಳ ಮಾರಾಟಕ್ಕೆ ಹತ್ತಾರು ವರ್ಷ ಕಾಯುವಂತಾಗಿದ್ದರೆ, ಈ ಏರ್ಪಾಡು ಸಾಧ್ಯವಾಗದಿರುವುದು ಹಾಗಿರಲಿ, ಮುದ್ರಣದವೆಚ್ಚ ಸಾಲದ ಹೊರೆಯಾಗಿ ಹೆಗಲೇರುತ್ತಿತ್ತು. ಶ್ರೀ ಮೂರ್ತಿಯವರ ಸಕಾಲಿಕ ಸಹಾಯವನ್ನು ಆಗ ಸ್ಮರಿಸಲು ಅವಕಾಶವಾಗಲಿಲ್ಲ; ಈಗ ಸ್ಮರಿಸಿಕೊಳ್ಳುತ್ತೇನೆ.

೧೯೬೮ರ ಆವೃತ್ತಿಯನ್ನು 'ವಿದ್ಯಾರ್ಥಿಗಳ ಮುದ್ರಣ' ಎಂದು (ನನ್ನ 'ಅರಿಕೆ'ಯಲ್ಲಿ) ಕರೆದಿದೆ. ಆದರೆ, ಸುಮಾರು ೫೩೦ ಪುಟಗಳ ಪುಸ್ತಕಕ್ಕೆ ಆಗ ಇಟ್ಟಿದ್ದ ಬೆಲೆ ೧೫ ರೂ. ಹೆಚ್ಚಲ್ಲವಾದರೂ ವಿದ್ಯಾರ್ಥಿಗಳು ಕೊಳ್ಳುವ ಶಕ್ತಿಗೆ ಮೀರಿದ್ದು ಎನಿಸಿತು. ಒಂದು ಸಣ್ಣ ಪ್ರಮಾಣದ ಅಗ್ಗದ ಮುದ್ರಣವನ್ನು ಹೊರತರಬೇಕೆಂದು

* ಕಿರಿಯ ಆವೃತ್ತಿ, ಡಿ.ವಿ.ಕೆ. ಮೂರ್ತಿ, ಮೈಸೂರು; ೧೯೭೫

ಸಂಪುಟ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಈ ಕೃತಿಗೆ ವಿಶೇಷವಾದ ಸ್ಥಾನವಿದೆ. ಇದು ಸೀತಾರಾಮಯ್ಯನವರ ಪ್ರಸಿದ್ಧ ಸಂಪಾದಿತ ಕೃತಿ. ಅವರಿಗೆ ಸಂಶೋಧಕರೆಂದು ಹೆಸರು ತಂದು ಕೊಟ್ಟ ಕೃತಿಯೂ ಹೌದು. ಅವರ ಪಾಂಡಿತ್ಯ ಬಹುಶ್ರುತತ್ವ, ಪ್ರತಿಭೆ, ವಿದ್ವತ್ತುಗಳಿಗೆ ಈ ಕೃತಿ ಸಾಕ್ಷಿಯಾಗಿದೆ. ಈ ಕೃತಿಯನ್ನು ಸೀತಾರಾಮಯ್ಯನವರು ಮೊದಲು ಪ್ರಕಟಿಸಿದ್ದು ೧೯೬೮ ರಲ್ಲಿ. ಬೆಂಗಳೂರಿನ ಸರ್ಕಾರಿ ಕಾಲೇಜಿನ ಕರ್ನಾಟಕ ಸಂಘದ ಮೂಲಕ. ಅನಂತರ ಆರು ವರ್ಷಗಳ ಅಂತರದಲ್ಲಿ ೧೯೭೫ರಲ್ಲಿ ಮೈಸೂರಿನ ಡಿ.ವಿ.ಕೆ.ಮೂರ್ತಿ ಅವರ ಮೂಲಕ 'ಕಿರಿಯ ಆವೃತ್ತಿ'ಯಾಗಿ ಪ್ರಕಟಿಸಿದರು. ಈ ಎರಡೂ ಆವೃತ್ತಿಗಳಿಗೆ ಸಾಕಷ್ಟು ವ್ಯತ್ಯಾಸಗಳಿವೆ. ಮೊದಲ ಆವೃತ್ತಿಯ ನಂತರ ಐದಾರು ವರ್ಷಗಳ ಅವಧಿಯಲ್ಲಿ ಬಂದ ಎಲ್ಲ ಅಧ್ಯಯನ ಸಾಮಗ್ರಿಗಳನ್ನೂ ಹೊಸ ವಿಚಾರಗಳನ್ನೂ ಅಳವಡಿಸಿಕೊಂಡು ಕಿರಿಯ ಆವೃತ್ತಿಯನ್ನು ಪರಿಷ್ಕರಿಸಿದ್ದಾರೆ. ಆದರೆ ಕಿರಿಯ ಆವೃತ್ತಿ ಹೆಸರಿಗೆ ತಕ್ಕಂತೆ ಕಿರಿಯ ಆವೃತ್ತಿಯಾಗಿರುವುದರಿಂದ ಮೊದಲ ಆವೃತ್ತಿಯಲ್ಲಿರುವಷ್ಟು ಸವಿವರವಾದ ಕವಿಕಾವ್ಯ ವಿಚಾರವಾಗಲಿ, ಪೀಠಿಕೆಯಾಗಲಿ, ಸಂಪಾದಕೀಯ ಟಿಪ್ಪಣಿಗಳಾಗಲಿ ಇಲ್ಲ. ೫೫೦ ಪುಟಗಳ ಮೊದಲ ಆವೃತ್ತಿಯನ್ನು ಸೀತಾರಾಮಯ್ಯನವರು 'ವಿದ್ಯಾರ್ಥಿ ಮುದ್ರಣ' ಎಂದು ಕರೆದಿದ್ದಾರೆ! ವಿಸ್ತೃತ 'ಪಂಡಿತ ಆವೃತ್ತಿ'ಯನ್ನು ಮರುಮುದ್ರಣದಲ್ಲಿ (ಅವಕಾಶ ಒದಗಿದರೆ) ಸಿದ್ಧಪಡಿಸಲಾಗುವುದು ಎಂದು ಹೇಳಿದ್ದಾರೆ. ಆ ಅವಕಾಶ ೧೯೭೫ರಲ್ಲಿ ಒದಗಿದರೂ ಅದು ಕಿರಿಯ ಆವೃತ್ತಿಯ ಸೀಮಿತ ಉದ್ದೇಶದಲ್ಲಿದ್ದುದರಿಂದ ಪಾಠಾಂತರಗಳನ್ನಷ್ಟೇ 'ಮೇಲ್ಪಾಟು' ಮಾಡಿದ್ದಾರೆ. 'ಹಲ ಕೆಲವು ದೋಷಗಳನ್ನು' ಪರಿಹರಿಸಿದ್ದಾರೆ. ಪೀಠಿಕೆಯಲ್ಲಿ "ವಿದ್ವಾಂಸರು – ಮುಖ್ಯವಾಗಿ ಕರ್ತೃತ್ವ ವಿಚಾರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಗಮನಿಸಿ ವಿಮರ್ಶಿಸಿ, ಗಮನಕ್ಕೆ ಬಂದ ಒಂದೆರಡು ಹೊಸ ಅಂಶಗಳನ್ನೂ ಸೇರಿಸಿ, ಒಟ್ಟಿನ ಮೇಲೆ ವಿಷಯ ವಿವೇಚನೆಯನ್ನು ಕೂಡಿದ ಮಟ್ಟಿಗೂ ಇಂದಿನವರೆಗಿನ (up-to-date) ವಿಚಾರ ಸೀಮೆಗೆ ತಂದು ನಿಲ್ಲಿಸಿದೆ" ಎಂದು ಹೇಳಿರುವ ಕಿರಿಯ ಆವೃತ್ತಿಯ ಬಿನ್ನಹದ ಮಾತುಗಳಲ್ಲಿನ ಅಂಶಗಳನ್ನು ಮಾತ್ರ ಸೇರಿಸಲು ಸಾಧ್ಯವಾಗಿ ಪಂಡಿತ ಆವೃತ್ತಿಯ ಅವಕಾಶ ಒದಗದೇ ಹೋದದ್ದು ಒಂದು ನಷ್ಟವೇ ಆಗಿದೆ. ಪ್ರಾಯಶಃ ಮೊದಲ ಆವೃತ್ತಿಯೇನಾದರೂ ಅವರ ಜೀವಿತ ಅವಧಿಯಲ್ಲಿ ಪುನರ್ಮುದ್ರಣ ಅವಕಾಶವನ್ನು ಪಡೆದಿದ್ದಲ್ಲಿ ಈ ಕೃತಿ ಇನ್ನಷ್ಟು ಶೋಭೆಯನ್ನು ಪಡೆದುಕೊಳ್ಳುತ್ತಿತ್ತು ಎಂದು ನಿಸ್ಸಂಶಯವಾಗಿ ಹೇಳಬಹುದಿತ್ತು.

# ೩. ಅರಿಕೆ*

ಎಂ.ವಿ.ಸೀ. ಸಂಸ್ಮರಣ ಸಮಿತಿಯ ಪರವಾಗಿ ಪ್ರತಿಷ್ಠಾನ ಪ್ರಕಟಿಸಿದ 'ಕದಂಬ'... ಎಂ.ವಿ.ಸೀ. ಅವರ ಸಮಗ್ರ ಸಂಶೋಧನ ಲೇಖನಗಳ ಸಂಪುಟದ ಪ್ರಕಟನೆ ಒಳ್ಳೆಯ ಆರಂಭವೇ ಆಯಿತು. 'ಎಂ.ವಿ.ಸೀ.ಸಮಗ್ರ ಸಾಹಿತ್ಯ ಮಾಲೆಯನ್ನು ಆರಂಭಿಸುವುದರ ಜೊತೆಗೆ ಆ ಮಾಲೆಯ ಎರಡನೇ ಸಂಪುಟವನ್ನೂ ಪ್ರಕಟಿಸುವಂತಾಯಿತು. ಇಷ್ಟು ಬೇಗ ಇದು ಸಾಧ್ಯವಾಗುತ್ತದೆ ಎಂದುಕೊಂಡಿರಲಿಲ್ಲ. ಸಮಗ್ರ ಸಾಹಿತ್ಯಮಾಲೆಯ ಪ್ರಕಟನೆಗಾಗಿ ಒಂದು ಯೋಜನೆಯನ್ನು ರೂಪಿಸಿ ಎಂ.ವಿ.ಸೀ. ಅವರ ಪುತ್ರರಲ್ಲಿ ಅರಿಕೆ ಮಾಡಿಕೊಂಡಾಗ ಅವರು ಸಂತೋಷದಿಂದ ಒಪ್ಪಿ ಸಹಕರಿಸಲು ಮುಂದಾದುದರಿಂದ ಮತ್ತು ಗೌರವಾಧ್ಯಕ್ಷರಾದ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರಪ್ರಯತ್ನದಿಂದ ಈ ಗ್ರಂಥಕ್ಕೆ ಆರ್ಥಿಕ ನೆರವು ದೊರತದ್ದರಿಂದ ಇದು ಸಾಧ್ಯವಾಯಿತು.

ಎಂ.ವಿ.ಸೀ. ಸಮಗ್ರ ಸಾಹಿತ್ಯ ಮಾಲೆಯ ಯೋಜನೆಗಾಗಿ ಪೂಜ್ಯ ಎಂ.ವಿ.ಸೀ. ಅವರ ಪುತ್ರರಾದ ಶ್ರೀಯುತರಾದ ಎಂ.ಎಸ್.ಬಾಸ್ಕರ್, ಎಂ.ಎಸ್.ರಾಮಪ್ರಸಾದ್, ಎಸ್.ಟಿ.ರಾಧಾ ಕೃಷ್ಣ, ಎಂ.ಎಸ್.ಶೇಷಾದ್ರಿನಾಥ್ ಮತ್ತು ಶ್ರೀಮತಿ ಶಾರದಾ ನಾಗರಾಜ್ ಅವರುಗಳು ಸೀತಾರಾಮಯ್ಯನವರ ಸ್ವಂತ ಪ್ರಕಾಶನ ಸಂಸ್ಥೆಯಾದ 'ರಾಘವ ಪ್ರಕಾಶನ'ದ ಹೆಸರಿನಲ್ಲಿ 'ರಾಘವ ಪ್ರಕಾಶನ ದತ್ತಿ ನಿಧಿ'ಯನ್ನು ಪ್ರತಿಷ್ಠಾನದಲ್ಲಿ ಸ್ಥಾಪಿಸಿದ್ದಾರೆ. ಇದರ ಉದ್ದೇಶ ಎಂ.ವಿ.ಸೀ. ಅವರ ಸಮಗ್ರ ಸಾಹಿತ್ಯ ಸಂಪುಟಗಳನ್ನು ಪ್ರಕಟಿಸುವುದು; ಈ ಸಂಪುಟಗಳ ಮತ್ತು ಎಂ.ವಿ.ಸೀ. ಅವರ ಬಿಡಿ ಕೃತಿಗಳ ಮಾರಾಟದಿಂದಲೇ ಮುಂದಿನ ಸಂಪುಟಗಳಿಗೆ ಸಂಪನ್ಮೂಲವನ್ನು ರೂಪಿಸಿಕೊಳ್ಳುವುದು; ಎಂ.ವಿ.ಸೀ. ಅವರ ಸಾಹಿತ್ಯ ಎಲ್ಲ ಕಾಲದಲ್ಲೂ ಸಾಹಿತ್ಯಾಸಕ್ತರಿಗೆ ದೊರಕುವಂತೆ, ಮುದ್ರಿಸುತ್ತ – ಪುನರ್ಮುದ್ರಿಸುತ್ತ ಹೋಗುವುದು. ಪ್ರತಿಷ್ಠಾನದ ಸಂಸ್ಥಾಪಕರಾದ ಪೂಜ್ಯರನ್ನು ಪ್ರತಿಷ್ಠಾನ ಸದಾ ಸ್ಮರಿಸಿಕೊಳ್ಳಲು ಇದು ಸದವಕಾಶವಾಯಿತು.

ಕವಿರಾಜಮಾರ್ಗ ಎಂ.ವಿ.ಸೀ. ಸಮಗ್ರ ಸಾಹಿತ್ಯ ಮಾಲೆಯ ಎರಡನೆ

---

* ಕವಿರಾಜಮಾರ್ಗ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು; ೧೯೯೪

